

# ಋಗ್ವೇದಸಂಹಿತಾ



ಭಾಗ—೨೮

ಏಳನೆಯ ಅಷ್ಟಕದ ಅಧ್ಯಾಯ ೮

ಎಂಟನೆಯ ಅಷ್ಟಕದ ಅಧ್ಯಾಯಗಳು ೧–೩

ಹತ್ತನೆಯ ಮಂಡಲದ ಸೂಕ್ತಗಳು ೪೬–೭೧

## ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೨೮



# RIG-VEDA

ಸಾ ಯ ಣ ಭಾ ಷ್ಯ ಸ ಮೇ ತಾ

# ಋಗ್ವೇದ ಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೨೮

ಏಳನೆಯ ಅಷ್ಟಕದ ಅಧ್ಯಾಯ ೮

ಎಂಟನೆಯ ಅಷ್ಟಕದ ಅಧ್ಯಾಯಗಳು ೧-೨

ಹತ್ತನೆಯ ಮಂಡಲದ ಸೂಕ್ತಗಳು ೪೬-೬೧



*Translated with Exhaustive Critical Notes and Explanations*

by

**Asthana Mahavidwan**

**H. P. VENKATA RAO**

*Editor*



Printed at

SRI SHAKTHI ELECTRIC PRESS, MYSORE

1955

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ ಸಿ. ಎಸ್. ಐ. ರವರು.**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನವಿದ್ವನ್ಮಂಡಲಿ

—o—


Translator & Editor :

**ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್**

Associate

**ಶ್ರೀ G. N. ಚಕ್ರವರ್ತಿ,** M.A.

Professor of Sanskrit St. Philomina's College, Mysore


**ಸಹಾಯಕ ವಿದ್ವನ್ಮಂಡಲಿ**

1. ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು, ಸಾಹಿತ್ಯ ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ, ಮೈಸೂರು.

2. ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು, ಜ್ಯೋತಿಷ ವಿದ್ವಾನ್ ಮತ್ತು ಕರ್ನಾಟಕ ಭಾಷಾಪಂಡಿತರು.

3. ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು, ಋಗ್ವೇದ ಘನಪಾಠಿಗಳು.

4. ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು, ಶ್ರೌತವಿದ್ವಾನ್.

5. ಬ್ರ॥ ಶ್ರೀ॥ ವೆಂಕಟರಮಣಾಚಾರ್, M.A., B.T., ಸಾಹಿತ್ಯವಿದ್ವಾನ್.

6. ಬ್ರ॥ ಶ್ರೀ॥ S. ರಂಗನಾಥನ್, ಸಾಹಿತ್ಯ ವಿದ್ವಾನ್, ಅರಮನೆ ಸರಸ್ವತೀ ಭಂಡಾರ.

7. ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್, ಸಾಹಿತ್ಯವಿದ್ವಾನ್. Govt. Oriental Research Institute, Mysore.

8. ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು, ರಿಟೈರ್ಡ್ ಪಂಡಿತರು, Govt. Oriental Research Institute, Mysore.

# ಪೀಠಿಕೆ

ಋಗ್ವೇದದ ಸೂಕ್ತಗಳಲ್ಲಿ ಮುಖ್ಯವಾಗಿ ದೇವತೆಗಳನ್ನು ಉದ್ದೇಶಿಸಿ ಮಾಡಿರುವ ಸ್ತೋತ್ರಗಳೇ ಹೆಚ್ಚಾಗಿದ್ದರೂ ಅಲ್ಲಲ್ಲಿ ಇತರ ವಿಷಯಗಳ ವಿವರಣೆ ಮತ್ತು ಪ್ರಸ್ತಾಪವೂ ಇದೆ. ಇವುಗಳಲ್ಲಿ—ರಾಜರು ಮಾಡಿರುವ ದಾನಗಳ ಪ್ರಶಂಸೆ, ದೇವತೆಗಳ ಸಾಹಸಕೃತ್ಯಗಳು, ಇತಿಹಾಸಗಳು, ಉಪಾಖ್ಯಾನಗಳು, ಸಂಭಾಷಣೆಗಳು, ಸೃಷ್ಟಿವಿಷಯ, ತತ್ತ್ವವಿಮರ್ಶೆ ಎಂಬಿವು ಮುಖ್ಯವಾದವು. ಇತಿಹಾಸಗಳಲ್ಲಿ ಎರಡುವಿಧ—ಋಷಿಗಳಿಗೆ ಸಂಬಂಧಪಟ್ಟ ಇತಿಹಾಸ ಮತ್ತು ದೇವತೆಗಳಿಗೆ ಸಂಬಂಧಪಟ್ಟ ಇತಿಹಾಸ. ಕೆಲವು ಸಂದರ್ಭಗಳಲ್ಲಿ ಇವೆರಡೂ ಮಿಶ್ರವಾಗಿರುವುದೂ ಉಂಟು. ಸಂಭಾಷಣೆಗಳಲ್ಲಿಯೂ ಅನೇಕ ವಿಧವಿವೆ. ಅಗ್ನಿಗೂ ದೇವತೆಗಳಿಗೂ ನಡೆದ ಸಂಭಾಷಣೆ, ಅಸುರರಿಗೂ (ಪಣಿಗಳಿಗೂ) ಸರಮಾ ಎಂಬ ದೇವಶುನಿಗೂ ನಡೆದ ಸಂಭಾಷಣೆ, ವಿಶ್ವಾಮಿತ್ರನಿಗೂ ನದಿಗಳಿಗೂ ನಡೆದ ಸಂಭಾಷಣೆ, ಯಮಯಮಿಯರಿಗೆ ನಡೆದ ರತಿಸಂಬಂಧವಾದ ಸಂಭಾಷಣೆ, ಪುರೂರವ ಉರ್ವಶಿಯರಿಗೆ ರತಿವಿರಹದ ವಿಷಯದಲ್ಲಿ ನಡೆದ ಸಂಭಾಷಣೆ, ಅಗಸ್ತ್ಯ ಲೋಪಾಮುದ್ರೆಯರಿಗೆ ನಡೆದ ರತಿಸಂಭಾಷಣೆ ಇತ್ಯಾದಿ.

ಪ್ರಕೃತ ಈ ಭಾಗದಲ್ಲಿ ಪಣಿಗಳೆಂಬ ಅಸುರರು ದೇವತೆಗಳ ಗೋವುಗಳನ್ನು ಅಪಹರಿಸಿ ಪರ್ವತದ ಗುಹೆಯಲ್ಲಿ ಬಚ್ಚಿಟ್ಟಿದ್ದ ವಿಷಯವನ್ನು ಪ್ರಸ್ತಾಪಮಾಡಲಾಗಿದೆ. ಈ ವಿಷಯವು ಬಹು ಪುರಾತನ ಕಾಲದಲ್ಲಿ ನಡೆದಿರುವುದೆಂದು ಹೇಳಲಾಗಿರುವುದರಿಂದ ಅನೇಕ ಋಷಿಗಳು ಅನೇಕ ವಿಧವಾಗಿ ಇದನ್ನು ವರ್ಣಿಸಿರುವುದು ಕಂಡುಬರುತ್ತದೆ. ಈ ಗೋವುಗಳನ್ನು ಬಿಡಿಸಿ ಹಿಂದಕ್ಕೆ ತರುವ ಕಾರ್ಯದಲ್ಲಿ ಇಂದ್ರ, ದೇವತೆಗಳು, ಬೃಹಸ್ಪತಿ, ಅಂಗಿರಸರು, ಅಗ್ನಿ, ಸರಮಾ ಮೊದಲಾದವರ ಮುಖ್ಯಪಾತ್ರವಿದೆ. ಪಣಿಗಳು ದೇವತೆಗಳ ಗೋವುಗಳನ್ನು ಎಲ್ಲಿ ಬಚ್ಚಿಟ್ಟಿರುವರೆಂಬುದನ್ನು ತಿಳಿಯುವುದಕ್ಕಾಗಿ ಇಂದ್ರನು ತನ್ನ ಸರಮಾ ಎಂಬ ನಾಯಿಯನ್ನು ಕಳುಹಿಸುತ್ತಾನೆ. ಆ ನಾಯಿಯು ಬಹುದೂರ ಸಂಚರಿಸಿ, ಅನೇಕ ನದಿಗಳನ್ನೂ, ಗಿರಿದುರ್ಗಗಳನ್ನೂ ದಾಟಿ ಪಣಿಗಳ ನಿವಾಸಸ್ಥಾನವನ್ನು ಸೇರಿ ಅವರೊಂದಿಗೆ ಸಂಭಾಷಣೆಮಾಡಿ ಗೋವುಗಳಿರುವ ಸ್ಥಳವನ್ನು ತಿಳಿದು ಬಂದನಂತರ ಇಂದ್ರಾದಿದೇವತೆಗಳು ಅಲ್ಲಿಗೆ ಹೋಗಿ ಅಸುರರನ್ನು ಸಂಹರಿಸಿ ಗೋವುಗಳನ್ನು ಹಿಂದಕ್ಕೆ ತಂದರೆಂಬ ಮುಖ್ಯವಿಷಯವನ್ನು ಅಲ್ಪಸ್ವಲ್ಪ ವ್ಯತ್ಯಾಸಗಳೊಡನೆ ನಾನಾಕಡೆ ವರ್ಣಿಸಲಾಗಿದೆ.

ಪೂರ್ವದಲ್ಲಿ ಪ್ರಜಾಪತಿಯ ಪುತ್ರಿಯಾದ ವಿಕುಂಠಾ ಎಂಬ ಅಸುರ ಸ್ತ್ರೀಯು ತನಗೆ ಪರಾಕ್ರಮದಲ್ಲಿ ಇಂದ್ರನನ್ನು ಸರಿಗಟ್ಟುವ ಪುತ್ರನಾಗಬೇಕೆಂದು ಬಯಸಿ ತಪಸ್ಸನ್ನು ಮಾಡಲು, ಇಂದ್ರನು ತನಗೆ ಪ್ರತಿಸ್ಪರ್ಧಿ ಇರಬಾರದೆಂದು ತಾನೇ ಆ ಸ್ತ್ರೀಯಲ್ಲಿ ಪುತ್ರನಾಗಿ ಜನಿಸಿದನು. ವಿಕುಂಠಾ ಎಂಬ ಸ್ತ್ರೀಯಲ್ಲಿ ಜನಿಸಿದ್ದರಿಂದ ಇವನಿಗೆ ವೈಕುಂಠನೆಂದು ಹೆಸರಾಯಿತು. ಇವನು ದೈತ್ಯದಾನವರನ್ನೆಲ್ಲಾ ಜಯಿಸಿ ಭೂಮಿಯನ್ನೂ, ಸ್ವರ್ಗವನ್ನೂ ಆಳುತ್ತಾ ತನಗೆ ಸಮಾನರಿಲ್ಲವೆಂಬ ಅಹಂಕಾರದಿಂದ ಬೀಗಿ ಮೆರೆಯುತ್ತಾ ಇದ್ದನು. ಇವನಿಗೆ ಅಸುರಸಂಬಂಧವಿದ್ದುದರಿಂದ ದೇವತೆಗಳ ವಿರೋಧಿಯಾಗಿ ಅವರನ್ನು ಹಿಂಸಿಸುತ್ತಿದ್ದನು. ಇವನ ಬಾಧೆಯನ್ನು ತಾಳಲಾರದೆ ದೇವತೆಗಳು ಈ ವೈಕುಂಠನ ಸ್ನೇಹಿತನಾದ ಸಪ್ತಗು ಎಂಬ ಋಷಿಯ ಮರೆಹೊಕ್ಕರು. ಈ ಋಷಿಯು ತನ್ನ ಸ್ನೇಹಿತನಾದ ಇಂದ್ರವೈಕುಂಠನನ್ನು ಕೈಹಿಡಿದು ಹತ್ತಿರ ಕುಳ್ಳಿರಿಸಿಕೊಂಡು ಅವನನ್ನು ನಾನಾವಿಧವಾಗಿ ಸ್ತುತಿಸಿ ಅವನು ಯಾರೆಂಬುದನ್ನೂ ಏತಕ್ಕಾಗಿ ಇಂದ್ರವೈಕುಂಠನೆಂಬ ಹೆಸರಿನಿಂದ ಜನಿಸಿದನೆಂಬುದನ್ನೂ ತಿಳಿಸಿ ಅವನಿಗೆ ಪೂರ್ವಸ್ಮರಣೆಯುಂಟಾಗುವಂತೆ ಮಾಡಿದನು. ಅದರಿಂದ ಎಚ್ಚರಗೊಂಡು ವೈಕುಂಠನು ತಾನು ಇಂದ್ರನೇ ಎಂದು ತಿಳಿದು ತಾನು ಹಿಂದೆ ಮಾಡಿದ ಸಾಹಸಕೃತ್ಯಗಳನ್ನೂ,

ದೇವತೆಗಳಿಗೂ, ಋಷಿಗಳಿಗೂ ಮಾಡಿದ ಉಪಕಾರವನ್ನು ವರ್ಣಿಸುತ್ತಾ ಆತ್ಮಪ್ರಶಂಸೆಮಾಡಿಕೊಂಡಿರುವನು. ಮತ್ತು ದೇವತೆಗಳ ವಿಷಯದಲ್ಲಿ ಅನುಗ್ರಹಬುದ್ಧಿಯನ್ನು ಪ್ರದರ್ಶಿಸಿದನು.

ಪೂರ್ವದಲ್ಲಿ ಅಗ್ನಿಗೆ ಮೂರುಮಂದಿ ಜ್ಯೇಷ್ಠ ಸಹೋದರರಿದ್ದರು. ಯಜ್ಞಯಾಗಾದಿಗಳಲ್ಲಿ ಅವರೇ ದೇವತೆಗಳಿಗೆ ಹವಿಸ್ಸನ್ನು ಒಯ್ದು ಅರ್ಪಿಸುತ್ತಿದ್ದರು. ಯಜ್ಞಾದಿಗಳಲ್ಲಿ ಹವಿಸ್ಸನ್ನು ಅರ್ಪಿಸುವಾಗ ಪಠಿಸುವ ವೌಷಟ್ ಎಂಬ ವಷಟ್ಕಾರಕ್ಕೆ ಶತ್ರುಗಳನ್ನು ನಾಶಮಾಡುವ ಶಕ್ತಿಸಾಮರ್ಥ್ಯಗಳಿರುವವು. ಇದನ್ನು ಪಠಿಸುವ ಸಂದರ್ಭದಲ್ಲಿ ಅನುಸರಿಸಬೇಕಾದ ಕ್ರಮದ ವ್ಯತ್ಯಾಸವಾದಲ್ಲಿ ಯಜ್ಞಮಾಡುವ ಯಜಮಾನನಿಗೂ ಹವಿಸ್ಸನ್ನು ಒಯ್ಯುವ ಅಗ್ನಿಗೂ ಕೆಡಕುಂಟಾಗುವುದು. ಒಂದು ಸಂದರ್ಭದಲ್ಲಿ ಈ ವಷಟ್ಕಾರಾಹುತಿಗಳ ಅಕ್ರಮಪಠನದಿಂದ ಹವಿಸ್ಸನ್ನು ವಹಿಸುತ್ತಿದ್ದ ಅಗ್ನಿಯ ಮೂರು ಮಂದಿ ಜ್ಯೇಷ್ಠಸಹೋದರರಿಗೆ ಕೆಡಕುಂಟಾಗಿ ಅವರು ಮೃತರಾದರು. ತನ್ನ ಸಹೋದರರು ಮೃತರಾದುದನ್ನು ನೋಡಿ ಅಗ್ನಿಯು ತನಗೂ ಅದೇ ಗತಿ ಬರುವುದೆಂದು ಹೆದರಿ ದೇವತೆಗಳಿಗೆ ಹೇಳದೆ ಓಡಿಹೋಗಿ ನೀರಿನಲ್ಲಿ ಗೂಢವಾಗಿ ಎಂದರೆ ಯಾರಿಗೂ ತಿಳಿಯದಂತೆ ಅವಿತುಕೊಂಡಿದ್ದನು. ದೇವತೆಗಳಿಗೆ ಯಜ್ಞಾದಿಗಳಲ್ಲಿ ಅರ್ಪಿಸುವ ಹವಿಸ್ಸನ್ನು ವಹಿಸುವವರಿಲ್ಲದ್ದರಿಂದ ದೇವತೆಗಳು ಚಿಂತಾಕ್ರಾಂತರಾಗಿ ಅಗ್ನಿಯನ್ನು ಎಲ್ಲೆಲ್ಲೂ ಹುಡುಕಿ ಕೊನೆಗೆ ನೀರಿನಲ್ಲಿ ಅಡಗಿರುವುದನ್ನು ಕಂಡು ಅಲ್ಲಿಗೆ ಬಂದು ಅವನೊಡನೆ ಸಂಭಾಷಣೆಯನ್ನು ನಡೆಸಿದರು. ಅದರ ಫಲವಾಗಿ ಅಗ್ನಿಗೆ ಮರಣಭಯವಿಲ್ಲದಂತೆಯೂ, ಯಜ್ಞದಲ್ಲಿ ಅವನೇ ಮುಖ್ಯಪಾತ್ರವನ್ನು ವಹಿಸುವಂತೆಯೂ, ಪ್ರಯಾಜಾ, ಅನುಯಾಜಾ ಮೊದಲಾದ ಕೆಲವು ಮುಖ್ಯ ಆಹುತಿಗಳು ಅಗ್ನಿಗೇ ಸೇರಬೇಕೆಂತಲೂ ಅಗ್ನಿಯು ಕೇಳಿದ ವರಗಳನ್ನು ಕೊಟ್ಟರು. ಅದರಿಂದ ಅಗ್ನಿಯು ಸಂತುಷ್ಟನಾಗಿ ನೀರಿನಿಂದ ಎದ್ದುಬಂದು ಹವಿರ್ವಹನಕಾರ್ಯದಲ್ಲಿ ಪ್ರವೃತ್ತನಾದನು ಎಂಬ ಉಪಾಖ್ಯಾನವು ೧೦ ನೇ ಮಂಡಲದ ೫೧ ನೇ ಸೂಕ್ತದಲ್ಲಿ ಉಕ್ತವಾಗಿದೆ. ಯಜುರ್ವೇದದಲ್ಲಿಯೂ, ಇತರ ಕಡೆಗಳಲ್ಲಿಯೂ ಅಲ್ಪಸ್ವಲ್ಪ ವ್ಯತ್ಯಾಸಗಳೊಡನೆ ಈ ಉಪಾಖ್ಯಾನದ ವರ್ಣನೆ ಇದೆ.

ಪೂರ್ವದಲ್ಲಿ ಅತ್ರಿವಂಶದ ಗೋಪಾಯನ ಎಂಬ ಋಷಿಯ ಪುತ್ರರಾದ ಬಂಧು, ಸುಬಂಧು, ಶ್ರುತಬಂಧು, ವಿಪ್ರಬಂಧು ಎಂಬ ನಾಲ್ಕು ಮಂದಿ ಸಹೋದರರು ಇಕ್ಷ್ವಾಕುವಂಶದ ಅಸಮಾತಿ ಎಂಬ ರಾಜನ ಬಳಿ ಪುರೋಹಿತರಾಗಿದ್ದರು. ಒಂದು ಸಮಯದಲ್ಲಿ ಈ ಪುರೋಹಿತರಿಗೂ ರಾಜನಿಗೂ ಬಂದ ಭಿನ್ನಾಭಿಪ್ರಾಯದ ಫಲವಾಗಿ ರಾಜನು ಈ ನಾಲ್ಕು ಮಂದಿ ಪುರೋಹಿತರನ್ನು ತ್ಯಜಿಸಿ ಅವರ ಸ್ಥಾನದಲ್ಲಿ ಕಿರಾತ, ಆಕುಲಿ ಎಂಬಿಬ್ಬರು ದ್ವಿಜರನ್ನು ನೇಮಿಸಿಕೊಂಡನು. ಇವರು ಮಾಯಾಮಂತ್ರಗಳಲ್ಲಿ ಕುಶಲರಾಗಿದ್ದರು. ರಾಜನಿಗೆ ಸಂತೋಷವನ್ನುಂಟುಮಾಡಬೇಕೆಂಬ ಇಚ್ಛೆಯಿಂದ ಈ ಇಬ್ಬರು ದ್ವಿಜರು ತಮ್ಮ ಮಾಯಾಮಂತ್ರಸಾಮರ್ಥ್ಯದಿಂದ ಪಾರಿವಾಳದ ಹಕ್ಕಿಗಳ ರೂಪವನ್ನು ಹೊಂದಿ ರಾಜನ ಹಿಂದಿನ ಪುರೋಹಿತರಾದ ಬಂಧು ಮೊದಲಾದವರ ಮೇಲೆ ಬಿದ್ದು ಅಪಘಾತವೆಸಗಿದರು. ಅವರಲ್ಲಿ ಎರಡನೆಯವನಾದ ಸುಬಂಧುವೆಂಬುವನು ಇವರ ಅಪಘಾತವನ್ನು ತಡೆಯಲಾರದೆ ಜ್ಞಾನಶೂನ್ಯನಾಗಿ ಮೂರ್ಛಿತನಾದನು. ಬಳಿಕ ಈ ಮಾಯಾವಿ ದ್ವಿಜರು ಸುಬಂಧುವಿನ ಅಸುವನ್ನು (ಪ್ರಾಣವನ್ನು) ಅಪಹರಿಸಿ ತೆಗೆದುಕೊಂಡು ಹೋಗಿ ಅಗ್ನಿಯ ಅಂತಃಪರಿಧಿಯಲ್ಲಿಟ್ಟರು. ನಿಶ್ಚೇಷ್ಟಿತನಾಗಿ ಬಿದ್ದಿದ್ದ ಸುಬಂಧುವನ್ನು ಬದುಕಿಸುವುದಕ್ಕಾಗಿ ಅವನ ಉಳಿದ ಮೂರುಮಂದಿ ಸಹೋದರರು ಅನೇಕ ಸ್ವಸ್ತಿಮಂತ್ರಗಳನ್ನು ಪಠಿಸಿ ನಾನಾ ದೇವತೆಗಳನ್ನು ಸ್ತೋತ್ರಮಾಡಿದರು. ಅದರಿಂದ ಸಂತುಷ್ಟನಾದ ಅಗ್ನಿಯು ಸುಬಂಧುವಿಗೆ ಪುನಃ ಚೇತನ ಬರುವಂತೆ ಮಾಡಿದನು. ಬಳಿಕ ಬಂಧ್ವಾದಿಗಳು ಅಗ್ನಿಯನ್ನು ಸ್ತುತಿಸಿ ಅನಂತರ ಅಸಮಾತಿ ರಾಜನನ್ನು ಪ್ರಶಂಸೆಮಾಡಿ ಅವನಿಗೆ ಶ್ರೇಯಸ್ಸುಂಟಾಗುವಂತೆ ದೇವತೆಗಳನ್ನು ಪ್ರಾರ್ಥಿಸಿದರು. ಅದರಿಂದ ಅಸಮಾತಿರಾಜನು ತಾನು ಮಾಡಿದ ಅನ್ಯಾಯಕ್ಕಾಗಿ ಪಶ್ಚಾತ್ತಾಪಪಟ್ಟು ಲಜ್ಜೆಯಿಂದ ಬಂಧ್ವಾದಿಗಳ ಮುಂದೆ ತಲೆತಗ್ಗಿಸಿ ನಿಂತುಕೊಂಡನು ಮತ್ತು ಅವರನ್ನು ಪೂರ್ವದಂತೆ ಪುರೋಹಿತ

ಸ್ಥಾನದಲ್ಲಿ ಇರಿಸಿ ಪೂಜಾದಿಗಳಿಂದ ಸತ್ಕರಿಸಿ ಗೌರವಿಸಿದನು ಈ ಉಪಾಖ್ಯಾನವು ಇದೇ ಭಾಗದಲ್ಲಿರುವ ೫೬-೬೦ನೇ ಸೂಕ್ತಗಳಲ್ಲಿ ವಿವರಿಸಲಾಗಿದೆ;

ಪೂರ್ವದಲ್ಲಿ ಮನುವಿಗೆ ಅನೇಕಮಂದಿ ಪುತ್ರರಿದ್ದರು ಆ ಪುತ್ರರಲ್ಲಿ ನಾಭಾನೇದಿಷ್ಠನೆಂಬುವನು ಕಿರಿಯವನು ಅವನು ಬ್ರಹ್ಮಚರ್ಯಾಶ್ರಮದಿಂದ ಗುರುಕುಲದಲ್ಲಿ ವೇದಾಧ್ಯಯನಮಾಡುತ್ತಿದ್ದನು. ಆ ಸಮಯದಲ್ಲಿ ಅವನ ಸಹೋದರರು ತಮ್ಮ ತಂದೆಯಾದ ಮನುವಿನಿಂದ ಆಸ್ತಿಯನ್ನೆಲ್ಲಾ ಪಡೆದು ತಮ್ಮಲ್ಲಿಯೇ ಹಂಚಿಕೊಂಡರು. ವಿದ್ಯಾಭ್ಯಾಸವನ್ನು ಮುಗಿಸಿ ಬಂದಮೇಲೆ ನಾಭಾನೇದಿಷ್ಠನು ತನ್ನ ತಂದೆಯ ಆಸ್ತಿಯನ್ನೆಲ್ಲಾ ತನಗೆ ಭಾಗವನ್ನು ಕೊಡದೆ ತನ್ನ ಸಹೋದರರೇ ಹಂಚಿಕೊಂಡಿರುವದನ್ನು ತಿಳಿದು ತಂದೆಯ ಬಳಿಗೆ ಹೋಗಿ ತನ್ನ ಭಾಗದ ಆಸ್ತಿಯನ್ನು ಕೊಡಬೇಕೆಂದು ಕೇಳಿದನು. ಮತ್ತು ಇದ್ದ ಆಸ್ತಿಯನ್ನೆಲ್ಲಾ ಸಹೋದರರಿಗೇ ಕೊಟ್ಟು ತನಗೆ ಏನೂ ಇಲ್ಲದ್ದರಿಂದ ಅದೇಕೆ ಹೀಗೆ ಮಾಡಿದೆಯೆಂದು ತಂದೆಯನ್ನು ಕೇಳಿದನು. ಅದಕ್ಕೆ ಮನುವು-ನಿನಗೆ ನನ್ನ ಆಸ್ತಿಯಲ್ಲಿ ಭಾಗ ಸಿಕ್ಕದಿದ್ದರೆ ಚಿಂತೆಯಿಲ್ಲ. ಬೇರೆವಿಧವಾಗಿ ನಿನಗೆ ಆಸ್ತಿಯು ದೊರೆಯುವಂತೆ ಮಾಡುತ್ತೇನೆ. ಈಗ ಅಂಗಿರಸರೆಂಬ ಋಷಿಗಳು ಸ್ವರ್ಗಕ್ಕೆ ಹೋಗಬೇಕೆಂಬ ಅಪೇಕ್ಷೆಯಿಂದ ಸತ್ರಯಾಗವನ್ನು ಮಾಡುತ್ತಿರುವರು. ಆ ಯಾಗದ ಆರನೆಯ ದಿವಸ ನಡೆಯಬೇಕಾಗಿರುವ ಕಾರ್ಯಕಲಾಪಗಳಲ್ಲಿ ಯಾವ ಮಂತ್ರಗಳನ್ನು ಪಠಿಸಬೇಕು ಎಂಬುದು ಅವರಿಗೆ ತಿಳಿಯದೆ ಚಿಂತಿಸುತ್ತಿರುವರು. ಆದ್ದರಿಂದ ನೀನು ಅಲ್ಲಿಗೆ ಹೋಗಿ ಇದಮಿತ್ಥಾ ರೌದ್ರಂ ಎಂಬ ೧೦ನೇ ಮಂಡಲದ ೬೧ ನೇ ಸೂಕ್ತವನ್ನು ಅವರಿಗೆ ತಿಳಿಸಿ ಸಹಾಯಮಾಡು ಅದರಿಂದ ಅವರ ಯಾಗವು ಪೂರ್ತಿಯಾಗಿ ಅವರು ಸ್ವರ್ಗಕ್ಕೆ ಹೋಗುವಾಗ ಯಜ್ಞಾರ್ಥವಾಗಿ ಸಂಗ್ರಹಿಸಿ ಉಳಿಯುವ ಸಾವಿರ ಗೋವುಗಳನ್ನು ನಿನಗೆ ಕೊಡುವರು. ಅದೇ ನಿನಗೆ ।ಆಸ್ತಿಯು ಎಂದು ಹೇಳಿದನು. ತಂದೆಯ ಮಾತಿನಂತೆ ನಾಭಾನೇದಿಷ್ಠನು ಅಂಗಿರಸರ ಯಜ್ಞಕ್ಕೆ ಹೋಗಿ ಅವರಿಗೆ ಆ ಮಂತ್ರವನ್ನು ತಿಳಿಸಿ ಯಜ್ಞಸಮಾಪ್ತಿಯಾದನಂತರ ಉಳಿದಿದ್ದ ಸಹಸ್ರ ಗೋವುಗಳನ್ನು ಪಡೆದನು. ಆ ಗೋವುಗಳನ್ನು ತನ್ನ ವಶಕ್ಕೆ ತೆಗೆದುಕೊಂಡು ಹೊರಟು ಬರಬೇಕೆಂದಿರುವಲ್ಲಿ ಆ ಯಜ್ಞಭೂಮಿಯಲ್ಲಿ ಓರ್ವ ಮಲಿನವಸ್ತ್ರಧಾರಿಯಾದ ಪುರುಷನು ಬಂದು ಈ ಗೋವುಗಳು ನನ್ನದು. ಅಂಗಿರಸರು ಅವನ್ನು ನಿನಗೆ ಕೊಡಲು ಅವರಿಗೆ ಅಧಿಕಾರವಿಲ್ಲ ಎಂದು ಹೇಳಿ ಈ ವಿಷಯದಲ್ಲಿ ನಿನಗೆ ಸಂಶಯವಿದ್ದರೆ ನಿನ್ನ ತಂದೆಯನ್ನೇ ಕೇಳಿಕೊಂಡು ಬಾ ಎಂದನು. ಅದರಂತೆ ನಾಭಾನೇದಿಷ್ಠನು ತನ್ನ ತಂದೆಯ ಬಳಿಗೆ ಹೋಗಿ ನಡೆದ ಸಂಗತಿಯನ್ನು ತಿಳಿಸಿ ಆ ಗೋವುಗಳು ಯಾರಿಗೆ ಸೇರಬೇಕು ಎಂದು ಕೇಳಲು, ತಂದೆಯು ಪುತ್ರನನ್ನು ಕುರಿತು-ಎಲೈ ಪುತ್ರನೇ, ಆ ಪುರುಷನು ಹೇಳಿದಂತೆ ಆ ಗೋವುಗಳು ಅವನಿಗೇ ಸೇರಬೇಕು ಎಂದನು. ನಾಭಾನೇದಿಷ್ಠನು ಪುನಃ ಯಜ್ಞಭೂಮಿಗೆ ಹೋಗಿ ಈ ಗೋವುಗಳು ನಿನಗೇ ಸೇರಿವೆ, ಅವನ್ನು ನೀನು ತೆಗೆದುಕೊಳ್ಳಬಹುದು ಎಂದು ಹೇಳಿ ಹೋಗಲು ಸಿದ್ಧನಾಗಲು ಆ ಮಲಿನವಸ್ತ್ರಧಾರಿಯಾದ ಪುರುಷನು-ಎಲೈ ಬಾಲಕನೇ ನಿನ್ನ ಸತ್ಯಕ್ಕೆ ಮೆಚ್ಚಿದೆನು. ನಿನಗೆ ಲಾಭವಾಗುವಂತಿದ್ದರೂ ಅದನ್ನು ಬಿಟ್ಟು ಸತ್ಯವನ್ನೇ ನುಡಿದಿರುವೆ. ಆದ್ದರಿಂದ ಆ ಗೋವುಗಳನ್ನು ನಾನು ನಿನಗೆ ಹಿಂದಕ್ಕೆ ಕೊಡುತ್ತೇನೆ. ನಾನು ರುದ್ರನು. ಯಜ್ಞಭೂಮಿಯಲ್ಲಿ ಯಜ್ಞಾವಶೇಷವಾಗಿ ಉಳಿಯುವ ಎಲ್ಲಾ ವಸ್ತುಗಳಿಗೂ ನಾನೇ ಅಧಿಕಾರಿಯು. ಆದ್ದರಿಂದ ಇವು ನನಗೆ ಸೇರಿವೆ. ಆದರೆ ನಿನ್ನ ಸತ್ಯವಾದ ನಡವಳಿಕೆಗೆ ಮೆಚ್ಚಿ ಈ ಸಹಸ್ರ ಗೋವುಗಳನ್ನು ನಿನಗೆ ಕೊಟ್ಟಿರುತ್ತೇನೆ, ತೆಗೆದುಕೊ ಎಂದು ಹೇಳಿದನು. ಅದರಂತೆ ನಾಭಾನೇದಿಷ್ಠನು ಗೋವುಗಳನ್ನು ತೆಗೆದುಕೊಂಡು ತಂದೆಯ ಬಳಿಗೆ ಬಂದು ನಡೆದ ಸಂಗತಿಯನ್ನು ವಿವರಿಸಿದನು. ಈ ಉಪಾಖ್ಯಾನವು ೧೦ ನೇ ಮಂಡಲದ ೬೧ನೇ ೬೨ ನೇ ಸೂಕ್ತಗಳ ಸಂಬಂಧದಲ್ಲಿ ಐತರೇಯಬ್ರಾಹ್ಮಣ, ತೈತ್ತಿರೀಯ ಸಂಹಿತಾ ಮೊದಲಾದ ಸ್ಥಳಗಳಲ್ಲಿ ಹೇಳಿದೆ.

ಈ ೧೦ ನೇ ಮಂಡಲದ ೭೧ ನೇ ಸೂಕ್ತದಲ್ಲಿ ಜ್ಞಾನಪ್ರಶಂಸೆ ಇರುವುದು. ಸಾಕ್ಷಾತ್ ಬೃಹಸ್ಪತಿಯೇ ಜ್ಞಾನದ ಮಹಿಮೆಯನ್ನು ಪ್ರಶಂಸೆಮಾಡಿದಾನೆ. ವೇದಾರ್ಥವನ್ನು ತಿಳಿದುಕೊಳ್ಳುವುದರ ಆವಶ್ಯಕತೆ, ವೇದಾರ್ಥವನ್ನು ತಿಳಿದು ಎಂದರೆ ತಾನು ಮಾಡುವ ಸಂಧ್ಯಾವಂದನೆ, ಪೂಜೆ, ಯಜ್ಞಾನುಷ್ಠಾನ ಮೊದಲಾದ ಸತ್ಕರ್ಮಗಳಲ್ಲಿ ಉಪಯೋಗಿಸುವ ಮಂತ್ರಗಳನ್ನು ಅರ್ಥವತ್ತಾಗಿ ತಿಳಿದು ಕರ್ಮಮಾಡಿದರೆ ಅತಿಶಯವಾದ ಫಲವು ಲಭಿಸುವುದೆಂದೂ ಮಂತ್ರಾರ್ಥಜ್ಞಾನವಿಲ್ಲದೆ ಸುಮ್ಮನೆ ಕುರುಡುಪಾಠದಿಂದ ಪೂಜಾದಿಗಳನ್ನು ಮಾಡಿದರೆ ಫಲವು ಲಭಿಸುವುದಿಲ್ಲವೆಂದೂ, ಅಥವಾ ಲಭಿಸಿದರೂ ಅತ್ಯಲ್ಪವೆಂದೂ ಹೇಳಿರುವುದಲ್ಲದೆ, ವೇದಮಂತ್ರಾರ್ಥವನ್ನು ತಿಳಿದಿರುವ ಪುರುಷನ ಪ್ರಶಂಸೆಯನ್ನೂ ಅರ್ಥಜ್ಞಾನವಿಲ್ಲದೆ ಸುಮ್ಮನೆ ಮಂತ್ರಗಳನ್ನು ಬಾಯಿಪಾಠಮಾಡಿದ ಪುರುಷನ ನಿಂದೆಯನ್ನೂ, ಯಜ್ಞಾದಿಗಳಲ್ಲಿ ಹೋತೃ ಮೊದಲಾದ ಋತ್ವಿಕ್ಕುಗಳು ನೆರವೇರಿಸಬೇಕಾದ ಕರ್ತವ್ಯಕರ್ಮಗಳನ್ನೂ, ದೃಷ್ಟಾಂತ, ಉಪಮಾನ ಮೊದಲಾದ ವಿವರಣೆಗಳಿಂದ ಋಷಿಯು ವಿಶದವಾಗಿ ವರ್ಣಿಸಿರುವನು.

ಇಂತಹ ನೂರಾರು ಉಪಾಖ್ಯಾನಗಳೂ, ಇತಿಹಾಸಗಳೂ ಋಗ್ವೇದದಲ್ಲಿ ಬಹಳವಾಗಿವೆ. ಇವುಗಳನ್ನು ಸಂಗ್ರಹರೂಪದಲ್ಲಿ ಶೌನಕಮಹರ್ಷಿಯು ಬೃಹದ್ದೇವತಾ ಎಂಬ ಗ್ರಂಥದಲ್ಲಿ ವಿವರಿಸಿದಾರೆ. ಈ ಗ್ರಂಥದಲ್ಲಿ ಋಗ್ವೇದಕ್ಕೆ ಸಂಬಂಧಪಟ್ಟ ಅನೇಕ ಉಪಯುಕ್ತ ವಿಷಯಗಳು ಅಡಕವಾಗಿರುವವು. ಈ ಗ್ರಂಥವು ವೇದಾಭ್ಯಾಸವನ್ನು ಅರ್ಥವತ್ತಾಗಿ ಮಾಡುವವರಿಗೂ ವಿಶ್ವವಿದ್ಯಾಲಯದ ಸಂಸ್ಕೃತಭಾಗದ ವಿದ್ಯಾರ್ಥಿಗಳಿಗೂ ಅತ್ಯಂತ ಉಪಯೋಗವಾಗಿರುವುದರಿಂದ ಅತಿಪ್ರಾಚೀನವೂ, ಪ್ರಮಾಣಗ್ರಂಥವೂ ಆದ ಇದನ್ನು ಅರ್ಥಾನುವಾದಸಹಿತವಾಗಿ ಈ ಭಾಗದ ಕೊನೆಯಲ್ಲಿ ಸರ್ವರಿಗೂ ಉಪಯೋಗವಾಗಲೆಂದು ಸೇರಿಸಲಾಗಿದೆ.

ಅತಿ ಪ್ರಾಚೀನವೂ, ಅತಿಗಹನವೂ, ಅತಿ ವಿಸ್ತಾರವೂ, ಸರ್ವಶಾಸ್ತ್ರಗಳಿಗೂ, ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರರಾದಿಯಾದ ಸಕಲಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಬೇಕೆಂಬ ಘನವಾದ ಉದ್ದೇಶದಿಂದ ಕರ್ನಾಟಕಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಬಿ., ಜಿ. ಸಿ. ಎಸ್. ಐ.,** ಮಹಾಪ್ರಭುವರ್ಯರೂ ಅವರ ಸರ್ಕಾರದವರೂ ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ ಅವರ ಕುಟುಂಬಕ್ಕೂ ರಾಜಕುಮಾರಿಯರಿಗೂ, **ಶ್ರೀಕಂಠದತ್ತ ನರಸಿಂಹರಾಜ ಒಡೆಯರ್,** ಎಂಬ ಶುಭನಾಮಾಂಕಿತರಾದ ರಾಜಕುಮಾರರಿಗೂ, ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕಫಲಗಳಾದ ಆಯುರಾರೋಗ್ಯೈಶ್ವರ್ಯಾದಿಸಕಲಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ಮನ್ಮಥನಾಮ ಸಂ|| ಚೈತ್ರ ಬ|| ದಶಮಿ ಭಾನುವಾರ,
೧೭—೪—೫೫.

ಅನುವಾದಕ :
**ಎಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್.

# ವಿ ಷ ಯಾ ನು ಕ್ರ ಮ ಣಿ ಕೆ

## ಏಳನೆಯ ಅಷ್ಟಕದಲ್ಲಿ ಎಂಟನೆಯ ಅಧ್ಯಾಯವು.

(ಮುಂದುವರಿದುದು)

### ಹತ್ತನೆಯ ಮಂಡಲದ ಸೂಕ್ತಗಳು


| | | | |
|---|---|---|---|
| | | | ಪುಟಸಂಖ್ಯೆ |
| ೪೧ | ಸಮಾನಮು ತ್ಯಂ ಎಂಬ ನಲವತ್ತೊಂದನೆಯ ಸೂಕ್ತ | ...... | 1 |
| | ಸೂಕ್ತದ ಪೀಠಿಕೆ | ...... | 1 |
| ೪೨ | ಅಸ್ತೇವ ಎಂಬ ನಲವತ್ತೆರಡನೆಯ ಸೂಕ್ತ | ...... | 12 |
| ೪೩ | ಅಚ್ಛಾಮ ಇಂದ್ರಂ ಎಂಬ ನಲವತ್ತಮೂರನೆಯ ಸೂಕ್ತ | ...... | 25 |
| | ಶ್ವಘ್ನೀ ಎಂಬ ಶಬ್ದದ ಅರ್ಥವಿವರಣೆ ಇತ್ಯಾದಿ | ...... | 31 |
| ೪೪ | ಆ ಯಾತ್ವಿಂದ್ರಃ ಎಂಬ ನಲವತ್ತನಾಲ್ಕನೆಯ ಸೂಕ್ತ | ...... | 40 |
| ೪೫ | ದಿವಸ್ಪರಿ ಎಂಬ ನಲವತ್ತೈದನೆಯ ಸೂಕ್ತ | ...... | 54 |
| | ಮೂರು ವಿಧ ಅಗ್ನಿಗಳು | ..... | 56 |
| | ದ್ಯುಲೋಕಸ್ಥನಾದ ಅಗ್ನಿಯ ಉತ್ಪತ್ತಿ | ...... | 57 |
| | ಅಂತರಿಕ್ಷಸ್ಥನಾದ ವೈದ್ಯುತಾಗ್ನಿಯ ಪ್ರಶಂಸೆ | ...... | 59 |
| | ಪಾರ್ಥಿವಾಗ್ನಿಯ ಮಹಿಮೆ | ...... | 60 |
| | ಜಾತವೇದಾಃ, ವೈಶ್ವಾನರ, ದ್ರವಿಣೋದಾಃ ಇತ್ಯಾದಿ ನಾನಾವಿಧ ಅಗ್ನಿಗಳು | ...... | 64 |
| | ಅಗ್ನಿಯ ಮಹದ್ಗುಣಗಳ ವರ್ಣನೆ ಇತ್ಯಾದಿ | ...... | 80 |
| | ಅಗ್ನಿಯು ಮರಣರಹಿತನು ಇತ್ಯಾದಿ ವಿಚಾರ | ...... | 86 |


ಇಲ್ಲಿಗೆ ಏಳನೆಯ ಅಷ್ಟಕದಲ್ಲಿ ಎಂಟನೆಯ ಅಧ್ಯಾಯವು ಸಮಾಪ್ತವು

## ಎಂಟನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯವು


| | | | |
|---|---|---|---|
| ೪೬ | ಪ್ರ ಹೋತಾ ಜಾತಃ ಎಂಬ ನಲವತ್ತಾರನೆಯ ಸೂಕ್ತವು | ...... | 93 |
| | ಸೂಕ್ತದ ಪೀಠಿಕೆ—ವತ್ಸಪ್ರಿಋಷಿಯಿಂದ ದೃಷ್ಟವಾದ ಸೂಕ್ತಗಳ ಮಹಿಮೆ | ...... | 93 |
| | ಭೃಗು ಮೊದಲಾದ ಋಷಿಗಳು ಅಗ್ನಿಯನ್ನು ಕಂಡವಿಚಾರ | | 104 |
| | ಮಾತರಿಶ್ವನು ಅಗ್ನಿಯನ್ನು ಅಂತರಿಕ್ಷದಿಂದ ತರಿತಂದ ವಿಚಾರ | | 114 |
| | ಬೃಹಸ್ಪತಿಯು ಅಗ್ನಿಯನ್ನು ಕಂಡವಿಷಯ | | 115 |
| | ಅಂಗಿರಋಷಿಗಳಿಗೂ ಅಗ್ನಿಗೂ ಇರುವ ಸಂಬಂಧ | | 115 |
| | ತ್ರಿತ ಆಪ್ತ್ಯನ ಸಂಬಂಧವಾದ ವಿಷಯವಿಮರ್ಶೆ | | 123 |
| ೪೭ | ಜಗೃಭ್ಮಾ ತೇ ಎಂಬ ನಲವತ್ತೇಳನೆಯ ಸೂಕ್ತ | ...... | 132 |
| ೪೮ | ಅಹಂ ಭುವಂ ಎಂಬ ನಲವತ್ತೆಂಟನೆಯ ಸೂಕ್ತ | ...... | 142 |
| | ಸೂಕ್ತದ ಪೀಠಿಕೆ—ಮಹಾನಿಂದ್ರ ಎಂದು ಹೆಸರು ಬರಲು ಕಾರಣ | ...... | 142 |
| | ಅಭೀ ಇ ದಂ ಎಂಬ ಋಕ್ಕಿನ ನಿರುಕ್ತ | ...... | 153 |
| | ಖಲ ಶಬ್ದಾರ್ಥವಿವರಣೆ | ...... | 154 |
| | ಏಕ, ದ್ವಾ, ತ್ರಯಃ ಚತುರ್ಥ ಇತ್ಯಾದಿ ಶಬ್ದಗಳ ರೂಪನಿಷ್ಪತ್ತಿ ಇತ್ಯಾದಿ | ...... | 154 |

೪೯ ಅಹಂ ದಾಂ ಎಂಬ ನಲವತ್ತೊಂಭತ್ತನೇ ಸೂಕ್ತ ...... 161

ಸೂಕ್ತದ ಪೀಠಿಕೆ—ಇಂದ್ರನ ಸಾಹಸಕೃತ್ಯಗಳು—ವೃತ್ರಾಸುರವಧವರ್ಣನೆ ...... 161

ಪ್ರಾಸಹಾದೇವಿಯ ಕಥೆ ...... 167

ಇಂದ್ರನಿಗೆ ಮರುತ್ವಾನ್ ಎಂಬ ಹೆಸರು ಬರಲು ಕಾರಣ ...... 170

ಇಂದ್ರನು ನಮುಚಿಯೆಂಬ ರಾಕ್ಷಸನನ್ನು ಸಂಹರಿಸಿದ ವಿಚಾರ ...... 173

ಇಂದ್ರನಿಗೆ ಋಜೀಷೀ ಎಂಬ ಹೆಸರು ಬರಲು ಕಾರಣ ...... 175

ಇಂದ್ರನು ವರಾಹಾಸುರನನ್ನು ಸಂಹಾರಮಾಡಿದ ವಿಷಯ ...... 181

ಇಂದ್ರನು ವಿಶ್ವರೂಪನನ್ನು ಸಂಹಾರಮಾಡಿದ ವಿಷಯ ...... 184

ಇಂದ್ರನಿಗೆ ಬ್ರಹ್ಮಹತ್ಯಾದೋಷವು ಪ್ರಾಪ್ತವಾದ ವಿಷಯ ಮತ್ತು ಅದರ ಪರಿಹಾರಕ್ಕಾಗಿ ಇಂದ್ರನು ಮಾಡಿದ ಪ್ರಯತ್ನ ...... 186

ಇಂದ್ರವೈಕುಂಠನ ವಿಷಯ ...... 189

ಕವಿಃ ಉಶನಾಃ ಎಂಬುವರ ವಿಷಯ ...... 195

ಶುಕ್ನನ ವಿಷಯ ...... 196

ಶುಷ್ಣಾಸುರನ ವಿಷಯ ...... 199

ದಸ್ಯುಶಬ್ದಾರ್ಥವಿವರಣೆ ...... 199

ವೇಶಸೂನ್ ಎಂಬ ಶಬ್ದದ ವಿವರಣೆ ...... 201

ತುರ್ವಶ ಯದು ಎಂಬುವರ ವಿಷಯ ...... 207

೫೦ ಪ್ರ ವೋ ಮಹೇ ಎಂಬ ಐವತ್ತನೆಯ ಸೂಕ್ತ ...... 212

ದೇವಸುವ ಎಂಬ ಹವಿಸ್ಸುಗಳ (ಅಥವಾ ದೇವತೆಗಳ) ವಿಷಯ ...... 219

ಯಜ್ಞದಲ್ಲಿ ವಿಮರ್ಶಿಸಲ್ಪಡುವ ಬ್ರಹ್ಮೋದ್ಯದ ವಿಷಯ ...... 225

೫೧ ಮಹತ್ತದುಲ್ಬಂ ಎಂಬ ಐವತ್ತೊಂದನೆಯ ಸೂಕ್ತ ...... 245

ಸೂಕ್ತದ ಪೀಠಿಕೆ ...... 245

ಅಗ್ನಿಯ ಕರ್ಮಗಳು ...... 246

ಅಗ್ನಿಯು ನೀರಿನಲ್ಲಿ ಅವಿತುಕೊಂಡಿದ್ದ ವಿಚಾರ ...... 250

ಈ ವಿಷಯದಲ್ಲಿ ದೇವತೆಗಳಿಗೂ ಅಗ್ನಿಗೂ ನಡೆದ ಸಂಭಾಷಣೆ ...... 253

ಈ ವಿಷಯದಲ್ಲಿ ಬೃಹದ್ದೇವತಾಗ್ರಂಥದಲ್ಲಿರುವ ವಿವರಣೆ ...... 253

ಪ್ರಯಾಜಾಃ ಮತ್ತು ಅನುಯಾಜಾಃ ಎಂಬ ಆಹುತಿಗಳ ವಿಷಯದಲ್ಲಿ ಯಾಸ್ಕರ ನಿರ್ವಚನವು ...... 268

೫೨ ವಿಶ್ವೇ ದೇವಾಃ ಎಂಬ ಐವತ್ತೆರಡನೆಯ ಸೂಕ್ತ ...... 271

ಸೂಕ್ತದ ಪೀಠಿಕೆ ...... 271

ವಿಶ್ವೇದೇವತೆಗಳ ವಿಷಯವಿಮರ್ಶೆ ...... 272

ವಿಶ್ವೇದೇವತಾಕಸೂಕ್ತದ್ರಷ್ಟೃಗಳಾದ ಋಷಿಗಳ ಹೆಸರುಗಳು ಮತ್ತು ಸೂಕ್ತಗಳು ...... 280

ವಿಶ್ವೇದೇವತಾಕವಾದ ಸೂಕ್ತಗಳಲ್ಲಿ ನೈಮಿತ್ತಿಕವಾಗಿ ಸ್ತುತರಾಗುವ ದೇವತೆಗಳು ...... 289

ದೇವತೆಗಳ ಸಂಖ್ಯೆ ಎಷ್ಟು ಎಂಬ ವಿಷಯವಿಮರ್ಶೆ ...... 290

೫೩ ಯಮೈಚ್ಛಾಮ ಎಂಬ ಐವತ್ತಮೂರನೆಯ ಸೂಕ್ತ ...... 302

ಪಂಚಜನರು ಯಾರು ಎಂಬ ವಿಷಯ ...... 308

ತಂತುಂ ತನ್ವನ್ ಎಂಬ ಋಕ್ಕಿನ ವಿಶೇಷವಿನಿಯೋಗ ...... 315

೫೪ ತಾಂ ಸು ತೇ ಎಂಬ ಐವತ್ತನಾಲ್ಕನೆಯ ಸೂಕ್ತ ...... 321

೫೫ ದೂರೇ ತನ್ನಾಮ ಎಂಬ ಐವತ್ತೈದನೆಯ ಸೂಕ್ತ ...... 329

೫೬ ಇದಂ ತ ಏಕಂ ಎಂಬ ಐವತ್ತಾರನೆಯ ಸೂಕ್ತ ...... 340

ಋಣತ್ರಯದ ವಿಷಯ ...... 349

೫೭ ಮಾ ಪ್ರ ಗಾಮ ಎಂಬ ಐವತ್ತೇಳನೆಯ ಸೂಕ್ತ ...... 350

ಸೂಕ್ತದ ಪೀಠಿಕೆ--ಸುಬಂಧುಋಷಿಯ ವೃತ್ತಾಂತ ...... 350

ಸುಬಂಧುವಿನ ವಿಷಯದಲ್ಲಿ ಶಾಟ್ಯಾಯನಬ್ರಾಹ್ಮಣದಲ್ಲಿ ಉಕ್ತವಾಗಿರುವ ಪೂರ್ವೇತಿಹಾಸವು ...... 356

೫೮ ಯತ್ತೇ ಯಮಂ ಎಂಬ ಐವತ್ತೆಂಟನೆಯ ಸೂಕ್ತ ...... 362

೫೯ ಪ್ರ ತಾರ್ಯಾಯುಃ ಎಂಬ ಐವತ್ತೊಂಭತ್ತನೆಯ ಸೂಕ್ತ ...... 373

ಅಸುನೀತೇ ಪುನಃ ಎಂಬ ಋಕ್ಕಿನ ನಿರುಕ್ತವು ...... 379

೬೦ ಆ ಜನಂ ಎಂಬ ಅರವತ್ತನೆಯ ಸೂಕ್ತ ...... 385

ಅಯಂ ಮಾತಾಯಂ ಎಂಬ ಋಕ್ಕಿನ ವಿಷಯದಲ್ಲಿ ಶಾಟ್ಯಾಯನ ಬ್ರಾಹ್ಮಣ ವಿವರಣೆ ...... 393

೬೧ ಇದಮಿತ್ಥಾ ರೌದ್ರಂ ಎಂಬ ಅರವತ್ತೊಂದನೆಯ ಸೂಕ್ತವು ...... 398

ಸೂಕ್ತದ ಪೀಠಿಕೆ ...... 398

ನಾಭಾನೇದಿಷ್ಠನೆಂಬ ಋಷಿಯ ವಿಷಯ-ಮನುವು ತನ್ನ ಪುತ್ರರಿಗೆ ದಾಯಭಾಗವನ್ನು ಕೊಟ್ಟ ವಿಚಾರ ...... 399

ಪ್ರಜಾಪತಿಯು ತನ್ನ ಸ್ವಂತಪುತ್ರಿಯಲ್ಲಿ ಅನುರಕ್ತನಾದ ವಿಷಯ ...... 414

ಆದಿತ್ಯ, ಭೃಗು, ಅಂಗಿರಸರು ಇವರ ಉತ್ಪತ್ತಿ ...... 417


ಇಲ್ಲಿಗೆ ಎಂಟನೆಯ ಅಷ್ಟಕದ ಮೊದಲನೆಯ ಅಧ್ಯಾಯವು ಸಮಾಪ್ತವು

---

## ಎರಡನೆಯ ಅಧ್ಯಾಯ


೬೨ ಯೇ ಯಜ್ಞೇನ ಎಂಬ ಅರವತ್ತೆರಡನೆಯ ಸೂಕ್ತವು ...... 446

ಸೂಕ್ತದ ಪೀಠಿಕೆ ...... 446

ಅಂಗಿರಾಃ ಶಬ್ದದ ರೂಪನಿಷ್ಪತ್ತಿ ...... 452

೬೩ ಪರಾವತಃ ಎಂಬ ಅರವತ್ತಮೂರನೆಯ ಸೂಕ್ತ ...... 460

ಸ್ವಸ್ತಿರಿದ್ಧಿ ಎಂಬ ಋಕ್ಕಿನ ನಿರುಕ್ತ ...... 481

೬೪ ಕಥಾ ದೇವಾನಾಂ ಎಂಬ ಅರವತ್ತನಾಲ್ಕನೆಯಸೂಕ್ತ ...... 483

ನರಾಶಂಸ ಎಂಬ ದೇವತೆಯ ವಿಷಯ ...... 487

ಅದಿತಿಶಬ್ದನಿರ್ವಚನ ಮತ್ತು ದಕ್ಷಸ್ಯ ವಾದಿತೇ ಎಂಬ ಋಕ್ಕಿನ ನಿರುಕ್ತ ...... 491

ಏಳು ಮಂದಿ ಸೋಮಪಾಲಕರ ಹೆಸರು ಇತ್ಯಾದಿ ...... 496

೬೫ ಅಗ್ನಿರಿಂದ್ರೋ ವರುಣಃ ಎಂಬ ಅರವತ್ತೈದನೆಯ ಸೂಕ್ತ ...... 504

ಸೂಕ್ತದ ಪೀಠಿಕೆ ...... 506

ಮಿತ್ರ, ವರುಣ, ಅರ್ಯಮಾ ಎಂಬ ದೇವತೆಗಳ ವಿಷಯ ...... 506

೬೬ ದೇವಾನ್ ಹುವೇ ಎಂಬ ಅರವತ್ತಾರನೇ ಸೂಕ್ತ ...... 545

೬೭ ಇಮಾಂ ಧಿಯಂ ಎಂಬ ಅರವತ್ತೇಳನೆಯ ಸೂಕ್ತ ...... 554

ಸೂಕ್ತದ ಪೀಠಿಕೆ ...... 554

ಬೃಹಸ್ಪತಿ ಎಂಬ ದೇವತೆಯ ವಿಷಯ ...... 558

ಬೃಹಸ್ಪತಿಯು ವಲನು ಅಪಹರಿಸಿದ್ದ ದೇವತೆಗಳ ಗೋವುಗಳನ್ನು ಹಿಂದಕ್ಕೆ ತಂದುದು ...... 561

ಅಂಗಿರಸರಿಗೆ ವರಾಹರೆಂಬ ಹೆಸರು ...... 569

೬೮ ಉದಪ್ರುತಃ ಎಂಬ ಅರವತ್ತೆಂಟನೆಯ ಸೂಕ್ತ ...... 575

೬೯ ಭದ್ರಾ ಅಗ್ನೇಃ ಎಂಬ ಅರವತ್ತೊಂಭತ್ತನೆಯ ಸೂಕ್ತ ...... 588

೭೦ ಇಮಾಂ ಮೇ ಅಗ್ನೇ ಎಂಬ ಎಪ್ಪತ್ತನೆಯ ಸೂಕ್ತ ...... 602

ಸೂಕ್ತದ ಪೀಠಿಕೆ—ಆಪ್ರೀಸೂಕ್ತಗಳ ವಿಷಯ ...... 603

ಸಮಿದ್ಧ (ಅಗ್ನಿಃ) ...... 612

ನರಾಶಂಸಃ ...... 614

ಇಳಃ ...... 617

ಬರ್ಹಿಃ ...... 620

ದೇವೀರ್ದ್ವಾರಃ ...... 622

ನಕ್ತೋಷಾಸಾ ...... 625

ದೇವ್ಯಾ ಹೋತಾರಾ ...... 629

ತಿಸ್ರೋ ದೇವ್ಯಃ (ಸರಸ್ವತೀಳಾಭಾರತ್ಯಃ) ...... 633

ತ್ವಷ್ಟಾ ...... 637

ವನಸ್ಪತಿ ...... 641

ಸ್ವಾಹಾಕೃತಿ ...... 646

೭೧ ಬೃಹಸ್ಪತೇ ಪ್ರಥಮಂ ಎಂಬ ಎಪ್ಪತ್ತೊಂದನೆಯ ಸೂಕ್ತ ...... 649

ಸೂಕ್ತದ ಪೀಠಿಕೆ ...... 649

ಸಕ್ತುಮಿವ ತಿತಉನಾ ಎಂಬ ಋಕ್ಕಿನ ನಿರುಕ್ತ ...... 654

ಉತ ತ್ವಃ ಪಶ್ಯನ್ ಎಂಬ ಋಕ್ಕಿನ ನಿರುಕ್ತ ...... 658

ಉತ ತ್ವಂ ಸಖ್ಯೇ ಎಂಬ ಋಕ್ಕಿನ ನಿರುಕ್ತ ...... 661

ಅಕ್ಷಣ್ವಂತಃ ಕರ್ಣವಂತಃ ಎಂಬ ಋಕ್ಕಿನ ನಿರುಕ್ತ ...... 665

ಋಚಾಂ ತ್ವಃ ಪೋಷಮಾಸ್ತೇ ಎಂಬ ಋಕ್ಕಿನ ನಿರುಕ್ತ ...... 672


ಇಲ್ಲಿಗೆ ಎಂಟನೇ ಅಷ್ಟಕದ ಎರಡನೆಯ ಅಧ್ಯಾಯವು ಸಮಾಪ್ತವು.

# ಬೃಹದ್ದೇವತಾಗ್ರಂಥದ ವಿವರಣೆ

## ಮೊದಲನೆಯ ಅಧ್ಯಾಯವು


| | | |
|---|---|---|
| ಪೀಠಿಕಾ ಪ್ರಕರಣ | ...... | 677 |
| ಮಂತ್ರಗಳಲ್ಲಿ ಸ್ತುತರಾದ ದೇವತೆಗಳನ್ನು ತಿಳಿದುಕೊಳ್ಳಬೇಕಾದ ಅವಶ್ಯಕತೆ | ...... | 677 |
| ತ್ರಿಸ್ಥಾನ ದೇವತೆಗಳು | ...... | 678 |
| ಪ್ರಾರ್ಥನೆ ಅಥವಾ ಸ್ತುತಿಯ ಸ್ವರೂಪ | ...... | 679 |
| ನಾನಾವಿಧ ಸೂಕ್ತಗಳು | ...... | 680 |
| ಸೂಕ್ತಭಾಂಜಿ, ಋಗ್ಭಾಂಜಿ ನೈಪಾತಿಕ ಎಂಬ ಮೂರು ವಿಧ ಸೂಕ್ತಗಳು | ...... | 681 |
| ಹೆಸರುಗಳ ಸ್ವರೂಪ ಮತ್ತು ಅವು ಹೇಗೆ ಉತ್ಪತ್ತಿಯಾದವು ? | ...... | 682 |
| ವ್ಯಕ್ತಿಗೆ ಹೆಸರುಗಳು ವ್ಯಕ್ತಿಯ ಕರ್ಮಗಳಿಂದಲೇ ಉಂಟಾಗುವವು-ಇದು ಶೌನಕರ ಮತವು | ...... | 684 |
| ಮಂಗಲಕರವಾದ ಹೆಸರುಗಳು, ನಾನಾವಿಧಮಂತ್ರಗಳು | ...... | 685 |
| ಅರ್ಥಾನುಸಾರವಾಗಿ ಮಂತ್ರಗಳನ್ನು ವಿಂಗಡಿಸಿರುವ ಕ್ರಮ | ...... | 686 |
| ಸೂರ್ಯ (ಪ್ರಜಾಪತಿ)ನೇ ಸರ್ವಕ್ಕೂ ಮೂಲವು | ...... | 689 |
| ಅಗ್ನಿಯ ಮೂರುವಿಧ ರೂಪಗಳು | ...... | 694 |
| ತ್ರಿಸ್ಥಾನ ದೇವತೆಗಳು ಮತ್ತು ಆತ್ಮ ವಾಕ್ಕಿನ ಮೂರು ರೂಪಗಳು | ...... | 695 |
| ಸೂಕ್ತದ ಮುಖ್ಯದೇವತೆ | ...... | 696 |
| ನಾನಾದೇವತೆಗಳ ಹೆಸರುಗಳು | ...... | 698 |
| ಅಗ್ನಿ, ಇಂದ್ರ ಅಥವಾ ವಾಯು, ಸೂರ್ಯ ಎಂಬ ದೇವತೆಗಳ ಪರವಾದ ಸೂಕ್ತಗಳ ವರ್ಣನೆ | ...... | 699 |
| ಮೂರು ವಿಧ ಅಗ್ನಿಗಳು | ...... | 700 |
| ಅಗ್ನಿ, ಜಾತವೇದ, ವೈಶ್ವಾನರ ಎಂಬ ಹೆಸರುಗಳು ಒಂದೇ ಅಗ್ನಿಯನ್ನು ಸೂಚಿಸುವುದಾದರೂ ಆ ಅಗ್ನಿಗಳ ಗುಣವರ್ಣನೆಯಲ್ಲಿ ಭೇದವು ಕಂಡುಬರುವುದು | ...... | 702 |
| ಪ್ರತ್ಯವರೋಹಕ್ರಮದಿಂದ ತ್ರಿಸ್ಥಾನದೇವತೆಗಳ ವರ್ಣನೆ | ...... | 703 |
| ಪಾರ್ಥಿವಾಗ್ನಿಯನ್ನು ಪ್ರತಿಬಿಂಬಿಸುವ ದೇವತೆಗಳು | ...... | 705 |
| ಮಧ್ಯಮಸ್ಥಾನ (ಅಂತರಿಕ್ಷ) ದೇವತೆಗಳು ಮತ್ತು ಇಂದ್ರನಿಗೆ ಸಂಬಂಧಪಟ್ಟ ಇತರ ದೇವತೆಗಳು | ...... | 709 |


ಇಲ್ಲಿಗೆ ಮೊದಲನೆಯ ಅಧ್ಯಾಯವು ಸಮಾಪ್ತವು.

## ಎರಡನೆಯ ಅಧ್ಯಾಯವು


| | | |
|---|---|---|
| ಮಧ್ಯಮಸ್ಥಾನದೇವತೆಗಳು (ಮುಂದುವರೆದುದು) | ...... | 712 |
| ದ್ಯುಸ್ಥಾನದೇವತೆಗಳು, ಸೂರ್ಯನ ಮೂರುಮಂದಿ ಪತ್ನಿಯರು | ...... | 713 |
| ಸೌರ್ಯವೈಶ್ವಾನರನೆಂದರೆ ಅಗ್ನಿಯ ರೂಪಾಂತರ | ...... | 716 |
| ಅಗ್ನಿಯ ಐದು ಹೆಸರುಗಳು, ಅಗ್ನಿಶಬ್ದದ ರೂಪನಿಷ್ಪತ್ತಿ, ದ್ರವಿಣೋದಾಃ ಮತ್ತು ತನೂನಪಾತ್ ಎಂಬ ಶಬ್ದಗಳ ನಿಷ್ಪತ್ತಿ | ...... | 717 |

ನರಾಶಂಸ, ಪವಮಾನ, ಜಾತವೇದಾಃ ಎಂಬ ದೇವತೆಗಳು ..... 719
ಇಂದ್ರನ ಇಪ್ಪತ್ತಾರು ನಾಮಗಳು ; ವಾಯು, ವರುಣ, ರುದ್ರ ಮೊದಲಾದವರು ..... 719
ಪರ್ಜನ್ಯ, ಬೃಹಸ್ಪತಿ, ಬ್ರಹ್ಮಣಸ್ಪತಿ, ಕ್ಷೇತ್ರಸ್ಯಪತಿ ಇತ್ಯಾದಿ ..... 721
ವಾಸ್ತೋಷ್ಪತಿ, ಅದಿತಿ, ಕಃ, ಯಮ ..... 723
ಮಿತ್ರ, ವಿಶ್ವಕರ್ಮಾ, ಸರಸ್ವಾನ್, ವೇದ, ಮನ್ಯು ..... 724
ಅಸುನೀತಿ, ಅಪಾಂನಪಾತ್, ದಧಿಕ್ರಾ, ಧಾತೃ, ತಾರ್ಕ್ಷ್ಯ ..... 725
ಪುರೂರವಾಃ, ಮೃತ್ಯು, ಸೂರ್ಯನ ಹೆಸರುಗಳು ..... 727
ಪೂಷಾ, ವಿಷ್ಣು, ಕೇಶಿನ್, ವಿಶ್ವಾನರ, ವೃಷಾಕಪಿ ..... 728
ವಾಕ್ಕಿನ ಮೂರುವಿಧ ಸ್ವರೂಪ ; ಪೃಥಿವೀ ಮತ್ತು ಮಧ್ಯಮಸ್ಥಾನದ ರೂಪಗಳು ..... 730
ವಾಗ್ದೇವತೆಯ ಇತರ ರೂಪಗಳು, ನಾಲ್ಕು ಸ್ವರ್ಗೀಯರೂಪಗಳು ..... 731
ಋಷಿಕಾ ಅಥವಾ ಮಂತ್ರದ್ರಷ್ಟಗಳಾದ ಸ್ತ್ರೀಋಷಿಗಳು—ಇವರಲ್ಲಿ ಮೂರು ಪಂಗಡಗಳು ..... 733
ಸ್ವಪ್ರಶಂಸೆ (ಆತ್ಮಪ್ರಶಂಸೆ) ಮಾಡಿಕೊಂಡಿರುವ ದೇವತೆಗಳು, ಸಂವಾದಗಳು, ನಿಪಾತಗಳು ..... 734
ಉಪಸರ್ಗಗಳು, ಮತ್ತು ಲಿಂಗಗಳು ..... 736
ನಾಮಪದಗಳು, ಸರ್ವನಾಮಗಳು, ಅರ್ಥ, ವಾಕ್ಯರಚನೆ ..... 737
ಪದವಿಚ್ಛೇದ ಮತ್ತು ಆರುವಿಧ ಸಮಾಸಪದಗಳು .... 738
ಶಬ್ದಗಳ ಅರ್ಥ ಮತ್ತು ವಿವರಣೆ ..... 740
ಯಾಸ್ಕರ ತಪ್ಪಾದ ವಿವರಣೆ ..... 741
ಪದ ಮತ್ತು ಅರ್ಥ ಕ್ರಿಯಾಶಬ್ದಾರ್ಥ ..... 743
ಓಂ ಎಂಬ ವ್ಯಾಹೃತಿ ಮತ್ತು ಅದರ ದೇವತೆಗಳು ..... 745


ಪೀಠಿಕಾಪ್ರಕರಣವು ಸಮಾಪ್ತವು.

## ಪ್ರಥಮಮಂಡಲದ ಸೂಕ್ತಗಳ ವಿವರಣೆ


ಮೊದಲ ಮೂರು ಸೂಕ್ತಗಳು ; ವೈಶ್ವದೇವಸೂಕ್ತಗಳ ದ್ರಷ್ಟೃಗಳು ..... 746
ವೈಶ್ವದೇವಸೂಕ್ತಗಳ ಸ್ವರೂಪ ಮತ್ತು ವಿವರಣೆ ..... 747
ಸರಸ್ವತೀದೇವತಾಕವಾದ ಮಂತ್ರಗಳು ಮತ್ತು ಇಂದ್ರದೇವತಾಕವಾದ ಸೂಕ್ತಗಳು ..... 748
೬ ನೇ ಸೂಕ್ತದ ೫, ೭ ನೇ ಋಕ್ಕುಗಳಲ್ಲಿರುವ ಇಂದ್ರ ಮತ್ತು ಮರುತ್ತುಗಳ ಸಾಹಚರ್ಯ ..... 750
ಪ್ರಥಮಮಂಡಲದ ೧೩ ನೇ ಸೂಕ್ತ ಮತ್ತು ೧೪ ನೇ ಆಪ್ರೀಸೂಕ್ತ ..... 751
ಹನ್ನೊಂದು ಆಪ್ರೀಸೂಕ್ತಗಳು ..... 753
ಆಪ್ರೀಸೂಕ್ತಗಳ ಮೂರು ಗುಂಪುಗಳು ಅಥವಾ ಪ್ರಭೇದಗಳು ..... 754


ಎರಡನೆಯ ಅಧ್ಯಾಯವು ಸಮಾಪ್ತವು.

## ಮೂರನೆಯ ಅಧ್ಯಾಯವು


ಆಪ್ರೀಸೂಕ್ತಗಳ ವಿವರಣೆ (ಮುಂದುವರದುದು) ..... 756
ತನೂನಪಾತ್, ನರಾಶಂಸ, ಇಳಾ, ಬರ್ಹಿ, ಎಂಬ ದೇವತೆಗಳು ..... 756

ದೇವೀರ್ದ್ವಾರಃ ಮತ್ತು ಉಷಾಸಾನಕ್ತಾ ಎಂಬ ದೇವತೆಗಳು ...... 757
ದೈವ್ಯಾ ಹೋತಾರಾ, ತಿಸ್ರೋ ದೇವ್ಯಃ ತ್ವಷ್ಟಾ ...... 758
ಸ್ವರ್ಗೀಯದೇವತೆಯಾದ ತ್ವಷ್ಟೃ; ದಧೀಚಿಋಷಿಯ ವೃತ್ತಾಂತ ...... 760
ದಧೀಚಋಷಿಯ ಅಶ್ವಶಿರಸ್ಸು—ಮಧ್ಯಮಸ್ಥಾನವಾದ ತ್ವಷ್ಟೃವು ...... 761
ವನಸ್ಪತಿ ಮತ್ತು ಸ್ವಾಹಾಕೃತಿ ಎಂಬ ದೇವತೆಗಳು ...... 763
ತನೂನಪಾತ್ ಮತ್ತು ನರಾಶಂಸ ಎಂಬ ಎರಡು ದೇವತೆಗಳನ್ನೂ ಸ್ತುತಿಸಿರುವ ಆಪ್ರೀಸೂಕ್ತಗಳು ...... 764
ಪ್ರಥಮಮಂಡಲದ ೧೪ ಮತ್ತು ೧೫ ನೇ ಸೂಕ್ತಗಳ ದೇವತೆಗಳು ...... 765
ಋತುದೇವತಾಕವಾದ ಸೂಕ್ತ—೧ ನೇ ಮಂಡಲದ ೧೫ ನೇ ಸೂಕ್ತ ...... 765
ಮೂರು ವಿಧವಾದ ವೈಶ್ವದೇವಸೂಕ್ತಗಳು ...... 767
ವೈಶ್ವದೇವಸೂಕ್ತಗಳ ಲಕ್ಷಣ ...... 768
ಸೂಕ್ತಭಾಗಿನೀ ಮತ್ತು ನಿಪಾತಿನೀ ಮಂತ್ರಗಳು ...... 770
ವಿಶ್ವೇದೇವತಾಕಸೂಕ್ತಗಳ ದ್ರಷ್ಟೃಗಳಾದ ಋಷಿಗಳ ಹೆಸರುಗಳು ...... 771
ದ್ರವಿಣೋದಾಃ ಎಂಬ ದೇವತೆಯ ವಿಷಯ ...... 772
೧೬, ೧೭, ೧೮ ನೇ ಸೂಕ್ತಗಳ ದೇವತೆಗಳು ...... 774
೧೯ ನೇ ಸೂಕ್ತದ ದೇವತೆಗಳು ...... 776
ಮಂತ್ರದಲ್ಲಿ ನಿರ್ದಿಷ್ಟರಾಗಿರುವ ದೇವತೆಗಳನ್ನು ತಿಳಿಯುವ ಬಗೆ ...... 777
ಋಭುಗಳ ಮತ್ತು ತ್ವಷ್ಟೃವಿನ ವೃತ್ತಾಂತ ...... 779
೨೦-೨೨ ನೇ ಸೂಕ್ತಗಳ ದೇವತೆಗಳು ...... 781
೨೩ ನೇ ಸೂಕ್ತದ ದೇವತೆಗಳು ...... 782
೨೪-೩೦ ನೇ ಸೂಕ್ತಗಳ ದೇವತೆಗಳು ...... 784
೩೧-೪೦ ನೇ ಸೂಕ್ತಗಳ ದೇವತೆಗಳು ...... 785
೪೧-೪೭ ನೇ ಸೂಕ್ತಗಳ ದೇವತೆಗಳು ...... 787
ಸವ್ಯನ ವೃತ್ತಾಂತ ಶತರ್ಚಿನರು ಎಂದರೆ ಯಾರು ? ...... 789
೬೧-೭೩ ನೇ ಸೂಕ್ತಗಳ ದೇವತೆಗಳು ...... 790
೭೪-೯೦ ನೇ ಸೂಕ್ತಗಳ ದೇವತೆಗಳು ...... 791
೯೧-೧೦೪ ನೇ ಸೂಕ್ತದ ದೇವತೆಗಳು ...... 792
೧೦೫ ನೇ ಸೂಕ್ತ-ತ್ರಿತ ಆಪ್ತ್ಯ ಎಂಬ ಋಷಿಯ ವೃತ್ತಾಂತವು ...... 795
೧೧೨-೧೨೦ ಸೂಕ್ತಗಳ ದೇವತೆಗಳು ...... 796
ಕಕ್ಷೀವಾನ್ ಮತ್ತು ಸ್ವನಯ ಎಂಬುವರ ವೃತ್ತಾಂತವು ...... 798
ರಾಜರ ದಾನಪ್ರಶಂಸೆ, ನಾರಾಶಂಸೀ ಮಂತ್ರಗಳು, ಮತ್ತು ೧೨೬ ನೇ ಸೂಕ್ತದ ೬-೭ ನೇ ಮಂತ್ರಗಳ ವಿಷಯದಲ್ಲಿ ಕೆಲವು ಅಭಿಪ್ರಾಯಗಳು ...... 800


ಮೂರನೆಯ ಅಧ್ಯಾಯವು ಸಮಾಪ್ತವು

## ನಾಲ್ಕನೆಯ ಅಧ್ಯಾಯವು


| | | |
|---|---|---|
| ರೋಮಶಾ ಮತ್ತು ಇಂದ್ರ ಇವರ ವೃತ್ತಾಂತ—೧೨೬-೧೩೬ ನೇ ಸೂಕ್ತಗಳು | ..... | 803 |
| ೧೩೭-೧೩೯ ನೇ ಸೂಕ್ತಗಳ ದೇವತೆಗಳು ; ವೈಶ್ವದೇವಸೂಕ್ತಗಳ ಸ್ವರೂಪ | ..... | 805 |
| ದೀರ್ಘತಮಾಃ ಎಂಬ ಋಷಿಯ ಜನ್ಮ ವೃತ್ತಾಂತ | .... | 807 |
| ದೀರ್ಘತಮಾಃ ಎಂಬ ಋಷಿಯಿಂದ ದೃಷ್ಟವಾದ ಸೂಕ್ತಗಳು ೧೪೦-೧೫೬ | ..... | 808 |
| ದೀರ್ಘತಮಾಃ ಎಂಬ ಋಷಿಯ ಮುಂದಿನ ವೃತ್ತಾಂತವು | .... | 809 |
| ೧೫೭-೧೬೩ ನೇ ಸೂಕ್ತಗಳ ದೇವತೆಗಳು | ..... | 811 |
| ೧೬೪ ನೇ ಸೂಕ್ತದ ದೇವತೆಗಳು—ಮೂರುವಿಧ ಅಗ್ನಿಗಳು, ಸಂವತ್ಸರ | .... | 813 |
| ೧೬೫-೧೬೮ ನೇ ಸೂಕ್ತಗಳ ದೇವತೆಗಳು | .... | 816 |
| ಮರುದ್ದೇವತೆಗಳ ವಿಷಯದಲ್ಲಿ ಒಂದು ಇತಿಹಾಸವು | .... | 816 |
| ಇಂದ್ರ, ಮರುತ್ತುಗಳು ಮತ್ತು ಅಗಸ್ತ್ಯಋಷಿ (೧೬೯-೧೭೦ ಸೂಕ್ತಗಳು) | .... | 817 |
| ಅಗಸ್ತ್ಯ ಮತ್ತು ಅವನ ಪತ್ನಿಯಾದ ಲೋಪಾಮುದ್ರಾ ; ೧೭೯ ನೇ ಸೂಕ್ತ | .... | 819 |
| ೧೮೦-೧೯೧ನೇ ಸೂಕ್ತಗಳು | .... | 821 |


ಇಲ್ಲಿಗೆ ಪ್ರಥಮ ಮಂಡಲವು ಸಮಾಪ್ತವು

## ಎರಡನೆಯ ಮಂಡಲವು


| | | |
|---|---|---|
| ೨ನೇ ಮಂಡಲದ ೧-೧೨ ಸೂಕ್ತಗಳು; ಗೃತ್ಸಮದಋಷಿ, ಇಂದ್ರ ಮತ್ತು ದೈತ್ಯರು | .... | 823 |
| ಗೃತ್ಸಮದ ಮತ್ತು ಇಂದ್ರ | .... | 824 |
| ೨೩-೩೦ ಸೂಕ್ತಗಳು | .... | 827 |
| ೩೧-೩೫ ಸೂಕ್ತಗಳ ದೇವತೆಗಳು | .... | 828 |
| ೩೬-೪೩ ಸೂಕ್ತದ ದೇವತೆಗಳು; ಕಪಿಂಜಲರೂಪನಾದ ಇಂದ್ರನು | .... | 830 |


ಇಲ್ಲಿಗೆ ಎರಡನೆಯ ಮಂಡಲವು ಸಮಾಪ್ತವು

## ಮೂರನೆಯ ಮಂಡಲವು


| | | |
|---|---|---|
| ಮಂಡಲದ್ರಷ್ಟೃವಾದ ವಿಶ್ವಾಮಿತ್ರಋಷಿಯು ; ೧-೬ ಸೂಕ್ತಗಳು | .... | 832 |
| ೭-೨೯ ನೇ ಸೂಕ್ತಗಳ ದೇವತೆಗಳು | .... | 834 |
| ೩೦-೩೩ ನೇ ಸೂಕ್ತಗಳ ದೇವತೆಗಳು ; ವಿಶ್ವಾಮಿತ್ರ, ಸುದಾಸ ಮತ್ತು ನದಿಗಳು | .... | 835 |
| ದಕ್ಷಪುತ್ರಿಯ ವಿಷಯ ವಿಶ್ವಾಮಿತ್ರ ಮತ್ತು ಶಕ್ತಿ | .... | 837 |
| ವಿಶ್ವಾಮಿತ್ರ ಮತ್ತು ವಾಕ್ ಸಸರ್ಪರೀ ವಸಿಷ್ಠರಿಗೆ ವಿಶ್ವಾಮಿತ್ರನ ಶಾಪ | .... | 838 |
| ೬೧-೬೨ ನೇ ಸೂಕ್ತದ ದೇವತೆಗಳು | ..... | 841 |


ಇಲ್ಲಿಗೆ ಮೂರನೆಯ ಮಂಡಲವು ಸಮಾಪ್ತವು

## ನಾಲ್ಕನೆಯ ಮಂಡಲವು


ನಾಲ್ಕನೆಯ ಮಂಡಲದ ೧-೧೫ ಸೂಕ್ತಗಳು .... 842

ವಾಮದೇವ ಋಷಿಯ ಜನನವೃತ್ತಾಂತ ಇತ್ಯಾದಿ .... 843

ನಾನಾ ದೇವತೆಗಳ ವಾಹನಗಳು ...... 846

ಇಲ್ಲಿಗೆ ನಾಲ್ಕನೆಯ ಅಧ್ಯಾಯವು ಸಮಾಪ್ತವು

### ಐದನೆಯ ಅಧ್ಯಾಯವು

೪ ನೇ ಮಂಡಲದ ೩೩-೫೨ ನೇ ಸೂಕ್ತದ ದೇವತೆಗಳು .... 848

೫೩-೫೮ ನೇ ಸೂಕ್ತಗಳ ದೇವತೆಗಳು .... 850

ನಾಲ್ಕನೆಯ ಮಂಡಲವು ಸಮಾಪ್ತವು

## ಐದನೆಯ ಮಂಡಲವು

೫ ನೇ ಮಂಡಲದ ೧-೨೮ ಸೂಕ್ತಗಳ ದೇವತೆಗಳು; ತ್ರ್ಯರುಣ ಮತ್ತು ವೃಶಜಾನರ ವೃತ್ತಾಂತ .... 852

೨ ನೇ ಸೂಕ್ತದ ೨ ಮತ್ತು ೯ ನೇ ಋಕ್ಕುಗಳ ವಿಷಯದಲ್ಲಿ ಇತರ ಗ್ರಂಥಗಳ ಪ್ರಮಾಣವು ಮತ್ತು ೨೯-೪೦ ಸೂಕ್ತಗಳ ದೇವತೆಗಳು .... 856

೪೧-೫೧ ಸೂಕ್ತಗಳ ದೇವತೆಗಳು ಮತ್ತು ಋಣಂಚಯರಾಜನು ಬಭ್ರುವಿಗೆ ಮಾಡಿದ ದಾನದ ಪ್ರಶಂಸೆಯು .... 857

೪೩, ೪೪, ೪೫ ನೇ ಸೂಕ್ತಗಳ ದೇವತೆಗಳು .... 860

೫೧-೬೦ ಸೂಕ್ತಗಳ ದೇವತೆಗಳು .... 861

ಶ್ಯಾವಾಶ್ವನ ವೃತ್ತಾಂತವು .... 862

ಸಪ್ತವಧ್ರಿಯ ವೃತ್ತಾಂತ .... 870

೭೯-೮೭ ನೇ ಸೂಕ್ತಗಳ ದೇವತೆಗಳು .... 871

ಭೃಗು, ಅಂಗಿರಸ, ಅತ್ರಿ ಎಂಬ ಋಷಿಗಳ ಜನ್ಮವೃತ್ತಾಂತ .... 874

ಭರದ್ವಾಜಋಷಿಯ ಜನನವೃತ್ತಾಂತ .... 875

ಐದನೆಯ ಮಂಡಲವು ಸಮಾಪ್ತವು

## ಆರನೆಯ ಮಂಡಲವು

ಆರನೇ ಮಂಡಲದ ೧-೪೬ ಸೂಕ್ತಗಳ ದೇವತೆಗಳು .... 876

೩೭, ೪೪, ೪೫, ೪೭ನೇ ಸೂಕ್ತಗಳ ದೇವತೆಗಳು ..... 877

೪೯-೫೨ ಸೂಕ್ತಗಳ ದೇವತೆಗಳು .... 880

೬೩-೭೪ ಸೂಕ್ತಗಳ ದೇವತೆಗಳು ; ಸಪ್ತಸಿಂಧುಗಳು .... 881

೭೫ ನೇ ಸೂಕ್ತ ; ಅಭ್ಯಾವರ್ತೀ ಮತ್ತು ಪ್ರಸ್ತೋಕ ಸಾಂಜಯ ಎಂಬುವರ ವೃತ್ತಾಂತ .... 882

೭೫ ನೇ ಸೂಕ್ತದ ದೇವತೆಗಳು .... 884

ಆರನೆಯ ಮಂಡಲವು ಸಮಾಪ್ತವು

## ಏಳನೆಯ ಮಂಡಲವು


ವಸಿಷ್ಠಋಷಿಯ ಮಹಿಮೆ ; ಕಶ್ಯಪನ ಪತ್ನಿಯರು .... 888

ವಸಿಷ್ಠ ಮತ್ತು ವಸಿಷ್ಠಕುಲದವರು ; ೭ ನೇ ಮಂಡಲದ ೧-೩೨ ಸೂಕ್ತಗಳ ದೇವತೆಗಳು .... 892

೩೩-೩೮ ಸೂಕ್ತಗಳ ದೇವತೆಗಳು .... 893

೩೯-೪೩ ಸೂಕ್ತಗಳ ದೇವತೆಗಳು .... 895

೪೪-೪೯ ಸೂಕ್ತಗಳ ದೇವತೆಗಳು .... 896

ಇಲ್ಲಿಗೆ ಐದನೆಯ ಅಧ್ಯಾಯವು ಸಮಾಪ್ತವು

ಆರನೆಯ ಅಧ್ಯಾಯವು

೭ ನೇ ಮಂಡಲದ ೫೦-೬೬ ಸೂಕ್ತಗಳ ದೇವತೆಗಳು .... 898

೬೭-೭೪ ನೇ ಸೂಕ್ತಗಳ ದೇವತೆಗಳು .... 899

೭೫-೮೫ ಸೂಕ್ತಗಳ ದೇವತೆಗಳು .... 901

೮೬-೮೯ ಸೂಕ್ತಗಳ ದೇವತೆಗಳು ; ವಸಿಷ್ಠ ಮತ್ತು ವರುಣನ ನಾಯಿಯು .... 901

೯೦-೯೬ ಸೂಕ್ತಗಳ ದೇವತೆಗಳು .... 902

ನಾಹುಷ ಮತ್ತು ಸರಸ್ವತಿ ಇವರ ವೃತ್ತಾಂತವು .... 903

೯೭-೧೦೪ ಸೂಕ್ತಗಳ ದೇವತೆಗಳು .... 905

೧೦೪ ನೇ ಸೂಕ್ತದ ಋಕ್ಕುಗಳ ಪ್ರತ್ಯೇಕ ವಿವರಣೆ .... 906

ಏಳನೆಯ ಮಂಡಲವು ಸಮಾಪ್ತವು


## ಎಂಟನೆಯ ಮಂಡಲವು


ಕಣ್ವ ಮತ್ತು ಪ್ರಗಾಥ ಎಂಬುವರ ವೃತ್ತಾಂತ ..... 908

೮ ನೇ ಮಂಡಲದ ೧-೪ ಸೂಕ್ತಗಳ ದೇವತೆಗಳು .... 909

೫-೧೮ ಸೂಕ್ತಗಳ ದೇವತೆಗಳು .... 911

೧೯ ನೇ ಸೂಕ್ತದ ದೇವತೆ ಮತ್ತು ತ್ರಸದಸ್ಯುರಾಜನ ದಾನಪ್ರಶಂಸೆ .... 912

ಋಷಿಯು ಇಂದ್ರನನ್ನು ಬೇಡಿದ ವರಗಳು, ಸೋಭರಿ ಮತ್ತು ಚಿತ್ರ ಎಂಬುವರ ವೃತ್ತಾಂತವು ..... 914

೨೨-೨೫ ನೇ ಸೂಕ್ತಗಳ ವೃತ್ತಾಂತವು .... 915

೨೯-೩೦ ನೇ ಸೂಕ್ತಗಳ ಪ್ರತ್ಯೇಕವಿವರಣೆ ; ೩೧-೩೪ ನೇ ಸೂಕ್ತಗಳು .... 918

೪೭-೫೬ ನೇ ಸೂಕ್ತಗಳ ದೇವತೆಗಳು .... 921

೬೮-೭೫ ನೇ ಸೂಕ್ತಗಳ ದೇವತೆಗಳು .... 924

೭೬-೯೦ ನೇ ಸೂಕ್ತಗಳ ದೇವತೆಗಳು .... 926

ಅಪಾಲಾ ಎಂಬ ಸ್ತ್ರೀಯ ವೃತ್ತಾಂತ ..... 927

ಸೋಮನು ದೇವತೆಗಳನ್ನು ಬಿಟ್ಟು ಓಡಿಹೋದ ವಿಚಾರ .... 929

೧೦೦ ನೇ ಸೂಕ್ತದ ಪ್ರತ್ಯೇಕವಿವರಣೆ ; ವಿಷ್ಣುವು ಇಂದ್ರನಿಗೆ ಸಹಾಯಮಾಡುವುದು .... 932

೧೦೧ ನೇ ಸೂಕ್ತದ ಪ್ರತ್ಯೇಕವಿವರಣೆ .... 934

ಎಂಟನೆಯ ಮಂಡಲವು ಸಮಾಪ್ತವು

## ಒಂಭತ್ತನೆಯ ಮಂಡಲವು

೧-೮೬ ನೇ ಸೂಕ್ತಗಳ ದೇವತೆಗಳು .... 936
೮೭, ೯೬, ೧೧೨ ನೇ ಸೂಕ್ತಗಳ ದೇವತೆಗಳು .... 937
ಇಂದ್ರ ಮತ್ತು ಋಷಿಗಳು ; ತಪಸ್ಸಾಮರ್ಥ್ಯ .... 939

ಒಂಭತ್ತನೆಯ ಮಂಡಲವು ಸಮಾಪ್ತವು.

## ಹತ್ತನೆಯ ಮಂಡಲವು

ಹತ್ತನೆಯ ಮಂಡಲದ ೧-೮ ನೇ ಸೂಕ್ತಗಳ ದೇವತೆಗಳು ; ತ್ರಿಶಿರಾಃ ಮತ್ತು ಇಂದ್ರ .... 941
೯-೧೪ ನೇ ಸೂಕ್ತಗಳ ದೇವತೆಗಳು ಮತ್ತು ೧೫-೧೬ ನೇ ಸೂಕ್ತಗಳ ದೇವತೆಗಳು ;
ಮೂರುವಿಧ ಅಗ್ನಿಗಳು .... 942
ಸರಣ್ಯೂದೇವಿಯ ವೃತ್ತಾಂತ .... 945

ಇಲ್ಲಿಗೆ ಆರನೆಯ ಅಧ್ಯಾಯವು ಸಮಾಪ್ತವು.

## ಏಳನೆಯ ಅಧ್ಯಾಯವು

ಸರಣ್ಯೂದೇವಿಯ ವೃತ್ತಾಂತ (ಮುಂದುವರೆದುದು) .... 947
೧೭ ನೇ ಸೂಕ್ತದ ದೇವತೆಗಳು .... 948
೧೮ ನೇ ಸೂಕ್ತದಲ್ಲಿ ಅಂತ್ಯಸಂಸ್ಕಾರಕ್ಕಾಗಿ ಉಪಯೋಗಿಸುವ ಕೆಲವು ಮಂತ್ರಗಳ ವಿವರಣೆ .... 950
ಯಾವ ದೇವತೆಯ ಹೆಸರೂ ಇಲ್ಲದ ಕೆಲವು ಮಂತ್ರಗಳು .... 951
೧೯-೨೭ ನೇ ಸೂಕ್ತಗಳ ದೇವತೆಗಳು ..... 953
೩೦-೩೩ ನೇ ಸೂಕ್ತಗಳ ದೇವತೆಗಳು .... 956
ಜಗಡೆದಾಳಗಳ ಪ್ರಶಂಸೆ ; ೩೪-೪೪ ನೇ ಸೂಕ್ತಗಳ ದೇವತೆಗಳು .... 957
೪೫-೪೬ ನೇ ಸೂಕ್ತಗಳ ದೇವತೆಗಳು .... 959
ಘೋಷಾ ಎಂಬ ಸ್ತ್ರೀಯ ವೃತ್ತಾಂತ .... 959
ಇಂದ್ರವೈಕುಂಠನೆಂಬ ಋಷಿಯ ವೃತ್ತಾಂತ .... 961
ಸೌಚೀಕಾಗ್ನಿಯ ವಿಷಯ ; ಅಗ್ನಿಯು ದೇವತೆಗಳನ್ನು ಬಿಟ್ಟು ಓಡಿಹೋಗಿ ನೀರಿನಲ್ಲಿ
ಅವಿತುಕೊಂಡಿದ್ದ ವಿಚಾರ .... 964
ಪಂಚಜನರ ವಿವರಣೆ .... 966
ಸುಬಂಧುವಿನ ವೃತ್ತಾಂತ—೫೭-೫೯ ನೇ ಸೂಕ್ತಗಳು .... 971
೬೦ ನೇ ಸೂಕ್ತದ ದೇವತೆಗಳು .... 974
೬೭.೭೨ ನೇ ಸೂಕ್ತದ ದೇವತೆಗಳು .... 978
೭೧ ನೇ ಸೂಕ್ತದ ಪ್ರತ್ಯೇಕವಿವರಣೆ .... 978
೭೨-೮೪ ನೇ ಸೂಕ್ತದ ದೇವತೆಗಳು (ಖಿಲಮಂತ್ರಗಳು) .... 980
ಸೂರ್ಯಾಸೂಕ್ತದ (೮೫) ವಿವರಣೆ .... 982
೮೬-೯೩ ನೇ ಸೂಕ್ತಗಳ ದೇವತೆಗಳು .... 988

| | | |
|---|---|---|
| ಪುರೂರವ ಮತ್ತು ಉರ್ವಶಿಯ ಕಥೆ ; ೯೫ ನೇ ಸೂಕ್ತ | .... | 989 |
| ೯೬-೯೭ ನೇ ಸೂಕ್ತಗಳ ದೇವತೆಗಳು ; ದೇವಾಪಿಯ ವೃತ್ತಾಂತ | .... | 991 |
| ಋಷ್ಟಿಷೇಣನ ಪುತ್ರನಾದ ದೇವಾಪಿ ಮತ್ತು ಶಂತನು ಎಂಬುವರ ವೃತ್ತಾಂತ | .... | 991 |

ಇಲ್ಲಿಗೆ ಏಳನೆಯ ಅಧ್ಯಾಯವು ಸಮಾಪ್ತವು.

## ಎಂಟನೆಯ ಅಧ್ಯಾಯವು

| | | |
|---|---|---|
| ದೇವಾಪಿಯ ವೃತ್ತಾಂತ (ಮುಂದುವರಿದುದು) | .... | 993 |
| ೧೦೨-೧೦೩ ನೇ ಸೂಕ್ತಗಳು ; ನಕುಲಋಷಿಯ ಖಿಲಮಂತ್ರಗಳು | .... | 996 |
| ೧೦೪-೧೦೭ ನೇ ಸೂಕ್ತಗಳು ; ಭೂತಾಂಶಕಾಶ್ಯಪ | .... | 997 |
| ಪಣಿ ಎಂಬ ಅಸುರರ ಮತ್ತು ಸರಮಾ ಎಂಬ ದೇವಶುನಿಯ ಕಥೆ ; ೧೦೮ ನೇ ಸೂಕ್ತ | .... | 999 |
| ೧೦೯-೧೨೦ ನೇ ಸೂಕ್ತಗಳ ದೇವತೆಗಳು | .... | 1002 |
| ೧೨೧-೧೨೯ ನೇ ಸೂಕ್ತಗಳ ದೇವತೆಗಳು ; ಮೂರು ಖಿಲಸೂಕ್ತಗಳು | .... | 1004 |
| ಭೂಮಿಃ ಎಂಬ ಖಿಲಸೂಕ್ತ ; ೧೩೮-೧೪೨ ನೇ ಸೂಕ್ತಗಳ ದೇವತೆಗಳು | .... | 1007 |
| ೧೪೩-೧೫೪ ನೇ ಸೂಕ್ತಗಳ ದೇವತೆಗಳು ; ಖಿಲಸೂಕ್ತ, ಮೇಧಾಸೂಕ್ತ | .... | 1008 |
| ೧೫೫-೧೫೯ ನೇ ಸೂಕ್ತಗಳ ದೇವತೆಗಳು | .... | 1009 |
| ೧೬೦-೧೬೪ ನೇ ಸೂಕ್ತಗಳ ದೇವತೆಗಳು ; ಕಪೋತನೈರ್ಋತನೆಂಬ ಋಷಿ | .... | 1010 |
| ೧೬೫-೧೭೪ ನೇ ಸೂಕ್ತಗಳ ದೇವತೆಗಳು | .... | 1012 |
| ೧೭೫-೧೮೨ ನೇ ಸೂಕ್ತಗಳ ದೇವತೆಗಳು | .... | 1013 |
| ೧೮೩-೧೮೪ ನೇ ಸೂಕ್ತಗಳ ದೇವತೆಗಳು | .... | 1015 |
| ನೇಜಮೇಷ ಎಂಬ ಖಿಲಸೂಕ್ತ (೩೪) ; ೧೮೫-೧೮೮ ನೇ ಸೂಕ್ತಗಳ ದೇವತೆಗಳು | .... | 1016 |
| ೧೮೯-೧೯೦ ನೇ ಸೂಕ್ತಗಳು ; ಸಂಜ್ಞಾನಂ ಎಂಬ ಖಿಲಸೂಕ್ತ | .... | 1017 |
| ೧೯೧ ನೇ ಸೂಕ್ತ ; ಮಹಾನಾಮ್ನೀ ಋಕ್ಕುಗಳು | .... | 1019 |
| ನಿಮಿತ್ತೂಕ್ತಗಳು, ನಿಗದಗಳು ಮತ್ತು ಛಂದಸ್ಸುಗಳ ದೇವತೆಗಳು | .... | 1022 |
| ಛಂದಸ್ಸುಗಳ ದೇವತೆಗಳು ; ವೇದಗಳ, ವಷಟ್ಕಾರಗಳ, ಸ್ವಾಹಾಕಾರಗಳ, ಸ್ವರಗಳ ದೇವತೆಗಳು | .... | 1023 |
| ಸ್ವರಗಳ ದೇವತೆಗಳು | .... | 1025 |
| ವೈಶ್ವದೇವಸೂಕ್ತಗಳಲ್ಲಿ ಪ್ರಸ್ತಾಪತ್ವೇನ ಸ್ತುತರಾಗಿರುವ ನಾನಾ ದೇವತೆಗಳು | .... | 1027 |
| ದೇವತೆಗಳ ವಿಷಯದಲ್ಲಿ ಸರಿಯಾದ ತಿಳುವಳಿಕೆಯು ಅವಶ್ಯಕವು | .... | 1029 |
| ಮಂತ್ರಗಳ ದೇವತೆಗಳನ್ನು ತಿಳಿದುಕೊಳ್ಳುವ ಅವಶ್ಯಕತೆ | .... | 1030 |

ಎಂಟನೆಯ ಅಧ್ಯಾಯವು ಸಮಾಪ್ತವು.

| | | |
|---|---|---|
| ಬೃಹದ್ದೇವತಾಗ್ರಂಥದಲ್ಲಿ ಉಕ್ತವಾಗಿರುವ ಉಪಾಖ್ಯಾನ ಮತ್ತು ಇತಿಹಾಸಗಳು | .... | 1031 |
| ಬೃಹದ್ದೇವತೆಯಲ್ಲಿ ಉಕ್ತವಾಗಿರುವ ಋಗ್ವೇದಮಂತ್ರಗಳ ಅಕಾರಾದಿವರ್ಣಾನುಕ್ರಮಣಿಕೆ | .... | 1035 |

**ವಿಷಯಾನುಕ್ರಮಣಿಕೆ ಸಮಾಪ್ತವು**



॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥

ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥
ವ್ಯಾಖ್ಯಾಯ ನಿಗಮಾಭಿಜ್ಞಃ ಸಪ್ತಮಂ ಸಪ್ತಮಾಷ್ಟಕೇ ।
ಅಧ್ಯಾಯಂ ಸಾಯಣಾಚಾರ್ಯಃ ಅಷ್ಟಮಂ ವ್ಯಾಕರೋತ್ಕೃಥ ॥

## ಸಾಯಣಭಾಷ್ಯ ಸಹಿತಾ

# ಋಗ್ವೇದ ಸಂಹಿತಾ

**(ಕರ್ನಾಟಕ ಭಾಷಾರ್ಥಾನುವಾದ ವಿವರಣೆ ಸಹಿತವಾಗಿ)**

**ಭಾಗ-೨೮**

## ॥ ಸಪ್ತಮಾಷ್ಟಕೇ ಅಷ್ಟಮೋಽಧ್ಯಾಯಃ ॥

### ಏಳನೆಯ ಅಷ್ಟಕದಲ್ಲಿ ಎಂಟನೆಯ ಅಧ್ಯಾಯವು

## ಹತ್ತನೆಯ ಮಂಡಲದಲ್ಲಿ ನಲವತ್ತೊಂದನೆಯ ಸೂಕ್ತವು

### ಪೀಠಿಕೆ

ಋಗ್ವೇದಸಂಹಿತೆಯ ಇಪ್ಪತ್ತೇಳನೆಯ ಭಾಗದಲ್ಲಿ ಹತ್ತನೆಯ ಮಂಡಲದ ನಲವತ್ತು ಸೂಕ್ತಗಳು ಮುಗಿದಿವೆ. ಈ ೨೮ನೆಯ ಭಾಗವು ನಲವತ್ತೊಂದನೆಯ ಸೂಕ್ತದಿಂದ ಪ್ರಾರಂಭವಾಗಿ ಏಳನೆಯ ಅಷ್ಟಕದ ಮೊದಲ ಏಳು ಅಧ್ಯಾಯಗಳೂ, ಎಂಟನೆಯ ಅಧ್ಯಾಯದಲ್ಲಿ ೨೦ ವರ್ಗಗಳೂ ಪೂರ್ತಿಯಾಗಿ ಮುಗಿದಿವೆ. ಪ್ರಸಕ್ತ ಪ್ರಾರಂಭ ಸೂಕ್ತವಾದ ಸಮಾನಮು ತ್ಯಂ ಎಂಬ ೪೧ನೆಯ ಸೂಕ್ತಕ್ಕೆ ಘೋಷಾ ಎಂಬ ಸ್ತ್ರೀಯ ಪುತ್ರನಾದ ಸುಹಸ್ತ್ಯನೆಂಬುವನು ಋಷಿಯು. ಆದ್ದರಿಂದ ಈ ಋಷಿಯ ಮಾತೆಯಾದ ಘೋಷೆಯ ಪರಿಚಯವನ್ನೂ, ಸುಹಸ್ತ್ಯಋಷಿಯ ಪರಿಚಯವನ್ನೂ ಇಲ್ಲಿ ಸೂಕ್ಷ್ಮವಾಗಿ ವಿವರಿಸುವುದು ಅವಶ್ಯಕವಾಗಿದೆ.

ಅಶ್ವಿನೀದೇವತೆಗಳು ಯಾವ ತತ್ತ್ವವನ್ನು ಪ್ರತಿಬಿಂಬಿಸುವರೆಂಬ ವಿಷಯಲ್ಲಿ ಇರುವ ಅಭಿಪ್ರಾಯಭೇದಗಳನ್ನು ತಿಳಿಸಲು ನಿರುಕ್ತಾದಿ ವಾಕ್ಯಗಳನ್ನುದಾಹರಿಸಿ ಹಿಂದೆ ವಿವರಿಸಿದೆ. ಈ ದೇವತೆಗಳ ಮಾಹಾತ್ಮ್ಯವನ್ನು ತಿಳಿಸುವ ಅನೇಕ ಸಂದರ್ಭಗಳನ್ನು ವಿಶದಪಡಿಸಿದೆ. ಅನೇಕ ಋಷಿಗಳು ಈ ದೇವತೆಗಳನ್ನು ಪ್ರಶಂಸಿಸಿದ್ದಾರೆ. ಅವರಲ್ಲಿ ಘೋಷಾ ಎಂಬ ಸ್ತ್ರೀಋಷಿಯಿಂದ ನಿರ್ಮಿತವಾಗಿರುವ ೧೦ ನೇ ಮಂಡಲದ ೩೯ ಮತ್ತು ೪೦ ನೇ ಸೂಕ್ತವೂ, ಅವಳ ಪುತ್ರನಾದ ಸುಹಸ್ತ್ಯನಿಂದ ನಿರ್ಮಿತವಾಗಿರುವ ೪೧ನೇ ಸೂಕ್ತವೂ ಪ್ರಸಿದ್ಧವಾಗಿದೆ. ಈ ಸೂಕ್ತಗಳಲ್ಲಿ ಋಷಿಗಳು ಅಶ್ವಿನೀದೇವತೆಗಳ ಅಸಾಧಾರಣವಾದ ಮಹದ್ಗುಣಗಳನ್ನು ಪ್ರಶಂಸಿಸಿದ್ದಾರೆ.

ಘೋಷಾ ಸಂಜ್ಞಕಳಾದ ಋಷಿಯಿಂದ ನಿರ್ಮಿತವಾದ ಸೂಕ್ತಗಳು ಎರಡೇ ಆದರೂ ಸಹ, ಅಶ್ವಿನೀದೇವತೆಗಳು ಅವಳಿಗೆ ಮಾಡಿದ ಮಹದುಪಕಾರವನ್ನೂ, ಅವಳ ಮಹತ್ತ್ವವನ್ನೂ ಹಿಂದೆ ಅನೇಕ ಮಂತ್ರಗಳಲ್ಲಿ ಹೊಗಳಿದೆ. ಉತ್ತಮಳಾದ ಭಕ್ತಳಾದುದರಿಂದ ಅವಳಲ್ಲಿ ಈ ದೇವತೆಗಳು ಮಹದನುಗ್ರಹವನ್ನು ತೋರಿದ್ದಾರೆ. ಅವಳ ವೈಯಕ್ತಿಕವಾದ ಪರಿಚಯವನ್ನು ತಿಳಿಸುತ್ತ ಬೃಹದ್ದೇವತೆಯಲ್ಲಿ ಅವಳ ವಿಷಯವನ್ನು ಈ ರೀತಿ ತಿಳಿಸಿದೆ.

> ಅಸೀತ್ಕಾಕ್ಷೀವತೀ ಘೋಷಾ ಪಾಪರೋಗೇಣ ದುರ್ಭಗಾ ।
> ಉವಾಸ ಷಷ್ಟಿಂ ವರ್ಷಾಣಿ ಪಿತುರೇವ ಗೃಹೇ ಪುರಾ ॥

(ಬೃ. ದೇ. ೭. ೪೨)

ಕಕ್ಷೀವಂತನ ಪುತ್ರಿಯಾದ ಘೋಷಾ ಎಂಬ ಸ್ತ್ರೀಗೆ ವಿಕಾರವೂ, ಭಯಂಕರವೂ ಆದ ರೋಗವು ಪ್ರಾಪ್ತವಾಯಿತು. ಅವಳ ರೂಪವೇ ನಾಶವಾಯಿತು. ಆದುದರಿಂದಲೇ ಅವಳಿಗೆ ವಿವಾಹವಿಲ್ಲದೆ ಅರವತ್ತುವರ್ಷಗಳಕಾಲ ತಂದೆಯ ಮನೆಯಲ್ಲಿಯೇ ವಾಸಮಾಡಬೇಕಾಯಿತು.

> ಆತಸ್ಥೇ ಮಹತೀಂ ಚಿಂತಾಂ ನ ಪುತ್ರೋ ನ ಪತಿರ್ಮಮ ।
> ಜರಾಂ ಪ್ರಾಪ್ತಾ ಮುಧಾ ತಸ್ಮಾತ್ ಪ್ರಪದ್ಯೇಽಹಂ ಶುಭಸ್ಪತೀ ॥

(ಬೃ. ದೇ. ೭. ೪೩)

"ವಿವಾಹವಿಲ್ಲದೇ, ಪತಿರಹಿತಳಾಗಿಯೂ, ಪುತ್ರರಹಿತಳಾಗಿಯೂ ನಾನು ವೃದ್ಧಳಾಗಿದ್ದೇನೆ. ನನ್ನ ಆಯುಸ್ಸು ವ್ಯರ್ಥವಾಗುತ್ತಿದೆ" ಎಂಬುದಾಗಿ ಅವಳಿಗೆ ಸದಾ ಚಿಂತೆಯು ಆವರಿಸಿತು. ಆದುದರಿಂದ ನಾನು ಶುಭಸ್ಪತಿಗಳೆಂದು (ತೇಜಸ್ಸಿಗೆ ಒಡೆಯರು) ಪ್ರಸಿದ್ಧರಾದ ಅಶ್ವಿನೀದೇವತೆಗಳನ್ನು ಆಶ್ರಯಿಸಿ ಅವರನ್ನು ಸ್ತುತಿಸಿ ಅವರ ಅನುಗ್ರಹವನ್ನು ಪಡೆಯುವೆನು ಎಂದು ನಿಶ್ಚಯಿಸಿ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿ ಮೊರೆಯಿಟ್ಟಳು.

> ಯಥೈತೌ ಮಾಮಕಸ್ತಾತ ಆರಾಧ್ಯಾವಾಪ ಯೌವನಂ ।
> ಆಯುರಾರೋಗ್ಯಮೈಶ್ವರ್ಯಂ ಸರ್ವಭೂತಹನೇ ವಿಷಂ ॥

(ಬೃ. ದೇ. ೭. ೪೪)

"ನನ್ನ ತಂದೆಯು ಇದೇ ಅಶ್ವಿನೀದೇವತೆಗಳನ್ನು ಪೂಜಿಸಿ ಅವರ ಅನುಗ್ರಹದಿಂದ ಯೌವನವನ್ನೂ, ದೀರ್ಘಾಯುಸ್ಸನ್ನೂ, ಆರೋಗ್ಯವನ್ನೂ, ಶಕ್ತಿಯನ್ನೂ ಮತ್ತು ಸಕಲಭೂತಗಳನ್ನೂ ಕೊಲ್ಲಲು ಸಮರ್ಥವಾದ ವಿಷವನ್ನೂ ಪಡೆದನು. ಆದುದರಿಂದ ನಾನೂ ಅವರನ್ನು ಪೂಜಿಸಿ ನನ್ನ ಇಷ್ಟಾರ್ಥವನ್ನು ಪಡೆಯುವೆನು"

ರೂಪವತ್ತ್ವಂ ಚ ಸೌಭಾಗ್ಯಮಹಂ ತಸ್ಯ ಸುತಾ ಯದಿ ।
ಮಮಾಪಿ ಮಂತ್ರಾಃ ಪ್ರಾದುಃ ಸ್ಯುರ್ಯೈಸ್ತೋಷ್ಯೇತೇ ಮಯಾಶ್ವಿನೌ ॥

(ಬೃ. ದೇ. ೭. ೪೫)

" ನನಗೂ ಸಹ ಅಶ್ವಿನೀದೇವತೆಗಳನ್ನು ವಿಧಿಪೂರ್ವಕವಾಗಿ ಸ್ತುತಿಸಿ ಪೂಜಿಸುವ ಕ್ರಮವು ತಿಳಿದರೆ ನಾನೂ ಅವರನ್ನು ಪೂಜಿಸಿ ಅವರ ಅನುಗ್ರಹದಿಂದ ಸೌಂದರ್ಯವನ್ನೂ, ಕಲ್ಯಾಣವನ್ನೂ ಪಡೆಯುತ್ತೇನೆ. ನನ್ನ ತಂದೆಯು ಅವರಿಂದ ವರವನ್ನು ಪಡೆದಂತೆ ನಾನೂ ನನ್ನ ಇಷ್ಟಾರ್ಥಗಳನ್ನು ಪಡೆಯುತ್ತೇನೆ " ಎಂದು ಅಶ್ವಿನೀದೇವತೆಗಳನ್ನು ಸ್ತುತಿಸುವ ಕ್ರಮವನ್ನು ಕುರಿತು ಆಲೋಚಿಸಿದಳು.

ಚಿಂತಯಂತೀತಿ ಸೂಕ್ತೇ ದ್ವೇ ಯೋ ವಾಂ ಪರಿ ದದರ್ಶ ಸಾ ।
ಸ್ತುತೌ ತಾವಶ್ವಿನೌ ದೇವೌ ಪ್ರೀತೌ ತಸ್ಯಾ ಭಗಾಂತರಂ ॥

(ಬೃ. ದೇ. ೭. ೪೬)

ಹೀಗೆ ಧ್ಯಾನಾಸಕ್ತಳಾಗಿರುವಾಗ " ಯೋ ವಾಂ ಪರಿ ", " ರಥಂ ಯಾಂತಂ " (೧೦-೩೯; ೧೦-೪೦) ಎಂಬ ಮಂತ್ರಗಳಿಂದ ಆರಂಭವಾಗುವ ಎರಡು ಸೂಕ್ತಗಳ ದರ್ಶನವನ್ನು ಹೊಂದಿ ಅವರನ್ನು ಸ್ತುತಿಸಿದಳು. ಇದರಿಂದ ಅಶ್ವಿನೀದೇವತೆಗಳು ತೃಪ್ತರಾಗಿ ಅವಳ ದೇಹವನ್ನು ಪ್ರವೇಶಿಸಿದರು.

ಪ್ರವಿಶ್ಯ ವಿಜರಾರೋಗಾಂ ಸುಭಗಾಂ ಚಕ್ರತುಶ್ಚ ತಾಂ ।
ಭರ್ತಾರಂ ದದತುಸ್ತಸ್ಯೈ ಸುಹಸ್ತ್ಯಂ ಚ ಸುತಂ ಮುನಿಂ ॥

(ಬೃ. ದೇ. ೭. ೪೭)

ಅನಂತರ, ಅವಳ ವಾರ್ಧಕ್ಯವನ್ನು ಹೋಗಲಾಡಿಸಿ ಅವಳನ್ನು ರೋಗದಿಂದ ಮುಕ್ತಳನ್ನಾಗಿ ಮಾಡಿ, ಸುಂದರವಾದ ರೂಪವನ್ನು ಅವಳಿಗೆ ಕೊಟ್ಟರು. ಉತ್ತಮವಾದ ಪತಿಯನ್ನೂ ಮತ್ತು ಸುಹಸ್ತ್ಯನೆಂಬ ಉತ್ತಮನಾದ ಪುತ್ರನನ್ನೂ ಅನುಗ್ರಹಿಸಿದರು. ಸುಹಸ್ತ್ಯನೂ ಅವಳಂತೆಯೇ ಪ್ರಸಿದ್ಧನಾದ ಋಷಿಯು.

ದದತುಸ್ತತ್ಸುಪರ್ಣಾಭ್ಯಾಂ ಯನ್ನಾಸತ್ಯೇತಿ ಕೀರ್ತ್ಯತೇ ।
ಕಾಕ್ಷೀವತ್ಯೈ ಚ ಘೋಷಾಯೈ ನ ತಸ್ಯಾಮಾಜುರೋऽನಯೋಃ ॥

(ಬೃ. ದೇ. ೭. ೪೮)

ಅಶ್ವಿನೀದೇವತೆಗಳು ತಮ್ಮ ಉತ್ತಮವಾದ ಸುಪರ್ಣ (ಪಕ್ಷಗಳನ್ನು ಹೊಂದಿದ ಅಶ್ವ) ಗಳೊಡನೆ ಕೂಡಿ ಬಂದು ಘೋಷೆಗೆ ಅನುಗ್ರಹಿಸಿದ ಕ್ರಮವನ್ನು " ಅಮಾಜುರಶ್ಚಿದ್ಭವಥಃ " " ನ ತಸ್ಯ ವಿದ್ಮ " (೧೦-೩೯-೩; ೧೦. ೪೦. ೧೧) ಇತ್ಯಾದಿ ಸ್ತುತಿವಾಕ್ಯಗಳಿಂದ ವರ್ಣಿಸಿದೆ.

ಅತೀಂದ್ರಿಯದರ್ಶನದ ಸಾಮರ್ಥ್ಯವೂ, ಉತ್ತಮವಾದ ಕರ್ಮಕುಶಲತೆಯೂ ಇರುವ ಬ್ರಹ್ಮವಾದಿನಿಗಳ ಸಮೂಹಕ್ಕೆ ಸೇರಿದವಳೆಂದು ಘೋಷೆಯನ್ನು ಪ್ರಶಂಸಿಸಿದೆ. ಈ ಬ್ರಹ್ಮವಾದಿನಿಗಳನ್ನು ಮೂರು ಪಂಗಡವಾಗಿ ವಿಭಾಗಿಸಿದೆ. ಈ ಮೂರು ಪಂಗಡವೂ ಮೂರು ವಿಧವಾದ ಶಕ್ತಿಯನ್ನು ಹೊಂದಿ ದೇವತಾದರ್ಶನದ ಸಾಮರ್ಥ್ಯವನ್ನು ಹೊಂದಿರುತ್ತದೆ ಎಂದು ಈ ಗುಂಪುಗಳಿಗೆ ಸೇರಿದ ಸ್ತ್ರೀ ಋಷಿಗಳ ಶಕ್ತಿಯನ್ನು ಈ ರೀತಿ ವರ್ಣಿಸಿದೆ.

ನವಕಃ ಪ್ರಥಮಸ್ತ್ವಾಸಾಂ ವರ್ಗಸ್ತುಷ್ಟಾವ ದೇವತಾಃ ।
ಋಷಿಭಿರ್ದೇವತಾಭಿಶ್ಚ ಸಮೂದೇ ಮಧ್ಯಮೋ ಗಣಃ ॥

(ಬೃ. ದೇ. ೨. ೮೫)

ಇವುಗಳಲ್ಲಿ ಮೊದಲನೆಯ ಗುಂಪಿಗೆ ಸೇರಿದವರು ಒಂಭತ್ತು ಮಂದಿ. ಇವರು ದೇವತೆಗಳನ್ನು ಸ್ತುತಿಸಿದವರು. ಆದರೆ ಪ್ರತ್ಯಕ್ಷತಃ ದೇವತೆಗಳೊಂದಿಗೆ ಸಂಭಾಷಿಸಿದವರಲ್ಲ. ಎರಡನೆಯ ಗುಂಪಿಗೆ ಸೇರಿದವರು ಮಾತ್ರ ಋಷಿಗಳೊಂದಿಗೂ, ದೇವತೆಗಳೊಂದಿಗೂ ಪ್ರತ್ಯಕ್ಷತಃ ಮಾತನಾಡಿದವರು.

ಆತ್ಮನೋ ಭಾವವೃತ್ತಾನಿ ಜಗೌ ವರ್ಗಸ್ತ್ವಥೋತ್ತಮಃ ।
ಉತ್ತಮಸ್ಯ ತು ವರ್ಗಸ್ಯ ಯ ಋಷಿಃ ಸೈವ ದೇವತಾ ॥

(ಬೃ. ದೇ. ೨. ೮೬)

ಭಾವವೃತ್ತವನ್ನು ಎಂದರೆ ಆತ್ಮಪರಿಣಾಮಸ್ವರೂಪವಿಶೇಷಗಳನ್ನು ಪ್ರಶಂಸಿಸಿ ಸೂಕ್ತವನ್ನು ನಿರ್ಮಿಸಿದ ಋಷಿಗಳು ಉತ್ತಮ ವರ್ಗದವರು. ಈ ಗುಂಪಿಗೆ ಸೇರಿದ ಸೂಕ್ತನಿರ್ಮಾಪಕರಾದ ಋಷಿಗಳೇ, ಈ ಸೂಕ್ತದಲ್ಲಿ ನಿರ್ದಿಷ್ಟರಾದ ದೇವತೆಗಳೂ ಆಗಿರುತ್ತಾರೆ. ಹೀಗೆ ಬ್ರಹ್ಮವಾದಿನಿಗಳಲ್ಲಿ ಮೂರು ಬಗೆಯಾಗಿರುತ್ತವೆ. ಅವುಗಳಲ್ಲಿ ಘೋಷೆಯು ಮೊದಲನೆಯ ವರ್ಗಕ್ಕೆ ಸೇರಿದವಳೆಂದು ತಿಳಿಸುತ್ತ—

ಘೋಷಾ, ಗೋಧಾ, ವಿಶ್ವವಾರಾ, ಅಪಾಲೋಪನಿಷನ್ನಿಷತ್ ।
ಬ್ರಹ್ಮಜಾಯಾ ಜುಹೂರ್ನಾಮ ಅಗಸ್ತ್ಯಸ್ಯ ಸ್ವಸಾದಿತಿಃ ॥

(ಬೃ. ದೇ. ೨. ೮೨)

**ಘೋಷಾ** (೧೦-೩೯, ೪೦); **ಗೋಧಾ**—(೧೦೧-೧೫-೬,೭); **ವಿಶ್ವವಾರಾ** (೫. ೨೮); **ಅಪಾಲಾ** (೭. ೯೧); **ಉಪನಿಷತ್** ಮತ್ತು **ನಿಷತ್** (ಪ್ರ ಧಾರಯಂತ ಎಂಬ ಆರಂಭವುಳ್ಳ ಖಿಲ ಸೂಕ್ತದ ನಿರ್ಮಾಪಕರು) **ಜುಹೂ ಬ್ರಹ್ಮಜಾಯಾ** (೧೦. ೧೦೯); ಅಗಸ್ತ್ಯನ ಸೋದರಿ (೧೦. ೬೦. ೬) **ಅದಿತಿ** (೪. ೧೮ ರಲ್ಲಿ ಕೆಲವು ಮಂತ್ರಗಳು) ಎಂದು ಪ್ರಥಮ ಗುಂಪಿಗೆ ಸೇರಿದ ಬ್ರಹ್ಮವಾದಿನಿಗಳಲ್ಲಿ **ಘೋಷೆಯು** ಒಬ್ಬಳೆಂದು ಸೂಚಿಸಿದೆ. ಆದುದರಿಂದ, ಘೋಷೆಯು ದಿವ್ಯತ್ವವನ್ನು ಸಾಕ್ಷಾತ್ಕರಿಸಬಲ್ಲ ಅತೀಂದ್ರಿಯ ಶಕ್ತಿಯುಳ್ಳ ಮಾನವಸ್ತ್ರೀಯೆಂದು ವಿಶದವಾಗುತ್ತದೆ. ಇವಳು ಮಾನವಸ್ತ್ರೀಯಾದರೂ ತನ್ನ ದಿವ್ಯಶಕ್ತಿಯಿಂದ ದೇವತೆಗಳನ್ನು ಪೂಜಿಸಿ ಅವರನ್ನು ಸಾಕ್ಷಾತ್ಕರಿಸಿ ಅವರ ಅನುಗ್ರಹವನ್ನು ಪಡೆದಳೆಂಬುದು ಸ್ಪಷ್ಟವಾಗಿದೆ.

ಇಂತಹ ದಿವ್ಯಶಕ್ತಿಯಿದ್ದರೂ ಸಹ ಅವಳು ತನ್ನ ಭೌತಿಕವಾದ ನ್ಯೂನತೆಯಿದ್ದುದರಿಂದ ಸರಿಯಾದ ಪತಿಯನ್ನು ಪಡೆಯಲಾಗಲಿಲ್ಲವೆಂದೂ ಮತ್ತು ಪತಿಪುತ್ರರಹಿತವಾದ ಜೀವನವು ಅವಳ ಮನಸ್ಸಿಗೆ ಖೇದವನ್ನುಂಟುಮಾಡಿತೆಂದೂ ತಿಳಿಸಿದೆ. ಭೌತಿಕವಾದ ಆರೋಗ್ಯವೂ, ಸೌಂದರ್ಯವೂ ಜೀವನದ ಸೌಖ್ಯಕ್ಕೆ ಯಾವರೀತಿ ಸಾಧನವಾಗಿರುತ್ತದೆಂಬುದು ಇಂತಹ ಉದಾಹರಣೆಗಳಿಂದ ತಿಳಿಯುತ್ತದೆ. ಇವೆರಡೂ ಇಲ್ಲದ ಸ್ತ್ರೀಯರು ಅತ್ಯಧಿಕವಾದ ವಯಸ್ಸುಳ್ಳವರಾದರೂ ಸಹ ಅವಿವಾಹಿತರಾಗಿಯೇ ತಮ್ಮ ಪಿತೃಗೃಹಗಳಲ್ಲಿರುತ್ತಿದ್ದರು ಎಂದು ಇದರಿಂದಲೂ ಇಂತಹ ಇನ್ನೂ ಅನೇಕ ಸನ್ನಿವೇಶಗಳಿಂದಲೂ ವೈದಿಕಕಾಲದ ಸಾಮಾಜಿಕ ಜೀವನದ ಸ್ವರೂಪವು ಸೂಚಿತವಾಗುತ್ತದೆ.

ಜೀವನವು ದುಃಖಮಯವಾಗಿದ್ದರೂ ಸಹ, ಪರಿಶುದ್ಧವಾದ ಜೀವನವನ್ನು ನಡೆಸಿ ದೇವಪೂಜಾಕಾರ್ಯಗಳಿಂದ ಈ ದುಃಖವನ್ನು ನಿವಾರಿಸಲು ಸಾಧ್ಯವೆಂಬುದು ಘೋಷೆಯ ಜೀವನದಿಂದ ತಿಳಿಯುತ್ತದೆ. ಇವಳ ಉತ್ತಮವಾದ

ಸ್ತುತಿಗೂ, ಪೂಜಾಕಾರ್ಯಕ್ಕೂ ಪ್ರೀತರಾದ ಅಶ್ವಿನೀದೇವತೆಗಳು ಇವಳಿಗೆ ಅತ್ಯುತ್ತಮವಾದ ಸೌಖ್ಯವನ್ನುಂಟುಮಾಡಿದರು ಎಂದು ಅನೇಕ ಕಡೆಗಳಲ್ಲಿ ಪ್ರಶಂಸಿತವಾಗಿದೆ. ಈ ವಿಷಯವನ್ನು ಹಿಂದೆ ವಿವರಿಸಿದೆ. (ಋ. ಸಂ. ೧. ೧೧೨. ೭ ಇತ್ಯಾದಿ)

ಘೋಷೆಗೆ ಅಶ್ವಿನೀದೇವತೆಗಳ ಅನುಗ್ರಹದಿಂದ ಸುಹಸ್ತ್ಯನೆಂಬ ಪುತ್ರನು ಉತ್ಪನ್ನನಾದ ವಿಷಯವೂ ತಿಳಿಸಲ್ಪಟ್ಟಿದೆ. ಈ ಸುಹಸ್ತ್ಯನೂ ಸಹ ಉತ್ತಮವಾದ ಸ್ತುತಿನಿರ್ಮಾಪಕನು. ಋ. ಸಂ. ೧೦-೪೧ನೇ ಸೂಕ್ತದ ನಿರ್ಮಾಪಕನೆಂದು ಪ್ರಸಿದ್ಧನಾಗಿದ್ದಾನೆ. ಪ್ರಕೃತ ಸೂಕ್ತದ ಋಕ್ಕುಗಳು ಇವನ ಕೃತಿಕೌಶಲವನ್ನು ತಿಳಿಸುತ್ತವೆ. ಇವುಗಳಲ್ಲಿ ಅಶ್ವಿನೀದೇವತೆಗಳನ್ನು ಪ್ರಶಂಸಿಸಿದ್ದಾನೆ. ಘೋಷಾ ಮತ್ತು ಘೌಷೇಯ ಇವರಿಬ್ಬರೂ ತಮ್ಮ ಕೃತಿಗಳಲ್ಲಿ ಅಶ್ವಿನೀದೇವತೆಗಳ ದಿವ್ಯಶಕ್ತಿಗನ್ನು ಸ್ತುತಿಸಿದ್ದಾರೆ. ಈ ದಿವ್ಯಶಕ್ತಿಗಳನ್ನೂ, ಅಶ್ವಿನೀದೇವತೆಗಳ ವಿಷಯದಲ್ಲಿರುವ ಅಭಿಪ್ರಾಯ ಪ್ರಭೇದಗಳನ್ನೂ ಹಿಂದೆ ತಿಳಿಸಿದೆ. ಪ್ರಕೃತ ಸೂಕ್ತಗಳಲ್ಲಿ ವರ್ಣಿತವಾಗಿರುವ ಕೆಲವು ಅಂಶಗಳನ್ನು ಮಾತ್ರ ಇಲ್ಲಿ ಪರಿಶೀಲಿಸಲಾಗುತ್ತದೆ.

" ವ್ಯುಷ್ಟೌ ಉಷಸೋ ಹವಾಮಹೇ " (ಋ. ಸಂ. ೧೦. ೪೧. ೧) " ಪ್ರಾತರ್ಯುಜಂ ನಾಸತ್ಯಾಧಿತಿಷ್ಠಥಃ " (೧೦. ೪೧. ೨) ಇತ್ಯಾದಿ ವಾಕ್ಯಗಳು ಅಶ್ವಿನೀದೇವತೆಗಳಿಗೂ, ಉಷಸ್ಸಿಗೂ ಇರುವ ಸ್ವಾಭಾವಿಕವಾದ ಸಂಬಂಧವನ್ನು ತಿಳಿಸುತ್ತವೆ. ಅಶ್ವಿನೀದೇವತೆಗಳು ಅಹೋರಾತ್ರರೂಪರು ಎಂಬುದು ಒಂದು ಮತವೆಂಬ ನಿರುಕ್ತಕಾರರು ಉದಾಹರಿಸಿರುವ ವಿಷಯವನ್ನೂ ಹಿಂದೆ ತಿಳಿಸಿದೆ. (ನಿ. ೧೨. ೧) ಈ ಮತವನ್ನು ಅನೇಕರು ಅನುಮೋದಿಸಿರುತ್ತಾರೆ. ಅಹೋರಾತ್ರಗಳೆರಡರಲ್ಲೂ ಇವರಿಗೆ ಆಹ್ವಾನವಿದೆ. ಘೋಷೆಯಿಂದ ನಿರ್ಮಿತವಾದ ಋಕ್ಕುಗಳಲ್ಲಿಯೇ ಈ ಅಂಶವು ಸ್ಪಷ್ಟವಾಗಿದೆ. ಉದಾಹರಣೆಗೆ—

ಯುವಾಂ ಮೃಗೇವ ವಾರಣಾ ಮೃಗಣ್ಯವೋ ದೋಷಾ ವಸ್ತೋರ್ಹವಿಷಾ ನಿ ಹ್ವಯಾಮಹೇ।
ಯುವಂ ಹೋತ್ರಾಮೃತುಥಾ ಜುಹ್ವತೇ ನರೇಷಂ ಜನಾಯ ವಹಥಃ ಶುಭಸ್ಪತೀ ॥
(ಋ. ಸಂ. ೧೦. ೪೦. ೪)

ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ಅಹೋರಾತ್ರಗಳೆರಡರಲ್ಲೂ ಹವಿಸ್ಸುಗಳೊಡನೆ ಕೂಡಿ ಪ್ರಾರ್ಥಿಸಿ ಕರೆಯುತ್ತೇವೆ ಎಂದು ಈ ಎರಡು ಕಾಲಗಳಲ್ಲೂ ಅವರ ಆವಿರ್ಭಾವವನ್ನು ತಿಳಿಸಿದೆ.

" ತಾವಿದ್ದೋಷಾ ತಾ ಉಷಸಿ ಶುಭಸ್ಪತೀ ತಾ ಯಾಮನ್ರುದ್ರವರ್ತನೀ " (ಋ. ಸಂ. ೮. ೨೨. ೧೪) ಇತ್ಯಾದಿ ಇತರ ಋಷಿಗಳಿಂದ ನಿರ್ಮಿತವಾದ ಮಂತ್ರಗಳೂ ಈ ವಿಷಯವನ್ನು ಸ್ಪಷ್ಟಪಡಿಸುತ್ತವೆ. ಆದರೆ, ಇಲ್ಲಿ ಇನ್ನೊಂದು ಪರಿಷ್ಕಾರವೂ ಇರುತ್ತದೆ. ಅಹೋರಾತ್ರಗಳೆಂದರೆ, ಅಹಸ್ಸಿನ ಆವಿರ್ಭಾವಕಾಲದ ಸಂಧ್ಯಾ, ರಾತ್ರಿಯ ಆವಿರ್ಭಾವಕಾಲದ ಸಂಧ್ಯಾ ಎಂದು ತಾತ್ಪರ್ಯಮಾಡಬೇಕೆಂದು ಕೆಲವರ ಮತ. ಈ ಸಂಧ್ಯೆಗಳು ಪ್ರಕಾಶ ಮತ್ತು ಮಬ್ಬು ಈ ಎರಡು ಅಂಶಗಳಿಂದಲೂ ಕೂಡಿರುತ್ತದೆ. ಆದರೆ, ಈ ಪರಿಷ್ಕಾರವು ಅಷ್ಟು ವಿಹಿತವಾಗಿರುವುದಿಲ್ಲ. ಇವುಗಳಲ್ಲಿ ಸಮಕಾಲಿಕವಾದ ಸಾಹಚರ್ಯವಿರುವುದಿಲ್ಲವೆಂಬುದು ಇನ್ನೊಂದು ಅಭಿಪ್ರಾಯ. ಅಹೋರಾತ್ರಗಳನ್ನು ಪ್ರತಿಬಿಂಬಿಸುವ ಮಿತ್ರಾವರುಣರಲ್ಲಿ ಐಕ್ಯವನ್ನೂ, ಸಾಹಚರ್ಯವನ್ನೂ ಹೇಳುವಂತೆಯೇ ಇಲ್ಲಿಯೂ ಹೇಳಬೇಕೆಂದು ಈ ಆಕ್ಷೇಪಕ್ಕೆ ಸಮಾಧಾನವಿರುತ್ತದೆ. ಉಷಸ್ಸಿನ ಆವಿರ್ಭಾವಕಾಲದಲ್ಲಿ ಅಶ್ವಿನೀದೇವತೆಗಳೂ ಪ್ರಾದುರ್ಭೂತರಾಗುತ್ತಾರೆ ಎಂಬ ಅಭಿಪ್ರಾಯವು ಅನೇಕ ಕಡೆಗಳಲ್ಲಿ ಹೇಳಿದೆ. ಆದರೆ ಉಷಸ್ಸಿನ ಆವಿರ್ಭಾವಕಾಲವು ಪ್ರಾತಃಕಾಲದಲ್ಲಿ ಮಾತ್ರವಲ್ಲ, ರಾತ್ರಿಯ ಆರಂಭಕಾಲಕ್ಕೂ ಉಷಸ್ಸೆಂಬ ನಿರ್ದೇಶವಿರುತ್ತದೆ. ಉದಾಹರಣೆಗೆ—

ಸುರುಕ್ಮೇ ಹಿ ಸುಪೇಶಸಾಧಿ ಶ್ರಿಯಾ ವಿರಾಜತಃ । ಉಷಾಸಾವೇಹ ಸೀದತಾಂ ॥
(ಋ. ಸಂ. ೧. ೧೮೮. ೬)

ಎಂಬಲ್ಲಿ ಉಷಸ್ ಶಬ್ದವು ಉಷಾಸಾ ಎಂಬ ದ್ವಿವಚನದಲ್ಲಿ ಪ್ರಯುಕ್ತವಾಗಿದೆ. ಇಲ್ಲಿ ಈ ಪದಕ್ಕೆ ಅಹೋರಾತ್ರಗಳೆಂಬ ಅರ್ಥವನ್ನು ತಿಳಿಸಿದೆ. ಉಷಸಾ ಏತತ್ ರಾತ್ರೇರಪ್ಯುಪಲಕ್ಷಣಂ ಉಷಃಶಬ್ದೋ ದಿವಸಸ್ಯೋಪಲಕ್ಷಕಃ ರಾತ್ರಿರುಷಾಶ್ಚ ಎಂದು ಭಾಷ್ಯವು ವಿವರಿಸುತ್ತದೆ. "ನಾನಾ ಜಾತಾ" (೫-೭೩-೪) ಎಂದು ಅಶ್ವಿನೀ ದೇವತೆಗಳನ್ನು ವರ್ಣಿಸಿದೆ. ಅಹೋರಾತ್ರಗಳೆರಡರಲ್ಲೂ ಉತ್ಪನ್ನರು ಎಂದು ಈ ವಾಕ್ಯದ ತಾತ್ಪರ್ಯವಿರುತ್ತದೆ.

ಉಷಸ್ಸಿಗೂ, ಅಶ್ವಿನೀದೇವಗಳಿಗೂ ಈ ರೀತಿ ನಿಕಟಸಂಬಂಧವನ್ನು ಹೇಳಿರುವ ಜೊತೆಯಲ್ಲಿಯೇ, ಸೂರ್ಯಾದೇವಿಗೂ, ಅಶ್ವಿನೀದೇವತೆಗಳಿಗೂ ಇರುವ ನಿಕಟವಾದ ಸಂಬಂಧವನ್ನು ತಿಳಿಸಿದೆ. ಇದರಿಂದ ಉಷಸ್ಸಿಗೂ ಸೂರ್ಯಾದೇವಿಗೂ ತಾದಾತ್ಮ್ಯವನ್ನು ಹೇಳಬಹುದೇ ಎಂಬ ವಿಷಯವನ್ನು ಮುಂದೆ (ಋ. ಸಂ. ೧೦. ೮೫) ಸೂರ್ಯಾ ವಿಷಯವನ್ನು ವಿವರಿಸುವಾಗ ತಿಳಿಸಬೇಕಾಗಿರುತ್ತದೆ. ಎಂದರೆ, ಸೂರ್ಯೆಯು ಅಶ್ವಿನೀದೇವತೆಗಳ ತ್ರಿಚಕ್ರಾತ್ಮಕವಾದ ರಥವನ್ನು ಹತ್ತಿದಳು ಎಂಬಲ್ಲಿ ತ್ರಿಚಕ್ರದ ಸ್ವರೂಪವನ್ನು ಪರಿಶೀಲಿಸುವುದು ಪ್ರಕೃತದಲ್ಲಿ ಆವಶ್ಯವಾಗಿರುತ್ತದೆ.

ರಥಂ ತ್ರಿಚಕ್ರಂ ಸವನಾ ಗನಿಗ್ಮತಂ (೧೦. ೪೧. ೧) ಎಂಬಲ್ಲಿಯೂ ಹೀಗೆಯೇ ಇತರೆಡೆಗಳಲ್ಲಿಯೂ (೧೦. ೮೫. ೧೪) ವರ್ಣಿತವಾಗಿರುವ ತ್ರಿಚಕ್ರವು ಆದಿತ್ಯನ ತ್ರಿಚಕ್ರಾತ್ಮಕವಾದ ರಥವೆಂದು ಒಟ್ಟಿನಲ್ಲಿ ಹೇಳಬಹುದಾಗಿದೆ.

ಈ ರಥವು ಏಕಚಕ್ರಾತ್ಮಕವೆಂದು ಕೆಲವೆಡೆಗಳಲ್ಲಿಯೂ, ದ್ವಿಚಕ್ರಾತ್ಮಕವೆಂದು ಇನ್ನು ಕೆಲವೆಡೆಯೂ, ತ್ರಿಚಕ್ರಾತ್ಮಕವೆಂದು ಮತ್ತೆ ಕೆಲವೆಡೆಯೂ ವರ್ಣಿತವಾಗಿದೆ. ಒಂದು ಚಕ್ರವೆಂದಿರುವಾಗಲೆಲ್ಲ ಆದಿತ್ಯರೂಪವಾದ ಚಕ್ರವೆಂದೂ, ಎರಡು ಚಕ್ರವೆಂದಿರುವಾಗ ದ್ಯಾವಾಪೃಥಿವಿಗಳನ್ನು ಸ್ಪರ್ಶಿಸುವ ಆದಿತ್ಯರಥದ ಎರಡು ಚಕ್ರಗಳೆಂದೂ ವರ್ಣಿತವಾಗಿದೆ. ಇದೇ ಎರಡು ಚಕ್ರಗಳು ಅಶ್ವಿನೀದೇವತೆಗಳ ರಥಕ್ಕೂ ಇರುತ್ತವೆ. ಅದನ್ನೇ ತಿಳಿಸುತ್ತ—

ನ್ಯ೧ಘ್ನ್ಯಸ್ಯ ಮೂರ್ಧನಿ ಚಕ್ರಂ ರಥಸ್ಯ ಯೇಮಥುಃ । ಪರಿ ದ್ಯಾಮನ್ಯದೀಯತೇ ॥
(ಋ. ಸಂ. ೧. ೩೦. ೧೯)

ಎಲೈ ಅಶ್ವಿನೀದೇವತೆಗಳೇ, ನಿಮ್ಮ ರಥಚಕ್ರಗಳೆರಡರಲ್ಲಿ ಒಂದನ್ನು ದೃಢವಾದ ಪರ್ವತದಮೇಲೆ ಸ್ಥಾಪಿಸಿದ್ದೀರಿ. ಇನ್ನೊಂದನ್ನು ದ್ಯುಲೋಕವನ್ನೆಲ್ಲ ಸುತ್ತುವಂತೆ ಮಾಡಿದ್ದೀರಿ ಎಂದು ವರ್ಣಿಸಿದೆ. ಈ ಎರಡು ಚಕ್ರಗಳೂ ಲೋಕಕ್ಕೆ ಗೋಚರವಾಗತಕ್ಕವು. ಮೂರನೆಯದು ಅಂತರ್ಹಿತವಾಗಿರುತ್ತದೆ.

ದ್ವೇ ತೇ ಚಕ್ರೇ ಸೂರ್ಯೇ ಬ್ರಹ್ಮಾಣ ಋತುಥಾ ವಿದುಃ ।
ಅಥೈಕಂ ಚಕ್ರಂ ಯದ್ಗುಹಾ ತದದ್ಧಾತಯ ಇದ್ವಿದುಃ ॥
(ಋ. ಸಂ. ೧೦. ೮೫. ೧೬)

ಎಲೈ ಸೂರ್ಯೆಯೇ, ನಿನ್ನ ರಥದ ಎರಡು ಚಕ್ರಗಳನ್ನೂ ಕರ್ಮಕುಶಲರಾದ ಬ್ರಾಹ್ಮಣರು ನೋಡಬಲ್ಲರು. ಆದರೆ ಇನ್ನೊಂದು ಚಕ್ರವು ಮಾತ್ರ ಅಂತರ್ಹಿತವಾಗಿರುತ್ತದೆ ಎಂದು ವಿವರಿಸುವಾಗ ದ್ವೇ ಏವ ಚಂದ್ರಸೂರ್ಯಾತ್ಮಕೇ ಚಂದ್ರಸೂರ್ಯರೂಪದ ಎರಡು ಚಕ್ರಗಳೆಂದು ಸಾಯಣರು ವಿವರಿಸಿದ್ದಾರೆ. ಆದರೆ ಮೂರನೆಯ ಚಕ್ರವು ಅಂತರ್ಹಿತವಾಗಿರುವುದರಿಂದ ಇದರ ಸ್ವರೂಪವೇನೆಂಬುದು ಲೌಕಿಕವಾದ ಪ್ರಜ್ಞೆಗೆ ಸಾಧ್ಯವಿಲ್ಲವೆಂದೂ ತಿಳಿಸಿದ್ದಾರೆ.

ಜ್ಯೋತಿಷ್ಮಂತಂ ಕೇತುಮಂತಂ ತ್ರಿಚಕ್ರಂ ಸುಖಂ ರಥಂ ಸುಷದಂ ಭೂರಿವಾರಂ |
ಚಿತ್ರಾಮಘಾ ಯಸ್ಯ ಯೋಗೇಽಧಿಜಜ್ಞೇ ತಂ ವಾಂ ಹುವೇ ಅತಿ ರಿಕ್ತಂ ಪಿಬಧ್ಯೈ ||
(ಋ. ಸಂ. ೮. ೫೮. ೩.)

ಎಂಬಲ್ಲಿ ಸಕಲ ದೇವತೆಗಳಿಗೂ ಸಂಬಂಧಿಸಿದ ಈ ರಥವು ವರ್ಣಿತವಾಗಿದೆ, ತ್ರಿಚಕ್ರಂ ಎಂಬುದು ಈ ರಥದ ವಿಶೇಷ ಶಕ್ತಿಯನ್ನು ತೋರಿಸುತ್ತದೆ. ಭೂಲೋಕ, ಭುವರ್ಲೋಕ ಮತ್ತು ಸ್ವರ್ಗಲೋಕಗಳನ್ನೆಲ್ಲ ಸಂಚರಿಸುವ ಸ್ವಭಾವವುಳ್ಳದ್ದೆಂದರ್ಥ. ಇಲ್ಲಿ ಅಂತರ್ಹಿತವಾದ ಮೂರನೆಯ ಚಕ್ರವು ಸಕಲಲೋಕವ್ಯಾಪ್ತಿಯಾದರೂ ತನ್ನ ಗೂಢವಾದ ಸ್ವರೂಪವನ್ನು ಮರೆಸಿಟ್ಟುಕೊಂಡಿರುತ್ತದೆ. ಇದನ್ನೇ ಬೇರೆ ವಿಧದಲ್ಲಿ ವರ್ಣಿಸುತ್ತ—

ಇದಂ ತ ಏಕಂ ಪರ ಊತ ಏಕಂ ತೃತೀಯೇನ ಜ್ಯೋತಿಷಾ ಸಂವಿಶಸ್ವ |
ಋ. ಸಂ. ೧೦. ೫೬. ೧)

ಇತ್ಯಾದಿಯಾಗಿ ಮೂರು ವಿಧವಾದ ಜ್ಯೋತಿಯು ನಿರ್ದೇಶಿಸಲ್ಪಟ್ಟಿರುತ್ತದೆ. ಒಟ್ಟಿನಲ್ಲಿ ಅಶ್ವಿನೀದೇವತೆಗಳು ಅಹೋರಾತ್ರರೂಪವಾದರೆ ಇವರ ರಥದ ಎರಡುಬಾಜುಗಳೂ ಸಹ ಸೂರ್ಯ ಮತ್ತು ಚಂದ್ರರೂಪಾತ್ಮಕವಾಗಿರುತ್ತವೆ. ಮೂರನೆಯದು ರಹಸ್ಯತರವಾಗಿರುತ್ತದೆ. ವಿಶ್ವವ್ಯಾಪಕವಾದುದೂ ಜ್ಯೋತೀರೂಪವುಳ್ಳದ್ದೂ ಆದ ಚಕ್ರಗಳುಳ್ಳ ರಥವನ್ನು ಹೊಂದಿರುವ ಅಶ್ವಿನೀದೇವತೆಗಳನ್ನು ಘೋಷಾ ಮತ್ತು ಘೌಷೇಯರು ಅತ್ಯುತ್ತಮವಾಗಿ ಪ್ರಶಂಸಿಸಿದ್ದಾರೆ.

---

## ನಲವತ್ತೊಂದನೆಯ ಸೂಕ್ತ

ಸಾಯಣಭಾಷ್ಯಂ

**ಸಮಾನಮಿತಿ ತೃಚಂ ದ್ವಾದಶಂ ಸೂಕ್ತಂ ಘೋಷಾಯಾಃ ಪುತ್ರಸ್ಯ ಸುಹಸ್ತ್ಯಸ್ಯಾರ್ಷಂ ಜಾಗತಮಾಶ್ವಿನಂ | ಅನುಕ್ರಾಂತಂ ಚ | ಸಮಾನಂ ತೃಚಂ ಸುಹಸ್ತ್ಯೋ ಘೌಷೇಯ ಇತಿ || ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತೋ ವಿನಿಯೋಗಃ ||**

**ಅನುವಾದವು**—ಸಮಾನಂ ಎಂಬ ಈ ಸೂಕ್ತವು ಹತ್ತನೆಯ ಮಂಡಲದ ಮೂರನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಘೋಷಾ ಎಂಬ ಸ್ತ್ರೀಯ ಪುತ್ರನಾದ ಸುಹಸ್ತ್ಯನೆಂಬುವನು ಋಷಿಯು. ಅಶ್ವಿನೀದೇವತೆಗಳು ದೇವತೆಯು; ಜಗತೀ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಸಮಾನಂ ತೃಚಂ ಸುಹಸ್ತ್ಯೋ ಘೌಷೇಯಃ** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದು.

### ಸೂಕ್ತ—೭೨

ಮಂಡಲ—೧೦ || ಅನುವಾಕ—೩ || ಸೂಕ್ತ—೪೧ ||
ಅಷ್ಟಕ—೭ || ಅಧ್ಯಾಯ—೮ || ವರ್ಗ—೨೧ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ||
ಋಷಿಃ—ಸುಹಸ್ತ್ಯೋ ಘೌಷೇಯಃ ||
ದೇವತಾ—ಅಶ್ವಿನೌ ||
ಛಂದಃ—ಜಗತೀ |

ಸಂಹಿತಾಪಾಠಃ

ಸಮಾನಮು ತ್ಯಂ ಪುರುಹೂತಮುಕ್ಥ್ಯಂ೧ ರಥಂ ತ್ರಿಚಕ್ರಂ ಸವನಾ ಗನಿಗ್ಮತಂ ।
ಪರಿಜ್ಮಾನಂ ವಿದಥ್ಯಂ ಸುವೃಕ್ತಿಭಿರ್ವಯಂ ವ್ಯುಷ್ಟಾ ಉಷಸೋ ಹವಾಮಹೇ ॥ ೧ ॥

ಪದಪಾಠಃ

ಸಮಾನಂ । ಊಂ ಇತಿ । ತ್ಯಂ । ಪುರುऽಹೂತಂ । ಉಕ್ಥ್ಯಂ । ರಥಂ । ತ್ರಿऽಚಕ್ರಂ । ಸವನಾ । ಗನಿಗ್ಮತಂ ।
ಪರಿऽಜ್ಮಾನಂ । ವಿದಥ್ಯಂ । ಸುವೃಕ್ತಿऽಭಿಃ । ವಯಂ । ವಿऽಉಷ್ಟೌ । ಉಷಸಃ । ಹವಾಮಹೇ ॥ ೧ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಯುವಯೋಃ ಸಮಾನಮು ಸಾಧಾರಣಮೇವ ತ್ಯಂ ತಂ ಪುರುಹೂತಂ ಬಹುಭಿರಾಹೂತಮುಕ್ಥ್ಯಂ ಪ್ರಶಸ್ಯಂ ತ್ರಿಚಕ್ರಂ ಸವನಾ ಸವನಾನಿ ಯಜ್ಞಾನ್ಗನಿಗ್ಮತಂ ಪ್ರತಿಗಚ್ಛಂತಂ ಪರಿಜ್ಮಾನಂ ಪರಿತೋ ಗಂತಾರಂ ವಿದಥ್ಯಂ ಯಜ್ಞಹಿತಂ ರಥಮುಷಸೋ ವ್ಯುಷ್ಟೌ ಸುವೃಕ್ತಿಭಿಃ ಸುಷ್ಠು ದೋಷವರ್ಜಿತಾಭಿಃ ಸ್ತುತಿಭಿರ್ವಯಂ ಹವಾಮಹೇ । ಆಹ್ವಯಾಮಃ ॥

ಪ್ರತಿಪದಾರ್ಥ

(ಎಲೈ ಅಶ್ವಿನೀದೇವತೆಗಳೇ), **ಸಮಾನಮು**—ನಿಮ್ಮಿಬ್ಬರಿಗೂ ಸಾಧಾರಣವಾದುದೂ । **ತ್ಯಂ**—ಪ್ರಸಿದ್ಧವಾದುದೂ । **ಪುರುಹೂತಂ**—ಅನೇಕರ ಆಹ್ವಾನಕ್ಕೆ ಪಾತ್ರವಾದುದೂ । **ಉಕ್ಥ್ಯಂ**—ಪ್ರಶಸ್ತ್ಯವಾದುದೂ । **ತ್ರಿಚಕ್ರಂ**—ಮೂರು ಚಕ್ರವುಳ್ಳದ್ದೂ । **ಸವನಾ ಗನಿಗ್ಮತಂ**—ಯಜ್ಞಗಳಿಗೆ ಹೋಗತಕ್ಕದ್ದೂ । **ಪರಿಜ್ಮಾನಂ**—ಸುತ್ತಲೂ ಸಂಚರಿಸತಕ್ಕದ್ದೂ । **ವಿದಥ್ಯಂ**—ಯಜ್ಞಕ್ಕೆ ಉಪಯುಕ್ತವಾದುದೂ ಆದ । **ರಥಂ**—ರಥವನ್ನು । **ಉಷಸಃ ವ್ಯುಷ್ಟೌ**—ಉಷಸ್ಸಿನ ಆವಿರ್ಭಾವಕಾಲದಲ್ಲಿ । **ಸುವೃಕ್ತಿಭಿಃ**—ಉತ್ತಮವಾದ ಸ್ತುತಿಗಳಿಂದ । **ವಯಂ**—ನಾವು । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ ನಿಮ್ಮಿಬ್ಬರಿಗೂ ಸಾಧಾರಣವಾದುದೂ, ಪ್ರಸಿದ್ಧವೂ, ಅನೇಕರ ಆಹ್ವಾನಕ್ಕೆ ಪಾತ್ರವೂ, ಪ್ರಶಸ್ತ್ಯವೂ, ಮೂರು ಚಕ್ರಗಳುಳ್ಳದ್ದೂ, ಯಜ್ಞಗಳಿಗೆ ಹೋಗತಕ್ಕದ್ದೂ, ಸುತ್ತಲೂ ಸಂಚರಿಸತಕ್ಕದ್ದೂ, ಯಜ್ಞಕ್ಕೆ ಉಪಯುಕ್ತವೂ ಆದ ರಥವನ್ನು ಉಷಸ್ಸಿನ ಆವಿರ್ಭಾವಕಾಲದಲ್ಲಿ ಉತ್ತಮವಾದ ಸ್ತುತಿಗಳಿಂದ ನಾವು ಪ್ರಾರ್ಥಿಸಿ ಕರೆಯುತ್ತೇವೆ.

## English Translation.

At break of dawn, (Aswins) we invoke with pious prayers your common chariot, praised of many, adorable, three-wheeled, frequenting religious rites, traversing all space, suitable at sacrifices.

### ಸಂಹಿತಾಪಾಠಃ

ಪ್ರಾತರ್ಯುಜಂ ನಾಸತ್ಯಾಧಿ ತಿಷ್ಠಥಃ ಪ್ರಾತರ್ಯಾವಾಣಂ ಮಧುವಾಹನಂ ರಥಂ ।
ವಿಶೋ ಯೇನ ಗಚ್ಛಥೋ ಯಜ್ವರೀರ್ನರಾ ಕೀರೇಶ್ಚಿದ್ಯಜ್ಞಂ ಹೋತೃಮಂತಮಶ್ವಿನಾ ॥ ೨ ॥

### ಪದಪಾಠಃ

ಪ್ರಾತಃಽಯುಜಂ । ನಾಸತ್ಯಾ । ಅಧಿ । ತಿಷ್ಠಥಃ । ಪ್ರಾತಃಽಯಾವಾನಂ । ಮಧುಽವಾಹನಂ । ರಥಂ ।
ವಿಶಃ । ಯೇನ । ಗಚ್ಛಥಃ । ಯಜ್ವರೀಃ । ನರಾ । ಕೀರೇಃ । ಚಿತ್ । ಯಜ್ಞಂ । ಹೋತೃಽಮಂತಂ । ಅಶ್ವಿನಾ ॥ ೨ ॥

### ಸಾಯಣಭಾಷ್ಯಂ

ಹೇ ನಾಸತ್ಯಾ ನಾಸತ್ಯಭೂತೌ ಸತ್ಯಸ್ಯ ಪ್ರಣೇತಾರೌ ವಾ ನರಾ ನೇತಾರಾವಶ್ವಿನೌ ಯುವಾಂ ಪ್ರಾತರ್ಯುಜಂ ಪ್ರಾತಃಕಾಲೇಽಶ್ವೈರ್ಯುಜ್ಯಮಾನಂ ಪ್ರಾತರ್ಯಾವಾಣಂ ಪ್ರಾತರ್ಗಂತಾರಂ ಮಧುವಾಹನಂ ಮಧುನೋಽಮೃತಸ್ಯ ವಾಹಕಂ ತಂ ರಥಮಧಿ ತಿಷ್ಠಥಃ। ಆರೋಹತಮಿತ್ಯರ್ಥಃ । ಯಜ್ವರೀರ್ಯಜನಶೀಲಾ ವಿಶಃ ಪ್ರಜಾ ಯೇನ ರಥೇನ ಗಚ್ಛಥಃ। ಯೇನ ಚ ಕೀರೇಶ್ಚಿತ್ಸ್ತೋತುರಪಿ ಹೋತೃಮಂತಮೃಷಿಯುಕ್ತಂ ಯಜ್ಞಂ ಗಚ್ಛಥಃ ॥

### ಪ್ರತಿಪದಾರ್ಥ

ನಾಸತ್ಯಾ—ಎಲೈ ಅಶ್ವಿನೀದೇವತೆಗಳೇ। ನರಾ—ನೇತೃಗಳಾದ ನೀವು। ಯೇನ—ಯಾವ ರಥದಿಂದ ಯಜ್ವರೀಃ—ಯಜ್ಞಕರ್ತರಾದ। ವಿಶಃ—ಪ್ರಜೆಗಳಲ್ಲಿಗೆ। ಗಚ್ಛಥಃ—ಹೋಗುವಿರೋ । ಯೇನ—ಯಾವುದರಿಂದ। ಕೀರೇಶ್ಚಿತ್—ಸ್ತುತಿಕರ್ತನ। ಹೋತೃಮಂತಂ—ಹೋತೃಗಳಿಂದ ಕೂಡಿದ। ಯಜ್ಞಂ—ಯಜ್ಞಕ್ಕೆ ಹೋಗುವಿರೋ ಅಂತಹುದೂ । ಪ್ರಾತರ್ಯುಜಂ—ಪ್ರಾತಃಕಾಲದಲ್ಲಿ ಹೂಡತಕ್ಕದ್ದೂ । ಪ್ರಾತರ್ಯಾವಾಣಂ—ಪ್ರಾತಃಕಾಲದಲ್ಲಿ ಯಜ್ಞಕ್ಕೆ ಹೋಗತಕ್ಕದ್ದೂ। ಮಧುವಾಹನಂ—ಮಧುವನ್ನು ವಹಿಸತಕ್ಕದ್ದೂ ಆದ। ರಥಂ—ರಥವನ್ನು । ಅಧಿ ತಿಷ್ಠಥಃ—ಹತ್ತಿ ಕುಳಿತುಕೊಳ್ಳಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನೇತೃಗಳಾದ ನೀವು ಯಾವ ರಥದಿಂದ ಯಜ್ಞಕರ್ತರಾದ ಪ್ರಜೆಗಳಲ್ಲಿಗೆ ಹೋಗುವಿರೋ, ಯಾವುದರಿಂದ ಸ್ತುತಿಕರ್ತನ ಹೋತೃಯುಕ್ತವಾದ ಯಜ್ಞಕ್ಕೆ ಹೋಗುವಿರೋ ಅಂತಹುದೂ, ಪ್ರಾತಃಕಾಲದಲ್ಲಿ ಹೂಡತಕ್ಕದ್ದೂ, ಪ್ರಾತಃಕಾಲದಲ್ಲಿ ಯಜ್ಞಕ್ಕೆ ಹೋಗತಕ್ಕದ್ದೂ, ಮಧುವನ್ನು ವಹಿಸತಕ್ಕದ್ದೂ ಆದ ರಥವನ್ನು ಹತ್ತಿ ಕುಳಿತುಕೊಳ್ಳಿ.

English Translation

Ascend, Nasatyas, your nectar-bearing chariot, which is harnessed at dawn, and set in motion at dawn, with which, leaders (of rites), you go to the people who are engaged in worship, to the priest-administered sacrifice, Aswins, of (your) adorer.

ಸಂಹಿತಾಪಾಠಃ

ಅಧ್ವರ್ಯುಂ ವಾ ಮಧುಪಾಣಿಂ ಸುಹಸ್ತ್ಯಮಗ್ನಿಧಂ ವಾ ಧೃತದಕ್ಷಂ ದಮೂನಸಂ ।
ವಿಪ್ರಸ್ಯ ವಾ ಯತ್ಸವನಾನಿ ಗಚ್ಛಥೋಽತ ಆ ಯಾತಂ ಮಧುಪೇಯಮಶ್ವಿನಾ ॥

ಪದಪಾಠಃ

ಅಧ್ವರ್ಯುಂ । ವಾ । ಮಧುಽಪಾಣಿಂ । ಸುಽಹಸ್ತ್ಯಂ । ಅಗ್ನಿಧಂ । ವಾ । ಧೃತಽದಕ್ಷಂ । ದಮೂನಸಂ ।
ವಿಪ್ರಸ್ಯ । ವಾ । ಯತ್ । ಸವನಾನಿ । ಗಚ್ಛಥಃ । ಅತಃ । ಆ । ಯಾತಂ । ಮಧುಽಪೇಯಂ । ಅಶ್ವಿನಾ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಯುವಾಂ ಮಧುಪಾಣಿಂ ಸೋಮಪಾಣಿಮಧ್ವರ್ಯುಂ ವಾ ಸುಹಸ್ತ್ಯಂ ಸುಹಸ್ತ್ಯನಾಮಾನಮೃಷಿಂ ಮಾಂ ಧೃತದಕ್ಷಂ ಧೃತಬಲಂ ದಮೂನಸಂ ದಾನಮನಸಮಗ್ನಿಧಂ ವಹ್ನಿರಗ್ನಿಕೇಷಂ ಸಮಾಯಾತಂ । ತದೇವ ದರ್ಶಯತಿ । ಯದ್ಯದ್ಯಪಿ ವಿಪ್ರಸ್ಯಾನ್ಯಸ್ಯ ಮೇಧಾವಿನಃ ಸವನಾನಿ ಯಜ್ಞಾನ್ಗಚ್ಛಥಃ ತಥಾಪ್ಯತಸ್ತೇಭ್ಯೋ ಯಜ್ಞೇಭ್ಯೋ ಮಧುಪೇಯಮಸ್ಮಾಕಂ ಸೋಮಾತ್ಮಕಂ ಪೇಯಮಾಯಾತಂ । ಅಸ್ಮಾನ್ಗಚ್ಛತಂ ॥

ಪ್ರತಿಪದಾರ್ಥ

(ಎಲೈ ಅಶ್ವಿನೀದೇವತೆಗಳೇ) ಮಧುಪಾಣಿಂ—ಕೈಯಲ್ಲಿ ಸೋಮವನ್ನು ಹಿಡಿದಿರುವ । ಅಧ್ವರ್ಯುಂ ವಾ—ಅಧ್ವರ್ಯುರೂಪದಿಂದಾಗಲಿ । ಧೃತದಕ್ಷಂ—ಅಧಿಕಬಲವುಳ್ಳವನೂ । ದಮೂನಸಂ—ದಾನಬಲವುಳ್ಳವನೂ ಆದ

**ಆಗ್ನೀಧ್ರಂ ವಾ**—ಆಗ್ನೀಧ್ರರೂಪದಿಂದಾಗಲಿ | **ಸುಹಸ್ತ್ಯಂ**—ಸುಹಸ್ತ್ಯಸಂಜ್ಞಕನಾದ ನನ್ನಲ್ಲಿಗೆ | **ಆ ಯಾತಂ**—ಬನ್ನಿರಿ | **ಯತ್**—ಒಂದುವೇಳೆ | **ವಿಪ್ರಸ್ಯ**—ಮೇಧಾವಿಯ | **ಸವನಾನಿ**—ಯಜ್ಞಕ್ಕೆ | **ಗಚ್ಛಥಃ**—ಹೋಗಿದ್ದರೂ | **ಅತಃ**—ಅಲ್ಲಿಂದ | **ಮಧುಪೇಯಂ**—ಸೋಮರೂಪವಾದ ಪಾನವುಳ್ಳ ನಮ್ಮ ಯಜ್ಞಕ್ಕೆ ಬನ್ನಿರಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಕೈಯಲ್ಲಿ ಸೋಮವನ್ನು ಹಿಡಿದಿರುವ ಅಧ್ವರ್ಯುರೂಪದಿಂದಾಗಲಿ, ಅಧಿಕಬಲವುಳ್ಳವನೂ, ದಾನಮನಸ್ಸುಳ್ಳವನೂ ಆದ ಆಗ್ನೀಧ್ರರೂಪದಿಂದಾಗಲಿ, ಸುಹಸ್ತ್ಯಸಂಜ್ಞಕನಾದ ನನ್ನಲ್ಲಿಗೆ ಬನ್ನಿರಿ. ಒಂದುವೇಳೆ ಇತರ ಯಜಮಾನನ ಯಜ್ಞಕ್ಕೆ ಹೋಗಿದ್ದರೂ ಸಹ, ಅಲ್ಲಿಂದ ಸೋಮವನ್ನು ಅರ್ಪಿಸುವ ನಮ್ಮ ಯಜ್ಞಕ್ಕೆ ಬನ್ನಿರಿ.

## English Translation

Come, Aswins, to Suhastya, whether as the ministrant priest bearing the Soma in his hand, or as the competent lowly-minded feeder of the sacred fire; although you go to the sacrifice of (some other) sage, (yet) come, Aswins, from them to the beverage of the Soma (which I offer).

---

## ನಲವತ್ತೆರಡನೆಯ ಸೂಕ್ತ

ಸಾಯಣಭಾಷ್ಯಂ

**ಅಸ್ತೇವೇತ್ಯೇಕಾದಶರ್ಚಂ ತ್ರಯೋದಶಂ ಸೂಕ್ತಮಾಂಗಿರಸಸ್ಯ ಕೃಷ್ಣಾಖ್ಯಸ್ಯಾರ್ಷಂ ತ್ರೈಷ್ಟುಭಮೈಂದ್ರಂ | ಅನುಕ್ರಾಂತಂ ಚ | ಅಸ್ತೇವೈಕಾದಶ ಕೃಷ್ಣ ಇತಿ || ಅಭಿಪ್ಲವಿಕೇಷೂಕ್ಥ್ಯೇಷು ಸ್ತೋಮವೃದ್ಧಾವಿದಂ ಸೂಕ್ತಂ ಬ್ರಾಹ್ಮಣಾಚ್ಛಂಸಿನ ಆವಾಪಾರ್ಥಂ | ಸೂತ್ರಿತಂ ಚ | ಯಜ್ಞೋ ದಿವ ಇತಿ ಸೂಕ್ತೇ ಅಸ್ತೇವ ಸು ಪ್ರತರಂ | ಆ ೭-೯ | ಇತಿ ||**

**ಅನುವಾದವು—ಅಸ್ತೇವ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಅಂಗಿರಸ ಪುತ್ರನಾದ ಕೃಷ್ಣನೆಂಬುವನು ಋಷಿಯು; ಇಂದ್ರನು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಅಸ್ತೇವೈಕಾದಶ ಕೃಷ್ಣಃ** ಎಂದು ಹೇಳಿರುವುದು. ಅಭಿಪ್ಲವಸಂಬಂಧವಾದ ಉಕ್ಥ್ಯಯಾಗಗಳಲ್ಲಿ ಸೋಮವೃದ್ಧಿಗಾಗಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಆವಾಪಾರ್ಥವಾಗಿ ಪಠಿಸಬೇಕಾದ ಸೂಕ್ತಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಯಜ್ಞೋ ದಿವ ಇತಿ ಸೂಕ್ತೇ ಅಸ್ತೇವ ಸು ಪ್ರತರಂ** ಎಂಬ ಸೂತ್ರದಿಂದ (ಆ. ೭-೯) ವಿವೃತವಾಗಿರುವುದು.

## ಸೂಕ್ತ—೪೨

ಮಂಡಲ—೧೦ ॥ ಅನುವಾಕ—೩ ॥ ಸೂಕ್ತ—೪೨ ॥
ಅಷ್ಟಕ—೭ ॥ ಅಧ್ಯಾಯ—೮ ॥ ವರ್ಗ—೨೨, ೨೩ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
ಋಷಿಃ—ಕೃಷ್ಣಃ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಅಸ್ತೇವ ಸು ಪ್ರತರಂ ಲಾಯಮಸ್ಯನ್ಭೂಷನ್ನಿವ ಪ್ರ ಭರಾ ಸ್ತೋಮಮಸ್ಮೈ ।
ವಾಚಾ ವಿಪ್ರಾಸ್ತರತ ವಾಚಮರ್ಯೋ ನಿ ರಾಮಯ ಜರಿತಃ ಸೋಮ ಇಂದ್ರಂ ॥ ೧ ॥

ಪದಪಾಠಃ

ಅಸ್ತಾ್ಽಇವ । ಸು । ಪ್ರ್ಽತರಂ । ಲಾಯಂ । ಅಸ್ಯನ್ । ಭೂಷನ್್ಽಇವ । ಪ್ರ । ಭರ । ಸ್ತೋಮಂ । ಅಸ್ಮೈ ।
ವಾಚಾ । ವಿಪ್ರಾಃ । ತರತ । ವಾಚಂ । ಅರ್ಯಃ । ನಿ । ರಮಯ । ಜರಿತರಿತಿ । ಸೋಮೇ । ಇಂದ್ರಂ ॥

ಸಾಯಣಭಾಷ್ಯಂ

ಪ್ರತರಂ ಪ್ರವೃದ್ಧತರಂ ಲಾಯಂ ಸಂಶ್ಲೇಷಣಂ ಹೃದಯವೇಧಿನಂ ಶರಂ ಸು ಸುಷ್ಠು ಅಸ್ಯನ್ ಕ್ಷಿಪನ್ನಸ್ತೇವ ಯಥಾ ಕ್ಷೇಪ್ತಾ ಧಾನುಷ್ಕಃ ಭೂಷನ್ನಿವ ಯಥಾ ಅಲಂಕಾರಮಲಂಕುರ್ವನ್ನಲಂಕರ್ತಾ ತದ್ವತ್ಸ್ತೋಮಮಸ್ಮಾ ಇಂದ್ರಾಯ ಪ್ರ ಭರ । ಪ್ರಾಪಯ । ಹೇ ಅಂತರಾತ್ಮನ್ ಇತಿ ಶೇಷಃ । ಕಿಂಚ ಹೇ ವಿಪ್ರಾ ಮೇಧಾವಿನಃ ಯೂಯಂ ವಾಚಾ ಸ್ತುತ್ಯಾ ಅರ್ಯೋಽರೇಃ ಶತ್ರೋರ್ವಾಚಂ ತರತ । ಅಭಿಭವತ । ನಿರಾಕುರುತೇತ್ಯರ್ಥಃ । ಹೇ ಜರಿತಃ ಸ್ತೋತಃ ತ್ವಂ ಸೋಮೇ ಸೋಮಯಾಗ ಇಂದ್ರಂ ನಿ ರಮಯ । ಕ್ರೀಡಯ ॥

ಪ್ರತಿಪದಾರ್ಥ

ಪ್ರತರಂ—ವೇಗಗಾಮಿಯಾದ । ಲಾಯಂ—ಗುರಿಯನ್ನು ಮುಟ್ಟುವುದೂ ಆದ ಬಾಣವನ್ನು । ಸು—ಅತಿಶಯವಾಗಿ । ಅಸ್ಯನ್—ಎಸೆಯುತ್ತ । ಅಸ್ತೇವ—ಧನುರ್ಧಾರಿಯಂತೆಯೂ । ಭೂಷನ್ನಿವ—ಚಿತ್ರಗಳನ್ನು ಅಲಂಕರಿಸುವ ಚಿತ್ರಕಾರನಂತೆಯೂ । ಸ್ತೋಮಂ—ಈ ಸ್ತೋತ್ರವನ್ನು । ಅಸ್ಮೈ—ಇಂದ್ರನನ್ನುದ್ದೇಶಿಸಿ । ಪ್ರ ಭರ—ಅರ್ಪಿಸು । ವಿಪ್ರಾಃ—ಮೇಧಾವಿಗಳಾದ ಎಲೈ ಸ್ತುತಿಕರ್ತರೇ । ವಾಚಾ—ನಿಮ್ಮ ಸ್ತುತಿಯಿಂದ । ಅರ್ಯಃ—

ಶತ್ರುವಿನ | ವಾಚಂ—ಸ್ತುತಿವಾಕ್ಯನ್ನು | ತರತ—ತಿರಸ್ಕರಿಸಿರಿ | ಜರಿತಃ—ಎಲೈ ಸ್ತುತಿಕರ್ತನೇ | ಸೋಮೇ—ಸೋಮಯಾಗದಲ್ಲಿ | ಇಂದ್ರಂ—ಇಂದ್ರನನ್ನು | ನಿ ರಮಯ—ಕ್ರೀಡಿಸುವಂತೆ ಮಾಡು.

ಭಾವಾರ್ಥ

ವೇಗಗಾಮಿಯೂ, ಗುರಿಯನ್ನು ಮುಟ್ಟುವುದೂ ಆದ ಶರವನ್ನು ಧನುರ್ಧಾರಿಯು ಗುರಿಯಿಟ್ಟು ಹೊಡೆಯುವಂತೆಯೂ, ತನ್ನ ಚಿತ್ರಗಳಿಗೆ ತದೇಕಧ್ಯಾನವಾಗಿ ಚಿತ್ರಕಾರನು ವರ್ಣಗಳನ್ನರ್ಪಿಸುವಂತೆಯೂ ಈ ಸ್ತೋತ್ರವನ್ನು ಇದ್ರನನ್ನುದ್ದೇಶಿಸಿ ಅರ್ಪಿಸು. ಮೇಧಾವಿಗಳಾದ ಎಲೈ ಸ್ತುತಿಕರ್ತರೇ ನಿಮ್ಮ ಸ್ತುತಿಯಿಂದ ಶತ್ರುವಿನ ಸ್ತುತಿವಾಕ್ಯನ್ನು ತಿರಸ್ಕರಿಸಿರಿ. ಎಲೈ ಸ್ತುತಿಕರ್ತನೇ ಸೋಮಯಾಗದಲ್ಲಿ ಇಂದ್ರನನ್ನು ಕ್ರೀಡಿಸುವಂತೆ ಮಾಡು.

English Translation

Direct your laudation to him, (Indra), like an archer aiming a larger arrow (to its mark), like a decorator (applying his ornaments) : surpass by your praises, sages, the praises of your adversaries; delight Indra, worshipper, by the (offering of the) Soma.

ಸಂಹಿತಾಪಾಠಃ

ದೋಹೇನ ಗಾಮುಪ ಶಿಕ್ಷಾ ಸಖಾಯಂ ಪ್ರ ಬೋಧಯ ಜರಿತರ್ಜಾರ-
ಮಿಂದ್ರಂ |
ಕೋಶಂ ನ ಪೂರ್ಣಂ ವಸುನಾ ನ್ಯೃಷ್ಟಮಾ ಚ್ಯಾವಯ ಮಘದೇಯಾಯ
ಶೂರಂ || ೨ ||

ಪದಪಾಠಃ

ದೋಹೇನ | ಗಾಂ | ಉಪ | ಶಿಕ್ಷ | ಸಖಾಯಂ | ಪ್ರ | ಬೋಧಯ | ಜರಿತಃ | ಜಾರಂ | ಇಂದ್ರಂ |
ಕೋಶಂ | ನ | ಪೂರ್ಣಂ | ವಸುನಾ | ನಿऽಋಷ್ಟಂ | ಆ | ಚ್ಯವಯ | ಮಘऽದೇಯಾಯ | ಶೂರಂ ||

ಸಾಯಣಭಾಷ್ಯಂ

ಹೇ ಜರಿತಃ ತ್ವಂ ದೋಹೇನ ಕಾಮಾನಾಂ ದೋಹನಾರ್ಥಂ ಗಾಂ ಗೋರೂಪಂ ಸಖಾಯಂ ಪ್ರಿಯಮಿಂದ್ರಮುಪ ಶಿಕ್ಷ | ವಶಂ ನಯ | ಕಿಂಚ ಜಾರಂ ಭೂತಾನಾಂ ಜರಯಿತಾರಮಿಂದ್ರಂ ಪ್ರ ಬೋಧಯ | ಸ್ತುತಿಭಿಃ ಪ್ರಬುದ್ಧಂ ಕುರು | ಕಿಂಚ ಪೂರ್ಣಮುದಕೇನ ಪೂರಿತಂ ಕೋಶಂ ನ ಪಾತ್ರ-

ಮಿವ ವಸುನಾ ಹಿರಣ್ಯಾದಿನಾ ಧನೇನ ನ್ಯೃಷ್ಟಂ ನೀಚೈರ್ಗತಂ ಶೂರಂ ವೀರಮಿಂದ್ರಂ ಮಘದೇಯಾಯ ಧನದಾನಾಯಾ ಚ್ಯಾವಯ । ಅಭಿಮುಖಂ ಕುರ್ವಿತ್ಯರ್ಥಃ ॥

ಪ್ರತಿಪದಾರ್ಥ

ಜರಿತಃ—ಎಲೈ ಸ್ತುತಿಕರ್ತನೇ । ದೋಹೇನ—ಹಾಲನ್ನು ಕರೆಯುವುದಕ್ಕಾಗಿ । ಗಾಂ—ಗೋವನ್ನು ತಡೆದು ನಿಲ್ಲಿಸುವಂತೆ । ಸಖಾಯಾಂ—ಮಿತ್ರನಾದ । ಇಂದ್ರಂ—ಇಂದ್ರನನ್ನು । ಉಪ ಶಿಕ್ಷ—ನಿನ್ನಲ್ಲೇ ತಡೆದು ನಿಲ್ಲಿಸು । ಜಾರಂ—ಪ್ರಾಣಿಗಳಿಗೆ ಜರೆಯನ್ನುಂಟುಮಾಡುವ ಇಂದ್ರನನ್ನು । ಪ್ರಬೋಧಯ—ಎಚ್ಚರಗೊಳಿಸು । ಪೂರ್ಣಂ—ಉದಕದಿಂದ ಪೂರ್ಣವಾದ । ಕೋಶಂ ನ—ಪಾತ್ರೆಯಂತೆ । ವಸುನಾ—ಸಂಪತ್ತಿನ ಭಾರದಿಂದ ನ್ಯೃಷ್ಟಂ—ಬಗ್ಗಿದವನೂ । ಶೂರಂ—ವೀರನೂ ಆದ ಇಂದ್ರನನ್ನು । ಮಘದೇಯಾಯ—ಸಂಪತ್ತನ್ನು ಹಂಚುವುದಕ್ಕಾಗಿ । ಆ ಚ್ಯಾವಯ—ನಮಗೆ ಅಭಿಮುಖನಾಗುವಂತೆ ಮಾಡು.

ಭಾವಾರ್ಥ

ಎಲೈ ಸ್ತುತಿಕರ್ತನೇ, ಹಾಲನ್ನು ಕರೆಯುವುದಕ್ಕಾಗಿ ಗೋವನ್ನು ತಡೆದು ನಿಲ್ಲಿಸುವಂತೆ ಮಿತ್ರನಾದ ಇಂದ್ರನನ್ನು ನಿನ್ನಲ್ಲೇ ತಡೆದು ನಿಲ್ಲಿಸು. ಪ್ರಾಣಿಗಳಿಗೆ ಜರೆಯನ್ನುಂಟುಮಾಡುವ ಇಂದ್ರನನ್ನು ಎಚ್ಚರಗೊಳಿಸು. ಉದಕದಿಂದ ಪೂರ್ಣವಾದ ಪಾತ್ರೆಯಂತೆ ಸಂಪತ್ತಿನ ಭಾರದಿಂದ ಬಗ್ಗಿದವನೂ, ವೀರನೂ ಆದ ಇಂದ್ರನನ್ನು ಸಂಪತ್ತನ್ನು ಹಂಚುವುದಕ್ಕಾಗಿ ನಮಗೆ ಅಭಿಮುಖವಾಗುವಂತೆ ಮಾಡು.

## English Translation

Control, worshipper, your friend(Indra), like a cow for your milking: awake, Indra, the author of decay; bring down for the distribution of wealth the hero who is pressed down with wealth like a vessel full (of water)

ಸಂಹಿತಾಪಾಠಃ

ಕಿಮಂಗ ತ್ವಾ ಮಘವನ್ಭೋಜಮಾಹುಃ ಶಿಶೀಹಿ ಮಾ ಶಿಶಯಂ ತ್ವಾ ಶೃಣೋಮಿ ।
ಅಪ್ನಸ್ವತೀ ಮಮ ಧೀರಸ್ತು ಶಕ್ರ ವಸುವಿದಂ ಭಗಮಿಂದ್ರಾ ಭರಾ ನಃ ॥೩॥

ಪದಪಾಠಃ

ಕಿಂ । ಅಂಗ । ತ್ವಾ । ಮಘವನ್ । ಭೋಜಂ । ಆಹುಃ । ಶಿಶೀಹಿ । ಮಾ । ಶಿಶಯಂ । ತ್ವಾ । ಶೃಣೋಮಿ ।
ಅಪ್ನಸ್ವತೀ । ಮಮ । ಧೀಃ । ಅಸ್ತು । ಶಕ್ರ । ವಸುವಿದಂ । ಭಗಂ । ಇಂದ್ರ । ಆ । ಭರ । ನಃ ॥ ೩ ॥

ಸಾಯಣಭಾಷ್ಯಂ

ಅಂಗೇತಿ ಸಾಮಾನ್ಯಾಹ್ವಾನಂ । ಅಂಗ ಹೇ ಮಘವನ್ಧನವಞ್ಛಕ್ರೇಂದ್ರ ತ್ವಾ ತ್ವಾಂ ಕಿಂ ಕಿಮರ್ಥಂ ಭೋಜಂ ಸ್ತೋತೄಣಾಂ ಭೋಜಕಮಭೀಷ್ಟಮಾಹುಃ ಸರ್ವೇ ವಿದ್ವಾಂಸಃ । ಯದಿ ನ ದದಾಸೀತ್ಯಧ್ಯಾಹಾರಃ । ತಸ್ಮಾದ್ದದಾಸ್ಯೇವ ಸ್ತೋತೃಭ್ಯೋ ಧನಾನೀತ್ಯರ್ಥಃ । ತಥಾ ಸತಿ ಮಾ ಸ್ತೋತಾರಂ ಶಿಶೀಹಿ । ಧನದಾನೇನ ತೀಕ್ಷ್ಣೀಕುರು । ತ್ವಾ ತ್ವಾಂ ಶಿಶಯಂ ಸ್ತೋತೄಣಾಂ ಸಂಸ್ಕಾರಕಂ ಶೃಣೋಮಿ । ಕಿಂಚ ಮಮ ಧೀರ್ಬುದ್ಧಿರಪ್ನಸ್ವತೀ ಕರ್ಮವತ್ಯಸ್ತು । ಭವತು । ಕಿಂಚ ನೋಽಸ್ಮಾಕಂ ವಸುವಿದಂ ಧನಸ ಲಂಭಕಂ ಭಗಂ ಭಾಗ್ಯಮಾ ಭರ । ಆಹರ ॥

ಪ್ರತಿಪದಾರ್ಥ

ಅಂಗ—ಪೂಜ್ಯನೂ । ಮಘವನ್—ಧನವಂತನೂ ಆದ । ಶಕ್ರ—ಎಲೈ ಇಂದ್ರನೇ । ತ್ವಾ—ನಿನ್ನನ್ನು । ಕಿಂ—ಯಾವ ಕಾರಣಕ್ಕಾಗಿ । ಭೋಜಂ—ಸ್ತುತಿಕರ್ತರಿಗೆ ಭೋಗಪ್ರದನೆಂದು । ಆಹುಃ—ಹೇಳಿದ್ದಾರೆಯೋ । ಆದುದರಿಂದಲೇ, ಮಾ—ನನ್ನನ್ನು । ಶಿಶೀಹಿ—ಧನದಾನದಿಂದ ಚೈತನ್ಯಗೊಳಿಸು । ತ್ವಾ—ನಿನ್ನನ್ನು । ಶಿಶಯಂ—ಸಂಸ್ಕಾರಪ್ರದನೆಂದು । ಶೃಣೋಮಿ—ನಾನು ಕೇಳಿದ್ದೇನೆ । ಮಮ—ನನ್ನ । ಧೀಃ—ಬುದ್ಧಿಯು । ಅಪ್ನಸ್ವತೀ—ಕರ್ಮನಿರತವಾಗಿ । ಅಸ್ತು—ಆಗಿರಲಿ । ನಃ—ನಮಗೆ । ವಸುವಿದಂ—ಧನಪ್ರಾಪಕವಾದ । ಭಗಂ—ಭಾಗ್ಯವನ್ನು ಆ ಭರ—ಒದಗಿಸು.

ಭಾವಾರ್ಥ

ಪೂಜ್ಯನೂ, ಧನವಂತನೂ ಆದ ಎಲೈ ಇಂದ್ರನೇ, ನಿನ್ನನ್ನು ಯಾವ ಕಾರಣಕ್ಕಾಗಿ ಸ್ತುತಿಕರ್ತರಿಗೆ ಭೋಗಪ್ರದನೆಂದು ಹೇಳಿದ್ದಾರೆಯೋ, ಆದುದರಿಂದಲೇ, ನನ್ನನ್ನು ಧನದಾನದಿಂದ ಚೈತನ್ಯಗೊಳಿಸು. ನಿನ್ನನ್ನು ಅಂತಹ ಸಂಸ್ಕಾರಪ್ರದನೆಂದು ಕೇಳಿದ್ದೇನೆ. ನನ್ನ ಬುದ್ಧಿಯು ಕರ್ಮನಿರತವಾಗಿರುವಂತೆ ಮಾಡು. ನಮಗೆ ಧನಪ್ರಾಪಕವಾದ ಭಾಗ್ಯವನ್ನು ಒದಗಿಸು.

English Translation

Why, Maghavat, do (the wise) call you the nourisher(of worshippers)? Quicken me, (Indra), with wealth, (for) I hear that you are the quickener (of the worshippers); may my understanding, Shakra, be productive of works; grant us, Indra, a destiny that brings wealth.

ಸಂಹಿತಾಪಾಠಃ

ತ್ವಾಂ ಜನಾ ಮಮಸತ್ಯೇಷ್ವಿಂದ್ರ ಸಂತಸ್ಥಾನಾ ವಿ ಹ್ವಯಂತೇ ಸಮೀಕೇ ।

ಅತ್ರಾ ಯುಜಂ ಕೃಣುತೇ ಯೋ ಹವಿಷ್ಮಾನ್ನಾಸುನ್ವತಾ ಸಖ್ಯಂ ವಷ್ಟಿ ಶೂರಃ॥

ಪದಪಾಠಃ

ತ್ವಾಂ । ಜನಾಃ । ಮಮಽಸತ್ಯೇಷು । ಇಂದ್ರ । ಸಂಽತಸ್ಥಾನಾಃ । ವಿ । ಹ್ವಯಂತೇ । ಸಂಽಈಕೇ ।

ಅತ್ರ । ಯುಜಂ । ಕೃಣುತೇ । ಯಃ । ಹವಿಷ್ಮಾನ್ । ನ । ಅಸುನ್ವತಾ । ಸಖ್ಯಂ । ವಷ್ಟಿ । ಶೂರಃ ॥ ೪ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಾಂ ಜನಾ ಮಮಸತ್ಯೇಷು ಸಂಗ್ರಾಮೇಷು ವಿ ಹ್ವಯಂತೇ । ವಿವಿಧಮಾಹ್ವಯಂತಿ ಸಾಹಾಯ್ಯಾರ್ಥಂ । ಏತದೇವ ದರ್ಶಯತಿ । ಸಮೀಕೇ ಯುದ್ಧೇ ಸಂತಸ್ಥಾನಾಃ ಸಹ ತಿಷ್ಠಂತೋ ಜನಾ ವಿ ಹ್ವಯಂತ ಇತಿ । ಅತ್ರಾಸ್ಮಿನ್ನಾಹ್ವಾನೇ ಸ ಶೂರೋ ವೀರ ಇಂದ್ರಸ್ತಂ ಯುಜಂ ಸಹಾಯಂ ಕೃಣುತೇ ಕುರುತೇ ಯೋ ಹವಿಷ್ಮಾನ್ಭವತಿ । ಅಸುನ್ವತಾ ಸೋಮಾಭಿಷವಮಕುರ್ವತಾ ಪುರುಷೇಣ ಸಹ ಸಖ್ಯಂ ಸಖಿತ್ವಂ ನ ವಷ್ಟಿ । ನ ಕಾಮಯತೇ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ, ತ್ವಾಂ—ನಿನ್ನನ್ನು । ಜನಾಃ—ಜನಗಳು । ಮಮಸತ್ಯೇಷು—ಯುದ್ಧಗಳಲ್ಲಿ । ವಿಹ್ವಯಂತೇ—ಬಹುವಿಧವಾಗಿ ಕರೆಯುತ್ತಾರೆ । ಸಮೀಕೇ—ಯುದ್ಧದಲ್ಲಿ । ಯುಜಂ—ಮಿತ್ರನನ್ನಾಗಿ ಕೃಣುತೇ—ಮಾಡಿಕೊಳ್ಳುತ್ತಾರೆ । ಅತ್ರ—ಈ ಕಾಲಗಳಲ್ಲಿ । ಯಃ—ಯಾವ ಯಜಮಾನನು । ಹವಿಷ್ಮಾನ್—ಹವಿಸ್ಸನ್ನು ಹೊಂದಿರುವನೋ ಅವನನ್ನು । ಶೂರಃ—ವೀರನಾದ ಇಂದ್ರನು । ಯುಜಂ—ಮಿತ್ರನನ್ನಾಗಿ ಕೃಣುತೇ—ಮಾಡಿಕೊಳ್ಳುತ್ತೇನೆ । ಅಸುನ್ವತಾ—ಸೋಮವನ್ನು ಹಿಂಡದೇ ಇರುವವನೊಂದಿಗೆ । ಸಖ್ಯಂ—ಮಿತ್ರತ್ವವನ್ನು । ನ ವಷ್ಟಿ—ಇಚ್ಛಿಸುವುದಿಲ್ಲ.

ಭಾವಾರ್ಥ

ಎಲೈ ಇಂದ್ರನೇ, ಜನಗಳು ನಿನ್ನನ್ನು ಸಂಗ್ರಾಮಗಳಲ್ಲಿ ಬಹುವಿಧವಾಗಿ ಕರೆಯುತ್ತಾರೆ. ಯುದ್ಧದಲ್ಲಿ ಮಿತ್ರನನ್ನಾಗಿ ಮಾಡಿಕೊಳ್ಳುತ್ತಾರೆ. ಈ ಕಾಲಗಳಲ್ಲಿ ಯಾವ ಯಜಮಾನನು ಹವಿಸ್ಸನ್ನು ಹೊಂದಿರುವನೋ ಅವನನ್ನು ವೀರನಾದ ಇಂದ್ರನು ಮಿತ್ರನನ್ನಾಗಿ ಮಾಡಿಕೊಳ್ಳುತ್ತಾನೆ. ಇಂದ್ರನು ಸೋಮವನ್ನು ಹಿಂಡದೇ ಇರುವವನೊಂದಿಗೆ ಮಿತ್ರತ್ವವನ್ನು ಇಚ್ಛಿಸುವುದಿಲ್ಲ.

English Translation

The people earnestly call upon you in battles, Indra, (they call upon you) when standing together in the conflict : at this (call) Indra makes him his friend *who offers oblations* : the hero desires not friendship with him who presents no libation.

ಸಂಹಿತಾಪಾಠಃ

ಧನಂ ನ ಸ್ಯಂದ್ರಂ ಬಹುಲಂ ಯೋ ಅಸ್ಮೈ ತೀವ್ರಾನ್ತ್ಸೋಮಾ ಆಸುನೋತಿ

ಪ್ರಯಸ್ವಾನ್ ।

ತಸ್ಮೈ ಶತ್ರೂನ್ತ್ಸುತುಕಾನ್ಪ್ರಾತರಹ್ನೋ ನಿ ಸ್ವಷ್ಟ್ರಾನ್ಯುವತಿ ಹಂತಿ ವೃತ್ರಂ ॥೪

ಪದಪಾಠಃ

ಧನಂ । ನ । ಸ್ಯಂದ್ರಂ । ಬಹುಲಂ । ಯಃ । ಅಸ್ಮೈ । ತೀವ್ರಾನ್ । ಸೋಮಾನ್ । ಆಽಸುನೋತಿ । ಪ್ರಯಸ್ವಾನ್ ।

ತಸ್ಮೈ । ಶತ್ರೂನ್ । ಸುಽತುಕಾನ್ । ಪ್ರಾತಃ । ಅಹ್ನಃ । ನಿ । ಸುಽಅಷ್ಟ್ರಾನ್ । ಯುವತಿ । ಹಂತಿ । ವೃತ್ರಂ ॥ ೪ ॥

ಸಾಯಣಭಾಷ್ಯಂ

ಪ್ರಯಸ್ವಾನ್ ಹವಿಷ್ಮಾನ್ಯೋ ಯಜಮಾನಃ ಸ್ಯಂದ್ರಂ ಸ್ಯಂದನಶೀಲಂ ಗವಾಶ್ವಾದಿಕಂ ಬಹುಲಂ ಪ್ರಭೂತಂ ಧನಂ ನ ಯಥಾ ಧನಂ ದರಿದ್ರಾಯ ಪಾತ್ರಭೂತಾಯ ದಾತುಂ ಸಂಸ್ಕರೋತಿ ತದ್ವದಸ್ಮಾ ಇಂದ್ರಾಯ ತೀವ್ರಾಂಸ್ತೀವ್ರರಸಾನ್ಸೋಮಾನಾಸುನೋತಿ ಅಭಿಷುಣೋತಿ । ಅಭಿಷವಾಖ್ಯೇನ ಸಂಸ್ಕಾರೇಣ ಸಂಸ್ಕರೋತೀತ್ಯರ್ಥಃ। ತಸ್ಮೈ ಯಜಮಾನಾಯ ಪ್ರಾತರಹ್ನಃ ಪೂರ್ವಾಹ್ಣೇ ಸುತುಕಾನ್ಸು-ಪ್ರೇರಣಾನ್ಶೋಭನಪುತ್ರಸಹಿತಾನ್ವಾ ಸ್ವಷ್ಟ್ರಾನ್ಶೋಭನಾಯುಧಾನ್ಶತ್ರೂನ್ನಿ ಯುವತಿ । ಸ ಇಂದ್ರಃ ಪೃಥಕ್ಕರೋತಿ । ಕಿಂಚ ವೃತ್ರಂ ತದೀಯಮುಪದ್ರವಂ ಹಂತಿ ಹಿನಸ್ತಿ ॥

ಪ್ರತಿಪದಾರ್ಥ

ಸ್ಯಂದ್ರಂ—ಚರಾತ್ಮಕವೂ । ಬಹುಲಂ—ಪ್ರಭೂತವೂ ಆದ । ಧನಂ ನ—ಧನಸಂಪತ್ತನ್ನು ದರಿದ್ರನಿಗೆ ಕೊಡುವಂತೆ । ಪ್ರಯಸ್ವಾನ್—ಹವಿರ್ಯುಕ್ತನಾದ। ಯಃ—ಯಾವ ಯಜಮಾನನು । ಅಸ್ಮೈ—ಇಂದ್ರನನ್ನುದ್ದೇಶಿಸಿ । ತೀವ್ರಾನ್—ಮದಕರಗಳಾದ । ಸೋಮಾನ್—ಸೋಮರಸಗಳನ್ನು । ಆಸುನೋತಿ—ಹಿಂಡಿ ಅರ್ಪಿಸುವನೋ । ತಸ್ಮೈ—ಆ ಯಜಮಾನನಿಗಾಗಿ। ಪ್ರಾತರಹ್ನಃ—ಪೂರ್ವಾಹ್ಣಕಾಲದಲ್ಲಿಯೇ । ಸುತುಕಾನ್—ಉತ್ತಮವಾದ ಸಹಾಯವುಳ್ಳವರೂ । ಸ್ವಷ್ಟ್ರಾನ್—ಉತ್ತಮವಾದ ಆಯುಧಗಳುಳ್ಳವರೂ ಆದ। ಶತ್ರೂನ್—ಶತ್ರುಗಳನ್ನು। ನಿ ಯುವತಿ—ದೂರಕ್ಕೆ ಓಡಿಸುತ್ತಾನೆ । ವೃತ್ರಂ—ಅವರ ಹಿಂಸೆಯನ್ನು । ಹಂತಿ—ನಾಶಮಾಡುತ್ತಾನೆ.

ಭಾವಾರ್ಥ

ಗವಾದಿರೂಪವಾದ ಚರಾತ್ಮಕವೂ, ಪ್ರಭೂತವೂ ಆದ ಧನಸಂಪತ್ತನ್ನು ದರಿದ್ರನಿಗೆ ಕೊಡುವಂತೆ ಹವಿರ್ಯುಕ್ತನಾದ ಯಾವ ಯಜಮಾನನು ಇಂದ್ರನನ್ನುದ್ದೇಶಿಸಿ ಮದಕರಗಳಾದ ಸೋಮರಸಗಳನ್ನು ಹಿಂಡಿ ಅರ್ಪಿಸುವನೋ ಆ ಯಜಮಾನನಿಗಾಗಿ ಪೂರ್ವಾಹ್ಣಕಾಲದಲ್ಲಿಯೇ ಉತ್ತಮವಾದ ಸಹಾಯವುಳ್ಳವರೂ, ಉತ್ತಮವಾದ ಆಯುಧಗಳುಳ್ಳವರೂ ಆದ ಶತ್ರುಗಳನ್ನು ದೂರಕ್ಕೆ ಓಡಿಸುತ್ತಾನೆ. ಅವರ ಹಿಂಸೆಯನ್ನು ನಾಶ ಮಾಡುತ್ತಾನೆ.

## English Translation

The bearer of the oblation who offers to Indra the sharp Soma-juices, like much moveable wealth (given to the poor)—for him in the fore

part of the day Indra scatters his eager and well-armed (enemies), and defeats his foe.

ಸಂಹಿತಾಪಾಠಃ

ಯಸ್ಮಿನ್ವಯಂ ದಧಿಮಾ ಶಂಸಮಿಂದ್ರೇ ಯಃ ಶಿಶ್ರಾಯ ಮಘವಾ ಕಾಮ-
ಮಸ್ಮೇ ।
ಆರಾಚ್ಚಿತ್ಸನ್ಭಯತಾಮಸ್ಯ ಶತ್ರುರ್ನ್ಯಸ್ಮೈ ದ್ಯುಮ್ನಾ ಜನ್ಯಾ ನಮಂತಾಂ ॥

ಪದಪಾಠಃ

ಯಸ್ಮಿನ್ । ವಯಂ । ದಧಿಮ । ಶಂಸಂ । ಇಂದ್ರೇ । ಯಃ । ಶಿಶ್ರಾಯ । ಮಘಽವಾ । ಕಾಮಂ । ಅಸ್ಮೇ
ಇತಿ ।
ಆರಾತ್ । ಚಿತ್ । ಸನ್ । ಭಯತಾಂ । ಅಸ್ಯ । ಶತ್ರುಃ । ನಿ । ಅಸ್ಮೈ । ದ್ಯುಮ್ನಾ । ಜನ್ಯಾ । ನಮಂತಾಂ ॥

ಸಾಯಣಭಾಷ್ಯಂ

ಯಸ್ಮಿನ್ನಿಂದ್ರೇ ವಯಂ ಘೋಷೇಯೋಃ ಸುಹಸ್ತ್ಯಾಃ ಶಂಸಂ ಸ್ತುತಿಂ ದಧಿಮ ವಿದಧ್ಮಃ । ಯಶ್ಚ ಮಘವಾ ಧನವಾನಿಂದ್ರೋಽಸ್ಮೇ ಅಸ್ಮಾಸು ಕಾಮಮಭಿಲಾಷಂ ಶಿಶ್ರಾಯ ಶ್ರಾಯಯತಿ । ಅಸ್ಯೇಂದ್ರಸ್ಯ ಶತ್ರುರಾರಾದ್ದೂರ ಏವ ಸಂಶ್ಚಿತ್ ಸನ್ನಪಿ ಭಯತಾಂ । ಬಿಭೇತು । ಕಿಂಚಾಸ್ಮಾ ಇಂದ್ರಾಯ ಜನ್ಯಾ ಜನ್ಯಾನಿ ಶತ್ರುಜನಪದಭವಾನಿ ದ್ಯುಮ್ನಾ ದ್ಯುಮ್ನಾನ್ಯನ್ನಾನಿ ನಿ ನಮಂತಾಂ । ಪ್ರಹ್ವೀಭವಂತು । ಭೋಜನೀಯಾನಿ ಭವಂತ್ವಿತ್ಯರ್ಥಃ ॥

ಪ್ರತಿಪದಾರ್ಥ

ಯಸ್ಮಿನ್ ಇಂದ್ರೇ—ಯಾವ ಇಂದ್ರನಲ್ಲಿ । ವಯಂ—ನಾವು । ಶಂಸಂ—ಸ್ತುತಿಯನ್ನು । ದಧಿಮ—ಅರ್ಪಿಸುವೆವೋ । ಯಃ—ಯಾರು । ಮಘವಾ—ಧನವಂತನೋ ಅಂತಹ ಇಂದ್ರನು । ಅಸ್ಮೇ—ನಮ್ಮಲ್ಲಿ । ಕಾಮಂ—ಇಷ್ಟಾರ್ಥವನ್ನು । ಶಿಶ್ರಾಯ—ನೆರವೇರಿಸುತ್ತಾನೆ । ಅಸ್ಯ—ಈ ಇಂದ್ರನ । ಶತ್ರುಃ—ಶತ್ರುವು । ಆರಾತ್ ಸನ್ ಚಿತ್—ದೂರದಿಂದ ಇರುವಾಗಲೇ । ಭಯತಾಂ—ಬೆದರಿಕೊಳ್ಳಲಿ । ಅಸ್ಮೈ—ಈ ಇಂದ್ರನಿಗೆ । ಜನ್ಯಾ—ಶತ್ರುಜನರ ದೇಶದಲ್ಲಿ ಉತ್ಪನ್ನವಾದ । ದ್ಯುಮ್ನಾ—ಸಕಲ-ಅನ್ನಸಂಪತ್ತುಗಳೂ । ನಿ ನಮಂತಾಂ—ವಶವಾಗಲಿ.

ಯಾವ ಇಂದ್ರನಲ್ಲಿ ನಾವು ಸ್ತುತಿಯನ್ನು ಅರ್ಪಿಸಿರುವೆವೋ, ಯಾರು ಧನವಂತನೋ ಅಂತಹ ಇಂದ್ರನು ನಮ್ಮ ಇಷ್ಟಾರ್ಥಗಳನ್ನು ನೆರವೇರಿಸುತ್ತಾನೆ. ಈ ಇಂದ್ರನ ಶತ್ರುವು ದೂರದಲ್ಲಿರುವಾಗಲೇ ಬೆದರುತ್ತಾನೆ. ಶತ್ರುಜನರ ದೇಶದಲ್ಲಿ ಉತ್ಪನ್ನವಾದ ಸಕಲ-ಅನ್ನಸಂಪತ್ತುಗಳೂ ಈ ಇಂದ್ರನಿಗೆ ವಶವಾಗಲಿ.

English Translation

May the enemy of that Indra on whom we have laid our praise, the lord of affluence, who has granted us our desires, be in fear of him even when far off : may the food belonging to the country of the foe bow down before him (to enjoy)

ಸಂಹಿತಾಪಾಠಃ

ಆರಾಚ್ಛತ್ರುಮಪ ಬಾಧಸ್ವ ದೂರಮುಗ್ರೋ ಯಃ ಶಂಬಃ ಪುರುಹೂತ ತೇನ ।

ಅಸ್ಮೇ ಧೇಹಿ ಯವಮದ್ಗೋಮದಿಂದ್ರ ಕೃಧೀ ಧಿಯಂ ಜರಿತ್ರೇ ವಾಜರತ್ನಾಂ

ಪದಪಾಠಃ

ಆರಾತ್ । ಶತ್ರುಂ । ಅಪ । ಬಾಧಸ್ವ । ದೂರಂ । ಉಗ್ರಃ । ಯಃ । ಶಂಬಃ । ಪುರುऽಹೂತ । ತೇನ । ಅಸ್ಮೇ ಇತಿ । ಧೇಹಿ । ಯವऽಮತ್ । ಗೋऽಮತ್ । ಇಂದ್ರ । ಕೃಧಿ । ಧಿಯಂ । ಜರಿತ್ರೇ । ವಾಜऽರತ್ನಾಂ ॥ ೬ ॥

ಸಾಯಣಭಾಷ್ಯಂ

ಹೇ ಪುರುಹೂತ ಬಹುಭಿರಾಹೂತೇಂದ್ರ ತವ ಯ ಉಗ್ರ ಉದ್ಗೂರ್ಣಃ ಶಂಬೋ ವಜ್ರಃ । ತಥಾ ಚ ಯಾಸ್ಕಃ । ಶಂಬ ಇತಿ ವಜ್ರನಾಮ ಶಮಯತೇರ್ವಾ ಶಾತಯತೇರ್ವಾ । ನಿ ೫-೨೪ । ಇತಿ । ತೇನ ವಜ್ರೇಣ ಶತ್ರುಮಸ್ಮದರಿಮಾರಾದಸ್ಮತ್ಸನ್ನಿಧಾನಾದ್ದೂರಮಪ ಬಾಧಸ್ವ । ತ್ವಮಪಗಮಯ । ಕಿಂ-ಚಾಸ್ಮೇ ಅಸ್ಮಾಸು ಯವಮದ್ಯವಯುಕ್ತಂ ಗೋಮದ್ಗೋಯುಕ್ತಂ ಚ ಧನಂ ಧೇಹಿ । ನಿಧೇಹಿ । ಕಿಂಚ ಜರಿತ್ರೇ ಸ್ತೋತ್ರೇ ಮಹ್ಯಂ ವಾಜರತ್ನಾಂ ರಮಣೀಯಾನ್ನಂ ಧಿಯಂ ಕರ್ಮ ಕೃಧಿ । ಕುರು ॥

ಪ್ರತಿಪದಾರ್ಥ

ಪುರುಹೂತ—ಅನೇಕರ ಆಹ್ವಾನಕ್ಕೆ ಪಾತ್ರನಾದ । ಇಂದ್ರ—ಎಲೈ ಇಂದ್ರನೇ । ಯಃ—ಯಾವ । ಉಗ್ರಃ—ಭಯಂಕರ ಶಕ್ತಿಯುಳ್ಳ । ಶಂಬಃ—ವಜ್ರಾಯುಧವಿದೆಯೋ । ತೇನ—ಅದರಿಂದ । ಶತ್ರುಂ—ಶತ್ರುವನ್ನು ಆರಾತ್ ದೂರಂ—ನಮ್ಮಿಂದ ದೂರಕ್ಕೆ । ಅಪ ಬಾಧಸ್ವ—ಓಡಿಸು । ಅಸ್ಮೇ—ನಮ್ಮಲ್ಲಿ । ಯವ-ಮತ್—ಯವಯುಕ್ತವಾದುದೂ । ಗೋಮತ್—ಗೋಯುಕ್ತವಾದುದೂ ಆದ ಧನವನ್ನು । ಧೇಹಿ—ಸ್ಥಾಪಿಸು । ಜರಿತ್ರೇ—ಸ್ತುತಿಕರ್ತನಾದ ನನಗೆ । ವಾಜರತ್ನಾಂ—ರಮಣೀಯವಾದ । ಧಿಯಂ—ಕರ್ಮವನ್ನು । ಕೃಧಿ—ನಿರ್ವಹಿಸಿಕೊಡು.

ಭಾವಾರ್ಥ

ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೇ, ಯಾವ ಭಯಂಕರ ಶಕ್ತಿಯುಳ್ಳ ವಜ್ರಾಯುಧವಿರುವುದೋ ಅದರಿಂದ ಶತ್ರುವನ್ನು ನಮ್ಮಿಂದ ದೂರಕ್ಕೆ ಓಡಿಸು. ನಮ್ಮಲ್ಲಿ ಯವಧಾನ್ಯಯುಕ್ತವಾದುದೂ ಗೋಯುಕ್ತವಾದುದೂ ಆದ ಧನವನ್ನು ಸ್ಥಾಪಿಸು. ಸ್ತುತಿಕರ್ತನಾದ ನನಗೆ ರಮಣೀಯವಾದ ಅನ್ನವನ್ನೂ, ಕರ್ಮವನ್ನೂ ನಿರ್ಮಿಸಿಕೊಡು.

English Translation

Invoked of many, (Indra), drive far away the enemy with that fierce thunderbolt of yours: grant to us, Indra, wealth of barley and cattle: render to the worshipper his sacrifice productive of pleasant food

ಸಂಹಿತಾಪಾಠಃ

ಪ್ರ ಯಮಂತರ್ವೃಷಸವಾಸೋ ಅಗ್ಮನ್ತೀವ್ರಾಃ ಸೋಮಾ ಬಹುಲಾಂತಾಸ
ಇಂದ್ರಂ ।
ನಾಹ ದಾಮಾನಂ ಮಘವಾ ನಿ ಯಂಸನ್ನಿ ಸುನ್ವತೇ ವಹತಿ ಭೂರಿ ವಾಮಂ

ಪದಪಾಠಃ

ಪ್ರ । ಯಂ । ಅಂತಃ । ವೃಷಽಸವಾಸಃ । ಅಗ್ಮನ್ । ತೀವ್ರಾಃ । ಸೋಮಾಃ । ಬಹುಲಽಅಂತಾಸಃ ।
ಇಂದ್ರಂ ।
ನ । ಅಹ । ದಾಮಾನಂ । ಮಘಽವಾ । ನಿ । ಯಂಸತ್ । ನಿ । ಸುನ್ವತೇ । ವಹತಿ । ಭೂರಿ । ವಾಮಂ ॥

ಸಾಯಣಭಾಷ್ಯಂ

ಅಂತರ್ಜಠರೇ ಯಮಿಂದ್ರಂ ವೃಷಸವಾಸೋ ವೃಷಸವಾ ಅಗ್ನೌ ಸೋಮಸ್ಯ ಪರ್ವಭಿರಧ್ವರ್ಯುಭಿರಭಿಷುತಾಸ್ತೀವ್ರಾಸ್ತೀವ್ರರಸಾ ಬಹುಲಾಂತಾಸೋ ಬಹುಲಮನ್ನಾದಿಕಮಂತೇ ಯೇಭ್ಯಸ್ತೇ ಬಹುಲಾಂತಾಃ ಸೋಮಾಃ ಪ್ರಾಗ್ಮನ್ ಪ್ರಗಚ್ಛಂತಿ ಸ ಮಘವಾ ಧನವಾನಿಂದ್ರೋ ದಾಮಾನಂ ದಾತಾರಂ ಯಜಮಾನಂ ನಾಹ ನೈವ ನಿ ಯಂಸತ್ । ನಿಯಚ್ಛತಿ । ಕಿಂತು ಸುನ್ವತೇ ಸೋಮಾಭಿಷವಂ ಕುರ್ವತೇ ಯಜಮಾನಾಯ ಭೂರ್ಯಧಿಕಂ ವಾಮಂ ವನನೀಯಂ ಧನಂ ನಿ ವಹತಿ । ನಿತರಾಂ ಪ್ರಾಪಯತಿ ॥

ಪ್ರತಿಪದಾರ್ಥ

ವೃಷಸವಾಸಃ—ಅಧ್ವರ್ಯುಗಳಿಂದ ಹಿಂಡಲ್ಪಟ್ಟವೂ । ತೀವ್ರಾಃ—ಮದಕರಗಳೂ । ಬಹುಲಾಂತಾಸಃ—ಪ್ರಭೂತವಾದ ಅನ್ನರಸಗಳುಳ್ಳವೂ ಆದ । ಸೋಮಾಃ—ಸೋಮರಸಗಳು । ಯಂ ಇಂದ್ರಂ—ಯಾವ

ಇಂದ್ರನನ್ನು । ಅಂತಃ—ಜಠರದೊಳಗೆ । ಪ್ರ ಅಗ್ಮನ್—ಪ್ರವೇಶಿಸಿರುವವೋ । ಮಘವಾ—ಧನವಂತನಾದ ಅದೇ ಇಂದ್ರನು । ದಾಶುಷಂ—ಯಜಮಾನನನ್ನು । ನಾಹ ನಿ ಯಂಸತ್—ಕೈ ಬಿಡುವುದಿಲ್ಲ । ಸುನ್ವತೇ—ಯಜಮಾನನಿಗೆ । ಭೂರಿ—ಅಧಿಕವಾದುದೂ । ವಾಮಂ—ಉತ್ಕರ್ಷವೂ ಆದ ಧನವನ್ನು । ನಿ ವಹತಿ—ತಂದೊದಗಿಸುತ್ತಾನೆ.

ಭಾವಾರ್ಥ

ಅಧ್ವರ್ಯುಗಳಿಂದ ಹಿಂಡಲ್ಪಟ್ಟವೂ, ಮದಕರಗಳೂ, ಪ್ರಭೂತವಾದ ಅನ್ನರಸಗಳುಳ್ಳವೂ ಆದ ಸೋಮ ರಸಗಳು ಯಾವ ಇಂದ್ರನ ಜಠರದೊಳಗೆ ಪ್ರವೇಶಿಸುವುವೋ ಧನವಂತನಾದ ಅದೇ ಇಂದ್ರನು ಯಜಮಾನನನ್ನು ಕೈಬಿಡುವುದಿಲ್ಲ. ಯಜಮಾನನಿಗೆ ಅಧಿಕವಾದುದೂ, ಉತ್ಕರ್ಷವೂ ಆದ ಧನವನ್ನು ತಂದೊದಗಿಸುತ್ತಾನೆ.

## English Translation

The Indra into whom the sharp aboundant Soma-juices effused by (the priests), the showerers (of the Soma), have entered : he, Maghavat, deserts not the donor of the sacrifice, but bestows ample wealth upon him who presents libations.

ಸಂಹಿತಾಪಾಠಃ

ಉತ ಪ್ರಹಾಮತಿದೀವ್ಯಾ ಜಯಾತಿ ಕೃತಂ ಯಚ್ಛ್ವಘ್ನೀ ವಿಚಿನೋತಿ ಕಾಲೇ
ಯೋ ದೇವಕಾಮೋ ನ ಧನಾ ರುಣದ್ಧಿ ಸಮಿತ್ತಂ ರಾಯಾ ಸೃಜತಿ ಸ್ವಧಾ-
ವಾನ್ ॥ ೯ ॥

ಪದಪಾಠಃ

ಉತ । ಪ್ರಽಹಾಂ । ಅತಿಽದೀವ್ಯ । ಜಯಾತಿ । ಕೃತಂ । ಯತ್ । ಶ್ವಽಘ್ನೀ । ವಿಽಚಿನೋತಿ । ಕಾಲೇ ।
ಯಃ । ದೇವಽಕಾಮಃ । ನ । ಧನಾ । ರುಣದ್ಧಿ । ಸಂ । ಇತ್ । ತಂ । ರಾಯಾ । ಸೃಜತಿ । ಸ್ವಧಾಽವಾನ್ ॥

ಸಾಯಣಭಾಷ್ಯಂ

ಉತಾಪಿ ಚೇಂದ್ರಃ ಪ್ರಹಾಂ ಪ್ರಹಂತಾರಮತಿದೀವ್ಯ । ಅತಿರಭಿಪೂಜಿತಾರ್ಥೇ ವರ್ತತೇ । ದೀವ್ಯತಿರ್ಗತ್ಯರ್ಥಃ । ಅಭಿಪೂಜಿತಂ ಗಮಯಿತ್ವಾ ಜಯಾತಿ । ಜಯತಿ । ಕಿಂಚ ಯದ್ಯಥಾ । ಅತ್ರ ಪ್ರಕಾರವಚನಪ್ರತ್ಯಯಸ್ಯ ಲೋಪೋ ದ್ರಷ್ಟವ್ಯಃ । ಶ್ವಘ್ನೀ ಕಿತವಃ ಕೃತಂ ಕೃತಸಮಯಂ ಪ್ರತಿಕಿತವಂ ಕಿತವಾನಾಂ ಮಧ್ಯೇ ವಿಚಿನೋತಿ ಪರೀಕ್ಷ್ಯ ಗೃಹ್ಣಾತಿ ತದ್ವದಿಂದ್ರಃ ಕಾಲೇ ಯುದ್ಧಕಾಲೇ ಬಲವಂತಂ ಶತ್ರುಂ ಪರೀಕ್ಷ್ಯ ವಧಾರ್ಥಂ ಗೃಹ್ಣಾತೀತ್ಯರ್ಥಃ । ಕಿಂಚ । ಯೋ ಮನುಷ್ಯೋ ದೇವಕಾಮೋ ದೇವಾನ್ಯಷ್ಟುಂ ಸ್ತೋತುಂ ವಾಭಿಲಾಷವಾನ್ಭವತಿ ತಸ್ಯಾರ್ಥಾಯ ಧನಾ ಧನಾನಿ ನ ರುಣದ್ಧಿ । ನಾವೃಣೋತಿ ।

ನಾಚ್ಛಾದಯತೀತ್ಯರ್ಥಃ । ಕಿಂತು ಸ್ವಧಾವಾನ್ಬಲವಾನಿಂದ್ರಸ್ತಂ ದೇವಕಾಮಂ ರಾಯಾ ಧನೇನ ಸಂ ಸೃಜತಿ । ಸಂಯೋಜಯತ್ಯೇವ ॥

ಪ್ರತಿಪದಾರ್ಥ

ಉತ—ಮತ್ತು । (ಸಃ—ಆ ಇಂದ್ರನು) ಪ್ರಹಾಂ—ಎದುರುಬೀಳುವ ಶತ್ರುವನ್ನು । ಅತಿದೀವ್ಯ—ದೂರಕ್ಕೆ ಓಡಿಸಿ । ಜಯಾತಿ—ಗೆಲ್ಲುತ್ತಾನೆ । ಯತ್—ಯಾವರೀತಿ । ಶ್ವಘ್ನೀ—ಜೂಜುಗಾರನು (ಬೇಟೆಗಾರನು) ಕೃತಂ—ಸಮಯವನ್ನು ನಿರೀಕ್ಷಿಸಿ । ವಿಚಿನೋತಿ—ತನ್ನ ಪ್ರತಿಶಕ್ತಿಯನ್ನು (ಮೃಗಾದಿಗಳನ್ನು) ಆರಿಸುವನೋ ಹಾಗೆ । (ಇಂದ್ರನೂ ಸಹ) ಕಾಲೇ—ಯುದ್ಧಕಾಲದಲ್ಲಿ ಶತ್ರುವನ್ನು ಆರಿಸಿ ಸೋಲಿಸುತ್ತಾನೆ । ಯಃ—ಯಾವ ಯಜಮಾನನು । ದೇವಕಾಮಃ—ದೇವಪೂಜೆಯಲ್ಲಿ ಇಷ್ಟವುಳ್ಳವನಾಗಿ । ಧನಾ—ಧನಗಳನ್ನು । ನ ರುಣದ್ಧಿ—ಮುಚ್ಚಿಡುವುದಿಲ್ಲವೋ । ತಂ—ಆ ದೇವಭಕ್ತನನ್ನು । ಸ್ವಧಾವಾನ್—ಶಕ್ತಿಯುತನಾದ ಇಂದ್ರನು । ರಾಯಾ—ಧನದೊಂದಿಗೆ । ಸಂ ಸೃಜತಿ—ಸೇರಿಸಿಡುತ್ತಾನೆ.

ಭಾವಾರ್ಥ

ಇಂದ್ರನು ಎದುರುಬೀಳುವ ಶತ್ರುವನ್ನು ದೂರಕ್ಕೆ ಓಡಿಸಿ ಗೆಲ್ಲುತ್ತಾನೆ. ಯಾವರೀತಿ ಬೇಟೆಗಾರನು ಕೊಂಬು ಹಾಕಿ ಮೃಗಾದಿಗಳನ್ನು ಆರಿಸಿ ಹೊಡೆಯುವನೋ ಜೂಜುಗಾರನು ಹೇಗೆ ಸಮಯವನ್ನು ಪರೀಕ್ಷಿಸಿ ತನ್ನ ಪ್ರತಿಶಕ್ತಿಯನ್ನು ಆರಿಸುವನೋ ಹಾಗೆ ಇಂದ್ರನೂ ಯುದ್ಧಕಾಲದಲ್ಲಿ ಶತ್ರುವನ್ನು ಆರಿಸಿ ಸೋಲಿಸುತ್ತಾನೆ. ಯಾವ ಯಜಮಾನನು ದೇವಪೂಜೆಯಲ್ಲಿ ಇಷ್ಟವುಳ್ಳವನಾಗಿ ಧನಗಳನ್ನು ಮುಚ್ಚಿಡುವುದಿಲ್ಲವೋ ಆ ದೇವಭಕ್ತನನ್ನು ಶಕ್ತಿಯುತನಾದ ಇಂದ್ರನು ಧನದೊಂದಿಗೆ ಸೇರಿಸಿಡುತ್ತಾನೆ.

English Translation

Haviug driven away the assailant, he triumphs: at the time (of battle) he selects his antagonist as does a gambler, the man who, desirous of gratifying the gods, withholds not his riches, him the powerful Indra associates with wealth.

ಸಂಹಿತಾಪಾಠಃ

ಗೋಭಿಷ್ಟರೇಮಾಮತಿಂ ದುರೇವಾಂ ಯವೇನ ಕ್ಷುಧಂ ಪುರುಹೂತ ವಿಶ್ವಾಂ।
ವಯಂ ರಾಜಭಿಃ ಪ್ರಥಮಾ ಧನಾನ್ಯಸ್ಮಾಕೇನ ವೃಜನೇನಾ ಜಯೇಮ ॥೧೦॥

ಪದಪಾಠಃ

ಗೋಭಿಃ । ತರೇಮ । ಅಮತಿಂ । ದುಃಽಏವಾಂ । ಯವೇನ । ಕ್ಷುಧಂ । ಪುರುಽಹೂತ । ವಿಶ್ವಾಂ ।
ವಯಂ । ರಾಜಽಭಿಃ । ಪ್ರಥಮಾಃ । ಧನಾನಿ । ಅಸ್ಮಾಕೇನ । ವೃಜನೇನ । ಜಯೇಮ ॥ ೧೦ ॥

### ಸಾಯಣಭಾಷ್ಯಂ

ಹೇ ಪುರುಹೂತ ಬಹುಭಿರಾಹೂತೇಂದ್ರ ತವ ಪ್ರಸಾದಾದ್ದುರೇವಾಂ ದುಷ್ಟಾಗಮನಾಂ ದಾರಿದ್ರ್ಯಾದಾಗತಾಮಮತಿಂ ದುರ್ಬುದ್ಧಿಂ ವಯಂ ಘೋಷೇಯೋಃ ಸುಹಸ್ತ್ಯಾ ಗೋಭಿಃ ಪಶುಭಿಸ್ತರೇಮ । ನಿಸ್ತರೇಮ । ಕಿಂಚ ಯವೇನ ವಿಶ್ವಾಂ ವ್ಯಾಪ್ತಾಂ ಕ್ಷುಧಂ ತರೇಮ । ಕಿಂಚ ಪ್ರಥಮಾ ಮುಖ್ಯಾನಿ ಧನಾನಿ ರಾಜಭಿರ್ಧನಾನಾಮೀಶ್ವರೈಃ । ಲಭೇಮಹೀತಿ ಶೇಷಃ । ಯದ್ವಾ । ಪ್ರಥಮಾ ವಯಮಿತಿ ಸಂಬಂಧಃ । ಕಿಂಚಾಸ್ಮಾಕೇನಾಸ್ಮದೀಯೇನ ವೃಜನೇನ ಬಲೇನ ಜಯೇಮ । ಶತ್ರೂನಿತಿ ಶೇಷಃ ॥

### ಪ್ರತಿಪದಾರ್ಥ

ಪುರುಹೂತ—ಅನೇಕರಿಂದ ಕರೆಯಲ್ಪಡುವ ಎಲೈ ಇಂದ್ರನೇ । ದುರೇವಾಂ—ದಾರಿದ್ರ್ಯದಿಂದ ಪ್ರಾಪ್ತವಾದ । ಅಮತಿಂ—ದುರ್ಬುದ್ಧಿಯನ್ನು । ವಯಂ—ನಾವು । ಗೋಭಿಃ—ನಮ್ಮ ಪಶುಸಂಪತ್ತಿನ ಸಹಾಯದಿಂದ । ತರೇಮ—ದಾಟುವಂತಾಗಲಿ । ಯವೇನ—ಯವಧಾನ್ಯದ ಸಹಾಯದಿಂದ । ವಿಶ್ವಾಂ—ನಮ್ಮನ್ನಾವರಿಸಿರುವ । ಕ್ಷುಧಂ—ಹಸಿವನ್ನು ದಾಟುವಂತಾಗಲಿ । ಪ್ರಥಮಾಃ—ಅತಿ ಮುಖ್ಯವಾದ । ಧನಾನಿ—ಧನಗಳನ್ನು । ರಾಜಭಿಃ—ಧನದ ಪ್ರಭುಗಳಿಂದ (ನಾವು ಹೊಂದುವಂತಾಗಲಿ) ಅಸ್ಮಾಕೇನ—ನಮ್ಮ । ವೃಜನೇನ—ಶಕ್ತಿಯಿಂದ । ಜಯೇಮ—ಶತ್ರುಗಳನ್ನು ಜಯಿಸುವಂತಾಗಲಿ.

### ಭಾವಾರ್ಥ

ಪುರುಹೂತನಾದ ಎಲೈ ಇಂದ್ರನೇ, ದಾರಿದ್ರ್ಯದಿಂದ ಪ್ರಾಪ್ತವಾದ ದುರ್ಬುದ್ಧಿಯನ್ನು ನಾವು ನಮ್ಮ ಪಶುಸಂಪತ್ತಿನಿಂದ ದಾಟುವಂತಾಗಲಿ. ಯವಧಾನ್ಯದ ಸಹಾಯದಿಂದ ನಮ್ಮನ್ನಾವರಿಸುವ ಹಸಿವನ್ನು ನಾಶಪಡಿಸುವಂತಾಗಲಿ. ಧನಿಕರಿಂದ ನಾವು ಮುಖ್ಯವಾದ ಧನಗಳನ್ನು ಹೊಂದುವಂತಾಗಲಿ. ನಮ್ಮ ಶಕ್ತಿಯಿಂದ ಶತ್ರುಗಳನ್ನು ಜಯಿಸುವಂತಾಗಲಿ.

### English Translation

Indra, invoked of many, may we escape all ignorance caused by poverty by means of our cattle : (may we escape) all hunger by means of our barley : (may we acquire) the chief riches through the princes (of wealth) : may we conquer by our valour.

### ಸಂಹಿತಾಪಾಠಃ

ಬೃಹಸ್ಪತಿರ್ನಃ ಪರಿ ಪಾತು ಪಶ್ಚಾದುತೋತ್ತರಸ್ಮಾದಧರಾದಘಾಯೋಃ ।
ಇಂದ್ರಃ ಪುರಸ್ತಾದುತ ಮಧ್ಯತೋ ನಃ ಸಖಾ ಸಖಿಭ್ಯೋ ವರಿವಃ ಕೃಣೋತು

ಪದಪಾಠಃ

ಬೃಹಸ್ಪತಿಃ । ನಃ । ಪರಿ । ಪಾತು । ಪಶ್ಚಾತ್ । ಉತ । ಉತ್ಽತರಸ್ಮಾತ್ । ಅಧರಾತ್ । ಅಘಽಯೋಃ ॥

ಇಂದ್ರಃ । ಪುರಸ್ತಾತ್ । ಉತ । ಮಧ್ಯತಃ । ನಃ । ಸಖಾ । ಸಖಿಽಭ್ಯಃ । ವರಿವಃ । ಕೃಣೋತು ॥ ೧೧ ॥

ಸಾಯಣಭಾಷ್ಯಂ

ಪಶ್ಚಾತ್ಪಶ್ಚಿಮತೋ ಯೋಽಘಾಯುರಾಗಚ್ಛತಿ ತಸ್ಮಾದಘಾಯೋಃ ಪಾಪಕಾಙ್ಕ್ಷಿಶತ್ರೋರ್ನೋ-ಽಸ್ಮಾನ್ಬೃಹಸ್ಪತಿಃ ಪರಿ ಪಾತು । ರಕ್ಷತು । ಉತಾಪಿ ಚೋತ್ತರಸ್ಮಾದುತ್ತರತೋಽಧರಾದಧಸ್ತಾಚ್ಚ ಯೋಽಘಾಯುರಾಗಚ್ಛತಿ ತಸ್ಮಾದಘಾಯೋರ್ನೋಽಸ್ಮಾನ್ಪರಿ ಪಾತು । ಉತಾಪಿ ಚೇಂದ್ರಃ ಪುರಸ್ತಾ-ತ್ಪೂರ್ವತೋಮಧ್ಯತಶ್ಚ ಯೋಽಘಾಯುರಾಗಚ್ಛತಿ ತಸ್ಮಾದಘಾಯೋರ್ನೋಽಸ್ಮಾನ್ಪರಿ ಪಾತು । ಕಿಂಚ । ಸಖಾ ಸಖಿಭೂತೇಂದ್ರಃ ಸಖಿಭ್ಯಃ ಪ್ರಿಯೇಭ್ಯೋಽಸ್ಮಭ್ಯಂ ವರಿವೋ ಧನಂ ಕೃಣೋತು । ಕರೋತು ॥

ಪ್ರತಿಪದಾರ್ಥ

ಬೃಹಸ್ಪತಿಃ—ಬೃಹಸ್ಪತಿಃ । **ಪಶ್ಚಾತ್**—ನಮ್ಮ ಹಿಂಭಾಗದಿಂದ । **ಅಘಾಯೋಃ**—ಕೇಡನ್ನು ಬಯಸುವ ಶತ್ರುವಿನಿಂದ । ನಃ—ನಮ್ಮನ್ನು । ಪರಿ ಪಾತು—ರಕ್ಷಿಸಲಿ । ಉತ—ಮತ್ತು । **ಉತ್ತರಸ್ಮಾತ್**—ನಮ್ಮ ಮೇಲ್ಭಾಗದಿಂದಲೂ । ಅಧರಾತ್—ಕೆಳಭಾಗದಿಂದಲೂ ನಮ್ಮ ಮೇಲೆ ಬೀಳುವ ಶತ್ರುಗಳಿಂದ ರಕ್ಷಿಸಲಿ । **ಉತ**—ಮತ್ತು ಇಂದ್ರಃ—ಇಂದ್ರನು । **ಪುರಸ್ತಾತ್**—ಪೂರ್ವದಿಕ್ಕಿನಿಂದಲೂ । **ಮಧ್ಯತಃ**—ಮಧ್ಯಭಾಗದಿಂದಲೂ । **ನಃ**—ನಮ್ಮನ್ನು ರಕ್ಷಿಸಲಿ । **ಸಖಾ**—ಮಿತ್ರನಾದ ಇಂದ್ರನು । **ಸಖಿಭ್ಯಃ**—ಅವನ ಮಿತ್ರರಾದ ನಮಗೆ । **ವರಿವಃ**—ಧನವನ್ನು । **ಕೃಣೋತು**—ಒದಗಿಸಲಿ.

ಭಾವಾರ್ಥ

ನಮ್ಮ ಹಿಂಭಾಗದಿಂದ ಬಂದು ನಮಗೆ ಕೇಡನ್ನು ಬಯಸುವ ಶತ್ರುವಿನಿಂದ ಬೃಹಸ್ಪತಿಯು ನಮ್ಮನ್ನು ರಕ್ಷಿಸಲಿ. ನಮ್ಮ ಮೇಲ್ಭಾಗದಿಂದಲೂ, ಕೆಳಭಾಗದಿಂದಲೂ ನಮ್ಮ ಮೇಲೆ ಬೀಳುವ ಶತ್ರುಗಳಿಂದಲೂ ನಮ್ಮನ್ನು ರಕ್ಷಿಸಲಿ. ಇಂದ್ರನು ಪೂರ್ವದಿಕ್ಕಿನಿಂದಲೂ, ಮಧ್ಯಭಾಗದಿಂದಲೂ ನಮ್ಮನ್ನು ರಕ್ಷಿಸಲಿ. ಮಿತ್ರನಾದ ಇಂದ್ರನು ಅವನ ಮಿತ್ರರಾದ ನಮಗೆ ಧನವನ್ನು ಒದಗಿಸಲಿ.

## English Translation

May Brihaspati defend us from a malignant (foe) coming from behind; from above or from below; may Indra defend us from foes in front and in the middle; may he, our friend bestow wealth upon (us) his friends

## ನಲವತ್ತಮೂರನೆಯ ಸೂಕ್ತ

ಚತುರ್ಥೇಽನುವಾಕೇಽಷ್ಟಾದಶ ಸೂಕ್ತಾನಿ | ತತ್ರಾಚ್ಛಾ ಮ ಇತ್ಯೇಕಾದಶರ್ಚಂ ಪ್ರಥಮಂ ಸೂಕ್ತಂ | ದಶಮ್ಯೇಕಾದಶ್ಯೌ ತ್ರಿಷ್ಟುಭೌ | ಶಿಷ್ಟಾ ಜಗತ್ಯಃ | ಪೂರ್ವವದೃಷಿದೇವತೇ | ತಥಾ ಚಾನು- ಕ್ರಾಂತಂ | ಅಚ್ಛಾ ಮೇ ದ್ವಿತ್ರಿಷ್ಟುಬಂತಮಿತಿ | ಉಕ್ಥ್ಯೇ ಬ್ರಾಹ್ಮಣಾಚ್ಛಂಸಿಶಸ್ತ್ರೇ ತೃತೀಯಸವನ ಏತತ್ ಸೂಕ್ತಂ | ಸೂತ್ರಿತಂ ಚ | ಅಚ್ಛಾ ಮ ಇಂದ್ರಂ ಬೃಹಸ್ಪತೇ ಯುವಮಿಂದ್ರಶ್ಚ ವಸ್ವ ಇತಿ ಯಾಜ್ಯೇ | ಆ-೬-೧ | ಇತಿ || ಷಷ್ಠೇಽಹನ್ಯಪ್ಯೇತತ್ಸೂಕ್ತಂ | ಸೂತ್ರಿತಂ ಚ | ಅಚ್ಛಾ ಮ ಇಂದ್ರಮಿತಿ ನಿತ್ಯಮ್ಯೇ- ಕಾಹಿಕಂ | ಆ-೮-೩ | ಇತಿ ||

ಅನುವಾದವು—ಋಗ್ವೇದಸಂಹಿತೆಯ ಹತ್ತನೆಯ ಮಂಡಲದ ನಾಲ್ಕನೆಯ ಅನುವಾಕದಲ್ಲಿ ಹದಿನೆಂಟು ಸೂಕ್ತಗಳಿರುವುವು. ಅವುಗಳಲ್ಲಿ ಅಚ್ಛಾ ಮೇ ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಹನ್ನೊಂದು ಋಕ್ಕು ಗಳಿರುವುವು. ಈ ಸೂಕ್ತಕ್ಕೆ ಋಷಿದೇವತೆಗಳು ಹಿಂದಿನ ಸೂಕ್ತದಂತೆಯೇ. ಹತ್ತು ಮತ್ತು ಹನ್ನೊಂದನೆಯ ಋಕ್ಕುಗಳು ತ್ರಿಷ್ಟುಪ್ ಛಂದಸ್ಸವು. ಉಳಿದ ಋಕ್ಕುಗಳು ಜಗತೀ ಛಂದಸ್ಕವು. ಅನುಕ್ರಮಣಿಕೆಯಲ್ಲಿ ಅಚ್ಛಾ ಮೇ ದ್ವಿತ್ರಿಷ್ಟುಬಂತಂ ಎಂದು ಹೇಳಿರುವುದು. ಉಕ್ಥ್ಯಯಾಗದಲ್ಲಿ ತೃತೀಯಸವನಕಾಲದಲ್ಲಿ ಬ್ರಾಹ್ಮಣಾ ಚ್ಛಂಸಿಯೆಂಬ ಋತ್ವಿಜನು ಪಠಿಸಬೇಕಾದ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ ಅಚ್ಛಾ ಮ ಇಂದ್ರಂ ಬೃಹಸ್ಪತೇ ಯುವಮಿಂದ್ರಶ್ಚ ವಸ್ವ ಇತಿ ಯಾಜ್ಯೇ ಎಂಬ ಸೂತ್ರದಿಂದ (ಆ. ೬-೧) ವಿವೃತವಾಗಿರುವುದು. ಯಾಗದ ಆರನೆಯ ದಿವಸದಲ್ಲಿಯೂ ಸಹ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಅಚ್ಛಾ ಮ ಇಂದ್ರಮಿತಿ ನಿತ್ಯಮ್ಯೇಕಾಹಿಕಂ ಎಂಬ ಸೂತ್ರದಿಂದ (ಆ. ೮-೩) ವಿವೃತ ವಾಗಿರುವುದು.

### ಸೂಕ್ತ—೪೩

ಮಂಡಲ—೧೦ || ಅನುವಾಕ— ೪|| ಸೂಕ್ತ—೪೩ ||
ಅಷ್ಟಕ—೭ || ಅಧ್ಯಾಯ—೮ || ವರ್ಗ—೩೪, ೩೫ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ||
ಋಷಿಃ—ಕೃಷ್ಣಃ ||
ದೇವತಾ—ಇಂದ್ರಃ ||
ಛಂದಃ—೧-೯. ಜಗತೀ | ೧೦,೧೧ ತ್ರಿಷ್ಟುಪ್ ||

ಸಂಹಿತಾಪಾಠಃ

ಅಚ್ಛಾ ಮ ಇಂದ್ರಂ ಮತಯಃ ಸ್ವರ್ವಿದಃ ಸಧ್ರೀಚೀರ್ವಿಶ್ವಾ ಉಶತೀರ- ನೂಷತ |
ಪರಿ ಷ್ವಜಂತೇ ಜನಯೋ ಯಥಾ ಪತಿಂ ಮರ್ಯಂ ನ ಶುಂಧ್ಯುಂ ಮಘ- ವಾನಮೂತಯೇ || ೧ ||

ಪದಪಾಠಃ

ಅಚ್ಛ । ಮೇ । ಇಂದ್ರಂ । ಮತಯಃ । ಸ್ವಃಽವಿದಃ । ಸಧ್ರೀಚೀಃ । ವಿಶ್ವಾಃ । ಉಶತೀಃ । ಅನೂಷತ । ಪರಿ । ಸ್ವಜಂತೇ । ಜನಯಃ । ಯಥಾ । ಪತಿಂ । ಮರ್ಯಂ । ನ । ಶುಂಧ್ಯುಂ । ಮಘಽವಾನಂ । ಊತಯೇ ॥ ೧ ॥

ಸಾಯಣಭಾಷ್ಯಂ

ಆಂಗಿರಸಸ್ಯ ಕೃಷ್ಣಸ್ಯ ಮೇ ಮಮ ಸ್ವರ್ವಿದಃ ಸರ್ವಸ್ಯ ಲಂಭಯಿತ್ರ್ಯಃ ಸಧ್ರೀಚೀಃ ಸಂಗತಾ ವಿಶ್ವಾ ವ್ಯಾಪ್ತಾ ಉಶತೀಃ ಕಾಮಯಮಾನಾ ಮತಯಃ ಸ್ತುತಯ ಇಂದ್ರಮಚ್ಛಾನೂಷತ । ಅಭಿಷ್ಟುವಂತಿ । ಕಿಂಚ ಜನಯೋ ಜಾಯಾ ಯಥಾ ಪತಿಂ ಭರ್ತಾರಂ ಮರ್ಯಂ ನ ಯಥಾ ಚ ಮನುಷ್ಯಂ ಶುಂಧ್ಯುಂ ಶುದ್ಧಂ ದೋಷರಹಿತಂ ಮಘವಾನಂ ಧನವಂತಮೂತಯೇ ರಕ್ಷಣಾರ್ಥಂ ಪರಿ ಷ್ವಜಂತೇ ಆಲಿಂಗಂತಿ ತದ್ವದಿಂದ್ರಂ ಮೇ ಸ್ತುತಯಃ ಪರಿ ಷ್ವಜಂತೇ ॥

ಪ್ರತಿಪದಾರ್ಥ

**ಮೇ**—ನನ್ನ । **ಸ್ವರ್ವಿದಃ**—ಸಕಲವನ್ನು ಗಳಿಸುವುವೂ । **ಸಧ್ರೀಚೀಃ**—ಒಟ್ಟುಗೂಡಿರುವುವೂ । **ವಿಶ್ವಾಃ**—ವಿಶ್ವವ್ಯಾಪಕವೂ । **ಉಶತೀಃ**—ದೇವತೆಗಳನ್ನಿಚ್ಛಿಸುವುವೂ ಆದ । **ಮತಯಃ**—ಸ್ತುತಿಗಳು । **ಇಂದ್ರಂ ಅಚ್ಛ**—ಇಂದ್ರನನ್ನುದ್ದೇಶಿಸಿ । **ಅನೂಷತ**—ಪ್ರಶಂಸಿಸುತ್ತವೆ । **ಜನಯಃ**—ಪತ್ನಿಯರು । **ಯಥಾ**—ಯಾವ ರೀತಿ । **ಮರ್ಯಂ**—ಮಾನವನಾದ । **ಪತಿಂ ನ**—ಪತಿಯನ್ನು ಆಲಿಂಗಿಸಿಕೊಳ್ಳುವರೋ ಹಾಗೆ । **ಶುಂಧ್ಯುಂ**—ಪರಿಶುದ್ಧನಾದ । **ಮಘವಾನಂ**—ಇಂದ್ರನನ್ನು । **ಊತಯೇ**—ರಕ್ಷಣಾರ್ಥವಾಗಿ । **ಪರಿ ಷ್ವಜಂತೇ**—ಆಲಿಂಗಿಸಿಕೊಳ್ಳುತ್ತವೆ.

ಭಾವಾರ್ಥ

ಸಕಲ ಇಷ್ಟಾರ್ಥಗಳನ್ನು ಗಳಿಸುವುವೂ, ಒಟ್ಟುಗೂಡಿರುವುವೂ, ಸರ್ವವ್ಯಾಪಕವೂ, ದೇವತೆಗಳನ್ನಿಚ್ಛಿಸುವುವೂ ಆದ ನನ್ನ ಸ್ತುತಿಗಳು ಇಂದ್ರನನ್ನುದ್ದೇಶಿಸಿ ಪ್ರಶಂಸಿಸುತ್ತವೆ. ಪತ್ನಿಯರು ಯಾವ ರೀತಿ ತಮ್ಮ ಮಾನವನಾದ ಪತಿಯನ್ನು ಆಲಿಂಗಿಸಿಕೊಳ್ಳುವರೋ ಹಾಗೆ ಪರಿಶುದ್ಧನಾದ ಇಂದ್ರನನ್ನು ನನ್ನ ಸ್ತುತಿಗಳು ರಕ್ಷಣಾರ್ಥವಾಗಿ ಆಲಿಂಗಿಸಿಕೊಳ್ಳುತ್ತವೆ. (ಹೋಗಿ ಸೇರಿಕೊಳ್ಳುತ್ತವೆ)

## English Translation

My praises, all-acquiring, concentrated and eager, glorify Indra ; they embrace Magavat as wives (embrace) a husband : as (women embrace) a man free from defect for the sake of protection.

ಸಂಹಿತಾಪಾಠಃ

ನ ಘಾ ತ್ವದ್ರಿಗಪ ವೇತಿ ಮೇ ಮನಸ್ತ್ವೇ ಇತ್ಕಾಮಂ ಪುರುಹೂತ ಶಿಶ್ರಯ ।
ರಾಜೇವ ದಸ್ಮ ನಿ ಷದೋಽಧಿ ಬರ್ಹಿಷ್ಯಸ್ಮಿನ್ತ್ಸು ಸೋಮೇಽವಪಾನಮಸ್ತು ತೇ ॥ ೨ ॥

ಪದಪಾಠಃ

ನ । ಘ । ತ್ವದ್ರಿಕ್ । ಅಪ । ವೇತಿ । ಮೇ । ಮನಃ । ತ್ವೇ ಇತಿ । ಇತ್ । ಕಾಮಂ । ಪುರುಽಹೂತ । ಶಿಶ್ರಯ ।
ರಾಜಾಽಇವ । ದಸ್ಮ । ನಿ । ಸದಃ । ಅಧಿ । ಬರ್ಹಿಷಿ । ಅಸ್ಮಿನ್ । ಸು । ಸೋಮೇ । ಅವಽಪಾನಂ । ಅಸ್ತು । ತೇ ॥ ೨ ॥

ಸಾಯಣಭಾಷ್ಯಂ

ಹೇ ಪುರುಹೂತ ಬಹುಭಿರಾಹೂತ ದಸ್ಮ ದರ್ಶನೀಯೇಂದ್ರ ತ್ವದ್ರಿಕ್ ತ್ವದಭಿಮುಖಂ ಮೇ ಮದೀಯಂ ಮನೋ ನ ಘ ನ ಖಲ್ವಪ ವೇತಿ । ತ್ವತ್ತೋಽಪಗಚ್ಛತಿ । ಕಿಂಚ ತ್ವೇ ಇತ್ ತ್ವಯ್ಯೇವ ಕಾಮಮಭಿಲಾಷಂ ಶಿಶ್ರಯ । ಸ್ಥಾಪಯಾಮಿ । ಕಿಂಚ ರಾಜೇವೇಶ್ವರ ಇವ ಬರ್ಹಿಷ್ಯಧಿ ನಿ ಷದಃ । ನಿಷೀದ । ಕಿಂಚ ತೇ ತವಾಸ್ಮಿನ್ತ್ಸೋಮೇಽವಪಾನಮಸ್ತು । ಭವತು ॥

ಪ್ರತಿಪದಾರ್ಥ

ದಸ್ಮ—ಆಕರ್ಷಕವಾದ ರೂಪವುಳ್ಳ । ಪುರುಹೂತ—ಎಲೈ ಇಂದ್ರನೇ । ತ್ವದ್ರಿಕ್—ನಿನಗಭಿಮುಖವಾಗಿ ತಿರುಗಿಸಿದ । ಮೇ ಮನಃ—ನನ್ನ ಮನಸ್ಸು । ನ ಘ ಅಪ ವೇತಿ—ಖಂಡಿತ ಅಲ್ಲಿಂದ ಹಿಂತಿರುಗುವುದೇ ಇಲ್ಲ । ತ್ವೇ ಇತ್—ನಿನ್ನಲ್ಲೇ । ಕಾಮಂ—ಇಷ್ಟಾರ್ಥವನ್ನು । ಶಿಶ್ರಯ—ಸ್ಥಾಪಿಸುತ್ತೇನೆ । ರಾಜೇವ—ಈಶ್ವರನಂತೆ ಅಧಿ ನಿ ಷದಃ—ಕುಳಿತುಕೋ । ತೇ—ನಿನಗೆ । ಅಸ್ಮಿನ್ ಸೋಮೇ—ಈ ಸೋಮದಲ್ಲಿ । ಅವಪಾನಂ ಅಸ್ತು—ನಿನ್ನ ಪಾನಕರ್ಮವು ನೆರವೇರಲಿ.

ಭಾವಾರ್ಥ

ಆಕರ್ಷಕವಾದ ರೂಪವುಳ್ಳವನೂ, ಅನೇಕರಿಂದ ಕರೆಯಲ್ಪಡುವವನೂ ಆದ ಎಲೈ ಇಂದ್ರನೇ, ನಿನಗಭಿಮುಖವಾಗಿ ತಿರುಗಿಸಿದ ನನ್ನ ಮನಸ್ಸು ಖಂಡಿತ ಅಲ್ಲಿಂದ ಹಿಂತಿರುಗುವುದೇ ಇಲ್ಲ. ನಾನು ನಿನ್ನಲ್ಲೇ ನನ್ನ ಇಷ್ಟಾರ್ಥವನ್ನು ಸ್ಥಾಪಿಸುತ್ತೇನೆ. ಈಶ್ವರನಂತೆ ಇಲ್ಲಿ ಕುಳಿತುಕೊ. ಈ ಯಾಗದಲ್ಲಿ ನಿನಗೇ ಈ ಸೋಮಪಾನಕರ್ಮವು ನೆರವೇರಲಿ.

English Translation

Indra, of godly aspect, the invoked of many, my mind intent on you wanders not from your presence : I fix my desire on you : take your seat like a prince upon this sacred grass, and may your drinking be of this Soma.

ಸಂಹಿತಾಪಾಠಃ

ವಿಷೂವೃದಿಂದ್ರೋ ಅಮತೇರುತ ಕ್ಷುಧಃ ಸ ಇದ್ರಾಯೋ ಮಘವಾ ವಸ್ವ ಈಶತೇ ।
ತಸ್ಯೇದಿಮೇ ಪ್ರವಣೇ ಸಪ್ತ ಸಿಂಧವೋ ವಯೋ ವರ್ಧಂತಿ ವೃಷಭಸ್ಯ ಶುಷ್ಮಿಣಃ ॥ ೩ ॥

ಪದಪಾಠಃ

ವಿಷೂಽವೃತ್ । ಇಂದ್ರಃ । ಅಮತೇಃ । ಉತ । ಕ್ಷುಧಃ । ಸಃ । ಇತ್ । ರಾಯಃ । ಮಘಽವಾ । ವಸ್ವಃ । ಈಶತೇ ।
ತಸ್ಯ । ಇತ್ । ಇಮೇ । ಪ್ರವಣೇ । ಸಪ್ತ । ಸಿಂಧವಃ । ವಯಃ । ವರ್ಧಂತಿ । ವೃಷಭಸ್ಯ । ಶುಷ್ಮಿಣಃ ॥

ಸಾಯಣಭಾಷ್ಯಂ

ಇಂದ್ರೋಽಮತೇರಸ್ಮಾಕಂ ದುರ್ಬುದ್ಧೇಃ ಪ್ರಜ್ಞಾಪಹಾರಿಣ್ಯಾಃ ಪಿಪಾಸಾಯಾ ವಾ ವಿಷೂವೃದ್ವಿಷ್ವಗ್ವರ್ತಕೋ ಭವತು । ಉತಾಪಿ ಚ ಕ್ಷುಧೋ ಬುಭುಕ್ಷಾಯಾ ವಿಷೂವೃದ್ಭವತು । ಕಿಂಚ ಸ ಇತ್ ಸ ಏವ ಮಘವಾ ಧನವಾನಿಂದ್ರೋ ವಸ್ವೋ ವಾಸಯಿತೂ ರಾಯೋ ಧನಸ್ಯೇಶತೇ । ಈಷ್ಟೇ । ಕಿಂಚ ವೃಷಭಸ್ಯ ವರ್ಷಿತುಸ್ತಸ್ಯೇದಿಂದ್ರಸ್ಯೈವೇಮೇ ಪ್ರಸಿದ್ಧಾಃ ಸಪ್ತ ಸಪ್ತಸಂಖ್ಯಾಕಾಃ ಸಿಂಧವೋ ನದ್ಯಃ ಪ್ರವಣೇ ದೇಶೇ ವಯೋಽನ್ನಂ ವರ್ಧಂತಿ । ವರ್ಧಯಂತಿ ॥

ಪ್ರತಿಪದಾರ್ಥ

ಇಂದ್ರಃ—ಇಂದ್ರನು । —ಅಮತೇಃ—ನಮ್ಮ ದುರ್ಬುದ್ಧಿಹೇತುವಾದ ದಾಹಕ್ಕೆ । ವಿಷೂವೃತ್—ಪರಿಹಾರಕನಾಗಲಿ । ಉತ—ಮತ್ತು । ಕ್ಷುಧಃ—ಹಸಿವಿಗೂ ಪರಿಹಾರಕನಾಗಲಿ । ಸ ಇತ್ ಮಘವಾ—ಧನವಂತನಾದ ಆ ಇಂದ್ರನೇ । ವಸ್ವಃ—ವಸತಿಕಾರಕವಾದ । ರಾಯಃ—ಧನಕ್ಕೆ । ಈಶತೇ—ಪ್ರಭುವಾಗಿದ್ದಾನೆ । ವೃಷಭಸ್ಯ—ವೃಷ್ಟಿಪ್ರದನಾದ । ತಸ್ಯ ಇತ್—ಅದೇ ಇಂದ್ರನಿಗೆ ಸೇರಿದವೂ । ಸಪ್ತ—ಸಪ್ತಸಂಖ್ಯಾಕವೂ ಆದ । ಇಮೇ ಸಿಂಧವಃ—ಈ ನದಿಗಳು । ಪ್ರವಣೇ—ತಪ್ಪಲುಪ್ರದೇಶಗಳಲ್ಲಿ । ವಯಃ—ಅನ್ನವನ್ನು । ವರ್ಧಂತಿ—ಬೆಳೆಯುತ್ತವೆ.

ಭಾವಾರ್ಥ

ನಮ್ಮ ದುರ್ಬುದ್ಧಿಗೆ ಕಾರಣಗಳಾದ ದಾಹಕ್ಕೂ, ಹಸಿವಿಗೂ ಇಂದ್ರನು ಪರಿಹಾರಕನಾಗಲಿ. ಧನವಂತನಾದ ಆ ಇಂದ್ರನೇ ವಸತಿಕಾರಕವಾದ ಧನಕ್ಕೆ ಪ್ರಭುವಾಗಿದ್ದಾನೆ. ವೃಷ್ಟಿಪ್ರದನಾದ ಅದೇ ಇಂದ್ರನಿಗೆ ಸೇರಿದವೂ, ಸಪ್ತಸಂಖ್ಯಾಕವೂ ಆದ ಈ ನದಿಗಳು ತಪ್ಪಲುಪ್ರದೇಶಗಳಲ್ಲಿ ಅನ್ನವನ್ನು ಬೆಳೆಯುತ್ತವೆ.

English Translation

May Indra be the remover of thirst and hunger, for he, Maghavat, is lord over precious riches; these seven rivers of the powerful showerer, (Indra) flowing down a declivity, augment food.

ಸಂಹಿತಾಪಾಠಃ

ವಯೋ ನ ವೃಕ್ಷಂ ಸುಪಲಾಶಮಾಸದನ್ತ್ಸೋಮಾಸ ಇಂದ್ರಂ ಮಂದಿನಶ್ಚ-
ಮೂಷದಃ ।
ಪ್ರೈಷಾಮನೀಕಂ ಶವಸಾ ದವಿದ್ಯುತದ್ವಿದತ್ಸ್ವ೧ರ್ಮನವೇ ಜ್ಯೋತಿರಾ-
ರ್ಯಂ ॥ ೪ ॥

ಪದಪಾಠಃ

ವಯಃ । ನ । ವೃಕ್ಷಂ । ಸುಽಪಲಾಶಂ । ಆ । ಅಸದನ್ । ಸೋಮಾಸಃ । ಇಂದ್ರಂ । ಮಂದಿನಃ । ಚಮೂ-
ಽಸದಃ ।
ಪ್ರ । ಏಷಾಂ । ಅನೀಕಂ । ಶವಸಾ । ದವಿದ್ಯುತತ್ । ವಿದತ್ । ಸ್ವಃ । ಮನವೇ । ಜ್ಯೋತಿಃ । ಆರ್ಯಂ ॥

ಸಾಯಣಭಾಷ್ಯಂ

ವಯೋ ನ ಯಥಾ ಪಕ್ಷಿಣಃ ಸುಪಲಾಶಂ ಶೋಭನಪರ್ಣಂ ವೃಕ್ಷಮಾಸೀದಂತಿ ತದ್ವನ್ಮಂದಿನೋ ಮದಕರಾಶ್ಚಮೂಷದಶ್ಚಮಸಪಾತ್ರೇಷು ಸ್ಥಾತಾರಃ ಸೋಮಾಸಃ ಸೋಮಾ ಇಂದ್ರಮಾಸದನ್ । ಆಸೀದಂತಿ । ಅಧಿತಿಷ್ಠಂತೀತ್ಯರ್ಥಃ । ಏಷಾಮಿಂದ್ರಮಧಿತಿಷ್ಠತಾಂ ಸೋಮಾನಾಂ ಶವಸಾ ವೇಗೇನ ಯುಕ್ತಮನೀಕಮಗ್ರಂ ಪ್ರ ದವಿದ್ಯುತತ್ । ಪ್ರದ್ಯೋತತೇ । ಕಿಂಚಾಯಮಿಂದ್ರಃ ಸ್ವಃ ಸ್ವಾತ್ಮನಾರ್ಯಂ ಪ್ರೇರ್ಯಂ ಜ್ಯೋತಿರಾದಿತ್ಯಾಖ್ಯಂ ತೇಜೋ ಮನವೇ ಮನುಷ್ಯೇಭ್ಯೋ ವಿದತ್ । ಪ್ರಯಚ್ಛತು ॥

ಪ್ರತಿಪದಾರ್ಥ

ಸುಪಲಾಶಂ—ಉತ್ತಮವಾದ ಎಲೆಗಳುಳ್ಳ । ವೃಕ್ಷಂ—ವೃಕ್ಷವನ್ನಾಶ್ರಯಿಸಿ । ವಯಃ ನ—ಪಕ್ಷಿಗಳು ಕುಳಿತುಕೊಳ್ಳುವಂತೆ । ಮಂದಿನಃ—ಹರ್ಷಕಾರಕವಾದವೂ । ಚಮೂಷದಃ—ಚಮೂಪಾತ್ರೆಯಲ್ಲಿರುವುವೂ ಆದ । ಸೋಮಾಸಃ—ಸೋಮರಸಗಳು । ಇಂದ್ರಂ ಆ ಅಸದನ್—ಇಂದ್ರನನ್ನು ಆಶ್ರಯಿಸಿ ಅವನನ್ನು ಸೇರುತ್ತವೆ । ಏಷಾಂ—ಈ ಸೋಮರಸಗಳ । ಶವಸಾ—ವೇಗದಿಂದ ಕೂಡಿದ । ಅನೀಕಂ—ಮುಖಭಾಗವು । ಪ್ರ ದವಿದ್ಯುತತ್—ಪ್ರಕಾಶಿಸುತ್ತದೆ । ಸ್ವಃ—ತನ್ನಿಂದ । ಆರ್ಯಂ—ಪ್ರೇರಿತವಾದ । ಜ್ಯೋತಿಃ—ತೇಜಸ್ಸನ್ನು । ಮನವೇ—ಮಾನವರಿಗಾಗಿ । ವಿದತ್—ಕೊಡಲಿ.

### ಭಾವಾರ್ಥ

ಪಕ್ಷಿಗಳು ಉತ್ತಮವಾದ ಎಲೆಗಳುಳ್ಳ ವೃಕ್ಷವನ್ನಾಶ್ರಯಿಸಿ ಕುಳಿತುಕೊಳ್ಳುವಂತೆ ಹರ್ಷಕಾರಕವೂ, ಚಮೂಪಾತ್ರೆಯಲ್ಲಿರುವುವೂ ಆದ ಸೋಮರಸಗಳು ಇಂದ್ರನನ್ನು ಆಶ್ರಯಿಸಿ ಅವನನ್ನು ಸೇರುತ್ತವೆ. ವೇಗಯುಕ್ತವಾದ ಈ ಸೋಮರಸಗಳ ಮುಖಭಾವವು ಪ್ರಕಾಶಿಸುತ್ತದೆ. ಇಂದ್ರನು ತನ್ನಿಂದಲೇ ಪ್ರೇರಿತವಾದ ತೇಜಸ್ಸನ್ನು ಮಾನವರಿಗೆ ಹಂಚಿಕೊಡಲಿ.

## English Translation

As birds perch upon the leafy tree, so the exhilarating Soma juices filling the ladles (repair) to (Indra), the summit of them shines through their speed, may Indra spontaneously bestow excellent light upon man.

### ಸಂಹಿತಾಪಾಠಃ

ಕೃತಂ ನ ಶ್ವಘ್ನೀ ವಿ ಚಿನೋತಿ ದೇವನೇ ಸಂವರ್ಗಂ ಯನ್ಮಘವಾ ಸೂರ್ಯಂ
ಜಯತ್ ।
ನ ತತ್ತೇ ಅನ್ಯೋ ಅನು ವೀರ್ಯಂ ಶಕನ್ನ ಪುರಾಣೋ ಮಘವನ್ನೋತ
ನೂತನಃ ॥ ೫ ॥

### ಪದಪಾಠಃ

ಕೃತಂ । ನ । ಶ್ವಽಘ್ನೀ । ವಿ । ಚಿನೋತಿ । ದೇವನೇ । ಸಂಽವರ್ಗಂ । ಯತ್ । ಮಘಽವಾ । ಸೂ-
ರ್ಯಂ । ಜಯತ್ ।
ನ । ತತ್ । ತೇ । ಅನ್ಯಃ । ಅನು । ವೀರ್ಯಂ । ಶಕತ್ । ನ । ಪುರಾಣಃ । ಮಘಽವನ್ । ನ । ಉತ ।
ನೂತನಃ ॥ ೫ ॥

### ಸಾಯಣಭಾಷ್ಯಂ

ಶ್ವಘ್ನೀ ಪರಸ್ವಾನಾಂ ಹಂತಾ ಕಿತವೋ ದೇವನೇ ದ್ಯೂತೇ ಕೃತಂ ನ ಯಥಾ ಕೃತಂ ವಿ ಚಿನೋತಿ ತದ್ವದಿಂದ್ರಃ ಸೂರ್ಯಂ ಮೃಗಯತೇ । ಕದೇತ್ಯತ ಆಹ । ಯದ್ಯದಾ ಮಘವಾ ಧನವಾನಿಂದ್ರಃ ಸಂವರ್ಗಂ ಸಮುಗ್ರ್ಯಷ್ಟೇರ್ವರ್ಜಯಿತಾರಂ ಸೂರ್ಯಮಾದಿತ್ಯಂ ಜಯತ್ ತದೀಯರಸಾಪಹರಣದ್ವಾರೇಣ ಜಯತಿ । ಅಥ ಪ್ರತ್ಯಕ್ಷಸ್ತುತಿಃ । ಹೇ ಮಘವನ್ಧನವನ್ನಿಂದ್ರ ತೇ ತವ ತತ್ಸೂರ್ಯಜಯಲಕ್ಷಣಂ ವೀರ್ಯಂ ವೀರತ್ವಮನ್ಯಸ್ತ್ವತ್ತೋಽನ್ಯೋ ಭವಿಷ್ಯತ್ಕಾಲೀನಃ ಪುಮಾನನ್ವನುಕರ್ತುಂ ನ

ಶಕತ್ । ನ ಶಕ್ನೋತಿ । ಪುರಾಣಃ ಪೂರ್ವೋಽಪಿ ತ್ವದ್ವೀರ್ಯಮನುಕರ್ತುಂ ನ ಶಕತ್ । ನ ಶಕ್ನೋತಿ । ಉತಾಪಿ ಚ ನೂತನೋ ವರ್ತಮಾನಕಾಲೀನೋಽಪಿ ತ್ವದೀಯಂ ವೀರ್ಯಮನುಕರ್ತುಂ ನ ಶಕ್ನೋತಿ ॥

### ಪ್ರತಿಪದಾರ್ಥ

ಶ್ವಘ್ನೀ — ಜೂಜುಗಾರನು । ದೇವನೇ — ದ್ಯೂತದಲ್ಲಿ । ಕೃತಂ — ಸಮಯವನ್ನು ಕಾದು । ವಿಚಿನೋತಿ ನ — ತನ್ನ ಪ್ರತಿಪಕ್ಷಿಯನ್ನು ಆರಿಸಿ ಸೋಲಿಸುವಂತೆ । ಯತ್ — ಯಾವಾಗ । ಮಘವಾ — ಇಂದ್ರನು । ಸಂವರ್ಗಂ — ವೃಷ್ಟಿಯನ್ನು ಸುರಿಸುವ । ಸೂರ್ಯಂ — ಸೂರ್ಯನನ್ನು ಆರಿಸುವನೋ ಆಗ । ಜಯತ್ — ಅವನ ರಸವನ್ನು ಅಪಹರಿಸುವ ಮೂಲಕ ಜಯಿಸುತ್ತಾನೆ । ಮಘವನ್ — ಎಲೈ ಇಂದ್ರನೇ । ತೇ — ನಿನ್ನ । ತತ್ — ಪ್ರಸಿದ್ಧವಾದ । ವೀರ್ಯಂ — ಶೌರ್ಯವನ್ನು । ಅನ್ಯಃ — ಬೇರೆ ಯಾರೂ । ಅನು — ಅನುಕರಿಸಲು । ನ ಶಕತ್ — ಶಕ್ತನಾಗುವುದಿಲ್ಲ । ಪುರಾಣಃ ನ — ಹಿಂದಿನವನೂ ಶಕ್ತನಲ್ಲ । ಉತ — ಮತ್ತು । ನೂತನಃ — ಈಗಿನವನೂ ಶಕ್ತನಲ್ಲ.

### ಭಾವಾರ್ಥ

ಜೂಜುಗಾರನು ದ್ಯೂತದಲ್ಲಿ ಸಮಯವನ್ನು ಕಾದು ತನ್ನ ಪ್ರತಿಪಕ್ಷಿಯನ್ನು ಆರಿಸಿ ಸೋಲಿಸುವಂತೆ ಯಾವಾಗ ಇಂದ್ರನು ವೃಷ್ಟಿಯನ್ನು ಸುರಿಸುವ ಸೂರ್ಯನನ್ನು ಆರಿಸುವನೋ ಆಗ ಅವನ ರಸವನ್ನು ಅಪಹರಿಸುವುದರ ಮೂಲಕ ಅವನನ್ನು ಜಯಿಸುತ್ತಾನೆ. ಎಲೈ ಇಂದ್ರನೇ, ನಿನ್ನ ಪ್ರಸಿದ್ಧವಾದ ಶೌರ್ಯವನ್ನು ಹಿಂದಿನವರಾಗಲಿ ಅಥವಾ ಈಗಿನವರಾಗಲಿ ಯಾರೂ ಅನುಕರಿಸಲು ಸಾಧ್ಯವಿಲ್ಲ.

## English Translation

As a gambler at play selects his adversary, so does Maghavat when he overcomes the rain-bestowing sun : no one, Maghavat, ancient or modern is able to imitate this your vigour.

### ವಿಶೇಷವಿಷಯಗಳು

ಶೌರ್ಯ ಅಥವಾ ಚೌರ್ಯವನ್ನು ತೋರಿಸುವ ಸನ್ನಿವೇಶಗಳಲ್ಲಿ ಶ್ವಘ್ನಿಯಂತೆ ಕ್ರೌರ್ಯವುಳ್ಳವನು ಅಥವಾ ಮೋಸ ಮಾಡುವವನು ಎಂಬ ಉಪಮಾನವು ಅನೇಕ ಸಂದರ್ಭಗಳಲ್ಲಿ ತೋರಿಸಲ್ಪಟ್ಟಿದೆ. ಸಾಯಣರು ಈ ಪದಕ್ಕೆ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಅರ್ಥವನ್ನು ತಿಳಿಸಿದ್ದಾರೆ. ಇದು ಶ್ವನ್ + ಘ್ನ ಎಂಬ ಎರಡು ಪದಗಳಿಂದ ಕೂಡಿದುದಾಗಿದೆ, ಘ್ನ ಎಂಬುದು ಹನ್ ಧಾತುವಿನಿಂದ ನಿಷ್ಪನ್ನವಾಗಿರುತ್ತದೆ. ಶ್ವಾನಂ ಹಂತಿ ನಾಯಿಯನ್ನು ಕೊಲ್ಲುತ್ತಾನೆ ಎಂದಾಗಲಿ ಅಥವಾ ಶುನಾ (ಸಹ) ಹಂತಿ ನಾಯಿಯೊಡಗೂಡಿ ಕೊಲ್ಲುತ್ತಾನೆ ಎಂದಾಗಲೀ ಈ ಪದದ ನಿರ್ವಚನವನ್ನು ತೋರಿಸಬಹುದು. ಇವುಗಳಲ್ಲಿ ಮೊದಲು ಮೂರುಸಲದ ಪ್ರಯೋಗಕಾಲಗಳಲ್ಲೂ ಸಹ ಸಾಯಣರು ಈ ಪದಕ್ಕೆ ವ್ಯಾಧ ಅಥವಾ ಮೃಗಯು ಎಂಬ ಅರ್ಥವನ್ನು ತೋರಿಸಿದ್ದಾರೆ.

ಪುನಃಪುನರ್ಜಾಯಮಾನಾ ಪುರಾಣೀ ಸಮಾನಂ ವರ್ಣಮಭಿ ಶುಂಭಮಾನಾ ।
ಶ್ವಘ್ನೀವ ಕೃತ್ನುರ್ವಿಜ ಆಮಿನಾನಾ ಮರ್ತಸ್ಯ ದೇವೀ ಜರಯಂತ್ಯಾಯುಃ ॥
(ಋ. ಸಂ ೧-೯೨-೧೦)

ಉತ ಪ್ರಹಾಮತಿದೀವ್ಯಾ ಜಯಾತಿ ಕೃತಂ ಯಚ್ಛ್ವಘ್ನೀ ವಿಚಿನೋತಿ ಕಾಲೇ ।
ಯೋ ದೇವಕಾಮೋ ನ ಧನಾ ರುಣದ್ಧಿ ಸಮಿತ್ತಂ ರಾಯಾ ಸೃಜತಿ ಸ್ವಧಾವಾನ್ ॥
(ಋ. ಸಂ. ೧೦-೪೩-೯)

ಇತ್ಯಾದಿ ವಾಕ್ಯಗಳಲ್ಲೂ ಸಹ ಇಂದ್ರನ ವ್ಯವಹಾರಗಳನ್ನು ದ್ಯೂತಕಾರನ ಅನ್ವೇಷಣಾದಿ ವ್ಯವಹಾರಗಳಿಗೆ ಹೋಲಿಸಿದೆ. ಇಲ್ಲಿ ಉಪಮಾನೋಪಮೇಯಗಳು ಸಮಂಜಸವಾಗಿರುತ್ತವೆ.

ಸಂಹಿತಾಪಾಠಃ

ವಿಶಂವಿಶಂ ಮಘವಾ ಪರ್ಯಶಾಯತ ಜನಾನಾಂ ಧೇನಾ ಅವಚಾಕಶದ್ವೃಷಾ
ಯಸ್ಯಾಹ ಶಕ್ರಃ ಸವನೇಷು ರಣ್ಯತಿ ಸ ತೀವ್ರೈಃ ಸೋಮೈಃ ಸಹತೇ ಪೃತನ್ಯತಃ ॥ ೬ ॥

ಪದಪಾಠಃ

ವಿಶಂಽವಿಶಂ । ಮಘಽವಾ । ಪರಿ । ಅಶಾಯತ । ಜನಾನಾಂ । ಧೇನಾಃ । ಅವಽಚಾಕಶತ್ । ವೃಷಾ ।
ಯಸ್ಯ । ಅಹ । ಶಕ್ರಃ । ಸವನೇಷು । ರಣ್ಯತಿ । ಸಃ । ತೀವ್ರೈಃ । ಸೋಮೈಃ । ಸಹತೇ । ಪೃತನ್ಯತಃ ॥

ಸಾಯಣಭಾಷ್ಯಂ

ವೃಷಾ ಕಾಮಾನಾಂ ವರ್ಷಿತಾ ಮಘವಾ ಧನವಾನಿಂದ್ರೋ ವಿಶಂವಿಶಂ ಸರ್ವಾನ್ಮನುಷ್ಯಾನ್ಪರ್ಯಶಾಯತ । ಪರಿಶೇತೇ । ಕಿಂಚ ಜನಾನಾಂ ಸ್ತೋತೃಜನಾನಾಂ ಧೇನಾಃ ಸ್ತುತೀರವಚಾಕಶತ್ । ಅಭಿಪಶ್ಯತಿ । ಕಿಂಚ ಶಕ್ರ ಇಂದ್ರೋ ಯಸ್ಯಾಹ ಯಸ್ಯೈವ ಯಜಮಾನಸ್ಯ ಸವನೇಷು ರಣ್ಯತಿ ರಮತೇ ಸ ಯಜಮಾನಸ್ತೀವ್ರೈಸ್ತೀವ್ರಕರೈಃ ಪ್ರದೀಯಮಾನೈಃ ಸೋಮೈಃ ಪೃತನ್ಯತಃ ಸಂಗ್ರಾಮಮಿಚ್ಛತಃ ಶತ್ರೂನ್ ಸಹತೇ । ಅಭಿಭವತಿ ॥

ಪ್ರತಿಪದಾರ್ಥ

ವೃಷಾ—ಇಷ್ಟಾರ್ಥಪ್ರದನಾದವನೂ । ಮಘವಾ—ಧನವಂತನೂ ಆದ ಇಂದ್ರನು । ವಿಶಂವಿಶಂ—ಪ್ರತಿಯೊಬ್ಬ ಮಾನವನನ್ನೂ । ಪರ್ಯಶಾಯತ—ಪ್ರವೇಶಿಸುತ್ತಾನೆ । ಜನಾನಾಂ—ಸ್ತುತಿಕರ್ತರ । ಧೇನಾಃ—ಸ್ತುತಿಗಳನ್ನು । ಅವಚಾಕಶತ್—ಸೂಕ್ಷ್ಮವಾಗಿ ಪರಿಶೀಲಿಸುತ್ತಾನೆ । ಶಕ್ರಃ—ಇಂದ್ರನು । ಯಸ್ಯಾಹ—ಯಾವ ಯಜಮಾನನ । ಸವನೇಷು—ಯಜ್ಞದಲ್ಲಿ । ರಣ್ಯತಿ—ಹರ್ಷಿಸುವನೋ । ಸಃ—ಆ ಯಜಮಾನನು । ತೀವ್ರೈಃ—ತೀಕ್ಷ್ಣ ಶಕ್ತಿಯುಳ್ಳ । ಸೋಮೈಃ—ಸೋಮಗಳಿಂದ । ಪೃತನ್ಯತಃ—ಶತ್ರುಗಳನ್ನು । ಸಹತೇ—ಸೋಲಿಸುತ್ತಾನೆ.

ಭಾವಾರ್ಥ

ಇಷ್ಟಾರ್ಥಪ್ರದನೂ, ಧನವಂತನೂ ಆದ ಇಂದ್ರನು ಪ್ರತಿಯೊಬ್ಬ ಮಾನವನ ಹೃದಯವನ್ನು ಪ್ರವೇಶಿಸುತ್ತಾನೆ. ಸ್ತುತಿಕರ್ತರ ಸ್ತುತಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುತ್ತಾನೆ. ಯಾವ ಯಜಮಾನನ ಯಜ್ಞಗಳಲ್ಲಿ ಇಂದ್ರನು ಹರ್ಷಿಸುವನೋ ಆ ಯಜಮಾನನು ತೀಕ್ಷ್ಣಶಕ್ತಿಯುಳ್ಳ ಸೋಮಗಳ ಪಾನದಿಂದ ಶತ್ರುಗಳನ್ನು ಸೋಲಿಸುತ್ತಾನೆ.

English Translation

Maghavat, the showerer (of benefits), encompasses all people : he contemplates the praises of mankind : the man in whose sacrifice Shakra delights, overcomes (foes) wishing to fight by means of his pungent Soma libations.

ಸಂಹಿತಾಪಾಠಃ

ಆಪೋ ನ ಸಿಂಧುಮಭಿ ಯತ್ಸಮಕ್ಷರನ್ಸೋಮಾಸ ಇಂದ್ರಂ ಕುಲ್ಯಾ ಇವ ಹ್ರದಂ ।
ವರ್ಧಂತಿ ವಿಪ್ರಾ ಮಹೋ ಅಸ್ಯ ಸಾದನೇ ಯವಂ ನ ವೃಷ್ಟಿರ್ದಿವ್ಯೇನ ದಾನುನಾ ॥ ೭ ॥

ಪದಪಾಠಃ

ಆಪಃ । ನ । ಸಿಂಧುಂ । ಅಭಿ । ಯತ್ । ಸಂಽಅಕ್ಷರನ್ । ಸೋಮಾಸಃ । ಇಂದ್ರಂ । ಕುಲ್ಯಾಃಽಇವ । ಹ್ರದಂ ।
ವರ್ಧಂತಿ । ವಿಪ್ರಾಃ । ಮಹಃ । ಅಸ್ಯ । ಸದನೇ । ಯವಂ । ನ । ವೃಷ್ಟಿಃ । ದಿವ್ಯೇನ । ದಾನುನಾ ॥ ೭ ॥

ಸಾಯಣಭಾಷ್ಯಂ

ಯದ್ಯದಾ ಸೋಮಾಸಃ ಸೋಮಾ ಇಂದ್ರಮಭಿ ಸಮಕ್ಷರನ್ ಅಭಿಕ್ಷರಂತಿ । ಅಭಿಗಚ್ಛಂತೀತ್ಯರ್ಥಃ । ತತ್ರ ದೃಷ್ಟಾಂತೌ ದರ್ಶಯತಿ । ಆಪೋ ನ ಯಥಾಪಃ ಸಿಂಧುಂ ಸಮುದ್ರಮಭಿಸಂಕ್ಷರಂತಿ । ಕುಲ್ಯಾ ಇವ ಯಥಾ ಚ ಕುಲ್ಯಾ ಹ್ರದಮಭಿಸಂಕ್ಷರಂತಿ ತದ್ವದಿತ್ಯರ್ಥಃ । ತದಾನೀಮಸ್ಯೇಂದ್ರಸ್ಯ ಮಹೋ ಮಹತ್ತ್ವಂ ಸದನೇ ಯಜ್ಞಗೃಹೇ ವಿಪ್ರಾ ಮೇಧಾವಿನೋ ವರ್ಧಂತಿ । ತತ್ರ ದೃಷ್ಟಾಂತಮಾಹ । ಯವಂ ನ ಯಥಾ ಯವಂ ಯವಸಸ್ಯಂ ವೃಷ್ಟಿಃ ॥ ಕರ್ತರಿ ಕೃತ್ ॥ ದಕಾರಾ ಪಕಾರಸ್ಯೋ ದಿವ್ಯೇನ ದಿವಿ ಭವೇನ ದಾನುನಾ ದಾನೇನ ವರ್ಷಣೇನ ವರ್ಧಯತಿ ತದ್ವದಿತ್ಯರ್ಥಃ ॥

### ಪ್ರತಿಪದಾರ್ಥ

ಆಪಃ—ಉದಕಗಳು । ಸಿಂಧುಂ ನ—ನದಿಯನ್ನು ಸೇರುವಂತೆಯೂ । ಕುಲ್ಯಾಃ—ನದಿಗಳು (ಕಾಲುವೆಗಳು) ಹ್ರದಂ ಇವ—ಸಾಗರಗಳನ್ನು ಸೇರುವಂತೆಯೂ । ಯತ್—ಯಾವಾಗ । ಸೋಮಾಸಃ—ಸೋಮರಸಗಳು । ಇಂದ್ರಂ ಅಭಿ—ಇಂದ್ರನಿಗಭಿಮುಖವಾಗಿ । ಸಮಕ್ಷರನ್—ಪ್ರವಹಿಸುವುವೋ ಆಗ । ದಿವ್ಯೇನ—ದ್ಯುಲೋಕೋತ್ಪನ್ನವಾದ । ದಾನುನಾ—ವೃಷ್ಟಿಯಿಂದ । ವೃಷ್ಟಿಃ—ಮಳೆಯು । ಯವಂ ನ—ಯವಧಾನ್ಯವನ್ನು ಬೆಳೆಸುವಂತೆ । ವಿಪ್ರಾಃ—ಮೇಧಾವಿಗಳು । ಅಸ್ಯ—ಈ ಇಂದ್ರನ । ಮಹಃ—ಮಹತ್ತ್ವವನ್ನು । ಸದನೇ—ಯಜ್ಞಗೃಹದಲ್ಲಿ । ವರ್ಧಂತಿ—ಬೆಳೆಸುತ್ತಾರೆ.

### ಭಾವಾರ್ಥ

ಉದಕಗಳು ನದಿಯನ್ನು ಸೇರುವಂತೆಯೂ, ಕಾಲುವೆಗಳು ಸಾಗರಗಳನ್ನು ಸೇರುವಂತೆಯೂ ಯಾವಾಗ ಸೋಮರಸಗಳು ಇಂದ್ರನಿಗಭಿಮುಖವಾಗಿ ಪ್ರವಹಿಸುವುವೋ ಆಗ ದ್ಯುಲೋಕೋತ್ಪನ್ನವಾದ ವೃಷ್ಟಿಯಿಂದ ಮಳೆಯು ಯವಧಾನ್ಯವನ್ನು ಪುಷ್ಟಿಗೊಳಿಸುವಂತೆ ಮೇಧಾವಿಗಳಾದ ಸ್ತುತಿಕರ್ತರು ಇಂದ್ರನ ಮಹತ್ವವನ್ನು ಯಜ್ಞಗೃಹದಲ್ಲಿ ಬೆಳೆಸುತ್ತಾರೆ.

### English Translation

When the Soma juices flow towards Indra, as waters to the sea, as rivers to a lake, then the pious worshippers augment his greatness in the (sacrificial) abode, as the rain by its heavenly gift, (augments) the barley.

### ಸಂಹಿತಾಪಾಠಃ

ವೃಷಾ ನ ಕ್ರುದ್ಧಃ ಪತಯದ್ರಜಃಸ್ವಾ ಯೋ ಅರ್ಯಪತ್ನೀರಕೃಣೋದಿಮಾ ಅಪಃ ।

ಸ ಸುನ್ವತೇ ಮಘವಾ ಜೀರದಾನವೇಽವಿಂದಜ್ಜ್ಯೋತಿರ್ಮನವೇ ಹವಿಷ್ಮತೇ॥

### ಪದಪಾಠಃ

ವೃಷಾ । ನ । ಕ್ರುದ್ಧಃ । ಪತಯತ್ । ರಜಃಽಸು । ಆ । ಯಃ । ಅರ್ಯಽಪತ್ನೀಃ । ಅಕೃಣೋತ್ । ಇಮಾಃ । ಅಪಃ ।

ಸಃ । ಸುನ್ವತೇ । ಮಘಽವಾ । ಜೀರಽದಾನವೇ । ಅವಿಂದತ್ । ಜ್ಯೋತಿಃ । ಮನವೇ । ಹವಿಷ್ಮತೇ ॥೮॥

ಸಾಯಣಭಾಷ್ಯಂ

ರಜಃಸು ಲೋಕೇಷು ವೃಷಾ ನ ಯಥಾ ವೃಷಭಃ ಕ್ರುದ್ಧಃ ಸನ್ ಪ್ರತಿದ್ವಂದ್ವಿವಧಾಯ ಪತ-ಯೇದ್ಗಚ್ಛೇತಿ ತದ್ವದ್ಯ ಇಂದ್ರಃ ಕ್ರುದ್ಧಃ ಸನ್ಮೇಘವಧಾಯ ಪತಯತಿ ಹತ್ವಾ ಚ ಮೇಘಮರ್ಯಃಪತ್ನೀಃ ಸರ್ವಸ್ಯ ಜಗತಃ ಸ್ವಾಮಿನ ಇಂದ್ರಸ್ಯ ಪಾಲಯಿತವ್ಯಾ ಇಮಾಃ ಪ್ರಸಿದ್ಧಾ ಅಪೋ ವೃಷ್ಟ್ಯುದಕಾನ್ಯ-ಕೃಣೋತ್ ಅಕೃಣೋತಿ ಅಸ್ಮದಭಿಮುಖಂ ಕರೋತಿ ಸ ಮಘವಾ ಧನವಾನಿಂದ್ರಃ ಸುಸ್ವತೇ ಸೋಮಾ-ಭಿಷವಂ ಕುರ್ವತೇ ಪೀರದಾನವೇ ಕ್ಷಿಪ್ರದಾನಾಯ ಹವಿಷ್ಮತೇ ಮನವೇ ಮನುಷ್ಯಾಯ । ಯಜಮಾ-ನಾಯೇತ್ಯರ್ಥಃ । ಜ್ಯೋತಿಸ್ತೇಜೋಽವಿಂದತ್ । ಪ್ರಾಯಚ್ಛತ್ ॥

ಪ್ರತಿಪದಾರ್ಥ

ರಜಃಸು—ಲೋಕಗಳಲ್ಲಿ । ಕ್ರುದ್ಧಃ—ಕೋಪಗೊಂಡ । ವೃಷಾ—ಗೂಳಿಯು । ಪತಯತ್ ನ—ಮುನ್ನುಗ್ಗಿ ಎದುರುಬೀಳುವಂತೆ । ಯಃ—ಕ್ರುದ್ಧನಾದ ಇಂದ್ರನು ಮೇಘಗಳನ್ನೆದುರಿಸಿ ಮುನ್ನುಗ್ಗಿದಾಗ । ಅರ್ಯ-ಪತ್ನೀಃ—ಜಗತ್ತಿಗೆ ಪಾಲಕನಾದ ಇಂದ್ರನ ಪೋಷಕಗಳಾದ । ಇಮಾ ಅಪಃ—ಈ ವೃಷ್ಟ್ಯುದಕಗಳು । ಅಕೃಣೋತ್—ನಮಗಭಿಮುಖವಾಗಿ ಬೀಳುತ್ತವೆ । ಸ ಮಘವಾ—ಅದೇ ಇಂದ್ರನು । ಸುಸ್ವತೇ—ಸೋಮವನ್ನು ಹಿಂಡುವವನೂ । ಪೀರದಾನವೇ—ಕ್ಷಿಪ್ರವಾಗಿ ಹವಿರ್ದಾನಮಾಡುವವನೂ । ಹವಿಷ್ಮತೇ—ಹವಿಯುಕ್ತನೂ ಆದ । ಮನವೇ—ಯಜಮಾನನಿಗೆ । ಜ್ಯೋತಿಃ—ತೇಜಸ್ಸನ್ನು । ಅವಿಂದತ್—ಒದಗಿಸುತ್ತಾನೆ.

ಭಾವಾರ್ಥ

ಲೋಕದಲ್ಲಿ ಕೋಪಗೊಂಡ ಗೂಳಿಯು ಮುನ್ನುಗ್ಗಿ ಎದುರುಬೀಳುವಂತೆ ಕ್ರುದ್ಧನಾದ ಇಂದ್ರನು ಮೇಘಗಳನ್ನೆದುರಿಸಿ ಮುನ್ನುಗ್ಗಿದಾಗ ಜಗತ್ತಿಗೆ ಪಾಲಕನಾದ ಇಂದ್ರನ ಪೋಷಕಗಳಾದ ಈ ವೃಷ್ಟ್ಯುದಕಗಳು ನಮಗಭಿಮುಖವಾಗಿ ಬೀಳುತ್ತವೆ. ಅದೇ ಇಂದ್ರನು ಸೋಮವನ್ನು ಹಿಂಡುವವನೂ, ಕ್ಷಿಪ್ರವಾಗಿ ಹವಿರ್ದಾನಮಾಡುವವನೂ ಆದ ಯಜಮಾನನಿಗೆ ತೇಜಸ್ಸನ್ನು ಒದಗಿಸುತ್ತಾನೆ.

## English Translation

As in the world an angry bull rushes (upon another), so does Indra, who directs (towards us) the waters, the brides of the lord (of earth): when (the Soma) is effused Maghavat bestows light upon the man, who gives promptly, who offers oblations.

ಸಂಹಿತಾಪಾಠಃ

ಉಜ್ಜಾಯತಾಂ ಪರಶುರ್ಜ್ಯೋತಿಷಾ ಸಹ ಭೂಯಾ ಋತಸ್ಯ ಸುದುಘಾ
ಪುರಾಣವತ್ ।

ವಿ ರೋಚತಾಮರುಷೋ ಭಾನುನಾ ಶುಚಿಃ ಸ್ವರ್ಣ ಶುಕ್ರಂ ಶುಶುಚೀತ ಸತ್ಪತಿಃ || ೯ ||

ಪದಪಾಠಃ

ಉತ್ | ಜಾಯತಾಂ | ಪರಶುಃ | ಜ್ಯೋತಿಷಾ | ಸಹ | ಭೂಯಾಃ | ಋತಸ್ಯ | ಸುಽದುಘಾ | ಪುರಾಣ-ಽವತ್ |
ವಿ | ರೋಚತಾಂ | ಅರುಷಃ | ಭಾನುನಾ | ಶುಚಿಃ | ಸ್ವಃ | ನ | ಶುಕ್ರಂ | ಶುಶುಚೀತ | ಸತ್ಽಪತಿಃ ||

ಸಾಯಣಭಾಷ್ಯಂ

ಪರಶುರಿಂದ್ರಸ್ಯ ವಜ್ರೋ ಜ್ಯೋತಿಷಾ ತೇಜಸಾ ಸಹೋಜ್ಜಾಯತಾಂ | ಅಸ್ಮಚ್ಛತ್ರುವಧೇ ಮೇಘವಧೇ ಚ ವ್ಯಾಪ್ರಿಯತಾಮಿತ್ಯರ್ಥಃ | ಕಿಂಚರ್ತಸ್ಯ ಸತ್ಯಸ್ಯ ಸುದುಘಾ ಮಾಧ್ಯಮಿಕಾ ವಾಕ್ ಪುರಾಣವತ್ ಪ್ರತ್ನವತ್ಕಾಲೇ ಭೂಯಾಃ | ಭೂಯಾತ್ || ಪುರುಷವ್ಯತ್ಯಯಃ || ಕಿಂಚೇಂದ್ರೋಽರುಷ ಆರೋಚಮಾನೋ ಭಾನುನಾ ದೀಪ್ತ್ಯಾ ಶುಚಿರ್ಜ್ವಲನ್ ವಿ ರೋಚತಾಂ | ಪ್ರಕಾಶತಾಂ | ಕಿಂಚ ಸತ್ಪತಿಃ ಸತಾಂ ಪತಿರಿಂದ್ರಃ ಸ್ವರ್ನಾದಿತ್ಯ ಇವ ಶುಕ್ರಂ ಜ್ವಲಚ್ಛುಶುಚೀತ | ಅತ್ಯಂತಂ ದೀಪ್ಯತಾಂ ||

ಪ್ರತಿಪದಾರ್ಥ

ಪರಶುಃ—ಇಂದ್ರನ ವಜ್ರಾಯುಧವು | ಜ್ಯೋತಿಷಾ ಸಹ—ತೇಜಸ್ಸಿನೊಡನೆ | ಉಜ್ಜಾಯತಾಂ—ಒಟ್ಟಿಗೆ ಆವಿರ್ಭೂತವಾಗಲಿ | ಋತಸ್ಯ—ಸತ್ಯಸಂಬಂಧಿಯಾದ | ಸುದುಘಾ—ಮಾಧ್ಯಮಿಕಾ ವಾಕ್ಕು | ಪುರಾಣವತ್—ಹಿಂದಿನಂತೆಯೇ | ಭೂಯಾಃ—ಪ್ರಕಾಶಿತವಾಗಲಿ | ಅರುಷಃ—ಆಕರ್ಷಕವಾದ ರೂಪವುಳ್ಳ ಇಂದ್ರನು | ಭಾನುನಾ—ತನ್ನ ತೇಜಸ್ಸಿನಿಂದ | ಶುಚಿಃ—ಶುಭ್ರನಾಗಿ | ವಿ ರೋಚತಾಂ—ಪ್ರಕಾಶಿಸಲಿ | ಸತ್ಪತಿಃ—ಸಜ್ಜನರ ಪಾಲಕನಾದ ಇಂದ್ರನು | ಸ್ವರ್ಣ-ಆದಿತ್ಯನಂತೆ | ಶುಕ್ರಂ-ಶುಭ್ರನಾಗಿ | ಶುಶುಚೀತ-ಅತಿಶಯವಾಗಿ ಪ್ರಕಾಶಿಸಲಿ.

ಭಾವಾರ್ಥ

ಇಂದ್ರನ ವಜ್ರಾಯುಧವು ತೇಜಸ್ಸಿನೊಡಗೂಡಿ ಆವಿರ್ಭೂತವಾಗಲಿ. ಸತ್ಯಸಂಬಂಧಿಯಾದ ಮಾಧ್ಯಮಿಕಾ ವಾಕ್ಕು ಹಿಂದಿನಂತೆಯೇ ಪ್ರಕಾಶಿತವಾಗಲಿ. ಆಕರ್ಷಕವಾದ ರೂಪವುಳ್ಳ ಇಂದ್ರನು ತನ್ನ ತೇಜಸ್ಸಿನಿಂದ ಶುಭ್ರನಾಗಿ ಪ್ರಕಾಶಿಸಲಿ. ಸಜ್ಜನರ ಪಾಲಕನಾದ ಇಂದ್ರನು ಆದಿತ್ಯನಂತೆ ಶುಭ್ರನಾಗಿ ಅತಿಶಯವಾಗಿ ಪ್ರಕಾಶಿಸಲಿ.

English Translation

Let the axe (of Indra) be put forth together with light: may the easily milked cow of truth be (manifested) as of old; may the pure and radiant Indra shine with splendour; may the lord of the virtous shine brightly like the sun.

ಸಂಹಿತಾಪಾಠಃ

ಗೋಭಿಷ್ಟರೇಮಾಮತಿಂ ದುರೇವಾಂ ಯವೇನ ಕ್ಷುಧಂ ಪುರುಹೂತ ವಿಶ್ವಾಂ ।
ವಯಂ ರಾಜಭಿಃ ಪ್ರಥಮಾ ಧನಾನ್ಯಸ್ಮಾಕೇನ ವೃಜನೇನಾ ಜಯೇಮ ॥೧೦॥

ಪದಪಾಠಃ

ಗೋಭಿಃ । ತರೇಮ । ಅಮತಿಂ । ದುಃಽಏವಾಂ । ಯವೇನ । ಕ್ಷುಧಂ । ಪುರುಽಹೂತ । ವಿಶ್ವಾಂ ।
ವಯಂ । ರಾಜಽಭಿಃ । ಪ್ರಥಮಾಃ । ಧನಾನಿ । ಅಸ್ಮಾಕೇನ । ವೃಜನೇನ । ಜಯೇಮ ॥ ೧೦ ॥

ಸಾಯಣಭಾಷ್ಯಂ

ಹೇ ಪುರುಹೂತ ಬಹುಭಿರಾಹೂತೇಂದ್ರ ತವ ಪ್ರಸಾದಾದ್ದುರೇವಾಂ ದುಷ್ಟಾಗಮನಾಂ ದಾರಿದ್ರ್ಯಾದಾಗತಾಮಮತಿಂ ದುರ್ಬುದ್ಧಿಂ ವಯಂ ಘೋಷೇಯಾಃ ಸುಹಸ್ತ್ಯಃ ಗೋಭಿಃ ಪಶುಭಿಸ್ತರೇಮ । ನಿಸ್ತರೇಮ । ಕಿಂಚ ಯವೇನ ವಿಶ್ವಾಂ ವ್ಯಾಪ್ತಾಂ ಕ್ಷುಧಂ ತರೇಮ । ಕಿಂಚ ಪ್ರಥಮಾ ಮುಖ್ಯಾನಿ ಧನಾನಿ ರಾಜಭಿರ್ಧನಾನಾಮೀಶ್ವರೈಃ । ಲಭೇಮಹೀತಿ ಶೇಷಃ । ಯದ್ವಾ । ಪ್ರಥಮಾ ವಯಮಿತಿ ಸಂಬಂಧಃ । ಕಿಂಚಾಸ್ಮಾಕೇನಾಸ್ಮದೀಯೇನ ವೃಜನೇನ ಬಲೇನ ಜಯೇಮ । ಶತ್ರೂನಿತಿ ಶೇಷಃ ॥

ಪ್ರತಿಪದಾರ್ಥ

ಪುರುಹೂತ—ಅನೇಕರಿಂದ ಕರೆಯಲ್ಪಡುವ ಎಲೈ ಇಂದ್ರನೇ । ದುರೇವಾಂ—ದಾರಿದ್ರ್ಯದಿಂದ ಪ್ರಾಪ್ತವಾದ । ಅಮತಿಂ—ದುರ್ಬುದ್ಧಿಯನ್ನು । ವಯಂ—ನಾವು । ಗೋಭಿಃ—ನಮ್ಮ ಪಶುಸಂಪತ್ತಿನ ಸಹಾಯದಿಂದ । ತರೇಮ—ದಾಟುವಂತಾಗಲಿ । ಯವೇನ—ಯವಧಾನ್ಯದ ಸಹಾಯದಿಂದ । ವಿಶ್ವಾಂ—ನಮ್ಮನ್ನಾವರಿಸಿರುವ । ಕ್ಷುಧಂ—ಹಸಿವನ್ನು ದಾಟುವಂತಾಗಲಿ । ಪ್ರಥಮಾಃ—ಅತಿ ಮುಖ್ಯವಾದ । ಧನಾನಿ—ಧನಗಳನ್ನು । ರಾಜಭಿಃ—ಧನದ ಪ್ರಭುಗಳಿಂದ (ನಾವು ಹೊಂದುವಂತಾಗಲಿ) ಅಸ್ಮಾಕೇನ—ನಮ್ಮ । ವೃಜನೇನ—ಶಕ್ತಿಯಿಂದ । ಜಯೇಮ—ಶತ್ರುಗಳನ್ನು ಜಯಿಸುವಂತಾಗಲಿ.

ಭಾವಾರ್ಥ

ಪುರುಹೂತನಾದ ಎಲೈ ಇಂದ್ರನೇ, ದ್ರಾರಿದ್ರ್ಯದಿಂದ ಪ್ರಾಪ್ತವಾದ ದುರ್ಬುದ್ಧಿಯನ್ನು ನಾವು ನಮ್ಮ ಪಶುಸಂಪತ್ತಿನಿಂದ ದಾಟುವಂತಾಗಲಿ. ಯವಧಾನ್ಯದ ಸಹಾಯದಿಂದ ನಮ್ಮನ್ನಾವರಿಸುವ ಹಸಿವನ್ನು ನಾಶಪಡಿಸುವಂತಾಗಲಿ. ಧನಿಕರಿಂದ ನಾವು ಮುಖ್ಯವಾದ ಧನಗಳನ್ನು-ಹೊಂದುವಂತಾಗಲಿ. ನಮ್ಮ ಶಕ್ತಿಯಿಂದ ಶತ್ರುಗಳನ್ನು ಜಯಿಸುವಂತಾಗಲಿ.

## English Translation

Indra, invoked of many may we escape all ignorance caused by poverty by means of our cattle : (may we escape) all hunger by means of

our barley : (may we acquire) the chief riches through the princes (of wealth) : may we conquer by our valour.

### ಸಂಹಿತಾಪಾಠಃ

ಬೃಹಸ್ಪತಿರ್ನಃ ಪರಿ ಪಾತು ಪಶ್ಚಾದುತೋತ್ತರಸ್ಮಾದಧರಾದಘಾಯೋಃ ।
ಇಂದ್ರಃ ಪುರಸ್ತಾದುತ ಮಧ್ಯತೋ ನಃ ಸಖಾ ಸಖಿಭ್ಯೋ ವರಿವಃ ಕೃಣೋತು

### ಪದಪಾಠಃ

ಬೃಹಸ್ಪತಿಃ । ನಃ । ಪರಿ । ಪಾತು । ಪಶ್ಚಾತ್ । ಉತ । ಉತ್ಽತರಸ್ಮಾತ್ । ಅಧರಾತ್ । ಅಘಽಯೋಃ ।
ಇಂದ್ರಃ । ಪುರಸ್ತಾತ್ । ಉತ । ಮಧ್ಯತಃ । ನಃ । ಸಖಾ । ಸಖಿಽಭ್ಯಃ । ವರಿವಃ । ಕೃಣೋತು ॥ ೧೧ ॥

### ಸಾಯಣಭಾಷ್ಯಂ

ಪಶ್ಚಾತ್ಪಶ್ಚಿಮತೋ ಯೋಽಘಾಯುರಾಗಚ್ಛತಿ ತಸ್ಮಾದಘಾಯೋಃ ಪಾಪಕಾಚ್ಛತ್ರೋರ್ನೋಽಸ್ಮಾನ್ಬೃಹಸ್ಪತಿಃ ಪರಿ ಪಾತು । ರಕ್ಷತು । ಉತಾಪಿ ಚೋತ್ತರಸ್ಮಾದುತ್ತರತೋಽಧರಾದಧಸ್ತಾಚ್ಚ ಯೋಽಘಾಯುರಾಗಚ್ಛತಿ ತಸ್ಮಾದಘಾಯೋರ್ನೋಽಸ್ಮಾನ್ಪರಿ ಪಾತು । ಉತಾಪಿ ಚೇಂದ್ರಃ ಪುರಸ್ತಾತ್ಪೂರ್ವತೋ ಮಧ್ಯತಶ್ಚ ಯೋಽಘಾಯುರಾಗಚ್ಛತಿ ತಸ್ಮಾದಘಾಯೋರ್ನೋಽಸ್ಮಾನ್ಪರಿ ಪಾತು । ಕಿಂಚ । ಸಖಾ ಸಖಿಭೂತ ಇಂದ್ರಃ ಸಖಿಭ್ಯಃ ಪ್ರಿಯೇಭ್ಯೋಽಸ್ಮಭ್ಯಂ ವರಿವೋ ಧನಂ ಕೃಣೋತು । ಕರೋತು ॥

### ಪ್ರತಿಪದಾರ್ಥ

ಬೃಹಸ್ಪತಿಃ—ಬೃಹಸ್ಪತಿಯು । ಪಶ್ಚಾತ್—ನಮ್ಮ ಹಿಂಭಾಗದಿಂದ । ಅಘಾಯೋಃ—ಕೇಡನ್ನು ಬಯಸುವ ಶತ್ರುವಿನಿಂದ । ನಃ—ನಮ್ಮನ್ನು । ಪರಿ ಪಾತು—ರಕ್ಷಿಸಲಿ । ಉತ—ಮತ್ತು । ಉತ್ತರಸ್ಮಾತ್—ನಮ್ಮ ಮೇಲ್ಭಾಗದಿಂದಲೂ । ಅಧರಾತ್—ಕೆಳಭಾಗದಿಂದಲೂ ನಮ್ಮ ಮೇಲೆ ಬೀಳುವ ಶತ್ರುಗಳಿಂದ ರಕ್ಷಿಸಲಿ । ಉತ—ಮತ್ತು । ಇಂದ್ರಃ—ಇಂದ್ರನು । ಪುರಸ್ತಾತ್—ಪೂರ್ವದಿಕ್ಕಿನಿಂದಲೂ । ಮಧ್ಯತಃ—ಮಧ್ಯಭಾಗದಿಂದಲೂ । ನಃ—ನಮ್ಮನ್ನು ರಕ್ಷಿಸಲಿ । ಸಖಾ—ಮಿತ್ರನಾದ ಇಂದ್ರನು । ಸಖಿಭ್ಯಃ—ಅವನ ಮಿತ್ರರಾದ ನಮಗೆ । ವರಿವಃ—ಧನವನ್ನು । ಕೃಣೋತು—ಒದಗಿಸಲಿ.

### ಭಾವಾರ್ಥ

ನಮ್ಮ ಹಿಂಭಾಗದಿಂದ ಬಂದು ನಮಗೆ ಕೇಡನ್ನು ಬಯಸುವ ಶತ್ರುವಿನಿಂದ ಬೃಹಸ್ಪತಿಯು ನಮ್ಮನ್ನು ರಕ್ಷಿಸಲಿ. ನಮ್ಮ ಮೇಲ್ಭಾಗದಿಂದಲೂ, ಕೆಳಭಾಗದಿಂದಲೂ ನಮ್ಮ ಮೇಲೆ ಬೀಳುವ ಶತ್ರುಗಳಿಂದಲೂ ನಮ್ಮನ್ನು ರಕ್ಷಿಸಲಿ,

ಇಂದ್ರನು ಪೂರ್ವದಿಕ್ಕಿನಿಂದಲೂ, ಮಧ್ಯಭಾಗದಿಂದಲೂ ನಮ್ಮನ್ನು ರಕ್ಷಿಸಲಿ. ಮಿತ್ರನಾದ ಇಂದ್ರನು ಅವನ ಸಖರಾದ ನಮಗೆ ಧನವನ್ನು ಒದಗಿಸಲಿ.

## English Translation

May Brihaspati defend us from a malignant (foe) coming from behind, from above, or from below; may Indra defend us from foes in front and in the middle; may he, our friend bestow wealth upon (us) his friends

---

## ನಲವತ್ತನಾಲ್ಕನೆಯ ಸೂಕ್ತ

**ಆ ಯಾತ್ವಿತ್ಯೇಕಾದಶರ್ಚಂ ದ್ವಿತೀಯಂ ಸೂಕ್ತಮಾಂಗಿರಸಸ್ಯ ಕೃಷ್ಣಸ್ಯಾರ್ಷಮೈಂದ್ರಂ । ಆದಿತಸ್ತಿಸ್ರಸ್ತ್ರಿಷ್ಟುಭಃ । ತತಃ ಷಡ್ಜಗತ್ಯಃ । ತತೋ ದ್ವೇ ತ್ರಿಷ್ಟುಭೌ । ತಥಾ ಚಾನುಕ್ರಾಂತಂ । ಆ ಯಾತು ತ್ರಿತ್ರಿಷ್ಟುಬಾದೀತಿ ॥ ಅಭಿಪ್ಲವಿಕೇಷೂಕ್ಥ್ಯೇಷು ಬ್ರಾಹ್ಮಣಾಚ್ಛಂಸಿನಃ ಸ್ತೋಮವೃದ್ಧ್ಯಾವಿದಮಾವಾಪಾರ್ಥಂ ಸೂತ್ರಿತಂ ಚ । ಆ ಯಾತ್ವಿಂದ್ರಃ ಸ್ವಪತಿರಿಮಾಂ ಧಿಯಮಿತಿ ಬ್ರಾಹ್ಮಣಾಚ್ಛಂಸೀ । ಆ. ೭. ೯ । ಇತಿ ॥**

**ಅನುವಾದವು—ಆ ಯಾತು** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಆಂಗಿರಸಃ ಕೃಷ್ಣಃ ಎಂಬುವನು ಋಷಿಯು; ಇಂದ್ರನು ದೇವತೆಯು; ಈ ಸೂಕ್ತದ ಮೊದಲಿನ ಮೂರು ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಅಲ್ಲಿಂದ ಮುಂದಿನ ಆರು ಋಕ್ಕುಗಳು (೪-೯) ಜಗತೀ ಛಂದಸ್ಕವು. ಮುಂದಿನ ಎರಡು ಋಕ್ಕುಗಳು (೧೦-೧೧) ತ್ರಿಷ್ಟುಪ್ ಛಂದಸ್ಕವು. ಅನುಕ್ರಮಣಿಕೆಯಲ್ಲಿ **ಆ ಯಾತು** ತ್ರಿತ್ರಿಷ್ಟುಬಾದಿ ಎಂದು ಹೇಳಿರುವುದು. ಅಭಿಪ್ಲವಸಂಬಂಧವಾದ ಉಕ್ಥ್ಯಯಾಗಗಳಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಸ್ತೋಮವೃದ್ಧಿಗಾಗಿ ಪಠಿಸಬೇಕಾದ ಮಂತ್ರಗಳಲ್ಲಿ ಆವಾಪಾರ್ಥವಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ಆ ಯಾತ್ವಿಂದ್ರಃ ಸ್ವಪತಿರಿಮಾಂ ಧಿಯಮಿತಿ ಬ್ರಾಹ್ಮಣಾಚ್ಛಂಸೀ** ಎಂಬ ಸೂತ್ರದಿಂದ (ಆ. ೭-೯) ವಿವೃತವಾಗಿರುವುದು.

### ಸೂಕ್ತ—೪೪

ಮಂಡಲ—೧೦ ॥ ಅನುವಾಕ—೪ ॥ ಸೂಕ್ತ—೪೪ ॥
ಅಷ್ಟಕ—೭ ॥ ಅಧ್ಯಾಯ—೮ ॥ ವರ್ಗ—೨೬, ೨೭ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
ಋಷಿಃ—ಕೃಷ್ಣಃ ॥
ದೇವತಾ—ಇಂದ್ರಃ ॥
ಛಂದಃ—೧-೩, ೧೦, ೧೧ ತ್ರಿಷ್ಟುಪ್ । ೪-೯ ಜಗತೀ ॥

ಸಂಹಿತಾಪಾಠಃ

ಆ ಯಾತ್ವಿಂದ್ರಃ ಸ್ವಪತಿರ್ಮದಾಯ ಯೋ ಧರ್ಮಣಾ ತೂತುಜಾನಸ್ತುವಿ-
ಷ್ಮಾನ್ ।
ಪ್ರತ್ವಕ್ಷಾಣೋ ಅತಿ ವಿಶ್ವಾ ಸಹಾಂಸ್ಯಪಾರೇಣ ಮಹತಾ ವೃಷ್ಣ್ಯೇನ ॥ ೧ ॥

ಪದಪಾಠಃ

ಆ । ಯಾತು । ಇಂದ್ರಃ । ಸ್ವऽಪತಿಃ । ಮದಾಯ । ಯಃ । ಧರ್ಮಣಾ । ತೂತುಜಾನಃ । ತುವಿಷ್ಮಾನ್ ।
ಪ್ರऽತ್ವಕ್ಷಾಣಃ । ಅತಿ । ವಿಶ್ವಾ । ಸಹಾಂಸಿ । ಅಪಾರೇಣ । ಮಹತಾ । ವೃಷ್ಣ್ಯೇನ ॥ ೧ ॥

ಸಾಯಣಭಾಷ್ಯಂ

ಯ ಇಂದ್ರಸ್ತೂತುಜಾನಸ್ತ್ವರಮಾಣಸ್ತುವಿಷ್ಮಾನ್ವೃದ್ಧಿಮಾನ್ವಿಶ್ವಾ ವಿಶ್ವಾನಿ ಸಹಾಂಸಿ ಶತ್ರುಬಲಾನ್ಯಪಾರೇಣ ಮಹತಾ ವೃಷ್ಣ್ಯೇನ ಬಲೇನ ಪ್ರತ್ವಕ್ಷಾಣಃ ಪ್ರಕರ್ಷೇಣ ತನೂಕುರ್ವನ್ನತಿ । ಗಚ್ಛತೀತಿ ಶೇಷಃ । ಸ್ವಪತಿರ್ಧನಪತಿರಿಂದ್ರೋ ಮದಾಯ ಮದಾರ್ಥಂ ಧರ್ಮಣಾ ಧಾರಕೇಣ ರಥೇನಾ ಯಾತು । ಅಸ್ಮದ್ಯಜ್ಞಂ ಪ್ರತ್ಯಾಗಚ್ಛತು ॥

ಪ್ರತಿಪದಾರ್ಥ

ಯಃ—ಯಾವ ಇಂದ್ರನು । ತೂತುಜಾನಃ—ವೇಗಗಾಮಿಯೂ । ತುವಿಷ್ಮಾನ್—ಶಕ್ತಿವಂತನೂ । ವಿಶ್ವಾ—ಸಮಸ್ತವಾದ । ಸಹಾಂಸಿ—ಶತ್ರುಬಲಗಳನ್ನು । ಅಪಾರೇಣ—ಅಧಿಕವಾದುದೂ । ಮಹತಾ—ಮಹತ್ತಾದುದೂ ಆದ । ವೃಷ್ಣ್ಯೇನ—ತನ್ನ ಬಲದಿಂದ । ಪ್ರತ್ವಕ್ಷಾಣಃ—ದುರ್ಬಲಗೊಳಿಸುವವನೂ ಆಗಿ । ಅತಿ—ಅವರನ್ನು ಮೀರಿರುವನೋ ಅಂತಹ । ಸ್ವಪತಿಃ—ಧನಪತಿಯಾದ । ಇಂದ್ರಃ—ಇಂದ್ರನು । ಮದಾಯ—ಹರ್ಷಾರ್ಥವಾಗಿ । ಧರ್ಮಣಾ—ಅವನನ್ನು ಧರಿಸಿರುವ ರಥದಿಂದ । ಆ ಯಾತು—ನಮ್ಮಲ್ಲಿಗೆ ಬರಲಿ.

ಭಾವಾರ್ಥ

ಯಾವ ಇಂದ್ರನು ವೇಗಗಾಮಿಯೂ, ಸಕಲ ಶತ್ರುಬಲಗಳನ್ನೂ ತನ್ನ ಮಹತ್ತಾದ ಬಲದಿಂದ ದುರ್ಬಲಗೊಳಿಸುವವನೂ ಆಗಿ ಅವರನ್ನು ಮೀರಿರುವನೋ ಅಂತಹ ಧನಪತಿಯಾದ ಇಂದ್ರನು ಹರ್ಷಾರ್ಥವಾಗಿ ತನ್ನ ರಥದೊಡನೆ ನಮ್ಮಲ್ಲಿಗೆ ಬರಲಿ.

English Translation

May Indra, the lord of wealth, come hither with his chariot for his exhilaration: he who is rapid, strong, who, overcoming all the forces (of the enemy) by his great insuperable might, (passes) through them.

ಸಂಹಿತಾಪಾಠಃ

ಸುಷ್ಠಾಮಾ ರಥಃ ಸುಯಮಾ ಹರೀ ತೇ ಮಿಮ್ಯಕ್ಷ ವಜ್ರೋ ನೃಪತೇ ಗಭಸ್ತೌ ।
ಶೀಭಂ ರಾಜನ್ತ್ಸುಪಥಾ ಯಾಹ್ಯರ್ವಾಙ್ ವರ್ಧಾಮ ತೇ ಪಪುಷೋ ವೃಷ್ಣ್ಯಾನಿ ॥ ೨ ॥

ಪದಪಾಠಃ

ಸುಽಸ್ಥಾಮಾ । ರಥಃ । ಸುಽಯಮಾ । ಹರೀ ಇತಿ । ತೇ । ಮಿಮ್ಯಕ್ಷ । ವಜ್ರಃ । ನೃಽಪತೇ । ಗಭಸ್ತೌ । ಶೀಭಂ । ರಾಜನ್ । ಸುಽಪಥಾ । ಆ । ಯಾಹಿ । ಅರ್ವಾಙ್ । ವರ್ಧಾಮ । ತೇ । ಪಪುಷಃ । ವೃಷ್ಣ್ಯಾನಿ ॥

ಸಾಯಣಭಾಷ್ಯಂ

ಹೇ ನೃಪತೇ ನೃಣಾಂ ಪಾಲಕೇಂದ್ರ ತೇ ತವ ರಥಃ ಸುಷ್ಠಾಮಾ ಶೋಭನಾವಸ್ಥಾನೋ ಹರೀ ಅಶ್ವಾವಪಿ ಸುಯಮಾ ಸುಯಮೌ । ಸುಬದ್ಧಾವಿತ್ಯರ್ಥಃ । ಕಿಂಚ ತವ ಗಭಸ್ತೌ ಬಾಹೌ ವಜ್ರೋ ಮಿಮ್ಯಕ್ಷ । ಸಂಗತೋ ಭವತಿ । ತಥಾ ಸತಿ ಹೇ ರಾಜನ್ ಸರ್ವಸ್ಯೇಶ್ವರೇಂದ್ರ ಶೀಭಂ ಶೀಘ್ರಂ ಸುಪಥಾ ಶೋಭನೇನ ಮಾರ್ಗೇಣಾರ್ವಾಙಸ್ಮದಭಿಮುಖ ಆ ಯಾಹಿ । ಆಗಚ್ಛ । ಆಗತ್ಯ ಪಪುಷಃ ಸೋಮಂ ಪೀತವತಸ್ತೇ ತವ ವೃಷ್ಣ್ಯಾನಿ ಬಲಾನಿ ವರ್ಧಾಮ । ವಯಂ ವರ್ಧಯಾಮಃ ॥

ಪ್ರತಿಪದಾರ್ಥ

ನೃಪತೇ—ಮಾನವರಿಗೆ ಪಾಲಕನಾದ ಎಲೈ ಇಂದ್ರನೇ । ತೇ—ನಿನ್ನ । ರಥಃ—ರಥವು । ಸುಷ್ಠಾಮಾ—ಉತ್ತಮವಾದ ನಿವಾಸಸ್ಥಾನವುಳ್ಳದ್ದು । ಹರೀ—ನಿನ್ನ ಅಶ್ವಗಳು । ಸುಯಮಾ—ಒಳ್ಳೆಯ ಶಿಕ್ಷಣವುಳ್ಳವು । ಗಭಸ್ತೌ—ನಿನ್ನ ಬಾಹುವಿನಲ್ಲಿ । ವಜ್ರಃ—ವಜ್ರಾಯುಧವು । ಮಿಮ್ಯಕ್ಷ—ಹಿಡಿಯಲ್ಪಟ್ಟಿದೆ । ರಾಜನ್—ಪ್ರಭುವಾದ ಎಲೈ ಇಂದ್ರನೇ । ಶೀಭಂ—ಶೀಘ್ರವಾಗಿ । ಸುಪಥಾ—ಉತ್ತಮವಾದ ಮಾರ್ಗದಿಂದ । ಅರ್ವಾಙ್—ನಮಗಭಿಮುಖನಾಗಿ । ಆ ಯಾಹಿ—ದಯಮಾಡು । ಪಪುಷಃ—ಸೋಮವನ್ನು ಪಾನಮಾಡುವ । ತೇ—ನಿನ್ನ । ವೃಷ್ಣ್ಯಾನಿ—ಬಲಗಳನ್ನು । ವರ್ಧಾಮ—ನಾವು ಪುಷ್ಟಿಗೊಳಿಸುತ್ತೇವೆ.

ಭಾವಾರ್ಥ

ಮಾನವರಿಗೆ ಪಾಲಕನಾದ ಎಲೈ ಇಂದ್ರನೇ, ನಿನ್ನ ರಥವು ಉತ್ತಮವಾದ ನಿವಾಸಸ್ಥಾನವುಳ್ಳದ್ದು. ನಿನ್ನ ಅಶ್ವಗಳು ಚೆನ್ನಾಗಿ ಹೂಡಲ್ಪಟ್ಟಿವೆ. ನಿನ್ನ ಬಾಹುವಿನಲ್ಲಿ ವಜ್ರಾಯುಧವು ಹಿಡಿಯಲ್ಪಟ್ಟಿದೆ. ಪ್ರಭುವಾದ ಎಲೈ ಇಂದ್ರನೇ, ಶೀಘ್ರವಾಗಿ ನೀನು ಉತ್ತಮವಾದ ಮಾರ್ಗದಿಂದ ನಮಗಭಿಮುಖವಾಗಿ ದಯಮಾಡು. ಸೋಮವನ್ನು ಪಾನಮಾಡುವ ನಿನ್ನ ಬಲಗಳನ್ನು ನಾವು ಪುಷ್ಟಿಗೊಳಿಸುತ್ತೇವೆ.

## English Translation

King of men, your chariot is well stationed; your horses are well trained; the thunderbolt is grasped in your hand: come quickly towards us, lord of all, by a good path, we will augment your energies when you drink the Soma.

ಸಂಹಿತಾಪಾಠಃ

ಐಂದ್ರವಾಹೋ ನೃಪತಿಂ ವಜ್ರಬಾಹುಮುಗ್ರಮುಗ್ರಾಸಸ್ತವಿಷಾಸ ಏನಂ ।
ಪ್ರತ್ವಕ್ಷಸಂ ವೃಷಭಂ ಸತ್ಯಶುಷ್ಮಮೇಮಸ್ಮತ್ರಾ ಸಧಮಾದೋ ವಹಂತು ॥

ಪದಪಾಠಃ

ಆ । ಇಂದ್ರಽವಾಹಃ । ನೃಽಪತಿಂ । ವಜ್ರಽಬಾಹುಂ । ಉಗ್ರಂ । ಉಗ್ರಾಸಃ । ತವಿಷಾಸಃ । ಏನಂ ।
ಪ್ರಽತ್ವಕ್ಷಸಂ । ವೃಷಭಂ । ಸತ್ಯಽಶುಷ್ಮಂ । ಆ । ಈಂ । ಅಸ್ಮಽತ್ರಾ । ಸಧಽಮಾದಃ । ವಹಂತು ॥ ೩ ॥

ಸಾಯಣಭಾಷ್ಯಂ

ನೃಪತಿಂ ನರಾಂ ನೇತೄಣಾಂ ಪಾಲಕಂ ವಜ್ರಬಾಹುಂ ವಜ್ರಹಸ್ತಮುಗ್ರಮುದ್ಗೂರ್ಣಂ ಪ್ರತ್ವಕ್ಷಸಂ ಶತ್ರುಬಲಾನಾಂ ಪ್ರಕರ್ಷೇಣ ತನೂಕರ್ತಾರಂ ವೃಷಭಂ ಕಾಮಾನಾಂ ವರ್ಷಿತಾರಂ ಸತ್ಯಶುಷ್ಮಮವಿಸಂವಾದಿಬಲಮೇನಮಿಂದ್ರಂ । ಆ ಈಮಿತಿ ಪೂರಣೌ । ಉಗ್ರಾಸ ಉದ್ಗೂರ್ಣಾಸ್ತವಿಷಾಸಃ ಪ್ರವೃದ್ಧಾಃ ಸಧಮಾದಃ ಸಹ ಮಾದ್ಯಂತ ಇಂದ್ರವಾಹ ಇಂದ್ರಸ್ಯ ವೋಢಾರೋಽಸ್ಮತ್ರಾಸ್ಮಾಸು ವಹಂತು ॥

ಪ್ರತಿಪದಾರ್ಥ

ನೃಪತಿಂ—ಮಾನವಂಗೆ ಪಾಲಕನೂ । ವಜ್ರಬಾಹುಂ—ವಜ್ರಾಯುಧವನ್ನು ಕೈಯಲ್ಲಿ ಹಿಡಿದಿರುವವನೂ । ಉಗ್ರಂ—ಭಯಂಕರ ಶಕ್ತಿಯುಳ್ಳವನೂ । ಪ್ರತ್ವಕ್ಷಸಂ—ಶತ್ರುಗಳನ್ನು ಕ್ಷಯಗೊಳಿಸುವವನೂ । ವೃಷಭಂ—ಕಾಮವರ್ಷಕನೂ । ಸತ್ಯಶುಷ್ಮಂ—ಸತ್ಯಾತ್ಮಕವಾದ ಬಲವುಳ್ಳವನೂ ಆದ । ಏನಂ—ಇಂದ್ರನನ್ನು । ಉಗ್ರಾಸಃ—ಅಧಿಕವಾದ ಬಲವುಳ್ಳವೂ । ತವಿಷಾಸಃ—ಪುಷ್ಟವಾದವೂ । ಸಧಮಾದಃ—ಒಟ್ಟಿಗೆ ಹರ್ಷವನ್ನು ಹೊಂದುವುವೂ । ಇಂದ್ರವಾಹಃ—ಇಂದ್ರನನ್ನು ವಹಿಸುವುವೂ ಆದ ಅಶ್ವಗಳು । ಅಸ್ಮತ್ರಾ—ನಮ್ಮಲ್ಲಿಗೆ । ಆ ವಹಂತು—ಕರೆತರಲಿ.

ಭಾವಾರ್ಥ

ಮಾನವಂಗೆ ಪಾಲನೂ, ವಜ್ರಾಯುಧವನ್ನು ಕೈಯಲ್ಲಿ ಹಿಡಿದಿರುವವನೂ, ಭಯಂಕರವಾದ ಶಕ್ತಿಯುಳ್ಳವನೂ ಶತ್ರುಗಳನ್ನು ಕ್ಷಯಗೊಳಿಸುವವನೂ, ಕಾಮವರ್ಷಕನೂ, ಸತ್ಯಾತ್ಮಕವಾದ ಬಲವುಳ್ಳವನೂ ಆದ ಇಂದ್ರನನ್ನು ಅಧಿಕ

ವಾದ ಬಲವುಳ್ಳವೂ, ಪುಷ್ಟವಾದವೂ, ಒಟ್ಟಿಗೆ ಹರ್ಷವನ್ನು ಹೊಂದುವವೂ, ಇಂದ್ರನನ್ನು ವಹಿಸುವವೂ ಆದ ಅಶ್ವ ಗಳು ನಮ್ಮಲ್ಲಿಗೆ ಕರೆತರಲಿ.

English Translation

May the fierce, vigorous, exulting horses of Indra bring him hither to us, the king of men, armed with the thunderbolt, fierce, the reducer of foes, the showerer (of benefits), whose strength is real.

ಸಂಹಿತಾಪಾಠಃ

ಏವಾ ಪತಿಂ ದ್ರೋಣಸಾಚಂ ಸಚೇತಸಮೂರ್ಜಃ ಸ್ಕಂಭಂ ಆ ವೃಷಾಯಸೇ।
ಓಜಃ ಕೃಷ್ವ ಸಂ ಗೃಭಾಯ ತ್ವೇ ಅಪ್ಯಸೋ ಯಥಾ ಕೇನಿಪಾನಾಮಿನೋ ವೃಧೇ ॥ ೪ ॥

ಪದಪಾಠಃ

ಏವ । ಪತಿಂ । ದ್ರೋಣಽಸಾಚಂ । ಸಽಚೇತಸಂ । ಊರ್ಜಃ । ಸ್ಕಂಭಂ। ಧರುಣೇ। ಆ । ವೃಷ್ಽಯಸೇ ।
ಓಜಃ । ಕೃಷ್ವ । ಸಂ । ಗೃಭಾಯ । ತ್ವೇ ಇತಿ । ಅಪಿ । ಅಸಃ । ಯಥಾ । ಕೇಽನಿಪಾನಾಂ । ಇನಃ । ವೃಧೇ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಮೇವ್ಮೇವಂ ಪತಿಂ ಪಾಲಕಂ ದ್ರೋಣಸಾಚಂ ದ್ರೋಣಕಲಶಸ್ಯ ಸೇವಿತಾರಂ ಸಚೇತಸಂ ಸಪ್ರಜ್ಞಮೂರ್ಜಃ ಸ್ಕಂಭಂ ಬಲಸ್ಯ ಧಾರಕಂ ಸೋಮಂ ಧರುಣೇ ಧಾರಕೇ ಜಠರ ಆ ವೃಷಾ. ಯಸೇ । ಆಸಿಂಚಸೇ । ಧಾರಯಸೀತ್ಯರ್ಥಃ । ಕಿಂಚ । ಮಹ್ಯಮೋಜೋ ಬಲಂ ಕೃಷ್ವ । ಕುರುಷ್ವ । ತ್ವೇ ತ್ವಯ್ಯಸ್ಮಾನಪಿ ಸಂಗೃಭಾಯ । ಸಂ ಗೃಹಾಣ ಚ । ಕಿಂಚ । ಕೇನಿಪಾನಾಂ ಮೇಧಾವಿನಾಮಸ್ಮಾಕಂ । ಕೇನಿಪ ಋತಿಜ ಇತಿ ಮೇಧಾವಿನಾಮಸು ಪಾಠಾತ್ । ವೃಧೇ ವರ್ಧನಾಯ ಯಥಾ ಯಥಾವತ್ಸರ್ವಥೇನಃ ಸ್ವಾಮ್ಯಸಃ । ಭವಸಿ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) ಏವ—ಇದೇ ರೀತಿ । ಪತಿಂ—ಯಜ್ಞಪಾಲಕವೂ । ದ್ರೋಣಸಾಚಂ—ದ್ರೋಣಕಲಶ ವನ್ನಾಶ್ರಯಿಸಿರುವುದೂ । ಸಚೇತಸಂ—ಪ್ರಜ್ಞಾಪೂರಿತವೂ । ಊರ್ಜಃ—ಶಕ್ತಿಗೆ । ಸ್ಕಂಭಂ—ಧಾರಕವೂ ಆದ ಸೋಮವನ್ನು । ಧರುಣೇ—ನಿನ್ನ ಜಠರದಲ್ಲಿ । ಆ ವೃಷಾಯಸೇ—ತುಂಬಿಸಿಕೊಳ್ಳುತ್ತೀಯೆ । ಓಜಃ—ಶಕ್ತಿ ಯನ್ನು । ಕೃಷ್ವ—ನನ್ನಲ್ಲಿ ತುಂಬಿಸು । ಕೇನಿಪಾನಾಂ—ಮೇಧಾವಿಗಳಾದ ನಮ್ಮ । ವೃಧೇ—ವೃದ್ಧಿಗಾಗಿ ।

ಯಥಾ—ಯಾವ ರೀತಿ । ಈಶಃ—ಸ್ವಾಮಿಯಾಗಿ । ಅಸಃ—ಆಗಿರುವೆಯೋ ಹಾಗೆ (ಅದುದರಿಂದಲೇ) ತ್ವೇ—ನಿನ್ನಲ್ಲಿಯೇ । ಅಪಿ ಸಂ ಗೃಭಯ—ನಮ್ಮನ್ನು ಸೇರಿಸಿಕೊ (ನಿನ್ನವರನ್ನಾಗಿ ಮಾಡಿಕೊ)

ಭಾವಾರ್ಥ

ಎಲೈ ಇಂದ್ರನೇ, ಯಜ್ಞಪಾಲಕವೂ, ದ್ರೋಣಕಲಶವನ್ನಾಶ್ರಯಿಸಿರುವುದೂ, ಪ್ರಜ್ಞಾಪೂರ್ಣವೂ, ಶಕ್ತಿಗೆ ಧಾರಕವೂ ಆದ ಸೋಮವನ್ನು ನಿನ್ನ ಜಠರದಲ್ಲಿ ತುಂಬಿಸಿಕೊಳ್ಳುತ್ತೀಯೆ. ನನ್ನಲ್ಲೂ ವೀರ್ಯವನ್ನು ತುಂಬು. ಮೇಧಾವಿಗಳಾದ ನಮ್ಮ ಪುಷ್ಟಿಗಾಗಿ ನೀನು ನಮ್ಮನ್ನು ನಿನ್ನವರನ್ನಾಗಿ ಮಾಡಿಕೊ. ನೀನು ನಮಗೆ ಸ್ವಾಮಿಯಾಗಿರುತ್ತೀಯೆ. ಆದುದರಿಂದಲೇ ನಮ್ಮನ್ನು ಪುಷ್ಟಿಗೊಳಿಸು.

English Translation

Verily, Indra, you pour into your capacious (stomach) the protecting (Soma), serving the wooden trough, intelligent, holding strength : bestow (upon us) vigour : take us into yourself, for you are the lord of the exaltation of the wise.

ಸಂಹಿತಾಪಾಠಃ

ಗಮನ್ನಸ್ಮೇ ವಸೂನ್ಯಾ ಹಿ ಶಂಸಿಷಂ ಸ್ವಾಶಿಷಂ ಭರಮಾ ಯಾಹಿ ಸೋಮಿನಃ ।
ತ್ವಮೀಶಿಷೇ ಸಾಸ್ಮಿನ್ನಾ ಸತ್ಸಿ ಬರ್ಹಿಷ್ಯನಾಧೃಷ್ಯಾ ತವ ಪಾತ್ರಾಣಿ ಧರ್ಮಣಾ ॥

ಪದಪಾಠಃ

ಗಮನ್ । ಅಸ್ಮೇ ಇತಿ । ವಸೂನಿ । ಆ । ಶಂಸಿಷಂ । ಸುಽಆಶಿಷಂ । ಭರಂ । ಆ । ಯಾಹಿ । ಸೋಮಿನಃ ।
ತ್ವಂ । ಈಶಿಷೇ । ಸಃ । ಅಸ್ಮಿನ್ । ಆ । ಸತ್ಸಿ । ಬರ್ಹಿಷಿ । ಅನಾಧೃಷ್ಯಾ । ತವ । ಪಾತ್ರಾಣಿ । ಧರ್ಮಣಾ ॥

ಸಾಯಣಭಾಷ್ಯಂ

ಹೇ ಇಂದ್ರ ವಸೂನಿ ತ್ವದ್ದೇಯಾನಿ ಧನಾನ್ಯಸ್ಮೇ ಮಯ್ಯಾ ಗಮನ್ । ಆಗಚ್ಛಂತು । ಹಿ ಯಸ್ಮಾತ್ತ್ವಾಮಹಂ ಶಂಸಿಷಂ ಸ್ತೌಮಿ । ಕಿಂಚ ಸೋಮಿನಃ ಸೋಮವತೋ ಮಮ ಸ್ವಾಶಿಷಂ ಶೋಭನಾ ಆಶಿಷೋ ಯಸ್ಮಿಂಸ್ತಂ ಭರಂ ಯಜ್ಞಮಾ ಯಾಹಿ । ತ್ವಮಾಗಚ್ಛ । ಕಿಂಚ ತ್ವಮೀಶಿಷೇ । ಧನಸ್ಯೇಶ್ವರೋಽಸಿ । ಏವಂ ವಿಧಃ ಸ ತ್ವಮಸ್ಮಿನ್ನಸ್ಮದೀಯೇ ವೇದ್ಯಾಸ್ತೃತೇ ಬರ್ಹಿಷ್ಯಾ ಸತ್ಸಿ । ಆಸೀದ । ಕಿಂಚ ತವ ಸೋಮಪಾತ್ರಾಣಿ ಧರ್ಮಣಾ ರಾಕ್ಷಸಾನಾಂ ಕರ್ಮಣಾನಾಧೃಷ್ಯಾಣಿ ಧರ್ಷಯಿತುಮಶಕ್ಯಾನಿ ॥

ಪ್ರತಿಪದಾರ್ಥ

(ಎಲೈ ಇಂದ್ರನೇ), ವಸೂನಿ—ನೀನು ಒದಗಿಸುವ ಧನಗಳು | ಅಸ್ಮೇ—ನಮಗೆ | ಆ ಗಮನ್—ಶೀಘ್ರವಾಗಿ ಬಂದು ಸೇರಲಿ | ಹಿ—ಏತಕ್ಕೆಂದರೆ | ಶಂಸಿಷಂ—ನಾನು ನಿನ್ನನ್ನು ಸ್ತುತಿಸುತ್ತೇನೆ | ಸೋಮಿನಃ—ಸೋಮಯುಕ್ತನಾದ ನನ್ನ | ಸ್ವಾಶಿಷಂ—ಉತ್ತಮವಾದ ಆಶೀರ್ವಚನಗಳಿಂದ ಕೂಡಿದ | ಭರಂ—ಯಜ್ಞಕ್ಕೆ | ಆ ಯಾಹಿ—ದಯಮಾಡು | ತ್ವಂ—ನೀನು | ಈಶಿಷೇ—ಧನಪತಿಯಾಗಿದ್ದೀಯೆ | ಸಃ—ಪ್ರಸಿದ್ಧನಾದ ನೀನು | ಅಸ್ಮಿನ್—ಈ ಯಜ್ಞದ | ಬರ್ಹಿಷಿ—ದರ್ಭಾಸನದ ಮೇಲೆ | ಆ ಸತ್ಸಿ—ಕುಳಿತುಕೊ | ತವ—ನಿನ್ನ | ಪಾತ್ರಾಣಿ—ಸೋಮಪಾತ್ರೆಗಳು | ಧರ್ಮಣಾ—ಅಸುರಾದಿಗಳ ಕರ್ಮದಿಂದ | ಅನಾಧೃಷ್ಯಾ—ದೂಷಿತವಾಗುವುದಿಲ್ಲ.

ಭಾವಾರ್ಥ

ಎಲೈ ಇಂದ್ರನೇ, ನೀನು ಒದಗಿಸುವ ಧನಗಳು ನಮ್ಮನ್ನು ಶೀಘ್ರವಾಗಿ ಬಂದು ಸೇರಲಿ. ನಾನು ನಿನ್ನನ್ನು ಸ್ತುತಿಸುತ್ತೇನೆ. ಸೋಮಯುಕ್ತನಾದ ನನ್ನ ಉತ್ತಮವಾದ ಆಶೀರ್ವಚನಗಳಿಂದ ಕೂಡಿದ ಯಜ್ಞಕ್ಕೆ ದಯಮಾಡು. ನೀನು ಧನಪತಿಯಾಗಿದ್ದೀಯೆ. ಪ್ರಸಿದ್ಧನಾದ ನೀನು ಈ ಯಜ್ಞದ ದರ್ಭಾಸನದ ಮೇಲೆ ಕುಳಿತುಕೊ. ನಿನ್ನ ಸೋಮಪಾತ್ರೆಗಳು ಅಸುರಾದಿಗಳ ಕರ್ಮದಿಂದ ದೂಷಿತವಾಗುವುದಿಲ್ಲ.

English Translation

Let the wealth (to be given by you) come quickly to me, for verily I have glorified you ; come to the blessed sacrifice of the offerer of the Soma ; for you are the lord : sit down upon this sacred grass : these your cups (of Soma) are not to be insulted by the act (of evil spirits)

ಸಂಹಿತಾಪಾಠಃ

ಪೃಥಕ್ ಪ್ರಾಯನ್ಪ್ರಥಮಾ ದೇವಹೂತಯೋಽಕೃಣ್ವತ ಶ್ರವಸ್ಯಾನಿ ದುಷ್ಟರಾ।
ನ ಯೇ ಶೇಕುರ್ಯಜ್ಞಿಯಾಂ ನಾವಮಾರುಹಮೀರ್ಮೈವ ತೇ ನ್ಯವಿಶಂತ
ಕೇಪಯಃ ॥ ೬ ॥

ಪದಪಾಠಃ

ಪೃಥಕ್ । ಪ್ರ । ಆಯನ್ । ಪ್ರಥಮಾಃ । ದೇವಽಹೂತಯಃ । ಅಕೃಣ್ವತ । ಶ್ರವಸ್ಯಾನಿ । ದುಸ್ತರಾ ।
ನ । ಯೇ । ಶೇಕುಃ । ಯಜ್ಞಿಯಾಂ । ನಾವಂ । ಆಽರುಹಂ । ಈರ್ಮಾ । ಏವ । ತೇ । ನಿ । ಅವಿಶಂತ ।
ಕೇಪಯಃ ॥ ೬ ॥

ಸಾಯಣಭಾಷ್ಯಂ

ಹೇ ಇಂದ್ರ ತವ ಪ್ರಸಾದಾತ್ತೇ ಪೃಥಕ್ ಪ್ರಾಯನ್ ದೇವಲೋಕಾನ್ಪೃಥಗ್ಗಚ್ಛಂತಿ ಯೇ ಪ್ರಥಮಾಃ ಪೂರ್ವೇ ಮುಖ್ಯಾ ವಾ ದೇವಹೂತಯೋ ದೇವಾನಾಮಾಹ್ವಾತಾರಃ || ಕರ್ತರಿ ಕ್ತಿಚ್ || ಕಿಂಚ ದುಷ್ಟರಾಣ್ಯನ್ಯೈರ್ದುಸ್ತರಾಣಿ ಶ್ರವಸ್ಯಾನಿ ಶ್ರವಣೀಯಾನಿ ಯಶಾಂಸ್ಯಕೃಣ್ವತ ಅಕುರ್ವತ | ಕಿಂಚ ಯೇ ತತ್ಪ್ರಸಾದರಹಿತಾ ಜನಾ ಯಜ್ಞಿಯಾಂ ಯಜ್ಞಸಂಬಂಧಿನೀಂ | ಯಜ್ಞಮಯೀಮಿತ್ಯರ್ಥಃ | ನಾವಮಾರುಹಮಾರೋಢುಂ ನ ಶೇಕುಃ ನ ಶಕ್ನುವಂತಿ ತೇ ಕೇಪಯಃ ಕುತ್ಸಿತಪೂಯಕರ್ಮಾಣಃ ಪಾಪಕರ್ಮಾಣೋ ಜನಾ ಈರ್ಮೈವ ಋಣೇನೈವ ನ್ಯವಿಶಂತ | ನೀಚೈರವಿಶಂತ | ಅಧೋಗತಿಂ ಪ್ರಾಪ್ತಾ ಇತ್ಯರ್ಥಃ | ತಥಾ ಚ ಯಾಸ್ಕಃ | ಪೃಥಕ್ ಪ್ರಾಯನ್ ಪೃಥಕ್ ಪ್ರಥಂತೇಃ ಪ್ರಥಮಾ ದೇವಹೂತಯೋ ಯೇ ದೇವಾನಾಹ್ವಯಂತಾಕುರ್ವತ ಶ್ರವಣೀಯಾನಿ ಯಶಾಂಸಿ ದುರನುಕರಣಾನ್ಯನ್ಯೈರ್ಯೇಽಶಕ್ನುವನ್ಯಜ್ಞಿಯಾಂ ನಾವಮಾರೋಢುಮಥ ಯೇ ನಾಶಕ್ನುವನ್ಯಜ್ಞಿಯಾಂ ನಾವಮಾರೋಢುಮೀರ್ಮೈವ ತೇ ನ್ಯವಿಶಂತ ಋಣೇನೈವ ತೇ ನ್ಯವಿಶಂತಾಸ್ಮಿನ್ನೇವ ಲೋಕ ಇತಿ ವಾ | ನಿ. ೫-೨೫ | ಇತಿ ||

ಪ್ರತಿಪದಾರ್ಥ

(ಎಲೈ ಇಂದ್ರನೇ), ಪೃಥಕ್—ಎರಡು ವಿಧವಾದ ಬೇರೆಬೇರೆ ಗತಿಗಳನ್ನು | ಪ್ರಾಯನ್—ಪುರುಷರು ಹೊಂದುತ್ತಾರೆ | ಪ್ರಥಮಾಃ—ಮುಖ್ಯರೂ | ದೇವಹೂತಯಃ—ದೇವತೆಗಳನ್ನು ಯಜ್ಞಕ್ಕೆ ಕರೆಯುವವರೂ ಆದ ಯಜ್ಞಕರ್ತರು | ದುಷ್ಟರಾ—ಇತರರಿಂದ ಹತ್ತಲು ಸಾಧ್ಯವಿಲ್ಲದ | ಶ್ರವಸ್ಯಾನಿ—ಕೀರ್ತಿಯುತವಾದ ದಿವ್ಯಸ್ಥಾನವನ್ನು | ಅಕುರ್ವತ—ತಾವೇ ನಿರ್ಮಿಸಿಕೊಳ್ಳುತ್ತಾರೆ | (ಪಡೆಯುತ್ತಾರೆ) ಯೇ—ಯಾರು | ಯಜ್ಞಿಯಾಂ—ಯಜ್ಞರೂಪವಾದ | ನಾವಂ—ದೋಣಿಯನ್ನು | ಆರುಹಂ—ಹತ್ತುವುದಕ್ಕೆ | ನ ಶೇಕುಃ— ಶಕ್ತರಲ್ಲವೋ| ತೇ—ಅವರು | ಕೇಪಯಃ—ಪಾಪಕರ್ಮವುಳ್ಳವರಾಗಿ | ಈರ್ಮೈವ—ಋಣದಿಂದಲೇ ಪೀಡಿತರಾಗಿ | ನ್ಯವಿಶಂತ—ಅಧೋಗತಿಯನ್ನು ಹೊಂದುತ್ತಾರೆ.

ಭಾವಾರ್ಥ

ಎಲೈ ಇಂದ್ರನೇ, ಪುರುಷರಿಗೆ ಬೇರೆಬೇರೆಯಾದ ಎರಡು ವಿಧವಾದ ಗತಿಗಳಿರುತ್ತವೆ. ಶ್ರೇಷ್ಠರೂ, ದೇವತೆಗಳನ್ನು ಯಜ್ಞಕ್ಕೆ ಕರೆಯುವವರೂ ಆದ ಯಜ್ಞಕರ್ತರು ಇತರರಿಂದ ಹತ್ತಲು ಸಾಧ್ಯವಿಲ್ಲದ ಕೀರ್ತಿಯುತವಾದ ದಿವ್ಯಸ್ಥಾನವನ್ನು ಪಡೆಯುತ್ತಾರೆ. ಯಾರಿಗೆ ಯಜ್ಞರೂಪವಾದ ದೋಣಿಯನ್ನು ಹತ್ತಲು ಸಾಧ್ಯವಿಲ್ಲವೋ ಅವರು ಪಾಪಕರ್ಮವುಳ್ಳವರಾಗಿ ಋಣದಿಂದಲೇ ಪೀಡಿತರಾಗಿ ಅಧೋಗತಿಯನ್ನು ಹೊಂದುತ್ತಾರೆ.

## English Translation

They go separately (to the worlds of the gods), first those who offer oblations to the gods have attained reputation difficult to surpass ; those who have not been able to ascend the ship of sacrifice, have gone down (in the world), wretches (plunged) in debt.

ಸಂಹಿತಾಪಾಠಃ

ಏವೈನಾಪಾಗಪರೇ ಸಂತು ದೂಢ್ಯೋಽಶ್ವಾ ಯೇಷಾಂ ದುರ್ಯುಜ ಆಯುಯುಜ್ರೇ ।
ಇತ್ಥಾ ಯೇ ಪ್ರಾಗುಪರೇ ಸಂತಿ ದಾವನೇ ಪುರೂಣಿ ಯತ್ರ ವಯುನಾನಿ ಭೋಜನಾ ॥ ೭ ॥

ಪದಪಾಠಃ

ಏವ । ಏವ । ಅಪಾಕ್ । ಅಪರೇ । ಸಂತು । ದುಃऽಧ್ಯಃ । ಅಶ್ವಾಃ । ಯೇಷಾಂ । ದುಃऽಯುಜಃ । ಆऽಯುಯುಜ್ರೇ ।
ಇತ್ಥಾ । ಯೇ । ಪ್ರಾಕ್ । ಉಪರೇ । ಸಂತಿ । ದಾವನೇ । ಪುರೂಣಿ । ಯತ್ರ । ವಯುನಾನಿ । ಭೋಜನಾ ॥

ಸಾಯಣಭಾಷ್ಯಂ

ಏವೈವೈವಮೇವ ದೂಢ್ಯೋ ದುರ್ಬುದ್ಧಯೋಽಪರೇಽನ್ಯೇ । ಅಯಜ್ವಾನ ಇತ್ಯರ್ಥಃ । ಅಪಾಗಪಾಚೀನಾ ಅಧೋಗಂತಾರಃ ಸಂತು ಭವಂತು ಯೇಷಾಂ ಯಜ್ಞಮಕುರ್ವತಾಮಶ್ವಾ ದುರ್ಯುಜೋ ದುರ್ಯೋಜಾಃ ಪ್ರಬಲಾ ಅಶ್ವಾ ಆಯುಯುಜ್ರೇ ರಥೇಷು ಯುಜ್ಯಂತೇ । ಯೇ ಸತ್ಯಪಿ ಸಾಮರ್ಥ್ಯೇ ನ ಯಜಂತಿ ತೇ ನರಕಂ ಗಚ್ಛಂತೀತಿ ಭಾವಃ । ಕಿಂಚೇತ್ಥೇತ್ಥಂ ತೇ ಸ್ವರ್ಗಗಾಮಿನೋ ಭವಂತಿ ಯ ಉಪರೇ ಯಜ್ವಾನಃ ಪ್ರಾಗ್ಮರಣಾತ್ಪೂರ್ವಮೇವ ದಾವನೇ ದೇವಾನಾಂ ಹವಿರ್ದಾನಾಯ ಸಂತಿ ಭವಂತಿ । ಯತ್ರ ಯೇಷು ಚ ಯಜ್ಞಕಾರಿಷು ವಯುನಾನಿ ಪ್ರಜ್ಞಾನಾನಿ ಕಾಂತಾನಿ ವಾ ಭೋಜನಾ ಭೋಗ್ಯಾನಿ ಧನಾನಿ ಪುರೂಣಿ ಬಹೂನಿ ದೇವೇಭ್ಯೋ ದಾನಾಯ ಸಂತಿ ॥

ಪ್ರತಿಪದಾರ್ಥ

**ಯೇಷಾಂ**—ಯಾವ ಕರ್ಮಭ್ರಷ್ಟರ । **ದುರ್ಯುಜಃ**—ಪ್ರಬಲವಾದ ಶಕ್ತಿಯುಳ್ಳ । **ಅಶ್ವಾಃ**—ಅಶ್ವಗಳು । **ಆಯುಯುಜ್ರೇ**—ರಥಕ್ಕೆ ಕಟ್ಟಲ್ಪಡುವುವೋ । (ಅಂತಹ ಶಕ್ತಿಯಿದ್ದರೂ ಸಹ) **ಅಪರೇ**—ಅಂತಹ ಕರ್ಮಭ್ರಷ್ಟರು । **ದೂಢ್ಯಃ**—ದುಷ್ಟಬುದ್ಧಿಯುಳ್ಳವರಾಗಿ । **ಏವೈವ**—ಮೇಲೆ ವಿವರಿಸಿದಂತೆಯೇ । **ಅಪಾಕ್**—ಅಧೋಗತಿಯುಳ್ಳವರಾಗಿ । **ಸಂತು**—ಇರಲಿ । **ಯೇ ಉಪರೇ**—ಯಾವ ಯಜ್ಞಕರ್ತರು । **ಪ್ರಾಕ್**—ಮರಣಕ್ಕೆ ಮೊದಲೇ । **ದಾವನೇ**—ಹವಿಸ್ಸನ್ನು ಅರ್ಪಿಸಲು । **ಸಂತಿ**—ಸಿದ್ಧವಾಗಿರುವರೋ । **ಯತ್ರ**—ಯಾವ ಯಜ್ಞಕರ್ತರಲ್ಲಿ । **ವಯುನಾನಿ**—ಉತ್ತಮವಾದ ಜ್ಞಾನವೂ । **ಭೋಜನಾ**—ಭೋಗಸಾಧನವಾದ ಧನಗಳೂ । **ಪುರೂಣಿ**—ಅತ್ಯಧಿಕವಾಗಿರುವುವೋ ಅವರು । **ಇತ್ಥಾ**—ಮೇಲೆ ವಿವರಿಸಿದಂತೆ ಉತ್ತಮವಾದ ಗತಿಯನ್ನು ಪಡೆಯುತ್ತಾರೆ.

ಭಾವಾರ್ಥ

ರಥಕ್ಕೆ ಪ್ರಬಲವಾದ ಶಕ್ತಿಯುಳ್ಳ ಅಶ್ವಗಳನ್ನು ಯೋಜಿಸಿ ಧನವನ್ನು ಸಂಪಾದಿಸುವ ಶಕ್ತಿಯಿದ್ದರೂ ಸಹ ಯಾರು ದುಷ್ಟಬುದ್ಧಿಯುಳ್ಳವರಾಗಿ ಕರ್ಮವನ್ನಾಚರಿಸುವುದಿಲ್ಲವೋ ಅವರು ಅಧೋಗತಿಯನ್ನೇ ಹೊಂದುತ್ತಾರೆ. ಯಾವ ಯಜ್ಞಕರ್ತರು ಮರಣಕ್ಕೆ ಮೊದಲೇ ಹವಿಸ್ಸನ್ನು ಅರ್ಪಿಸಲು ಸಿದ್ಧರಾಗಿರುವರೋ, ಯಾವ ಯಜ್ಞಕರ್ತರಲ್ಲಿ ಅತ್ಯಧಿಕವಾಗಿರುವ ಉತ್ತಮವಾದ ಜ್ಞಾನವೂ ಭೋಗಸಾಧನವಾದ ಧನವೂ ಸಾರ್ಥಕವಾಗುವುದೋ ಅವರು ಮೇಲೆ ವಿವರಿಸಿದಂತೆ ಉತ್ತಮವಾದ ಗತಿಯನ್ನು ಪಡೆಯುತ್ತಾರೆ.

English Translation.

Thus may those others the ignorant go downwards, whose restive horses are yoked ; otherwise (is it with those) who before (death) are near unto liberality, amongst whom precious gifts (to the gods) are numerous.

ಸಂಹಿತಾಪಾಠಃ

ಗಿರೀಁರಜ್ರಾನ್ರೇಜಮಾನಾಁ ಅಧಾರಯದ್ದ್ಯೌಃ ಕ್ರಂದದಂತರಿಕ್ಷಾಣಿ ಕೋಪ-
ಯತ್ ।
ಸಮೀಚೀನೇ ಧಿಷಣೇ ವಿ ಷ್ಕಭಾಯತಿ ವೃಷ್ಣಃ ಪೀತ್ವಾ ಮದ ಉಕ್ಥಾನಿ
ಶಂಸತಿ ॥ ೮ ॥

ಪದಪಾಠಃ

ಗಿರೀನ್ । ಅಜ್ರಾನ್ । ರೇಜಮಾನಾನ್ । ಅಧಾರಯತ್ । ದ್ಯೌಃ । ಕ್ರಂದತ್ । ಅಂತರಿಕ್ಷಾಣಿ ।
ಕೋಪಯತ್ ।
ಸಮೀಚೀನೇ ಇತಿ ಸಂಽಈಚೀನೇ । ಧಿಷಣೇ ಇತಿ । ವಿ । ಸ್ಕಭಾಯತಿ । ವೃಷ್ಣಃ । ಪೀತ್ವಾ । ಮದೇ ।
ಉಕ್ಥಾನಿ । ಶಂಸತಿ ॥

ಸಾಯಣಭಾಷ್ಯಂ

ಗಿರೀನ್ಮೇಘಾನಜ್ರಾನ್ಗಮನಶೀಲಾನ್ರೇಜಮಾನಾನ್ಕಂಪಮಾನಾನಧಾರಯತ್ । ಇಂದ್ರೋ ಧಾರಿತ-ವಾನ್ । ನಿಶ್ಚಲಾನ್ಕೃತವಾನಿತ್ಯರ್ಥಃ । ಕಿಂಚ ದ್ಯೌರ್ದ್ಯುಲೋಕಸ್ತನ್ನಿವಾಸೀ ವಾ ಜನೋಽಸುರರಾಕ್ಷ-ಸೇಭ್ಯೋ ಭೀತಃ ಸನ್ ಕ್ರಂದತ್ । ಕ್ರಂದತಿ । ಇಂದ್ರಮಾಹ್ವಯತ್ಯಾತ್ಮನಃ ಪರಿತ್ರಾಣಾರ್ಥಂ । ಕಿಂಚೇಂ-ದ್ರೋಽಂತರಿಕ್ಷಾಣಿ ಕೋಪಯತ್ । ಕೋಪಯತಿ । ಸಂಕ್ಷೋಭಯತೀತ್ಯರ್ಥಃ । ಕಿಂಚೇಂದ್ರಃ ಸಮೀ-ಚೀನೇ ಪರಸ್ಪರಂ ಸಂಗತೇ ಧಿಷಣೇ ದ್ಯಾವಾಪೃಥಿವ್ಯೌ ವಿ ಷ್ಕಭಾಯತಿ । ಅಂತರಿಕ್ಷೇಣ ಸ್ತಭ್ನಾತಿ । ಸ್ತಂಭ-

ಯತೀತ್ಯರ್ಥಃ । ಕಿಂಚೇಂದ್ರೋ ವೃಷ್ಣಃ ಸ್ವೋದರಸ್ಯ ಸೇಕ್ತ್ರೂನ್ ಸೋಮಾನ್ ಪೀತ್ವಾ ಮದೇ ಹರ್ಷೇ ಸತ್ಯುಕ್ಥಾನಿ ಪ್ರಶಸ್ಯಾನಿ ವಚನಾನಿ ಶಂಸತಿ । ಪ್ರಬ್ರವೀತಿ ।

ಪ್ರತಿಪದಾರ್ಥ

ಅಜ್ರಾನ್—ಸಂಚಾರಾತ್ಮಕವೂ । ರೇಜಮಾನಾನ್—ಕಂಪಿಸುವುವೂ ಆದ । ಗಿರೀನ್—ಮೇಘಗಳನ್ನು । ಅಧಾರಯತ್—ಇಂದ್ರನು ನಿಶ್ಚಲವಾಗುವಂತೆ ಮಾಡಿದನು । ದ್ಯೌಃ—ದ್ಯುಲೋಕವು । ಕ್ರಂದತ್—ರಕ್ಷಣೆಗಾಗಿ ಇಂದ್ರನನ್ನು ಕೂಗುತ್ತದೆ । ಅಂತರಿಕ್ಷಾಣಿ—ಅಂತರಿಕ್ಷಗಳು । ಕೋಪಯತ್—ಕ್ಷೋಭೆಗೊಳ್ಳುತ್ತವೆ । ಸಮೀಚೀನೇ—ಒಂದುಗೂಡಿರುವ । ಧಿಷಣೇ—ದ್ಯಾವಾಪೃಥಿವಿಗಳನ್ನು । ವಿಷ್ಕಭಾಯತಿ—ಸ್ಥಿರವಾಗಿ ಸ್ಥಾಪಿಸುತ್ತಾನೆ । ವೃಷ್ಣಃ—ತನ್ನ ಉದರವನ್ನು ತುಂಬುವ ಸೋಮರಸಗಳನ್ನು । ಪೀತ್ವಾ—ಪಾನಮಾಡಿ । ಮದೇ—ಹರ್ಷವುಂಟಾದಾಗ । ಉಕ್ಥಾನಿ—ಪ್ರಶಸ್ತವಾದ ಪ್ರಶಂಸಾವಾಕ್ಯಗಳನ್ನು । ಶಂಸತಿ—ಪಠಿಸುತ್ತಾನೆ.

ಭಾವಾರ್ಥ

ಸಂಚಾರಾತ್ಮಕವೂ, ಕಂಪಿಸುವುವೂ ಆದ ಮೇಘಗಳನ್ನು ಇಂದ್ರನು ನಿಶ್ಚಲವಾಗುವಂತೆ ಮಾಡಿದನು. ದ್ಯುಲೋಕವು ಇಂದ್ರನನ್ನು ರಕ್ಷಣೆಗಾಗಿ ಕೂಗುತ್ತದೆ. ಅಂತರಿಕ್ಷಗಳು ಕ್ಷೋಭೆಗೊಳ್ಳುತ್ತವೆ. ಇಂದ್ರನು ಒಂದುಗೂಡಿರುವ ದ್ಯಾವಾಪೃಥಿವಿಗಳನ್ನು ಸ್ಥಿರವಾಗಿ ಸ್ಥಾಪಿಸುತ್ತಾನೆ. ತನ್ನ ಉದರವನ್ನು ತುಂಬುವ ಸೋಮರಸಗಳನ್ನು ಪಾನ ಮಾಡಿ ಹರ್ಷವುಂಟಾದಾಗ ಪ್ರಶಸ್ತವಾದ ಪ್ರಶಂಸಾವಾಕ್ಯಗಳನ್ನು ಪಠಿಸುತ್ತಾನೆ.

## English Translation

(Indra) has arrested the wandering tremulous clouds : the heaven cries out (in alarm) : he agitates the firmament ; he fixes the combined heaven and earth : having drunk of the effused Soma, he repeats praises in his exhilaration.

ಸಂಹಿತಾಪಾಠಃ

ಇಮಂ ಬಿಭರ್ಮಿ ಸುಕೃತಂ ತೇ ಅಂಕುಶಂ ಯೇನಾರುಜಾಸಿ ಮಘವಞ್ಛ-
ಫಾರುಜಃ ।
ಅಸ್ಮಿನ್ತ್ಸು ತೇ ಸವನೇ ಅಸ್ತ್ವೋಕ್ಯಂ ಸುತ ಇಷ್ಟೌ ಮಘವನ್ಬೋಧ್ಯಾಭಗಃ

ಪದಪಾಠಃ

ಇಮಮ್ । ಬಿಭರ್ಮಿ । ಸುಽಕೃತಮ್ । ತೇ । ಅಂಕುಶಮ್ । ಯೇನ । ಆಽರುಜಾಸಿ । ಮಘಽವನ್ । ಶಫಽರುಜಃ ॥

  

ಅಸ್ಮಿನ್ । ಸು । ತೇ । ಸವನೇ । ಅಸ್ತು । ಓಕ್ಯಂ । ಸುತೇ । ಇಷ್ಟೌ । ಮಘವನ್ । ಬೋಧಿ ।

ಆಭಗಃ ॥

ಸಾಯಣಭಾಷ್ಯಂ

ಹೇ ಮಘವನ್ಧನವನ್ನಿಂದ್ರ ತೇ ತವ ಸುಕೃತಂ ಸಂಸ್ಕೃತಮಿಮಮಂಕುಶಂ ಬಿಭರ್ಮಿ । ಧಾರಯಾಮಿ । ಅತ್ರಾಂಕುಶಶಬ್ದೇನ ಪ್ರೇರಕತ್ವಗುಣಯೋಗಾತ್ಸ್ತುತಿರುಚ್ಯತೇ । ಸ್ತುತಿಂ ಧಾರಯಾಮೀತ್ಯರ್ಥಃ । ಯೇನ ಸ್ತುತಿಲಕ್ಷಣಾಂಕುಶೇನ ಸ್ತುತಃ ಸಂಸ್ತ್ವಂ ಶಫಾರುಜ ಅಭಿಮುಖ್ಯೇನ ಪರಬಲಾನಾಂ ಹಂತ್ರ್ಯಾನೈರಾವತಾದೀನ್ಗಜಾನಾರುಜಾಸಿ ಆಭಿಮುಖ್ಯೇನ ರುಜಸಿ । ಪೀಡಯಸೀತ್ಯರ್ಥಃ । ಕಿಂಚ ತೇ ತವಾಸ್ಮಿನ್ನಸ್ಮದೀಯೇ ಸವನ ಓಕ್ಯಮೋಕೋ ನಿವಾಸೋಽಸ್ತು । ಭವತು । ಕಿಂಚ ಹೇ ಮಘವನ್ಧನವನ್ನಿಂದ್ರ ಆಭಗ ಆಭಜನೀಯಸ್ತ್ವಂ ಸುತೇ ಸುತಸೋಮ ಇಷ್ಟೌ ಯಜ್ಞೇ ಬೋಧಿ । ಅಸ್ಮದೀಯಾಃ ಸ್ತುತೀರ್ಬುಧ್ಯಸ್ವ ॥

ಪ್ರತಿಪದಾರ್ಥ

ಮಘವನ್—ಧನವಂತನಾದ ಎಲೈ ಇಂದ್ರನೇ । ಯೇನ—ಯಾವ ಸ್ತುತಿರೂಪವಾದ ಅಂಕುಶದಿಂದ । ಶಫಾರುಜಃ—ಶತ್ರುಗಳ ಮೇಲೆ ಬೀಳುವ ನಿನ್ನ ಐರಾವತಾದಿ ಆನೆಗಳನ್ನು । ಆರುಜಾಸಿ—ತಿವಿಯುವಿಯೋ ಅಂತಹ । ತೇ—ನಿನ್ನ । ಸುಕೃತಂ—ಉತ್ತಮವಾಗಿ ಸಂಸ್ಕೃತವಾದ । ಇಮಂ ಅಂಕುಶಂ—ಸ್ತುತಿರೂಪವಾದ ಈ ಅಂಕುಶವನ್ನು । ಬಿಭರ್ಮಿ—ನಾನು ಹಿಡಿದಿದ್ದೇನೆ । ತೇ—ನಿನಗೆ । ಓಕ್ಯಂ—ವಾಸಸ್ಥಾನವು । ಅಸ್ಮಿನ್ ಸವನೇ—ನಮ್ಮ ಈ ಯಜ್ಞದಲ್ಲಿ । ಅಸ್ತು—ಇರಲಿ । ಮಘವನ್—ಧನವಂತನಾದ ಎಲೈ ಇಂದ್ರನೆ । ಆಭಗಃ—ಪೂಜ್ಯನಾದ ನೀನು । ಸುತೇ—ಸೋಮರಸವನ್ನು ಹಿಂಡಿರುವ । ಇಷ್ಟೌ—ನಮ್ಮ ಯಜ್ಞದಲ್ಲಿ । ಬೋಧಿ—ನಮ್ಮ ಸ್ತುತಿವಾಕ್ಯಗಳನ್ನು ತಿಳಿ.

ಭಾವಾರ್ಥ

ಧನವಂತನಾದ ಎಲೈ ಇಂದ್ರನೇ, ಯಾವ ಅಂಕುಶದಿಂದ ನೀನು ಶತ್ರುಸೈನ್ಯಗಳಮೇಲೆ ಬೀಳುವ ನಿನ್ನ ಐರಾವತಾದಿ ಆನೆಗಳನ್ನು ತಿವಿಯುವೆಯೋ ಅಂತಹ ನಿನ್ನ ಉತ್ತಮವಾಗಿ ಸಂಸ್ಕೃತವೂ, ಸ್ತುತಿರೂಪವೂ ಆದ ಈ ಅಂಕುಶವನ್ನು ನಾನು ಹಿಡಿದಿದ್ದೇನೆ. ನಿನಗೆ ವಾಸಸ್ಥಾನವು ನಮ್ಮ ಈ ಯಜ್ಞದಲ್ಲಿರಲಿ. ಧನವಂತನಾದ ಎಲೈ ಇಂದ್ರನೇ, ಪೂಜ್ಯನಾದ ನೀನು ಸೋಮರಸವನ್ನು ಹಿಂಡಿರುವ ನಮ್ಮ ಯಜ್ಞದಲ್ಲಿ ನಮ್ಮ ಸ್ತುತಿವಾಕ್ಯಗಳನ್ನು ತಿಳಿ.

## English Translation

I bear this your well-made goad, (excited) by which, Maghavat, you urge on the slayers of powerful foes. Let your abode be at this my sacrifice. Accept, Maghavat, who are to be adored, (my praise) at the sacrifice at which (the Soma) is effused.

ಸಂಹಿತಾಪಾಠಃ

ಗೋಭಿಷ್ಟರೇಮಾಮತಿಂ ದುರೇವಾಂ ಯವೇನ ಕ್ಷುಧಂ ಪುರುಹೂತ ವಿಶ್ವಾಂ ।
ವಯಂ ರಾಜಭಿಃ ಪ್ರಥಮಾ ಧನಾನ್ಯಸ್ಮಾಕೇನ ವೃಜನೇನಾ ಜಯೇಮ ॥೧೦॥

ಪದಪಾಠಃ

ಗೋಭಿಃ । ತರೇಮ । ಅಮತಿಂ । ದುಃಽಏವಾಂ । ಯವೇನ । ಕ್ಷುಧಂ । ಪುರುಽಹೂತ । ವಿಶ್ವಾಂ ।
ವಯಂ । ರಾಜಽಭಿಃ । ಪ್ರಥಮಾಃ । ಧನಾನಿ । ಅಸ್ಮಾಕೇನ । ವೃಜನೇನ । ಜಯೇಮ ॥ ೧೦ ॥

ಸಾಯಣಭಾಷ್ಯಂ

ಹೇ ಪುರುಹೂತ ಬಹುಭಿರಾಹೂತೇಂದ್ರ ತವ ಪ್ರಸಾದಾದ್ದುರೇವಾಂ ದುಷ್ಟಾಗಮನಾಂ ದಾರಿದ್ರ್ಯಾದಾಗತಾಮಮತಿಂ ದುರ್ಬುದ್ಧಿಂ ವಯಂ ಗೋಭಿಃ ಸುಖಸಾಧ್ಯೈಃ ಪಶುಭಿಸ್ತರೇಮ । ನಿಸ್ತರೇಮ । ಕಿಂಚ ಯವೇನ ವಿಶ್ವಾಂ ವ್ಯಾಪ್ತಾಂ ಕ್ಷುಧಂ ತರೇಮ । ಕಿಂಚ ಪ್ರಥಮಾ ಮುಖ್ಯಾನಿ ಧನಾನಿ ರಾಜಭಿರ್ಧನಾನಾಮೀಶ್ವರೈಃ । ಲಭೇಮಹೀತಿ ಶೇಷಃ । ಯದ್ವಾ । ಪ್ರಥಮಾ ವಯಮಿತಿ ಸಂಬಂಧಃ । ಕಿಂಚಾಸ್ಮಾಕೇನಾಸ್ಮದೀಯೇನ ವೃಜನೇನ ಬಲೇನ ಜಯೇಮ । ಶತ್ರೂನಿತಿ ಶೇಷಃ ॥

ಪ್ರತಿಪದಾರ್ಥ

ಪುರುಹೂತ—ಅನೇಕರಿಂದ ಕರೆಯಲ್ಪಡುವ ಎಲೈ ಇಂದ್ರನೇ । ದುರೇವಾಂ—ದಾರಿದ್ರ್ಯದಿಂದ ಪ್ರಾಪ್ತವಾದ । ಅಮತಿಂ—ದುರ್ಬುದ್ಧಿಯನ್ನು । ವಯಂ—ನಾವು । ಗೋಭಿಃ—ನಮ್ಮ ಪಶುಸಂಪತ್ತಿನ ಸಹಾಯದಿಂದ । ತರೇಮ—ದಾಟುವಂತಾಗಲಿ । ಯವೇನ—ಯವಧಾನ್ಯದ ಸಹಾಯದಿಂದ । ವಿಶ್ವಾಂ—ನಮ್ಮನ್ನಾವರಿಸಿರುವ । ಕ್ಷುಧಂ—ಹಸಿವನ್ನು ದಾಟುವಂತಾಗಲಿ । ಪ್ರಥಮಾಃ—ಅತಿ ಮುಖ್ಯವಾದ । ಧನಾನಿ—ಧನಗಳನ್ನು । ರಾಜಭಿಃ—ಧನದ ಪ್ರಭುಗಳಿಂದ (ನಾವು ಹೊಂದುವಂತಾಗಲಿ) ಅಸ್ಮಾಕೇನ—ನಮ್ಮ । ವೃಜನೇನ—ಶಕ್ತಿಯಿಂದ । ಜಯೇಮ—ಶತ್ರುಗಳನ್ನು ಜಯಿಸುವಂತಾಗಲಿ.

ಭಾವಾರ್ಥ

ಪುರುಹೂತನಾದ ಎಲೈ ಇಂದ್ರನೇ, ದಾರಿದ್ರ್ಯದಿಂದ ಪ್ರಾಪ್ತವಾದ ದುರ್ಬುದ್ಧಿಯನ್ನು ನಾವು ನಮ್ಮ ಪಶು ಸಂಪತ್ತಿನಿಂದ ದಾಟುವಂತಾಗಲಿ. ಯವಧಾನ್ಯದ ಸಹಾಯದಿಂದ ನಮ್ಮನ್ನಾವರಿಸುವ ಹಸಿವನ್ನು ನಾಶಪಡಿಸುವಂತಾಗಲಿ. ಧನಿಕರಿಂದ ನಾವು ಮುಖ್ಯವಾದ ಧನಗಳನ್ನು ಹೊಂದುವಂತಾಗಲಿ. ನಮ್ಮ ಶಕ್ತಿಯಿಂದ ಶತ್ರುಗಳನ್ನು ಜಯಿಸುವಂತಾಗಲಿ.

English Translation

Indra, invoked of many, may we escape all ignorance caused by poverty by means of our cattle : (may we escape) all hunger by means of

our barley : (may we acquire) the chief riches through the princes (of wealth) : may we conquer by our valour.

ಸಂಹಿತಾಪಾಠಃ

ಬೃಹಸ್ಪತಿರ್ನಃ ಪರಿ ಪಾತು ಪಶ್ಚಾದುತೋತ್ತರಸ್ಮಾದಧರಾದಘಾಯೋಃ ।
ಇಂದ್ರಃ ಪುರಸ್ತಾದುತ ಮಧ್ಯತೋ ನಃ ಸಖಾ ಸಖಿಭ್ಯೋ ವರಿವಃ ಕೃಣೋತು

ಪದಪಾಠಃ

ಬೃಹಸ್ಪತಿಃ । ನಃ । ಪರಿ । ಪಾತು । ಪಶ್ಚಾತ್ । ಉತ । ಉತ್ಽತರಸ್ಮಾತ್ । ಅಧರಾತ್ । ಅಘಽಯೋಃ ।
ಇಂದ್ರಃ । ಪುರಸ್ತಾತ್ । ಉತ । ಮಧ್ಯತಃ । ನಃ । ಸಖಾ । ಸಖಿಽಭ್ಯಃ । ವರಿವಃ । ಕೃಣೋತು ॥ ೧೧ ॥

ಸಾಯಣಭಾಷ್ಯಂ

ಪಶ್ಚಾತ್ಪಶ್ಚಿಮತೋ ಯೋಽಘಾಯುರಾಗಚ್ಛತಿ ತಸ್ಮಾದಘಾಯೋಃ ಪಾಪಕಾಂಕ್ಷಿಣಃ ಶತ್ರೋರ್ನೋಽಸ್ಮಾನ್ಬೃಹಸ್ಪತಿಃ ಪರಿ ಪಾತು । ರಕ್ಷತು । ಉತಾಪಿ ಚೋತ್ತರಸ್ಮಾದುತ್ತರತೋಽಧರಾದಧಸ್ತಾಚ್ಚ ಯೋಽಘಾಯುರಾಗಚ್ಛತಿ ತಸ್ಮಾದಘಾಯೋರ್ನೋಽಸ್ಮಾನ್ಪರಿ ಪಾತು । ಉತಾಪಿ ಚೇಂದ್ರಃ ಪುರಸ್ತಾತ್ಪೂರ್ವತೋ ಮಧ್ಯತಶ್ಚ ಯೋಽಘಾಯುರಾಗಚ್ಛತಿ ತಸ್ಮಾದಘಾಯೋರ್ನೋ೯ಽಸ್ಮಾನ್ಪರಿ ಪಾತು । ಕಿಂಚ । ಸಖಾ ಸಖಿಭೂತೇಂದ್ರಃ ಸಖಿಭ್ಯಃ ಪ್ರಿಯೇಭ್ಯೋಽಸ್ಮಭ್ಯಂ ವರಿವೋ ಧನಂ ಕೃಣೋತು । ಕರೋತು ॥

ಪ್ರತಿಪದಾರ್ಥ

ಬೃಹಸ್ಪತಿಃ—ಬೃಹಸ್ಪತಿಯು । ಪಶ್ಚಾತ್—ನಮ್ಮ ಹಿಂಭಾಗದಿಂದ । ಅಘಾಯೋಃ—ಕೇಡನ್ನು ಬಯಸುವ ಶತ್ರುವಿನಿಂದ । ನಃ—ನಮ್ಮನ್ನು । ಪರಿ ಪಾತು—ರಕ್ಷಿಸಲಿ । ಉತ—ಮತ್ತು । ಉತ್ತರಸ್ಮಾತ್—ನಮ್ಮ ಮೇಲ್ಭಾಗದಿಂದಲೂ । ಅಧರಾತ್—ಕೆಳಭಾಗದಿಂದಲೂ ನಮ್ಮ ಮೇಲೆ ಬೀಳುವ ಶತ್ರುಗಳಿಂದ ರಕ್ಷಿಸಲಿ । ಉತ—ಮತ್ತು । ಇಂದ್ರಃ—ಇಂದ್ರನು । ಪುರಸ್ತಾತ್—ಪೂರ್ವದಿಕ್ಕಿನಿಂದಲೂ । ಮಧ್ಯತಃ—ಮಧ್ಯಭಾಗದಿಂದಲೂ । ನಃ—ನಮ್ಮನ್ನು ರಕ್ಷಿಸಲಿ । ಸಖಾ—ಮಿತ್ರನಾದ ಇಂದ್ರನು । ಸಖಿಭ್ಯಃ—ಅವನ ಮಿತ್ರರಾದ ನಮಗೆ । ವರಿವಃ—ಧನವನ್ನು । ಕೃಣೋತು—ಒದಗಿಸಲಿ.

ಭಾವಾರ್ಥ

ನಮ್ಮ ಹಿಂಭಾಗದಿಂದ ಬಂದು ನಮಗೆ ಕೇಡನ್ನು ಬಯಸುವ ಶತ್ರುವಿನಿಂದ ಬೃಹಸ್ಪತಿಯು ನಮ್ಮನ್ನು ರಕ್ಷಿಸಲಿ. ನಮ್ಮ ಮೇಲ್ಭಾಗದಿಂದಲೂ, ಕೆಳಭಾಗದಿಂದಲೂ ನಮ್ಮ ಮೇಲೆ ಬೀಳುವ ಶತ್ರುಗಳಿಂದಲೂ ನಮ್ಮನ್ನು ರಕ್ಷಿಸಲಿ, ಇಂದ್ರನು ಪೂರ್ವದಿಕ್ಕಿನಿಂದಲೂ, ಮಧ್ಯಭಾಗದಿಂದಲೂ ನಮ್ಮನ್ನು ರಕ್ಷಿಸಲಿ. ಮಿತ್ರನಾದ ಇಂದ್ರನು ಅವನ ಮಿತ್ರರಾದ ನಮಗೆ ಧನವನ್ನು ಒದಗಿಸಲಿ.

## English Translation

May Brihaspati defend us from a malignant (foe) coming from behind, from above, or from below ; may Indra defend us from foes in front and in the middle ; may he, our friend bestow wealth upon (us) his friends.

---

# ನಲವತ್ತೈದನೆಯ ಸೂಕ್ತ

### ಸಾಯಣಭಾಷ್ಯಂ

ದಿವಸ್ಪರೀತಿ ದ್ವಾದಶರ್ಚಂ ತೃತೀಯಂ ಸೂಕ್ತಂ ಭಾಲಂದನಸ್ಯ ವತ್ಸಪ್ರೇರಾರ್ಷಂ ತ್ರೈಷ್ಟುಭಮಾಗ್ನೇಯಂ । ತಥಾ ಚಾನುಕ್ರಾಂತಂ । ದಿವಸ್ಪರಿ ದ್ವಾದಶ ವತ್ಸಪ್ರಿರಾಗ್ನೇಯಂ ತ್ವಿತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರಿದಮಾದಿಕೇ ದ್ವೇ ಸೂಕ್ತೇ ಅಸ್ಯ ಸೂಕ್ತಸ್ಯಾಂತ್ಯಾಂ ವರ್ಜಯಿತ್ವಾ । ಸೂತ್ರಿತಂ ಚ-ದಿವಸ್ಪರೀತಿ ಸೂಕ್ತಯೋಃ ಪೂರ್ವಸ್ಯೋತ್ತಮಾಮುದ್ಧರೇತ್ । ಆ-೪-೧೩ । ಇತಿ ॥ ಕ್ಷಾಮವತ್ಯಾಮಕ್ರಂದದಗ್ನಿರಿತ್ಯೇಷಾ ಯಾಜ್ಯಾ । ಸೂತ್ರಿತಂ ಚ । ಅಗ್ನೇ ತ್ವಮಸ್ಮದ್ಯುಯೋಧ್ಯಮೀವಾ ಅಕ್ರಂದದಗ್ನಿಃ ಸ್ತನಯನ್ನಿವ ದ್ಯೌಃ । ಆ-೩-೧೩ । ಇತಿ ॥

**ಅನುವಾದವು**—ದಿವಸ್ಪರಿ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವತ್ಸಪ್ರಿ ಭಾಲಂದನ ಎಂಬುವನು ಋಷಿಯು; ಅಗ್ನಿಯು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ದಿವಸ್ಪರಿ ದ್ವಾದಶ ವತ್ಸಪ್ರಿರಾಗ್ನೇಯಂ ತು** ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕಾಲದಲ್ಲಿ ಈ ಸೂಕ್ತದ ಕೊನೆಯ ಋಕ್ಕನ್ನು ಬಿಟ್ಟು ಉಳಿದ ಋಕ್ಕುಗಳ ಮತ್ತು ಇದರ ಮುಂದಿನ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ದಿವಸ್ಪರೀತಿ ಸೂಕ್ತಯೋಃ ಪೂರ್ವಸ್ಯೋತ್ತಮಾಮುದ್ಧರೇತ್** ಎಂಬ ಸೂತ್ರದಿಂದ (ಆ-೪-೧೩) ವಿವೃತವಾಗಿರುವುದು. ಕ್ಷಾಮವಾನ್ ಅಗ್ನಿಃ ಎಂಬ ಅಗ್ನಿಯನ್ನುದ್ದೇಶಿಸಿ ಮಾಡುವ ಹೋಮದಲ್ಲಿ **ಅಕ್ರಂದದಗ್ನಿಃ** ಎಂಬ ಈ ಸೂಕ್ತದ ನಾಲ್ಕನೆಯ ಋಕ್ಕನ್ನು ಯಾಜ್ಯಾ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಗ್ನೇ ತ್ವಮಸ್ಮದ್ಯುಯೋಧ್ಯಮೀವಾ ಅಕ್ರಂದದಗ್ನಿಃ ಸ್ತನಯನ್ನಿವ ದ್ಯೌಃ** ಎಂಬ ಸೂತ್ರದಿಂದ (ಆ-೩-೧೩) ವಿವೃತವಾಗಿರುವುದು.

## ಸೂಕ್ತ—೪೫

ಮಂಡಲ—೧೦ ॥ ಅನುವಾಕ—೪ ॥ ಸೂಕ್ತ—೪೫ ॥
ಅಷ್ಟಕ—೭ ॥ ಅಧ್ಯಾಯ—೮ ॥ ವರ್ಗ—೨೮, ೨೯ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ।
ಋಷಿಃ—ವತ್ಸಪ್ರಿಃ ।
ದೇವತಾ—ಅಗ್ನಿಃ ।
ಛಂದಃ—ತ್ರಿಷ್ಟುಪ್ ।

ಸಂಹಿತಾಪಾಠಃ

ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿರಸ್ಮದ್ದ್ವಿತೀಯಂ ಪರಿ ಜಾತವೇದಾಃ ।
ತೃತೀಯಮಪ್ಸು ನೃಮಣಾ ಅಜಸ್ರಮಿಂಧಾನ ಏನಂ ಜರತೇ ಸ್ವಾಧೀಃ ॥ ೧ ॥

ಪದಪಾಠಃ

ದಿವಃ । ಪರಿ । ಪ್ರಥಮಂ । ಜಜ್ಞೇ । ಅಗ್ನಿಃ । ಅಸ್ಮತ್ । ದ್ವಿತೀಯಂ । ಪರಿ । ಜಾತಽವೇದಾಃ ।
ತೃತೀಯಂ । ಅಪ್ಽಸು । ನೃಽಮನಾಃ । ಅಜಸ್ರಂ । ಇಂಧಾನಃ । ಏನಂ । ಜರತೇ । ಸುಽಆಧೀಃ ॥ ೧ ॥

ಸಾಯಣಭಾಷ್ಯಂ

ಅಗ್ನಿಃ ಪ್ರಥಮಂ ಪೂರ್ವಂ ದಿವೋ ದ್ಯುಲೋಕಸ್ಯ ಪರ್ಯುಪರ್ಯಾದಿತ್ಯಾತ್ಮನಾ ಜಜ್ಞೇ ಜಾತಃ । ಜಾತವೇದಾ ಜಾತಪ್ರಜ್ಞೋ ಜಾತಧನೋ ವಾಗ್ನಿರ್ದ್ವಿತೀಯಮಸ್ಮದಸ್ಮಾಕಂ ಪರ್ಯುಪರಿ ಪಾರ್ಥಿವಾತ್ಮನಾ ಜಜ್ಞೇ । ನೃಮಣಾ ನೃಷು ಮನುಷ್ಯೇಷ್ವನುಗ್ರಾಹಕತಯಾಸಕ್ತಚಿತ್ತೋಽಗ್ನಿಸ್ತೃತೀಯಮಪ್ಸ್ವಂತರಿಕ್ಷೇ ವೈದ್ಯುತಾತ್ಮನಾ ಜಜ್ಞೇ । ಏವಂವಿಧಮೇನಮಗ್ನಿಂ ಸ್ವಾಧೀಃ ಸುಪ್ರಜ್ಞಾತಾಜಸ್ರಮನವರತಮಿಂಧಾನೋ ದೀಪಯಞ್ಜರತೇ । ಸ್ತೌತಿ । ಯದ್ವಾ । ವಾಜಸನೇಯಕೋಕ್ತಪ್ರಕಾರೇಣಾಸ್ಯ ಮಂತ್ರಸ್ಯಾರ್ಥೋ ದ್ರಷ್ಟವ್ಯಃ । ತದ್ಯಥಾ । ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿರಿತಿ ಪ್ರಾಣೋ ವೈ ದ್ಯೌಃ ಪ್ರಾಣಾದ್ವಾ ಏಷ ಪ್ರಥಮಮಜಾಯತಾಸ್ಮದ್ದ್ವಿತೀಯಂ ಪರಿ ಜಾತವೇದಾ ಇತಿ ಯದೇನಮದೋ ದ್ವಿತೀಯಂ ಪುರುಷವಿಧೋಽಜನಯತ್ತೃತೀಯಮಪ್ಸ್ವಿತಿ ಯದೇನಮದಸ್ತೃತೀಯಮದ್ಭ್ಯೋಽಜನಯನ್ನೃಮಣಾ ಅಜಸ್ರಮಿತಿ ಪ್ರಜಾಪತಿರ್ವೈ ನೃಮಣಾ ಅಗ್ನಿರಜಸ್ರಮಿಂಧಾನ ಏನಂ ಜರತೇ ಸ್ವಾಧೀರಿತಿ ಯೋ ವಾ ಏನಮಿಂಧೇ ಸ ಏನಂ ಜನಯತೇ ಸ್ವಾಧೀಃ । ಶತ ೬-೭-೪-೩ । ಇತಿ ॥

ಪ್ರತಿಪದಾರ್ಥ

ಅಗ್ನಿಃ—ಅಗ್ನಿಯು । ಪ್ರಥಮಂ—ಮೊದಲು । ದಿವಃ ಪರಿ—ದ್ಯುಲೋಕದ ಮೇಲ್ಭಾಗದಲ್ಲಿ । ಜಜ್ಞೇ—ಉತ್ಪನ್ನನಾದನು । ಜಾತವೇದಾಃ—ಜಾತವೇದೋರೂಪನಾಗಿ । ದ್ವಿತೀಯಂ—ಎರಡನೆಯ ಸಲ । ಅಸ್ಮತ್ ಪರಿ—ನಮ್ಮ ಲೋಕವಾದ ಪೃಥ್ವಿಯ ಮೇಲೆ ಉತ್ಪನ್ನನಾದನು । ತೃತೀಯಂ—ಮೂರನೆಯ ಸಲ । ನೃಮಣಾಃ—ಮಾನವರಿಗೆ ಹಿತಕಾರಿಯಾದ ಅಗ್ನಿಯು । ಅಪ್ಸು—ಅಂತರಿಕ್ಷದಲ್ಲಿ ಉತ್ಪನ್ನನಾದನು । ಏನಂ—ಈ ಮಹತ್ತ್ವವುಳ್ಳ ಅಗ್ನಿಯನ್ನು । ಸ್ವಾಧೀಃ—ಉತ್ತಮವಾದ ಪ್ರಜ್ಞೆಯುಳ್ಳ ಋಷಿಯು । ಅಜಸ್ರಂ—ಯಾವಾಗಲೂ । ಇಂಧಾನಃ—ಪ್ರಜ್ವಲಿಸುವಂತೆ ಮಾಡುತ್ತ । ಜರತೇ—ಸ್ತುತಿಸುತ್ತಾನೆ.

ಭಾವಾರ್ಥ

ಅಗ್ನಿಯು ಮೊದಲನೆಯ ಸಲ ದ್ಯುಲೋಕದಮೇಲೆ ಉತ್ಪನ್ನನಾದನು. ಎರಡನೆಯ ಸಲ ಜಾತವೇದೋರೂಪನಾಗಿ ಪೃಥ್ವಿಯ ಮೇಲೆ ಉತ್ಪನ್ನನಾದನು. ಮಾನವರಿಗೆ ಹಿತಕಾರಿಯಾದ ಅದೇ ಅಗ್ನಿಯು ಮೂರನೆಯ ಸಲ

ವಿದ್ಯುದಾದಿ ರೂಪಗಳಲ್ಲಿ ಅಂತರಿಕ್ಷದಲ್ಲಿ ಜನಿಸಿದನು. ಉತ್ತಮವಾದ ಪ್ರಜ್ಞೆಯುಳ್ಳ ಋಷಿಯು ಯಾವಾಗಲೂ ಅಗ್ನಿಯನ್ನು ಪ್ರಜ್ವಲಿಸುವಂತೆ ನೋಡುತ್ತ ಸ್ತುತಿಸುತ್ತಾನೆ.

## English Translation

Agni was first born above the sky; as Jatavedas he was born the second time amongst us; the friend of man, he was born the third time in the waters; the sage kindling him eternally praises him.

### ವಿಶೇಷವಿಷಯಗಳು

ವಿಶ್ವವ್ಯಾಪಕವೂ, ವಿಶ್ವಧಾರಕವೂ ಆದ ಅಗ್ನಿಯ ಮಹತ್ತ್ವದ ವರ್ಣನವು ೧೦-೪೫ನೇ ಸೂಕ್ತದಲ್ಲಿ ಅತಿಶಯವಾದ ಕಾವ್ಯಾತ್ಮಕವಾಗಿದೆ. ಜನ್ಮರಹಿತನೂ, ಅಮರನೂ ಆದ ಅಗ್ನಿಯ ರೂಪಾಂತರಗಳ ಆವಿರ್ಭಾವವನ್ನೇ ಇಲ್ಲಿ ಅಗ್ನಿಯ ಜನ್ಮಪ್ರಭೇದಗಳೆಂದು ನಿರ್ದೇಶಿಸಿದೆ. ಅನಾದಿಯೂ, ಅದ್ವಿತೀಯನೂ, ವಿಶ್ವವ್ಯಾಪಕನೂ ಆದ ಅಗ್ನಿಯ ಪ್ರಭೇದಗಳೇ ಇತರ ಸಕಲ ದೇವತೆಗಳೆಂದು ಸಂಹಿತಾದಿ ವಾಕ್ಯಗಳು ಸಾರಿವೆ. ವಿಶ್ವಕ್ಕೆಲ್ಲ ಸಾರ್ವಭೌಮನಾದ ಅಗ್ನಿಯು ಮೂರು ಲೋಕಗಳಲ್ಲಿಯೂ ಮೂರು ವಿಧವಾದ ರೂಪಗಳಿಂದ ಪ್ರಕಾಶಿಸುತ್ತ ಮೂರು ನಾಮಧೇಯಗಳಿಂದ ಪ್ರಸಿದ್ಧನಾಗಿದ್ದಾನೆ. ದ್ಯುಲೋಕಸ್ಥನಾದ ಆದಿತ್ಯನೂ, ಮಧ್ಯಲೋಕದ ಇಂದ್ರನೂ ಈ ಅಗ್ನಿಯ ರೂಪಾಂತರಗಳೇ ಅಲ್ಲದೆ ಬೇರೆಯಲ್ಲ. ಪಾರ್ಥಿವಾಗ್ನಿಗೆ ಸಂಬಂಧಿಸಿದ ಅವಾಂತರ ಪ್ರಭೇದಗಳೂ ಅನೇಕವಾಗಿರುತ್ತವೆ. ಹೀಗೆ ನಾನಾ ರೂಪಗಳಿಂದ ತನ್ನ ಸ್ವರೂಪವನ್ನು ಪ್ರಕಾಶಪಡಿಸಿ ವಿಶ್ವವನ್ನು ಧರಿಸಿ ಪೋಷಿಸುತ್ತಿರುವ ಅಗ್ನಿಯ ಮಹತ್ತ್ವವನ್ನು ಪ್ರಶಂಸಿಸುವುದೇ ಪ್ರಕೃತ ಸೂಕ್ತದ ಉದ್ದೇಶ್ಯವಾಗಿರುತ್ತದೆ.

೧) ಮೂರು ಲೋಕಗಳಲ್ಲಿಯೂ ಮೂರು ರೂಪಗಳಿಂದ ಅಗ್ನಿಯ ಆವಿರ್ಭಾವ.

೨) ಲೋಕಪ್ರತ್ಯಕ್ಷಕ್ಕೆ ಗೋಚರವಾಗುವ ಮೂರು ರೂಪಗಳು ಮತ್ತು ಅಂತರ್ಗತವಾಗಿರುವ ದಿವ್ಯ ಸ್ವರೂಪ.

೩) ಅಗ್ನಿಯ ಯಜ್ಞನೇತೃತ್ವ ಮತ್ತು ತನ್ಮೂಲಕವಾಗಿ ವಿಶ್ವಧಾರಕತ್ವ ಇತ್ಯಾದಿ ವಿಷಯಗಳು ಪ್ರಕೃತ ಸೂಕ್ತದಲ್ಲಿ ವರ್ಣಿತವಾಗಿವೆ. ಮೊದಲನೆಯ ಋಕ್ಕಿನಲ್ಲಿ ಅಗ್ನಿಯ ಮೂರು ವಿಧವಾದ ಉತ್ಪತ್ತಿಕ್ರಮವನ್ನು ತಿಳಿಸಿದೆ. ಹಿಂದೆ ತ್ರೀಣಿ ಜಾನಾ ಎಂಬ ಋಕ್ಕಿನ ತಾತ್ಪರ್ಯವನ್ನು ವಿವರಿಸುವಾಗ ಈ ವಿಷಯವನ್ನು ಸಂಕ್ಷೇಪವಾಗಿ ತಿಳಿಸಿದೆಯಾದರೂ, ಪ್ರಕೃತದಲ್ಲಿ ಇದರ ವಿವರವನ್ನು ವಿಸ್ತೃತವಾಗಿ ತಿಳಿಸಿ ಅಗ್ನಿಯ ಉತ್ಪತ್ತಿಯ ವಿಷಯದಲ್ಲಿ ಪ್ರಸಿದ್ಧವಾಗಿರುವ ನಾನಾ ವಾಕ್ಯಗಳನ್ನು ಉದಾಹರಿಸಿ ಆಯಾ ಸಂದರ್ಭಗಳ ವಿಶೇಷಾಂಶಗಳನ್ನು ತಿಳಿಸಲಾಗುತ್ತದೆ.

“ ಅಗ್ನಿಯು ಪ್ರಥಮತಃ ದ್ಯುಲೋಕದಲ್ಲಿ ಉತ್ಪನ್ನನಾದನು. ಅನಂತರ ಜಾತವೇದೋ ರೂಪದಲ್ಲಿ ಪೃಥಿವಿಯಲ್ಲಿ ಉತ್ಪನ್ನನಾದನು. ಮಾನವರಿಗೆ ಮಿತ್ರನಾದ ಅದೇ ಅಗ್ನಿಯು ಮೂರನೆಯ ಸಲ ಅಂತರಿಕ್ಷದಲ್ಲಿ ಉತ್ಪನ್ನನಾದನು ” ಎಂಬುದೇ ಮೊದಲನೆಯ ಋಕ್ಕಿನ ತಾತ್ಪರ್ಯವು.

ದ್ಯುಲೋಕಸ್ಯ ಉಪರಿ ಆದಿತ್ಯಾತ್ಮನಾ ಜಾತಃ । ದ್ವಿತೀಯಂ ಪಾರ್ಥಿವಾತ್ಮನಾ ಜಜ್ಞೇ । ತೃತೀಯಂ ಅಂತರಿಕ್ಷೇ ವೈದ್ಯುತಾತ್ಮನಾ ಜಜ್ಞೇ । ದ್ಯುಲೋಕದಲ್ಲಿ ಆದಿತ್ಯನೂ ಅಂತರಿಕ್ಷದಲ್ಲಿ ವೈದ್ಯುತಾ

ತ್ಮನೂ ಆದ ಅಗ್ನಿಯೇ ಪೃಥಿವ್ಯಯಲ್ಲಿಯೂ ಪಾರ್ಥಿವಾಗ್ನಿರೂಪದಲ್ಲಿ ಉತ್ಪನ್ನನಾದನು ಎಂದು ಸಾಯಣಭಾಷ್ಯದ ವಿವರಣೆಯಿರುತ್ತದೆ. ಅಗ್ನಿಯ ಈ ವಿಧವಾದ ರೂಪಾಂತರಗಳನ್ನು ಮುಂದಿನ ಋಕ್ಕಿನ ವಿಶೇಷ ವಿಷಯಗಳಲ್ಲಿ ತಿಳಿಸಲಾಗುತ್ತದೆ. ಅವನ ಉತ್ಪತ್ತಿಯ ಪ್ರಕಾರಗಳೇನು ? ಉತ್ಪತ್ತಿಯ ಮೂಲಗಳಾವುವು ? ಉತ್ಪತ್ತಿಯ ಸ್ವರೂಪಗಳು ಹೇಗೆ ಎಂಬ ಅಂಶಗಳು ಹೇಗೆ ವರ್ಣಿತವಾಗಿವೆಯೆಂದು ಪ್ರಕೃತದಲ್ಲಿ ಪರಿಶೀಲಿಸಲಾಗುತ್ತದೆ.

ಅಗ್ನಿಯ ಉತ್ಪತ್ತಿಯನ್ನು ವಿವರಿಸುವ ವಾಕ್ಯಗಳು ಅನೇಕವಾಗಿದ್ದು ಸ್ಥೂಲವಾಗಿ ನೋಡುವವರಿಗೆ ಅವು ಒಂದಕ್ಕೊಂದು ವಿರುದ್ಧವಾಗಿರುವಂತಿರುತ್ತವೆ. ಆದರೆ ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಆ ವಿರುದ್ಧಾಂಶವಾವುದೂ ಇರುವುದಿಲ್ಲ. ಅಗ್ನಿಯ ಪ್ರಥಮಜನ್ಮವು ದ್ಯುಲೋಕದಲ್ಲಿ ಎಂದಿದೆ. ಅದು ಹೇಗೆ ? ಉತ್ಪತ್ತಿಯ ಕ್ರಮವು ಹೇಗೆ ಎಂಬುದು ವಿಸ್ತೃತವಾಗಿ ವಿವೃತವಾಗಿದೆ.

## ದ್ಯುಲೋಕಸ್ಥನಾದ ಅಗ್ನಿಯ ಉತ್ಪತ್ತಿ

ಸ ಜಾಯಮಾನಃ ಪರಮೇ ವ್ಯೋಮನ್ಯಾವಿರಗ್ನಿರಭವನ್ಮಾತರಿಶ್ವನೇ ।
ಅಸ್ಯ ಕ್ರತ್ವಾ ಸಮಿಧಾನಸ್ಯ ಮಜ್ಮನಾ ಪ್ರ ದ್ಯಾವಾ ಶೋಚಿಃ ಪೃಥಿವೀ ಅರೋಚಯತ್ ॥
(ಋ. ಸಂ. ೧-೧೪೩-೨)

ಎಂಬ ಮಂತ್ರದ ತಾತ್ಪರ್ಯವನ್ನು ಓದಿ ವಿವರಿಸುವಾಗ ಅಗ್ನಿಯು ಮಾತರಿಶ್ವನ ಎದುರಿಗೆ ಆವಿರ್ಭೂತನಾದ ವಿವರವನ್ನು ತಿಳಿಸಿದೆ. ಈ ಮಂತ್ರದಲ್ಲಿ ಅಗ್ನಿಯ ಮೂರುಲೋಕದ ಮೂರು ವಿಧವಾದ ಆವಿರ್ಭಾವವನ್ನೂ ಸೂಚಿಸಿದೆ.

ಪ್ರಥಮತಃ :— ಮಾತರಿ ಅಂತರಿಕ್ಷೇ ಶ್ವಸಿತಿ ಪ್ರಾಣಿತಿ ಸೂರ್ಯರೂಪೇಣ ಚೇಷ್ಟತ ಇತಿ ಸೂರ್ಯರೂಪದಲ್ಲಿ ಅಂತರಿಕ್ಷದಲ್ಲಿ ಸಂಚರಿಸುವವನು ಎಂದೂ ;

ಎರಡನೆಯದಾಗಿ:— ವಾಯುರೂಪದ ಅಗ್ನಿಯೆಂದೂ ;

ಮೂರನೆಯದಾಗಿ:— ಪೃಥಿವ್ಯಯಲ್ಲಿ ಯಜ್ಞನಿರ್ವಾಹಕನಾದ ಯಜಮಾನನೆಂದೂ ತಾತ್ಪರ್ಯವನ್ನು ತಿಳಿಸಿದೆ. ಈ ಮೂರು ರೂಪಗಳಲ್ಲಿಯೂ ಪ್ರತ್ಯಕ್ಷನಾದ ಅಗ್ನಿಯು ಮೂರುಲೋಕಗಳನ್ನೂ ಬೆಳಗಿಸಿದವನು ಎಂದಿರುವಾಗ ಅಗ್ನಿಗೂ, ಮಾತರಿಶ್ವನಿಗೂ ತಾದಾತ್ಮ್ಯವನ್ನು ತೋರಿಸಿದೆ.

ಉದು ಷ್ಟುತಃ ಸಮಿಧಾ ಯಹ್ವೋ ಅದ್ಯೌದ್ವರ್ಷ್ಮನ್ದಿವೋ ಅಧಿ ನಾಭಾ ಪೃಥಿವ್ಯಾಃ ।
ಮಿತ್ರೋ ಅಗ್ನಿರೀಡ್ಯೋ ಮಾತರಿಶ್ವಾ ದೂತೋ ವಕ್ಷದ್ಯಜಥಾಯ ದೇವಾನ್ ॥
(ಋ. ಸಂ. ೩-೫-೯)

ಇತ್ಯಾದಿ ಸ್ಥಳಗಳಲ್ಲಿ ಮಾತರಿಶ್ವನ್ ಶಬ್ದವನ್ನು ವಿವರಿಸಿ ಅಗ್ನಿಯ ವಿಶೇಷಗುಣವನ್ನು ತಿಳಿಸುವ ಪದವಾಗಿದೆಯೆಂದು ತಿಳಿಸಿದೆ. ಈ ರೂಪಗಳಲ್ಲಿ ಆವಿರ್ಭಾವವನ್ನು ಹೊಂದುವುದಕ್ಕೆ ಪೂರ್ವಭಾವಿಯಾಗಿದ್ದ ಅಗ್ನಿಯ ಮೂಲರೂಪವೇನು ಎಂದರೆ, ಅದಕ್ಕೆ ಉತ್ತರವಾಗಿ ಈ ರೀತಿಯಿರುತ್ತದೆ.

ಅಸಚ್ಚ ಸಚ್ಚ ಪರಮೇ ವ್ಯೋಮನ್ದಕ್ಷಸ್ಯ ಜನ್ಮನ್ನದಿತೇರುಪಸ್ಥೇ ।
ಅಗ್ನಿರ್ಹ ನಃ ಪ್ರಥಮಜಾ ಋತಸ್ಯ ಪೂರ್ವ ಆಯುನಿ ವೃಷಭಶ್ಚ ಧೇನುಃ ॥
(ಋ. ಸಂ. ೧೦-೫-೭)

ದಕ್ಷನ ಸ್ಥಾನವಾದ ಅತ್ಯುತ್ತಮವಾದ ದಿವ್ಯಲೋಕದಲ್ಲಿ ಪ್ರಥಮತಃ ಅವ್ಯಾಕೃತರೂಪನಾಗಿಯೂ ಮತ್ತು ವ್ಯಾಕೃತರೂಪನಾಗಿಯೂ ಅಗ್ನಿಯು ಲೋಕವ್ಯವಹಾರಗಳಿಗೆಲ್ಲ ಅಧ್ಯಕ್ಷನಾಗಿದ್ದನು. ಅನಂತರ ಲೋಕದ ಸಕಲ ಪ್ರಜೆಗಳಿಗಿಂತಲೂ ಮೊದಲು ತಾನು ಉತ್ಪನ್ನನಾದನು ಎಂದು ಅಗ್ನಿಯ ಅಲೌಕಿಕ ಮತ್ತು ಲೌಕಿಕಸ್ವರೂಪಗಳು ವರ್ಣಿತವಾಗಿವೆ. ದ್ಯುಲೋಕದಲ್ಲಿ ಇವನ ಮೊದಲನೆಯ ಉತ್ಪತ್ತಿಯು ಆದಿತ್ಯರೂಪದಲ್ಲಿ. ಇವನ ಶಾಶ್ವತವಾದ ಪ್ರಕಾಶವು ಅಲ್ಲಿಯೇ.

**ಸ ಜಾಯಮಾನಃ ಪರಮೇ ವ್ಯೋಮನಿ ವ್ರತಾನ್ಯಗ್ನಿರ್ವ್ರತಪಾ ಅರಕ್ಷತ ।**
**ವ್ಯಂತರಿಕ್ಷಮಮಿಮೀತ ಸುಕ್ರತುರ್ವೈಶ್ವಾನರೋ ಮಹಿನಾ ನಾಕಮಸ್ಪೃಶತ್ ॥**

(ಋ. ಸಂ. ೬-೮-೨)

ವೈಶ್ವಾನರಸಂಜ್ಞಕನಾದ ಅಗ್ನಿಯು ಅತ್ಯುತ್ಕೃಷ್ಟವಾದ ಆಕಾಶದಲ್ಲಿ ಸೂರ್ಯರೂಪದಿಂದ ಉತ್ಪನ್ನನಾಗಿ ವ್ರತಗಳನ್ನು ರಕ್ಷಿಸುತ್ತಾನೆ. ಇದೇ ಅಗ್ನಿಯು ಮೂರು ಲೋಕಗಳನ್ನು ನಿರ್ಮಿಸಿದ್ದಾನೆ. ತನ್ನ ಮಹತ್ತ್ವದಿಂದ ದ್ಯುಲೋಕದಲ್ಲಿ ಸ್ಥಾಪಿತನಾಗಿ ಪ್ರಕಾಶಿಸುತ್ತಾನೆ. ಇತ್ಯಾದಿ ವರ್ಣನೆಗಳು ಆದಿತ್ಯರೂಪನಾದ ಅಗ್ನಿಯ ಸ್ತುತಿಗಳಾಗಿರುತ್ತವೆ.

**ಶುಚಿಂ ನ ಯಾಮನ್ನಿಷಿರಂ ಸ್ವರ್ದೃಶಂ ಕೇತುಂ ದಿವೋ ರೋಚನಸ್ಥಾಮುಷರ್ಬುಧಂ ।**
**ಅಗ್ನಿಂ ಮೂರ್ಧಾನಂ ದಿವೋ ಅಪ್ರತಿಷ್ಕುತಂ ತಮೀಮಹೇ ನಮಸಾ ವಾಜಿನಂ ಬೃಹತ್ ॥**

(ಋ. ಸಂ. ೩-೨-೧೪)

ಈ ಅಗ್ನಿಯು ದ್ಯುಲೋಕಕ್ಕೆ ಪ್ರಧಾನನು. ದ್ಯುಲೋಕದಲ್ಲಿ ಪ್ರಕಾಶಿಸತಕ್ಕವನು, ಮಹಾತ್ಮನು, ದ್ಯುಲೋಕಕ್ಕೆ ಪ್ರಜ್ಞಾಪಕನು. ಯಜ್ಞದಲ್ಲಿ ಪೂಜ್ಯನಾದ ಈ ಅಗ್ನಿಯನ್ನು ಪೂಜಿಸುತ್ತೇವೆ—ಇತ್ಯಾದಿ ಪ್ರಶಂಸೆಗಳು ಆದಿತ್ಯರೂಪನಾದ ಅಗ್ನಿಯನ್ನು ನಿರ್ದೇಶಿಸುವುದಾಗಿವೆ. ಈ ಆದಿತ್ಯರೂಪನಾದ ಅಗ್ನಿಯ ಮಹತ್ತ್ವವೇನೆಂದರೆ—

**ಯೋ ವಿಶ್ವಾಭಿ ವಿಪಶ್ಯತಿ ಭುವನಾ ಸಂ ಚ ಪಶ್ಯತಿ । ಸ ನಃ ಪರ್ಷದತಿ ದ್ವಿಷಃ ॥**

(ಋ. ಸಂ. ೧೦-೧೮೭-೪)

**ಯೋ ಅಸ್ಯ ಪಾರೇ ರಜಸಃ ಶುಕ್ರೋ ಅಗ್ನಿರಜಾಯತ । ಸ ನಃ ಪರ್ಷದತಿ ದ್ವಿಷಃ ॥**

(ಋ. ಸಂ. ೧೦-೧೮೭-೫)

ಯಾವ ಸೂರ್ಯರೂಪನಾದ ಅಗ್ನಿಯು ತನ್ನ ತೇಜಸ್ಸಿನಿಂದ ಸಕಲ ಲೋಕಗಳನ್ನೂ ಪ್ರಕಾಶಿಸುವಂತೆ ಮಾಡುವನೋ, ಯಾರು ಸಕಲಲೋಕಗಳನ್ನೂ ನೋಡಬಲ್ಲನೋ, ಯಾರು ಅಂತರಿಕ್ಷದ ಪ್ರದೇಶವನ್ನು ಮೀರಿದ ಉನ್ನತ ಪ್ರದೇಶದಲ್ಲಿ ತನ್ನ ಪ್ರಭೆಯಿಂದ ಬೆಳಗುತ್ತಿರುವನೋ ಅದೇ ಅಗ್ನಿಯು ನಮ್ಮನ್ನೆಲ್ಲ ರಕ್ಷಿಸಬಲ್ಲನು. ಈ ಆದಿತ್ಯರೂಪನಾದ ಅಗ್ನಿಯು ದ್ಯುಲೋಕೋತ್ಪನ್ನನು.

**ಅಸೌ ವಾ ಆದಿತ್ಯ ಏಷ ರುಕ್ಮಃ ... ಶ್ರೀರ್ವೈ ವಾ ಅಸಾವಾದಿತ್ಯೋಽಥೋ, . . . ಮುಮುರಂ ವಾ ಏತಸ್ಯಾಯುಃ ಶ್ರಿಯೋ ಏಷ ರೋಚತೇಽಗ್ನಿರಮೃತೋಽಭವದ್ವಯೋಭಿರಿತಿ ಸರ್ವ್ವಂ ವಾ ಏಷ ವಯೋಭಿರಮೃತೋಽಭವದ್ಯದೇನಂ ದ್ಯೌರಜನಯದಿತಿ ದ್ಯೌರ್ಹ್ಯೇತಮಜನಯತ್ಸುರೇತಾ ಇತಿ ಸುರೇತಾ ಏಷಾ ಯಸ್ಯ ಏಷ ರೇತಃ ॥**

(ಶ. ಬ್ರಾ. ೬-೬.೨.೨)

ಹೊಂಬಣ್ಣದ ಆದಿತ್ಯಮಂಡಲವು ದ್ಯುಲೋಕದಲ್ಲಿ ತನ್ನ ಅನುರವಾದ ಪ್ರಭೆಯಿಂದ ಪ್ರಕಾಶಿಸುತ್ತಿದೆ. ಸರ್ವಲೋಕವ್ಯಾಪ್ತಿಯಾದ ಅಗ್ನಿಯ ಪ್ರಭಾವವೇ ಇದು. ದ್ಯುಲೋಕವು ಆದಿತ್ಯರೂಪದಲ್ಲಿ ಈ ಅಗ್ನಿಯನ್ನು ಧರಿಸಿದೆ. ಈ ಅಗ್ನಿಯನ್ನು ದ್ಯುಲೋಕವು ತನ್ನ ಗರ್ಭದಲ್ಲಿ ಧರಿಸಿದುದರಿಂದ ಉತ್ತಮವಾದ ಗರ್ಭವನ್ನೇ ಧರಿಸಿದಂತಾಯಿತು. ಇತ್ಯಾದಿಯಾಗಿ ದ್ಯುಲೋಕೋತ್ಪನ್ನನಾದ ಅಗ್ನಿಯ ಪ್ರಶಂಸೆಯಿರುತ್ತದೆ.

## ಅಂತರಿಕ್ಷೋತ್ಪನ್ನನಾದ ವೈದ್ಯುತಾಗ್ನಿಯ ಪ್ರಶಂಸೆ

ಅಂತರಿಕ್ಷಸ್ಥನಾದ ಅಗ್ನಿಯು ವೈದ್ಯುತಾಗ್ನಿರೂಪದಲ್ಲಿ ಪ್ರಕಾಶಿಸುತ್ತ **ಅಪಾಂ ನಪಾತ್; ಅಪಾಂ ಗರ್ಭಃ** ಇತ್ಯಾದಿಯಾಗಿ ವರ್ಣಿತನಾಗಿದ್ದಾನೆ.

**ಪ್ರ ಕೇತುನಾ ಬೃಹತಾ ಯಾತ್ಯಗ್ನಿರಾ ರೋದಸೀ ವೃಷಭೋ ರೋರವೀತಿ ।**
**ದಿವಶ್ಚಿದಂತಾઁ ಉಪಮಾઁ ಉದಾನಳಪಾಮುಪಸ್ಥೇ ಮಹಿಷೋ ವವರ್ಧ ॥**

(ಋ. ಸಂ. ೧೦-೮-೧)

ಅಂತರಿಕ್ಷಸ್ಥವಾದ ಉದಕದಿಂದ ಉತ್ಪನ್ನನೂ, ಉದಕಗಳ ತೊಡೆಯಮೇಲೆ ಮಲಗಿ ಆಡವಾಡುವವನೂ ಆದ ವೈದ್ಯುತಾಗ್ನಿಯು ದ್ಯಾವಾಪೃಥಿವಿಗಳನ್ನೆಲ್ಲ ವ್ಯಾಪಿಸುತ್ತಾನೆ. ವೃಷಭದಂತೆ ಗುಟುರು ಹಾಕುತ್ತಾನೆ. ಇತ್ಯಾದಿಯಾಗಿ ಅಂತರಿಕ್ಷೋತ್ಪನ್ನನಾದ ಅಗ್ನಿಯ ಪ್ರಶಂಸೆಯಿರುತ್ತದೆ. ಇದೇ ಅಗ್ನಿಯು **ಅಪ್ತ್ಯ**ನೆಂದೂ ನಿರ್ದಿಷ್ಟನಾಗಿದ್ದಾನೆ. ಪೃಥ್ವೀಸ್ಥವಾದ ಉದಕದಿಂದಲೂ ಅಗ್ನಿಯು ಉತ್ಪನ್ನವಾಗುವುದಾದರೂ ಸಹ ಸಾಧಾರಣವಾಗಿ **ಅಪ್ತ್ಯ**ನೆಂಬ ಅಂತರಿಕ್ಷಸ್ಥವಾದ ಉದಕದಿಂದ ಉತ್ಪನ್ನನಾದ ವೈದ್ಯುತಾಗ್ನಿಗೆ ಮಾತ್ರ ವಿಶೇಷಣವಾಗಿರುತ್ತದೆ. **ಧನೋರಧಿ ಪ್ರವತಃ** (ಋ. ಸಂ. ೧-೧೪೪-೫) ಇತ್ಯಾದಿ ವರ್ಣನವಿರುವ ಸನ್ನಿವೇಶಗಳಲ್ಲಿ ಈ ಅಂಶವು ಸ್ಪಷ್ಟವಾಗಿರುತ್ತದೆ.

**ಸ ಶ್ವಿತಾನಸ್ತನ್ಯತೂ ರೋಚನಸ್ಥಾ ಅಜರೇಭಿರ್ನಾನದದ್ಭಿರ್ಯವಿಷ್ಠಃ ।**
**ಯಃ ಪಾವಕಃ ಪುರುತಮಃ ಪುರೂಣಿ ಪೃಥೂನ್ಯಗ್ನಿರನುಯಾತಿ ಭರ್ವನ್ ॥**

(ಋ. ಸಂ. ೬-೬-೨)

ಇತ್ಯಾದಿ ಸ್ಥಳಗಳಲ್ಲಿ ವೈದ್ಯುತಾಗ್ನಿಯ ವರ್ಣನವು ವಿಶದವಾಗಿರುತ್ತದೆ. ಈ ವಿದ್ಯುದ್ರೂಪದ ಅಗ್ನಿಯು ಅತ್ಯಧಿಕವಾಗಿ ಪ್ರಕಾಶಿಸುತ್ತಾನೆ. ಇವನು ಅಂತರಿಕ್ಷದಲ್ಲಿ ಪ್ರಕಾಶಿಸುತ್ತ ಅಧಿಕವಾದ ಶಬ್ದವನ್ನುತ್ಪನ್ನಮಾಡುತ್ತಾನೆ. ಕ್ಷಯರಹಿತವೂ, ಶಬ್ದಕಾರಕವೂ ಆದ ರಶ್ಮಿಗಳೊಂದಿಗೆ ವ್ಯಾಪಿಸಿ ಹರಡುತ್ತಾನೆ. ಇತ್ಯಾದಿಯಾಗಿ ಪ್ರಶಂಸಿತವಾಗಿರುತ್ತದೆ. ಅಂತರಿಕ್ಷಸ್ಥವಾದ ಉದಕದಿಂದ ಅಗ್ನಿಯು ಉತ್ಪನ್ನನಾಗಿದ್ದಾನೆ ಎಂಬ ವರ್ಣನವು ಋಕ್ಸಂಹಿತೆಯಲ್ಲಿ ಅತ್ಯಧಿಕವಾಗಿರುತ್ತದೆ.

**ವನೇಷು ವ್ಯಂತರಿಕ್ಷಂ ತತಾನ ವಾಜಮರ್ವತ್ಸು ಪಯ ಉಸ್ರಿಯಾಸು ।**
**ಹೃತ್ಸು ಕ್ರತುಂ ವರುಣೋ ಅಪ್ಸ್ವಗ್ನಿಂ ದಿವಿ ಸೂರ್ಯಮದಧಾತ್ಸೋಮಮದ್ರೌ ॥**

(ಋ. ಸಂ. ೫-೮೫-೨)

ವರುಣದೇವನು ದ್ಯುಲೋಕಾದಿಗಳಲ್ಲಿ ಆದಿತ್ಯಾದಿಗಳನ್ನು ಸ್ಥಾಪಿಸಿದಂತೆ ಉದಕದಲ್ಲಿ ಅಗ್ನಿಯನ್ನು ಸ್ಥಾಪಿಸಿದನು ಎಂದಿರುವಾಗ **ಅಪ್** ಶಬ್ದಕ್ಕೆ ಅಂತರಿಕ್ಷೋದಕವೆಂದೂ, ಇದರಲ್ಲಿ ಸ್ಥಾಪಿತನಾದ ಅಗ್ನಿಯು ವೈದ್ಯುತಾಗ್ನಿಯೆಂದೂ ತಾತ್ಪರ್ಯವು. ಪ್ರಕೃತವಾದ ಋಕ್ಕಿನಲ್ಲಿ " **ತೃತೀಯಮಪ್ಸು** " ಎಂದು ಹೇಳಿರುವುದೂ ಈ ವೈದ್ಯುತಾಗ್ನಿಯ ಪ್ರಶಂಸೆಯಾಗಿದೆ.

# ಪಾರ್ಥಿವಾಗ್ನಿಯ ಮಹಿಮೆ

## ಪೃಥ್ವಿಯಲ್ಲಿ ಅಗ್ನಿಯ ಅನೇಕ ವಿಧವಾದ ಉತ್ಪತ್ತಿ

ಈ ವಿಷಯವನ್ನು ಹಿಂದೆ ಕೆಲವೆಡೆಗಳಲ್ಲಿ ಸೂಕ್ಷ್ಮವಾಗಿ ತಿಳಿಸಿದೆ. ಆದರೂ ಪ್ರಕೃತದಲ್ಲಿ ಇದೇ ಮುಖ್ಯ ವಿಷಯವಾದುದರಿಂದ ಹಿಂದೆ ಹೇಳದಿರುವ ಕೆಲವು ಅಂಶಗಳನ್ನು ಮಾತ್ರ ಸೂಚಿಸಲಾಗುತ್ತದೆ. ಅಗ್ನಿಯು ಅರಣಿಗಳಲ್ಲಿ ಮಥನಕ್ರಿಯೆಯಿಂದ ಯಜ್ಞಾರ್ಥವಾಗಿ ಉತ್ಪನ್ನನಾದವನು ಇತ್ಯಾದಿಯಾಗಿ ಪಾರ್ಥಿವಾಗ್ನಿಯ ಪ್ರಶಂಸೆಯುಂಟು. ಅನೇಕ ಸಂದರ್ಭಗಳಲ್ಲಿ ಈ ವರ್ಣನವು ಉತ್ತಮವಾದ ಕಾವ್ಯರೂಪದಲ್ಲಿರುತ್ತದೆ. ಉದಾಹರಣೆಗೆ—

ಉತ ಸ್ಮ ಯಂ ಶಿಶುಂ ಯಥಾ ನವಂ ಜನಿಷ್ಟಾರಣೀ ।
ಧರ್ತಾರಂ ಮಾನುಷೀಣಾಂ ವಿಶಾಮಗ್ನಿಂ ಸ್ವಧ್ವರಂ ॥

(ಋ. ಸಂ. ೫-೯-೩)

ಮಾನವರಿಗೆಲ್ಲ ಧಾರಕನೂ, ಉತ್ತಮವಾದ ಯಜ್ಞವುಳ್ಳವನೂ ಆದ ಅಗ್ನಿಯನ್ನು ಮಾತೃರೂಪಗಳಾದ ಅರಣಿಗಳು ನೂತನವಾದ ಶಿಶುವನ್ನು ಹಡೆಯುವಂತೆ ಉತ್ಪನ್ನ ಮಾಡಿವೆ ಎಂದು ಅರಣಿಗಳಿಗೂ, ಅಗ್ನಿಗೂ ಮಾತೃಪುತ್ರಭಾವವನ್ನು ತೋರಿಸಿದೆ. ಅಂತರಿಕ್ಷಸ್ಥವಾದ ಉದಕವು ಅಗ್ನಿಯ ಉತ್ಪತ್ತಿಗೆ ಮೂಲವಾಗಿರುವಂತೆಯೇ ಪಾರ್ಥಿವವಾದ ಉದಕವೂ ಅಗ್ನಿಯ ಉತ್ಪತ್ತಿಗೆ ಮೂಲವಾಗಿರುತ್ತದೆ. ಓಷಧಿಗಳೂ, ವನಸ್ಪತಿಗಳೂ ಇವನನ್ನು ಗರ್ಭದಂತೆ ಧರಿಸಿವೆ.

ಅಪಾಂ ಗರ್ಭಂ ದರ್ಶತಮೋಷಧೀನಾಂ ವನಾ ಜಜಾನ ಸುಭಗಾ ವಿರೂಪಂ ।
ದೇವಾಸಶ್ಚಿನ್ಮನಸಾ ಸಂ ಹಿ ಜಗ್ಮುಃ ಪನಿಷ್ಠಂ ಜಾತಂ ತವಸಂ ದುವಸ್ಯನ್ ॥

(ಋ. ಸಂ. ೩-೧-೧೩)

ಉದಕಗಳಿಗೂ, ಓಷಧಿಗಳಿಗೂ ಗರ್ಭರೂಪನಾದ ಅಗ್ನಿಯನ್ನು ಆಕರ್ಷಕಗಳಾದ ಅರಣಿಗಳು ಉತ್ಪನ್ನ ಮಾಡಿದವು. ದೇವತೆಗಳೂ ಈ ಪೂಜ್ಯನಾದ ಅಗ್ನಿಯನ್ನು ಸಮೀಪಿಸಿ ಸ್ತುತಿಸಿದರು. ಇತ್ಯಾದಿಯಾಗಿ ಯಜ್ಞಾಗ್ನಿಯ ಉತ್ಪತ್ತಿಕ್ರಮವು ತಿಳಿಸಲ್ಪಟ್ಟಿದೆ. ಈ ಅಂಶವು ಇಲ್ಲಿಯವರೆಗೆ ಅನೇಕ ಸನ್ನಿವೇಶಗಳಲ್ಲಿ ವಿವೃತವಾಗಿರುವುದರಿಂದ ಇಲ್ಲಿ ವಿಶದಪಡಿಸಬೇಕಾಗಿಲ್ಲ.

ಈ ರೀತಿ ಮೂರು ಲೋಕಗಳಲ್ಲೂ ಮೂರು ರೀತಿಯ ಉತ್ಪತ್ತಿಯು ವರ್ಣಿತವಾಗಿರುವುದರ ಜೊತೆಗೆ ಇನ್ನೂ ಅನೇಕ ವಿಧವಾದ ಉತ್ಪತ್ತಿಗಳೂ ತಿಳಿಸಲ್ಪಟ್ಟಿವೆ. ಉದಾಹರಣೆಗೆ—

ಏತಾ ಉ ತ್ಯಾಃ ಪ್ರತ್ಯದೃಶ್ರನ್ಪುರಸ್ತಾಜ್ಜ್ಯೋತಿರ್ಯಚ್ಛಂತೀರುಷಸೋ ವಿಭಾತೀಃ ।
ಅಜೀಜನನ್ತ್ಸೂರ್ಯಂ ಯಜ್ಞಮಗ್ನಿಮಪಾಚೀನಂ ತಮೋ ಅಗಾದಜುಷ್ಟಂ ॥

(ಋ. ಸಂ. ೭-೭೮-೩)

ಪ್ರಕಾಶಮಾನವಾದ ಉಷಸ್ಸುಗಳು ತಮ್ಮ ತೇಜಸ್ಸನ್ನು ಪ್ರಸರಿಸಿವೆ. ಆದೇ ಉಷಸ್ಸುಗಳು ಸೂರ್ಯನನ್ನೂ, ಯಜ್ಞಾಗ್ನಿಯನ್ನೂ ಉತ್ಪನ್ನಮಾಡಿವೆ ಈ ಅಗ್ನಿಯು ಮೂರುಲೋಕಗಳಿಗೂ ಪುತ್ರನು. ಹೇಗೆಂದರೆ—

ಯಂ ತ್ವಾ ದ್ಯಾವಾಪೃಥಿವೀ ಯಂ ತ್ವಾಪಸ್ತ್ವಷ್ಟಾ ಯಂ ತ್ವಾ ಸುಜನಿಮಾ ಜಜಾನ ।
ಪಂಥಾಮನು ಪ್ರವಿದ್ವಾನ್ಪಿತೃಯಾಣಂ ದ್ಯುಮದಗ್ನೇ ಸಮಿಧಾನೋ ವಿ ಭಾಹಿ ॥

(ಋ. ಸಂ. ೧೦-೨-೭)

ಎಲೈ ಅಗ್ನಿಯೇ, ಯಾವ ನಿನ್ನನ್ನು ದ್ಯಾವಾಪೃಥಿವಿಗಳು ಉತ್ಪನ್ನಮಾಡಿದರೋ, ಯಾವ ನಿನ್ನನ್ನು ಅಂತರಿಕ್ಷೋದಕಗಳು ಉತ್ಪನ್ನಮಾಡಿದವೋ, ಯಾವ ನಿನ್ನನ್ನು ತ್ವಷ್ಟೃದೇವನು ಉತ್ಪನ್ನಮಾಡಿದನೋ ಅಂತಹ ದಿವ್ಯವಾದ ಉತ್ಪನ್ನವುಳ್ಳ ನೀನು ಪಿತೃಮಾರ್ಗವನ್ನು ಅರಿತವನಾಗಿ ಅತ್ಯತಿಶಯವಾಗಿ ಪ್ರಕಾಶಿಸುತ್ತೀಯೆ.

" ಇದೇ ಯಜ್ಞಾಗ್ನಿಯನ್ನು ಓಷಧಿಗಳು ತಮ್ಮ ಗರ್ಭದಲ್ಲಿ ಧರಿಸಿದವು. ಇದೇ ಅಗ್ನಿಯನ್ನು ಉದಕಗಳೂ ಉತ್ಪನ್ನಮಾಡಿದುವು. ವನಸ್ಪತಿಗಳೂ ತಮ್ಮ ಗರ್ಭದಲ್ಲಿ ಧರಿಸಿದವು. ಗರ್ಭರೂಪನಾದ ಅಗ್ನಿಯನ್ನು ಓಷಧ್ಯಾದಿಗಳು ಉತ್ಪನ್ನಮಾಡುತ್ತವೆ "

" ದ್ಯುಲೋಕಕ್ಕೆ ಶಿರಃಪ್ರಾಯನೂ, ಪೃಥ್ವಿಯಲ್ಲಿ ಸಂಚರಿಸುವವನೂ, ಸಾರ್ವಭೌಮನೂ, ಯಜ್ಞಗಳಿಗೆ ನಾಭಿರೂಪನೂ ಯಜ್ಞಕರ್ತರಿಗೆ ಮಾರ್ಗದರ್ಶಕನೂ ಆದ ಅಗ್ನಿಯನ್ನು ದೇವತೆಗಳು ಉತ್ಪನ್ನಮಾಡಿದರು. ಅದರಂತೆಯೇ ಋತ್ವಿಕ್ಕುಗಳೂ ಉತ್ಪನ್ನಮಾಡಿದರು " ಇತ್ಯಾದಿಯಾಗಿ ಪ್ರಶಂಸಿತನಾಗಿದ್ದರೂ (೬. ೭. ೧-೨) ಯಾರು ಯಾರಿಂದ ಉತ್ಪನ್ನವಾಗಿದ್ದಾನೆಂದು ವರ್ಣಿತನಾಗಿರುವನೋ ಅಂತಹ ದೇವಮಾನವಾದಿಗಳಿಗೆಲ್ಲ ಪಿತೃರೂಪನೂ ಪಾಲಕನೂ ಆಗಿದ್ದಾನೆಂದು ಪ್ರಶಂಸಿಸಲ್ಪಟ್ಟಿದ್ದಾನೆ.

ಋ. ಸಂ. ೧೦-೪೫-೧

ಇಂತಹ ಅಗ್ನಿಯ ನಾನಾ ವಿಧವಾದ ಉತ್ಪನ್ನವನ್ನು ತಿಳಿಸುತ್ತ ಪ್ರಕೃತವಾದ ಋಕ್ಕಿನಲ್ಲಿ " ದಿವಸ್ಪರಿ ಪ್ರಥಮಂ ಜಜ್ಞೇ " ಇತ್ಯಾದಿಯಾಗಿ ಸ್ತುತಿಸಲ್ಪಟ್ಟಿದೆ. ಇದೇ ಮಂತ್ರದ ತಾತ್ಪರ್ಯವನ್ನು ವಿವರಿಸುತ್ತ ಶತಪಥ ಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿರಿತಿ । ಪ್ರಾಣೋ ವೈ ದ್ಯೌಃ ಪ್ರಾಣಾದ್ವಾ ಏಷ ಪ್ರಥಮಮಜಾಯತಾಸ್ಮದ್ದ್ವಿತೀಯಂ ಪರಿ ಜಾತವೇದಾ ಯದೇನಮದೋ ದ್ವಿತೀಯಂ ಪುರುಷವಿಧೋಽಜನಯತ್ತೃತೀಯಮಪ್ಸ್ವಿತಿ ಯದೇನಮದಸ್ತೃತೀಯಮದ್ಭ್ಯೋಽಜನಯನ್ನೃಮಣಾ ಅಜಸ್ರಮಿತಿ ಪ್ರಜಾಪತಿರ್ವೈ ನೃಮಣಾ ಅಗ್ನಿರಜಸ್ರಮಿಂಧಾನ ಏನಂ ಜರತೇ ಸ್ವಾಧೀರಿತಿ ಯೋ ವಾ ಏನಮಿಂಧೇ ಸ ಏನಂ ಜನಯತೇ ಸ್ವಾಧೀಃ ॥

(ಶ. ಬ್ರಾ. ೬-೭-೪-೩)

ಅಗ್ನಿಯು ಪ್ರಥಮತಃ ದ್ಯುಲೋಕದಲ್ಲಿ ಉತ್ಪನ್ನನಾದನು. ಪ್ರಾಣವೇ ದ್ಯುಲೋಕಸಂಜ್ಞಕವು. ಎಂದರೆ, ಪ್ರಥಮತಃ ಅಗ್ನಿಯ ಆವಿರ್ಭಾವವು ಪ್ರಾಣದಿಂದ ಎಂದರ್ಥ. ಜಾತವೇದೋರೂಪನಾದ ಅಗ್ನಿಯು ಎರಡನೆಯ ಸಲ ನಮ್ಮಿಂದ ಉತ್ಪನ್ನನಾದನು. ಮೂರನೆಯ ಸಲ ಉದಕದಿಂದ ಉತ್ಪನ್ನನಾದನು. ಇದೇ ಅಗ್ನಿಯು ಮಾನವರಿಗೆ ಹಿತಕಾರಿಯು. ಮರಣರಹಿತನಾದ ಈ ಅಗ್ನಿಯು ಜಗತ್ತಿಗೆಲ್ಲ ಮೂಲಕಾರಣನಾದ ಪ್ರಜಾಪತಿರೂಪನು. ಅಮರ್ತ್ಯನಾದ ಈ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತ ಯಜ್ಞಕರ್ತನು ಧ್ಯಾನರೂಪದಲ್ಲಿ ಇವನನ್ನು ಪೂಜಿಸುತ್ತಾನೆ.

ಸಮುದ್ರೇ ತ್ವಾ ನೃಮಣಾ ಅಪ್ಸ್ವಂತರಿತಿ । ಪ್ರಜಾಪತಿರ್ವೈ ನೃಮಣಾ ಅಪ್ಸು ತ್ವಾ ಪ್ರಜಾಪತಿರಿತ್ಯೇತನ್ನೃಚಕ್ಷಾ ಈಧೇ ದಿವೋ ಅಗ್ನ ಊಧನ್ನಿತಿ ಪ್ರಜಾಪತಿರ್ವೈ ನೃಚಕ್ಷಾ ಅಪೋ ದಿವ ಊಧಸ್ತೃತೀಯೇ ತ್ವಾ ರಜಸಿ ತಸ್ಥಿವಾಂಸಮಿತಿ ದ್ಯೌರ್ವೈ ತೃತೀಯಂ ರಜೋಽಪಾಮುಪಸ್ಥೇ ಮಹಿಷಾ ಅವರ್ಧನ್ನಿತಿ ಪ್ರಾಣಾ ವೈ ಮಹಿಷಾ ದಿವಿ ತ್ವಾ ಪ್ರಾಣಾ ಅವರ್ಧನ್ನಿತ್ಯೇತತ್ ॥

(ಶ. ಬ್ರಾ. ೬-೭-೪-೪)

ಮಾನವರಿಗೆ ಹಿತಕಾರಿಯು ನಿನ್ನನ್ನು ಅಂತರಿಕ್ಷದಲ್ಲಿ ಉತ್ಪತ್ತಿ ಮಾಡಿದನು. ಪ್ರಜಾಪತಿಯೇ ಈ ಜನೋಪಕಾರಿಯು. ಎಲೈ ಅಗ್ನಿಯೇ, ಇದೇ ಜನೋಪಕಾರಿಯಾದ ಪ್ರಜಾಪತಿಯು ನಿನ್ನನ್ನು ದ್ಯುಲೋಕದ ಊಧಃಪ್ರದೇಶದಲ್ಲಿ ಉತ್ಪನ್ನಮಾಡಿದನು. ಮೂರನೆಯ ಲೋಕದ ಉನ್ನತ ಪ್ರದೇಶದಲ್ಲಿ ಸ್ಥಿತನಾದ ನಿನ್ನನ್ನು ಮಹಿಷಗಳು ಪ್ರಜ್ವಲಿತವಾಗುವಂತೆ ಮಾಡಿದವು. ಪ್ರಾಣಗಳೇ ಮಹಿಷಗಳು. ಈ ಪ್ರಾಣಗಳೇ ನಿನ್ನನ್ನು ದ್ಯುಲೋಕದ ಉನ್ನತಪ್ರದೇಶದಲ್ಲಿ ಪ್ರಜ್ವಲಿತನಾಗುವಂತೆ ಮಾಡಿದವು ಇತ್ಯಾದಿಯಾಗಿ ವಿವರಿಸಿದೆ.

" **ಅಭಿ ದ್ವಿಜನ್ಮಾ ತ್ರಿವೃದನ್ನಮೃಜ್ಯತೇ** " (ಋ. ಸಂ. ೧-೧೪೦-೨) ಇತ್ಯಾದಿ ಸ್ಥಳಗಳಲ್ಲಿ ಅಗ್ನಿಯ ಜನ್ಮವು ಎರಡು ವಿಧವೆಂದು ತಿಳಿಸಿದೆ. ಇವು ಯಾವುವೆಂದರೆ ಪುನಃ " **ಅಭಿ ದ್ವಿಜನ್ಮಾ ತ್ರೀ ರೋಚನಾನಿ** "(ಋ.ಸಂ. ೧-೧೪೯-೪) ಎಂಬ ಮಂತ್ರದಲ್ಲಿ ಈ ವಿಷಯವನ್ನು ವಿವರಿಸುತ್ತ,

> **ದ್ವಾಭ್ಯಾಂ ಅರಣೀಭ್ಯಾಂ ಜಾಯಮಾನಃ । ಯದ್ವಾ । ಮಥನೇನ ಆಧಾನಸಂಸ್ಕಾರೇಣ ಚ ಉತ್ಪನ್ನತ್ವಾತ್ ದ್ವಿಜನ್ಮತ್ವಂ ಅಥವಾ ದ್ವಯೋರ್ದ್ಯಾವಾಪೃಥಿವ್ಯೋರ್ಜಾಯಮಾನಃ ಅರಣ್ಯೋರ್ವಾ ಜಾಯಮಾನಃ ॥**
>
> (ಸಾ. ಭಾ)

ಎರಡು ಕಟ್ಟಿಗೆಗಳಿಂದ ಉತ್ಪನ್ನವಾಗುವುದರಿಂದಾಗಲೀ, ಅಥವಾ ಮಥನದಿಂದ ಒಂದುಸಲವೂ, ಆಧಾನ ಸಂಸ್ಕಾರದಿಂದ ಒಂದುಸಲವೂ ಹೀಗೆ ಎರಡುಸಲ ಉತ್ಪನ್ನವಾಗುವುದರಿಂದಾಗಲಿ ಅಥವಾ ದ್ಯಾವಾಪೃಥಿವಿಗಳಿಂದ ಉತ್ಪನ್ನವಾಗುವುದರಿಂದಾಗಲೀ **ದ್ವಿಜನ್ಮಾ** ಎಂಬ ವಿಶೇಷಣದಿಂದ ಅಗ್ನಿಯನ್ನು ಪ್ರಶಂಸಿಸಿದೆಯೆಂದು ಸಾಯಣರು ತಿಳಿಸುತ್ತಾರೆ.

ಅಗ್ನಿಯು ತನ್ನಿಂದತಾನೇ ಉತ್ಪನ್ನನಾದನು ಎಂಬ ಪ್ರಶಂಸೆಯೂ ಇರುವ ಸನ್ನಿವೇಶಗಳುಂಟು. **ತನೂನಪಾತ್** ಎಂಬ ವಿಶೇಷಣಕ್ಕೆ ಇದೇ ಅರ್ಥವು ಕೆಲವೆಡೆಗಳಲ್ಲಿ ಹೇಳಲ್ಪಟ್ಟಿದೆ. ಉದಾಹರಣೆಗೆ ಬೃಹದ್ದೇವತೆಯಲ್ಲಿ ಇದೇ ಅಂಶವನ್ನು ತಿಳಿಸುತ್ತ—

> **ತನೂನಪಾದಯಂ ತ್ವೇವ ನಾಮ್ನಾ ಯಚ್ಛೃತ್ಯಸೌ ತನುಂ ।**
> **ನಪಾದಿತಿ ಪ್ರಜಾಮಾಹುರಮುತೋಽಸ್ಯ ಚ ಸಂಭವಾತ್ ॥**
>
> (ಬೃ. ದೇ. ೩-೧)

ಈ ಅಗ್ನಿಯು **ತನೂನಪಾತ್** ಎಂಬ ಹೆಸರಿನಿಂದಲೂ ಪ್ರಸಿದ್ಧನಾಗಿದ್ದಾನೆ. ದಿವ್ಯಾಗ್ನಿಯು ತನ್ನ ಶಕ್ತಿಯಿಂದಲೇ ತನ್ನ ಸ್ವರೂಪವು ವಿಸ್ತೃತವಾಗುವಂತೆ ಮಾಡಿಕೊಳ್ಳುತ್ತಾನೆ. **ನಪಾತ್** ಎಂದರೆ ತನ್ನ ದೇಹದಿಂದ ಉತ್ಪನ್ನನಾದ ಪುತ್ರನೆಂಬ ಅರ್ಥವು ಪ್ರಸಿದ್ಧವಾಗಿದೆ. ಈ ದಿವ್ಯಾಗ್ನಿಯ ಉತ್ಪನ್ನವು ತನ್ನ ಶರೀರದಿಂದಲೇ ಆದುದರಿಂದ " **ತನೂನಪಾತ್** " ಎಂಬ ಹೆಸರು ಪ್ರಸಿದ್ಧವಾಗಿದೆ. " **ಅಪಾಂ ನಪಾತ್** " ಎಂಬ ವಿಶೇಷಣದ ತಾತ್ಪರ್ಯವನ್ನು ಹಿಂದೆ ಅನೇಕ ಕಡೆಗಳಲ್ಲಿ ವಿವರಿಸಿದೆ.

**ಸಂಹಿತಾಪಾಠಃ**

**ವಿದ್ಮಾ ತೇ ಅಗ್ನೇ ತ್ರೇಧಾ ತ್ರಯಾಣಿ ವಿದ್ಮಾ ತೇ ಧಾಮ ವಿಭೃತಾ ಪುರುತ್ರಾ**

ವಿದ್ಮಾ ತೇ ನಾಮ ಪರಮಂ ಗುಹಾ ಯದ್ವಿದ್ಮಾ ತಮುತ್ಸಂ ಯತ ಆಜಗಂಥ॥

ಪದಪಾಠಃ

ವಿದ್ಮ । ತೇ । ಅಗ್ನೇ । ತ್ರೇಧಾ । ತ್ರಯಾಣಿ । ವಿದ್ಮ । ತೇ । ಧಾಮ । ವಿಽಭೃತಾ । ಪುರುಽತ್ರಾ ।

ವಿದ್ಮ । ತೇ । ನಾಮ । ಪರಮಂ । ಗುಹಾ । ಯತ್ । ವಿದ್ಮ । ತಂ । ಉತ್ಸಂ । ಯತಃ । ಆಽಜಗಂಥ ॥

ಸಾಯಣಭಾಷ್ಯಂ

ಹೇ ಅಗ್ನೇ ತೇ ತವ ತ್ರೇಧಾ ತ್ರಿಷು ಸ್ಥಾನೇಷು ಪೃಥಿವ್ಯಾಂತರಿಕ್ಷದ್ಯುಲೋಕೇಷು ಸ್ಥಿತಾನಿ ತ್ರಯಾಣ್ಯಗ್ನಿವಾಯ್ವಾದಿತ್ಯಾಖ್ಯಾನಿ ತ್ರೀಣಿ ರೂಪಾಣಿ ವಿದ್ಮ । ವಯಂ ಜಾನೀಮಃ । ಕಿಂಚ ಹೇ ಅಗ್ನೇ ತೇ ತವ ಧಾಮ ಸದ್ಮಾನಿ ಸ್ಥಾನಾನಿ ವಿಭೃತಾ ವಿಭೃತಾನಿ ಪುರುತ್ರಾ ಬಹುಧಾ ಬಹೂನಿ ವಾ ಗಾರ್ಹಪತ್ಯಾ-ಹವನೀಯಾನ್ವಾಹಾರ್ಯಪಚನಾದೀನಿ ವಿದ್ಮ । ಕಿಂಚ ತೇ ತವ ಗುಹಾ ಗೂಢಮವೇದವಿದ್ಭಿರವಿಜ್ಞಾತಂ ಪರಮುಮುತ್ಕೃಷ್ಟಂ ವೇದೇ ಪ್ರಸಿದ್ಧಂ ಯನ್ನಾಮಾಸ್ತಿ ತದ್ವಿದ್ಮ । ವೇದವಿದೋ ವಯಂ ವಿಜಾನೀಮಃ । ಕಿಂಚ ತ್ವಂ ಯತೋ ಯಸ್ಮಾದಾಜಗಂಥ ಆಗತವಾನಸಿ । ಉತ್ಪನ್ನವಾನಿತ್ಯರ್ಥಃ । ತಮುತ್ಸಮುತ್ಸ್ಯಂ-ದಯಿತಾರಮುತ್ಪಾದಯಿತಾರಂ ಕಾರಣಾತ್ಮಾನಂ ವಿದ್ಮ । ಜಾನೀಮಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತೇ—ನಿನ್ನ । ತ್ರೇಧಾ—ಪೃಥಿವ್ಯಾದಿ ಮೂರು ಲೋಕಗಳಲ್ಲೂ ಸ್ಥಾಪಿತ ವಾಗಿರುವ । ತ್ರಯಾಣಿ—ಅಗ್ನಿ, ವಾಯು ಮತ್ತು ಆದಿತ್ಯಸಂಜ್ಞಕವಾದ ಸ್ವರೂಪಗಳನ್ನು । ವಿದ್ಮ—ಅರಿತಿದ್ದೇವೆ. । ತೇ—ನಿನ್ನ । ಧಾಮ—ಸ್ಥಾನಗಳನ್ನೂ । ವಿಭೃತಾ—ನಿನ್ನಿಂದ ಧರಿಸಲ್ಪಟ್ಟವೂ । ಪುರುತ್ರಾ—ಆಹವನೀಯಾದ್ಯನೇಕ ಸಂಜ್ಞೆಯುಳ್ಳವೂ ಆದ ರೂಪಗಳನ್ನೂ । ವಿದ್ಮ—ಅರಿತಿದ್ದೇವೆ. । ತೇ—ನಿನ್ನ । ಯತ್ ನಾಮ—ಯಾವ ಹೆಸರು । ಪರಮಂ—ಉತ್ಕೃಷ್ಟವೂ । ಗುಹಾ—ರಹಸ್ಯವೂ ಆಗಿರುವುದೋ ಅದನ್ನೂ । ವಿದ್ಮ—ಅರಿತಿದ್ದೇವೆ. । ಯತಃ—ಎಲ್ಲಿಂದ । ಆ ಜಗಂಥ—ನೀನು ಆವಿರ್ಭವಿಸಿ ಬಂದಿದ್ದೀಯೋ । ತಂ ಉತ್ಸಂ—ಆ ನಿನ್ನ ಉತ್ಪತ್ತಿಸ್ಥಾನವನ್ನೂ । ವಿದ್ಮ—ಅರಿತಿದ್ದೇವೆ. ।

ಭಾವಾರ್ಥ

ಎಲೈ ಅಗ್ನಿಯೇ, ಪೃಥಿವ್ಯಾದಿ ಮೂರು ಲೋಕಗಳಲ್ಲೂ ಸ್ಥಾಪಿತವಾಗಿರುವ ಅಗ್ನಿ, ವಾಯು ಮತ್ತು ಆದಿತ್ಯ ಎಂಬ ಸಂಜ್ಞೆಗಳುಳ್ಳ ಮೂರು ರೂಪಗಳನ್ನೂ ಅರಿತಿದ್ದೇವೆ. ನಿನ್ನ ಸ್ಥಾನಗಳನ್ನೂ ಆಹವನೀಯಾದಿ ಸ್ವರೂಪಗಳನ್ನೂ ಅರಿತಿದ್ದೇವೆ. ಯಾವ ನಿನ್ನ ನಾಮವು ಅತ್ಯುತ್ಕೃಷ್ಟವೂ ಇತರರಿಂದ ಅರಿಯಲ್ಪಡದೇ ರಹಸ್ಯವೂ ಆಗಿರುವುದೋ ಅದನ್ನೂ ಮತ್ತು ನಿನ್ನ ಉತ್ಪತ್ತಿಸ್ಥಾನವನ್ನೂ ನಾವು ಅರಿತಿದ್ದೇವೆ.

## English Translation

We recognize your threefold station, Agni, and your three forms; we recognize the many stations occupied by you: we know what your supreme secret appellation (is): we know the source, whence you have proceeded.

### ವಿಶೇಷವಿಷಯಗಳು

ಹಿಂದಿನ ಋಕ್ಕಿನ ವಿಶೇಷ ವಿಷಯಗಳಲ್ಲಿ ಅಗ್ನಿಯ ಮೂರು ವಿಧವಾದ ಉತ್ಪತ್ತಿಯನ್ನು ವಿವರಿಸಲಾಗಿದೆ. ಮೂರು ಲೋಕಗಳಲ್ಲೂ ಮೂರು ಬೇರೆ ವಿಧವಾದ ಉತ್ಪತ್ತಿಗನುಗುಣವಾಗಿ ಮೂರು ಲೋಕಗಳಲ್ಲಿ ಮೂರು ಬೇರೆ ಬೇರೆ ರೂಪಗಳಿಂದ ಆವಿರ್ಭೂತನಾಗುವ ವಿಷಯವನ್ನು ಪ್ರಕೃತವಾದ ಮಂತ್ರ [illegible] ವಿವರಿಸಲಾಗಿದೆ.

ವಿದ್ಮಾ ತೇ ಅಗ್ನೇ ತ್ರೇಧಾ ತ್ರಯಾಣಿ ಎಂಬ ವಾಕ್ಯಕ್ಕೆ ತವ ತ್ರಿಷು ಸ್ಥಾನೇಷು ಪೃಥಿವ್ಯಂತರಿಕ್ಷದ್ಯುಲೋಕೇಷು ಸ್ಥಿತಾನಿ ಅಗ್ನಿವಾಯ್ವಾದಿತ್ಯಾನಿ ತ್ರೀಣಿ ರೂಪಾಣಿ [illegible] ಅಂತರಿಕ್ಷ ದ್ಯುಲೋಕಗಳಲ್ಲಿ ; ಪೃಥ್ವಿಯಲ್ಲಿ ಅಗ್ನಿರೂಪದಲ್ಲಿಯೂ, ಅಂತರಿಕ್ಷದಲ್ಲಿ ವಾಯು (ಅಥವಾ ಇಂದ್ರ) ರೂಪದಲ್ಲಿಯೂ, ಮತ್ತು ದ್ಯುಲೋಕದಲ್ಲಿ ಆದಿತ್ಯರೂಪದಲ್ಲಿಯೂ ಗೋಚರನಾಗುತ್ತಾನೆ ಎಂದು ಸಾಯಣರು ವಿವರಿಸಿದ್ದಾರೆ. ಎಂದರೆ, ಅಗ್ನಿ, ವಾಯು (ಅಥವಾ ಇಂದ್ರ) ಮತ್ತು ಆದಿತ್ಯ ಈ ಮೂರು ರೂಪಗಳೂ ಒಂದೇ ತತ್ತ್ವದ ಮೂರು ರೂಪಗಳೆಂದು ತಾತ್ಪರ್ಯ. ಇವಲ್ಲದೆ ಇನ್ನೂ ಅನೇಕ ಅವಾಂತರರೂಪಗಳೂ ವರ್ಣಿತವಾಗಿವೆ. ಮುಖ್ಯವಾಗಿ ಈ ಮೂರೂ ಮೂರು ಲೋಕಗಳ ಧಾರಕವೂ, ಪಾಲಕವೂ ಆಗಿವೆ. ಇದಲ್ಲದೆ, ಅಗ್ನಿಪವಮಾನ, ಅಗ್ನಿಪವಸ್ಥಿತಿ ಮತ್ತು ಅಗ್ನಿಶುಚಿ ಎಂಬ ರೂಪಾಂತರಗಳೂ, ಜಾತವೇದಸ್, ವೈಶ್ವಾನರ ಮತ್ತು ದ್ರವಿಣೋದಾಃ ಎಂಬ ರೂಪಭೇದಗಳೂ, ದಕ್ಷಿಣಾಗ್ನಿ, ಗಾರ್ಹಪತ್ಯ, ಮತ್ತು ಆಹವನೀಯ ಎಂಬ ಪಾರ್ಥಿವಾಗ್ನಿಯ ರೂಪಾಂತರಗಳೂ, ಹೀಗೆಯೇ ಇನ್ನೂ ಅನೇಕ ಅವಾಂತರಪ್ರಭೇದಗಳೂ ಇರುತ್ತವೆ. ಇವುಗಳಲ್ಲಿ ವೈಶ್ವಾನರ, ದ್ರವಿಣೋದಾಃ ಇತ್ಯಾದಿ ಪ್ರಭೇದಗಳ ವಿಷಯಗಳನ್ನು ಹಿಂದೆ (ಆನೇ ಭಾಗ) ತಿಳಿಸಿದೆ. ಹಿಂದೆ ವಿವರಿಸದೆ ಇರುವ ಕೆಲವು ಮುಖ್ಯಾಂಶಗಳನ್ನು ಪ್ರಕೃತದಲ್ಲಿ ತಿಳಿಸಲಾಗುತ್ತದೆ.

ಈ ಪ್ರಭೇದಗಳು ತಾತ್ತ್ವಿಕವಾದ ವೈವಿಧ್ಯವನ್ನು ಹೊಂದಿಲ್ಲ. ಇವೆಲ್ಲಕ್ಕೂ ಮೂಲ ತತ್ತ್ವವು ಒಂದೇ ಆಗಿರುತ್ತದೆ. ಚರಾಚರವಾದ ವಸ್ತುಗಳಿಗೆಲ್ಲ ಇದೇ ಮೂಲವು. ಇದೊಂದೇ ತತ್ತ್ವವು ಮೂರು ಲೋಕಗಳಲ್ಲೂ ಮೂರು ರೂಪಗಳಲ್ಲಿ ಪ್ರಕಾಶಿಸುತ್ತದೆ. ಹೇಗೆಂದರೆ—

> ಭವದ್ಭೂತಸ್ಯ ಭವ್ಯಸ್ಯ ಜಂಗಮಸ್ಥಾವರಸ್ಯ ಚ ।
> ಅಸ್ಯೈಕೇ ಸೂರ್ಯಮೇವೈಕಂ ಪ್ರಭವಂ ಪ್ರಲಯಂ ವಿದುಃ ॥
>
> (ಬೃ. ದೇ. ೧.೬೧)

ಈಗ ಯಾವುದು ಪ್ರಚಲಿತವಾಗುತ್ತಿರುವುದೋ, ಹಿಂದೆ ಯಾವುದಿದ್ದಿತೋ, ಮುಂದೆ ಯಾವುದಿರುವುದೋ, ಯಾವುದು ಚಲಾತ್ಮಕವಾಗಿರುವುದೋ, ಯಾವುದು ಸ್ಥಿರವಾದ ಸ್ಥಿತಿಯನ್ನು ಹೊಂದಿರುವುದೋ ಇವೆಲ್ಲಕ್ಕೂ ಆದಿತ್ಯನೊಬ್ಬನೇ ಮೂಲವಸ್ತುವು ಮತ್ತು ಇವುಗಳೆಲ್ಲದರ ಕ್ಷಯಕ್ಕೂ ಅವನೇ ಕಾರಣನು.

ಅಸತಶ್ಚ ಸತಶ್ಚೈವ ಯೋನಿರೇಷಾ ಪ್ರಜಾಪತಿಃ |
ಯದಕ್ಷರಂ ಚ ವಾಚ್ಯಂ ಚ ಯಥೈತದ್ಬ್ರಹ್ಮ ಶಾಶ್ವತಂ ||

(ಬೃ. ದೇ. ೧-೬೨)

ಯಾವುದು ಭಾವರೂಪದಲ್ಲಿರುವುದೋ, ಯಾವುದು ಅಭಾವರೂಪದಲ್ಲಿರುವುದೋ ಅವೆಲ್ಲಕ್ಕೂ ಪ್ರಜಾಪತಿ ಸಂಜ್ಞಕನಾದ ಈ ಸೂರ್ಯನೇ ಮೂಲವು. ಈ ಪ್ರಜಾಪತಿತತ್ತ್ವವು ನಾಶರಹಿತವಾದುದು ಮತ್ತು ವಾಕ್ಪ್ರಶಂಸೆಗೆ ವಿಷಯವಾದರೂ ಸಹ ಸೂರ್ಯಾದಿರೂಪದಲ್ಲಿ ಗೋಚರವಾಗುವ ಅವಾಂತರಪ್ರಭೇದಗಳು ವರ್ಣನೆಗೆ ಯೋಗ್ಯವಾಗಿವೆ.

ಕೃತ್ವೈಷ ಹಿ ತ್ರಿಧಾತ್ಮಾನಂ ಏಷು ಲೋಕೇಷು ತಿಷ್ಠತಿ |
ದೇವಾನ್ಯಥಾಯಥಂ ಸರ್ವಾನ್ ನಿವೇಶ್ಯ ಸ್ವೇಷು ರಶ್ಮಿಷು ||

(ಬೃ. ದೇ. ೧-೬೩)

ಜಗತ್ತಿಗೆ ಮೂಲವಸ್ತುವಾದ ಈ ಸೂರ್ಯನು ತನ್ನ ಸ್ವರೂಪವನ್ನು ಮೂರು ವಿಧಗಳಿಂದ ಪ್ರಸರಿಸಿ ಮೂರು ಲೋಕಗಳಲ್ಲೂ ವ್ಯಾಪಿಸಿದ್ದಾನೆ. ಉಳಿದ ಸಕಲ ದೇವತೆಗಳನ್ನೂ ಅವರವರ ಸ್ಥಾನದಲ್ಲಿ ಸ್ಥಾಪಿಸಿದ್ದಾನೆ. ಅವರೆಲ್ಲರಿಗೂ ಈ ಸೂರ್ಯನ ರಶ್ಮಿಗಳೇ ಅಧಿಕರಣಸ್ಥಾನಗಳು.

ಏತದ್ಭೂತೇಷು ಲೋಕೇಷು ಅಗ್ನಿಭೂತಂ ಸ್ಥಿತಂ ತ್ರಿಧಾ |
ಋಷಯೋ ಗೀರ್ಭಿರರ್ಚಂತಿ ವ್ಯಂಜಿತಂ ನಾಮಭಿಸ್ತ್ರಿಭಿಃ ||

(ಬೃ. ದೇ. ೧-೬೪)

ಸೃಷ್ಟಿಯಾದನಂತರ ಆವಿರ್ಭಾವವನ್ನು ಹೊಂದಿದ ಮೂರುಲೋಕಗಳಲ್ಲೂ ಅಗ್ನಿರೂಪಸ್ಥವಾದ ಈ ಮೂಲ ವಸ್ತುವು ಮೂರುರೂಪಗಳಲ್ಲಿರುತ್ತದೆ. ಹೀಗಲು ಪ್ರಕಾರಗಳಿಗೂ ಮೂರುವಿಧವಾದ ಸಂಜ್ಞೆಯನ್ನು ಹೊಂದಿದ ಈ ಅಗ್ನಿಯನ್ನು ಋಷಿಗಳು ಮೂರು ಹೆಸರುಗಳಿಂದ ನಿರ್ದೇಶಿಸಿ ಪ್ರಶಂಸಿಸುತ್ತಾರೆ.

ತಿಷ್ಠತ್ಯೇವ ಹಿ ಭೂತಾನಾಂ ಜಠರೇ ಜಠರೇ ಜ್ವಲನ್ |
ತ್ರಿಸ್ಥಾನಂ ಚೈನಮರ್ಚಂತಿ ಹೋತ್ರಾಯಾಂ ವೃಕ್ತಬರ್ಹಿಷಃ |

ಈ ಅಗ್ನಿಯು ಜಗತ್ತಿನ ಸಕಲ ಭೂತಗಳ ಉದರದಲ್ಲೂ ವ್ಯಾಪಿಸಿದ್ದಾನೆ. ಯಜ್ಞೇಶ್ವರರು ತಮ್ಮ ಆಹ್ವಾನ ಕಾಲದಲ್ಲಿ ಈ ಅಗ್ನಿಯನ್ನು ಮೂರು ಸ್ಥಾನಗಳುಳ್ಳವನೆಂದು ಪ್ರಶಂಸಿಸಿ ಪೂಜಿಸುತ್ತಾರೆ. ಪ್ರಭಾವಯುತನಾದ ಈ ಅಗ್ನಿಯ ಮೂರು ರೂಪಗಳಾವುವೆಂದರೆ—

ಇಹೈಷ ಪವಮಾನೋಽಗ್ನಿರ್ಮಧ್ಯಮೋಽಗ್ನಿರ್ವನಸ್ಪತಿಃ |
ಅಮುಷ್ಮಿನ್ನೇವ ವಿಶ್ರೈಸ್ತು ಲೋಕೇಽಗ್ನಿಃಶುಚಿರುಚ್ಯತೇ ||

(ಬೃ. ದೇ. ೧-೬೬)

ಈ ಪೃಥ್ವಿಯ ಮೇಲಿರುವ ಅಂಶವನ್ನು ಅಗ್ನಿಪವಮಾನನೆಂದೂ, ಅಂತರಿಕ್ಷಸ್ಥವಾದ ಅಂಶವನ್ನು ಅಗ್ನಿವನಸ್ಪತಿಯೆಂದೂ, ದ್ಯುಲೋಕಸ್ಥವಾದ ಅಂಶವನ್ನು ಅಗ್ನಿಶುಚಿಯೆಂದೂ ಋತ್ವಿಕ್ಕುಗಳು ಪ್ರಶಂಸಿಸುತ್ತಾರೆ. ಇದೇ ಅಲ್ಲದೆ,

ಇಹಾಗ್ನಿಭೂತಸ್ತ್ವೃಷಿಭಿರ್ಲೋಕೇ ಸ್ತುತಿಭಿರೀಳಿತಃ |
ಜಾತವೇದಾಸ್ತುತೋ ಮಧ್ಯೇ ಸ್ತುತೋ ವೈಶ್ವಾನರೋ ದಿವಿ ||

(ಬೃ. ದೇ. ೧-೬೭)

ಪೃಥ್ವಿಯಲ್ಲಿ ಆವಿರ್ಭೂತನಾಗಿರುವ ಅಗ್ನಿಯನ್ನು ಕೇವಲ ಅಗ್ನಿಯೆಂದು ಸ್ತುತಿಕರ್ತರು ಪ್ರಶಂಸಿಸುತ್ತಾರೆ. ಅಂತರಿಕ್ಷಸ್ಥನಾದ ಅಗ್ನಿಯು ಜಾತವೇದಸ್ಸೆಂದೂ, ದ್ಯುಲೋಕಸ್ಥನಾದ ಅಗ್ನಿಯು ವೈಶ್ವಾನರನೆಂದೂ ಪ್ರಸಿದ್ಧಿಯಿದೆ. ಆದರೆ, ಈ ವಿಷಯದಲ್ಲಿ ನಿಷ್ಕೃಷ್ಟವಾದ ಅಭಿಪ್ರಾಯವಿರುವುದಿಲ್ಲ. ಮತಭೇದಗಳಿರುತ್ತವೆ. ಉದಾಹರಣೆಗೆ—

ವೈಶ್ವನರಾಗ್ನಿಯೇ ಆದಿತ್ಯರೂಪನೆಂದು ಹಿಂದಿನ ಋಷಿಗಳು ಅಭಿಪ್ರಾಯಪಡುತ್ತಾರೆ. ಆದರೆ, ಪಾರ್ಥಿವಾಗ್ನಿಯೇ ವೈಶ್ವಾನರಾಗ್ನಿಸಂಜ್ಞಕನೆಂದು ಶಾಕಪೂಣಿಯವರು ಅಭಿಪ್ರಾಯಪಡುತ್ತಾರೆಂದು ನಿರುಕ್ತಕಾರರು ಈ ಅಭಿಪ್ರಾಯಭೇದಗಳನ್ನು ತಿಳಿಸಿದ್ದಾರೆ. (ನಿ. ೭–೩೩) ಈ ಅಭಿಪ್ರಾಯಭೇದಗಳೇನಿದ್ದರೂ ಅಗ್ನಿಯು ಮೂರು ರೂಪಗಳೇ ಮೂರು ಲೋಕಗಳನ್ನೂ ಪ್ರಸರಿಸಿ ನಾಮಭೇದಗಳಿಂದ ಪ್ರಸಿದ್ಧವಾಗಿವೆಯೆಂಬುದು ಸರ್ವಸಮ್ಮತವಾಗಿದೆ.

**ಅಗ್ನಿರಸ್ಮಿನ್ನಥೇಂದ್ರಸ್ತು ಮಧ್ಯತೋ ವಾಯುರೇವ ಚ ।**
**ಸೂರ್ಯೋ ದಿವೀತಿ ವಿಜ್ಞೇಯಾಸ್ತಿಸ್ರ ಏವೇಹ ದೇವತಾಃ ॥**

(ಬೃ. ದೇ. ೧-೬೯)

ಅಗ್ನಿಯು ಈ ಲೋಕದಲ್ಲಿಯೂ, ಇಂದ್ರ ಮತ್ತು ವಾಯುಗಳು ಮಧ್ಯಮಲೋಕದಲ್ಲಿಯೂ, ಸೂರ್ಯನು ದ್ಯುಲೋಕದಲ್ಲಿಯೂ, ಅಗ್ನಿಯ ಪ್ರಭೇದಗಳಾಗಿದ್ದಾರೆ. ಈ ಎಲ್ಲಾ ಪ್ರಭೇದಗಳಿಗೂ, ಜಗತ್ತಿನ ಸಕಲ ವಸ್ತುಗಳಿಗೂ ಅಗ್ನಿಯೇ ಮೂಲರೂಪನು. ಇದನ್ನೇ ನಿರುಕ್ತಕಾರರೂ ಸಹ ವಿವರಿಸುತ್ತ **ತಿಸ್ರ ಏವ ದೇವತಾಃ** (ದೇವತೆಗಳ ಸಂಖ್ಯೆಯು ಕೇವಲ ಮೂರು. ಈ ಮೂರೂ ಸಹ ಒಂದೇ ತತ್ತ್ವದ ಮೂರು ಅಂಶಗಳು) ಎಂದು ತಿಳಿಸಿದ್ದಾರೆ. ಆದರೆ, ಈ ಮೂರು ಪ್ರಭೇದಗಳ ಮಹಿಮೆಯೇನೆಂದರೆ—

**ಏತಾಸಾಮೇವ ಮಾಹಾತ್ಮ್ಯಾನ್ನಾಮಾನ್ಯತ್ವಂ ವಿಧೀಯತೇ ।**
**ತತ್ತತ್ಸ್ಥಾನವಿಭಾಗೇನ ತತ್ರ ತತ್ರೇಹ ದೃಶ್ಯತೇ ॥**

(ಬೃ. ದೇ. ೧–೭೦)

ಇವರುಗಳ ಮಾಹಾತ್ಮ್ಯದಿಂದಲೇ ಬೇರೆಬೇರೆ ನಾಮಧೇಯಗಳಿಂದ ನಿರ್ದಿಷ್ಟರಾಗಿದ್ದಾರೆ. ಈ ಬೇರೆಬೇರೆ ಹೆಸರುಗಳೂ ಸಹ ಆಯಾ ಅಂಶಗಳಿಂದ ಬೇರೆಬೇರೆ ಲೋಕಗಳನ್ನು ವ್ಯಾಪಿಸಿರುವುದರಿಂದ ಆಯಾ ಸ್ಥಾನಗಳಿಗನುಸಾರವಾಗಿ ಪ್ರಸಿದ್ಧವಾಗಿವೆ ಇತ್ಯಾದಿಯಾಗಿ ಅಗ್ನಿಯ ಪ್ರಭೇದ ವಿಷಯಗಳು ಪ್ರಶಂಸಿತವಾಗಿವೆ.

" **ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿ ದಧೇ ಪದಂ** " (ಋ. ಸಂ. ೧–೨೨–೧೭) ಎಂಬ ವಾಕ್ಯದ ತಾತ್ಪರ್ಯವನ್ನು ವಿವರಿಸುವಾಗ ದುರ್ಗಾಚಾರ್ಯರು ಈ ರೀತಿ ತಿಳಿಸಿದ್ದಾರೆ.

**ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ । ಪಾರ್ಥಿವೋಽಗ್ನಿರ್ಭೂತ್ವಾ ಪೃಥಿವ್ಯಾಂ ಯತ್ಕಿಂಚಿದಸ್ತಿ ತದ್ವಿಕ್ರಮತೇ ತದಧಿತಿಷ್ಠತಿ । ಅಂತರಿಕ್ಷೇ ವಿದ್ಯುದಾತ್ಮನಾ ದಿವಿ ಸೂರ್ಯಾತ್ಮನಾ । ಯದುಕ್ತಂ । ತಮೂ ಅಕೃಣ್ವನ್ ತ್ರೇಧಾ ಭುವೇ ಕಂ**

(ನಿ. ೧೨-೧೯)

ಹಿಂದೆ ಹೇಳಿದ ರೀತಿಯಲ್ಲಿಯೇ ವಿಷ್ಣುವಿನ ಪಾದಪ್ರಕ್ಷೇಪಣವೂ ವಿವೃತವಾಗಿದೆ. ವಿಷ್ಣುವಿನ ಮೂರು ಪಾದಗಳಲ್ಲಿ ಒಂದು ಪೃಥ್ವಿಯಲ್ಲಿ ಪಾರ್ಥಿವಾಗ್ನಿರೂಪದಲ್ಲಿಯೂ, ಇನ್ನೊಂದು ಅಂತರಿಕ್ಷದಲ್ಲಿ ವಿದ್ಯುದ್ರೂಪದಲ್ಲಿಯೂ, ಮೂರನೆಯದು ದ್ಯುಲೋಕದಲ್ಲಿ ಸೂರ್ಯರೂಪದಲ್ಲಿಯೂ ಆಕ್ರಮಿಸಿದೆ. ಇದಕ್ಕೆ ವೈದಿಕವಾಕ್ಯವೂ ಆಧಾರವಾಗಿದೆ.

ಪ್ರಜಾಪತಿರೂಪನಾದ ಅಗ್ನಿಯೇ, ಅಗ್ನಿ, ವಾಯು, ಆದಿತ್ಯ ಈ ರೂಪಗಳಿಂದ ಪ್ರಕಾಶಿತನಾಗುತ್ತಾ ನೆಂದು ಬೃಹದ್ದೇವತಾವಾಕ್ಯಗಳು ಯಾವ ಮೂಲತತ್ತ್ವವನ್ನು ಪ್ರಶಂಸಿಸಿರುವ ವಿಷಯವನ್ನು ಮೇಲೆ ಉದಾಹರಿಸಿ ವಿವರಿಸಿದೆಯೋ ಅದೇ ವಿಷಯವೇ ಶತಪಥಬ್ರಾಹ್ಮಣದಲ್ಲಿ ಇನ್ನೂ ವಿಸ್ತೃತವಾಗಿ ತಿಳಿಸಲ್ಪಟ್ಟಿದೆ.

**ಸೋऽಕಾಮಯತ ಪ್ರಜಾಪತಿಃ । ಭೂಯ ಏವ ಸ್ಯಾತ್ಪ್ರಜಾಯೇತೇತಿ ಸೋऽಗ್ನಿನಾ ಪೃಥಿವೀಂ ಮಿಥುನಗ್ಂ ಸಮಭವತ್ತತ ಅಂಡಗ್ಂ ಸಮವರ್ತತ ತದಭ್ಯಮೃಶತ್ಪುಷ್ಯತ್ವಿತಿ ಪುಷ್ಯತು ಭೂಯೋऽಸ್ತ್ವಿತ್ಯೇವ ತದಬ್ರವೀತ್ ॥**

(ಶ. ಬ್ರಾ. ೬-೧-೨-೧)

ಜಗತ್ತಿಗೆ ಮೂಲವಾದ ಈ ಸೂಕ್ಷ್ಮತತ್ತ್ವವು ಬೆಳೆಯಲಿ ಎಂದು ಪ್ರಜಾಪತಿಯು ಆಶಿಸಿದನು. ಅನಂತರವೇ ಅವನು ಅಗ್ನಿರೂಪದಿಂದ ಪೃಥ್ವಿಯೊಡನೆ ಸೇರಿ ಸಂಪರ್ಕವನ್ನು ಹೊಂದಿದನು ಆಗ ಒಂದು ಅಂಡವು ಉದ್ಭವಿಸಿತು. ಪುನಃ ಅದು ಬೆಳೆಯಲಿ ಎಂದು ಆಶಿಸಿದನು.

**ಸ ಯೋ ಗರ್ಭೋऽನ್ತರಾಸೀತ್ । ಸ ವಾಯುರಸೃಜ್ಯತಾಥ ಯದಶ್ರು ಸಂಕ್ಷರಿತಮಾಸೀತ್ತಾನಿ ವಯಾಗ್ಂಸ್ಯಭವನ್ನಥ ಯಃ ಕಪಾಲೇ ರಸೋ ಲಿಪ್ತ ಆಸೀತ್ತಾ ಮರೀಚಯೋऽಭವನ್ನಥ ಯತ್ಕಪಾಲಮಾಸೀತ್ತದಂತರಿಕ್ಷಮಭವತ್ ।**

(ಶ. ಬ್ರಾ. ೬-೧-೨-೨)

ಆಗ ಅಂತಃಸ್ಥವಾದ ಆ ಗರ್ಭವು ವಾಯುರೂಪದಲ್ಲಿ ಉತ್ಪನ್ನವಾಯಿತು. ಆ ಕಾಲದಲ್ಲಿ ಉತ್ಪನ್ನವಾದ ಅಶ್ರುಗಳೇ ಪಕ್ಷಿರೂಪದಲ್ಲಿ ಪರಿವರ್ತಿತವಾದವು. ಕಪಾಲಕ್ಕೆ ಸಿಕ್ತವಾಗಿದ್ದ ರಸಗಳು ಸೂರ್ಯರಶ್ಮಿಗಳಾದವು. ಕಪಾಲವೇ ಅಂತರಿಕ್ಷರೂಪದಲ್ಲಿ ಪರಿವರ್ತಿತವಾಯಿತು.

**ಸೋऽಕಾಮಯತ । ಭೂಯ ಏವ ಸ್ಯಾತ್ಪ್ರಜಾಯೇತೇತಿ ಸ ವಾಯುನಾಂತರಿಕ್ಷಂ ಮಿಥುನಗ್ಂ ಸಮಭವತ್ತತ ಆಂಡಗ್ಂ ಸಮವರ್ತತ ತದಭ್ಯಮೃಶದ್ಯಶೋ ಬಿಭೃಹೀತಿ ತತೋऽಸಾವಾದಿತ್ಯಃ ।**

(ಶ. ಬ್ರಾ. ೬-೧-೨-೩)

ಪುನಃ ಇದೂ ಬೆಳೆಯಲಿ ಮತ್ತು ಸಂತತರೂಪದಿಂದ ವೃದ್ಧಿ ಹೊಂದಲಿ ಎಂದು ಆಶಿಸಿದನು. ಆಗ ವಾಯು ರೂಪದಿಂದ ಅಂತರಿಕ್ಷದೊಂದಿಗೆ ಸಂಪರ್ಕವನ್ನು ಹೊಂದಿದನು. ಪುನಃ ಒಂದು ಅಂಡವು ಆವಿರ್ಭವಿಸಿತು. " ನೀನು ಯಶಸ್ವಿಯಾಗು ಎಂದು " ಆಶೀರ್ವದಿಸಿ ಅದನ್ನು ಸ್ಪರ್ಶಿಸಿದನು. ಅದರಿಂದ ಆದಿತ್ಯನ ಆವಿರ್ಭಾವವಾಯಿತು-

**ಸೋऽಕಾಮಯತ। ಭೂಯ ಏವ ಸ್ಯಾತ್ಪ್ರಜಾಯೇತೇತಿ ಸ ಆದಿತ್ಯೇನ ದಿವಂ ಮಿಥುನಗ್ಂ ಸಮಭವತ್ತತ ಅಂಡಗ್ಂ ಸಮವರ್ತತ . . . . ॥**

(೬-೧-೨-೪)

ಇನೂ ವೃದ್ಧಿಯನ್ನು ಹೊಂದಲಿ ಎಂದು ಆಶಿಸಿದನು. ಆಗ ಆದಿತ್ಯನ ರೂಪದಿಂದ ದ್ಯುಲೋಕದ ಸಂಪರ್ಕ ವನ್ನು ಹೊಂದಿದನು. ಅನಂತರ ಅದರಿಂದಲೂ ಒಂದು ಅಂಡವು ಉತ್ಪನ್ನವಾಯಿತು.

ಹೀಗೆ ಮೂರು ಲೋಕಗಳಲ್ಲೂ ಅಗ್ನಿ, ವಾಯು ಮತ್ತು ಆದಿತ್ಯರೂಪದಿಂದ-ವ್ಯಾಪಿಸಿರುವ ಪ್ರಕರಣವು ವರ್ಣಿತವಾಗಿದೆ. ಪ್ರಕೃತವಾದ " **ವಿದ್ಮಾ ತೇ ಅಗ್ನೇ ತ್ರೇಧಾ ತ್ರಯಾಣೀತಿ** " ಎಂಬ ಋಕ್ಕನ್ನೇ ವಿವರಿಸುತ್ತ

ಅಗ್ನಿರ್ವಾಯುರಾದಿತ್ಯ ಏತಾನಿ ಹಾಸ್ಯ ತಾನಿ ತ್ರೇಧಾ ತ್ರಯಾಣಿ ಎಂಬುದಾಗಿ ಮೇಲೆ ಹೇಳಿದ ವಿಷಯಗಳನ್ನು ತಿಳಿಸಿದೆ. (ಶ. ಬ್ರಾ. ೬-೭-೪-೪) ಅನಂತರ ಸಮುದ್ರೇ ತ್ವಾ ಎಂಬ ಮುಂದಿನ ಋಕ್ಕನ್ನು ವಿವರಿಸುತ್ತ—

ಸಮುದ್ರೇ ತ್ವಾ ನೃಮಣಾ ಅಪ್ಸ್ವಂತರಿತಿ ಪ್ರಜಾಪತಿರ್ವೈ ನೃಮಣಾ ಅಪ್ಸು ತ್ವಾ ಪ್ರಜಾಪತಿರಿತ್ಯೇತನ್ನೃಚಕ್ಷಾ ಈಧೇ ದಿವೋ ಅಗ್ನ ಊಧನ್ನಿತಿ ಪ್ರಜಾಪತಿರ್ವೈ ನೃಚಕ್ಷಾ ಅಸೌ ದಿವ ಊಧಸ್ತೃತೀಯೇ ತ್ವಾ ರಜಸಿ ತಸ್ಥಿವಾಗ್ಂಸಮಿತಿ ದ್ಯೌರ್ವೈ ತೃತೀಯಗ್ಂ ರಜೋಽಪಾಮುಪಸ್ಥೇ ಮಹಿಷಾ ಅವರ್ಧನ್ನಿತಿ ಪ್ರಾಣಾ ವೈ ಮಹಿಷಾ ದಿವಿ ತ್ವಾ ಪ್ರಾಣಾ ಅವರ್ಧನ್ನಿತ್ಯೇತತ್ । (ಶ. ಬ್ರಾ. ೬-೭-೪-೫)

ಎಲೈ ಅಗ್ನಿಯೇ, ಮಾನವರಿಗೆ ಹಿತಕಾರಿಯಾದವನು ನಿನ್ನನ್ನು ಅಪ್ಪಿನಲ್ಲಿ (ಉದಕದಲ್ಲಿ) ಪ್ರಜ್ವಲಿಸುವಂತೆ ಮಾಡಿದನು. ಪ್ರಜಾಪತಿಯೇ ಅಂತಹ ಮಾನವರಿಗೆ ಹಿತಕರನು. ಎಲೈ ಅಗ್ನಿಯೇ, ಮಾನವರ ವ್ಯವಹಾರಗಳನ್ನೆಲ್ಲ ಪೂರ್ಣವಾಗಿ ನೋಡಬಲ್ಲವನೇ ನಿನ್ನನ್ನು ಅಂತರಿಕ್ಷದಲ್ಲಿಯೂ ಪ್ರಜ್ವಲಿತನಾಗುವಂತೆ ಮಾಡಿದನು. ಪ್ರಜಾಪತಿಯೇ ಆ ರೀತಿಯಾದ ದಿವ್ಯದರ್ಶನವುಳ್ಳವನು. ಅನಂತರ ಅದೇ ಪ್ರಜಾಪತಿಯ ನಿರ್ದೇಶದಿಂದ ಮೂರನೆಯದಾದ ದ್ಯುಲೋಕದಲ್ಲಿ ಸ್ಥಿತಿಯನ್ನು ಹೊಂದಿದ ನಿನ್ನನ್ನು ಮಹಿಷಗಳು ಬೆಳೆಸಿದವು. ಪ್ರಾಣಗಳೇ ಈ ರೀತಿ ಮಹಿಷಸಂಜ್ಞಕವಾಗಿರುವುವು. ಎಂದರೆ, ನಿನ್ನನ್ನು ಪ್ರಾಣಗಳು ದ್ಯುಲೋಕದಲ್ಲಿ ಪುಷ್ಟನಾಗಿ ಪ್ರಕಾಶಿಸುವಂತೆ ಮಾಡಿದವು ಎಂದು ತಾತ್ಪರ್ಯವೆಂದು ತಿಳಿಸಿದೆ.

ಯಾವ ಆದಿತ್ಯನು ದ್ಯುಲೋಕದಲ್ಲಿ ಪ್ರಕಾಶಿಸುವನೋ, ಅವನು ಅಗ್ನಿಯಲ್ಲದೆ ಬೇರೆಯಲ್ಲ ಎಂದು " ಅಸೌ ವಾ ಆದಿತ್ಯ ಏಷೋಽಗ್ನಿಃ ಸ ಏಷ ಜ್ಯೋತಿಷ್ಮಾನ್ " (ಶ. ಬ್ರಾ. ೬-೪-೧-೧೧) ಎಂಬಿವೇ ಮುಂತಾದ ಶ್ರುತಿವಾಕ್ಯಗಳು ಪ್ರಸಿದ್ಧವಾಗಿವೆ. ಈ ಅಗ್ನಿಯು ಇಂದ್ರನೆಂದು ಏತಕ್ಕೆ ಕರೆಯಲ್ಪಟ್ಟನು ಎಂದು ಪ್ರಶ್ನಿಸಿದರೆ, ಅದಕ್ಕೆ ಉತ್ತರವಾಗಿ—

ರಸಾನ್ ರಶ್ಮಿಭಿರಾದಾಯ ವಾಯುನಾಯಂ ಗತಃ ಸಹ ।
ವರ್ಷತ್ಯೇವ ಚ ಯಲ್ಲೋಕೇ ತೇನೇಂದ್ರ ಇತಿ ಸ ಸ್ಮೃತಃ ॥
(ಬೃ. ದೇ. ೧-೬೮)

ಇದೇ ಅಗ್ನಿಯು ತನ್ನ ರಶ್ಮಿಗಳಿಂದ ರಸವನ್ನು ಹೀರಿ, ವಾಯುಸಹಿತನಾಗಿ ಪುನಃ ಪೃಥ್ವಿಯಮೇಲೆ ವೃಷ್ಟಿಯನ್ನು ಸುರಿಸುತ್ತಾನೆ. ಆದುದರಿಂದಲೇ ಇಂದ್ರನೆಂದು ಪ್ರಸಿದ್ಧನಾದನು ಎಂದು ಬೃಹದ್ದೇವತೆಯ ವಾಕ್ಯಗಳು ತಿಳಿಸುತ್ತವೆ. ಹೀಗೆ ಶ್ರುತ್ಯಂತರಗಳಲ್ಲಿ ವರ್ಣಿತವಾದ ಅಗ್ನಿಯ ರೂಪಪ್ರಭೇದಗಳು ಋಕ್ಸಂಹಿತಾವಾಕ್ಯಗಳಲ್ಲಿಯೇ ಈ ರೀತಿ ವಿವೃತವಾಗಿವೆ. ಈ ಅಗ್ನಿಯೇ ಆದ್ಯಂತರಹಿತವಾದ ಮೂಲತತ್ತ್ವವು.

ಅಗ್ನಿರಸ್ಮಿ ಜನ್ಮನಾ ಜಾತವೇದಾ ಘೃತಂ ಮೇ ಚಕ್ಷುರಮೃತಂ ಮ ಆಸನ್ ।
ಅರ್ಕಸ್ತ್ರಿಧಾತೂ ರಜಸೋ ವಿಮಾನೋಽಜಸ್ರೋ ಘರ್ಮೋ ಹವಿರಸ್ಮಿ ನಾಮ ॥
(ಋ. ಸಂ. ೩-೨೬-೭)

ತ್ರಿಭಿಃ ಪವಿತ್ರೈರಪುಪೋದ್ಧ್ಯರ್ಕಂ ಹೃದಾ ಮತಿಂ ಜ್ಯೋತಿರನು ಪ್ರಜಾನನ್ ।
ವರ್ಷಿಷ್ಠಂ ರತ್ನಮಕೃತ ಸ್ವಧಾಭಿರಾದಿದ್ದ್ಯಾವಾಪೃಥಿವೀ ಪರ್ಯಪಶ್ಯತ್ ॥
(ಋ. ಸಂ. ೩-೨೬-೮)

ನನ್ನ ಸ್ವರೂಪಯೋಗ್ಯತೆಯಿಂದಲೇ ನಾನು ಸಕಲ ವಿಶ್ವವ್ಯವಹಾರಗಳನ್ನೂ ತಿಳಿದವನಾಗಿದ್ದೇನೆ (ಜಾತವೇದನಾಗಿದ್ದೇನೆ). ನನ್ನ ತೇಜಸ್ಸು ಸ್ವಪ್ರಕಾಶಕವೂ, ಜಗತ್ಪ್ರಕಾಶಕವೂ ಆಗಿದೆ. ಜಗತ್ತಿಗೆಲ್ಲ ಚೈತನ್ಯದಾಯಿಯಾದ ಪ್ರಾಣರೂಪನಾಗಿ ನನ್ನ ಪ್ರಕೃತಿಯನ್ನು ಮೂರು ವಿಭಾಗಗಳಿಂದ ಪ್ರಸರಿಸಿದ್ದೇನೆ. ಅದು ಹೇಗೆಂದರೆ—

೧) ರಜಸಃ ವಿಮಾನಃ—ಅಂತರಿಕ್ಷಕ್ಕೆ ಅಧಿಷ್ಠಾತೃವಾದ ವಾಯು (ಅಥವಾ ಇಂದ್ರ) ರೂಪನು.

೨) **ಅಜಸ್ರೋ ಘರ್ಮಃ**—ಕ್ಷಯರಹಿತವಾದ ಪ್ರಕಾಶಾತ್ಮನಾದ (ದ್ಯುಲೋಕದಲ್ಲಿ) ಆದಿತ್ಯರೂಪನು.

೩) ಹವಿರಸ್ಮಿ ನಾಮ—ಪೃಥ್ವಿಯಲ್ಲಿ ಹವಿಸ್ಸಿಗೆ ಪಾತ್ರನಾದ ಅಗ್ನಿರೂಪನು.

ಹೀಗೆ ವಿವೃತವಾದ ಇದೇ ವಿಷಯವನ್ನೇ ಬೃಹದಾರಣ್ಯಕದಲ್ಲೂ ಪ್ರಶಂಸಿಸಿ—

"**ಸ ತ್ರೇಧಾತ್ಮಾನಂ ವ್ಯಭಜತ ಆದಿತ್ಯಂ ತೃತೀಯಂ ವಾಯುಂ ತೃತೀಯಂ**" (ಬೃ. ಉ. ೧-೨-೩) ಎಂದು ತಿಳಿಸಿದೆ. ಹೀಗೆ ಉಪನಿಷದಾದಿಗಳಲ್ಲಿ ಯಾವ ಅದ್ವಿತೀಯವಾದ ವಿಶ್ವತತ್ತ್ವವನ್ನು ಪರಬ್ರಹ್ಮ, ಪರಂಜ್ಯೋತಿ ಎಂದು ವರ್ಣಿಸಿದೆಯೋ ಅದೇ ಆದಿತತ್ತ್ವವನ್ನು ಋಕ್ಸಂಹಿತೆಯಲ್ಲಿ ಮೇಲೆ ಉದಾಹೃತವಾಗಿರುವ (೨-೨೬-೮) ವಾಕ್ಯಗಳಲ್ಲಿ ಪ್ರಶಂಸಿಸಿದೆ.

ಸರ್ವಾತ್ಮಕನಾದ ಅಗ್ನಿಯು ತನ್ನ ಅಂತಃಕರಣವೃತ್ತಿಯಿಂದ ಪೂಜ್ಯವೂ, ಸ್ವಪ್ರಕಾಶವೂ ಆದ ಪರಬ್ರಹ್ಮಾಖ್ಯವಾದ (ಸಾ. ಭಾ.) ತೇಜಸ್ಸನ್ನು ಅರಿತು ಜಗತ್ಪಾವಕಗಳಾದ ಅಗ್ನಿ, ವಾಯು ಮತ್ತು ಸೂರ್ಯರೂಪಗಳಿಂದ ಕೂಡಿಯೂ ಮತ್ತು ಅವುಗಳಿಂದಲೂ ವೈಶಿಷ್ಟ್ಯವನ್ನು ಹೊಂದಿಯೂ ಪ್ರಕಾಶಿಸುತ್ತಾನೆ. ಇದೇ ಅಗ್ನಿ, ವಾಯು ಮತ್ತು ಸೂರ್ಯರೂಪಗಳಿಂದಲೂ ತನ್ನ ಆತ್ಮಪ್ರಸಾರವನ್ನು ಹೊಂದುತ್ತಾನೆ. ಈ ಸಾಧನಪ್ರಯತ್ನದಿಂದ ಸಕಲ ಜಗತ್ತನ್ನೂ ವೀಕ್ಷಿಸುತ್ತಾನೆ ಎಂದು ಪ್ರಶಂಸಿಸಿರುತ್ತದೆ.

ಈ ಆದಿತತ್ತ್ವವೇ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆಲ್ಲ ಕಾರಣವು. ಈ ಮೂರು ಸ್ವರೂಪಗಳಾವುವೆಂದರೆ—

**ಅಸ್ಯ ವಾಮಸ್ಯ ಪಲಿತಸ್ಯ ಹೋತುಸ್ತಸ್ಯ ಭ್ರಾತಾ ಮಧ್ಯಮೋ ಅಸ್ತ್ಯಶ್ನಃ ।**
**ತೃತೀಯೋ ಭ್ರಾತಾ ಘೃತಪೃಷ್ಠೋ ಅಸ್ಯಾತ್ರಾಪಶ್ಯಂ ವಿಶ್ಪತಿಂ ಸಪ್ತಪುತ್ರಂ ॥**

(ಋ. ಸಂ. ೧-೧೬೪-೧)

ವಿಶ್ವಪಾಲಕನಾದ ಆದಿತ್ಯನಿಗೆ ಮಧ್ಯಮಲೋಕದ ವಾಯುವೂ, ಪೃಥಿವೀಸ್ಥನಾದ ಅಗ್ನಿಯೂ ಭ್ರಾತೃಗಳು. ಇವನೇ ವಿಶ್ವಾತ್ಮನು. ವಿಶ್ವಪ್ರಭುವು. ಬ್ರಹ್ಮಾಂಡರೂಪದಲ್ಲಿ ವಿಶ್ವವನ್ನು ಪ್ರಕಾಶಪಡಿಸಿದನು. ತಾನು ಸೃಷ್ಟಿಸಿದ ಜಗತ್ತನ್ನು ತಾನೇ ಪಾಲಿಸುತ್ತಾನೆ. ಪುನಃ ಸಂಹಾರಕ್ರಿಯೆಯಿಂದ ತನ್ನಲ್ಲೇ ಲೀನಮಾಡಿಕೊಳ್ಳುತ್ತಾನೆ. ಇವನೇ ಜಗತ್ತಿಗೆ ಸೂತ್ರಪ್ರಾಯನು. ಕ್ರಿಯಾಭೇದಗಳಿಂದಲೂ, ಸ್ಥಾನಭೇದಗಳಿಂದಲೂ ಇವನಿಗೆ ನಾನಾ ನಾಮಗಳು ಪ್ರಸಿದ್ಧವಾಗಿವೆ. ತನೂನಪಾತ್, ನರಾಶಂಸ, ಮಾತರಿಶ್ವಾ, ವೈಶ್ವಾನರ ಇತ್ಯಾದಿ ನಾಮಗಳೆಲ್ಲವೂ ಇವನ ರೂಪಪ್ರಭೇದಗಳು. ಮೂರು ಲೋಕಗಳಲ್ಲೂ ವ್ಯಾಪಿಸಿರುವುದರಿಂದ ಇವನೇ ತ್ರಿತನೆಂದೂ, ವ್ಯವಹೃತನಾಗಿದ್ದಾನೆ. **ತ್ರಿಷು ಸ್ಥಾನೇಷು ವರ್ತಮಾನಃ ತ್ರಿತಃ** ಎಂದು ಈ ಪದದ ಅರ್ಥವನ್ನು ತಿಳಿಸಿದೆ. (ತ್ರಿತಶಬ್ದಸೂಚಿತವಾದ ಋಷಿಯ ವಿಷಯನ್ನು ಹಿಂದೆ ಋಗ್ವೇದಸಂಹಿತಾ ೮ನೆಯ ಭಾಗದಲ್ಲಿ ತಿಳಿಸಿದೆ.)

ತ್ರಿತರೂಪನಾದ ಅಗ್ನಿಗೆ ಮೂರು ಬಂಧನಗಳಿರುತ್ತವೆ. ಸಕಲ ದೇವತೆಗಳೂ ಇವನ ಪ್ರಭೇದಗಳು.

**ಅಸಿ ಯಮೋ ಅಸ್ಯಾದಿತ್ಯೋ ಅರ್ವನ್ನಸಿ ತ್ರಿತೋ ಗುಹ್ಯೇನ ವ್ರತೇನ ।**
**ಅಸಿ ಸೋಮೇನ ಸಮಯಾ ವಿಪೃಕ್ತ ಆಹುಸ್ತೇ ತ್ರೀಣಿ ದಿವಿ ಬಂಧನಾನಿ ॥**

(ಋ. ಸಂ. ೧-೧೬೩-೩)

ವಾರುಣಾಶ್ವರೂಪನಾದ (ವಿದ್ಯುದ್ರೂಪದ) ಅಗ್ನಿಯೇ ವಾಯ್ವಾತ್ಮಕನು. ಅವನೇ ಆದಿತ್ಯರೂಪನು. ಇವನಿಗೆ ದ್ಯುಲೋಕದಲ್ಲಿ ಮೂರು ವಿಧವಾದ ಬಂಧನಗಳಿರುತ್ತವೆ. ಈ ಬಂಧನದ ಪ್ರಕಾರಗಳೇನು ಎಂಬುದನ್ನು ಹಿಂದೆ ೧೧ನೆಯ ಭಾಗದ ೨೪೨-೪೩ನೆಯ ಪುಟಗಳಲ್ಲಿ ವಿವರಿಸಿದೆ. ಮೂರು ಲೋಕಗಳಲ್ಲಿಯೂ ಮೂರು ವಿಧವಾದ ಬಂಧನಗಳು ಎಂಬ ಪ್ರಶಂಸೆಯೂ ಇರುತ್ತದೆ. ದ್ಯುಲೋಕದ ಮೂರು ವಿಧವಾದ ಬಂಧನವಿರುವಂತೆಯೇ, ಪೃಥ್ವಿಯಲ್ಲಿ ಅನ್ನ, ಸ್ಥಾನ ಮತ್ತು ಬೀಜವೆಂಬ ಮೂರು ವಿಧವಾದ ಬಂಧನವೂ, ಅಂತರಿಕ್ಷದಲ್ಲಿ ವೃಷ್ಟ್ಯುತ್ಪತ್ತಿಗೆ ಕಾರಣವಾದ ಮೇಘ, ಮಿಂಚು, ಗುಡುಗು ಎಂಬ ಮೂರು ವಿಧವಾದ ಬಂಧನವೆಂದೂ ಭಾಷ್ಯವು ತಿಳಿಸುತ್ತದೆ. ಹೀಗೆ ಸಕಲವಾದ ವಿಶ್ವಕ್ಕೂ ಕಾರಣನಾದುದರಿಂದಲೇ ಅಗ್ನಿಯು ಎಲ್ಲಕ್ಕೂ ನಾಭಿರೂಪನಾಗಿದ್ದಾನೆ. ಈ ವಿಷಯವನ್ನು ಮುಂದೆ ೧೦-೫೧-೫೨ನೆಯ ಸೂಕ್ತಗಳ ವಿಶೇಷವಿಷಯಗಳಲ್ಲಿ ವಿವರಿಸಲಾಗುತ್ತದೆ. ಅಗ್ನಿಶುಚಿ, ಅಗ್ನಿಪವಮಾನ ಮತ್ತು ಅಗ್ನಿಪಾವಕ ಇತ್ಯಾದಿ ರೂಪನಿರ್ದೇಶಗಳಿಂದ ಆಚರಿಸುವ ಕ್ರಿಯೆ ಮತ್ತು ಅವುಗಳ ಮಹತ್ತ್ವದ ಸ್ವರೂಪ ಇವುಗಳ ವಿಷಯವನ್ನು ತಿಳಿಯುವುದು ಪ್ರಕೃತದಲ್ಲಿ ಉಚಿತವಾಗುತ್ತದೆ. ಮೂರು ಲೋಕಗಳಲ್ಲೂ ಈ ಮೂರು ರೂಪಗಳಿಂದ ಪ್ರಕಾಶಿಸುವ ಅಗ್ನಿಯನ್ನು ಅಗ್ನಿಪವಮಾನ, ಅಗ್ನಿಶುಚಿ ಮತ್ತು ಅಗ್ನಿವನಸ್ಪತಿಯೆಂದು ಮೇಲೆ ತಿಳಿಸಿದೆ. ಅದನ್ನೇ ತೈತ್ತಿರೀಯ ಸಂಹಿತೆಯಲ್ಲಿ ಅಗ್ನಿಪವಮಾನ, ಅಗ್ನಿಶುಚಿ ಮತ್ತು ಅಗ್ನಿಪಾವಕ ಎಂದು ಕರೆದಿದೆ. ಈ ಮೂರು ರೂಪಗಳಿಂದ ನಿರ್ದೇಶಿಸಿ, ಮೂರು ವಿಧವಾಗಿ ಆಹುತಿಗಳನ್ನರ್ಪಿಸಿದರೆ ಮಾತ್ರ ಪೂರ್ಣರೂಪನಾದ ಅಗ್ನಿಗೆ ಪೂರ್ಣವಾದ ತೃಪ್ತಿಯು ಎಂದು ಈ ಕ್ರಿಯೆಗಳ ಆಧ್ಯಾತ್ಮಿಕ ಮತ್ತು ಆಧಿದೈವಿಕವಾದ ಮಹತ್ತ್ವವನ್ನು ತೈತ್ತಿರೀಯಸಂಹಿತೆಯಲ್ಲಿಯೂ ಮತ್ತು ಶತಪಥಬ್ರಾಹ್ಮಣದಲ್ಲಿಯೂ ತಿಳಿಸಿದೆ.

**ಅಗ್ನಯೇ ಪವಮಾನಾಯ ಪುರೋಡಾಶಮಷ್ಟಾಕಪಾಲಂ ನಿರ್ವಪೇದಗ್ನಯೇ ಪಾವಕಾಯಾಗ್ನಯೇ ಶುಚಯೇ ಜ್ಯೋಗಾಮಯಾವೀ ಯದಗ್ನಯೇ ಪವಮಾನಾಯ . . . . ॥**

(ತೈ. ಸಂ. ೨-೨-೪-೨)

ಇತ್ಯಾದಿ ವಾಕ್ಯಗಳಲ್ಲಿ ಮೂರು ರೂಪದ ಅಗ್ನಿಯನ್ನು ಉದ್ದೇಶಿಸಿ ಅರ್ಪಿತವಾಗಬೇಕಾದ ಹವಿಸ್ಸುಗಳ ಮತ್ತು ಈ ಯಾಗದ ಮಹತ್ತ್ವ ಇವನ್ನು ಪ್ರಶಂಸಿಸಿದೆ. **ಪವಮಾನ, ಪಾವಕ** ಮತ್ತು **ಶುಚಿ** ಎಂಬ ವಿಭಾಗಗಳು ಪಾರ್ಥಿವವಾದ ಯಜ್ಞಾಗ್ನಿಯ ವಿಭಾಗಗಳಾದರೂ ಆಗಬಹುದು. ಆದು ಹೇಗೆಂದರೆ, ಪ್ರಜಾಪತಿರೂಪನಾದ ಅಗ್ನಿಯ ಈ ಮೂರು ರೂಪಗಳ ನಿಜವಾದ ರಹಸ್ಯವೇನು ಎಂಬ ವಿಷಯದಲ್ಲಿ ತೈತ್ತಿರೀಯ ಮತ್ತು ಶತಪಥಬ್ರಾಹ್ಮಣವಾಕ್ಯಗಳು ಒಂದೆರಡು ವಿವರಣೆಗಳನ್ನು ತಿಳಿಸುತ್ತವೆ.

**ಪ್ರಜಾಪತಿರ್ವಾಚಸ್ಸತ್ಯಮಪಶ್ಯತ್ । ತೇನಾಗ್ನಿಮಾಧತ್ತ । ತೇನ ವೈ ಸ ಆರ್ಧ್ನೋತ್ । ಭೂರ್ಭುವಸ್ಸುವರಿತ್ಯಾಹ । ಏತದ್ವೈ ವಾಚಸ್ಸತ್ಯಂ । ಯ ಏತೇನಾಗ್ನಿಮಾಧತ್ತೇ । ಋಧ್ನೋತ್ಯೇವ । ಅಥೋ ಸತ್ಯಪ್ರಾಶೂರೇವ ಭವತಿ । ಅಥೋ ಯ ಏವಂ ವಿದ್ವಾನಭಿಚರತಿ । ಸ್ತೃಣುತ ಏವೈನಂ । ಭೂರಿತ್ಯಾಹ । ಪ್ರಜಾ ವಾ ಏವ ತದ್ಯಜಮಾನಸ್ಸೃಜತೇ । ಭುವ ಇತ್ಯಾಹ । ಅಸ್ಮಿನ್ನೇವ ಲೋಕೇ ಪ್ರತಿ ತಿಷ್ಠತಿ । ಸುವರಿತ್ಯಾಹ । ಸುವರ್ಗ ಏವ ಲೋಕೇ**

ಪ್ರತಿತಿಷ್ಠತಿ । ತ್ರಿಭಿರಕ್ಷರೈರ್ಗಾರ್ಹಪತ್ಯಮಾದಧಾತಿ । ತ್ರಯ ಇಮೇ ಲೋಕಾಃ । ಏಷ್ವೇ-
ವೈನಂ ಲೋಕೇಷು ಪ್ರತಿಷ್ಠಿತಮಾಧತ್ತೇ । . . . .

(ತೈ. ಬ್ರಾ. ೧-೧-೫-೧, ೨)

ಪ್ರಜಾಪತಿಗೆ ವಾಕ್ಸಂಬಂಧಿಯಾದ ಸತ್ಯದ ದರ್ಶನವಾಯಿತು. ಅನಂತರ ಅಭಿಮತಸಾಧನವಾದ ಆ ಸತ್ಯರೂಪ ದಿಂದ ಅಗ್ನ್ಯಾಧಾನವನ್ನು ಕಲ್ಪಿಸಿ ಭೂಃ, ಭುವಃ, ಸ್ವಃ ಎಂಬ ಕಲ್ಯಾಣಾತ್ಮಕವಾದ ತತ್ತ್ವಗಳನ್ನು ನಿರ್ಮಿಸಿದನು. ಇವರಿಂದ ಸತ್ಯಪರಾಕ್ರಮಿಯಾದನು. (ಅಥವಾ ಈ ಸತ್ಯದಿಂದಲೇ ತಾನೂ ಪುಷ್ಟನಾದನು) ಈ ಸತ್ಯದ ಪ್ರಸಾರಕ್ಕೆ ಯಾರು ವಿಘ್ನವನ್ನುಂಟುಮಾಡಿ ಹಿಂಸಿಸುವರೋ, ಖಂಡಿತ ಅವರೇ ಹಿಂಸಿತರಾಗುತ್ತಾರೆ. ಅವರಿಗೆ ಖಂಡಿತ ಶ್ರೇಯಸ್ಸಿಲ್ಲ.

ಗಾರ್ಹಪತ್ಯಾದ್ಯಗ್ನಿಗಳೇ, ಈ ಭೂರಾದಿ ಲೋಕಗಳನ್ನು ಪ್ರತಿಬಿಂಬಿಸುವ ತತ್ತ್ವಗಳು. ಇವೆಲ್ಲವೂ ವಾಗ್ರೂಪನಾದ ಸತ್ಯವು. ಇವೆಲ್ಲವೂ ಪ್ರಜಾಪತಿಯಿಂದ ನಿರ್ಮಿತವಾದವು ಮತ್ತು ಪ್ರಜಾಪತಿಯ ಅಂಶಗಳೇ ಆಗಿರುತ್ತವೆ.

ಪ್ರಜಾಪತಿಃ ಪ್ರಜಾ ಅಸೃಜತ । . . . . ಸಾ ವಿರಾಡಭವತ್ । ತಂ ದೇವಸುರಾ ವ್ಯಗೃಹ್ಣತ ।
ಸೋಽಬ್ರವೀತ್ಪ್ರಜಾಪತಿಃ । ಮಮ ವಾ ಏಷಾ ।

(ತೈ. ಬ್ರಾ. ೧-೧-೧೦-೧)

ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿದನು. ಆಗ ತನ್ನ ವೀರ್ಯವು ಕೊಂಚ ಕುಂದಲು ತಪಸ್ಸನ್ನಾಚರಿಸಿದನು. ಆಗ ಆ ವೀರ್ಯವು ಅಗ್ನಿಯ ರೂಪಗಳಾದವು. ಆಗ ದೇವಾಸುರರೆಲ್ಲರೂ ಅದನ್ನು ಸ್ಪರ್ಧೆಯಿಂದ ಹಿಡಿಯಲು ಆರಂಭಿಸಿದರು. ಆಗ ಪ್ರಜಾಪತಿಯು ಈ ವಿರಾಟ್‌ಸಂಜ್ಞಕವಾದ ಅಗ್ನಿಯೂ ಅಗ್ನಿಯ ಮೂಲರೂಪಗಳೂ ನನಗೆ ಸೇರಿದವು. ಈ ಮೂಲರೂಪದಿಂದ ವಿಕೃತಿಹೊಂದಿದ ಅಗ್ನಿಯ ರೂಪಗಳು ನಿಮಗೆ ಸೇರಿದವು ಎಂದು ಹೇಳಿದನು. ಆದುದರಿಂದ ಅಗ್ನಿಯ ಮೂಲರೂಪಗಳು ಪ್ರಜಾಪತಿಯ ಅಂಶವೆಂದಾದವು. ಇವು ಮೂರು ಬಗೆ. ಇದರ ಸ್ವರೂಪಗಳಾವುವೆಂದರೆ ಅಥವಾ ಮೂರು ರೂಪಗಳನ್ನು ಹೊಂದಲು ಕಾರಣವೇನೆಂದರೆ ಅದನ್ನು ಇತಿಹಾಸರೂಪದಲ್ಲಿ ಈ ರೀತಿ ತಿಳಿಸಿದೆ.

ದೇವಾಸುರಾಸ್ಸಂಯತ್ತಾ ಆಸನ್ । ತೇ ದೇವಾ ವಿಜಯಮುಪಯಂತಃ । ಅಗ್ನೌ ವಾಮಂ
ವಸು ಸಂನ್ಯದಧತ । ಇದಮು ನೋ ಭವಿಷ್ಯತಿ । ಯದಿ ನೋ ಜೇಷ್ಯಂತೀತಿ । ತದಗ್ನಿ-
ರ್ನ್ಯೋತ್ಸಹಮಶಕ್ನೋತ್ । ತತ್ತ್ರೇಧಾ ವಿನ್ಯದಧಾತ್ । ಪಶುಷು ತೃತೀಯಂ । ಅಪ್ಸು
ತೃತೀಯಂ । ಆದಿತ್ಯೇ ತೃತೀಯಂ ।

(ತೈ. ಬ್ರಾ. ೧-೧-೬-೧)

ದೇವತೆಗಳೂ, ಅಸುರರೂ ಹೋರಾಡತೊಡಗಿದರು. ಆಗ ದೇವತೆಗಳಿಗೆ ವಿಜಯವಾಯಿತು. ಅವರು ಅಸುರರಿಂದ ಜಯಿಸಿದ ಸಂಪತ್ತನ್ನು ಅಗ್ನಿಯಲ್ಲಿ ನಿಕ್ಷೇಪ ಮಾಡಿದರು. ಆಗ ಅಗ್ನಿಗೆ ಅಪ್ಪನ್ನೂ ಹೊರಲಾಗಲಿಲ್ಲ. ಆಗ ಅದನ್ನು ಮೂರು ಭಾಗ ಮಾಡಿ ಮೂರು ಸ್ಥಾನಗಳಲ್ಲಿರಿಸಿದನು. ಪಶ್ವಾದಿಗಳಲ್ಲಿ ಒಂದುಭಾಗವನ್ನೂ, ಉದಕಗಳಲ್ಲಿ ಇನ್ನೊಂದು ಭಾಗವನ್ನೂ, ಆದಿತ್ಯನಲ್ಲಿ ಉಳಿದ ಮೂರನೆಯ ಭಾಗವನ್ನೂ ಸ್ಥಾಪಿಸಿದನು.

ತದ್ದೇವಾ ವಿಜಿತ್ಯ । ಪುನರವಾರುರುತ್ಸಂತ । ತೇಽಗ್ನಯೇ ಪವಮಾನಾಯ ಪುರೋಡಾ-
ಶಮಷ್ಟಾಕಪಾಲಂ ನಿರವಪನ್ । ಪಶವೋ ವಾ ಅಗ್ನಿಃ ಪವಮಾನಃ । ಯದೇವ ಪಶುಷ್ವಾ-

**ಸೀತ್ । ತೆತ್ತ್ರೇನಾವಾರುಂಧತೆ । ತೇಽಗ್ನಯೇ ಪಾವಕಾಯ । ಆಪೋ ವಾ ಅಗ್ನಿಃ ಪಾವಕಃ । ಯದೇವಾಪ್ಸ್ವಾಸೀತ್ । ತೆತ್ತ್ರೇನಾವಾರುಂಧತೆ । ತೇಽಗ್ನಯೇ ಶುಚಯೇ । ಅಸೌ ವಾ ಆದಿತ್ಯೋಽಗ್ನಿಶ್ಶುಚಿಃ । ಯದೇವಾದಿತ್ಯ ಆಸೀತ್ । ತೆತ್ತ್ರೇನಾವಾರುಂಧತೆ ।**

(ತೈ. ಬ್ರಾ. ೧-೧-೬-೨, ೩)

ಹೀಗೆ ವಿಭಕ್ತವಾದ ಸಂಪತ್ತನ್ನು ದೇವತೆಗಳು ಪುನಃ ಪಡೆಯಲು ಇಚ್ಛಿಸಿದರು. ಆಗ ಅಗ್ನಿ ಪವಮಾನವನ್ನು ದ್ದೇಶಿಸಿ ಅಷ್ಟಾಕಪಾಲಾತ್ಮಕವಾದ ಪುರೋಡಾಶವನ್ನು ಅರ್ಪಿಸಿದರು. ಯಾವ ಪಶುಗಳಲ್ಲಿ ಅಗ್ನಿಯು ಮೂರನೆಯ ಒಂದು ಭಾಗದ ಧನವನ್ನು ಸ್ಥಾಪಿಸಿದ್ದನೋ, ಅದೇ ಪಶುಗಳೇ ಅಗ್ನಿ ಪವನಾತ್ಮಕಗಳಾಗಿದ್ದುವು. ಆದುದರಿಂದ ಅಗ್ನಿ ಪವಮಾನನಿಗೆ ಹವಿಸ್ಸನ್ನರ್ಪಿಸಿ ಅಲ್ಲಿದ್ದ ಸಂಪತ್ತನ್ನು ಪಡೆದರು. ಹಾಗೆಯೇ ಅಗ್ನಿ ಪಾವಕನಿಗೂ ಅರ್ಪಿಸಿದರು. ದೋಷ ವನ್ನು ನಾಶಮಾಡಿ ಉದಕವು ಪರಿಶುದ್ಧಿಯನ್ನುಂಟುಮಾಡುತ್ತದೆ. ಈ ಉದಕವೇ ಅಗ್ನಿ ಪಾವಕಸಂಜ್ಞಕವು. ಆದುದರಿಂದ ಅಗ್ನಿ ಪಾವಕನಲ್ಲಿ ಸ್ಥಾಪಿಸಿದ್ದ ಸಂಪತ್ತನ್ನು ಪಡೆದರು. ಹಾಗೆಯೇ ಅಗ್ನಿ ಶುಚಿಗೂ ಅರ್ಪಿಸಿದರು. ಆದಿತ್ಯನೇ ಅಗ್ನಿ ಶುಚ್ಯಾತ್ಮಕನು. ಆದುದರಿಂದ ಆದಿತ್ಯನಲ್ಲಿ ನಿಕ್ಷಿಪ್ತವಾಗಿದ್ದ ಮೂರನೆಯ ಒಂದು ಭಾಗವನ್ನೂ ಪಡೆದರು. ಆದುದ ರಿಂದಲೇ ಹವಿಸ್ಸಿನ ಅರ್ಪಣವು ಮೂರು ವಿಧವಾಗಿರುತ್ತದೆ. ಈ ಮೂರು ವಿಧವಾದ ಅರ್ಪಣವೂ ಅಗ್ನಿಯ ಮೂರು ಮೂಲರೂಪಗಳಿಗನುಗುಣವಾಗಿರುತ್ತವೆ. ಹೇಗೆಂದರೆ—

**ತ್ರೀಣಿ ಹವೀಗ್‍ಂಷಿ ನಿರ್ವಪತಿ । ವಿರಾಜ ಏವ ವಿಕ್ರಾಂತಂ ಯಜಮಾನೋಽನು ವಿಕ್ರ-ಮತೇ । ಅಗ್ನಯೇ ಪವಮಾನಾಯ । ಅಗ್ನಯೇ ಶುಚಯೇ । ಯದಗ್ನಯೇ ಪವಮಾನಾಯ ನಿರ್ವಪತಿ । ಪುನಾತ್ಯೇವೈನಂ । ಯದಗ್ನಯೇ ಪಾವಕಾಯ । ಪೂತ ಏವಾಸ್ಮಿನ್ನನ್ನಾದ್ಯಂ ದಧಾತಿ । ಯದಗ್ನಯೇ ಶುಚಯೇ । ಬ್ರಹ್ಮವರ್ಚಸಮೇವಾಸ್ಮಿನ್ನುಪರಿಷ್ಟಾದ್ದಧಾತಿ ।**

(ತೈ. ಬ್ರಾ. ೧-೧-೫-೧೦)

ಅಗ್ನಿ ಪವಮಾನ, ಅಗ್ನಿ ಪಾವಕ ಮತ್ತು ಅಗ್ನಿ ಶುಚಿ ಎಂಬ ಮೂರು ರೂಪಗಳಲ್ಲಿ ವಿಭಕ್ತನಾದ ವಿರಾಡ್ರೂಪ ನಾದ ಅಗ್ನಿಯನ್ನುದ್ದೇಶಿಸಿ ಮೂರು ವಿಧವಾದ ಹವಿಸ್ಸುಗಳನ್ನರ್ಪಿಸಿದರೆ ಆಗ ಯಜಮಾನನು ಸರ್ವವ್ಯಾಪಕವಾದ ಶಕ್ತಿಯನ್ನು ಹೊಂದುತ್ತಾನೆ. ಅಗ್ನಿ ಪವಮಾನನಿಗೆ ಹವಿಸ್ಸನ್ನರ್ಪಿಸಿದುದರ ಫಲವಾಗಿ ಯಜಮಾನನಿಗೆ ಶುದ್ಧಿಯು ಲಭಿಸುತ್ತದೆ. ಅಗ್ನಿ ಪಾವಕನಿಗೆ ಅರ್ಪಿಸಿದುದರ ಫಲವಾಗಿ ಪೂತನಾದ ಯಜಮಾನನು ಅನ್ನಾದನಸಾಮರ್ಥ್ಯವನ್ನು ಹೊಂದುತ್ತಾನೆ. ಅಗ್ನಿ ಶುಚಿಗೆ ಅರ್ಪಿಸಿದ ಫಲವಾಗಿ ಬ್ರಹ್ಮವರ್ಚಸ್ಸನ್ನು ಹೊಂದುತ್ತಾನೆ. ೧) ಶುದ್ಧಿ, ೨) ಅನ್ನ, (ಪ್ರಜಾ ಮತ್ತು ಪಶ್ವಾದಿಗಳ ಸಂಪಾದನಸಾಮರ್ಥ್ಯ) ಮತ್ತು ೩) ಬ್ರಹ್ಮವರ್ಚಸ್ ಎಂಬ ಮೂರು ವಿಧವಾದ ವಿಕ್ರಾಂತಿಗಳು ಯಜಮಾನನಿಗೆ ಲಭಿಸುತ್ತವೆ.

ತೈ. ಬ್ರಾ. ೧-೧-೧೦ ರಲ್ಲು ಸಾಯಣರು **ಪವಮಾನ**ನೆಂಬುದಕ್ಕೆ ಸ್ವಯಂಶುದ್ಧನೆಂದೂ, **ಪಾವಕ**ನೆಂಬು ದಕ್ಕೆ ಇತರರನ್ನು ಶುದ್ಧಿಗೊಳಿಸುವವನೆಂದೂ ಮತ್ತು **ಶುಚಿ**ಯೆಂಬುದಕ್ಕೆ ಪ್ರಕಾಶಮಾನನೆಂದೂ ತಾತ್ಪರ್ಯವನ್ನು ಹೇಳಿದ್ದಾರೆ.

ಈ ಮೂರು ರೂಪಗಳುಳ್ಳ ಅಗ್ನಿಯನ್ನುದ್ದೇಶಿಸಿ ಹವಿಸ್ಸನ್ನು ಅರ್ಪಿಸುವ ಕ್ರಮವನ್ನೂ, ಈ ಅರ್ಪಣವು ಆಯಾ ಮೂಲರೂಪಗಳ ಸ್ವರೂಪಕ್ಕನುಗುಣವಾಗಿರಬೇಕೆಂಬುದನ್ನೂ, ಆಯಾ ಅರ್ಪಣದ ಫಲವನ್ನೂ ಶತಪಥ ಬ್ರಾಹ್ಮಣದಲ್ಲಿ ಈ ರೀತಿ ಹೇಳಿರುತ್ತದೆ. ಪ್ರಕೃತದಲ್ಲಿ ಹವಿರರ್ಪಣದ ವಿಧ್ಯುಕ್ತವಾದ ಕ್ರಮದ ವಿವರಣವು ಅಪ್ರಕೃತ.

ಈ ವಿಧಿಯು ಅಗ್ನಿಯ ಮೂಲಭೂತವಾದ ರೂಪಗಳ ವಿಷಯದಲ್ಲಿ ಯಾವ ವಿವರಣವನ್ನು ಹೇಳುತ್ತದೆ ಎಂಬುದನ್ನು ಪರಿಶೀಲಿಸುವುದೇ ಮುಖ್ಯ ಉದ್ದಿಶ್ಯವಾಗಿರುತ್ತದೆ.

**ಸ ವಾ ಅಗ್ನಯೇ ಪವಮಾನಾಯ ನಿರ್ವಪತಿ । ಪ್ರಾಣೋ ವೈ ಪವಮಾನಃ ಪ್ರಾಣಮೇವಾಸ್ಮಿನ್ನೇತದ್ದಧಾತಿ । ತದ್ವೇತೆಯ್ಯೈವಾಸ್ಮಿಂಸ್ತದ್ದಧಾತಿ ಅನ್ನಗ್ಂ ಹಿ ಪ್ರಾಣೋಽನ್ನಮೇಷಾಹುತಿಃ ॥**

(ಶ. ಬ್ರಾ. ೨-೨-೧-೬)

ಪವಮಾನಾತ್ಮಕನಾದ ಅಗ್ನಿಯು ಪ್ರಾಣರೂಪನು. ಅಗ್ನಿ ಪವಮಾನನಿಗೆ ಹವಿಸ್ಸನ್ನರ್ಪಿಸುವುದರಿಂದ ಯಜಮಾನನಲ್ಲಿ ಪ್ರಾಣವನ್ನು ಸ್ಥಾಪಿಸಿದಂತಾಗುತ್ತದೆ. ಅನ್ನವೇ ಪ್ರಾಣಾಧಾರವು ಮತ್ತು ಪ್ರಾಣರೂಪವು. ಆದುದರಿಂದ ಈ ಹವಿಸ್ಸನ್ನು ಅರ್ಪಿಸುವುದರಿಂದ ಪ್ರಾಣವನ್ನು ಸ್ಥಾಪಿಸುತ್ತಾನೆ.

**ಅಥಾಗ್ನಯೇ ಪಾವಕಾಯ ನಿರ್ವಪತಿ । ಅನ್ನಂ ವೈ ಪಾವಕಮನ್ನಮೇವಾಸ್ಮಿನ್ನೇತದ್ದಧಾತಿ ತದ್ವೇತೆಯ್ಯೈವಾಸ್ಮಿಂಸ್ತದ್ದಧಾತ್ಯೇಷಾಹ್ಯೇವ ಪ್ರತ್ಯಕ್ಷಮನ್ನಮಾಹುತಿಃ ॥**

(ಶ. ಬ್ರಾ. ೨-೨-೧-೭)

ಅನಂತರ ಶುದ್ಧಿಕಾರಕನಾದ ಅಗ್ನಿಪಾವಕನನ್ನುದ್ದೇಶಿಸಿ ಹವಿಸ್ಸನ್ನರ್ಪಿಸುತ್ತಾನೆ. ಅನ್ನವೇ ಶುದ್ಧಿಕಾರಕವು. ಈ ಹವಿಸ್ಸನ್ನರ್ಪಿಸುವುದರಿಂದ ಯಜಮಾನನಲ್ಲಿ ಅನ್ನವನ್ನು ಸ್ಥಾಪಿಸಿದಂತಾಯಿತು. ಶುದ್ಧಿಕಾರಕವಾದ ಈ ಅನ್ನವನ್ನು ಈ ಹವಿರರ್ಪಣದ ಮೂಲಕ ಸ್ಥಾಪಿಸುತ್ತಾನೆ.

**ಅಥಾಗ್ನಯೇ ಶುಚಯೇ ನಿರ್ವಪತಿ । ವೀರ್ಯಂ ವೈ ಶುಚಿ ಯದ್ವಾ ಅಸ್ಯೈತದುಜ್ಜ್ವಲತ್ಯೇತದಸ್ಯ ವೀರ್ಯಗ್ಂ ಶುಚಿ ವೀರ್ಯಮೇವಾಸ್ಮಿನ್ನೇತದ್ದಧಾತಿ . . . . . . ಅಥಾಸ್ಯೇತದ್ವೀರ್ಯಗ್ಂ ಶುಚ್ಯುಜ್ಜ್ವಲತಿ ॥**

(ಶ. ಬ್ರಾ. ೨-೨-೧-೮)

ಅನಂತರ **ಅಗ್ನಿಶುಚಿಗೆ** ಹವಿಸ್ಸನ್ನರ್ಪಿಸುತ್ತಾನೆ. ಪ್ರಕಾಶಮಾನನಾದ ಅಗ್ನಿಶುಚಿಯೇ ವೀರ್ಯರೂಪನಾದುದರಿಂದ ಈ ಹವಿಸ್ಸನ್ನು ಅರ್ಪಿಸುವುದರ ಫಲವಾಗಿ ಯಜಮಾನನಲ್ಲಿ ವೀರ್ಯವನ್ನು ಸ್ಥಾಪಿಸಿದಂತೆ ಆಗುತ್ತದೆ.

ಇತ್ಯಾದಿ ವಿಧಿಗಳು ಅಗ್ನಿಯ ಪವಮಾನತ್ವ, ಪಾವಕತ್ವ ಮತ್ತು ಶುಚಿತ್ವ ಎಂಬ ಮೂರು ರೂಪಗಳನ್ನೂ, ಈ ರೂಪಗಳನ್ನು ಆರಾಧಿಸುವುದರಿಂದ ಯಜಮಾನನಿಗೆ ಲಭಿಸತಕ್ಕ ಫಲಗಳನ್ನೂ ತಿಳಿಸುತ್ತವೆ.

**ಅಗ್ನಿರ್ಹ ಯತ್ರ ದೇವೇಭ್ಯೋ ಮನುಷ್ಯಾನಭ್ಯುಪಾವವರ್ತ ತದ್ಧೇಕ್ಷಾಂಚಕ್ರೇ ಮ್ಯೈಷ ಸರ್ವೇ ಏವಾತ್ಮನಾ ಮನುಷ್ಯಾನಭ್ಯುಪಾವೃತಮಿತಿ ।**

(ಶ. ಬ್ರಾ. ೨-೨-೧-೧೩)

ಅಗ್ನಿಯು ದೇವತೆಗಳ ಸಮೂಹದಿಂದ ಮಾನವರಲ್ಲಿಗೆ ಬಂದು ಸೇರುವಾಗ “ ನಾನು ನನ್ನ ಪೂರ್ಣವಾದ ರೂಪದೊಂದಿಗೆ ಹೋಗಲಾಗುವುದಿಲ್ಲ ” ಎಂದು ಯೋಚಿಸಿದನು.

**ಸ ಏತಾಸ್ತ್ರಿಸ್ರಸ್ತನೂರೇಷು ಲೋಕೇಷು ವಿನ್ಯಧತ್ತ । ಯದಸ್ಯ ಪವಮಾನಗ್ಂ ರೂಪ-ಮಾಸೀತ್ತದಸ್ಯಾಂ ಪೃಥಿವ್ಯಾಂ ನ್ಯಧತ್ತಾಥ ಯತ್ಪಾವಕಂ ತದಂತರಿಕ್ಷೇಽಥ ಯಚ್ಛುಚಿ ತದ್ದಿವಿ ತದ್ವಾ ಋಷಯಃ ಪ್ರತಿಬುಬುಧಿರೇ ಯ ಉ ತರ್ಹ್ಯೃಷಯ ಆಸುರಸರ್ವೇಣ ವೈ ನ ಆತ್ಮ-ನಾಗ್ನಿರಭ್ಯುಪಾವೃತದಿತಿ ತೆಸ್ಮಾ ಏತಾನಿ ಹವೀಗ್ಂಷಿ ನಿರವಪನ್ ॥**

(ಶ. ಬ್ರಾ. ೨-೨-೧-೧೪)

ಆಗ ಅಗ್ನಿಯು ಮೂರು ಲೋಕಗಳಲ್ಲೂ ತನ್ನ ಮೂರು ರೂಪಗಳನ್ನು ಸ್ಥಾಪಿಸಿದನು. **ಪವಮಾನ**ರೂಪ ವನ್ನು ಪೃಥ್ವಿಯಲ್ಲಿಯೂ, ಶುದ್ಧಿಕಾರಕವಾದ **ಪಾವಕ**ರೂಪವನ್ನು ಅಂತರಿಕ್ಷದಲ್ಲಿಯೂ, ಪ್ರಕಾಶಮಾನವಾದ **ಶುಚಿ** ರೂಪವನ್ನು ದ್ಯುಲೋಕದಲ್ಲಿಯೂ ಸ್ಥಾಪಿಸಿದನು. ಆಗ ಆ ಕಾಲದಲ್ಲಿದ್ದ ಋಷಿಗಳು ಅಗ್ನಿಯ ಈ ವಿಭಾಗವನ್ನರಿತು, " ಅಗ್ನಿಯು ನಮ್ಮಲ್ಲಿಗೆ ಪೂರ್ಣರೂಪದಿಂದ ಬಂದಿಲ್ಲ " ಎಂದು ತಿಳಿದು ಈ ಪೂರ್ಣಾಹುತಿಯನ್ನು ಅರ್ಪಿಸುವ ಅವಶ್ಯ ಕತೆಯನ್ನು ಅರಿತರು.

**ಸ ಯದಗ್ನಯೇ ಪವಮಾನಾಯ ನಿರ್ವಪತಿ । ಯದೇವಾಸ್ಯಾಸ್ಯಾಂ ಪೃಥಿವ್ಯಾಗ್ಂ ರೂಪಂ ತದೇವಾಸ್ಯೈತೇನಾಪ್ನೋತ್ಯಥ ಯದಗ್ನಯೇ ಪಾವಕಾಯ ನಿರ್ವಪತಿ ಯದೇವಾಸ್ಯಾಂತರಿಕ್ಷೇ ರೂಪಂ ತದೇವಾಸ್ಯೈತೇನಾಪ್ನೋತ್ಯಥ ಯದಗ್ನಯೇ ಶುಚಯೇ ನಿರ್ವಪತಿ ಯದೇವಾಸ್ಯ ದಿವಿ ರೂಪಂ ತದೇವಾಸ್ಯೈತೇನಾಪ್ನೋತ್ಯೇವಮು ಕೃತ್ಸ್ನಮೇವಾಗ್ನಿಮುನಪನಿಹಿತಮಾದತ್ತೇ ತಸ್ಮಾದು ನಿರ್ವಪೇದೇವೋತ್ತರಾಣಿ ಹವೀಗ್ಂಷಿ ॥**

(ಶ. ಬ್ರಾ. ೨-೨-೧-೧೫)

ಅದೇ ರೀತಿಯಲ್ಲಿ ಹವಿಸ್ಸನ್ನರ್ಪಿಸಿದಾಗ ಅದರ ಫಲವನ್ನು ಅರಿತರು. ಅಗ್ನಿಪವಮಾನನನ್ನುದ್ದೇಶಿಸಿ ಹವಿಸ್ಸ ನ್ನರ್ಪಿಸಿದರೆ, ಪೃಥ್ವಿಯಲ್ಲಿ ಸ್ಥಾಪಿತವಾಗಿರುವ ಅಗ್ನಿರೂಪವನ್ನು ಹೊಂದುತ್ತಾನೆ. ಅಗ್ನಿಪಾವಕನನ್ನುದ್ದೇಶಿಸಿ ಹವಿಸ್ಸ ನ್ನರ್ಪಿಸಿದರೆ, ಅಂತರಿಕ್ಷದಲ್ಲಿ ಪ್ರಸರಿಸಿರುವ ಅಗ್ನಿಯ ರೂಪವನ್ನು ಯಜಮಾನನು ಹೊಂದುತ್ತಾನೆ. ಅಗ್ನಿಶುಚಿಯನ್ನು ದ್ದೇಶಿಸಿ ಹವಿಸ್ಸನ್ನರ್ಪಿಸಿದರೆ ದ್ಯುಲೋಕಸ್ಥವಾದ ಅಗ್ನಿಯ ರೂಪವನ್ನು ಹೊಂದುತ್ತಾನೆ. ಈ ರೀತಿ ಅಕುಂಠಿತವಾದ ಪೂರ್ಣರೂಪದ ಅಗ್ನಿಯ ರೂಪವನ್ನು ಹೊಂದುತ್ತಾನೆ. ಆದುದರಿಂದ ಈ ಪೂರ್ಣಾಹುತಿಯು ಅರ್ಪಿತವಾಗತಕ್ಕದ್ದು ಎಂದು ಅಗ್ನಿಯ ಮೂರು ರೂಪದ ಮಹತ್ತ್ವವು ಪ್ರಶಂಸಿತವಾಗಿದೆ.

ಹೀಗೆ ಮೂರು ಲೋಕಗಳಲ್ಲೂ ಪ್ರಕಾಶಿಸುವ ಈ ಲೋಕಾಧಿಪತಿಗಳು ಸೂರ್ಯ, ಇಂದ್ರ (ವಾಯು) ಮತ್ತು ಅಗ್ನಿಗಳೆಂದು ಒಂದು ಸಂದರ್ಭದಲ್ಲೂ, ಅಗ್ನಿಪವಮಾನ, ಅಗ್ನಿಪಾವಕ ಮತ್ತು ಅಗ್ನಿಶುಚಿ ಎಂದು ಇನ್ನೊಂದು ಸಂದ ರ್ಭದಲ್ಲೂ, ವೈಶ್ವಾನರ, ಜಾತವೇದಾಃ, ಪಾರ್ಥಿವಾಗ್ನಿಗಳೆಂದು ಬೇರೊಂದು ಪ್ರಕರಣದಲ್ಲೂ ಸಹ ಒಂದೇ ತತ್ತ್ವದ ಮೂರು ಬೇರೆಬೇರೆ ರೂಪಗಳು ವರ್ಣಿತವಾಗಿವೆ.

**ಅಯಂ ಪ್ರಯೋಗಸ್ತ್ರೀತೇಷಾಂ ಜ್ಯೋತಿಷಾಂ ತ್ರಿಷು ವರ್ತತಾಂ ।**
**ಲೋಕೇಷು ಮಂತ್ರವಿದ್ವಿದ್ವಾನ್ ಪ್ರಯೋಗೇ ನಾವಸೀದತಿ ॥**

(ಬೃ. ದೇ. ೧-೯೦)

ಮೂರು ಜ್ಯೋತೀರೂಪಗಳೂ ಮೂರುಲೋಕಗಳನ್ನಾಶ್ರಯಿಸಿರುವ ಕ್ರತುಗಳನ್ನರಿತು ಆಯಾ ರೂಪಗಳಿಗನು ರೂಪವಾಗಿ ಹವಿರಾದಿಗಳನ್ನರ್ಪಿಸಬೇಕು. ಪ್ರಾಜ್ಞನು ಇದನ್ನರಿತು ಇದಕ್ಕೆ ವಿರುದ್ಧವಾಗಿ ಆಚರಿಸುವುದಿಲ್ಲ.

**ನಿಯತೇಽಯಂ ನೃಭಿರ್ಯಸ್ಮಾನ್ನಯತ್ಯಸ್ಮಾದಸೌ ಚ ತಂ ।**
**ತೇನೇಮೌ ಚಕ್ರತುಃ ಕರ್ಮ ಸನಾಮಾನೌ ಪೃಥಕ್ ಪೃಥಕ್ ॥**

(ಬೃ. ದೇ. ೧-೯೧)

ಈ ಪಾರ್ಥಿವಾಗ್ನಿಯು ಮಾನವರಿಂದ ಪ್ರಚೋದಿಸಲ್ಪಡುತ್ತಾನೆ. ದ್ಯುಲೋಕಾಗ್ನಿಯು ಇವನನ್ನು ಪೃಥಿವ್ಯಿಂದ ಕರೆದೊಯ್ಯುತ್ತಾನೆ. ಹೀಗೆ ಇಬ್ಬರಿಗೂ ಒಂದೇ ಹೆಸರಿದ್ದರೂ ಸಹ ಇಬ್ಬರ ಕರ್ಮವೂ ಬೇರೆಬೇರೆಯಾಗಿರುತ್ತದೆ.

**ಯದ್ವಿದ್ಯತೇ ಹಿ ಜಾತಃ ಸಞ್ಜ್ಞೈರ್ಯದ್ವಾತ್ರ ವಿದ್ಯತೇ ।**
**ತೇನೇಮೌ ತುಲ್ಯನಾಮಾನೌ ಉಭೌ ಲೋಕೌ ಸಮಾಪ್ನುತಃ ॥**

(ಬೃ. ದೇ. ೧-೯೨)

ಉತ್ಪನ್ನವಾಗುವಾಗಲೇ ಎಲ್ಲವನ್ನೂ ಅರಿಯುವುದರಿಂದಲೂ, ಉತ್ಪನ್ನವಾದ ಪ್ರಾಣಿಗಳಿಂದ ಅರಿಯಲ್ಪಡುವುದರಿಂದಲೂ ಸಹ, ಈ ಎರಡು ರೂಪಗಳಿಗೂ ಒಂದೇ ನಾಮಧೇಯವಿದ್ದರೂ, ಎರಡೂ ಎರಡು ಲೋಕಗಳನ್ನು ವ್ಯಾಪಿಸಿರುತ್ತವೆ. (ಜಾತವೇದೋರೂಪನಾದ ಅಗ್ನಿಯ ಸ್ವರೂಪವನ್ನು ಋ. ಸಂ. ೮ನೆಯ ಭಾಗದಲ್ಲಿ ವಿವರಿಸಿದೆ.)

**ವಿಸೃಜನ್ನಯಮೇತೇಷಾಂ ಭ್ರಾಜತೇ ವ್ಯೋಮ್ನಿ ಮಧ್ಯಮಃ ।**
**ನಿಪಾತಮಾತ್ರೇ ಕಥ್ಯಂತೇ ತಥಾಗ್ನೇಯಾನಿ ಕಾನಿಚಿತ್ ॥**

(ಬೃ. ದೇ. ೧-೯೩)

ಈ ಮೂರು ರೂಪಗಳಲ್ಲಿ ಮಧ್ಯಮಲೋಕವಾದ ಅಂತರಿಕ್ಷವನ್ನು ವ್ಯಾಪಿಸಿರುವ ಅಗ್ನಿಯು ವೃಷ್ಟಿಯನ್ನು ಸುರಿಸುತ್ತ ವಿದ್ಯುದ್ರೂಪದಿಂದ ಪ್ರಕಾಶಿಸುತ್ತಾನೆ. ಹೀಗೆ ಆಯಾ ಕರ್ಮಗಳಿಗನುಗುಣವಾಗಿ ಆಯಾ ಗುಣಗಳನ್ನು ವರ್ಣಿಸುವ ನಾಮಪ್ರಭೇದಗಳಿರುತ್ತವೆ. ಆದರೆ ಈ ನಾಮಭೇದಗಳು ಆನುಷಂಗಿಕವಾಗಿರುತ್ತವೆ. ಇವು ಅಗ್ನಿಯ ತಾತ್ತ್ವಿಕವಾದ ಭಿನ್ನತೆಯನ್ನು ತೋರಿಸುವುದಿಲ್ಲ. ಉದಾಹರಣೆಗೆ—

**ಅಸೌ ತು ರಶ್ಮಿಭಿಃ ಕೇಶೀ ತೇನೈನಾನಾಹ ಕೇಶಿನಃ ।**
**ಏತೇಷಾಂ ತು ಪೃಥಕ್ತ್ವೇನ ತ್ರಯಾಣಾಂ ಕೇಶಿನಾಮಿಹ ॥**

(ಬೃ. ದೇ. ೧-೯೪)

ಪಾರ್ಥಿವಾಗ್ನಿಯು ಜ್ವಾಲಾರೂಪವಾದ ಕೇಶಗಳನ್ನೂ, ಮಧ್ಯಮಲೋಕದ ಅಗ್ನಿಯು ವಿದ್ಯುದ್ರೂಪದ ಕೇಶಗಳನ್ನೂ, ದ್ಯುಲೋಕದ ಆದಿತ್ಯರೂಪನಾದ ಅಗ್ನಿಯು ರಶ್ಮಿರೂಪದ ಕೇಶಗಳನ್ನೂ ಹೊಂದಿರುವುದರಿಂದ ಋಷಿಗಳ ಇವರನ್ನು **ತ್ರಯಃ ಕೇಶಿನಃ** ಎಂದು ನಿರ್ದೇಶಿಸಿರುತ್ತಾರೆ.

**ಏತೇಷಾಂ ತು ಪೃಥಕ್ತ್ವೇನ ತ್ರಯಾಣಾಂ ಕೇಶಿನಾಮಿಹ ।**
**ಸಂಲಕ್ಷ್ಯಂತೇ ಪ್ರಕ್ರಿಯಾಸು ತ್ರಯಃ ಕೇಶಿನ ಇತ್ಯೃಚಿ ॥**

ಈ ರೀತಿ ಮೂರು ವಿಧವಾದ ಕೇಶಗಳುಳ್ಳ ಈ ಅಗ್ನಿ ಪ್ರಭೇದಗಳ ಸ್ವರೂಪವು ಬೇರೆಬೇರೆಯಾಗಿರುವುದರಿಂದ ಅವರು ಆಯಾ ಪ್ರಕ್ರಿಯಾಭೇದಗಳಿಂದ "**ತ್ರಯಃ ಕೇಶಿನಃ**" ಎಂದು ನಿರ್ದಿಷ್ಟರಾಗಿದ್ದಾರೆ.

**ನ ಚೈವೇಷಾಂ ಪ್ರಸೂತಿರ್ವಾ ವಿಭೂತಿಸ್ಥಾನ ಜನ್ಮ ವಾ ।**
**ನಿರ್ವಕ್ತುಂ ಶಕ್ಯಮೇತೈರ್ಹಿ ಕೃತ್ಸ್ನಂ ವ್ಯಾಪ್ತಮಿದಂ ಜಗತ್ ॥**

(ಬೃ. ದೇ. ೧-೯೬)

ಆದರೆ, ಅವರವರ ವೈಯಕ್ತಿಕವಾದ ಜನ್ಮವು ಹೇಗೆ ? ವೈಯಕ್ತಿಕವಾದ ವಿಭೂತಿವಿಶೇಷಗಳೇನು ? ಪ್ರತ್ಯೇಕ ಸ್ಥಾನಗಳಾವುವು ? ಇತ್ಯಾದಿಗಳನ್ನು ಹೇಳಲು ಶಕ್ಯವಿಲ್ಲ. ಪ್ರತಿಯೊಂದು ಪ್ರಭೇದವೂ ಸಕಲ ಜಗತ್ತನ್ನೂ ವ್ಯಾಪಿಸಿದೆ.

**ವೈಶ್ವಾನರಂ ಶ್ರಿತೋ ಹ್ಯಗ್ನಿರಗ್ನಿಂ ವೈಶ್ವಾನರಃ ಶ್ರಿತಃ ।**
**ಅನಯೋರ್ಜಾತವೇದಾಸ್ತು ತಥೈತೇ ಜಾತವೇದಸೀ ॥**

(ಬೃ. ದೇ. ೧-೯೭)

ಅಗ್ನಿಯು ವೈಶ್ವಾನರನಲ್ಲಿ ಐಕ್ಯನಾಗಿದ್ದಾನೆ. (ವೈಶ್ವಾನರನ ಮಹಿಮೆಯನ್ನು ಋ. ಸಂ. ೮ನೆಯ ಭಾಗದಲ್ಲಿ ವಿವರಿಸಿದೆ) ವೈಶ್ವಾನರನು ಅಗ್ನಿಯಲ್ಲಿ ಐಕ್ಯನಾಗಿದ್ದಾನೆ. ಜಾತವೇದಸ್ಸು ಈ ಎರಡು ರೂಪಗಳಲ್ಲಿಯೂ ಅಡಗಿದ್ದಾನೆ. ಆದುದರಿಂದ ಮೊದಲಿನ ಎರಡು ಪ್ರಭೇದಗಳೂ ಜಾತವೇದಸ್ಸಿನ ಎರಡು ರೂಪಗಳಾಗಿವೆ. ಕೇವಲ ಇವರೇ ಅಲ್ಲ. ಸಕಲ ದೇವತೆಗಳೂ ಈ ಅಗ್ನಿಯಲ್ಲೇ ಅಡಗಿ ಐಕ್ಯರಾಗಿದ್ದಾರೆ.

**ಜಾತವೇದಾಃ ಶ್ರಿತೋ ಹ್ಯಗ್ನಿಮಗ್ನಿಂ ವೈಶ್ವಾನರಃ ಶ್ರಿತಃ ।**
**ದ್ರವಿಣೋದಾಸ್ತಥೇಧ್ಮಶ್ಚ ಶ್ರಿತಶ್ಚಾಗ್ನಿಂ ತನೂನಪಾತ್ ॥**
**ನರಾಶಂಸಃ ಶ್ರಿತಶ್ಚೈನಂ ಏನಮೇವಾಶ್ರಿತಸ್ತ್ವಿಳಃ ।**
**ಬರ್ಹಿರ್ದ್ವಾರಶ್ಚ ದೇವ್ಯೋಽಗ್ನಿಮೇನಮೇವ ತು ಸಂಶ್ರಿತಾಃ ॥**
**ನಕ್ತೋಷಾಸಾ ಚ ದೇವ್ಯೌ ಚ ಹೋತಾರಾವೇತದಾಶ್ರಯೌ ।**
**ದೇವ್ಯಸ್ತಿಸ್ರಃ ಶ್ರಿತಾಶ್ಚೈನಂ ತ್ವಷ್ಟಾ ಚೈವೈತದಾಶ್ರಯಃ ॥**
**ಶ್ರಿತೋ ವನಸ್ಪತಿಶ್ಚೈನಂ ಸ್ವಾಹಾಕೃತಯ ಏವ ಚ ।**

(ಬೃ. ದೇ. ೧.೧೦೬-೧೧೦)

ಜಾತವೇದಸ್ಸು, ವೈಶ್ವಾನರ, ದ್ರವಿಣೋದಾಃ, ಇಧ್ಮ, ತನೂನಪಾತ್, ನರಾಶಂಸ, ಇಳಾ (ಬರ್ಹಿ), ದ್ವಾರ ದೇವತೆಗಳು, ನಕ್ತ ಮತ್ತು ಉಷೋದೇವತೆಗಳು, ಹೋತೃಗಳು, ವನಸ್ಪತಿ ಇತಾದಿ ಸಕಲ ದೇವತೆಗಳೂ ಈ ಅಗ್ನಿಯಲ್ಲಿ ಐಕ್ಯರಾಗಿದ್ದಾರೆ. ಈ ಅಗ್ನಿಯೇ ವಿಶ್ವವ್ಯಾಪಕವಾದ ಮಹತ್ತತ್ತ್ವವು. ಈ ಮಹಾತತ್ತ್ವವೇ "**ಮೂರ್ಧಾ ಭುವೋ ಭವತಿ**" ರಾತ್ರಿಕಾಲದಲ್ಲಿ ಪೃಥ್ವಿಗೆ ಅಧಿಪತಿಯಾಗಿರುತ್ತಾನೆ ಇತ್ಯಾದಿಯಾಗಿ ವರ್ಣಿತವಾಗಿದೆ. (ಈ ವಿವರಣವನ್ನು ಹಿಂದೆ ತಿಳಿಸಿದೆ)

**ಯದೇದೇನಮದಧುರ್ಯಜ್ಞಿಯಾಸೋ ದಿವಿ ದೇವಾಃ ಸೂರ್ಯಮಾದಿತೇಯಂ ।**
**ಯದಾ ಚರಿಷ್ಣೂ ಮಿಥುನಾವಭೂತಾಮಾದಿತ್ಪ್ರಾಪಶ್ಯನ್ಭುವನಾನಿ ವಿಶ್ವಾ ॥**

(ಋ. ಸಂ. ೧೦-೮೮-೧೧)

ಪೂಜ್ಯರಾದ ದೇವತೆಗಳು ಯಾವ ಈ ಅಗ್ನಿಯನ್ನು ಸೂರ್ಯರೂಪದಲ್ಲಿ ದ್ಯುಲೋಕದಲ್ಲಿ ಸ್ಥಾಪಿಸಿದರೋ, ಯಾವಾಗ ಈ ಸೂರ್ಯ ಮತ್ತು ವೈಶ್ವಾನರರು ಲೋಕಕ್ಕೆ ಗೋಚರರಾದರೋ, ಆಗ ದೇವತೆಗಳು ಅಗ್ನ್ಯಂಶಗಳಾದ ಈ ಸೂರ್ಯಾದಿಗಳ ಸಹಾಯದಿಂದ ಜಗತ್ತನ್ನೆಲ್ಲ ವೀಕ್ಷಿಸಲು ಶಕ್ತರಾದರು ಎಂದು ಅಗ್ನಿಯ ಪ್ರಶಂಸೆಯು ಅನೇಕ ವಿಧವಾಗಿರುತ್ತದೆ.

**ಸಂಹಿತಾಪಾಠಃ**

ಸಮುದ್ರೇ ತ್ವಾ ನೃಮಣಾ ಅಪ್ಸ್ವಂ೧ತರ್ನೃಚಕ್ಷಾ ಈಧೇ ದಿವೋ ಅಗ್ನ ಊಧನ್ ।
ತೃತೀಯೇ ತ್ವಾ ರಜಸಿ ತಸ್ಥಿವಾಂಸಮಪಾಮುಪಸ್ಥೇ ಮಹಿಷಾ ಅವರ್ಧನ್ ॥

**ಪದಪಾಠಃ**

ಸಮುದ್ರೇ । ತ್ವಾ । ನೃಽಮನಾಃ । ಅಪ್ಽಸು । ಅಂತಃ । ನೃಽಚಕ್ಷಾಃ । ಈಧೇ । ದಿವಃ । ಅಗ್ನೇ । ಊಧನ್ ॥
ತೃತೀಯೇ । ತ್ವಾ । ರಜಸಿ । ತಸ್ಥಿಽವಾಂಸಂ । ಅಪಾಂ । ಉಪಽಸ್ಥೇ । ಮಹಿಷಾಃ । ಅವರ್ಧನ್ ॥

**ಸಾಯಣಭಾಷ್ಯಂ**

ಹೇ ಅಗ್ನೇ ಸಮುದ್ರೇ ಮಹೋದಧೌ ಜಾಯಮಾನಮಪ್ಸ್ವಂತರಪಾಂ ಮಧ್ಯೇ ವಡವಾತ್ಮನಾ ಸ್ಥಿತಂ ತ್ವಾ ತ್ವಾಂ ನೃಮಣಾ ನೃಷು ಮನುಷ್ಯೇಷ್ವನುಗ್ರಾಹಕತಯಾಸಕ್ತಚಿತ್ತೋ ವರುಣ ಈಧೇ । ಸಂದೀಪಿತವಾನ್ । ಕಿಂಚ ನೃಚಕ್ಷಾ ನೃಣಾಂ ಪ್ರತ್ಯಕ್ಷೇಣ ದ್ರಷ್ಟಾದಿತ್ಯೋ ದಿವೋ ದ್ಯುಲೋಕಸ್ಯ ಸಂಬಂಧಿನ್ಯೂಧನ್ನ್ಯೂಧಸ್ಯೂಧಃಸ್ಥಾನೀಯ ಆದಿತ್ಯಮಂಡಲೇ ಯಜ್ಞೇ ವೇಧೇ । ಸಂದೀಪಿತವಾನ್ । ಕಿಂಚ ತೃತೀಯೇ ತ್ರಯಾಣಾಂ ಪೂರಕೇಽಪಾಂ ವೃಷ್ಟ್ಯುದಕಾನಾಮುಪಸ್ಥೇ ಸ್ಥಾನೇ ರಜಸ್ಯಂತರಿಕ್ಷಲೋಕೇ ತಸ್ಥಿವಾಂಸಂ ವಿದ್ಯುದ್ರೂಪೇಣಾವಸ್ಥಿತಂ ತ್ವಾಂ ಮಹಿಷಾ ಮಹಾಂತೋ ಮಾಧ್ಯಮಿಕಾ ದೇವಗಣಾ ಮರುದಾದಯಃ ಸ್ತೋತಾರೋಽವರ್ಧನ್ । ಸ್ತುತಿಭಿರವರ್ಧಯನ್ । ಯದ್ವಾ । ವಾಜಸನೇಯಕೋಕ್ತಪ್ರಕಾರೇಣಾರ್ಥೋ ದ್ರಷ್ಟವ್ಯಃ । ತದ್ಯಥಾ । ಸಮುದ್ರೇ ತ್ವಾ ನೃಮಣಾ ಅಪ್ಸ್ವಂತರಿತಿ ಪ್ರಜಾಪತಿರ್ವೈ ನೃಮಣಾ ಅಪ್ಸು ತ್ವಾ ಪ್ರಜಾಪತಿರಿತ್ಯೇತನ್ನೃಚಕ್ಷಾ ಈಧೇ ದಿವೋ ಅಗ್ನ ಊಧನ್ನಿತಿ ಪ್ರಜಾಪತಿರ್ವೈ ನೃಚಕ್ಷಾ ಆಪೋ ದಿವ ಊಧಸ್ತೃತೀಯೇ ತ್ವಾ ರಜಸಿ ತಸ್ಥಿವಾಂಸಮಿತಿ ದ್ಯೌರ್ವೈ ತೃತೀಯಂ ರಜೋಽಪಾಮುಪಸ್ಥೇ ಮಹಿಷಾ ಅವರ್ಧನ್ನಿತಿ ಪ್ರಾಣಾ ವೈ ಮಹಿಷಾ ದಿವಿ ತ್ವಾ ಪ್ರಾಣಾ ಅವರ್ಧನ್ನಿತ್ಯೇತತ್ । ಶತ ೬-೭-೪-೫ । ಇತಿ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ | **ಸಮುದ್ರೇ**—ಸಮುದ್ರಮಧ್ಯದಲ್ಲಿ ಉತ್ಪನ್ನನೂ | **ಅಪ್ಸ್ವಂತಃ**—ಉದಕಗಳ ನಡುವೆ ವಡವಾಗ್ನಿರೂಪದಲ್ಲಿರುವವನೂ ಆದ | **ತ್ವಾ**—ನಿನ್ನನ್ನು | **ನೃಮಣಾಃ**—ಮಾನವರಿಗೆ ಹಿತಕಾರಿಯಾದ ವರುಣನು | **ಈಧೇ**—ಪ್ರಜ್ವಲಿಸುವಂತೆ ಮಾಡಿದನು | **ನೃಚಕ್ಷಾಃ**—ಮಾನವರನ್ನು ನೋಡಬಲ್ಲ ಆದಿತ್ಯನು | **ದಿವಃ**—ದ್ಯುಲೋಕದ | **ಊಧನ್**—ಮಧ್ಯಸ್ಥಾನವಾದ ಆದಿತ್ಯಮಂಡಲದಲ್ಲಿ ನಿನ್ನನ್ನು ಪ್ರಜ್ವಲಿಸುವಂತೆ ಮಾಡಿದನು | **ಅಪಾಂ ಉಪಸ್ಥೇ**—ವೃಷ್ಟ್ಯುದಕಗಳಿಗೆ ಸ್ಥಾನವಾದ | **ತೃತೀಯೇ ರಜಸಿ**—ಮೂರನೆಯದಾದ ಅಂತರಿಕ್ಷದಲ್ಲಿ | **ತಸ್ಥಿವಾಂಸಂ**—ವಿದ್ಯುದ್ರೂಪದಲ್ಲಿರತಕ್ಕ | **ತ್ವಾ**—ನಿನ್ನನ್ನು | **ಮಹಿಷಾಃ**—ಮಹಾತ್ಮರಾದ ದೇವತೆಗಳು | **ಅವರ್ಧನ್**—ಪುಷ್ಟಿಗೊಳಿಸಿದರು.

ಭಾವಾರ್ಥ

ಎಲೈ ಅಗ್ನಿಯೆ, ಸಮುದ್ರಮಧ್ಯದಲ್ಲಿ ಉತ್ಪನ್ನನೂ, ಉದಕಗಳ ನಡುವೆ ವಡವಾಗ್ನಿರೂಪದಲ್ಲಿರುವವನೂ ಆದ ನಿನ್ನನ್ನು ಮಾನವರಿಗೆ ಹಿತಕಾರಿಯಾದ ವರುಣನು ಪ್ರಜ್ವಲಿಸುವಂತೆ ಮಾಡಿದನು. ಮಾನವರನ್ನು ನೋಡಬಲ್ಲ ಆದಿತ್ಯನು ದ್ಯುಲೋಕದ ಮಧ್ಯದಲ್ಲಿ ನಿನ್ನನ್ನು ಆದಿತ್ಯಮಂಡಲದಲ್ಲಿ ಪ್ರಕಾಶಿಸುವಂತೆ ಮಾಡಿದನು. ವೃಷ್ಟ್ಯುದಕಕ್ಕೆ ಸ್ಥಾನವಾದ ಅಂತರಿಕ್ಷದಲ್ಲಿ ವಿದ್ಯುದ್ರೂಪದಲ್ಲಿರುವ ನಿನ್ನನ್ನು ಮಹಾತ್ಮರಾದ ದೇವತೆಗಳು ಪುಷ್ಟಿಗೊಳಿಸಿದರು.

English Translation

He who is well disposed towards men illumes the Agni in the ocean (as submarine fire), in the midst of the waters: the beholder of men (illumes) you in the centre of the sky : the mighty (Maruts) magnify you abiding in the third region (the firmament), on the lap of the waters.

ಸಂಹಿತಾಪಾಠಃ

ಅಕ್ರಂದದಗ್ನಿಃ ಸ್ತನಯನ್ನಿವ ದ್ಯೌಃ ಕ್ಷಾಮಾ ರೇರಿಹದ್ವೀರುಧಃ ಸಮಂಜನ್ |
ಸದ್ಯೋ ಜಜ್ಞಾನೋ ವಿ ಹೀಮಿದ್ಧೋ ಅಖ್ಯದಾ ರೋದಸೀ ಭಾನುನಾ ಭಾತ್ಯಂತಃ || ೪ ||

ಪದಪಾಠಃ

ಅಕ್ರಂದತ್ | ಅಗ್ನಿಃ | ಸ್ತನಯನ್ऽಇವ | ದ್ಯೌಃ | ಕ್ಷಾಮ | ರೇರಿಹತ್ | ವೀರುಧಃ | ಸಂऽಅಂಜನ್ ||
ಸದ್ಯಃ | ಜಜ್ಞಾನಃ | ವಿ | ಹಿ | ಈಂ | ಇದ್ಧಃ | ಅಖ್ಯತ್ | ಆ | ರೋದಸೀ ಇತಿ | ಭಾನುನಾ | ಭಾತಿ | ಅಂತರಿತಿ ||

ಸಾಯಣಭಾಷ್ಯಂ

ದಾವರೂಪೋಽಗ್ನಿಃ ಸ್ತೂಯತೇ । ಅಗ್ನಿರ್ದಾವಾಗ್ನಿಃ ಸ್ತನಯನ್ನಿವ ದ್ಯೌರ್ಯಥಾ ದೀಪ್ತೋ ವಿದ್ಯುದ್ರೂಪಃ ಪರ್ಜನ್ಯೋ ಮಹಾಂತಂ ಶಬ್ದಂ ಕರೋತಿ ತದ್ವದಕ್ರಂದತ್ । ಮಹಾಂತಂ ಶಬ್ದಂ ಕರೋತಿ । ಕಿಂ ಕುರ್ವನ್ನಿತ್ಯತ್ರಾಹ । ಕ್ಷಾಮ ಕ್ಷಾಮಾಂ ಪೃಥಿವೀಂ ರೇರಿಹದಾಸ್ವಾದಯನ್ವೀರುಧ ಓಷಧೀಶ್ಚ ಸಮಂಜನ್ ಮ್ರಕ್ಷಯನ್ । ಸಂತಾಪಯನ್ನಿತ್ಯರ್ಥಃ । ಕಿಂಚ ಸದ್ಯಸ್ತತ್ಕ್ಷಣೇ ಸಮಾನೇ ಕಾಲೇ ಜಜ್ಞಾನೋ ಜಾಯಮಾನ ಇದ್ಧೋ ದೀಪ್ತ ಈಮಿದಂ ಸ್ವೇನ ದಗ್ಧಂ ವಸ್ತುಜಾತಂ ವ್ಯಖ್ಯತ್ । ವಿವಿಧಂ ಪಶ್ಯತಿ । ಹೀತಿ ಪಾದಪೂರಣಃ । ಕಿಂಚ ರೋದಸೀ ದ್ಯಾವಾಪೃಥಿವೀ ದ್ಯಾವಾಪೃಥಿವ್ಯಾವಂತರಂತರೇಣ ಭಾನುನಾ ಸ್ವದೀಪ್ತ್ಯಾ ಭಾತಿ । ಪ್ರಕಾಶತೇ । ಯದ್ವಾ ವಾಜಸನೇಯಕೋಕ್ತಾರ್ಥೋ ದ್ರಷ್ಟವ್ಯಃ । ತದ್ಯಥಾ । ಅಕ್ರಂದದಗ್ನಿಃ ಸ್ತನಯನ್ನಿವ ದ್ಯೌರಿತಿ ಕ್ರಂದತೀವ ಹಿ ಪರ್ಜನ್ಯಃ ಸ್ತನಯನ್ಕ್ಷಾಮಾ ರೇರಿಹದ್ವೀರುಧಃ ಸಮಂಜನ್ನಿತಿ ಕ್ಷಾಮಾಂ ವೈ ರೇರಿಹ್ಯಮಾಣೋ ವೀರುಧಃ ಸಮನಕ್ತಿ ಸದ್ಯೋ ಜಜ್ಞಾನೋ ವಿ ಹೀಮಿದ್ಧೋ ಅಖ್ಯದಿತಿ ಸದ್ಯೋ ವಾ ಏಷ ಜಜ್ಞಾನ ಇದಂ ಸರ್ವಂ ವಿಖ್ಯಾಪಯತ್ಯಾ ರೋದಸೀ ಭಾನುನಾ ಭಾತ್ಯಂತರಿತೀಮೇ ವೈ ದ್ಯಾವಾಪೃಥಿವೀ ರೋದಸೀ ತೇ ಏಷ ಭಾನುನಾ ಭಾತ್ಯಂತಃ । ಶತ-೬-೭-೩-೨ । ಇತಿ । ವೈದ್ಯುತಸ್ಯ ಸ್ತುತಿಃ । ಯದ್ವಾ । ಇಯಂ ದಾವಾಗ್ನೇಃ ಸ್ತುತಿರಿತಿ ॥

ಪ್ರತಿಪದಾರ್ಥ

**ದ್ಯೌಃ**—ಪರ್ಜನ್ಯನು । **ಸ್ತನಯನ್ನಿವ**—ಗರ್ಜಿಸುವಂತೆ । **ಅಗ್ನಿಃ**—ಅಗ್ನಿಯು । **ಅಕ್ರಂದತ್**—ಶಬ್ದ ಮಾಡುತ್ತಾನೆ। **ಕ್ಷಾಮ**—ಪೃಥ್ವಿಯನ್ನು । **ರೇರಿಹತ್**—ನೆಕ್ಕುತ್ತ । **ವೀರುಧಃ**—ಓಷಧಿಗಳನ್ನು । **ಸಮಂಜನ್**—ದಹಿಸುತ್ತಾನೆ । **ಸದ್ಯಃ ಜಜ್ಞಾನಃ**—ಉತ್ಪನ್ನನಾದೊಡನೆಯೇ । **ಇದ್ಧಃ**—ಪ್ರದೀಪ್ತನಾಗಿ । **ಈಂ**—ತನ್ನ ದಾಹ ವಿಷಯಗಳನ್ನೆಲ್ಲ । **ವ್ಯಖ್ಯತ್**—ಸೂಕ್ಷ್ಮವಾಗಿ ನೋಡುತ್ತಾನೆ । **ರೋದಸೀ ಅಂತಃ**—ದ್ಯಾವಾಪೃಥಿವಿಗಳ ನಡುವೆಯೆಲ್ಲ । **ಭಾನುನಾ**—ತನ್ನ ಕಾಂತಿಯಿಂದ । **ಆ ಭಾತಿ**—ಪ್ರಕಾಶಿಸುತ್ತಾನೆ.

ಭಾವಾರ್ಥ

ಪರ್ಜನ್ಯನು ದ್ಯುಲೋಕದಲ್ಲಿ ಗರ್ಜಿಸುವಂತೆ ಅಗ್ನಿಯೂ ಶಬ್ದಮಾಡುತ್ತಾನೆ. ಪೃಥ್ವಿಯನ್ನು ನೆಕ್ಕುತ್ತ ಓಷಧಿಗಳನ್ನು ದಹಿಸುತ್ತಾನೆ. ತಾನು ಉತ್ಪನ್ನನಾದೊಡನೆಯೇ ಪ್ರದೀಪ್ತನಾಗಿ ತಾನು ಯಾವ ಯಾವ ವಸ್ತುಗಳನ್ನು ದಹಿಸಬೇಕೋ ಅವೆಲ್ಲವನ್ನೂ ಪೂರ್ಣವಾಗಿ ನೋಡುತ್ತಾನೆ. ದ್ಯಾವಾಪೃಥಿವಿಗಳ ನಡುವೆ ತನ್ನ ಕಾಂತಿಯಿಂದ ಪ್ರಕಾಶಿಸುತ್ತಾನೆ.

## English Translation

Agni cries aloud like the thundering heaven : he licks the earth burning the plants : as soon as generated, he contemplates this (conflagration) : when kindled he blazes with his (own) radiance between heaven and earth.

ವಿಶೇಷವಿಷಯಗಳು

ಹಿಂದಿನ ಮೂರು ಋಕ್ಕುಗಳಲ್ಲಿ ಅಗ್ನಿಯ ಮೂರು ವಿಧವಾದ ಜನ್ಮ, ಈ ಜನ್ಮಗಳಿಗನುರೂಪವಾದ ಅಗ್ನಿಯ ರೂಪಪ್ರಭೇದಗಳು ಮತ್ತು ಆಯಾ ರೂಪಾನುಗುಣವಾದ ಅನುಸಂಧಾನ ಇತ್ಯಾದಿ ವಿಷಯಗಳನ್ನು ತಿಳಿಸಿದೆ. ಪ್ರಕೃತವಾದ ೪ ಮತ್ತು ೫ ನೇ ಋಕ್ಕುಗಳಲ್ಲಿ ಅಗ್ನಿಯ ಇತರ ಮಹದ್ಗುಣಗಳನ್ನು ವರ್ಣಿಸಿದೆ. ಇವುಗಳಲ್ಲಿ

೧) ಅಗ್ನಿಗೂ, ಪರ್ಜನ್ಯನಿಗೂ ಇರುವ ಸಾದೃಶ್ಯ

೨) ದ್ಯಾವಾಪೃಥಿವಿಗಳೆರಡರಲ್ಲೂ ವ್ಯಾಪಿಸುವ ಅಗ್ನಿಯ ಪ್ರಭೆ

೩) ಅಗ್ನಿಯು **ಸೋಮಗೋಪನೆಂದು** ಸಂಬೋಧಿತನಾಗಿರುವುದು ಮತ್ತು

೪) ಅಗ್ನಿಗೂ ಉಷಸ್ಸಿಗೂ ಇರುವ ಸಂಬಂಧ ಇವು ಮುಖ್ಯವಾದುವು.

ಮೊದಲನೆಯದಾಗಿ ಇದೇ ಋಕ್ಕನ್ನು (೪) ವಿವರಿಸುತ್ತ ಶತಪಥ ಬ್ರಾಹ್ಮಣದಲ್ಲಿ ಅಗ್ನಿಗೂ, ಪರ್ಜನ್ಯನಿಗೂ ಇರುವ ಸಂಬಂಧವನ್ನು ಈ ರೀತಿ ತಿಳಿಸಿದೆ.

**ಅಕ್ರಂದದಗ್ನಿಃ ಸ್ತನಯನ್ನಿವ ದ್ಯೌರಿತಿ । ಕ್ರಂದತೀವ ಹಿ ಪರ್ಜನ್ಯಃ ಸ್ತನಯನ್ ಕ್ಷಾಮಾ ರೇರಿಹದ್ವೀರುಧಃ ಸಮಂಜನ್ನಿತಿ ಕ್ಷಾಮಾ ವೈ ರೇರಿಹ್ಯಮಾಣೋ ವೀರುಧಃ ಸಮನಕ್ತಿ ಸದ್ಯೋ ಜಜ್ಞಾನೋ ವಿ ಹೀಮಿದ್ಧೋ ಅಖ್ಯದಿತಿ ಸದ್ಯೋ ವಾ ಏಷ ಜಜ್ಞಾನ ಇದಂ ಸರ್ವಂ ವಿಖ್ಯಾಪಯತ್ಯಾ ರೋದಸೀ ಭಾನುನಾ ಭಾತ್ಯಂತರಿತೀಮೇ ವೈ ದ್ಯಾವಾಪೃಥಿವೀ ರೋದಸೀ ತೇ ಏಷ ಭಾನುನಾ ಭಾತ್ಯಂತಃ ॥**

(ಶ. ಬ್ರಾ. ೬-೭-೩-೨)

ಗುಡುಗುವ ಅಂತರಿಕ್ಷದಂತೆ ಅಗ್ನಿಯು ಗರ್ಜಿಸಿದನು. ಪರ್ಜನ್ಯನು ಗರ್ಜಿಸುವಂತೆಯೇ ಅಗ್ನಿಯೂ ಗರ್ಜನ ಶಬ್ದವನ್ನು ಮಾಡುತ್ತಾನೆ. ಪರ್ಜನ್ಯನು ಪದೇ ಪದೇ ಭೂಮಿಯನ್ನು ಸ್ಪರ್ಶಿಸುತ್ತ ಓಷಧ್ಯಾದಿಗಳಲ್ಲಿ ತನ್ನ ಪ್ರಭಾವವನ್ನು ಸ್ಥಾಪಿಸುತ್ತ ಪ್ರಸರಿಸುವಂತೆ ಅಗ್ನಿಯೂ ಸಹ ಪದೇ ಪದೇ ಭೂಮಿಯನ್ನು ಆಘ್ರಾಣಿಸುವಂತೆ ಪ್ರಸರಿಸುತ್ತಲೂ, ಓಷಧ್ಯಾದಿಗಳಲ್ಲಿ ಪ್ರವೇಶಿಸುತ್ತಲೂ ಪ್ರಸರಿಸುತ್ತಾನೆ. ತನ್ನ ಪ್ರಭೆಯೊಂದಿಗೆ ದ್ಯಾವಾಪೃಥಿವಿಗಳ ನಡುವೆಯಲ್ಲಿ ಪ್ರಕಾಶಿಸುತ್ತಾನೆ ಮತ್ತು ಈ ಎರಡು ಲೋಕಗಳನ್ನೂ ತನ್ನ ಪ್ರಭೆಯಿಂದ ಪ್ರಕಾಶಿಸುವಂತೆ ಮಾಡುತ್ತಾನೆ ಎಂದಿರುವ ಶತಪಥ ಬ್ರಾಹ್ಮಣದ ವಿವರಣವನ್ನು ಸಾಯಣರು ಇತಿ " **ವೈದ್ಯುತಸ್ಯ ಸ್ತುತಿಃ** " ಇದು ವಿದ್ಯುದ್ರೂಪದ ಅಗ್ನಿಯ ಪ್ರಶಂಸೆ ಎಂದು ತಿಳಿಸಿದ್ದಾರೆ. ಇದು ದಾವಾಗ್ನಿಯ ಸ್ತುತಿಯೆಂದು ಸಾಯಣರ ಅಭಿಪ್ರಾಯವಾಗಿದೆ. " **ಆ ರೋದಸೀ ಭಾನುನಾ ಭಾತ್ಯಂತಃ** " ಎಂಬ ವಿವರಣವಿರುವುದರಿಂದ ವೈದ್ಯುತಾಗ್ನಿಯೆಂದು ಹೇಳಿದರೆ ಉಚಿತವಾಗುತ್ತದೆ. ಪರ್ಜನ್ಯನಿಗೂ, ಅಗ್ನಿಗೂ ಕೇವಲ ಸಾದೃಶ್ಯ ಮಾತ್ರವಲ್ಲ, ಪರ್ಜನ್ಯನು ಅಗ್ನಿಯ ಕ್ರಿಯಾವಿಶೇಷವನ್ನು ಹೊಂದಿ ಅವನ ರೂಪಾಂತರವೇ ಆಗಿರುತ್ತಾನೆ ಎಂದೂ ಸಹ ಹೇಳಿರುತ್ತದೆ.

**ತದ್ಯದಸ್ಯ ತನ್ನಾಮಾಕರೋದಾದಿತ್ಯಸ್ತದ್ರೂಪಮಭವದಾದಿತ್ಯೋ ವಾ ಈಶಾನ ಆದಿತ್ಯೋ ಹ್ಯಸ್ಯ ಸರ್ವಸ್ಯೇಷ್ಟೇ ಸೋಽಬ್ರವೀದೇತಾವಾನ್ವಾ ಅಸ್ಮಿ . . . . ॥**

(ಶ. ಬ್ರಾ. ೬-೧-೩-೧೫)

ಅಗ್ನಿಯೇ ಭವಸಂಜ್ಞಕನು. ಪ್ರತಿಯೊಂದೂ ವೃಷ್ಟಿಪತನದಿಂದಲೇ ಸಂಭವಿಸುವುದರಿಂದ ಈ ಭವನೇ ಪರ್ಜನ್ಯ ರೂಪನು ಎಂದು ಪರ್ಜನ್ಯನು ಅಗ್ನಿಯ ವಿಭೂತಿವಿಶೇಷವೆಂದು ತಿಳಿಸಿದೆ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ ಪರ್ಜನ್ಯ ಅಥವಾ ವೈದ್ಯುತಾಗ್ನಿಯ ಕ್ರಿಯೆಯೇ ಎಂದು ಹೇಳಿದರೆ ತಪ್ಪಾಗಲಾರದು.

ಈ ವೈದ್ಯುತಾಗ್ನಿಯನ್ನೇ ಜನೆಯ ಋಕ್ಕಿನಲ್ಲಿ " **ಸೋಮಗೋಪಾಃ** " ಎಂದು ಪ್ರಶಂಸಿಸಿದೆ. **ಸೋಮಸ್ಯ ಪಾಲಕಃ** ಎಂದು ಸಾಯಣರು ಅರ್ಥಮಾಡಿದ್ದಾರೆ. ಸೋಮವೆಂದರೆ ಕೇವಲ ಸೋಮರಸವೆಂದು ಮಾತ್ರ ಅರ್ಥವಲ್ಲ. ವೈದ್ಯುತಾಗ್ನಿಗೆ ಯಾವ ಯಾವ ಲಕ್ಷಣಗಳಿವೆಯೋ ಅವೆಲ್ಲವೂ ಸೋಮನ ಲಕ್ಷಣಗಳೂ ಆಗಿವೆ. ದಿವ್ಯತ್ವವನ್ನು ಹೊಂದಿ ರುವ ಸೋಮನು ಸ್ವಯಂಪ್ರಕಾಶವಾದ ತೇಜೋರೂಪನು. " **ಸ ಸೂರ್ಯಸ್ಯ ರಶ್ಮಿಭಿಃ ಪರಿವ್ಯತ** " (ಋ. ಸಂ. ೯-೮೬-೩೨) ಇತ್ಯಾದಿ ವರ್ಣನೆಗಳು ಸೋಮನ ತೇಜೋಯುತವಾದ ದಿವ್ಯಸ್ವರೂಪವನ್ನು ತಿಳಿಸುತ್ತವೆ. ತೇಜೋ ರೂಪನಾದ ಈ ಸೋಮನೂ ಅಗ್ನಿಯಂತೆಯೇ ಮೂರು ಸ್ಥಾನಗಳುಳ್ಳವನು. ಅವು ಯಾವುವೆಂದರೆ—

**ಧತ್ತೇ ಸೋಮ ದಿವಿ ಜ್ಯೋತಿರ್ಯತ್ಪೃಥಿವ್ಯಾಂ ಯದುರಾವಂತರಿಕ್ಷೇ**

(ಶ. ಬ್ರಾ. ೩-೯-೪-೧೨)

ಎಲೈ ಸೋಮದೇವನೇ, ದಿವ್ಯಲೋಕದಲ್ಲಿ ಯಾವ ನಿನ್ನ ತೇಜಸ್ಸು ಪ್ರಸರಿಸಿದೆಯೋ, ಅಂತರಿಕ್ಷ ಲೋಕದಲ್ಲಿ ಯಾವ ತೇಜಸ್ಸು ಪ್ರಕಾಶಿಸುತ್ತಿರುವುದೋ ಮತ್ತು ಯಾವ ಪಾರ್ಥಿವವಾದ ತೇಜಸ್ಸಿರುವುದೋ ಅವೆಲ್ಲದರೊಂದಿಗೂ ಯಜಮಾನನಿಗೆ ಪುಷ್ಟಿದಾಯಕನಾಗು ಇತ್ಯಾದಿಯಯಾಗಿ " **ತ್ರಿಷಧಸ್ಥ** " ಎಂಬ ವಿಶೇಷಣವು ಅಗ್ನಿಯ ಯಾವ ಸ್ವರೂಪವನ್ನು ತಿಳಿಸುವುದೋ ಅದನ್ನೇ ಈ ಸೋಮನ ವರ್ಣನವೂ ತಿಳಿಸುತ್ತದೆ.

" **ತ್ರೀ ಷಧಸ್ಥಾ ಪುನಾನಃ ಕೃಣುತೇ ಹರಿಃ** " (ಋ. ಸಂ. ೯-೧೦೩-೨) ಎಂಬಲ್ಲಿ ದ್ರೋಣಕಲಶಾದಿ ಮೂರು ಪಾತ್ರೆಗಳೆಂದು ಆ ಸಂದರ್ಭಾನುಸಾರವಾಗಿ ಅರ್ಥವಾದರೂ ಸಹ ಮೇಲೆ ಶತಪಥ ಬ್ರಾಹ್ಮಣದ ವಾಕ್ಯದ ಆಧಾರದ ಮೇಲೆ ಇಲ್ಲಿಯೂ ಮೂರು ಲೋಕಗಳಲ್ಲಿಯೂ ಇರತಕ್ಕವನು ಎಂಬ ಅರ್ಥವನ್ನು ಹೇಳಿದರೂ ತಪ್ಪಾಗ ಲಾರದು.

**ನಾಭಾ ಪೃಥಿವ್ಯಾ ಧರುಣೋ ಮಹೋ ದಿವೋಽಪಾಮೂರ್ಮೌ ಸಿಂಧುಷ್ವಂತರುಕ್ಷಿತಃ ।**
**ಇಂದ್ರಸ್ಯ ವಜ್ರೋ ವೃಷಭಃ ವಿಭೂವಸುಃ ಸೋಮೋ ಹೃದೇ ಪವತೇ ಚಾರು ಮತ್ಸರಃ ॥**

(ಋ. ಸಂ. ೯-೭೨-೭)

ಈ ಸೋಮನು ದ್ಯುಲೋಕದ ಧಾರಕನು. ವಿಸ್ತೃತವಾದ ಪೃಥ್ವಿಗೆ ನಾಭಿಸ್ಥಾನೀಯನು. ಅಂತರಿಕ್ಷದ ಮಧ್ಯವರ್ತಿಯು. ಇಂದ್ರನಿಗೆ ವಜ್ರಾಯುಧರೂಪನು. ಇಂತಹ ಸೋಮನು ಇಂದ್ರನಿಗೆ ತೃಪ್ತಿಕಾರಕನು ಎಂದಿರುತ್ತದೆ.

" **ಪರ್ಜನ್ಯಃ** ಪಿತಾ ಮಹಿಷಸ್ಯ ಪರ್ಣಿನಃ " (ಋ. ಸಂ. ೯-೮೨-೩) ಈ ಸೋಮನಿಗೆ ಪರ್ಜನ್ಯನೇ ಪಿತೃವು. ಇವನನ್ನೇ " **ಪರ್ಜನ್ಯವೃದ್ಧ** " ನೆಂದೂ ಕರೆದಿದೆ. (೯-೧೧೩-೩)

ಯಾವ ಶ್ಯೇನಪಕ್ಷಿಯು ಸೋಮವನ್ನು ಅಂತರಿಕ್ಷದಿಂದ ತಂದಿತು ಎಂಬ ಇತಿಹಾಸರೂಪವಾದ ವರ್ಣನವಿರು ವುದೋ ಅದೇ ಶ್ಯೇನವು ಅಗ್ನಿರೂಪವಾಗಿಯೇ ಇರುತ್ತದೆ.

**ನವಂ ನು ಸ್ತೋಮಮಗ್ನಯೇ ದಿವಃ ಶ್ಯೇನಾಯ ಜೀಜನಂ ।**

(ಋ. ಸಂ. ೭-೧೫-೪)

ದ್ಯುಲೋಕಕ್ಕೆ ಶ್ಯೇನರೂಪನಾದ ಅಗ್ನಿಯು ವಿದ್ಯುದ್ರೂಪದ ಅಗ್ನಿಯ ಪಾಲಕನು ಎಂಬ ಅರ್ಥವು ಪ್ರಕೃತದಲ್ಲಿ ಉಚಿತವಾಗಿರುತ್ತದೆ.

(ಪಾರ್ಥಿವವಾದ ಸೋಮರಸವನ್ನು ರಕ್ಷಿಸಿ ದೇವತೆಗಳ ನಡುವೆ ಹಂಚುವ ಕೆಲಸವಿರುವುದರಿಂದ ಅಗ್ನಿಗೆ ಈ ವಿಶೇಷಣವು ಎಂಬ ಅರ್ಥಕ್ಕೆ ಪ್ರಕೃತದಲ್ಲಿ ಅವಕಾಶವಿಲ್ಲ.)

ಅಗ್ನಿಯು ದ್ಯಾವಾಪೃಥಿವಿಗಳೆರಡರಲ್ಲಿಯೂ ಪ್ರಭಾಯುತನಾಗಿ ಬೆಳಗುವುದನ್ನೂ ಮತ್ತು ಅಗ್ನಿಗೂ, ಉಷಸ್ಸಿಗೂ ಇರುವ ನಿತ್ಯಸಂಬಂಧವನ್ನೂ ಹಿಂದೆ ಅನೇಕಕಡೆಗಳಲ್ಲಿ ತಿಳಿಸಿದೆ.

ಸಂಹಿತಾಪಾಠಃ

ಶ್ರೀಣಾಮುದಾರೋ ಧರುಣೋ ರಯೀಣಾಂ ಮನೀಷಾಣಾಂ ಪ್ರಾರ್ಪಣಃ ಸೋಮಗೋಪಾಃ ।
ವಸುಃ ಸೂನುಃ ಸಹಸೋ ಅಪ್ಸು ರಾಜಾ ವಿ ಭಾತ್ಯಗ್ರ ಉಷಸಾಮಿಧಾನಃ ॥

ಪದಪಾಠಃ

ಶ್ರೀಣಾಂ । ಉತ್ऽಆರಃ । ಧರುಣಃ । ರಯೀಣಾಂ । ಮನೀಷಾಣಾಂ । ಪ್ರऽಅರ್ಪಣಃ । ಸೋಮಗೋಪಾಃ ॥
ವಸುಃ । ಸೂನುಃ । ಸಹಸಃ । ಅಪ್ऽಸು । ರಾಜಾ । ವಿ । ಭಾತಿ । ಅಗ್ರೇ । ಉಷಸಾಂ । ಇಧಾನಃ ॥

ಸಾಯಣಭಾಷ್ಯಂ

ಶ್ರೀಣಾಂ ವಿಭೂತೀನಾಮುದಾರ ಉದ್ಗಮಯಿತಾ ದಾತಾ ರಯೀಣಾಂ ಧನಾನಾಂ ಧರುಣೋ ಧಾರಕೋ ಮನೀಷಾಣಾಮೀಪ್ಸಿತಾರ್ಥಾನಾಂ ಪ್ರಾರ್ಪಣಃ ಪ್ರಾಪಯಿತಾ ಸೋಮಗೋಪಾಃ ಸೋಮಸ್ಯ ಗೋಪಾ ವಸುಃ ಸರ್ವಸ್ಯ ಲೋಕಸ್ಯ ವಾಸಕಃ ಸಹಸೋ ಬಲಸ್ಯ ಸೂನುರಪ್ಸೂದಕೇಷು ಸ್ಥಿತೋ ರಾಜಾ ಸರ್ವಸ್ಯೇಶ್ವರ ಉಷಸಾಮಗ್ರೇ ಪ್ರಭಾತಕಾಲ ಇಧಾನೋಽಗ್ನಿಹೋತ್ರಾರ್ಥಂ ಸಮಿಧ್ಯಮಾನೋಽಗ್ನಿರ್ವಿಭಾತಿ । ಪ್ರಕಾಶತೇ ॥

ಪ್ರತಿಪದಾರ್ಥ

ಶ್ರೀಣಾಂ—ಸಂಪತ್ತುಗಳಿಗೆ । ಉದಾರಃ—ದಾತನೂ । ರಯೀಣಾಂ—ಧನಗಳಿಗೆ । ಧರುಣಃ—ಧಾರಕನೂ । ಮನೀಷಾಣಾಂ—ಇಷ್ಟಾರ್ಥಗಳನ್ನೂ । ಪ್ರಾರ್ಪಣಃ—ಹೊಂದಿಸುವವನೂ । ಸೋಮಗೋಪಾಃ—ಸೋಮರಕ್ಷಕನೂ । ವಸುಃ—ಸಕಲಲೋಕವನ್ನೂ ವ್ಯಾಪಿಸುವವನೂ । ಸಹಸಃ ಸೂನುಃ—ಶಕ್ತಿಪುತ್ರನೂ ऽ ಅಪ್ಸು—ಉದಕಗಳಲ್ಲಿ ಸ್ಥಿತನೂ । ರಾಜಾ—ಪ್ರಭುವೂ । ಉಷಸಾಂ ಅಗ್ರೇ—ಉಷಃಕಾಲದ ಆವಿರ್ಭಾವ ಸಮಯದಲ್ಲಿ । ಇಧಾನಃ—ಪ್ರಜ್ವಲಿತನಾಗುವವನೂ ಆದ ಅಗ್ನಿಯು । ವಿ ಭಾತಿ—ಪ್ರಕಾಶಿಸುತ್ತಾನೆ.

ಭಾವಾರ್ಥ

ಸಂಪತ್ಪ್ರದನೂ, ಧನಗಳಿಗೆ ಧಾರಕನೂ, ಇಷ್ಟಾರ್ಥಪ್ರದನೂ, ಸೋಮರಕ್ಷಕನೂ, ಸಕಲ ಲೋಕವನ್ನೂ ವ್ಯಾಪಿಸುವವನೂ, ಶಕ್ತಿಪುತ್ರನೂ, ಉದಕಗಳಲ್ಲಿ ಸ್ಥಿತನೂ, ಪ್ರಭುವೂ, ಉಷಃಕಾಲದ ಆವಿರ್ಭಾವಸಮಯದಲ್ಲಿ ಪ್ರಜ್ವಲಿತನೂ ಆದ ಅಗ್ನಿಯು ಪ್ರಕಾಶಿಸುತ್ತಾನೆ.

English Translation

Liberal, exciter of splendours, depositary of riches, granter of desires, preserver of the Soma, the inhabiter (of the world), the son of strength, (placed) in the waters, the king (Agni) blazes, kindled at the commencement of dawn.

ಸಂಹಿತಾಪಾಠಃ

ವಿಶ್ವಸ್ಯ ಕೇತುರ್ಭುವನಸ್ಯ ಗರ್ಭ ಆ ರೋದಸೀ ಅಪೃಣಾಜ್ಜಾಯಮಾನಃ ।
ವೀಳುಂ ಚಿದದ್ರಿಮಭಿನತ್ಪರಾಯಞ್ಜನಾ ಯದಗ್ನಿಮಯಜಂತ ಪಂಚ ॥೬॥

ಪದಪಾಠಃ

ವಿಶ್ವಸ್ಯ । ಕೇತುಃ । ಭುವನಸ್ಯ । ಗರ್ಭಃ । ಆ । ರೋದಸೀ ಇತಿ । ಅಪೃಣಾತ್ । ಜಾಯಮಾನಃ ॥
ವೀಳುಂ । ಚಿತ್ । ಅದ್ರಿಂ । ಅಭಿನತ್ । ಪರಾಽಯನ್ । ಜನಾಃ । ಯತ್ । ಅಗ್ನಿಂ । ಅಯಜಂತ । ಪಂಚ ॥

ಸಾಯಣಭಾಷ್ಯಂ

ವಿಶ್ವಸ್ಯ ಸರ್ವಸ್ಯ ಕೇತುಃ ಪ್ರಜ್ಞಾಪಕೋ ಭುವನಸ್ಯೋದಕಸ್ಯ ಗರ್ಭೋ ಗರ್ಭಭೂತೋಽಗ್ನಿ-ರ್ಜಾಯಮಾನಃ ಪ್ರಾದುರ್ಭವನ್ನೇವ ರೋದಸೀ ದ್ಯಾವಾಪೃಥಿವ್ಯಾವಾಪೃಣಾತ್ । ಆಪೂರಯತಿ । ಪರಾ-ಯನ್ ಪರಾಗಚ್ಛನ್ ವೀಳುಂ ಚಿದ್ದೃಢಮಪ್ಯದ್ರಿಂ ಮೇಘಮಭಿನತ್ । ಭಿನತ್ತಿ ಚ । ಕದೇತ್ಯತ್ರಾಹ-ಯದ್ಯದಾ ಪಂಚ ಜನಾ ಮನುಷ್ಯಾ ಅಗ್ನಿಮಯಜಂತ ಯಜಂತೇ ॥

ಪ್ರತಿಪದಾರ್ಥ

**ವಿಶ್ವಸ್ಯ**—ಸಕಲ ಲೋಕಕ್ಕೂ । **ಕೇತುಃ**—ಪ್ರಜ್ಞಾಪಕನೂ । **ಭುವನಸ್ಯ**—ಉದಕಕ್ಕೆ । **ಗರ್ಭಃ**—ಗರ್ಭಭೂತನೂ ಆದ ಅಗ್ನಿಯು । **ಜಾಯಮಾನಃ**—ಉತ್ಪನ್ನನಾಗುವಾಗಲೇ । **ರೋದಸೀ**—ದ್ಯಾವಾಪೃಥಿವಿಗಳನ್ನು । **ಆ ಪೃಣಾತ್**—ವ್ಯಾಪಿಸುತ್ತಾನೆ । **ಪರಾಯನ್**—ಸಂಚಾರಕಾಲದಲ್ಲಿ । **ಅದ್ರಿಂ**—ಮೇಘವನ್ನು । **ವೀಳುಂ ಚಿತ್**—ದೃಢವಾಗಿದ್ದರೂ ಸಹ। **ಅಭಿನತ್**—ಸೀಳುತ್ತಾನೆ । **ಯತ್**—ಆದುದರಿಂದಲೇ । **ಪಂಚಜನಾಃ**—ಐದು ವಿಧವಾದ ನಿಷಾದಾದಿ ಪಂಚ ಜನರೂ । **ಅಗ್ನಿಂ**—ಅಗ್ನಿಯನ್ನು । **ಅಯಜಂತ**—ಆರಾಧಿಸುತ್ತಾನೆ.

ಭಾವಾರ್ಥ

ಸಕಲ ಲೋಕಕ್ಕೂ ಪ್ರಜ್ಞಾಪಕನೂ, ಉದಕಕ್ಕೆ ಗರ್ಭಭೂತನೂ ಆದ ಅಗ್ನಿಯು ಉತ್ಪನ್ನವಾಗುವಾಗಲೇ ದ್ಯಾವಾಪೃಥಿವಿಗಳನ್ನು ವ್ಯಾಪಿಸುತ್ತಾನೆ. ಸಂಚಾರಕಾಲದಲ್ಲಿ ದೃಢವಾದ ಮೇಘವನ್ನೂ ಸೀಳುತ್ತಾನೆ. (ವೃಷ್ಟಿಯನ್ನು ಸುರಿಸುತ್ತಾನೆ) ಆದುದರಿಂದಲೇ ಪಂಚವರ್ಣಾತ್ಮಕವಾದ ಜನರೂ ಈ ಅಗ್ನಿಯನ್ನು ಆರಾಧಿಸುತ್ತಾರೆ.

English Translation

The manifester of all, the germ of the world, Agni, as soon as born fills heaven and earth (with light) : he fractures as he advances the solid cloud, for which the five classes of men praise him.

ಸಂಹಿತಾಪಾಠಃ

ಉಶಿಕ್ಪಾವಕೋ ಅರತಿಃ ಸುಮೇಧಾ ಮರ್ತೇಷ್ವಗ್ನಿರಮೃತೋ ನಿ ಧಾಯಿ ।
ಇಯರ್ತಿ ಧೂಮಮರುಷಂ ಭರಿಭ್ರದುಚ್ಛುಕ್ರೇಣ ಶೋಚಿಷಾ ದ್ಯಾಮಿನಕ್ಷನ್ ॥ ೭ ॥

ಪದಪಾಠಃ

ಉಶಿಕ್ । ಪಾವಕಃ । ಅರತಿಃ । ಸುऽಮೇಧಾಃ । ಮರ್ತೇಷು । ಅಗ್ನಿಃ । ಅಮೃತಃ । ನಿ । ಧಾಯಿ ॥
ಇಯರ್ತಿ । ಧೂಮಂ । ಅರುಷಂ । ಭರಿಭ್ರತ್ । ಉತ್ । ಶುಕ್ರೇಣ । ಶೋಚಿಷಾ । ದ್ಯಾಂ । ಇನಕ್ಷನ್ ॥

ಸಾಯಣಭಾಷ್ಯಂ

ಉಶಿಕ್ಕಾಮಯಮಾನಃ ಪಾವಕಃ ಸರ್ವಸ್ಯ ಲೋಕಸ್ಯ ಶೋಧಕೋऽರತಿರ್ಗಂತಾ ಭೂತಾನಾಮಾರಯಿತಾ ವಾ ಸುಮೇಧಾಃ ಸುಪ್ರಜ್ಞೋऽಮೃತೋ ಮರಣಧರ್ಮರಹಿತೋऽಗ್ನಿರ್ಮರ್ತೇಷು ಮನುಷ್ಯೇಷು ನಿ ಧಾಯಿ । ನಿಹಿತಃ । ಸೋऽಯಮಗ್ನಿರ್ಧೂಮಮಿಯರ್ತಿ । ಪ್ರೇರಯತಿ । ಕಿಂಚಾರುಷಮಾರೋಚಮಾನಂ ರೂಪಂ ಭರಿಭ್ರದ್ಧಾರಯಞ್ಛುಕ್ರೇಣ ಶುಕ್ಲೇನ ಶೋಚಿಷಾ ರೋಚಿಷಾ ದ್ಯಾಂ ದಿವಮಿನಕ್ಷನ್ವ್ಯಾಪ್ನುವನ್ ಗಚ್ಛತೀತಿ ಶೇಷಃ ॥

ಪ್ರತಿಪದಾರ್ಥ

**ಉಶಿಕ್**—ಹವಿಸ್ಸುಗಳನ್ನಪೇಕ್ಷಿಸುವವನೂ । **ಪಾವಕಃ**—ಶುದ್ಧಿಕಾರಕನೂ । **ಅರತಿಃ**—ಶೀಘ್ರಗಾಮಿಯೂ । **ಸುಮೇಧಾಃ**—ಉತ್ತಮವಾದ ಪ್ರಜ್ಞೆಯುಳ್ಳವನೂ । **ಅಮೃತಃ**—ಮರಣರಹಿತನೂ ಆದ। **ಅಗ್ನಿಃ**—ಅಗ್ನಿಯು । **ಮರ್ತೇಷು**—ಮಾನವರಲ್ಲಿ । **ನಿಧಾಯಿ**—ಸ್ಥಾಪಿತನಾಗಿದ್ದಾನೆ । **ಧೂಮಂ**—ಹೊಗೆಯನ್ನು । **ಉತ್** **ಇಯರ್ತಿ**—ಪ್ರೇರಿಸುತ್ತಾನೆ । **ಅರುಷಂ**—ಆಕರ್ಷಕವಾದ ರೂಪವನ್ನು । **ಭರಿಭ್ರತ್**—ಧರಿಸುತ್ತ । **ಶುಕ್ರೇಣ**—ಶುಭ್ರವಾದ । **ಶೋಚಿಷಾ**—ಕಾಂತಿಯಿಂದ ಕೂಡಿ । **ದ್ಯಾಂ**—ದ್ಯುಲೋಕವನ್ನು । **ಇನಕ್ಷನ್**—ವ್ಯಾಪಿಸುತ್ತಾನೆ.

ಭಾವಾರ್ಥ

ಹವಿಸ್ಸುಗಳನ್ನಪೇಕ್ಷಿಸುವವನೂ, ಶುದ್ಧಿಕಾರಕನೂ, ಶೀಘ್ರಗಾಮಿಯೂ, ಉತ್ತಮವಾದ ಪ್ರಜ್ಞೆಯುಳ್ಳವನೂ, ಮರಣಧರ್ಮರಹಿತನೂ ಆದ ಅಗ್ನಿಯು ಮಾನವರಲ್ಲಿ ಸ್ಥಾಪಿತನಾಗಿದ್ದಾನೆ. ಹೊಗೆಯನ್ನು ಹರಡುತ್ತಾನೆ. ಆಕರ್ಷಕವಾದ ರೂಪವನ್ನು ಧರಿಸಿ ಶುಭ್ರವಾದ ಕಾಂತಿಯಿಂದ ಕೂಡಿ ದ್ಯುಲೋಕವನ್ನು ವ್ಯಾಪಿಸುತ್ತಾನೆ.

English Translation

Desiring (oblations), purifying, moving quickly, sagacious, immortal, Agni has been stationed among mortals : he sends forth the smoke, and goes wearing a radiant (form), and pervading the heaven with brilliant lustre.

ಸಂಹಿತಾಪಾಠಃ

ದೃಶಾನೋ ರುಕ್ಮ ಉರ್ವಿಯಾ ವ್ಯದ್ಯೌದ್ದುರ್ಮರ್ಷಮಾಯುಃ ಶ್ರಿಯೇ ರುಚಾನಃ ।
ಅಗ್ನಿರಮೃತೋ ಅಭವದ್ವಯೋಭಿರ್ಯದೇನಂ ದ್ಯೌರ್ಜನಯತ್ಸುರೇತಾಃ ॥೮॥

ಪದಪಾಠಃ

ದೃಶಾನಃ । ರುಕ್ಮಃ । ಉರ್ವಿಯಾ । ವಿ । ಅದ್ಯೌತ್ । ದುಃಽಮರ್ಷಂ । ಆಯುಃ । ಶ್ರಿಯೇ । ರುಚಾನಃ ॥
ಅಗ್ನಿಃ । ಅಮೃತಃ । ಅಭವತ್ । ವಯಃಽಭಿಃ । ಯತ್ । ಏನಂ । ದ್ಯೌಃ । ಜನಯತ್ । ಸುಽರೇತಾಃ ॥

ಸಾಯಣಭಾಷ್ಯಂ

ದೃಶಾನಃ ಪ್ರತ್ಯಕ್ಷೇಣ ದೃಶ್ಯಮಾನೋ ರುಕ್ಮೋ ರೋಚಮಾನೋಽಗ್ನಿರುರ್ವಿಯೋರ್ವತ್ಯಂತಂ ವ್ಯದ್ಯೌತ್ । ವಿದ್ಯೋತತೇ । ಕಿಂಚಾಯುರ್ಗಂತಾ ಸ ಸರ್ವತೋಽಯಮಗ್ನಿಃ ಶ್ರಿಯೇ ವಿಭೂತ್ಯೈ ದುರ್ಮರ್ಷಂ ದುರಭಿಭವಂ ಯಥಾ ಭವತಿ ತಥಾ ರುಚಾನೋ ರೋಚಮಾನೋ ಭವತಿ । ಸೋಽಯಮಗ್ನಿರ್ವಯೋಭಿರನ್ನೈರ್ವನಸ್ಪತಿಭಿರಮೃತೋ ಮರಣರಹಿತೋಽಭವತ್ ಯದ್ಯಸ್ಮಾತ್ಕಾರಣಾದೇನಮಗ್ನಿಂ ಸುರೇತಾಃ ಶೋಭನರೇತಸ್ಕೋ ದ್ಯೌಃ ಪ್ರಾಣ ಆದಿತ್ಯೋ ವಾ ಜನಯತ್ ಜನಯತಿ ॥

ಪ್ರತಿಪದಾರ್ಥ

**ಆಯುಃ**—ಸರ್ವಗಾಮಿಯೂ । **ಶ್ರಿಯೇ**—ಸಂಪತ್ತಿಗಾಗಿ । **ದುರ್ಮರ್ಷಂ**—ಅಪ್ರತಿಹತನಾಗಿ । **ರುಚಾನಃ**—ಶೋಭಿಸುತ್ತಲೂ ಇರುವವನೂ । **ದೃಶಾನಃ**—ಪ್ರತ್ಯಕ್ಷಗೋಚರನೂ । **ರುಕ್ಮಃ**—ಆಕರ್ಷಕವಾದ ರೂಪ

ವುಳ್ಳವನೂ ಆದ ಅಗ್ನಿಯು | **ಉರ್ವಿಯಾ**—ಅತ್ಯಂತ ವಿಸ್ತೃತನಾಗಿ | **ವ್ಯದ್ಯೌತ್**—ಪ್ರಕಾಶಿಸುತ್ತಾನೆ | **ಯತ್**—ಯಾವ ನಿಮಿತ್ತವಾಗಿ | **ಏನಂ**—ಈ ಅಗ್ನಿಯನ್ನು | **ಸುರೇತಾಃ**—ಉತ್ತಮವಾದ ವೀರ್ಯವುಳ್ಳ | **ದ್ಯೌಃ**—ಆದಿತ್ಯನು | **ಜನಯತ್**—ಉತ್ಪನ್ನ ಮಾಡಿದನೋ | ಆದುದರಿಂದಲೇ **ಅಗ್ನಿಃ**—ಅಗ್ನಿಯು | **ವಯೋಭಿಃ**—ವನಸ್ಪತಿರೂಪಗಳಾದ ಅನ್ನಗಳಿಂದ | **ಅಮೃತಃ**—ಮರಣಧರ್ಮರಹಿತನಾಗಿ | **ಅಭವತ್**—ಆದನು.

**ಭಾವಾರ್ಥ**

ಸರ್ವಗಾಮಿಯೂ, ಸಂಪತ್ತಿಗಾಗಿ ಅಪ್ರತಿಹತನಾಗಿ ಶೋಭಿಸುತ್ತಿರುವವನೂ, ಪ್ರತ್ಯಕ್ಷಗೋಚರನೂ, ಆಕರ್ಷಕವಾದ ರೂಪವುಳ್ಳವನೂ ಆದ ಅಗ್ನಿಯು ಅತ್ಯಂತ ವಿಸ್ತೃತನಾಗಿ ಪ್ರಕಾಶಿಸುತ್ತಾನೆ. ಯಾವ ನಿಮಿತ್ತವಾಗಿ ಈ ಅಗ್ನಿಯನ್ನು ಉತ್ತಮವಾದ ವೀರ್ಯವುಳ್ಳ ಆದಿತ್ಯನು ಉತ್ಪನ್ನಮಾಡಿದನೋ ಆದುದರಿಂದಲೇ, ಅಗ್ನಿಯು ವನಸ್ಪತಿ ರೂಪಗಳಾದ ಅನ್ನಗಳಿಂದ ಮರಣಧರ್ಮರಹಿತನಾಗಿ ಆದನು. (ನಿತ್ಯನಾದನು)

## English Translation

Conspicuous, glorious, Agni shines with great splendour, moving everywhere, and blazing unsurpassingly with glory : Agni became immortal through the food (of sacrifice) when the prolific heaven engendered him.

**ವಿಶೇಷವಿಷಯಗಳು**

**ಅಗ್ನಿಃ ಅಮೃತಃ ಅಭವತ್** — ಅಗ್ನಿಯು ಮರಣರಾಹಿತ್ಯವನ್ನು ಹೊಂದಿದನು ಎಂಬುದು ಋಕ್ಕಿನ ಮುಖ್ಯವಾದ ಅಭಿಪ್ರಾಯ. ಅದಕ್ಕೆ ಕಾರಣವನ್ನು ಈ ರೀತಿ ತಿಳಿಸಿದೆ. **ಯತ್ ಸುರೇತಾಃ ದ್ಯೌಃ ಜನಯತ್** ಯಾವ ಕಾರಣಕ್ಕಾಗಿ ಉತ್ತಮವಾದ ರೇತಸ್ಸುಳ್ಳ ಆದಿತ್ಯನು ಅಗ್ನಿಯ ಜನ್ಮಕ್ಕೆ ಕಾರಣನಾದನೋ, ಆದುದರಿಂದಲೇ ಅಗ್ನಿಯ ಮರಣರಾಹಿತ್ಯವೆಂದು ತಿಳಿಸಿದೆ. ಈ ಋಕ್ಕನ್ನು ಶತಪಥಬ್ರಾಹ್ಮಣದಲ್ಲಿ ಈ ರೀತಿ ವಿವರಿಸಿದೆ.

> **ದೃಶಾನೋ ರುಕ್ಮ ಉರ್ವ್ಯಾ ವ್ಯದ್ಯೌದಿತಿ । ದೃಶ್ಯಮಾನೋ ಹ್ಯೇಷ ರುಕ್ಮ ಉರ್ವ್ಯಾ ವಿದ್ಯೋತತೇ ದುರ್ಮರ್ಷಮಾಯುಃ ಶ್ರಿಯೇ ರುಚಾನ ಇತಿ ದುರ್ಮರಂ ವಾ ಏತಸ್ಯಾಯುಃ ಶ್ರಿಯೋ ಏಷ ರೋಚತೇಽಗ್ನಿರಮೃತೋಽಭವದ್ವಯೋಭಿರಿತಿ ಸರ್ವೈರ್ವಾ ಏಷ ವಯೋಭಿ-ರಮೃತೋಽಭವದ್ಯದೇನಂ ದ್ಯೌರಜನಯದಿತಿ ದ್ಯೌರ್ವಾ ಏತಮಜನಯತ್ಸುರೇತಾ ಇತಿ ಸುರೇತಾ ಹ್ಯೇಷಾ ಯಸ್ಯಾ ಏಷ ರೇತಃ ॥**
>
> (ಶ. ಬ್ರಾ. ೬-೭-೨-೨)

ಸುವರ್ಣಮಯವಾದ ಬಿಂಬದಂತೆ ಗೋಚರನಾಗಿರುವ ಈ ಅಗ್ನಿಯು (ಆದಿತ್ಯನು) ತನ್ನ ಪ್ರಭೆಯನ್ನು ವಿಸ್ತರಿಸಿ ಪ್ರಕಾಶಿಸುತ್ತಾನೆ. ಲೋಕದ ಶ್ರೇಯಸ್ಸಿಗಾಗಿ ಪ್ರಕಾಶಿಸುವ ಈ ಬಿಂಬದ ಆಯುಸ್ಸು ಕ್ಷಯಿಸುವುದೇ ಇಲ್ಲ. ಯಾವಾಗ ಅಂತರಿಕ್ಷವು (ಆದಿತ್ಯನು) ಇವನಿಗೆ ಜನ್ಮವನ್ನಿತ್ತಿತೋ ಆಗಲೇ ಇವನು ಅಮರ್ತ್ಯನಾದನು. ಅಧಿಕವಾದ ಶಕ್ತಿಯುತನಾದನು. ಯಾವಾಗ ಅಂತರಿಕ್ಷವು ಅಗ್ನಿರೂಪವಾದ ಗರ್ಭ (ರೇತಸ್ಸು) ವನ್ನು ಧರಿಸಿತೋ ಆಗಲೇ ಅದರ ಗರ್ಭವು ಶೋಭನಾತ್ಮಕವಾದ ಶಕ್ತಿಯುಳ್ಳದ್ದಾಯಿತು. ಇದು ಸತ್ಯಾತ್ಮಕವಾದುದರಿಂದಲೇ ಈ ಶಕ್ತಿಯುಂಟಾಯಿತು. **ಹೇಗೆಂದರೆ—**

**ರುಕ್ಮಂ ಪ್ರತಿಮುಚ್ಯ ಬಿಭರ್ತಿ । ತಸ್ಯಗ್ಂ ಹೈತದ್ಯದ್ರುಕ್ಮಃ ಸತ್ಯಂ ವಾ ಏತಂ ಯಂತು ಮರ್ಹತಿ ಸತ್ಯೇನೈತಂ ದೇವಾ ಅಬಿಭರುಃ ಸತ್ಯೇನೈವೈನ ಮೇ ತದ್ಬಿಭರ್ತಿ ॥**

(ಶ. ಬ್ರಾ. ೬-೭-೧-೧)

ಯಾವ ಹೊಂಬಣ್ಣದ ಸುವರ್ಣಮಯವಾದ ಬಿಂಬವನ್ನು ಯಜಮಾನರುಗಳು ಧರಿಸುವರೋ ಅದೇ ಸತ್ಯದ ಪ್ರತಿಬಿಂಬವು. ಸತ್ಯವೇ ಅಗ್ನಿಯನ್ನು ಧರಿಸುವ ಶಕ್ತಿಯನ್ನು ಹೊಂದಿರುತ್ತದೆ. ಸತ್ಯದಿಂದಲೇ ದೇವತೆಗಳು ಈ ಬಿಂಬವನ್ನು ಧರಿಸಬಲ್ಲವರಾಗಿದ್ದರು. ಈ ಸತ್ಯದ ಸಹಾಯದಿಂದಲೇ ಇವನೂ ಈಗ ಇದನ್ನು ಧರಿಸಬಲ್ಲವನಾಗಿದ್ದಾನೆ.

**ತದ್ಯತ್ತತ್ಸತ್ಯಂ । ಅಸೌ ಸ ಆದಿತ್ಯಃ ಸ ಹಿರಣ್ಮಯೋ ಭವತಿ ಜ್ಯೋತಿರ್ವೈ ಹಿರಣ್ಯಂ ಜ್ಯೋತಿರೇಷೋಽಮೃತಗ್ಂ ಹಿರಣ್ಯಮಮೃತಮೇಷ ಪರಿಮಂಡಲೋ ಭವತಿ ।**

(ಶ. ಬ್ರಾ. ೬-೭-೧-೨)

ಅಂತರಿಕ್ಷದಲ್ಲಿ ಪ್ರಕಾಶಿಸುವ ಆದಿತ್ಯನೇ ಸತ್ಯವು. ಸ್ವರ್ಣವೂ ತೇಜೋಮಯವಾಗಿದೆ. ಆದಿತ್ಯನೂ ತೇಜೋರೂಪನಾಗಿದ್ದಾನೆ. ಸ್ವರ್ಣವೂ ಅಮೃತರೂಪವು. ಆದಿತ್ಯನೂ ಅಮೃತರೂಪನು. ಆದ್ದರಿಂದಲೇ ಆದಿತ್ಯನ ಮಂಡಲವನ್ನು ಪ್ರತಿಬಿಂಬಿಸುವ ಈ ಸುವರ್ಣಬಿಂಬವನ್ನು ಧರಿಸುವುದು ಎಂದು ಹೊಂಬಣ್ಣದ ಸುವರ್ಣಮಯವಾದ ರಥವು ಸುವರ್ಣ ರೂಪವೆಂದು ಹೇಳುವ ಈ ತೇಜಸ್ಸನ್ನು ವರ್ಣಿಸಲಾಗಿದೆ.

ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವುದೂ ಸಹ ಈ ಹೊಂಬಣ್ಣದ ರೂಪವುಳ್ಳ ಅಗ್ನಿಯ ಆಕರ್ಷಕವಾದ ತೇಜಸ್ಸೇ ಆಗಿರುತ್ತದೆ. ಆದಿತ್ಯರೂಪನಾದ ಈ ಅಗ್ನಿಯು ಅಥವಾ ಆದಿತ್ಯಪ್ರಭಾವದಿಂದ ಕೂಡಿದ ಈ ಅಗ್ನಿಯು ಲೋಕದ ಶ್ರೇಯಸ್ಸಿಗಾಗಿ ಬೆಳಗುತ್ತಿದ್ದಾನೆ. ಇವನ ಪ್ರಭೆಯು ನಿತ್ಯವಾದುದು.

ಸಂಹಿತಾಪಾಠಃ

**ಯಸ್ತೇ ಅದ್ಯ ಕೃಣವದ್ಭದ್ರಶೋಚೇಽಪೂಪಂ ದೇವ ಘೃತವಂತಮಗ್ನೇ ।**

**ಪ್ರ ತಂ ನಯ ಪ್ರತರಂ ವಸ್ಯೋ ಅಚ್ಛಾಭಿ ಸುಮ್ನಂ ದೇವಭಕ್ತಂ ಯವಿಷ್ಠ ॥**

ಪದಪಾಠಃ

**ಯಃ । ತೇ । ಅದ್ಯ । ಕೃಣವತ್ । ಭದ್ರಽಶೋಚೇ । ಅಪೂಪಂ । ದೇವ । ಘೃತಽವಂತಂ । ಅಗ್ನೇ ॥**

**ಪ್ರ । ತಂ । ನಯ । ಪ್ರಽತರಂ । ವಸ್ಯಃ । ಅಚ್ಛ । ಅಭಿ । ಸುಮ್ನಂ । ದೇವಽಭಕ್ತಂ । ಯವಿಷ್ಠ ॥**

ಸಾಯಣಭಾಷ್ಯಂ

**ಹೇ ಭದ್ರಶೋಚೇ ಕಲ್ಯಾಣದೀಪ್ತೇ ಹೇ ದೇವ ದ್ಯೋತಮಾನ ಯವಿಷ್ಠ ಯುವತಮಾಗ್ನೇ ತೇ ತುಭ್ಯಂ ಯೋ ಯಜಮಾನೋಽದ್ಯಾಸ್ಮಿನ್ನಹನಿ ಘೃತವಂತಂ ಘೃತೇನ ಯುಕ್ತಮಪೂಪಂ ಪುರೋಡಾಶಂ**

ಅತ್ಯರ್ಥಂ ಪ್ರಾಪಯ । ತಥಾ ದೇವಭಕ್ತಂ ಸ್ತುತಿಭಿರ್ಹವಿರ್ಭಿಶ್ಚ ದೇವಾನಾಂ ಸಂಭಕ್ತಾರಂ ಸೇವಿತಾರಂ ತಂ ಯಜಮಾನಂ ಸುಮ್ನಂ ಸುಖಮಭಿ ಪ್ರತಿ ಪ್ರ ನಯ ॥

ಪ್ರತಿಪದಾರ್ಥ

ಭದ್ರಶೋಚೇ—ಕಲ್ಯಾಣಾತ್ಮಕವಾದ ಪ್ರಭೆಯುಳ್ಳವನೂ । ದೇವ—ಪ್ರಕಾಶಮಾನನೂ । ಯವಿಷ್ಠ— ಅತ್ಯಂತ ಯುವಕನೂ ಆದ। ಅಗ್ನೇ—ಎಲೈ ಅಗ್ನಿಯೇ । ತೇ—ನಿನ್ನನ್ನುದ್ದೇಶಿಸಿ। ಯಃ—ಯಾವ ಯಜಮಾನನು। ಅದ್ಯ—ಇಂದು । ಘೃತವಂತಂ—ಆಜ್ಯದಿಂದ ಕೂಡಿದ । ಅಪೂಪಂ—ಪುರೋಡಾಶವನ್ನು । ಕೃಣವತ್—ಅರ್ಪಿಸುವನೋ । ಪ್ರತರಂ—ಅಂತಹ ಶ್ರೇಷ್ಠನಾದ ಯಜಮಾನನನ್ನು । ವಸ್ಯಃ ಅಚ್ಛ—ಉತ್ತಮವಾದ ಸಂಪತ್ತಿಗಭಿಮುಖವಾಗಿ । ಪ್ರ ನಯ—ಕರೆತಂದು ಸೇರಿಸು । ದೇವಭಕ್ತಂ—ದೇವತೆಗಳನ್ನು ಪೂಜಿಸುವ । ತಂ—ಅದೇ ಯಜಮಾನನನ್ನು । ಸುಮ್ನಂ ಅಭಿ—ಸುಖಕ್ಕೆ ಅಭಿಮುಖವಾಗಿ । (ಪ್ರ ನಯ—ಕರೆತಂದು ಸೇರಿಸು.)

ಭಾವಾರ್ಥ

ಕಲ್ಯಾಣಾತ್ಮಕವಾದ ಪ್ರಭೆಯುಳ್ಳವನೂ, ಪ್ರಕಾಶಮಾನನೂ, ಅತ್ಯಂತ ಯುವಕನೂ ಆದ ಎಲೈ ಅಗ್ನಿಯೇ, ನಿನ್ನನ್ನುದ್ದೇಶಿಸಿ ಯಾವ ಯಜಮಾನನು ಇಂದು ಆಜ್ಯದಿಂದ ಕೂಡಿದ ಪುರೋಡಾಶವನ್ನು ಅರ್ಪಿಸುವನೋ ಅಂತಹ ಶ್ರೇಷ್ಠನಾದ ಯಜಮಾನನಿಗೆ ಉತ್ತಮವಾದ ಸಂಪತ್ತನ್ನು ಒದಗಿಸು. ದೇವತೆಗಳನ್ನು ಪೂಜಿಸುವ ಯಜಮಾನನಿಗೆ ಉತ್ತಮವಾದ ಸುಖವನ್ನುಂಟುಮಾಡು.

## English Translation

Auspiciously radiant and divine Agni, youngest (of the gods), grant ample wealth to the eminent (worshipper), who presents to you to-day cakes dressed with butter, and confer happiness upon one devoted to the gods.

ಸಂಹಿತಾಪಾಠಃ

ಆ ತಂ ಭಜ ಸೌಶ್ರವಸೇಷ್ವಗ್ನ ಉಕ್ಥಉಕ್ಥ ಆ ಭಜ ಶಸ್ಯಮಾನೇ ।
ಪ್ರಿಯಃ ಸೂರ್ಯೇ ಪ್ರಿಯೋ ಅಗ್ನಾ ಭವಾತ್ಯುಜ್ಜಾತೇನ ಭಿನದದುಜ್ಜನಿತ್ವೈಃ ॥

ಪದಪಾಠಃ

ಆ । ತಂ । ಭಜ । ಸೌಶ್ರವಸೇಷು । ಅಗ್ನೇ । ಉಕ್ಥೇಽಉಕ್ಥೇ । ಆ । ಭಜ । ಶಸ್ಯಮಾನೇ ॥

ಪ್ರಿಯಃ । ಸೂರ್ಯೇ । ಪ್ರಿಯಃ । ಅಗ್ನಾ । ಭವಾತಿ । ಉತ್ । ಜಾತೇನ । ಭಿನದತ್ । ಉತ್ । ಜನಿಽತ್ವೈಃ ॥



|| ಶ್ರೀಃ ||

|| ಶ್ರೀ ಗಣಾಧಿಪತಯೇ ನಮಃ ||

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ |
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ||
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ |
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ||
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ |
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ||
ಸಪ್ತಮೇಽಷ್ಟಮಮಧ್ಯಾಯಂ ವ್ಯಾಖ್ಯಾಯಾಚಾರ್ಯವಂಶಜಃ |
ಅಷ್ಟಮೇ ಸಾಯಣಾಚಾರ್ಯಃ ಆದಿಮಂ ವ್ಯಾಕರೋತ್ಯಥ ||

## ಸಾಯಣಭಾಷ್ಯ ಸಹಿತಾ

# ಋಗ್ವೇದ ಸಂಹಿತಾ

## (ಕರ್ನಾಟಕ ಭಾಷಾರ್ಥಾನುವಾದ ವಿವರಣೆ ಸಹಿತವಾಗಿ)

## || ಅಷ್ಟಮಾಷ್ಟಕೇ ಪ್ರಥಮೋಽಧ್ಯಾಯಃ ||

## ಎಂಟನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯವು

## ಹತ್ತನೆಯ ಮಂಡಲದಲ್ಲಿ ನಲವತ್ತಾರನೆಯ ಸೂಕ್ತವು

### ಪೀಠಿಕೆ

### ವತ್ಸಪ್ರಿ ಋಷಿಯಿಂದ ನಿರ್ಮಿತವಾದ ಸೂಕ್ತಗಳ ಮಹಿಮೆ

ಭಲಂದನ ಪುತ್ರನಾದ ವತ್ಸಪ್ರಿ ಋಷಿಯಿಂದ ನಿರ್ಮಿತವಾದ ೧೦-೪೫ ಮತ್ತು ೪೬ ನೇ ಸೂಕ್ತಗಳು **ಅತ್ಯಂತ** ಪ್ರಸಿದ್ಧವಾಗಿವೆ. ಸರ್ವಲೋಕಧಾರಕನೂ ಮತ್ತು ಪಾಲಕನೂ ಆದ ಅಗ್ನಿಯ ಪ್ರಶಂಸೆಯು ಅತ್ಯಂತ ಶ್ರೇಷ್ಠವಾದ ಕಾವ್ಯರೂಪದಲ್ಲಿರುತ್ತದೆ. ಅದೇ ಅಲ್ಲದೆ, ಕರ್ಮಾಚರಣೆಯ ದೃಷ್ಟಿಯಿಂದಲೂ ಇದರ ಮಹಿಮೆಯು ಅತ್ಯಧಿಕವಾದುದು. ಆಧ್ಯಾತ್ಮಿಕವಾದ ಹಿನ್ನೆಲೆಯಿಂದ ಯುಕ್ತವಾಗಿ ಆಧಿದೈವಿಕವಾದ ಮಹಿಮೆಯನ್ನು ಹೊಂದಿರುವ **ಈ** ಸೂಕ್ತಗಳ ಪ್ರಭಾವಗಳನ್ನು ಶಥಪಥಬ್ರಾಹ್ಮಣದಲ್ಲಿ ಅಧಿಕವಾಗಿ ಪ್ರಶಂಸಿಸಿದೆ. ಈ ಸೂಕ್ತಗಳಲ್ಲಿ ಮೊದಲನೆಯ ಸೂಕ್ತದ ಮೊದಲನೆಯ ಮೂರು ಋಕ್ಕುಗಳಿಗೆ ವಿವರಣೆಯನ್ನು ಹೇಳಿದೆ. ಅವುಗಳಲ್ಲಿ ಎರಡು ಸಂದರ್ಭವನ್ನು ಮೇಲೆ-**ವಿದ್ಮಾ ತೇ ಅಗ್ನೇ** ಎಂಬ ಮಂತ್ರದ ವಿಶೇಷವಿಷಯಗಳಲ್ಲಿ ಉದಾಹರಿಸಿದೆ. ವಾತ್ಸಪ್ರ ಕರ್ಮದ ಮಹತ್ತ್ವವನ್ನು ಪ್ರಕೃತದಲ್ಲಿ ವಿವರಿಸಲಾಗುತ್ತದೆ. ಈ ಮಹಿಮೆಯು ಶತಪಥಬ್ರಾಹ್ಮದಲ್ಲಿ ಈ ರೀತಿ ಪ್ರಶಂಸಿಸಲ್ಪಟ್ಟಿದೆ.

**ಅಥ ವಾತ್ಸಪ್ರೇಣೋಪತಿಷ್ಠತೇ | ಏತದ್ವೈ ಪ್ರಜಾಪತಿರ್ವಿಷ್ಣುಕ್ರಮೈಃ ಪ್ರಜಾಃ ಸೃಷ್ಟ್ವಾ ತಾಭ್ಯೋ ವಾತ್ಸಪ್ರೇಣಾಯುಷ್ಯಮಕರೋತ್ತಥೈವೈತದ್ಯಜಮಾನೋ ವಿಷ್ಣುಕ್ರಮೈಃ ಪ್ರಜಾಃ**

ತ್ವಯಾ ಸಹ ದ್ರವಿಣಮಿಚ್ಛಮಾನಾ ವ್ರಜಂ ಗೋಮಂತಮುಶಿಜೋ ವಿ ವವ್ರುಃ ॥ ೧೧ ॥

ಪದಪಾಠಃ

ತ್ವಾಂ । ಅಗ್ನೇ । ಯಜಮಾನಾಃ । ಅನು । ದ್ಯೂನ್ । ವಿಶ್ವಾ । ವಸು । ದಧಿರೇ । ವಾರ್ಯಾಣಿ ॥

ತ್ವಯಾ । ಸಹ । ದ್ರವಿಣಂ । ಇಚ್ಛಮಾನಾಃ । ವ್ರಜಂ । ಗೋऽಮಂತಂ । ಉಶಿಜಃ । ವಿ । ವವ್ರುಃ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಾಂ ಪ್ರತಿ ಯಜಮಾನಾ ಅನು ದ್ಯೂನ್ ಪ್ರತ್ಯಹಂ ವಿಶ್ವಾ ವಿಶ್ವಾನಿ ವಾರ್ಯಾಣಿ ವರಣೀಯಾನಿ ವಸು ವಸೂನಿ ಧನಾನಿ ಧಧಿರೇ । ಧಾರಯಂತಿ । ಕಿಂಚ ತ್ವಯಾ ಸಹ ದ್ರವಿಣಮಸುರೈರಪಹೃತಂ ಗೋರೂಪಂ ಧನಮಿಚ್ಛಮಾನಾಃ ಕಾಮಯಮಾನಾ ಉಶಿಜೋ ಮೇಧಾವಿನೋ ದೇವಾ ಗೋಮಂತಂ ಪಶುಮಂತಂ ವ್ರಜಂ ವಿ ವವ್ರುಃ । ವಿವೃತದ್ವಾರಂ ಕೃತವಂತಃ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ತ್ವಾಂ**—ನಿನ್ನನ್ನುದ್ದೇಶಿಸಿ । **ಯಜಮಾನಾಃ**—ಯಜಮಾನರು । **ಅನುದ್ಯೂನ್**—ಪ್ರತಿದಿನವೂ । **ವಾರ್ಯಾ**—ಅತ್ಯಪೇಕ್ಷಿತವಾದ । **ವಿಶ್ವಾ ವಸು**—ಸಕಲ ಧನಗಳನ್ನೂ । **ದಧಿರೇ**—ಧರಿಸಿದ್ದಾರೆ । **ತ್ವಯಾ ಸಹ**—ನಿನ್ನೊಡನೆ । **ದ್ರವಿಣಂ**—ಧನವನ್ನು । **ಇಚ್ಛಮಾನಾಃ**—ಅಪೇಕ್ಷಿಸಿದ । **ಉಶಿಜಃ**—ದೇವತೆಗಳು । **ಗೋಮಂತಂ**—ಪಶುಯುಕ್ತವಾದ । **ವ್ರಜಂ**—ಕೊಟ್ಟಿಗೆಯನ್ನು । **ವಿ ವವ್ರುಃ**—ತೆರೆದಿದ್ದಾರೆ.

ಭಾವಾರ್ಥ

ಎಲೈ ಅಗ್ನಿಯೇ, ನಿನ್ನನ್ನುದ್ದೇಶಿಸಿ ಯಜಮಾನರು ಪ್ರತಿದಿನವೂ ಅಪೇಕ್ಷಿತವಾದ ಸಕಲ ಧನಗಳನ್ನೂ (ಹವಿಸ್ಸನ್ನೂ) ಧರಿಸಿದ್ದಾರೆ. ನಿನ್ನೊಡನೆ ಧನವನ್ನಪೇಕ್ಷಿಸಿದ ದೇವತೆಗಳು ಪಶುಯುಕ್ತವಾದ ಕೊಟ್ಟಿಗೆಯನ್ನು ತೆರೆದಿದ್ದಾರೆ.

## English Translation

To you, Agni, the worshippers offer daily all desirable treasures; (abiding) with you, desirious of wealth, the sages have set open the pasturage frequented by cattle.

ಸಂಹಿತಾಪಾಠಃ

ಅಸ್ತಾವ್ಯಗ್ನಿರ್ನರಾಂ ಸುಶೇವೋ ವೈಶ್ವಾನರ ಋಷಿಭಿಃ ಸೋಮಗೋಪಾಃ ।
ಅದ್ವೇಷೇ ದ್ಯಾವಾಪೃಥಿವೀ ಹುವೇಮ ದೇವಾ ಧತ್ತ ರಯಿಮಸ್ಮೇ ಸುವೀರಂ॥

ಪದಪಾಠಃ

ಅಸ್ತಾವಿ । ಅಗ್ನಿಃ । ನರಾಂ । ಸುऽಶೇವಃ । ವೈಶ್ವಾನರಃ । ಋಷಿऽಭಿಃ । ಸೋಮऽಗೋಪಾಃ ॥
ಅದ್ವೇಷೇ ಇತಿ । ದ್ಯಾವಾಪೃಥಿವೀ ಇತಿ । ಹುವೇಮ । ದೇವಾಃ । ಧತ್ತ । ರಯಿಂ । ಅಸ್ಮೇ ಇತಿ । ಸುऽವೀರಂ ॥

ಸಾಯಣಭಾಷ್ಯಂ

ಅದ್ವೇಷೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಹುವೇಮ । ವಯಂ ಹ್ವಯೇಮ । ಕಿಂಚ ಹೇ ದೇವಾಃ ಯೂಯಂ ಸುವೀರಂ ಶೋಭನಪುತ್ರಾದ್ಯುಪೇತಂ ರಯಿಂ ಧನಮಸ್ಮೇ ಅಸ್ಮಾಸು ಧತ್ತ । ಧಾರಯತ ॥

ಪ್ರತಿಪದಾರ್ಥ

**ನರಾಂ**—ಮಾನವರಿಗೆ । **ಸುಶೇವಃ**—ಉತ್ತಮವಾದ ಸುಖಪ್ರದನೂ । **ವೈಶ್ವಾನರಃ**—ವೈಶ್ವಾನರಸಂಜ್ಞಕನೂ । **ಸೋಮಗೋಪಾಃ**—ಸೋಮವನ್ನು ರಕ್ಷಿಸುವವನೂ ಆದ । **ಅಗ್ನಿಃ**—ಅಗ್ನಿಯು । **ಋಷಿಭಿಃ**—ಋಷಿಗಳಿಂದ । **ಅಸ್ತಾವಿ**—ಪ್ರಶಂಸಿಸಲ್ಪಡುತ್ತಾನೆ । **ಅದ್ವೇಷೇ**—ದ್ವೇಷರಹಿತರಾದ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳನ್ನು । **ಹುವೇಮ**—ಪ್ರಾರ್ಥಿಸಿ ಕರೆಯುತ್ತೇವೆ । **ದೇವಾಃ**—ಎಲೈ ದೇವತೆಗಳೇ । **ಸುವೀರಂ**—ಉತ್ತಮವಾದ ವೀರಪುತ್ರರಿಂದ ಕೂಡಿದ । **ರಯಿಂ**—ಧನವನ್ನು । **ಅಸ್ಮೇ**—ನಮ್ಮಲ್ಲಿ । **ಧತ್ತ**—ಸ್ಥಾಪಿಸಿರಿ.

ಭಾವಾರ್ಥ

ಮಾನವರಿಗೆ ಉತ್ತಮವಾದ ಸುಖಪ್ರದನೂ, ವೈಶ್ವಾನರಸಂಜ್ಞಕನೂ, ಸೋಮರಕ್ಷಕನೂ ಆದ ಅಗ್ನಿಯು ಋಷಿಗಳಿಂದ ಪ್ರಶಂಸಿಸಲ್ಪಡುತ್ತಾನೆ. ದ್ವೇಷರಹಿತರಾದ ದ್ಯಾವಾಪೃಥಿವಿಗಳನ್ನು ನಾವು ಈಗ ಪ್ರಾರ್ಥಿಸಿ ಕರೆಯುತ್ತೇವೆ ಎಲೈ ದೇವತೆಗಳೇ, ಉತ್ತಮವಾದ ವೀರಪುತ್ರರಿಂದ ಕೂಡಿದ ಧನವನ್ನು ನಮ್ಮಲ್ಲಿ ಸ್ಥಾಪಿಸಿರಿ.

English Translation

Agni, you are very dear to men; Vaishwanara, the guardian of the Soma, has been glorified by the Rishis : we invoke the friendly heaven and earth : grant us, gods, riches and male offspring.

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕವೀರಬುಕ್ಕಮಹೀಪಾಲಸಾಮ್ರಾಜ್ಯ-
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಋಕ್ಸಂಹಿತಾಭಾಷ್ಯೇ ಸಪ್ತಮಾಷ್ಟಕೇಽಷ್ಟಮೋಽಧ್ಯಾಯಃ ಸಮಾಪ್ತಃ

॥ ಶ್ರೀಃ ॥

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ಣಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಏಳನೆಯ ಅಷ್ಟಕದಲ್ಲಿ
ಎಂಟನೆಯ ಅಧ್ಯಾಯವು ಸಮಾಪ್ತವಾದುದು.



ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ॥
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ।

॥ ಮಂಗಳಂ ॥





|| ಶ್ರೀಃ ||

|| ಶ್ರೀ ಗಣಾಧಿಪತಯೇ ನಮಃ ||

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ |
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ||
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ |
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ||
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ |
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ||
ಸಪ್ತಮೇಽಷ್ಟಮಮಧ್ಯಾಯಂ ವ್ಯಾಖ್ಯಾಯಾಚಾರ್ಯವಂಶಜಃ |
ಅಷ್ಟಮೇ ಸಾಯಣಾಚಾರ್ಯಃ ಆದಿಮಂ ವ್ಯಾಕರೋತ್ಯಥ ||

## ಸಾಯಣಭಾಷ್ಯ ಸಹಿತಾ

# ಋಗ್ವೇದ ಸಂಹಿತಾ

**(ಕರ್ನಾಟಕ ಭಾಷಾರ್ಥಾನುವಾದ ವಿವರಣೆ ಸಹಿತವಾಗಿ)**

## || ಅಷ್ಟಮಾಷ್ಟಕೇ ಪ್ರಥಮೋಽಧ್ಯಾಯಃ ||

**ಎಂಟನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯವು**

## ಹತ್ತನೆಯ ಮಂಡಲದಲ್ಲಿ ನಲವತ್ತಾರನೆಯ ಸೂಕ್ತವು

### ಪೀಠಿಕೆ

### ವತ್ಸಪ್ರಿ ಋಷಿಯಿಂದ ನಿರ್ಮಿತವಾದ ಸೂಕ್ತಗಳ ಮಹಿಮೆ

ಭಲಂದನ ಪುತ್ರನಾದ ವತ್ಸಪ್ರಿ ಋಷಿಯಿಂದ ನಿರ್ಮಿತವಾದ ೧೦–೪೫ ಮತ್ತು ೪೬ ನೇ ಸೂಕ್ತಗಳು **ಅತ್ಯಂತ** ಪ್ರಸಿದ್ಧವಾಗಿವೆ. ಸರ್ವಲೋಕಧಾರಕನೂ ಮತ್ತು ಪಾಲಕನೂ ಆದ ಅಗ್ನಿಯ ಪ್ರಶಂಸೆಯು ಅತ್ಯಂತ ಶ್ರೇಷ್ಠವಾದ ಕಾವ್ಯರೂಪದಲ್ಲಿರುತ್ತದೆ. ಅದೇ ಅಲ್ಲದೆ, ಕರ್ಮಾಚರಣೆಯ ದೃಷ್ಟಿಯಿಂದಲೂ ಇದರ ಮಹಿಮೆಯು ಅತ್ಯಧಿಕವಾದುದು. ಆಧ್ಯಾತ್ಮಿಕವಾದ ಹಿನ್ನೆಲೆಯಿಂದ ಯುಕ್ತವಾಗಿ ಆಧಿದೈವಿಕವಾದ ಮಹಿಮೆಯನ್ನು ಹೊಂದಿರುವ **ಈ** ಸೂಕ್ತಗಳ ಪ್ರಭಾವಗಳನ್ನು ಶಥಪಥಬ್ರಾಹ್ಮಣದಲ್ಲಿ ಅಧಿಕವಾಗಿ ಪ್ರಶಂಸಿಸಿದೆ. **ಈ** ಸೂಕ್ತಗಳಲ್ಲಿ ಮೊ[illegible]ು ಸೂಕ್ತದ ಮೊದಲನೆಯ ಮೂರು ಋಕ್ಕುಗಳಿಗೆ ವಿವರಣೆಯನ್ನು ಹೇಳಿದೆ. ಅವುಗಳಲ್ಲಿ ಎರಡು ಸಂದರ್ಭವನ್ನು ಮೇಲೆ–**ವಿದ್ಮಾ ತೇ ಅಗ್ನೇ** ಎಂಬ ಮಂತ್ರದ ವಿಶೇಷವಿಷಯಗಳಲ್ಲಿ ಉದಾಹರಿಸಿದೆ. ವಾತ್ಸಪ್ರ ಕರ್ಮದ ಮಹತ್ತ್ವವನ್ನು ಪ್ರಕೃತದಲ್ಲಿ ವಿವರಿಸಲಾಗುತ್ತದೆ. ಈ ಮಹಿಮೆಯು ಶತಪಥಬ್ರಾಹ್ಮದಲ್ಲಿ ಈ ರೀತಿ ಪ್ರಶಂಸಿಸಲ್ಪಟ್ಟಿದೆ.

**ಅಥ ವಾತ್ಸಪ್ರೇಣೋಪತಿಷ್ಠತೇ | ಏತದ್ವೈ ಪ್ರಜಾಪತಿರ್ವಿಷ್ಣುಕ್ರಮೈಃ ಪ್ರಜಾಃ ಸೃಷ್ಟ್ವಾ ತಾಭ್ಯೋ ವಾತ್ಸಪ್ರೇಣಾಯುಷ್ಯಮಕರೋತ್ತಥೈವೈತದ್ಯಜಮಾನೋ ವಿಷ್ಣುಕ್ರಮೈಃ ಪ್ರಜಾಃ**

**ಸೃಷ್ಟ್ವಾ ತಾಭ್ಯೋ ವಾತ್ಸಪ್ರೇಣಾಯುಷ್ಯಂ ಕರೋತಿ ॥**

(ಶ. ಬ್ರಾ. ೬-೭-೪-೧)

ಪ್ರಜಾಪತಿಯು ವಿಷ್ಣುವಿನ ಪಾದವಿಕ್ಷೇಪರೂಪವಾದ ಸಾಧನದಿಂದ ಸಕಲ ಭೂತಗಳನ್ನೂ ಸೃಷ್ಟಿಸಿದನು. ಮತ್ತು ವಾತ್ಸಪ್ರಕ್ರಿಯೆಯಿಂದ ಆ ಪ್ರಜೆಗಳಿಗೆ ಉಪಯುಕ್ತವಾದ ಚೈತನ್ಯವನ್ನು ಉತ್ಪನ್ನಮಾಡಿದನು. ಆದರಂತೆಯೇ ಯಜಮಾನನೂ ಸಹ ವಿಷ್ಣುಕ್ರಮಗಳಿಂದ ಪ್ರಜೆಗಳನ್ನೂ ಮತ್ತು ವಾತ್ಸಪ್ರಕ್ರಿಯೆಗಳಿಂದ ಪ್ರಜೆಗಳಿಗೆ ಆಯುಷ್ಯವನ್ನೂ ಉತ್ಪನ್ನಮಾಡುತ್ತಾನೆ.

**ಸ ಹೈಷ ದಾಕ್ಷಾಯಣಹಸ್ತಃ । ಯದ್ವಾತ್ಸಪ್ರಂ ತಸ್ಮಾದ್ಯಂ ಜಾತಂ ಕಾಮಯೇತ ಸರ್ವಮಾಯುರಿಯಾದಿತಿ ವಾತ್ಸಪ್ರೇಣೈನಮುಭಿಮೃಶೇತ್ತದಸ್ಮೈ ಜಾತಾಯಾಯುಷ್ಯಂ ಕರೋತಿ ತಥೋ ಹ ಸ ಸರ್ವಮಾಯುರೇತ್ಯಥ ಯಂ ಕಾಮಯೇತ ವೀರ್ಯವಾನ್ತ್ಸ್ಯಾದಿತಿ ವಿಕೃತ್ಯೈನಂ ಪುರಸ್ತಾದಭಿಮಂತ್ರಯೇತ ತಥೋ ಹ ಸ ವೀರ್ಯವಾನ್ ಭವತಿ ॥**

(ಶ. ಬ್ರಾ. ೬-೭-೪-೨)

ಈ ವಾತ್ಸಪ್ರಕ್ರಿಯೆಯು ಸುವರ್ಣರೂಪವುಳ್ಳ ಅಗ್ನಿಯ ರೂಪವೇ ಆಗಿರುತ್ತದೆ. ಉತ್ಪನ್ನವಾದ ಯಾವ ಪ್ರಾಣಿಗೇ ಆಗಲಿ, ಪೂರ್ಣಾಯುಷ್ಯವನ್ನು ಯಾರಾದರೂ ಅಪೇಕ್ಷಿಸಿದರೆ ಆಗ ವಾತ್ಸಪ್ರಕ್ರಿಯೆಯಿಂದ ಸ್ಪರ್ಶಿಸಿದರೆ ದೀರ್ಘಾಯುಷ್ಯವು ಲಭಿಸುತ್ತದೆ. ಯಾರು ವೀರ್ಯವಂತನಾಗಬೇಕೆಂದು ಅಪೇಕ್ಷಿಸುವನೋ ಅವನನ್ನು ವಿಕೃತಿಸಂಜ್ಞಕವಾದ ಮಂತ್ರಪಠನದಿಂದ ನಿರ್ದೇಶಿಸಿದರೆ ಆಗ ಅತನು ವೀರ್ಯವಂತನಾಗುತ್ತಾನೆಂದು ಹೇಳಿ ಅಗ್ನಿಮಹಿಮೆಯನ್ನು ಪ್ರಶಂಸಿಸಿದೆ.

**" ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿರಿತಿ . . . . "**

(ಶ. ಬ್ರಾ. ೬-೭-೪-೩)

**" ವಿದ್ಮಾ ತೇ ಅಗ್ನೇ ತ್ರೇಧಾ ತ್ರಯಾಣೀತಿ । ಅಗ್ನಿರ್ವಾಯುರಾದಿತ್ಯ ಏತಾನಿ . . . . "**

(ಶ. ಬ್ರಾ. ೬-೭-೪-೪)

**ಸಮುದ್ರೇ ತ್ವಾ ನೃಮಣಾ ಅಪ್ಸ್ವಂತರಿತಿ ಪ್ರಜಾಪ್ರತಿ ರ್ವೈ ನೃಮಣಾ ।**

(ಶ. ಬ್ರಾ. ೬-೭-೪-೫)

ಎಂದು ಅಗ್ನಿಯ ಮೂರು ರೂಪಗಳನ್ನು ಮೂರು ಲೋಕಗಳಲ್ಲೂ ಅವನ ವ್ಯಾಪಕತ್ವವನ್ನು ವಿವರಿಸಿದೆ. ಈ ಪ್ರಕರಣವನ್ನು ಮೇಲೆ ವಿವರಿಸಿದೆ. ಶತಪಥಬ್ರಾಹ್ಮಣದಲ್ಲಿ ಉದಾಹೃತವಾಗಿ ವಿವೃತವಾಗಿರುವ ಈ ಮೂರು ಋಕ್ಕುಗಳೂ ಅಗ್ನಿಯ ಮಹಿಮೆಯನ್ನು ವರ್ಣಿಸುತ್ತವೆಯೆಂದು ಈ ರೀತಿ ಪ್ರಶಂಸಿಸಿದೆ.

**ತಾ ಏತಾ ಏಕವ್ಯಾಖ್ಯಾನಾಃ । ಏತಮೇವಾಭಿ ತಾ ಆಗ್ನೇಯ್ಯಸ್ತ್ರಿಷ್ಟುಭಸ್ತಾ ಯದಾಗ್ನೇಯ್ಯಸ್ತೇನಾಗ್ನಿರಥ ಯತ್ತ್ರಿಷ್ಟುಭೋ ಯದೇಕಾದಶ ತೇನೇಂದ್ರ ಐಂದ್ರಾಗ್ನೋಽಗ್ನಿರ್ಯಾವಾನಗ್ನಿರ್ಯಾವತ್ಯಸ್ಯ ಮಾತ್ರಾ ತಾವತೈವೈನಮೇತದುಪತಿಷ್ಠತ ಇಂದ್ರಾಗ್ನೀ ವೈ ಸರ್ವೇ ದೇವಾಃ ಸರ್ವದೇವತ್ಯೋಽಗ್ನಿರ್ಯಾವಾನಗ್ನಿರ್ಯಾವತ್ಯಸ್ಯ ಮಾತ್ರಾ ತಾವತೈವೈನಮೇತದುಪತಿಷ್ಠತಿ॥**

(ಶ. ಬ್ರಾ. ೬-೭-೪-೬)

ಋಕ್ಸಂಹಿತೆಯಿಂದ ಉದಾಹೃತವಾಗಿರುವ ಈ ಮೇಲಿನ ಮೂರು ಋಕ್ಕುಗಳೂ ಅಗ್ನಿಯ ಅಸಾಧಾರಣಗುಣಗಳನ್ನು ಒಂದೇ ರೀತಿಯಲ್ಲಿ ವರ್ಣಿಸುತ್ತವೆ. ಅಗ್ನಿಪ್ರಶಂಸಕವಾಗಿ ತ್ರಿಷ್ಟುಪ್ ಛಂದಸ್ಸಿನಿಂದ ನಿರ್ಮಿತವಾಗಿದೆ. ಅವು ಎಷ್ಟುಮಟ್ಟಿಗೆ ಅಗ್ನಿಪ್ರಶಂಸಕವಾಗಿವೆಯೋ ಅಷ್ಟುಮಟ್ಟಿಗೆ ಅಗ್ನಿಸ್ವರೂಪವನ್ನೇ ಹೊಂದಿವೆ. ಹನ್ನೊಂದು ಅಕ್ಷರಗಳಿಂದ ಕೂಡಿದ ತ್ರಿಷ್ಟುಪ್‌ಛಂದಸ್ಸಿನಿಂದ ನಿರ್ಮಿತವಾದುದರಿಂದ ಇವು ಇಂದ್ರರೂಪವನ್ನು ಹೊಂದಿರುತ್ತವೆ. ಅಗ್ನಿಸ್ವರೂಪವು ಇದ್ರಾಗ್ನಿಗಳೆಂಬ ಎರಡು ವಿಧವಾದ ಅಸ್ತಿತ್ವವನ್ನೂ ಹೊಂದಿರುತ್ತವೆ. ಅಗ್ನಿಯ ಮಹತ್ತ್ವವು ಎಷ್ಟುಮಟ್ಟಿಗಿದೆಯೋ ಅಷ್ಟೇಮಟ್ಟಿಗೆ ಪೂಜ್ಯಭಾವವನ್ನು ವ್ಯಕ್ತಪಡಿಸುತ್ತಾನೆ. ಇಂದ್ರಾಗ್ನಿಗಳಲ್ಲಿ ಸಕಲ ದೇವತೆಗಳೂ ಐಕ್ಯರಾಗಿದ್ದಾರೆ. ಅಗ್ನಿಯ ಮಹತ್ತ್ವದಷ್ಟೇ ಅಗ್ನಿಯ ಪೂಜ್ಯತ್ವವೂ ಇರುತ್ತದೆ.

**ಯದ್ವೇವ ವಿಷ್ಣುಕ್ರಮವಾತ್ಸಪ್ರೇ ಭವತಃ । ವಿಷ್ಣುಕ್ರನ್ಯೈರ್ವೈ ಪ್ರಜಾಪತಿರಿಮಂ ಲೋಕಮಸೃಜತ ವಾತ್ಸಪ್ರೇಣಾಗ್ನಿಂ ವಿಷ್ಣುಕ್ರನ್ಯೈರ್ವೈ ಪ್ರಜಾಪತಿರಂತರಿಕ್ಷಮಸೃಜತ ವಾತ್ಸಪ್ರೇಣ ವಾಯುಂ ವಿಷ್ಣುಕ್ರನ್ಯೈರ್ವೈ ಪ್ರಜಾಪತಿರ್ದಿವಮಸೃಜತ ವಾತ್ಸಪ್ರೇಣಾದಿತ್ಯಂ ವಿಷ್ಣುಕ್ರನ್ಯೈರ್ವೈ ಪ್ರಜಾಪತಿರ್ದಿಶೋಽಸೃಜತ ವಾತ್ಸಪ್ರೇಣ ಚಂದ್ರಮಸಂ ವಿಷ್ಣುಕ್ರನ್ಯೈರ್ವೈ ಪ್ರಜಾಪತಿರ್ಭೂತಮಸೃಜತ ವಾತ್ಸಪ್ರೇಣ ಭವಿಷ್ಯದ್ವಿಷ್ಣುಕ್ರನ್ಯೈರ್ವೈ ಪ್ರಜಾಪತಿರ್ವಿತ್ತಮಸೃಜತ ವಾತ್ಸಪ್ರೇಣಾಶಾಂ ವಿಷ್ಣುಕ್ರನ್ಯೈರ್ವೈ ಪ್ರಜಾಪತಿರಹರಸೃಜತ ವಾತ್ಸಪ್ರೇಣ ರಾತ್ರಿಂ ವಿಷ್ಣುಕ್ರನ್ಯೈರ್ವೈ ಪ್ರಜಾಪತಿಃ ಪೂರ್ವಪಕ್ಷಾನಸೃಜತ ವಾತ್ಸಪ್ರೇಣಾಪರಪಕ್ಷಾನ್ವಿಷ್ಣುಕ್ರನ್ಯೈರ್ವೈ ಪ್ರಜಾಪತಿರರ್ಧಮಾಸಾನಸೃಜತ ವಾತ್ಸಪ್ರೇಣ ಮಾಸಾನ್ ವಿಷ್ಣುಕ್ರನ್ಯೈರ್ವೈ ಪ್ರಜಾಪತಿಋರ್ತೂನಸೃಜತ ವಾತ್ಸಪ್ರೇಣ ಸಂವತ್ಸರಂ ತದ್ಯದ್ವಿಷ್ಣುಕ್ರಮವಾತ್ಸಪ್ರೇ ಭವತ ಏತದೇವ ತೇನ ಸರ್ವಗ್‌ಂ ಸೃಜತೇ ॥**

(ಶ. ಬ್ರಾ. ೬-೭-೪-೭)

ವಿಷ್ಣುಕ್ರಮವೂ (ವಿಷ್ಣುವಿನ ಪಾದವಿಕ್ಷೇಪಕ್ರಿಯೆ) ಮತ್ತು ವಾತ್ಸಪ್ರಕ್ರಿಯೆಯೂ ಒಟ್ಟಿಗೆ ನೆರವೇರಿಸಲ್ಪಡಬೇಕಾದ ಆವಶ್ಯಕತೆಯೇನು ಎಂಬ ಪ್ರಶ್ನೆಯು ಈ ಸಂದರ್ಭದಲ್ಲಿ ಸಹಜವಾಗಿರುತ್ತದೆ. ಈ ಎರಡು ಕ್ರಿಯೆಗಳೂ ಒಟ್ಟಿಗೆ ನೆರವೇರಿಸಲ್ಪಡಬೇಕಾದ ಆವಶ್ಯಕತೆಯು ಈ ಎರಡು ಕ್ರಿಯೆಗಳ ಅನ್ಯೋನ್ಯ ಸಂಬಂಧವನ್ನವಲಂಬಿಸಿರುತ್ತದೆ. ವಿಷ್ಣುಕ್ರಮದಿಂದ ಯಾವಯಾವ ಆಧಾರವಸ್ತುಗಳನ್ನು ಪ್ರಜಾಪತಿಯು ನಿರ್ಮಿಸಿದನೋ ವಾತ್ಸಪ್ರದಿಂದ ಆಯಾ ಆಧಾರವಸ್ತುಗಳಲ್ಲಿ ನಿಯತವಾಗಿ ವ್ಯಾಪಿಸಿರುವ ಮತ್ತು ಅದಕ್ಕೆ ಪೂರಕವೂ, ಪೋಷಕವೂ ಆದ ತತ್ತ್ವಗಳನ್ನು ಅದರೊಡನೆ ನಿರ್ಮಿಸಿದನು. ಹೇಗೆಂದರೆ—

| | | | | |
|---|---|---|---|---|
| ಪ್ರಜಾಪತಿಯು | ಪೃಥ್ವಿಯನ್ನೂ | ತತ್ಪೂರಕವಾದ | ಅಗ್ನಿಯನ್ನೂ | ನಿರ್ಮಿಸಿದನು. |
| ,, | ಅಂತರಿಕ್ಷವನ್ನೂ | ,, | ವಾಯುವನ್ನೂ | ,, |
| ,, | ದ್ಯುಲೋಕವನ್ನೂ | ,, | ಆದಿತ್ಯನನ್ನೂ | ,, |
| ,, | ದಿಗ್ದಿಗಂತಗಳನ್ನೂ | ,, | ಚಂದ್ರನನ್ನೂ | ,, |
| ,, | ಭೂತಕಾಲದ ವಸ್ತುಗಳನ್ನೂ | ,, | ಭವಿಷ್ಯತ್ಕಾಲದ ವಸ್ತುಗಳನ್ನೂ | ,, |
| ,, | ಧನಸಂಪತ್ತನ್ನೂ | ,, | ಆಸೆಯನ್ನೂ | ,, |
| ,, | ಅಹಸ್ಸನ್ನೂ | ,, | ರಾತ್ರಿಯನ್ನೂ | ,, |

| | | | | | |
|---|---|---|---|---|---|
| ,, | ಪೂರ್ವಪಕ್ಷಗಳನ್ನೂ | ,, | ಅಪರಪಕ್ಷಗಳನ್ನೂ | ,, |
| ,, | ಅರ್ಧಮಾಸಗಳನ್ನೂ | ,, | ಮಾಸಗಳನ್ನೂ | ,, |
| ,, | ಋತುಗಳನ್ನೂ | ,, | ಸಂವತ್ಸರಗಳನ್ನೂ | ,, |

ಆದುದರಿಂದಲೇ ಈ ಎರಡು ಕ್ರಿಯೆಗಳಿಗೂ ಅನ್ಯೋನ್ಯ ಸಂಬಂಧವಿದ್ದು ಇವೆರಡನ್ನೂ ಒಟ್ಟಿಗೆ ಆಚರಿಸಬೇಕಾದ ವಿಧಿ ಇರುತ್ತದೆ. ಸಾಹಚರ್ಯದಿಂದಲೇ ಸೃಷ್ಟಿಯ ಕಾರ್ಯವೂ ಅನುಸ್ಯೂತವಾಗಿ ಮುಂದುವರಿಯುತ್ತದೆ.

**ಯದ್ವೇವ ವಿಷ್ಣುಕ್ರಮವಾತ್ಸಪ್ರೇ ಭವತಃ । ವಿಷ್ಣುಕ್ರಮೈರ್ವೈ ಪ್ರಜಾಪತಿಃ ಸ್ವರ್ಗಂ ಲೋಕಮಭಿಪ್ರಾಯಾತ್ಸ ಏತದವಸಾನಮಪಶ್ಯದ್ವಾತ್ಸಪ್ರಂ ತೇನಾವಾಸ್ಯದಪ್ರದಾಹಾಯ ಯದ್ಧಿ ಯುಕ್ತಂ ನ ವಿಮುಚ್ಯತೇ ಪ್ರ ತದ್ದಹ್ಯತೇ ಯಥ್ಯೈವೈತದ್ಯಜಮಾನೋ ವಿಷ್ಣುಕ್ರಮೈರೇವ ಸ್ವರ್ಗಂ ಲೋಕಮಭಿಪ್ರೈಯೊತಿ ವಾತ್ಸಪ್ರೇಣಾವಸ್ಯತಿ ॥**

(ಶ. ಬ್ರಾ. ೬-೭-೪-೮)

ವಿಷ್ಣುಕ್ರಮ ಮತ್ತು ವಾತ್ಸಪ್ರಗಳ ಸಾಹಚರ್ಯದ ಆವಶ್ಯಕತೆಯೇನು ಎಂಬ ಪ್ರಶ್ನೆಯು ಪುನಃ ಕೇಳಲ್ಪಟ್ಟರೆ ಅದಕ್ಕೆ ಉತ್ತರವು ಆ ಆವಶ್ಯಕತೆಯನ್ನು ತಿಳಿಸುತ್ತದೆ.

ವಿಷ್ಣುಕ್ರಮದಿಂದ ಪ್ರಜಾಪತಿಯು ಸ್ವರ್ಗವನ್ನು ತಲುಪಿದನು. ಅಲ್ಲಿ ಬಂಧವಿಮೋಚಕವಾದ ವಾತ್ಸಪವನ್ನು ನೋಡಿ ಬಂಧಕ್ಕೆ ಒಳಗಾಗಿದ್ದ ಅಂಶವನ್ನು ಬಿಡಿಸಿದನು. ಹಾಗೆ ಬಂಧಕ್ಕೆ ಒಳಗಾಗಿದ್ದ ಪಶುವನ್ನಾಗಲಿ ಅಥವಾ ಇನ್ನಾವ ಚೇತನವನ್ನಾಗಲಿ ಬಿಡಿಸದಿದ್ದರೆ ಅದರ ದಾಹವಾಗಲಿ ಅಥವಾ ಛೇದವಾಗಲೀ ಖಂಡಿತವಾಗಿ ಆಗುತ್ತದೆ. ಪ್ರಜಾಪತಿಯು ಇದನ್ನು ತಪ್ಪಿಸಿದನು. ಹೀಗೆಯೇ ಯಜಮಾನನೂ ಸಹ ವಿಷ್ಣುಕ್ರಮದ ಸಹಾಯದಿಂದ ಸ್ವರ್ಗಕ್ಕೆ ಹೋಗುತ್ತಾನೆ. ವಾತ್ಸಪ್ರದ ಸಹಾಯದಿಂದ ಬಂಧದಿಂದ ವಿಮುಕ್ತಿಯನ್ನು ಹೊಂದುತ್ತಾನೆ.

**ಸ ವೈ ವಿಷ್ಣುಕ್ರಮಾನ್ ಕ್ರಾನ್ತ್ವಾ । ಅಥ ತದಾನೀಮೇವ ವಾತ್ಸಪ್ರೇಣೋಪತಿಷ್ಠತೇ ಯಥಾ ಪ್ರೆಯಾಯಾಥ ತದಾನೀಮೇವ ವಿಮುಂಚೇತ್ತಾದೃಕ್ತದ್ದೇವಾನಾಂ ವೈ ವಿಧಾಮನು ಮನುಷ್ಯಾಸ್ತಸ್ಮಾದು ಹೇದಮುತ ಮಾನುಷೋ ಗ್ರಾಮಃ ಪ್ರೆಯಾಯಾಥ ತದಾನೀಮೇವಾ- ವಸ್ಯತಿ ।**

(ಶ, ಬ್ರಾ. ೬-೭-೪-೯)

ವಿಷ್ಣುಕ್ರಮಗಳನ್ನು ಅನುಸರಿಸಿ ಅದನ್ನು ದಾಟಿದನಂತರ ಯಜಮಾನನು ಅಗ್ನಿಯ ಸಮಿಾಪದಲ್ಲಿ ನಿಂತ ವಾತ್ಸಪ್ರಕ್ರಿಯೆಯಿಂದ ಅಗ್ನಿಯನ್ನು ಪೂಜಿಸುತ್ತಾನೆ. ಸಂಚಾರದ ಅವಸಾನದಲ್ಲಿ ಒಂದೆಡೆ ನಿಂತು ಶ್ರಮವನ್ನು ಪರಿಹರಿಸುವಂತೆ ಯಜಮಾನನೂ ಈ ಸನ್ನಿವೇಶದಲ್ಲಿ ವಿಶ್ರಾಂತಿಯನ್ನು ಹೊಂದುತ್ತಾನೆ. ದೇವತೆಗಳ ಮಾರ್ಗವನ್ನೇ ಸಾಧಾರಣವಾಗಿ ಮಾನವರೂ ಅನುಸರಿಸುತ್ತಾರೆ.

**ತದ್ವಾ ಅಹೋರಾತ್ರೇ ಏವ ವಿಷ್ಣುಕ್ರಮಾ ಭವಂತಿ । ಅಹೋರಾತ್ರೇ ವಾತ್ಸಪ್ರಮಹೋ- ರಾತ್ರೇ ಏವ ತದ್ಯಾತ್ಯಹೋರಾತ್ರೇ ಕ್ಷೇಮ್ಯೋ ಭವತಿ ತಸ್ಮಾದು ಹೇದಮುತ ಮಾನುಷೋ ಗ್ರಾಮೋಽಹೋರಾತ್ರೇ ಯಾತ್ವಾಹೋರಾತ್ರೇ ಕ್ಷೇಮ್ಯೋ ಭವತಿ ।**

(ಶ. ಬ್ರಾ. ೬-೭-೪-೧೦)

ವಿಷ್ಣುಕ್ರಮಗಳೇ ಅಹೋರಾತ್ರರೂಪಗಳಾಗಿವೆ. ವತ್ಸಪ್ರವೂ ಅಹೋರಾತ್ರರೂಪವಾಗಿಯೇ ಇದೆ. ವಿಷ್ಣು-ಕ್ರಮವು ಸಂಚಾರಾತ್ಮಕವು. ಮತ್ತು ವತ್ಸಪ್ರವು ವಿಶ್ರಾಂತಿದಾಯಕವು. ಆದುದರಿಂದ ವಿಷ್ಣುಕ್ರಮವನ್ನನುಸರಿಸಿದ ಯಜಮಾನನು ಒಂದು ಅಹೋರಾತ್ರದಲ್ಲಿ ಸಂಚರಿಸಿ ಇನ್ನೊಂದು ಅಹೋರಾತ್ರದಲ್ಲಿ ವಿಶ್ರಾಂತಿಯನ್ನು ಪಡೆಯುತ್ತಾನೆ. ವ್ಯವಹಾರಪ್ರಪಂಚದಲ್ಲಿಯೂ ಸಹ ಒಂದುದಿನವೆಲ್ಲ (ರಾತ್ರಿಯೂ ಸೇರಿ) ಸಂಚರಿಸಿದರೆ ಆ ಜನಸಮೂಹವು ಇನ್ನೊಂದು ದಿನ (ರಾತ್ರಿಯೂ ಸೇರಿ) ವಿಶ್ರಾಂತಿಯನ್ನು ಪಡೆಯುತ್ತದೆ.

**ಸ ವಾ ಅರ್ಧಮೇವ ಸಂವತ್ಸರಸ್ಯ ವಿಷ್ಣುಕ್ರಮಾನ್ ಕ್ರಮತೇ । ಅರ್ಧಂ ವಾತ್ಸಪ್ರೇಣೋಪತಿಷ್ಠತೇ ಮಧ್ಯೇ ಹ ಸಂವತ್ಸರಸ್ಯ ಸ್ವರ್ಗೋ ಲೋಕಃ ಸ ಯತ್ಕನೀಯೋಽರ್ಧಾತ್ಕ್ರಮೇತ ನ ಹೈತಗ್ಂ ಸ್ವರ್ಗಂ ಲೋಕಮಭಿಪ್ರಾಪ್ನುಯಾದಥ ಯದ್ಭೂಯೋಽರ್ಧಾತ್ಪರಾಙ ಹೈತಗ್ಂ ಸ್ವರ್ಗಂ ಲೋಕಮತಿ ಪ್ರಣಶ್ಯೇದಥ ಯದರ್ಧಂ ಕ್ರಮತೇಽರ್ಧಮುಪತಿಷ್ಠತೇ ತತ್ಸಂಪ್ರತಿ ಸ್ವರ್ಗಂ ಲೋಕಮಾಪ್ತ್ವಾ ವಿಮುಂಚತೇ ॥**

(ಶ. ಬ್ರಾ. ೬-೭-೪-೧೧)

ವಿಷ್ಣುಕ್ರಮವನ್ನನುಸರಿಸಿ ಅರ್ಧಸಂವತ್ಸರಕಾಲ ಮಾತ್ರ ಸಂಚರಿಸಿ ಉಳಿದರ್ಧ ಸಂವತ್ಸರದಲ್ಲಿ ವತ್ಸಪ್ರಕ್ರಿಯೆಯೊಂದಿಗೆ ಅಗ್ನಿಪೂಜೆಯನ್ನು ಸಲ್ಲಿಸುತ್ತಾನೆ. ಸ್ವರ್ಗಲೋಕವು ಸಂವತ್ಸರಾರ್ಧದಲ್ಲಿರುತ್ತದೆ. ಆದುದರಿಂದ ಅರ್ಧಸಂವತ್ಸರಕ್ಕಿಂತಲೂ ಕಡಿಮೆ ಕಾಲ ಸಂಚರಿಸಿದರೆ ಸ್ವರ್ಗವನ್ನೇ ಮುಟ್ಟುವುದಿಲ್ಲ. ಅರ್ಧಸಂವತ್ಸರಕ್ಕಿಂತಲೂ ಅಧಿಕಕಾಲ ಸಂಚರಿಸಿದರೆ ಆಗ ಸ್ವರ್ಗವನ್ನು ಮೀರಿಹೋಗುವುದರಿಂದ ಸ್ವರ್ಗವು ಕೈಬಿಟ್ಟುಹೋಗುತ್ತದೆ. ಆದುದರಿಂದ ಅರ್ಧಸಂವತ್ಸಕಾಲ ಮಾತ್ರ ಸಂಚರಿಸಿ ಇನ್ನರ್ಧಸಂವತ್ಸಕಾಲ ವಾತ್ಸಪ್ರಕ್ರಿಯೆಯಿಂದ ಅಗ್ನಿಪೂಜೆಯನ್ನು ಸಲ್ಲಿಸಿದರೆ ಆಗ**ಸ** ಸ್ವರ್ಗವನ್ನೂ ಸೇರಿ ಬಂಧನದಿಂದಲೂ ಮುಕ್ತಿಯನ್ನು ಪಡೆಯಬಹುದು.

**ತಾಭ್ಯಾಂ ವೈ ವಿಪರ್ಯಾಸಮೇತಿ । ಯಥಾ ಮಹಾಂತಮಧ್ವಾನಂ ವಿನೋಕೆಗ್ಂ ಸಮಶ್ನುವೀತ ತಾದೃಕ್ತತ್ಸ ವೈ ಪುರಸ್ತಾಜ್ಜೋಪರಿಷ್ಟಾಜ್ಜೋಭೇ ವಿಷ್ಣುಕ್ರಮವಾತ್ಸಪ್ರೇ ಸಮುಸ್ಯತ್ಯಹರ್ವೈ ವಿಷ್ಣುಕ್ರಮಾ ರಾತ್ರಿರ್ವಾತ್ಸಪ್ರಮೇತದ್ವಾ ಇದಗ್ಂ ಸರ್ವಂ ಪ್ರಜಾಪತಿಃ ಪ್ರಜನಯಿಷ್ಯಂಶ್ಚ ಪ್ರಜನಯಿತ್ವಾ ಚಾಹೋರಾತ್ರಾಭ್ಯಾಮುಭಯತಃ ಪರಿಗೃಹ್ಣಾತಿ ॥**

(ಶ. ಬ್ರಾ. ೬-೭-೪-೧೨)

ಹೇಗೆ ದೂರದೇಶದ ಸಂಚಾರ ಮಾಡುವವನು ತನ್ನ ಪ್ರಯಾಣ ಮತ್ತು ವಿಶ್ರಾಂತಿಗಳನ್ನು ಪರ್ಯಾಯರೂಪದಲ್ಲಿ (ಒಂದಾದನಂತರ ಇನ್ನೊಂದು) ಇಟ್ಟುಕೊಳ್ಳುವನೋ ಅದೇ ರೀತಿ ವಿಷ್ಣುಕ್ರಮ ಮತ್ತು ವಾತ್ಸಪ್ರಕ್ರಿಯೆಗಳು ಪರ್ಯಾಯರೂಪದಲ್ಲಿರತಕ್ಕದ್ದು. ಆದರೆ, ದೀಕ್ಷೆಗೆ ಪೂರ್ವಭಾವಿಯಾಗಿಯೂ, ದೀಕ್ಷಾಕಾಲವಾದನಂತರವೂ ಈ ಎರಡನ್ನೂ ಒಟ್ಟಿಗೆ ಸೇರಿಸಬೇಕು. ವಿಷ್ಣುಕ್ರಮವೇ ಅಹಸ್ಸು ಮತ್ತು ವಾತ್ಸಪ್ರವೇ ರಾತ್ರಿಯು. ಆದಿಯಲ್ಲಿಯೂ ಅಂತ್ಯದಲ್ಲಿಯೂ ಇವೆರಡೂ ಒಟ್ಟಿಗೆ ಸೇರಿರುತ್ತವೆ. ಮಧ್ಯಕಾಲದಲ್ಲಿ ಮಾತ್ರ ಇವೆರಡೂ ಪರ್ಯಾಯರೂಪದಲ್ಲಿ ಪರಿಭ್ರಮಣವನ್ನು ಹೊಂದುತ್ತಿರುತ್ತವೆ. ಪ್ರಜಾಪತಿಯು ಸೃಷ್ಟಿಕಾಲದ ಆರಂಭದಲ್ಲಿಯೂ, ಸೃಷ್ಟಿಯಾದನಂತರವೂ ತನ್ನಿಂದ ಸೃಷ್ಟವಾದ ವಿಶ್ವವೆಲ್ಲವನ್ನೂ ಅಹೋರಾತ್ರಗಳಿಂದ ವ್ಯಾಪೃತವಾಗುವಂತೆ ಮಾಡಿದನು. ಅದರಂತೆಯೇ ಯಜ್ಞಕರ್ತನೂ ಸಹ

ಯಜ್ಞರೂಪವಾದ ವಿಶ್ವವನ್ನು ಸೃಷ್ಟಿಮಾಡಲಿಚ್ಛಿಸಿದಾಗ ತನ್ನ ಸೃಷ್ಟಿಗೆ ಆದಿಯಲ್ಲಿಯೂ, ಸೃಷ್ಟಿಯಾದ ನಂತರವೂ ಸಹ ಎರಡು ಪಾರ್ಶ್ವಗಳನ್ನೂ ವಿಷ್ಣುಕ್ರಮವಾತ್ಸಪ್ರರೂಪಗಳಾದ ಅಹೋರಾತ್ರಗಳಿಂದ ವ್ಯಾಪೃತವಾಗುವಂತೆ ಮಾಡಬೇಕು.

**ತದಾಹುಃ । ಯದಹರ್ವಿಷ್ಣುಕ್ರಮಾ ರಾತ್ರಿರ್ವಾತ್ಸಪ್ರಮಥೋ ಏವಾಹನ್ಭವತೋ ನ ರಾತ್ರ್ಯಾಂ ಕಥಮಸ್ಯಾಪಿ ರಾತ್ರ್ಯಾಂಕೃತೇ ಭೇಭವತ ಇತ್ಯೇತದ್ವಾ ಏನೇ ಅದೋ ದೀಕ್ಷ-ಮಾಣಃ ಪುರಸ್ತಾದಪರಾಹ್ಣ ಉಭೇ ಸಮಸ್ಯತಿ ರಾತ್ರಿರ್ಹ್ಯೇತದ್ಯದಪರಾಹ್ಣೋಽಥೈ ನೇ ಏತ-ತ್ಸಂನಿವಪ್ಸ್ಯನ್ನುಪರಿಷ್ಟಾತ್ಪೂರ್ವಾಹ್ಣ ಉಭೇ ಸಮಸ್ಯತ್ಯಹರ್ಹ್ಯೇತದ್ಯತ್ಪೂರ್ವಾಹ್ಣ ಏವಮು ಹಾಸ್ಯೋಭೇ ಏವಾಹನ್ ಕೃತೇ ಭವತ ಉಭೇ ರಾತ್ರ್ಯಾಂ ।**

(ಶ. ಬ್ರಾ. ೬-೭-೪-೧೩)

ಮೇಲಿನ ವಿಧಿವಾಕ್ಯಕ್ಕೆ ಪ್ರತಿಯಾಗಿ ಒಂದು ಆಕ್ಷೇಪವೂ ಸಂಭವಿಸಬಹುದು. ವಿಷ್ಣುಕ್ರಮಗಳು ಅಹಸ್ಸನ್ನು ಪ್ರತಿಬಿಂಬಿಸಿ, ವಾತ್ಸಪ್ರವು ರಾತ್ರಿಯನ್ನು ಪ್ರತಿಬಿಂಬಿಸಿದರೆ ಅವೆರಡನ್ನೂ ಪರ್ಯಾಯರೂಪದಲ್ಲಿ ಆಯಾ ಕಾಲಗಳಲ್ಲೇ ಆಚರಿಸಬೇಕು. ಅದನ್ನು ಬಿಟ್ಟು ಎರಡು ಕ್ರಿಯೆಗಳನ್ನೂ ಅಹಸ್ಸಿನಲ್ಲೇ ಆಚರಿಸುವುದರ ಅರ್ಥವೇನು ಎಂಬ ಆಕ್ಷೇಪವು ಸಂಭವಿಸಿದರೆ ಅದಕ್ಕೆ ಉತ್ತರರೂಪವಾದ ವಿಧಿಯು ಈ ರೀತಿ ಇರುತ್ತದೆ—ದೀಕ್ಷಿತನಾದವನು ಪ್ರಥಮತಃ ಅಪರಾಹ್ಣದಲ್ಲಿ ಎರಡು ಕ್ರಿಯೆಗಳನ್ನೂ ಸೇರಿಸಿ ನೆರವೇರಿಸುತ್ತಾನೆ. ಅಪರಾಹ್ಣವೂ ರಾತ್ರಿರೂಪವಾಗಿಯೇ ಇರುತ್ತದೆ ಹೀಗೆ ಎರಡನ್ನೂ ಯೋಜಿಸಿದನಂತರ ಎರಡನ್ನೂ ಸೇರಿಸಿ ಪೂರ್ವಾಹ್ಣದಲ್ಲಿ ಆಚರಿಸಲ್ಪಡುತ್ತದೆ. ಪೂರ್ವಾಹ್ಣವು ಅಹೋರೂಪವಾಗಿರುತ್ತದೆ. ಈ ರೀತಿ ಎರಡು ಕ್ರಿಯೆಗಳನ್ನೂ ಅಹಸ್ಸಿನಲ್ಲಿಯೂ ಆಚರಿಸಿದಂತಾಯಿತು. ಹಾಗೆಯೇ ರಾತ್ರಿಯಲ್ಲಿಯೂ ಆಚರಿಸಿದಂತಾಯಿತು.

**ಸ ಯದಹಃ ಸಂನಿವಪ್ಸ್ಯನ್ತ್ಸ್ಯಾತ್ ತದಹಃ ಪ್ರಾತರುದಿತ ಆದಿತ್ಯೇ ಭಸ್ಮೈವ ಪ್ರಥಮ-ಮುದ್ವಪತಿ ಭಸ್ಮೋಮುಷ್ಯ ವಾಚಂ ವಿಸೃಜತೇ ವಾಚಂ ವಿಸೃಜ್ಯ ಸಮಿಧಮಾದಧಾತಿ ಸಮಿಧ ಮಾದಾಯ ಭಸ್ಮಾಪೋಽಭ್ಯವಹರತಿ ಯಥೈವ ತಸ್ಯಾಭ್ಯವಹರಣಂ ತಥಾಸಾದಾಯ ಭಸ್ಮನಃ ಪ್ರತ್ಯೇತ್ಯೋಖಾಯಾಮೋಪ್ಯೋಪತಿಷ್ಠತೇಽಥ ಪ್ರಾಯಶ್ಚಿತ್ತೀಕರೋತಿ ॥**

(ಶ. ಬ್ರಾ. ೬-೭-೪-೧೪)

ಯಾವ ದಿನ ಸೂರ್ಯೋದಯವಾದನಂತರ ಪ್ರಾತಃಕಾಲದಲ್ಲಿಯೇ ಈ ಎರಡು ಕ್ರಿಯೆಗಳನ್ನು ಸೇರಿಸಲಿಚ್ಛಿಸುವನೋ ಅಂದು ಪ್ರಥಮತಃ ಭಸ್ಮವನ್ನು ಎರಚಬೇಕು. ಅನಂತರ ವಾಕ್ಕನ್ನುಚ್ಚರಿಸಿ ಸಮಿತ್ತನ್ನು ಕೈಗೆ ತೆಗೆದುಕೊಂಡು ಆ ಭಸ್ಮವನ್ನು ಉದಕಕ್ಕೆ ಎರಚುತ್ತಾನೆ. ಅನಂತರ ಅದರಂತೆಯೇ ಅದೇ ಭಸ್ಮದ ಕೊಂಚ ಅವಶಿಷ್ಟವನ್ನು ತೆಗೆದುಕೊಂಡು ಹಿಂತಿರುಗುತ್ತಾನೆ. ಅನಂತರ ಅದನ್ನು **ಉಖಾ** ಸಂಜ್ಞಕವಾದ ಪಾತ್ರೆಯಲ್ಲಿ ಹಾಕಿ ಅಗ್ನಿಯ ಮುಂದೆ ಭಕ್ತಿಯುತನಾಗಿ ನಿಲ್ಲುತ್ತಾನೆ. ಅನಂತರ ಪ್ರಾಯಶ್ಚಿತ್ತಕರ್ಮವು ನೆರವೇರುತ್ತದೆ.

**ಸ ಯದಿ ವಿಷ್ಣುಕ್ರಮೀಯಮಹಃ ಸ್ಯಾತ್ । ವಿಷ್ಣುಕ್ರಮಾನ್ ಕ್ರಾನ್ತ್ವಾ ವಾತ್ಸಪ್ರೇಣೋ-ಪತಿಷ್ಠೇತಾಥ ಯದಿ ವಾತ್ಸಪ್ರೀಯಂ ವಾತ್ಸಪ್ರೇಣೋಪಸ್ಥಾಯ ವಿಷ್ಣುಕ್ರಮಾನ್ ಕ್ರಾನ್ತ್ವಾ ವಾತ್ಸಪ್ರಮನ್ತತಃ ಕುರ್ಯಾದ್ಯಥಾ ಪ್ರಯಾಯ ನ ವಿಮುಂಚೇತ್ತಾದೃಕ್ತದಥ ಯದ್ವಾತ್ಸಪ-**

**ಮಂತತಃ ಕರೋತಿ ಪ್ರತಿಷ್ಠಾ ವೈ ವಾತ್ಸಪ್ರಂ ಯಥಾ ಪ್ರತಿಷ್ಠಾಸಯೇದವಸಾಯಯೇತ್ತಾ-ದೃಕ್ತತ್ತಸ್ಮಾದು ವಾತ್ಸಪ್ರಮೇವಾಂತತಃ ಕುರ್ಯಾತ್ ॥**

(ಶ. ಬ್ರಾ. ೬-೭-೪-೧೫)

ಒಂದುವೇಳೆ ಕ್ರಿಯಾದಿನವು ವಿಷ್ಣುಕ್ರಮೀಯವಾಗಿದ್ದರೆ ಆಗ ವಿಷ್ಣುಕ್ರಮವನ್ನು ದಾಟಿ (ನೆರವೇರಿಸಿ) ವಾತ್ಸಪ್ರದಿಂದ ಅಗ್ನಿಯನ್ನು ಪೂಜಿಸಬೇಕು. ಒಂದುವೇಳೆ ವಾತ್ಸಪ್ರಕ್ರಿಯೆಯ ದಿನವಾಗಿದ್ದರೆ ಮೊದಲು ವಾತ್ಸಪ್ರವನ್ನು ನೆರವೇರಿಸಿ ಅನಂತರ ವಿಷ್ಣುಕ್ರಮವನ್ನು ಮುಗಿಸಿ ಪುನಃ ವಾತ್ಸಪ್ರವನ್ನಾಚರಿಸಬೇಕು. ವಿಷ್ಣುಕ್ರಮದಲ್ಲಿಯೇ ಮುಗಿಸಬಾರದು. ಹಾಗೆ ಮಾಡಿದರೆ ಸಂಚಾರಕ್ಕಾಗಿ ಸುತ್ತಿ ವಿಶ್ರಾಂತಿಯಿಲ್ಲದೇ ಇರುವ ಸ್ಥಿತಿಯುಂಟಾಗುತ್ತದೆ. ವಾತ್ಸಪ್ರಕ್ರಿಯಾಚರಣೆಯಿಂದ ಸಮಾಪ್ತಿಗೊಳಿಸಿದರೆ ಆಗ ಪೂರ್ಣವಾದ ವಿಶ್ರಾಂತಿಯು ಲಭಿಸುತ್ತದೆ. ಇತ್ಯಾದಿಯಾಗಿ ವಾತ್ಸಪ್ರದ ಮಹಿಮೆಯನ್ನು ತಿಳಿಸಿ ಪುನಃ ಅಗ್ನಿಗೂ ವಾತ್ಸಪ್ರಸೂಕ್ತಕ್ಕೂ ಇರುವ ಸಂಬಂಧವನ್ನು ಈ ರೀತಿ ವಿವರಿಸಿದೆ.

**ವನೀವಾಹ್ಯೇತಾಗ್ನಿಂ ಬಿಭ್ರದಿತ್ಯಾಹುಃ । ದೇವಾಶ್ಚಾಸುರಾಶ್ಚೋಭಯೇ ಪ್ರಾಜಾಪತ್ಯಾ ಅಸ್ಪರ್ಧಂತ ತೇ ದೇವಾಶ್ಚಕ್ರಮುಚರಞ್ಫಲಮಸುರಾ ಆಸಂಸ್ತೇ ದೇವಾಶ್ಚಕ್ರೇಣ ಚರಂತ ಏತತ್ಕರ್ಮಾಪಶ್ಯಂಶ್ಚಕ್ರೇಣ ಹಿ ವೈ ದೇವಾಶ್ಚರಂತ ಏತತ್ಕರ್ಮಾಪಶ್ಯಂಸ್ತಸ್ಮಾದಾನಸ ಏವ ಪೌರೋಡಾಶೇಷು ಯಜೂಗ್‌ಷ್ಯನಸೋಽಗ್ನೌ ॥**

(ಶ. ಬ್ರಾ. ೬-೮-೧-೧)

“ ಅಗ್ನಿಯನ್ನು ಭರಿಸುತ್ತಿರುವಾಗಲೇ ಅಗ್ನಿಯನ್ನು ಪ್ರೇರಿಸಿ ಕಳುಹಲಿ ” ಎಂಬ ವಿಧಿಯಿರುತ್ತದೆ. ಏತಕ್ಕೆಂದರೆ—ಅದರ ಕಾರಣವು ಹೀಗೆ ವಿವೃತವಾಗಿರುತ್ತದೆ.

ಪ್ರಜಾಪತಿಯಿಂದ ಉತ್ಪನ್ನರಾದ ದೇವತೆಗಳೂ ಮತ್ತು ಅಸುರರೂ ಪರಸ್ಪರ ಸ್ಪರ್ಧಿಸುತ್ತಿದ್ದರು. ದೇವತೆಗಳು ಚಕ್ರಯುಕ್ತವಾದ ರಥದಮೇಲೆ ಸಂಚರಿಸುತ್ತಿದ್ದರು. ಅಸುರರು ಸ್ವಸ್ಥಾನದಲ್ಲಿಯೇ ಇರುತ್ತಿದ್ದರು. ದೇವತೆಗಳು ಚಕ್ರಯುಕ್ತವಾದ ರಥದಲ್ಲಿ ಸಂಚರಿಸುತ್ತಿದ್ದುದರಿಂದಲೇ ಈ ವಿಧ್ಯುಕ್ತವಾದ ಕ್ರಿಯೆಯ ದರ್ಶನವನ್ನು ಪಡೆದರು. ಅವರು ಚಕ್ರಯುಕ್ತವಾದ ರಥದಲ್ಲಿ ಸಂಚರಿಸದೇ ಇದ್ದರೆ ಇದರ ದರ್ಶನವಾಗುತ್ತಿರಲಿಲ್ಲ. ಆದುದರಿಂದ ಪೌರೋಡಾಶ ಕರ್ಮವು ರಥಕ್ಕೆ ಸಂಬಂಧಿಸಿದುದಾಗಿರುತ್ತದೆ.

**ಸ ಯೋ ವನೀವಾಹ್ಯತೇ । ದೇವಾನ್ ಕರ್ಮಣೈತಿ ದ್ವೈವಗ್‌ಂ ಹಾಸ್ಯ ಕರ್ಮ ಕೃತಂ ಭವತ್ಯಥ ಯೋ ನ ವನೀವಾಹ್ಯತೇಽಸುರಾನ್ ಕರ್ಮಣೈತ್ಯಸುರ್ಯಗ್‌ಂ ಹಾಸ್ಯಕರ್ಮಕೃತಂ ಭವತಿ ॥**

(ಶ. ಬ್ರಾ. ೬-೮-೧-೨)

ಯಾವನು ಅಗ್ನಿಯನ್ನು ಪ್ರೇರಿಸಿ ಸಂಚರಿಸುವಂತೆ ಮಾಡುವನೋ, ಅವನುಮಾತ್ರ ಪೂಜ್ಯವಾದ ಕರ್ಮರೂಪವಾದ ಸಾಧನದಿಂದ ದೇವತೆಗಳನ್ನು ಸಮೀಪಿಸುತ್ತಾನೆ. ಹೀಗೆ ಅಗ್ನಿಯನ್ನು ಪ್ರೇರಿಸದಿದ್ದರೆ ತನ್ನ ಕರ್ಮಗಳ ಮೂಲಕ ಅಸುರರನ್ನು ಮಾತ್ರ ಸಮೀಪಿಸುತ್ತಾನೆ. ಇಂತಹ ಅಗ್ನಿಪ್ರಚೋದಕವಲ್ಲದ ಕರ್ಮವು ಆಸುರೀಪ್ರವೃತ್ತಿಯುಳ್ಳದ್ದಾಗಿರುತ್ತದೆ.

ತದ್ಧೈಕ ಆಹುಃ । ಸ್ವಯಂ ವಾ ಏಷ ವನೀವಾಹಿತೋ ವಿಷ್ಣುಕ್ರಮೈರ್ವಾ ಏಷ ಪ್ರಯಾತಿ ವಾತ್ಸಪ್ರೇಣಾವಸ್ಯತೀತಿ ನ ತಥಾ ವಿದ್ಯಾದ್ದೈವಂ ವಾ ಅಸ್ಯ ತತ್ಪ್ರಯಾಣಂ ಯದ್ವಿಷ್ಣುಕ್ರಮಾದ್ದೈವಮುವಸಾನಂ ತದ್ವಾತ್ಸಪ್ರಮಥಾಸ್ಯೇದಂ ಮಾನುಷಂ ಪ್ರಯಾಣಂ ಯದಿದಂ ಪ್ರಯಾತಿ ಮಾನುಷಮುವಸಾನಂ ಯದಸ್ಯತಿ ॥

(ಶ. ಬ್ರಾ. ೬-೮-೧-೩)

ಆದರೆ ಇಲ್ಲಿ ಇನ್ನೊಂದು ಶಂಕೆಗೆ ಅವಕಾಶವಿರುತ್ತದೆ. ಅಗ್ನಿಗೆ ಪ್ರಚೋದಕವಾಗಿ ಇತರ ಯಾವ ಸಹಾಯವೂ ಬೇಕಾಗಿಲ್ಲ. ವಿಷ್ಣುಕ್ರಮದ ಸಹಾಯದಿಂದ ಅವನೇ ಚಲಿಸಿ ಸಂಚರಿಸುತ್ತಾನೆ ಮತ್ತು ವಾತ್ಸಪ್ರದಿಂದ ಆ ಸಂಚಾರದ ಅವಸಾನವನ್ನು ಹೊಂದುತ್ತಾನೆಎಂದು ಆಕ್ಷೇಪಿಸಿದರೆ ಈ ಆಕ್ಷೇಪವು ತಪ್ಪಾಗುತ್ತದೆ. ಏತಕ್ಕೆಂದರೆ— ಪುರುಷಪ್ರಯತ್ನವಿಲ್ಲದೆ ಅಗ್ನಿಯ ಚಲನಸಂಚಾರಗಳಿದ್ದರೆ ಅದು ದೇವತೆಗಳಿಗೆ ಮಾತ್ರ ಉಪಕಾರಕವಾಗುತ್ತದೆ. ಅದರಿಂದ ಮಾನವರಿಗೆ ಪ್ರಯೋಜನವಿಲ್ಲ. ಆದುದರಿಂದ ಪುರುಷನು ತನ್ನ ಕ್ರಿಯೆಯಿಂದ ಅಗ್ನಿಯನ್ನು ಪ್ರಯೋಜಿಸಿದರೆ ಆಗ ಅದರ ಫಲವು ಪುರುಷನಿಗೆ ಲಭಿಸುತ್ತದೆ. ಇಲ್ಲದಿದ್ದರೆ ಇಲ್ಲ.

ಪ್ರಜಾಪತಿರೇಷೋಽಗ್ನಿಃ । ಉಭಯಮೇತತ್ಪ್ರಜಾಪತಿರ್ಯಚ್ಚ ದೇವಾ ಯಚ್ಚ ಮನುಷ್ಯಾಸ್ತದ್ಯದ್ವಿಷ್ಣುಕ್ರಮವಾತ್ಸಪ್ರೇ ಭವತೋ ಯದ್ವೇವಾಸ್ಯ ದೈವಗ್ಂ ರೂಪಂ ತದಸ್ಯ ತೇನ ಸಂಸ್ಕರೋತ್ಯಥ ಯದ್ವನೀವಾಹ್ಯತೇ ತದೇವಾಸ್ಯ ಮಾನುಷಗ್ಂ ರೂಪಂ ತದಸ್ಯ ತೇನ ಸಂಸ್ಕರೋತಿ ಸ ಹ ವಾ ಏತಗ್ಂ ಸರ್ವಂ ಕೃತ್ಸ್ನಂ ಪ್ರಜಾಪತಿಗ್ಂ ಸಂಸ್ಕರೋತಿ ಯ ಏವಂ ವಿದ್ವಾನ್ವನೀವಾಹ್ಯತೇ ತಸ್ಮಾದು ವನೀವಾಹ್ಯೇತೈವ ॥

(ಶ. ಬ್ರಾ. ೬-೮-೧-೪)

ಪ್ರಜಾಪತಿಯೇ ಅಗ್ನಿಯು. ಅಗ್ನಿಯೇ ಪ್ರಜಾಪತಿಯು. ಅಗ್ನಿರೂಪನಾದ ಪ್ರಜಾಪತಿಯೇ ಸಕಲ ದೇವಮಾನವರೂ ಆಗಿದ್ದಾನೆ. ವಿಷ್ಣುಕ್ರಮ ಮತ್ತು ವಾತ್ಸಪ್ರಗಳ ಆಚರಣೆಯಿಂದ ದಿವ್ಯರೂಪವನ್ನು ನಿರ್ಮಿಸುತ್ತಾನೆ. ಅಗ್ನಿಪ್ರಚೋದಕವಾದ ಕ್ರಿಯೆಯಿಂದ ಮಾನವರೂಪವನ್ನು ನಿರ್ಮಿಸುತ್ತಾನೆ. ಆದುದರಿಂದ ಈ ಎರಡೂ ಕ್ರಿಯೆಯ ಸಹಾಯದಿಂದ ಯಾರು ಅಗ್ನಿಯನ್ನು ಪ್ರೇರಿಸುವರೋ ಅವರು ಪೂರ್ಣವಾದ ಪ್ರಜಾಪತಿರೂಪವನ್ನೇ ನಿರ್ಮಿಸಿದಂತೆ. ಹೀಗೆಂದು ವಾತ್ಸಪ್ರ ಮಹಿಮೆಯು ಪ್ರಶಂಸಿತವಾಗಿದೆ.

## ನಲವತ್ತಾರನೆಯ ಸೂಕ್ತ

### ಸಾಯಣಭಾಷ್ಯಂ

ಅಚ್ಛಾವಮ ಇತಿ ಚತುರ್ಥೇಽನುವಾಕೇಽಷ್ಟಾದಶ ಸೂಕ್ತಾನಿ । ತತ್ರ ಪ್ರ ಹೋತೇತಿ ದಶರ್ಚಂ ಚತುರ್ಥಂ ಸೂಕ್ತಂ । ಪ್ರ ಹೋತಾ ದಶೇತ್ಯನುಕ್ರಾಂತಂ । ಅನುವರ್ತಮಾನಾದ್ಭಾಲಂದನಸ್ಯ ವತ್ಸಪ್ರೇರಾರ್ಷಂ । ಅನಾದೇಶಪರಿಭಾಷಯಾ ತ್ರೈಷ್ಟುಭಂ । ಆಗ್ನೇಯಂ ॥ ಪೂರ್ವಸೂಕ್ತೇನ ಸಹೋಕ್ತೋ ವಿನಿಯೋಗಃ ॥

**ಅನುವಾಕವು**—ಋಗ್ವೇದಸಂಹಿತೆಯ ಹತ್ತನೆಯ ಮಂಡಲದ **ಅಚ್ಛಾನು** ಎಂಬ ಋಕ್ಕಿನಿಂದ ಪ್ರಾರಂಭವಾಗುವ ನಾಲ್ಕನೆಯ ಅನುವಾಕದಲ್ಲಿ ಹದಿನೆಂಟು ಸೂಕ್ತಗಳಿರುವುವು. ಅವುಗಳಲ್ಲಿ ಮೊದಲ ಮೂರು ಸೂಕ್ತಗಳನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ. ಈಗ ಪ್ರಾರಂಭಿಸಬೇಕಾಗಿರುವ **ಪ್ರಹೋತಾ** ಎಂಬ ಸೂಕ್ತವು ಈ ಅನುವಾಕದಲ್ಲಿ ನಾಲ್ಕನೆಯದು. ಇದರಲ್ಲಿ ಹತ್ತು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ **ಪ್ರಹೋತಾ ದಶ** ಎಂದು ಹೇಳಿರುವುದು. ಈ ಸೂಕ್ತಕ್ಕೆ ವತ್ಸಪ್ರಿರ್ಭಾಲಂದನಃ ಎಂಬುವನು ಋಷಿಯು; ಅಗ್ನಿಯು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಈ ಸೂಕ್ತದ ವಿನಿಯೋಗವನ್ನು ಹಿಂದಿನ ಸೂಕ್ತದ ಪೀಠಿಕೆಯಲ್ಲಿ ಹೇಳಲಾಗಿದೆ.

## ಸೂಕ್ತ—೪೬

ಮಂಡಲ—೧೦ ॥ ಅನುವಾಕ—೪ ॥ ಸೂಕ್ತ—೪೬ ॥
ಅಷ್ಟಕ—೮ ॥ ಅಧ್ಯಾಯ—೧ ॥ ವರ್ಗ—೧, ೨ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
ಋಷಿಃ—ವತ್ಸಪ್ರಿಃ ॥
ದೇವತಾ—ಅಗ್ನಿಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಪ್ರ ಹೋತಾ ಜಾತೋ ಮಹಾನ್ನಭೋವಿನ್ನೃಷದ್ವಾ ಸೀದದಪಾಮುಪಸ್ಥೇ ।
ದಧಿರ್ಯೋ ಧಾಯಿ ಸ ತೇ ವಯಾಂಸಿ ಯಂತಾ ವಸೂನಿ ವಿಧತೇ ತನೂಪಾಃ ॥

ಪದಪಾಠಃ

ಪ್ರ । ಹೋತಾ । ಜಾತಃ । ಮಹಾನ್ । ನಭಃऽವಿತ್ । ನೃऽಸದ್ವಾ । ಸೀದತ್ । ಅಪಾಂ । ಉಪऽಸ್ಥೇ ।
ದಧಿಃ । ಯಃ । ಧಾಯಿ । ಸಃ । ತೇ । ವಯಾಂಸಿ । ಯಂತಾ । ವಸೂನಿ । ವಿಧತೇ । ತನೂऽಪಾಃ ॥

ಸಾಯಣಭಾಷ್ಯಂ

ಯೋ ನೃಷದ್ವಾಗ್ನಿರಪಾಂ । ಅಂತರಿಕ್ಷನಾಮೈತತ್ । ಅಂತರಿಕ್ಷಸ್ಯೋಪಸ್ಥ ಉತ್ಸಂಗೇ ವೈದ್ಯುತರೂಪೇಣ ನಿಷಣ್ಣೋऽಭೂತ್ । ಸ ಇದಾನೀಂ ಹೋತಾ ಯಜಮಾನಾನಾಂ ಹೋಮನಿಷ್ಪಾದಕೋ ಜಾತಃ ಪ್ರಾದುರ್ಭೂತೋ ಮಹಾನ್ ಗುಣೈಃ ಪೂಜ್ಯೋ ನಭೋವಿದಂತರಿಕ್ಷಸ್ಯ ವೇತ್ತಾ । ಯತಸ್ತತ್ರೋತ್ಪನ್ನಃ ಅತಸ್ತಸ್ಯ ಜ್ಞಾತಾ ॥ ನೃಷದ್ವಾ ನೃಷು ಸೀದನ್ । ಸದೇಃ ಕ್ವನಿಪ್ ಕೃತ್ಸ್ವರಃ ॥ ಪ್ರ ಸೀದತ್ । ವೇದ್ಯಾಂ ಪ್ರಸೀದತಿ । ಅಪಾಮುಪಸ್ಥೇ ಮಹಿಷಾ ಅಗೃಭ್ಣತ । ಋಗ್ವೇ-೧-೪-೧ । ಇತಿ ಹಿ ನಿಗಮಃ । ಯದ್ವಾ । ಅಪಾಂ । ಅಪಸಾಮಿತ್ಯರ್ಥಃ । ಕರ್ಮಣಾಮುಪಸ್ಥ ಉಪಸ್ಥಾನೇ ಸಮೀಪೇ ವೇದ್ಯಾಮುಕ್ತಲಕ್ಷಣಃ ಸನ್ ।

**ಅಥವಾ । ಅಪಾಮುದಕಾನಾಮುಪಸ್ಥೇ ಮಧ್ಯೇ ಯೋಽಗ್ನಿರ್ಹವಿರ್ಭಿರ್ಘುಮುಸಹಮಾನೋ ನಿಗೂಢಃ ಸ ದೇವೈಃ ಪುನಃ ಪ್ರಾರ್ಥಿತ ಉಕ್ತವಿಧಃ ಸನ್ ವೇದ್ಯಾಂ ಪ್ರಸೀದತಿ। ಯೋಽಗ್ನಿರ್ದಧಿರ್ಧಾತಾ ಯಜ್ಞಸ್ಯ ಧಾರಕಃ ಸನ್ ಧಾಯಿ ವೇದ್ಯಾಂ ನಿಹಿತೋಽಭೂತ್ ಸೋಽಗ್ನಿರ್ಹೇ ವತ್ಸಪ್ರೇ ವಿಧತೇ ಪರಿಚರತೇ ತೇ ತುಭ್ಯಂ ವಯಾಂಸ್ಯನ್ನಾನಿ ವಸೂನಿ ಧನಾನಿ ಚ ಯಂತಾ । ನಿಯಮಿತಾ ಭವತು । ಕಿಂಚ ತನೂಪಾಸ್ತೇ ತನ್ವಃ ಪಾತಾ ಚ ಭವತ್ವಿತಿ ಶೇಷಃ ॥**

**ಪ್ರತಿಪದಾರ್ಥ**

**(ಯಃ) ನೃಷದ್ವಾ**—ಯಾವ ಅಗ್ನಿಯು । **ಅಪಾಂ**—ಅಂತರಿಕ್ಷದ । **ಉಪಸ್ಥೇ**—ಉತ್ಸಂಗಸ್ಥಾನದಲ್ಲಿ ವಿದ್ಯುದ್ರೂಪದಿಂದ ಇದ್ದನೋ । **ಮಹಾನ್**—ಪೂಜ್ಯನೂ । **ನಭೋವಿತ್**—ಅಂತರಿಕ್ಷಲೋಕವನ್ನು ತಿಳಿದವನೂ ಆದ । **ಸಃ**—ಅದೇ ಅಗ್ನಿಯು । **ಹೋತಾ**—ಯಜಮಾನನ ಯಜ್ಞದಲ್ಲಿ ದೇವತೆಗಳನ್ನು ಆಹ್ವಾನ ಮಾಡುವ ಹೋತೃವಾಗಿ । **ಜಾತಃ**—ಉತ್ಪನ್ನನಾಗಿ । **ಪ್ರ ಸೀದತ್**—ಯಜ್ಞವೇದಿಯಲ್ಲಿ ಆವಿರ್ಭೂತನಾಗಿದ್ದಾನೆ । **ಯಃ**—ಯಾವ ಅಗ್ನಿಯು । **ದಧಿಃ**—ಯಜ್ಞಕ್ಕೆ ಧಾರಕನಾಗಿ । **ಧಾಯಿ**—ಯಜ್ಞವೇದಿಯಲ್ಲಿ ಕುಳಿತಿರುವನೋ । **ಸಃ**—ಆ ಅಗ್ನಿಯು । **ವಿಧತೇ**—ಶುಶ್ರೂಷೆ ಮಾಡುತ್ತಿರುವ । **ತೇ**—ನಿನಗೆ (ವತ್ಸಪ್ರಿ ಎಂಬ ಋಷಿಗೆ) । **ವಯಾಂಸಿ**—ಅನ್ನಾದ್ಯಾಹಾರಗಳನ್ನೂ । **ವಸೂನಿ**—ಧನಗಳನ್ನೂ । **ಯಂತಾ**—ಕೊಡುವವನಾಗಲಿ (ಮತ್ತು) । **ತನೂಪಾಃ**—ನಿನ್ನ ಶರೀರವನ್ನು ರಕ್ಷಿಸುವವನೂ ಆಗಿರಲಿ.

**ಭಾವಾರ್ಥ**

ಪೂಜ್ಯನೂ ಅಂತರಿಕ್ಷಲೋಕವನ್ನು ತಿಳಿದವನೂ ಅಂತರಿಕ್ಷದಲ್ಲಿ ವಿದ್ಯುದ್ರೂಪದಿಂದಿರುವವನೂ ಆದ ಅಗ್ನಿಯೇ ಈಗ ಯಜಮಾನನ ಯಜ್ಞವೇದಿಯಲ್ಲಿ ದೇವತೆಗಳು ಆಹ್ವಾನ ಮಾಡುವ ಹೋತೃವಾಗಿ ಆವಿರ್ಭವಿಸಿ ಕುಳಿತಿದ್ದಾನೆ. ಯಜ್ಞಕ್ಕೆ ಧಾರಕನೂ ಯಜ್ಞವೇದಿಯಲ್ಲಿ ಪ್ರತಿಷ್ಠಿತನೂ ಆದ ಅದೇ ಅಗ್ನಿಯು, ಎಲೈ ವತ್ಸಪ್ರಿಋಷಿಯೇ, ನಿನಗೆ ಅನ್ನಾದ್ಯಾಹಾರಗಳನ್ನೂ ಧನಗಳನ್ನೂ ಕೊಟ್ಟು ನಿನ್ನನ್ನು ರಕ್ಷಿಸಲಿ.

## English Translation

A mighty ministrant priest, one cognizant of heaven, though abiding with men, having been born, is seated on the lap of the waters : may he, the upholder (of sacrifice), who has been stationed (on the altar), be to you when offering worship, the giver of food and riches, the protector of your person.

**ವಿಶೇಷವಿಷಯಗಳು**

**ನೃಷದ್ವಾ—ನೃಷು ಸೀದನ್ ।** ಮನುಷ್ಯರ ಮಧ್ಯದಲ್ಲಿ ಅಥವಾ ಮನುಷ್ಯರು ಮಾಡುತ್ತಿರುವ ಯಜ್ಞದಲ್ಲಿ ಕುಳಿತಿರುವವನು ಎಂದರೆ ಮನುಷ್ಯರು ಮಾಡುತ್ತಿರುವ ಯಜ್ಞಮಧ್ಯದಲ್ಲಿರುವ ಯಜ್ಞವೇದಿಯಲ್ಲಿ ಸ್ಥಾಪಿತನಾಗಿರುವ ಅಗ್ನಿಯು.

**ಉಪಸ್ಥೇ—ಉತ್ಸಂಗೇ** | ತೊಡೆಯಮೇಲೆ ಎಂದರೆ ಅಂತರಿಕ್ಷದ ಮಧ್ಯಪ್ರದೇಶದಲ್ಲಿ

**ನಭೋವಿತ್—ಅಂತರಿಕ್ಷಸ್ಯ ವೇತ್ತಾ | ಯತಸ್ತತ್ರೋತ್ಪನ್ನಃ ಅತಸ್ತಸ್ಯ ಜ್ಞಾತಾ** | ಅಂತರಿಕ್ಷದಲ್ಲಿಯೇ ಉತ್ಪನ್ನನಾದ್ದರಿಂದ ಅದರ ಸ್ವರೂಪವನ್ನು ತಿಳಿದವನೆಂದರ್ಥವು.

**ಅಪಾಂ—ಅಂತರಿಕ್ಷನಾಮೈತತ್ | ಆಪಃ ಸಮುದ್ರಃ** ಇತ್ಯಾದಿ ಶಬ್ದಗಳು ಅಂತರಿಕ್ಷನಾಮಗಳಲ್ಲಿ ಪಠಿತವಾಗಿವೆ. (ನಿ.) **ಅಪಃ** ಎಂಬ ಶಬ್ದಕ್ಕೆ ಕರ್ಮವೆಂದೂ ಅರ್ಥವು. (ನಿ.) ಈ ಸಂದರ್ಭದಲ್ಲಿ **ಕರ್ಮಣಾಮುಪಸ್ಥ ಉಪಸ್ಥಾನೇ ಸಮೀಪೇ ವೇದ್ಯಾಂ** | ಕರ್ಮ ಎಂದರೆ ಯಜ್ಞಕರ್ಮವನ್ನು ಮಾಡುವ ಯಜ್ಞವೇದಿಯಲ್ಲಿ ಎಂದೂ ಹೇಳಬಹುದು. **ಅಪಾಮುಪಸ್ಥೇ** ಎಂಬ ಶಬ್ದಗಳಿಗೆ ಭಾಷ್ಯಕಾರರು **ಅಪಾಂ ಮಧ್ಯೇ ಯೋಽಗ್ನಿರ್ಹವಿರ್ವೋಢುಮಸಹಮಾನೋ ನಿಗೂಢಃ ಸ ದೇವೈಃ ಪುನಃ ಪ್ರಾರ್ಥಿತಸ್ಸನ್ ವೇದ್ಯಾಂ ಪ್ರಸೀದತಿ** | ಎಂಬ ಇನ್ನೊಂದು ವಿಧ ಅರ್ಥವನ್ನೂ ಹೇಳಿದ್ದಾರೆ. ಪೂರ್ವದಲ್ಲಿ ಅಗ್ನಿಯು ಕಾರಣಾಂತರದಿಂದ ದೇವತೆಗಳಿಗೆ ಹವಿಸ್ಸನ್ನು ವಹಿಸುವ ಕಾರ್ಯದಲ್ಲಿ ಜಿಗುಪ್ಸೆಗೊಂಡು ಯಾರಿಗೂ ಹೇಳದೆ ಓಡಿಹೋಗಿ ನೀರಿನ ಮಧ್ಯದಲ್ಲಿ ಅವಿತುಕೊಂಡಿದ್ದನು. ಇದನ್ನು ದೇವತೆಗಳು ಬಹು ಶ್ರಮದಿಂದ ತಿಳಿದುಕೊಂಡು ಅಲ್ಲಿಗೆ ಹೋಗಿ ಅಗ್ನಿಯನ್ನು ನಾನಾ ವಿಧವಾಗಿ ಪ್ರಾರ್ಥಿಸಿ ಅವನಿಗೆ ವರಾದಿಗಳನ್ನು ಕೊಟ್ಟು ಸಮಾಧಾನಮಾಡಿ ಪುನಃ ಹವಿರ್ವಹನಕಾರ್ಯದಲ್ಲಿ ಪ್ರವೃತ್ತನಾಗುವಂತೆ ಮಾಡಿದನು. ನೀರಿನಿಂದ ಪುನಃ ಎದ್ದುಬಂದ ಅಗ್ನಿಯೇ ಈಗ ಯಜ್ಞವೇದಿಯಲ್ಲಿ ಬಂದು ಕುಳಿತಿರುವನು ಎಂದು ಇಲ್ಲಿ ಹೇಳಿದೆ ಎಂದು ಭಾಷ್ಯಕಾರರು ಸೂಚಿಸಿರುವರು. ಈ ವಿಷಯದ ವಿವರಣೆಯು ಇದೇ ಮಂಡಲದ ೫೧ ನೆಯ ಸೂಕ್ತದಲ್ಲಿ ಹೇಳಿರುವುದರಿಂದ ಇದನ್ನು ನಾವು ಆ ಸೂಕ್ತವನ್ನು ವಿವರಿಸುವಾಗ ವಿಸ್ತಾರವಾಗಿ ವರ್ಣನೆ ಮಾಡುವೆವು.

ಸಂಹಿತಾಪಾಠಃ

ಇಮಂ ವಿಧಂತೋ ಅಪಾಂ ಸಧಸ್ಥೇ ಪಶುಂ ನ ನಷ್ಟಂ ಪದೈರನು ಗ್ಮನ್ ।
ಗುಹಾ ಚತಂತಮುಶಿಜೋ ನಮೋಭಿರಿಚ್ಛಂತೋ ಧೀರಾ ಭೃಗವೋಽವಿಂದನ್ ॥

ಪದಪಾಠಃ

ಇಮಂ । ವಿಧಂತಃ । ಅಪಾಂ । ಸಧಽಸ್ಥೇ । ಪಶುಂ । ನ । ನಷ್ಟಂ । ಪದೈಃ । ಅನು । ಗ್ಮನ್ ।
ಗುಹಾ । ಚತಂತಂ । ಉಶಿಜಃ । ನಮಃಽಭಿಃ । ಇಚ್ಛಂತಃ । ಧೀರಾಃ । ಭೃಗವಃ । ಅವಿಂದನ್ ॥

ಸಾಯಣಭಾಷ್ಯಂ

**ಇಮಮಗ್ನಿಮಪಾಮುದಕಾನಾಂ ಸಧಸ್ಥೇ ಸಹಸ್ಥಾನೇ ಮಧ್ಯೇ ನಿಗೂಢಂ ವಿಧಂತಃ ಪರಿಚರಂತಃ ಉಪಚಾರಂ ವದಂತೋ ಋಷಯಶ್ಚ ಪದೈಃ ಪಲಾಯನಮಾರ್ಗವ್ಯಂಜಕೈರ್ನಷ್ಟಂ ಚೋರಾದಿಭಿರಪಹೃತಂ**

ಪಶುಮಿವಾನುಗ್ಮನ್ । ಅನುಜಗ್ಮುಃ ॥ ಗಮೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ ॥ ಶೇಷು ಮಧ್ಯೇ ಗುಹಾ ಗುಹಾಯಾಂ ಚತಂತಂ । ಚತಿರ್ಗತಿಕರ್ಮಾ । ಅಪ್ಸು ವಿಲೀನಮಿತ್ಯರ್ಥಃ । ಉಶಿಜಃ ಕಾಮಯ-ಮಾನಾ ನಮೋಭಿರ್ನಮಸ್ಕಾರೈಃ ಸ್ತೋತ್ರೈರ್ವೇಚ್ಛಂತ ಆತ್ಮನ ಇಚ್ಛಂತೋ ಧೀರಾ ಧೀಮಂತೋ ಭೃಗವೋಽವಿಂದನ್ । ಲಬ್ಧವಂತಃ । ಅಗ್ನೇರ್ಹವಿರ್ವೋಢುಮಸಹಮಾನಸ್ಯ ಪಲಾಯ್ಯಾಪ್ಸು ಪ್ರವೇಶೋ ದೇವಾನಾಮನ್ವೇಷಣಂ ಚಾಗ್ನೇಸ್ತ್ರಯೋ ಜ್ಯಾಯಾಂಸ ಇತ್ಯತ್ರ ಸ್ಪಷ್ಟಮಾಮ್ನಾತಂ । ತೈ. ಸ. ೨-೬-೬ । ಅನ್ವೇಷಣಂ ಕುರ್ವತಾಂ ಮಧ್ಯೇ ಭೃಗೂಣಾಮಗ್ನಿಲಾಭ ಇಮಂ ವಿಧಂತೋ ಅಪಾಂ ಸಧಸ್ಥೇ ದ್ವಿತಾದ-ಧುರ್ಭೃಗವ ಇತ್ಯತ್ರೋಕ್ತಂ ॥ ಋ-೨-೪-೨ ॥

### ಪ್ರತಿಪದಾರ್ಥ

**ಇಮಂ**— ಈ ಅಗ್ನಿಯನ್ನು । **ಅಪಾಂ**— ಉದಕಗಳ । **ಸಧಸ್ಥೇ**— ಸಂಗಮಸ್ಥಾನದಲ್ಲಿ । **ವಿಧಂತಃ**— ಶುಶ್ರೂಷೆ ಮಾಡುತ್ತಿದ್ದ ಅಥವಾ ಸಮಾಧಾನ ಮಾಡುತ್ತಿದ್ದ ಋಷಿಗಳು । **ನಷ್ಟಂ**— ಚೋರಾದಿಗಳಿಂದ ಅಪಹರಿಸಲ್ಪಟ್ಟ । **ಪಶುಂ**— ಗೋವುಗಳನ್ನು । **ಪದೈಃ**— ಹೆಜ್ಜೆಯ ಗುರುತುಗಳಿಂದ ಅನುಸರಿಸಿಹೋಗಿ ಹುಡುಕುವಂತೆ । **ಅನುಗ್ಮನ್**— ಅನುಸರಿಸಿ ಹೋಗಿ ಹುಡುಕಿದರು । **ಗುಹಾ**— ಆ ನೀರಿನ ಮಧ್ಯದಲ್ಲಿ । **ಚತಂತಂ**— ಹೋಗಿ ಅಡಗಿಕೊಂಡಿದ್ದ ಅಗ್ನಿಯನ್ನು । **ಉಶಿಜಃ**— ಪುನಃ ಕರೆತರಬೇಕೆಂದು ಅಪೇಕ್ಷಿಸುತ್ತಾ । **ನಮೋಭಿಃ**— ನಮಸ್ಕಾರಪೂರ್ವಕ ಸ್ತೋತ್ರಪಠನಾದಿಗಳಿಂದ । **ಇಚ್ಛಂತಃ**— ಇಚ್ಛಿಸುತ್ತಿರುವ । **ಧೀರಾಃ**— ಪ್ರಾಜ್ಞರಾದ । **ಭೃಗವಃ**— ಭೃಗುವೇ ಮೊದಲಾದ ಋಷಿಗಳು । **ಅವಿಂದನ್**— ಅಗ್ನಿಯನ್ನು ಪಡೆದರು.

### ಭಾವಾರ್ಥ

ಉದಕಗಳ ಮಧ್ಯದಲ್ಲಿ ಅಡಗಿಕೊಂಡಿದ್ದ ಅಗ್ನಿಯನ್ನು ಹುಡುಕುವುದಕ್ಕಾಗಿ ಅಗ್ನಿಶುಶ್ರೂಷೆಯಲ್ಲಿ ಆಸಕ್ತರಾಗಿದ್ದ ಋಷಿಗಳು ಕಳ್ಳರಿಂದ ಅಪಹೃತವಾದ ಗೋವುಗಳನ್ನು ಅವುಗಳ ಪಾದಗಳ (ಹೆಜ್ಜೆ ಗುರುತು) ಗಳಿಂದ ಅನುಸರಿಸಿ ಹೋಗಿ ಹುಡುಕುವಂತೆ ಹುಡುಕಿದರು. ನೀರಿನ ಮಧ್ಯದಲ್ಲಿ ಯಾರಿಗೂ ತಿಳಿಯದಂತೆ ಗೂಢವಾಗಿ ಅಡಗಿಕೊಂಡಿದ್ದ ಅಗ್ನಿಯನ್ನು ನಮಸ್ಕಾರಗಳಿಂದಲೂ ಸ್ತೋತ್ರಗಳಿಂದಲೂ ಇಚ್ಛಿಸುತ್ತಾ (ಪ್ರಾರ್ಥಿಸುತ್ತಾ) ಪ್ರಾಜ್ಞರಾದ ಭೃಗು ಮೊದಲಾದ ಋಷಿಗಳು ಕೊನೆಗೆ ಅಗ್ನಿ ಇರುವ ಸ್ಥಾನದ ಬಳಿ ಬಂದು ಸೇರಿದರು.

## English Translation

The Rishis worshipping him, (when hiding) in the midst of the waters, followed him by his footprints (as men follow) an animal that is lost : the wise Bhrigus desiring his presence, and anxious (to find him), discovered him by their prayers lurking in the cave.

### ವಿಶೇಷವಿಷಯಗಳು

(ಹಿಂದಿನ ಋಕ್ಕಿನಲ್ಲಿ ಹೇಳಿರುವ ವಿಷಯವನ್ನೇ ಇಲ್ಲಿ ಪುನಃ ಪ್ರಕಾರಾಂತವಾಗಿ ಹೇಳಿದೆ)

**ಭೃಗವಃ ಗುಹಾ ಚತಂತಂ ಇಮಂ (ಅಗ್ನಿಂ) ಅವಿಂದನ್**— ಉದಕರೂಪವಾದ ಗುಹೆಯಲ್ಲಿ ಅಡಗಿದ್ದ

ಅಗ್ನಿಯನ್ನು ಭೃಗುಗಳು ಪ್ರಥಮತಃ ಕಂಡುಹಿಡಿದು ಅವನ ಅನುಗ್ರಹವನ್ನು ಪಡೆದರು ಎಂಬುದು ಪ್ರಕೃತವಾದ ಋಕ್ಕಿನ ತಾತ್ಪರ್ಯ. ಅಗ್ನಿಯ ಭ್ರಾತೃಗಳಿಗೆ ತೊಂದರೆಯುಂಟಾದಾಗ ಅಗ್ನಿಯು ಬೆದರಿ ಗುಹೆಯಲ್ಲಿ ಅಡಗಿಕೊಂಡಿದ್ದು ಮತ್ತು ಅವನನ್ನು ಹುಡುಕಲು ದೇವತೆಗಳು ಪ್ರಯತ್ನಿಸಿದ್ದು ಇತ್ಯಾದಿ ವಿಷಯಗಳಲ್ಲಿ ತೈತ್ತಿರೀಯಸಂಹಿತಾವಾಕ್ಯವನ್ನುದಾಹರಿಸಿ ಹಿಂದೆ ಸೂಕ್ಷ್ಮವಾಗಿ ವಿವರಿಸಲಾಗಿದೆ. **ಅಪ್** ಶಬ್ದಕ್ಕೆ ಉದಕವೆಂದೇ ಅರ್ಥವಾಗದೆ ಅಂತರಿಕ್ಷವೆಂಬ ಅರ್ಥವೂ ಇರುವುದರಿಂದ ಅಂತರಿಕ್ಷಸ್ಥನಾದ ವೈದ್ಯುತಾಗ್ನಿಯ ಪರವಾಗಿಯೂ ಈ ಸನ್ನಿವೇಶದಲ್ಲಿ ತಾತ್ಪರ್ಯವನ್ನು ಹೇಳಬಹುದು. ಹಾಗಾದರೆ ವೈದ್ಯುತಾಗ್ನಿಯು ಗುಹೆಯಲ್ಲಿ ಅಡಗಿರುವ ಸ್ವರೂಪ, ಅದು ಉಳಿದ ದೇವತೆಗಳೂ ಸಹ ಯಾರಿಗೂ ತಿಳಿಯದೆ ಭೃಗುಗಳಿಗೆ ಮಾತ್ರ ಗೋಚರವಾದ ಬಗೆ, ಆದುದರಿಂದ ಇತರ ದೇವತೆಗಳಿಗಿಂತಲೂ ಭೃಗುಗಳಿಗಿರುವ ವೈಶಿಷ್ಟ್ಯ ಇವೆಲ್ಲವನ್ನೂ ಪರಿಶೀಲಿಸಬೇಕಾಗಿರುತ್ತದೆ. ಈ ಪ್ರಕರಣವನ್ನು ಎರಡುಭಾಗವಾಗಿ ವಿಭಾಗಿಸಿ ವಿವರಿಸಲಾಗುತ್ತದೆ. ಮೊದಲನೆಯದಾಗಿ ಭೃಗುಗಳ ವೈಶಿಷ್ಟ್ಯ, ಎರಡನೆಯದಾಗಿ ಗುಹಾಂತರ್ಗತನಾಗಿದ್ದ ಅಗ್ನಿಯನ್ನು ಭೃಗುಗಳು ಹೊಂದಿದರು ಎಂಬುದರ ತಾತ್ಪರ್ಯ.

**ಭೃಗವಃ ಅವಿಂದದ್** ಎಂದಿರುವಾಗ ಭೃಗುವಂಶೋತ್ಪನ್ನರಾದ ಋಷಿಗಳೆಂದರ್ಥ. ದಿವ್ಯಾಂಶಸಂಭೂತನಾದ ಭೃಗುವಿನ ವಂಶದಲ್ಲಿ ಉತ್ಪನ್ನರಾದ ಋಷಿಗಳಲ್ಲಿ ಕೆಲವರು ಋಕ್ಸಂಹಿತೆಯ ಕೆಲವು ಸೂಕ್ತಗಳಿಗೆ ದ್ರಷ್ಟೃಗಳಾಗಿದ್ದಾರೆ. ಭೃಗುವೂ ಸಹ ಎರಡು ಸೂಕ್ತಗಳ ದ್ರಷ್ಟೃವಾಗಿದ್ದಾನೆ. ಪ್ರಸಿದ್ಧನಾದ ಈ ಭೃಗುವು ಮಾನವರ ಗುಂಪಿಗೆ ಸೇರಿದ ಅತ್ಯುತ್ತಮರಾದ ಸಪ್ತರ್ಷಿಗಳಲ್ಲಿ ಒಬ್ಬನು. (ಅತ್ರಿ, ಭೃಗು, ಕುತ್ಸ ಇತ್ಯಾದಿ) ಎಂದು ಹೇಳುವ ವಾಡಿಕೆ. ಆದರೆ, ಅತ್ರ್ಯಾದಿ ಋಷಿಗಳು ಮಾನವರಲ್ಲ. ಅವರು ಆಧ್ಯಾತ್ಮಿಕ ತತ್ತ್ವವನ್ನು ಪ್ರತಿಬಿಂಬಿಸುವ ದಿವ್ಯತತ್ತ್ವಗಳು ಎಂದು ಪ್ರಶಂಸಿಸುವ ವೈದಿಕವಾಕ್ಯಗಳೂ ಇವೆ ಅಥವಾ ಇವರೆಲ್ಲರೂ ದಿವ್ಯಾಂಶಸಂಭೂತರಾದುದರಿಂದ ದೇವತೆಗಳ ಗುಂಪಿಗೆ ಸೇರಿದವರೇ ಆಗಿದ್ದಾರೆ ಎಂದು ಹೇಳುವ ಮತವೂ ಇರುತ್ತದೆ.

**ಭೃಗುರ್ವೈ ವಾರುಣಿಃ । ವರುಣಂ ಪಿತರಮುಪಸಸಾರ ॥**

(ತೈ. ಉ. ೩-೧)

ಇತ್ಯಾದಿ ಸ್ಥಳಗಳಲ್ಲಿ ಭೃಗುವನ್ನು ವರುಣನ ಪುತ್ರನೆಂದು ಸ್ಪಷ್ಟವಾಗಿ ತಿಳಿಸಿದೆ. ವರುಣನಿಂದ ಭೃಗುವು ಹೇಗೆ ಉತ್ಪನ್ನನಾದನು ಎಂಬುದನ್ನು ತಿಳಿಸುತ್ತಾ ಬೃಹದ್ದೇವತೆಯಲ್ಲಿ ಭೃಗುವಿನ ಉತ್ಪತ್ತಿಯನ್ನು ಕಥಾರೂಪದಲ್ಲಿ ಈ ರೀತಿ ತಿಳಿಸಿದೆ.

**ತ್ರಿಸಾಂವತ್ಸರಿಕಂ ಸತ್ರಂ ಪ್ರಜಾಕಾಮಃ ಪ್ರಜಾಪತಿಃ ।**
**ಆಹರತ್ಸಹಿತಃ ಸಾಧ್ಯೈರ್ವಿಶ್ವೇದೇವೈಃ ಸಹೇತಿ ಚ ॥**

(ಬೃ. ದೇ. ೫-೯೭)

ಪ್ರಜಾಪತಿಯು ಸಂತಾನಕ್ಕಾಗಿ ಆಶಿಸಿದನು. ಆಗ ಸಾಧ್ಯರೊಂದಿಗೂ ವಿಶ್ವೇದೇವತೆಗಳೊಂದಿಗೂ ಕೂಡಿ ಮೂರು ಸಂವತ್ಸರಗಳ ಕಾಲ ಅವಧಿಯುಳ್ಳ ಸತ್ರವನ್ನು ಆಚರಿಸಿದನು.

**ತತ್ರ ವಾಗ್ದೀಕ್ಷಣೀಯಾಯಾಂ ಆಜಗಾಮ ಶರೀರಿಣೀ ।**
**ತಾಂ ದೃಷ್ಟ್ವಾ ಯುಗಪತ್ತತ್ರ ಕಸ್ಯಾಥ ವರುಣಸ್ಯ ಚ ॥**

(ಬೃ. ದೇ. ೫-೯೮)

ಆಗ ಆ ಸತ್ರಾಚರಣೆಯ ಪ್ರದೇಶಕ್ಕೆ ವಾಗ್ದೇವಿಯು ಸುಂದರವಾದ ಶರೀರಧಾರಿಣಿಯಾಗಿ ಬಂದಳು. ಆಗ ಅವಳನ್ನು ನೋಡಿದೊಡನೆಯೇ ಪ್ರಜಾಪತಿಯೂ ಮತ್ತು ವರುಣನೂ ಅವಳ ದಿವ್ಯ ಸೌಂದರ್ಯಕ್ಕೆ ಪರವಶರಾಗಿ ಮೋಹಿತರಾದರು.

**ಶುಕ್ರಂ ಚಸ್ಕಂದ ತದ್ವಾಯುರಗ್ನೌ ಪ್ರಾಸ್ಯದ್ಯದೃಚ್ಛಯಾ ।**
**ತರೋಽರ್ಚಿಭ್ಯೋ ಭೃಗುರ್ಜಜ್ಞೇ ಅಂಗಾರೇಷ್ವಂಗಿರಾ ಋಷಿಃ ॥**

(ಬೃ. ದೇ. ೫-೯೯)

ಆಗ ಅವರಿಬ್ಬರ ವೀರ್ಯಕ್ಕೂ ಸ್ಖಲನವುಂಟಾಯಿತು. ವಾಯುವು ಆ ವೀರ್ಯವನ್ನು ತನ್ನ ಶಕ್ತಿಗನುಗುಣವಾಗಿ ಅಗ್ನಿಯಲ್ಲಿ ಹರಡುವಂತೆ ಮಾಡಿದನು. ಆಗ ಆ ಜ್ವಾಲೆಯಿಂದ ಭೃಗುವು ಉತ್ಪನ್ನನಾದನು. ಅಂಗಾರಗಳಿಂದ ಅಂಗಿರಸ್ಸಿನ ಉತ್ಪತ್ತಿಯುಂಟಾಯಿತ ಎಂಬುದು ಭೃಗುವಿನ ಜನ್ಮದ ವೃತ್ತಾಂತ. ಇತಿಹಾಸರೂಪವಾದ ಈ ಸಂದರ್ಭದ ವಿವರಣೆಯಿಂದ ಭೃಗುವಿನಲ್ಲಿ ಪ್ರಜಾಪತಿ ಮತ್ತು ವರುಣರಿಬ್ಬರ ದಿವ್ಯಾಂಶವೂ ಇರುವುದೆಂದು ತಿಳಿಯುತ್ತದೆ. ಇದೇ ವಿಷಯವನ್ನು ಐತರೇಯಬ್ರಾಹ್ಮಣದಲ್ಲಿ ವಿವರಿಸುತ್ತಾ ಭೃಗುವಿನ ದಿವ್ಯಾಂಶವನ್ನು ಪ್ರಶಂಸಿಸಿದೆ. ಆದರೆ ಮೇಲೆ ತಿಳಿಸಿರುವ ವಿವರಣೆಗೂ, ಐತರೇಯಬ್ರಾಹ್ಮಣದ ವಿವರಣೆಗೂ ಅನೇಕ ವಿಷಯಗಳಲ್ಲಿ ವ್ಯತ್ಯಾಸವಿರುತ್ತದೆ.

**ಪ್ರಜಾಪತಿರ್ವೈ ಸ್ವಾಂ ದುಹಿತರಮಭ್ಯಧ್ಯಾಯತ್ ದಿವಮಿತ್ಯನ್ಯ ಆಹುರುಷಸಮಿತ್ಯನ್ಯೇ . . . . . . . . . . . ಇದಂ ಪ್ರಜಾಪತೇ ರೇತಃ ಸಿಕ್ತಮಧಾವತ್ತತ್ಸರೋಽಭವತ್ತೇ ದೇವಾ ಅಬ್ರುವನ್ಮೇದಂ ಪ್ರಜಾಪತೇ ರೇತೋಽದುಷದಿತಿ ಯದಬ್ರುವನ್ ಮೇದಂ ಪ್ರಜಾಪತೇ ರೇತೋಽದುಷದಿತಿ ತನ್ಮಾದುಷಮಭವತ್ತನ್ಮಾದುಷಸ್ಯ ಮಾದುಷತ್ವಂ ಮಾದುಷಂ ಹ ವೈ ನಾಮೈತದ್ಯನ್ಮಾನುಷಂ ತನ್ಮಾನುಷಂ ಸನ್ಮಾನುಷಮಿತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ ॥**

(ಐ. ಬ್ರಾ. ೩-೩೩)

ಪ್ರಜಾಪತಿಯು ತನ್ನ ಪುತ್ರಿಯನ್ನೇ ನೋಡಿ ಮೋಹಿಸಿದನು. ಅವಳು ದ್ಯುಲೋಕಾಧಿದೇವತೆಯೆಂದು ಕೆಲವರೂ, ಉಷಸ್ಸೆಂದು ಮತ್ತೆ ಕೆಲವರೂ ಹೇಳುತ್ತಾರೆ. ಸ್ತ್ರೀಜಿಂಕೆಯ ರೂಪವನ್ನು ತಾಳಿದ್ದ ಅವಳನ್ನು ತಾನು ಪುಂಜಿಂಕೆಯ ರೂಪವನ್ನು ಹೊಂದಿ ಹಿಂಬಾಲಿಸಿದನು. ದೇವತೆಗಳು ಪ್ರಜಾಪತಿಯ ಈ ವರ್ತನವನ್ನು ನೋಡಿ ಸಹಿಸದೆ ಅವನನ್ನು ದಂಡಿಸಲು ಸಾಧನವನ್ನು ಹುಡುಕಿದರು. ಪ್ರಜಾಪತಿಯನ್ನು ದಂಡಿಸುವವನನ್ನು ತಮ್ಮಲ್ಲಿ ಯಾರನ್ನೂ ಕಾಣಲಿಲ್ಲ. ಆಗ ಜಗತ್ತಿನ ಘೋರರೂಪಗಳನ್ನೆಲ್ಲ ಒಂದಾಗಿ ಸೇರಿಸಿ ಒಂದು ಭೂತವನ್ನು ಉತ್ಪನ್ನ ಮಾಡಿದರು. ಆಗ ಆ ಭೂತವು ಪ್ರಜಾಪತಿಯನ್ನು ಚುಚ್ಚಿದ ಕಾಲದಲ್ಲಿ ಅವನು ಮೇಲಕ್ಕೆ ಚಿಮ್ಮಿದನು. ಹಾಗೆ ಚಿಮ್ಮಿದುದರಿಂದಲೇ ಅವನನ್ನು "ಮೃಗ"ವೆಂದು ಕರೆದರು. ಸ್ತ್ರೀಜಿಂಕೆಯೇ "ರೋಹಿಣಿ" ಸಂಜ್ಞಕವಾಯಿತು. ತ್ರಿಕಾಂಡಾತ್ಮಕವಾದ ಇಷು (ಬಾಣ) ವು ಚುಚ್ಚಿದೊಡನೆಯೇ ಪ್ರಜಾಪತಿಯ ರೇತಃಸ್ಖಲನವಾಯಿತು. ಅದು ಸರೋರೂಪವಾಯಿತು. ಆಗ ದೇವತೆಗಳು "ಪ್ರಜಾಪತಿಯ ರೇತಸ್ಸು ದೂಷಿತವಾಗಕೂಡದು (ಮಾದುಷತ್" ಎಂದು ಯೋಚಿಸಿದರು. ಆದುದರಿಂದಲೇ "**ಮಾದುಷ**"ವೆಂದಾಯಿತು. "**ಮಾನುಷ**" ಎಂದರೆ ಮನುಷ್ಯನ ಸಂಬಂಧಿಯಾಯಿತು. ದೇವತೆಗಳು ಪರೋಕ್ಷಪ್ರಿಯರಾದುದರಿಂದ "**ಮಾನುಷ**"ವನ್ನು "**ಮಾದುಷ**"ವೆಂದು ಕರೆದರು.

**ತದಗ್ನಿನಾ ಪರ್ಯಾದಧುಸ್ತನ್ಮರುತೋ ಧೂನ್ವಂಸ್ತದಗ್ನಿರ್ನ ಪ್ರಾಚ್ಯಾವಯತ್ತದಗ್ನಿನಾ ವೈಶ್ವಾನರೇಣ ಪರ್ಯಾದಧುಸ್ತನ್ಮರುತೋ ಧೂನ್ವಂಸ್ತದಗ್ನಿರ್ವೈಶ್ವಾನರಃ ಪ್ರಾಚ್ಯಾವಯತ್ತಸ್ಯ ಯದ್ರೇತಸಃ ಪ್ರಥಮಮುದದೀಪ್ಯತ ತದಸಾವಾದಿತ್ಯೋಽಭವದ್ಯದ್ದ್ವಿತೀಯಮಾಸೀತ್ತದ್ಭೃಗುರಭವತ್ತಂ ವರುಣೋ ನ್ಯಗೃಹ್ಣೀತ ತಸ್ಮಾತ್ಸ ಭೃಗುರ್ವಾರುಣಿರಥ ಯತ್ತೃತೀಯಮದೀದೇದಿವ ತ ಆದಿತ್ಯಾ ಅಭವನ್ಯೇಽಂಗಾರಾ ಆಸಂಸ್ತೇಽಂಗಿರಸೋ ಅಭವನ್ ||**

(ಐ. ಬ್ರಾ. ೨-೨೪)

ಪ್ರಜಾಪತಿಯ ರೇತಸ್ಸು ದೂಷಿತವಾಗಕೂಡದು ಎಂಬ ಸದುದ್ದೇಶದಿಂದ ಅದರ ಸುತ್ತಲೂ ಅಗ್ನಿಯು ವ್ಯಾಪಿಸುವಂತೆ ಮಾಡಿದರು. ಆಗ ಆ ಅಗ್ನಿಯನ್ನು ಮರುತ್ತುಗಳು ಊದಿ ಪ್ರಜ್ವಲಿಸುವಂತೆ ಮಾಡಿದರು. ಅಗ್ನಿಗೆ ಅದನ್ನು ಚಲಿಸುವಂತೆ ಮಾಡಲಾಗಲಿಲ್ಲ. ಆಗ ಅಗ್ನಿವೈಶ್ವಾನರನಿಂದ ಸುತ್ತುವರೆಯಲ್ಪಡುವಂತೆ ಮಾಡಿದರು. ಮತ್ತು ಆ ಅಗ್ನಿವೈಶ್ವಾನರನನ್ನು ಊದಿ ಪ್ರಜ್ವಲಿಸುವಂತೆ ಮಾಡಿದರು. ಆಗ ಅಗ್ನಿವೈಶ್ವಾನರನಿಗೆ ಅದನ್ನು ಚಲಿಸುವಂತೆ ಮಾಡಲು ಸಾಧ್ಯವಾಯಿತು. ಪ್ರಜ್ವಲಿತವಾಗಿ ಮಾಡಲ್ಪಟ್ಟ ಪ್ರಜಾಪತಿಯ ರೇತಸ್ಸಿನ ಒಂದು ಭಾಗವು ಆದಿತ್ಯ ರೂಪದಲ್ಲಿ ಪರಿವರ್ತಿತವಾಯಿತು. ಇನ್ನೊಂದು ಭಾಗವು ಭೃಗುರೂಪದಲ್ಲಿ ಆವಿರ್ಭೂತವಾಯಿತು. ಅದನ್ನು ವರುಣನು ಪರಿಗ್ರಹಿಸಿದನು. ಆದುದರಿಂದಲೇ **ಭೃಗುರ್ವಾರುಣಿಃ** ಎಂದು ಪ್ರಸಿದ್ಧವಾಯಿತು.

ಯಾವ ಭೃಗುವನ್ನು ತೈತ್ತಿರೀಯ ಮತ್ತು ಶತಪಥಬ್ರಾಹ್ಮಣಗಳಲ್ಲಿ ಪ್ರಜಾಪತಿಯ ರೇತಸ್ಸಿನಿಂದ ಪ್ರಾದುರ್ಭೂತನೂ ಮತ್ತು ವರುಣನಿಂದ ಪರಿಗೃಹೀತನೂ ಆದವನೆಂದು ತಿಳಿಸಿದೆಯೋ ಅವನನ್ನೇ ತೈತ್ತಿರೀಯ ಬ್ರಾಹ್ಮಣದಲ್ಲಿ ಇಂದ್ರರೂಪನಾದ ಈಶ್ವರನ ಅಂಶವೆಂದು ತಿಳಿಸಿದೆ.

**ಇಂದ್ರಸ್ಯ ಸುಷುವಾಣಸ್ಯ ತ್ರೇಧೇಂದ್ರಿಯಂ ವೀರ್ಯಂ ಪರಾಪತೇತ್ | ಭೃಗುಸ್ತೃತೀಯಮಭವತ್ | ಶ್ರಾಯಂತೀಯಂ ತೃತೀಯಂ | ಸರಸ್ವತೀ ತೃತೀಯಂ | ಭಾರ್ಗವೋ ಹೋತಾ ಭವತಿ | ಶ್ರಾಯಂತೀಯಂ ಬ್ರಹ್ಮಸಾಮಂ ಭವತಿ | ವಾರವಂತೀಯಮಗ್ನಿಷ್ಟೋಮಸಾಮಂ ||**

(ತೈ. ಬ್ರಾ. ೧-೮-೨-೫)

ಯಜ್ಞೇಚ್ಛುವಾದ ಇಂದ್ರನ ವೀರ್ಯವು ಮೂರು ಭಾಗವಾಗಿ ವಿಭಕ್ತವಾಗಿ ಸ್ಖಲಿತವಾಯಿತು. ಅದರ ಮೂರನೆ ಒಂದು ಭಾಗದಿಂದ ಭೃಗುವೂ, ಇನ್ನೊಂದರಿಂದ ಶ್ರಾಯಂತೀಯಸಾಮವೂ ಉಳಿದ ಮೂರನೆಯ ಭಾಗದಿಂದ ಸರಸ್ವತಿಯೂ ಆವಿರ್ಭೂತರಾದರು. ಅದರಲ್ಲಿ ಭಾರ್ಗವನು ಹೋತೃವು.

ಭೃಗುವಿನ ಉತ್ಪತ್ತಿಯ ವಿಷಯದಲ್ಲಿ ಈ ರೀತಿ ಭಿನ್ನಾಭಿಪ್ರಾಯಗಳಿದ್ದರೂ ಅವನು ದಿವ್ಯಾಂಶಸಂಭೂತನೆಂಬುದರ ವಿಷಯದಲ್ಲಿ ಎಲ್ಲಿಯೂ ಮತಭೇದವಿರುವುದಿಲ್ಲ. ಆದರೂ ಸಹ ಭೃಗುವು ತನ್ನ ಅಜ್ಞಾನವನ್ನು ಪ್ರಕಾಶಪಡಿಸುತ್ತಾನೆಂಬುದು ಕೆಲವೆಡೆಗಳಲ್ಲಿ ವ್ಯಕ್ತವಾಗಿದೆ. ಉದಾಹರಣೆಗೆ—

**ಭೃಗುರ್ಹ ವೈ ವಾರುಣಿಃ | ವರುಣಂ ಪಿತರಂ ವಿದ್ಯಯಾತಿಮೇನೇ ತದ್ಧ ವರುಣೋ ವಿದಾಂ ಚಕಾರಾತಿ ವೈ ಮಾ ವಿದ್ಯಯಾ ಮನ್ಯತ ಇತಿ | ಸ ಹೋವಾಚ | ಪ್ರಾಙ್ ಪುತ್ರಕ ವ್ರಜತಾತ್ತತ್ರ ಯತ್ಪಶ್ಯೇಸ್ತದ್ದೃಷ್ಟ್ವಾ ದಕ್ಷಿಣಾ ವ್ರಜತಾತ್ತತ್ರ ಯತ್ಪಶ್ಯೇತ್ತದ್ದೃಷ್ಟ್ವಾ . . . ನೋ ಆಚಕ್ಷೀಯಾ ಇತಿ ||**

(ಶ. ಬ್ರಾ. ೧೧-೬-೧-೧)

ವರುಣಪುತ್ರನಾದ ಭೃಗುವು ತನ್ನ ಪಿತೃವಾದ ವರುಣನಿಗಿಂತಲೂ ತಾನೇ ಅಧಿಕವಾದ ಜ್ಞಾನಿಯೆಂದು ತಿಳಿದನು. ವರುಣನಿಗೆ ಭೃಗುವಿನ ಈ ಪ್ರಾಜ್ಞಂಮನ್ಯತ್ವವು ತಿಳಿಯಿತು. ಇವನು ಜ್ಞಾನದಲ್ಲಿ ನನಗಿಂತಲೂ ಅಧಿಕನೆಂದು ತಿಳಿದಿದ್ದಾನೆ ಎಂದು ಅರ್ಥಮಾಡಿಕೊಂಡನು.

ಆಗ ಪುತ್ರನಾದ ಭೃಗುವನ್ನು ಕರೆದು " ಮಗುವೇ, ನೀನು ಸರ್ವದಿಕ್ಕಿನಲ್ಲಿಯೂ ಸಂಚರಿಸಿ ಬಾ. ಮೊದಲು ಪೂರ್ವದಿಕ್ಕಿಗೆ ಹೋಗಿ ಅಲ್ಲಿ ಏನು ನೋಡುವೆಯೋ ಅದನ್ನು ತಿಳಿದುಬಂದು ನನಗೆ ಹೇಳು. ಅನಂತರ ದಕ್ಷಿಣಕ್ಕೂ, ಆದಾದಮೇಲೆ ಪಶ್ಚಿಮ ಮತ್ತು ಉತ್ತರದಿಕ್ಕುಗಳಿಗೂ ಕೊನೆಯಲ್ಲಿ ಈಶಾನ್ಯದಿಕ್ಕಿಗೂ ಹೋಗಿ ಅಲ್ಲಿ ಅಲ್ಲಿ ನಡೆಯತಕ್ಕ ವ್ಯವಹಾರಗಳನ್ನು ಪ್ರತ್ಯಕ್ಷತಃ ನೋಡಿ ಅವನ್ನು ನನಗೆ ತಿಳಿಸು ಎಂದು ಆಜ್ಞಾಪಿಸಿದನು. ಆಗ ಭೃಗುವು ಸಕಲ ದಿಕ್ಕುಗಳಲ್ಲಿಯೂ ಸಂಚರಿಸಿ ಎಲ್ಲಾ ದಿಕ್ಕುಗಳಲ್ಲಿರುವ ಪ್ರಜೆಗಳೂ ದ್ವೇಷಾಸೂಯೆಗಳಿಂದ ಕೂಡಿರುವುದನ್ನೂ, ಒಬ್ಬರನ್ನೊಬ್ಬರು ಹಿಂಸಿಸುತ್ತಿರುವುದನ್ನೂ, ಪರಸ್ಪರ ಹಂತಕರಾಗಿರುವುದನ್ನೂ ಕಂಡನು. ಅದರಿಂದ ಚಕಿತನಾಗಿ ಪುನಃ ಹಿಂತಿರುಗಿಬಂದು ಅದನ್ನೆಲ್ಲ ತಂದೆಗೆ ತಿಳಿಸಿದನು. ಆಗ ತಂದೆಯು ಅವೆಲ್ಲವೂ ಸಂಸಾರದ ಲಕ್ಷಣಗಳೆಂದೂ ಅಗ್ನಿಹೋತ್ರಾದಿ ಕರ್ಮಗಳ ಮೂಲಕ ಜ್ಞಾನವನ್ನು ಸಂಪಾದಿಸಿದರೆ ಈ ಭೀಕರವಾದ ಸಂಸಾರದಿಂದ ತಪ್ಪಿಸಿಕೊಳ್ಳಬಹುದೆಂದೂ ಹೇಳುತ್ತಾನೆ. ಹೀಗೆ ಭೃಗುವಿಗೆ ವರುಣನ ಉಪದೇಶವಿರುತ್ತದೆ. ತೈತ್ತಿರೀಯೋಪನಿಷತ್ತಿನಲ್ಲಿ ವಿವೃತವಾದ ತತ್ತ್ವೋಪದೇಶಕ್ಕೂ, ಇಲ್ಲಿರುವ ತತ್ತ್ವೋಪದೇಶಕ್ಕೂ ಅನೇಕ ವ್ಯತ್ಯಾಸಗಳಿರುತ್ತವೆ. ಇನ್ನು ಕೆಲವೆಡೆಗಳಲ್ಲಿ ಯಜ್ಞತತ್ತ್ವವನ್ನರಿತ ಋಷಿಯೆಂದು ಭೃಗುವನ್ನು ಪ್ರಶಂಸಿಸಿದೆ.

**" . . . . . ಆಪೋ ವಾ ಅಸ್ಪರ್ಧಂತ ವಯಂ ಪೂರ್ವಂ ಯಜ್ಞಂ ವಕ್ಷ್ಯಾಮೋ ವಯಮಿತಿ ಯಾಶ್ಚೇಮಾಃ ಪೂರ್ವೇದ್ಯುರ್ವಸತೀವರ್ಯೋ ಗೃಹ್ಯಂತೇ ಯಾಶ್ಚ ಪ್ರಾತರೇಕಧನಾಸ್ತಾ ಭೃಗುರಪಶ್ಯದಾಪೋ ವೈ ಸ್ಪರ್ಧಂತ ಇತಿ ತಾ ಏತಯರ್ಚಾಸಮಜ್ಞಪಯತ್ಸಮನ್ಯಾಯಂತೀ . . . .**

(ಐ. ಬ್ರಾ. ೨-೨೦)

ಹಿಂದಿನದಿನ ಶೇಖರಿಸಲ್ಪಟ್ಟ **ವಸತೀ**ವರೀಸಂಜ್ಞಕವಾದ ಉದಕಗಳಿಗೂ ಮತ್ತು ಆ ದಿನ ಪ್ರಾತಃಕಾಲದಲ್ಲಿ ಶೇಖರಿಸಲ್ಪಟ್ಟ **ಏಕಧನಾ**ಸಂಜ್ಞಕವಾದ ಉದಕಗಳಿಗೂ ಒಂದುಸಲ ಯಜ್ಞವನ್ನು ವಹಿಸುವ ಕಾರ್ಯದಲ್ಲಿ ಸ್ಪರ್ಧೆಯುಂಟಾಯಿತು. ಅವುಗಳಲ್ಲಿ ವೈಮನಸ್ಯವುಂಟಾದಾಗ ಯಜ್ಞಕಾರ್ಯವು ನಿರ್ವಿಘ್ನವಾಗಿ ನಡೆಯಲು ತೊಂದರೆಯಾಯಿತು. ಆಗ ಭೃಗುವು ಈ ಉದಕಗಳ ವೈಮನಸ್ಯವನ್ನರಿತು " **ಆಪೋ ನ ದೇವೀರುಪ ಯಂತಿ** " ಎಂಬ ಮಂತ್ರವನ್ನು ಪಠಿಸಿ (ಋ. ಸಂ. ೧-೮೨-೨) ಅವುಗಳಲ್ಲಿ ಸಾಮರಸ್ಯವನ್ನುಂಟುಮಾಡಿದನು ಎಂದು ತಿಳಿಸಿದೆ.

ಒಟ್ಟಿನಲ್ಲಿ ಭೃಗುವು ದಿವ್ಯಾಂಶಸಂಭೂತನೆಂದೂ, ದಿವ್ಯಜ್ಞಾನಿಯೆಂದೂ ಅನೇಕ ಶ್ರುತಿವಾಕ್ಯಗಳಲ್ಲಿ ಇವನ ಮಹತ್ತ್ವವು ಪ್ರಶಂಸಿತವಾಗಿವೆ. ಋಕ್ಸಂಹಿತೆಯಲ್ಲಿ ೯-೬೫ ಮತ್ತು ೧೦-೧೯ನೇ ಸೂಕ್ತಗಳ ಕರ್ತೃವೆಂದು ಪ್ರಸಿದ್ಧನಾಗಿದ್ದಾನೆ.

ಅಲ್ಲದೆ, ಉತ್ತಮವಾದ ಯಜ್ಞನಿರ್ವಹಣಕಾರ್ಯದಲ್ಲಿ ಭೃಗುವೇ ಮಾನವರಿಗೆಲ್ಲ ಆದರ್ಶಪುರುಷನೆಂದು ಪ್ರಶಂಸಿತನಾಗಿದ್ದಾನೆ. ಉದಾಹರಣೆಗೆ—

**ಉತ ತ್ವಾ ಭೃಗುವಚ್ಛುಚೇ ಮನುಷ್ವದಗ್ನ ಆಹುತ । ಅಂಗಿರಸ್ವದ್ಧವಾಮಹೇ ॥**

(ಋ. ಸಂ. ೮-೪೩-೧೩)

ಎಲೈ ಪರಿಶುದ್ಧನಾದ ಅಗ್ನಿಯೇ, ಭೃಗುಮಹರ್ಷಿಯಂತೆಯೂ, ಮನುವಿನಂತೆಯೂ, ಅಂಗಿರಸ್ಸುಗಳಂತೆಯೂ ನಿನ್ನನ್ನು ಪೂಜಿಸಿ ತೃಪ್ತಿಪಡಿಸುತ್ತೇವೆ. ನಮ್ಮ ಸಹಾಯಕ್ಕೆ ಕರೆಯುತ್ತೇವೆ. ಇತ್ಯಾದಿಯಾಗಿ ಕರ್ಮಾಚರಣೆಯಲ್ಲಿ ಭೃಗುವಿನ ಮಾರ್ಗದರ್ಶಿತ್ವವನ್ನು ತೋರಿಸಿದೆ.

ಕರ್ಮಶ್ರೇಷ್ಠನೂ, ಪ್ರಾಜ್ಞನೂ ಆದ ಈ ಭೃಗುಮಹರ್ಷಿಯ ವಂಶದಲ್ಲಿ ಉತ್ಪನ್ನರಾದ ಋಷಿಗಳೂ ಭೃಗುಗಳೆಂದೇ ಪ್ರಸಿದ್ಧರಾಗಿದ್ದಾರೆ. ಇವರಲ್ಲಿ ಕೆಲವರು ಋಕ್ಸಂಹಿತೆಯ ಕೆಲವು ಸೂಕ್ತಗಳ ದ್ರಷ್ಟೃಗಳೆಂದು ಪ್ರಸಿದ್ಧರಾಗಿದ್ದಾರೆ. ಇವರಾರೆಂದರೆ—

| | | | |
|---|---|---|---|
| ೧) | ಇಟಭಾರ್ಗವಃ | ಋ. ಸಂ. | ೧೦-೧೭೧ |
| ೨) | ಕವಿಭಾರ್ಗವಃ | ,, | ೯-೪೭-೪೯; ೯-೭೫-೭೯ |
| ೩) | ಕೃತ್ಸ್ನುಭಾರ್ಗವಃ | ,, | ೮-೭೯ |
| ೪) | ಗೃತ್ಸಮದೋ ಭಾರ್ಗವಃ | ,, | ೨.೧-೩; ೨-೮೪೩; ೯-೮೬-೪೬-೪೭-೪೮ |
| | (ಶೌನಕಃ) | ,, | |
| ೫) | ಚ್ಯವನೋಭಾರ್ಗವಃ | ,, | ೧೦-೧೯ |
| ೬) | ಜಮದಗ್ನಿಭಾರ್ಗವಃ | ,, | ೩-೬೨-೧೬,೧೭,೧೮; ೮-೧೦೧; ೯-೯೨; ೯-೯೫; ೯-೬೭-೧೬,೧೭-೧೮; ೧೦-೧೧೦; ೧೦-೧೩೭-೬; ೧೦-೧೬೭ |
| ೭) | ನೇಮೋ ಭಾರ್ಗವಃ | ,, | ೮-೧೦೦-೧,೨,೩; ೬-೧೨ |
| ೮) | ಪ್ರಯೋಗೋ ಭಾರ್ಗವಃ | ,, | ೮-೧೦೨ |
| ೯) | ವೇನೋ ಭಾರ್ಗವಃ | ,, | ೯-೮೫; ೧೦-೧೨೩ |
| ೧೦) | ಸೋಮಾಹುತಿಭಾರ್ಗವಃ | ,, | ೨-೪-೫,೬,೭ |
| ೧೧) | ಸ್ಯೂಮರಶ್ಮಿಃಭಾರ್ಗವಃ | ,, | ೧೦-೭೭; ೧೦-೭೮ |

ಭೃಗುವು ಯಾವರೀತಿ ಕರ್ಮಕುಶಲನೋ ಹಾಗೆಯೇ ಭೃಗುವಂಶೋತ್ಪನ್ನರಾದ ಈ ಮಹರ್ಷಿಗಳೂ ಸಹ ಕರ್ಮಕುಶಲರೆಂದು ಪ್ರಸಿದ್ಧರಾಗಿದ್ದಾರೆ. ಇವರ ಕರ್ಮಕುಶಲತೆಯನ್ನು ಪ್ರಶಂಸಿಸುತ್ತ ಸಾಯಣರು **ಈ ರೀತಿ** ವಿವರಿಸಿದ್ದಾರೆ

**ಏತಂ ವಾಂ ಸ್ತೋಮಮಶ್ವಿನಾವಕರ್ಮಾತಕ್ಷಾಮ ಭೃಗವೋ ನ ರಥಂ ।**
**ನ್ಯಮೃಕ್ಷಾಮ ಯೋಷಣಾಂ ನ ಮರ್ಯೇ ನಿತ್ಯಂ ನ ಸೂನುಂ ತನಯಂ ದಧಾನಾಃ ॥**

(ಋ. ಸಂ. ೧೦-೩೯-೧೪)

ಎಂಬ ಋಕ್ಕಿನಲ್ಲಿ ಭೃಗುಗಳ ಕರ್ಮಕುಶಲತೆಯನ್ನು ವಿವರಿಸಿದೆ. ಇಲ್ಲಿ **ಭೃಗವಃ** ಎಂಬ ಶಬ್ದದ ನಿರ್ವಚನವನ್ನು ತಿಳಿಸುತ್ತ ಸಾಯಣರು " **ಕರ್ಮಯೋಗಾದ್ಭೃಭವೋ ಭೃಗವ ಉಚ್ಯಂತೇ** " ಎಂದು ವಿವರಿಸಿದ್ದಾರೆ.

ಋಭುಗಳ ಕರ್ಮಕುಶಲತೆಯನ್ನು ಹಿಂದೆ ವಿಶದವಾಗಿ ವಿಮರ್ಶಿಸಿ ತಿಳಿಸಿದೆ. ಇಲ್ಲಿ ಭೃಗುಗಳ ವೈಶಿಷ್ಟ್ಯವನ್ನು ತಿಳಿಸಿದೆ. ಇದೇ ರೀತಿ—

**ಏವೇದಿಂದ್ರಾಯ ವೃಷಭಾಯ ವೃಷ್ಣೇ ಬ್ರಹ್ಮಾಕರ್ಮ ಭೃಗವೋ ನ ರಥಂ ।**
**ನ ಚಿದ್ಯದಾ ನಃ ಸಖ್ಯಾ ವಿಯೋಷದಸನ್ನ ಉಗ್ರೋಽವಿತಾ ತನೂಪಾಃ ॥**

(ಋ. ಸಂ. ೪-೧೬-೨೦)

ಎಂಬಲ್ಲಿ ಭೃಗುಶಬ್ದಕ್ಕೆ ಪ್ರಕಾಶಮಾನವಾದ ತಕ್ಷರು (ಮರಕೆಲಸದವರು) ಎಂದು ಅರ್ಥಮಾಡಿದೆ. ಹೀಗೆ ಋಭುಗಳು ಯಾವ ಶಕ್ತಿಯಿಂದ ಪ್ರಸಿದ್ಧರೋ ಅದರಂತೆಯೇ ಭೃಗುಗಳೂ ಅದೇ ಶಕ್ತಿಯಿಂದ ಪ್ರಸಿದ್ಧರು. ಋಭುಗಳಿಗಿರುವಂತೆಯೇ, ಭೃಗುಗಳಿಗೂ ಸಹ ದೇವತೆಗಳೊಡನೆ ಯಜ್ಞಭಾಗವಿರುತ್ತದೆ.

**ವಿಶ್ವೈರ್ದೇವೈಸ್ತ್ರಿಭಿರೇಕಾದಶೈರಿಹಾದ್ಭಿರ್ಮರುದ್ಭಿರ್ಭೃಗುಭಿಃ ಸಚಾಭುವಾ ।**
**ಸಜೋಷಸಾ ಉಷಸಾ ಸೂರ್ಯೇಣ ಚ ಸೋಮಂ ಪಿಬತಮಶ್ವಿನಾ ॥**

(ಋ. ಸಂ. ೮-೩೫-೩)

ಎಲೈ ಅಶ್ವಿನೀದೇವತೆಗಳೇ, ಈ ಯಜ್ಞದಲ್ಲಿ ನೀವು ಸಕಲ ದೇವತೆಗಳೊಡನೆಯೂ, ಮರುತ್ತುಗಳೊಡನೆಯೂ, ಭೃಗುಗಳೊಂದಿಗೂ, ಉಷಸ್ಸಿನೊಂದಿಗೂ ಕೂಡಿಕೊಂಡು ಸೋಮವನ್ನು ಪಾನಮಾಡಿರಿ ಎಂದಿರುವ ಸನ್ನಿವೇಶಗಳಲ್ಲಿ ಭೃಗುಗಳಿಗೆ ದೇವತೆಗಳೊಡನೆ ಇರುವ ಯಜ್ಞಭಾಗವು ಸ್ಪಷ್ಟವಾಗಿರುತ್ತದೆ.

ಭೃಗುವೂ ಭೃಗುವಂಶೋತ್ಪನ್ನರಾದ ಋಷಿಗಳೂ ಪ್ರಥಮತಃ ಯಜ್ಞವನ್ನು ಸ್ಥಾಪಿಸಿದವರೆಂದು ಪ್ರಸಿದ್ಧರಾಗಿದ್ದಾರೆ. ಯಜ್ಞಕ್ಕೆ ಮೂಲರೂಪನಾದ ಅಗ್ನಿಯ ಅನುಗ್ರಹವು ಭೃಗುಮಹರ್ಷಿಗಳಿಗೆ ಲಬ್ಧವಾದಷ್ಟು ಇನ್ನಾರಿಗೂ ಲಭಿಸಲಿಲ್ಲ. ಈ ಋಷಿಗಳಿಗೂ ಅಗ್ನಿಗೂ ಇರುವ ಸಂಬಂಧವು ಎಷ್ಟು ನಿಕಟವೂ, ಪವಿತ್ರವೂ ಆದುದೆಂದು ಕೆಲವು ಉದಾಹರಣೆಗಳಿಂದ ನೋಡಬಹುದು.

೧) ಮಾತರಿಶ್ವನು ಅಗ್ನಿಯನ್ನು ಪ್ರಥಮತಃ ಭೃಗುಗಳಿಗೆ ತಂದುಕೊಟ್ಟನು.

(ಋ. ಸಂ. ೧-೬೦-೧)

೨) ಎಲೈ ಅಗ್ನಿಯೇ, ನಿನ್ನನ್ನು ಮಾನವರ ನಡುವೆ ಪ್ರಥಮತಃ ಸ್ಥಾಪಿಸಿದವರು ಭೃಗುಗಳು.

(ಋ. ಸಂ. ೧–೫೮–೬; ೬-೧೫-೨)

೩) ಭೃಗುಗಳಿಗೆ ಇಷ್ಟಾರ್ಥಪ್ರದನಾದ ಅಗ್ನಿಯನ್ನು ಪ್ರಾರ್ಥಿಸಿ ಅಪೇಕ್ಷಿಸುತ್ತೀವೆ.

(ಋ. ಸಂ. ೩–೨–೪)

೪). ಕರ್ಮನಿರತರಾದ ಋಭುಗಳು ಅಗ್ನಿಯನ್ನು ತೇಜೋಯುತನಾಗುವಂತೆ ಮಾಡಿದರು.

೫) ಭೃಗುಗಳು ತಮ್ಮ ಸ್ತುತಿಗಳಿಂದ ಅಗ್ನಿಯನ್ನು ಪ್ರಭಾಯುತನನ್ನಾಗಿ ಮಾಡಿದರು.

(೧೦-೧೨೨-೫)

ಇತ್ಯಾದ್ಯನೇಕ-ವಾಕ್ಯಗಳಲ್ಲಿ ಭೃಗುವಂಶೋತ್ಪನ್ನರಾದ ಋಷಿಗಳು ಅಗ್ನಿಯನ್ನು ಪೂಜಿಸಿ ಮಾನವರಲ್ಲಿ ಮಾನವರ ಶ್ರೇಯಸ್ಸಾಧನೆಗಾಗಿ ಯಜ್ಞವನ್ನು ಸ್ಥಾಪಿಸಿದ ವಿಷಯವನ್ನು ಪ್ರಶಂಸಿಸಿದೆ. ಸಾಯಣರು ಇದೇ ಮಾಹಾತ್ಮ್ಯವನ್ನು ತಿಳಿಸುವಂತೆ **ಭೃಗವಃ** ಎಂಬ ಪದದ ನಿರ್ವಚನವನ್ನು ಈ ರೀತಿ ತಿಳಿಸಿದ್ದಾರೆ.

**ಭೃಗವಃ—ಭ್ರಷ್ಟಾರೋ ಹವಿಷಾಂ ಪಾಪಾನಾಂ ಭರ್ಜಕಾ ವಾ ।**

ಹವಿಸ್ಸುಗಳನ್ನು ಅರ್ಪಿಸುವವರು ಎಂದಾಗಲೀ ಅಥವಾ ಪಾಪವನ್ನು ನಾಶಮಾಡುವವರು ಎಂದಾಗಲೀ ಅರ್ಥವಾಗುವುದರಿಂದಲೂ ಈ ಋಷಿಗಳಿಗೆ ಈ ಎರಡು ವಿಧವಾದ ಶಕ್ತಿಗಳು ಇದ್ದುದರಿಂದಲೂ ಇವರಿಗೆ ಈ ಹೆಸರೆಂದು ಸಾಯಣರು ವಿವರಿಸಿದ್ದಾರೆ. ನಿರುಕ್ತಕಾರರೂ,

**" ಅರ್ಚಿಷಿ ಭೃಗುಃ ಸಂಬಭೂವ ಭೃಗುರ್ಭೃಜ್ಯಮಾನೋ ನ ದೇಹೇ । "**

(ನಿರುಕ್ತ-೩-೧೭)

ಜ್ವಾಲೋತ್ಪನ್ನನಾದ ಭೃಗುವು ಅಗ್ನಿಯ ಜ್ವಾಲೆಯಿಂದ ಉತ್ಪನ್ನನಾದನು. ಅಂದರೆ ಅಗ್ನಿಯ ಜ್ವಾಲೆಯೊಳಗೆ ಕುದಿಯುತ್ತಿದ್ದರೂ ದಗ್ಧನಾಗಲಿಲ್ಲ. ಆದುದರಿಂದ ಈ ಹೆಸರು ಎಂಬ [illegible] ಸೂಚಿಸುವ ತಾತ್ಪರ್ಯವನ್ನು ಹೇಳಿದ್ದಾರೆ. ಈ ಅದ್ಭುತವಾದ ಶಕ್ತಿಯು ಮಹತ್ತಾದ ಯಜ್ಞಕರ್ಮಕ್ಕೆ ಸಹಾಯಮಾಡುವಂತೆಯೇ ಪಾಪನಾಶಕ್ಕೂ ಸಹಾಯಮಾಡುತ್ತದೆ. " **ತೇಜೋ ಯದ್ಭೃಗುರಂಗಿರಸಾಂ** " (ಶ. ಬ್ರಾ. ೧-೨-೧-೧೩) ಇತ್ಯಾದಿ ವಾಕ್ಯಗಳಿಂದ ಈ ಮಹತ್ತ್ವವು ಪ್ರಶಂಸಿತವಾಗಿದೆ.

ಇಂತಹ ಮಹತ್ತ್ವವುಳ್ಳ ಭೃಗುಗಳು ಗುಹೆಯಲ್ಲಿ ಅಡಗಿದ್ದ ಅಗ್ನಿಯನ್ನು ಕಂಡುಹಿಡಿದರು ಎಂದು ಪ್ರಕೃತವಾದ ಋಕ್ಕಿನಲ್ಲಿ ತಿಳಿಸಿದೆ. ಅಗ್ನಿಯು ಗುಹೆಯಲ್ಲಿ ಅಡಗಿರಬೇಕಾದ ಕಾರಣವೇನು ಅಥವಾ ಅದರ ಅರ್ಥವೇನು ಮತ್ತು ರಹಸ್ಯಸ್ಥಾನದಲ್ಲಿ ಅಡಗಿದ್ದ ಅಗ್ನಿಯನ್ನು ಭೃಗುಗಳು ಹೊಂದಿದರು ಎಂಬುದರ ತಾತ್ಪರ್ಯವೇನು ? ಈ ಎರಡು ವಿಷಯಗಳನ್ನೂ ಇಲ್ಲಿ ಪರಿಶೀಲಿಸಲಾಗುತ್ತದೆ.

ಅಗ್ನಿಯು ಗುಹೆಯಲ್ಲಿ ಅಂತರ್ಗತನಾಗಿದ್ದ ವಿಷಯವನ್ನು ಬೇರೆಬೇರೆ ಕಡೆಗಳಲ್ಲಿ ಬೇರೆಬೇರೆ ರೀತಿಯಲ್ಲಿ ವರ್ಣಿಸಿದೆ. ಅಗ್ನಿಯ ಭ್ರಾತೃಗಳಿಗೆ ತೊಂದರೆಯು ಸಂಭವಿಸಿದಾಗ ಅಗ್ನಿಯು ಭೀತಿಯಿಂದ ರಹಸ್ಯಪ್ರದೇಶದಲ್ಲಿ ಅಡಗಿಕೊಂಡುದನ್ನೂ ದೇವತೆಗಳು ಅಗ್ನಿಯನ್ನು ಪ್ರಾರ್ಥಿಸಿದುದನ್ನೂ ತೈತ್ತಿರೀಯ ಸಂಹಿತಾವಾಕ್ಯಗಳನ್ನುದಾಹರಿಸಿ ಹಿಂದೆ ವಿವರಿಸಿದೆ. ಇದೇರೀತಿ ಗುಹಾಂತರ್ಗತನಾದುದನ್ನು ಶತಪಥಬ್ರಾಹ್ಮಣದಲ್ಲಿ ಈ ರೀತಿ ವಿವರಿಸಿದೆ.

**ಚತುರ್ಧಾ ವಿಹಿತೋ ಹ ವಾ ಅಗ್ರೇಽಗ್ನಿರಾಸ । ಸ ಯಮಗ್ರೇಽಗ್ನಿಗ್ಂ ಹೋತ್ರಾಯ ಪ್ರಾವೃಣತ ಸ ಪ್ರಾಧನ್ವದ್ಯಂ ದ್ವಿತೀಯಂ ಪ್ರಾವೃಣತ ಸ ಪ್ರೈವಾಧನ್ವದ್ಯಂ ತೃತೀಯಂ ಪ್ರಾವೃಣತ ಸ ಪ್ರೈವಾಧನ್ವದಥ ಯೋಽಯಮೇತರ್ಹ್ಯಗ್ನಿಃ ಸ ಭೀಷಾ ನಿಲಿಲ್ಯೇ ಸೋಽಪಃ ಪ್ರವಿವೇಶ ತಂ ದೇವಾ ಅನುವಿದ್ಯ ಸಹಸೈವಾದ್ಭ್ಯ ಆನಿನ್ಯುಃ ಸೋಽಪೋಽಭಿತಿಷ್ಠೇವಾವಷ್ಟ್ಯೂತಾ ಸ್ಥ ಯಾ ಅಪ್ರಪದನಗ್ಗ್ಸ್ಥ ಯಾಭ್ಯೋ ವೋ ಮಾಮಕಾಮಂ ನಯಂತೀತಿ ತತ ಆಪ್ತ್ಯಾಃ ಸಂಬಭೂವುಸ್ತ್ರಿತೋ ದ್ವಿತ ಏಕತಃ ॥**

(ಶ. ಬ್ರಾ. ೧-೨-೩-೧)

ಈ ವಾಕ್ಯಗಳಲ್ಲಿ ಅಗ್ನಿಯ ಮೂರು ಭ್ರಾತೃಗಳ ವಿಷಯವಿಲ್ಲ. ಆದರೆ ಅಗ್ನಿಯ ಮೂರು ರೂಪಾಂತರಗಳು ಬೇರೆಬೇರೆಯಾಗಿ ವರ್ಣಿತವಾಗಿವೆ. ಈ ಸನ್ನಿವೇಶವು ಈ ರೀತಿ ಇದೆ

ಅಗ್ನಿಯು ನಾಲ್ಕುರೂಪಗಳನ್ನು ಹೊಂದಿದನು. ಆಗ ಪ್ರಥಮದಲ್ಲಿ ಅಗ್ನಿಯನ್ನು ಹೋತೃಸ್ಥಾನವನ್ನಲಂಕರಿಸಲು ಪ್ರಾರ್ಥಿಸಿದರು. ಪ್ರಥಮತಃ ಪ್ರಾರ್ಥಿತನಾದ ಅಗ್ನಿಯು ಅದೃಶ್ಯನಾದನು. ಎರಡನೆಯ ಸಲ ಪ್ರಾರ್ಥಿತನಾದಾಗಲೂ ಅದೃಶ್ಯನಾದನು. ಮೂರನೆಯಸಲ ಪ್ರಾರ್ಥಿತನಾದಾಗಲೂ ಅದೃಶ್ಯನಾದನು. ಆಗ ಅದನ್ನು ನೋಡಿ ಅಗ್ನಿಯ ನಾಲ್ಕನೆಯ ರೂಪವೂ ರಹಸ್ಯಪ್ರದೇಶದಲ್ಲಿ ಅವಿತುಕೊಂಡಿತು. ಆ ಸಮಯದಲ್ಲಿ ಸಲಿಲದೊಳಕ್ಕೆ ಪ್ರವೇಶಿಸಿ

ಮರೆಮಾಡಿಕೊಂಡಿತು. ಆಗ ದೇವತೆಗಳು ಸಲಿಲವನ್ನು ಪ್ರವೇಶಿಸಿ ಅಡಗಿಕೊಂಡಿದ್ದ ಅಗ್ನಿಯನ್ನು ಹೊರಕ್ಕೆ ಕರೆತಂದರು. ಆಗ ಅಗ್ನಿಯು ಕ್ರುದ್ಧನಾಗಿ ತನಗೆ ಸರಿಯಾಗಿ ರಕ್ಷಣೆಯನ್ನು ಕೊಡದೇಇದ್ದುದರಿಂದ ಉದಕದಮೇಲೆ ಅಸಮಾಧಾನವನ್ನು ಸೂಚಿಸಿದನು. ಆ ಕಾಲದಲ್ಲಿ ಅವನ ಬಾಯಿಂದ ಮೂರು ಸಣ್ಣ ಹನಿಗಳು ಉದುರಿದುವು. ಆ ಹನಿಗಳಿಂದ ಏಕತ, ದ್ವಿತ ಮತ್ತು ತ್ರಿತ ಇವರು ಉತ್ಪನ್ನರಾದರು ಎಂದಿರುತ್ತದೆ. ಇದೇ ರೀತಿ ಅಗ್ನಿಯು ಪ್ರಜಾಪತಿಯ ಗೋಚರಕ್ಕೂ ಅತೀತನಾಗಿ ರಹಸ್ಯರೂಪವನ್ನು ಹೊಂದಿದ ಪ್ರಕರಣವೂ ಬೇರೆಡೆಯಲ್ಲಿ ವರ್ಣಿತವಾಗಿರುತ್ತದೆ.

**ಪ್ರಜಾಪತಿರಗ್ನಿರೂಪಾಣ್ಯಭ್ಯಧ್ಯಾಯತ್ । ಸ ಯೋಽಯಂ ಕುಮಾರೋ ರೂಪಾಣ್ಯನ್ನ-ಪ್ರವಿಷ್ಟ ಆಸೀತ್ತಮನ್ವೈಚ್ಛತ್ಸೋಽಗ್ನಿರವೇದನು ವೈ ಮಾ ಪಿತಾ ಪ್ರಜಾಪತಿರಿಚ್ಛತಿ ಹಂತ ತದ್ರೂಪಮಸಾನಿ ಯನ್ಮ ಏಷ ನ ವೇದೇತಿ ॥**

(ಶ. ಬ್ರಾ. ೬-೨-೧-೧)

ಪ್ರಜಾಪತಿಯು ಅಗ್ನಿಯ ರೂಪಗಳನ್ನು ಅರಿಯಲು ಧ್ಯಾನರೂಪದಲ್ಲಿ ಚಿಂತಿಸಿದನು. ಬೇರೆ ಬೇರೆ ರೂಪಗಳನ್ನು ಹೊಂದಿದ್ದ ಕುಮಾರನನ್ನು ಕಂಡುಹಿಡಿಯಲು ಪ್ರಯತ್ನಿಸಿದನು. " ನನ್ನ ಪಿತೃವಾದ ಪ್ರಜಾಪತಿಯು ನನ್ನನ್ನು ಕಂಡುಹಿಡಿಯಲು ಪ್ರಯತ್ನಿಸುತ್ತಿದ್ದಾನೆ. ಅವನ ಗೋಚರಕ್ಕೆ ಬೀಳದಿರುವಂತೆ ನಾನು ರೂಪಾಂತರಗಳನ್ನು ಹೊಂದುತ್ತೇನೆ " ಎಂದು ಯೋಚಿಸಿ,

**ಸ ಏತಾನ್ಪಂಚ ಪಶೂನಪಶ್ಯತ್ । ಪುರುಷಮಶ್ವಂ ಗಾಮವಿಮಜಂ ಯದಪಶ್ಯತ್ತಸ್ಮಾ-ದೇತೇ ಪಶವಃ ॥ ಸ ಏತಾನ್ ಪಂಚ ಪಶೂನ್ ಪ್ರಾವಿಶತ್ । ಸ ಏತೇ ಪಂಚ ಪಶವೋಽ-ಭವತ್ತಮು ವೈ ಪ್ರಜಾಪತಿರನ್ವೈಚ್ಛತ್ ॥**

(ಶ. ಬ್ರಾ. ೬-೨-೧-೨,೩)

ಪುರುಷ, ಅಶ್ವ, ಗೋವು, ಟಗರು ಮತ್ತು ಅಜ ಈ ಐದು ಪ್ರಾಣಿಗಳನ್ನು ನೋಡಿದನು. ಈ ರೀತಿ ನೋಡಿದುದರಿಂದಲೇ (**ಪಶ್**) ಅವುಗಳಿಗೆ **ಪಶು** ಎಂದು ಹೆಸರಾದುವು. ಅಗ್ನಿಯು ಅವುಗಳನ್ನು ಪ್ರವೇಶಿಸಿ ಅವುಗಳ ರೂಪವನ್ನೇ ಹೊಂದಿದನು. ಪ್ರಜಾಪತಿಯು ಮಾತ್ರ ಇನ್ನೂ ಹುಡುಕುತ್ತಲೇ ಇದ್ದನು.

**ಸ ಐಕ್ಷತ । ಇಮೇ ವಾ ಅಗ್ನಿರಿಮಾನೇವಾತ್ಮಾನಮಭಿಸಂಸ್ಕರವೈ ಯಥಾ ವಾ ಅಗ್ನಿಃ ಸಮಿದ್ಧೋ ದೀಪ್ಯತೇ ಏವಮೇಷಾಂ ಚಕ್ಷುರ್ದೀಪ್ಯತೇ .... ಇಮೇ ವಾಽಗ್ನಿರಿಮಾನೇ-ವಾತ್ಮಾನಮಭಿಸಂಸ್ಕರವಾ ಇತಿ ತಾನ್ನಾನಾದೇವತಾಭ್ಯ ಆಲಭತ ವೈಶ್ವಕರ್ಮಣಂ ಪುರುಷಂ ವಾರುಣಮಶ್ವಮೈಂದ್ರಮೃಷಭಂ ತ್ವಾಷ್ಟ್ರಮವಿಮಾಗ್ನೇಯಮಜಂ ॥**

(ಶ. ಬ್ರಾ. ೬-೨-೧-೪)

ಪ್ರಜಾಪತಿಯೂ ಆ ಪಶುಗಳನ್ನು ನೋಡಿ " ಅವೇ ಅಗ್ನಿಯ ರೂಪಾಂತರಗಳಿರಬೇಕು. ಅವನ್ನು ನನ್ನೊಡನೆ ಐಕ್ಯವಾಗುವಂತೆ ಮಾಡುತ್ತೇನೆ. ಪ್ರದೀಪ್ತನಾದ ಅಗ್ನಿಯು ಪ್ರಕಾಶಿಸುವಂತೆ ಅವುಗಳ ಕಣ್ಣುಗಳು ಪ್ರಕಾಶಿಸುತ್ತವೆ. ಅಗ್ನಿಯಿಂದ ಧೂಮವು ಮೇಲಕ್ಕೆ ಹೊರಡುವಂತೆ ಅವುಗಳ ಮುಖಗಳಿಂದಲೂ ಶ್ವಾಸವು ಹೊರಡುತ್ತದೆ, ಹೀಗೆ ಅಗ್ನಿಯ ಲಕ್ಷಣಗಳೆಲ್ಲವೂ ಅವುಗಳಲ್ಲಿರುವುದರಿಂದ ಅಗ್ನಿಯೇ ಈ ರೂಪವನ್ನು ತಾಳಿರಬಹುದು ಎಂದು ಯೋಚಿಸಿ ಅವುಗಳನ್ನು ತನ್ನ ರೂಪಾಂತರಗಳೇ ಆದ ಬೇರೆಬೇರೆ ದೇವತೆಗಳಿಗೆ ಆಹುತಿರೂಪಗಳಲ್ಲಿ ಅರ್ಪಿಸಲು ಇಚ್ಛಿಸಿದನು. ಪುರುಷನನ್ನು

ವಿಶ್ವಕರ್ಮನಿಗೂ, ಅಶ್ವವನ್ನು ವರುಣನಿಗೂ, ವೃಷಭವನ್ನು ಇಂದ್ರನಿಗೂ, ಟಗರನ್ನು ತ್ವಷ್ಟೃವಿಗೂ ಮತ್ತು ಅಜವನ್ನು ಅಗ್ನಿಗೂ ಅರ್ಪಿಸಲು ಸಂಕಲ್ಪಿಸಿದನು.

**" . . . . . . . ಅತ್ಮಾ ವೈ ಯಜ್ಞೋ ನೇನ್ಮೇಯಮಾತ್ಮಾ ವಿಕೃಷ್ಟೋಽಸದಿತ್ಯೇತೇನ ಪಶೂನೇಷ್ವಾ ತತ್ರೈ ಪ್ರಜಾಪತಿರಪಶ್ಯದ್ಯಥೈತಸ್ಯಾಗ್ನೇರಂತಂ ನ ಪರ್ಯೈತ್ ॥ "**

(ಶ. ಬ್ರಾ. ೬-೨-೧-೭)

ಈ ರೀತಿಯಾಗಿ ಯೋಚಿಸಿದ ಪ್ರಜಾಪತಿಯು ತಾನು ಸಂಕಲ್ಪಿಸಿದಂತೆಯೇ ಯಜ್ಞವನ್ನಾಚರಿಸಿದನು. ಆಯಾ ಪ್ರಾಣಿಗಳನ್ನು ಯಥಾಕ್ರಮವಾಗಿ ಆಯಾ ದೇವತೆಗಳಿಗರ್ಪಿಸಿದನು. ಇಷ್ಟಾದರೂ ಸಹ ಅಗ್ನಿಯ ಅಂತವನ್ನು ಅರಿಯಲಿಲ್ಲವೆಂದು ಮನಗಂಡನು.

**ಸ ಐಕ್ಷತ । ಯಮಿಮಮಾತ್ಮಾನಮಪ್ಸು ಪ್ರಾಪಿಪ್ಲವಂ ತಮನ್ವಿಚ್ಛಾನೀತಿ ತಮನ್ವೈಚ್ಛದ್ಯ- ದೇಷಾಮಪ್ಸು ಪ್ರವಿದ್ಧಾನಾಂ ಪ್ರತ್ಯತಿಷ್ಠತ್ತಾ ಅಪಃ ಸಮಭರದಥ ಯದಸ್ಯಾಂ ತಾಂ ಮೃದಂ ಯದುಭಯಗ್‌ಂ ಸಂಭೃತ್ಯ ಮೃದಂ ಚಾಪಶ್ಚೇಷ್ಟಕಾಮಕರೋತ್ತಸ್ಮಾದೇತದುಭಯ- ಮಿಷ್ಟಕಾ ಭವತಿ ಮೃಚ್ಚಾಪಶ್ಚ ॥**

(ಶ. ಬ್ರಾ. ೬-೨-೧-೮)

" ನಾನು ಉದಕದಲ್ಲಿ ಹರಡಿದ ಅಗ್ನಿರೂಪವನ್ನು ಹುಡುಕಿ ಪಡೆಯಬೇಕು " ಎಂದು ಚಿಂತಿಸಿ ಅಲ್ಲಿಯೂ ಹುಡುಕಿದನು ಮತ್ತು ಉದಕರೂಪವನ್ನು ತಾಳಿ ಹರಡಿದ್ದ ಅಗ್ನ್ಯಂಶಗಳೆಲ್ಲವನ್ನೂ ಒಂದುಕಡೆ ಸೇರಿಸಿದನು. ಉದಕಾಂತರ್ಗತವಾದ ಮೃತ್ತಿನಲ್ಲಿ (ಮಣ್ಣು) ಅಡಗಿದ್ದ ಅಗ್ನ್ಯಂಶವನ್ನು ಸೇರಿಸಿದನು. ಹೀಗೆ ಅಗ್ನ್ಯಂಶವನ್ನು ಹೊಂದಿದ್ದ ಸಲಿಲ ಮತ್ತು ಮೃತ್ತನ್ನು ಸೇರಿಸಿ ಇಟ್ಟಿಗೆ (ಇಷ್ಟಕ) ಗಳನ್ನು ಮಾಡಿದನು. ಆದುದರಿಂದ ಯಜ್ಞವೇದಿಕೆಗೆ ಉಪಯುಕ್ತವಾದ ಇಟ್ಟಿಗೆಗಳೂ ಅಗ್ನ್ಯಂಶಗಳನ್ನು ಹೊಂದಿವೆ ಇತ್ಯಾದಿಯಾಗಿ ರಹಸ್ಯರೂಪದಲ್ಲಿ ಅಡಗಿದ್ದ ಅಗ್ನಿಯನ್ನು ಯಜ್ಞರೂಪಕ್ಕೆ ಪರಿವರ್ತಿತವಾಗುವಂತೆ ಮಾಡಿ ಪ್ರಜೆಗಳಿಗೆ ಪ್ರಜಾಪತಿಯು ಉಪಕಾರಮಾಡಿದನು ಎಂದಿರುತ್ತದೆ.

ಹೀಗೆ ಅಗ್ನಿಯು ಪಶುರೂಪಗಳಲ್ಲಿ ಅಡಗಿರುವನು ಎಂಬುದು ಪ್ರಜಾಪತಿಯಿಂದ ದೇವತೆಗಳಿಗೂ ತಿಳಿದ ವಿಷಯವಾಗಿದೆ. ಈ ತಿಳಿವಳಿಕೆಯಿಂದ ಅವರಿಗೆ ಇನ್ನೊಂದು ಉಪಕಾರವಾಯಿತು. ಗೋಚರಾತೀತನಾದ ಅಗ್ನಿಯು ಎಲ್ಲಿ ಅಡಗಿರುವನು ಎಂಬ ಅರಿವೂ ಉಂಟಾಯಿತು. ಹೇಗೆಂದರೆ—

**ಏತಸ್ಯಾಮಾಹುತ್ಯಾಗ್‌ಂ ಹುತಾಯಾಂ । ಅಗ್ನಿರ್ದೇವೇಭ್ಯ ಉದಕ್ರಾಮತ್ತೇ ದೇವಾ ಅಬ್ರುವನ್ ಪಶುರ್ವಾ ಅಗ್ನಿಃ ಪಶುಭಿರಿಮಮನ್ವಿಚ್ಛಾಮ ಸ ಸ್ವಾಯ ರೂಪಾಯಾವಿರ್ಭವತಿ ಗೌರ್ವಾ ಗವೇ ಅಶ್ವೋವಾಶ್ವಯ ಪುರುಷೋ ವಾ ಪುರುಷಾಯ ॥**

(ಶ. ಬ್ರಾ. ೬-೩-೧-೨೨)

ದೇವತೆಗಳು ಒಂದುಸಲ ಸತ್ರವನ್ನಾಚರಿಸಿ ಅಗ್ನಿಯನ್ನುದ್ದೇಶಿಸಿ ಆಹುತಿಯನ್ನರ್ಪಿಸಿದಾಗ ಅಗ್ನಿಯು ಅವರಿಂದ ಅಂತರ್ಹಿತನಾದನು. ಆಗ ಅವರು " ಅಗ್ನಿಯು ಪಶುರೂಪದಲ್ಲಿ ಅಂತರ್ಹಿತನಾಗಿರುವುದರಿಂದ ಪಶುರೂಪದಿಂದಲೇ ಅವನನ್ನು ಹುಡುಕೋಣ ಎಂದು ಗವಾದಿರೂಪಗಳಿಂದ ಹುಡುಕಲು ಆರಂಭಿಸಿದಾಗ ಪುರುಷನಿಗೆ ಪುರುಷರೂಪದಲ್ಲಿಯೂ, ಅಶ್ವಕ್ಕೆ ಅಶ್ವರೂಪದಲ್ಲಿಯೂ, ಗೋವಿಗೆ ಗೋರೂಪದಲ್ಲಿಯೂ ಅಗ್ನಿಯು ಕಾಣಿಸಿಕೊಂಡನು

ಎಂದಿರುತ್ತದೆ. ಇದೇರೀತಿ ರಹಸ್ಯದಲ್ಲಿ ಅಡಗಿದ್ದ ಅಗ್ನಿಯ ಅನ್ವೇಷಣವು ಇನ್ನೂ ಅನೇಕ ಸಂದರ್ಭಗಳಲ್ಲಿ ವಿವೃತವಾಗಿರುತ್ತದೆ.

ಮಾನವರ ಗೋಚರಕ್ಕೆ ಅತೀತನಾಗಿ ಅಂತರಿಕ್ಷದ ಮೂಲಪ್ರದೇಶದಲ್ಲಿ ಅಡಗಿರುವ ವೈದ್ಯುತಾಗ್ನಿಯೂ ಸಹ ಇದೇ ರೀತಿ ಅನೇಕಕಡೆಗಳಲ್ಲಿ ವರ್ಣಿತನಾಗಿದ್ದಾನೆ. ಉದಾಹರಣೆಗೆ—

**ಸ ಜಾಯತೆ ಪ್ರಥಮಃ ಪಸ್ತ್ಯಾಸು ಮಹೋ ಬುಧ್ನೇ ರಜಸೋ ಅಸ್ಯ ಯೋನೌ ।**
**ಅಪಾದಶೀರ್ಷಾ ಗುಹಮಾನೋ ಅಂತಾಯೋಯುವಾನೋ ವೃಷಭಸ್ಯ ನೀಳೇ ॥**

(ಋ.ಸಂ. ೪-೧-೧೧)

ಯಜ್ಞಗೃಹದಲ್ಲಿ ಅಗ್ನಿಯು ಉತ್ಪನ್ನನಾಗುವುದಕ್ಕೆ ಮೊದಲು ಅಗ್ನಿಯು ಅಂತರ್ಹಿತನಾಗಿದ್ದ ಗೂಢವಾದ ಪ್ರದೇಶವನ್ನು ಇಲ್ಲಿ ವರ್ಣಿಸಿದೆ. ಪಾದರಹಿತನೂ, ಶಿರೋರಹಿತನೂ ಆದ ಅಗ್ನಿಯು ಅಂತರಿಕ್ಷದ ಗುಹ್ಯವಾದ ಪ್ರದೇಶದಲ್ಲಿ ಅಡಗಿದ್ದನು ಎಂದಿರುವಾಗ **ಯೋನೌ, ನೀಳೇ** ಎಂಬ ಪದಗಳು ಗಮನಾರ್ಹವಾಗಿವೆ. ಯಾವ ಗೂಢವಾದ ಪ್ರದೇಶವು ಲೌಕಿಕವಾದ ದೃಷ್ಟಿಗೆ ಬೀಳದೆ ನಿಗೂಢವಾಗಿರುವುದೋ ಅದನ್ನೇ **ಋತದ** ಸ್ಥಾನವೆಂದೂ ಕರೆದಿದೆ. ಇದು ಅತ್ಯಂತ ರಹಸ್ಯವಾದ ಪ್ರದೇಶ. (ಋ. ಸಂ. ೪-೧-೧೨)

ಈ ವಿಧವಾಗಿ ವರ್ಣಿತವಾದ ಗುಹೆಯಲ್ಲಿ ಅಡಗಿದ್ದ ಅಗ್ನಿಯನ್ನು ಕೆಲವು ಸಂದರ್ಭಗಳಲ್ಲಿ ಮಾನವರು ಕರೆತಂದರೆಂದೂ, ಅನೇಕ ವಿಧವಾಗಿ ಈ ವಿಷಯವು ಪ್ರಸ್ತಾಪಿಸಲ್ಪಟ್ಟಿದೆ. ದೇವತೆಗಳಲ್ಲಾಗಲೀ ಅಥವಾ ಮಾನವರಲ್ಲಾಗಲೀ ಯಾರುಯಾರು ಅಗ್ನಿಯನ್ನು ಪ್ರಥಮತಃ ಸಾಕ್ಷಾತ್ಕರಿಸಿ ಪೃಥ್ವಿಯಲ್ಲಿ ಆವಿರ್ಭೂತನಾಗುವಂತೆ ಮಾಡುವರೆಂದು ಹೇಳಲ್ಪಟ್ಟಿದೆಯೋ ಅವರೆಲ್ಲರೊಂದಿಗೂ ಅಗ್ನಿಯ ಐಕ್ಯವನ್ನೂ, ತಾದಾತ್ಮ್ಯವನ್ನೂ ಹೇಳಿದೆ. ಈ ಸಂದರ್ಭದಲ್ಲಿ **ಮಾತರಿಶ್ವ, ಬೃಹಸ್ಪತಿ, ಅಂಗಿರಸ, ಅಥರ್ವನ್, ಭೃಗು** ಇತ್ಯಾದಿಗಳು ಪ್ರಸಿದ್ಧರಾಗಿದ್ದಾರೆ.

೧) **ಮಾತರಿಶ್ವನು** ಭೃಗುವಿಗಾಗಿ ಅಗ್ನಿಯನ್ನು ಅಂತರಿಕ್ಷದಿಂದ ಕರೆತಂದ ವಿಷಯವನ್ನು ಹಿಂದೆ ತಿಳಿಸಿದೆ. ಅಂತಹ ಸಂದರ್ಭಗಳಲ್ಲಿ ಪ್ರಕೃತ ಉದಾಹರಣೆಗಾಗಿ ಒಂದು ಪ್ರಕರಣವನ್ನು ಪರಿಶೀಲಿಸಿದರೆ **ಮಾತರಿಶ್ವಾ** ಎಂಬ ಪದದ ಅರ್ಥವೇನು ಎಂದು ತಿಳಿಯುತ್ತದೆ ಮತ್ತು ಅಗ್ನಿಯನ್ನು ಕಂಡುಹಿಡಿದ ಅದೇ ಮಾತರಿಶ್ವನೇ ಅಗ್ನಿರೂಪನು ಎಂಬುದೂ ತಿಳಿಯುತ್ತದೆ.

**ಉದಸ್ತಂಭೀತ್ಸಮಿಧಾ ನಾಕಮೃಷ್ವೋ೩ಗ್ನಿರ್ಭವನ್ನುತ್ತಮೋ ರೋಚಮಾನಾಂ ।**
**ಯದೀ ಭೃಗುಭ್ಯಃ ಪರಿ ಮಾತರಿಶ್ವಾ ಗುಹಾ ಸಂತಂ ಹವ್ಯವಾಹಂ ಸಮೀಧೇ ॥**

(ಋ. ಸಂ. ೩-೫-೧೦)

ಎಂಬಲ್ಲಿ ಮಾತರಿಶ್ವನು ಭೃಗುಗಳಿಗೆ ಅಗ್ನಿಯನ್ನು ತಂದೊದಗಿಸಿದ ಪ್ರಕರಣವು ವಿದಿತವಾಗಿದೆ. ಆದರೆ, ಈ ಮಾತರಿಶ್ವನು ಯಾರೆಂದರೆ—

"ಮಾತರಿ ಅಂತರಿಕ್ಷೇ ಶ್ವಸಿತಿ ಪ್ರಾಣಿತಿ ಸೂರ್ಯರೂಪೇಣ ಚೇಷ್ಟತ ಇತಿ ಮಾತರಿಶ್ವಾ ಅಥವಾ ಮಾತರಿ ಅರಣ್ಯಾಂ ಶ್ವಸಿತಿ **ನಿವಸತೀತಿ ಮಾತರಿಶ್ವಾ**" ಸೂರ್ಯರೂಪದಿಂದ ಅಂತರಿಕ್ಷದಲ್ಲಿ ಸಂಚರಿಸುವುದರಿಂದಲಾಗಲೀ ಅಥವಾ ಮಾತೃರೂಪವಾದ ಅರಣಿಗಳಲ್ಲಿರುವುದರಿಂದಾಗಲೀ ಅಗ್ನಿಗೆ ಈ ಹೆಸರೆಂದು ಸಾಯಣರು ವಿವರಿಸಿದ್ದಾರೆ

(ಋ. ಸಂ. ಭಾ. ೩-೫-೯) ಈ ವಿವರಣವು ನಿರುಕ್ತಕಾರರು ಈ ಪದಕ್ಕೆ ಹೇಳಿರುವ ನಿರ್ವಚನವನ್ನು (ನಿ. ೭-೨೬) ಸಮರ್ಥಿಸುವುದಾಗಿದೆ.

೨) ಅದರಂತೆಯೇ ಬೃಹಸ್ಪತಿಯೂ ಸಹ ಪ್ರಥಮತಃ ಅಗ್ನಿಯನ್ನು ಕಂಡುಹಿಡಿದು ಪೃಥ್ವಿಗೆ ತರೆತಂದನೆಂದು ಪ್ರಸಿದ್ಧವಾಗಿದೆ.

**ಸೋ ಉಷಾಮವಿಂದತ್ಸ ಸ್ವ೧ಃಸೋ ಅಗ್ನಿಂ ಸೋ ಅರ್ಕೇಣ ವಿ ಬಬಾಧೇ ತಮಾಂಸಿ ।**
**ಬೃಹಸ್ಪತಿರ್ಗೋವಪುಷೋ ವಲಸ್ಯ ನಿರ್ಮಜ್ಜಾನಂ ನ ಪರ್ವಣೋ ಜಭಾರ ॥**

(ಋ. ಸಂ. ೧೦-೬೮-೯)

ಬೃಹಸ್ಪತಿಯು ಗೋವುಗಳನ್ನು ಕಂಡುಹಿಡಿಯಲು ಪ್ರಯತ್ನಿಸಿದಾಗ ಉಷಸ್ಸನ್ನು ಹೊಂದಿದನು. ಅವನು ಅಗ್ನಿಯನ್ನೂ, ಆದಿತ್ಯನನ್ನೂ ಹೊಂದಿ ತಮಸ್ಸನ್ನು ನಾಶಮಾಡಿದನು ಇತ್ಯಾದಿಯಾಗಿ ಬೃಹಸ್ಪತಿಯ ಪ್ರಯತ್ನದ ಮತ್ತು ಸಿದ್ಧಿಯ ಪ್ರಶಂಸೆಯಿರುತ್ತದೆ. ಅದೇ ಬೃಹಸ್ಪತಿಗೂ ಅಗ್ನಿ ಮತ್ತು ಮಾತರಿಶ್ವ ಇವರಿಬ್ಬರಿಗೂ ತಾದಾತ್ಮ್ಯವನ್ನು ತೋರಿಸಿದೆ. ಉದಾಹರಣೆಗೆ—

**ಅಚ್ಛಾ ವದಾ ತನಾ ಗಿರಾ ಜರಾಯೈ ಬ್ರಹ್ಮಣಸ್ಪತಿಂ । ಅಗ್ನಿಂ ಮಿತ್ರಂ ನ ದರ್ಶತಂ ॥**

(ಋ. ಸಂ. ೧-೩೮-೧೩)

**ತಮೃತ್ವಿಯಾ ಉಪ ವಾಚಃ ಸಚಂತೇ ಸರ್ಗೋ ನ ಯೋ ದೇವಯತಾಮಸರ್ಜಿ ।**
**ಬೃಹಸ್ಪತಿಃ ಸ ಹ್ಯಂಜೋ ವರಾಂಸಿ ವಿಭ್ವಾಭವತ್ಸಮೃತೇ ಮಾತರಿಶ್ವಾ ॥**

(ಋ. ಸಂ. ೧-೧೯೦-೨)

ಇತ್ಯಾದಿಗಳಲ್ಲಿ ಕೆಲವೆಡೆ ಅಗ್ನಿಯೊಂದಿಗೂ, ಇನ್ನು ಕೆಲವೆಡೆಗಳಲ್ಲಿ **ಮಾತರಿಶ್ವ**ನೊಂದಿಗೂ ತಾದಾತ್ಮ್ಯವನ್ನು ತಿಳಿಸಿದೆ. **ಬ್ರಹ್ಮಣಸ್ಪತಿಃ ಅಗ್ನಿಃ** ಎಂದಿರುವಾಗ ಮಂತ್ರಗಳಿಗೆ ಪತಿಯೆಂದರ್ಥ. **ಬೃಹಸ್ಪತಿಃ ಮಾತರಿಶ್ವಾ** ಎಂದಿರುವಾಗ ಫಲನಿರ್ವಾರ್ತೃವಾದ ಯಜ್ಞದಲ್ಲಿ ಸ್ಥಿತನಾಗಿರುವವನು ಎಂದರ್ಥ. ಹೀಗೆ ಇನ್ನೂ ಅನೇಕಕಡೆಗಳಲ್ಲಿ ಈ ತಾದಾತ್ಮ್ಯವು ತಿಳಿಯುತ್ತದೆ.

(೨-೧-೩; ೩-೨೬-೨ ಇತ್ಯಾದಿ)

೩) **ಅಂಗಿರಸ್**—ಅಂಗಿರಸ್ಸಿನ ವಿಷಯವನ್ನೂ; ಅಂಗಿರಾಋಷಿಗೂ, ಅಗ್ನಿಗೂ ಇರುವ ಸಂಬಂಧವನ್ನೂ, ಅಗ್ನಿಯೇ ಅಂಗಿರಸ್ಸುಗಳಲ್ಲಿ ಪ್ರಥಮನೆಂದು ನಿರ್ದೇಶಿಸಿರುವುದನ್ನೂ ಹಿಂದೆ ತಿಳಿಸಿದೆ. ಅಲ್ಲದೆ,

**ತವ ಶ್ರಿಯೇ ವ್ಯಜಿಹೀತ ಪರ್ವತೋ ಗವಾಂ ಗೋತ್ರಮುದಸೃಜೋ ಯದಂಗಿರಃ ।**
**ಇಂದ್ರೇಣ ಯುಜಾ ತಮಸಾ ಪರೀವೃತಂ ಬೃಹಸ್ಪತೇ ನಿರಪಾಮೌಬ್ಜೋ ಅರ್ಣವಂ ॥**

(ಋ. ಸಂ. ೨-೨೩-೧೮)

ಇತ್ಯಾದಿ ಋಕ್ಕುಗಳಲ್ಲಿ ಬೃಹಸ್ಪತಿಯನ್ನೂ ಅಂಗಿರಸ್ಸೆಂದೇ ಸಂಬೋಧಿಸಿದೆ. ಎಂದರೆ, ಬೃಹಸ್ಪತಿ, ಮಾತರಿಶ್ವ, ಅಂಗಿರಸ್, ಅಗ್ನಿ ಇತ್ಯಾದಿ ಗುಂಪಿನಲ್ಲಿರುವ ಒಂದು ಪದವು ಇನ್ನೊಂದಕ್ಕೆ ವಿಶೇಷಣವಾಗಿರುವ ಸಂದರ್ಭಗಳೂ ಅನೇಕವಾಗಿವೆ. ಎಲ್ಲವೂ ಅಗ್ನಿಯ ಅಂಶವನ್ನು ಸೂಚಿಸತಕ್ಕವೆಂದು ನಿಷ್ಕೃಷ್ಟವಾಗಿ ಹೇಳಬಹುದು.

೮) ಯಾವ ಅಗ್ನಿಯು ಅಥರ್ವಸಂಜ್ಞಕನಾದ ಋಷಿಯಿಂದ ಉತ್ಪನ್ನನಾದನೆಂದು ಹಿಂದೆ " **ತ್ವಾಮಗ್ನೇ ಪುಷ್ಕರಾದಥರ್ವಾ ನಿರಮಂಥತ** " (ಋ. ಸಂ. ೬-೧೬-೧೩) ಇತ್ಯಾದಿ ವಾಕ್ಯಗಳಿಂದ ತಿಳಿಸಿದೆಯೋ, ಅದೇ ಅಗ್ನಿಯೂ ಸಹ ಅಥರ್ವವಾಚ್ಯನಾಗಿಯೇ ಇದ್ದಾನೆ.

" **ಅಗ್ನಿರ್ಜಾತೋ ಅಥರ್ವಣಾ ವಿದದ್ವಿಶ್ವಾನಿ ಕಾವ್ಯಾ** " (೧೦-೨೧-೫) ಇತ್ಯಾದಿ ವಾಕ್ಯಗಳಲ್ಲಿಯೂ ಅಥರ್ವನು ಉತ್ಪಾದಕನು ಮತ್ತು ಅಗ್ನಿಯು ಅವನಿಂದ ಜನ್ಯನು ಎಂಬುದು ತಿಳಿಸಿದೆ. ಆದರೆ,

**ಆ ನೂನಮಶ್ವಿನೋರ್ಋಷಿಃ ಸ್ತೋಮಂ ಚಿಕೇತ ವಾಮಯಾ ।**
**ಆ ಸೋಮಂ ಮಧುಮತ್ತಮಂ ಘರ್ಮಂ ಸಿಂಚಾದಥರ್ವಣಿ ॥**

(ಋ. ಸಂ. ೮-೯-೭)

ಎಂಬಲ್ಲಿ **ಅಥರ್ವಣಿ** ಎಂಬುದು ಅಗ್ನಿಬೋಧಕವಾದ ಪದವಾಗಿದೆ. ಅಹಿಂಸಕನಾದ ಅಗ್ನಿಯೆಂದರ್ಥ ಮಾಡಿದೆ. ಅಥವಾ ಅಥರ್ವಋಷಿಯಿಂದ ನಿರ್ಮಿತನು ಎಂಬರ್ಥವೂ ಸಾಧ್ಯವೆಂದು ತಿಳಿಸಿದೆ. ಹೀಗೆಯೇ ಅಥರ್ವನಿಗೂ ಅಗ್ನಿಗೂ ತಾದಾತ್ಮ್ಯವನ್ನು ತೋರಿಸುವ ವಾಕ್ಯಗಳು ಇನ್ನೂ ಹಲವಾರಿವೆ. ಅವುಗಳನ್ನು ಇಲ್ಲಿ ಸೂಚಿಸಿದೆಯೇ ವಿನಃ ಅವುಗಳ ವಿವರಣವು ಇಲ್ಲಿ ಅಪ್ರಕೃತ.

ಪ್ರಕೃತದಲ್ಲಿ ಭೃಗುಗಳು ಗೃಹಾಂತರ್ಗತನಾಗಿದ್ದ ಅಗ್ನಿಯನ್ನು ಕಂಡುಹಿಡಿದು ತಾವೂ ಪೂಜಿಸಿ ಪ್ರಜೆಗಳಿಗೂ ಸಹಾಯ ಮಾಡಿದರು ಎಂಬ ವಿಷಯವು ಮುಖ್ಯವಾದುದು. ಈ ವಿಷಯವನ್ನು ಹಿಂದೆ ೧೧ನೇ ಭಾಗದಲ್ಲಿ ವಿವರಿಸಿದೆ.

ಸಂಹಿತಾಪಾಠಃ

**ಇಮಂ ತ್ರಿತೋ ಭೂರ್ಯವಿಂದದಿಚ್ಛನ್ವೈಭೂವಸೋ ಮೂರ್ಧನ್ಯಘ್ನ್ಯಾಯಾಃ ।**
**ಸ ಶೇವೃಧೋ ಜಾತ ಆ ಹರ್ಮ್ಯೇಷು ನಾಭಿರ್ಯುವಾ ಭವತಿ ರೋಚನಸ್ಯ ॥**

ಪದಪಾಠಃ

**ಇಮಂ । ತ್ರಿತಃ । ಭೂರಿ । ಅವಿಂದತ್ । ಇಚ್ಛನ್ । ವೈಭುವಸಃ । ಮೂರ್ಧನಿ । ಅಘ್ನ್ಯಾಯಾಃ ।**
**ಸಃ । ಶೇವೃಧಃ । ಜಾತಃ । ಆ । ಹರ್ಮ್ಯೇಷು । ನಾಭಿಃ । ಯುವಾ । ಭವತಿ । ರೋಚನಸ್ಯ ॥೩॥**

ಸಾಯಣಭಾಷ್ಯಂ

**ಇಮಂ ಭೂರಿ ಮಹಾಂತಮಗ್ನಿಂ ವೈಭೂವಸೋ ವಿಭೂವಸಃ ಪುತ್ರಸ್ತ್ರಿತ ಋಷಿರಿಚ್ಛನ್ನಲಬ್ಧುಮಿಚ್ಛನ್ನಘ್ನ್ಯಾಯಾಃ । ಅಘ್ನ್ಯಾ ಭೂಮಿಃ । ತಸ್ಯಾ ಭೂಮ್ಯಾ ಮೂರ್ಧನಿ । ಭೂಮ್ಯಾಮಿತ್ಯರ್ಥಃ ।**

ತತ್ರಾವಿಂದತ್ । ಲಬ್ಧವಾನ್ । ಸೋಽಗ್ನಿಃ ಶೇವೃಧಃ ಸುಖಸ್ಯ ವರ್ಧಯಿತಾ ಸನ್ ಹರ್ಮ್ಯೇಷು ಯಜಮಾನಗೃಹೇಷ್ವಾ ಸರ್ವತೋ ಜಾತಃ ಪ್ರಾದುರ್ಭೂತಃ ಸನ್ರೋಚನಸ್ಯ ರೋಚಮಾನಸ್ಯ ಸ್ವರ್ಗಾಖ್ಯಸ್ಯ ಫಲಸ್ಯೋಕ್ತಲಕ್ಷಣಸ್ಯ ಯಜ್ಞಸ್ಯಾದಿತ್ಯಸ್ಯ ವಾ ನಾಭಿರ್ಬಂಧಕೋ ಭವತಿ ॥

ಪ್ರತಿಪದಾರ್ಥ

**ಇಮಂ**—ಪ್ರಸಿದ್ಧನಾದ । **ಭೂರಿ**—ಮಹತ್ಸ್ವರೂಪವುಳ್ಳ ಅಗ್ನಿಯನ್ನು । **ವೈಭೂವಸಃ**—ವಿಭೂವಸ ಪುತ್ರನಾದ । **ತ್ರಿತಃ**—ತ್ರಿತನೆಂಬ ಋಷಿಯು । **ಇಚ್ಛನ್**—ಪಡೆಯಬೇಕೆಂದು ಅಪೇಕ್ಷಿಸಿ । **ಆಪ್ತ್ಯಾಯಾಃ ಮೂರ್ಧನಿ**—ಭೂಮಿಯಮೇಲೆ । **ಅವಿಂದತ್**—ಪಡೆದನು । **ಸಃ**—ಆ ಅಗ್ನಿಯು । **ಶೇವೃಧಃ**— ಸುಖಕಾರಕನಾಗಿ । **ಹರ್ಮ್ಯೇಷು**—ಯಜಮಾನನ ಮನೆಗಳಲ್ಲಿ ಅಥವಾ ಯಜ್ಞಗೃಹಗಳಲ್ಲಿ । **ಆ ಜಾತಃ**—ಪ್ರಾದುರ್ಭೂತನಾಗಿ । **ರೋಚನಸ್ಯ**—ಪ್ರಕಾಶಮಾನವಾದ ಸ್ವರ್ಗದ । **ನಾಭಿಃ**—ಪ್ರಾಪಕನಾಗಿ । **ಭವತಿ**—ಆಗುತ್ತಾನೆ.

ಭಾವಾರ್ಥ

ಮಹಾತ್ಮನಾದ ಈ ಅಗ್ನಿಯನ್ನು ವಿಭೂವಸಪುತ್ರನಾದ ತ್ರಿತನೆಂಬ ಋಷಿಯು ಪಡೆಯಬೇಕೆಂದು ಇಚ್ಛಿಸಿ ಅದರಂತೆ ಭೂಮಿಯಲ್ಲಿ ಆ ಅಗ್ನಿಯನ್ನು ಸಂಪಾದಿಸಿದನು. ಸುಖವನ್ನು ವೃದ್ಧಿಮಾಡುವ ಆ ಅಗ್ನಿಯು ಯಜಮಾನನ ಯಜ್ಞಗೃಹಗಳಲ್ಲಿ ಉತ್ಪನ್ನನಾಗಿ ಯಜ್ಞಮಾಡುವವರಿಗೆ ಸ್ವರ್ಗವನ್ನು ಒದಗಿಸಿಕೊಡುತ್ತಾನೆ.

## English Translation

Trita, the son of Vibhuvas, searching (for him), found mighty Agni on the surface of the earth : he the augmenter of happiness menifested in the dwellings (of the pious), the youthful (connecting) bond of the resplendent (Sun).

ಸಂಹಿತಾಪಾಠಃ

ಮಂದ್ರಂ ಹೋತಾರಮುಶಿಜೋ ನಮೋಭಿಃ ಪ್ರಾಂಚಂ ಯಜ್ಞಂ ನೇತಾರಮಧ್ವರಾಣಾಂ ।
ವಿಶಾಮಕೃಣ್ವನ್ನರತಿಂ ಪಾವಕಂ ಹವ್ಯವಾಹಂ ದಧತೋ ಮಾನುಷೇಷು ॥೪॥

ಪದಪಾಠಃ

ಮಂದ್ರಂ । ಹೋತಾರಂ । ಉಶಿಜಃ । ನಮಃಽಭಿಃ । ಪ್ರಾಂಚಂ । ಯಜ್ಞಂ । ನೇತಾರಂ । ಅಧ್ವರಾಣಾಂ । ವಿಶಾಂ । ಅಕೃಣ್ವನ್ । ಅರತಿಂ । ಪಾವಕಂ । ಹವ್ಯಽವಾಹಂ । ದಧತಃ । ಮಾನುಷೇಷು ॥ ೪ ॥

ಸಾಯಣಭಾಷ್ಯಂ

ಉಶಿಜಃ ಕಾಮಯಮಾನಾ ಋತ್ವಿಜೋ ಮಂದ್ರಂ ಮಾದನೀಯಂ ಹೋತಾರಂ ಹೋಮನಿಷ್ಪಾದಕಂ ಪ್ರಾಂಚಂ ಗಾರ್ಹಪತ್ಯಾದಾಹವನೀಯಂ ಪ್ರತಿ ಪ್ರಾಗಂಚಂತಂ ಯಜ್ಞಂ ಯಜನೀಯಮಧ್ವರಾಣಾಂ ಯಾಗಾನಾಂ ನೇತಾರಂ ಪ್ರಾಪಯಿತಾರಮರತಿಂ ಗಂತಾರಂ ಸರ್ವದಾ ಯಾಗಗೃಹೇ ವರ್ತಮಾನಂ ಪಾವಕಂ ಶೋಧಕಂ ಹವ್ಯವಾಹಂ ಹವಿಷೋ ವೋಢಾರಂ ಮಾನುಷೇಷು ಮನುಷ್ಯೇಷು ಮಧ್ಯೇ ದಧತೋ ದಧಾನಾ ಋತ್ವಿಜೋ ವಿಶಾಂ ಯಜಮಾನಾನಾಮರ್ಥಾಯ। ಯದ್ವಾ। ವಿಶಾಂ ಪ್ರಜಾನಾಮರತಿಮರ್ಯಂ । ಸ್ವಾಮಿನಮಿತ್ಯರ್ಥಃ । ನಮೋಭಿರ್ನಮಸ್ಕಾರೈಃ । ಸ್ತುತಿಭಿರಿತ್ಯರ್ಥಃ । ಅಕೃಣ್ವನ್ । ಅಕುರ್ವನ್ । ಸುಪ್ರೀತಂ ಕೃತವಂತಃ ॥

ಪ್ರತಿಪದಾರ್ಥ

**ಉಶಿಜಃ**—ದೇವತೆಗಳನ್ನಿಚ್ಛಿಸುವ ಋತ್ವಿಕ್ಕುಗಳು । **ಮಂದ್ರಂ**—ಸಂತೋಷಪ್ರದನೂ । **ಹೋತಾರಂ**—ಹೋಮನಿಷ್ಪಾದಕನೂ । **ಪ್ರಾಂಚಂ**—ಗಾರ್ಹಪತ್ಯವೆಂಬ ಅಗ್ನಿಕುಂಡದಿಂದ ಆಹವನೀಯವೆಂಬ ಅಗ್ನಿಕುಂಡದ ಬಳಿಗೆ ಒಯ್ಯಲ್ಪಡುವವನೂ । **ಯಜ್ಞಂ**—ಪೂಜಾರ್ಹನೂ । **ಅಧ್ವರಾಣಾಂ**—ಯಜ್ಞಗಳಿಗೆ । **ನೇತಾರಂ**—ನಾಯಕನಾದವನೂ ಅಥವಾ ಯಜ್ಞಗಳಲ್ಲಿ ಮುಖ್ಯ ದೇವತೆಯಾದವನೂ । **ಅರತಿಂ**—ಯಾವಾಗಲೂ ಯಜ್ಞಗೃಹದಲ್ಲಿ ಇರುವವನೂ । **ಪಾವಕಂ**—ಶುದ್ಧಿಗೊಳಿಸುವವನೂ । **ಹವ್ಯವಾಹಂ**—ದೇವತೆಗಳ ಬಳಿಗೆ ಹವಿಸ್ಸನ್ನು ಒಯ್ಯುವವನೂ । **ಮಾನುಷೇಷು**—ಮನುಷ್ಯರ ಮಧ್ಯದಲ್ಲಿ । **ವಿಶಾಂ (ಅರತಿಂ)**—ಪ್ರಜೆಗಳಿಗೆಲ್ಲಾ ಒಡೆಯನಾದ ಅಗ್ನಿಯನ್ನು । **ದಧತಃ**—ಕರ್ಮಕರ್ತರಾದ ಋತ್ವಿಜರು। **ನಮೋಭಿಃ**—ನಮಸ್ಕಾರಗಳಿಂದ ಅಥವಾ ಸ್ತುತಿಗಳಿಂದ । **ಅಕೃಣ್ವನ್**—ಸುಪ್ರೀತನನ್ನಾಗಿ ಮಾಡಿದರು ।

ಭಾವಾರ್ಥ

ದೇವತೆಗಳನ್ನು ಬಯಸುವವರೂ, ಮನುಷ್ಯರ ಯಜ್ಞಾದಿಗಳಲ್ಲಿ ಕರ್ಮಕರ್ತರೂ ಆದ ಋತ್ವಿಜರು, ಸುಖಕರನೂ, ಹೋಮನಿಷ್ಪಾದಕನೂ, ಪೂಜಾರ್ಹನೂ, ಯಜ್ಞಕರ್ಮಗಳ ನೇತೃವಾದವನೂ ಯಾವಾಗಲೂ ಯಜ್ಞಗೃಹಗಳಲ್ಲಿ ವಾಸಿಸುವವನೂ, ದೇವತೆಗಳಿಗೆ ಹವಿಸ್ಸನ್ನು ಒಯ್ಯುವವನೂ ಪ್ರಜೆಗಳಿಗೆ ಒಡೆಯನೂ ಆದ ಅಗ್ನಿಯನ್ನು ನಮಸ್ಕಾರಗಳಿಂದಲೂ ಸ್ತೋತ್ರಗಳಿಂದಲೂ ಸಂತೋಷಪಡಿಸುತ್ತಾರೆ.

## English Translation

(The priests) desirous (to propitiate him), detaining him amongst men have by their adoration made him lord over all people, him the exhilarator, the presenter of burnt offerings, the migrator, the object of sacrifice, the leader of rites, the purifier, the bearer of oblations.

ಸಂಹಿತಾಪಾಠಃ

ಪ್ರ ಭೂರ್ಜಯಂತಂ ಮಹಾಂ ವಿಪೋಧಾಂ ಮೂರಾ ಅಮೂರಂ ಪುರಾಂ ದರ್ಮಾಣಂ ।
ನಯಂತೋ ಗರ್ಭಂ ವನಾಂ ಧಿಯಂ ಧುರ್ಹರಿಶ್ಮಶ್ರುಂ ನಾರ್ವಾಣಂ ಧನರ್ಚಂ ॥ ೫ ॥

ಪದಪಾಠಃ

ಪ್ರ । ಭೂಃ । ಜಯಂತಂ । ಮಹಾಂ । ವಿಪಃಽಧಾಂ । ಮೂರಾಃ । ಅಮೂರಂ । ಪುರಾಂ । ದರ್ಮಾಣಂ ।
ನಯಂತಃ । ಗರ್ಭಂ । ವನಾಂ । ಧಿಯಂ । ಧುಃ । ಹರಿಽಶ್ಮಶ್ರುಂ । ನ । ಅರ್ವಾಣಂ । ಧನಽಅರ್ಚಂ ।

ಸಾಯಣಭಾಷ್ಯಂ

ಹೇ ಸ್ತೋತಃ ತ್ವಂ ಜಯಂತಂ ಜೇತವ್ಯಾನ್ಯಾತ್ರೂನ್ಜಯಂತಂ ಮಹಾಂ ಮಹಾಂತಂ ವಿಪೋಧಾಂ ಮೇಧಾವಿನೋ ಧರ್ತಾರಮಗ್ನಿಂ ಪ್ರ ಭೂಃ । ಪ್ರಭವ । ಸಮರ್ಥೋ ಭವ । ಸ್ತೋತುಮಿತಿ ಶೇಷಃ । ಉದ್ಗೀಥಸ್ತು ಭೂರ್ಜಯಂತಮಿತ್ಯೇಕಪದಂ ಮತ್ವಾ ಭೂರಾದೀಲ್ಲೋಕಾನ್ಜಯಂತಮಿತಿ ವ್ಯಾಚಕಾರ । ನ ಕೇವಲಂ ತ್ವಮೇಕ ಏವ ಅಪಿ ತು ಮೂರಾ ಮೂಢಾಃ ಸರ್ವೇಽಪಿ ಪುರುಷಾ ಅಮೂರಮಮೂಢಂ ಪುರಾಂ ದರ್ಮಾಣಂ ದಾರಕಂ ॥ ಔಣಾದಿಕೋ ಮನಿಃ । ಪ್ರತ್ಯಯಸ್ವರಃ ॥ ಗರ್ಭಮರಣ್ಯೋರ್ಗರ್ಭಭೂತಂ ವನಾಂ ವನನೀಯಂ ॥ ವಾ ಛಂದಸಿ । ಪಾ-೬-೧-೧೦೬,೧೦೭ । ಇತಿ ವಚನಾದಮಿ ಪೂರ್ವಾಭಾವಃ ॥ ಹರಿಶ್ಮಶ್ರುಂ ನಾರ್ವಾಣಂ । ನೇತ್ಯುಪಮಾರ್ಥೀಯಃ । ಶ್ಮಶ್ರುಶಬ್ದೋಽತ್ರ ರೋಮಸಾಮಾನ್ಯವಚನಃ । ಹರಿತರೋಮೋಪೇತಮರ್ವಾಣಮರಣಶೀಲಮಶ್ವಮಿವ । ಉಕ್ತಲಕ್ಷಣಾಶ್ವವದ್ಧರಿತಕೇಶಸ್ಥಾನೀಯಜ್ವಾಲೋಪೇತಂ ಧನರ್ಚಂ ಪ್ರೀಣನಸ್ತುತಿಂ ॥ ಶಕಂಧ್ವಾದಿತ್ವಾತ್ಪರರೂಪತ್ವಂ ॥ ಈದೃಶಮಗ್ನಿಂ ನಯಂತೋ ಹವಿರ್ಭಿಃ ಪಾಪ್ರಯಂತೋ ಧಿಯಂ ಕರ್ಮ ಸ್ತೋತ್ರಂ ವಾ ಧುಃ । ಪ್ರಾಪಯಂತಿ ॥ ಗಾತಿಸ್ಥೇತಿ ಸಿಚೋ ಲುಕ್ ॥

ಪ್ರತಿಪದಾರ್ಥ

(ಎಲೈ ಸ್ತೋತೃವೇ, ನೀನು) **ಜಯಂತಂ**—ಶತ್ರುಗಳನ್ನು ಜಯಿಸುವವನೂ । **ಮಹಾಂ**—ಮಹಾತ್ಮನೂ । **ವಿಪೋಧಾಂ**—ಮೇಧಾವಿಗಳಾದ ಋತ್ವಿಜರನ್ನು ಪೋಷಿಸುವವನೂ ಆದ ಅಗ್ನಿಯನ್ನು । **ಪ್ರಭೂಃ**—ಸ್ತುತಿಸಲು ಸಮರ್ಥನಾಗು. । **ಮೂರಾಃ**—ಮೂಢರಾದ ಪುರುಷರೂ ಸಹ । **ಅಮೂರಂ**—ವಿವೇಕಿಯಾದವನೂ । **ಪುರಾಂ**—ಶತ್ರುಪುರಗಳನ್ನು । **ದರ್ಮಾಣಂ**—ಸೀಳಿಹಾಕುವವನೂ । **ಗರ್ಭಂ**—ಅರಣಿಗಳಲಿ ಗರ್ಭರೂಪದಿಂದ ಇರುವವನೂ । **ವನಾಂ**—ಎಲ್ಲರಿಂದಲೂ ಪ್ರಶಂಸಿತನೂ । **ಹರಿಶ್ಮಶ್ರುಂ**—ಸುವರ್ಣದಂತೆ ಥಳಥಳಿಸುವ ಕೇಶವುಳ್ಳ । **ಅರ್ವಾಣಂ ನ**

—ಅಶ್ವದಂತೆ ಸುವರ್ಣಚ್ಛಾಯೆಯುಳ್ಳ ಜ್ವಾಲೆಗಳಿಂದ ಕೂಡಿರುವವನೂ । **ಧನರ್ಚಂ**—ಸ್ತುತಿಪ್ರಿಯನೂ ಆದ ಅಗ್ನಿಯನ್ನು ಸ್ತುತಿಸುತ್ತಾರೆ. । **ನಯಂತಃ**—ಹವಿರಾದಿಗಳಿಂದ ಸೇವಿಸುವ ಋತ್ವಿಕ್ಕುಗಳು । **ಧಿಯಂ**—ಯಜ್ಞಕರ್ಮ ನಿರ್ವಾಹಕ್ಕಾಗಿ ಅಥವಾ ಸ್ತೋತ್ರಗಳನ್ನು ಕೇಳುವುದಕ್ಕಾಗಿ । **ಭುಃ**—ಯಜ್ಞಭೂಮಿಗೆ ಕರೆತರುತ್ತಾರೆ. ।

**ಭಾವಾರ್ಥ**

ಎಲೈ ಸ್ತೋತೃವೇ, ನೀನು ಮಹಾತ್ಮನಾದವನೂ, ಮೇಧಾವಿಗಳಾದ ಋತ್ವಿಕ್ಕುಗಳನ್ನು ಪೋಷಿಸುವವನೂ ಆದ ಅಗ್ನಿಯನ್ನು ಸ್ತುತಿಸಲು ಸಮರ್ಥನಾಗಿರು. ಮೂಢರಾದ ಪುರುಷರೂ ಸಹ ವಿವೇಕಿಯಾದವನೂ, ಶತ್ರುಪುರಗಳನ್ನು ಸೀಳಿಹಾಕುವವನೂ, ಅರಣಿಗಳಲ್ಲಿ ಗರ್ಭರೂಪದಿಂದ ಇರುವವನೂ, ಎಲ್ಲರಿಂದಲೂ ಪ್ರಶಂಸಿತನೂ, ಸುವರ್ಣದಂತೆ ಥಳಥಳಿಸುವ ಕೇಶರಾಶಿಯುಳ್ಳ ಅಶ್ವದಂತೆ ಸುವರ್ಣಮಯಜ್ವಾಲೋಪೇತನೂ, ಸ್ತುತಿಪ್ರಿಯನೂ ಆದ ಅಗ್ನಿಯನ್ನು ಸ್ತುತಿಸುತ್ತಾರೆ. ಹವಿರಾದಿಗಳನ್ನು ಒಯ್ದು ಅರ್ಪಿಸುವ ಋತ್ವಿಜರು ಯಜ್ಞಕರ್ಮನಿರ್ವಾಹಕ್ಕಾಗಿ ಅಗ್ನಿಯನ್ನು ಯಜ್ಞವೇದಿಗೆ ಒಯ್ಯುತ್ತಾರೆ.

## English Translation

Be competent, (priest, to glorify) the victorious mighty Agni; the sustainer of the wise, (even) fools (adore) him, the exempt from folly, the demolisher of cities; conducting the embryo of touchwood, (Agni), like a golden-haired, swift-moving (horse), loving praise and wealth, they bring him to the sacrifice.

**ಸಂಹಿತಾಪಾಠಃ**

ನಿ ಪಸ್ತ್ಯಾಸು ತ್ರಿತಃ ಸ್ತಭೂಯನ್ಪರಿವೀತೋ ಯೋನೌ ಸೀದದಂತಃ ।
ಅತಃ ಸಂಗೃಭ್ಯಾ ವಿಶಾಂ ದಮೂನಾ ವಿಧರ್ಮಣಾಯಂತ್ರೈರೀಯತೇ ನೄನ್॥

**ಪದಪಾಠಃ**

ನಿ । ಪಸ್ತ್ಯಾಸು । ತ್ರಿತಃ । ಸ್ತಭುऽಯನ್ । ಪರಿऽವೀತಃ । ಯೋನೌ । ಸೀದತ್ । ಅಂತರಿತಿ ।
ಅತಃ । ಸಂऽಗೃಭ್ಯ । ವಿಶಾಂ । ದಮೂನಾಃ । ವಿऽಧರ್ಮಣಾ । ಅಯಂತ್ರೈಃ । ಈಯತೇ । ನೄನ್ ॥೬॥

**ಸಾಯಣಭಾಷ್ಯಂ**

ತ್ರಿತಸ್ತ್ರಿಷು ಸ್ಥಾನೇಷು ಗಾರ್ಹಪತ್ಯಾದಿಷು ತಾಯಮಾನಃ ಸ್ತಭೂಯನ್ ಯಜಮಾನಗೃಹಾನ್ ಸ್ತಂಭಯಿತುಮಿಚ್ಛನ್ ॥ ಇಚ್ಛಾರ್ಥೇ ಕ್ಯಚಿ ತದಂತಾಚ್ಛತರಿ ರೂಪಂ ॥ ಪರಿವೀತಃ ಪರಿತೋ ಜ್ವಾಲಾಭಿ-

**ವ್ಯಾಪ್ತಃ ಸನ್ ಪಸ್ತ್ಯಾಸು ಯಾಗಗೃಹೇಷು ಯೋನಾವಂತಃ ಸ್ವೀಯೇ ವೇದ್ಯಾತ್ಮಕೇ ಸ್ಥಾನೇ ನಿಷೀದತ್ । ನಿಷೀದತಿ । ಅತೋಽಸ್ಮಾತ್ಸ್ಥಾನಾದ್ವಿಶಾಂ ಪ್ರಜಾನಾಂ ಸಂಬಂಧೀನಿ ಹವೀಂಷಿ ಸಂಗೃಭ್ಯ ಸಂಗೃಹ್ಯೇಂದ್ರಾದೀನುದ್ದಿಶ್ಯ ಪ್ರತ್ತಾನಿ ಚರುಪುರೋಡಾಶಾದೀನಿ ಸ್ವೀಕೃತ್ಯ ದಮೂನಾ ದೇವೇಭ್ಯೋ ದಾನಮನಾ ಯಜಮಾನಾಯ ವಾಭಿಮತಪ್ರದಾನಮನಾ ವಿಧರ್ಮಣಾ ತಾಸಾಂ ವಿವಿಧೇನ ಕರ್ಮಣಾ ನಿಮಿತ್ತೇನ ದಾನಮನಾ ದೇವೇಭ್ಯೋ ದಾನಪಕ್ಷೇ ವಿವಿಧಗಮನರೂಪೇಣ ಕರ್ಮಣಾಂಯಂತ್ರೈಃ ಶತ್ರೂಣಾಂ ನಿಯಮನೈಃ ಸಹ ನೄನ್ದೇವಾನೀಯತೇ । ಗಚ್ಛತಿ ॥**

ಪ್ರತಿಪದಾರ್ಥ

**ತ್ರಿಸ್ಥಃ**—ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿ ಎಂಬ ಮೂರು ಅಗ್ನಿಕುಂಡಗಳಲ್ಲಿ ಸ್ಥಾಪಿತನಾದ ಅಗ್ನಿಯು **ಸ್ತಭೂಯನ್**—ಯಜಮಾನರ ಗೃಹಗಳನ್ನು ದೃಢವಾಗಿ ಸ್ಥಾಪಿಸುತ್ತಾ । **ಪರಿವೀತಃ**—ಸುತ್ತಲೂ ಜ್ವಾಲೆಗಳಿಂದ ವ್ಯಾಪ್ತನಾಗಿ । **ಪಸ್ತ್ಯಾಸು**—ಯಾಗಗೃಹಗಳ(ಲ್ಲಿ) । **ಯೋನಾ**—ಮಧ್ಯದಲ್ಲಿರುವ ಯಜ್ಞವೇದಿಯಲ್ಲಿ । **ನಿ ಷೀದತ್**—ಕುಳಿತುಕೊಳ್ಳುತ್ತಾನೆ. । **ಅತಃ**—ಈ ಸ್ವಸ್ಥಾನದಲ್ಲಿ ಕುಳಿತುಕೊಂಡೇ । **ವಿಶಾಂ**—ಪ್ರಜೆಗಳು ಅರ್ಪಿಸುವ ಹವಿರಾದಿಗಳನ್ನು । **ಸಂಗೃಭ್ಯ**—ಸ್ವೀಕರಿಸಿ ಎಂದರೆ ಇಂದ್ರಾದಿದೇವತೆಗಳನ್ನುದ್ದೇಶಿಸಿ ತನ್ನಲ್ಲಿ ಅರ್ಪಿಸಿದ ಚರುಪುರೋಡಾಶಾದಿಗಳನ್ನು ಆ ದೇವತೆಗಳಿಗೆ ತಲುಪಿಸುವ ಉದ್ದಿಶ್ಯದಿಂದ ಸ್ವೀಕರಿಸಿ । **ದಮೂನಾಃ**—ಆ ಹವಿರಾದಿಗಳನ್ನು ದೇವತೆಗಳಿಗೆ ಕೊಡಲಿಚ್ಛೆಯುಳ್ಳವನಾಗಿ ಅಥವಾ ಯಜಮಾನನಿಗೆ ಇಷ್ಟಾರ್ಥಗಳನ್ನು ಕೊಡಲಿಚ್ಛೆಯುಳ್ಳವನಾಗಿ । **ವಿಧರ್ಮಣಾ**—ನಾನಾವಿಧ ಕರ್ಮಗಳಿಂದ ಅಥವಾ ಮಾರ್ಗಗಳಿಂದ । **ಯಂತ್ರೈಃ**—ಶತ್ರುಗಳನ್ನು ದಮನ ಮಾಡುತ್ತಾ । **ನೄನ್**—ದೇವತೆಗಳ ಬಳಿಗೆ । **ಈಯತೇ**—ಹೋಗುತ್ತಾನೆ.

ಭಾವಾರ್ಥ

ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿ ಎಂಬ ಮೂರು ಅಗ್ನಿಕುಂಡಗಳಲ್ಲಿ ಸ್ಥಾಪಿತನಾಗಿರುವ ಅಗ್ನಿಯು ಯಜಮಾನರ ಗೃಹಗಳನ್ನು ದೃಢವಾಗಿರುವಂತೆ ಮಾಡುತ್ತಾ ಸುತ್ತಲೂ ಪ್ರಸರಿಸಿರುವ ಜ್ವಾಲೆಗಳಿಂದ ವ್ಯಾಪ್ತನಾಗಿ ಯಜ್ಞಗೃಹದ ಮಧ್ಯದಲ್ಲಿರುವ ಯಜ್ಞವೇದಿಯಲ್ಲಿ ಕುಳಿತುಕೊಳ್ಳುತ್ತಾನೆ. ಈ ಯಜ್ಞವೇದಿಯಲ್ಲಿ ಕುಳಿತಿರುವಾಗಲೇ ಇಂದ್ರಾದಿ ದೇವತೆಗಳಿಗಾಗಿ ಪ್ರಜೆಗಳು ಅಗ್ನಿಯಲ್ಲಿ ಅರ್ಪಿಸುವ ಹವಿರಾದಿಗಳನ್ನು ಸ್ವೀಕರಿಸಿ ಅವುಗಳನ್ನು ದೇವತೆಗಳ ಬಳಿಗೆ ಒಯ್ಯಲು ಇಚ್ಛೆಯಿಂದ ಶತ್ರುಗಳನ್ನು ದಮನಮಾಡುವ ಆ ಅಗ್ನಿಯು ನಾನಾವಿಧ ಕರ್ಮಗಳ ಅಥವಾ ಮಾರ್ಗಗಳ ಮೂಲಕ ದೇವತೆಗಳ ಬಳಿಗೆ ಹೋಗುತ್ತಾನೆ.

## English Translation

Occupying three (stations), consolidating (the dwelling of the worshipper), surrounded (by flames), he sits down upon the altar in the chambers (of sacrifice); from thence, having accepted (the oblations) of the people, with intent to give (them to the gods), in various ways, he (Agni) goes to the gods holding (his foes) in check.

ವಿಶೇಷವಿಷಯಗಳು

ಪ್ರಕೃತವಾದ ಋಕ್ಕಿನಲ್ಲಿ **ತ್ರಿತ** ನೆಂದು ವರ್ಣಿತನಾದ ಅಗ್ನಿಯ ಪ್ರಶಂಸೆಯಿರುತ್ತದೆ. **ತ್ರಿತ** ಶಬ್ದಕ್ಕೆ ಸಾಯಣರು **ತ್ರಿಷು ಸ್ಥಾನೇಷು ಗಾರ್ಹಪತ್ಯಾದಿಷು ತಾಯಮಾನಃ** ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ ಎಂಬ ಮೂರು ರೂಪಗಳಿಂದ ಮೂರು ಸ್ಥಾನಗಳಲ್ಲೂ ಇದ್ದು ಯಜ್ಞವನ್ನು ರಕ್ಷಿಸತಕ್ಕ ಅಗ್ನಿಯೆಂದರ್ಥಮಾಡಿದ್ದಾರೆ.

ತ್ರಿತನೆಂಬ ಋಷಿಯ ವಿಷಯವನ್ನು ಹಿಂದೆ ತಿಳಿಸಿದೆ. (ಋಗ್ವೇದ ಸಂಹಿತಾ vol 8 P 443-7) ಪ್ರಕೃತದಲ್ಲಿ ದೇವತಾಪರವಾದ ಈ ವಿಶೇಷಣವು ಯಾವ ದೇವತೆಯ ವಿಷಯವನ್ನು ತಿಳಸುವುದೆಂಬ ವಿಷಯವನ್ನು ಪರಿಶೀಲಿಸಲಾಗುತ್ತದೆ.

ದೇವತಾಪರವಾದ **ತ್ರಿತ** ಶಬ್ದಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಹೇಳುವುದು ಸುಲಭವಲ್ಲ. ಈ ವಿಷಯದಲ್ಲಿ ವೈದಿಕ ಸಂಪ್ರದಾಯವನ್ನು ಅನುಸರಿಸಿ ನಿರ್ವಚನವನ್ನು ತಿಳಿಸುವ ಪಂಡಿತರೂ ಹಾಗೆಯೇ ಅನೇಕ ಆಂಗ್ಲ ಪಂಡಿತರೂ ಚರ್ಚಿಸಿದ್ದಾರೆ. ಒಬ್ಬೊಬ್ಬರು ಒಂದೊಂದು ಅರ್ಥವನ್ನು ಹೇಳಿದ್ದಾರೆ. ಋಕ್ಸಂಹಿತೆಯ ಮತ್ತು ಇತರ ಆಧಾರಗಳಿಂದ ತ್ರಿತನ ಸ್ವರೂಪವೇನೆಂಬುದನ್ನು ಸಾಧ್ಯವಾದಷ್ಟು ತಿಳಿಯಬಹುದಾದರೆ ಯಾಸ್ಕಾದಿ ವೈದಿಕ ವ್ಯಾಖ್ಯಾಕಾರರ ಅಭಿಪ್ರಾಯವನ್ನು ಮೊದಲು ಗಮನಿಸಬೇಕು.

ನಿರುಕ್ತಕಾರರು ಈ ಪದಕ್ಕೆ ಎರಡು ಕಡೆಗಳಲ್ಲಿ ವಿವರಣೆಯನ್ನು ಹೇಳಿದ್ದಾರೆ. ಮೊದಲನೆಯದಾಗಿ ಋಷಿ ವಿಷಯವನ್ನು ಹೇಳುವ ವಿವರಣೆಯಿದೆ.

> **ತ್ರಿತಂ ಕೂಪೇಽವಹಿತಮೇತತ್ಸೂಕ್ತಂ ಪ್ರತಿಬಭೌ । ತತ್ರ ಬ್ರಹ್ಮೇತಿಹಾಸಮಿಶ್ರಮೃಙ್ಮಿಶ್ರಂ ಗಾಥಾಮಿಶ್ರಂ ಭವತಿ ॥**
>
> (ನಿ. ೪-೬)

ಇತ್ಯಾದಿಯಾಗಿ ಋಷಿವಿಷಯಕವಾದ ವಿವರಣವನ್ನು ಹಿಂದೆ ತಿಳಿಸಿದೆ.

ಹೀಗೆಯೇ ೧-೧೮೭-೧ ನೇ ಋಕ್ಕನ್ನು ವಿವರಿಸುವಾಗ ಸಾಯಣರು "**ಕ್ಷಿತ್ಯಾದಿಸ್ಥಾನೇಷು ತಾಯಮಾನಃ ಇಂದ್ರಃ**" ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕಗಳಲ್ಲಿ ರಕ್ಷಕನಾಗಿರತಕ್ಕ ಇಂದ್ರನೆಂದು ಅರ್ಥಮಾಡಿದ್ದಾರೆ. ಇದೇ ಋಕ್ಕನ್ನು ನಿರುಕ್ತಕಾರರೂ ವಿವರಿಸುತ್ತ "**ತ್ರಿಸ್ಥಾನ ಇಂದ್ರಃ**" ಎಂದು ಹೇಳಿದ್ದಾರೆ. ತ್ರಿಸ್ಥಾನವೆಂದರೇನೆಂದು ತಿಳಿಸಿಲ್ಲ. ಪ್ರಾಯಃ ಸಾಯಣರು ಹೇಳುವಂತೆ ಪೃಥಿವ್ಯಾದಿ ಲೋಕತ್ರಯವೇ ಆಗಿರಬೇಕು. ಅಲ್ಲದೆ, ವಾಯು ಮತ್ತು ಸೋಮ ಇವರಿಗೂ ಈ ವಿಶೇಷಣವಿರುತ್ತದೆ. ಆದುದರಿಂತ **ತ್ರಿತ** ಶಬ್ದಕ್ಕೆ ಆಯಾ ಸಂದರ್ಭಾನುಸಾರ ಅರ್ಥವೇ ಅಥವಾ ಕೇವಲ ಒಂದು ದೇವತೆಯನ್ನು ಮಾತ್ರ ನಿರ್ದೇಶಿಸುವ ವಿಶೇಷಣವೇ ಎಂಬುದನ್ನು ಪ್ರಕೃತ ಪರಿಶೀಲಿಸಬೇಕು.

**ತ್ರಿತ** ನೆಂಬ ಹೆಸರು ಋಕ್ಸಂಹಿತೆಯಲ್ಲಿ ಒಟ್ಟಿಗೆ ನಲವತ್ತು ಕಡೆಗಳಲ್ಲಿ ಪ್ರಯುಕ್ತವಾಗಿದೆ. (೩, ೪ ಮತ್ತು ೭ ನೇ ಮಂಡಲಗಳಲ್ಲಿ ಈ ಹೆಸರಿಲ್ಲ) ತ್ರಿತನೆಂಬ ದೇವತೆಯನ್ನೇ ಉದ್ದೇಶಿಸಿ ಯಾವ ಸೂಕ್ತವೂ ಪ್ರತ್ಯೇಕವಾಗಿ ಈ ದೇವತೆಯನ್ನೇ ಪ್ರಶಂಸಿಸುವ ಸಂದರ್ಭವಿಲ್ಲ ಅಥವಾ, ಯಾಸ್ಕರಿಂದ ವಿಭಾಗಿಸಲ್ಪಟ್ಟಿರುವ ದೇವತೆಗಳ ನಡುವೆಯೂ ಈ ಹೆಸರಿಲ್ಲ. ವೈದಿಕ ಸಂಪ್ರದಾಯವನ್ನು ಪೂರ್ಣವಾಗಿ ಅರಿಯದಿದ್ದರೂ ಈ ವಿಷಯದಲ್ಲಿ ಅನೇಕ ದೃಷ್ಟಿಯಿಂದ

ಪರಿಶ್ರಮವನ್ನು ಹೊಂದಿ ವಿಮರ್ಶೆ ಮಾಡಿರುವ ಕೆಲವು ಆಂಗ್ಲ ಪಂಡಿತರ ಅಭಿಪ್ರಾಯಗಳನ್ನು ಮೊದಲು ತಿಳಿಸಿ ಅನಂತರ ಆ ಅಭಿಪ್ರಾಯಗಳು ಸರಿಯೇ ಅಲ್ಲವೇ ಎಂಬುದನ್ನು ವಿಮರ್ಶಿಸಲಾಗುತ್ತದೆ.

" ಇಂದ್ರ ಮತ್ತು ತ್ರಿತ ಎರಡೂ ಒಂದೇ ದೇವತೆಯನ್ನು ನಿರ್ದೇಶಿಸತಕ್ಕವು. ತ್ರಿತನೆಂಬುದು ಇಂದ್ರನಿಗೆ ಮಾತ್ರ ನಿರ್ದಿಷ್ಟವಾಗಿರುವ ವಿಶೇಷಣ " ವೆಂದು ಕುಹ್ನ್ ಎಂಬುವರ ಅಭಿಪ್ರಾಯ. " ವಾಯುವಿನ ಸ್ವರೂಪವನ್ನು ತಿಳಿಸತಕ್ಕ ವಿಶೇಷಣ " ವೆಂದು Roth ಎಂಬುವರು ತಿಳಿಸಿದ್ದಾರೆ.

" ದುಷ್ಟ ಶಕ್ತಿಯನ್ನು ನಾಶಮಾಡಿ ವೃಷ್ಟಿಯನ್ನು ಸುರಿಸುವ ದೇವತೆ. ಸೋಮವೇ ಈ ದೇವತೆಗೆ ಶಕ್ತಿ ದಾಯಕವಾದ ರಸ. ಆದುದರಿಂದ ಇಂದ್ರ ಮತ್ತು ವಾಯು ಎಂಬ ಎರಡು ದೇವತೆಗಳ ಶಕ್ತಿಯೂ ವ್ಯಕ್ತವಾಗುತ್ತದೆ" ಎಂದು Benfey ಎಂಬುವರು ಊಹಿಸಿದ್ದಾರೆ. ಹೀಗೆಯೇ ಇನ್ನೂ ಅನೇಕ ಅಭಿಪ್ರಾಯಗಳಿರುತ್ತವೆ.

ಈ ಪದಕ್ಕೆ ಯಾಸ್ಕರು ತೋರಿಸಿರುವ ನಿರ್ವಚನವನ್ನೂ, ವಿವರಣವನ್ನೂ ಮೇಲೆ ತಿಳಿಸಿದೆ. ಸುಮಾರು ಇಪ್ಪತ್ತು ಸನ್ನಿವೇಶಗಳಲ್ಲಿ ಸಾಯಣರು ಈ ಪದಕ್ಕೆ **ತ್ರಿತ**ನೆಂಬ ಅರ್ಥ ಮಾಡಿದ್ದಾರೆ. ಉಳಿದವುಗಳಲ್ಲಿ " **ತ್ರಿಷು ಸ್ಥಾನೇಷು ತಾಯಮಾನಃ** " ಎಂಬ ವಿವರಣವನ್ನು ಹೇಳಿ ಆಯಾ ಸಂದರ್ಭಕ್ಕನುಸಾರವಾಗಿ ಇಂದ್ರ, ವಾಯು ವರುಣ ಮತ್ತು ಅಗ್ನಿ ಈ ಎಲ್ಲ ದೇವತೆಗಳ ಪರವಾಗಿಯೂ ಅರ್ಥ ಮಾಡಿದ್ದಾರೆ.

ಈ ವಿಧವಾದ ತಾತ್ಪರ್ಯವೈವಿಧ್ಯವಿರುವುದರಿಂದ ಈ ಪದಕ್ಕೆ ಒಂದೇ ನಿಷ್ಕೃಷ್ಟವಾದ ಅರ್ಥವನ್ನು ಹೇಳಲಾಗುವುದಿಲ್ಲ. ಆದುದರಿಂದ ಈ ಪದದ ಪ್ರಯೋಗಗಳು ಇರುವ ಸನ್ನಿವೇಶಗಳನ್ನು ಗಮನಿಸಿ ಆಯಾ ಸಂದರ್ಭಗಳು ಏನು ಎಂದು ಪರಿಶೀಲಿಸಿ ಯಥಾಮತಿ ವಿವರಿಸಲಾಗುತ್ತದೆ.

ಒಟ್ಟಿಗೆ ನಲವತ್ತು ಸಲ ಈ ಪದದ ಪ್ರಯೋಗವಿರುವಾಗ—

೧) ಇಂದ್ರನೊಡಗೂಡಿ ಹದಿನಾರು ಸಲ ಪ್ರಯುಕ್ತವಾಗಿದೆ.
೨) ಒಂದುಸಲ ಮಾತ್ರ ವೈಯಕ್ತಿಕವಾಗಿ ವೃತ್ರಹಂತಕನೆಂದು ಪ್ರಶಂಸಿಸಲ್ಪಟ್ಟಿದೆ.
೩) ಒಂದುಸಲ ವಾರುಣಾಶ್ವದೊಂದಿಗೆ ತಾದಾತ್ಮ್ಯವನ್ನು ಹೇಳಿದೆ.
೪) ನಾಲ್ಕುಸಲ ಮರುತ್ತುಗಳೊಡನೆ ಸಾಹಚರ್ಯವನ್ನು ತಿಳಿಸಿದೆ.
೫) ಏಳುಸಲ ಅಗ್ನಿಯ ವೈಶಿಷ್ಟ್ಯವನ್ನು ಪ್ರಶಂಸಿಸುತ್ತದೆ.
೬) ವರುಣನೊಂದಿಗೆ ಒಂದುಕಡೆ ತಾದಾತ್ಮ್ಯವನ್ನು ಹೇಳಿದೆ.
೭) ಸೋಮನ ಗುಣವರ್ಣನೆ ನಾಲ್ಕು ಕಡೆಗಳಲ್ಲಿ.
೮) ಆರು ಸಲ ಗುಹ್ಯಪ್ರದೇಶದಲ್ಲಿ ವಾಸಮಾಡತಕ್ಕ ದೇವತೆಯೆಂದು ವರ್ಣಿತವಾಗಿದೆ.

೧) ಋ. ಸಂ. ೮-೨-೨೪ ರಲ್ಲಿ ಇಂದ್ರನೂ, ತ್ರಿತನೂ ಒಟ್ಟಿಗೆ ವೃತ್ರನನ್ನು ಎದುರಿಸುತ್ತಿದ್ದಾರೆಂದು ವರ್ಣಿಸಿದೆ. ಆಗ ಮರುತ್ತುಗಳು ತ್ರಿತನಿಗೆ ಶಕ್ತಿಪ್ರದರೆಂದೂ ತಿಳಿಸಿದೆ. ಸಾಯಣರು ಈ ಸಂದರ್ಭದಲ್ಲಿ **ತ್ರಿತೆ ಆಪ್ತ್ಯ**ನೆಂಬ ರಾಜರ್ಷಿಯೆಂದು ವಿವರಿಸಿದ್ದಾರೆ. (**ತ್ರಿತ ಆಪ್ತ್ಯ** ಎಂಬ ಪ್ರಯೋಗವನ್ನು ಮುಂದೆ ವಿವರಿಸಲಾಗುತ್ತದೆ.)

೨) ೧-೫೨-೪, ೫ ಇಲ್ಲಿಯೂ ವಲನೆಂಬ ಅಸುರನೊಡನೆ ಯುದ್ಧವು ವರ್ಣಿತವಾಗಿದೆ. ಇಂದ್ರ ಮತ್ತು ತ್ರಿತ ಇಬ್ಬರೂ ವಲನನ್ನು ಎದುರಿಸುತ್ತಿದ್ದಾರೆ ಮತ್ತು ವೃಷ್ಟಿಪತನಕ್ಕೆ ಸಹಾಯ ಮಾಡುತ್ತಿದ್ದಾರೆ. ಏಕತ, ದ್ವಿತ, ಮತ್ತು ತ್ರಿತರೆಂಬ ಮೂವರಲ್ಲಿ ಒಬ್ಬನೆಂದು ಸಾಯಣರ ವಿವರಣೆಯಿದೆ.

೩) ೫-೮೬-೧ ಇದು ಇಂದ್ರಾಗ್ನಿಗಳನ್ನು ಒಟ್ಟಿಗೆ ಪ್ರಶಂಸಿಸುವ ಮಂತ್ರ. " **ತ್ರಿತಃ ಋಷಿಃ ಅಥವಾ ತ್ರಿಷು ಸ್ಥಾನೇಷು ವರ್ತಮಾನಃ ಅಗ್ನಿಃ** " ಋಷಿಯೆಂದೂ ಅರ್ಥ ಅಥವಾ ಮೂರು ಸ್ಥಾನಗಳಲ್ಲಿಯೂ ವ್ಯಾಪಿಸಿರುವ ಅಗ್ನಿ ಎಂಬ ಪರ್ಯಾಯಾತ್ಮಕವಾದ ವಿವರಣೆಯನ್ನು ಸಾಯಣರು ಹೇಳಿದ್ದಾರೆ.

೪) ೫-೮-೭ ತ್ರಿತನು ವೃತ್ರನೊಂದಿಗೆ ಯುದ್ಧ ಮಾಡಲು ಸಿದ್ಧಪಡಿಸಿಕೊಳ್ಳುವ ಸನ್ನಿವೇಶ. ಸಾಯಣರು ಋಷಿಯೆಂದೂ, ಇನ್ನು ಕೆಲವರು ವಾಯುವೆಂದೂ ಅಭಿಪ್ರಾಯಪಟ್ಟಿದ್ದಾರೆ.

೫) ೫-೮-೮ ಮತ್ತು ೯ ಇಂದ್ರನಿಂದ ಪ್ರೇರಿತನೂ, ಇಂದ್ರನ ಸಹಾಯವನ್ನು ಪಡೆಯುವವನೂ ಆದ ತ್ರಿತನು ತ್ವಷ್ಟೃವಿನ ಪುತ್ರನಾದ ವಿಶ್ವರೂಪನನ್ನು ಎದುರಿಸಿ ಸೀಳುವ ಸನ್ನಿವೇಶ. ವೃಷ್ಟಿಕಾರಕನೆಂದೂ ವರ್ಣಿತನಾಗಿದ್ದಾನೆ.

೬) ೧೦-೯೯-೬ " **ತ್ರಿತೋ ನ್ಯೋಜಸಾ ವೃಧಾನೋ ವಿಸಾ ವರಾಹಮಯೋ ಅಗ್ರಯಾ ಹನ್** " ಉಕ್ಕಿನ ವಜ್ರದಿಂದ ವರಾಹಾಸುರನನ್ನು ನಾಶ ಮಾಡಿದನು ಎಂದಿದೆ. ಇಂದ್ರನಿಗೂ ತ್ರಿತನಿಗೂ ತಾದಾತ್ಮ್ಯವಿರುತ್ತದೆ.

೭) ೧೦-೪೮-೨ " **ತ್ರಿತಾಯ ಗಾ ಅಜನಯಮಹೇರಧಿ** " ತ್ರಿತನಿಗಾಗಿ ನಾನು ಅಹಿಯಿಂದ ಗೋವನ್ನು ಉತ್ಪನ್ನ ಮಾಡಿದೆನು ಎಂದು ಇಂದ್ರನು ತ್ರಿತನಿಗೆ ಮಾಡಿದ ಸಹಾಯವನ್ನು ತಾನೇ ಹೇಳಿಕೊಳ್ಳುತ್ತಾನೆ. ಬಾವಿಗೆ ಬಿದ್ದಿದ್ದ ತ್ರಿತ ಆಪ್ತ್ಯನಿಗೆ ಮಾಡಿದ ಸಹಾಯವೆಂದು ಇಲ್ಲಿ ಸಾಯಣರ ವಿವರಣೆಯಿದೆ.

೮, ೯) ೨-೧೧-೧೯, ೨೦) ತ್ರಿತನು ಸೋಮವನ್ನು ಹಿಂಡಿ ಇಂದ್ರನಿಗೆ ಅರ್ಪಿಸಿದ ಫಲವಾಗಿ ಇಂದ್ರನು ಉತ್ತೇಜಿತನಾಗಿ ವಲನನ್ನು ನಾಶಪಡಿಸಿದನು ಎಂದು ತಿಳಿಸಿದೆ. ಈ ಸಂದರ್ಭದಲ್ಲಿ ಕೆಲವರು ತ್ರಿತನಿಗೂ, ಸೋಮನಿಗೂ ತಾದಾತ್ಮ್ಯವನ್ನು ತೋರಿಸಿದ್ದಾರೆ. ಇಲ್ಲಿ **ತ್ರಿತಸ್ಯ** ಎಂಬ ಪದಕ್ಕೆ ಸಾಯಣರು **ತ್ರಿತಾಯ** ಎಂದರ್ಥಮಾಡಿ ತ್ರಿತನಿಗಾಗಿ ಇಂದ್ರನು ಚಕ್ರಪ್ರಯೋಗ ಮಾಡಿದನು. ಆದುದರಿಂದ ತ್ರಿತನೆಂದರೆ ಇಲ್ಲಿ **ತ್ರಿತ**ಸಂಜ್ಞಕನಾದ ಋಷಿಯೆಂದರ್ಥವೆಂದಭಿಪ್ರಾಯಪಟ್ಟಿದ್ದಾರೆ.

೧೦) ೮-೧೨-೧೬, ೧೭ ತ್ರಿತ ಆಪ್ತ್ಯನು ರಾಜರ್ಷಿಯೆಂದು ಸಾಯಣರ ಮತ,

೧೧) ೮-೫೨-೧ ,, ,,

೧೨-೧೬) ೯-೩೨-೨; ೯-೩೮-೨; ೯-೩೪-೪; ೯-೮೬-೨೦; ೧-೧೬೩-೨ ಈ ಐದು ಸಂದರ್ಭಗಳೂ ಒಂದೇ ಅರ್ಥವನ್ನು ತೋರಿಸುವುದಾದರೂ ಕೊನೆಯ ಋಕ್ಕಿನಲ್ಲಿ ವಿಶೇಷಾರ್ಥವಿರುತ್ತದೆ. ಸಾಯಣರು ಮೊದಲಿನ ನಾಲ್ಕು ಕಡೆಗಳಲ್ಲಿಯೂ ಋಷಿಯೆಂದು ಅರ್ಥ ಮಾಡಿ ಕೊನೆಯ ಋಕ್ಕಿನಲ್ಲಿ **ವಾಯು** ವೆಂಬ ಅರ್ಥವನ್ನು ತೋರಿಸಿದ್ದಾರೆ. " **ಯಮೇನ ದತ್ತಂ ತ್ರಿತಃ** " ಎನ್ನುವ ವಾಕ್ಯಕ್ಕೆ " **ಪೃಥಿವ್ಯಾದಿಷು ತ್ರಿಷು ಸ್ಥಾನೇಷು ವರ್ತಮಾನಃ ತೀರ್ಣತಮೋ ವಾ ವಾಯುಃ** " ಎಂಬ ವಿವರಣೆಯಿದೆ.

## II. ವಾರುಣಾಶ್ವದೊಡನೆ ಐಕ್ಯ

೧೭) " **ಅಸಿ ಯಮೋ ಅಸ್ಯಾದಿತ್ಯೋ ಅರ್ವನ್ನಸಿ ತ್ರಿತಃ** " (೧-೧೬೩-೨)ಇಲ್ಲಿ **ಯಮ, ಆದಿತ್ಯ, ತ್ರಿತ** ಎಂಬ ಮೂರು ದೇವತೆಗಳ ಅಂಶವೂ ವಾರುಣಾಶ್ವದಲ್ಲಿರುತ್ತದೆಂಬ ವಿವರಣವಿದೆ. **ತ್ರಿತ** ಶಬ್ದಕ್ಕೆ ಏನರ್ಥವೆಂದು

ಸಾಯಣರು ನಿಷ್ಕೃಷ್ಟವಾಗಿ ಹೇಳಿಲ್ಲ. **ಯೆಮ** ಶಬ್ದಕ್ಕೆ ಅಗ್ನಿಯೆಂದರ್ಥ ಮಾಡಿದ್ದಾರೆ. **ತ್ರಿತ**ನೆಂದರೆ ಮೂರು ಪ್ರದೇಶಗಳಲ್ಲೂ ಸಂಚರಿಸುವ ವಾಯುವಾಗಬಹುದು ಅಥವಾ ಋಷಿಯಾದರೂ ಆಗಬಹುದು ಎಂದು ಅಭಿಪ್ರಾಯಪಡುತ್ತಾರೆ.

### III. ವೃತ್ರಹಂತಕನಾದ **ತ್ರಿತ**

೧೮) ೧-೧೮೭-೧ ಸಾಯಣರು ತ್ರಿತ ಶಬ್ದಕ್ಕೆ ಇಲ್ಲಿ ಇಂದ್ರನೆಂಬ ಅರ್ಥವೆಂದು ಊಹಿಸಿದ್ದಾರೆ ಎಂಬ ವಿಷಯವನ್ನು ಮೇಲೆ ತಿಳಿಸಿದೆ.

### IV. ತ್ರಿತನಿಗೂ ಮರುತ್ತುಗಳಿಗೂ ಇರುವ ಸಾಹಚರ್ಯವನ್ನು ತೋರಿಸುವ ಸಂದರ್ಭಗಳು

೧೯) ೨-೩೪-೧೦ ರುದ್ರಪುತ್ರರಾದ ಮರುತ್ತುಗಳು ತ್ರಿತನನ್ನು ಬಂಧನದಿಂದ ಬಿಡಿಸಿದರು ಎಂಬುದೇ ಈ ಋಕ್ಕಿನ ತಾತ್ಪರ್ಯ. ಬಂಧನದ ಸ್ವರೂಪವೆಂತಹುದು; ತ್ರಿತನು ಯಾರು ಎಂದು ವಿವರಿಸಲು ಅನೇಕರು ಪ್ರಯತ್ನಪಟ್ಟಿದ್ದಾರೆ. ಯಾರಿಗೂ ಸರಿಯಾಗಿ ಅರ್ಥವಾಗಿಲ್ಲ. ಈ ಸಂದರ್ಭದಲ್ಲಿ Max muller ಎಂಬ ಪಂಡಿತನು ಈ ಪದಕ್ಕೆ ನಿಷ್ಕೃಷ್ಟವಾದ ತಾತ್ಪರ್ಯವನ್ನು ಹೇಳಬೇಕೆಂದು ಬಹಳ ಪ್ರಯಾಸಪಟ್ಟು ಕೊನೆಗೆ "Its true meaning remains as unfathomable as ever" ಅದರ ಅರ್ಥವು ಕೊನೆಗೂ ಗಂಭೀರವಾಗಿಯೇ (ಅಸ್ಪಷ್ಟವಾಗಿಯೇ) ಉಳಿಯಿತು ಎಂದಿದ್ದಾನೆ.

೨೦-೨೧) ೨-೩೪-೧೪; ೫-೫೪-೨. ಈ ಎರಡು ಸಂದರ್ಭಗಳಲ್ಲೂ ಮೇಲೆ ಉದಾಹರಿಸಿರುವ ಋಕ್ಕಿನಲ್ಲಿರುವಂತೆಯೇ ಮರುತ್ತುಗಳೊಡನಿರುವ ಸಾಹಚರ್ಯವನ್ನು ತೋರಿಸಿದೆ. ಪ್ರಾಯಃ ಋಷಿಯೆಂಬ ತಾತ್ಪರ್ಯವಿರಬಹುದು ಆದರೆ ೫. ೫೪. ೨. ನೇ ಋಕ್ಕನ್ನು ವಿವರಿಸುವಾಗ ಸಾಯಣರು **ತ್ರಿಷು ಸ್ಥಾನೇಷು ತಾಯಮಾನೋ ಮೇಘೋ ಮರುದ್ಗಣೋ ವಾ** ಮೂರು ಸ್ಥಾನಗಳನ್ನು ವ್ಯಾಪಿಸಿ ರಕ್ಷಕವಾಗಿರುವ ಮೇಘ ಅಥವಾ ಮರುದ್ಗಣವಾಗಿರಬಹುದು ಎಂದಭಿಪ್ರಾಯಪಟ್ಟಿದ್ದಾರೆ.

೨೨) ೧೦-೧೧೫-೪. ಯುದ್ಧಾತುರರಾದ ಮರುತ್ತುಗಳು ಮೇಘಗಳ ನಡುವೆ ತ್ರಿತ ರೂಪದಲ್ಲಿ ಅಡಗಿದ್ದ ಅಗ್ನಿಯನ್ನು ಕಂಡುಹಿಡಿದರು ಎಂದು ಋಕ್ಕಿನ ತಾತ್ಪರ್ಯ. ಸಾಯಣರೂ ಇಲ್ಲಿ **ತ್ರಿತ** ಶಬ್ದಕ್ಕೆ ಅಗ್ನಿಯೆಂದೇ ಅರ್ಥ ಮಾಡಿದ್ದಾರೆ.

### V. ತ್ರಿತನಿಗೂ ಅಗ್ನಿಗೂ ಇರುವ ತಾದಾತ್ಮ್ಯ ಅಥವಾ ಸಾಹಚರ್ಯ.

೨೩) ೫-೯-೫. ಅಂತರಿಕ್ಷದಲ್ಲಿ ಹರಡಿದ ಅಗ್ನಿಯ ಜ್ವಾಲೆಯು ಪ್ರಸರಿಸಲು ಅಂತರಿಕ್ಷಸ್ಥನಾದ ತ್ರಿತನು ಉತ್ತೇಜನವನ್ನು ಕೊಡುತ್ತಾನೆ ಎಂಬ ವಿವರಣವುಳ್ಳ ಈ ಋಕ್ಕಿನಲ್ಲಿ **ತ್ರಿತ** ಶಬ್ದಕ್ಕೆ ವಾಯುವೆಂದು ಕೆಲವರೂ ಅಗ್ನಿಯೆಂದು ಕೆಲವರೂ ಅರ್ಥಮಾಡಿದ್ದಾರೆ. ಸಾಯಣರ ರೀತ್ಯಾ ಅಗ್ನಿಯೆಂದೇ ಅರ್ಥ.

೨೪) **೫-೪೧-೪.** ವಾತ, ಅಗ್ನಿ, ಪೂಷ ಇವರೊಂದಿಗೆ ಕೂಡಿಕೊಂಡಿರುವ ತ್ರಿತನು ನಮ್ಮ ಯಾಗಕ್ಕೆ ಬಂದಿದ್ದಾನೆ ಎಂಬ ತ್ರಿತನ ಸ್ತುತಿಯಿದೆ. ತ್ರಿತನೂ ಅಗ್ನಿಯೂ ಬೇರೆ ಬೇರೆ ಎಂಬ ಅಭಿಪ್ರಾಯವು ಕೆಲವರದು. ತ್ರಿತ ಶಬ್ದವು ಇಲ್ಲಿ ಅಗ್ನಿಪರ್ಯಾಯವಾಗಿದೆಯೆಂಬ ಅಭಿಪ್ರಾಯವು ಕೆಲವರದು. ಸಾಯಣರು ಮಾತ್ರ **ವಾತ** ಶಬ್ದಕ್ಕೆ ಇದು ವಿಶೇಷಣವಾಗಿದೆಯೆಂಬ ಅಭಿಪ್ರಾಯವನ್ನು ತಿಳಿಸಿದ್ದಾರೆ.

೨೫) ೫-೪೧-೯. ೧೦. **ಅಪ್ತ್ಯ, ಅಪಾಂ ನಪಾತಂ** ಎಂಬ ವಿಶೇಷಣಗಳು ತ್ರಿತ ರೂಪನಾದ ಅಗ್ನಿಯನ್ನು ವರ್ಣಿಸುತ್ತವೆ. ಸಾಯಣರೂ ಅಗ್ನಿಯೆಂದೇ ಅರ್ಥ ಮಾಡಿದ್ದಾರೆ.

೨೬) ೧೦-೪೬-೩ ಇಲ್ಲಿ ತ್ರಿತನ ತೇಜಸ್ಸು ವರ್ಣಿತವಾಗಿರುವುದರಿಂದ ಅಗ್ನಿಯೆಂದು ಕೆಲವರಮತ. ಸಾಯಣರು ಋಷಿಯೆಂದರ್ಥ ಮಾಡಿದ್ದಾರೆ.

೨೭) ೧೦-೪೬-೬- ಇದೇ ಪ್ರಕೃತವಾದ ಋಕ್ಕು ಇದರ ವಿವರಣವನ್ನು ಮೇಲೆ ತಿಳಿಸಿದೆ. ಇಲ್ಲಿ ಗೃಹಪತಿಯಾದ ಅಗ್ನಿಯೆಂದರ್ಥ.

೨೮) ೧೦-೬೪-೩ ಇವೆರಡೂ ವೈದ್ಯುತಾಗ್ನಿಯನ್ನುದ್ದೇಶಿಸಿದವಾಗಿವೆ.

೨೯) ೨-೩೧-೬ ,,

## VI. ತ್ರಿತನಿಗೂ ವರುಣನಿಗೂ ತಾದಾತ್ಮ್ಯ ನಿರ್ದೇಶ

೩೦) ೮-೪೧-೬ ಮಿತ್ರ ವರುಣ ಮತ್ತು ಅರ್ಯಮ ಇತ್ಯಾದಿ ದೇವತೆಗಳಿಗೆ ನಾಭಿರೂಪನಾದ ಅಗ್ನಿಯಾಗಬಹುದು. ಅಥವಾ ಸಾಯಣರು ಹೇಳಿರುವಂತೆ ವರುಣದೇವತೆಯಾಗಬಹುದು. ಇಲ್ಲಿ ವೈದ್ಯುತಾಗ್ನಿಯೆಂದು ಹೇಳಲೂ ಅಧಿಕಾರವಾದ ಅವಕಾಶವಿರುತ್ತದೆ.

## VII. ತ್ರಿತನಿಗೂ ಸೋಮನಿಗೂ ತಾದಾತ್ಮ್ಯ ಅಥವಾ ಸಾಹಚರ್ಯ

೩೧-೩೪) ೯-೩೭-೪; ೯-೯೫-೪; ೯-೧೦೨-೨; ೯-೧೦೨-೩ ಈ ನಾಲ್ಕು ಸಂದರ್ಭಗಳಲ್ಲೂ ಸೋಮನಿಗೂ ತ್ರಿತನಿಗೂ ಇರುವ ನಿಕಟವಾದ ಸಂಬಂಧವನ್ನು ತಿಳಿಸಿದೆ. ಕೆಲವೆಡೆಗಳಲ್ಲಿ ತ್ರಿತನು ಸೋಮವನ್ನು ಹಿಂಡಿ ಇಂದ್ರನಿಗೆ ಅರ್ಪಿಸಿದ ವಿಷಯವನ್ನು ತಿಳಿಸಿದೆ. ಇನ್ನು ಕೆಲವೆಡೆಗಳಲ್ಲಿ ಸೋಮನೇ ತ್ರಿತರೂಪದಲ್ಲಿರುವ ವಿಷಯವನ್ನೂ ತಿಳಿಸಿದೆ.

## VIII. ತ್ರಿತನು ಗುಹ್ಯವಾದ ಅಂತರಿಕ್ಷದಲ್ಲಿ ಅಡಗಿರುವುದು

೩೫) ೧-೧೦೫-೯ ತ್ರಿತ ಆಪ್ತ್ಯನು ಆದಿತ್ಯನ (ಅಗ್ನಿಯ) ಸಪ್ತರಶ್ಮಿಗಳನ್ನೂ ತಿಳಿದಿರುತ್ತಾನೆಂದು ವಿವರಿಸಿದೆ. ಹಿಂದೆ ಇದೇ ಋಕ್ಕನ್ನು ವಿವರಿಸುವಾಗ ತ್ರಿತ ಆಪ್ತ್ಯನೆಂಬ ಋಷಿಯೆಂದು ತಿಳಿಸಿದೆ. ಮೇಘಾಂತರ್ಗತನಾದ ವೈದ್ಯುತಾಗ್ನಿಯೆಂಬುದಕ್ಕೂ ಅವಕಾಶವಿರುತ್ತದೆ. ಹೀಗೆಯೇ,

೩೬-೪೦) ೧-೧೦೫-೧೭; ೮-೪೭-೧೩; ೮-೪೭-೧೪; ೮-೪೭-೧೫; ೮-೪೭-೧೬ ಈ ಎಲ್ಲಾ ಸಂದರ್ಭಗಳಲ್ಲೂ ಮೇಘಾಂತರ್ಗತನಾದ ವೈದ್ಯುತಾಗ್ನಿಯೆಂದರ್ಥಮಾಡುವ ಅವಕಾಶವಿರುತ್ತದೆ.

ಮೇಲೆ ಉದ್ಧೃತವಾದ ವಾಕ್ಯಗಳಲ್ಲಿ ತ್ರಿತನ ಸ್ವರೂಪವು ಅನೇಕ ವಿಧವಾಗಿ ವರ್ಣಿತವಾಗಿದೆ. ಇವನು ಇಂದ್ರರೂಪನೇ, ವಾಯುರೂಪನೇ ಅಥವಾ ಅಗ್ನಿರೂಪನೇ ಎಂಬ ಪ್ರಶ್ನೆಯು ಸಹಜವಾಗಿದೆ. ಆದರೆ, ಮೇಲಿನ ಎಲ್ಲ ಸನ್ನಿವೇಶಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದರೆ ಆಗ **ತ್ರಿತನ** ಒಂದು ಅಂಶವು ಮಾತ್ರ ಎಲ್ಲಾ ಸನ್ನಿವೇಶಗಳಲ್ಲೂ ಸಮಾನವಾಗಿ ಕಂಡುಬರುತ್ತದೆ.

ತ್ರಿತನು ವೈದ್ಯುತಾಗ್ನಿಯಲ್ಲದೆ ಬೇರೆಯಲ್ಲ ಎಂಬ ನಿಷ್ಕೃಷ್ಟವಾದ ಅರ್ಥವು ಸಾಧ್ಯವೆನ್ನುವುದಕ್ಕೆ ಮೇಲಿನ ಎಲ್ಲಾ ವಾಕ್ಯಗಳಲ್ಲೂ ಆಧಾರವು ಸಿಕ್ಕುತ್ತದೆ.

ವೃತ್ರಾದಿಗಳೊಡನೆ ಇಂದ್ರನ ಯುದ್ಧವು ಬಂಧಿತವಾಗಿದ್ದ ಮೇಘವನ್ನು ಸಡಿಲಿಸಿ ವೃಷ್ಟಿಯನ್ನು ಸುರಿಸುವ ಉದ್ದಿಶ್ಯವನ್ನು ಹೊಂದಿರುತ್ತದೆ. ಈ ಸಂದರ್ಭದಲ್ಲಿ ತ್ರಿತನ (ವೈದ್ಯುತಾಗ್ನಿಯ) ಸಹಾಯವಿದ್ದೇ ತೀರಬೇಕು. ಈ ಕಾರಣದಿಂದಲೇ ವಾರುಣಾಶ್ವವೂ ತ್ರಿತಸಂಜ್ಞಕವಾಗಿರುತ್ತದೆ. ಈ ವಾರುಣಾಶ್ವವು ಆದಿತ್ಯಾಂಶವಾದ ದಿವ್ಯಜ್ಯೋತಿ ಎಂದು ಹಿಂದೆ ತಿಳಿಸಿದೆ. ಈ ವೈದ್ಯುತಾಗ್ನಿಯು ಅಗ್ನ್ಯಂಶವೇ ಆಗಿರುವುದರಿಂದ ಅಗ್ನಿಗೂ, ತ್ರಿತನಿಗೂ ಇರುವ ತಾದಾತ್ಮ್ಯವು ಸಹಜವಾಗಿಯೇ ಇರುತ್ತದೆ. ಅಲ್ಲದೆ **ತ್ರಿಷಧಸ್ಥ**ನಾದ ಅಗ್ನಿಯೇ **ತ್ರಿತ** ಸಂಜ್ಞಕನೆಂದು ಹಿಂದೆ ವಿವರಿಸಿದೆ. (೧-೪೫-೧, ೨) ಹೀಗೆಯೇ ಸೋಮ ಮತ್ತು ವರುಣಾದಿಗಳೊಡನೆ ತಾದಾತ್ಮ್ಯವನ್ನು ಹೇಳುವಾಗಲೂ ಇದೇ ಅರ್ಥವೆಂದು ತಿಳಿಯಬೇಕು.

ಆದುದರಿಂದ ತ್ರಿತನಿಗೂ ಇಂದ್ರನಿಗೂ ಇರುವ ಸಂಬಂಧವನ್ನು ಅಗ್ನಿಗೂ ಇಂದ್ರನಿಗೂ ಇರುವ ಸಂಬಂಧ ವರ್ಣನೆಯೆಂದರೆ ತಪ್ಪಾಗಲಾರದು. ಇಂದ್ರಾಗ್ನಿಗಳು ಅನೇಕವೇಳೆ ಒಟ್ಟಿಗೆ ವರ್ಣಿತರಾಗಿದ್ದಾರೆ ಮತ್ತು ಒಟ್ಟಿಗೆ ವೃತ್ರಾಸುರಹಂತಕರೆಂದೂ ಪ್ರಶಂಸಿತರಾಗಿದ್ದಾರೆ.

ಎಲ್ಲಕ್ಕಿಂತಲೂ ಅಧಿಕವಾಗಿ ತ್ರಿತ ಆಪ್ತ್ಯನೆಂಬ ವಿಶೇಷಣವು ಗಮನಾರ್ಹವಾದುದು. ಅಗ್ನಿಯ ಮೂರು ಭ್ರಾತೃಗಳ ವಿಷಯವನ್ನು ಹಿಂದೆ ತೈತ್ತಿರೀಯ ಸಂಹಿತಾವಾಕ್ಯವನ್ನುದಾಹರಿಸಿ ತಿಳಿಸಿದೆ. ಅಲ್ಲಿ ತ್ರಿತನ ಸ್ಥಾನವನ್ನೂ, ತ್ರಿತನೆಂಬುದಕ್ಕೆ ಅರ್ಥವನ್ನೂ ತಿಳಿಸಿದೆ ಮತ್ತು ಹಿಂದೆ (೧೦-೪೫-೨ ನೇ ಋಕ್ಕಿನ ವಿಶೇಷವಿಷಯಗಳಲ್ಲಿ) ಶಥಪಥ ಮತ್ತು ತೈತ್ತಿರೀಯ ಬ್ರಾಹ್ಮಣಗಳನ್ನೂ ಉದಾಹರಿಸಿ ತ್ರಿತನ ನಿರ್ದಿಷ್ಟ ಸ್ಥಾನವನ್ನು ವಿವರಿಸಿದೆ.

ಒಟ್ಟಿನಲ್ಲಿ ಮೂರು ಲೋಕಗಳನ್ನೂ ವ್ಯಾಪಿಸಿರುವುದರಿಂದ ಅಗ್ನಿಯು ತ್ರಿತನೆಂದು ವ್ಯವಹರಿಸಲ್ಪಟ್ಟಿದ್ದಾನೆಂದು ಪ್ರಕೃತವಾದ ಋಕ್ಕಿನಲ್ಲಿ ಸಾಯಣರು ವಿವರಿಸಿದ್ದಾರೆ.

**ಸಂಹಿತಾಪಾಠಃ**

ಅಸ್ಯಾಜರಾಸೋ ದಮಾಮರಿತ್ರಾ ಅರ್ಚದ್ಧೂಮಾಸೋ ಅಗ್ನಯಃ ಪಾವಕಾಃ
ಶ್ವಿತೀಚಯಃ ಶ್ವಾತ್ರಾಸೋ ಭುರಣ್ಯವೋ ವನರ್ಷದೋ ವಾಯವೋ ನ
ಸೋಮಾಃ ॥ ೭ ॥

**ಪದಪಾಠಃ**

ಅಸ್ಯ । ಅಜರಾಸಃ । ದಮಾಂ । ಅರಿತ್ರಾಃ । ಅರ್ಚತ್ಽಧೂಮಾಸಃ । ಅಗ್ನಯಃ । ಪಾವಕಾಃ ।
ಶ್ವಿತೀಚಯಃ । ಶ್ವಾತ್ರಾಸಃ । ಭುರಣ್ಯವಃ । ವನಽಸದಃ । ವಾಯವಃ । ನ । ಸೋಮಾಃ ॥ ೭ ॥

ಸಾಯಣಭಾಷ್ಯಂ

ಅತ್ರ ಬಹುತ್ವೇನ ಸ್ತೂಯತೇ । ಅಸ್ಯ ಯಜಮಾನಸ್ಯ ಸಂಬಂಧಿನೋಽಜರಾಸೋ ಜರಾರಹಿತಾ ಡಮಾಂ ದಮನೀಯಾನಾಂ ರಕ್ಷಃಪ್ರಭೃತೀನಾಂ॥ ದಮೇಃ ಕ್ವಿಪಿ ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ॥ ತೇಷಾಮರಿತ್ರಾಸ್ತಾರಕಾ ಅರ್ಚದ್ಧೂಮಾಸೋಽರ್ಚಂತೋಽರ್ಚನೀಯಾ ಧೂಮಾ ಧೂಮೋಪಲಕ್ಷಿತಾ ಜ್ವಾಲಾ ವಾ ಏಷಾಂ ತೇ ತಥೋಕ್ತಾಃ ಪಾವಕಾಃ ಶೋಧಕಾಃ ಶ್ವಿತೀಚಯಃ ಶ್ವೇತಿಮಾನಮಂಚಂತಃ ॥ ಶ್ವಿತಿಃ ಶ್ವೇತಃ । ಔಣಾದಿಕ ಇಃ ॥ ಶ್ವಾತ್ರಾಸಃ । ಕ್ಷಿಪ್ರನಾಮೈತತ್ । ಕ್ಷಿಪ್ರಧರ್ಮಕಾ ಭುರಣ್ಯವೋ ಭರಣಶೀಲಾ ವನರ್ಷದೋ ವನೇಷು ಸೀದಂತಃ । ಸಂಹಿತಾಯಾಂ ಛಾಂದಸಂ ರುತ್ವಂ ॥ ವಾಯವೋ ನ ಸೋಮಾ ಗಂತಾರಃ ಸೋಮಾ ಇವ । ಹವಿರ್ದಾತುರ್ಯಜಮಾನಸ್ಯ ಶೀಘ್ರಾ ಭವಂತೀತಿ ।

ಪ್ರತಿಪದಾರ್ಥ

**ಅಸ್ಯ**— ಈ ಯಜಮಾನನ । **ಅಜರಾಸಃ**—ಜರಾರಹಿತವಾದವೂ ಎಂದರೆ ನಾಶವಿಲ್ಲದವೂ । **ದಮಾಂ**— ರಾಕ್ಷಸಾದಿ ಶತ್ರುಗಳನ್ನೂ । **ಅರಿತ್ರಾಃ**—ತಡೆಗಟ್ಟುವವೂ । **ಅರ್ಚದ್ಧೂಮಾಸಃ**—ಪೂಜಾರ್ಹವಾದ ಹೊಗೆ ಅಥವಾ ಜ್ವಾಲೆಗಳಿಂದ ಯುಕ್ತವಾದವೂ । **ಪಾವಕಾಃ**—ಶುದ್ಧಿಕಾರಕವೂ । **ಶ್ವಿತೀಚಯಃ**—ಬೆಳ್ಳಗೆ ಪ್ರಕಾಶಮಾನವಾದವೂ । **ಶ್ವಾತ್ರಾಸಃ**—ಬೇಗನೆ ಸರ್ವತ್ರ ವ್ಯಾಪಿಸುವ ಸ್ವಭಾವವುಳ್ಳವೂ । **ಭುರಣ್ಯವಃ**—ಭರಿಸಿ ಪೋಷಿಸುವ ಸಾಮರ್ಥ್ಯವುಳ್ಳವೂ । **ವನರ್ಷದಃ**—ವೃಕ್ಷಾದಿಗಳ ಮಧ್ಯದಲ್ಲಿ ಗರ್ಭರೂಪದಲ್ಲಿ ಅಡಗಿರುವವೂ ಆದ ಅಗ್ನಿಗಳು ಅಥವಾ ಅಗ್ನಿಜ್ವಾಲೆಗಳು । **ವಾಯವೋ ನ**—ವೇಗವಾಗಿ ಬೀಸುವ ಗಾಳಿಗಳಂತೆ । **ಸೋಮಾಃ**—ಶೀಘ್ರವಾಗಿ ಪ್ರವಹಿಸುವ ಸೋಮರಸಗಳಂತೆ ಹವಿಸ್ಸನ್ನರ್ಪಿಸುವ ಯಜಮಾನನಲ್ಲಿಗೆ ಬೇಗನೆ ಬಂದು ಸೇರುತ್ತವೆ.

ಭಾವಾರ್ಥ

ಯಜಮಾನಸಂಬಂಧವಾದ ಎಂದರೆ ಯಜಮಾನರ ಯಜ್ಞವೇದಿಯಲ್ಲಿ ಪ್ರಜ್ವಲಿತವಾದವೂ, ಜರಾರಹಿತವಾದವೂ ಎಂದರೆ ಬೇಗನೆ ಆರಿಹೋಗದಿರುವವೂ, ರಾಕ್ಷಸಾದಿಗಳು ಯಜ್ಞವೇದಿಗೆ ಬರದಂತೆ ತಡೆಗಟ್ಟುವವೂ, ಪೂಜಾರ್ಹವಾದ ಹೊಗೆ ಅಥವಾ ಜ್ವಾಲೆಗಳಿಂದ ಯುಕ್ತವಾದವೂ, ಶುದ್ಧಿಕಾರಕವೂ, ಪ್ರಕಾಶಮಾನನಾದವೂ, ಬೇಗನೆ ಸರ್ವತ್ರ ವ್ಯಾಪಿಸುವ ಸಾಮರ್ಥ್ಯವುಳ್ಳವೂ, ಯಜ್ಞವನ್ನು ಭರಿಸುವವೂ, ವೃಕ್ಷಾದಿಗಳ ಮಧ್ಯದಲ್ಲಿ ಅಡಗಿರುವವೂ ಆದ ಅಗ್ನಿಗಳು ಅಥವಾ ಅಗ್ನಿಜ್ವಾಲೆಗಳು ವೇಗವಾಗಿ ಬೀಸುವ ಗಾಳಿಗಳಂತೆಯೂ, ಶೀಘ್ರವಾಗಿ ಪ್ರವಹಿಸುವ ಸೋಮರಸಗಳಂತೆಯೂ ಹವಿಸ್ಸನ್ನರ್ಪಿಸುವ ಯಜಮಾನರಲ್ಲಿಗೆ ಬಂದು ಸೇರಲಿ.

## English Translation

The undecaying fires of the worshipper, the rescuers from the humiliated (spirits of ill), having adorable smoke, purifying, becoming white, swift, bearing (the oblation), sitting in the wood, (are) like the fast-flowing juices of the Soma.

ಸಂಹಿತಾಪಾಠಃ

ಪ್ರ ಜಿಹ್ವಯಾ ಭರತೇ ವೇಪೋ ಅಗ್ನಿಃ ಪ್ರ ವಯುನಾನಿ ಚೇತಸಾ ಪೃಥಿವ್ಯಾಃ ।
ತಮಾಯವಃ ಶುಚಯಂತಂ ಪಾವಕಂ ಮಂದ್ರಂ ಹೋತಾರಂ ದಧಿರೇ
ಯಜಿಷ್ಠಂ ॥ ೮ ॥

ಪದಪಾಠಃ

ಪ್ರ । ಜಿಹ್ವಯಾ । ಭರತೇ । ವೇಪಃ । ಅಗ್ನಿಃ । ವಯುನಾನಿ । ಚೇತಸಾ । ಪೃಥಿವ್ಯಾಃ ।
ತಂ । ಆಯವಃ । ಶುಚಯಂತಂ । ಪಾವಕಂ । ಮಂದ್ರಂ । ಹೋತಾರಂ । ದಧಿರೇ । ಯಜಿಷ್ಠಂ ॥ ೮ ॥

ಸಾಯಣಭಾಷ್ಯಂ

**ಯೋಽಗ್ನಿರ್ಜಿಹ್ವಯಾ ಜ್ವಾಲಯಾ ವೇಪಃ । ಕರ್ಮನಾಮೈತತ್ । ಕರ್ಮ ಪ್ರ ಭರತೇ ತಥಾ ಯೋಽಗ್ನಿರ್ವಯುನಾನಿ ಪ್ರಜ್ಞಾನಾನಿ ಸ್ತೋತ್ರಾಣಿ ಪೃಥಿವ್ಯಾ ರಕ್ಷಣಾಯ ಚೇತಸಾನುಗ್ರಹಯುಕ್ತೇನ ಮನಸಾ ಪ್ರ ಭರತೇ ತಮಗ್ನಿಮಾಯವೋ ಗಂತಾರೋ ಮನುಷ್ಯಾಃ ಶುಚಯಂತಂ ದೀಪ್ಯಮಾನಂ ಪಾವಕಂ ಶೋಧಕಂ ಮಂದ್ರಂ ಸ್ತುತ್ಯಂ ಹೋತಾರಮಾಹ್ವಾತಾರಂ ಹೋಮನಿಷ್ಪಾದಕಂ ವಾ ಯಜಿಷ್ಠಮತಿಶಯೇನ ಯಷ್ಟವ್ಯಂ ಯಷ್ಟೃತಮಂ ವಾ ದಧಿರೇ । ಧಾರಯಂತಿ ॥**

ಪ್ರತಿಪದಾರ್ಥ

**(ಯಃ) ಅಗ್ನಿಃ**—ಯಾವ ಅಗ್ನಿಯು । **ಜಿಹ್ವಯಾ**—ತನ್ನ ಜ್ವಾಲೆಯಿಂದ । **ವೇಪಃ**—ಯಜ್ಞಕರ್ಮವನ್ನು । **ಪ್ರ ಭರತೇ**—ಧರಿಸಿ ನಿರ್ವಹಿಸುವನೋ । (ಮತ್ತು) **ವಯುನಾನಿ**—ಸ್ತೋತ್ರಗಳನ್ನು । **ಪೃಥಿವ್ಯಾಃ**—ಭೂಮಿಯ ರಕ್ಷಣೆಗಾಗಿ । **ಚೇತಸಾ**—ಅನುಗ್ರಹಾತ್ಮಕವಾದ ಬುದ್ಧಿಯಿಂದ । **ಪ್ರ (ಭರತೇ)**—ಸ್ವೀಕರಿಸಿ ದೇವತೆಗಳ ಬಳಿಗೆ ಒಯ್ಯುವನೋ । **ತಂ**—ಅಂತಹ ಅಗ್ನಿಯನ್ನು । **ಆಯವಃ**—ಮನುಷ್ಯರು । **ಶುಚಯಂತಂ**—ಪ್ರಕಾಶಿಸುವವನೂ । **ಪಾವಕಂ**—ಶುದ್ಧಿಕಾರಕನೂ । **ಮಂದ್ರಂ**—ಸ್ತುತ್ಯರ್ಹನೂ । **ಹೋತಾರಂ**—ಹೋಮನಿಷ್ಪಾದಕನೂ ಅಥವಾ ದೇವತೆಗಳನ್ನು ಆಹ್ವಾನಮಾಡುವವನೂ । **ಯಜಿಷ್ಠಂ**—ಪೂಜಾರ್ಹನೂ ಅಥವಾ ದೇವತೆಗಳನ್ನು ಪೂಜಿಸುವವನೂ ಆಗಿರುವನೆಂದು । **ದಧಿರೇ**—ಭಾವಿಸಿ ಧರಿಸುತ್ತಾರೆ.

ಭಾವಾರ್ಥ

ಯಾವ ಅಗ್ನಿಯು ತನ್ನ ಜ್ವಾಲೆಯಿಂದ ಯಜ್ಞಕರ್ಮವನ್ನು ನಿರ್ವಹಿಸಬಲ್ಲನೋ, ಯಾವ ಅಗ್ನಿಯು ಭೂಮಿಯ ರಕ್ಷಣೆಗಾಗಿ ಅನುಗ್ರಹಾತ್ಮಕವಾದ ಬುದ್ಧಿಯಿಂದ ಮನುಷ್ಯರ ಸ್ತೋತ್ರಗಳನ್ನು ದೇವತೆಗಳ ಬಳಿಗೆ ಒಯ್ಯುವನೋ ಅಂತಹ ಅಗ್ನಿಯನ್ನು ಮನುಷ್ಯರು, ಅತ್ಯಂತ ಪ್ರಕಾಶದಿಂದ ಬೆಳಗುವವನೂ, ಶುದ್ಧಿಕಾರಕನೂ, ಸ್ತುತ್ಯರ್ಹನೂ, ದೇವತೆಗಳನ್ನು ಆಹ್ವಾನಮಾಡುವವನೂ, ಪೂಜಾರ್ಹನೂ ಅಥವಾ ದೇವತೆಗಳನ್ನು ಮನುಷ್ಯರ ಪರವಾಗಿ ಪೂಜಿಸುವವನೂ ಆಗಿರುವನೆಂದು ಭಾವಿಸಿ ಧರಿಸುತ್ತಾರೆ.

## Euglish Translation.

Agni who bears off (the oblation) with his tongue (of flames),who bears off the hymns of praise with(favourable) mind (for the preservation of the earth ; him men have appointed as the shining, purifying, exulting hotri the most entitled to worship.

ಸಂಹಿತಾಪಾಠಃ

ದ್ಯಾವಾ ಯಮಗ್ನಿಂ ಪೃಥಿವೀ ಜನಿಷ್ಟಾಮಾಪಸ್ತ್ವಷ್ಟಾ ಭೃಗವೋ ಯಂ ಸಹೋಭಿಃ ।
ಈಳೇನ್ಯಂ ಪ್ರಥಮಂ ಮಾತರಿಶ್ವಾ ದೇವಾಸ್ತತಕ್ಷುರ್ಮನವೇ ಯಜತ್ರಂ ॥ ೯ ॥

ಪದಪಾಠಃ

ದ್ಯಾವಾ । ಯಂ । ಅಗ್ನಿಂ । ಪೃಥಿವೀ ಇತಿ । ಜನಿಷ್ಟಾಂ । ಆಪಃ । ತ್ವಷ್ಟಾ । ಭೃಗವಃ । ಯಂ । ಸಹಃಽಭಿಃ
ಈಳೇನ್ಯಂ । ಪ್ರಥಮಂ । ಮಾತರಿಶ್ವಾ । ದೇವಾಃ । ತತಕ್ಷುಃ । ಮನವೇ । ಯಜತ್ರಂ ॥ ೯ ॥

ಸಾಯಣಭಾಷ್ಯಂ

ಯಮಗ್ನಿಂ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಜನಿಷ್ಟಾಂ ಅಜನಿಷಾತಾಂ ॥ ಜನೇರ್ಲುಙಿ ವ್ಯತ್ಯಯೇನ ಪರಸ್ಮೈಪದಂ ॥ ಆಪಶ್ಚ ಯಮುದಪಾದಯನ್ವೈದ್ಯುತರೂಪೇಣ ತ್ವಷ್ಟಾ ಚ ಯಮಜನಯತ್ ಭೃಗವಶ್ಚ ಯಂ ಸಹೋಭಿರ್ಬಲೈಃ ಸ್ತೋತ್ರಾದಿಸಾಧನೈರ್ಲಬ್ಧವಂತಃ । ಭೃಗವೋಽವಿಂದನ್ನಿತಿ ಹ್ಯುಕ್ತಂ । ಋ. ೧೦-೪೬-೨ । ಈಳೇನ್ಯಂ ಸ್ತುತ್ಯಂ ಯಂ ಪ್ರಥಮಂ ಮಾತರಿಶ್ವಾ ವಾಯುರುದಪಾದಯತ್ ಅನ್ಯೇ ದೇವಾಶ್ಚ ಮನವೇ ರಾಜ್ಞೇ ಮನೋರರ್ಥಾಯ ಯಜತ್ರಂ ಯಷ್ಟವ್ಯಮಗ್ನಿಂ ತತಕ್ಷುಃ । ನಿಷ್ಪಾದಿತವಂತಃ ॥

ಪ್ರತಿಪದಾರ್ಥ

**ಯಂ ಅಗ್ನಿಂ**—ಯಾವ ಅಗ್ನಿಯನ್ನು । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳು । **ಜನಿಷ್ಟಾಂ**—ಉತ್ಪನ್ನಮಾಡಿದವೋ । **ಆಪಃ ಚ**—ಉದಕಗಳೂ । **ಯಂ**—ಯಾವ ಅಗ್ನಿಯನ್ನು ವಿದ್ಯುದ್ರೂಪದಿಂದ ಉತ್ಪನ್ನಮಾಡಿದವೋ । **ತ್ವಷ್ಟಾ**—ತ್ವಷ್ಟೃವೂ ಉತ್ಪನ್ನಮಾಡಿದನೋ । **ಭೃಗವಃ**—ಭೃಗುವಂಶದ ಋಷಿಗಳು । **ಸಹೋಭಿಃ**—ಬಾಹುಬಲದಿಂದಲೂ, ಸ್ತೋತ್ರಾಗಳಿಂದಲೂ ಉತ್ಪನ್ನಮಾಡಿದರೋ । **ಈಳೇನ್ಯಂ**—ಸ್ತುತ್ಯರ್ಹನಾದ ಆ ಅಗ್ನಿಯನ್ನು । **ಮಾತರಿಶ್ವಾ**—ಮಾತರಿಶ್ವನು (ವಾಯುವು) । **ಪ್ರಥಮಂ**—ಎಲ್ಲರಿಗಿಂತಲೂ ಮೊದಲು ಪಡೆದನು । **ದೇವಾಃ (ಚ)**—ದೇವತೆಗಳೂ ಕೂಡ । **ಮನವೇ**—ಮನುವೆಂಬ ರಾಜರ್ಷಿಗಾಗಿ । **ಯಜತ್ರಂ**—ಯಜ್ಞಾರ್ಹನಾದ ಅಗ್ನಿಯನ್ನು । **ತತಕ್ಷುಃ**— ಉತ್ಪನ್ನಮಾಡಿ ಪಡೆದರು.

ಭಾವಾರ್ಥ

ಯಾವ ಅಗ್ನಿಯನ್ನು ದ್ಯಾವಾಪೃಥಿವಿಗಳು ಉತ್ಪನ್ನಮಾಡಿದವೋ, ಯಾವ ಅಗ್ನಿಯನ್ನು ಉದಕಗಳು ವಿದ್ಯುದ್ರೂಪದಿಂದ ಉತ್ಪನ್ನಮಾಡಿದವೋ, ತ್ವಷ್ಟೃವೂ, ಭೃಗುಋಷಿಗಳೂ ಸಹ ಶಕ್ತಿಯಿಂದಲೂ, ಸ್ತೋತ್ರಾದಿಪಠನದಿಂದಲೂ ಉತ್ಪನ್ನಮಾಡಿ ಪಡೆದರೋ ಅಂತಹ ಅಗ್ನಿಯನ್ನು ಮಾತರಿಶ್ವನೇ ಮೊದಲು ಕಂಡು ಪಡೆದನು. ದೇವತೆಗಳೂ ಸಹ ಆ ಅಗ್ನಿಯನ್ನು ಮನುವೆಂಬ ರಾಜರ್ಷಿಗಾಗಿ ಉತ್ಪನ್ನಮಾಡಿ ಪಡೆದರು.

English Translation

Agni whom heaven and earth engendered, (whom) the waters and Twashtri, ane the Brighus by their powers (begot); the adorable one, whom Matarishwa first and the gods fabricated as the object of worship for Manu.

ಸಂಹಿತಾಪಾಠಃ

ಯಂ ತ್ವಾ ದೇವಾ ದಧಿರೇ ಹವ್ಯವಾಹಂ ಪುರುಸ್ಪೃಹೋ ಮಾನುಷಾಸೋ ಯಜತ್ರಂ ।
ಸ ಯಾಮನ್ನಗ್ನೇ ಸ್ತುವತೇ ವಯೋ ಧಾಃ ಪ್ರ ದೇವಯನ್ಯಶಸಃ ಸಂ ಹಿ ಪೂರ್ವೀಃ ॥ ೧೦ ॥

ಪದಪಾಠಃ

ಯಂ । ತ್ವಾ । ದೇವಾಃ । ದಧಿರೇ । ಹವ್ಯಽವಾಹಂ । ಪುರುಽಸ್ಪೃಹಃ । ಮಾನುಷಾಸಃ । ಯಜತ್ರಂ ।
ಸಃ । ಯಾಮನ್ । ಅಗ್ನೇ । ಸ್ತುವತೇ । ವಯಃ । ಧಾಃ । ಪ್ರ । ದೇವಽಯನ್ । ಯಶಸಃ । ಸಂ । ಹಿ । ಪೂರ್ವೀಃ ॥ ೧೦ ॥

ಸಾಯಣಭಾಷ್ಯಂ

ಹೇ ಅಗ್ನೇ ಹವ್ಯವಾಹಂ ಯಂ ತ್ವಾ ತ್ವಾಂ ದೇವಾ ದಧಿರೇ ಧಾರಿತವಂತಃ ಮಾನುಷಾಸೋ ಮನುಷ್ಯಾಶ್ಚ ಪುರುಸ್ಪೃಹೋ ಬಹುಕಾಮಾನ್ ಸ್ಪೃಹಯಂತೋ ಯಜತ್ರಂ ಯಷ್ಟವ್ಯಂ ದಧಿರೇ ಧಾರಿತವಂತಃ ಹೇ ಅಗ್ನೇ ಸ ತ್ವಂ ಯಾಮನ್ ಯಾಮನಿ ಯಜ್ಞೇ ಸ್ತುವತೇ ಮಹ್ಯಂ ವಯೋಽನ್ನಂ ಧಾಃ । ದೇಹಿ । ಹೇ ಅಗ್ನೇ ತ್ವತ್ತೋ ದೇವಯನ್ ದೇವಕಾಮೋ ಯಜಮಾನಃ ಪೂರ್ವೀರ್ಬಹ್ವೀರ್ಬಹೂನಿ ಯಶಸೋ ಯಶಾಂಸಿ। ಸಂ ಹೀತ್ಯುಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ । ಸಂಪ್ರಾಪ್ನೋತಿ ಖಲು ॥

### ಪ್ರತಿಪದಾರ್ಥ

(ಎಲೈ ಅಗ್ನಿಯೇ) **ಯಂ ತ್ವಾ**—ಯಾವ ನಿನ್ನನ್ನು | **ದೇವಾಃ**—ದೇವತೆಗಳು | **ಹವ್ಯವಾಹಂ**—ದೇವತೆಗಳಿಗೆ ಹವ್ಯವಾಹಕನನ್ನಾಗಿ | **ದಧಿರೇ**—ನಿಯಮಿಸಿದರೋ | **ಮಾನುಷಾಸಃ**—ಮನುಷ್ಯರೂ ಸಹ | **ಪುರುಸ್ಪೃಹಃ**—ಬಹಳವಾದ ಅಭೀಷ್ಟಗಳನ್ನು ಬಯಸುವವರಾಗಿ | **ಯಜತ್ರಂ**—ಯಜ್ಞಾರ್ಹನಾದ ನಿನ್ನನ್ನು | **ದಧಿರೇ**—ಧರಿಸಿದರೋ | **ಅಗ್ನೇ**—ಎಲೈ ಅಗ್ನಿಯೇ | **ಸಃ**—ಅಂತಹ ನೀನು | **ಯಾಮನ್**—ಯಜ್ಞದಲ್ಲಿ | **ಸ್ತುವತೇ**—ಸ್ತೋತ್ರಮಾಡುವ ನನಗಾಗಿ | **ವಯಃ**—ಅನ್ನವನ್ನು | **ಧಾಃ**—ಕೊಡು | **ದೇವಯನ್**—ದೇವತೆಗಳನ್ನಿಚ್ಛಿಸುವ ಯಜಮಾನನೂ ಸಹ | **ಪೂರ್ವೀಃ**—ಬಹಳವಾದ | **ಯಶಸಃ**—ಕೀರ್ತಿಗಳನ್ನು | **ಸಂ ಹಿ**—ನಿನ್ನ ಮೂಲಕವಾಗಿ ಪಡೆಯುತ್ತಾನೆ.

### ಭಾವಾರ್ಥ

ಎಲೈ ಅಗ್ನಿಯೇ, ಯಾವ ನಿನ್ನನ್ನು ದೇವತೆಗಳು ತಮಗೆ ಹವಿರ್ವಾಹಕನನ್ನಾಗಿ ನಿಯಮಿಸಿದರೋ ಮನುಷ್ಯರೂ ಸಹ ಯಜ್ಞಾರ್ಹನಾದ ನಿನ್ನನ್ನು ಬಹಳವಾದ ಅಭೀಷ್ಟಪ್ರಾಪ್ತಿಗಾಗಿ ಯಜ್ಞಾದಿಗಳಲ್ಲಿ ಧರಿಸಿದರೋ ಅಂತಹ ನೀನು ಯಜ್ಞದಲ್ಲಿ ನಿನ್ನನ್ನು ಸ್ತೋತ್ರಮಾಡುತ್ತಿರುವ ನನಗಾಗಿ ಅನ್ನವನ್ನು ಕೊಡು. ದೇವತೆಗಳನ್ನು ಪೂಜಿಸಲಿಚ್ಛಿಸುವ ಯಜಮಾನನೂ ನಿನ್ನಿಂದಲೇ ಬಹಳವಾದ ಯಶಸ್ಸನ್ನು ಪಡೆಯುತ್ತಾನೆ.

### English Translation

You, whom the gods appointed as the bearer of oblations, whom men, desiring manifold blessings, regard as the object of worship Agni, bestow food upon him who praises you at the sacrifice; for the devout worshipper verily obtains great renown.

## ನಲವತ್ತೇಳನೆಯ ಸೂಕ್ತ

### ಸಾಯಣಭಾಷ್ಯಂ

**ಜಗೃಭ್ಮಾ ತೆ ಇತ್ಯಷ್ಟರ್ಚಂ ಪಂಚಮಂ ಸೂಕ್ತಮಾಂಗಿರಸಸ್ಯ ಸಪ್ತಗುನಾಮ್ನ ಆರ್ಷಂ ತ್ರೈಷ್ಟುಭಂ | ವಿಕುಂಠಾ ನಾಮಾಸುರಸ್ತ್ರೀ | ಸಾ ಚೇಂದ್ರಸದೃಶಂ ಪುತ್ರಂ ಕಾಮಯಮಾನಾ ಕೃಚ್ಛ್ರ-ಚಾಂದ್ರಾಯಣಾದಿಕಂ ತಪಸ್ತೇಪೇ | ಮತ್ಸದೃಶೋಽನ್ಯಃ ಕಶ್ಚಿನ್ಮಾ ಜನಿಷ್ಟೇತಿ ಬುದ್ಧ್ವೇಂದ್ರ ಏವ ತಸ್ಯಾಃ ಪುತ್ರೋಽಜಾಯತ | ತಾದೃಶೋ ವೈಕುಂಠ ಇಂದ್ರೋ ದೇವತಾ | ತಥಾ ಚಾನುಕ್ರಾಂತಂ | ಜಗೃಭ್ಮಾಷ್ಟೌ ಸಪ್ತಗುರ್ವೈಕುಂಠಮಿಂದ್ರಂ ತುಷ್ಟಾವೇತ್ಯಾದಿ || ಗತೋ ವಿನಿಯೋಗಃ ||**

**ಅನುವಾದವು--ಜಗೃಭ್ಮಾ ತೇ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವುವು, ಈ ಸೂಕ್ತಕ್ಕೆ ಆಂಗೀರಸಗೋತ್ರದ ಸಪ್ತಗು ಎಂಬುವನು ಋಷಿಯು. ತ್ರಿಷ್ಟುಪ್ ಛಂದಸ್ಸು. ಪೂರ್ವದಲ್ಲಿ ವಿಕುಂಠಾ ಎಂಬ ಓರ್ವ ಅಸುರ ಸ್ತ್ರೀಯಿದ್ದಳು. ಅವಳು ತನಗೆ ಇಂದ್ರನಿಗೆ ಸಮಾನನಾದ ಪುತ್ರನು ಜನಿಸಬೇಕೆಂದು ಅಪೇಕ್ಷಿಸಿ ಆದಕ್ಕಾಗಿ ಕೃಚ್ಛ್ರಚಾಂದ್ರಾಯಣಾದಿ ನಿಯಮಗಳನ್ನಾಚರಿಸುತ್ತ ತಪಸ್ಸನ್ನು ಮಾಡಿದಳು. ತನಗೆ ಸಮಾನವಾದ ಬೇರೊಬ್ಬನು ಜನಿಸಬಾರದೆಂದು ಇಂದ್ರನು ಯೋಚಿಸಿ ತಾನೇ ಆ ಅಸುರ ಸ್ತ್ರೀಯಲ್ಲಿ ಪುತ್ರನಾಗಿ ಜನಿಸಿದನು. ಈ ಪುತ್ರನೇ ವೈಕುಂಠಇಂದ್ರನೆಂದು ಪ್ರಸಿದ್ಧನಾದನು ಇವನೇ ಈ ಸೂಕ್ತಕ್ಕೆ ದೇವತೆಯು. ಅನುಕ್ರಮಣಿಕೆಯಲ್ಲಿ **ಜಗೃಭ್ಮಾಷ್ಟೌ ಸಪ್ತಗುರ್ವೈಕುಂಠಮಿಂದ್ರಂ ತುಷ್ಟಾವ** ಎಂದು ಹೇಳಿರುವುದು

# ಸೂಕ್ತ—೪೭

ಮಂಡಲ—೧೦ ॥ ಅನುವಾಕ—೪ ॥ ಸೂಕ್ತ—೪೭ ॥
ಅಷ್ಟಕ—೮ ॥ ಅಧ್ಯಾಯ—೧ ॥ ವರ್ಗ—೩, ೪ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ--೮

ಋಷಿಃ--ಸಪ್ತಗುಃ ॥
ದೇವತಾ--ಇಂದ್ರೋ ವೈಕುಂಠಃ ॥
ಛಂದಃ--ತ್ರಿಷ್ಟುಪ್ ॥

ಸಂಹಿತಾಪಾಠಃ

ಜಗೃಭ್ಮಾ ತೇ ದಕ್ಷಿಣಮಿಂದ್ರ ಹಸ್ತಂ ವಸೂಯವೋ ವಸುಪತೇ ವಸೂನಾಂ ।
ವಿದ್ಮಾ ಹಿ ತ್ವಾ ಗೋಪತಿಂ ಶೂರ ಗೋನಾಮಸ್ಮಭ್ಯಂ ಚಿತ್ರಂ ವೃಷಣಂ ರಯಿಂ ದಾಃ ॥ ೧ ॥

ಪದಪಾಠಃ

ಜಗೃಭ್ಮ । ತೇ । ದಕ್ಷಿಣಂ । ಇಂದ್ರ । ಹಸ್ತಂ । ವಸುಽಯವಃ । ವಸುಽಪತೇ । ವಸೂನಾಂ ॥
ವಿದ್ಮ । ಹಿ । ತ್ವಾ । ಗೋಽಪತಿಂ । ಶೂರ । ಗೋನಾಂ । ಅಸ್ಮಭ್ಯಂ । ಚಿತ್ರಂ । ವೃಷಣಂ । ರಯಿಂ । ದಾಃ ॥

ಸಾಯಣಭಾಷ್ಯಂ

ವಸೂನಾಂ ವಸುಪತೇ ಬಹೂನಾಂ ಧನಾನಾಂ ಸ್ವಾಮಿನ್ನಿಂದ್ರ ತೇ ತವ ದಕ್ಷಿಣಂ ಹಸ್ತಂ ವಸೂಯವೋ ವಸುಕಾಮಾ ವಯಂ ಜಗೃಭ್ಮ ಗೃಹ್ಣೀಮಃ । ಯಥಾ ಬಹುಪ್ರದಸ್ಯಾರ್ಥಿನೋ ಮಧ್ಯಮದತ್ವಾತ್ವ ನ ಗಂತವ್ಯಮಿತಿ ಹಸ್ತಂ ಗೃಹ್ಣಂತಿ ತದ್ವತ್ । ಹೇ ಶೂರ ವಿಕ್ರಾಂತೇಂದ್ರ ತ್ವಾ ತ್ವಾಂ ಗೋನಾಂ ಗೋಪತಿಂ । ಅತ್ರ ವೃತ್ತ್ಯವೃತ್ತಿಭ್ಯಾಂ ಸ್ವಾಮಿತ್ವಂ ಬಹುತ್ವಂ ಚ ಪ್ರತಿಪಾದ್ಯತೇ । ಬಹ್ವೀನಾಂ ಗವಾಂ ಗೋಪತಿಂ ವಿದ್ಮ । ಜಾನೀಮಃ । ಅತೋಽಸ್ಮಭ್ಯಂ ಚಿತ್ರಂ ಚಾಯನೀಯಂ ವೃಷಣಂ ವರ್ಷಕಂ ರಯಿಂ ಧನಂ ದಾಃ । ದೇಹಿ ॥

ಪ್ರತಿಪದಾರ್ಥ

**ವಸೂನಾಂ**—ಬಹಳವಾದ ಧನಗಳಿಗೆ । **ವಸುಪತೇ**—ಒಡೆಯನಾದ ಎಲೈ ಇಂದ್ರನೇ । **ತೇ**—ನಿನ್ನ । **ದಕ್ಷಿಣಂ ಹಸ್ತಂ**—ಬಲಗೈಯನ್ನು । **ವಸೂವಯಃ**—ಧನವನ್ನು ಬಯಸುವ ನಾವು । **ಜಗೃಭ್ಮ**—ಹಿಡಿದುಕೊಳ್ಳುತ್ತೇವೆ ! **ಶೂರ**—ಪರಾಕ್ರಮಿಯಾದ ಎಲೈ ಇಂದ್ರನೇ । **ತ್ವಾ**—ನಿನ್ನನ್ನು । **ಗೋನಾಂ**—ಅನೇಕ ಗೋವುಗಳಿಗೆ । **ಗೋಪತಿಂ**—ಒಡೆಯನೆಂಬುದಾಗಿ । **ವಿದ್ಮ**—ತಿಳಿದಿದ್ದೇವೆ । (ಆದ್ದರಿಂದ) **ಅಸ್ಮಭ್ಯಂ**—ನಮಗೆ । **ಚಿತ್ರಂ**—ನಾನಾ ವಿಧವಾದುದೂ । **ವೃಷಣಂ**—ವೃಷ್ಟಿಪ್ರದವಾದುದೂ ಆದ । **ರಯಿಂ**—ಧನವನ್ನು । **ದಾಃ**—ಕೊಡು.

### ಭಾವಾರ್ಥ

ಬಹಳವಾದ ಧನಗಳಿಗೆ ಒಡೆಯನಾದ ಎಲೈ ಇಂದ್ರನೇ, ಧನವನ್ನು ಬಯಸುವ ನಾವು (ನಮಗೆ ಧನವನ್ನು ಕೊಡದೆ ಹಾಗೆಯೇ ಹೋಗಕೂಡದೆಂದು) ನಿನ್ನ ಬಲಗೈಯನ್ನು ಹಿಡಿದುಕೊಳ್ಳುತ್ತೇವೆ. ಪರಾಕ್ರಮಿಯಾದ ಎಲೈ ಇಂದ್ರನೇ, ನಿನ್ನನ್ನು ಅನೇಕ ಗೋವುಗಳಿಗೆ ಒಡೆಯನೆಂದು ನಾವು ತಿಳಿದಿದ್ದೇವೆ. ಆದ್ದರಿಂದ ನಮಗೆ ನಾನಾವಿಧವಾದುದೂ ಇಷ್ಟಾರ್ಥಪ್ರದವಾದುದೂ ಆದ ಧನವನ್ನು ಕೊಡು.

### English Translation

Indra, lord of abundant wealth, we desiring wealth, seize hold of your right hand ; we know you· hero, lord of abundent cattle, give us various fertilizing riches·

### ಸಂಹಿತಾಪಾಠಃ

ಸ್ವಾಯುಧಂ ಸ್ವವಸಂ ಸುನೀಥಂ ಚತುಃಸಮುದ್ರಂ ಧರುಣಂ ರಯೀಣಾಂ ।
ಚರ್ಕೃತ್ಯಂ ಶಂಸ್ಯಂ ಭೂರಿವಾರಮಸ್ಮಭ್ಯಂ ಚಿತ್ರಂ ವೃಷಣಂ ರಯಿಂ ದಾಃ ॥

### ಪದಪಾಠಃ

ಸುಽಆಯುಧಂ । ಸುಽಅವಸಂ । ಸುಽನೀಥಂ । ಚತುಃಽಸಮುದ್ರಂ । ಧರುಣಂ । ರಯೀಣಾಂ ।
ಚರ್ಕೃತ್ಯಂ । ಶಂಸ್ಯಂ । ಭೂರಿಽವಾರಂ । ಅಸ್ಮಭ್ಯಂ । ಚಿತ್ರಂ । ವೃಷಣಂ । ರಯಿಂ । ದಾಃ ॥ ೨ ॥

### ಸಾಯಣಭಾಷ್ಯಂ

ಸ್ವಾಯುಧಂ ಶೋಭನವಜ್ರಾದ್ಯಾಯುಧಂ ಸ್ವವಸಂ ಶೋಭನರಕ್ಷಣಂ ಸುಗಮನಂ ವಾ ಸುನೀಥಂ ಸುನಯನಂ ಚತುಃಸಮುದ್ರಂ ಚತುರಃ ಸಮುದ್ರಾನ್ಯೋ ಯಶಸಾ ವ್ಯಾಪ್ನೋತಿ ತಂ ಧರುಣಂ ಧಾರಕಂ ಕೇಷಾಂ । ರಯೀಣಾಂ ಧನಾನಾಂ । ಚರ್ಕೃತ್ಯಂ ಪುನಃಪುನಃ ಕರ್ತವ್ಯಂ ಶಂಸ್ಯಂ ಸ್ತುತ್ಯಂ ಭೂರಿವಾರಂ ಭೂರೀಣಾಂ ದುಃಖಾನಾಂ ವಾರಕಂ ಬಹುಭಿರ್ವರಣೀಯಂ ವಾ ತ್ವಾಂ ವಿದ್ಮೇತಿ ಶೇಷಃ । ತಾದೃಶೋಽಸ್ಮಭ್ಯಮಿತ್ಯಾದಿ ಪೂರ್ವವತ್ । ಯದ್ವಾ । ಹೇ ಇಂದ್ರ ಉಕ್ತಗುಣವಿಶಿಷ್ಟಂ ಪುತ್ರಾಖ್ಯಂ ರಯಿಂ ದಾಃ । ದೇಹಿ ॥

### ಪ್ರತಿಪದಾರ್ಥ

(ಎಲೈ ಇಂದ್ರನೇ ನಾವು) **ಸ್ವಾಯುಧಂ**—ಉತ್ತಮವಾದ ವಜ್ರಾಯುಧವುಳ್ಳವನೂ । **ಸ್ವವಸಂ**—ಉತ್ತಮವಾದ ರಕ್ಷಣಪ್ರದನೆಂದೂ । **ಸುನೀಥಂ**—ಉತ್ತಮವಾದ ಮಾರ್ಗದರ್ಶಕನೆಂದೂ । **ಚತುಃ ಸಮುದ್ರಂ**—ನಾಲ್ಕು ಸಮುದ್ರಪರ್ಯಂತ ಹರಡಿರುವ ಕೀರ್ತಿಯುಳ್ಳವನೂ । **ರಯೀಣಾಂ**—ಧನಗಳ । **ಧರುಣಂ**—ಧಾರಕನೆಂದೂ । **ಚರ್ಕೃತ್ಯಂ**—ಪುನಃಪುನಃ ಮಾಡಲ್ಪಡುವ । **ಶಂಸ್ಯಂ**—ಸ್ತುತ್ಯರ್ಹನೆಂದೂ । **ಭೂರಿವಾರಂ**—ದುಃಖಗಳನ್ನು ಪರಿಹರಿಸುವವನೆಂದೂ ಅಥವಾ ಅನೇಕರಿಂದ ಅಪೇಕ್ಷಿಸಲ್ಪಡುವವನೆಂದೂ । (**ತ್ವಾಂ ವಿದ್ಮ**—ನಾವು ತಿಳಿದಿದ್ದೇವೆ।

ಎಲೈ ಇಂದ್ರನೇ) **ಅಸ್ಮಭ್ಯಂ**—ನಮಗೆ | **ಚಿತ್ರಂ**—ಅನೇಕ ವಿಧವಾದುದೂ | **ವೃಷಣಂ**—ಪುತ್ರಾದಿ ಸಂತಾನಾತ್ಮಕವಾದುದೂ ಆದ | **ರಯಿಂ**—ಧನವನ್ನು | **ದಾಃ**—ಕೊಡು.

ಭಾವಾರ್ಥ

ಎಲೈ ಇಂದ್ರನೇ, ನೀನು ಉತ್ತಮವಾದ ವಜ್ರಾಯುಧವುಳ್ಳವನೆಂದೂ, ಉತ್ತಮವಾದ ರಕ್ಷಣೆಯನ್ನು ನೀಡುವವನೆಂದೂ, ಉತ್ತಮ ಮಾರ್ಗದರ್ಶಕನೆಂದೂ, ನಾಲ್ಕು ಸಮುದ್ರಪರ್ಯಂತ ಹರಡಿದ ಕೀರ್ತಿಶಾಲಿಯೆಂದೂ, ಧನಗಳ ಧಾರಕನೆಂದೂ ಪುನಃಪುನಃ ಸ್ತುತಿಗೆ ಪಾತ್ರನೆಂದೂ, ದುಃಖಪರಿಹಾರಕನೆಂದೂ ಅಥವಾ ಬಹುಜನರ ಆದರಕ್ಕೆ ಪಾತ್ರನೆಂದೂ ನಾವು ತಿಳಿದಿದ್ದೇವೆ. ಆದ್ದರಿಂದ ಎಲೈ ಇಂದ್ರನೇ, ನಮಗೆ ನಾನಾ ವಿಧವಾದ ಧನವನ್ನೂ ಪುತ್ರಾದಿ ಸಂತತಿಯನ್ನೂ ಕೊಡು.

English Translation

(We know you to be) well armed, a sure protector, a safe guide, (renowned throughout) the four oceans, the depositary of riches, deserving of repeated worship· adorable, the preventer of many (ills): grant us various fertilizing riches.

ಸಂಹಿತಾಪಾಠಃ

ಸುಬ್ರಹ್ಮಾಣಂ ದೇವವಂತಂ ಬೃಹಂತಮುರುಂ ಗಭೀರಂ ಪೃಥುಬುಧ್ನಮಿಂದ್ರ ಶ್ರುತಋಷಿಮುಗ್ರಮಭಿಮಾತಿಷಾಹಮಸ್ಮಭ್ಯಂ ಚಿತ್ರಂ ವೃಷಣಂ ರಯಿಂ ದಾಃ ॥ ೩ ॥

ಪದಪಾಠಃ

ಸುऽಬ್ರಹ್ಮಾಣಂ | ದೇವऽವಂತಂ | ಬೃಹಂತಂ | ಉರುಂ | ಗಭೀರಂ | ಪೃಥುऽಬುಧ್ನಂ | ಇಂದ್ರ | ಶ್ರುತऽಋಷಿಂ | ಉಗ್ರಂ | ಅಭಿಮಾತಿऽಸಹಂ | ಅಸ್ಮಭ್ಯಂ | ಚಿತ್ರಂ | ವೃಷಣಂ | ರಯಿಂ | ದಾಃ ॥ ೩ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ಸುಬ್ರಹ್ಮಾಣಂ | ಬ್ರಹ್ಮ ಪರಿವೃಢಂ ಸ್ತುತಿಲಕ್ಷಣಂ ಕರ್ಮ | ಶೋಭನಸ್ತುತಿಕಮಿತ್ಯರ್ಥಃ | ದೇವವಂತಂ ಬೃಹಂತಂ ಮಹಾಂತಮುರುಂ ವಿಸ್ತೀರ್ಣಂ ಗಂಭೀರಮಸುರಾದಿಭಿರಗಮ್ಯಂ ಪೃಥುಬುಧ್ನಂ ವಿಸ್ತೃತಮೂಲಂ ಶ್ರುತಋಷಿಂ ಶ್ರುತಾ ಋಷಯೋ ಯೇನ ತಾಪೃಶಮೃಷೀಣಾಂ ಖ್ಯಾಪಯಿತಾರಂ ಪ್ರಥಿತಜ್ಞಾನಂ ವೋಗ್ರಮುದ್ಗೂರ್ಣಬಲಂ ಅತ ಏವಾಭಿಮಾತಿಷಾಹಮಭಿಮಾತೀನಾಂ ಶತ್ರೂಣಾಮಭಿಭವಿತಾರಂ ಹಂತಾರಮಸ್ಮಭ್ಯಂ ಚಿತ್ರಂ ಪೂಜ್ಯಂ ವೃಷಣಂ ವರ್ಷಕಂ ಪುತ್ರಂ ರಯಿಂ ಧನಂ ದಾಃ | ದೇಹಿ | ಅಥವಾ ವಿಶೇಷಣವಿಶೇಷ್ಯಭಾವಃ | ಉಕ್ತಲಕ್ಷಣಂ ಪುತ್ರಾಖ್ಯಂ ರಯಿಂ ದಾಃ ॥

### ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ, ನೀನು । **ಸುಬ್ರಹ್ಮಾಣಂ**—ಬ್ರಹ್ಮಸ್ತುತಿರೂಪವಾದ ಸುಬ್ರಹ್ಮಣ್ಯವೆಂಬ ಕರ್ಮದಿಂದ ಪ್ರಶಂಸಿತನಾದವನೂ । **ದೇವಯಂತಂ**—ದೇವತೆಗಳಿಂದ ಸಹಿತನಾದವನೂ । **ಬೃಹಂತಂ**—ಮಹತ್ಸ್ವರೂಪವುಳ್ಳವನೂ । **ಉರುಂ**—ವಿಸ್ತೃತವಾದ ಶರೀರವುಳ್ಳವನೂ । **ಗಭೀರಂ**—ಅಸುರಾದಿಗಳಿಂದ ಜಯಿಸಲಸಾಧ್ಯನೂ । **ಪೃಥುಬುಧ್ನಂ**—ವಿಸ್ತಾರವಾದ ಮೂಲವುಳ್ಳವನೂ । **ಶ್ರುತಋಷಿಂ**—ಋಷಿಗಳನ್ನು ತಿಳಿದವನೂ ಅಥವಾ ಉತ್ತಮಜ್ಞಾನವುಳ್ಳವನೂ । **ಉಗ್ರಂ**— ಹೆಚ್ಚಾದ ಬಲವುಳ್ಳವನೂ । **ಅಭಿಮಾತಿಷಾಹಂ**—ಶತ್ರುಗಳನ್ನು ಸೋಲಿಸುವವನೂ ಆದವನೆಂದು ನಾವು ತಿಳಿದಿದ್ದೇವೆ. ಆದ್ದರಿಂದ । **ಅಸ್ಮಭ್ಯಂ**—ನಮಗೆ । **ಚಿತ್ರಂ**—ಪೂಜ್ಯವಾದುದೂ । **ವೃಷಣಂ**—ಇಷ್ಟಾರ್ಥಪ್ರದವಾದುದೂ ಆದ । **ರಯಿಂ**—ಧನವನ್ನು । **ದಾಃ**—ಕೊಡು.

### ಭಾವಾರ್ಥ

ಎಲೈ ಇಂದ್ರನೇ, ನೀನು ಬ್ರಹ್ಮಸ್ತುತಿರೂಪವಾದ ಸ್ತೋತ್ರಕ್ಕೆ ಪಾತ್ರನಾದವನೆಂದೂ, ದೇವತೆಗಳೊಡನಿರುವವನೆಂದೂ, ಮಹತ್ಸ್ವರೂಪವುಳ್ಳವನೆಂದೂ, ವಿಸ್ತೃತಶರೀರವುಳ್ಳವನೆಂದೂ, ಅಸುರಾದಿಗಳಿಂದ ಅಜೇಯನೆಂದೂ, ವಿಸ್ತಾರವಾದ ಮೂಲವುಳ್ಳವನೆಂದೂ, ಋಷಿಗಳನ್ನು ತಿಳಿದವನೆಂದೂ ಅಥವಾ ಉತ್ತಮಜ್ಞಾನಿಯೆಂದೂ, ಹೆಚ್ಚಾದ ಬಲವುಳ್ಳವನೆಂದೂ, ಆದುದರಿಂದಲೇ ಶತ್ರುಗಳನ್ನು ಸೋಲಿಸುವವನೆಂದೂ ನಾವು ತಿಳಿದಿದ್ದೇವೆ. ಆದ್ದರಿಂದ ಎಲೈ ಇಂದ್ರನೇ, ನೀನು ನಮಗೆ ಪೂಜ್ಯವಾದುದೂ, ಇಷ್ಟಾರ್ಥಪ್ರದವಾದುದೂ ಆದ ಧನವನ್ನು ಕೊಡು.

### English Translation

Grant us, Indra, various fertilizing riches, the fit object of prayer, honoured by the gods, large, vast, profound, wide-rooted, by means of which the Rishis are heared, fierce, the subduer of your foes.

### ಸಂಹಿತಾಪಾಠಃ

ಸನದ್ವಾಜಂ ವಿಪ್ರವೀರಂ ತರುತ್ರಂ ಧನಸ್ಪೃತಂ ಶೂಶುವಾಂಸಂ ಸುದಕ್ಷಂ ।
ದಸ್ಯುಹನಂ ಪೂರ್ಭಿದಮಿಂದ್ರ ಸತ್ಯಮಸ್ಮಭ್ಯಂ ಚಿತ್ರಂ ವೃಷಣಂ ರಯಿಂ
ದಾಃ ॥ ೪ ॥

### ಪದಪಾಠಃ

ಸನತ್ಽವಾಜಂ । ವಿಪ್ರಽವೀರಂ । ತರುತ್ರಂ । ಧನಽಸ್ಪೃತಂ । ಶೂಶುಽವಾಂಸಂ । ಸುಽದಕ್ಷಂ ॥
ದಸ್ಯುಽಹನಂ । ಪೂಃಽಭಿದಂ । ಇಂದ್ರ । ಸತ್ಯಂ । ಅಸ್ಮಭ್ಯಂ । ಚಿತ್ರಂ । ವೃಷಣಂ । ರಯಿಂ । ದಾಃ ॥೪॥

### ಸಾಯಣಭಾಷ್ಯಂ

**ಸನದ್ವಾಜಂ ಲಬ್ಧಾನ್ನಂ ವಿಪ್ರವೀರಂ ಮೇಧಾವಿನಂ ಪುತ್ರಂ ತರುತ್ರಂ ತಾರಕಂ ಧನಸ್ಪೃತಂ ಧನಾನಾಂ ಪೂರಕಂ ಸ್ಪ್ರಷ್ಟಾರಂ ವಾ ॥ ಸ್ಪೃಣತೇಃ ಸ್ಪೃಶತೇರ್ವೋತ್ತರಪದಂ ॥ ಶೂಶುವಾಂಸಂ**

ವರ್ಧಮಾನಂ ಸುದಕ್ಷಂ ಶೋಭನಬಲಂ ದಸ್ಯುಹನಂ ಶತ್ರೂಣಾಂ ಹಂತಾರಂ ಪೂರ್ಭಿದಂ ಶತ್ರೂಣಾಂ ಪುರಾಂ ಭೇತ್ತಾರಂ ಸತ್ಯಂ ಸತ್ಯಕರ್ಮಾಣಂ । ಶಿಷ್ಟಮುಕ್ತಂ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ ನೀನು । ಸನದ್ವಾಜಂ—ಅನ್ನ ದ್ಯಾಹಾರಗಳನ್ನು ಹೊಂದಿರುವವನೆಂದೂ । ವಿಪ್ರವೀರಂ—ಮೇಧಾವಿಯಾದ ಪುತ್ರನುಳ್ಳವನೆಂದೂ । ತರುತ್ರಂ—ದುಃಖಾದಿಗಳಿಂದ ದಾಟಿಸುವವನೆಂದೂ । ಧನಸ್ಪೃತಂ—ಧನಗಳನ್ನು ತುಂಬಿಕೊಂಡಿರುವವನೆಂದೂ। ಶೂಶುವಾಸಂ —ವೃದ್ಧಿಯನ್ನೈದುವವನೆಂದೂ। ಸುದಕ್ಷಂ —ಉತ್ತಮ ಬಲವುಳ್ಳವನೆಂದೂ । ದಸ್ಯುಹನಂ—ಶತ್ರುಗಳನ್ನು ಕೊಲ್ಲುವವನೆಂದೂ। ಪೂರ್ಭಿದಂ—ಶತ್ರುಗಳಪಟ್ಟಣ ಗಳನ್ನು ಸೀಳಿಹಾಕುವವನೆಂದೂ । ಸತ್ಯಂ—ಸತ್ಯಸ್ವಭಾವದವನೆಂದೂ ತಿಳಿದಿದ್ದೇವೆ. ಆದ್ದರಿಂದ । ಅಸ್ಮಭ್ಯಂ—ನಮಗೆ । ಚಿತ್ರಂ—ನಾನಾವಿಧವಾದುದೂ । ವೃಷಣಂ—ಇಷ್ಟಾರ್ಥಪ್ರದವಾದುದೂ ಆದ । ರಯಿಂ—ಧನವನ್ನು । ದಾಃ—ಕೊಡು.

ಭಾವಾರ್ಥ

ಎಲೈ ಇಂದ್ರನೇ, ನೀನು ಅನ್ನಾದ್ಯಾಹಾರಗಳನ್ನು ಹೊಂದಿರುವವನೆಂದೂ, ಮೇಧಾವಿಯಾದ ಪುತ್ರನುಳ್ಳವನೆಂದೂ, ದುಃಖಾದಿಗಳಿಂದ ಪಾರುಮಾಡುವವನೆಂದೂ, ಧನಗಳನ್ನು ಸ್ತೋತೃಗಳಿಗೆ ಒದಗಿಸಿಕೊಡುವವನೆಂದೂ, ವೃದ್ಧಿಕಾರಕನೆಂದೂ, ಶತ್ರುಗಳನ್ನು ಕೊಲ್ಲುವವನೆಂದೂ, ಶತ್ರುಗಳ ಪಟ್ಟಣಗಳನ್ನು ಧ್ವಂಸಮಾಡುವವನೆಂದೂ, ಸತ್ಯ ಸ್ವಭಾವದವನೆಂದೂ ನಾವು ತಿಳಿದಿದ್ದೇವೆ. ಆದ್ದರಿಂದ ಎಲೈ ಇಂದ್ರನೇ, ನೀನು ನಮಗೆ ನಾನಾ ವಿಧವಾದ ಇಷ್ಟಾರ್ಥವನ್ನು ಕೊಡುವ ಧನವನ್ನು ಕೊಡು.

English Translation

Grant us Indra, various fertilizing riches, dispensing food, comprising intelligent male offspring, the protector, filling men with wealth, the granter of increase, the very poweful, the slayer of the Dasyus, the destroyer of cities the observer of truth.

ಸಂಹಿತಾಪಾಠಃ

ಅಶ್ವಾವಂತಂ ರಥಿನಂ ವೀರವಂತಂ ಸಹಸ್ರಿಣಂ ಶತಿನಂ ವಾಜಮಿಂದ್ರ ।
ಭದ್ರವ್ರಾತಂ ವಿಪ್ರವೀರಂ ಸ್ವರ್ಷಾಮಸ್ಮಭ್ಯಂ ಚಿತ್ರಂ ವೃಷಣಂ ರಯಿಂ ದಾಃ

ಪದಪಾಠಃ

ಅಶ್ವಽವಂತಂ । ರಥಿನಂ । ವೀರಽವಂತಂ । ಸಹಸ್ರಿಣಂ । ಶತಿನಂ । ವಾಜಂ । ಇಂದ್ರ ।
ಭದ್ರಽವ್ರಾತಂ । ವಿಪ್ರಽವೀರಂ । ಸ್ವಃಽಸಾಂ । ಅಸ್ಮಭ್ಯಂ । ಚಿತ್ರಂ । ವೃಷಣಂ । ರಯಿಂ । ದಾಃ ॥

18

ಸಾಯಣಭಾಷ್ಯಂ

ಅಶ್ವಾವಂತಂ ಬಹುಭಿರಶ್ವೈರುಪೇತಂ ರಥಿನಂ ರಥವಂತಂ ವೀರವಂತಂ ವೀರೈಃ ಪುರುಷೈರುಪೇತಂ ಸಹಸ್ರಿಣಂ ಸಹಸ್ರವಂತಂ ಶತಿನಂ ಶತವಂತಂ । ಅಸಂಖ್ಯಾತಗವಾದಿಯುಕ್ತಮಿತ್ಯರ್ಥಃ । ಭದ್ರವ್ರಾತಂ ಭದ್ರಗಣಂ ಕಲ್ಯಾಣೈಃ ಸೇವಕೈಃ ಪರಿವೃತಂ ವಿಪ್ರವೀರಂ ವಿಪ್ರೈರ್ವೀರೈಶ್ಚೋಪೇತಂ ಸ್ವರ್ಷಾಂ ಸರ್ವಸ್ಯ ಸಂಭಕ್ತಾರಂ ವಾಜಂ ಬಲವಂತಂ ಹೇ ಇಂದ್ರ । ಶಿಷ್ಟಮುಕ್ತಂ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ, ನೀನು । ಅಶ್ವಾವಂತಂ—ಅನೇಕ ಅಶ್ವಗಳುಳ್ಳವನೆಂದೂ । ರಥಿನಂ—ರಥವುಳ್ಳವನೆಂದೂ । ವೀರವಂತಂ—ವೀರರಾದಪುರುಷರಿಂದ ಕೂಡಿರುವವನೆಂದೂ । ಸಹಸ್ರಿಣಂ ಶತಿನಂ—ನೂರಾರು ಅಥವಾ ಸಾವಿರಾರು ಗೋಸಂಪತ್ತಿನಿಂದ ಯುಕ್ತನಾದವನೆಂದೂ । ಭದ್ರವ್ರಾತಂ—ಉತ್ತಮವಾದ ಸೇವಕರಿಂದ ಸೇವಿಸಲ್ಪಡುವವನೆಂದೂ । ವಿಪ್ರವೀರಂ—ಮೇಧಾವಿಗಳೂ, ಶೂರರೂ ಆದ ಪುರುಷರಿಂದ ಕೂಡಿರುವವನೆಂದೂ । ಸ್ವರ್ಷಾಂ—ಸರ್ವಸಂಪತ್ತನ್ನು ಹೊಂದಿರುವವನೆಂದೂ । ವಾಜಂ—ಬಲಶಾಲಿಯೆಂದೂ ತಿಳಿದಿದ್ದೇವೆ. ಆದ್ದರಿಂದ । ಅಸ್ಮಭ್ಯಂ—ನಮಗೆ । ಚಿತ್ರಂ— ನಾನಾ ವಿಧವಾದುದೂ । ವೃಷಣಂ — ಇಷ್ಟಾರ್ಥಪ್ರದವಾದುದೂ ಆದ ರಯಿಂ—ಧನವನ್ನು । ದಾಃ—ಕೊಡು.

ಭಾವಾರ್ಥ

ಎಲೈ ಇಂದ್ರನೇ, ನಿನ್ನ ಬಳಿ ಅನೇಕ ಅಶ್ವಗಳು, ರಥ, ವೀರರಾದ ಪುರುಷರು, ನೂರಾರು ಅಥವಾ ಸಾವಿರಾರು ಗೋವುಗಳು, ಉತ್ತಮರಾದ ಸೇವಕಜನರು, ಮೇಧಾವಿಗಳಾದ ಶೂರರು. ಸರ್ವಸಂಪತ್ತು, ಬಲ ಇವುಗಳೆಲ್ಲವೂ ಇರುವುವೆಂದು ನಮಗೆ ತಿಳಿದಿದೆ. ಆದ್ದರಿಂದ ಎಲೈ ಇಂದ್ರನೇ ನೀನು ನಮಗೆ ಪೂಜ್ಯವೂ, ಇಷ್ಟಾರ್ಥಪ್ರದವೂ ಆದ ಧನವನ್ನು ಕೊಡು.

## English Translation

Grant us, Indra, various fertilizing wealth, consisting of horses, of chariots, of valiant followers, of thousands, of hundreds (of cattle), surrouded by beautiful attendants, endowed with sages and heroes, the enjoyer of all (benefits).

ಸಂಹಿತಾಪಾಠಃ

ಪ್ರ ಸಪ್ತಗುಮೃತಧೀತಿಂ ಸುಮೇಧಾಂ ಬೃಹಸ್ಪತಿಂ ಮತಿರಚ್ಛಾ ಜಿಗಾತಿ ।
ಯ ಆಂಗಿರಸೋ ನಮಸೋಪಸದ್ಯೋಽಸ್ಮಭ್ಯಂ ಚಿತ್ರಂ ವೃಷಣಂ ರಯಿಂ ದಾಃ ॥ ೬ ॥

ಪದಪಾಠಃ

ಪ್ರ | ಸಪ್ತऽಗುಂ | ಋತऽಧೀತಿಂ | ಸುऽಮೇಧಾಂ | ಬೃಹಸ್ಪತಿಂ | ಮತಿಃ | ಅಚ್ಛ | ಜಿಗಾತಿ ||

ಯಃ | ಆಂಗಿರಸಃ | ನಮಸಾ | ಉಪऽಸದ್ಯಃ | ಅಸ್ಮಭ್ಯಂ | ಚಿತ್ರಂ | ವೃಷಣಂ ರಯಿಂ | ದಾಃ || ೬ ||

ಸಾಯಣಭಾಷ್ಯಂ

ಸಪ್ತಗುಂ ಮಾಂ ಮತಿಃ ಸ್ತುತಿರ್ದೇವವಿಷಯಾಚ್ಛಾ ಜಿಗಾತಿ | ಕೀದೃಷಂ ಸಪ್ತಗುಂ | ಋತಧೀತಿಂ ಸತ್ಯಕರ್ಮಾಣಂ ಸುಮೇಧಾಂ ಶೋಭನಪ್ರಜ್ಞಂ ಬೃಹಸ್ಪತಿಂ ಬೃಹತೋ ಮಂತ್ರಸ್ಯ ಸ್ವಾಮಿನಂ | ಯಃ ಸಪ್ತಗುರಾಂಗಿರಸೋऽಂಗಿರೋಗೋತ್ರೋತ್ಪನ್ನೋऽಹಂ ನಮಸಾ ನಮಸ್ಕಾರೇಣ ದೇವಾನುಪಸದ್ಯಃ | ಉಪಗತಃ | ಯದ್ವಾ | ನಮಸಾನ್ನೇನೋಪಸದ್ಯ ಉಪಸದನೀಯಃ | ದೇವೈರನು ಗ್ರಾಹ್ಯ ಇತ್ಯರ್ಥಃ | ತಾದೃಶಾಯಾಸ್ಮಭ್ಯಂ ಮಹ್ಯಂ ಚಿತ್ರಂ ವೃಷಣಂ ರಯಿಂ ದಾಃ ||

ಪ್ರತಿಪದಾರ್ಥ

**ಋತಧೀತಿಂ**—ಸತ್ಯಕರ್ಮಗಳನ್ನೇ ಮಾಡುವವನೂ | **ಸುಮೇಧಾಂ**—ಉತ್ತಮವಾದ ಜ್ಞಾನವನ್ನು ಹೊಂದಿರುವವನೂ | **ಬೃಹಸ್ಪತಿಂ**—ಅನೇಕ ಮಂತ್ರಗಳಿಗೆ ಸ್ವಾಮಿಯೂ ಎಂದರೆ ಅನೇಕ ಮಂತ್ರಗಳ ನಿರ್ಮಾಪಕನೂ ಆದ | **ಸಪ್ತಗುಂ**—ಸಪ್ತಗು ಎಂಬ ಹೆಸರಿನ ನನ್ನನ್ನು | **ಮತಿಃ**—ದೇವತೆಗಳನ್ನು ಸ್ತುತಿಸಬೇಕೆಂಬ ಬುದ್ಧಿಯು | **ಅಚ್ಛ ಜಿಗಾತಿ**—ಬಂದು ಸೇರುತ್ತದೆ. **ಆಂಗಿರಸಃ**—ಅಂಗಿರಸಗೋತ್ರೋದ್ಭವನಾದ | **ಯಃ**—ಯಾವ ಸಪ್ತಗ ವೆಂಬ ನಾನು | **ನಮಸಾ**—ನಮಸ್ಕಾರಪೂರ್ವಕವಾಗಿ ಅಥವಾ ಹವಿಸ್ಸಿನಿಂದ ಯುಕ್ತನಾಗಿ | **ಉಪಸದ್ಯಃ**—ದೇವತೆ ಗಳನ್ನು ಸಮೀಪಿಸಿದ್ದೇನೆ | (ಆದ್ದರಿಂದ ಎಲೈ ಇಂದ್ರನೇ) **ಅಸ್ಮಭ್ಯಂ**—ನಮಗೆ | **ಚಿತ್ರಂ**—ನಾನಾ ವಿಧವಾದುದೂ | **ವೃಷಣಂ**—ಇಷ್ಟಾರ್ಥಪ್ರದವಾದುದೂ ಆದ | **ರಯಿಂ**—ಧನವನ್ನು | **ದಾಃ**—ಕೊಡು.

ಭಾವಾರ್ಥ

ಸತ್ಯಕರ್ಮನಿರತನೂ, ಉತ್ತಮಜ್ಞಾನಿಯೂ, ಅನೇಕ ಮಂತ್ರಗಳಿಗೆ ಕರ್ತೃವೂ ಆದ ಸಪ್ತಗು ಎಂಬ ಋಷಿಯಾದ ನನಗೆ ದೇವತೆಗಳನ್ನು ಸ್ತುತಿಸಬೇಕೆಂಬ ಬುದ್ಧಿಯು ಹುಟ್ಟುತ್ತದೆ. ಆದ್ದರಿಂದ ಸಪ್ತಗು ಎಂಬ ಹೆಸರಿನ ನಾನು ನಮಸ್ಕಾರಪೂರ್ವಕವಾಗಿ ಹವಿರಾದಿಗಳೊಡನೆ ದೇವತೆಗಳನ್ನು ಸಮೀಪಿಸುತ್ತೇನೆ. ಎಲೈ ಇಂದ್ರನೇ, ಅಕರ್ಷ ವಾದುದೂ, ಇಷ್ಟಾರ್ಥಪ್ರದವಾದುದೂ ಆದ ಧನವನ್ನು ನಮಗೆ ಕೊಡು.

## English Translation

The praise (adressed to the gods) comes to the presence of Saptagu, the observer of the truth, the intelligent, the lord of much (praise), who being of the family of Angiras, has approached (the gods) with oblations: (Indra), grant me various fertilizing riches.

ಸಂಹಿತಾಪಾಠಃ

ವನೀವಾನೋ ಮಮ ದೂತಾಸ ಇಂದ್ರಂ ಸ್ತೋಮಾಶ್ಚರಂತಿ ಸುಮತೀರಿಯಾನಾಃ ।
ಹೃದಿಸ್ಪೃಶೋ ಮನಸಾ ವಚ್ಯಮಾನಾ ಅಸ್ಮಭ್ಯಂ ಚಿತ್ರಂ ವೃಷಣಂ ರಯಿಂ ದಾಃ ॥ ೭ ॥

ಪದಪಾಠಃ

ವನೀವಾನಃ । ಮಮ । ದೂತಾಸಃ । ಇಂದ್ರಂ । ಸ್ತೋಮಾಃ । ಚರಂತಿ । ಸುಽಮತೀಃ । ಇಯಾನಾಃ ॥
ಹೃದಿಽಸ್ಪೃಶಃ । ಮನಸಾ । ವಚ್ಯಮಾನಾಃ । ಅಸ್ಮಭ್ಯಂ । ಚಿತ್ರಂ । ವೃಷಣಂ । ರಯಿಂ । ದಾಃ ॥ ೭ ॥

ಸಾಯಣಭಾಷ್ಯಂ

ವನೀವಾನೋ ವನನವಂತಃ ॥ ಛಂದಸೀವನಿಪಾವಿತಿ ಮತ್ವರ್ಥೀಯೋವನಿಪ್ ॥ ಮಮ ಸಪ್ತ-ಗೋರ್ದೂತಾಸೋ ದೂತಸದೃಶಾಃ ದೂತಾ ಯಥಾ ಭರ್ತುರಭಿಮತಾರ್ಥಂ ಪ್ರಾಪಣೀಯಂ ಪ್ರಾಪಯಂತಿ ತದ್ವತ್ಸ್ತುತ್ಯಾನ್ಗುಣಾನ್ಪ್ರಾಪಯಂತಃ ಸ್ತೋಮಾಃ ಸ್ತವಾಃ ಸುಮತೀಸ್ತುತ್ಯಸ್ಯೇಂದ್ರಸ್ಯಾಸ್ಮದ್ವಿಷಯಾ ಅನುಕೂಲಾ ಬುದ್ಧೀರಿಯಾನಾ ಯಾಚಮಾನಾ ಇದ್ರಂ ಚರಂತಿ । ಪ್ರಾಪ್ನುವಂತಿ । ಪುನಶ್ಚ ತ ಏವ ವಿಶೇಷ್ಯಂತೇ । ಹೃದಿಸ್ಪೃಶೋ ಹೃದಯೇ ಸ್ಪೃಶಂತಃ । ಸ್ತುತ್ಯಸ್ಯ ಪ್ರಿಯಭೂತಾ ಇತ್ಯರ್ಥಃ ॥ ಹೃದ್ದ್ಯುಭ್ಯಾಮಿತ್ಯುಪಸಂಖ್ಯಾನಾತ್ ಙೇರಲುಕ್ ॥ ಮನಸಾ ಸತ್ತ್ವೋದ್ರಿಕ್ತೇನ ವಚ್ಯಮಾನಾ ಉಚ್ಯಮಾನಾಃ । ಅಸ್ಮಭ್ಯಮಿತ್ಯಾದಿ ಗತಂ ॥

ಪ್ರತಿಪದಾರ್ಥ

**ವನೀವಾನಃ**—ಇಂದ್ರನ ಅನುಗ್ರಹವನ್ನು ಬಯಸುವವೂ । **ಮಮ**—ನನ್ನ । **ದೂತಾಸಃ**—ದೂತರಂತೆ ನನ್ನ ಮುಖದಿಂದ ಹೊರಹೊರಟು ಇಂದ್ರನ ಬಳಿಗೆ ಬರುವವೂ । **ಹೃದಿಸ್ಪೃಶಃ**—ಹೃದಯವನ್ನು ಮುಟ್ಟುವವೂ । **ಮನಸಾ**—ಮನಸ್ಸಿನಿಂದಲೇ ಎಂದರೆ ಮನಃಪೂರ್ವಕವಾಗಿ । **ವಚ್ಯಮಾನಾಃ**— ಉಚ್ಚರಿಸಲ್ಪಡುವವೂ । **ಸ್ತೋಮಾಃ**— ಸ್ತೋತ್ರಾತ್ಮಕವೂ ಆದ । **ಸುಮತೀಃ** — ನಮ್ಮ ಬುದ್ಧಿಪೂರ್ವಕವಾದ ಸ್ತುತಿವಾಕ್ಯಗಳು । **ಇಯಾನಾಃ**—(ಇಷ್ಟಾರ್ಥಗಳನ್ನು ಯಾಚಿಸುತ್ತಾ) । **ಇಂದ್ರಂ**—ಇಂದ್ರನನ್ನು । **ಚರಂತಿ**—ಸಮೀಪಿಸುತ್ತವೆ.

ಭಾವಾರ್ಥ

ಇಂದ್ರನ ಅನುಗ್ರಹಬುದ್ಧಿಯನ್ನು ಬಯಸುವವೂ, ದೂತರಂತೆ ನನ್ನ ಮುಖದಿಂದ ಹೊರಟು ಇಂದ್ರನ ಬಳಿಗೆ ಹೋಗುವವೂ, ಇಂದ್ರನ ಹೃದಯವನ್ನು ಮುಟ್ಟುವವೂ, ಮನಃಪೂರ್ವಕವಾಗಿ ಉಚ್ಚರಿಸಲ್ಪಡುವವೂ, ಸ್ತೋತ್ರಾತ್ಮಕವೂ ಆದ ಸ್ತುತಿವಾಕ್ಯಗಳು ಇಷ್ಟಾರ್ಥಗಳನ್ನು ಯಾಚಿಸುತ್ತಾ ಇಂದ್ರನ ಬಳಿಗೆ ಹೋಗುವುವು

## English Translation

My praises, (my) messengers soliciting (audience), come to Indra, praying (his) favourable (thoughts), heart-touching, spoken from the soul; (therefore, Indra), grant me various fertilizing riches.

### ಸಂಹಿತಾಪಾಠಃ

**ಯತ್ತ್ವಾ ಯಾಮಿ ದದ್ಧಿ ತನ್ನ ಇಂದ್ರ ಬೃಹಂತಂ ಕ್ಷಯಮಸಮಂ ಜನಾನಾಂ ।**
**ಅಭಿ ತದ್ದ್ಯಾವಾಪೃಥಿವೀ ಗೃಣೀತಾಮಸ್ಮಭ್ಯಂ ಚಿತ್ರಂ ವೃಷಣಂ ರಯಿಂ ದಾಃ ॥**

### ಪದಪಾಠಃ

ಯತ್ । ತ್ವಾ । ಯಾಮಿ । ದದ್ಧಿ । ತತ್ । ನಃ । ಇಂದ್ರ । ಬೃಹಂತಂ । ಕ್ಷಯಂ। ಅಸಮಂ । ಜನಾನಾಂ॥

ಅಭಿ । ತತ್ । ದ್ಯಾವಾಪೃಥಿವೀ ಇತಿ । ಗೃಣೀತಾಂ । ಅಸ್ಮಭ್ಯಂ । ಚಿತ್ರಂ । ವೃಷಣಂ । ರಯಿಂ । ದಾಃ ॥

### ಸಾಯಣಭಾಷ್ಯಂ

ಹೇ ಇಂದ್ರ ತ್ವಾ ತ್ವಾಂ ಯದ್ವಕ್ಷ್ಯಮಾಣಂ ಯಾಮಿ ಯಾಚಾಮಿ ॥ ವರ್ಣಲೋಪಶ್ಛಾಂದಸಃ ॥ ಯಾಚ್ಯಮಾನಂ ತದ್ದದ್ಧಿ । ದೇಹಿ ॥ ದದಾತೇರ್ಲೋಟಿ ವ್ಯತ್ಯಯೇನ ಪರಸ್ಮೈಪದಂ । ಬಹುಲಂ ಛಂದಸೀತಿ ಶಪೋ ಲುಕ್ ॥ ತದಿತಿ ಸಾಮಾನ್ಯೇನ ನಿರ್ದಿಷ್ಟಂ ವಿಶೇಷಯತಿ । ಬೃಹಂತಂ ಮಹಾಂತಂ ಕ್ಷಯಂ ನಿವಾಸಂ ಜನಾನಾಮನ್ಯೇಷಾಮಸಮಮಸಾಧಾರಣಂ ದೇಹಿ । ತ್ವಯಾ ದಾತವ್ಯಂ ದ್ಯಾವಾಪೃಥಿವೀ ಅಭಿ ಗೃಣೀತಾಂ । ಅಸ್ಮಭ್ಯಮಿತ್ಯಾದಿ ಗತಂ ॥

### ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । **ತ್ವಾಂ**—ನಿನ್ನನ್ನು । **ಯತ್**—ಯಾವುದಕ್ಕಾಗಿ (ಯಾವುದನ್ನು) **ಯಾಮಿ**—ಯಾಚಿಸುವೆನೋ । **ತತ್**—ಅದನ್ನು । **ನಃ**—ನಮಗೆ । **ದದ್ಧಿ**—ಕೊಡು । **ಬೃಹಂತಂ**—ದೊಡ್ಡದಾಗಿರುವುದೂ । **ಜನಾನಾಂ**—ಇತರ ಜನರ (ಗೃಹದಂತೆ) । **ಅಸಮಂ**—ಸಾಮಾನ್ಯವಲ್ಲದ್ದಾದುದೂ ಎಂದರೆ ಎಲ್ಲರ ಗೃಹಗಳಿಗಿಂತ ಅತ್ಯಂತ ಶ್ರೇಷ್ಠವಾದುದೂ ಆದ । **ಕ್ಷಯಂ**—ವಾಸಕ್ಕೆ ಯೋಗ್ಯವಾದ ಗೃಹವನ್ನು ಕೊಡು । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳು । (ನೀನು ಕೊಡುವ ಗೃಹವನ್ನು) **ಅಭಿ ಗೃಣೀತಾಂ**—ಅನುಮೋದಿಸಲಿ. ಎಲೈ ಇಂದ್ರನೇ । **ಅಸ್ಮಭ್ಯಂ**—ನಮಗೆ । **ಚಿತ್ರಂ**—ಆಕರ್ಷವಾದುದೂ । **ವೃಷಣಂ**—ಇಷ್ಟಾರ್ಥಪ್ರದವಾದುದೂ ಆದ । **ರಯಿಂ**—ಧನವನ್ನು । **ದಾಃ**—ಕೊಡು.

### ಭಾವಾರ್ಥ

ಎಲೈ ಇಂದ್ರನೇ, ಯಾವುದನ್ನು ಕೊಡಬೇಕೆಂದು ನಿನ್ನನ್ನು ಯಾಚಿಸುವೆವೋ ಅದನ್ನು ನಮಗೆ ಕೊಡು ಎಂದರೆ ದೊಡದಾಗಿಯೂ, ಇತರರ ಗೃಹದಂತೆ ಸಾಮಾನ್ಯವಾಗಿರದೆ ಅತಿ ಶ್ರೇಷ್ಠವಾದುದೂ ಆದ ವಾಸಗೃಹವನ್ನು

ನನಗೆ ಕೊಡು. ನೀನು ಕೊಡುವ ಈ ದಾನವನ್ನು ದ್ಯಾವಾಪೃಥಿವಿಗಳು ಅನುಮೋದಿಸಲಿ. ಎಲೈ ಇಂದ್ರನೇ, ನೀನು ನಮಗೆ ಆಕರ್ಷಕವಾದುದೂ ಇಷ್ಟಾರ್ಥಪ್ರದವಾದುದೂ ಆದ ಧನವನ್ನು ಕೊಡು.

**English Translation**

Bestow, Indra, that which I solicit of you; a large mansion, not held in common with other men; and may heaven and earth approve of it grant us, (Indra), various fertilizing riches.

# ನಲವತ್ತೆಂಟನೆಯ ಸೂಕ್ತ

## ಪೀಠಿಕೆ

ಈ ಸೂಕ್ತದಲ್ಲಿಯೂ, ಮುಂದಿನ ಸೂಕ್ತದಲ್ಲಿಯೂ ಇಂದ್ರನು ತಾನು ಮಾಡಿದ ಅನೇಕ ಸಾಹಸಕೃತ್ಯಗಳನ್ನು ತಾನೇ ಪ್ರಶಂಸೆ ಮಾಡಿಕೊಂಡಿದ್ದಾನೆ. ವೃತ್ರಾಸುರ ವಧೆಯೇ ಮೊದಲಾದ ಅನೇಕ ಸಾಹಸಕೃತ್ಯಗಳನ್ನು ಮಾಡಿ ಪ್ರಸಿದ್ಧನಾಗಿರುವುದರಿಂದ ಇಂದ್ರನಿಗೆ ಮಹಾನಿಂದ್ರ ಎಂಬ ಪ್ರಶಸ್ತಿಯು ಬಂದಿರುವುದನ್ನು ಐತರೇಯಬ್ರಾಹ್ಮಣದಲ್ಲಿ ಈ ರೀತಿ ವರ್ಣಿಸಲಾಗಿದೆ.

## ಇಂದ್ರನಿಗೆ ಮಹಾನಿಂದ್ರ ಎಂಬ ಹೆಸರು ಬರಲು ಕಾರಣ

**ಮಹಾನ್ ಇಂದ್ರಃ—ಮಹಾನ್ ಇಂದ್ರಃ** । ಇಂದ್ರನಿಗೆ **ಮಹಾನ್** (ದೊಡ್ಡವನು) ಎಂಬ ಪ್ರಶಸ್ತಿಯು ಹೇಗೆ ಬಂತೆಂಬ ವಿಷಯದಲ್ಲಿ ಐತರೇಯಬ್ರಾಹ್ಮಣದಲ್ಲಿ ಒಂದು ಪೂರ್ವೇತಿಹಾಸವಿದೆ.

> **ಇಂದ್ರೋ ವೈ ವೃತ್ರಂ ಹತ್ವಾ ಸರ್ವಾ ವಿಜಿತೀರ್ವಿಜಿತ್ಯಾಬ್ರವೀತ್ಪ್ರಜಾಪತಿಮಹಮೇತದ ಸಾನಿ ಯತ್ತ್ವಮಹಂ ಮಹಾಸನಾನೀತಿ ಸ ಪ್ರಜಾಪತಿರಬ್ರವೀದಥ ಕೋಽಹಮಿತಿ ಯದ್ವೈವೈ-ತದವೋಚ ಇತ್ಯಬ್ರವೀತ್ತತೋ ವೈ ಕೋ ನಾಮ ಪ್ರಜಾಪತಿರಭವತ್ಕೋ ವೈ ನಾಮ ಪ್ರಜಾ-ಪತಿರ್ಯನ್ಮಹಾನಿಂದ್ರೋಽಭವತ್ತನ್ಮಹೇಂದ್ರಸ್ಯ ಮಹೇಂದ್ರತ್ವಂ ।**
>
> (ಐ. ಬ್ರಾ. ೧೨-೨೧)

ಪೂರ್ವದಲ್ಲಿ ಇಂದ್ರನು ವೃತ್ರನನ್ನು ಸಂಹಾರ ಮಾಡಿದನಂತರ ಭೂಮಂಡಲದ ಸಮಸ್ತ ಪ್ರದೇಶಗಳನ್ನೂ ಜಯಿಸಿ, ಪ್ರಜಾಪತಿಯನ್ನು ಕುರಿತು—ಎಲೈ ಪ್ರಜಾಪತಿಯೇ, ಈಗ ನೀನು ಮಹತ್ಸ್ಥಾನವನ್ನು ಗಳಿಸಿ ಪೂಜ್ಯನಾರುವೆ ಯಷ್ಟೆ. ಇನ್ನುಮೇಲೆ ನಿನ್ನ ಮಹತ್ವದವಿಯು ನನಗೆ ಬೇಕು ಎಂದನು ಅದಕ್ಕೆ ಪ್ರಜಾಪತಿಯು ನನ್ನ ಪದವಿಯನ್ನು ನೀನು ತೆಗೆದುಕೊಂಡರೆ ನಾನು ಯಾರ (ಕಃ) ನನ್ನ ಸ್ಥಾನಮಾನವೇನು ಎಂದು ಕೇಳಲು ಅದಕ್ಕೆ ಇಂದ್ರನು—ಎಲೈ ಪ್ರಜಾಪತಿಯೇ, ಈಗ ನೀನೇ ಹೇಳಿದಂತೆ ನಿನ್ನ ಹೆಸರು ಇನ್ನುಮೇಲೆ ಕಃ (ಯಾರು) ಎಂದಾಗು ವುದು. ಎಂದರೆ ಕಶಬ್ದವಾಚ್ಯನಾಗುವೆ. ಎಂದನು. ಆದುದರಿಂದ ಆ ಕಾಲ ಮೊದಲುಗೊಂಡು ಪ್ರಜಾಪತಿಯು ಕಃಶಬ್ದವಾಚ್ಯನಾದನು. ಈ ವಿಷಯವು ಪ್ರಸಿದ್ಧವಾಗಿರುವುದು. ಆದುದರಿಂದಲೇ ಯಾವುದಾದರೂ ದಾನವನ್ನು ಸ್ವೀಕರಿಸುವಾಗ ಪಠಿಸಬೇಕಾದ ಪ್ರತಿಗ್ರಹಮಂತ್ರಗಳಲ್ಲಿ ಈ ವಿಷಯವು ಉಕ್ತವಾಗಿರುವುದು ಎಂದರೆ ಕ ಇದಂ

**ಕಸ್ಮಾ ಅದಾದಿತ್ಯಾಹ । ಪ್ರಜಾಪತಿರ್ವೈ ಕಃ । ಪ್ರಜಾಪತಯ ಏವ ತದ್ದದಾತಿ** ಎಂದು ಇತರ ವೇದಗಳ ಬ್ರಾಹ್ಮಣವಾಕ್ಯವಿರುವುದು. ಕ ಶಬ್ದಕ್ಕೆ ಸುಖವೆಂಬ ಅರ್ಥವಿರುವುದರಿಂದ ಪ್ರಜಾಪತಿಸಂಬಂಧವಾದ ವ್ಯವಹಾರಗಳಲ್ಲಿಯೂ, ವಿಷಯಗಳಲ್ಲಿಯೂ ಪ್ರಜಾಪತಿಯು ಸುಖಸ್ವರೂಪನು ಎಂದೇ ಹೇಳಲ್ಪಡುವನು. ಈ ರೀತಿ ಪ್ರಜಾಪತಿಯ ಮಹತ್ತ್ವವನ್ನು ಇಂದ್ರನು ಸ್ವೀಕರಿಸಿದುದರಿಂದ ಇಂದ್ರನಿಗೆ **ಮಹಾನ್** ಎಂಬ ಅಭಿಧಾನವು ಬಂದಿತು. ಎಂದರೆ— ಇಂದ್ರನು ಮಹಾನಿಂದ್ರನಾದನು. ಈ ವಿಷಯವು ಇತರ ವೇದಗಳಲ್ಲಿ—**ಇಂದ್ರೋ ವೃತ್ರಮಹನ್ತಂ ದೇವಾ ಅಬ್ರುವನ್ಮಹಾನ್ವಾ ಅಯಮಭೂದ್ಯೋ ವೃತ್ರಮವಧೀದಿತಿ ತನ್ಮಹೇಂದ್ರಸ್ಯ ಮಹೇಂದ್ರತ್ವಂ** । ಇಂದ್ರನು ವೃತ್ರನನ್ನು ಸಂಹಾರಮಾಡಿದ ವಿಷಯವನ್ನು ದೇವತೆಗಳು ಪ್ರಶಂಸಿಸುತ್ತಾ ಈ ಇಂದ್ರನು ವೃತ್ರನನ್ನು ಸಂಹಾರ ಮಾಡಿದ್ದರಿಂದ ಮಹೇಂದ್ರನಾದನು. (ಮಹತ್ಪದವಿಯನ್ನು ಗಳಿಸಿದನು) ಎಂದರೆ ಎಲ್ಲಾ ದೇವತೆಗಳಿಗಿಂತಲೂ ಶ್ರೇಷ್ಠನಾದನು. ಇಂದ್ರನಿಗೆ ಮಹೇಂದ್ರನೆಂಬ ಹೆಸರು ಬರಲು ಇದೇ ಕಾರಣವು ಎಂದು ಹೇಳಿದೆ.

> **ಸ ಮಹಾನ್ಭೂತ್ವಾ ದೇವತಾ ಅಬ್ರವೀದುದ್ಧಾರಂ ಮ ಉದ್ಧರತೇತಿ ಯಥ್ಯಾಽಪ್ಯೇತರ್ಹಿ. ಚ್ಛ್ರೇಯೋ ನ್ವೈ ಭವತಿ ಯಃ ಶ್ರೇಷ್ಠತಾಮಶ್ನುತೇ ಸ ಮಹಾನ್ಭವತಿ ತಂ ದೇವಾ ಅಬ್ರುವನ್ ಸ್ವಯಮೇವ ಬ್ರೂಷ್ವ ಯತ್ತೇ ಭವಿಷ್ಯತೀತಿ ಸ ಏತಂ ಮಾಹೇಂದ್ರಂ ಗ್ರಹಮಬ್ರೂತ ಮಾಧ್ಯಂದಿನಂ ಸವನಾನಾಂ ನಿಷ್ಕೇವಲ್ಯಮುಕ್ಥಾನಾಂ ತ್ರಿಷ್ಟುಭಂ ಛಂದಸಾಂ ಪೃಷ್ಠಂ ಸಾಮ್ನಾಂ ತಮಸ್ಮಾ ಉದ್ಧಾರಮುದಹರನ್ ಉದಸ್ಮಾ ಉದ್ಧಾರಂ ಹರಂತಿ ಯ ಏವಂ ವೇದ** ॥

ಬಳಿಕ ಇಂದ್ರನು ಮೇಲೆ ಹೇಳಿದಂತೆ ಮಹತ್ಪದವಿಯನ್ನು ಗಳಿಸಿ ದೇವತೆಗಳನ್ನು ಕರೆದು ಇಂತೆಂದನು— ಎಲೈ ದೇವತೆಗಳೇ, ನಾನು ಮಹತ್ಪದವಿಯನ್ನು ಗಳಿಸಿರುವುದರಿಂದ ಇದರ ನಿಮಿತ್ತವಾಗಿ ಎಂದರೆ ನನ್ನನ್ನು ಅಭಿನಂದಿಸುವುದಕ್ಕಾಗಿ ಗೌರವಸೂಚಕವಾದ ಸತ್ಕಾರವೊಂದನ್ನು ಏರ್ಪಡಿಸಿ ಎಂದನು. ಲೋಕವ್ಯವಹಾರದಲ್ಲಿಯೂ ಸಹ ಒಬ್ಬ ಪುರುಷನಿಗೆ ಅತುಲೈಶ್ವರ್ಯ ಪ್ರಾಪ್ತಿಯಾಗಲಿ, ವಿದ್ಯಾದಿಗಳಲ್ಲಿ ಪ್ರಶಸ್ತಿಯಾಗಲಿ, ರಾಜಸನ್ಮಾನವಾಗಲಿ ಲಭಿಸಿದಲ್ಲಿ ಅಂತಹ ಪುರುಷನು ಜನರ ಮಧ್ಯೆ ಗಣ್ಯನಾದವನೆಂದು ಪ್ರಸಿದ್ಧನಾಗಿರುವುದರಿಂದ ಜನರು ಸಾಧಾರಣವಾಗಿ ಅಂತಹ ಪುರುಷನನ್ನು ಅಭಿನಂದಿಸಲು ಸತ್ಕಾರಕೂಟವನ್ನು ಏರ್ಪಡಿಸುವುದು ರೂಢಿಯಷ್ಟೆ. ಅದರಂತೆ ಇಂದ್ರನು ದೇವತೆಗಳನ್ನು ಈ ವಿಷಯವಾಗಿ ಪ್ರಶ್ನೆ ಮಾಡಿದನು. ದೇವತೆಗಳೂ ಸಹ ಇಂದ್ರನ ಮಾತನ್ನು ಮೋದಿಸಿ ಎಲೈ ಇಂದ್ರನೇ, ಈ ಸತ್ಕಾರಸಮಾರಂಭವನ್ನು ಯಾವ ರೀತಿ ಮಾಡಬೇಕು ? ಹೇಗೆ ಮಾಡಿದರೆ ನಿನಗೆ ಸಂತೋಷವಾಗುವುದು ? ಅದನ್ನು ನೀನೇ ಹೇಳಬೇಕು. ನಾವು ಅದರಂತೆ ನಡೆಸುವೆವು ಎನಲು, ಅದಕ್ಕೆ ಇಂದ್ರನು ಗ್ರಹಗಳ (ಗ್ರಹವೆಂದರೆ ಸೋಮವನ್ನು ಪಾನಮಾಡುವ ಪಾತ್ರವಿಶೇಷ) ಮಧ್ಯದಲ್ಲಿ ಮಾಹೇಂದ್ರಗ್ರಹವು (ಮಹೇಂದ್ರನಾದ ನನಗೆ ಅರ್ಪಿಸುವ ಸೋಮ ಪಾನ ಪಾತ್ರೆಯು) ಎಲ್ಲಾ ಗ್ರಹಗಳಿಗಿಂತ ಶ್ರೇಷ್ಠವಾದುದಾಗಿರಬೇಕು. ಅದರಂತೆಯೇ ಪ್ರಾತಃಸವನ, ಮಾಧ್ಯಂದಿನ ಸವನ, ತೃತೀಯಸವನಗಳೆಂಬ ಮೂರು ಸವನಗಳಲ್ಲಿ ಮಾಧ್ಯಂದಿನಸವನವೂ, ಆಶ್ವಿನಶಸ್ತ್ರ, ಮರುತ್ವತೀಯ ಮೊದಲಾದ ಶಸ್ತ್ರ (ಮಂತ್ರ) ಗಳಲ್ಲಿ ನಿಷ್ಕೇವಲ್ಯಶಸ್ತ್ರವೂ, ಗಾಯತ್ರ್ಯಾದಿ ಛಂದಸ್ಸುಗಳಲ್ಲಿ ತ್ರಿಷ್ಟುಪ್ ಛಂದಸ್ಸೂ, ಸಾಮಗಾನಗಳ ಮಧ್ಯದಲ್ಲಿ ಪೃಷ್ಠಸ್ತೋತ್ರನಿಷ್ಪಾದಕವಾದ ಬೃಹದ್ರಥಂತರ ಸಾಮವೂ ಶ್ರೇಷ್ಠವಾಗಿರುವುದೆಂದು ನೀವು ಅನುಮೋದಿಸಬೇಕು. ಏಕೆಂದರೆ ಅವುಗಳೆಲ್ಲಾ ನನಗೆ ಪ್ರಿಯವಾಗಿರುವುವು. ಇದೇ ನೀವು ನನಗೆ ಮಾಡುವ ಸತ್ಕಾರವು ಎಂದನು. ದೇವತೆಗಳು ಹಾಗೆಯೇ ಆಗಲೆಂದೊಪ್ಪಿ ಯಜ್ಞಾದಿಗಳಲ್ಲಿ ಮಾಹೇಂದ್ರಗ್ರಹಾದಿಗಳಿಗೆ ಶ್ರೇಷ್ಠತೆಯನ್ನು ಅನುಮೋದಿಸಿದರು. ಈ ವಿಷಯವು ಇತರ ವೇದಗಳಲ್ಲಿಯೂ **ಸ ಏತಂ ಮಾಹೇಂದ್ರಮುದಹರತ ವೃತ್ರಂ ಹತ್ವಾನ್ಯಾಸು**

**ಧೇವತಾಸ್ವಧೀತಿ ಯೆನ್ಮಾಹೇಂದ್ರೋ ಗೃಹ್ಯತೆ ಉದ್ಧಾರಮೇವ ತಂ ಯಜಮಾನ ಉದ್ಧರತೇ ನ ಪ್ರಜಾಸ್ವಧಿ** ಎಂದು ಹೇಳಿರುವುದು. ಈ ವಿಷಯವನ್ನು ಯಜ್ಞಮಾಡುವ ಯಾವ ಯಜಮಾನನು ತಿಳಿಯುವನೋ ಅವನು ಜನರಲ್ಲಿ ಶ್ರೇಷ್ಠತೆಯನ್ನೂ, ಗಣ್ಯಸ್ಥಾನವನ್ನೂ ಪಡೆಯುವನು.

**ಪೀಠಿಕೆ ಸಮಾಪ್ತವು**

ಸಾಯಣಭಾಷ್ಯಂ

**ಅಹಂಭುವಮಿತ್ಯೇಕಾದಶರ್ಚಂ ಷಷ್ಠಂ ಸೂಕ್ತಂ । ಪೂರ್ವಸೂಕ್ತೇನ ಸಪ್ತಗುನಾ ಸ್ತುತೋ ಹೃಷ್ಟಃ ಸನ್ನಿದಮಾದಿಸೂಕ್ತತ್ರಯೇಣ ಸ್ವಯಮಾತ್ಮಾನಮಸ್ತೌತ್ । ತಸ್ಮಾದ್ವೈಕುಂಠಸ್ಯೇಂದ್ರಸ್ಯ ವಾಕ್ಯ. ತ್ವಾದ್ಯಸ್ಯ ವಾಕ್ಯಂ ಸ ಋಷಿರಿತಿ ಪರಿಭಾಷಾಯೇಂದ್ರ ಋಷಿಃ । ವೈಕುಂಠಸ್ಯೇಂದ್ರಸ್ಯ ಚ ಸ್ತೂಯಮಾನ- ತ್ವಾದ್ಯಾ ತೇನೋಚ್ಯತೇ ಸಾ ದೇವತೇತಿ ಪರಿಭಾಷಾಯೇಂದ್ರ ಏವ ದೇವತಾ। ದಶಮ್ಯೇಕಾದಶೀಸಪ್ತಮ್ಯ ಸ್ತ್ರಿಷ್ಟುಭಃ । ಶಿಷ್ಟಾಸ್ತ್ರಿಷ್ಟುಬಂತಪರಿಭಾಷಯಾ ಜಗತ್ಯಃ । ತಥಾ ಚಾನುಕ್ರಾಂತಂ । ಸ ಸಪ್ತಗುಸ್ತುತಿಸಂ- ಹೃಷ್ಟ ಆತ್ಮಾನಮುತ್ತರೈಸ್ತ್ರಿಭಿಸ್ತುಷ್ಟಾವಾಹಂ ಭುವನೇಕಾದಶಾಂತ್ಯೇ ತ್ರಿಷ್ಟುಭೌ ಸಪ್ತಮೀ ಚೇತಿ ॥ ಅತಿರಾತ್ರೇ ದ್ವಿತೀಯಪರ್ಯಾಯೇ ಹೋತುಃ ಶಸ್ತ್ರ ಏತತ್ಸೂಕ್ತಂ । ಸೂತ್ರಿತಂ ಚ । ಅಹಂ ಭುವಮು- ಪಾಯ್ಯಸ್ಯಾಂಧಸೋ ಮದಾಯೇತಿ ಯಾಜ್ಯಾ । ಆ. ೬-೪ । ಇತಿ ॥ ಸಮೂಳ್ಹಸ್ಯ ದಶರಾತ್ರಸ್ಯ ತೃತೀ- ಯೇ ಛಂದೋಮೇ ನಿಷ್ಕೇವಲ್ಯೇಽಸ್ಯೇತತ್ಸೂಕ್ತಂ । ಅಹಂ ಭುವಂ ತತ್ತ ಇಂದ್ರಿಯಮಿತಿ ನಿಷ್ಕೇವಲ್ಯಂ । ಆ. ೮-೭ । ಇತಿ ಸೂತ್ರಿತಂ ॥**

**ಅನುವಾದವು—ಅಹಂ ಭುವಂ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು. ಹಿಂದಿನ ಸೂಕ್ತದಲ್ಲಿ ಸಪ್ತಗು ಋಷಿಯಿಂದ ಸ್ತುತಿಸಲ್ಪಟ್ಟ ಇಂದ್ರನು ಆ ಋಷಿಯ ಸ್ತುತಿಯಿಂದ ಸಂತುಷ್ಟನಾಗಿ ಈ ಸೂಕ್ತದಲ್ಲಿಯೂ, ಇದರ ಮುಂದಿನ ಎರಡು ಸೂಕ್ತಗಳಲ್ಲಿಯೂ ತಾನೇ ತನ್ನ ಪ್ರಶಂಸೆಯನ್ನು ಮಾಡಿಕೊಂಡಿದ್ದಾನೆ. ಆದ್ದರಿಂದ ಈ ಸೂಕ್ತದ ವಿಷಯವು ವೈಕುಂಠನಾಮಕನಾದ ಇಂದ್ರನ ವಾಕ್ಯವಾಗಿರುವುದರಿಂದ "**ಯಸ್ಯ ವಾಕ್ಯಂ ಸ ಋಷಿಃ**—ಮಂತ್ರಗಳಲ್ಲಿ ಯಾರ ವಾಕ್ಯವಿರುವುದೋ ಅವನೇ ಆ ಮಂತ್ರಕ್ಕೆ ಋಷಿಯು" ಎಂಬ ನ್ಯಾಯಾನುಸಾರ ಈ ಸೂಕ್ತಕ್ಕೆ ಇಂದ್ರನೇ ಋಷಿಯು; ಈ ಸೂಕ್ತದಲ್ಲಿ ಇಂದ್ರನೇ ಸ್ತುತನಾಗಿರುವುದರಿಂದ "**ಯಾ ತೇನೋಚ್ಯತೇ ಸಾ ದೇವತಾ**—ಮಂತ್ರದಲ್ಲಿ ಯಾವ ವಿಷಯವು ಪ್ರತಿಪಾದಿತವಾಗಿರುವುದೋ ಅದೇ ಆ ಮಂತ್ರಕ್ಕೆ ದೇವತೆಯು" ಎಂಬ ನ್ಯಾಯಾನುಸಾರವಾಗಿ ಈ ಸೂಕ್ತಕ್ಕೆ ಇಂದ್ರನೇ ದೇವತೆಯು. ಈ ಸೂಕ್ತದ ಹತ್ತು, ಹನ್ನೊಂದು ಮತ್ತು ಏಳನೆಯ ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಉಳಿದ ಋಕ್ಕುಗಳು ಜಗತೀ ಛಂದಸ್ಕವು. ಅನುಕ್ರಮಣಿಕೆಯಲ್ಲಿ **ಸ ಸಪ್ತಗುಸ್ತುತಿಸಂಹೃಷ್ಟ ಆತ್ಮಾನಮುತ್ತರೈಸ್ತ್ರಿಭಿಸ್ತುಷ್ಟಾವಾಹಂ ಭುವನೇಕಾದಶಾಂತ್ಯೇ ತ್ರಿಷ್ಟುಭೌ ಸಪ್ತಮೀ ಚ** ಎಂದು ಹೇಳಿರುವುದು. ಅತಿರಾತ್ರವೆಂಬ ಯಾಗದ ದ್ವಿತೀಯಪರ್ಯಾಯದಲ್ಲಿ ಹೋತೃವೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಅಹಂ ಭುವಮುಪಾಯ್ಯಸ್ಯಾಂಧಸೋ ಮದಾಯೇತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು. ಸಮೂಳ್ಹವೆಂಬ ದಶರಾತ್ರಯಾಗದ ಮೂರನೆಯ ಛಂದೋಮದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಅಹಂ ಭುವಂ ತತ್ತ ಇಂದ್ರಿಯಮಿತಿ ನಿಷ್ಕೇವಲ್ಯಂ** ಎಂಬ ಸೂತ್ರದಿಂದ (ಆ. ೮-೭) ವಿವೃತವಾಗಿರುವುದು.

## ಸೂಕ್ತ—೪೮

ಮಂಡಲ—೧೦ ‖ ಅನುವಾಕ—೪ ‖ ಸೂಕ್ತ—೪೮ ‖
ಅಷ್ಟಕ—೮ ‖ ಅಧ್ಯಾಯ—೧ ‖ ವರ್ಗ—೫, ೬ ‖
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ‖
ಋಷಿಃ—ಇಂದ್ರೋ ವೈಕುಂಠಃ ‖
ದೇವತಾ—ಇಂದ್ರೋ ವೈಕುಂಠಃ ‖
ಛಂದಃ—೧-೬, ೮-೯. ಜಗತೀ । ೭, ೧೧, ೧೧. ತ್ರಿಷ್ಟುಪ್ ‖

ಸಂಹಿತಾಪಾಠಃ

ಅಹಂ ಭುವಂ ವಸುನಃ ಪೂರ್ವ್ಯಸ್ಪತಿರಹಂ ಧನಾನಿ ಸಂ ಜಯಾಮಿ ಶಶ್ವತಃ।
ಮಾಂ ಹವಂತೇ ಪಿತರಂ ನ ಜಂತವೋಽಹಂ ದಾಶುಷೇ ವಿ ಭಜಾಮಿ ಭೋಜನಂ ‖ ೧ ‖

ಪದಪಾಠಃ

ಅಹಂ । ಭುವಂ । ವಸುನಃ । ಪೂರ್ವ್ಯಃ । ಪತಿಃ । ಅಹಂ । ಧನಾನಿ । ಸಂ । ಜಯಾಮಿ । ಶಶ್ವತಃ ‖
ಮಾಂ । ಹವಂತೇ । ಪಿತರಂ । ನ । ಜಂತವಃ । ಅಹಂ । ದಾಶುಷೇ । ವಿ । ಭಜಾಮಿ । ಭೋಜನಂ ‖ ೧ ‖

ಸಾಯಣಭಾಷ್ಯಂ

ಅಹಮಿಂದ್ರೋ ವಸುನೋ ಧನಸ್ಯ ಪೂರ್ವ್ಯೋ ಮುಖ್ಯೋಽಸಾಧಾರಣಃ ಪತಿಃ ಸ್ವಾಮೀ ಭುವಂ । ಅಭವಂ ‖ ಭವತೇರ್ಲಙಿ ಬಹುಲಂ ಛಂದಸೀತಿ ಶಪೋ ಲುಕ್ । ಅಚಿ ಶ್ನುಧಾತುಭ್ರುವಾಮಿತ್ಯುವಙಾದೇಶಃ । ಅಡಭಾವಶ್ಛಾಂದಸಃ । ತಥಾಹಂ ಶಶ್ವತಃ । ಬಹುನಾಮೈತತ್ । ಬಹೋಃ ಶತ್ರೋಃ ಸಂಬಂಧೀನಿ ಧನಾನಿ । ಸಮಿತ್ಯೇಕೀಭಾವೇ । ಸಹ ಜಯಾಮಿ । ಕಿಂಚ ಮಾಮೇವ ಜಂತವಃ ಪ್ರಾಣಿನೋ ಯಜಮಾನಾ ಹವಂತೇ । ಆಹ್ವಯಂತಿ । ಪಿತರಂ ನ ಪಿತರಮಿವ ಪುತ್ರಾಃ । ಅಹಂ ದಾಶುಷೇ ದಾತ್ರೇ ಯಜಮಾನಾಯ ಭೋಜನಮನ್ನಂ ವಿ ಭಜಾಮಿ । ದದಾಮಿ ‖

ಪ್ರತಿಪದಾರ್ಥ

**ಅಹಂ**—ನಾನು (ಇಂದ್ರನು) । **ವಸುನಃ**—ಧನಕ್ಕೆ । **ಪೂರ್ವ್ಯಃ**—ಮುಖ್ಯವಾದ (ಅಸಾಧಾರಣವಾದ) । **ಪತಿಃ**—ಸ್ವಾಮಿಯಾಗಿ । **ಭುವಂ**—ಆಗಿದ್ದೇನೆ । **ಅಹಂ**—ನಾನು । **ಶಶ್ವತಃ**—ಅನೇಕ ಶತ್ರುಗಳ । **ಧನಾನಿ**—ಧನಗಳನ್ನು । **ಸಂ ಜಯಾಮಿ**—ಗೆದ್ದು ತರುತ್ತೇನೆ । **ಜಂತವಃ**—ಪ್ರಾಣಿಗಳೂ, ಯಜಮಾನರೇ ಮೊದಲಾದವರೂ । **ಮಾಂ**—ನನ್ನನ್ನು । **ಪಿತರಂ ನ**—ಪುತ್ರರು ತಮ್ಮ ತಂದೆಯನ್ನು ವಿಶ್ವಾಸದಿಂದ ಕರೆಯುವಂತೆ । **ಹವಂತೇ**—ಕರೆ

ದೇವತಾಸ್ವಥೀತಿ ಯೆನ್ಮಾಹೇಂದ್ರೋ ಗೃಹ್ಯತೆ ಉದ್ಧಾರಮೇವ ತಂ ಯಜಮಾನ ಉದ್ಧರತೇ ನ ಪ್ರಜಾಸ್ವಧಿ ಎಂದು ಹೇಳಿರುವುದು. ಈ ವಿಷಯವನ್ನು ಯಜ್ಞಮಾಡುವ ಯಾವ ಯಜಮಾನನು ತಿಳಿಯುವನೋ ಅವನು ಜನರಲ್ಲಿ ಶ್ರೇಷ್ಠತೆಯನ್ನೂ, ಗಣ್ಯಸ್ಥಾನವನ್ನೂ ಪಡೆಯುವನು.

**ಪೀಠಿಕೆ ಸಮಾಪ್ತವು**

ಸಾಯಣಭಾಷ್ಯಂ

**ಅಹಂಭುವಮಿತ್ಯೇಕಾದಶರ್ಚಂ ಷಷ್ಠಂ ಸೂಕ್ತಂ । ಪೂರ್ವಸೂಕ್ತೇನ ಸಪ್ತಗುನಾ ಸ್ತುತೋ ಹೃಷ್ಟಃ ಸನ್ನಿದಮಾದಿಸೂಕ್ತತ್ರಯೇಣ ಸ್ವಯಮಾತ್ಮಾನಮಸ್ತೌತ್ । ತಸ್ಮಾದ್ವೈಕುಂಠಸ್ಯೇಂದ್ರಸ್ಯ ವಾಕ್ಯ. ತ್ವಾದ್ಯಸ್ಯ ವಾಕ್ಯಂ ಸ ಋಷಿರಿತಿ ಪರಿಭಾಷಾಯೇಂದ್ರ ಋಷಿಃ । ವೈಕುಂಠಸ್ಯೇಂದ್ರಸ್ಯ ಚ ಸ್ತೂಯಮಾನ. ತ್ವಾದ್ಯಾ ತೇನೋಚ್ಯತೇ ಸಾ ದೇವತೇತಿ ಪರಿಭಾಷಾಯೇಂದ್ರ ಏವ ದೇವತಾ। ದಶಮ್ಯೇಕಾದಶೀಸಪ್ತಮ್ಯ ಸ್ತ್ರಿಷ್ಟುಭಃ । ಶಿಷ್ಟಾಸ್ತ್ರಿಷ್ಟುಬಂತಪರಿಭಾಷಯಾ ಜಗತ್ಯಃ । ತಥಾ ಚಾನುಕ್ರಾಂತಂ । ಸ ಸಪ್ತಗುಸ್ತುತಿಸಂ- ಹೃಷ್ಟ ಆತ್ಮಾನಮುತ್ತರೈಸ್ತ್ರಿಭಿಸ್ತುಷ್ಟಾವಾಹಂ ಭುವಮೇಕಾದಶಾಂತ್ಯೇ ತ್ರಿಷ್ಟುಭೌ ಸಪ್ತಮೀ ಚೇತಿ ॥ ಅತಿರಾತ್ರೇ ದ್ವಿತೀಯೆಪರ್ಯಾಯೇ ಹೋತುಃ ಶಸ್ತ್ರ ಏತತ್ಸೂಕ್ತಂ । ಸೂತ್ರಿತಂ ಚ । ಅಹಂ ಭುವಮು- ಪಾಯ್ಯಸ್ಯಾಂಧಸೋ ಮದಾಯೇತಿ ಯಾಜ್ಯಾ । ಅ. ೬-೪ । ಇತಿ ॥ ಸಮೂಳ್ಹಸ್ಯ ದಶರಾತ್ರಸ್ಯ ತೃತೀ- ಯೇ ಛಂದೋಮೇ ನಿಷ್ಕೇವಲ್ಯೇಽಸ್ಯೇತತ್ಸೂಕ್ತಂ । ಅಹಂ ಭುವಂ ತತ್ತ ಇಂದ್ರಿಯಮಿತಿ ನಿಷ್ಕೇವಲ್ಯಂ । ಅ. ೮-೭ । ಇತಿ ಸೂತ್ರಿತಂ ॥**

**ಅನುವಾದವು**— **ಅಹಂ ಭುವಂ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು. ಹಿಂದಿನ ಸೂಕ್ತದಲ್ಲಿ ಸಪ್ತಗು ಋಷಿಯಿಂದ ಸ್ತುತಿಸಲ್ಪಟ್ಟ ಇಂದ್ರನು ಆ ಋಷಿಯ ಸ್ತುತಿಯಿಂದ ಸಂತುಷ್ಟನಾಗಿ ಈ ಸೂಕ್ತದಲ್ಲಿಯೂ, ಇದರ ಮುಂದಿನ ಎರಡು ಸೂಕ್ತಗಳಲ್ಲಿಯೂ ತಾನೇ ತನ್ನ ಪ್ರಶಂಸೆಯನ್ನು ಮಾಡಿಕೊಂಡಿದ್ದಾನೆ. ಆದ್ದರಿಂದ ಈ ಸೂಕ್ತದ ವಿಷಯವು ವೈಕುಂಠನಾಮಕನಾದ ಇಂದ್ರನ ವಾಕ್ಯವಾಗಿರುವುದರಿಂದ "**ಯೆಸ್ಯ ವಾಕ್ಯಂ ಸ ಋಷಿಃ**—ಮಂತ್ರಗಳಲ್ಲಿ ಯಾರ ವಾಕ್ಯವಿರುವುದೋ ಅವನೇ ಆ ಮಂತ್ರಕ್ಕೆ ಋಷಿಯು" ಎಂಬ ನ್ಯಾಯಾನುಸಾರ ಈ ಸೂಕ್ತಕ್ಕೆ ಇಂದ್ರನೇ ಋಷಿಯು; ಈ ಸೂಕ್ತದಲ್ಲಿ ಇಂದ್ರನೇ ಸ್ತುತನಾಗಿರುವುದರಿಂದ "**ಯಾ ತೇನೋಚ್ಯತೇ ಸಾ ದೇವತಾ**—ಮಂತ್ರದಲ್ಲಿ ಯಾವ ವಿಷಯವು ಪ್ರತಿಪಾದಿತವಾಗಿರುವುದೋ ಅದೇ ಆ ಮಂತ್ರಕ್ಕೆ ದೇವತೆಯು" ಎಂಬ ನ್ಯಾಯಾನುಸಾರವಾಗಿ ಈ ಸೂಕ್ತಕ್ಕೆ ಇಂದ್ರನೇ ದೇವತೆಯು. ಈ ಸೂಕ್ತದ ಹತ್ತು, ಹನ್ನೊಂದು ಮತ್ತು ಏಳನೆಯ ಋಕ್ಕುಗಳು ತ್ರಿಷ್ಟುಪ್ ಛಂದಸ್ಸುವು. ಉಳಿದ ಋಕ್ಕುಗಳು ಜಗತೀ ಛಂದಸ್ಸುವು. ಅನುಕ್ರಮಣಿಕೆಯಲ್ಲಿ **ಸ ಸಪ್ತಗುಸ್ತುತಿಸಂಹೃಷ್ಟ ಆತ್ಮಾನಮುತ್ತ- ರೈಸ್ತ್ರಿಭಿಸ್ತುಷ್ಟಾವಾಹಂ ಭುವಮೇಕಾದಶಾಂತ್ಯೇ ತ್ರಿಷ್ಟುಭೌ ಸಪ್ತಮೀ ಚ** ಎಂದು ಹೇಳಿರುವುದು. ಅತಿರಾತ್ರವೆಂಬ ಯಾಗದ ದ್ವಿತೀಯಪರ್ಯಾಯದಲ್ಲಿ ಹೋತೃವೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಅಹಂ ಭುವಮುಪಾಯ್ಯಸ್ಯಾಂಧಸೋ ಮದಾಯೇತಿ ಯಾಜ್ಯಾ** ಎಂಬ ಸೂತ್ರದಿಂದ (ಅ. ೬-೪) ವಿವೃತವಾಗಿರುವುದು. ಸಮೂಳ್ಹವೆಂಬ ದಶರಾತ್ರಯಾಗದ ಮೂರನೆಯ ಛಂದೋಮದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಅಹಂ ಭುವಂ ತತ್ತ ಇಂದ್ರಿಯಮಿತಿ ನಿಷ್ಕೇವಲ್ಯಂ** ಎಂಬ ಸೂತ್ರದಿಂದ (ಅ. ೮-೭) ವಿವೃತವಾಗಿರುವುದು.

## ಸೂಕ್ತ—೪೮

ಮಂಡಲ—೧೦ ॥ ಅನುವಾಕ—೪ ॥ ಸೂಕ್ತ—೪೮ ॥
ಅಷ್ಟಕ—೮ ॥ ಅಧ್ಯಾಯ—೧ ॥ ವರ್ಗ—೫, ೬ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
ಋಷಿಃ—ಇಂದ್ರೋ ವೈಕುಂಠಃ ॥
ದೇವತಾ—ಇಂದ್ರೋ ವೈಕುಂಠಃ ॥
ಛಂದಃ—೧-೬, ೮—೯. ಜಗತೀ । ೭, ೧೦, ೧೧. ತ್ರಿಷ್ಟುಪ್ ॥

ಸಂಹಿತಾಪಾಠಃ

ಅಹಂ ಭುವಂ ವಸುನಃ ಪೂರ್ವ್ಯಸ್ಪತಿರಹಂ ಧನಾನಿ ಸಂ ಜಯಾಮಿ ಶಶ್ವತಃ।
ಮಾಂ ಹವಂತೇ ಪಿತರಂ ನ ಜಂತವೋಽಹಂ ದಾಶುಷೇ ವಿ ಭಜಾಮಿ ಭೋಜನಂ ॥ ೧ ॥

ಪದಪಾಠಃ

ಅಹಂ । ಭುವಂ । ವಸುನಃ । ಪೂರ್ವ್ಯಃ । ಪತಿಃ । ಅಹಂ । ಧನಾನಿ । ಸಂ । ಜಯಾಮಿ । ಶಶ್ವತಃ ॥
ಮಾಂ । ಹವಂತೇ । ಪಿತರಂ । ನ । ಜಂತವಃ । ಅಹಂ । ದಾಶುಷೇ । ವಿ । ಭಜಾಮಿ । ಭೋಜನಂ ॥ ೧ ॥

ಸಾಯಣಭಾಷ್ಯಂ

ಅಹಮಿಂದ್ರೋ ವಸುನೋ ಧನಸ್ಯ ಪೂರ್ವ್ಯೋ ಮುಖ್ಯೋಽಸಾಧಾರಣಃ ಪತಿಃ ಸ್ವಾಮೀ ಭುವಂ । ಅಭವಂ ॥ ಭವತೇರ್ಲಙಿ ಬಹುಲಂ ಛಂದಸೀತಿ ಶಪೋ ಲುಕ್ । ಅಚಿ ಶ್ನುಧಾತುಭ್ರುವಾಮಿತ್ಯುವಙಾದೇಶಃ । ಅಡಭಾವಶ್ಛಾಂದಸಃ । ತಥಾಹಂ ಶಶ್ವತಃ । ಬಹುನಾಮೈತತ್ । ಬಹೋಃ ಶತ್ರೋಃ ಸಂಬಂಧೀನಿ ಧನಾನಿ । ಸಮಿತ್ಯೇಕೀಭಾವೇ । ಸಹ ಜಯಾಮಿ । ಕಿಂಚ ಮಾಮೇವ ಜಂತವಃ ಪ್ರಾಣಿನೋ ಯಜಮಾನಾ ಹವಂತೇ । ಆಹ್ವಯಂತಿ । ಪಿತರಂ ನ ಪಿತರಮಿವ ಪುತ್ರಾಃ । ಅಹಂ ದಾಶುಷೇ ದಾತ್ರೇ ಯಜಮಾನಾಯ ಭೋಜನಮನ್ನಂ ವಿ ಭಜಾಮಿ । ದದಾಮಿ ॥

ಪ್ರತಿಪದಾರ್ಥ

**ಅಹಂ**—ನಾನು (ಇಂದ್ರನು) । **ವಸುನಃ**—ಧನಕ್ಕೆ । **ಪೂರ್ವ್ಯಃ**—ಮುಖ್ಯವಾದ (ಅಸಾಧಾರಣವಾದ) । **ಪತಿಃ**—ಸ್ವಾಮಿಯಾಗಿ । **ಭುವಂ**—ಆಗಿದ್ದೇನೆ । **ಅಹಂ**—ನಾನು । **ಶಶ್ವತಃ**—ಅನೇಕ ಶತ್ರುಗಳ । **ಧನಾನಿ**—ಧನಗಳನ್ನು । **ಸಂ ಜಯಾಮಿ**—ಗೆದ್ದು ತರುತ್ತೇನೆ । **ಜಂತವಃ**—ಪ್ರಾಣಿಗಳೂ, ಯಜಮಾನರೇ ಮೊದಲಾದವರೂ । **ಮಾಂ**—ನನ್ನನ್ನು । **ಪಿತರಂ ನ**—ಪುತ್ರರು ತಮ್ಮ ತಂದೆಯನ್ನು ವಿಶ್ವಾಸದಿಂದ ಕರೆಯುವಂತೆ । **ಹವಂತೇ**—ಕರೆ

ಯುತ್ತಾರೆ | **ಅಹಂ**—ನಾನು | **ದಾಶುಷೇ**—ನನಗೆ ಹವಿಸ್ಸನ್ನ ರ್ಪಿಸುವ ಯಜಮಾನನಿಗೆ | **ಭೋಜನಂ**—ಅನ್ನ ವನ್ನು | **ವಿ ಭಜಾಮಿ**—ಒದಗಿಸಿಕೊಡುತ್ತೇನೆ.

ಭಾವಾರ್ಥ

ಇಂದ್ರನಾದ ನಾನು ಧನಕ್ಕೆಲ್ಲಾ ಮುಖ್ಯನಾದ ಎಂದರೆ ಏಕಮಾತ್ರ ಅಧಿಪತಿಯಾಗಿದ್ದೇನೆ. ಶತ್ರುಗಳ ಧನಗಳನ್ನು ಗೆದ್ದು ತರುತ್ತೇನೆ. ಸಮಸ್ತ ಪ್ರಾಣಿಗಳೂ ಎಂದರೆ ಯಜ್ಞ ಮಾಡುವ ಯಜಮಾನರೂ ಪುತ್ರರು ತಮ್ಮ ತಂದೆಯನ್ನು ಪ್ರೀತ್ಯಾದರಗಳಿಂದ ಕರೆಯುವಂತೆ ನನ್ನನ್ನು ಕರೆಯುತ್ತಾರೆ. ನನಗೆ ಹವಿಸ್ಸನ್ನರ್ಪಿಸುವ ಯಜಮಾನನಿಗೆ ಭೋಗಯೋಗ್ಯವಾದ ಅನ್ನವನ್ನು ಒದಗಿಸಿಕೊಡುತ್ತೇನೆ.

## English Translation

I am the principal lord of wealth : I conquer the treasure of many (adversaries) : living beings call upon me as (sons call upon) a father ; I bestow food on the donor of oblations.

ಸಂಹಿತಾಪಾಠಃ

**ಅಹಮಿಂದ್ರೋ ರೋಧೋ ವಕ್ಷೋ ಅಥರ್ವಣಸ್ತ್ರಿತಾಯ ಗಾ ಅಜನಯಮ-ಹೇರಧಿ |**

**ಅಹಂ ದಸ್ಯುಭ್ಯಃ ಪರಿ ನೃಮ್ಣಮಾ ದದೇ ಗೋತ್ರಾ ಶಿಕ್ಷನ್ ದಧೀಚೇ ಮಾತ-ರಿಶ್ವನೇ ॥ ೨ ॥**

ಪದಪಾಠಃ

**ಅಹಂ | ಇಂದ್ರಃ | ರೋಧಃ | ವಕ್ಷಃ | ಅಥರ್ವಣಃ | ತ್ರಿತಾಯ | ಗಾಃ | ಅಜನಯಂ | ಅಹೇಃ | ಅಧಿ ||**

**ಅಹಂ | ದಸ್ಯುಭ್ಯಃ | ಪರಿ | ನೃಮ್ಣಂ | ಆ | ದದೇ | ಗೋತ್ರಾ | ಶಿಕ್ಷನ್ | ದಧೀಚೇ | ಮಾತರಿಶ್ವನೇ||೨||**

ಸಾಯಣಭಾಷ್ಯಂ

ಆದ್ಯಪಾದಸ್ಯೇತಿಹಾಸಮಾಹುಃ | ಆಥರ್ವಣಂ ದಧ್ಯಂಚಂ ಮಧುವಿದ್ಯಾವಂತಮಿಂದ್ರ ಆಗತ್ಯ ಮಧುವಿದ್ಯಾಂ ಕಸ್ಯ ಚಿನ್ನ ಬ್ರೂಯಾ ಇತಿ ನಿಯಮಿತವಾನ್ | ಯದಿ ಬ್ರೂಯಸ್ತೇ ಶಿರೋ ಹರಾಮೀ-ತ್ಯುಕ್ತವಾನ್ | ಸ ಚಾಥರ್ವಣೋಽಶ್ವಿಭ್ಯಾಮುವಾಚ | ಇದಂ ವೈ ತನ್ಮಧು ದಧ್ಯಙ್ಙಾಥರ್ವಣೋಽಶ್ವಿಭ್ಯಾ-ಮುವಾಚ | ಶತ-೧೪-೫-೫-೧೭ | ಅಶ್ವಸ್ಯ ಶೀರ್ಷ್ಣಾ ಪ್ರ ಯದೀಮುವಾಚ | ಋ-೧-೧೧೬-೧೨ | ಇತಿ ಹಿ

ಶ್ರುತಿಃ । ಸ ಚೇಂದ್ರ ಆಗತ್ಯ ದಧೀಚಃ ಶಿರೋಽಹರದಿತಿ ತತ್ಕ್ರೋಚ್ಯತೇ । ಇಂದ್ರೋಽಹಮಥರ್ವಣೋಽ-ಥರ್ವಣಃ ಪುತ್ರಸ್ಯ ದಧೀಚೋ ವಕ್ಷಃ । ತದುಪಲಕ್ಷಿತಂ ಶಿರ ಇತ್ಯರ್ಥಃ । ತಸ್ಯ ರೋಧೋ ರೋಧಕೋ ಹರ್ತಾಸ್ಮಿ । ತಥಾ ತ್ರಿತಾಯೈತನ್ನಾಮಕಾಯೋಪಸ್ತ್ರ್ಯಯ ಕೂಪಪತಿತಾಯೋದ್ಧರಣಾರ್ಥಮಹೇರ್ಮೇಘ-ಸ್ಯಾಧ್ಯುಪರಿ ಗಾ ಉದಕಾನ್ಯಜನಯಂ । ಉದಪಾದಯಂ । ತ್ರಿತಸ್ಯ ಕೂಪಪತಿಸ್ಯೇಂದ್ರಂ ಪ್ರತ್ಯುದ್ಧರಣ-ಪ್ರಾರ್ಥನಂ ಸಂ ಮಾ ತಪಂತ್ಯಭಿತಃ । ಋ. ೧೦-೩೩-೨ । ಇತ್ಯತ್ರ ಪ್ರತಿಪಾದಿತಂ । ತಥಾಹಂ ದಸ್ಯುಭ್ಯ ಉಪಕ್ಷಪಯಿತೃಭ್ಯಃ ಶತೃಭ್ಯಃ ಸಕಾಶಾನ್ನೃಮ್ಣಂ ಧನಮಾದದೇ । ಆದತ್ತವಾನಸ್ಮಿ । ಕಿಂ ಕುರ್ವನ್ । ಗೋತ್ರಾ ಗನಾಮುದಕಾನಾಂ ರಕ್ಷಕಾನ್ಮೇಘಾಞ್ಶಿಕ್ಷನ್ ವಿನಯನ್ । ಕಿಮರ್ಥಂ । ಮಾತರಿಶ್ವನೇ ಮಾತರಿಶ್ವನಃ ಪುತ್ರಾಯ ದಧೀಚ ಏತನ್ನಾಮಕಾಯರ್ಷಯೇ ವರ್ಷಕಾಮಾಯ ಪ್ರವರ್ಷಯಿತು-ಮಿಚ್ಛನ್

ಪ್ರತಿಪದಾರ್ಥ

ಇಂದ್ರಃ—ಇಂದ್ರನಾದ । **ಅಹಂ**—ನಾನು । **ಅಥರ್ವಣಃ**—ಅಥರ್ವಋಷಿಯ ಪುತ್ರನಾದ ದಧೀಚ ಋಷಿಯ । **ವಕ್ಷಃ**—ಶಿರಸ್ಸನ್ನು । **ರೋಧಃ**—ಕತ್ತರಿಸಿದ್ದೇನೆ । **ತ್ರಿತಾಯ**—ಬಾವಿಯಲ್ಲಿ ಬಿದ್ದಿದ್ದ ತ್ರಿತನೆಂಬ ಋಷಿಯನ್ನು ಉದ್ಧರಿಸುವುದಕ್ಕಾಗಿ । **ಅಹೇಃ**—ಮೇಘದ । **ಅಧಿ**—ಮೇಲೆ (ಪ್ರಹರಿಸಿ) । **ಗಾಃ**—ಉದಕಗಳನ್ನು । **ಅಜನಯಂ**—ಉತ್ಪತ್ತಿ ಮಾಡಿದ್ದೇನೆ । **ಅಹಂ**—ನಾನು । **ದಸ್ಯುಭ್ಯಃ**—ಶತ್ರುಗಳಾದ ದಸ್ಯು ಜನರಿಂದ । **ನೃಮ್ಣಂ**—ಧನವನ್ನು । **ಆ ದದೇ**—ಕಸಿದುಕೊಂಡು ಬಂದಿದ್ದೇನೆ । **ಮಾತರಿಶ್ವನೇ**—ಮಾತರಿಶ್ವನ ಪುತ್ರನಾದ । **ದಧೀಚೇ**—ದಧೀಚ ಋಷಿಯ ಪ್ರಾರ್ಥನೆಯಂತೆ ವೃಷ್ಟಿಯನ್ನು ಸುರಿಸುವುದಕ್ಕಾಗಿ । **ಗೋತ್ರಾ**—ಮೇಘಗಳನ್ನು । **ಶಿಕ್ಷನ್**—ಶಿಕ್ಷಿಸಿದ್ದೇನೆ.

ಭಾವಾರ್ಥ

ಇಂದ್ರನಾದ ನಾನು ಅಥರ್ವಋಷಿಯ ಪುತ್ರನಾದ ದಧೀಚ ಋಷಿಯ ಶಿರಸ್ಸನ್ನು ಕತ್ತರಿಸಿದ್ದೇನೆ. ತ್ರಿತನೆಂಬ ಋಷಿಯು ಭಾವಿಯಲ್ಲಿ ಬಿದ್ದು ಬಾಯಾರಿಕೆಯಿಂದ ಬಳಲುತ್ತಿದ್ದಾಗ ಅವನಿಗಾಗಿ ಮೇಘವನ್ನು ಪ್ರಹರಿಸಿ ಉದಕವೃಷ್ಟಿಯಾಗುವಂತೆ ಮಾಡಿದ್ದೇನೆ. ಶತ್ರುಗಳಾದ ದಸ್ಯುಜನರಿಂದ ಧನವನ್ನು ಅಪಹರಿಸಿ ತಂದಿದ್ದೇನೆ. ಮಾತರಿಶ್ವನ ಪುತ್ರನಾದ ದಧೀಚ ಋಷಿಯ ಪ್ರಾರ್ಥನೆಯಂತೆ ವೃಷ್ಟಿಯನ್ನು ಸುರಿಸುವುದಕ್ಕಾಗಿ ಮೇಘಗಳನ್ನು ಪ್ರಹರಿಸಿದ್ದೇನೆ.

English Translation

I, Indra, am the striker off of the head of the son of Atharvan. I generated the waters from above the cloud for the sake of Trita. I carried off their wealth from the Dasyus; taming the clouds for Dadhyanch, the son of Matarishwan.

ಸಂಹಿತಾಪಾಠಃ

ಮಹ್ಯಂ ತ್ವಷ್ಟಾ ವಜ್ರಮತಕ್ಷದಾಯಸಂ ಮಯಿ ದೇವಾಸೋಽವೃಜನ್ನಪಿ ಕ್ರತುಂ ।

ಮಮಾನೀಕಂ ಸೂರ್ಯಸ್ಯೇವ ದುಷ್ಟರಂ ಮಾಮಾರ್ಯಂತಿ ಕೃತೇನ ಕರ್ತ್ವೇನ ಚ ॥ ೩ ॥

ಪದಪಾಠಃ

ಮಹ್ಯಂ । ತ್ವಷ್ಟಾ । ವಜ್ರಂ । ಅತಕ್ಷತ್ । ಆಯಸಂ । ಮಯಿ । ದೇವಾಸಃ । ಅವೃಜನ್ । ಅಪಿ । ಕ್ರತುಂ ॥
ಮಮ । ಅನೀಕಂ । ಸೂರ್ಯಸ್ಯಽಇವ । ದುಸ್ತರಂ । ಮಾಂ । ಆರ್ಯಂತಿ । ಕೃತೇನ । ಕರ್ತ್ವೇನ । ಚ ॥

ಸಾಯಣಭಾಷ್ಯಂ

ಮಹ್ಯಂ ಮದರ್ಥಂ ತ್ವಷ್ಟಾ ದೇವ ಆಯಸಮಯೋಮಯಂ ವಜ್ರಮಾಯುಧಮತಕ್ಷತ್ । ಸಂಪಾದಿತವಾನ್ । ದೇವಾ ಮಯಿ ವಿಷಯೇ ಕ್ರತುಂ ಸ್ವವಿರೋಧಿಹನನರೂಪಂ ಕರ್ಮಾಪ್ಯವೃಜನ್ । ಸಮುಪಾದಯನ್ । ಮಮಾನೀಕಂ ಸೇನಾಸಮೂಹಂ ಸೂರ್ಯಾನೀಕಮಿವ ದುಷ್ಟರಂ । ಅನ್ಯೇನ ತರೀತುಮಶಕ್ಯಂ । ಮಾಮೇವ ಕೃತೇನ ಕರ್ಮಣಾ ಕರ್ತ್ವೇನೇತಃ ಪರಂ ಕರ್ತವ್ಯೇನ ವೃತ್ರವಧಾದಿರೂಪೇಣಾರ್ಯಂತಿ । ಗಚ್ಛಂತಿ । ಆರ್ಯತಿರ್ಗತಿಕರ್ಮಾ । ಯದ್ವಾ । ಆರ್ಯಮೀಶ್ವರಂ ಕುರ್ವತೇ ॥

ಪ್ರತಿಪದಾರ್ಥ

**ತ್ವಷ್ಟಾ**—ತ್ವಷ್ಟೃದೇವನು । **ಮಹ್ಯಂ**—ನನಗೋಸ್ಕರ । **ಆಯಸಂ**—ಉಕ್ಕಿನಿಂದ ನಿರ್ಮಿತವಾದ । **ವಜ್ರಂ**—ವಜ್ರಾಯುಧವನ್ನು । **ಅತಕ್ಷತ್**—ಮಾಡಿಕೊಟ್ಟಿದ್ದಾನೆ । (**ದೇವಾಃ**—ದೇವತೆಗಳು) । **ಮಯಿ**—ನನ್ನಲ್ಲಿ । **ಕ್ರತುಂ**—ಶತ್ರುಹನನರೂಪವಾದ ಕರ್ಮವನ್ನು । **ಅಪಿ ಅವೃಜನ್**—ಕೇಂದ್ರೀಕರಿಸಿದ್ದಾರೆ । **ಮಮ**—ನನ್ನ । **ಅನೀಕಂ**—ಸೇನೆಯು । **ಸೂರ್ಯಸ್ಯೇವ**—ಸೂರ್ಯನ ತೀಕ್ಷ್ಣವಾದ ಕಿರಣಗಳಂತೆ । **ದುಸ್ತರಂ**—ಸಹಿಸಲಶಕ್ಯವು । **ಮಾಂ**—ನನ್ನನ್ನು । **ಕೃತೇನ**—ಈಗ ಮಾಡಿರುವ । **ಕರ್ತ್ವೇನ**—ಮುಂದೆ ಮಾಡುವ ವೃತ್ರವಧಾದಿ ಕರ್ಮಗಳ ನಿಮಿತ್ತ । **ಆರ್ಯಂತಿ**—ಸ್ವಾಮಿ ಎಂದು ಭಾವಿಸಿ ಸಮಿಾಪಿಸುತ್ತಾರೆ.

ಭಾವಾರ್ಥ

ತ್ವಷ್ಟೃದೇವನು ನನಗಾಗಿ ಉಕ್ಕಿನಿಂದ ಮಾಡಿದ ವಜ್ರಾಯುಧವನ್ನು ನಿರ್ಮಿಸಿಕೊಟ್ಟನು. ದೇವತೆಗಳು ನನ್ನಲ್ಲಿ ಶತ್ರುಹನನಸಾಮರ್ಥ್ಯವುಳ್ಳ ಕರ್ಮಗಳೆಲ್ಲವನ್ನೂ ಕೇಂದ್ರೀಕರಿಸಿ ಸ್ಥಾಪಿಸಿದ್ದಾರೆ. ನನ್ನ ಸೇನೆಯು ಸೂರ್ಯನ ತೀಕ್ಷ್ಣವಾದ ಕಿರಣಗಳಂತೆ ಸಹಿಸಲಶಕ್ಯವಾಗಿದೆ. ನಾನು ಈಗ ಮಾಡಿರುವ ಮತ್ತು ಮುಂದೆ ಮಾಡುವ ಸಾಹಸಕರ್ಮಗಳಿಗಾಗಿ ಜನರು ನನ್ನನ್ನು ತಮ್ಮ ಸ್ವಾಮಿಯೆಂದು ಭಾವಿಸಿ ಸಮಿಾಪಿಸುತ್ತಾರೆ.

**English Translation**

For me Twashtri fabricated the iron thunderbolt: in me the gods have concentered pious acts: my lustre is insupportable, like that of the

Sun : men acknowledge me as lord ia consequence of what I have done, and of what I shall do.

ಸಂಹಿತಾಪಾಠಃ

ಅಹಮೇತಂ ಗವ್ಯಯಮಶ್ವ್ಯಂ ಪಶುಂ ಪುರೀಷಿಣಂ ಸಾಯಕೇನಾ ಹಿರಣ್ಯ-
ಯಂ
ಪುರೂ ಸಹಸ್ರಾ ನಿ ಶಿಶಾಮಿ ದಾಶುಷೇ ಯನ್ಮಾ ಸೋಮಾಸ ಉಕ್ಥಿನೋ
ಅಮಂದಿಷುಃ ॥ ೪ ॥

ಪದಪಾಠಃ

ಅಹಂ । ಏತಂ । ಗವ್ಯಯಂ । ಅಶ್ವ್ಯಂ । ಪಶುಂ । ಪುರೀಷಿಣಂ । ಸಾಯಕೇನ । ಹಿರಣ್ಯಯಂ ॥
ಪುರು । ಸಹಸ್ರಾ । ನಿ । ಶಿಶಾಮಿ । ದಾಶುಷೇ । ಯತ್ । ಮಾ । ಸೋಮಾಸಃ । ಉಕ್ಥಿನಃ । ಅಮಂದಿಷುಃ ॥

ಸಾಯಣಭಾಷ್ಯಂ

ಅಹಮೇತಂ ಗವ್ಯಯಂ ಗೋಮಯಮಶ್ವ್ಯಮಶ್ವಮಯಂ ಹಿರಣ್ಯಯಂ ಹಿರಣ್ಯಾಲಂಕಾರೋಪೇತಂ ಪುರೀಷಿಣಂ। ಪುರೀಷಮುದಕಂ ಕ್ಷೀರರೂಪಂ। ತದ್ವಂತಂ ಪಶುಂ ಶತ್ರುಸಂಬಂಧಿನಂ । ಜಾತ್ಯೈಕವಚನಂ । ಪಶುಸಂಘಮಿತ್ಯರ್ಥಃ । ತಂ । ಸಾಯಕೇನಾಯುಧೇನಾಜಯಂ । ತಥಾ ಪುರು ಪುರೂಣಿ ಸಹಸ್ರಾ ಸಹಸ್ರಾಣಿ ಶಸ್ತ್ರಾಣಿ ನಿ ಶಿಶಾಮಿ ಸಂಸ್ಕರೋಮಿ ದಾಶುಷೇ ಹವಿರ್ದತ್ತವತೇ ಯಜಮಾನಾಯ+ ವೈರಿನಾಶಾಯೇತ್ಯರ್ಥಃ । ಕದೇತಿ ಉಚ್ಯತೇ । ಯದ್ಯದಾ ಮಾ ಮಾಂ ಸೋಮಾಸಃ ಸೋಮಾ ಉಕ್ಥಿನಃ ಶಸ್ತ್ರೋಪೇತಾಃ ಸಂತಃ ಅಥವಾ ಸೋಮೇನ ಶಸ್ತ್ರೈಶ್ಚೋಪೇತಾ ಯಜಮಾನಾ ಅಮಂದಿಷುಃ ತರ್ಪಯಂತಿ ॥

ಪ್ರತಿಪದಾರ್ಥ

**ಯತ್**—ಯಾವಾಗ । **ಮಾ**—ನನ್ನನ್ನು । **ಸೋಮಾಸಃ**—ಸೋಮರಸಗಳು । **ಉಕ್ಥಿನಃ**—ಯಜಮಾನರಿಂದ ಮಂತ್ರಪೂರ್ವಕವಾಗಿ ಅರ್ಪಿಸಲ್ಪಟ್ಟು । **ಅಮಂದಿಷುಃ**—ತೃಪ್ತಿಗೊಳಿಸುವವೋ ಆಗ । **ಅಹಂ**—ನಾನು । **ಗವ್ಯಯಂ**—ಗೋವುಗಳಿಂದ ಸಹಿತವಾದುದೂ । **ಅಶ್ವ್ಯಂ**—ಅಶ್ವಗಳಿಂದ ಸಹಿತವಾದುದೂ । **ಹಿರಣ್ಯಯಂ**—ಸುವರ್ಣಾಭರಣಗಳಿಂದ ಯುಕ್ತವಾದುದೂ । **ಪುರೀಷಿಣಂ**—ಕ್ಷೀರಸಹಿತವಾದುದೂ ಆದ । **ಪಶುಂ**—ಶತ್ರುವಿನಲ್ಲಿರುವ ಗೋಸಮೂಹವನ್ನು । **ಸಾಯಕೇನ**—ಆಯುಧದಿಂದ ಗೆಲ್ಲುವೆನು (ಮತ್ತು ಶತ್ರುವಧಾರ್ಥವಾಗಿ) । **ಪುರು**—ದೊಡ್ಡವಾದ । **ಸಹಸ್ರಾ**—ಸಾವಿರಾರು ಆಯುಧಗಳನ್ನು । **ದಾಶುಷೇ**—ನನಗೆ ಹವಿಸ್ಸನ್ನರ್ಪಿಸಿದ ಯಜಮಾನನಿಗಾಗಿ । **ನಿ ಶಿಶಾಮಿ**—ಹರಿತವನ್ನಾಗಿ ಮಾಡುವೆನು.

ಭಾವಾರ್ಥ

ಯಜ್ಞ ಮಾಡುವ ಯಜಮಾನರು ಮಂತ್ರಪೂರ್ವಕವಾಗಿ ನನಗೆ ಅರ್ಪಿಸಿದ ಸೋಮರಸಗಳಿಂದ ನಾನು ಯಾವಾಗ ತೃಪ್ತನಾಗುವೆನೋ ಆಗ ನನಗೆ ಹವಿಸ್ಸನ್ನರ್ಪಿಸಿದ ಯಜಮಾನರಿಗಾಗಿ ಶತ್ರುಗಳಲ್ಲಿರುವ ಗೋವುಗಳು, ಅಶ್ವಗಳು, ಸುವರ್ಣಾಭರಣಗಳು, ಹೆಚ್ಚಾಗಿ ಹಾಲನ್ನು ಕೊಡುವ ಗೋವುಗಳು ಇವುಗಳನ್ನೆಲ್ಲಾ ಶತ್ರುಗಳಿಂದ ಗೆದ್ದು ತರುವುದಕ್ಕಾಗಿ ನನ್ನ ಆಯುಧವನ್ನು ಹರಿತ ಮಾಡುವೆನು ಮತ್ತು ದೊಡ್ಡದಾದ ಆ ಸಾವಿರಾರು ಆಯುಧಗಳಿಂದ ಶತ್ರುಗಳನ್ನು ಗೆಲ್ಲುವೆನು.

English Translation.

(I conquered) by my shaft this (wealth) comprehending cows, horses, herds, water, and gold; I give many thousands to the donor(of the oblation) when libations and praises have afforded me delight.

ಸಂಹಿತಾಪಾಠಃ

ಅಹಮಿಂದ್ರೋ ನ ಪರಾ ಜಿಗ್ಯ ಇದ್ಧನಂ ನ ಮೃತ್ಯವೇಽವ ತಸ್ಥೇ ಕದಾ ಚನ ।
ಸೋಮಮಿನ್ಮಾ ಸುನ್ವಂತೋ ಯಾಚತಾ ವಸು ನ ಮೇ ಪೂರವಃ ಸಖ್ಯೇ
ರಿಷಾಥನ ॥ ೫ ॥

ಪದಪಾಠಃ

ಅಹಂ । ಇಂದ್ರಃ । ನ । ಪರಾ । ಜಿಗ್ಯೇ । ಇತ್ । ಧನಂ । ನ । ಮೃತ್ಯವೇ । ಅವ । ತಸ್ಥೇ । ಕದಾ । ಚನ ॥
ಸೋಮಂ । ಇತ್ । ಮಾ । ಸುನ್ವಂತಃ । ಯಾಚತ । ವಸು । ನ । ಮೇ । ಪೂರವಃ । ಸಖ್ಯೇ । ರಿಷಾಥನ ॥

ಸಾಯಣಭಾಷ್ಯಂ

ಇಂದ್ರೋ ಧನಸ್ಯ ಸರ್ವಸ್ಯ ಸ್ವಾಮ್ಯಹಂ ಧನಮಾತ್ಮೀಯಂ ನ ಪರಾ ಜಿಗ್ಯ ಇತ್ । ನೈವ ಪರಾಭಾವಯಾಮಿ । ಮದೀಯಂ ಧನಂ ನ ಪರಾಭೂಯತ ಇತ್ಯರ್ಥಃ । ಕಿಂಚಾಹಂ ಮೃತ್ಯವೇ ಸರ್ವೇಷಾಂ ಮಾರಕಾಯ ಕದಾ ಚನ ಕದಾಪಿ ನಾವ ತಸ್ಥೇ । ನಾವಸ್ಥಿತೋ ಭವಾಮಿ । ಇಂದ್ರಭಕ್ತಾ ನ ಮೃತ್ಯುಭಾಜೋ ಭವಂತಿ ಕಿಲ ಕಿಮು ವಕ್ತವ್ಯಮಿಂದ್ರಸ್ಯ ಮೃತ್ಯುವಿರಹೇ । ಯಸ್ಮಾದೇವಂ ತಸ್ಮಾತ್ಸೋಮಂ ಸುನ್ವಂತೋ ಹೇ ಯಜಮಾನಾಃ ವಸು ಯುಷ್ಮದಭಿಮತಂ ಧನಂ ಮೇನ್ಮಾಮೇವ ಯಾಚತ । ಹೇ ಪೂರವೋ ಮನುಷ್ಯಾಃ ಮೇ ಸಖ್ಯೇ ನ ರಿಷಾಥನ । ಮಾ ರಿಷ್ಟಾ ಭವಥ । ಮತ್ಸಖ್ಯಂ ಮಾ ವಿನಾಶಯತ ॥

ಪ್ರತಿಪದಾರ್ಥ

**ಇಂದ್ರಃ**—ಸಮಸ್ತ ಧನಕ್ಕೂ ಸ್ವಾಮಿಯಾದ | **ಅಹಂ**—ನಾನು | **ಧನಂ**—ನನ್ನ ಧನವನ್ನು | **ಪರಾ**—ಇತರರು ಯಾರೂ | **ನ ಜಿಗ್ಯೇ ಇತ್**—ಕಸಿದುಕೊಳ್ಳಲು ಅವಕಾಶ ಕೊಡುವುದಿಲ್ಲ | (**ಅಹಂ**—ನಾನು) | **ಮೃತ್ಯವೇ**—ಸರ್ವರನ್ನೂ ಸಂಹರಿಸುವುದಕ್ಕಾಗಿ | **ಕದಾ ಚನ**—ಯಾವಾಗಲೂ | **ನ ಅವ ತಸ್ಥೇ**—ಪ್ರಯತ್ನಪಡುವುದಿಲ್ಲ (ಆದ್ದರಿಂದ) | **ಸೋಮಂ**—ಸೋಮರಸವನ್ನು | **ಸುನ್ವಂತಃ**—ನನಗಾಗಿ ಹಿಂಡುವ ಎಲೈ ಯಜಮಾನರೇ | **ವಸು**—ನಿಮಗೆ ಬೇಕಾದ ಧನವನ್ನು ಪಡೆಯಲು | **ಮಾ ಇತ್**—ನನ್ನನ್ನೇ | **ಯಾಚತ**—ಯಾಚಿಸಿರಿ | **ಪೂರವಃ**—ಎಲೈ ಮನುಷ್ಯರೇ | **ಮೇ**—ನನ್ನ | **ಸಖ್ಯೇ**—ಸ್ನೇಹವನ್ನು | **ನ ರಿಷಾಥನ**—ಕಳೆದುಕೊಳ್ಳಬೇಡಿ.

ಭಾವಾರ್ಥ

ಸಮಸ್ತ ಧನಕ್ಕೂ ಸ್ವಾಮಿಯಾದ ನಾನು ನನ್ನ ಧನವನ್ನು ಇತರರು ಯಾರೂ ಗೆದ್ದುಕೊಳ್ಳಲು ಅವಕಾಶವೀಯುವುದಿಲ್ಲ. ನನ್ನ ಭಕ್ತರಾದ ಜನರನ್ನು ಸಂಹರಿಸಲು ನಾನು ಯಾವಾಗಲೂ ಪ್ರಯತ್ನಪಡುವುದಿಲ್ಲ. ಆದ್ದರಿಂದ ನನಗಾಗಿ ಸೋಮರಸವನ್ನು ಹಿಂಡುವ ಎಲೈ ಯಜಮಾನರೇ, ನಿಮಗೆ ಬೇಕಾಗುವ ಧನಕ್ಕಾಗಿ ನನ್ನನ್ನೇ ಯಾಚಿಸಿರಿ. ಎಲೈ ಮನುಷ್ಯರೇ, ನೀವು ನನ್ನ ಸ್ನೇಹವನ್ನು ಕಳೆದುಕೊಳ್ಳಬೇಡಿ.

English Translation

I, Indra, am not surpassed in affluence; I never yield to death: pouring forth the Soma libation, ask of me wealth; O men, forfeit not my friendsbip.

ಸಂಹಿತಾಪಾಠಃ

ಅಹಮೇತಾಞ್ಛಾಶ್ವಸತೋ ದ್ವಾದ್ವೇಂದ್ರಂ ಯೇ ವಜ್ರಂ ಯುಧಯೇಽಕೃಣ್ವತ |
ಆಹ್ವಯಮಾನಾ ಅವ ಹನ್ಮನಾಹನಂ ದೃಳ್ಹಾ ವದನ್ನನಮಸ್ಯುರ್ನಮಸ್ವಿನಃ ||

ಪದಪಾಠಃ

ಅಹಂ | ಏತಾನ್ | ಶಾಶ್ವಸತಃ | ದ್ವಾಽದ್ವಾ | ಇಂದ್ರಂ | ಯೇ | ವಜ್ರಂ | ಯುಧಯೇ | ಅಕೃಣ್ವತ ||
ಆಽಹ್ವಯಮಾನಾನ್ | ಅವ | ಹನ್ಮನಾ | ಅಹನಂ | ದೃಳ್ಹಾ | ವದನ್ | ಅನಮಸ್ಯುಃ | ನಮಸ್ವಿನಃ ||

ಸಾಯಣಭಾಷ್ಯಂ

ಅಹಮಿಂದ್ರ ಏತಾನ್ವಕ್ಷ್ಯಮಾಣಾಞ್ಛಶ್ವಸತೋ ಭೃಶಂ ಪ್ರಾಣತಃ ಪ್ರವೃದ್ಧಬಲಾಞ್ಛತ್ರೂನ್ ದ್ವಾದ್ವಾ ದ್ವೌ ದ್ವೌ | ಯುಗ್ಮಭೂತಾನಿತ್ಯರ್ಥಃ | ತಾನಹನಮಿತಿ ಸಂಬಂಧಃ| ಏತಾನಿತ್ಯುಕ್ತಂ ಕಾನಿತ್ಯಾಹ| ಯೇ ಶತ್ರವ ಇಂದ್ರಂ ಶತ್ರೂಣಾಂ ದಾರಕಂ | ಇಂದ್ರಃ ಶತ್ರೂಣಾಂ ದಾರಯಿತೇತಿ ನಿರುಕ್ತಂ | ೧೦-೮ | ಈದೃಶಂ ವಜ್ರಂ ಬಲಿನಂ ಯದ್ವಾ ವ್ರಜವಂತಂ ಯುಧಯೇ ಯುದ್ಧಾಯಾಕೃಣ್ವತ ಅಕುರ್ವತ| ತಾನೇತಾನಿತ್ಯರ್ಥಃ | ಪುನಃ ಕೀದೃಶಾನ್ ಆಹ್ವಯಮಾನಾನ್ ಏಹಿ ಯುಧ್ಯಸ್ವೇತ್ಯಾಹ್ವಯತಃ ಶತ್ರೂನ್

ನಮಸ್ವಿನೋ ನಮನವತೋ ಬಲಾನ್ನಮಯಿತ್ವಾನಮಸ್ಯುರಪ್ರಣತಿಶೀಲಃ ಸನ್ ದೃಳ್ಹಾ ದೃಢಾನಿ ಭಯಜನಕಾನಿ ಸ್ಥಿರಾಣಿ ವಚನಾನಿ ವದನ್ನಹನಂ ಹತವಾನಸ್ಮಿ ||

ಪ್ರತಿಪದಾರ್ಥ

**ಅಹಂ**—ಇಂದ್ರನಾದ ನಾನು | **ಯೇ**—ಯಾವ ಶತ್ರುಗಳು | **ಇಂದ್ರಂ**—ಶತ್ರುಗಳನ್ನು ಯುದ್ಧದಲ್ಲಿ ಸೀಳಿ ಹಾಕುವವನೂ | **ವಜ್ರಂ**—ವಜ್ರಾಯುಧಧಾರಿಯೂ ಆದ ನನ್ನನ್ನು | **ಯುಧಯೇ**—ಯುದ್ಧಕ್ಕಾಗಿ | **ಅಕೃಣ್ವತ**—ಕರೆಯುವರೋ | **ಏತಾನ್**—ಅಂತಹ | **ಶಾಶ್ವಸತಃ**—ಶಕ್ತಿಯಿಂದ ಪ್ರವೃದ್ಧರಾದ ಶತ್ರುಗಳನ್ನು | **ದ್ವಾದ್ವಾ**—ಒಂದೊಂದು ಸಲಕ್ಕೆ ಇಬ್ಬಿಬ್ಬರನ್ನಾಗಿ ಕೊಲ್ಲುವೆನು ಮತ್ತು | **ಆಹ್ವಯಮಾನಾನ್**—ನನ್ನನ್ನು ಯುದ್ಧಕ್ಕಾಗಿ ಕರೆಯುತ್ತಿರುವ ಆ ಶತ್ರುಗಳನ್ನು | **ನಮಸ್ವಿನಃ**—ನನ್ನ ಶಕ್ತಿಯಿಂದ ಬಗ್ಗಿಸುತ್ತಲೂ | **ಅನಮಸ್ಯುಃ**—ಆದರೆ ನಾನು ಮಾತ್ರ ಅವರಿಗೆ ಬಗ್ಗದೆ | **ದೃಳ್ಹಾ**—ದೃಢವಾದುದೂ, ಭಯಜನಕವಾದುದೂ ಆದ ವೀರವಚನಗಳನ್ನು | **ವದನ್**—ನುಡಿಯುತ್ತಾ | **ಅಹನಂ**—ಕೊಲ್ಲುತ್ತೇನೆ.

ಭಾವಾರ್ಥ

ಶತ್ರುಗಳನ್ನು ಯುದ್ಧದಲ್ಲಿ ಸೀಳಿಹಾಕುವವನೂ, ವಜ್ರಾಯುಧಧಾರಿಯೂ ಆದ ನನ್ನನ್ನು ಯಾವ ಶತ್ರುಗಳು ಯುದ್ಧಕ್ಕಾಗಿ ಕರೆಯುವರೋ ಶಕ್ತಿಯಿಂದ ಮದಿಸಿದ ಅಂತಹ ಶತ್ರುಗಳನ್ನು ಇಂದ್ರನಾದ ನಾನು ಒಂದು ಸಲಕ್ಕೆ ಇಬ್ಬಿಬ್ಬರಂತೆ ಕೊಲ್ಲುವೆನು. ಯಾರಿಗೂ ಬಗ್ಗದಿರುವ ನಾನು ಯುದ್ಧಕ್ಕಾಗಿ ಕರೆಯುವ ಶತ್ರುಗಳನ್ನು ನನ್ನ ಶಕ್ತಿಯಿಂದ ಬಗ್ಗಿಸುವೆನು ಮತ್ತು ಭಯಜನಕವಾದ ವೀರಾಲಾಪಗಳನ್ನು ನುಡಿಯುತ್ತಾ ಅವರನ್ನು ಸಂಹರಿಸುವೆನು.

## English Translation

I destroy those powerful (enemies) two by two who defy the (wielder of the) thunderbolt, Indra, to battle. I slew them challenging (me to fight) with (great) slaughter, the unbending (slaying) the bending, uttering stern (menaces).

ಸಂಹಿತಾಪಾಠಃ

ಅಭೀ೩ದಮೇಕಮೇಕೋ ಅಸ್ಮಿ ನಿಷ್ಷಾಳಭೀ ದ್ವಾ ಕಿಮು ತ್ರಯಃ ಕರಂತಿ ।
ಖಲೇ ನ ಪರ್ಷಾನ್ ಪ್ರತಿ ಹನ್ಮಿ ಭೂರಿ ಕಿಂ ಮಾ ನಿಂದಂತಿ ಶತ್ರವೋಽನಿಂದ್ರಾಃ ॥ ೭ ॥

ಪದಪಾಠಃ

ಅಭಿ । ಇದಂ । ಏಕಂ । ಏಕಃ । ಅಸ್ಮಿ । ನಿಷ್ಷಾಟ್ । ಅಭಿ । ದ್ವಾ । ಕಿಂ । ಊಂ ಇತಿ । ತ್ರಯಃ । ಕರಂತಿ ॥
ಖಲೇ । ನ । ಪರ್ಷಾನ್ । ಪ್ರತಿ । ಹನ್ಮಿ । ಭೂರಿ । ಕಿಂ । ಮಾ । ನಿಂದಂತಿ । ಶತ್ರವಃ । ಅನಿಂದ್ರಾಃ ॥ ೭ ॥

### ಸಾಯಣಭಾಷ್ಯಂ

**ಅಹಮಿದಮಿದಾನೀಮೇಕಂ ಶತ್ರುಮೇಕೋಽಸಹಾಯ ಏವ ಸನ್ನಭ್ಯಸ್ಮಿ। ಅಭಿಭವಾಮಿ। ಕಿಂಚ ನಿಷ್ಷಾಟ್ ಸಪತ್ನಾನ್ನಿಃಷಹಮಾಣೋಽಹಂ ದ್ವಾ ದ್ವಾವಪ್ಯಸಹ್ಯೌ ಶತ್ರೂ ಅಭ್ಯಸ್ಮಿ। ಕಿಮು ಕಿಂ ವಾ ತ್ರಯಃ ಶತ್ರವಃ ಕರಂತಿ। ಕುರ್ವಂತಿ। ತಾನಪ್ಯಭಿಭವಾಮೀತ್ಯರ್ಥಃ। ಕಿಂ ಬಹುನಾ। ಖಲೇ ನ ಖಲನಿಷ್ಪಾದನೇ ಯಥಾ ಜೀರ್ಣವ್ರೀಹ್ಯಾದಿಸ್ತಂಬಾನನಾಯಾಸೇನ ಪ್ರತಿಹಂತಿ ಕರ್ಷಕಃ ತದ್ವತ್ಪಿಷಾನ್ನಿಷ್ಪುರಾನ್ಭೂರಿ ಬಹೂನ್ಶತ್ರೂನ್ಪ್ರತಿ ಹನ್ಮಿ। ಮಾ ಮಾಮನಿಂದ್ರಾ ಇಂದ್ರರಹಿತಾ ಇಂದ್ರಮಜಾನಂತ ಇಂದ್ರವಿರೋಧಿನಃ ಶತ್ರವೋ ಮಾಮಿಂದ್ರಂ ಕಿಂ ನಿಂದಂತಿ। ನಿಂದಿತುಮಶಕ್ತಾ ಇತ್ಯರ್ಥಃ। ಅತ್ರಾಭಿಭವಾಮೀತ್ಯಾದಿ ನಿರುಕ್ತಂ ದ್ರಷ್ಟವ್ಯಂ ॥ ನಿ. ೩-೧೦ ॥**

### ಪ್ರತಿಪದಾರ್ಥ

(**ಅಹಂ**—ನಾನು) । **ಇದಂ**—ಈಗ । **ಏಕಂ**—ಒಬ್ಬ ಶತ್ರುವನ್ನು । **ಏಕಃ**—ಒಬ್ಬನೇ ಎಂದರೆ ಯಾರ ಸಹಾಯವೂ ಇಲ್ಲದೆ । **ಅಭಿ ಅಸ್ಮಿ**—ಸೋಲಿಸುವೆನು । **ನಿಷ್ಷಾಟ್**—ಶತ್ರುಗಳನ್ನು ಸೋಲಿಸುವ ಸಾಮರ್ಥ್ಯವುಳ್ಳ ನಾನು । **ದ್ವಾ**—ಬಲಶಾಲಿಗಳಾದ ಇಬ್ಬರು ಶತ್ರುಗಳನ್ನು (ಒಟ್ಟಿಗೆ) । **ಅಭಿ**—ಸೋಲಿಸುವೆನು (ಅಷ್ಟೇ ಅಲ್ಲ) । **ತ್ರಯಃ**—ಮೂರುಮಂದಿ ಶತ್ರುಗಳಾದರೂ (ನನ್ನನ್ನು) । **ಕಿಮು ಕರಂತಿ**—ಏನುತಾನೇ ಮಾಡಬಲ್ಲರು ? । **ಖಲೇ ನ**—ರೈತನು ತೆನೆಯಲ್ಲಿರುವ ಕಾಳುಗಳನ್ನು ಯಾವರೀತಿ ಸುಲಭವಾಗಿ ಬಡಿದು ಬೇರ್ಪಡಿಸುವನೋ ಅದರಂತೆ । **ಪಿಷಾನ್**—ಶಕ್ತಿಯಿಂದ ಮದಿಸಿದವರೂ । **ಭೂರಿ**—ಅನೇಕರೂ ಆದ ಶತ್ರುಗಳನ್ನು । **ಪ್ರತಿ ಹನ್ಮಿ**—ಕೊಲ್ಲುತ್ತೇನೆ। **ಅನಿಂದ್ರಾಃ**—ಇಂದ್ರನ ಶಕ್ತಿಯನ್ನು ತಿಳಿಯದಿರುವ। **ಶತ್ರವಃ**—ಶತ್ರುಗಳು । **ಮಾ**—ನನ್ನನ್ನು । **ಕಿಂ ನಿಂದಂತಿ**—ನಿಂದಿಸಲು ಶಕ್ತರಾದಾರೇನು ?

### ಭಾವಾರ್ಥ

ಇಂದ್ರನಾದ ನಾನು ಈಗ ಇನ್ನೊಬ್ಬರ ಸಹಾಯವಿಲ್ಲದೆ ನಾನೊಬ್ಬನೇ ಒಬ್ಬ ಶತ್ರುವನ್ನು ಪರಾಭವಗೊಳಿಸುವೆನು. ಶತ್ರುಗಳನ್ನು ಪರಾಭವಗೊಳಿಸುವ ನಾನು ಬಲಶಾಲಿಯಾದ ಇಬ್ಬರು ಶತ್ರುಗಳನ್ನು ಸಹ ಏಕಕಾಲದಲ್ಲಿ ಸೋಲಿಸಬಲ್ಲೆನು. ಅಷ್ಟೇ ಏಕೆ ? ಮೂರುಮಂದಿ ಶತ್ರುಗಳು ಇದ್ದರೂ ನನ್ನನ್ನು ಏನು ಮಾಡಬಲ್ಲರು ? ರೈತನು ಧಾನ್ಯದ ತೆನೆಯಲ್ಲಿರುವ ಕಾಳುಗಳನ್ನು ಅನಾಯಾಸವಾಗಿ ಬಡಿದು ಉದುರಿಸುವಂತೆ ಶಕ್ತಿಯಿಂದ ಮತ್ತರಾದ ಅನೇಕ ಮಂದಿ ಶತ್ರುಗಳನ್ನು ನಾನು ಕೊಲ್ಲುವೆನು. ನನ್ನ ಶಕ್ತಿಸಾಮರ್ಥ್ಯಗಳನ್ನು ಅರಿಯದ ವಿರೋಧಿಗಳು ನನ್ನನ್ನು ನಿಂದಿಸಲು ಸಮರ್ಥರೇ ?

## English Translation

Single, I overcome my single (adversary) : (over-powering them) I overcome two foes ; what can three effect (against me) ? I smite numerous (adversaries) like sheaves (of grain) on the threshing-floor ; can my enemies who know not Indra revile me ?

### ವಿಶೇಷವಿಷಯಗಳು

ಈ ಋಕ್ಕಿನಲ್ಲಿರುವ ಖಲಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದ್ದಾರೆ.

**ಅಭಿಭವಾಮೀದಮೇಕಮೇಕೋಽಸ್ಮಿ ನಿಷ್ಷಹಮಾಣಃ ಸಪತ್ನಾನಭಿಭವಾಮಿ । ದ್ವೌ ಕಿಂ ಮಾ ತ್ರಯಃ ಕುರ್ವಂತಿ । ಏಕ ಇತಾ ಸಂಖ್ಯಾ । ದ್ವೌ ದ್ರುತತರಾ ಸಂಖ್ಯಾ । ತ್ರಯಸ್ತೀರ್ಣತಮಾ ಸಂಖ್ಯಾ । ಚತ್ವಾರಶ್ಚಲಿತತಮಾ ಸಂಖ್ಯಾ । ಅಷ್ಟಾವಶ್ನೋತೇಃ । ನವ ನ ವನನೀಯಾ ನಾವಾಪ್ತಾ ವಾ । ದಶ ದಸ್ತಾ ದೃಷ್ಟಾರ್ಥಾ ವಾ । ವಿಶಂತಿರ್ದ್ವಿರ್ದಶತಃ । ಶತಂ ದಶದಶತಃ । ಸಹಸ್ರಂ ಸಹಸ್ವತ್ । ಅಯುತಂ ನಿಯುತಂ ಪ್ರಯುತಂ ತತ್ತದಭ್ಯಸ್ತಂ । ಅರ್ಬುದೋ ಮೇಘೋ ಭವತಿ । ಅರಣಮಂಬು ತದ್ದೋಽಮ್ಬುದಃ । ಅಂಬುಮದ್ಭಾತೀತಿ ವಾ । ಅಂಬುಮದ್ಭವತೀತಿ ವಾ । ಸ ಯಥಾ ಮಹಾನ್ ಬಹುರ್ಭವತಿ ವರ್ಷಂಸ್ತದಿವಾರ್ಬುದಂ । ಖಲೇ ನ ಪರ್ಷಾನ್ ಪ್ರತಿಹನ್ಮಿ ಭೂರಿ । ಖಲ ಇವ ಪರ್ಷಾನ್ ಪ್ರತಿಹನ್ಮಿ ಭೂರಿ । ಖಲ ಇತಿ ಸಂಗ್ರಾಮನಾಮ । ಖಲತೇರ್ವಾ ಸ್ಖಲತೇರ್ವಾ । ಅಯಮಪೀತರಃ ಖಲ ಏತಸ್ಮಾದೇವ ಸಮಾಸ್ಕನ್ನೋ ಭವತಿ । ಕಿಂ ಮಾ ನಿಂದಂತಿ ಶತ್ರವೋಽನಿಂದ್ರಾಃ । ಯ ಇಂದ್ರಂ ನ ವಿವಿದುರಿಂದ್ರೋ ಹ್ಯಹಮಸ್ಮ್ಯನಿಂದ್ರಾ ಇತರ ಇತಿ ವಾ ॥**

(ನಿ. ೩-೧೦)

ನನ್ನ ಎದುರಿಗಿರುವ ಈ ಒಬ್ಬ ಶತ್ರುವನ್ನು ನಾನೊಬ್ಬನೇ (ಇತರರ ಸಹಾಯವಿಲ್ಲದೆ) ಸೋಲಿಸಬಲ್ಲೆನು. ಹಾಗೆಯೇ ಅನೇಕ ತತ್ರುಗಳ ಪ್ರಹಾರಗಳನ್ನು ತಡೆದು (ತಪ್ಪಿಸಿಕೊಂಡು) ಅವರನ್ನೆಲ್ಲಾ ಸೋಲಿಸುತ್ತೇನೆ ಎಂದು ಇಂದ್ರನ ವಾಕ್ಯವು. ಇಲ್ಲಿ ಏಕ ಎಂಬ ಶಬ್ದವು ಸಂಖ್ಯಾವಾಚಕವು. **ಇಣ್ ಗತೌ** ಎಂಬ ಧಾತುವಿನಿಂದ **ಏಕ** ಎಂಬ ಶಬ್ದವು ನಿಷ್ಪನ್ನವಾಗಿದೆ. ಒಂದು ಎಂದು ಎಣಿಸುವಾಗ ಒಂದು ಎಂಬ ಸಂಖ್ಯೆಯು ಕಳೆದುಹೋಗುವುದು ಎಂದರೆ ಅದನ್ನು ಬಿಟ್ಟು ಮುಂದಿನ ಎರಡು ಎಂಬ ಸಂಖ್ಯೆಯನ್ನು ಪಠಿಸುತ್ತೇವೆ. **ದ್ವೌ ದ್ರುತತರಾ** ಸಂಖ್ಯಾ । **ದ್ವೌ** ಎಂದರೆ ಎರಡು. ಈ ಶಬ್ದವು ಓಡು ಎಂಬರ್ಥವಿರುವ **ದ್ರು** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಒಂದಾದಕೂಡಲೆ ಎರಡು ಎಂದು ಬೇಗನೆ ಎಣಿಸುವುದರಿಂದ **ದ್ವೌ** ಎಂಬ ಶಬ್ದಕ್ಕೆ ಎರಡು ಎಂಬರ್ಥ ಬಂದಿದೆ.

**ತ್ರಯಸ್ತೀರ್ಣತಮಾ ಸಂಖ್ಯಾ—ತ್ರಯಃ**-ಮೂರು ಎಂಬ ಶಬ್ದವು **ತೄ**-ದಾಟು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಎರಡು ಎಂಬ ಸಂಖ್ಯೆಯು ದಾಟಿಹೋದಮೇಲೆ **ತ್ರಯಃ** ಮೂರು ಎಂಬ ಸಂಖ್ಯೆಯು ನಿರ್ದೇಶವಿರುವುದು. **ಚತ್ವಾರಶ್ಚಲಿತತಮಾ ಸಂಖ್ಯಾ-ಚತ್ವಾರಃ**-ನಾಲ್ಕು ಎಂಬ ಸಂಖ್ಯೆಯು ಚಲಿಸು ಎಂಬರ್ಥವುಳ್ಳ ಚಲತಿಧಾತುವಿನಿಂದ ನಿಷ್ಪನ್ನವಾಗಿ ಮೂರಾದ ಕೂಡಲೇ ನಾಲ್ಕು, ನಾಲ್ಕಾದ ಕೂಡಲೇ ಐದು ಎಂದು ಚಲನಾರ್ಥವನ್ನು ಸೂಚಿಸುವುದು. **ಅಷ್ಟಾವಶ್ನೋತೇಃ । ಅಷ್ಟೌ**-ಎಂಟು ಎಂಬ ಶಬ್ದವು **ಅಶ್**-ವ್ಯಾಪಿಸು ಎಂಬರ್ಥವುಳ್ಳ ಅಶ್ನೋತಿಧಾತುವಿನಿಂದ ನಿಷ್ಪನ್ನವಾಗಿ ಈ ಶಬ್ದವು (ಅಥವಾ ಸಂಖ್ಯೆಯು) ಒಂದರಿಂದ ಏಳರವರೆಗೆ ಇರುವ ಸಂಖ್ಯೆಗಳನ್ನು ಒಳಗೊಂಡಿರುವುದರಿಂದ **ಅಷ್ಟೌ** ಎಂದರೆ ಎಂಟು ಎಂಬರ್ಥವನ್ನು ಸೂಚಿಸುವುದಾಗಿದೆ. **ನವ ನ ವನನೀಯಾ ನಾವಾಪ್ತಾ ವಾ । ನವ**-ಒಂಭತ್ತು ಎಂಬ ಶಬ್ದವು **ವನ್**-ಗೆಲ್ಲು ಅಥವಾ **ನ+ಅ+ಆಪ್ಲೃ**-ಹೊಂದದಿರು ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ ಎಂದರೆ ಈ ಸಂಖ್ಯಾಕವಾದ ನವಮಾತಿಥಿಯು ಯಾವ ಒಳ್ಳೆಯ ಕಾರ್ಯಕ್ಕೂ ಪ್ರಶಸ್ತವಾಗಿರುವುದಿಲ್ಲವಾದ್ದರಿಂದ ಇದಕ್ಕೆ ನವ ಎಂಬ ಹೆಸರು ಬಂದಿದೆ. **ದಶ ದಸ್ತಾ ದೃಷ್ಟಾರ್ಥಾ ವಾ । ದಶ**-ಹತ್ತು ಎಂಬ ಶಬ್ದವು **ದಸ್**-ಮುಗಿದುಹೋಗು, ನಷ್ಟವಾಗು ಎಂಬರ್ಥವುಳ್ಳ **ದಸ್** ಧಾತುವಿನಿಂದಾಗಲಿ **ದೃಶಿರ್-ಪ್ರೇಕ್ಷಣೇ, ನೋಡು ಎಂಬ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು.** ಏಕೆಂದರೆ ಹತ್ತುಸಂಖ್ಯೆಯು ಕಳೆದ

ನಂತರ ಮುಂದೆ ಬರುವ ೧೧, ೧೨, ೧೩ ಮುಂತಾದ ಸಂಖ್ಯೆಗಳಲ್ಲಿ ಹಿಂದೆ ಬಂದ ೧, ೨, ೩ ಮೊದಲಾದ ಸಂಖ್ಯೆಗಳೇ ಮತ್ತೆಮತ್ತೆ ಬರುವುದನ್ನು ನಾವು ನೋಡುತ್ತೇವೆ. ಆದ್ದರಿಂದ ಪುನಃಪುನಃ ನೋಡುವುದರಿಂದ ಈ ಸಂಖ್ಯೆಗೆ **ದಶ** ಎಂಬ ಹೆಸರು ಬಂದಿದೆ. **ವಿಂಶತಿರ್ದ್ವಿರ್ದಶತಃ-ವಿಂಶತಿ** ಇಪ್ಪತ್ತು ಎಂದರೆ ಎರಡು ಹತ್ತುಗಳು ಎಂದರ್ಥವು. **ಶತಂ ದಶದಶತಃ ಶತಂ**-ನೂರು ಎಂದರೆ ಹತ್ತುಸಲ ಹತ್ತು ಸಂಖ್ಯೆಗಳು, **ಸಹಸ್ರಂ ಸಹಸ್ವತ್—ಸಹಃ** ಎಂದರೆ ಬಲವು ಅಥವಾ ಶಕ್ತಿಯು. **ಸಹಸ್ರಂ**-ಸಾವಿರ ಎಂದರೆ ಸಾವಿರ (ಅನೇಕ)ಸಂಖ್ಯೆಗಳನ್ನೊಳಗೊಂಡಿರುವುದರಿಂದ ಬಹಳ ಬಲವುಳ್ಳದ್ದು. ಬಲವುಳ್ಳದ್ದರಿಂದಲೇ **ಸಹಸ್ರಂ** ಎಂದು ಹೆಸರು; **ಅಯುತಂ** ಎಂದರೆ ಹತ್ತುಸಾವಿರ. ಅದರಂತೆ **ಅಯುತಂ, ನಿಯುತಂ, ಪ್ರಯುತಂ, ತತ್ತದಭ್ಯಸ್ತಂ । ಅಯುತಂ ನಿಯುತಂ ಪ್ರಯುತಂ** ಎಂಬ ಶಬ್ದಗಳು ಒಂದಕ್ಕಿಂತ ಮತ್ತೊಂದು ಹತ್ತುಪಾಲಿನಷ್ಟು ಸಂಖ್ಯೆಯನ್ನು ಸೂಚಿಸುತ್ತವೆ. **ಅಯುತಂ** ಎಂದರೆ ಹತ್ತುಸಾವಿರ. **ನಿಯುತಂ** ಎಂದರೆ ಒಂದು ಲಕ್ಷ; **ಪ್ರಯುತಂ** ಎಂದರೆ ಹತ್ತುಲಕ್ಷ ಇತ್ಯಾದಿ. **ಅರ್ಬುದ**ಶಬ್ದಕ್ಕೆ ಮೇಘವೆಂದರ್ಥವು. ಅರಣ ಅಥವಾ ಅಂಬು ಎಂದರೆ ಉದಕವು. ಉದಕವನ್ನು ಕೊಡುವುದು ಎಂದರೆ ಸುರಿಸುವುದರಿಂದ ಅರ್ಬುದವೆಂದರೆ ಮೇಘವು. ಮೇಘವು ಯಾವರೀತಿ ಬಹುದೊಡ್ಡದಾಗಿ ಅಂತರಿಕ್ಷದಲ್ಲಿ ವೃದ್ಧಿಯಾಗಿ ಪ್ರಸರಿಸುವುದೋ ಅದರಂತೆ ಮೇಘವೆಂಬ ಅರ್ಥವನ್ನು ಸೂಚಿಸುವ ಅರ್ಬುದಶಬ್ದಕ್ಕೆ ಕೋಟಿ ಎಂಬ ಸಂಖ್ಯಾವಾಚಕ ಅರ್ಥವಿರುವುದು ಅಥವಾ ಅರ್ಬುದಶಬ್ದಕ್ಕೆ—**ಅಂಬುಮುದ್ವಾತೀತೀ ವಾ** ನೀರಿನಂತೆ ಪ್ರಕಾಶಿಸುವುದರಿಂದ ಮೇಘವೆಂಬ ಹೆಸರು ಅಥವಾ **ಅಂಬುಮುದ್ಭವತೀತೀ ವಾ** ನೀರಿನಂತೆಯೇ ಇರುವುದರಿಂದ ಮೇಘವೆಂದು ಹೆಸರು ಎಂದು ಅರ್ಬುದಶಬ್ದಕ್ಕೆ ಎರಡು ವಿಧವಾದ ಅರ್ಥಗಳನ್ನೂ ಹೇಳಬಹುದು. ಮಳೆಗಾಲದಲ್ಲಿ ಅರ್ಬುದ ಎಂದರೆ ಮೇಘವು ಯಾವರೀತಿ ಬಹಳವಾದ ವೃಷ್ಟಿಯನ್ನು ಸುರಿಸುವದೋ ಅದರಂತೆ ಅರ್ಬುದಶಬ್ದಕ್ಕೆ ಸಂಖ್ಯಾವಾಚಕ ಅರ್ಥವನ್ನು ಹೇಳುವಾಗ ಅತ್ಯಧಿಕವಾದ ಸಂಖ್ಯೆ ಎಂದರೆ ಕೋಟಿ ಎಂಬರ್ಥವಿರುವುದು. **ಖಲೇ ನ ಪರ್ಷಾನ್ ಪ್ರತಿಹನ್ಮಿ ಭೂರಿ** ಎಂಬ ವಾಕ್ಯದಲ್ಲಿ ಖಲ ಶಬ್ದಕ್ಕೆ ಸಂಗ್ರಾಮ ಅಥವಾ ಯುದ್ಧವೆಂದರ್ಥ. ಈ ಖಲಶಬ್ದವು ಬೀಳು ಎಂಬರ್ಥವುಳ್ಳ ಖಲತಿಧಾತುವಿನಿಂದಾಗಲಿ ಕೊಲ್ಲು ಎಂಬರ್ಥವುಳ್ಳ ಸ್ಖಲಿತಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಕಣದಲ್ಲಿ ಧಾನ್ಯಗಳ ಹೊಟ್ಟನ್ನು ತೂರುವಂತೆ ಯುದ್ಧದಲ್ಲಿ ಶತ್ರುಗಳನ್ನು ಚದುರಿಸಿ ಕೊಲ್ಲುತ್ತೇನೆ ಎಂದು ಇದು ಇಂದ್ರನ ವಾಕ್ಯವು. ಆದ್ದರಿಂದ ಈ ಯುದ್ಧ ಭೂಮಿಯಲ್ಲಿ ಯುದ್ಧಭಟರು ಸತ್ತುಬೀಳುವುದರಿಂದ ಬೀಳು ಎಂಬರ್ಥವುಳ್ಳ ಖಲತಿಧಾತುವಿನಿಂದ ಖಲಶಬ್ದವು ನಿಷ್ಪನ್ನವಾಗಿದೆ ಅಥವಾ ಯುದ್ಧದಲ್ಲಿ ಒಬ್ಬರನ್ನೊಬ್ಬರು ಕೊಲ್ಲುವುದರಿಂದ ಕೊಲ್ಲು ಎಂಬರ್ಥವುಳ್ಳ ಸ್ಖಲತಿಧಾತುವಿನಿಂದ ಖಲ ಎಂಬ ಶಬ್ದವು ನಿಷ್ಪನ್ನವಾಗಬಹುದು. ಈ ಅರ್ಥದಲ್ಲಿ ಖಲಶಬ್ದಕ್ಕೆ ಸಂಗ್ರಾಮ ಅಥವಾ ಯುದ್ಧವೆಂಬರ್ಥವಿರುವುದು. ಇದಲ್ಲದೆ ಧಾನ್ಯಗಳನ್ನು ಬಡಿಯುವುದು ಎಂಬರ್ಥದಲ್ಲಿಯೂ ಈ ಶಬ್ದಪ್ರಯೋಗವಿರುವುದು. **ಕಿಂ ಮಾ ನಿಂದಂತಿ ಶತ್ರವೋಽನಿಂದ್ರಾಃ** ಎಂಬ ವಾಕ್ಯದಲ್ಲಿ ಅನಿಂದ್ರಾಃ ಎಂಬ ಶಬ್ದಕ್ಕೆ ಇಂದ್ರನೊಡನಿಲ್ಲದಿರುವವರು ಅಥವಾ ಇಂದ್ರನನ್ನು ಭಜಿಸದಿರುವವರು ಎಂದರ್ಥವು. ಇಂದ್ರನು ತಮ್ಮಕಡೆ ಇಲ್ಲದ ಎಂದರೆ ಇಂದ್ರನ ಅನುಗ್ರಹವಿಲ್ಲದ ಶತ್ರುಜನರು ಇಂದ್ರನಾದ ನನ್ನನ್ನು ಹೇಗೆ ನಿಂದಿಸಬಲ್ಲರು? ಅಥವಾ ಇಂದ್ರನ ಅನುಗ್ರಹವಿಲ್ಲದಿರುವವರು ನಾನೇ ಇಂದ್ರನೆಂದು ಹೇಗೆತಾನೇ ತಿಳಿಯಬಲ್ಲರು? ಇಂತಹ ಜನರು ನನ್ನನ್ನು ಹೇಗೆತಾನೇ ನಿಂದಿಸಬಲ್ಲರು ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

ಸಂಹಿತಾಪಾಠಃ

ಅ॒ಹಂ ಗು॒ಙ್ಗುಭ್ಯೋ॑ ಅತಿಥಿ॒ಗ್ವಮಿಷ್ಕ॑ರಮಿ॒ಷಂ ನ ವೃ॑ತ್ರ॒ತುರಂ॑ ವಿ॒ಕ್ಷು ಧಾ॑ರಯಂ ।

ಯತ್ಪರ್ಣಯಘ್ನ ಉತ ವಾ ಕರಂಜಹೇ ಪ್ರಾಹಂ ಮಹೇ ವೃತ್ರಹತ್ಯೇ
ಅಶುಶ್ರವಿ ॥ ೮ ॥

ಪದಪಾಠಃ

ಅಹಂ । ಗುಂಗುಽಭ್ಯಃ । ಅತಿಥಿಽಗ್ವಂ । ಇಷ್ಕರಂ । ಇಷಂ । ನ । ವೃತ್ರಽತುರಂ । ವಿಕ್ಷು । ಧಾರಯಂ ॥
ಯತ್ । ಪರ್ಣಯಽಘ್ನೇ । ಉತ । ವಾ । ಕರಂಜಽಹೇ । ಪ್ರ । ಅಹಂ । ಮಹೇ । ವೃತ್ರಽಹತ್ಯೇ ।
ಅಶುಶ್ರವಿ ॥

ಸಾಯಣಭಾಷ್ಯಂ

ಅಹಮಿಂದ್ರೋ ಗುಂಗುಭ್ಯ ಏತನ್ನಾಮಕೇಭ್ಯೋ ಜನಪದೇಭ್ಯೋ ರಕ್ಷಣಾಯಾತಿಥಿಗ್ವಮತಿಥಿಗೋಃ ಪುತ್ರಂ ದಿವೋದಾಸಮೃಷಿಮಿಷ್ಕರಂ ನಿಷ್ಕರ್ತಾರಂ ವೃತ್ರತುರಂ ಶತ್ರೂಣಾಂ ಹಿಂಸಕಂ ವಿಕ್ಷು ಪ್ರಜಾಸು ಮಧ್ಯ ಇಷಂ ನಾನ್ನಮಿವ ತಾಸಾಮನ್ನಂ ಯಥಾ ಭೋಗಾಯ ಭವತಿ ತದ್ವದನ್ನಸ್ಥಾನೀಯಂ ಧಾರಯಂ । ಧಾರಿತವಾನಸ್ಮಿ । ಕದೇತಿ ಉಚ್ಯತೇ । ಯದ್ಯದಾ ಪರ್ಣಯಘ್ನೇ ಪರ್ಣಯನಾಮಕಸ್ಯಾಸುರಸ್ಯ ಹನನವತಿ ಉತಾಪಿ ಚ ಕರಂಜಹ ಏತನ್ನಾಮಕಸ್ಯ ಹನನೋಪೇತೇ ಮಹೇ ಮಹತಿ ವೃತ್ರಹತ್ಯೇ ಸಂಗ್ರಾಮೇಽಶುಶ್ರವಿ ಶ್ರುತ್ಯೋಽಭವಂ ॥

ಪ್ರತಿಪದಾರ್ಥ

**ಯತ್**—ಯಾವಾಗ । **ಪರ್ಣಯಘ್ನೇ**—ಪರ್ಣಯ ಎಂಬ ಅಸುರನನ್ನು ಸಂಹರಿಸಿದ । **ಉತ ವಾ**—ಮತ್ತು । **ಕರಂಜಹೇ**—ಕರಂಜನೆಂಬ ಅಸುರನನ್ನು । **ಮಹೇ ವೃತ್ರಹತ್ಯೇ**—ಶತ್ರುಸಂಹಾರಕವಾದ ಮಹಾಯುದ್ಧದಲ್ಲಿ ಕೊಂದು । **ಅಶುಶ್ರವಿ**—ನಾನು ಪ್ರಸಿದ್ಧಿಯನ್ನು ಪಡೆದನೋ ಆಗ । **ಅಹಂ**—ನಾನು । **ಗುಂಗುಭ್ಯಃ**—ಗುಂಗು ಎಂಬ ಹೆಸರಿನ ಜನರನ್ನು ಕಾಪಾಡುವುದಕ್ಕಾಗಿ । **ಅತಿಥಿಗ್ವಂ**—ಅತಿಥಿಗು ಎಂಬುವನ ಪುತ್ರನಾದ ದಿವೋದಾಸನೆಂಬ ಋಷಿಯನ್ನು । **ಇಷ್ಕರಂ**—ಏನುಮಾಡದಿದ್ದರೂ । **ವೃತ್ರತುರಂ**—ಶತ್ರುಗಳ ಹಿಂಸಕನಾಗುವಂತೆಯೂ । **ವಿಕ್ಷು**—ಪ್ರಜೆಗಳ ಮಧ್ಯದಲ್ಲಿ । **ಇಷಂ ನ**—ಅವಶ್ಯಕವಾದ ಅಥವಾ ಭೋಗಸಾಧನವಾದ ಅನ್ನದಂತೆಯೂ । **ಧಾರಯಂ**—ಧರಿಸಿದ್ದೇನೆ (ಮಾಡಿದ್ದೇನೆ).

ಭಾವಾರ್ಥ

ಪರ್ಣಯ ಮತ್ತು ಕರಂಜ ಎಂಬ ಅಸುರರನ್ನು ಸಂಹರಿಸಲು ನಡೆದ ಮಹಾಯುದ್ಧದಲ್ಲಿ ನಾನು ಆ ಅಸುರರನ್ನು ಸಂಹರಿಸಿ ಕೀರ್ತಿಯನ್ನು ಪಡೆದು ಪ್ರಸಿದ್ಧನಾದಾಗ ಗುಂಗು ಎಂಬ ರಾಷ್ಟ್ರದ ಜನರನ್ನು ಕಾಪಾಡುವುದಕ್ಕಾಗಿ ಶತ್ರುಸಂಹಾರಕಾರ್ಯದಲ್ಲಿ ಅಸಮರ್ಥನಾದವನೂ ಅತಿಥಿಗು ಎಂಬುವನ ಪುತ್ರನೂ ಆದ ದಿವೋದಾಸನೆಂಬ ಋಷಿಯನ್ನು ಯುದ್ಧದಲ್ಲಿ ಶತ್ರುಸಂಹಾರಕನನ್ನಾಗಿಯೂ, ಪ್ರಜೆಗಳ ಮಧ್ಯದಲ್ಲಿ ಭೋಗಸಾಧನವಾದ ಅನ್ನದಂತೆ ಸಕಲರಿಗೂ ಪ್ರಿಯನನ್ನಾಗಿ ಮಾಡಿದೆನು.

## English Translation

I prepared Attithigva for (the protection of) the Gungus, I upheld him, the dostroyer of enemies, as sustenance amongst the people; whcn I gained renown in the great Vritra-battle, in which Parnaya and Karanja were slain.

ಸಂಹಿತಾಪಾಠಃ

ಪ್ರ ಮೇ ನಮೀ ಸಾಪ್ಯ ಇಷೇ ಭುಜೇ ಭೂದ್ಗವಾಮೇಷೇ ಸಖ್ಯಾ ಕೃಣುತ ದ್ವಿತಾ ।

ದಿದ್ಯುಂ ಯದಸ್ಯ ಸಮಿಥೇಷು ಮಂಹಯುಮಾದಿದೇನಂ ಶಂಸ್ಯಮುಕ್ಥ್ಯಂ ಕರಂ ॥ ೯ ॥

ಪದಪಾಠಃ

ಪ್ರ । ಮೇ । ನಮೀ । ಸಾಪ್ಯಃ । ಇಷೇ । ಭುಜೇ । ಭೂತ್ । ಗವಾಂ । ಏಷೇ । ಸಖ್ಯಾ । ಕೃಣುತ । ದ್ವಿತಾ ॥

ದಿದ್ಯುಂ । ಯತ್ । ಅಸ್ಯ । ಸಂऽಇಥೇಷು । ಮಂಹಯಂ । ಆತ್ । ಇತ್ । ಏನಂ । ಶಂಸ್ಯಂ । ಉಕ್ಥ್ಯಂ । ಕರಂ ॥ ೯ ॥

ಸಾಯಣಭಾಷ್ಯಂ

ಮೇ ಮಮ ಮತ್ಸಂಬಂಧೀ ನಮೀ । ನಾಮುಕತ್ವಾನ್ನಮಃ ಸ್ತೋತ್ರಂ । ತದಸ್ಯಾಸ್ತೀತಿ ನಮೀ ಸ್ತೋತಾ ಸಾಪ್ಯಃ ಸರ್ವೈರಾಶ್ರಯಣೀಯ ಇಷೇऽನ್ನಾಯ ಬುಜೇ ಭೋಗಾಯ ಪ್ರ ಭೂತ್ । ಪ್ರಭವತಿ । ತಂ ಮತ್ಸ್ತೋತಾರಂ ಮನುಷ್ಯಾ ಗವಾಮೇಷೇऽನ್ವೇಷಣಾಯ ಸಖ್ಯಾ ಸಖ್ಯಾಯ ಚ ದ್ವಿತಾ ದ್ವಿವಿಧಂ ದ್ವಿಪ್ರಕಾರಾಯ ಕೃಣುತ । ಕೃಣ್ವಂತಿ । ಗವಾಂ ದಾತಾರಂ ಸಖಾಯಂ ಚ ಕುರ್ವಂತೀತ್ಯರ್ಥಃ । ಯದ್ವಾ । ಗವಾಮೇಷ ಏಷಣೇ ದ್ವಿತಾ ದ್ವೈಧಾಯ ಸಖ್ಯಾಯ ಶಾರೀರಾಯ ಸೈನಿಕಾಯ ಚ ಸಖ್ಯಾಯಕೃಣ್ವಂತಿ । ಕದೇತಿ ಉಚ್ಯತೇ । ಯದ್ಯದಾಸ್ಯ ಮತ್ಸಂಬಂಧಿನಃ ಸ್ತೋತುರ್ಜಯಾರ್ಥಂ ಸಮಿಥೇಷು ಸಂಗ್ರಾಮೇಷು ದಿದ್ಯುಮಾಯುಧಂ ಮಂಹಯಂ । ಸ್ವೀಕುರ್ಯಾಮಿತ್ಯರ್ಥಃ । ಆದಿದನಂತರಮೇವೈನಂ ಸ್ತೋತಾರಂ ಶಂಸ್ಯಂ ಸ್ತುತ್ಯಮುಕ್ಥ್ಯಮುಕ್ಥಾರ್ಹಂ ಕರಂ । ಅಕರಂ । ಕರೋಮಿ ॥

ಪ್ರತಿಪದಾರ್ಥ

**ಯತ್**—ಯಾವಾಗ । **ಅಸ್ಯ**—ಈ ನನ್ನ ಸ್ತುತಿಕರ್ತನ । **ಸಮಿಥೇಷು**—ಯುದ್ಧಗಳಲ್ಲಿ । **ದಿದ್ಯುತ್**—ಆಯುಧವನ್ನು । **ಮಂಹಯಂ**—ಕೊಟ್ಟೆನೋ । **ಆದಿತ್**—ಅನಂತರ । **ಏನಂ**—ಈ ಸ್ತುತಿಕರ್ತನನ್ನು ।

**ಶಂಸ್ಯಂ**—ಸ್ತುತ್ಯರ್ಹನನ್ನಾಗಿಯೂ | **ಉಕ್ಥ್ಯಂ**—ಪ್ರಶಂಸಾರ್ಹನನ್ನಾಗಿಯೂ | **ಕರಂ**—ಮಾಡಿದೆನೋ ಆಗ | **ಮೇ**—ನನ್ನ | **ನಮಿಾ**—ಸ್ತುತಿಕರ್ತನು | **ಇಷೇ**—ಅನ್ನಲಾಭದಲ್ಲಿಯೂ | **ಭುಜೇ**—ಭೋಗಪ್ರಾಪ್ತಿಯಲ್ಲಿಯೂ | **ಪ್ರ ಭೂತ್**—ಸಮರ್ಥನಾಗುತ್ತಾನೆ | **ತಂ**—ಅಂತಹ ಪುರುಷನನ್ನು ಮನುಷ್ಯರು | **ಗವಾಂ ಏಷೇ**—ಗೋವುಗಳನ್ನು ಹುಡುಕುವುದಕ್ಕಾಗಿಯೂ ಅಥವಾ ಗೋವುಗಳನ್ನು ಪಡೆಯುವುದಕ್ಕಾಗಿಯೂ | **ಸಖ್ಯಾ**—ಅವನ ಸ್ನೇಹಸಂಪಾದನೆಗಾಗಿಯೂ | **ದ್ವಿತಾ**—ಈ ಎರಡು ವಿಧ ಕಾರ್ಯಕ್ಕಾಗಿ | **ಕೃಣುತ**—ಆಶ್ರಯಿಸುತ್ತಾರೆ.

**ಭಾವಾರ್ಥ**

ನನ್ನನ್ನು ಸ್ತೋತ್ರಮಾಡುವ ಸ್ತುತಿಕರ್ತನು ಶತ್ರುಗಳೊಡನೆ ಮಾಡುವ ಯುದ್ಧಗಳಲ್ಲಿ ಶತ್ರುವಧಾರ್ಥವಾಗಿ ಅವನಿಗೆ ಆಯುಧವನ್ನು ಕೊಟ್ಟು ಅವನನ್ನು ಪ್ರಶಂಸಾರ್ಹನನ್ನಾಗಿ ಮಾಡಿದಾಗ ಆ ನನ್ನ ಸ್ತುತಿಕರ್ತನು ಅನ್ನವನ್ನು ಸಂಪಾದಿಸಲು ಮತ್ತು ಅದನ್ನು ಭೋಗಿಸಲು ಸಮರ್ಥನಾಗುತ್ತಾನೆ. ಮನುಷ್ಯರು ಅಂತಹ ಪುರುಷನನ್ನೇ ಗೋವುಗಳನ್ನು ಪಡೆಯುವುದಕ್ಕಾಗಿಯೂ ಅವನ ಸ್ನೇಹಸಂಪಾದನೆಗಾಗಿಯೂ ಈ ಎರಡು ವಿಧ ಕಾರ್ಯಗಳಿಗಾಗಿಯೂ ಆಶ್ರಯಿಸುತ್ತಾರೆ.

## English Translation

My praiser, the refuge (of all), was food to enjoy; (him, men) use in two ways, to search for their cattle, and to be their friend, when I bestow upon him a weapon in his battles, and make him worthy of celebrity and praise.

**ಸಂಹಿತಾಪಾಠಃ**

ಪ್ರ ನೇಮಸ್ಮಿನ್ದದೃಶೇ ಸೋಮೋ ಅಂತರ್ಗೋಪಾ ನೇಮಮಾವಿರಸ್ಥಾ ಕೃಣೋತಿ ।
ಸ ತಿಗ್ಮಶೃಂಗಂ ವೃಷಭಂ ಯುಯುತ್ಸನ್ ದ್ರುಹಸ್ತಸ್ಥೌ ಬಹುಲೇ ಬದ್ಧೋ ಅಂತಃ ॥ ೧೦ ॥

**ಪದಪಾಠಃ**

ಪ್ರ । ನೇಮಸ್ಮಿನ್ । ದದೃಶೇ । ಸೋಮಃ । ಅಂತಃ । ಗೋಪಾಃ । ನೇಮಂ । ಆವಿಃ । ಅಸ್ಥಾ । ಕೃಣೋತಿ ॥

ಸಃ । ತಿಗ್ಮಽಶೃಂಗಂ । ವೃಷಭಂ । ಯುಯುತ್ಸನ್ । ದ್ರುಹಃ । ತಸ್ಥೌ । ಬಹುಲೇ । ಬದ್ಧಃ । ಅಂತರಿತಿ ॥

**ಸಾಯಣಭಾಷ್ಯಂ**

ನೇಮಸ್ಮಿನ್ । ನೇಮಶಬ್ದೋಽರ್ಧಪರ್ಯಾಯಃ । ಯಸ್ಮಿನ್ಯುದ್ಧೇ ದ್ವೌ ಪುರುಷೌ ಯುಧ್ಯಂತೌ । ತಯೋರೇಕಸ್ಮಿನ್ನೃಷ್ಟರೀತ್ಯರ್ಥಃ । ತಸ್ಮಿನ್ನಂತಃ ಸೋಮೋ ದದೃಶೇ । ದೃಶ್ಯತೇ । ತಂ

**ನೇಮುಮರ್ಥಮೇಕಂ ಗೋಪಾ ಗೋಪಾಯಿತೇಂದ್ರೋಽಸ್ತ್ರಾ ಕ್ಷೇಪಣಸಾಧನೇನ ವಜ್ರೇಣಾವಿಷ್ಕೃಣೋತಿ । ಪ್ರಕಟಯತಿ । ಶತ್ರುಭಿರನಭಿಭೂತಂ ಕರೋತೀತ್ಯರ್ಥಃ । ಸ ಯತ್ರ ಸೋಮೋ ನ ದೃಶ್ಯತೇ ಸ ತಿಗ್ಮಶೃಂಗಂ ತೀಕ್ಷ್ಣಾಯುಧಂ ವೃಷಭಂ ಬಾಣಾನ್ವರ್ಷಯಂತಮಿಂದ್ರೇಣಾನುಗೃಹೀತಂ ಪ್ರತಿ ಯುಯುತ್ಸನ್ ಯೋದ್ಧುಮಿಚ್ಛನ್ ದ್ರುಹೋ ದ್ರೋಗ್ಧಾ ಬದ್ಧಃ ಸನ್ ಬಹುಲೇಽಂಧಕಾರೇಽಂತಸ್ತಸ್ಯ ಮಧ್ಯೇ ತಸ್ಥೌ । ತಿಷ್ಠತಿ । ಯದ್ವಾ । ಏವಂ ವ್ಯಾಖ್ಯೇಯಂ । ನೇಮಸ್ಮಿನ್ನಿಂದ್ರಭಕ್ತೇಽನ್ತಃ ಸೋಮೋ ದದೃಶೇ । ನೇಮುಮನ್ಯಂ ಗೋಪಾಃ ಸ್ವಭಕ್ತರಕ್ಷಕ ಇಂದ್ರೋಽಸ್ತ್ರಾ ವಜ್ರೇಣಾವಿಷ್ಕೃಣೋತಿ । ಆವಿಷ್ಕರೋತಿ । ವಜ್ರೇಣ ಪೀಡಯತೀತ್ಯರ್ಥಃ । ಸ ನೇಮೋ ದ್ರುಹಸ್ತಿಗ್ಮಶೃಂಗಂ ವೃಷಭಮಿಂದ್ರಂ ಯುಯುತ್ಸನ್ । ಶಿಷ್ಟಂ ಸಮಾನಂ ॥**

ಪ್ರತಿಪದಾರ್ಥ

**ನೇಮಸ್ಮಿನ್**—ಯಜ್ಞಮಾಡುವವನೂ, ಮಾಡದಿರುವವನೂ ಎಂಬಿಬ್ಬರಲ್ಲಿ ಯಜ್ಞಮಾಡುವ ಪುರುಷರಲ್ಲಿ । **ಅಂತಃ**—ಮಧ್ಯದಲ್ಲಿ । **ಸೋಮಃ**—ಸೋಮರಸವು । **ದದೃಶೇ**—ಕಾಣಲ್ಪಡುವುದೋ । **ತಂ ನೇಮಂ**—ಇಬ್ಬರಲ್ಲಿ ಒಬ್ಬನಾದ ಆ ಪುರುಷನನ್ನು । **ಗೋಪಾಃ**—ಸಂರಕ್ಷನಾದ ಇಂದ್ರನು । **ಅಸ್ತ್ರಾ**—ಹನನಸಾಧನವಾದ ವಜ್ರಾಯುಧದಿಂದ । **ಆವಿಃ ಕೃಣೋತಿ**—ಪ್ರಕಟಿಸುತ್ತಾನೆ ಎಂದರೆ ಶತ್ರುಗಳಿಂದ ಸೋಲಿಸಲ್ಪಡದಂತೆ ಮಾಡುತ್ತಾನೆ। **ಸಃ**—ಯಜ್ಞಮಾಡದಿರುವ ಎಂದರೆ ಸೋಮರಸವನ್ನು ಪಡೆಯದಿರುವ ಇನ್ನೊಬ್ಬ ಪುರುಷನು । **ತಿಗ್ಮಶೃಂಗಂ**—ಹರಿತವಾದ ಆಯುಧವುಳ್ಳ । **ವೃಷಭಂ**—ಯುದ್ಧದಲ್ಲಿ ಬಾಣವೃಷ್ಟಿಯನ್ನು ಸುರಿಸುವ ತನ್ನ ಪ್ರತಿಕಕ್ಷಿಯಾದ ಯಜ್ಞಕರ್ತನೊಡನೆ । **ಯುಯುತ್ಸನ್**—ಯುದ್ಧಮಾಡಬೇಕೆಂದು ಬಯಸುವಾಗ । **ದ್ರುಹಃ**—ದ್ರೋಹಿಯಾದ ಅವನು । **ಬದ್ಧಃ**—ಪಾಶಗಳಿಂದ ಕಟ್ಟಲ್ಪಟ್ಟವನಾಗಿ । **ಬಹುಲೇ ಅಂತಃ**—ಅಂಧಕಾರದ ಮಧ್ಯದಲ್ಲಿ । **ತಸ್ಥೌ**—ಇರುತ್ತಾನೆ.

ಭಾವಾರ್ಥ

ಯಾವ ಪುರುಷನಲ್ಲಿ ಸೋಮರಸವು ಕಾಣಲ್ಪಡುವುದೋ ಎಂದರೆ ಯಜ್ಞಕರ್ತೃ ಮತ್ತು ಯಜ್ಞಮಾಡದವನು ಎಂಬಿಬ್ಬರ ಮಧ್ಯದಲ್ಲಿ ಯಜ್ಞಮಾಡುವ ಪುರುಷನನ್ನು ಇಂದ್ರನು ತನ್ನ ವಜ್ರಾಯುಧದಿಂದ ಸಹಾಯಮಾಡಿ ಅವನು ಶತ್ರುಗಳಿಂದ ಪರಾಜಿತನಾಗದಂತೆ ಮಾಡುತ್ತಾನೆ. ಆದರೆ ಯಜ್ಞಮಾಡದಿರುವ ಪುರುಷನು ಹರಿತವಾದ ಆಯುಧವುಳ್ಳವನೂ, ಯುದ್ಧದಲ್ಲಿ ಬಾಣವೃಷ್ಟಿಯನ್ನು ಸುರಿಸುವವನೂ ಆದ ಯಜ್ಞಕರ್ತನೊಡನೆ ಯುದ್ಧಮಾಡುವಾಗ ತನಗೆ ಯಾವ ಸಹಾಯವೂ ಇಲ್ಲದ್ದರಿಂದ ಶತ್ರುಗಳ ಪಾಶಗಳಿಂದ ಕಟ್ಟಲ್ಪಟ್ಟು ಅಂಧಕಾರಾವೃತವಾದ ಕಾರಾಗೃಹದಲ್ಲಿ ಇರುತ್ತಾನೆ ಅಥವಾ ಇಂದ್ರನ ಸಹಾಯವಿಲ್ಲದ್ದರಿಂದ ಅಸಹಾಯನಾಗಿ ಶತ್ರುಗಳ ವಶವಾಗುವನು.

English Translation

The Soma is seen in one of the two (combatants); the cowherd (Indra)manifests the other with his thunder-bolt: the latter warring against the sharp-horned bull, remains in great (darkness) bound by the victor.

ಸಂಹಿತಾಪಾಠಃ

## ಆದಿತ್ಯಾನಾಂ ವಸೂನಾಂ ರುದ್ರಿಯಾಣಾಂ ದೇವೋ ದೇವಾನಾಂ ನ ಮಿನಾಮಿ ಧಾಮ ।

ತೇ ಮಾ ಭದ್ರಾಯ ಶವಸೇ ತತಕ್ಷುರಪರಾಜಿತಮಸ್ತೃತಮಷಾಳ್ಹಂ ॥ ೧೧ ॥

ಪದಪಾಠಃ

ಆದಿತ್ಯಾನಾಂ । ವಸೂನಾಂ । ರುದ್ರಿಯಾಣಾಂ । ದೇವಃ । ದೇವಾನಾಂ । ನ । ಮಿನಾಮಿ । ಧಾಮ ॥

ತೇ । ಮಾ । ಭದ್ರಾಯ । ಶವಸೇ । ತತಕ್ಷುಃ । ಅಪರಾಽಜಿತಂ । ಅಸ್ತೃತಂ । ಅಷಾಳ್ಹಂ ॥ ೧೧ ॥

ಸಾಯಣಭಾಷ್ಯಂ

ಆದಿತ್ಯಾನಾಂ ವಸೂನಾಂ ರುದ್ರಿಯಾಣಾಂ ರುದ್ರಾಣಾಂ ಯದ್ವಾ ರುದ್ರಪುತ್ರಾಣಾಂ ಮರುತಾಂ ಚ ದೇವಾನಾಂ ಧಾಮ ಸ್ಥಾನಂ ದೇವ ಇಂದ್ರೋ ನ ಮಿನಾತಿ । ನ ಹಿನಸ್ತಿ । ತೆ ಆದಿತ್ಯಾದಯೋ ಮಾ ಮಾಂ ಭದ್ರಾಯ ಶವಸೇ ತತಕ್ಷುಃ । ಅನುಗೃಹ್ಣಂತು । ಅಪರಾಜಿತಮಸ್ತೃತಮಹಿಂಸಿತಮಷಾಳ್ಹಮನಭಿಭೂತಂ ॥

ಪ್ರತಿಪದಾರ್ಥ

**ದೇವಃ**—ದೇವಾತ್ಮನಾದ ಇಂದ್ರನು । **ಆದಿತ್ಯಾನಾಂ**—ಆದಿತ್ಯರ ಅಥವಾ ಅದಿತಿಪುತ್ರರಾದ ದೇವತೆಗಳ । **ವಸೂನಾಂ**—ವಸುಗಳ । **ರುದ್ರಿಯಾಣಾಂ**—ರುದ್ರರ ಅಥವಾ ರುದ್ರಪುತ್ರರಾದ ಮರುತ್ತುಗಳ । **ದೇವಾನಾಂ**—ಇತರ ದೇವತೆಗಳ । **ಧಾಮ**—ಸ್ಥಾನವನ್ನು । **ನ ಮಿನಾತಿ**—ತ್ಯಜಿಸುವುದಿಲ್ಲ । **ತೇ**—ಆದಿತ್ಯಾದಿ ದೇವತೆಗಳು । **ಮಾ**—ನನ್ನನ್ನು । **ಭದ್ರಾಯ**—ಮಂಗಳಕ್ಕಾಗಿಯೂ । **ಶವಸೇ**—ಶಕ್ತಿಸಾಮರ್ಥ್ಯಗಳಿಗಾಗಿಯೂ । **ತತಕ್ಷುಃ**—ಅನುಗ್ರಹಿಸಲಿ । **ಅಪರಾಜಿತಂ**—ಶತ್ರುಗಳಿಂದ ಸೋಲಿಸಲ್ಪಡದಂತೆಯೂ । **ಅಸ್ತೃತಂ**—ಅವರಿಂದ ಹಿಂಸಿಸಲ್ಪಡದಂತೆಯೂ । **ಅಷಾಳ್ಹಂ**—ಸೋಲಾಗದಂತೆಯೂ ನನ್ನನ್ನು ಅನುಗ್ರಹಿಸಲಿ.

ಭಾವಾರ್ಥ

ಆದಿತ್ಯರು, ವಸುಗಳು, ರುದ್ರರು ಮತ್ತು ಇತರ ದೇವತೆಗಳ ಸ್ಥಾನವನ್ನು ದೇವತಾತ್ಮನಾದ ಇಂದ್ರನು ತ್ಯಜಿಸದಿರಲಿ. ಆ ಆದಿತ್ಯಾದಿದೇವತೆಗಳು ನನಗೆ ಮಂಗಳವನ್ನುಂಟುಮಾಡಿ ಶಕ್ತಿಸಾಮರ್ಥ್ಯಗಳನ್ನು ಕೊಟ್ಟು ಶತ್ರುಗಳಿಂದ ಪರಾಜಿತನಾಗದಂತೆಯೂ ಅವರಿಂದ ಹಿಂಸಿತನಾಗದಂತೆಯೂ ಯಾರಿಂದಲೂ ಸೋಲಾಗದಂತೆಯೂ ನನ್ನನ್ನು ಅನುಗ್ರಹಿಸಲಿ.

## English Translation

The divine (Indra) abandons not the abode of the deities, the Adityas, the Vasus, and the Rudriyas; may they fashion me for auspicious vigour, undefeated, unharmed, unconquered.

# ನಲವತ್ತೊಂಭತ್ತನೆಯ ಸೂಕ್ತ

**ಪೀಠಿಕೆ**

**ಈ ಸೂಕ್ತದಲ್ಲಿಯೂ ಇಂದ್ರನು ತನ್ನ ಸಾಹಸಕೃತ್ಯಗಳನ್ನು ಪ್ರಶಂಸೆ ಮಾಡಿಕೊಂಡಿದ್ದಾನೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ.**

**ವೃತ್ರಾಸುರವಧವರ್ಣನೆ**

ವೃತ್ರಾಸುರನು ದುಷ್ಟಸ್ವಭಾವದವನು. ಇವನ ಸ್ವಭಾವವು ಯಾರಿಗೂ ತಿಳಿಯದು. ಇವನಿಗೆ ಯಾವ ಉತ್ತಮ ಪರಿಜ್ಞಾನವೂ ಇಲ್ಲ. ಯಾವಾಗಲೂ ಉದಕಗಳನ್ನು ಅಡ್ಡಗಟ್ಟಿ ಮಲಗಿರುವುದೇ ಇವನ ಸ್ವಭಾವ. ಇಂತಹ ನೀಚಸ್ವಭಾವವುಳ್ಳ ವೃತ್ರನನ್ನು ಇಂದ್ರನು ಪೌರ್ಣಮಾಸಿಯ ದಿವಸ ವಜ್ರಾಯುಧದಿಂದ ಸಂಹರಿಸಿದನೆಂದು ವರ್ಣನೆ ಇದೆ. ಈ ವಿಷಯದಲ್ಲಿ ಭಾಷ್ಯಕಾರರು—

ತೈತ್ತಿರೀಯಸಂಹಿತಾವಾಕ್ಯವನ್ನುದಾಹರಿಸಿ ಅದರಲ್ಲಿ ಇಂದ್ರನು ವೃತ್ರನನ್ನು ಪೌರ್ಣಮಾಸಿಯ ದಿನದಲ್ಲಿ ಸಂಹಾರಮಾಡಿರುವ ವಿಷಯವು ಉಕ್ತವಾಗಿದೆಯೆಂದು ತಿಳಿಸಿದಾರೆ. ಇಂದ್ರನು ವೃತ್ರನನ್ನು ಸಂಹಾರಮಾಡಿದ ವಿಷಯವನ್ನು ಎಲ್ಲಾ ಋಷಿಗಳೂ ಪ್ರಶಂಸೆಮಾಡಿರುವುದರಿಂದ ಆ ವೃತ್ರಹನನದ ವಿಸ್ತಾರವಾದ ವಿವರಣೆಯನ್ನು ಇಲ್ಲಿ ಹೇಳುವುದು ಆವಶ್ಯಕವು. ಆದುದರಿಂದ ಆ ವಿವರವನ್ನು ತಿಳಿಸುವ ಯಜುರ್ವೇದದ ಮಂತ್ರಭಾಗವನ್ನೂ ಅದರ ಅರ್ಥಾನುವಾದವನ್ನೂ ಇಲ್ಲಿ ವಿವರಿಸಿದೇವೆ—

**ತ್ವಷ್ಟಾ ಹತಪುತ್ರೋ ವೀಂದ್ರಗ್ಂ ಸೋಮಮಾಹರತ್ತಸ್ಮಿನ್ನಿಂದ್ರ ಉಪಹವಮೈಚ್ಛತ ತಂ ನೋಪಾಹ್ವಯತ ಪುತ್ರಂ ಮೇಽವಧೀರಿತಿ ಸ ಯಜ್ಞವೇಶಸಂ ಕೃತ್ವಾ ಪ್ರಾಸಹಾ ಸೋಮಮಪಿಬತ್ತಸ್ಯ ಯದತ್ಯಶಿಷ್ಯತ ತತ್ತ್ವಷ್ಟಾಹವನೀಯಮುಪ ಪ್ರಾವರ್ತಯತ್ಸ್ವಾಹೇಂದ್ರಶತ್ರುರ್ವರ್ಧಸ್ವೇತಿ ಯದವರ್ತಯತ್ತದ್ವೃತ್ರಸ್ಯ ವೃತ್ರತ್ವಂ ಯದಬ್ರವೀತ್ಸ್ವಾಹೇಂದ್ರಶತ್ರುರ್ವರ್ಧಸ್ವೇತಿ ತಸ್ಮಾದಸ್ಯೇಂದ್ರಃ ಶತ್ರುರಭವತ್ಸ ಸಂಭವನ್ನಗ್ನೀಷೋಮಾವಭಿ ಸಮಭವತ್ಸ ಇಷುಮಾತ್ರಮಿಷುಮಾತ್ರಂ ವಿಷ್ವಙ್ಙವರ್ಧತ ಸ ಇಮಾನ್ ಲೋಕಾನವೃಣೋದ್ಯದಿಮಾನ್ ಲೋಕಾನವೃಣೋತ್ತದ್ವೃತ್ರಸ್ಯ ವೃತ್ರತ್ವಂ ತಸ್ಮಾದಿಂದ್ರೋಽಬಿಭೇತ್ ||**

(ತೈ. ಸಂ. ೨-೫-೨-೧)

ಈ ಅನುವಾಕದಲ್ಲಿ ಇಂದ್ರನು ವೃತ್ರನನ್ನು ಸಂಹರಿಸಿದ ವಿವರವು ಉಕ್ತವಾಗಿದೆ. ಈ ಕಥಾಸಂದರ್ಭಕ್ಕೆ ಹಿನ್ನೆಲೆಯಾಗಿ ಇನ್ನೊಂದು ಉಪಾಖ್ಯಾನವಿರುವುದು. ಅದನ್ನು ನಾವು ಹಿಂದೆ ವಿವರಿಸಿರುವೆವಾದರೂ ಇಲ್ಲಿ ಮುಂದಿನ ವಿವರಣೆಗೆ ಪೀಠಿಕಾರೂಪವಾಗಿ ಸೂಕ್ಷ್ಮರೀತಿಯಿಂದ ವಿವರಿಸುವುದು ಆವಶ್ಯಕವು. ಪೂರ್ವದಲ್ಲಿ ತ್ವಷ್ಟೃಪ್ರಜಾಪತಿಗೆ ವಿಶ್ವರೂಪ ನೆಂಬ ಪುತ್ರನಿದ್ದನು. ಅವನು ದೇವತೆಗಳಿಗೆ ಪುರೋಹಿತನಾಗಿದ್ದನು. ಆದರೂ ಇವನು ಅಸುರಸ್ತ್ರೀಯಲ್ಲಿ ಜನಿಸಿದ ವನಾದ್ದರಿಂದ ಇವನಿಗೆ ಅಸುರರ ವಿಷಯದಲ್ಲಿ ವಿಶೇಷವಾಗಿ ಅಭಿಮಾನವಿತ್ತು. ಹೀಗಿರುವಾಗ ಈ ವಿಶ್ವರೂಪನು ನಮಗೆ ಪುರೋಹಿತನಾಗಿದ್ದರೂ ಅಸುರಪಕ್ಷಪಾತಿಯಾದ್ದರಿಂದ ಸಮಯ ಸಾಧಿಸಿ ಅಸುರರಿಗೆ ಸಹಾಯಮಾಡುತ್ತಾ ದೇವತೆಗಳಿಗೆ ರಾಜ್ಯವೇ ಇಲ್ಲದಂತೆ ಒಳಸಂಚು ನಡೆಸಬಹುದೆಂದು ಇಂದ್ರನು ಹೆದರಿದನು. ಆದ್ದರಿಂದ ಇಂದ್ರನು ಇವನನ್ನು ಉಪಾಯಾಂತರದಿಂದ ಸಂಹಾರಮಾಡಿದನು. ಈ ವಿಷಯವನ್ನೇ ಇಲ್ಲಿ **ತ್ವಷ್ಟಾ ಹತಪುತ್ರೋ ವೀಂದ್ರಗ್ಂ**

**ಏವ ಯಜ್ಞಮಾಹರದ್ಯತ್ತೃದ್ವಿತ್ತಂ ವೇದ್ಯಮಸುರಾಣಾಮವಿಂದಂತ ತದೇಕಂ ವೇದ್ಯೈ ವೇದಿತ್ವಂ ॥**

(ತೈ. ಸಂ. ೬-೨-೪-೨, ೩)

ಯಜ್ಞವೇದಿಗೆ ವೇದಿ ಎಂದು ಹೆಸರು ಹೇಗೆ ಬಂದಿತೆಂಬ ವಿಷಯವನ್ನು ವಿವರಿಸುವುದಕ್ಕಾಗಿ ಯಜುರ್ವೇದದಲ್ಲಿ ಒಂದು ಇತಿಹಾಸವು ಉಕ್ತವಾಗಿದೆ.

ಪೂರ್ವದಲ್ಲಿ ಕಾರಣಾಂತರದಿಂದ ಯಜ್ಞವು ವಿಷ್ಣುರೂಪವನ್ನು ಧರಿಸಿ ದೇವತೆಗಳನ್ನು ಬಿಟ್ಟು ಹೊರಟು ಹೋಯಿತು. ಅನಂತರ ಯಜ್ಞರೂಪನಾನ ಆ ವಿಷ್ಣುವು ಭೂಮಿಯನ್ನು ಪ್ರವೇಶಿಸಿ ಯಾರಿಗೂ ತಿಳಿಯದಂತೆ ಅಡಗಿಕೊಂಡಿದ್ದನು. ದೇವತೆಗಳು ಅವನನ್ನು ಕಾಣದೆ ಒಬ್ಬರ ಕೈಯನ್ನೊಬ್ಬರು ಹಿಡಿದುಕೊಂಡು ಎಲ್ಲೆಲ್ಲೂ ಹುಡುಕುತ್ತಿದ್ದರು. ಆದರೂ ಅವರಿಗೆ ವಿಷ್ಣುವಿರುವ ಸ್ಥಳವು ಸಿಕ್ಕಲಿಲ್ಲ. ಆದರೆ ಇಂದ್ರನು ವಿಷ್ಣುವು ಅಡಗಿಕೊಂಡಿದ್ದ ಪ್ರದೇಶದ ಮೇಲೆ ಹಾದುಹೋಗುವಾಗ, ಕೆಳಗಿದ್ದ ವಿಷ್ಣುವು ಯಾರದು? ನಾನಿರುವ ಈ ಸ್ಥಳದ ಮೇಲೆ ಹಾದುಹೋಗುವವರಾರು ? ಎನಲು, ಅದನ್ನು ಕೇಳಿ ಇಂದ್ರನು—ನಾನು, ಅಸುರರ ದುರ್ಗಗಳನ್ನು ಧ್ವಂಸಮಾಡತಕ್ಕ ಶೂರನೇ ನಾನು. ಆದರೆ ನೀನು ಯಾರು ? ಎಂದು ಕೇಳಿದನು. ಅದಕ್ಕೆ ವಿಷ್ಣುವು ಅಸುರರ ದುರ್ಗಾದಿಗಳು ಧ್ವಂಸವಾದಮೇಲೆ ಅಲ್ಲಿರತಕ್ಕ ಧನಾದಿ ವಸ್ತುಗಳನ್ನು ತರುವವನೇ ನಾನು ಎಂದು ಪ್ರತ್ಯುತ್ತರವಿತ್ತನು ಮತ್ತು ಇಂದ್ರನನ್ನುದ್ದೇಶಿಸಿ—ಎಲೈ ಪುರುಷನೇ, ನೀನು ಹೇಳಿಕೊಳ್ಳುವಂತೆ ಶತ್ರುಪಟ್ಟಣಗಳನ್ನು ಧ್ವಂಸಮಾಡುವವನು ನೀನೇ ಆಗಿದ್ದರೆ ಇಲ್ಲಿಂದ ಮುಂದೆ ಏಳು ಪರ್ವತಗಳ ಆಚೆ ವರಾಹನೆಂಬ ಅಸುರನಿರುವನು. ಅವನು ಅಸುರರ ಧನಾದಿಗಳನ್ನು ಅಪಹರಿಸಿ ತನ್ನ ಬಲವಾದ ಕೋಟೆಯೊಳಗೆ ಇಟ್ಟುಕೊಂಡಿರುವನು. ನೀನು ಹೇಳಿಕೊಳ್ಳುವಂತೆ ಅಸುರರ ದುರ್ಗಗಳನ್ನು ನಾಶಮಾಡುವ ಶಕ್ತಿ ನಿನಗಿದ್ದರೆ ಆ ವರಾಹನೆಂಬ ಅಸುರನನ್ನು ಪ್ರಹರಿಸಿ ಧ್ವಂಸಮಾಡು. ಆಗಮಾತ್ರ ನಿನ್ನ ಶಕ್ತಿಯು ಗೊತ್ತಾಗುವುದು ಎಂದನು. ಇದನ್ನು ಕೇಳಿ ಇಂದ್ರನು ಸಮೀಪದಲ್ಲಿದ್ದ ದರ್ಭೆಯ ಗೊಂಚಲೊಂದನ್ನು ತೆಗೆದುಕೊಂಡು ಅದನ್ನೇ ತನ್ನ ಆಯುಧವನ್ನಾಗಿ ಮಾಡಿಕೊಂಡು ಅಭೇದ್ಯವಾದ ಏಳು ಪರ್ವತಗಳನ್ನೂ ಭೇದಿಸಿ ಆ ವರಹಾಸುರನನ್ನು ಹೊಡೆದುಕೊಂದನು. ಬಳಿಕ ವಿಷ್ಣುವನ್ನುದ್ದೇಶಿಸಿ ಎಲೈ ಪುರುಷನೇ, ನೀನು ಹೇಳಿದಂತೆ ಸಪ್ತಪರ್ವತಗಳನ್ನೂ ಸೀಳಿಹಾಕಿ ಅಲ್ಲಿದ್ದ ಅಸುರರನ್ನು ಕೊಂದಿರುವೆನು. ಇದರಿಂದ ನನ್ನ ಶಕ್ತಿಸಾಮರ್ಥ್ಯಗಳು ಸ್ಪಷ್ಟವಾಯಿತಷ್ಟೆ. ನೀನು ಹಿಂದೆ ಹೇಳಿದಂತೆ ಧ್ವಂಸವಾದ ಅಸುರರ ದುರ್ಗಾದಿಗಳಿಂದ ಅಲ್ಲಿರುವ ಧನಾದಿವಸ್ತುಗಳನ್ನು ತೆಗೆದುಕೊಂಡುಬಾ, ಆಗ ನಿನ್ನ ಶಕ್ತಿಯು ವ್ಯಕ್ತವಾಗುವುದು ಎಂದು ಹೇಳಲು ವಿಷ್ಣುವು ಹಾಗೆಯೇ ಆಗಲೆಂದು ಹೇಳಿ ಯಜ್ಞರೂಪದಿಂದಲೇ ಆ ಅಸುರನಲ್ಲಿದ್ದ ಧನಾದಿವಸ್ತುಗಳನ್ನು ಅಪಹರಿಸಿ ದೇವತೆಗಳ ಸಮೀಪಕ್ಕೆ ತಂದನು. ಈ ರೀತಿ ಯಜ್ಞದಿಂದ ದೇವತೆಗಳು ಅಸುರರ ಧನಗಳನ್ನು ಪಡೆದದ್ದರಿಂದ ಯಜ್ಞಮಾಡುವ ಪ್ರದೇಶಕ್ಕೆ ವೇದಿ ಎಂದು ಹೆಸರು ಬಂದಿತು ಎಂದು ಈ ಇತಿಹಾಸದ ಮುಖ್ಯಾಭಿಪ್ರಾಯವು.

### ಇಂದ್ರನು ವಿಶ್ವರೂಪನೆಂಬುವನನ್ನು ಸಂಹಾರಮಾಡಿದ ವಿಷಯ

ವಿಶ್ವರೂಪನೆಂಬುವನನ್ನು ಇಂದ್ರನು ಸಂಹಾರಮಾಡಿದ ವಿಷಯವು ತೈತ್ತಿರೀಯಸಂಹಿತೆಯ ಎರಡನೇ ಕಾಂಡದಲ್ಲಿ ಐದನೆಯ ಪ್ರಪಾಠಕದ ಪ್ರಾರಂಭಭಾಗದಲ್ಲಿ ಹೇಳಿದೆ. ಋಗ್ವೇದದಲ್ಲಿಯೂ ಈ ವಿಷಯವಾಗಿ—

**ಭೂರೀದಿಂದ್ರ ಉದಿನಕ್ಷಂತಮೋಜೋಽವಾಭಿನತ್ಸತ್ಪತಿರ್ಮನ್ಯಮಾನಂ ।**
**ತ್ವಾಷ್ಟ್ರಸ್ಯ ಚಿದ್ವಿಶ್ವರೂಪಸ್ಯ ಗೋನಾಮಾಚಕ್ರಾಣಸ್ತ್ರೀಣಿ ಶೀರ್ಷಾ ಪರಾ ವರ್ಕ್ ॥**

(ಋ. ಸಂ. ೧೦-೮-೯)

ಎಂಬ ಋಕ್ಕಿನಲ್ಲಿ ಇಂದ್ರನು—ತ್ವಷ್ಟೃಪುತ್ರನಾದ ನಿಶ್ವರೂಪನೆಂಬುವನ ಮೂರು ತಲೆಗಳನ್ನು ಕತ್ತರಿಸಿಹಾಕಿದನು. ಎಂದು ಹೇಳಿದೆ. ಈ ಕಾರ್ಯವನ್ನು ಇಂದ್ರನು ತ್ರಿತನಿಗಾಗಿ ಮಾಡಿದನೆಂದೂ, ತ್ರಿತನು ಆ ವಿಷಯದಲ್ಲಿ ಇಂದ್ರನಿಗೆ ಸಹಾಯಮಾಡಿದನೆಂದೂ ಅದೇ ಸೂಕ್ತದ ೭ ನೇ ಋಕ್ಕಿನಲ್ಲಿ ಹೇಳಿದೆ.

**ಅಸ್ಯ ತ್ರಿತಃ ಕ್ರತುನಾ ವವ್ರೇ ಅಂತರಿಚ್ಛನ್ ಧೀತಿಂ ಪಿತುರೇವೈಃ ಪರಸ್ಯ |**
**ಸಚಸ್ಯಮಾನಃ ಪಿತ್ರೋರುಪಸ್ಥೇ ಜಾಮಿ ಬ್ರುವಾಣ ಆಯುಧಾನಿ ವೇತಿ |**
**ಸ ಪಿತ್ರ್ಯಾಣ್ಯಾಯುಧಾನಿ ವಿದ್ವಾನಿಂದ್ರೇಷಿತ ಆಪ್ತ್ಯೋ ಅಭ್ಯಯುಧ್ಯತ್ |**
**ತ್ರಿಶೀರ್ಷಾಣಂ ಸಪ್ತರಶ್ಮಿಂ ಜಘನ್ವಾನ್ ತ್ವಾಷ್ಟ್ರಸ್ಯಚಿನ್ನಿಃ ಸಸೃಜೇ ತ್ರಿತೋ ಗಾಃ ||**

(ಋ. ಸಂ. ೧೦-೮-೭, ೮)

ಈ ಋಕ್ಕುಗಳ ಭಾಷ್ಯದಲ್ಲಿ ಸಾಯಣರು ಒಂದು ಉಪಾಖ್ಯಾನವನ್ನೂ ಹೇಳಿದ್ದಾರೆ—ಇಂದ್ರನು ಮೂರು ಶಿರಸ್ಸುಗಳುಳ್ಳ ತ್ವಷ್ಟಪುತ್ರನಾದ ವಿಶ್ವರೂಪನನ್ನು ಕೊಲ್ಲಲು ತ್ರಿತನ ಸಹಾಯವನ್ನು ಕೋರಿದನು. ಅದಕ್ಕೆ ತ್ರಿತನು ತನ್ನ ಶಕ್ತಿಯನ್ನು ಹೆಚ್ಚಿಸಿಕೊಳ್ಳಲು ತನಗೆ ಯಜ್ಞಗಳಲ್ಲಿ ಹವಿರ್ಭಾಗವನ್ನು ಕೊಡಬೇಕೆಂದು ವರವನ್ನು ಕೇಳಿದನು. ಇಂದ್ರನು ಅದಕ್ಕೊಪ್ಪಿ ಹಸ್ತಪ್ರಕ್ಷಾಳನಕ್ಕಾಗಿ ನೀರನ್ನೂ, ಯಜ್ಞಭಾಗವನ್ನೂ ಕೊಟ್ಟನು. ಬಳಿಕ ತ್ರಿತನು ತನ್ನ ತಂದೆಯ ಸಂಬಂಧವಾದ ಆಯುಧಗಳಿಂದ ಸಜ್ಜುಗೊಂಡು ಇಂದ್ರಪ್ರೇರಿತನಾಗಿ ತ್ವಷ್ಟೃಪುತ್ರನಾದ ವಿಶ್ವರೂಪನೆಂಬುವನ ಕೂಡ ಯುದ್ಧಮಾಡಿ ಅವನನ್ನು ತನ್ನ ಆಯುಧಗಳಿಂದ ಬಲವಾಗಿ ಹೊಡೆದು ಮೂರ್ಛೆಗೊಳಿಸಿದನು. ಅನಂತರ ಇಂದ್ರನು ಆ ವಿಶ್ವರೂಪನ ಮೂರು ತಲೆಗಳನ್ನು ಕತ್ತರಿಸಿಹಾಕಿದನು ಎಂದು ಮೇಲಿನ ಋಕ್ಕುಗಳಲ್ಲಿ ಹೇಳಿದೆ. ಇದೇ ವಿಷಯವನ್ನೇ ವಿಸ್ತಾರವಾಗಿ ತೈತ್ತಿರೀಯಸಂಹಿತೆಯಲ್ಲಿ ಹೇಳಿದೆ. (ತೈ. ಸಂ. ೨-೫-೧-೧) ಅದನ್ನೂ ಅರ್ಥಸಹಿತವಾಗಿ ಇಲ್ಲಿ ವಿವರಿಸಿದೆ—

**ವಿಶ್ವರೂಪೋ ವೈ ತ್ವಾಷ್ಟ್ರಃ ಪುರೋಹಿತೋ ದೇವಾನಾಮಾಸೀತ್ ಸ್ವಸ್ರಿಯೋಽಸುರಾಣಾಂ ತಸ್ಯ ತ್ರೀಣಿ ಶೀರ್ಷಾಣ್ಯಾಸನ್ತ್ಸೋಮಪಾನಗ್ಂ ಸುರಾಪಾನಮನ್ನಾದನಗ್ಂ ಸ ಪ್ರತ್ಯಕ್ಷಂ ದೇವೇಭ್ಯೋ ಭಾಗಮವದತ್ ಪರೋಕ್ಷಮಸುರೇಭ್ಯಃ ||**

ಪೂರ್ವಕಾಲದಲ್ಲಿ ತ್ವಷ್ಟೃಪುತ್ರನಾದ ವಿಶ್ವರೂಪನೆಂಬುವನು ದೇವತೆಗಳಿಗೆ ಪುರೋಹಿತನಾಗಿದ್ದನು. ಇವನು ಅಸುರರ ತಂಗಿಯ ಮಗನಾದ್ದರಿಂದ ಅಸುರರಲ್ಲಿಯೂ ಅಭಿಮಾನವಿತ್ತು. ಈ ವಿಶ್ವರೂಪನಿಗೆ ಮೂರು ಶಿರಸ್ಸು (ತಲೆಗಳು) ಇದ್ದವು. ಆ ಮೂರು ತಲೆಗಳಲ್ಲಿ ಒಂದರಿಂದ ಸೋಮಪಾನ ಮಾಡುತ್ತಿದ್ದನು, ಮತ್ತೊಂದರಿಂದ ಸುರಾ (ಮದ್ಯ) ಪಾನಮಾಡುತ್ತಿದ್ದನು, ಮೂರನೆಯ ಶಿರಸ್ಸಿನಿಂದ ಅನ್ನಾದ್ಯಾಹಾರಗಳನ್ನು ತಿನ್ನುತ್ತಿದ್ದನು. ಹೀಗಿರುವಾಗ ಈ ವಿಶ್ವರೂಪನು ಯಜ್ಞದಲ್ಲಿ ದೇವತೆಗಳಿಗೆ ಹವಿರ್ಭಾಗವನ್ನು ದೊರಕಿಸಿಕೊಡುವುದಾಗಿ ಎಲ್ಲರೆದುರಿಗೂ ಹೇಳುತ್ತಿದ್ದನು. ಆದರೆ ಒಳಗೊಳಗೇ ಯಾರಿಗೂ ತಿಳಿಯದಂತೆ ಅಸುರರಿಗೆ ಸಹಾಯಮಾಡುತ್ತಿದ್ದನು.

**ಸರ್ವಸ್ಮೈ ವೈ ಪ್ರತ್ಯಕ್ಷಂ ಭಾಗಂ ವದಂತಿ ಯಸ್ಮಾ ಏವ ಪರೋಕ್ಷಂ ವದಂತಿ ತಸ್ಯ ಭಾಗ ಉದಿತಸ್ತಸ್ಮಾದಿಂದ್ರೋಽಬಿಭೇದೀದೃಙ್ಸ್ವೈ ರಾಷ್ಟ್ರಂ ವಿಪರ್ಯಾವರ್ತಯತೀತಿ ತಸ್ಯ ವಜ್ರಮಾದಾಯ ಶೀರ್ಷಾಣ್ಯಚ್ಛಿನತ್ ||**

ಜನರೂ ಎಲ್ಲರಿಗೂ ಭಾಗವನ್ನು ಕೊಡುತ್ತೇನೆಂದು ಪ್ರತ್ಯಕ್ಷವಾಗಿ ಎಲ್ಲರೆದುರಿಗೂ ಮಾತುಕೊಡುವರು. ಆದರೆ ಆ ಕೊಟ್ಟ ಮಾತನ್ನು ನೆರವೇರಿಸುವವರು ಅತಿ ವಿರಳ. ಭಾಗವನ್ನು ಕೊಡುತ್ತೇನೆಂದು (ಪರೋಕ್ಷವಾಗಿ) ರಹಸ್ಯವಾಗಿ (ಏಕಾಂತವಾಗಿ) ನಂಬಿಕೆಯಾಗುವಂತೆ ಮಾತುಕೊಟ್ಟಲ್ಲಿ ಆ ವಚನವನ್ನು ಖಂಡಿತವಾಗಿಯೂ ಪಾಲಿಸುತ್ತಾರೆ. ಆದುದರಿಂದ ವಿಶ್ವರೂಪನ ರಹಸ್ಯಸಂಧಾನವನ್ನು ಕಂಡು ಇಂದ್ರನು ಹೆದರಿದನು. ಇವನು ತನಗೆ ದ್ರೋಹವೆಸಗಿ ರಾಷ್ಟ್ರವನ್ನು ಬೇರೆಯವರ (ಅಸುರರ) ವಶಮಾಡುವನೆಂದು ಹೆದರಿ ತನ್ನ ವಜ್ರಾಯುಧವನ್ನು ತೆಗೆದುಕೊಂಡು ಆ ವಿಶ್ವರೂಪನ ಮೂರು ಶಿರಸ್ಸುಗಳನ್ನೂ ಕತ್ತರಿಸಿದನು.

**ಯತ್ಸೋಮಪಾನಮಾಸೀತ್ಸ ಕಪಿಂಜಲೋಽಭವದ್ಯತ್ಸುರಾಪಾನಗ್ಂ ಸ ಕಲವಿಂಕೋ ಯದನ್ನಾದನಗ್ಂ ಸ ತಿತ್ತಿರಿಸ್ತಸ್ಯಾಂಜಲಿನಾ ಬ್ರಹ್ಮಹತ್ಯಾಮುಪಾಗೃಹ್ಣಾತ್ತಾಗ್ಂ ಸಂವತ್ಸರಮಬಿಭಸ್ತಂ ಭೂತಾನ್ಯಭ್ಯಕ್ರೋಶನ್ ಬ್ರಹ್ಮಹನ್ನಿತಿ ||**

ಆಗ ಇಂದ್ರನು ಕತ್ತರಿಸಿದ ಮೂರು ಶಿರಸ್ಸುಗಳಲ್ಲಿ ಸೋಮಪಾನ ಮಾಡುತ್ತಿದ್ದ ಶಿರಸ್ಸು ಕಪಿಂಜಲವೆಂಬ (hazecock) ಪಕ್ಷಿಯಾಯಿತು. ಸುರಾಪಾನವನ್ನು ಮಾಡುತ್ತಿದ್ದ ಎರಡನೆಯ ಶಿರಸ್ಸು ಕಲವಿಂಕ ಎಂದರೆ ಗುಬ್ಬಚ್ಚಿ (Sparrow) ಆಯಿತು ; ಅನ್ನವನ್ನು ತಿನ್ನುತ್ತಿದ್ದ ಮೂರನೆಯ ಶಿರಸ್ಸು ತಿತ್ತಿರಿಯೆಂಬ (Partridge) ಪಕ್ಷಿಯಾಯಿತು. ಆಗ ಇಂದ್ರನು ಬ್ರಾಹ್ಮಣನಾದ ವಿಶ್ವರೂಪನನ್ನು ಕೊಂದದ್ದರಿಂದ ಬ್ರಹ್ಮಹತ್ಯಾದೋಷವು ಪ್ರಾಪ್ತವಾಗಲು ಅದನ್ನು ತನ್ನ ಕೈಯ್ಯಿಂದಲೇ ಸ್ವೀಕರಿಸಬೇಕಾಯಿತು. ಅದರಂತೆ ಅವನು ಬ್ರಹ್ಮಹತ್ಯಾದೋಷವನ್ನು ಒಂದು ಸಂವತ್ಸರದವರೆಗೂ ಧರಿಸಿದ್ದನು. ಪ್ರಾಣಿಗಳೆಲ್ಲಾ ಅವನನ್ನು (ಇಂದ್ರನನ್ನು) ನೋಡಿ "ಎಲೈ ಇಂದ್ರನೇ, ನೀನು ಬ್ರಹ್ಮಹತ್ಯೆಯನ್ನು ಮಾಡಿದವನು" ಎಂದು ಕೂಗುತ್ತಿದ್ದುವು.

**ಸ ಪೃಥಿವೀ ಮುಪಾಸೀದದಸ್ಯೈ ಬ್ರಹ್ಮಹತ್ಯಾಯೈ ತೃತೀಯಂ ಪ್ರತಿಗೃಹಾಣೇತಿ ಸಾಬ್ರವೀದ್ವರಂ ವೃಣೈ ಖಾತಾತ್ಪರಾಭವಿಷ್ಯಂತೀ ಮನ್ಯೇ ತತೋ ಮಾ ಪರಾಭೂವಮಿತಿ ಪುರಾ ತೇ ಸಂವತ್ಸರಾದಪಿರೋಹಾದಿತ್ಯಬ್ರವೀತ್ತಸ್ಮಾತ್ಪುರಾ ಸಂವತ್ಸರಾತ್ಪೃಥಿವ್ಯೈ ಖಾತಮಪಿರೋಹತಿ ವಾರೇವೃತಗ್ಗ್ಂ ಹ್ಯಸ್ಯೈ ತೃತೀಯಂ ಬ್ರಹ್ಮಹತ್ಯಾಯೈ ಪ್ರತ್ಯಗೃಹ್ಣಾತ್ತತ್ಸ್ವಕೃತಮಿರಿಣಮಭವತ್ತಸ್ಮಾದಾಹಿತಾಗ್ನಿಃ ಶ್ರದ್ಧಾದೇವಃ ಸ್ವಕೃತ ಇರಿಣೇ ನಾವಸ್ಯೇದ್ಬ್ರಹ್ಮಹತ್ಯಾಯೈ ಹ್ಯೇಷ ವರ್ಣಃ ||**

ಇದನ್ನು ಕಂಡ ಇಂದ್ರನು (ಲಜ್ಜೆಗೊಂಡು) ಬ್ರಹ್ಮಹತ್ಯಾಪರಿಹಾರಕ್ಕಾಗಿ ಪೃಥಿವಿಯ (ಭೂಮಿಯ) ಬಳಿಗೆ ಹೋಗಿ ಎಲೈ ಭೂಮಿಯೇ, ನನಗೆ ಪ್ರಾಪ್ತವಾಗಿರುವ ಈ ಬ್ರಹ್ಮಹತ್ಯದಲ್ಲಿ ಮೂರನೇ ಒಂದು ಭಾಗವನ್ನು ನೀನು ತೆಗೆದುಕೋ ಎಂದು ಕೇಳಲು, ಅದಕ್ಕೆ ಭೂಮಿಯು ಹಾಗಾದರೆ ನಾನು ಒಂದು ವರವನ್ನು ಕೇಳುವೆನು—ಜನರು ಭೂಮಿಯನ್ನು ಅಗೆದು ಹಳ್ಳಮಾಡುವರು, ಅದರಿಂದ ನನಗೆ ಅಪಮಾನವಾಗಿರುವುದು. ಆ ರೀತಿ ಆಗದಂತೆ ವರವನ್ನು ಕೊಡಬೇಕು ಎಂದು ಕೇಳಿತು. ಇಂದ್ರನು ಹಾಗೆಯೇ ಆಗಲಿ, ಆ ರೀತಿ ಅಗೆದ ಹಳ್ಳವು ಯಾವ ಪ್ರಯತ್ನವೂ ಇಲ್ಲದೆ ಒಂದು ವರ್ಷದೊಳಗಾಗಿ ತಾನಾಗಿಯೇ ಮುಚ್ಚಿಹೋಗಿ ಭೂಮಿಯು ಮುಂಚಿನಂತೆ ಸಮನಾಗಲಿ ಎಂದು ವರವನ್ನು ಕೊಟ್ಟನು. ಆದ್ದರಿಂದ ಭೂಮಿಯಲ್ಲಿ ಅಗೆದ ಹಳ್ಳ ಮುಂತಾದವು ಒಂದು ವರ್ಷ ಕಳೆಯುವುದರೊಳಗಾಗಿ ತಾನಾಗಿಯೇ ಮುಚ್ಚಿ

ಹೋಗುವುದು. ಇದನ್ನೇ ಭೂಮಿಯು ಕೇಳಿಕೊಂಡ ವರವು. ಈರೀಯಾದ ವರವನ್ನು ಪಡೆದು ಭೂಮಿಯು ಇಂದ್ರನ ಬ್ರಹ್ಮಹತ್ಯಾದೋಷದ ಮೂರನೇ ಒಂದು ಭಾಗವನ್ನು ತೆಗೆದುಕೊಂಡಿತು. ಆ ಲಾಗಾಯಿತು ಭೂಮಿಗೆ ಅದು ಸ್ವಾಭಾವಿಕವಾಯಿತು. ಆದ್ದರಿಂದ ಅಗ್ನಿಹೋತ್ರ ಅಥವಾ ಯಜ್ಞಯಾಗಾದಿಗಳನ್ನು ಮಾಡಿದ ಮತ್ತು ದೇವತೆಗಳಲ್ಲಿ ಶ್ರದ್ಧಾಭಕ್ತಿಗಳನ್ನಿಟ್ಟಿರುವ ಪುರುಷನು ಭೂಮಿಯಲ್ಲಿ ಅಗೆದು ಹಳ್ಳವಾಗಿರುವ ಭಾಗವನ್ನು ಯಜ್ಞಮಾಡಲು ಯಜ್ಞವೇದಿಯನ್ನಾಗಿ ಆರಿಸಿಕೊಳ್ಳಬಾರದು. ಏಕೆಂದರೆ ಅಂತಹ ಅಗೆದಿರುವ ಹಳ್ಳಪ್ರದೇಶವು ಭೂಮಿಯು ತಾನು ವಹಿಸಿಕೊಂಡ ಬ್ರಹ್ಮಹತ್ಯದ ಸಂಕೇತ (ವರ್ಣ) ವಾಗಿರುವುದು.

**ಸ ವನಸ್ಪತೀನುಪಾಸೀದದಸ್ಯೈ ಬ್ರಹ್ಮಹತ್ಯಾಯೈ ತೃತೀಯಂ ಪತಿಗೃಹ್ಣೀತೇತಿ ತೇಽಬ್ರುವನ್—ವರಂ ವೃಣಾಮಹೈ ವೃಕ್ಣಾತ್ಪರಾ ಭವಿಷ್ಯಂತೋ ಮನ್ಯಾಮಹೇ ತತೋ ಮಾ ಪರಾಭೂಮೇತ್ಯಾವ್ರಶ್ಚನಾದ್ವೋ ಭೂಯಾಗ್ಂಸ ಉತ್ತಿಷ್ಠಾನಿತ್ಯಬ್ರವೀತ್ತಸ್ಮಾದಾವ್ರಶ್ಚನಾದ್ವೃಕ್ಷಾಣಾಂ ಭೂಯಾಗ್ಂಸ ಉತ್ತಿಷ್ಠಂತಿ ನಾರೇವೃತೆಗ್ಗ್ ಹ್ಯೇಷಾಂ ತೃತೀಯಂ ಬ್ರಹ್ಮಹತ್ಯಾಯೈ ಪ್ರತ್ಯೈಗೃಹ್ಣನ್ತ್ಸ ನಿರ್ಯಾಸೋಽಭವತ್ತಸ್ಮಾನ್ನಿರ್ಯಾಸಸ್ಯ ನಾಶ್ಯಂ ಬ್ರಹ್ಮಹತ್ಯಾಯೈ ಹ್ಯೇಷವರ್ಣೋಽಥೋ ಖಲು ಯ ಏವ ಲೋಹಿತೋ ಯೋ ವಾವ್ರಶ್ಚನಾನ್ನಿರ್ಯೇಷತಿ ತಸ್ಯನಾಶ್ಯಂ ಕಾಮಮನ್ಯಸ್ಯ ||**

ಬಳಿಕ ಇಂದ್ರನು ವೃಕ್ಷಗಳ ಸಮೀಪಕ್ಕೆ ಹೋಗಿ—ಎಲೈ ವೃಕ್ಷಗಳೇ, ನನ್ನ ಬ್ರಹ್ಮಹತ್ಯಾದೋಷದಲ್ಲಿ ಮೂರನೇ ಒಂದು ಭಾಗವನ್ನು ನೀವು ತೆಗೆದುಕೊಳ್ಳಿ ಎನ್ನಲು, ಅದಕ್ಕೆ ವೃಕ್ಷಗಳು—ಹಾಗಾದರೆ ನಾವು ಒಂದು ವರವನ್ನು ಅಪೇಕ್ಷಿಸುವೆವು. ಜನರು ವೃಕ್ಷದ ಕೊಂಬೆ ಮೊದಲಾದುವನ್ನು ಕತ್ತರಿಸುವರು. ಆದರಿಂದ ನಮಗೆ ಅಭಿಭವವಾಗುವುದು. ಅಂತಾಗದಂತೆ ವರವನ್ನು ಕೊಡಬೇಕೆನ್ನಲು, ಇಂದ್ರನು, ಒಳ್ಳೇದು, ಹಾಗೆ ಕತ್ತರಿಸಿದಾಗ ಭಾಗದ ಸುತ್ತಲೂ ಅಧಿಕವಾದ ಕೊನೆಗಳು ಚಿಗುರುವಂತಾಗಲಿ ಎಂದು ವರವನ್ನು ಕೊಟ್ಟನು. ಆದ್ದರಿಂದ ವೃಕ್ಷಗಳು ಕೇಳಿಕೊಂಡ ವರದಂತೆ ಕೊನೆಗಳನ್ನು ಕತ್ತರಿಸಿದಾಗ ಆ ಭಾಗದಲ್ಲಿ ಹೆಚ್ಚು ಕೊನೆಗಳು ಚಿಗುರುವುವು. ಬಳಿಕ ವೃಕ್ಷಗಳು ತಮ್ಮ ಮಾತಿನಂತೆ ಇಂದ್ರನ ಬ್ರಹ್ಮಹತ್ಯೆಯಲ್ಲಿ ಮೂರನೇ ಒಂದು ಭಾಗವನ್ನು ಸ್ವೀಕರಿಸಿದವು. ಮರವನ್ನು ಕಡಿದಾಗ ಹೊರಡುವ ರಸವೇ ಈ ಬ್ರಹ್ಮಹತ್ಯೆಯ ಚಿಹ್ನೆಯು. ಆದ್ದರಿಂದ ಈ ಮರ ಕಡಿಯುವುದರಿಂದ ಹೊರಹೊರಡುವ ರಸವನ್ನು (ಮದ್ಯ)ಯಾರೂ ಕುಡಿಯಬಾರದು. ಏಕೆಂದರೆ ಅದು ಬ್ರಹ್ಮಹತ್ಯೆಯ ವರ್ಣವು ಅಥವಾ ವೃಕ್ಷದ ಕತ್ತರಿಸುವಿಕೆಯಿಂದ ಹೊರಡುವ ರಸವು ಕೆಂಪಾಗಿ ಇದ್ದಲ್ಲಿ ಅದನ್ನು ಕುಡಿಯಬಾರದು. ಹಾಗಿಲ್ಲದಿದ್ದರೆ ಇಷ್ಟಪಟ್ಟರೆ ಕುಡಿಯಬಹುದು.

**ಸ ಸ್ತ್ರೀಷಗ್ಂಸಾದಮುಪಾಸೀದದಸ್ಯೈ ಬ್ರಹ್ಮತ್ಯಾಯೈ ತೃತೀಯಂ ಪ್ರತಿಗೃಹ್ಣೀತೇತಿ ತಾ ಅಬ್ರುವನ್ವರಂ ವೃಣಾಮಹಾ ಋತ್ವಿಯಾತ್ ಪ್ರಜಾಂ ವಿಂದಾಮಹೈ ಕಾಮಮಾವಿಜನಿತೋಃ ಸಂಭವಾಮೇತಿ ತಸ್ಮಾದೃತ್ವಿಯಾತ್ ಸ್ತ್ರಿಯಃ ಪ್ರಜಾಂ ವಿಂದಂತೇ ಕಾಮಮಾ ವಿಜನಿತೋಃ ಸಂಭವಂತಿ ವಾರೇವೃತೆಗ್ಗ್ಂ ಹ್ಯಾಸಾಂ ತೃತೀಯಂ ಬ್ರಹ್ಮಹತ್ಯಾಯೈ ಪ್ರತ್ಯೈಗೃಹ್ಣನ್ತ್ಸಾ ಮಲವದ್ವಾಸಾ ಅಭವತ್ ||**

ಅನಂತರ ಇಂದ್ರನು ಸ್ತ್ರೀಯರ ಗುಂಪಿಗೆ ಹೋಗಿ ಅವರನ್ನು ಕುರಿತು—ಎಲೌ ಸ್ತ್ರೀಯರೇ, ನನ್ನ ಬ್ರಹ್ಮಹತ್ಯಾದೋಷದಲ್ಲಿ ಉಳಿದಿರುವ ಮೂರನೇ ಒಂದು ಭಾಗವನ್ನು ನೀವು ತೆಗೆದುಕೊಳ್ಳಿ ಎನಲು ಅದಕ್ಕೆ ಸ್ತ್ರೀಯರು, ಹಾಗಾದರೆ ನಾವು

ಒಂದು ವರವನ್ನಪೇಕ್ಷಿಸುವೆವು—ನಾವು ಮುಟ್ಟಾದನಂತರ (ಋತುಸ್ನಾನಾನಂತರ) ನಮಗೆ ಮಕ್ಕಳಾಗಬೇಕು ಮತ್ತು ಪ್ರಸವವಾಗುವವರೆಗೂ (ಹೆರಿಗೆಯಾಗುವವರೆಗೂ) ನಾವು ಇಷ್ಟಪಟ್ಟಲ್ಲಿ ಸಂಭೋಗದಿಂದ ಕಾಮತೃಪ್ತಿಯನ್ನು ಹೊಂದುವಂತಾಗಬೇಕು ಎನ್ನಲು, ಇಂದ್ರನು ಹಾಗೇಯೇ ಆಗಲೆಂದನು. ಆದುದರಿಂದ ಸ್ತ್ರೀಯರು ಮುಟ್ಟಾದನಂತರ ಸಂತಾನವನ್ನು ಪಡೆಯುವರು ಮತ್ತು ಹೆರಿಗೆಯಾಗುವವರೆಗೂ ತಮ್ಮಿಷ್ಟಬಂದಾಗ ಸಂಭೋಗಿಸುವರು. ಏಕೆಂದರೆ ಇದನ್ನೇ ಅವರು ಕೇಳಿಕೊಂಡಿರುವ ವರವು. ಅನಂತರ ಆ ಸ್ತ್ರೀಯರು ಇಂದ್ರನ ಬ್ರಹ್ಮಹತ್ಯಾದೋಷದ ಮೂರನೇ ಒಂದು ಭಾಗವನ್ನು ವಹಿಸಿಕೊಂಡರು. ಸ್ತ್ರೀಯರು ಮುಟ್ಟಾದಾಗ ದ್ರವಿಸುವ ರಜಸ್ಸೇ ಈ ಬ್ರಹ್ಮಹತ್ಯದ ಚಿಹ್ನೆಯಾಗಿರುವುದು. ರಜಸ್ಸು ದ್ರವಿಸುವ ಕಾಲದಲ್ಲಿ (ಮುಟ್ಟಾದಾಗ) ಸ್ತ್ರೀಯರು ಅಪವಿತ್ರರು (ಅಶುದ್ಧರು).

**ತಸ್ಮಾನ್ಮಲವದ್ವಾಸಸಾ ನ ಸಂವದೇತ ನ ಸಹಾಸೀತ ನಾಸ್ಯಾ ಅನ್ನಮದ್ಯಾದ್ಬ್ರಹ್ಮಹತ್ಯಾಯೈ ಹ್ಯೇಷಾ ವರ್ಣಂ ಪ್ರತಿಮುಚ್ಯಾಸ್ತೇಽಥೋ ಖಲ್ವಾಹುರಭ್ಯಂಜನಂ ವಾವ ಸ್ತ್ರಿಯಾ ಅನ್ನಮಭ್ಯಂಜನಮೇವ ನ ಪ್ರತಿಗೃಹ್ಯಂ ಕಾಮಮನ್ಯದಿತಿ ||**

ಆದುದರಿಂದ ಮುಟ್ಟಾದಾಗ ಸ್ತ್ರೀಯರೊಡನೆ ಮಾತನಾಡಬಾರದು. ಅವಳು ಕೊಟ್ಟ ಅಥವಾ ಮುಟ್ಟಿದ ಆಹಾರವನ್ನು ತಿನ್ನಬಾರದು. ಏಕೆಂದರೆ ಬಹ್ಮಹತ್ಯಾದೋಷದ ಚಿಹ್ನೆಯಾದ ಅಶುದ್ಧವಾದ ರಜೋದ್ರವವನ್ನು ಸ್ರವಿಸುತ್ತಿರುವಳು. ಮುಟ್ಟಾಗಿರುವ ಕಾಲದಲ್ಲಿ ತೈಲಾಭ್ಯಂಜನಾದಿಗಳನ್ನು ಮಾಡಬಾರದು ಅಥವಾ ಆ ಕಾಲದಲ್ಲಿ ಅವಳಿಂದ (ಅವಳು ಮುಟ್ಟಿದ) ಅನ್ನಾದಿಗಳನ್ನು ಯಾರೂ ಸ್ವೀಕರಿಸಬಾರದು.

**ಯಾಂ ಮಲವದ್ವಾಸಸಗ್ಂ ಸಂಭವಂತಿ ಯಸ್ತತೋ ಜಾಯತೇ ಸೋಽಭಿಶಸ್ತೋ ಯಾಮರಣ್ಯೇ ತಸ್ಯೈ ಸ್ತೇನೋ ಯಾಂ ಪರಾಚೀಂ ತಸ್ಯೈ ಹ್ರೀತಮುಖ್ಯಪಗಲ್ಭೋ ಯಾ ಸ್ನಾತಿ ತಸ್ಯಾ ಅಪ್ಸು ಮಾರುಕೋ ಯಾಭ್ಯಂಕ್ತೇ ತಸ್ಯೈ ದುಶ್ಚರ್ಮಾ ಯಾ ಪ್ರಲಿಖತೇ ತಸ್ಯೈ ಖಲತಿರಪಮಾರೀ ಯಾಂಕ್ತೇ ತಸ್ಯೈ ಕಾಣೋ ಯಾ ದತೋ ಧಾವತೇ ತಸ್ಯೈ ಶ್ಯಾವದನ್ ಯಾ ನಖಾನಿ ನಿಕೃಂತತೇ ತಸ್ಯೈ ಕುನಖೀ ಯಾ ಕೃಣತ್ತಿ ತಸ್ಯೈ ಕ್ಲೀಬೋ ಯಾ ರಜ್ಜುಗ್ಂಸೃಜತಿ ತಸ್ಯಾ ಉದ್ಬಂಧುಕೋ ಯಾ ಪರ್ಣೇನ ಪಿಬತಿ ತಸ್ಯಾ ಉನ್ಮಾದುಕೋ ಯಾ ಖರ್ವೇಣ ಪಿಬತಿ ತಸ್ಯೈ ಖರ್ವಸ್ತಿಸ್ರೋ ರಾತ್ರೀರ್ವ್ರತಂ ಚರೇದಂಜಲಿನಾ ವಾ ಪಿಬೇದಖರ್ವೇಣ ವಾ ಪಾತ್ರೇಣ ಪ್ರಜಾಯೈ ಗೋಪೀಥಾಯ ||**

(ತೈ. ಸಂ. ೨-೫-೧-೧ ರಿಂದ ೭)

ರಜಸ್ವಲೆಯಾಗಿರುವ ಕಾಲದಲ್ಲಿ (ಮುಟ್ಟಾಗಿರುವಾಗ) ಸಂಭೋಗ ಮಾಡಿದರೆ ಅದರಿಂದ ಹುಟ್ಟುವ ಪುತ್ರನು ಶಾಪಗ್ರಸ್ತನಾಗುವನು; ರಜಸ್ವಲೆಯಾದ ಸ್ತ್ರೀಯು ಅರಣ್ಯದಲ್ಲಿ ಸಂಭೋಗಿಸಿದರೆ ಅವಳಿಗೆ ಹುಟ್ಟುವ ಪುತ್ರನು ಕಳ್ಳನಾಗುವನು; ಮುಖವನ್ನು ಮುಚ್ಚಿಕೊಂಡು ಅಥವಾ ಬೇರೆ ಕಡೆಗೆ ತಿರುಗಿಸಿಕೊಂಡು ಸಂಭೋಗ ಮಾಡಿದರೆ ಹುಟ್ಟುವ ಮಗನು ನಾಚಿಕೆಯಿಂದ ಯಾರೊಡನೆಯೂ ಸರಿಯಾಗಿ ಮಾತನಾಡಲಾರದ ಮುಖೇಡಿಯಾಗುವನು; ಮುಟ್ಟಾದ ಕಾಲದಲ್ಲಿ ಸ್ನಾನ ಮಾಡುವ ಸ್ತ್ರೀಗೆ ಹುಟ್ಟುವ ಮಗನು ನೀರಿನಲ್ಲಿ ಮುಳುಗಿ ಸಾಯುವನು; ಅಭ್ಯಂಜನ ಮಾಡಿಕೊಳ್ಳುವ ಸ್ತ್ರೀಯ ಪುತ್ರನು ಚರ್ಮರೋಗದಿಂದ (ಕುಷ್ಠ, ತೊನ್ನು) ಪೀಡಿತನಾಗುವನು; ತಲೆಯನ್ನು ಬಾಚಿಕೊಳ್ಳುವ ಸ್ತ್ರೀಗೆ ಹುಟ್ಟುವ ಮಗನು ತಲೆಯಲ್ಲಿ ಕೂದಲಿಲ್ಲದ ಬೋಳನಾಗುವನು ಮತ್ತು ಶಕ್ತಿಹೀನನಾಗುವನು; ಕಣ್ಣಿಗೆ ಕಪ್ಪು ಹಚ್ಚಿಕೊಳ್ಳುವ ಸ್ತ್ರೀಗೆ ಹುಟ್ಟುವ ಪುತ್ರನಿಗೆ ಕುರುಡಾಗುವುದು; ಆ ಕಾಲದಲ್ಲಿ ಹಲ್ಲನ್ನುಜ್ಜಿಕೊಳ್ಳುವ ಸ್ತ್ರೀಗೆ ಹುಟ್ಟುವ

ಪುತ್ರನಿಗೆ ಕೊಳಕಾದ ಹಲ್ಲುಗಳಿರುವುವು; ಉಗುರನ್ನು ಕತ್ತರಿಸಿಕೊಳ್ಳುವ ಸ್ತ್ರೀಗೆ ಹುಟ್ಟುವ ಮಗನಿಗೆ ನೋಡುವುದಕ್ಕೆ ವಿಕಾರವಾದ ಕೆಟ್ಟ ಉಗುರುಗಳಿರುವುವು; ಆ ಕಾಲದಲ್ಲಿ (ಚಾಪೆ ಮೊದಲಾದುವನ್ನು) ಹೆಣೆಯುವ ಸ್ತ್ರೀಗೆ ಹುಟ್ಟುವ ಪುತ್ರನು ನಪುಂಸಕನಾಗುವನು; ಹಗ್ಗವನ್ನು ಹೊಸೆಯುವ ಸ್ತ್ರೀಗೆ ಹುಟ್ಟುವ ಪುತ್ರನು ಆತ್ಮಹತ್ಯೆಯಿಂದ ಮೃತನಾಗುವನು; (ಪದ್ಮಪುತ್ರಾದಿ) ಎಲೆಗಳಿಂದ ನೀರು ಕುಡಿಯುವ ಸ್ತ್ರೀಗೆ ಅಂಗಹೀನನಾದ ಅಥವಾ ಅಂಗವಿಕಾರವುಳ್ಳ ಪುತ್ರನಾಗುವನು. ಆದುದರಿಂದ ಸ್ತ್ರೀಯರು ಮುಟ್ಟಾಗಿರುವಾಗ ಮೂರು ರಾತ್ರಿಗಳು ಕಳೆಯುವವರೆಗೆ ಬಹಳ ಕಟ್ಟುನಿಟ್ಟಾಗಿ (ವ್ರತವನ್ನು) ಪಾಲಿಸಬೇಕು. ಒಳ್ಳೆಯ ಸಂತತಿಪ್ರಾಪ್ತಿಗಾಗಿ ಸ್ತ್ರೀಯರು ಆಕಾಲದಲ್ಲಿ ನೀರು ಕುಡಿಯುವಾಗ ಬೊಗಸೆಯಿಂದಾಗಲೀ ಅಥವಾ ಮುರಿಯದಿರುವ ಚೆನ್ನಾಗಿರುವ ಪಾತ್ರೆಯಿಂದಲೇ ನೀರು ಕುಡಿಯಬೇಕು.

ಮೇಲೆ ಹೇಳಿದ ಅಂಶಗಳಲ್ಲಿ ಇಂದ್ರನು ವಿಶ್ವರೂಪನನ್ನು ಸಂಹರಿಸಿದ ವಿಷಯವೂ ಅವನ ಸಂಹಾರದಿಂದ ಇಂದ್ರನಿಗೆ ಪ್ರಾಪ್ತಿಯಾದ ಬ್ರಹ್ಮಹತ್ಯಾದೋಷವೂ, ಆ ದೋಷಪರಿಹಾರಕ್ಕಾಗಿ ಇಂದ್ರನು ಆಚರಿಸಿದ ಕೃತ್ಯಗಳೂ ಅದರ ಪರಿಣಾಮವಾಗಿ ಸ್ತ್ರೀಯರು ರಜಸ್ವಲೆಯಾಗಿರುವಾಗ ನಿಯಮವಾಗಿರಬೇಕೆಂಬ ವಿಷಯವೂ ಉಕ್ತವಾಗಿದೆ ಪ್ರಕೃತಸಂದರ್ಭದಲ್ಲಿ ವಿಶ್ವರೂಪನ ವಿವರ ಮಾತ್ರ ಗ್ರಾಹ್ಯವಾಗಿದ್ದರೂ ಅದಕ್ಕೆ ಸಂಬಂಧಿಸಿದ ಮತ್ತು ಅದೇ ಅನುವಾಕದಲ್ಲಿರುವ ಇತರ ವಿಷಯಗಳ ಪ್ರಸ್ತಾಪವನ್ನೂ ಇಲ್ಲಿ ಮಾಡಲಾಗಿದೆ. ಏಕೆಂದರೆ ಪುರಾಣಾದಿಗಳಲ್ಲಿ ಇಂದ್ರನಿಗೆ ವೃತ್ರವಧೆಯಿಂದ ಬ್ರಹ್ಮಹತ್ಯಾದೋಷ ಪ್ರಾಪ್ತವಾಯಿತೆಂದೂ, ಅದರ ಪರಿಹಾರಕ್ಕಾಗಿ ಇಂದ್ರನು ಮೇಲೆ ಹೇಳಿದಂತೆ ಪ್ರಯತ್ನಪಟ್ಟನೆಂದೂ ಹೇಳಿರುವುದರಿಂದ ವೇದ ಮತ್ತು ಪುರಾಣಾದಿಗಳ ವಿವರಗಳಿಗೆ ಇರುವ ವ್ಯತ್ಯಾಸವನ್ನು ತೋರಿಸುವುದಕ್ಕಾಗಿ ಈ ವಿವರಣೆಯು ಅವಶ್ಯಕವಾಯಿತು.

### ಇಂದ್ರವೈಕುಂಠನ ವಿಷಯ

**ಜಗೃಭ್ಮಾ ತೇ** ಎಂಬ ೪೭ ನೇ ಸೂಕ್ತದ ಋಷಿಯಾದ ಸಪ್ತಗು ಎಂಬ ಋಷಿಯ ವಿಷಯದಲ್ಲಿಯೂ ಇದರ ಮುಂದಿನ ಸೂಕ್ತಗಳಾದ ಅಹಂ ಭುವಂ (೪೮) ಅಹಂ ದಾಂ (೪೯) ಎಂಬ ಸೂಕ್ತಗಳ ಋಷಿಯಾದ ವೈಕುಂಠ ಇಂದ್ರನ ವಿಷಯವಾಗಿಯೂ ಬೃಹದ್ದೇವತಾ ಎಂಬ ಗ್ರಂಥದಲ್ಲಿ ಈರೀತಿ ಹೇಳಿದೆ—

**ಪ್ರಾಜಾಪತ್ಯಾಸುರೀ ತ್ವಾಸೀದ್ವಿಕುಂಠಾ ನಾಮ ನಾಮತಃ ।**
**ಸೇಚ್ಛಂತೀಂದ್ರಸಮಂ ಪುತ್ರಂ ತೇಪೇಽಥ ಸುಮಹತ್ತಪಃ ॥**

**ಸಾ ಪ್ರಜಾಪತಿತಃ ಕಾಮಾಂಲ್ಲೇಭೇಽಥ ವಿವಿಧಾನ್ವರಾನ್ ।**
**ತಸ್ಯಾಂ ಚೇಂದ್ರಃ ಸ್ವಯಂ ಜಜ್ಞೇ ಜಿಘಾಂಸುರ್ದೈತ್ಯದಾನವಾನ್ ॥**

ಪೂರ್ವದಲ್ಲಿ ಪ್ರಜಾಪತಿಯ ಪುತ್ರಿಯಾದ ಓರ್ವ ಅಸುರಸ್ತ್ರೀ ಇದ್ದಳು. ಅವಳ ಹೆಸರು ವಿಕುಂಠಾ ಎಂದು. ಒಂದಾನೊಂದು ಕಾಲದಲ್ಲಿ ಶೌರ್ಯಪರಾಕ್ರಮಾದಿಗಳಲ್ಲಿ ಇಂದ್ರನಿಗೆ ಸಮನಾದ ಪುತ್ರನು ತನ್ನಲ್ಲಿ ಜನಿಸಬೇಕೆಂಬ ಬಯಕೆಯು ಅವಳಿಗುಂಟಾಯಿತು. ಆದ್ದರಿಂದ ಅವಳು ಬಹಳ ಘೋರವಾದ ತಪಸ್ಸನ್ನು ಮಾಡಿ ಪ್ರಜಾಪತಿಯಿಂದ ತನಗೆ ಬೇಕಾದ ವರಗಳನ್ನು ಪಡೆದಳು. ಇಂದ್ರನು ದೈತ್ಯದಾನವರನ್ನು ಸಂಹಾರಮಾಡಬೇಕೆಂದು ಇಚ್ಛಿಸಿ ಆ ವಿಕುಂಠಾ ಎಂಬ ಸ್ತ್ರೀಯಲ್ಲೇ ಅವಳ ಪುತ್ರನಾಗಿ ಜನಿಸಿದನು.

**ಏಕದಾ ದಾನವೈಃ ಸಾರ್ಧಂ ಸಮರೇ ಸಮಸಜ್ಯತ ।**
**ಜಘಾನ ತೇಷಾಂ ನವತೀರ್ನವ ಸಪ್ತ ಚ ಸಪ್ತಕಾನ್ ॥**

ಭಿತ್ವಾ ಸ್ವಬಾಹುವೀರ್ಯೇಣ ಹೈಮರೌಪ್ಯಾಯಸೀಃ ಪುರೀಃ ।
ಹತ್ವಾ ಸರ್ವಾನ್ಯಥಾಸ್ಥಾನಂ ಪೃಥಿವ್ಯಾದಿವ್ಯವಸ್ಥಿತಾನ್ ॥

ಪೃಥಿವ್ಯಾಂ ಕಾಲಕೇಯೊಂಶ್ಚ ಪೌಲೋಮಾಂಶ್ಚೈವ ಧನ್ವಿನಃ ।
ತಾಂಶ್ಚ ವೃತ್ಸಾದಯಾಮಾಸ ಪ್ರಹ್ಲಾದತನಯಾನ್ದಿವಿ ॥

ಇಂದ್ರನು ಒಂದು ಸಂದರ್ಭದಲ್ಲಿ ದಾನವರೊಡನೆ ಯುದ್ಧಮಾಡುತ್ತಿರುವಾಗ ಅವರ ೯೯ ಮತ್ತು ೭೭ ನಾಯಕರನ್ನು ಸಂಹಾರಮಾಡಿದನು. ಅವರು ಭೂಮಿ, ಅಂತರಿಕ್ಷ, ಸ್ವರ್ಗಗಳಲ್ಲಿ ಚಿನ್ನದಿಂದಲೂ, ಬೆಳ್ಳಿಯಿಂದಲೂ, ಕಬ್ಬಿಣದಿಂದಲೂ ಭದ್ರವಾದ ಕೋಟೆಗಳನ್ನು ಕಟ್ಟಿಕೊಂಡು ಅಲ್ಲಿ ವಾಸಮಾಡುತ್ತಿದ್ದರು. ಇಂದ್ರನು ತನ್ನ ಸ್ವಸಾಮರ್ಥ್ಯದಿಂದಲೇ ಅವುಗಳನ್ನೆಲ್ಲಾ ನಾಶಮಾಡಿ ಭೂಮಿಯ ಮೇಲಿದ್ದ ಕಾಲಕೇಯರು, ಪುಲೋಮವಂಶದವರು ಪ್ರಹ್ಲಾದನ ವಂಶದ ಅಸುರರು ಮೊದಲಾದವರನ್ನು ನಾಶಮಾಡಿದನು.

ರಾಜ್ಯಂ ಪ್ರಾಪ್ಯ ಸ ದೈತ್ಯೇಷು ಸ್ವೇನ ವೀರ್ಯೇಣ ದರ್ಪಿತಃ ।
ದೇವಾನ್ಬಾಧಿತುಮಾರೇಭೇ ಮೋಹಿತೋಽಸುರಮಾಯಯಾ ॥

ಬಾಧ್ಯಮಾನಾಸ್ತು ತೇನಾಪಿ ಅಸುರೇಣಾಮಿತೌಜಸಾ ।
ಉಪಾಧಾವನ್ನೃಷಿಶ್ರೇಷ್ಠಂ ತತ್ಪ್ರಬೋಧಾಯ ಸಪ್ತಗುಂ ॥

ಋಷಿಸ್ತು ಸಪ್ತಗುರ್ನಾಮ ತಸ್ಯಾಸೀತ್ಸುಪ್ರಿಯಃ ಸಖಾ ।
ಸ ಚೈನಮಭಿತುಷ್ಟಾವ ಜಗೃಭ್ಮೇತಿ ಕರೇ ಸ್ಪೃಶನ್ ॥

ಈ ರೀತಿ ದೈತ್ಯರನ್ನು ಸಂಹಾರ ಮಾಡಿದ ವಿಕುಂಠಪುತ್ರನಾದ ಇಂದ್ರನು ಅಸುರಸ್ತ್ರೀಯಲ್ಲಿ ಹುಟ್ಟಿದ ಕಾರಣ ಮೋಹ ಪರವಶನಾಗಿ ತನ್ನ ಶಕ್ತಿಸಾಮರ್ಥ್ಯಗಳಿಂದ ರಾಜ್ಯವನ್ನು ಗಳಿಸಿ ಮೈಮರೆತು ಅಹಂಕಾರದಿಂದ ಕೂಡಿ ದೇವತೆಗಳನ್ನು ಹಿಂಸಿಸುವುದಕ್ಕೆ ಪ್ರಾರಂಭ ಮಾಡಿದನು. ದೈತ್ಯರೂಪನಾದ ಇಂದ್ರನು ತನ್ನ ಅಪಾರವಾದ ಪರಾಕ್ರಮದಿಂದ ಬೀಗಿ ಮೆರೆಯುತ್ತಾ ದೇವತೆಗಳನ್ನು ಹಿಂಸಿಸುತ್ತಾ ಇರುವಾಗ ಅವನ ಹಿಂಸೆಯನ್ನು ಸಹಿಸಲಾರದೆ ದೇವತೆಗಳು ಸಪ್ತಗು ಎಂಬ ಋಷಿಯ ಬಳಿಗೆ ಬಂದು ಅವನ ಮರೆಹೊಕ್ಕರು. ಆ ಋಷಿಯು ಇಂದ್ರನ ಪರಮಪ್ರಿಯ ಸ್ನೇಹಿತನಾಗಿದ್ದನು. ಆಗ ಸಪ್ತಗು ಋಷಿಯು ಇಂದ್ರನ ಕೈಯನ್ನು ತನ್ನ ಕೈಯಿಂದ ಹಿಡಿದುಕೊಂಡು **ಜಗೃಭ್ಮಾ ತೇ** ಎಂಬ ಸೂಕ್ತದಿಂದ (೪೭ ನೇ ಸೂಕ್ತ) ಇಂದ್ರನನ್ನು ಸ್ತುತಿಸಿದನು.

ತತಃ ಸ ಬುಧ್ವಾ ಚಾತ್ಮಾನಂ ಸಪ್ತಗುಸ್ತುತಿಹರ್ಷಿತಃ ।
ಆತ್ಮಾನಮೇವ ತುಷ್ಟಾವ ಅಹಂ ಭುವಮಿತಿ ತ್ರಿಭಿಃ ॥

ಕೀರ್ತಯನ್ ಸ್ವಾನಿ ಕರ್ಮಾಣಿ ಯಾನಿ ಸ್ಮ ಕೃತವಾನ್ಪುರಾ ।
ಯಥಾಕರೋಚ್ಚ ವೈದೇಹಂ ವ್ಯಂಸಂ ಸೋಮಪತಿಂ ನೃಪಂ ॥

ವಸಿಷ್ಠಶಾಪಾದಭವದ್ವೈದೇಹೋ ನೃಪತಿಃ ಪುರಾ ।
ಇಂದ್ರಪ್ರಸಾದಾದೇಜೇ ಚ ಸತ್ರೈಃ ಸಾರಸ್ವತಾದಿಭಿಃ ॥

**ಪ್ರಭೂತಾಂ ಶಕ್ತಿಮತ್ವಾಂ ಚ ಶತ್ರೂಣಾಮುಪ್ಯಪಾಕ್ರಿಯಾಂ ।**
**ನೃಷು ಸರ್ವೇಷು ಚೈಶ್ವರ್ಯಂ ಪ್ರಭುತ್ವಂ ಭುವನೇಷು ಚ ॥**

ಸಪ್ತಗು ಋಷಿಯಿಂದ ಸ್ತುತನಾದ ಇಂದ್ರವೈಕುಂಠನಿಗೆ ತನ್ನ ಪೂರ್ವಸ್ಮರಣೆಯುಂಟಾಗಿ ತಾನು ಯಾರು ಎಂಬ ಅರಿವುಂಟಾಯಿತು. ಅನಂತರ ಆ ವೈಕುಂಠ ಇಂದ್ರನು ತಾನು ಹಿಂದೆ ಮಾಡಿದ ಅನೇಕ ಸಾಹಸಕಾರ್ಯಗಳನ್ನು (೪೮-೫೦) ಅಹಂ ಭುವಂ ಎಂದು ಮೊದಲಾದ ಮೂರು ಸೂಕ್ತಗಳಲ್ಲಿ ಪ್ರಸಂಸೆ ಮಾಡಿಕೊಂಡಿದ್ದಾನೆ. ಹಿಂದೆ ವಿದೇಹ ದೇಶದ ರಾಜನಾದ ವ್ಯಂಸನನ್ನು ವಸಿಷ್ಠರು ಶಾಪದಿಂದ ವಿಮುಕ್ತನನ್ನಾಗಿ ಮಾಡಿದುದನ್ನು ಆ ರಾಜನು ಇಂದ್ರನ ಅನುಗ್ರಹದಿಂದ ಸರಸ್ವತೀನದೀತೀರದಲ್ಲಿ ಸತ್ರಯಾಗವನ್ನು ಮಾಡಿ ಶತ್ರುಗಳನ್ನು ಜಯಿಸಿ ಸಾರ್ವಭೌಮತ್ವವನ್ನು ಸ್ಥಾಪಿಸಿದ ವಿಷಯವೂ ಉಕ್ತವಾಗಿದೆ.

ಸಾಯಣಭಾಷ್ಯಂ

**ಅಹಂ ದಾಮಿತ್ಯೇಕಾದಶರ್ಚಂ ಸಪ್ತಮಂ ಸೂಕ್ತಂ । ವೈಕುಂಠ ಏವರ್ಷಿರ್ದೇವತಾ ಚ । ದ್ವಿತೀಯೈಕಾದಶ್ಯೌ ತ್ರಿಷ್ಟುಭೌ । ಶಿಷ್ಟಾ ಜಗತ್ಯಃ । ಅನುಕ್ರಾಂತಂ ಚ । ಅಹಂ ದಾಮಂತ್ಯೋಪಾದ್ಯೇ ಚೇತಿ ॥ ದ್ವಿತೀಯೇ ರಾತ್ರಿಪರ್ಯಾಯೇ ಮೈತ್ರಾವರುಣಸ್ಯೇದಂ ಸೂಕ್ತಂ । ಸೂತ್ರಿತಂ ಚ। ಅಹಂ ದಾಂ ಪಾತಾ ಸುತಮಿಂದ್ರೋ ಅಸ್ತು ಸೋಮಂ । ಆ-೬-೪ । ಇತಿ ॥**

ಅನುವಾದವು—**ಅಹಂ ದಾಂ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವೈಕುಂಠ ಇಂದ್ರನೇ ಋಷಿಯು ; ದೇವತೆಯೂ ಅವನೇ. ಈ ಸೂಕ್ತದ ಎರಡು ಮತ್ತು ಹನ್ನೊಂದನೆಯ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು ; ಉಳಿದ ಋಕ್ಕುಗಳು ಜಗತೀ ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಅಹಂ ದಾಮಂತ್ಯೋಪಾದ್ಯೇ ಚ** ಎಂದು ಹೇಳಿರುವುದು. ಎರಡನೇ ರಾತ್ರಿ ಪರ್ಯಾಯದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—**ಅಹಂ ದಾಂ ಪಾತಾ ಸುತಮಿಂದ್ರೋ ಅಸ್ತು ಸೋಮಂ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

## ಸೂಕ್ತ—೪೮

ಮಂಡಲ—೧೦ ॥ ಅನುವಾಕ—೪ ॥ ಸೂಕ್ತ—೪೯ ॥
ಅಷ್ಟಕ—೮ ॥ ಅಧ್ಯಾಯ—೧ ॥ ವರ್ಗ—೭, ೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
ಋಷಿಃ—ಇಂದ್ರೋ ವೈಕುಂಠಃ ॥
ದೇವತಾ—ಇಂದ್ರೋ ವೈಕುಂಠಃ ॥
ಛಂದಃ—೧, ೩-೧೦. ಜಗತೀ । ೨, ೧೧. ತ್ರಿಷ್ಟುಪ್ ॥

ಸಂಹಿತಾಪಾಠಃ

**ಅಹಂ ದಾಂ ಗೃಣತೇ ಪೂರ್ವ್ಯಂ ವಸ್ವಹಂ ಬ್ರಹ್ಮ ಕೃಣವಂ ಮಹ್ಯಂ ವರ್ಧನಂ।**

ಅ॒ಹಂ ಭು॑ವಂ॒ ಯಜ॑ಮಾನಸ್ಯ ಚೋ॒ದಿತಾಯ॑ಜ್ವನಃ ಸಾಕ್ಷಿ॒ ವಿಶ್ವ॑ಸ್ಮಿ॒ನ್ಭರೇ॑ ॥

ಪದಪಾಠಃ

ಅ॒ಹಂ । ದಾಂ । ಗೃ॒ಣ॒ತೇ । ಪೂರ್ವ್ಯಂ॑ । ವಸು॑ । ಅ॒ಹಂ । ಬ್ರಹ್ಮ॑ । ಕೃ॒ಣ॒ವಂ॒ । ಮಹ್ಯಂ॑ । ವರ್ಧ॑ನಂ ।

ಅ॒ಹಂ । ಭು॒ವಂ॒ । ಯಜ॑ಮಾನಸ್ಯ । ಚೋ॒ದಿ॒ತಾ । ಅಯ॑ಜ್ವನಃ । ಸಾ॒ಕ್ಷಿ । ವಿಶ್ವ॑ಸ್ಮಿನ್ । ಭರೇ॑ ॥ ೧ ॥

ಸಾಯಣಭಾಷ್ಯಂ

ಅಹಮಿಂದ್ರೋ ಗೃಣತೇ ಸ್ತುವತೇ ಪೂರ್ವ್ಯಂ ಮುಖ್ಯಂ ವಸು ಧನಂ ದಾಂ । ಅದಾಂ । ಅಹಮೇವ ಬ್ರಹ್ಮ ಪರಿವೃಢಂ ಕರ್ಮ ಸ್ತುತಿಲಕ್ಷಣಂ ಮಹ್ಯಂ ವರ್ಧನಂ ಕೃಣವಂ । ಕರೋಮಿ । ಸ್ತೋತುಃ ಸಂಬಂಧಿ ಸ್ತೋತ್ರಂ ತಸ್ಯೈ ಧನಂ ಪ್ರಯಚ್ಛನ್ ಮಹಮ್ಯೇವ ವರ್ಧನಂ ಕರೋಮೀತ್ಯರ್ಥಃ। ತಥಾಹಂ ಯಜಮಾನಸ್ಯ ಮಾಮುದ್ದಿಶ್ಯ ಯಷ್ಟುರ್ಧನಸ್ಯ ಚೋದಿತಾ ಪ್ರೇರಕೋ ಭುವಂ । ಭವಾಮಿ । ಅಯಜ್ವನೋಽಯಷ್ಟುಃ । ಅಯಷ್ಟಾರಮಿತ್ಯರ್ಥಃ । ತಂ ವಿಶ್ವಸ್ಮಿನ್ಭರೇ ಸರ್ವಸ್ಮಿನ್ನಪಿ ಸಂಗ್ರಾಮೇ ಸಾಕ್ಷಿ । ಅಭಿಭವಾಮಿ ॥

ಪ್ರತಿಪದಾರ್ಥ

**ಅಹಂ**—ಇಂದ್ರನಾದ ನಾನು । **ಗೃಣತೇ**—ನನ್ನನ್ನು ಸ್ತೋತ್ರಮಾಡುವ ಪುರುಷನಿಗೆ । **ಪೂರ್ವ್ಯಂ**—ಬಹಳವಾದ । **ವಸು**—ಧನವನ್ನು । **ದಾಂ**—ಕೊಡುತ್ತೇನೆ । **ಅಹಂ**—ನಾನು । **ಬ್ರಹ್ಮ**—ನನ್ನನ್ನು ಸ್ತುತಿಸುವ ಯಜ್ಞಾದಿಕರ್ಮವನ್ನು । **ಮಹ್ಯಂ ವರ್ಧನಂ**—ನನಗೆ ಅಭಿವೃದ್ಧಿಯನ್ನುಂಟುಮಾಡುವಂತೆ । **ಕೃಣವಂ**—ಮಾಡುತ್ತೇನೆ । **ಅಹಂ**—ನಾನು । **ಯಜಮಾನಸ್ಯ**—ನನ್ನನ್ನುದ್ದೇಶಿಸಿ ಯಾಗಮಾಡುವ ಯಜಮಾನನ ಧನಕ್ಕೆ । **ಚೋದಿತಾ**—ಪ್ರೇರಕನಾಗಿ । **ಭುವಂ**—ಆಗಿದ್ದೇನೆ । **ಅಯಜ್ವನಃ**—ನನ್ನನ್ನು ಆರಾಧಿಸದಿರುವವನಿಗೆ । **ವಿಶ್ವಸ್ಮಿನ್ ಭರೇ**—ಸಮಸ್ತವಾದ ಯುದ್ಧಗಳಲ್ಲಿಯೂ । **ಸಾಕ್ಷಿ**—ಸೋಲನ್ನುಂಟುಮಾಡುತ್ತೇನೆ.

ಭಾವಾರ್ಥ

ಇಂದ್ರನಾದ ನಾನು ನನ್ನನ್ನು ಸ್ತೋತ್ರಮಾಡುವ ಪುರುಷನಿಗೆ ಬಹುಮುಖ್ಯವಾದ ಅಥವಾ ಬಹಳವಾದ ಧನವನ್ನು ಕೊಡುತ್ತೇನೆ; ನನ್ನನ್ನು ಸ್ತುತಿಸುವ ಯಜ್ಞಾದಿಕರ್ಮವು ನನಗೆ ಅಭಿವೃದ್ಧಿಯನ್ನುಂಟುಮಾಡುವಂತೆ ಎಂದರೆ ಪ್ರಶಸ್ತವಾಗಿರುವಂತೆ ಮಾಡುತ್ತೇನೆ; ನನ್ನನ್ನುದ್ದೇಶಿಸಿ ಯಾಗಮಾಡುವ ಯಜಮಾನನ ಧನವನ್ನು ಅಭಿವೃದ್ಧಿಯಾಗುವಂತೆ ಪ್ರೇರಿಸುತ್ತೇನೆ. ನನ್ನನ್ನು ಆರಾಧಿಸದಿರುವ ಪುರುಷನಿಗೆ ಸಮಸ್ತ ಯುದ್ಧಗಳಲ್ಲಿಯೂ ಸೋಲಾಗುವಂತೆ ಮಾಡುತ್ತೇನೆ.

English Translation

I give excellent treasure to him who praise me, I render sacred prayer (a source) of greatness to myself, I am the instigator of the

worshipper : I am the discomfiter in every battle of him who does not worship

ಸಂಹಿತಾಪಾಠಃ

ಮಾಂ ಧುರಿಂದ್ರಂ ನಾಮ ದೇವತಾ ದಿವಶ್ಚ ಗ್ಮಶ್ಚಾಪಾಂ ಚ ಜಂತವಃ ।
ಅಹಂ ಹರೀ ವೃಷಣಾ ವಿವ್ರತಾ ರಘೂ ಅಹಂ ವಜ್ರಂ ಶವಸೇ ಧೃಷ್ಣ್ವಾ ದದೇ॥

ಪದಪಾಠಃ

ಮಾಂ । ಧುಃ । ಇಂದ್ರಂ । ನಾಮ । ದೇವತಾ । ದಿವಃ । ಚ । ಗ್ಮಃ । ಚ । ಅಪಾಂ । ಚ । ಜಂತವಃ ॥
ಅಹಂ । ಹರೀ ಇತಿ । ವೃಷಣಾ । ವಿऽವ್ರತಾ । ರಘೂ ಇತಿ । ಅಹಂ । ವಜ್ರಂ । ಶವಸೇ । ಧೃಷ್ಣು । ಆ । ದದೇ ॥ ೨ ॥

ಸಾಯಣಭಾಷ್ಯಂ

ಇಂದ್ರಂ ನಾಮಂದ್ರನಾಮಾನಂ ಮಾ ದೇವತಾ ದೇವಾನಾಂ ಮಧ್ಯೇ ದಿವೋ ದ್ಯುಲೋಕಸ್ಯ । ಗ್ಮಾ ಪೃಥಿವ್ಯಾಃ ಪೋऽಂತರಿಕ್ಷಂ । ಏತೇಷು ಲೋಕೇಷು ಜಂತವೋ ಜಾತಾ ಮಾ ಮಾಮೇವ ಧುಃ । ದಧುಃ । ಧಾರಯಂತಿ । ಹವಿರ್ಭಿಃ ಸ್ತುತಿಭಿಶ್ಚ । ಅಹಂ ಯಜ್ಞಗಮನಾಯ ಸಂಗ್ರಾಮಗಮನಾಯ ವಾ ಹರೀ ಹರಿತವರ್ಣೌ ವೃಷಣಾ ಪುಂಸ್ತ್ವೋಪೇತೌ ವಿವ್ರತಾ ವಿವಿಧಕರ್ಮಾಣೌ ರಘೂ ಲಘೂ ಶೀಘ್ರಗತೀ ಅಶ್ವೌ ನಿಯೋಜಯಾಮಿ ರಥೇ । ತಥಾಹಂ ಧೃಷ್ಣು ಧರ್ಷಕಂ ವಜ್ರಮಾಯುಧಂ ಶವಸೇ ಬಲಾಯಾ ದದೇ । ಸ್ವೀಕರೋಮಿ ॥

ಪ್ರತಿಪದಾರ್ಥ

**ಇಂದ್ರಂ ನಾಮ**—ಇಂದ್ರನೆಂಬ ಹೆಸರಿನ। **ಮಾಂ**—ನನ್ನನ್ನು। **ದೇವತಾ**—ದೇವತೆಗಳ ಮಧ್ಯದಲ್ಲಿ ಯಾರು। **ದಿವಃ ಚ**—ಸ್ವರ್ಗಲೋಕವಾಸಿಗಳಾಗಿಯೂ । **ಗ್ಮಃ ಚ**—ಭೂಲೋಕದಲ್ಲಿರುವವರಾಗಿಯೂ । **ಅಪಾಂ**—ಅಂತರಿಕ್ಷಸಂಚಾರಿಗಳಾದವರಾಗಿಯೂ । **ಜಂತವಃ**—ಉತ್ಪನ್ನರಾಗಿರುವರೋ ಅವರೆಲ್ಲರೂ । **ಮಾಂ**—ನನ್ನನ್ನೇ ! **ಧುಃ**—ಹವಿರಾದಿಗಳಿಂದಲೂ, ಸ್ತೋತ್ರಗಳಿಂದಲೂ ಧರಿಸಿ ಪೋಷಿಸುತ್ತಾರೆ। **ಅಹಂ**—ನಾನು ಯಜ್ಞಕ್ಕೆ ಅಥವಾ ಯುದ್ಧಕ್ಕೆ ಹೋಗುವಾಗ । **ಹರೀ**—ಹರಿತವರ್ಣವೂ ! **ವೃಷಣಾ**—ಯೌವನೋಪೇತವೂ । **ವಿವ್ರತಾ**—ವಿವಿಧಕರ್ಮಗಳಿಂದ ಪ್ರಸಿದ್ಧವಾದವೂ । **ರಘೂ**—ಶೀಘ್ರಗಮನವುಳ್ಳವೂ ಆದ ನನ್ನ ಎರಡು ಅಶ್ವಗಳನ್ನು ರಥಕ್ಕೆ ಹೂಡುತ್ತೇನೆ (ಹಾಗೆಯೇ) । **ಅಹಂ**—ನಾನು। **ಧೃಷ್ಣು**—ಧರ್ಷಕವಾದ। **ವಜ್ರಂ**—ವಜ್ರಾಯುಧವನ್ನು । **ಶವಸೇ**—ಯುದ್ಧದಲ್ಲಿ ಬಲಪ್ರಯೋಗಕ್ಕಾಗಿ । **ಆ ದದೇ**—ಸ್ವೀಕರಿಸುತ್ತೇನೆ.

ಭಾವಾರ್ಥ

ದೇವತೆಗಳ ಮಧ್ಯದಲ್ಲಿ ಸ್ವರ್ಗಲೋಕದಲ್ಲಿ ಯಾರು ಉತ್ಪನ್ನರಾಗಿರುವರೋ ಹಾಗೆಯೇ ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ ಯಾವ ದೇವತೆಗಳಿರುವರೋ ಅವರೆಲ್ಲರೂ ನನ್ನನ್ನು ಹವಿರಾದಿಗಳಿಂದಲೂ, ಸ್ತೋತ್ರಗಳಿಂದಲೂ

ಆರಾಧಿಸಿ ನನ್ನನ್ನು ಪೋಷಿಸುತ್ತಾರೆ. ಹರಿತವರ್ಣದವೂ, ಯೌವನೋಪೇತವೂ, ವಿವಿಧ ಕರ್ಮಗಳನ್ನು ಮಾಡಿ ಪ್ರಸಿದ್ಧಿಯನ್ನು ಹೊಂದಿರುವವೂ, ಶೀಘ್ರಗತಿಯುಳ್ಳವೂ ಆದ ನನ್ನ ಎರಡು ಕುದುರೆಗಳನ್ನು ನನ್ನ ರಥಕ್ಕೆ ಹೂಡುತ್ತೇನೆ ಮತ್ತು ಯುದ್ಧದಲ್ಲಿ ಶತ್ರುಗಳನ್ನು ಬಲಪ್ರಯೋಗದಿಂದ ಜಯಿಸಲು ನಾನು ನನ್ನ ವಜ್ರಾಯುಧವನ್ನು ಸ್ವೀಕರಿಸುತ್ತೇನೆ.

## English Translation

Those born in heaven, in earth, aad in the firmament, support me, whose name is Indra amongst the deities (by their offerings). I (harness to my car) two bay steeds vigorous, many functioned, rapid : I wield for my strength the fearful thunder-bolt.

ಸಂಹಿತಾಪಾಠಃ

ಅಹಮತ್ಕಂ ಕವಯೇ ಶಿಶ್ನಥಂ ಹಥೈರಹಂ ಕುತ್ಸಮಾವಮಾಭಿರೂತಿಭಿಃ ।
ಅಹಂ ಶುಷ್ಣಸ್ಯ ಶ್ನಥಿತಾ ವಧರ್ಯಮಂ ನ ಯೋ ರರ ಆರ್ಯಂ ನಾಮ ದಸ್ಯವೇ ॥ ೩ ॥

ಪದಪಾಠಃ

ಅಹಂ । ಅತ್ಕಂ । ಕವಯೇ । ಶಿಶ್ನಥಂ । ಹಥೈಃ । ಅಹಂ । ಕುತ್ಸಂ । ಆವಂ । ಆಭಿಃ । ಊತಿಽಭಿಃ ॥
ಅಹಂ । ಶುಷ್ಣಸ್ಯ । ಶ್ನಥಿತಾ । ವಧಃ । ಯಮಂ । ನ । ಯಃ । ರರೇ । ಆರ್ಯಂ । ನಾಮ । ದಸ್ಯವೇ ॥

ಸಾಯಣಭಾಷ್ಯಂ

ಅಹಮಿಂದ್ರೋಽತ್ಕಮಾಚ್ಛಾದಕಂ ಶತ್ರುಪುತ್ರಂ ಕವಯ ಉಶನಸ ಋಷಯೇ ತಸ್ಯ ಸುಖಾರ್ಥಂ ಹಥೈರ್ಬಹುಪ್ರಕಾರೈಃ ಪ್ರಹಾರೈಸ್ತತ್ಸಾಧನೈರಾಯುಧೈರ್ವಾ ಶಿಶ್ನಥಂ । ತಾಡಿತವಾನಸ್ಮಿ । ಶ್ನಥತಿರ್ವಧಕರ್ಮಾ । ಕಿಂಚಾಹಂ ಕುತ್ಸನೇತನ್ನಾಮಕಮೃಷಿಮಾಭಿರೂತಿಭಿರ್ವಧಾದಿರೂಪೈಃ । ಕುತ್ಸಾಯ ಶುಷ್ಣಮಶುಷಂ ನಿ ಬರ್ಹೀಃ । ಋ. ೪-೧೬-೧೨ । ಇತ್ಯಾದಿ ಮಂತ್ರಾಂತರಂ । ರಕ್ಷಣೈರಾವಂ । ಅರಕ್ಷಂ । ಪೂರ್ವಮೇವ ಕೃತಾನ್ಯಪಿ ರಕ್ಷಣಾನೀದಾನೀಮಿವ ಕೃತಾನೀತ್ಯನುವದತಿ । ಕುತ್ಸಾರ್ಥಂ ಶುಷ್ಣಸ್ಯೈತನ್ನಾಮಕಸ್ಯಾಸುರಸ್ಯ ಶ್ನಥಿತಾ ಹಿಂಸಿತಾ । ತಸ್ಯ ಹನನಾಯೇತ್ಯರ್ಥಃ । ವಧರ್ವಜ್ರಂ ಯಮಂ । ಪ್ರಹರಣಾಯ ನಿಯಮಿತವಾನಸ್ಮಿ । ಅಪಿ ಚಾಹಮಾರ್ಯಮಾರ್ಯಸಂಬಂಧಿ । ಆರ್ಯಾಣಾಂ ದೇಯಮಿತ್ಯರ್ಥಃ । ತಾದೃಶಂ ನಾಮ । ಉದಕನಾಮೈತತ್ । ನಾಮಕಮುದಕಂ ದಸ್ಯವೇ ಶತ್ರವ ಉಪಕ್ಷಪಯಿತ್ರೇ ನ ರರೇ । ನ ದತ್ತವಾನಸ್ಮಿ । ಯದ್ವಾ । ಆರ್ಯಂ ಪೂಜ್ಯಮಿತ್ಯಸಾಧಾರಣಂ ನಾಮ ದಸ್ಯವೇ ನ ದತ್ತವಾನಸ್ಮಿ । ಅತ್ರೇಂದ್ರಸ್ಯಾತ್ಮಸ್ತುತೌ ಕುತ್ಸರಕ್ಷಣಶುಷ್ಣವಧಾದಿಕಂ ಆವಃ ಕುತ್ಸಮಿಂದ್ರ

ಯಸ್ಮಿಞ್ಛಾಕನ್ । ಋ-೧-೩೩ ೧೪ । ಶುಷ್ಣಂ ಪಿಪ್ರುಂ ಕುಯವಂ ವೃತ್ರಮಿಂದ್ರ । ಋ-೧-೧೦೩-೮ । ಇತ್ಯಾದಿಷು ಬಹುಧಾ ಪ್ರಪಂಚಿತಂ । ಅತೋಽತ್ರ ಗ್ರಂಥವಿಸ್ತರಭಯಾನ್ನ ಲಿಖ್ಯತೇ ॥

ಪ್ರತಿಪದಾರ್ಥ

**ಅಹಂ**—ನಾನು (ಇಂದ್ರನು) । **ಅತ್ಕಂ**—ಯುದ್ಧದಲ್ಲಿ ಮುತ್ತಿರುವ ಶತ್ರುಪುತ್ರನಾದ ಅತ್ಕನೆಂಬುವನನ್ನು । **ಕವಯೇ**—ಉಶನಾಃ ಎಂಬ ಋಷಿಯ ವಾಸಗೃಹವನ್ನು ರಕ್ಷಿಸುವುದಕ್ಕಾಗಿ । **ಹಥೈಃ**—ಹನನಸಾಧನವಾದ ನಾನಾ ಆಯುಧಗಳಿಂದ ಅಥವಾ ಪ್ರಹಾರಗಳಿಂದ । **ಶಿಶ್ನಥಂ**—ಹೊಡೆದಿದ್ದೇನೆ ಅಥವಾ ಸಂಹರಿಸಿದ್ದೇನೆ । **ಅಹಂ**—ನಾನು । **ಅಭಿಃ ಊತಿಭಿಃ**—ಶತ್ರುಸಂಹಾರರೂಪವಾದ ರಕ್ಷಣೆಗಳಿಂದ । **ಕುತ್ಸಂ**—ಕುತ್ಸನೆಂಬ ಋಷಿಯನ್ನು । **ಆವಂ**—ರಕ್ಷಿಸಿದ್ದೇನೆ । **ಅಹಂ**—ನಾನು । **ಶುಷ್ಣಸ್ಯ**—ಶುಷ್ಣನೆಂಬ ಅಸುರನ । **ಶ್ನಥಿತಾ**—ಸಂಹಾರಕನಾಗಿದ್ದೇನೆ । **ಅಹಂ**—ನಾನು । **ವಧಃ**—ವಜ್ರಾಯುಧವನ್ನು । **ಯಮಂ**—ಧರಿಸಿದ್ದೇನೆ ! (**ಅಹಂ**—ನಾನು) । **ಆರ್ಯಂ**—ಆರ್ಯರಿಗೆ ಸಂಬಂಧಿಸಿದ । **ನಾಮ**—ವೃಷ್ಟ್ಯುದಕವನ್ನು । **ದಸ್ಯವೇ**—ಶತ್ರುಜನರಿಗೆ । **ನ ರರೇ**—ಕೊಡುವುದಿಲ್ಲ.

ಭಾವಾರ್ಥ

ಇಂದ್ರನಾದ ನಾನು ಉಶನಾಃ ಎಂಬ ಋಷಿಯ ವಾಸಸ್ಥಾನವನ್ನು ರಕ್ಷಿಸುವುದಕ್ಕಾಗಿ ಅದನ್ನು ಮುತ್ತಿದ್ದ ಅತ್ಕನೆಂಬ ಶತ್ರುವನ್ನು ನಾನಾವಿಧ ಆಯುಧಗಳಿಂದ ಪ್ರಹರಿಸಿ ಕೊಂದಿದೇನೆ, ನನ್ನ ಶತ್ರುಸಂಹಾರಕವಾದ ರಕ್ಷಣೆಗಳಿಂದ ಕುತ್ಸನೆಂಬ ಋಷಿಯನ್ನು ರಕ್ಷಿಸಿದ್ದೇನೆ. ಶುಷ್ಣನೆಂಬ ಅಸುರನನ್ನು ಸಂಹರಿಸಿದ್ದೇರೆ. ಕೈಯಲ್ಲಿ ಶತ್ರುವಧಾರ್ಥವಾಗಿ ವಜ್ರಾಯುಧವನ್ನು ಹಿಡಿದಿದ್ದೇನೆ. ಆರ್ಯರಿಗೆ ನಾನು ಅನುಗ್ರಹಿಸಿ ಕೊಡುವ ವೃಷ್ಟ್ಯುದಕವನ್ನು ಶತ್ರುಗಳಾದ ದಸ್ಯುಜನರಿಗೆ ಕೊಡುವುದಿಲ್ಲ.

## English Translation

I smote Atka with many weapons for the defence of the sage : with those protections I preserved Kutsa; I am the player of Shushna : I grasped the thunderbolt, I who have not given the water of the Aryas to the Dasyu.

ವಿಶೇಷವಿಷಯಗಳು

**ಕವಯೇ**—ಇಲ್ಲಿ ಕವಿಶಬ್ದದ ಪ್ರಯೋಗವಿದ್ದರೂ ಇವನ ಪುತ್ರನಾದ ಉಶನಾಃ ಎಂಬ ಋಷಿಯ ವಿಷಯವನ್ನೇ ಇಲ್ಲಿ ಪ್ರಸ್ತಾಪಿಸಲಾಗಿದೆ. ಈ ಋಷಿಯ ಹೆಸರು ಋಗ್ವೇದದಲ್ಲಿ ೧-೫೦-೧೦ ; ೧-೮೩-೫ ; ೧-೧೨೧-೧೨ ; ೪-೧೬-೨ ; ೪-೨೬-೧; ೬-೨೦-೧೧; ೮-೨೩-೧೭; ೯-೮೭-೩; ೯-೯೭-೭; ೧೦-೪೦-೭; ೧-೧೩೦-೯; ೫-೩೧-೮; ೫-೩೪-೨; ೮-೭-೨೬: ೧೦-೨೨-೬ ಎಂಬ ಋಕ್ಕುಗಳಿಗೆ ಪಠಿತವಾಗಿದೆ. ಇದಲ್ಲದೆ ತೈತ್ತಿರೀಯಸಂಹಿತೆಯಲ್ಲಿ—

> **ಅಗ್ನಿರ್ದೇವಾನಾಂ ದೂತ ಆಸೀದುಶನಾ ಕಾವ್ಯೋಽಸುರಾಣಾಂ ತೌ ಪ್ರಜಾಪತಿಂ ಪ್ರಶ್ನಮೈ-ತಾಗ್ಂ ಸ ಪ್ರಜಾಪತಿರಗ್ನಿಂ ದೂತಂ ವೃಣೀಮಹ ಇತ್ಯಭಿಪರ್ಯಾವರ್ತತೆ ತತೋ ದೇವಾ ಅಭವನ್ಪರಾಸುರಾಃ ॥**

ಪೂರ್ವದಲ್ಲಿ ಯಜ್ಞಮಾಡುವ ಯಜಮಾನರು ಯಜ್ಞಾದಿಗಳಲ್ಲಿ ಅರ್ಪಿಸುವ ಹವಿರಾದಿಗಳನ್ನು ಉದ್ದಿಷ್ಟದೇವತೆಗಳಿಗೆ ಒಯ್ಯಲು ಅಗ್ನಿಯು ದೇವತೆಗಳ ದೂತನಾಗಿದ್ದನು. ಇದೇ ರೀತಿ ಅಸುರರ ವಿಷಯದಲ್ಲಿ ಕವಿಪುತ್ರನಾದ ಉಶನಾಃ ಎಂಬುವನು ದೂತನಾಗಿದ್ದನು. ಹೀಗಿರುವಲ್ಲಿ ಅಗ್ನಿ ಮತ್ತು ಉಶನಾಃ ಎಂಬಿಬ್ಬರೂ ಪ್ರಜಾಪತಿಯ ಬಳಿಗೆ ಹೋಗಿ ನಮ್ಮಿಬ್ಬರಲ್ಲಿ ಯಾರು ದೂತಕಾರ್ಯವನ್ನು ವಹಿಸಲು ಸಮರ್ಥರು ಎಂದು ಕೇಳಲಾಗಿ, ಪ್ರಜಾಪತಿಯು **ಅಗ್ನಿಂ ದೂತಂ ವೃಣೀಮಹೇ** ನಾವು ಅಗ್ನಿಯನ್ನೇ ದೂತನನ್ನಾಗಿ ಆರಿಸಿಕೊಳ್ಳುತ್ತೇವೆ ಎಂದು ಹೇಳಿದನು. ಆದ್ದರಿಂದ ಅಗ್ನಿಯ ಹವಿರ್ವಹನದಿಂದ ತುಷ್ಟರಾದ ದೇವತೆಗಳು ಎಲ್ಲಾ ಯುದ್ಧಗಳಲ್ಲಿಯೂ ಜಯಶಾಲಿಗಳಾದರು, ಅಸುರರು ಪರಾಜಿತರಾದರು ಎಂದು ಹೇಳಿದೆ.

ಈ ಋಷಿಯ ವಿಷಯವು ಅಥರ್ವವೇದ ೪-೨೯-೬; ಪಂಚವಿಂಶಬ್ರಾಹ್ಮಣ ೭-೫-೨೦; ೧೪-೧೨-೫; ಜೈಮಿನೀಯ ಉಪನಿಷದ್ಬ್ರಾಹ್ಮಣ ೨-೭-೨-೬; ಸಾಂಖ್ಯಾಯನಶ್ರೌತಸೂತ್ರ ೧೪-೨೭-೧ ಇತ್ಯಾದಿ ಸ್ಥಳಗಳಲ್ಲಿ ಸೂಚಿತವಾಗಿದೆ.

**ಅತ್ಕಂ**— ಈ ಶಬ್ದವು ಋಗ್ವೇದಸಂಹಿತೆಯ ೧೦-೪೯-೩ ಮತ್ತು ೧೦-೯೯-೯ ನೆಯ ಋಕ್ಕುಗಳಲ್ಲಿ ಮಾತ್ರ ಪಠಿತವಾಗಿದೆ. ಇದಕ್ಕೆ ಸಾಯಣರು ಈ ಹೆಸರಿನ ಶತ್ರುಪುತ್ರನಾದ ಅತ್ಕನೆಂಬ ಹೆಸರಿನವನು ಎಂದರ್ಥವಿವರಣೆ ಮಾಡಿದಾರೆ. ಇದನ್ನು ಪಾಶ್ಚಾತ್ಯಪಂಡಿತರಾದ Roth, Grassmann, Ludwig, ಎಂಬ ಪಂಡಿತರು ಸಮರ್ಥನೆ ಮಾಡಿದಾರೆ. ಆದರೆ Zimmer ಎಂಬ ಪಂಡಿತನು ಅತ್ಕವೆಂದರೆ ಯುದ್ಧಾದಿಗಳಲ್ಲಿ ಯೋಧರು ಉಪಯೋಗಿಸುವ ಲೋಹದ ಕವಚವೆಂದೂ Pischel ಎಂಬ ಪಂಡಿತನು ಕೊಡಲಿಯೆಂದೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದಾರೆ.

**ಕುತ್ಸಂ**— ಕುತ್ಸನ ವಿಷಯದಲ್ಲಿ ಸಾಯಣರು ಋ. ಸಂ. ೪-೧೬-೧೦ ನೇ ಋಕ್ಕಿನ ಭಾಷ್ಯದಲ್ಲಿ ಒಂದು ಉಪಾಖ್ಯಾನವನ್ನು ಹೇಳಿದಾರೆ—

> **ರುರುನಾಮಕಃ ಕಶ್ಚಿದ್ರಾಜರ್ಷಿಃ । ತಸ್ಯ ಪುತ್ರಃ ಕುತ್ಸಾಖ್ಯೋ ರಾಜರ್ಷಿರಾಸೀತ್ । ಸ ಚ ಕದಾಚಿತ್ ಶತ್ರುಭಿಃ ಸಹ ಯುಯುತ್ಸುಃ ಸಂಗ್ರಾಮೇ ಸ್ವಯಮಶಕ್ತಃ ಸನ್ ಶತ್ರೂಣಾಂ ಹನನಾರ್ಥಮಿಂದ್ರಸ್ಯ ಆಹ್ವಾನಂ ಚಕಾರ । ಸ ಚೇಂದ್ರಃ ಕುತ್ಸಸ್ಯ ಗೃಹಮಾಗತ್ಯ ತಸ್ಯ ಶತ್ರೂನ್ ಜಘಾನ । ತದನಂತರಮತಿಪ್ರೀತ್ಯಾ ತಯೋಃ ಸಖ್ಯಮಭವತ್ । ಸಂಖ್ಯಾನಂತರಮಿಂದ್ರ ಏನಮಪಿ ಸ್ವಕೀಯಂ ಗೃಹಂ ಪ್ರಾಪಯಾಮಾಸ । ತಸ್ಯ ಶಚೀ ಇಂದ್ರಂ ಪ್ರಾಪ್ತುಮಾಗತಾ ಸತೀ ತೌ ಸಮಾನರೂಪೌ ದೃಷ್ಟ್ವಾ ಅಯಮಿಂದ್ರೋಽಯಂ ಕುತ್ಸ ಇತಿ ವಿವೇಕಾಭಾವೇನ ಸಂಶಯಂ ಚಕಾರ । ಅನಯಾಖ್ಯಾಯಿಕಯಾ ಪ್ರತೀಯಮಾನೋಽರ್ಥೋಽತ್ರ ಪ್ರತಿಪಾದ್ಯತೇ ॥**
>
> (ಸಾ. ಭಾ. ೪-೧೬-೧೦)

ಪೂರ್ವದಲ್ಲಿ ರುರು ಎಂಬ ಒಬ್ಬ ರಾಜರ್ಷಿ ಇದ್ದನು. ಅವನಿಗೆ ಕುತ್ಸನೆಂಬ ಪುತ್ರನಿದ್ದನು. ಅವನು ಒಂದಾನೊಂದು ಕಾಲದಲ್ಲಿ ಶತ್ರುಗಳೊಡನೆ ಯುದ್ಧಮಾಡಬೇಕಾಗಿ ಬಂದಿತು. ಶತ್ರುಗಳು ಬಹಳ ಬಲಿಷ್ಠರಾಗಿದ್ದುದರಿಂದ ತಾನೊಬ್ಬನೇ ಅವರನ್ನು ಎದುರಿಸಿ ಗೆಲ್ಲಲಾರದೆ ಇಂದ್ರನ ಸಹಾಯವನ್ನಪೇಕ್ಷಿಸಿ ಅವನನ್ನು ಆಹ್ವಾನಿಸಿದನು. ಆಗ ಇಂದ್ರನು ಕುತ್ಸನ ಮನೆಗೆ ಬಂದು ಅವನ ಶತ್ರುಗಳನ್ನು ಸಂಹರಿಸಿದನು. ಇದರಿಂದ ಕುತ್ಸನಿಗೂ ಇಂದ್ರನಿಗೂ ಪರಸ್ಪರಸ್ನೇಹವುಂಟಾಯಿತು.

ಅನಂತರ ಇಂದ್ರನು ಕುತ್ಸನನ್ನು ತನ್ನ ಮನೆಗೆ ಕರೆದುಕೊಂಡುಹೋದನು, ಮನೆಯ ಬಾಗಿಲಿನಲ್ಲಿ ಇಂದ್ರಪತ್ನಿಯಾದ ಶಚೀದೇವಿಯು ಇಂದ್ರನನ್ನು ಸ್ವಾಗತಿಸುವುದಕ್ಕಾಗಿ ಬಂದು ನೋಡುವಲ್ಲಿ ಇಂದ್ರನಂತೆಯೇ ಸಮಾನರೂಪವುಳ್ಳ ಈರ್ವರು ಪುರುಷರಿರುವುದನ್ನು ಕಂಡು ಇವರಲ್ಲಿ ಇಂದ್ರನು ಯಾರು, ಕುತ್ಸನು ಯಾರು ಎಂದು ಗುರುತಿಸಲು ತಿಳಿಯದೆ ಸಂಶಯವನ್ನು ವ್ಯಕ್ತಪಡಿಸಿದಳು. ಈ ವಿಷಯವನ್ನೇ ಈ ಋಕ್ಕಿನಲ್ಲಿ ಸೂಚಿಸಲಾಗಿದೆ.

ಇಲ್ಲಿ ಕುತ್ಸಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಬಹುದೆಂದು ಸಾಯಣರ ವಿವರಣೆಯು ತಿಳಿಸುತ್ತದೆ. ಮೊದಲನೆಯದಾಗಿ **ಕುತ್ಸಂ ಕರ್ತನಸಾಧನಂ** ಕತ್ತರಿಸುವ ಸಾಧನವಾದ ವಜ್ರಾಯುಧಕ್ಕೆ ವಿಶೇಷಣವಾಗಿಯೂ, ಎರಡನೆಯದಾಗಿ— **ಕುತ್ಸಂ ಕುತ್ಸನಾಮಾನಮೃಷಿಂ** ಕುತ್ಸನೆಂಬ ಹೆಸರಿನ ಋಷಿಯೆಂದೂ ವಿವರಿಸಿದ್ದಾರೆ. ಋಷಿಯೆಂದರ್ಥಮಾಡಿದರೆ, ಶುಷ್ಣನೆಂಬ ಅಸುರನನ್ನು ಕೊಂದು ಕುತ್ಸನಿಗೆ ಸಹಾಯ ಮಾಡಿದನೆಂದು ಇಂದ್ರನ ಪ್ರಶಂಸೆಯಾಗುತ್ತದೆ. ಪ್ರಕೃತ ಋಕ್ಕಿನಲ್ಲಿ ಇದೇ ಅರ್ಥವಿವರಣೆ ಇದೆ.

ಕುತ್ಸನಿಗೂ ಇಂದ್ರನಿಗೂ ಇರತಕ್ಕ ಸ್ನೇಹಸಂಬಂಧವು ಅತ್ಯಂತ ನಿಕಟವಾದುದೆಂದು ಋಕ್ಸಂಹಿತೆಯಲ್ಲಿರುವ ವರ್ಣನೆಗಳಿಂದ ತಿಳಿದುಬರುತ್ತದೆ. ಕುತ್ಸನಿಗೆ ಆರ್ಜುನೇಯ ಎಂಬ ವಿಶೇಷಣವು ಅನೇಕ ಕಡೆಗಳಲ್ಲಿರುತ್ತದೆ. **ಆರ್ಜುನೇಯ** ಎಂಬ ಪದಕ್ಕೆ **ಅರ್ಜುನೀ** ಎಂಬ ಸ್ತ್ರೀಯ ಪುತ್ರನೆಂದಾಗಬಹುದು ಅಥವಾ **ಅರ್ಜುನ ಇತೀಂದ್ರಸ್ಯ ನಾಮ ತಸ್ಯ ಪುತ್ರಃ** ಇಂದ್ರನಿಗೆ ಅರ್ಜುನನೆಂದು ಹೆಸರು. ಕುತ್ಸನು ಇವನ ಪುತ್ರನಾದುದರಿಂದ ಆರ್ಜುನೇಯನೆಂಬ ವಿಶೇಷಣವು ಸಹಜವಾಗಿದೆ ಎಂದು ಇನ್ನೊಂದು ವಿಧವಾಗಿ ಅರ್ಥವನ್ನು ಹೇಳಬಹುದು. ಇಂದ್ರನಿಗೆ ಅರ್ಜುನ ಎಂಬ ಹೆಸರುಂಟು ಎಂದು ಸಮರ್ಥಿಸಲು ಸಾಯಣರು ಕೆಲವೆಡೆಗಳಲ್ಲಿ—

**ಏತದ್ವಾ ಇಂದ್ರಸ್ಯ ಗುಹ್ಯಂ ನಾಮ ಯದರ್ಜುನಃ ।**

ಎಂಬ ವಾಜಸನೇಯಸಂಹಿತಾಮಂತ್ರವನ್ನುದಾಹರಿಸಿದ್ದಾರೆ. ಆದರೆ,

**ಅಹಂ ಕುತ್ಸಮಾರ್ಜುನೇಯಂ ನ್ಯೃಂಜೇಽಹಂ ಕವಿರುಶನಾ ಪಶ್ಯತಾ ಮಾ ।**
(ಋ. ಸಂ. ೪–೨೬–೧)

**ದಾಸಂ ಯಚ್ಛುಷ್ಣಂ ಕುಯವಂ ನ್ಯಸ್ಮಾ ಅರಂಧಯ ಆರ್ಜುನೇಯಾಯ ಶಿಕ್ಷನ್ ।**
(ಋ. ಸಂ. ೭–೧೯–೨)

**ವಹತ್ಕುತ್ಸಮಾರ್ಜುನೇಯಂ ಶತಕ್ರತುಃ ತ್ಸರದ್ಗಂಧರ್ವಮಸ್ತೃತಂ ।**
(ಋ. ಸಂ. ೮–೧–೧೧)

ಎಂಬ ಋಕ್ಕುಗಳಲ್ಲಿ ಇರತಕ್ಕ ಆರ್ಜುನೇಯ ಪದಗಳಿಗೆಲ್ಲಾ ಸಾಯಣರೂ ಸಹ **ಅರ್ಜುನ್ಯಾಃ ಪುತ್ರಂ ಕುತ್ಸಂ ।** ಅರ್ಜುನೀ ಎಂಬ ಸ್ತ್ರೀಯ ಪುತ್ರನಾದ ಕುತ್ಸನೆಂದೇ ಅರ್ಥಮಾಡಿದ್ದಾರೆ. **ಅರ್ಜುನ, ಅರ್ಜುನೀ** ಎಂಬ ಪದಗಳು ಇಂದ್ರಸಂಬಂಧವಾದವು ಎಂದು ಶ್ರುತ್ಯಂತರಗಳಲ್ಲಿ ಹೇಳಿರುವುದರಿಂದ ಮೇಲಿನ ಎರಡು ವಿಧವಾದ ವಿವರಣೆಗಳೂ ಒಂದೇ ಅರ್ಥವನ್ನು ಕೊಡುವುವು ಎಂದು ಹೇಳಬಹುದು. ಉದಾಹರಣೆಗೆ—

**ಫಲ್ಗುನೀಷ್ವಗ್ನೀ ಆದಧೀತ । ಏತಾ ವಾ ಇಂದ್ರನಕ್ಷತ್ರಂ ಯತ್ಫಲ್ಗುನ್ಯೋಽಪ್ಯಸ್ಯ ಪ್ರತಿನಾಮ್ನ್ಯೋಽಪ್ಯರ್ಜುನೋ ಹ ವೈ ನಾಮೇಂದ್ರೋ ಯದಸ್ಯ ಗುಹ್ಯಂ ನಾಮಾರ್ಜನ್ಯೋ ವೈ**

**ನಾನ್ಯೈತಾಸ್ತಾ ಏತತ್ಪರೋಕ್ಷಮಾಚಕ್ಷತೇ ಫಲ್ಗುನ್ಯ ಇತಿ ಕೋ ಹ್ಯೇತಸ್ಯಾರ್ಹತಿ ಗುಹ್ಯಂ ನಾಮ ॥**

(ಶ. ಬ್ರಾ. ೨-೧-೨-೧೧)

**ಇಂದ್ರೋ ಭವತಿ ಯಚ್ಚ ಕ್ಷತ್ರಿಯೋ ಯದು ಚ ಯಜಮಾನಸ್ತಸ್ಮಾದಾಹಾರಿಷ್ಯೋಽರ್ಜುನ ಇತಿ ॥**

(ಶ. ಬ್ರಾ. ೫-೪-೩-೭)

ಫಲ್ಗುನಿಗಳು ಐಂದ್ರನಕ್ಷತ್ರಗಳು. ಹೆಸರಿನಲ್ಲಿಯೂ ಹೊಂದಿಕೆ ಇದೆ. ಇಂದ್ರನಿಗೂ ಅರ್ಜುನನೆಂಬ ಹೆಸರು. ಫಲ್ಗುನಿಗಳಿಗೂ ಅರ್ಜುನಿಗಳೆಂಬ ಹೆಸರು ಎಂಬುದಾಗಿ ಶತಪಥಬ್ರಾಹ್ಮಣದಲ್ಲಿಯೂ ಇತರ ಕಡೆಗಳಲ್ಲಿಯೂ ಹೇಳಿರುವುದರಿಂದ ಕುತ್ಸನನ್ನು ಇಂದ್ರಪುತ್ರ, ಅರ್ಜುನೀಪುತ್ರ ಎಂದು ಎರಡು ವಿಧವಾಗಿಯೂ ಕರೆಯಬಹುದೆಂದು ಹೇಳಬಹುದು. ಋಕ್ಸಂಹಿತೆಯ ಅನೇಕ ಕಡೆಗಳಲ್ಲಿ ಕುತ್ಸನು ಇಂದ್ರನ ಸಹಾಯದಿಂದಲೇ ತನ್ನ ಶತ್ರುಗಳನ್ನು ಜಯಿಸುತ್ತಾನೆಂದು ಇಂದ್ರಕುತ್ಸರ ಸಂಬಂಧವನ್ನು ತೋರಿಸಿದೆ.

**ತ್ವಂ ಶುಷ್ಣಂ ವೃಜನೇ ಪೃಕ್ಷ ಆಣೌ ಯೂನೇ ಕುತ್ಸಾಯ ದ್ಯುಮತೇ ಸಚಾಹನ್ ।**

(ಋ. ಸಂ. ೧-೬೩-೩)

**ಕುತ್ಸಾಯ ಯತ್ರ ಪುರುಹೂತ ವನ್ವಞ್ಛುಷ್ಣಮನಂತೈಃ ಪರಿಯಾಸಿ ವಧೈಃ ।**

(ಋ. ಸಂ. ೧-೧೭೧-೯)

ಎಂಬ ಋಕ್ಕುಗಳಲ್ಲಿಯೂ ಹೀಗೆಯೇ ಇತರ ಅನೇಕ ಕಡೆಗಳಲ್ಲಿಯೂ ಇಂದ್ರನು ಕುತ್ಸನಿಗೆ ಸಹಾಯ ಮಾಡಲು ಶುಷ್ಣನನ್ನು ಕೊಂದನು ಎಂಬ ವರ್ಣನೆ ಇದೆ. ಮತ್ತು

**ಅಹಂ ಪಿತೇವ ವೇತಸೂँರಭಿಷ್ಟಯೇ ತುಗ್ರಂ ಕುತ್ಸಾಯ ಸ್ಮದಿಭಂ ಚ ರಂಧಯಂ ।**

(ಋ. ಸಂ. ೧೦-೪೯-೪)

ಕುತ್ಸನಿಗಾಗಿ ನಾನು ವೇತಸು, ತುಗ್ರ ಸ್ಮದಿಭ ಇತ್ಯಾದಿ ಶತ್ರುಗಳನ್ನೆಲ್ಲಾ ಸೋಲಿಸಿ ತನ್ನ ಮಿತ್ರನಿಗೆ ಸಹಾಯ ಮಾಡಿದೆನು ಎಂದು ಇಂದ್ರನೇ ಹೇಳಿಕೊಂಡಿದ್ದಾನೆ. ಆದರೆ,

**ತಸ್ಮೈ ಕುತ್ಸಮತಿಥಿಗ್ವಮಾಯುಂ ಮಹೇ ರಾಜ್ಞೇ ಯೂನೇ ಅರಂಧನಾಯಃ ।**

(ಋ. ಸಂ. ೧-೫೩-೧೦)

**ಯ ಆಯುಂ ಕುತ್ಸಮತಿಥಿಗ್ವಮರ್ದಯೋ ವಾವೃಧಾನೋ ದಿವೇದಿವೇ ।**

(ಋ. ಸಂ. ೮-೫೩-೧೦)

ಇತ್ಯಾದಿ ಋಕ್ಕುಗಳಲ್ಲಿ ಇಂದ್ರನು ಕುತ್ಸಾದಿಗಳನ್ನು ಸೋಲಿಸಿದುದಾಗಿಯೂ ವರ್ಣಿತವಾಗಿದೆ. ಕೆಲವು ಋಕ್ಕುಗಳಲ್ಲಿ ಇಂದ್ರನು ಕುತ್ಸನಿಗೆ ಸಹಾಯಮಾಡುವುದಕ್ಕಾಗಿ ಶುಷ್ಣನೆಂಬ ಅಸುರನನ್ನು ಕೊಂದನು ಮತ್ತು ಅವನ ಸೈನಿಕರಾದ ಪಣಿಗಳೆಂಬ ಅಸುರರನ್ನು ಯುದ್ಧದಲ್ಲಿ ಚದುರಿಸಿ ಓಡಿಸಿದ ವಿಷಯವು ಋ. ಸಂ. ೧-೧೭೪-೫, ೧-೧೭೫-೪ ಇತ್ಯಾದಿ ಋಕ್ಕುಗಳಲ್ಲಿಯೂ ಹೇಳಿದೆ.

**ಶುಷ್ಣಂ**—ಋಗ್ವೇದದಲ್ಲಿ ಇವನ ಹೆಸರು ಸುಮಾರು ೪೦ ಸಲ ಪಠಿತವಾಗಿದೆ. ಇವನು ಕುತ್ಸನ ಮುಖ್ಯ ಶತ್ರು. ಈ ಕುತ್ಸನಿಗೋಸ್ಕರ ಅಥವಾ ಕುತ್ಸನ ಜತೆಯಲ್ಲಿ ಇಂದ್ರನು ಶುಷ್ಣನನ್ನು ನಿರ್ಮೂಲಮಾಡುತ್ತಾನೆ (ಋ. ಸಂ. ೪-೧೬-೧೨, ೫-೨೯-೯ ಇತ್ಯಾದಿ). ಅವನಿಗೆ ಕೊಂಬುಗಳಿವೆ (೧-೩೩-೧೨) ಇವನಿಗೆ ಮೊಟ್ಟೆಗಳಿವೆ (೬-೧೦-೧೦, ೧೧) ಎಂದರೆ ಮೊಟ್ಟೆಗಳಿಂದಾದ ಮರಿಗಳು ಇವೆ (೧೦-೧೨-೧೧) ಇದರಿಂದ ಶುಷ್ಣನೂ ಒಂದು ಸರ್ಪವೆನ್ನಬಹುದು. ಆರುಸಲ ಇವನಿಗೆ ಅಶುಷ (ನುಂಗುವ) ಎಂಬ ವಿಶೇಷಣವಿದೆ. ಇವನಿಗೆ ಬಲವಾದ ಕೋಟೆಗಳಿವೆ (೧-೫೧-೧೧, ೪-೩೦-೧೩) ಇವು ಚಲಿಸುವ ಕೋಟೆಗಳು (೮-೧-೨೮) ಇಂದ್ರನು ಶುಷ್ಣನ ಕೋಟೆಗಳನ್ನು ನಾಶಮಾಡಿ ನೀರುಗಳನ್ನು ಬಿಡುಗಡೆಮಾಡುತ್ತಾನೆ (೧-೫೧-೧೧) ಇಂದ್ರನು ಶುಷ್ಣನ ವಂಶವನ್ನು ನಿರ್ಮೂಲಮಾಡಿ ಸ್ವರ್ಗೀಯೋದಕವನ್ನು ಗಳಿಸುತ್ತಾನೆ (೮-೪೦-೧೦) ನಾಲ್ಕುಸಲ ಶುಷ್ಣನಿಗೆ **ಕುಯವ** (ಕೆಟ್ಟಧಾನ್ಯವನ್ನುಂಟುಮಾಡುವವನು) ಎಂಬ ವಿಶೇಷಣವಿದೆ. ಇಂದ್ರಶುಷ್ಣರ ಯುದ್ಧದ ಪರಿಣಾಮವು ಜಲವಿಮೋಚನೆ ಮಾತ್ರವಲ್ಲ, ಗೋವುಗಳ ಅಥವಾ ಸೂರ್ಯನ ಪ್ರಾಪ್ತಿಗೂ ಆಗಬಹುದು (೮-೮೫-೧೭) ಇಂದ್ರನೊಡನೆ ಯುದ್ಧಮಾಡುವಾಗ ಶುಷ್ಣನು ಅಂಧಕಾರದಲ್ಲಿ ಓಡಾಡುತ್ತಾನೆ. ಮೇಲೆ ಹೇಳಿದ ವಾಕ್ಯಗಳಿಂದ ಶುಷ್ಣನು ಅನಾವೃಷ್ಟಿಕಾರಕನೆನ್ನಬಹುದು. ಶುಷ್ಣ ಎಂಬ ಶಬ್ದವು ಬುಸುಗುಟ್ಟು ಅಥವಾ ಒಣಗಿಸು ಎಂಬರ್ಥವಿರುವ ಶುಷ್ ಧಾತುವಿನಿಂದ ನಿಷ್ಪನ್ನವಾಗಿದೆ. ಆದ್ದರಿಂದ ಇದೂ ಅನಾವೃಷ್ಟಿಕಾರಕನೆಂಬುದನ್ನು ಸಮರ್ಥಿಸುತ್ತದೆ.

**ದಸ್ಯುಂ—ಉಪಕ್ಷಪಯಿತಾರಂ** | ಯಾಸ್ಕರು ಈ ಶಬ್ದಕ್ಕೆ **ದಸ್ಯುರ್ದಸ್ಯತೇಃ ಕ್ಷಯಾರ್ಥಾದುಪದಸ್ಯಂತ್ಯಸ್ಮಿನ್ ರಸಾಃ ಉಪದಾಸಯತಿ ಕರ್ಮಾಣಿ** | (ನಿ. ೭-೨೩). ಹಿಂಸೆಮಾಡು ಅಥವಾ ನಾಶಗೊಳಿಸು ಎಂಬರ್ಥವುಳ್ಳ ದಸು ಧಾತುವಿನಿಂದ ನಿಷ್ಪನ್ನವಾದ ದಸ್ಯುಶಬ್ದದ ಪ್ರಯೋಗವು—ಉದಕಗಳು ಶೋಷಿತವಾಗುವವು, ಕರ್ಮಗಳು ನಾಶವಾಗುವವು ಎಂಬ ಅರ್ಥದಲ್ಲಿ ವಿನಿಯೋಗವಿರುವುದೆಂದು ವ್ಯಾಖ್ಯಾನಮಾಡಿದಾರೆ. ಸಾಯಣರು ನಾಶಮಾಡುವವನು ಎಂದು ಅರ್ಥವನ್ನು ಹೇಳಿದ್ದಾರೆ.

ದಸ್ಯುಪದವು ಅನೇಕ ಸಂದರ್ಭಗಳಲ್ಲಿ **ಅವ್ರತಂ** ಎಂಬ ಪದದೊಡನೆ ಪ್ರಯುಕ್ತವಾಗಿದೆ. **ಅವ್ರತಂ** ಎಂಬ ಪದಕ್ಕೆ **ಅಕರ್ಮಾಣಂ, ಅನನುಷ್ಠಾಯಿನಂ** ಯಾಗರೂಪವಾದ ಕರ್ಮಗಳನ್ನು ಆಚರಿಸದೆ ಎಲ್ಲವನ್ನೂ ನಾಶಮಾಡುವವನನ್ನು ಇಂದ್ರನು ನಾಶಮಾಡಲಿ ಎಂದು ವರ್ಣಿಸಲಾಗಿದೆ- ಇದಲ್ಲದೆ ಯಾಗವನ್ನು ಆಚರಿಸುವ ಯೋಗ್ಯತೆಯನ್ನು ಹೊಂದಿದ್ದರೂ ಯಾಗವನ್ನು ಮಾಡದೆ ಉದಾಸೀನಭಾವದಿಂದ ಇರುವವನನ್ನೂ ಇಂದ್ರನು ನಾಶಮಾಡಲಿ ಎಂಬ ವರ್ಣನೆಯೂ ಇದೆ.

ದೇವಶಬ್ದದಿಂದ ವಿಕಾಸಾತ್ಮಕವಾದುದೂ, ದ್ಯೋತನಾತ್ಮಕವಾದುದೂ, ದಾನಾತ್ಮಕವಾದುದೂ (ನಿ. ೭-೧೫) ಆದ ಯಾವ ಅರ್ಥವು ತೋರುವುದೋ ಅದಕ್ಕೆಲ್ಲ ವಿರುದ್ಧವಾದ ಕ್ಷಯಾತ್ಮಕವಾದುದೂ, ಅಂಧಕಾರಮಯವಾದುದೂ ಮತ್ತು ಹಿಂಸಾತ್ಮಕವಾದುದೂ ಆದ ಅರ್ಥವನ್ನು ದಸ್ಯುಶಬ್ದವು ಸೂಚಿಸುತ್ತದೆ. ವೃತ್ರ, ಶಂಬರ ಮೊದಲಾದ ಅಸುರರೆಲ್ಲರೂ ಈ ದಸ್ಯುಜನರ ಗುಂಪಿಗೆ ಸೇರಿದವರು. ನೀರನ್ನು ಪ್ರವಹಿಸದಂತೆ ಅಥವಾ ಬೀಳದಂತೆ ತಡೆಯುವುದೂ, ಬೆಳಕನ್ನು ಮುಚ್ಚುವುದೂ ಇವರ ಕೃತ್ಯಗಳಾದುದರಿಂದ ಇವರ ನಾಶವನ್ನು ಮಾಡಿ ನೀರನ್ನು ಹರಿಯುವಂತೆಯೂ ಬೆಳಕನ್ನು ಹರಡುವಂತೆಯೂ ಮಾಡುವಂತೆ ಇಂದ್ರನನ್ನು ಪ್ರಾರ್ಥಿಸಿ ಅವನನ್ನು ದಸ್ಯುಹಾ ಎಂಬ ವಿಶೇಷಣದಿಂದ ಕರೆದಿದೆ.

ದಸ್ಯುಶಬ್ದವು ರಾಕ್ಷಸಾದಿಗಳ ಪರ್ಯಾಯವಾಗಿ ಅನೇಕಕಡೆಗಳಲ್ಲಿ ಉಪಯೋಗಿಸಲ್ಪಟ್ಟಿದ್ದರೂ ಕರ್ಮಹೀನರಾದ ಮಾನವರ ವಿಷಯದಲ್ಲಿಯೂ ಕೆಲವುಕಡೆಗಳಲ್ಲಿ ಈ ಪದದ ಪ್ರಯೋಗವಿದೆ. ಉದಾಹರಣೆಗೆ—

**ತ್ವಂ ಹ ನು ತ್ಯದದಮಾಯೋ ದಸ್ಯೂ ರೇಕಃ ಕೃಷ್ಟೀರವನೋರಾರ್ಯಾಯ ।**

(ಋ. ಸಂ. ೬-೧೮-೩)

ಇತ್ಯಾದಿ ಋಕ್ಕುಗಳಲ್ಲಿ **ದಸ್ಯೂನ್** ಎಂಬುದಕ್ಕೆ **ಕರ್ಮಹೀನಾನ್ ಜನಾನ್** ಎಂದರ್ಥಮಾಡಿದೆ. ಈ ವಿಧವಾದ ಅರ್ಥದಲ್ಲಿಯೇ ದಸ್ಯುಶಬ್ದಕ್ಕೆ ಯಜ್ಞಾದಿಕರ್ಮಗಳನ್ನಾಚರಿಸದ ಈ ದೇಶದ ಪೂರ್ವನಿವಾಸಿಗಳು ಎಂದು ಹೇಳುವ ರೂಢಿ ಇದೆ.

**ಕುವಿತ್ಸಸ್ಯ ಪ್ರ ಹಿ ವ್ರಜಂ ಗೋಮಂತಂ ದಸ್ಯುಹಾ ಗಮತ್ ॥**

(ಋ. ಸಂ. ೬-೪೫-೨೪)

ಇತ್ಯಾದ್ಯನೇಕ ಋಕ್ಕುಗಳಲ್ಲಿ ಇಂದ್ರನು ದಸ್ಯುಹನನಮಾಡಿ ಲೋಕರಕ್ಷಣೆಮಾಡುವ ವಿಷಯವನ್ನು ತಿಳಿಸಿದೆ.

ಆರ್ಯ, ದಸ್ಯು ಎಂಬ ಎರಡು ಪದಗಳೂ ಎರಡು ಬೇರೆಬೇರೆ ಗುಂಪಿನ ಜನರನ್ನು ತೋರಿಸುವ ಸಂಕೇತಪದಗಳೆಂದು ಕೆಲವರ ಮತವಾಗಿದೆ. ಆರ್ಯರೆಂದರೆ, ಸಂಸ್ಕೃತರಾದ ಮತ್ತು ಯಜ್ಞಯಾಗಾದಿಗಳನ್ನು ಮಾಡುವ, ದೇವತೆಗಳನ್ನು ಆರಾಧಿಸುವ ಜನರೆಂದೂ, ದಸ್ಯುಗಳು ಎಂದರೆ ಅಸಂಸ್ಕೃತರೂ, ಯಜ್ಞಾದಿಗಳನ್ನು ಮಾಡದೆ ಅವುಗಳಿಗೆ ವಿಘ್ನವನ್ನುಂಟುಮಾಡುವವರೂ, ದೈವಭಕ್ತಿ ಇಲ್ಲದವರೂ ಆರ್ಯಜನರ ದ್ವೇಷಿಗಳೂ ಆದ ಈ ದೇಶದ ಪೂರ್ವನಿವಾಸಿಗಳಾದ ಕಪ್ಪುಜನರೆಂದೂ ಈ ಎರಡು ಗುಂಪಿನ ಜನರ ವ್ಯತ್ಯಾಸವನ್ನು ತೋರಿಸಿ ಇತಿಹಾಸಕಾರರು ವಿಮರ್ಶಿಸಿದ್ದಾರೆ.

ಸಂಹಿತಾಪಾಠಃ

ಅಹಂ ಪಿತೇವ ವೇತಸೂँರಭಿಷ್ಟಯೇ ತುಗ್ರಂ ಕುತ್ಸಾಯ ಸ್ಮದಿಭಂ ಚ ರಂಧಯಂ ।
ಅಹಂ ಭುವಂ ಯಜಮಾನಸ್ಯ ರಾಜನಿ ಪ್ರ ಯದ್ಭರೇ ತುಜಯೇ ನ ಪ್ರಿಯಾಧೃಷೇ ॥ ೪ ॥

ಪದಪಾಠಃ

ಅಹಂ । ಪಿತಾಽಇವ । ವೇತಸೂನ್ । ಅಭಿಷ್ಟಯೇ । ತುಗ್ರಂ । ಕುತ್ಸಾಯ । ಸ್ಮತ್ಽಇಭಂ । ಚ । ರಂಧಯಂ ।
ಅಹಂ । ಭುವಂ । ಯಜಮಾನಸ್ಯ । ರಾಜನಿ । ಪ್ರ । ಯತ್ । ಭರೇ । ತುಜಯೇ । ನ । ಪ್ರಿಯಾ । ಆಽಧೃಷೇ ॥ ೪ ॥

ಸಾಯಣಭಾಷ್ಯಂ

**ಅಹಮಿಂದ್ರಃ ಪಿತೇವ ಪಿತಾ ಪುತ್ರಾಯೇವ ಸ ಯಥಾ ತಸ್ಮೈ ನಿವಾಸಾರ್ಥಮಭಿಮತಂ ಪ್ರದೇಶಂ ಪ್ರಸಾಧಯತಿ ತದ್ವದ್ವೇತಸೂನೇತನ್ನಾಮಕಾಞ್ಜನಪದಾನಭಿಷ್ಟಯೇಽಭೀಚ್ಛತೇ ಕುತ್ಸಾಯ ಮಹರ್ಷಯೇ ತುಗ್ರಂ ಸ್ಮದಿಭಂ ಚ ರಂಧಯಂ। ವಶಮನಯಂ । ಅಹಂ ಯಜಮಾನಸ್ಯ ರಾಜನಿ ರಾಜನಾರ್ಥಂ ಭುವಂ। ಅಭವಂ । ಸಮರ್ಥ ಇತಿ ಶೇಷಃ। ಯದ್ಯಸ್ಮಾತ್ತುಜಯೇ ನ ಪುತ್ರಾಯೇವ ಪಿತಾ ತಸ್ಮೈ ಯಜಮಾನಾಯಾಧೃಷೇ ಶತ್ರೂಣಾಂ ಧರ್ಷಣಾಯ ಪ್ರಿಯಾ ಪ್ರಿಯಾಣಿ ಪ್ರ ಭರೇ ಪ್ರಭರಾಮಿ ತಸ್ಮಾದ್ಯಜಮಾನಸ್ಯ ರಾಜನಿ ಭುವಮಿತಿ ಸಂಬಂಧಃ ॥**

ಪ್ರತಿಪದಾರ್ಥ

**ಅಹಂ**—ನಾನು । **ಪಿತೇವ**—ತಂದೆಯು ಮಗನ ಹಿತವನ್ನು ಬಯಸುಂತೆ । **ವೇತಸೂನ್**—ವೇತಸು ಎಂಬ ರಾಷ್ಟ್ರದ ಜನರನ್ನು । **ಅಭಿಷ್ಟಯೇ**—ಇಚ್ಛಿಸುವ । **ಕುತ್ಸಾಯ**—ಕುತ್ಸಋಷಿಗೆ । **ತುಗ್ರಂ**—ತುಗ್ರನೆಂಬುವನನ್ನೂ । **ಸ್ಮದಿಭಂ ಚ**—ಸ್ಮದಿಭನೆಂಬುವನನ್ನೂ । **ರಂಧಯಂ**—ವಶಮಾಡಿದೆನು । **ಅಹಂ**—ನಾನು । **ಯಜಮಾನಸ್ಯ**—ಯಜ್ಞಮಾಡುವ ಯಜಮಾನನ । **ರಾಜನಿ**—ಹಿತವನ್ನು ಬಯಸುವ ಸ್ವಾಮಿಯಾಗಿ । **ಭುವಂ**—ಆಗಿದ್ದೇನೆ । **ಯತ್**—ಏತಕ್ಕೆಂದರೆ । **ತುಜಯೇ ನ**—ತಂದೆಯು ಮಗನ ವಿಷಯದಲ್ಲಿ ಆಚರಿಸುವಂತೆ । **ಅಧೃಷೇ**—ಶತ್ರುಜನರ ನಿಗ್ರಹಕ್ಕಾಗಿ । **ಪ್ರಿಯಾ**—ಪ್ರಿಯಕರವಾದ ವಸ್ತುಗಳನ್ನು । **ಪ್ರ ಭರೇ**—ಒದಗಿಸಿ ಕೊಡುತ್ತೇನೆ.

ಭಾವಾರ್ಥ

ತಂದೆಯು ತನ್ನ ಪುತ್ರನ ಹಿತವನ್ನು ಬಯಸುವಂತೆ ನಾನು ಕುತ್ಸಋಷಿಯ ಇಚ್ಛೆಯನ್ನು ನೆರವೇರಿಸುವುದಕ್ಕಾಗಿ ವೇತಸು ಎಂಬ ಜನತೆಯನ್ನೂ, ತುಗ್ರನೆಂಬುವನನ್ನೂ, ಸ್ಮದಿಭನೆಂಬುವನನ್ನೂ ಕುತ್ಸನ ವಶಮಾಡಿದೆನು. ನಾನು ಯಾವಾಗಲೂ ಯಜ್ಞಮಾಡುವ ಯಜಮಾನನಿಗೆ ಅವನ ಹಿತಕಾಂಕ್ಷಿಯೂ, ಒಡೆಯನೂ ಆಗಿದ್ದೇನೆ. ಏತಕ್ಕೆಂದರೆ ತಂದೆಯು ಮಗನ ವಿಷಯದಲ್ಲಿ ಪ್ರೀತಿಯಿಂದ ನಡೆದುಕೊಳ್ಳುವಂತೆ ಶತ್ರುಜನರ ನಿಗ್ರಹಕ್ಕಾಗಿ ಅವನಿಗೆ ಪ್ರಿಯಕರವಾದ ವಸ್ತುಗಳನ್ನು ಒದಗಿಸಿಕೊಡುತ್ತೇನೆ.

English Translation

Like a father (for a son), I brought under subjection to Kutsa, at his desire, the Vetasus and Tugra and Smadibha : I have been in place of a sovereign to the worshipper when I bring (to him) as to a son acceptable (gifts) for assailing (his enemies)

ವಿಶೇಷವಿಷಯಗಳು

**ವೇತಸೂನ್—ವೇತಸು** ಶಬ್ದವು ಕೆಲವುಕಡೆ ಏಕವಚನದಲ್ಲಿ ಪ್ರಯುಕ್ತವಾಗಿದೆ. ಉದಾಹರಣೆಗೆ—

**ಸ ವೇತಸುಂ ದಶಮಾಯಂ ದಶೋಣಿಂ ತೂತುಜಿಮಿಂದ್ರಃ ಸ್ವಭಿಷ್ಟಿಸುಮ್ನಃ ।**

(ಋ. ಸಂ. ೬-೨೦-೮)

ಎಂಬ ಋಕ್ಕಿನಲ್ಲಿರುವ ವೇತಸುಂ ಎಂಬ ಶಬ್ದಕ್ಕೆ ಸಾಯಣರು **ವೇತಸುಂ ವೇತಸುನಾಮಾನಮಸುರಂ** ವೇತಸು ಎಂಬ ಹೆಸರಿನ ಅಸುರನನ್ನು ಎಂದರ್ಥಮಾಡಿದಾರೆ ಪ್ರಕೃತ ಋಕ್ಕಿನಲ್ಲಿ **ವೇತಸೂನ್** ಎಂದರೆ ವೇತಸು ಎಂಬ ಅಸುರನ ಅನುಯಾಯಿಗಳನ್ನು ಅಥವಾ ಆ ಹೆಸರಿನ ಜನಾಂಗದವರನ್ನು ಎಂದಭಿಪ್ರಾಯವು. ಈ ವೇತಸುವನ್ನು ಇಂದ್ರನು ಸೋಲಿಸಿದ ವಿಷಯವು,

**ಘೃತಸ್ಯ ಧಾರಾ ಅಭಿ ಚಾಕಶೀಮಿ ಹಿರಣ್ಯಯೋ ವೇತಸೋ ಮಧ್ಯ ಆಸಾಂ ।**
(ಋ. ಸಂ. ೪-೫೮-೫)

**ತ್ವಂ ತುಗ್ರಂ ವೇತಸವೇ ಸಚಾಹನ್ ತ್ವಂ ತುಜಿಂ ಗೃಣಂತಮಿಂದ್ರ ತೂತೋಃ ।**
(ಋ. ಸಂ. ೬-೨೬-೪)

ಇತ್ಯಾದಿ ಋಕ್ಕುಗಳಲ್ಲಿ ಸೂಚಿತವಾಗಿದೆ. ತುಗ್ರ ಎಂಬುದು ಆ ಹೆಸರಿನ ಒಬ್ಬ ಅಸುರನನ್ನು ನಿರ್ದೇಶಿಸುತ್ತದೆ. ಇತರ ಕಡೆಗಳಲ್ಲಿ ತುಗ್ರ ಎಂಬುದು ಒಬ್ಬ ಪ್ರಸಿದ್ಧನಾದ ರಾಜನೆಂದೂ, ಇವನ ಮಗನಾದ ಭುಜ್ಯುವು ಸಮುದ್ರದಲ್ಲಿ ಮುಳುಗುತ್ತಿರುವಾಗ ಅಶ್ವಿನೀದೇವತೆಗಳು ಆವನನ್ನು ಕಾಪಾಡಿದರೆಂದೂ ಹೇಳಿದೆ. ಆದ್ದರಿಂದ ರಾಜನಾದ ತುಗ್ರ ಎಂಬುವನೇ ಬೇರೆ, ಆಸುರನಾದ ತುಗ್ರ ಎಂಬುವನೇ ಬೇರೆ. ಇಬ್ಬರೂ ಬೇರೆಬೇರೆ ವ್ಯಕ್ತಿಗಳು ಎಂಬ ವಿಷಯದಲ್ಲಿ ಸಂಶಯಕ್ಕವಕಾಶವಿಲ್ಲ.

**ಸ್ಮದಿಭ**—ಪ್ರಕೃತ ಋಕ್ಕಿನಲ್ಲಿ ಇವನ ಹೆಸರು ಮಾತ್ರ ಸೂಚಿತವಾಗಿದೆ. ಅಸುರರ ಗುಂಪಿನಲ್ಲಿ ಹೇಳಿರುವುದರಿಂದ ಇವನು ಅಸುರನೇ ಆಗಿರಬೇಕು. ಇವನನ್ನು ಇಂದ್ರನು ಸೋಲಿಸಿದ ವಿಷಯವನ್ನು ಬಿಟ್ಟರೆ ಇವನ ವಿಷಯದಲ್ಲಿ ಹೆಚ್ಚು ಸಂಗತಿಗಳು ತಿಳಿಯಲವಕಾಶವಿಲ್ಲ.

ಸಂಹಿತಾಪಾಠಃ

ಅಹಂ ರಂಧಯಂ ಮೃಗಯಂ ಶ್ರುತರ್ವಣೇ ಯನ್ಮಾಜಿಹೀತ ವಯುನಾ ಚನಾನುಷಕ್ ।
ಅಹಂ ವೇಶಂ ನಮ್ರಮಾಯವೇಽಕರಮಹಂ ಸವ್ಯಾಯ ಪಡ್ಗೃಭಿಮರಂಧಯಂ ॥ ೫ ॥

ಪದಪಾಠಃ

ಅಹಂ । ರಂಧಯಂ । ಮೃಗಯಂ । ಶ್ರುತರ್ವಣೇ । ಯತ್ । ಮಾ । ಅಜಿಹೀತ । ವಯುನಾ । ಚನ । ಆನುಷಕ್ ।

ಅಹಂ । ವೇಶಂ । ನಮ್ರಂ । ಆಯವೇ । ಅಕರಂ । ಅಹಂ । ಸವ್ಯಾಯ । ಪಟ್ಽಗೃಭಿಂ । ಅರಂಧಯಂ ॥

ಸಾಯಣಭಾಷ್ಯಂ

ಅಹಮಿಂದ್ರೋ ಮೃಗಯಮೇತನ್ನಾಮಕಮಸುರಂ ಶ್ರುತರ್ವಣ ಏತನ್ನಾಮಕಾಯ ಮಹರ್ಷಯೇ ರಂಧಯಂ । ರಧ್ಯತಿರ್ವಶಗಮನೇ । ವಶಮನಯಂ । ಯದ್ಯಸ್ಮಾಚ್ಛ್ರುತರ್ವಾ ಮಾ ಮಾಮ-

ಜಿಹೀತೆ || ಓಹಾಙ್ ಗತೌ|| ಆಗಚ್ಛತ್ |ತದೇವೋಚ್ಯತೇ| ವಯುನಾ ಪ್ರಜ್ಞಾನೇನ ಸ್ತೋತ್ರೇಣಾನುಷಗ ನುಷಕ್ತೋಽಭೂತ್ | ಚನೇತಿ ಪೂರಣಃ | ಅಹಂ ವೇಶಮೇತನ್ನಾಮಾನಂ ನಮ್ರಂ ಪ್ರಹ್ವಂ ಕರಂ | ಅಕಾರ್ಷಂ || ಕರೋತೇರ್ಲುಙಿ ಕೃಮೃದೃರುಹಿಭ್ಯಶ್ಛಂದಸೀತಿ ಚ್ಲೇರಙ್ | ಅಡಭಾವಶ್ಛಾಂದಸಃ || ಅಹಂ ಸವ್ಯಾಯೈತನ್ನಾಮಕಾಯ ಪಡ್ಗೃಭಿಮೇತನ್ನಾಮಕಮರಂಧಯಂ ||

ಪ್ರತಿಪದಾರ್ಥ

**ಅಹಂ**—ಇಂದ್ರನಾದ ನಾನು | **ಮೃಗಯಂ**—ಮೃಗಯನೆಂಬ ಅಸುರನನ್ನು | **ಶ್ರುತರ್ವಣೇ**—ಶ್ರುತರ್ವಾನ್ ಎಂಬ ಋಷಿಗೆ | **ರಂಧಯಂ**—ವಶಮಾಡಿದೆನು | **ಯತ್**—ಏಕೆಂದರೆ, ಆ ಶ್ರುತರ್ವನು | **ಮಾ**—ನನ್ನನ್ನು | **ಅಜಿಹೀತ**—ಸಮೀಪಿಸಿದನು ಮತ್ತು | **ವಯುನಾ**—ಸ್ತೋತ್ರಾದಿಗಳಿಂದ | **ಆನುಷಕ್ ಚನ**—ಸ್ತುತಿಸಿ ನನ್ನ ಆರಾಧನೆಯಲ್ಲಿ ಆಸಕ್ತನಾದನು | **ಅಹಂ**—ನಾನು | **ವೇಶಂ**—ವೇಶನೆಂಬುವನನ್ನು | **ನಮ್ರಂ**—ವಿನೀತನನ್ನಾಗಿ | **ಕರಂ**—ಮಾಡಿದೆನು | **ಅಹಂ**—ನಾನು | **ಪಡ್ಗೃಭಿಂ**—ಪಡ್ಗೃಭಿ ಎಂಬುವನನ್ನು | **ಸವ್ಯಾಯ**—ಸವ್ಯ ಎಂಬುವನ | **ಅರಂಧಯಂ**—ವಶಮಾಡಿದೆನು.

ಭಾವಾರ್ಥ

ಮೃಗಯನೆಂಬುವನನ್ನೂ, ನನ್ನನ್ನು ಸಮೀಪಿಸಿ ಸ್ತೋತ್ರಾದಿಗಳಿಂದ ಆರಾಧಿಸಿದ ಶ್ರುತರ್ವಾ ಎಂಬ ಋಷಿಯ ವಶಮಾಡಿದೆನು; ಹಾಗೆಯೇ ವೇಶನೆಂಬುವನನ್ನು ನಮ್ರ (ವಿನೀತ) ನಾಗಿರುವಂತೆ ಮಾಡಿದೆನು ಮತ್ತು ಪಡ್ಗೃಭಿ ಎಂಬುವನನ್ನು ಸವ್ಯನ ವಶಮಾಡಿದೆನು.

## English Translation.

I have brought Mrigaya under subjection to Shrutarvan ; when he came to me, (he was) earnestly engaged in supplication. I humiliated Vesha for Ayu; I subjugated Padgribhi for Savya.

ವಿಶೇಷವಿಷಯಗಳು

**ಶ್ರುತರ್ವಾ** ಮತ್ತು **ಸವ್ಯ** ಎಂಬಿಬ್ಬರೂ ಋಷಿಗಳು, **ಮೃಗಯ**, **ವೇಶ**, **ಪಡ್ಗೃಭಿ** ಎಂಬುವರು ಅಸುರರು. ಇವರ ವಿಷಯದಲ್ಲಿ ಹೆಚ್ಚು ಸಂಗತಿಗಳು ತಿಳಿದುಬಂದಿಲ್ಲ,

ಸಂಹಿತಾಪಾಠಃ

ಅಹಂ ಸ ಯೋ ನವವಾಸ್ತ್ವಂ ಬೃಹದ್ರಥಂ ಸಂ ವೃತ್ರೇವ ದಾಸಂ ವೃತ್ರಹಾರುಜಂ |
ಯದ್ವರ್ಧಯಂತಂ ಪ್ರಥಯಂತಮಾನುಷಗ್ದೂರೇ ಪಾರೇ ರಜಸೋ ರೋಚನಾಕರಂ || ೬ ||

ಪದಪಾಠಃ

ಅಹಂ । ಸಃ । ಯಃ । ನವಽವಾಸ್ತ್ವಂ । ಬೃಹತ್ಽರಥಂ । ಸಂ । ವೃತ್ರಾಽಇವ । ದಾಸಂ । ವೃತ್ರಽಹಾ ।
ಅರುಜಂ ।
ಯತ್ । ವರ್ಧಯಂತಂ । ಪ್ರಥಯಂತಂ । ಆನುಷಕ್ । ದೂರೇ । ಪಾರೇ । ರಜಸಃ । ರೋಚನಾ ॥
ಅಕರಂ ॥ ೬ ॥

ಸಾಯಣಭಾಷ್ಯಂ

ಅಹಮಿಂದ್ರಃ ಸೋಽಸ್ಮಿ ಯೋಽಹಂ ನವವಾಸ್ತ್ವಂ ಬೃಹದ್ರಥಂ ಚ ವೃತ್ರೇವವೃತ್ರ ಮಿವ ದಾಸಮುಪಕ್ಷಪಯಿತಾರಮಿವ ನವವಾಸ್ತ್ವಂ ಬೃಹದ್ರಥಂ ಚಾರುಜಂ । ಅಹಂ ಭಗ್ನಮಕರವಂ ॥ ರುಜೋ ಭಂಗೇ ॥ ಯದ್ಯದಾ ವರ್ಧಯಂತಂ ವರ್ಧಮಾನಂ ಪ್ರಥಯಂತಂ ಪ್ರಥಮಾನಂ ಚೋಭೌ ಶತ್ರೂ ಆನುಷಗಾನುಷಕ್ತಃ ಸನ್ರೋಚನಾ ರೋಚನಸ್ಯ ರಜಸೋ ಲೋಕಸ್ಯ ದೂರೇ ಪಾರೇಽಕರಂ ಕೃತವಾನಸ್ಮಿ ॥

ಪ್ರತಿಪದಾರ್ಥ

**ಯತ್**—ಯಾವಾಗ । **ವರ್ಧಯಂತಂ**—ವೃದ್ಧಿಯನ್ನು ಹೊಂದುತ್ತಿರುವವನೂ । **ಪ್ರಥಯಂತಂ**—ವಿಸ್ತಾರವಾದ ಪ್ರದೇಶದಲ್ಲಿ ಹರಡುತ್ತಿರುವವನೂ ಆದ ಶತ್ರುವನ್ನು । **ಆನುಷಕ್**—ಶತ್ರುನಿಗ್ರಹದಲ್ಲಿ ಅನುರುಕ್ತನಾಗಿ ನಾನು । **ರೋಚನಾ**—ಪ್ರಕಾಶಮಾನವಾದ । **ರಜಸಃ**—ಲೋಕದ । **ದೂರೇ ಪಾರೇ**—ದೂರಪ್ರದೇಶದ ಕೊನೆಗೆ । **ಅಕರಂ**—ಓಡಿಸಿದೆನೋ ಆಗ । **ಯಃ**—ಯಾವ ನಾನು । **ನವವಾಸ್ತ್ವಂ**—ನವವಾಸ್ತ್ವನೆಂಬುವನನ್ನೂ । **ಬೃಹದ್ರಥಂ**—ಬೃಹದ್ರಥನೆಂಬುವನನ್ನೂ । **ವೃತ್ರೇವ**—ವೃತ್ರನನ್ನು ಸಂಹರಿಸುವಂತೆಯೂ । **ದಾಸಂ**—ನಾಶಕನಾದ ಶತ್ರುವನ್ನು ಕೊಲ್ಲುವಂತೆಯೂ । **ಅರುಜಂ**—ಧ್ವಂಸಮಾಡಿದೆನೋ । **ಅಹಂ ಸಃ**—ಆ ಇಂದ್ರನೇ ನಾನು.

ಭಾವಾರ್ಥ

ವೃದ್ಧಿಯನ್ನು ಹೊಂದುತ್ತಾ ಎಲ್ಲೆಲ್ಲೂ ಹರಡುತ್ತಿರುವ ಶತ್ರುವಿನ ನಿಗ್ರಹದಲ್ಲಿ ಆಸಕ್ತನಾದ ನಾನು ಪ್ರಕಾಶಮಾನವಾದ ಲೋಕದ ದೂರದಲ್ಲಿರುವ ಕೊನೆಯಭಾಗಕ್ಕೆ ಆ ಶತ್ರುವನ್ನು ಓಡಿಸಿವೆನು ಮತ್ತು ನವವಾಸ್ತ್ವನನ್ನೂ, ಬೃಹದ್ರಥನೆಂಬುವನನ್ನೂ ನಾಶಕರವಾದ ಶತ್ರುವನ್ನು ಕೊಲ್ಲುವಂತೆ ಧ್ವಂಸಮಾಡಿದ ಇಂದ್ರನೇ ನಾನು.

## English Translation

I, the slayer of Vritra, am he who crushed Navavastwa and Brihadratha, (who crushed) Dasa like a Vritra, when I drove to the distant shore of the shining world, (both) my augmenting and outstretched (foes) one after the other.

### ವಿಶೇಷವಿಷಯಗಳು

**ನವವಾಸ್ತ್ವಂ, ಬೃಹದ್ರಥಂ**—ಈ ಎರಡು ಹೆಸರುಗಳು ಪ್ರಕೃತ ಋಕ್ಕಿನಲ್ಲಿಯೂ, ಋ. ಸಂ. ೧-೩೬-೧೮ ರಲ್ಲಿಯೂ ಪಠಿತವಾಗಿದೆ. ನವವಾಸ್ತ್ವಶಬ್ದವು ಮಾತ್ರ ಋ. ಸಂ. ೬-೨೦-೧೧ ರಲ್ಲಿಯೂ ಪಠಿತವಾಗಿದೆ. ನವವಾಸ್ತ್ವನು ೧-೩೬-೧೮ ರಲ್ಲಿ ಅಗ್ನಿಗೆ ಮಿತ್ರನೆಂದೂ, ೬-೨೦-೧೧ ರಲ್ಲಿ ಇಂದ್ರನಿಗೆ ಬೇಕಾದವನೆಂದೂ ಹೇಳಿದೆ. ಪ್ರಕೃತ ಋಕ್ಕಿನಲ್ಲಿ ಇಂದ್ರನಿಗೆ ವಿರೋಧಿಯೆಂದು ಉಕ್ತವಾಗಿದೆ. ಬೃಹದ್ರಥನು ಬೇರೆ ವ್ಯಕ್ತಿಯೇ ಅಥವಾ ಈ ಶಬ್ದವು ನವವಾಸ್ತ್ವನಿಗೆ ವಿಶೇಷಣಪದವೇ ಎಂಬುದು ಸ್ಪಷ್ಟವಾಗಿಲ್ಲ.

### ಸಂಹಿತಾಪಾಠಃ

ಅಹಂ ಸೂರ್ಯಸ್ಯ ಪರಿ ಯಾಮ್ಯಾಶುಭಿಃ ಪ್ರೈತಶೇಭಿರ್ವಹಮಾನ ಓಜಸಾ ।
ಯನ್ಮಾ ಸಾವೋ ಮನುಷ ಆಹ ನಿರ್ಣಿಜ ಋಧಕ್ಕೃಷೇ ದಾಸಂ ಕೃತ್ವ್ಯಂ ಹಥೈಃ ॥ ೭ ॥

### ಪದಪಾಠಃ

ಅಹಂ । ಸೂರ್ಯಸ್ಯ । ಪರಿ । ಯಾಮಿ । ಆಶುಽಭಿಃ । ಪ್ರ । ಏತಶೇಭಿಃ । ವಹಮಾನಃ । ಓಜಸಾ ।
ಯತ್ । ಮಾ । ಸಾವಃ । ಮನುಷಃ । ಆಹ । ನಿಃಽನಿಜೇ । ಋಧಕ್ । ಕೃಷೇ । ದಾಸಂ । ಕೃತ್ವ್ಯಂ । ಹಥೈಃ ॥ ೭ ॥

### ಸಾಯಣಭಾಷ್ಯಂ

ಅಹಂ ಸೂರ್ಯಸ್ಯ ದೇವಸ್ಯಾಶುಭಿಃ ಶೀಘ್ರಗಾಮಿಭಿರೇತಶೇಭಿರೇತಶವರ್ಣೈರಶ್ವೈರ್ವಹಮಾನ ಉಹ್ಯಮಾನ ಓಜಸಾತ್ಮೀಯೇನ ಬಲೇನ ಪ್ರಕರ್ಷೇಣ ಪರಿ ಯಾಮಿ । ಪರಿಗಚ್ಛಾಮಿ ಸೂರ್ಯಾತ್ಮನಾ । ಕಿಂಚ ಯದ್ಯದಾ ಮಾ ಮಾಂ ಮನುಷೋ ಮನುಷ್ಯಸ್ಯ ಸಾವಃ ಸೋಮಾಭಿಷವ ಆಹ ಬ್ರೂತೇ । ಆಹ್ವಯತೀತ್ಯರ್ಥಃ । ಕಿಮರ್ಥಮಾಹ । ನಿರ್ಣಿಜೇ । ನಿರ್ಣಿಗಿತಿ ರೂಪನಾಮ । ಯಜ್ಞಸ್ವರೂಪಾಯೇತ್ಯರ್ಥಃ । ತದಾನೀಂ ಕೃತ್ವ್ಯಂ ಕರ್ತವ್ಯಂ । ಹಂತವ್ಯಮಿತ್ಯರ್ಥಃ । ದಾಸಮುಪಕ್ಷಪಯಿತಾರಂ ಶತ್ರುಂ ಹಥೈರ್ಹನನಸಾಧನೈರ್ಋಧಕ್ಕೃಷೇ। ಪೃಥಕ್ಕರೋಮಿ । ಋಧಗಿತ್ಯವ್ಯಯಂ ಪೃಥಗರ್ಥೇ ॥

### ಪ್ರತಿಪದಾರ್ಥ

**ಯತ್**—ಯಾವಾಗ । **ಮಾ**—ನನ್ನನ್ನು । **ಮನುಷಃ**—ಮನುಷ್ಯರಾದ ಯಜಮಾನರು ಆಚರಿಸುವ। **ಸಾವಃ**—ಸೋಮರಸವನ್ನು ಹಿಂಡುವ ಕರ್ಮವು । **ನಿರ್ಣಿಜೇ**—ಯಜ್ಞನಿರ್ವಹಣಕ್ಕಾಗಿ । **ಆಹ**—ನನ್ನನ್ನು ಕರೆಯುವುದೋ ಆಗ । **ಅಹಂ**—ನಾನು । **ಸೂರ್ಯಸ್ಯ**—ಸೂರ್ಯದೇವನ । **ಆಶುಭಿಃ**—ಶೀಘ್ರಗಾಮಿ

ಗಳಾದ | **ಏತಶೇಭಿಃ**— ಏತಶವರ್ಣಯುಕ್ತವಾದ ಅಶ್ವಗಳಿಂದ | **ವಹಮಾನಃ**— ಒಯ್ಯಲ್ಪಡುವವನಾಗಿ | **ಓಜಸಾ**— ನನ್ನ ಸ್ವಂತ ಸಾಮರ್ಥ್ಯದಿಂದ | **ಪರಿ ಯಾಮಿ**— ಸೂರ್ಯರೂಪದಿಂದ (ಯಜ್ಞಭೂಮಿಗೆ) ಹೋಗುತ್ತೇನೆ (ಆಗ) | **ಕೃತ್ವ್ಯಂ**— ನನ್ನ ಕರ್ತವ್ಯವಾದ | **ದಾಸಂ**— ಶತ್ರುವಧಕರ್ಮವನ್ನು | **ಹಥೈಃ**— ಹನನಸಾಧನವಾದ ಆಯುಧಗಳಿಂದ | **ಋಧಕ್ ಕೃಷೇ**— ಪ್ರತ್ಯೇಕವಾಗಿ (ಮುಖ್ಯವಾಗಿ) ಮಾಡುತ್ತೇನೆ.

ಭಾವಾರ್ಥ

ಮನುಷ್ಯರು ಮಾಡುವ ಯಜ್ಞದಲ್ಲಿ ಸೋಮರಸವನ್ನು ಹಿಂಡುವ ಕರ್ಮವು ಯಾವಾಗ ನನ್ನನ್ನು ಕರೆಯುವುದೋ ಎಂದರೆ ಯಜ್ಞಮಾಡುವ ಯಜಮಾನರು ಸೋಮರಸವನ್ನು ಹಿಂಡಿ ಸಿದ್ಧಪಡಿಸಿ ಸೋಮಪಾನಾರ್ಥವಾಗಿ ನನ್ನನ್ನು ಪ್ರಾರ್ಥಿಸಿ ಕರೆಯುವರೋ ಆಗ ಅವರ ಯಜ್ಞನಿರ್ವಹಣಕ್ಕಾಗಿ ನಾನು ಸೂರ್ಯನ ಶೀಘ್ರಗಾಮಿಗಳಾದ ಏತಶವರ್ಣದ ಅಶ್ವಗಳಿಂದ ಒಯ್ಯಲ್ಪಟ್ಟು ಅವರ ಯಜ್ಞಭೂಮಿಗೆ ನನ್ನ ಸ್ವಂತ ಶಕ್ತಿಸಾಮರ್ಥ್ಯಾದಿಗಳಿಂದ ಸೂರ್ಯರೂಪನಾಗಿ ಹೋಗುತ್ತೇನೆ ಮತ್ತು ಆಗ ನನ್ನ ಕರ್ತವ್ಯಕರ್ಮವಾದ ಶತ್ರುಹನನಕಕಾರ್ಯವನ್ನು ಹನನಸಾಧನವಾದ ವಜ್ರಾದ್ಯಾಯುಧಗಳಿಂದ ಮುಖ್ಯವಾಗಿ ನೆರವೇರಿಸುತ್ತೇನೆ.

## English Translation

Conveyed by the swift white horses of Surya, I hasten forth by my power; when the effused libation of a man invokes me to the brillient form of the sacrifice, I drive off with my weapons the destroyer who is to be slain.

ಸಂಹಿತಾಪಾಠಃ

**ಅಹಂ ಸಪ್ತಹಾ ನಹುಷೋ ನಹುಷ್ಟರಃ ಪ್ರಾಶ್ರಾವಯಂ ಶವಸಾ ತುರ್ವಶಂ ಯದುಂ ।**
**ಅಹಂ ನ್ಯ೧ನ್ಯಂ ಸಹಸಾ ಸಹಸ್ಕರಂ ನವ ವ್ರಾಧತೋ ನವತಿಂ ಚ ವಕ್ಷಯಂ॥**

ಪದಪಾಠಃ

ಅಹಂ । ಸಪ್ತಽಹಾ । ನಹುಷಃ । ನಹುಃಽತರಃ । ಪ್ರ । ಅಶ್ರವಯಂ । ಶವಸಾ । ತುರ್ವಶಂ । ಯದುಂ ॥

ಅಹಂ । ನಿ । ಅನ್ಯಂ । ಸಹಸಾ । ಸಹಃ । ಕರಂ । ನವ । ವ್ರಾಧತಃ । ನವತಿಂ । ಚ । ವಕ್ಷಯಂ ॥ ೮ ॥

ಸಾಯಣಭಾಷ್ಯಂ

**ಅಹಂ ಸಪ್ತಸಂಖ್ಯಾಕಾನಾಂ ಪುರಾಂ ಶತ್ರೂಣಾಂ ವಾ ಹಂತಾ। ಸಪ್ತ ಯತ್ಪುರಃ ಶರ್ಮ ಶಾರದೀಃ । ಋ-೧-೧೭೪-೨ । ಇತ್ಯುಕ್ತಂ । ಯದ್ವಾ । ಸಪ್ತ ನಮುಚ್ಯಾದೀನ್ ಹತವಾನ್ । ಕಿಂಚ**

ನಹುಷೋ ಬಂಧಕಸ್ಯಾಪಿ ನಹುಷ್ಟರೋ ಬಂಧಕತರೋಽಹಂ ಶವಸಾ ಬಲೇನ ತುರ್ವಶಂ ಯದುಂ ಚ ಪ್ರಾಶ್ರಾವಯಂ । ಶತ್ರುಸಂಬಂಧಿಗವಾದಿಪ್ರದಾನೇನ ಶ್ರಾವಿತವಾನಸ್ಮಿ । ತೌ ಯಥಾ ಲೋಕೇ ಶ್ರುತೌ ಭವತಃ ತಥಾಕಾರ್ಷಮಿತ್ಯರ್ಥಃ । ಕಿಂಚಾಹಮನ್ಯಂ ಚಾಸ್ಮತ್ಸ್ತೋತಾರಂ ಸಹಸಾ ಬಲೇನ ಸಹೋ ಬಲಿನಂ ಕರಂ । ಅಕಾರ್ಷಂ ॥ ಕರೋತೇರ್ಲುಙಿ ಕೃಮೃದೃರುಹೀತಿ ಚ್ಲೇರಙ್ । ಅಡಭಾವ ಆರ್ಷಃ ॥ ಕಿಂಚ ನವ ನವಸಂಖ್ಯಾಕಾ ನವತಿಂ ಚ ನವತಿಸಂಖ್ಯಾಕಾಶ್ಚ । ನವೋತ್ತರನವತಿಮಿತ್ಯರ್ಥಃ । ಕಥಂಭೂತಾಃ । ವ್ರಾಧತೋ ವರ್ಧಮಾನಾಃ । ವಕ್ಷಯಂ । ಅವಹಂ । ವ್ಯನಾಶಯಮಿತ್ಯರ್ಥಃ ॥

ಪ್ರತಿಪದಾರ್ಥ

**ಅಹಂ**—ನಾನು । **ಸಪ್ತಹಾ**—ಏಳು ಶತ್ರುನಗರಗಳ ಧ್ವಂಸಕನು ಅಥವಾ ನಮುಚಿಯೇ ಮೊದಲಾದ ಏಳುಜನ ಅಸುರರ ಹಂತಕನು । (**ಅಹಂ**—ನಾನು) । **ನಹುಷಃ**—ಬಂಧನಕ್ಕೆ । **ನಹುಷ್ಟರಃ**—ಬಂಧಕನು । **ಶವಸಾ**—ನನ್ನ ಶಕ್ತಿಸಾಮರ್ಥ್ಯಗಳಿಂದ । **ತುರ್ವಶಂ**—ತುರ್ವಶನೆಂಬುವನನ್ನೂ । **ಯದುಂ ಚ**—ಯದುವೆಂಬುವನನ್ನೂ । **ಪ್ರಾಶ್ರಾವಯಂ**—(ಶತ್ರುಗಳ ಗೋವುಗಳನ್ನು ಕೊಟ್ಟು) ಪ್ರಸಿದ್ಧರನ್ನಾಗಿ ಮಾಡಿದ್ದೇವೆ । **ಅಹಂ**—ನಾನು । **ಅನ್ಯಂ**—ನನ್ನನ್ನು ಸ್ತುತಿಸುವ ಇನ್ನೊಬ್ಬನನ್ನು । **ಸಹಸಾ**—ನನ್ನ ಸಾಮರ್ಥ್ಯದಿಂದ । **ಸಹಃ**—ಶಕ್ತಿವಂತನನ್ನಾಗಿ । **ಕರಂ**—ಮಾಡಿದ್ದೇನೆ (ಮತ್ತು) । **ನವ ನವತಿಂ ಚ**—ತೊಂಭತ್ತೊಂಭತ್ತು । **ವ್ರಾಧತಃ**—ಬಲಯುತರಾದ ಶತ್ರುಗಳನ್ನು । **ವಕ್ಷಯಂ**—ನಾಶಮಾಡಿದ್ದೇನೆ.

ಭಾವಾರ್ಥ

ನಾನು ಏಳು ಶತ್ರುನಗರಗಳ ಅಥವಾ ನಮುಚಿಯೇ ಮೊದಲಾದ ಏಳುಮಂದಿ ಅಸುರರ ಹಂತಕನು. ಬಂಧನಕ್ಕೂ ನಾನು ಬಂಧಕನು. ನನ್ನ ಶಕ್ತಿಸಾಮರ್ಥ್ಯಗಳಿಂದ ತುರ್ವಶ ಮತ್ತು ಯದು ಎಂಬಿಬ್ಬರನ್ನು ಪ್ರಸಿದ್ಧರನ್ನಾಗಿ ಮಾಡಿದ್ದೇನೆ. ನನ್ನನ್ನು ಸ್ತುತಿಸುವವನನ್ನು ನನ್ನ ಸಾಮರ್ಥ್ಯದಿಂದ ಶಕ್ತಿಯುತನಾಗುವಂತೆ ಮಾಡಿದ್ದೇನೆ. ಅತ್ಯಂತ ಬಲಯುತರಾದ ತೊಂಭತೊಂಭತ್ತುಮಂದಿ ಶತ್ರುಗಳನ್ನು ನಾಶಮಾಡಿದ್ದೇನೆ.

## English Translation

I am the slayer of seven (Asuras) : I am the especial bond of bonds : I have made Turvasha and Yadu famous through prowess : I have strengthened another (worshipper) with strength : I have demolished ninety-and-nine powerful (foes).

ವಿಶೇಷವಿಷಯಗಳು

**ತುರ್ವಶಂ ಯದುಂ—ಯದು** ಮತ್ತು **ತುರ್ವಶ** ಎಂಬ ಎರಡು ವ್ಯಕ್ತಿಗಳ ಹೆಸರು ಬರುವಕಡೆಗಳಲ್ಲೆಲ್ಲಾ ಅವರಿಬ್ಬರೂ ರಾಜರ್ಷಿಗಳೆಂದೂ, ಇಂದ್ರಾದಿಗಳ ಅನುಗ್ರಹಕ್ಕೆ ಪಾತ್ರರಾದವರೆಂದೂ ತಿಳಿಯುತ್ತದೆ.

**ಅಗ್ನಿನಾ ತುರ್ವಶಂ ಯದುಂ ಪರಾವತ ಉಗ್ರಾದೇವಂ ಹವಾಮಹೇ ।**

(ಋ. ಸಂ. ೧-೩೬-೧೮)

**ತ್ವಮಾವಿಥ ನರ್ಯಂ ತುರ್ವಶಂ ಯದುಂ ತ್ವಂ ತುರ್ವೀತಿಂ ವಯ್ಯಂ ಶತಕ್ರತೋ ।**

(ಋ. ಸಂ. ೧-೫೪-೬)

ಇತ್ಯಾದಿ ಋಕ್ಕುಗಳಲ್ಲಿ ಇಬ್ಬರು ರಾಜರ್ಷಿಗಳೂ ಅಗ್ನಿಯ ಮತ್ತು ಇಂದ್ರನ ರಕ್ಷಣೆಯನ್ನು ಪಡೆದುದಾಗಿ ಹೇಳಲ್ಪಟ್ಟಿದೆ. ತುರ್ವಶನ ಮುಖ್ಯವಾದ ಸಾಹಸಕೃತ್ಯವೆಂದರೆ, ಸುದಾಸನೊಂದಿಗೆ ಯುದ್ಧಮಾಡಿದುದು.

**ಪುರೋಳಾ ಇತ್ತುರ್ವಶೋ ಯಕ್ಷುರಾಸೀದ್ರಾಯೇ ಮತ್ಸ್ಯಾಸೋ ನಿಶಿತಾ ಅಪೀವ ।**
**ಶ್ರುಷ್ಟಿಂ ಚಕ್ರುರ್ಭೃಗವೋ ದ್ರುಹ್ಯವಶ್ಚ ಸಖಾ ಸಖಾಯಮತರದ್ವಿಷೂಚೋಃ ॥**

(ಋ. ಸಂ. ೭-೧೮-೬)

ಎಂಬ ಋಕ್ಕಿನಲ್ಲಿ ತುರ್ವಶನ ಯುದ್ಧದ ವಿವರಣೆ ಇದೆ. ಆದರೆ ತುರ್ವಶನು ಇಲ್ಲಿ ಇಂದ್ರನಿಂದ ಸಹಾಯವನ್ನು ಪಡೆದನೇ ಅಥವಾ ಸೋಲಿಸಲ್ಪಟ್ಟನೇ ಎಂಬುದು ವಿಶದವಾಗಿಲ್ಲ. ಸಾಯಣರು ಎರಡುವಿಧವಾದ ಅರ್ಥವನ್ನೂ ಹೇಳಿದ್ದಾರೆ. ಮೊದಲನೆಯದಾಗಿ ತುರ್ವಶನು ಇಂದ್ರನ ಸಖನಾದ ಸುದಾಸನೊಂದಿಗೆ ಯುದ್ಧಕ್ಕೆ ಹೋದಾಗ ಇಂದ್ರನು ತುರ್ವಶನನ್ನು ನಿಗ್ರಹಿಸಿ ತನ್ನ ಸ್ನೇಹಿತನನ್ನು ರಕ್ಷಿಸಿದನು ಎಂದೂ, ಎರಡನೆಯದಾಗಿ ತುರ್ವಶನಿಗೂ ಅವನ ವಿರೋಧಿಗಳಿಗೂ ಯುದ್ಧವು ಸಂಭವಿಸಿದ ಕಾಲದಲ್ಲಿ ಇಂದ್ರನು ತನ್ನ ಸಖನಾದ ತುರ್ವಶನಿಗೆ ಸಹಾಯಮಾಡಿದನೆಂದೂ ಹೇಳಿದೆ. ಆದ್ದರಿಂದ ಈ ಋಕ್ಕಿನ ತಾತ್ಪರ್ಯವು ವಿಶದವಾಗಿಲ್ಲ. ಇದೇರೀತಿ ಯದು ಮತ್ತು ತುರ್ವಶ ಇಬ್ಬರೂ ಸಹ ಇಂದ್ರನಿಂದ ಪರಾಜಯವನ್ನು ಪಡೆದುದಾಗಿ—

**ಪುರಃ ಸದ್ಯ ಇತ್ಥಾಧಿಯೇ ದಿವೋದಾಸಾಯ ಶಂಬರಂ । ಅಧ ತ್ಯಂ ತುರ್ವಶಂ ಯದುಂ ॥**

(ಋ. ಸಂ. ೯-೬೧-೨)

ಎಂಬ ಋಕ್ಕಿನಲ್ಲಿ ಹೇಳಿದೆ. ಇದರಿಂದ ಇಂದ್ರನು ತನ್ನ ಸಖನಾದ ದಿವೋದಾಸನಿಗಾಗಿ ಯದುವನ್ನೂ ತುರ್ವಶನನ್ನೂ ನಿಗ್ರಹಿಸಿದುದಾಗಿ ಕಂಡುಬರುತ್ತದೆ. ಆದರೆ—

**ಪ್ರಯತ್ಸಮುದ್ರಮತಿ ಶೂರ ಪರ್ಷಿ ಪಾರಯಾ ತುರ್ವಶಂ ಯದುಂ ಸ್ವಸ್ತಿ ।**

(ಋ. ಸಂ. ೧-೧೭೪-೯)

**ಉತ ತ್ಯಾ ತುರ್ವಶಾಯದೂ ಅಸ್ನಾತಾರಾ ಶಚೀಪತಿಃ । ಇಂದ್ರೋ ವಿದ್ವಾँ ಅಪಾರಯತ್ ॥**

(ಋ. ಸಂ. ೪-೩೦-೧೭)

**ತ್ವಮಪೋ ಯದವೇ ತುರ್ವಶಾಯಾರಮಯಃ ಸುದುಘಾಃ ಪಾರ ಇಂದ್ರ ।**

(ಋ. ಸಂ. ೫-೩೧-೮)

**ಮಹತ್ತೇ ವೃಷ್ಣೋ ಅಭಿಚಕ್ಷ್ಯಂ ಕೃತಂ ಪಶ್ಯೇಮ ತುರ್ವಶಂ ಯದುಂ ।**

(ಋ. ಸಂ. ೮-೪-೭)

ಇತ್ಯಾದ್ಯನೇಕ ಋಕ್ಕುಗಳಲ್ಲಿ ಯದು ಮತ್ತು ತುರ್ವಶರಿಬ್ಬರೂ ಇಂದ್ರನಿಂದ ಸಹಾಯವನ್ನು ಪಡೆದ ವಿಷಯವು ಉಕ್ತವಾಗಿದೆ.

ಸಂಹಿತಾಪಾಠಃ

ಅಹಂ ಸಪ್ತ ಸ್ರವತೋ ಧಾರಯಂ ವೃಷಾ ದ್ರವಿತ್ನ್ವಃ ಪೃಥಿವ್ಯಾಂ ಸೀರಾ ಅಧಿ ।
ಅಹಮರ್ಣಾಂಸಿ ವಿ ತಿರಾಮಿ ಸುಕ್ರತುರ್ಯುಧಾ ವಿದಂ ಮನವೇ ಗಾತುಮಿಷ್ಟಯೇ ॥ ೮ ||

ಪದಪಾಠಃ

ಅಹಂ । ಸಪ್ತ । ಸ್ರವತಃ । ಧಾರಯಂ । ವೃಷಾ । ದ್ರವಿತ್ನ್ವಃ । ಪೃಥಿವ್ಯಾಂ । ಸೀರಾಃ । ಅಧಿ ।
ಅಹಂ । ಅರ್ಣಾಂಸಿ । ವಿ । ತಿರಾಮಿ । ಸುऽಕ್ರತುಃ । ಯುಧಾ । ವಿದಂ । ಮನವೇ । ಗಾತುಂ । ಇಷ್ಟಯೇ ॥

ಸಾಯಣಭಾಷ್ಯಂ

**ವೃಷಾ ವರ್ಷಕೋऽಹಂ ಸಪ್ತ ಸ್ರವತಃ ಸ್ರವಂತೀರ್ನದೀರ್ಧಾರಯಂ । ಅಧಾರಯಂ । ಕೀದೃಶ್ಯಸ್ತಾಃ । ದ್ರವಿತ್ನ್ವೋ ದ್ರವಂತೀಃ ॥ ವಾ ಛಂದಸೀತಿ ಪೂರ್ವಸವರ್ಣದೀರ್ಘಾಭಾವಃ ॥ ಸೀರಾಃ ಸರಣಶೀಲಾಃ । ಕುತ್ರ । ಪೃಥಿವ್ಯಾಂ । ಸುಕ್ರತುಃ ಶೋಭನಕರ್ಮಾಹಮರ್ಣಾಂಸ್ಯುದಕಾನಿ ವಿ ತಿರಾಮಿ । ಪ್ರಯಚ್ಛಾಮಿ । ಕಿಂಚ ಮನವೇ ಮನುಷ್ಯಾಯೇಷ್ಟಯೇ ತಸ್ಯ ಗಮನಾಯ ಗಾತುಂ ಮಾರ್ಗಂ ಯುಧಾ ಸಂಪ್ರಹಾರೇಣ । ನಿರೋಧಪರಿಹಾರೇಣೇತ್ಯರ್ಥಃ । ವಿದಂ । ಅಲಭಂ । ಪ್ರಾಯಚ್ಛಮಿತ್ಯರ್ಥಃ ॥ ವಿದೇರ್ಲಾಭಾರ್ಥಸ್ಯ ಪುಷಾದಿತ್ವಾತ್ । ಪಾ । ೩-೧-೫೫ । ಚ್ಲೇರಙ್ ॥**

ಪ್ರತಿಪದಾರ್ಥ

**ವೃಷಾ**—ಇಷ್ಟಾರ್ಥಪ್ರದನಾದ । **ಅಹಂ**—ನಾನು (ಇಂದ್ರನು) । **ಪೃಥಿವ್ಯಾಂ**—ಭೂಮಿಯ ಮೇಲೆ । **ದ್ರವಿತ್ನ್ವಃ**—ಶೀಘ್ರವಾಗಿ ಪ್ರವಹಿಸುವವೂ । **ಸೀರಾಃ**—ಚಲಿಸುವವೂ । **ಸ್ರವತಃ**—ಹರಿಯುತ್ತಿರುವ ನದಿಗಳ । **ಧಾರಯಂ**—ಧಾರಕನಾಗಿದ್ದೇನೆ । **ಸುಕ್ರತುಃ**—ಶ್ರೇಷ್ಠವಾದ ಸಾಹಸಕರ್ಮಗಳನ್ನೆಸಗುವ । **ಅಹಂ**—ನಾನು। **ಅರ್ಣಾಂಸಿ**—ವೃಷ್ಟ್ಯುದಕಗಳನ್ನು । **ವಿ ತಿರಾಮಿ**—(ಜನರಿಗೆ) ಅನುಗ್ರಹಿಸಿಕೊಡುತ್ತೇನೆ । **ಮನವೇ**—ಮನುಷ್ಯರಿಗೆ । **ಇಷ್ಟಯೇ**—ಸಂಚಾರಾರ್ಥವಾಗಿ । **ಗಾತುಂ**—ಮಾರ್ಗವನ್ನು । **ಯುಧಾ**—ವಿಘ್ನಪರಿಹಾರದಿಂದ । **ವಿದಂ**—ಸುಗಮವನ್ನಾಗಿ ಮಾಡುತ್ತೇನೆ.

ಭಾವಾರ್ಥ

ಇಷ್ಟಾರ್ಥಪ್ರದನಾದ ನಾನು (ಇಂದ್ರನು) ಭೂಮಿಯಮೇಲೆ ವೇಗವಾಗಿ ಪ್ರವಹಿಸುತ್ತಾ ಮುಂದೆ ಸರಿಯುತ್ತಿರುವ ನದಿಗಳ ಧಾರಕನೂ ಪೋಷಕನೂ ಆಗಿದ್ದೇನೆ. ಅನೇಕ ಶ್ರೇಷ್ಠಪರಾಕ್ರಮಕರ್ಮಗಳನ್ನೆಸಗುವ ನಾನು

ವೃಷ್ಟಿದ್ವಾರಾ ಉದಕಗಳನ್ನು ಜನರಿಗೆ ಅನುಗ್ರಹಿಸಿಕೊಡುತ್ತೇನೆ. ಮನುಷ್ಯರು ಸಂಚಾರಮಾಡಲು ಮಾರ್ಗವನ್ನು ವಿಘ್ನಾದಿಗಳಿಂದ ರಹಿತವಾಗಿಯೂ, ಸುಗಮವಾಗಿಯೂ ಆಗುವಂತೆ ಮಾಡುತ್ತೇನೆ.

## English Translation

The showerer (of rain), I supported the sevan rivers flowing and meandering over the earth : doer of good deeds, I spread out the waters : I found by war a path for man to go in.

ಸಂಹಿತಾಪಾಠಃ

ಅಹಂ ತದಾಸು ಧಾರಯಂ ಯದಾಸು ನ ದೇವಶ್ಚನ ತ್ವಷ್ಟಾಧಾರಯದ್ರುಶತ್।
ಸ್ಪಾರ್ಹಂ ಗವಾಮೂಧಃಸು ವಕ್ಷಣಾಸ್ವಾ ಮಧೋರ್ಮಧು ಶ್ವಾತ್ರ್ಯಂ
ಸೋಮಮಾಶಿರಂ ॥ ೧೦ ॥

ಪದಪಾಠಃ

ಅಹಂ । ತತ್ । ಆಸು । ಧಾರಯಂ । ಯತ್ । ಆಸು । ನ । ದೇವಃ । ಚನ । ತ್ವಷ್ಟಾ । ಅಧಾರಯತ್ । ರುಶತ್ ।
ಸ್ಪಾರ್ಹಂ । ಗವಾಂ । ಊಧಃऽಸು । ವಕ್ಷಣಾಸು । ಆ । ಮಧೋಃ । ಮಧು । ಶ್ವಾತ್ರ್ಯಂ । ಸೋಮಂ । ಆऽಶಿರಂ ॥ ೧೦ ॥

ಸಾಯಣಭಾಷ್ಯಂ

ಅಹಂ ತತ್ಪ್ರಸಿದ್ಧಂ ಪಯ ಆಸು ಗೋಷು ಧಾರಯಂ । ಧೃತವಾನಸ್ಮಿ । ಧೃಙ್ ಧಾರಣೇ । ಣ್ಯಂತಸ್ಯ ಲಙಿ ರೂಪಂ ॥ ಯತ್ಪಯ ಆಸು ಗೋಷು ದೇವಶ್ಚನ ತ್ವಷ್ಟಾ ದೇವಶಿಲ್ಪೀ ಸೂರ್ಯೋ ವಾ ದೇವೋ ನ ಚನಾಧಾರಯತ್ ಧರ್ತುಂ ನಾಶಕ್ನೋತ್ । ಕೀದೃಕ್ ಪಯೋऽಧಾರಯಮಿತಿ ಚೇತ್ ಉಚ್ಯತೇ । ರುಶದ್ದೀಪ್ತಂ ಸ್ಪಾರ್ಹಂ ಸ್ಪೃಹಣೀಯಂ । ಕೇಷು ಪ್ರದೇಶೇಷ್ವಿತಿ ಉಚ್ಯತೇ । ಗವಾಮೂಧಃಸು ಉದ್ಧತತರೇಷು ಗವಾಂ ಪಯೋಧಾರಣಪ್ರದೇಶೇಷು । ಕಿಂಚ ಮಧೂದಕಂ ವಕ್ಷಣಾಸು ನದೀನಾಮೈತತ್ । ವಹನಶೀಲಾಸು ನದೀಷು ಧಾರಯಾಮೀತ್ಯನುಷಜ್ಯತೇ । ನದ್ಯುದಕಧಾರಣಸ್ಯಾವಧಿರುಚ್ಯತೇ । ಆ ಮಧೋರೋದಕೋತ್ಪತ್ತೇಃ । ಆಗಾಮಿವರ್ಷಸಮಯಪರ್ಯಂತಮಿತ್ಯರ್ಥಃ । ಕೀದೃಶಂ ಮಧ್ವಿತಿ ತದುಚ್ಯತೇ । ಶ್ವಾತ್ರ್ಯಂ । ಶ್ವಾತ್ರಮಿತಿ ಕ್ಷಿಪ್ರನಾಮ । ಕ್ಷಿಪ್ರಗಮನಾರ್ಹಂ । ಯದ್ವಾ । ಶ್ವಾತ್ರ್ಯಮಿತ್ಯುತ್ತರತ್ರ ಸಂಬಧ್ಯತೇ । ಶ್ವಾತ್ರ್ಯಂ ಸುಖಾವಹಂ ಸೋಮಂ ಪ್ರತ್ಯಾಶಿರಂ ಧಾರಯಂ ॥

ಪ್ರತಿಪದಾರ್ಥ

**ಯತ್**—ಯಾವ ಹಾಲನ್ನು | **ಆಸು**—ಗೋವುಗಳಲ್ಲಿ | **ದೇವಶ್ಚನ**—ಇತರ ಯಾವ ದೇವನಾಗಲಿ | **ತ್ವಷ್ಟಾ**—ದೇವಶಿಲ್ಪಿಯಾದ ತ್ವಷ್ಟೃವಾಗಲಿ ಅಥವಾ ಸೂರ್ಯನಾಗಲಿ | **ನ ಚನ ಅಧಾರಯತ್**—ತುಂಬಲು ಸಮರ್ಥನಾಗಲಿಲ್ಲವೋ ಅಂತಹ | **ರುಶತ್**—ಪ್ರಕಾಶಮಾನವಾದುದೂ (ಶ್ರೇಷ್ಠವಾದುದೂ) | **ಸ್ಪಾರ್ಹಂ**—ಎಲ್ಲರಿಗೂ ಬೇಕಾಗಿರುವುದೂ ಆದ | **ತತ್**—ಆ ಹಾಲನ್ನು | **ಆಸು**—ಆ ಗೋವುಗಳಲ್ಲಿ ಎಂದರೆ | **ಗವಾಂ ಊಧಸ್ಸು**—ಅವುಗಳ ಸ್ತನಗಳಲ್ಲಿ | **ಅಹಂ**—ನಾನು | **ಧಾರಯಂ**—ತುಂಬಿದ್ದೇದೆ | **ವಕ್ಷಣಾಸು**—ಪ್ರವಹಿಸುವ ನದಿಗಳಲ್ಲಿ | **ಆ ಮಧೋಃ**—ಅವು ಉತ್ಪತ್ತಿಯಾಗುವ ಪ್ರದೇಶದಿಂದಲೂ ಅಥವಾ ವೃಷ್ಟಿಯಾಗುವ ವರೆಗೂ ಬೇಸಿಗೆಯಲ್ಲಿ | **ಶ್ವಾತ್ರ್ಯಂ**—ವೇಗವಾಗಿ ಹರಿಯುವ | **ಮಧು**—ಉದಕವನ್ನೂ ಅಥವಾ | (**ಶ್ವಾತ್ರ್ಯಂ**—ಸುಖಪ್ರದವಾದ | **ಸೋಮಂ**—ಸೋಮರಸವನ್ನು ) | **ಆಶಿರಂ**—ತುಂಬಿದ್ದೇನೆ.

ಭಾವಾರ್ಥ

ದೇವಶಿಲ್ಪಿಯಾದ ತ್ವಷ್ಟೃವಾಗಲಿ, ಸೂರ್ಯನಾಗಲಿ, ಇತರರ ಯಾವ ದೇವತೆಯಾಗಲಿ ಗೋವುಗಳ ಕೆಚ್ಚಲುಗಳಲ್ಲಿ ತುಂಬಲಾಗದ ಶುಭ್ರವಾದುದೂ, ಎಲ್ಲರಿಗೂ ಬೇಕಾದುದೂ ಆದ ಹಾಲನ್ನು ಇಂದ್ರನಾದ ನಾನು ಆ ಗೋವುಗಳಲ್ಲಿ ತುಂಬಿದ್ದೇನೆ ಮತ್ತು ಪ್ರವಹಿಸುವ ನದಿಗಳಲ್ಲಿ ಬೇಸಿಗೆಕಾಲದಲ್ಲಿಯೂ ಸಿಹಿಯಾದ ನೀರನ್ನು ಮತ್ತು ಸೋಮಲತೆಗಳಲ್ಲಿ ಜನರಿಗೆ ಸುಖವನ್ನುಂಟುಮಾಡುವ ಸೋಮರಸವನ್ನೂ ತುಂಬಿದ್ದೇನೆ.

## English Translation

I have kept up in them that which no deity, not even Twashtri, has maintained, bright, desirable, (contained) in the udders of the cows : in the rivers (I uphold) the water up to the (source of the) water, the delightful Soma and the milk and curds.

ಸಂಹಿತಾಪಾಠಃ

ಏವಾ ದೇವಾಁ ಇಂದ್ರೋ ವಿವ್ಯೇ ನೄನ್ ಪ್ರ ಚ್ಯೌತ್ನೇನ ಮಘವಾ ಸತ್ಯರಾಧಾಃ ।
ವಿಶ್ವೇತ್ತಾ ತೇ ಹರಿವಃ ಶಚೀವೋಽಭಿ ತುರಾಸಃ ಸ್ವಯಶೋ ಗೃಣಂತಿ ॥೧೧॥

ಪದಪಾಠಃ

ಏವ । ದೇವಾಁನ್ । ಇಂದ್ರಃ । ವಿವ್ಯೇ । ನೄನ್ । ಪ್ರ । ಚ್ಯೌತ್ನೇನ । ಮಘಽವಾ । ಸತ್ಯಽರಾಧಾಃ ।
ವಿಶ್ವಾ । ಇತ್ । ತಾ । ತೇ । ಹರಿಽವಃ । ಶಚೀಽವಃ । ಅಭಿ । ತುರಾಸಃ । ಸ್ವಽಯಶಃ । ಗೃಣಂತಿ ॥ ೧೧ ॥

ಸಾಯಣಭಾಷ್ಯಂ

ಅಥಾನಯೇಂದ್ರ ಇಂದ್ರಭಾವಂ ಪರಿತ್ಯಜ್ಯ ಋಷಿಭಾವೇನಾಹ | ಏವ್ನೈವಮುಕ್ತಪ್ರಕಾರೇಣ ದೇವಾನ್ನೄಂಶ್ಚೇಂದ್ರೋ ದೇವಃ ಪ್ರ ವಿವ್ಯೇ | ಪ್ರಕರ್ಷೇಣ ಗಮಯತಿ | ತಸ್ಮಾತ್ಪರಾಚೀಃ ಪ್ರಜಾಃ ಪ್ರ ವೀಯಂತೇ ಪ್ರತೀಚೀರ್ಜಾಯಂತೇ | ತೈ. ಸಂ. ೬-೩-೧-೪ | ಇತಿ ಬ್ರಾಹ್ಮಣಂ | ಕಿಮನ್ಯಸಹಾಯೇನ ನೇತ್ಯಾಹ | ಚ್ಯೌತ್ನೇನ ಸ್ವೀಯೇನ ಬಲೇನ | ಕೀದೃಶ ಇಂದ್ರಃ | ಮಘವಾ ಧನವಾನ್ ಸತ್ಯರಾಧಾಃ ಸತ್ಯಧನಃ | ಅಥ ಪ್ರತ್ಯಕ್ಷೇಣಾಹ | ಹೇ ಹರಿವೋ ಹರಿಭ್ಯಾಂ ತದ್ವ ಇ್ಯಾಚೀವಃ ಕರ್ಮವನ್ ಹೇ ಸ್ವಯಶಃ ಸ್ವಾಯತ್ತಕೀರ್ತೇಽನ್ನವನ್ವೇಂದ್ರ ತಾ ತಾನಿ ವಿಶ್ವಾ ಸರ್ವಾಣಿ ಕರ್ಮಾಣಿ ತೇ ತವ ಸಂಬಂಧೀನಿ ಯೇಷು ಕರ್ಮಸು ತುರಾಸಸ್ತ್ವರಮಾಣಾ ಋತ್ವಿಜೋಽಭಿ ಗೃಣಂತಿ ಅಭಿಷ್ಟುವಂತಿ ||

ಪ್ರತಿಪದಾರ್ಥ

**ಮಘವಾ**—ಧನವಂತನೂ | **ಸತ್ಯರಾಧಾಃ**—ನಿಜವಾದ ಸಂಪತ್ತುಳ್ಳವನೂ ಆದ | **ಇಂದ್ರಃ**—ಇಂದ್ರನು | **ಏವ**—ಈ ಪ್ರಕಾರವಾಗಿ | **ದೇವಾನ್**—ದೇವತೆಗಳನ್ನೂ | **ನೄನ್**—ಮಾನವರನ್ನೂ | **ಚ್ಯೌತ್ನೇನ**—ತನ್ನ ಸ್ವಶಕ್ತಿಸಾಮರ್ಥ್ಯಗಳಿಂದ | **ಪ್ರ ವಿವ್ಯೇ**—ಉತ್ತಮರೀತಿಯಿಂದ ಅನುಗ್ರಹಿಸುತ್ತಾನೆ | **ಹರಿವಃ**—ಹರೀ ಎಂಬ ಅಶ್ವೋಪೇತನೂ | **ಶಚಿವಃ**—ಸಾಹಸಕೃತ್ಯಗಳನ್ನೆಸಗುವವನೂ | **ಸ್ವಯಶಃ**—ಕೀರ್ತಿಯುತನೂ ಅಥವಾ ಅನ್ನವಂತನೂ ಆದ ಎಲೈ ಇಂದ್ರನೇ | **ತಾ ವಿಶ್ವಾ**—ಈ ಸಮಸ್ತ ಕರ್ಮಗಳನ್ನೂ | **ತುರಾಸಃ**—ಶೀಘ್ರವಾಗಿ ನಿನ್ನನ್ನು ಸ್ತುತಿಸುವ | **ತೇ**—ಆ ಋತ್ವಿಕ್ಕುಗಳು | **ಅಭಿ ಗೃಣಂತಿ**—ಪ್ರಶಂಸಿಸಿ ಸ್ತುತಿಸುತ್ತಾರೆ.

ಭಾವಾರ್ಥ

ನಿಜವಾದ ಸಂಪತ್ತುಳ್ಳವನೂ, ಧನವಂತನೂ ಆದ ಇಂದ್ರನು ಈ ಪ್ರಕಾರವಾಗಿ ತನ್ನ ಸ್ವಸಾಮರ್ಥ್ಯದಿಂದ ದೇವತೆಗಳನ್ನೂ, ಮಾನವರನ್ನೂ ಅಧಿಕವಾಗಿ ಅನುಗ್ರಹಿಸುತ್ತಾನೆ. ಸಾಹಸಕರ್ಮಗಳನ್ನು ಮಾಡುವವನೂ, ಹರೀ ಎಂಬ ಅಶ್ವಗಳಿಂದ ಯುಕ್ತನಾದವನೂ, ಕೀರ್ತಿ ಅಥವಾ ಅನ್ನಯುತನೂ ಆದ ಎಲೈ ಇಂದ್ರನೇ, ಶೀಘ್ರವಾಗಿ ನಿನ್ನನ್ನು ಸ್ತುತಿಸುವ ಆ ಋತ್ವಿಗ್ಜನರು ಪ್ರಸಿದ್ಧವಾದ ನಿನ್ನ ಸಾಹಸಕರ್ಮಗಳನ್ನು ಬಹಳವಾಗಿ ಪ್ರಶಂಸಿಸಿ ಸ್ತುತಿಸುತ್ತಾರೆ.

English Translation

(Indra speaks as Rishi :) In this manner does Indra, the possessor of opulence, the affluent in truth, by his energy stimulate both gods and men : lord of horses, doer of great deeds, renowned (Indra), the eager (priests) glorify all these (your actions).

## ಐವತ್ತನೆಯ ಸೂಕ್ತ

ಸಾಯಣಭಾಷ್ಯಂ

ಪ್ರ ವೋ ಮಹ ಇತಿ ಸಪ್ತರ್ಚಮಷ್ಟಮಂ ಸೂಕ್ತಂ || ಆದಿತೋ ದ್ವೇ ಜಗತ್ಯೌ | ಕೇ ತೇ ನರ ಇತ್ಯಾದಿಕೇ ದ್ವೇ ಅಭಿಸಾರಿಣ್ಯೌ | ಆದಿತೋ ದ್ವೌ ದಶಾಕ್ಷರೌ ತತೋ ದ್ವೌ ದ್ವಾದಶಕೌ ಸಾಭಿಸಾರಿಣೀ ||

**ತೆದುಕ್ತಂ । ವೈರಾಜೌ ಜಾಗತೌ ಚಾಭಿಸಾರಿಣೀ । ಅನು. ೯-೪ । ಇತಿ॥ ತತಸ್ತ್ರಿಷ್ಟುಬೇಕಾ । ತತೋ ದ್ವೇ ಜಗತ್ಯೌ। ಪೂರ್ವವದೃಷಿದೇವತೇ । ತಥಾ ಚಾನುಕ್ರಾಂತಂ।ಪ್ರ ವೋ ಮಹೇ ಸಪ್ತ ದ್ವಿಜಗತ್ಯಾದ್ಯಂತಂ ಕೇ ತೇಽಭಿಸಾರಿಣ್ಯಾವಿತಿ ॥ ಮಹಾವ್ರತೇ ನಿಷ್ಕೇವಲ್ಯ ಏತತ್ಸೂಕ್ತಂ ನಿವಿದ್ಧಾನಂ । ಸೂತ್ರಿತಂ ಚ । ಪ್ರ ವೋ ಮಹೇ ಮಂದಮಾನಾಯಾಂಧಸ ಇತಿ ನಿವಿದ್ಧಾನಂ । ಐ.ಆ.೫-೩-೧ । ಇತಿ ॥**

ಅನುವಾದವು—**ಪ್ರ ವೋ ಮಹೇ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತದ ಮೊದಲಿನ ಎರಡು ಋಕ್ಕುಗಳು ಜಗತೀಛಂದಸ್ಕವು. **ಕೇ ತೇ ನರಃ** ಎಂದು ಮೊದಲಾಗುವ ಎರಡು ಋಕ್ಕುಗಳು (೩-೪ ಋಕ್ಕುಗಳು) ಅಭಿಸಾರಿಣೀ ಎಂಬ ಛಂದಸ್ಸಿನವು. ಒಂದು ಋಕ್ಕಿನಲ್ಲಿ ನಾಲ್ಕು ಪಾದಗಳಿದ್ದು ಮೊದಲಿನ ಎರಡು ಪಾದಗಳಲ್ಲಿ ಹತ್ತುಹತ್ತು ಅಕ್ಷರಗಳೂ, ಮುಂದಿನ ಎರಡು ಪಾದಗಳಲ್ಲಿ ಹನ್ನೆರಡು ಹನ್ನೆರಡು ಅಕ್ಷರಗಳೂ ಇದ್ದರೆ ಅದು ಅಭಿಸಾರಿಣೀ ಎಂಬ ಛಂದಸ್ಸೆನಿಸುವುದು (ಅನು. ೯-೪). ಅದರ ಮುಂದಿನ ಒಂದು ಋಕ್ಕು (೫ ನೇ ಋಕ್ಕು) ತ್ರಿಷ್ಟುಪ್‌ಛಂದಸ್ಕವು. ಅದರ ಮುಂದಿನ ಎರಡು ಋಕ್ಕುಗಳು (೬-೭ ನೇ ಋಕ್ಕುಗಳು) ಜಗತೀಛಂದಸ್ಕವು. ಈ ಸೂಕ್ತದ ಋಷಿದೇವತೆಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ—**ಪ್ರ ವೋ ಮಹೇ ಸಪ್ತ ದ್ವಿಜಗತಾದ್ಯಂತಂ ಕೇ ತೇಽಭಿಸಾರಿಣ್ಯೌ** ಎಂದು ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನದಲ್ಲಿ ಈ ಸೂಕ್ತವನ್ನು ನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಐತರೇಯ ಆರಣ್ಯಕದ—**ಪ್ರ ವೋ ಮಹೇ ಮಂದಮಾನಾಯಾಂಧಸ ಇತಿ ನಿವಿದ್ಧಾನಂ** ಎಂಬ ವಾಕ್ಯದಿಂದ ನಿರ್ದಿಷ್ಟವಾಗಿರುವುದು ಐ. ಆ. ೫-೩-೧).

## ಸೂಕ್ತ—೫೦

ಮಂಡಲ—೧೦ ॥ ಅನುವಾಕ—೪ ॥ ಸೂಕ್ತ—೫೦ ॥
ಅಷ್ಟಕ—೮ ॥ ಅಧ್ಯಾಯ—೧ ॥ ವರ್ಗ—೯॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ಇಂದ್ರೋ ವೈಕುಂಠಃ ॥
ದೇವತಾ—ಇಂದ್ರೋ ವೈಕುಂಠಃ ॥
ಛಂದಃ—೧, ೨, ೬, ೭. ಜಗತೀ । ೩-೪. ಅಭಿಸಾರಿಣೀ । ೫. ತ್ರಿಷ್ಟುಪ್ ॥

ಸಂಹಿತಾಪಾಠಃ

ಪ್ರ ವೋ ಮಹೇ ಮಂದಮಾನಾಯಾಂಧಸೋಽರ್ಚಾ ವಿಶ್ವಾನರಾಯ ವಿಶ್ವಾಭುವೇ ।
ಇಂದ್ರಸ್ಯ ಯಸ್ಯ ಸುಮಖಂ ಸಹೋ ಮಹಿ ಶ್ರವೋ ನೃಮ್ಣಂ ಚ ರೋದಸೀ ಸಪರ್ಯತಃ ॥ ೧ ॥

ಪದಪಾಠಃ

ಪ್ರ । ವಃ । ಮಹೇ । ಮಂದಮಾನಾಯ । ಅಂಧಸಃ । ಅರ್ಚ । ವಿಶ್ವಾನರಾಯ । ವಿಶ್ವಽಭುವೇ ।

ಇಂದ್ರಸ್ಯ । ಯಸ್ಯ । ಸುಽಮಖಂ । ಸಹಃ । ಮಹಿ । ಶ್ರವಃ । ನೃಮ್ಣಂ । ಚ । ರೋದಸೀ ಇತಿ । ಸಪರ್ಯತಃ ॥

ಸಾಯಣಭಾಷ್ಯಂ

**ಹೇ ಸ್ತೋತಃ ವಸ್ತ್ವಂ ॥ ಪೂಜಾರ್ಥೇ ಬಹುವಚನಂ ॥ ಮಹೇ ಮಹತೇಽಂಧಸಃ । ಅಂಧಸೇತ್ಯರ್ಥಃ । ಸೋಮೇನ ಮಂದಮಾನಾಯ ಮೋದಮಾನಾಯ ವಿಶ್ವಾನರಾಯ ಸರ್ವಸ್ಯ ನೇತ್ರೇ ॥ ನರೇ ಸಂಜ್ಞಾಯಾಮಿತಿ ದೀರ್ಘಃ ॥ ವಿಶ್ವಾಭುವೇ ಸರ್ವಸ್ಯ ಭಾವಯಿತ್ರೇ ಮಹ್ಯಮಿಂದ್ರಾಯ ಪ್ರಾರ್ಚ । ಅರ್ಚತಿಃ ಸ್ತುತಿಕರ್ಮಾ । ಪ್ರೋಚ್ಚಾರಯ । ಯಸ್ಯ ಮಮೇಂದ್ರಸ್ಯ ಸುಮಖಂ ಸುಷ್ಠು ಮಂಹನೀಯಂ ಸಹೋ ಬಲಂ ಮಹಿ ಮಹಚ್ಛ್ರವೋಽನ್ನಂ ನೃಮ್ಣಂ ಸುಖಂ ಚ ರೋದಸೀ ದ್ಯಾವಾಪೃಥಿವ್ಯೌ ಸಪರ್ಯತಃ । ಪೂಜಯತಃ । ತಸ್ಮಾ ಇಂದ್ರಾಯಾರ್ಚೇತಿ ಸಮನ್ವಯಃ ॥**

ಪ್ರತಿಪದಾರ್ಥ

(ಎಲೈ ಸ್ತೋತೃವೇ) **ವಃ**—ನೀನು । **ಮಹೇ**—ಬಹಳವಾದ । **ಅಂಧಸಃ**—ಸೋಮರೂಪವಾದ ಅನ್ನದಿಂದ । **ಮಂದಮಾನಾಯ**—ಹರ್ಷಗೊಂಡವನೂ । **ವಿಶ್ವಾನರಾಯ**—ಸರ್ವರಿಗೂ ಮಾರ್ಗದರ್ಶಕನೂ । **ವಿಶ್ವಾಭುವೇ**—ಸಮಸ್ತ ಉತ್ಪತ್ತಿಗೂ ಕಾರಣಭೂತನೂ ಆದ ಇಂದ್ರನನ್ನುದ್ದೇಶಿಸಿ । **ಪ್ರ ಅರ್ಚ**—ಸ್ತುತಿಯನ್ನು ಪಠಿಸು । **ಯಸ್ಯ ಇಂದ್ರಸ್ಯ**—ಯಾವ ನನ್ನ (ಇಂದ್ರನ) । **ಸುಮಖಂ**—ಪೂಜಾರ್ಹವಾದ । **ಸಹಃ**—ಬಲವನ್ನೂ । **ಮಹಿ**—ಮಹತ್ತಾದ । **ಶ್ರವಃ**—ಅನ್ನವನ್ನೂ । **ನೃಮ್ಣಂ ಚ**—ಸುಖವನ್ನೂ ಕೂಡ । **ರೋದಸೀ**—ದ್ಯಾವಾಪೃಥಿವಿಗಳು । **ಸಪರ್ಯತಃ**—ಪ್ರಶಂಸಿಸಿ (ಗೌರವಿಸಿ) ಪೂಜಿಸುತ್ತವೆ.

ಭಾವಾರ್ಥ

ಇಂದ್ರನಾದ ನನ್ನ ಪೂಜಾರ್ಹವಾದ ಎಂದರೆ ಅತ್ಯಧಿಕವಾದ ಬಲವನ್ನೂ ನನ್ನಲ್ಲಿರುವ ಬಹಳವಾದ ಅನ್ನಾದ್ಯಾಹಾರವನ್ನೂ ನನ್ನನ್ನು ಸೇವಿಸುವವರಿಗೆ ನಾನು ಕೊಡುವ ಸುಖವನ್ನೂ ಸಹ ದ್ಯಾವಾಪೃಥಿವಿಗಳು ಬಹಳವಾಗಿ ಪ್ರಶಂಸಿಸಿ ಪೂಜಿಸುತ್ತವೆ. ಎಲೈ ಸ್ತೋತೃವೇ, ಬಹಳವಾದ ಸೋಮಪಾನದಿಂದ ತೃಪ್ತಿಯನ್ನು ಹೊಂದಿರುವವನೂ ಸರ್ವರಿಗೂ ಮಾರ್ಗದರ್ಶಕನೂ ಸರ್ವಕ್ಕೂ ಕಾರಣಭೂತನೂ ಆದ ಅಂತಹ ಇಂದ್ರನನ್ನುದ್ದೇಶಿಸಿ ಸ್ತೋತ್ರವನ್ನು ಪಠಿಸು.

## English Translation

Worship him who is exhilarated by the sacrificial food, the mighty Indra, the leader of all men, the creator of all, whose venerable strength and abundant food and wealth, heaven and earth adore.

ಸಂಹಿತಾಪಾಠಃ

ಸೋ ಚಿನ್ನು ಸಖ್ಯಾ ನರ್ಯ ಇನಃ ಸ್ತುತಶ್ಚರ್ಕೃತ್ಯ ಇಂದ್ರೋ ಮಾವತೇ ನರೇ।
ವಿಶ್ವಾಸು ಧೂರ್ಷು ವಾಜಕೃತ್ಯೇಷು ಸತ್ಪತೇ ವೃತ್ರೇ ವಾಪ್ಸ್ವ೧ಭಿ ಶೂರ ಮಂದಸೇ ॥ ೨ ॥

ಪದಪಾಠಃ

ಸಃ । ಚಿತ್ । ನು । ಸಖ್ಯಾ । ನರ್ಯಃ । ಇನಃ । ಸ್ತುತಃ । ಚರ್ಕೃತ್ಯಃ । ಇಂದ್ರಃ । ಮಾಽವತೇ । ನರೇ । ವಿಶ್ವಾಸು । ಧೂಃಽಸು । ವಾಜಽಕೃತ್ಯೇಷು । ಸತ್ಽಪತೇ । ವೃತ್ರೇ । ವಾ । ಅಪ್ಽಸು। ಅಭಿ । ಶೂರ । ಮಂದಸೇ ॥ ೨ ॥

ಸಾಯಣಭಾಷ್ಯಂ

**ಸೋ ಚಿನ್ನು ಸ ಖಲ್ವಿಂದ್ರಃ ಸಖ್ಯಾ ಸಖಿಭೂತೇನ ನಿಮಿತ್ತೇನ ನರ್ಯೋ ನೃಭ್ಯೋ ಹಿತ ಇನಃ ಸರ್ವಸ್ಯೇಶ್ವರಃ ಸ್ತುತಃ ಸರ್ವೈರಭಿಷ್ಟುತಃ । ಸಖ್ಯಾ ಸ್ತುತ ಇತಿ ವಾನ್ವಯಃ । ಮಾವತೇ ಮತ್ಸದೃಶಾಯ ನರೇ ನರಾಯ ಚರ್ಕೃತ್ಯಃ । ಪುನಃಪುನಃ ಕರ್ತವ್ಯಃ । ಪರಿಚರಣೀಯ ಇತ್ಯರ್ಥಃ । ಅಥ ಪ್ರತ್ಯಕ್ಷವಾದಃ। ಹೇ ಸತ್ಪತೇ ಸತಾಂ ಪಾಲಕೇಂದ್ರ ಸ ತ್ವಂ ವಿಶ್ವಾಸು ಸರ್ವಾಸು ಧೂರ್ಷು ವೋಢವ್ಯೇಷು ಕಾರ್ಯಭಾರೇಷು ವಾಜಕೃತ್ಯೇಷು ಚ ಬಲಕೃತ್ಯೇಷು ಚ ವೃತ್ರೇ ವಾಪ್ಸು ಮೇಘೇ ವರ್ತಮಾನೇಷೂದಕೇಷು ಚ ನಿಮಿತ್ತೇಷು ಹೇ ಶೂರ ತ್ವಮಭಿ ಮಂದಸೇ । ಅಭಿಷ್ಟೂಯಸೇ ॥**

ಪ್ರತಿಪದಾರ್ಥ

**ಸಃ ಚಿನ್ನು ಇಂದ್ರಃ**—ಆ ಇಂದ್ರನೇ । **ಸಖ್ಯಾ**—ಸ್ನೇಹನಿಮಿತ್ತವಾಗಿ । **ನರ್ಯಃ**—ಮಾನವರಿಗೆ ಹಿತಕಾರಿಯಾಗಿಯೂ । **ಇನಃ**—ಸರ್ವರಿಗೂ ಒಡೆಯನಾಗಿಯೂ । **ಸ್ತುತಃ**—ಸರ್ವರಿಂದಲೂ ಸ್ತುತಿಸಲ್ಪಡುವವನಾಗಿಯೂ ಆಗಿ । **ಮಾವತೇ ನರೇ**—ನನ್ನಂತಹ ಮನುಷ್ಯನಿಂದ । **ಚರ್ಕೃತ್ಯಃ**—ಪದೇಪದೇ ಸೇವಿಸಲ್ಪಡಲು ಅರ್ಹನಾಗಿದ್ದಾನೆ । **ಶೂರ**—ಎಲೈ ಪರಾಕ್ರಮಶಾಲಿಯಾದ । **ಸತ್ಪತೇ**—ಸಜ್ಜನರಿಗೆ ಪಾಲಕನಾದ ಎಲೈ ಇಂದ್ರನೇ ನೀನು । **ವಿಶ್ವಾಸು**—ಸಮಸ್ತವಾದ । **ಧೂರ್ಷು**—ಎಲ್ಲವನ್ನೂ ಧರಿಸಿ ಪೋಷಿಸುವ । **ವಾಜಕೃತ್ಯೇಷು**-ಸಾಹಸಕಾರ್ಯಗಳಿಂದ ಕೂಡಿದ । **ವೃತ್ರೇ**—ಆವರಕವಾದ । **ವಾಪ್ಸು**—ಮೇಘದ ಉದಕಗಳಲ್ಲಿ । **ಅಭಿ ಮಂದಸೇ**—ಸಂತೋಷದಿಂದ ನಲಿದಾಡುತ್ತೀಯೆ.

ಭಾವಾರ್ಥ

ಆ ಇಂದ್ರನೇ ಮಾನವರಿಗೆ ಹಿತಕಾರಿಯೂ, ಸರ್ವರಿಗೂ ಒಡೆಯನೂ, ಸರ್ವರಿಂದಲೂ ಸ್ತುತಿಸಲ್ಪಡುವವನೂ ಆಗಿರುವುದಲ್ಲದೆ ಸ್ನೇಹನಿಮಿತ್ತವಾಗಿ ನನ್ನಂತಹ ಪುರುಷರಿಂದ ಪದೇಪದೇ ಸ್ತುತ್ಯರ್ಹನಾಗಿದ್ದಾನೆ. ಪರಾಕ್ರಮ

ಶಾಲಿಯೂ, ಸಜ್ಜನರ ಪಾಲಕನೂ ಆದ ಎಲೈ ಇಂದ್ರನೇ, ಎಲ್ಲವನ್ನೂ ಧರಿಸಿ ಪೋಷಿಸುವುದೂ, ಸಾಹಸಕಾರ್ಯಗಳಿಂದ ಕೂಡಿರುವುದೂ, ವೃತ್ರಾಸುರನ ಸಂಬಂಧವಾದುದೂ ಆದ ಮೇಘೋದಕಗಳಲ್ಲಿ ನಿನ್ನ ಶಕ್ತಿಪರಾಕ್ರಮಗಳನ್ನು ಪ್ರದರ್ಶಿಸುತ್ತಾ ಸಂತೋಷಪಡುತ್ತೀಯೆ.

## English Translalion

That Indra, kind to man, the lord of all, who is praised by his friend, is to be repeatedly honoured by men like me; you, hero, protector of the good, are glorified in the all-sustaining food-producing cloud-imprisoned waters.

ಸಂಹಿತಾಪಾಠಃ

ಕೇ ತೇ ನರ ಇಂದ್ರ ಯೇ ತ ಇಷೇ ಯೇ ತೇ ಸುಮ್ನಂ ಸಧನ್ಯ೧ ಮಿಯಕ್ಷಾನ್।
ಕೇ ತೇ ವಾಜಾಯಾಸುರ್ಯಾಯ ಹಿನ್ವಿರೇ ಕೇ ಅಪ್ಸು ಸ್ವಾಸೂರ್ವರಾಸು
ಪೌಂಸ್ಯೇ ॥ ೩ ॥

ಪದಪಾಠಃ

ಕೇ । ತೇ । ನರಃ । ಇಂದ್ರ । ಯೇ । ತೇ । ಇಷೇ । ಯೇ । ತೇ । ಸುಮ್ನಂ । ಸ್ಽಧನ್ಯಂ । ಇಯಕ್ಷಾನ್ ।
ಕೇ । ತೇ । ವಾಜಾಯ । ಅಸುರ್ಯಾಯ । ಹಿನ್ವಿರೇ । ಕೇ । ಅಪ್ಽಸು । ಸ್ವಾಸು । ಉರ್ವರಾಸು ।
ಪೌಂಸ್ಯೇ ॥ ೩ ॥

ಸಾಯಣಭಾಷ್ಯಂ

ಹೇ ಇಂದ್ರ ತೇ ಕೇ ನರಃ ಕೇ ಮನುಷ್ಯಾ ಇತಿ ಪ್ರಶ್ನಃ । ತೇ ಮಹಾಂತೋ ಮಯಾ ಜ್ಞಾತವ್ಯಾ ಇತ್ಯಭಿಪ್ರಾಯಃ । ಪೃಷ್ಟವ್ಯಾನಾಹ । ಯೇ ನರಾಸ್ತೇ ತವೇಷೇಽನ್ನಾಯ ಪ್ರಭವಂತೀತಿ ಶೇಷಃ । ಯೇ ಚ ತೇ ಸುಮ್ನಂ ಸುಖಂ ತ್ವದೀಯಂ ಸಧನ್ಯಂ ಧನಯುಕ್ತಮಿಯಕ್ಷಾನ್ ಗಚ್ಛಂತಿ । ಇಯಕ್ಷತಿರ್ಗತಿಕರ್ಮಾ । ತ್ವದೀಯಮನ್ನಂ ಸುಖಂ ಧನಂ ಚ ಯೇ ಲಭಂತೇ ತೇ ಕೇ ಮಹಾತ್ಮಾನ ಇತಿ । ಕಿಂಚ ಕೇ ತೇ ತವಾಸುರ್ಯಾಯಾಸುರಸಂಬಂಧಿನೇ ತೇಷಾಂ ವಧನಿಮಿತ್ತಾಯ ವಾಜಾಯ ಬಲಾಯ ಹಿನ್ವಿರೇ । ಪ್ರೇರಯಂತಿ ಸೋಮಾದಿ ಹವಿಃ । ಕೇ ವಾಪ್ಸು ಸ್ವಾಸು ಸ್ವಾಪೇಕ್ಷಿತೇಷೂದಕೇಷೂರ್ವರಾಸು ಸರ್ವಸಸ್ಯಾಢ್ಯಾಸು ಭೂಮಿಷು ಪೌಂಸ್ಯೇ ಪುಂಸ್ತ್ವೇ ಚೇತಿ ತೇಷು ನಿಮಿತ್ತಭೂತೇಷು ಹವಿಃ ಪ್ರೇರಯಂತೀತ್ಯನುವರ್ತತೇ । ಉಕ್ತವಿಧಾ ಮಹಾಂತೋ ದುರ್ಲಭಾ ಇತಿ ಭಾವಃ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರದೇ । **ಯೇ**—ಯಾವ ಮನುಷ್ಯರು । **ತೇ**—ನಿನ್ನಲ್ಲಿರುವ । **ಇಷೇ**—ಅನ್ನವನ್ನು ಪಡೆಯಲು ಸಮರ್ಥರೋ । **ತೇ ಕೇ**—ಅವರು ಯಾರು । **ಯೇ ಚ**—ಯಾವ ಮನುಷ್ಯರು । **ತೇ**—ನಿನ್ನಿಂದ ಲಬ್ಧವಾಗುವ । **ಸಧನ್ಯಂ**—ಧನಯುಕ್ತವಾದ । **ಸುಮ್ನಂ**—ಸುಖವನ್ನು । **ಇಯಕ್ಷಾನ್**—ಪಡೆಯುವರೋ ಆ ಪುರುಷರು ಯಾರು । **ತೇ**—ನಿನ್ನ । **ಅಸುರ್ಯಾಯ**—ಅಸುರವಧನಿಮಿತ್ತಾರ್ಥವಾದ । **ವಾಜಾಯ**—ಬಲವನ್ನು (ಉತ್ಸಾಹವನ್ನು) । **ಹಿನ್ವಿರೇ ತೇ**—ಪ್ರೇರಿಸುವ ಪುರುಷರು । **ಕೇ**—ಯಾರು । **ಸ್ವಾಸು**—ತಾವು ಅಪೇಕ್ಷಿಸುವ । **ಅಪ್ಸು**—ಉದಕಗಳನ್ನೂ । **ಉರ್ವರಾಸು**—ಸರ್ವಸಸ್ಯಸಮೃದ್ಧಿಯಾದ ಭೂಮಿಯನ್ನೂ । **ಪೌಂಸ್ಯೇ**—ಅಧಿಕವಾದ ಪೌರುಷವನ್ನು ಅಥವಾ ಬಲವನ್ನು ಕೊಡುವಂತೆ ನಿನ್ನನ್ನು ಪ್ರೇರಿಸುವರೋ । **ಕೇ ತೇ**—ಅಂತಹ ಮನುಷ್ಯರು ಯಾರು ?

ಭಾವಾರ್ಥ

ಎಲೈ ಇಂದ್ರನೇ, ನಿನ್ನಲ್ಲಿರುವ ಅನ್ನಾದ್ಯಾಹಾರವನ್ನೂ, ಧನವನ್ನೂ, ಸೌಖ್ಯವನ್ನೂ ಪಡೆಯುವ ಪುರುಷರು ಯಾರು ? ಅಸುರವಧನಿಮಿತ್ತವಾಗಿ ನಿನ್ನನ್ನು ಪ್ರೋತ್ಸಾಹಿಸಿ ನಿನ್ನ ಬಲವನ್ನು ಹೆಚ್ಚಿಸುವ ಪುರುಷರು ಯಾರು ? ಮತ್ತು ತಮಗೆ ಬೇಕಾದ ವೃಷ್ಟ್ಯುದಕಗಳನ್ನೂ, ಸರ್ವಸಸ್ಯಪರಿಪೂರ್ಣವಾದ ಭೂಮಿಯನ್ನೂ, ಅಧಿಕವಾದ ಬಲವನ್ನೂ ಕೊಡುವಂತೆ ನಿನ್ನನ್ನು ಪ್ರೇರಿಸಬಲ್ಲ ಮನುಷ್ಯರು ಯಾರಿರುವರು ?

## English Translation

What men, Indra, are they who (are eminent) in offering food to you, who are desirous of obtaining from you happiness and opulence, who send you (oblations) for the sake of strength (to fight) the Asura, who (send oblations) for the sake of obtaining spontaneously-flowing waters and cultivable lands, and manly vigour ?

ಸಂಹಿತಾಪಾಠಃ

**ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನ್ಭುವೋ ವಿಶ್ವೇಷು ಸವನೇಷು ಯಜ್ಞಿಯಃ ।**
**ಭುವೋ ನೄಂಶ್ಚ್ಯೌತ್ನೋ ವಿಶ್ವಸ್ಮಿನ್ಭರೇ ಜ್ಯೇಷ್ಠಶ್ಚ ಮಂತ್ರೋ ವಿಶ್ವಚರ್ಷಣೇ ॥**

ಪದಪಾಠಃ

**ಭುವಃ । ತ್ವಂ । ಇಂದ್ರ । ಬ್ರಹ್ಮಣಾ । ಮಹಾನ್ । ಭುವಃ । ವಿಶ್ವೇಷು । ಸವನೇಷು । ಯಜ್ಞಿಯಃ ।**

ಭುವಃ । ನೄನ್ । ಚ್ಯೌತ್ನಃ । ವಿಶ್ವಸ್ಮಿನ್ । ಭರೇ । ಜ್ಯೇಷ್ಠಃ । ಚ । ಮಂತ್ರಃ । ವಿಶ್ವಽಚರ್ಷಣೇ ॥ ೪ ॥

ಸಾಯಣಭಾಷ್ಯಂ

ಭುವಸ್ತ್ವಮಿಂದ್ರೇತಿ ದರ್ಶಪೂರ್ಣಮಾಸಯೋರ್ಮಾಹೇಂದ್ರಸ್ಯ ಹವಿಷೋ ಯಾಜ್ಯಾ । ಸೂತ್ರಿತಂ ಚ । ಮಹಾँ ಇಂದ್ರೋ ಯ ಓಜಸಾ ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನ್ । ಆ.೧.೬ । ಇತಿ ॥ ದೇವಸುವಾಂ ಹವಿಃಷ್ವಿಂದ್ರಸ್ಯ ಜ್ಯೇಷ್ಠಸ್ಯೈಷೈವ ಯಾಜ್ಯಾ । ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನನಮೀವಾಸ ಇಳಯಾ । ಆ.೪.೧೧ । ಇತಿ ಹಿ ಸೂತ್ರಿತಂ ॥ ಏಷೈವ ಭೂನಾಮ್ನ್ಯೇಕಾಹೇ ನಿಷ್ಕೇವಲ್ಯೇ ಸೂಕ್ತಮುಖೀಯಾ । ಸೂತ್ರಿತಂ ಚ । ಶಸ್ಯಮುಕ್ತಂ ಬೃಹಸ್ಪತಿಸವೇನ ತ್ವಂ ಭುವಃ ಪ್ರತಿಮಾನಂ ಪೃಥಿವ್ಯಾ ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನ್ । ಆ.೯.೫ । ಇತಿ ॥

ಹೇ ಇಂದ್ರ ತ್ವಂ ಬ್ರಹ್ಮಣಾಸ್ಮತ್ಕೃತೇನ ಪರಿವೃಢೇನ ಸ್ತೋತ್ರೇಣ ಮಹಾನ್ಭುವಃ । ಅಭವಃ ॥ ಭವತೇರ್ಲೇಟಿ ಭೂಸುವೋಸ್ತಿಙೀತಿ ಗುಣಪ್ರತಿಷೇಧ ಉವಙಾದೇಶಃ ॥ ತಥಾ ವಿಶ್ವೇಷು ಸರ್ವೇಷು ಸವನೇಷು ಯಜ್ಞಿಯೋ ಯಷ್ಟವ್ಯೋ ಭುವಃ । ಅಭವಃ । ತಥಾ ವಿಶ್ವಸ್ಮಿನ್ಭರೇ ಸಂಗ್ರಾಮೇ ನೄನ್ ನೇತೄಣಾಂ ಶತ್ರೂಣಾಂ ಚ್ಯೌತ್ನಶ್ಚ್ಯಾವಯಿತಾಭವಃ । ಹೇ ವಿಶ್ವಚರ್ಷಣೇ ಸರ್ವಸ್ಯ ದ್ರಷ್ಟರಿಂದ್ರ ಮಂತ್ರೋ ಮಂತ್ರಯಿತವ್ಯಸ್ತ್ವಂ ಜ್ಯೇಷ್ಠಶ್ಚಾಭವಃ ಸರ್ವೇಷಾಂ ಮಧ್ಯೇ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ಬ್ರಹ್ಮಣಾ**—ನಾವು ಮಾಡುವ ಸ್ತೋತ್ರದಿಂದ । **ಮಹಾನ್**—ಮಹತ್ಸ್ವರೂಪವುಳ್ಳವನಾಗಿ । **ಭುವಃ**—ಆಗಿದ್ದೀಯೆ (ಮತ್ತು) । **ವಿಶ್ವೇಷು**—ಸಮಸ್ತವಾದ । **ಸವನೇಷು**—ಪ್ರಾತಃಸವನ, ಮಾಧ್ಯಂದಿನಸವನ ಮತ್ತು ತೃತೀಯಸವನಗಳಲ್ಲಿ ಅಥವಾ ಯಜ್ಞಗಳಲ್ಲಿ । **ಯಜ್ಞಿಯಃ**—ಯಜ್ಞಾರ್ಹನಾಗಿಯೂ । **ಭುವಃ**—ಆಗಿದ್ದೀಯೆ । **ವಿಶ್ವಸ್ಮಿನ್**—ಸಮಸ್ತವಾದ । **ಭರೇ**—ಯುದ್ಧದಲ್ಲಿ । **ನೄನ್**—ಶತ್ರುಜನರನ್ನು । **ಚ್ಯೌತ್ನಃ**—ನಾಶಮಾಡುವವನಾಗಿದ್ದೀಯೆ । **ವಿಶ್ವಚರ್ಷಣೇ**—ಸರ್ವವನ್ನೂ ವೀಕ್ಷಿಸುವ ಎಲೈ ಇಂದ್ರನೇ, ನೀನು । **ಮನ್ತ್ರಃ**—ಮನಸ್ಸಿನಲ್ಲಿ ಧ್ಯಾನಿಸಲ್ಪಡುವವನೂ । **ಜ್ಯೇಷ್ಠಃ ಚ**—ಸರ್ವರ ಮಧ್ಯದಲ್ಲಿಯೂ ಮುಖ್ಯನಾದವನೂ ಆಗಿದ್ದೀಯೆ.

ಭಾವಾರ್ಥ

ಎಲೈ ಇಂದ್ರನೇ, ನಾವು ಮಾಡುವ ಸ್ತುತಿಗಳಿಂದ ನೀನು ಪ್ರವೃದ್ಧಮಾನನಾಗಿ ಮಹತ್ಸ್ವರೂಪವುಳ್ಳವನಾಗಿರುವೆ. ಸಮಸ್ತ ಯಜ್ಞಗಳಲ್ಲಿಯೂ ಪೂಜ್ಯನಾಗಿ ಆರಾಧಿಸಲ್ಪಡುವೆ. ಸಮಸ್ತ ಯುದ್ಧಗಳಲ್ಲಿಯೂ ಶತ್ರುಜನರನ್ನು ನಾಶಪಡಿಸುವೆ. ಸರ್ವವನ್ನೂ ನೋಡಬಲ್ಲ ಎಲೈ ಇಂದ್ರನೇ, ನೀನು ಮನಸ್ಸಿನಲ್ಲಿ ಸರ್ವರಿಂದಲೂ ಧ್ಯಾನಿಸಲ್ಪಡುವವನೂ, ಸರ್ವದೇವತೆಗಳಲ್ಲಿ ಮುಖ್ಯನಾದವನೂ ಆಗಿರುವೆ.

## English Translation

Indra, you have become mighty through our praise: you have become adorable at all sacrifices, in every combat you are the caster down of the leaders (of hosts): beholder of all, you are the best and most excellent.

### ವಿಶೇಷವಿಷಯಗಳು

ದಶಪೂರ್ಣಮಾಸಯಾಗಗಳಲ್ಲಿ ಮಾಹೇಂದ್ರದೇವತೆಯನ್ನುದ್ದೇಶಿಸಿ ಮಾಡುವ ಹವಿಸ್ಸಿನ ಹೋಮದಲ್ಲಿ **ಭುವಸ್ತ್ವಮಿಂದ್ರ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಮಹಾँ ಇಂದ್ರೋ ಯ ಓಜಸಾ ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನ್** ಎಂಬ ಸೂತ್ರದಿಂದ (ಆ. ೧-೬) ವಿವೃತವಾಗಿರುವುದು. ದೇವಸುವ ಎಂಬ ಎಂಟುಮಂದಿ ದೇವತೆಗಳನ್ನುದ್ದೇಶಿಸಿ ಮಾಡುವ ಹವಿಸ್ಸಿನ ಹೋಮದಲ್ಲಿ ಈ ಋಕ್ಕನ್ನು ಜ್ಯೇಷ್ಠ ಇಂದ್ರನನ್ನುದ್ದೇಶಿಸಿ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನನಮೀವಾಃಸ ಇಳೆಯಾ** ಎಂಬ ಸೂತ್ರದಿಂದ (ಆ. ೪-೧-೧) ವಿವೃತವಾಗಿರುವುದು ಮತ್ತು ಭೂನಾಮವೆಂಬ ಒಂದು ದಿನದಮಟ್ಟಿಗೆ ಮಾಡುವ ಇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳ ಪ್ರಾರಂಭದಲ್ಲಿ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಶಸ್ಯಮುಕ್ತಂ ಬೃಹಸ್ಪತಿಸವೇನ ತ್ವಂ ಭುವಃ ಪ್ರತಿಮಾನಂ ಪೃಥಿವ್ಯಾ ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನ್** ಎಂಬ ಸೂತ್ರದಿಂದ (ಆ. ೯-೫) ವಿವೃತವಾಗಿರುವುದು.

ಈ ಋಕ್ಕನ್ನು ದೇವಸೂಃ ಎಂಬ ಯಾಗದಲ್ಲಿ ಇಂದ್ರನ ಪರವಾದ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಹೇಳಿರುವುದಷ್ಟೆ. ಮೊದಲು **ದೇವಸೂ** ಯಾಗವೆಂದರೇನು ಎಂಬುದನ್ನು ತಿಳಿದು ಅನಂತರ ಮಂತ್ರದ ವಿವರಣೆಯನ್ನು ತಿಳಿಯಬಹುದು.

**ದೇವಸುವಃ** ಎಂಬುದು ವಿಶ್ವಕ್ಕೆಲ್ಲಾ ಚೈತನ್ಯದಾಯಿಗಳಾದ ದೇವತೆಗಳ ಸಮೂಹವು, ಈ ಹೆಸರಿನಿಂದ ಕರೆಯಲ್ಪಟ್ಟಿದೆ. ಈ ದೇವತೆಗಳ ಸಂಖ್ಯೆಯು ಎಂಟು. ರಾಜಸೂಯಾಂಗವಾದ ಅಭಿಷೇಚನಕ್ರಿಯೆಯ ಕಾಲದಲ್ಲಿ ಈ ಎಂಟು ದೇವತೆಗಳನ್ನುದ್ದೇಶಿಸಿ ವಿಧ್ಯುಕ್ತವಾದ ಹವಿಸ್ಸನ್ನರ್ಪಿಸಬೇಕು. ಅದರ ಕ್ರಮವು ಈರೀತಿ ಇದೆ—

(1) **ಸವಿತ್ರೇ ಸತ್ಯಪ್ರಸವಾಯ । ದ್ವಾದಶಕಪಾಲಂ ವಾಷ್ಟಾಕಪಾಲಂ ವಾ ಪುರೋಡಾಶಂ ನಿರ್ವಪತಿ ಶುಕ್ಲಾನಾಂ ವ್ರೀಹೀಣಾಂ ಸವಿತಾ ವೈ ದೇವಾನಾಂ ಪ್ರಸವಿತಾ ಸವಿತೃಪ್ರಸೂತಃ ಸೂಯಾ ಇತ್ಯಥ ಯತ್ಪ್ಲಾಶುಕಾನಾಂ ವ್ರೀಹೀಣಾಂ ಕ್ಷಿಪ್ರೇ ಮಾ ಪ್ರಸುವಾನಿತಿ ॥**

(ಶ. ಬ್ರಾ. ೫-೩-೩-೨)

ಪ್ಲಾಶುಕಾಖ್ಯವಾದ (ಬೆಳ್ಳಗಿರುವ) ಧಾನ್ಯವು ಚೇತನದಾಯಿಯಾದುದು. ಶೀಘ್ರವಾಗಿ ವೃಷ್ಟಿಯನ್ನು ಕೊಡತಕ್ಕದ್ದು. ಇದರಿಂದ ದ್ವಾದಶಕಪಾಲ ಅಥವಾ ಅಷ್ಟಾಕಪಾಲಾತ್ಮಕವಾದ ಹವಿಸ್ಸನ್ನು ಸಿದ್ಧಪಡಿಸಿ ದೇವತೆಗಳಿಗೆ ಪ್ರಸವಿತೃವೂ ಸತ್ಯಪ್ರಸವನೂ ಆದ ಸವಿತೃದೇವನನ್ನುದ್ದೇಶಿಸಿ ಅರ್ಪಿಸತಕ್ಕದ್ದು. ಹೀಗೆ ಅರ್ಪಿಸುವುದರಿಂದ ಅಭಿಷೇಕಕ್ಕೆ ಸಿದ್ಧನಾಗಿರುವ ರಾಜನು ತನ್ನ ಕರ್ತವ್ಯದಲ್ಲಿ ಚೈತನ್ಯವನ್ನು ಸಂಪಾದಿಸುವ ವಿಶ್ವಾಸವನ್ನು ಹೊಂದುತ್ತಾನೆ.

ಭುವಃ । ನೄನ್ । ಚ್ಯೌತ್ನಃ । ವಿಶ್ವಸ್ಮಿನ್ । ಭರೇ । ಜ್ಯೇಷ್ಠಃ । ಚ । ಮಂತ್ರಃ । ವಿಶ್ವಽಚರ್ಷಣೇ ॥ ೪ ॥

ಸಾಯಣಭಾಷ್ಯಂ

ಭುವಸ್ತ್ವಮಿಂದ್ರೇತಿ ದರ್ಶಪೂರ್ಣಮಾಸಯೋರ್ವಾರ್ಧಹೇಂದ್ರಸ್ಯ ಹವಿಷೋ ಯಾಜ್ಯಾ । ಸೂತ್ರಿತಂ ಚ । ಮಹಾಁ ಇಂದ್ರೋ ಯ ಓಜಸಾ ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನ್ । ಆ.೧.೬ । ಇತಿ ॥ ದೇವಸುವಾಂ ಹವಿಃಷ್ವಿಂದ್ರಸ್ಯ ಜ್ಯೇಷ್ಠಸ್ಯೈಷೈವ ಯಾಜ್ಯಾ । ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನನಮೀವಾಸ ಇಳಯಾ । ಆ.೪.೧೧ । ಇತಿ ಹಿ ಸೂತ್ರಿತಂ ॥ ಏಷೈವ ಭೂನಾಮ್ನ್ಯೇಕಾಹೇ ನಿಷ್ಕೇವಲ್ಯೇ ಸೂಕ್ತಮುಖೀಯಾ । ಸೂತ್ರಿತಂ ಚ । ಶಸ್ಯಮುಕ್ತಂ ಬೃಹಸ್ಪತಿಸವೇನ ತ್ವಂ ಭುವಃ ಪ್ರತಿಮಾನಂ ಪೃಥಿವ್ಯಾ ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನ್ । ಆ.೯.೫ । ಇತಿ ॥

ಹೇ ಇಂದ್ರ ತ್ವಂ ಬ್ರಹ್ಮಣಾಸ್ಮತ್ಕೃತೇನ ಪರಿವೃಢೇನ ಸ್ತೋತ್ರೇಣ ಮಹಾನ್ಭುವಃ । ಅಭವಃ ॥ ಭವತೇರ್ಲೇಟಿ ಭೂಸುವೋಸ್ತಿಙೀತಿ ಗುಣಪ್ರತಿಷೇಧ ಉವಙಾದೇಶಃ ॥ ತಥಾ ವಿಶ್ವೇಷು ಸರ್ವೇಷು ಸವನೇಷು ಯಜ್ಞಿಯೋ ಯಷ್ಟವ್ಯೋ ಭುವಃ । ಅಭವಃ । ತಥಾ ವಿಶ್ವಸ್ಮಿನ್ಭರೇ ಸಂಗ್ರಾಮೇ ನೄನ್ ನೇತೄಣಾಂ ಶತ್ರೂಣಾಂ ಚ್ಯೌತ್ನಶ್ಚ್ಯಾವಯಿತಾಭವಃ । ಹೇ ವಿಶ್ವಚರ್ಷಣೇ ಸರ್ವಸ್ಯ ದ್ರಷ್ಟರಿಂದ್ರ ಮಂತ್ರೋ ಮಂತ್ರಯಿತವ್ಯಸ್ತ್ವಂ ಜ್ಯೇಷ್ಠಶ್ಚಾಭವಃ ಸರ್ವೇಷಾಂ ಮಧ್ಯೇ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ಬ್ರಹ್ಮಣಾ—ನಾವು ಮಾಡುವ ಸ್ತೋತ್ರದಿಂದ । ಮಹಾನ್—ಮಹತ್ಸ್ವರೂಪವುಳ್ಳವನಾಗಿ । ಭುವಃ—ಆಗಿದ್ದೀಯೆ (ಮತ್ತು) । ವಿಶ್ವೇಷು—ಸಮಸ್ತವಾದ । ಸವನೇಷು—ಪ್ರಾತಃಸವನ, ಮಾಧ್ಯಂದಿನಸವನ ಮತ್ತು ತೃತೀಯಸವನಗಳಲ್ಲಿ ಅಥವಾ ಯಜ್ಞಗಳಲ್ಲಿ । ಯಜ್ಞಿಯಃ—ಯಜ್ಞಾರ್ಹನಾಗಿಯೂ । ಭುವಃ—ಆಗಿದ್ದೀಯೆ । ವಿಶ್ವಸ್ಮಿನ್—ಸಮಸ್ತವಾದ । ಭರೇ—ಯುದ್ಧದಲ್ಲಿ । ನೄನ್—ಶತ್ರುಜನರನ್ನು । ಚ್ಯೌತ್ನಃ—ನಾಶಮಾಡುವವನಾಗಿದ್ದೀಯೆ । ವಿಶ್ವಚರ್ಷಣೇ—ಸರ್ವವನ್ನೂ ವೀಕ್ಷಿಸುವ ಎಲೈ ಇಂದ್ರನೇ, ನೀನು । ಮನ್ತ್ರಃ—ಮನಸ್ಸಿನಲ್ಲಿ ಧ್ಯಾನಿಸಲ್ಪಡುವವನೂ । ಜ್ಯೇಷ್ಠಃ ಚ—ಸರ್ವರ ಮಧ್ಯದಲ್ಲಿಯೂ ಮುಖ್ಯನಾದವನೂ ಆಗಿದ್ದೀಯೆ.

ಭಾವಾರ್ಥ

ಎಲೈ ಇಂದ್ರನೇ, ನಾವು ಮಾಡುವ ಸ್ತುತಿಗಳಿಂದ ನೀನು ಪ್ರವೃದ್ಧಮಾನನಾಗಿ ಮಹತ್ಸ್ವರೂಪವುಳ್ಳವನಾಗಿರುವೆ. ಸಮಸ್ತ ಯಜ್ಞಗಳಲ್ಲಿಯೂ ಪೂಜ್ಯನಾಗಿ ಆರಾಧಿಸಲ್ಪಡುವೆ. ಸಮಸ್ತ ಯುದ್ಧಗಳಲ್ಲಿಯೂ ಶತ್ರುಜನರನ್ನು ನಾಶಪಡಿಸುವೆ. ಸರ್ವವನ್ನೂ ನೋಡಬಲ್ಲ ಎಲೈ ಇಂದ್ರನೇ, ನೀನು ಮನಸ್ಸಿನಲ್ಲಿ ಸರ್ವರಿಂದಲೂ ಧ್ಯಾನಿಸಲ್ಪಡುವವನೂ, ಸರ್ವದೇವತೆಗಳಲ್ಲಿ ಮುಖ್ಯನಾದವನೂ ಆಗಿರುವೆ.

## English Translation

Indra, you have become mighty through our praise: you have become adorable at all sacrifices, in every combat you are the caster down of the leaders (of hosts): beholder of all, you are the best and most excellent.

### ವಿಶೇಷವಿಷಯಗಳು

ದಶಪೂರ್ಣಮಾಸಯಾಗಗಳಲ್ಲಿ ಮಾಹೇಂದ್ರದೇವತೆಯನ್ನುದ್ದೇಶಿಸಿ ಮಾಡುವ ಹವಿಸ್ಸಿನ ಹೋಮದಲ್ಲಿ **ಭುವಸ್ತ್ವಮಿಂದ್ರ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಮಹಾಁ ಇಂದ್ರೋ ಯ ಓಜಸಾ ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನ್** ಎಂಬ ಸೂತ್ರದಿಂದ (ಆ. ೧-೬) ವಿವೃತವಾಗಿರುವುದು. ದೇವಸುವ ಎಂಬ ಎಂಟುಮಂದಿ ದೇವತೆಗಳನ್ನುದ್ದೇಶಿಸಿ ಮಾಡುವ ಹವಿಸ್ಸಿನ ಹೋಮದಲ್ಲಿ ಈ ಋಕ್ಕನ್ನು ಜ್ಯೇಷ್ಠ ಇಂದ್ರನನ್ನುದ್ದೇಶಿಸಿ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನನಮೀವಾಸ ಇಳೆಯಾ** ಎಂಬ ಸೂತ್ರದಿಂದ (ಆ. ೪-೧-೧) ವಿವೃತವಾಗಿರುವುದು ಮತ್ತು ಭೂನಾಮವೆಂಬ ಒಂದು ದಿನದಮಟ್ಟಿಗೆ ಮಾಡುವ ಇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳ ಪ್ರಾರಂಭದಲ್ಲಿ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಶಸ್ಯಮುಕ್ತಂ ಬೃಹಸ್ಪತಿಸವೇನ ತ್ವಂ ಭುವಃ ಪ್ರತಿಮಾನಂ ಪೃಥಿವ್ಯಾ ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನ್** ಎಂಬ ಸೂತ್ರದಿಂದ (ಆ. ೯-೫) ವಿವೃತವಾಗಿರುವುದು.

ಈ ಋಕ್ಕನ್ನು ದೇವಸೂಃ ಎಂಬ ಯಾಗದಲ್ಲಿ ಇಂದ್ರನ ಪರವಾದ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಹೇಳಿರುವುದಷ್ಟೆ. ಮೊದಲು **ದೇವಸೂ** ಯಾಗವೆಂದರೇನು ಎಂಬುದನ್ನು ತಿಳಿದು ಅನಂತರ ಮಂತ್ರದ ವಿವರಣೆಯನ್ನು ತಿಳಿಯಬಹುದು.

**ದೇವಸುವಃ** ಎಂಬುದು ವಿಶ್ವಕ್ಕೆಲ್ಲಾ ಚೈತನ್ಯದಾಯಿಗಳಾದ ದೇವತೆಗಳ ಸಮೂಹವು, ಈ ಹೆಸರಿನಿಂದ ಕರೆಯಲ್ಪಟ್ಟಿದೆ. ಈ ದೇವತೆಗಳ ಸಂಖ್ಯೆಯು ಎಂಟು. ರಾಜಸೂಯಾಂಗವಾದ ಅಭಿಷೇಚನಕ್ರಿಯೆಯ ಕಾಲದಲ್ಲಿ ಈ ಎಂಟು ದೇವತೆಗಳನ್ನುದ್ದೇಶಿಸಿ ವಿಧ್ಯುಕ್ತವಾದ ಹವಿಸ್ಸನ್ನರ್ಪಿಸಬೇಕು. ಅದರ ಕ್ರಮವು ಈರೀತಿ ಇದೆ—

(1) **ಸವಿತ್ರೇ ಸತ್ಯಪ್ರಸವಾಯ । ದ್ವಾದಶಕಪಾಲಂ ವಾಷ್ಟಾಕಪಾಲಂ ವಾ ಪುರೋಡಾಶಂ ನಿರ್ವಪತಿ ಶುಕ್ಲಾನಾಂ ವ್ರೀಹೀಣಾಂ ಸವಿತಾ ವೈ ದೇವಾನಾಂ ಪ್ರಸವಿತಾ ಸವಿತೃಪ್ರಸೂತಃ ಸೂಯಾ ಇತ್ಯಥ ಯಚ್ಛುಕ್ಲಾನಾಂ ವ್ರೀಹೀಣಾಂ ಕ್ಷಿಪ್ರೇ ಮಾ ಪ್ರಸುವಾನಿತಿ ॥**

(ಶ. ಬ್ರಾ. ೫-೩-೩-೨)

ಶುಕ್ಲಾಖ್ಯವಾದ (ಬೆಳ್ಳಗಿರುವ) ಧಾನ್ಯವು ಚೇತನದಾಯಿಯಾದುದು. ಶೀಘ್ರವಾಗಿ ವೃಷ್ಟಿಯನ್ನು ಕೊಡತಕ್ಕದ್ದು. ಇದರಿಂದ ದ್ವಾದಶಕಪಾಲ ಅಥವಾ ಅಷ್ಟಾಕಪಾಲಾತ್ಮಕವಾದ ಹವಿಸ್ಸನ್ನು ಸಿದ್ಧಪಡಿಸಿ ದೇವತೆಗಳಿಗೆ ಪ್ರಸವಿತೃವೂ ಸತ್ಯಪ್ರಸವನೂ ಆದ ಸವಿತೃದೇವನನ್ನುದ್ದೇಶಿಸಿ ಅರ್ಪಿಸತಕ್ಕದ್ದು. ಹೀಗೆ ಅರ್ಪಿಸುವುದರಿಂದ ಅಭಿಷೇಕಕ್ಕೆ ಸಿದ್ಧನಾಗಿರುವ ರಾಜನು ತನ್ನ ಕರ್ತವ್ಯದಲ್ಲಿ ಚೈತನ್ಯವನ್ನು ಸಂಪಾದಿಸುವ ವಿಶ್ವಾಸವನ್ನು ಹೊಂದುತ್ತಾನೆ.

(2) **ಅಥಾಗ್ನಯೇ ಗೃಹಪತಯೇ । ಅಷ್ಟಾಕಪಾಲಂ ಪುರೋಡಾಶಂ ನಿರ್ವಪತ್ಯಾಶೂನಾಂ ಶ್ರೀವ್ರ್ಯೈ ಗಾರ್ಹಪತ್ಯಂ ಯಾವತೋ ಯಾವತ ಈಷ್ಟೇ ತದೇನಮಗ್ನಿರೇವ ಗೃಹಪತಿ-ರ್ಗಾರ್ಹಪತ್ಯಮಭಿಪರಿಣಯತ್ಯಥ ಯದಾಶೂನಾಂ ಕ್ಷಿಪ್ರೇ ಮಾ ಪರಿಣಯಾನಿತಿ ॥**

ಅಶ್ವಾಖ್ಯವಾದ ಧಾನ್ಯವು ಶೀಘ್ರವಾಗಿ ಫಲಿಸತಕ್ಕದ್ದು. ಈ ಧಾನ್ಯದಿಂದ ಅಷ್ಟಾಕಪಾಲಾತ್ಮಕವಾದ ಪುರೋಡಾಶವನ್ನು ಸಿದ್ಧಪಡಿಸಿ ಗೃಹಪತಿಯಾದ ಅಗ್ನಿಯನ್ನುದ್ದೇಶಿಸಿ ಅರ್ಪಿಸತಕ್ಕದ್ದು. ಗೃಹಪತಿಯ ಸ್ಥಾನವು ಸಂಪದ್ಯುಕ್ತವಾದುದು. ಇಂತಹ ಅಗ್ನಿಯ ಅನುಗ್ರಹದಿಂದ ಗಾರ್ಹಪತ್ಯವನ್ನು ಪಡೆದ ರಾಜನು ಸಂಪದ್ಯುಕ್ತನಾಗುತ್ತಾನೆ ಮತ್ತು ಆಶುಧಾನ್ಯದಿಂದ ಕಲ್ಪಿತವಾದ ಪುರೋಡಾಶವನ್ನು ಅರ್ಪಿಸುವುದರಿಂದ ಅದರಂತೆಯೇ ತಾನೂ ಶೀಘ್ರವಾದ ಅಭಿವೃದ್ಧಿಯನ್ನು ಪಡೆಯುತ್ತಾನೆ.

(3) **ಅಥ ಸೋಮಾಯ ವನಸ್ಪತಯೇ । ಶ್ಯಾಮಾಕಂ ಚರುಂ ನಿರ್ವಪತಿ ತದೇನಗ್ಂ ಸೋಮ ಏವ ವನಸ್ಪತಿರೋಷಧೀಭ್ಯಃ ಸುವತ್ಯಥ ಯಚ್ಛ್ಯಾಮಾಕೋ ಭವತ್ಯೇತೇ ವೈ ಸೋಮ-ಸ್ಯೌಷಧೀನಾಂ ಪ್ರತ್ಯಕ್ಷತಮಾಂ ಯಚ್ಛ್ಯಾಮಾಕಾಸ್ತಸ್ಮಾಚ್ಛ್ಯಾಮಾಕೋ ಭವತಿ ॥**

ಸೋಮರಾಜನು ಓಷಧಿಗಳಿಗೆ ಅಧಿಪತಿಯು. ಓಷಧಿಗಳಲ್ಲೆಲ್ಲಾ ಈ ಶ್ಯಾಮಾಕವೇ ಸೊಮದೇವತೆಗೆ ಅತ್ಯಂತ ಪ್ರಿಯಕರವಾದುದು. ಶಾಂತಿಗೂ ಪುಷ್ಟಿಗೂ ಕಾರಣನಾದ ಸೋಮನನ್ನುದ್ದೇಶಿಸಿ ಶ್ಯಾಮಾಕದಿಂದ ಪುರೋಡಾಶವನ್ನು ಕಲ್ಪಿಸಿ ಅರ್ಪಿಸಿದರೆ ಅಭಿಷಿಕ್ತನಾದ ರಾಜನಿಗೆ ಶಾಂತಿಯೂ ಪುಷ್ಟಿಯೂ ದೊರೆಯುತ್ತದೆ.

(4) **ಅಥ ಬೃಹಸ್ಪತಯೇ ವಾಚೇ । ನೈವಾರಂ ಚರುಂ ನಿರ್ವಪತಿ ತದೇನಂ ಬೃಹಸ್ಪತಿರೇವ ವಾಚೇ ಸುವತ್ಯಥ ಯನ್ನೈವಾರೋ ಭವತಿ ಬ್ರಹ್ಮ ವೈ ಬೃಹಸ್ಪತಿರೇತೇ ವೈ ಬ್ರಹ್ಮಣಾ ಪಚ್ಯಂತೇ ಯನ್ನೀವಾರಾಸ್ತಸ್ಮಾನ್ನೈವಾರೋ ಭವತಿ ॥**

ಬೃಹಸ್ಪತಿಯು ಬ್ರಹ್ಮಪ್ರಿಯವಾದ ವಾಕ್ಕಿಗೆ ಅಧಿಪತಿಯು. ನೀವಾರಧಾನ್ಯವು ಬ್ರಹ್ಮಪೋಷಿತವಾದುದು. ಆದುದರಿಂದ ಈ ನೀವಾರಧಾನ್ಯದಿಂದ ಪುರೋಡಾಶವನ್ನು ಕಲ್ಪಿಸಿ ಬೃಹಸ್ಪತಿಗೆ ಅರ್ಪಿಸುವುದರಿಂದ ರಾಜನು ವಾಗಧಿಪತಿಯಾದ ಬೃಹಸ್ಪತಿಯ ಅನುಗ್ರಹವನ್ನು ಪಡೆದು ತನ್ನ ವಾಕ್ಛಕ್ತಿಯನ್ನು ವೃದ್ಧಿಪಡಿಸಿಕೊಳ್ಳುತ್ತಾನೆ.

(5) **ಅಥೇಂದ್ರಾಯ ಜ್ಯೇಷ್ಠಾಯ । ಹಾಯನಾನಾಂ ಚರುಂ ನಿರ್ವಪತಿ ತದೇನಮಿಂದ್ರ ಏವ ಜ್ಯೇಷ್ಠೋ ಜ್ಯೈಷ್ಠ್ಯಮಭಿಪರಿಣಯತ್ಯಥ ಯದ್ಧಾಯನಾನಾಂ ಭವತ್ಯೇತಿಷ್ಠಾ ವಾ ಏತಾ ಓಷಧಯೋ ಯದ್ಧಾಯನಾ ಅತಿಷ್ಠೋ ವಾ ಇಂದ್ರಸ್ತಸ್ಮಾದ್ಧಾಯನಾನಾಂ ಭವತಿ ॥**

ದೇವತೆಗಳಲ್ಲೆಲ್ಲಾ ಇಂದ್ರನೇ ಜ್ಯೇಷ್ಠನು ಮತ್ತು ಪ್ರಭುವು. ಓಷಧಿಗಳಲ್ಲೆಲ್ಲಾ ಹಾಯನವೇ ಜ್ಯೇಷ್ಠವು. ಆದುದರಿಂದ ಹಾಯನಧಾನ್ಯದಿಂದ ಚರುವನ್ನು ಕಲ್ಪಿಸಿ ಇಂದ್ರನಿಗೆ ಅರ್ಪಿಸತಕ್ಕದ್ದು. ಈ ಇಂದ್ರನ ಅನುಗ್ರಹದಿಂದ ರಾಜನು ಪ್ರಮುಖವಾದ ಸ್ಥಾನವನ್ನಾಕ್ರಮಿಸಿ ಎಲ್ಲರಿಗೂ ಪ್ರಭುವಾಗಲು ಅರ್ಹನಾಗುತ್ತಾನೆ.

(6) **ಅಥ ರುದ್ರಾಯ ಪಶುಪತಯೇ । ರೌದ್ರಂ ಗಾವೀಧುಕಂ ಚರುಂ ನಿರ್ವಪತಿ ತದೇನಗ್ಂ ರುದ್ರ ಏವ ಪಶುಪತಿಃ ಪಶುಭ್ಯಃ ಸುವತ್ಯಥ ಯದ್ಗಾವೀಧುಕೋ ಭವತಿ ವಾಸ್ತವ್ಯೋ ವಾ ಏಷ ದೇವೋ ವಾಸ್ತವ್ಯಾ ಗಾವೀಧುಕಾಸ್ತಸ್ಮಾದ್ಗಾವೀಧುಕೋ ಭವತಿ ॥**

ರುದ್ರನು ಪಶುಗಳಿಗೆ ಅಧಿಪತಿಯು. ಗಾವೀಧುಕವು ರುದ್ರಸಂಬಂಧವಾದುದು. ಯಜ್ಞದಲ್ಲಿ ರುದ್ರನಿಗೆ ವಾಸ್ತವ್ಯ ಭಾಗವು ಸೇರತಕ್ಕದ್ದು. ಗಾವೀಧುಕವೂ ಈ ವಾಸ್ತವ್ಯದ ಗುಂಪಿಗೇ ಸೇರತಕ್ಕದ್ದು. ಆದುದರಿಂದ ಗಾವೀಧುಕಧಾನ್ಯದ ಚರುವನ್ನು ಪಶುಪತಿಯಾದ ರುದ್ರನಿಗೆ ಅರ್ಪಿಸುವುದರಿಂದ ರಾಜನು ಪಶುಸಂಪತ್ತನ್ನು ಪಡೆಯುವುದರಲ್ಲಿ ಸಂಶಯವಿಲ್ಲ.

(7) **ಅಥ ಮಿತ್ರಾಯ ಸತ್ಯಾಯ । ನಾಂಬಾನಾಂ ಚರುಂ ನಿರ್ವಪತಿ ತದೇನಂ ಮಿತ್ರ ಏವ ಸತ್ಯೋ ಬ್ರಹ್ಮಣೇ ಸುವತ್ಯಥ ಯನ್ನಾಂಬಾನಾಂ ಭವತಿ ವಾರುಣ್ಯಾ ವಾ ಏತಾ ಓಷಧಯೋ ಯಾಃ ಕೃಷ್ಟೇ ಜಾಯಂತೇಽಥೈತೇ ಮೈತ್ರಾ ಯನ್ನಾಂಬಾಸ್ತಸ್ಮಾನ್ನಾಂಬಾನಾಂ ಭವತಿ ॥**

ನಾಂಬಬೀಜವು ವರುಣಸಂಬಂಧವಾದುದಾದದೂ ಸಹ ನಾಂಬಸಸಿಯು ಮಿತ್ರಸಂಬಂಧಿಯಾದುದು. ಆದುದರಿಂದ ನಾಂಬಬೀಜದಿಂದ ಚರುವನ್ನು ಕಲ್ಪಿಸಿ ಸತ್ಯಾತ್ಮಕನೂ, ಸತ್ಯಪ್ರಸವನೂ ಆದ ಮಿತ್ರನಿಗೆ ಅರ್ಪಿಸಿದರೆ ರಾಜನು ಮಿತ್ರನ ಅನುಗ್ರಹವನ್ನು ಸಂಪಾದಿಸಿ ಬ್ರಹ್ಮತೇಜಸ್ಸನ್ನು ಪಡೆಯುತ್ತಾನೆ.

(8) **ಅಥ ವರುಣಾಯ ಧರ್ಮಪತಯೇ । ವಾರುಣಂ ಯವಮಯಂ ಚರುಂ ನಿರ್ವಪತಿ ತದೇನಂ ವರುಣ ಏವ ಧರ್ಮಪತಿರ್ಧರ್ಮಸ್ಯ ಪತಿಂ ಕರೋತಿ ಪರಮತಾ ವೈ ಸಾ ಯೋ ಧರ್ಮಸ್ಯ ಪತಿರಸದ್ಯೋ ಹಿ ಪರಮತಾಂ ಗಚ್ಛತಿ ತಗ್ಂ ಹಿ ಧರ್ಮ ಉಪಯಂತಿ ತಸ್ಮಾದ್ವರುಣಾಯ ಧರ್ಮಪತಯೇ ॥**

(ಶ. ಬ್ರಾ. ೫-೩-೩-೯)

ಧರ್ಮಪತಿಯೂ, ಧರ್ಮಾಧ್ಯಕ್ಷನೂ ವರುಣನೇ ಆಗಿರುವನು. ಇದೇ ರಾಜನ ಅತ್ಯುತ್ತಮವಾದ ಪದವಿಯು. ಅವನಿಗೆ ಈ ಪದವಿಯು ಲಭಿಸಬೇಕಾದರೆ ವಿಶ್ವಧರ್ಮಕ್ಕೆಲ್ಲಾ ಪಾಲಕನಾದ ವರುಣನ ಅನುಗ್ರಹವು ಅತ್ಯವಶ್ಯಕವಾಗಿರುತ್ತದೆ. ಆದುದರಿಂದ ಅವನಿಗೆ ಪ್ರಿಯವಾದ ಯವಧಾನ್ಯದಿಂದ ಚರುವನ್ನು ಕಲ್ಪಿಸಿ ವರುಣನಿಗೆ ಅರ್ಪಿಸಬೇಕು. ವರುಣನ ಅನುಗ್ರಹದಿಂದ ರಾಜನು ಅತಿಶ್ಲಾಘ್ಯವಾದ ಧರ್ಮಾಧ್ಯಕ್ಷಪದವಿಯನ್ನು ಪಡೆಯುತ್ತಾನೆ.

ಈರೀತಿ ಎಂಟುಮಂದಿ ದೇವತೆಗಳೂ ಸಹ ದೇವಸೂ ಎಂಬ ರಾಜಸೂಯಾಂಗವಾದ ಕರ್ಮದಲ್ಲಿ ತಮ್ಮ ಸ್ಥಾನಕ್ಕನುಗುಣವಾಗಿ ಪೂಜಿಸಲ್ಪಡುತ್ತಾರೆ. ಅವರಲ್ಲಿ ಸತ್ಯಾತ್ಮಕನಾದ ಇಂದ್ರನೂ ಒಬ್ಬನು. ಅವನ ತೃಪ್ತ್ಯರ್ಥವಾಗಿ ಪ್ರಕೃತವಾದ ಮಂತ್ರವು ಪಠಿತವಾಗುತ್ತದೆ. ಇದೇ ದೇವಸೂಯಾಗವು ತೈತ್ತಿರೀಯಸಂಹಿತೆಯಲ್ಲಿಯೂ ಸಹ ಸ್ವಲ್ಪ ವ್ಯತ್ಯಸ್ತವಾಗಿ ಉಕ್ತವಾಗಿದೆ. ಮುಖ್ಯಾಂಶಗಳ ವಿವರಣೆಯಲ್ಲಿ ಏನೂ ವ್ಯತ್ಯಾಸವಿಲ್ಲ.

**ಅಗ್ನಯೇ ಗೃಹಪತಯೇ ಪುರೋಡಾಶಮಷ್ಟಾಕಪಾಲಂ ನಿರ್ವಪತಿ ಕೃಷ್ಣಾನಾಂ ವ್ರೀಹೀಣಾಗ್ಂ ಸೋಮಾಯ ವನಸ್ಪತಯೇ ಶ್ಯಾಮಾಕಂ ಚರುಗ್ಂ ಸವಿತ್ರೇ ಸತ್ಯಪ್ರಸವಾಯ ಪುರೋಡಾಶಂ ದ್ವಾದಶಕಪಾಲಮಾಶೂನಾಂ ವ್ರೀಹೀಣಾಗ್ಂ ರುದ್ರಾಯ ಪಶುಪತಯೇ ಗಾವೀಧುಕಂ ಚರುಂ ಬೃಹಸ್ಪತಯೇ ವಾಚಸ್ಪತಯೇ ನೈವಾರಂ ಚರುಮಿಂದ್ರಾಯ ಜ್ಯೇಷ್ಠಾಯ ಪುರೋಡಾಶಮೇಕಾದಶಕಪಾಲಂ ಮಹಾವ್ರೀಹೀಣಾಂ ಮಿತ್ರಾಯ ಸತ್ಯಾಯಾಂಬಾನಾಂ ಚರುಂ ವರುಣಾಯ ಧರ್ಮಪತಯೇ ಯವಮಯಂ ಚರುಗ್ಂ ಸವಿತಾ ತ್ವಾ ಪ್ರಸವಾನಾಗ್ಂ ಸುವತಾಂ ॥**

(ತೈ. ೧-೮-೧೦-೧)

ಈ ಮಂತ್ರದಲ್ಲಿ ದೇವಸೂ ಎಂಬ ಹೋಮದಲ್ಲಿ ನಾನಾ ದೇವತೆಗಳಿಗೆ ಅರ್ಪಿಸಬೇಕಾದ ಹವಿಸ್ಸುಗಳ ವಿವರಣೆ ಇದೆ. ದೇವತೆಗಳ ಸಂಖ್ಯೆಯೂ, ಹೆಸರುಗಳೂ ಶತಪಥಬ್ರಾಹ್ಮಣದಲ್ಲಿ ಉಕ್ತವಾಗಿರುವಂತೆಯೇ ಇದೆ. ಆದರೆ ಹವಿಸ್ಸಿಗೆ ಉಪಯೋಗಿಸುವ ಧಾನ್ಯಗಳಲ್ಲಿ ಸ್ವಲ್ಪ ವ್ಯತ್ಯಸ್ತವಾದ ವಿವರಣೆ ಇದೆ. ಸತ್ಯಪ್ರಸವನಾದ ಸವಿತೃವಿಗೆ ಶತಪಥದಲ್ಲಿ ಪ್ಲಾಶುಕಾಖ್ಯವಾದ ಧಾನ್ಯವನ್ನೂ, ಗೃಹಪತಿಯಾದ ಅಗ್ನಿಗೆ ಆಶುಧಾನ್ಯವನ್ನೂ, ಜ್ಯೇಷ್ಠನಾದ ಇಂದ್ರನಿಗೆ ಹಾಯನ ಧಾನ್ಯವನ್ನೂ ವಿಧಿಸಿದೆ. ತೈತ್ತಿರೀಯಸಂಹಿತೆಯಲ್ಲಿ ಸವಿತೃವಿಗೆ ಆಶುಧಾನ್ಯವನ್ನೂ, ಅಗ್ನಿಗೆ ಕೃಷ್ಣವ್ರೀಹಿಯನ್ನೂ, ಇಂದ್ರನಿಗೆ ಮಹಾವ್ರೀಹಿಯನ್ನೂ ನಿರ್ದೇಶಿಸಿದೆ. ದೇವತೆಗಳ ಸಂಖ್ಯೆಯು ಒಂದೇ ಆದರೂ ಈ ಎಂಟು ದೇವತೆಗಳನ್ನು ಶತಪಥದಲ್ಲಿ ಒಂದು ಕ್ರಮದಲ್ಲಿಯೂ ತೈತ್ತಿರೀಯಸಂಹಿತೆಯಲ್ಲಿ ಮತ್ತೊಂದು ಕ್ರಮದಲ್ಲಿಯೂ ವಿವರಿಸಿದೆ.

ಹೀಗೆ ದೇವಸೂಯಾಗದಲ್ಲಿ ಜ್ಯೇಷ್ಠನೆಂದು ವರ್ಣಿತನಾದ ಇಂದ್ರನು ಈ ಮಂತ್ರದಲ್ಲಿ ಸ್ತುತನಾಗಿದ್ದಾನೆ. ಈ ದೇವನನ್ನು ಪೂಜಿಸಿ ಉಪಾಸನೆಯನ್ನು ಮಾಡತಕ್ಕ ಪುರುಷನು ಜಯಶೀಲನೂ, ಅನ್ನಯುಕ್ತನೂ, ಪಾಪಮುಕ್ತನೂ ಆಗುತ್ತಾನೆಂದು ಪ್ರಶಂಸಿಸಿದೆ. ಇದೇ ಮಂತ್ರವು ತೈತ್ತಿರೀಯಬ್ರಾಹ್ಮಣದಲ್ಲಿಯೂ ಪಠಿತವಾಗಿದೆ.

**ದೇವಸುವಾಮೇತಾನಿ ಹವೀಗ್ಂಷಿ ಭವಂತಿ । ಏತಾವಂತೋ ವೈ ದೇವಾನಾಗ್ಂ ಸವಾಃ । ತ ಏವಾಸ್ಮೈ ಸರ್ವಾನ್ಸ್ವಾನ್ಪ್ರಯಚ್ಛಂತಿ । ತ ಏನಗ್ಂ ಸುವಂತೇ । ಅಗ್ನಿರೇವೈನಂ ಗೃಹಪತೀನಾಗ್ಂ ಸುವತೇ । ಸೋಮೋ ವನಸ್ಪತೀನಾಂ । ರುದ್ರಃ ಪಶೂನಾಂ । ಬೃಹಸ್ಪತಿರ್ವಾಚಾಂ ಇಂದ್ರೋ ಜ್ಯೇಷ್ಠಾನಾಂ । ಮಿತ್ರಸ್ಸತ್ಯಾನಾಂ । ವರುಣೋ ಧರ್ಮಪತೀನಾಂ । ........... । ಸವಿತಾ ತ್ವಾ ಪ್ರಸವಾನಾಗ್ಂ ಸುವತಾಂ ॥**

(ತೈ. ಬ್ರಾ. ೧-೭-೪-೧)

ಇದರ ಅರ್ಥವೂ ಮೇಲೆ ಹೇಳಿದ ವಿವರಣೆಯಂತೆಯೇ ಇದೆ. ಸಾಯಣರೂ, ಭಟ್ಟಭಾಸ್ಕರರೂ ತೈತ್ತಿರೀಯಸಂಹಿತೆಯಲ್ಲಿರುವ ವಿವರಣೆಯನ್ನೇ ಹೇಳಿದಾರೆ.

**ಸಂಹಿತಾಪಾಠಃ**

**ಅವಾ ನು ಕಂ ಜ್ಯಾಯಾನ್ ಯಜ್ಞವನಸೋ ಮಹೀಂ ತ ಓಮಾತ್ರಾಂ ಕೃಷ್ಟಯೋ ವಿದುಃ ।**
**ಅಸೋ ನು ಕಮಜರೋ ವರ್ಧಾಶ್ಚ ವಿಶ್ವೇದೇತಾ ಸವನಾ ತೂತುಮಾ ಕೃಷೇ ॥**

**ಪದಪಾಠಃ**

**ಅವ । ನು । ಕಂ । ಜ್ಯಾಯಾನ್ । ಯಜ್ಞಃವನಸಃ । ಮಹೀಂ । ತೇ । ಓಮಾತ್ರಾಂ । ಕೃಷ್ಟಯಃ । ವಿದುಃ । ಅಸಃ । ನು । ಕಂ । ಅಜರಃ । ವರ್ಧಾಃ । ಚ । ವಿಶ್ವಾ । ಇತ್ । ಏತಾ । ಸವನಾ । ತೂತುಮಾ । ಕೃಷೇ ॥ ೫ ॥**

ಸಾಯಣಭಾಷ್ಯಂ

**ಹೇ ಇಂದ್ರ ತ್ವಂ ಜ್ಯಾಯಾನ್ ಪ್ರಶಸ್ಯತರಸ್ತ್ವಂ ಯಜ್ಞವನಸಃ ಸಂಭಕ್ತಯಜ್ಞಾನ್ ಸ್ತೋತೄನ್ ನು ಕಂ ಕ್ಷಿಪ್ರಮವ । ರಕ್ಷ ॥ ಅಥ್ಯೇತಾರೋ ನು ಕಮಿತಿ ಪದದ್ವಯಂ ಕುರ್ವಂತಿ ತಥಾಪಿ ಹಿಕಂ ನುಕ-ಮಿತ್ಯಾದೀನಿ ಸರ್ವೋತ್ತರಾಣಿ ಪದಾನೀತ್ಯುಕ್ತವಾನ್ಯಾಸ್ಕಾಚಾರ್ಯಃ। ನೈ.೩-೧೨। ಅತಃ ಕೇವಲಾನಾಂ ಹಿಕಂ ಮಿತ್ಯೇವಮಾದೀನಾಂ ಯೋವಾನರ್ಥಃ ಸ ಏವ ವಿಶಿಷ್ಟಾನಾಮಪಿ । ತೈತ್ತಿರೀಯ ಅಪ್ಯೇಕಮೇವ ಪದಂ ಕುರ್ವಂತಿ ॥ ಅವೇತ್ಯುಕ್ತಂ । ಇಂದ್ರಸ್ಯಾವನಪ್ರಸಿದ್ಧಿಂ ದರ್ಶಯತಿ । ಹೇ ಇಂದ್ರ ತೇ ತವೌಮಾತ್ರಾಂ ರಕ್ಷಣಂ ಮಹೀಂ ಮಹದ್ವಿದುಃ ಕೃಷ್ಟಯೋ ಮನುಷ್ಯಾ ಋತ್ವಿಜಃ॥ ಓಮಾತ್ರಾಂ । ಅವ ಗತ್ಯಾದಿಷು। ಔಣಾದಿಕ ಆತ್ರನ್ಪ್ರತ್ಯಯಃ । ಛಾಂದಸ ಊಮಾದೇಶಃ ॥ ಕಿಂಚ ತ್ವಮಜರೋ ಜರಾರಹಿತೋಽಸಃ । ಭವ । ನು ಕಂ ಕ್ಷಿಪ್ರಂ ವರ್ಧಾಃ । ವರ್ಧಸ್ವ ಚ ಹವಿರಾಜ್ಯಾದಿನಾ । ಕಿಂಚ ವಿಶ್ವೇತ್ ಸರ್ವಾಣ್ಯಪ್ಯೇತಾನಿ ಸವನಾ ಸವನಾನಿ ತೂತುಮಾ ತೂರ್ಣಾನಿ ಕೃಷೇ । ಕರೋಷಿ ॥ ಕೃಷೇ । ಛಾಂದಸೇ ಲಿಟಿ ಛಂದಸಿ ವೇತಿ ದ್ವಿರ್ವಚನಾಭಾವಃ ॥**

ಪ್ರತಿಪದಾರ್ಥ

(ಎಲೈ ಇಂದ್ರನೇ ನೀನು) **ಜ್ಯಾಯಾನ್**—ಎಲ್ಲರಿಗಿಂತಲೂ ಶ್ರೇಷ್ಠನಾದವನು । **ಯಜ್ಞವನಸಃ**—ಯಜ್ಞಾನುಷ್ಠಾನದಲ್ಲಿ ನಿರತರಾದವರನ್ನು । **ನು ಕಂ**—ಶೀಘ್ರವಾಗಿ । **ಅವ**—ರಕ್ಷಿಸು (ಎಲೈ ಇಂದ್ರನೇ) । **ತೇ**—ನಿನ್ನ । **ಓಮಾತ್ರಾಂ**—ರಕ್ಷಣೆಯನ್ನು । **ಮಹೀಂ**—ಉತ್ತಮವೆಂಬುದನ್ನಾಗಿ । **ಕೃಷ್ಟಯಃ**—ಮನುಷ್ಯರು । **ವಿದುಃ**—ತಿಳಿಯುತ್ತಾರೆ । (**ತ್ವಂ**—ನೀನು) । **ಅಜರಃ**—ಜರಾರಹಿತನಾಗಿ (ಮುಪ್ಪಿಲ್ಲದವನಾಗಿ) । **ಅಸಃ**—ಆಗಿದ್ದೀಯೆ । **ನುಕಂ**—ಶೀಘ್ರವಾಗಿ । **ವರ್ಧಾಃ ಚ**—ಹವಿರಾಜ್ಯಾದಿಹೋಮಗಳಿಂದ ವೃದ್ಧಿಯನ್ನು ಹೊಂದು । **ವಿಶ್ವಾ ಇತ್**—ಸಮಸ್ತವಾದ । **ಏತಾ ಸವನಾನಿ**—ಈ ಯಜ್ಞಗಳನ್ನು । **ತೂತುಮಾ**—ಶೀಘ್ರವಾಗಿ ನೆರವೇರುವಂತೆ । **ಕೃಷೇ**—ಮಾಡುತ್ತೀಯೆ.

ಭಾವಾರ್ಥ

ಎಲೈ ಇಂದ್ರನೇ, ನೀನು ಎಲ್ಲರಿಗಿಂತಲೂ ದೊಡ್ಡವನು ಎಂದರೆ ಶ್ರೇಷ್ಠನು. ಯಜ್ಞಾನುಷ್ಠಾನದಲ್ಲಿ ನಿರತರಾದ ನಮ್ಮನ್ನು ಶೀಘ್ರವಾಗಿ ರಕ್ಷಿಸು. ನಿನ್ನ ರಕ್ಷಣೆಯು ಬಹಳ ಉತ್ತಮತರದ್ದೆಂದು ಮನುಷ್ಯರೆಲ್ಲರೂ ತಿಳಿದಿದ್ದಾರೆ. ನೀನು ಜರಾರಹಿತನು ಎಂದರೆ ನಿನಗೆ ಯಾವಾಗಲೂ ಮುಪ್ಪಿಲ್ಲ. ಹವಿರಾಜ್ಯಾದಿಹೋಮಗಳಿಂದ ವೃದ್ಧಿಯನ್ನು ಹೊಂದಿ ಈ ಸಮಸ್ತ ಯಜ್ಞಗಳೂ ಶೀಘ್ರವಾಗಿ ನೆರವೇರುವಂತೆ ಅನುಗ್ರಹಿಸುತ್ತೀಯೆ.

## English Translation

Indra, you are the best of all, quickly protect those who are deligent in worship: men know that your protection is great: be undecaying, rapidly increase : you make all these sacrifices swift.

ವಿಶೇಷವಿಷಯಗಳು

**ನುಕಂ** ಎಂದು ಮೊದಲಾದ ಒಂಭತ್ತು ಶಬ್ದಗಳು ಸರ್ವಪದಸಮಾಮ್ನಾಯದಲ್ಲಿ ಎಂದರೆ ನಾಲ್ಕುವಿಧವಾದ ಶಬ್ದಗಳನ್ನು ಒಂದುಗೂಡಿಸುವ ಸಂದರ್ಭದಲ್ಲಿ ಉಪಯೋಗಿಸಲ್ಪಡುತ್ತವೆ ಎಂದು ಹೇಳಿದಾರೆ(ನಿ. ೩–೧೪). ಆ ಪದಗಳು ಯಾವುವೆಂದರೆ— **ಹಿಕಂ. ನುಕಂ, ಸುಕಂ, ಆಹಿಕಂ, ಆಕೀಂ, ನಕಿಃ, ಮಾಕಿಃ, ನಕೀಂ, ಆಕೃತಂ** ಎಂದು. ಪ್ರಕೃತ ಋಕ್ಕಿನಲ್ಲಿ ನು, ಕಿಂ ಎಂದು ಪ್ರತ್ಯೇಕ ಶಬ್ದಗಳನ್ನಾಗಿ ವಿಂಗಡಿಸಿದೆ. ಕೆಲವರು ಇವೆರಡಕ್ಷರಗಳೂ ಒಂದೇ ಪದವೆಂದು ಭಾವಿಸುತ್ತಾರೆ. ತೈತ್ತಿರೀಯ (ಯಜುರ್ವೇದದ) ಸಂಹಿತೆಯಲ್ಲಿರುವ— **ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ** (ತೈ. ಸಂ. ೧-೨-೧೩-೩) ಎಂಬ ವಾಕ್ಯದಲ್ಲಿ ನುಕಂ ಎಂಬ ಎರಡಕ್ಷರಗಳೂ ಒಂದೇ ಪದವೆಂದು ಪರಿಗಣಿಸಲ್ಪಟ್ಟಿದೆ.

ಸಂಹಿತಾಪಾಠಃ

ಏತಾ ವಿಶ್ವಾ ಸವನಾ ತೂತುಮಾ ಕೃಷೇ ಸ್ವಯಂ ಸೂನೋ ಸಹಸೋ ಯಾನಿ ದಧಿಷೇ ।
ವರಾಯ ತೇ ಪಾತ್ರಂ ಧರ್ಮಣೇ ತನಾ ಯಜ್ಞೋ ಮಂತ್ರೋ ಬ್ರಹ್ಮೋದ್ಯತಂ ವಚಃ ॥ ೬ ॥

ಪದಪಾಠಃ

ಏತಾ । ವಿಶ್ವಾ । ಸವನಾ । ತೂತುಮಾ । ಕೃಷೇ । ಸ್ವಯಂ । ಸೂನೋ ಇತಿ । ಸಹಸಃ । ಯಾನಿ । ದಧಿಷೇ । ವರಾಯ । ತೇ । ಪಾತ್ರಂ । ಧರ್ಮಣೇ । ತನಾ । ಯಜ್ಞಃ । ಮಂತ್ರಃ । ಬ್ರಹ್ಮ । ಉತ್ಽಯತಂ । ವಚಃ ॥ ೬ ॥

ಸಾಯಣಭಾಷ್ಯಂ

ಹೇ ಇಂದ್ರ ಏತ್ಯೈತಾನಿ ವಿಶ್ವಾ ಸವನಾ ಸರ್ವಾಣಿ ಸವನಾನಿ ತೂತುಮಾ ತೂರ್ಣಾನಿ ಕೃಷೇ । ಕರೋಷಿ । ಏತಾನೀತ್ಯುಕ್ತಂ ಕಾನೀತಿ ತತ್ರಾಹ । ಹೇ ಸಹಸೋ ಬಲಸ್ಯ ಸೂನೋ ಪುತ್ರ । ಬಲವನ್ನಿತ್ಯರ್ಥಃ । ಸ್ವಯಂ ಯಾನಿ ದಧಿಷೇ ಧಾರಯಸಿ । ಹೇ ಇಂದ್ರ ತೇ ತವ ವರಾಯ ಶತ್ರೂಣಾಂ ವಾರಕಾಯ ತೇ ತವ ಸ್ವಭೂತಂ ಪಾತ್ರಂ ರಕ್ಷಣಂ ಭವತ್ವಸ್ಮಾಕಂ । ಕಿಂಚ ಧರ್ಮಣೇ ಧಾರಣಾಯ ತನಾ ಧನಂ ಭವತ್ವಿತಿ ಶೇಷಃ । ಕಿಂಚ ತುಭ್ಯಂ ಯಜ್ಞೋ ಮಂತ್ರಃ । ಇಜ್ಯತೇಽನೇನೇತಿ ಯಜ್ಞಃ ಕರಣಸಾಧನಭೂತೋ ಮಂತ್ರಃ । ಯಜುರಿತ್ಯರ್ಥಃ । ಬ್ರಹ್ಮ ಪರಿವೃಢಂ । ಶಸ್ತ್ರಮಿತ್ಯರ್ಥಃ । ತದುಭಯಾತ್ಮಕಂ ವಚ ಉದ್ಯತಂ ಭವತೀತಿ ಶೇಷಃ ॥

### ಪ್ರತಿಪದಾರ್ಥ

(ಎಲೈ ಇಂದ್ರನೇ) **ಏತಾ ವಿಶ್ವಾ**—ಈ ಸಮಸ್ತವಾದ | **ಸವನಾ**—ಯಜ್ಞಕರ್ಮಗಳನ್ನು | **ತೂತುಮಾ**—ಶೀಘ್ರವಾಗಿ ನೆರವೇರುವಂತೆ | **ಕೃಷೇ**—ಮಾಡುತ್ತೀಯೆ | **ಸಹಸಃ ಪುತ್ರಃ**—ಶಕ್ತಿಪುತ್ರನಾದ ಎಂದರೆ ಶಕ್ತಿಯುತನಾದ ಎಲೈ ಇಂದ್ರನೇ | **ಸ್ವಯಂ**—ನೀನೇ | **ಯಾನಿ**—ಯಾವ ಯಜ್ಞಕರ್ಮಗಳನ್ನು | **ದಧಿಷೇ**—ಧರಿಸಿ ಪೋಷಿಸುತ್ತೀಯೋ | **ತೇ**—ಅಂತಹ ನಿನ್ನ | **ವರಾಯ**—ಶತ್ರುನಿವಾರಕವಾದ | **ಪಾತ್ರಂ**—ರಕ್ಷಣೆಯು ನಮ್ಮ ವಿಷಯದಲ್ಲಿರಲಿ | **ಧರ್ಮಣೇ**—ನಮ್ಮ ಧಾರಣೆಪೋಷಣೆಗಳಿಗಾಗಿ | **ತನಾ**—ಧನವೂ ಲಭಿಸಲಿ | (**ತುಭ್ಯಂ**—ನಿನ್ನ ಪ್ರೀತಿಗಾಗಿ) | **ಯಜ್ಞಃ**—ಯಜ್ಞಸಾಧನಭೂತವಾದ | **ಮಂತ್ರಃ**—ಯಜುರ್ವೇದದ ಮಂತ್ರಗಳೂ | **ಬ್ರಹ್ಮ**—ಸ್ತೋತ್ರರೂಪವಾದ | **ವಚಃ**—ಋಗ್ವೇದಮಂತ್ರಗಳೂ ಸಹ | **ಉದ್ಯತಂ**—ನಿರ್ಮಿತವಾಗಿ ಪಠಿಸಲ್ಪಡುತ್ತವೆ.

### ಭಾವಾರ್ಥ

ಎಲೈ ಇಂದ್ರನೇ, ಈ ಸಮಸ್ತ ಯಜ್ಞಕರ್ಮಗಳನ್ನು ನೀನು ಶೀಘ್ರವಾಗಿ ನೆರವೇರುವಂತೆ ಮಾಡುತ್ತೀಯೆ. ಮಹಾಬಲಶಾಲಿಯಾದ ಎಲೈ ಇಂದ್ರನೇ, ನೀನು ಯಾವ ಯಜ್ಞಕರ್ಮವನ್ನು ಧರಿಸಿ ಪೋಷಿಸುತ್ತೀಯೋ ಅಂತಹ ನಿನ್ನ ಶತ್ರುನಿವಾರಕವಾದ ಯಜ್ಞರಕ್ಷಣೆಯು ನಮ್ಮ ವಿಷಯದಲ್ಲಿರಲಿ. ನಮ್ಮ ಪೋಷಣೆಗಾಗಿ ಧನವೂ ನಮಗೆ ಲಭಿಸಲಿ. ನಿನ್ನ ಪ್ರೀತಿಗಾಗಿ ಯಜ್ಞಸಾಧನವಾದ ಯಜುರ್ವೇದಾತ್ಮಕವಾದ ಮಂತ್ರವೂ, ಸ್ತುತಿರೂಪವಾದ ಋಗ್ವೇದಮಂತ್ರವೂ ಪಠಿಸಲ್ಪಡುತ್ತದೆ.

## English Translation

You make swift all those sacrifices which, son of strength, you yourself support; may your protection be granted for the repulse (of enemies, may) wealth (be granted) for our support : the sacrifice, the hym n the sacred text, the voice (is) raised (to you).

### ವಿಶೇಷವಿಷಯಗಳು

ಪ್ರಕೃತ ಋಕ್ಕಿನಲ್ಲಿರುವ **ಯಜ್ಞೋ ಮಂತ್ರೋ ಬ್ರಹ್ಮೋದ್ಯತಂ ವಚಃ** ಎಂಬ ವಾಕ್ಯದ ಯಜ್ಞೋ ಮಂತ್ರಃ ಎಂಬ ಪದಗಳಿಗೆ ಯಜ್ಞಕರ್ಮಗಳಿಗೆ ಸಾಧನವಾದ ಯಜುರ್ವೇದ ಮಂತ್ರವೆಂದೂ ಬ್ರಹ್ಮ ಉದ್ಯತಂ ವಚಃ ಎಂಬ ಶಬ್ದಗಳಿಗೆ ಸ್ತೋತ್ರಾತ್ಮಕವಾದ ಋಗ್ವೇದಮಂತ್ರವೆಂದೂ ಸಾಯಣರು ಅರ್ಥವಿವರಣೆಮಾಡಿದಾರೆ. ಆದರೆ ಬ್ರಹ್ಮೋದ್ಯವೆಂದರೆ ಬ್ರಹ್ಮವಿಷಯವಾದ ತತ್ತ್ವವಿಮರ್ಶೆಯು ಎಂದೂ ಅರ್ಥವಿದೆ. ಅಶ್ವಮೇಧಯಜ್ಞದ ಮಧ್ಯದ ದಿವಸದಲ್ಲಿ ಬ್ರಹ್ಮೋದ್ಯವು ಎಂದರೆ ಬ್ರಹ್ಮವಿಷಯವಾದ ತತ್ತ್ವವಿಮರ್ಶೆಯು ಹೋತೃವೇ ಮೊದಲಾದ ಋತ್ವಿಗ್ಜನರಲ್ಲಿ ನಡೆಯುವುದು ರೂಢಿಯು. ಈ ವಿಷಯದಲ್ಲಿ—**ಆಶ್ವಮೇಧಿಕೇ ಮಧ್ಯಮೇಽಹನಿ ಬ್ರಹ್ಮೋದ್ಯೇ ಹೋತ್ರಾದಯಃ ಪೃಚ್ಛಾಮಿ ತ್ವೇತ್ಯನಯಾ ಯಜಮಾನಂ ಪೃಚ್ಛೇಯುಃ** ಎಂದು ಆಶ್ವಲಾಯನಮಹರ್ಷಿಯು ಹೇಳಿದಾರೆ. ಅಶ್ವಮೇಧಯಜ್ಞದಲ್ಲಿಯೂ, ಇತರ ಮುಖ್ಯ ಯಜ್ಞಗಳಲ್ಲಿಯೂ ಋತ್ವಿಕ್ಕುಗಳು ಅದರಲ್ಲಿಯೂ ಹೋತೃ, ಬ್ರಹ್ಮ ಮೊದಲಾದವರು ಗಹನವಾದ ತತ್ತ್ವವಿಚಾರವನ್ನು ವಿಮರ್ಶೆಮಾಡುವುದು ಪದ್ಧತಿಯಾಗಿದೆ. ಈ ತತ್ತ್ವವಿಮರ್ಶೆಯು

ಪ್ರಜಾಪತಿಯ ವಿಷಯವಾಗಿಯೂ ಅಥವಾ ಯಜ್ಞದ ವಿಷಯವಾಗಿಯೂ ಅಥವಾ ಸೃಷ್ಟಿ, ಸೃಷ್ಟಿಗೆ ಪೂರ್ವದಲ್ಲಿದ್ದ ಸ್ಥಿತಿ ಮೊದಲಾದ ವಿಷಯವಾಗಿಯೂ ಇರಬಹುದು. ಉದಾಹರಣೆಗಾಗಿ ಮೇಲೆ ಹೇಳಿದ ಅಶ್ವಮೇಧಯಜ್ಞದಲ್ಲಿ ಚರ್ಚಿಸಲ್ಪಡಬೇಕಾದ ಪೃಚ್ಛಾಮಿ ತ್ವಾ ಎಂಬ ಋಕ್ಕನ್ನೂ ಅದಕ್ಕೆ ಪ್ರತ್ಯುತ್ತರವಾಗಿ ವೇದಿಮಾಹುಃ ಎಂದು ಋಕ್ಕುಗಳಲ್ಲಿ ಅಡಗಿರುವ ತತ್ತ್ವವನ್ನೂ ಸೂಕ್ಷ್ಮವಾಗಿ ವಿವರಿಸಲಾಗುವುದು.

**ಪೃಚ್ಛಾಮಿ ತ್ವಾ ಪರಮಂತಂ ಪೃಥಿವ್ಯಾಃ ಪೃಚ್ಛಾಮಿ ಯತ್ರ ಭುವನಸ್ಯ ನಾಭಿಂ ।**
**ಪೃಚ್ಛಾಮಿ ತ್ವಾ ವೃಷ್ಣೋ ಅಶ್ವಸ್ಯ ರೇತಃ ಪೃಚ್ಛಾಮಿ ವಾಚಃ ಪರಮಂ ವ್ಯೋಮ ॥**

(ಋ. ಸಂ. ೧-೧೬೪-೩೪)

ಎಲೈ ಯಜಮಾನನೇ, ಪೃಥಿವಿಯ ತುತ್ತತುದಿ ಯಾವುದು ? ವಿಶ್ವದ ಎಲ್ಲಾ ಭಾಗಗಳನ್ನೂ ಒಟ್ಟಿಗೆ ಸೇರಿಸತಕ್ಕ ಬಂಧಕವು ಎಲ್ಲಿದೆ ? ವೃಷ್ಟಿಯನ್ನು ಸುರಿಸತಕ್ಕ ಆದಿತ್ಯನ (ಬ್ರಹ್ಮನ) ವೀರ್ಯ (ಸಾಮರ್ಥ್ಯವು) ಯಾವುದು ? ಮತ್ತು ಸಕಲ ವ್ಯವಹಾರಗಳಿಗೂ ಕಾರಣವಾದ ವಾಕ್ಕಿನ (ಅಥವಾ ಮಂತ್ರದ) ಉಗಮಸ್ಥಾನವು ಯಾವುದು ? ಇವುಗಳ ಸ್ವರೂಪವನ್ನು ನನಗೆ ತಿಳಿಸು ಎಂದು ಋತ್ವಿಜನು ಯಜಮಾನನನ್ನು ಪ್ರಶ್ನೆಮಾಡುವನು. ಅದಕ್ಕೆ ಪ್ರತ್ಯುತ್ತರವಾಗಿ ಯಜಮಾನನು ಮುಂದಿನ ಋಕ್ಕಿನಿಂದ ಪ್ರತ್ಯುತ್ತರವನ್ನು ಹೇಳುವನು.

**ಇಯಂ ವೇದಿಃ ಪರೋ ಅಂತಃ ಪೃಥಿವ್ಯಾ ಅಯಂ ಯಜ್ಞೋ ಭುವನಸ್ಯ ನಾಭಿಃ ।**
**ಅಯಂ ಸೋಮೋ ವೃಷ್ಣೋ ಅಶ್ವಸ್ಯ ರೇತೋ ಬ್ರಹ್ಮಾಯಂ ವಾಚಃ ಪರಮಂ ವ್ಯೋಮ ॥**

(ಋ. ಸಂ. ೧-೧೬೪-೩೫)

ಎಲೈ ಋತ್ವಿಜನೇ, ನೀನು ಕೇಳಿದ ಪ್ರಶ್ನೆಗಳಿಗೆ ಪ್ರತ್ಯುತ್ತರವನ್ನು ಹೇಳುವೆನು, ಕೇಳು—ಯಜ್ಞವೇದಿಯೇ ಪೃಥ್ವಿಯ ಅತ್ಯಂತ ಕೊನೆಯ ಪರ್ಯವಸಾನವು ಎಂದರೆ ತುದಿಯು. ಯಜ್ಞವೇ ವಿಶ್ವದ ನಾಭಿರೂಪವಾಗಿದೆ. ವೃಷ್ಟಿಪ್ರದನೂ, ಸರ್ವತ್ರ ವ್ಯಾಪಕನೂ ಆದ ಆದಿತ್ಯನಿಗೆ (ಬ್ರಹ್ಮನಿಗೆ) ಸೋಮರಸವೇ ರೇತಸ್ಸಾಗಿದೆ (ವೀರ್ಯವಾಗಿದೆ). ಪ್ರಜಾಪತಿಯೆನಿಸಿದ ಬ್ರಹ್ಮನೇ ವಾಕ್ಕಿಗೆ (ಮಂತ್ರಗಳಿಗೆ) ಶ್ರೇಷ್ಠವಾದ ಆಶ್ರಯಸ್ಥಾನವಾಗಿದ್ದಾನೆ ಎಂದು ಯಜಮಾನನು ಹೇಳುವನು.

ಈ ಎರಡು ಮಂತ್ರಗಳಲ್ಲಿಯೂ ಅಡಗಿರುವ ತತ್ತ್ವವು ಸಾಧಾರಣವೆಂದು ತೋರಬಹುದಾದರೂ ಇವುಗಳಿಗೆ ಮಹತ್ತ್ವಪೂರಿತವಾದ ಗೂಢಾರ್ಥವಿದೆ. ಅವುಗಳನ್ನು ಸ್ವಲ್ಪಮಟ್ಟಿಗೆ ವಿಮರ್ಶೆಮಾಡುತ್ತೇವೆ.

**ಆಶ್ವಮೇಧಿಕೇ ಮಧ್ಯಮೇಽಹನಿ ಬ್ರಹ್ಮೋದ್ಯೇ ಹೋತ್ರಾದಯಃ-ಪೃಚ್ಛಾಮಿ ತ್ವಾ ಇತ್ಯನಯಾ ಏಕೈಕಶೋ ಯಜಮಾನಂ ಪೃಚ್ಛೇಯುಃ ।** ಇದು ಬ್ರಹ್ಮೋದ್ಯಕಾಲದಲ್ಲಿ ಪಠಿಸತಕ್ಕ ಮಂತ್ರವು. ಹೋತ್ರಾದಿ ಋತ್ವಿಗ್ಜನರು ಯಜಮಾನನ್ನು ಬ್ರಹ್ಮವಿಷಯಕವಾಗಿ ಪ್ರಶ್ನೆಮಾಡುವರು. ಈ ಬ್ರಹ್ಮೋದ್ಯವು ಅಶ್ವಮೇಧಯಜ್ಞದಲ್ಲಿ ನಿಯತವಾಗಿ ಆಚರಿಸಲ್ಪಡಬೇಕಾದ ವಿಧಿಯು. ಇತರ ಯಜ್ಞಗಳಲ್ಲಿಯೂ ವಿಕಲ್ಪವಾಗಿ ಆಚರಿಸಬಹುದು. ಇದು ಕರ್ಮಾಂಗವಾಗಿದ್ದರೂ ಸಹ ಇದರಲ್ಲಿ ವಿಶ್ವತತ್ತ್ವದ ವಿಷಯಕವಾದ ಜ್ಞಾನಾನ್ವೇಷಣವಿರುತ್ತದೆ. ವಿಶ್ವತತ್ತ್ವಕ್ಕೆ ಸಂಬಂಧಿಸಿದ ರಹಸ್ಯವಾದ ಅಂಶಗಳನ್ನು ತಿಳಿಯಬೇಕೆಂಬ ಕುತೂಹಲವೂ, ಆ ವಿಷಯದಲ್ಲಿ ಆಯಾ ಋಷಿಗಳಿಗೆ ತಿಳಿದಿರುವ ಉತ್ತರವೂ ಬ್ರಹ್ಮಸ್ವರೂಪವನ್ನು ಕುರಿತ ಪ್ರಶ್ನೋತ್ತರಗಳಾಗಿವೆ. ತೈತ್ತಿರೀಯಸಂಹಿತೆ, ಐತರೇಯ

ಬ್ರಾಹ್ಮಣ, ಶತಪಥಬ್ರಾಹ್ಮಣ, ಬೃಹದಾರಣ್ಯಕೋಪನಿಷತ್ ಇತ್ಯಾದಿ ಶ್ರುತಿಗಳಲ್ಲೆಲ್ಲಾ ಈ ಬ್ರಹ್ಮೋದ್ಯವು (ಬ್ರಹ್ಮ ಜಿಜ್ಞಾಸೆಯು) ಒಂದೇ ವಿಧವಾಗಿಲ್ಲ. ಬ್ರಹ್ಮಾನ್ವೇಷಣವು ಇದರಲ್ಲಿ ಮುಖ್ಯವಾದ ಅಂಶವಾಗಿದ್ದರೂ ಸಹ ಪ್ರಶ್ನೋತ್ತರ ಗಳಲ್ಲಿ ಕರ್ಮಭೇದಗಳಿರುತ್ತವೆ. ಉದಾಹರಣೆಗೆ, ಪ್ರಕೃತವಾದ ಮಂತ್ರಗಳಲ್ಲಿ ಇದು ಹೋತ್ರಾದಿಗಳು ಯಜಮಾನನಿಗೆ ಹಾಕತಕ್ಕ ಪ್ರಶ್ನೆಯೆಂದು ಆಶ್ವಲಾಯನಶ್ರೌತಸೂತ್ರದಲ್ಲಿ ಹೇಳಿದ್ದರೂ ತೈತ್ತಿರೀಯಸಂಹಿತೆಯಲ್ಲಿ ಹೋತೃವು ಈ ಪ್ರಶ್ನೆ ಯನ್ನು ಯಜ್ಞಕಾಲದಲ್ಲಿ ಬ್ರಹ್ಮನಿಗೆ ಹಾಕಿ ಉತ್ತರವನ್ನು ಪಡೆಯುತ್ತಾನೆ.

**ಕಿಗ್‌ಂಸ್ವಿದಾಸೀತ್ ಪೂರ್ವಚಿತ್ತಿಃ** ಇತ್ಯಾದಿ ವಾಕ್ಯಗಳಿಂದ ಈ ಪ್ರಶ್ನೋತ್ತರವು ತೈತ್ತಿರೀಯಸಂಹಿತೆಯಲ್ಲಿ ಪ್ರಾರಂಭವಾಗುತ್ತದೆ. ಅಲ್ಲಿ—**ಅಥ ಹೋತುಃ ಪ್ರಶ್ನಾಃ ಬ್ರಹ್ಮಣಃ ಪ್ರತಿವಚನಾನಿ** | ಹೋತೃವಿಗೂ ಬ್ರಹ್ಮನಿಗೂ ನಡೆಯತಕ್ಕ ಪ್ರಶ್ನೋತ್ತರರೂಪವಾದ ಸಂಭಾಷಣೆಯು ಎಂದು ಭಾಷ್ಯದಿಂದ ತಿಳಿಯುತ್ತದೆ ತೈತ್ತಿರೀಯಸಂಹಿತಾದಿ ಗಳಲ್ಲಿ ಈ ಬ್ರಹ್ಮೋದ್ಯದ ಕ್ರಮವು ಯಾವ ರೀತಿಯಲ್ಲಿ ವಿವರಿಸಲ್ಪಟ್ಟಿದೆಯೆಂದು ಮುಂದೆ ತಿಳಿಸಲಾಗುತ್ತದೆ.

ಪ್ರಕೃತ ಬ್ರಹ್ಮೋದ್ಯವೆಂದು ವಿವರಿಸುವ ಮಂತ್ರದಲ್ಲಿ ನಾಲ್ಕು ಪ್ರಶ್ನೆಗಳಿವೆ. ಅವುಗಳಿಗೆ ಉತ್ತರವೂ ಮುಂದಿನ ಮಂತ್ರದಲ್ಲಿದೆ. ಅವುಗಳಲ್ಲಿ ಒಂದೊಂದನ್ನೂ ಪ್ರತ್ಯೇಕವಾಗಿ ವಿಮರ್ಶಿಸಲಾಗುವುದು.

(1) ಮೊದಲನೆಯ ಪ್ರಶ್ನೆಯು—**ಪೃಚ್ಛಾಮಿ ತ್ವಾ ಪರಮಂತಂ ಪೃಥಿವ್ಯಾಃ** | ಪೃಥಿವಿಯ ತುತ್ತತುದಿ ಯಾವುದು ಎಂಬುದೇ ಪ್ರಶ್ನೆ. ಅದಕ್ಕೆ—**ಇಯಂ ವೇದಿಃ ಪರೋ ಅಂತಃ ಪೃಥಿವ್ಯಾಃ** | ಈ ಯಜ್ಞವೇದಿಯೇ ಪೃಥಿವಿಯ ತುತ್ತತುದಿಯೆಂದು ಉತ್ತರರೂಪವಾಗಿ ಹೇಳಿದೆ. ಎಂದರೆ ಯಜ್ಞಾಧಾರವಾದ ವೇದಿಯೆಂದಾಯಿತು. ಯಜ್ಞವೇ ಪರಬ್ರಹ್ಮಸ್ವರೂಪವಾದುದರಿಂದಲೂ, ಪೃಥಿವ್ಯಾದಿಲೋಕಗಳೆಲ್ಲಿವೂ ಬ್ರಹ್ಮನ ಆಧಾರದಿಂದಲೇ ಇರುವುದ ರಿಂದ ಅಥವಾ ಬ್ರಹ್ಮಸ್ವರೂಪವಾಗಿಯೇ ಇರುವುದರಿಂದಲೂ ಯಜ್ಞಾಧಾರವಾದ ವೇದಿಗೂ ಪೃಥಿವಿಗೂ ತಾದಾತ್ಮ್ಯ ವನ್ನು ಹೇಳಿದೆ. ಪೃಥಿವಿಯೆಂಬ ಶಬ್ದಕ್ಕೆ ಅಂತಕ್ಷವೆಂಬ ಅರ್ಥವೂ ಇರುವುದರಿಂದ ಇಲ್ಲಿ ಪೃಥಿವಿಯೆಂದರೆ ಕೇವಲ ಭೂಮಿಯೆಂದೇ ಅರ್ಥಮಾಡಬಾರದು. ಭೂಮ್ಯಂತರಿಕ್ಷಾದಿಗಳನ್ನು ಒಳಗೊಂಡ ಸಕಲವಿಶ್ವವೆಂದೇ ಅರ್ಥಮಾಡಬೇಕು.

> **ಸ ವೈ ತ್ರಿಃ ಪೂರ್ವಂ ಪರಿಗ್ರಹಂ ಪರಿಗೃಹ್ಣಾತಿ | ತ್ರಿರುತ್ತರಂ ತತ್ ಷಟ್ಕೃತ್ವಃ ಷಡ್ವಾ ಋತವಃ ಸಂವತ್ಸರಸ್ಯ ಸಂವತ್ಸರೋ ಯಜ್ಞಃ ಪ್ರಜಾಪತಿಃ ಸ ಯಾವಾನೇವ ಯಜ್ಞೋ ಯಾವತ್ಯಸ್ಯ ಮಾತ್ರಾ ತಾವಂತಮೇವೈತತ್ಪರಿಗೃಹ್ಣಾತಿ ||**
>
> (ಶ. ಬ್ರಾ. ೧-೨-೫-೧೨)

ಇತ್ಯಾದಿ ವಾಕ್ಯಗಳಲ್ಲಿ ಪ್ರಜಾಪತಿಗೂ, ಕಾಲಾತ್ಮಕವಾದ ಸಂವತ್ಸರಕ್ಕೂ, ವತ್ಸರೂಪವಾದ ಯಜ್ಞಕ್ಕೂ, ಪ್ರಜಾಪತಿಗೂ ತಾದಾತ್ಮ್ಯವನ್ನು ಹೇಳಿದೆ. ಹೀಗೆ ದೇಶಕಾಲಸ್ವರೂಪನಾದ ಪ್ರಜಾಪತಿಗೆ ಆಧಾರವು ಎಷ್ಟು ವಿಸ್ತೃತವೋ ಯಜ್ಞಾ ಧಾರವೂ ಅಷ್ಟೇ ವಿಸ್ತೃತಿಯುಳ್ಳದ್ದು ಎಂದು **ಯಾವತ್ಯಸ್ಯ ಮಾತ್ರಾ ತಾವಂತಮೇವೈತತ್ಪರಿಗೃಹ್ಣಾತಿ** ಎಂಬ ವಾಕ್ಯದಿಂದ ತಿಳಿಸಿದೆ ಮತ್ತು ಯಜ್ಞಾಧಾರವಾದ ವೇದಿಯ ಶಬ್ದನಿಷ್ಪತ್ತಿಯನ್ನು ತಿಳಿಸುತ್ತಾ—

> **ತಂ ಛಂದೋಭಿರಭಿತಃ ಪರಿಗೃಹ್ಯ | ಅಗ್ನಿಂ ಪುರಸ್ತಾತ್ಸಮಾಧಾಯ ತೇನಾರ್ಚಂತಃ ಶ್ರಾಮ್ಯಂತ- ಶ್ಚೇರುಸ್ತೇನೇಮಾಗ್‌ಂ ಸರ್ವಾಂ ಪೃಥಿವೀಂ ಸಮವಿಂದತ ತದ್ಯದೇನೇನೇಮಾಗ್‌ಂ ಸರ್ವಾಗ್‌ಂ ಸಮವಿಂದಂತ ತಸ್ಮಾದ್ವೇದಿರ್ನಾಮ ತಸ್ಮಾದಾಹುರ್ಯಾವತೀ ವೇದಿಸ್ತಾವತೀ ಪೃಥಿವೀತ್ಯೇ-**

**ತ್ಯಯಾ ಹೀಮಾಗ್ಂ ಸರ್ವಾಗ್ಂ ಸಮವಿಂದಂತ್ವೈವಗ್ಂ ಹ ವಾ ಇಮಾಗ್ಂ ಸರ್ವಾಗ್ಂ ಸಪತ್ನಾನಾಂ ಸಂವೃಂಕ್ತೇ ನಿರ್ಭಜತ್ಯಸ್ಯೈ ಸಪತ್ನಾನ್ಯ ಏವಮೇತದ್ವೇದ ||**

(ಶ. ಬ್ರಾ. ೧-೨-೫-೭)

ಛಂದಸ್ಸುಗಳಿಂದ ಯಜ್ಞವೇದಿಯನ್ನು ಪರಿಗ್ರಹಿಸಿದನಂತರ ಅದರಲ್ಲಿ ಅಗ್ನಿಯನ್ನು ಸ್ಥಾಪಿಸಿ ಅನುಸ್ಯೂತವಾದ ಮತ್ತು ತಪೋರೂಪವಾದ ನಿಯಮಗಳಿಂದಲೂ ವ್ರತಗಳಿಂದಲೂ ಪೂಜಿಸತೊಡಗಿದರು. ಇದರ ಫಲವಾಗಿ ಅವರು ಪೂರ್ಣವಾದ ಪೃಥ್ವಿಯನ್ನು ಪಡೆದರು. ಅವರು ಈ ಪೃಥ್ವಿಯನ್ನು ಪೂರ್ಣವಾಗಿ ಪಡೆದುದರಿಂದಲೇ (ಸಂವಿದ್) ಯಜ್ಞಭೂಮಿಗೆ ವೇದಿ ಎಂಬ ಹೆಸರು ಪ್ರಸಿದ್ಧವಾಯಿತು. ಆದುದರಿಂದಲೇ ಪೃಥ್ವಿಯು ಎಷ್ಟು ವಿಸ್ತೃತವಾಗಿದೆಯೋ ಯಜ್ಞವೇದಿಯೂ ಅಷ್ಟೇ ವಿಸ್ತೃತವಾಗಿದೆ ಎಂದು ತಿಳಿದವರು ಹೇಳುತ್ತಾರೆ. ಈ ತತ್ತ್ವವನ್ನು ತಿಳಿದವನು ತಾನೇ ಈ ಸಮಸ್ತವಾದ ಪೃಥ್ವಿಗೂ ಒಡೆಯನಾಗುತ್ತಾನೆ ಎಂದು ಶತಪಥಬ್ರಾಹ್ಮಣದಲ್ಲಿ ತಿಳಿಸಿದೆ. ಇದೇ ವಿಷಯವನ್ನು ಐತರೇಯಬ್ರಾಹ್ಮಣದಲ್ಲಿಯೂ ವಿವರಿಸುತ್ತಾ—

**ತಂ ವೇದ್ಯಾಮನ್ವವಿಂದನ್ಯದ್ವೇದ್ಯಾಮನ್ವವಿಂದಂಸ್ತದ್ವೇದೇರ್ವೇದಿತ್ವಂ ||**

(ಐ. ಬ್ರಾ. ೩-೯)

ಈ ಯಜ್ಞವನ್ನು ವೇದಿಕೆಯ ಮೇಲೆ ಕಂಡು ಅದನ್ನು ಪಡೆದುದರಿಂದ ಅದಕ್ಕೆ ವೇದಿಯೆಂಬ ಹೆಸರು ಬಂದಿತು ಎಂದು ಈ ಪದದ ನಿರ್ವಚನರೂಪವಾದ ಮಹತ್ತ್ವವನ್ನು ಸ್ತುತಿಸಿದೆ ಮತ್ತು ಇದೇ ವೇದಿಯು ಪೃಥಿವಿಯ ಪರವಾದ ಅಂತವು ಎಂದು ತಿಳಿಸಿರುವಾಗ ಪೃಥಿವಿಯೆಂದರೆ ಕೇವಲ ಭೂಮಿಯೆಂದೇ ಅರ್ಥಮಾಡಬಾರದೆಂದು ಮೇಲೆ ತಿಳಿಸಿದೆ. ಪೃಥಿವೀಶಬ್ದವು ಅಂತರಿಕ್ಷನಾಮಗಳಲ್ಲಿಯೂ (ನಿ. ೨-೧೦) ಪಠಿತವಾಗಿದೆ. ಪ್ರಥನಾತ್ಪೃಥಿವೀತ್ಯಾಹುಃ(ನಿ. ೧-೧೪) ಎಂಬ ನಿರುಕ್ತಕಾರರ ನಿರ್ವಚನದ ಆಧಾರದ ಮೇಲೆ ಅತ್ಯಂತವಾಗಿ ವಿಸ್ತೃತಿಯನ್ನು ಹೊಂದಿದ ಭೂಮ್ಯಾಕಾಶಗಳೆಲ್ಲವೂ ಪೃಥಿವೀಶಬ್ದವಾಚ್ಯಗಳೇ ಆಗಿವೆ. ಈ ಅರ್ಥವನ್ನು ತೆಗೆದುಕೊಂಡರೆ ಈ ವೇದಿಯು ಭೂಮ್ಯಂತರಿಕ್ಷಗಳಿಗೂ ಅಥವಾ ಸಮಸ್ತ ವಿಶ್ವಕ್ಕೂ ಪರವಾದ ಅಂತವು ಎಂದರ್ಥಮಾಡಬಹುದು. ಇದಕ್ಕೆ ಈ ಮಹತ್ತ್ವವಿರುವುದರಿಂದಲೇ ಶತಪಥಬ್ರಾಹ್ಮಣದಲ್ಲಿ ಈ ಯಜ್ಞವೇದಿಯನ್ನು ಈರೀತಿ ಸ್ತುತಿಸಿದೆ.

**ಅಯಂ ವಾವ ಲೋಕ ಏಷೋಽಗ್ನಿಶ್ಚಿತಃ | ತಸ್ಯಾಪ ಏವ ಪರಿಶ್ರಿತೋ ಮನುಷ್ಯಾ ಯಜುಷ್ಮತ ಇಷ್ಟಕಾಃ ಸೂದದೋಹಾ ಓಷಧಯಶ್ಚ ವನಸ್ಪತಯಶ್ಚ ಪುರೀಷಮಾಹುತಯಃ........—.... ಸ ಯೋ ಹೈತದೇವಂ ವೇದ ಲೋಕಂಪೃಣಾಮೇನಂ ಭೂತಮೇತತ್ಸರ್ವಮಭಿ ಸಂಪದ್ಯತೇ ||**

(ಶ. ಬ್ರಾ. ೧೦-೫-೪-೧)

ಇಷ್ಟಕೆಗಳಿಂದ (ಇಟ್ಟಿಗೆಗಳಿಂದ) ನಿರ್ಮಿತವಾದ ಈ ಯಜ್ಞವೇದಿಯೇ ಈ ಪಾರ್ಥಿವಲೋಕವು. ಇದನ್ನು ಸುತ್ತುವರಿದಿರುವ ಇಷ್ಟಕೆಗಳೇ ಪೃಥ್ವಿಯನ್ನು ಸುತ್ತುವರೆದಿರುವ ಸಮುದ್ರಗಳು, ಯಜುಷ್ಮತಿಗಳೇ ಮಾನವರು. ಸೂದದೋಹಗಳೇ ಪಶುಗಳು, ಇಷ್ಟಕೆಗಳ ಮಧ್ಯವರ್ತಿಯಾದ ಮೃತ್ತಿಕೆಗಳೇ ಓಷಧಿವನಸ್ಪತಿಗಳು, ಲೋಕಂಪೃಣವೇ ಅಗ್ನಿಯು. ಈ ತತ್ತ್ವವನ್ನು ತಿಳಿದವನು ಲೋಕಾಧಿಷ್ಠಾತೃತ್ವವನ್ನು ಪಡೆಯುತ್ತಾನೆ. ಅಲ್ಲದೆ—

**ಅಂತರಿಕ್ಷಗ್ಂ ಹ ತ್ವೇವೈಷೋಽಗ್ನಿಶ್ಚಿತಃ | ತಸ್ಯ ದ್ಯಾವಾಪೃಥಿವ್ಯೋರೇವ ಸಂಧಿಃ | ಪರಿಶ್ರಿತಃ ಪರೇಣ ಹಾಂತರಿಕ್ಷಂ ದ್ಯಾವಾಪೃಥಿವೀ ಸಂಧತ್ತಸ್ತಾಃ ಪರಿಶ್ರಿತೋ ವಯಾಗ್ಂಸಿ ಯಜುಷ್ಮತ್ಯ ಇಷ್ಟಕಾ ವರ್ಷಗ್ಂ ಸೂದದೋಹಾ ಮರೀಚಯಃ ಪುರೀಷಮಾಹುತಯಃ ಸಮಿಥೋ ಲೋಕಂಪೃಣಾ ತದ್ವಾ ಏತತ್ಸರ್ವಂ ||**

(ಶ. ಬ್ರಾ. ೧೦-೫-೪-೨)

ಈ ಯಜ್ಞವೇದಿಕೆಯೇ ಅಂತರಿಕ್ಷವು. ದ್ಯಾವಾಪೃಥಿವಿಗಳ ಸಂಧಿಯು ಅಂತರಿಕ್ಷಕ್ಕೂ ಮೀರಿದ ಪ್ರದೇಶದಲ್ಲಾಗುವುದರಿಂದ ಈ ವೇದಿಕೆಯ ಪರಿಶ್ರಿತಗಳೇ ದ್ಯಾವಾಪೃಥಿವಿಗಳ ಸಂಧಿಯು. ಯಜುಷ್ಮತಿಯೆಂಬ ಇಷ್ಟಕಗಳೇ ಪಕ್ಷಿಗಳು. ಸೂದದೋಹಗಳೇ ವೃಷ್ಟಿಯು. ಇಷ್ಟಕೆಗಳ ಮಧ್ಯವರ್ತಿಯಾದ ಮೃತ್ತಿಕೆಗಳೇ ರಶ್ಮಿಗಳು. ಆಹುತಿಗಳೇ ಸಮಿತ್ತುಗಳು. ಲೋಕಂಪೃಣವೇ ವಾಯುವು. ಈ ತತ್ತ್ವವನ್ನು ತಿಳಿದವನು ಅಗ್ನಿಯಲ್ಲಿ ತಾದಾತ್ಮ್ಯವನ್ನು ಹೊಂದುತ್ತಾನೆ.

**ದ್ಯೌರ್ಹ ತ್ವೇವೈಷೋಽಗ್ನಿಶ್ಚಿತಃ । ತಸ್ಯಾಪ ಏವ ಪರಿಶ್ರಿತೋ ಯಥಾ ಹ ವಾ ಇದಂ ಕೋಶಃ ಸಮುಬ್ಜಿತ ಏವಮಿಮೇ ಲೋಕಾ ಅಪ್ಸ್ವಂತಸ್ತದ್ಯಾ ಇಮಾನ್ ಲೋಕಾನ್ ಪರೇಣಾಪಸ್ತಾಃ ಪರಿಶ್ರಿತೋ ದೇವಾ ಯಜುಷ್ಮತ್ಯ ಇಷ್ಟಕಾ ಯದೇವೈತಸ್ಮಿಂಲ್ಲೋಕೇಽನ್ನಂ ತತ್ಸೂದದೋಹಾ ನಕ್ಷತ್ರಾಣಿ ಪುರೀಷಮಾಹುತಯಃ ಸಮಿಧ ಆದಿತ್ಯೋ ಲೋಕಂಪೃಣಾ ತದ್ವಾ ಏತತ್ಸರ್ವಮಾದಿತ್ಯಮೇತಾಭಿಸಂಪದ್ಯತೇ ತತ್ಸರ್ವೋಽಗ್ನಿಃ ।**

(ಶ. ಬ್ರಾ. ೧೦-೫-೪-೩)

ಈ ಯಜ್ಞವೇದಿಯೇ ದ್ಯುಲೋಕವು. ಸುತ್ತುವರೆದಿರುವ ಇಷ್ಟಕೆಗಳೇ ಈ ಲೋಕವನ್ನಾವರಿಸುವ ಉದಧಿಗಳು. ಯಜುಷ್ಮತಿಯೆಂಬ ಇಷ್ಟಕೆಗಳೇ ದೇವತೆಗಳು. ಸೂದದೋಹಗಳೇ ಈ ಲೋಕದ ಅನ್ನವು. ಇಷ್ಟಕೆಗಳ ಮಧ್ಯವರ್ತಿಯಾದ ಮೃತ್ತಿಕೆಗಳೇ ನಕ್ಷತ್ರಗಳು. ಲೋಕಂಪೃಣವೇ ಆದಿತ್ಯನು.

**ಆದಿತ್ಯೋ ಹ ತ್ವೇವೈಷೋಽಗ್ನಿಶ್ಚಿತಃ । ತಸ್ಯ ದಿಶ ಏವ ಪರಿಶ್ರಿತಸ್ತಾಃ ಷಷ್ಟಿಶ್ಚ ತ್ರೀಣಿ ಚ ಶತಾನಿ ಭವಂತಿ ಷಷ್ಟಿಶ್ಚ ಹ ವೈ ತ್ರೀಣಿ ಚ ಶತಾನ್ಯಾದಿತ್ಯಂ ದಿಶಃ ಸಮಂತಂ ಪರಿಯಂತಿ ರಶ್ಮಯೋ ಯಜುಷ್ಮತ್ಯ ಇಷ್ಟಕಾಸ್ತಾಃ ಷಷ್ಟಿಶ್ಚೈವ ತ್ರೀಣಿ ಚ ಶತಾನಿ ಭವಂತಿ ಷಷ್ಟಿಶ್ಚ ಹ ವೈ ತ್ರೀಣಿ ಚ ಶತಾನ್ಯಾದಿತ್ಯಸ್ಯ ರಶ್ಮಯಸ್ತದ್ಯತ್ಪರಿಶ್ರಿತ್ಸು ಯಜುಷ್ಮತೀಃ ಪ್ರತ್ಯರ್ಪಯತಿ ರಶ್ಮೀಂಸ್ತದ್ದಿಕ್ಷು ಪ್ರತ್ಯರ್ಪಯತ್ಯಥ ಯದಂತರಾ ದಿಶಶ್ಚ ರಶ್ಮೀಂಶ್ಚ ತತ್ಸೂದದೋಹಾ ಅಥ ಯದ್ದಿಕ್ಷು ಚ ರಶ್ಮಿಷು ಚಾನ್ನಂ ತತ್ಪುರೀಷಂ ತಾ ಆಹುತಯಸ್ತಾಃ ಸಮಿಧಃ ॥**

(ಶ. ಬ್ರಾ. ೧೦ ೫-೪-೪)

ಈ ಯಜ್ಞವೇದಿಯೇ ಆದಿತ್ಯನು. ಆದಿತ್ಯನನ್ನು ಮುನ್ನೂರಅರವತ್ತು ದಿಕ್ಕುಗಳೂ, ಅವಾಂತರದಿಕ್ಕುಗಳೂ ಸುತ್ತುವರೆದಿವೆ. ಮುನ್ನೂರಅರವತ್ತು ಸಂಖ್ಯಾಕಗಳಾದ ಯಜುಷ್ಮತಿಗಳೇ ಆದಿತ್ಯನ ಮುನ್ನೂರ ಅರವತ್ತು ರಶ್ಮಿಗಳಾಗಿವೆ. ಸೂದದೋಹಗಳೇ ಆದಿತ್ಯರಶ್ಮಿಗಳಿಗೂ ದಿಕ್ಕುಗಳಿಗೂ ಮಧ್ಯದಲ್ಲಿರುವ ತತ್ತ್ವವಿಶೇಷಗಳು. ಇಷ್ಟಕೆಗಳ ಮಧ್ಯವರ್ತಿಗಳಾದ ಮೃತ್ತಿಕೆಗಳೇ ರಶ್ಮಿಗಳಿಗೂ ದಿಕ್ಕುಗಳಿಗೂ ನಡುವೆ ಇರುವ ಅನ್ನವು.

**ನಕ್ಷತ್ರಾಣಿ ಹ ತ್ವೇವೈಷೋಽಗ್ನಿಶ್ಚಿತಃ । ತಾನಿ ವಾ ಏತಾನಿ ಸಪ್ತವಿಗ್ಂಶತಿರ್ನಕ್ಷತ್ರಾಣಿ । ಛಂದಾಗ್ಂಸಿ ಹ ತ್ವೇವೈಷೋಽಗ್ನಿಶ್ಚಿತಃ । ತಾನಿ ವಾ ಏತಾನಿ ಸಪ್ತಛಂದಾಗ್ಂಸಿ. . . . । ಸರ್ವಾಣಿ ಹ ತ್ವೇವ ಭೂತಾನಿ । ಸರ್ವೇ ದೇವಾ ಏಷೋಽಗ್ನಿಶ್ಚಿತ ಆಪೋ ವೈ ಸರ್ವೇ ದೇವಾಃ ಸರ್ವಾಣಿ ಭೂತಾನಿ ತಾ ಹೈತಾ ಆಪ ಏವೈಷೋಽಗ್ನಿಶ್ಚಿತಸ್ತಸ್ಯ ನಾವ್ಯಾ ಏವ ಪರಿಶ್ರಿತಸ್ತಾಃ ಷಷ್ಟಿಶ್ಚ ತ್ರೀಣಿ ಚ ಶತಾನಿ ಭವಂತಿ ಷಷ್ಟಿಶ್ಚ ಹ ವೈ ತ್ರೀಣಿ ಚ ಶತಾನ್ಯಾದಿತ್ಯಂ ನಾವ್ಯಾಃ ಸಮಂತಂ ಪರಿಯಂತಿ . . . . ಆತ್ಮಾಯಮೇವ ಸ ಯೋಽಯಂ ಹಿರಣ್ಮಯಃ ಪುರುಷಃ ॥**

(ಶ. ಬ್ರಾ. ೧೦-೫-೪-೬ ರಿಂದ ೧೪)

ಈ ಯಜ್ಞವೇದಿಯೇ ಸಮಸ್ತ ನಕ್ಷತ್ರಗಳು, ಸಪ್ತ ಛಂದಸ್ಸುಗಳು. ಇದೇ ಸಂವತ್ಸರವು. ಇದೇ ಸಕಲ ಭೂತಗಳೂ ಆಗಿದೆ. ಆದಿತ್ಯನ ಸುತ್ತಲೂ ಮುನ್ನೂರ ಅರವತ್ತು ರಶ್ಮಿರೂಪಗಳಾದ ನಾವೆಗಳು ಸುತ್ತವರೆದಿರುವಂತೆ ಈ ವೇದಿಯ ಸುತ್ತಲೂ ಯಜುಷ್ಮತೀರೂಪದ ದೇವಮಾನವಾದಿಗಳು ಸುತ್ತುವರೆದಿದ್ದಾರೆ. ಈ ವೇದಿಕೆಯ ದೇಹವೇ ಈ ಆದಿತ್ಯಾಂತರ್ಗತನಾದ ಹಿರಣ್ಮಯಪುರುಷನು. ಈ ಹಿರಣ್ಮಯಪುರುಷನ ಸ್ವರೂಪವು ಎಷ್ಟು ಆಕರ್ಷಕವಾದದ್ದು ಮತ್ತು ಎಷ್ಟು ಮಹತ್ವವುಳ್ಳದ್ದು ಎಂದರೆ—

**ತಸ್ಯೈತೇ ಪ್ರತಿಷ್ಠೇ । ರುಕ್ಮಶ್ಚ ಪುಷ್ಕರಪರ್ಣಂ ಚಾಪಶ್ಚಾದಿತ್ಯಮಂಡಲಂ ಚ ಸ್ರುಚೌ ಬಾಹೂ ತಾವಿಂದ್ರಾಗ್ನೀ ದ್ವೇ ಸ್ವಯಮಾತೃಣ್ಣೇ ಇಯಂ ಚಾಂತರಿಕ್ಷಂ ಚ ತಿಸ್ರೋ ವಿಶ್ವಜ್ಯೋತಿಷ ಏತಾ ದೇವತಾ ಅಗ್ನಿರ್ವಾಯುರಾದಿತ್ಯ ಏತಾ ಹ್ಯೇವ ದೇವತಾ ವಿಶ್ವಂ ಜ್ಯೋತಿರ್ದ್ವಾತ್ರಿಂಶ-ತ್ಯಾಃ ಸಂವತ್ಸರಃ ಸ ಆತ್ಮಾ ಪಂಚ ನಾಕಸದಃ ಪಂಚ ಪಂಚಚೂಡಾಃ ಸ ಯಜ್ಞಸ್ತೇ ಪೇವಾ ಅಥ ಯದ್ವಿಕರ್ಣೀ ಚ ಸ್ವಯಮಾತೃಣ್ಣಾ ಚಾಶ್ಮಾ........ಆತ್ಮಾ ಸ ಏಷ ಸರ್ವಾಸಾಮಸಾಂ ಮಧ್ಯೇ ಸ ಏಷ ಸರ್ವೈಃ ಕಾಮೈಃ ಸಂಪನ್ನ ಆಪೋ ವೈ ಸರ್ವೇ ಕಾಮಾಃ ಸ ಏಷೋಽ-ಕಾಮಃ ಸರ್ವಕಾಮೋ ನ ಹ್ಯೇತಂ ಕಸ್ಯ ಚನ ಕಾಮಃ ॥**

(ಶ. ಬ್ರಾ. ೧೦-೫-೪-೧೫)

ಸ್ವರ್ಣಪಾತ್ರವೂ, ಪುಷ್ಕರಪರ್ಣವೂ ಈ ಆದಿತ್ಯಾಂತರ್ಗತನಾದ ಹಿರಣ್ಮಯಪುರುಷನ ಎರಡು ಪಾದಗಳು, ಯಜ್ಞವೇದಿಕೆಯಲ್ಲಿರುವ ಎರಡು ಸ್ರುಚಪಾತೆಗಳೂ ಇವನ ಬಾಹುಗಳು, ಇವರೇ ಇಂದ್ರಾಗ್ನಿಗಳು. ಸಹಜವಾಗಿಯೇ ಆತೃಣ್ಣವಾಗಿರುವ ಈ ಎರಡು ಇಷ್ಟಕೆಗಳೇ ಪೃಥಿವ್ಯಂತರಿಕ್ಷಗಳು, ವಿಶ್ವಜ್ಯೋತೀರೂಪವಾದ ಇಷ್ಟಕೆಗಳೇ ಸಕಲ ದೇವತೆಗಳು, ಇವುಗಳ ಸಂಖ್ಯೆಯು ಮೂರು. ಈ ಮೂರೂ ಸಹ ಅಗ್ನಿ, ವಾಯು ಮತ್ತು ಆದಿತ್ಯರನ್ನು ಪ್ರತಿಬಿಂಬಿಸುತ್ತವೆ. ಈ ವೇದಿಯ ದೇಹವೇ ಸಕಲಕ್ಕೂ ಅಂತವಾಗಿದೆ. ಈ ವೇದೀರೂಪವಾದ ಆದಿತ್ಯಾಂತರ್ಗತನಾದ ಹಿರಣ್ಮಯಪುರುಷನು ಸರ್ವಕಾಮುಗಳನ್ನೂ ಪಡೆದಿರುವುದರಿಂದ ಕಾಮರಹಿತನಾಗಿಯೂ, ಪೂರ್ಣತೃಪ್ತನಾಗಿಯೂ ಇದ್ದಾನೆ. ಇತ್ಯಾದಿಯಾಗಿ ವೇದಿಯ ಮಹತ್ತ್ವವನ್ನೂ, ವಿಸ್ತೃತಿಯನ್ನೂ ನಾನಾವಿಧವಾಗಿ ಸ್ತುತಿಸಿದೆ. ಕೇವಲ ಅಧಿದೈವತಪಕ್ಷದಲ್ಲಿಯೇ ಅಲ್ಲದೆ ಅಧ್ಯಾತ್ಮಪಕ್ಷದಲ್ಲಿಯೂ ಇದರ ಮಹಿಮೆಯು ಸ್ತುತವಾಗಿದೆ. ಇದೇ ಅಂಶವನ್ನು ಪ್ರಕೃತಋಕ್ಕಿನಲ್ಲಿ—**ಇಯಂ ವೇದಿಃ ಪೃಥಿವ್ಯಾ ಅಂತಃ** ಎಂದು ವರ್ಣಿಸಲಾಗಿದೆ. ಪೃಥಿವಿಯ ಉತ್ಕೃಷ್ಟವಾದ ಸ್ಥಾನವೆಂದು ತಾತ್ಪರ್ಯ. ಸಾಯಣರು ಇದೇ ಅರ್ಥವನ್ನು ತಿಳಿಸತಕ್ಕ **ಏತಾವತೀ ವೈ ಪೃಥಿವೀ ಯಾವತೀ ವೇದಿಃ** । (ತೈ. ಸಂ. ೨-೬-೪-೧) ಎಂಬ ತೈತ್ತಿರೀಯಸಂಹಿತಾವಾಕ್ಯವನ್ನು ಉದಾಹರಿಸಿ—**ನ ಹಿ ವೇದ್ಯತಿರಿಕ್ತಾ ಭೂಮಿರಸ್ತಿ ।** ಈ ಯಜ್ಞವೇದಿಗಿಂತಲೂ ಮೀರಿದ ಅಥವಾ ಬೇರೆಯಾದ ಪೃಥಿವಿಯೇ ಇಲ್ಲ ಎಂಬ ತಾತ್ಪರ್ಯವನ್ನು ವಿವರಿಸಿದ್ದಾರೆ.

(2) ಇನ್ನು ಎರಡನೆಯ ಪ್ರಶ್ನೆಯಾದ **ಪೃಚ್ಛಾಮಿ ಯತ್ರ ಭುವನಸ್ಯ ನಾಭಿಃ** ಎಂಬ ವಾಕ್ಯಕ್ಕೆ—**ಅಯಂ ಯಜ್ಞೋ ಭುವನಸ್ಯ ನಾಭಿಃ** । ಎಂಬ ಉತ್ತರವು ಅಲ್ಲೇ ಉಕ್ತವಾಗಿದೆ. **ನಾಭಿಶಬ್ದಕ್ಕೆ ಸಂನಾಹಃ** ಎಂದರೆ ಸಕಲಭೂತಜಾತಗಳಿಗೂ ಒಂದು ಸಂಬಂಧವನ್ನು ಕೋರಿಸತಕ್ಕ ಬಂಧಕರೂಪವಾದ ತಂತುವು ಯಾವುದು ಎಂದು ಪ್ರಶ್ನಿಸಲಾಗಿದೆ. ಈ ಪ್ರಶ್ನೆಗೆ ಉತ್ತರರೂಪವಾಗಿ—**ಅಯಂ ಯಜ್ಞೋ ಭುವನಸ್ಯ ನಾಭಿಃ । ಅಯಂ ಯಜ್ಞಃ ಭೂತಜಾತಸ್ಯ ಸಂನಹನಂ । ತತ್ರೈವ ವೃಷ್ಟ್ಯಾದಿಸರ್ವಫಲೋತ್ಪತ್ತೇಃ ಸರ್ವಪ್ರಾಣಿನಾಂ ಬಂಧಕತ್ವಾತ್ ।** ಈ ಯಜ್ಞದಿಂದಲೇ ವೃಷ್ಟಿಯುಂಟಾಗಿ ಆ ವೃಷ್ಟಿಯ ಮೂಲಕ ಸರ್ವಪ್ರಾಣಿಗಳಿಗೂ ಇದು ಬಂಧಕವಾಗಿರುವುದರಿಂದ ಇದು ನಾಭಿರೂಪದಲ್ಲಿದೆಯೆಂದು ವರ್ಣಿತವಾಗಿದೆ.

ನಾಭಿಶಬ್ದಕ್ಕೆ—ವಾಸಸ್ಥಾನ, ವ್ಯಾಪಕಸಂಬಂಧ, ಸಂನಾಹಕ ಎಂದರೆ ರಕ್ಷಕ, ಬಂಧಕ, ಉತ್ಪತ್ತಿಸ್ಥಾನ ಇತ್ಯಾದಿ ಬೇರೆಬೇರೆ ಅರ್ಥಗಳಿರುವುದನ್ನು ಹಿಂದೆ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಯಜ್ಞವೇ ನಾಭಿಯೆಂದು ಹೇಳಿದರೆ ಈ ಎಲ್ಲಾ ಅರ್ಥಗಳಲ್ಲಿಯೂ ಈ ಪದದ ಪ್ರಯೋಗವಿರುವುದನ್ನು ತೋರಿಸಬಹುದು. **ಪೃಚ್ಛಾಮಿ ಯತ್ರ ಭುವನಸ್ಯ ನಾಭಿಃ** ಎಂದು ಕೇಳಿರುವ ಪ್ರಶ್ನೆಗೆ **ಅಯಂ ಯಜ್ಞಃ** ಎಂಬುದೇ ಉತ್ತರರೂಪವಾಗಿದೆ. ಯಜ್ಞವೇ ಸಕಲ ವಿಶ್ವಗಳ ಉತ್ಪತ್ತಿಗೂ ಸ್ಥಿತಿಗೂ ಕಾರಣವಾಗಿ ದೇವಮಾನವಾದಿ ಸಕಲ ಭೂತಗಳಿಗೂ ಪರಸ್ಪರಸಂಬಂಧವನ್ನು ಬೆಳೆಸುವ ಬಂಧಕ ಸಾಧನವಾಗಿರುವುದರಿಂದ ಇದು (ಯಜ್ಞವು) ನಾಭಿರೂಪದಲ್ಲಿದೆಯೆಂದಭಿಪ್ರಾಯವು.

**ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥**
(ಭ. ಗೀ. ೩-೧೧)

**ದೇವಾನ್ ಇಂದ್ರಾದೀನ್ ಭಾವಯತ ವರ್ಧಯತ ಅನೇನ ಯಜ್ಞೇನ। ತೇ ದೇವಾ ಭಾವಯಂತು ವೃಷ್ಟ್ಯಾದಿನಾ ಆಪ್ಯಾಯಯಂತು ವಃ ಯುಷ್ಮಾನ್ । ಏವಂ ಪರಸ್ಪರಂ ಅನ್ಯೋನ್ಯಂ ಭಾವಯಂತಃ ಶ್ರೇಯಃ ಪರಂ ಬ್ರಹ್ಮವಿಜ್ಞಾನಪ್ರಾಪ್ತಿಂ ಕ್ರಮೇಣ ಅವಾಪ್ಸ್ಯಥ । ಸ್ವರ್ಗಂ ವಾ ಪರಂ ಶ್ರೇಯಃ ಅಪಾಪ್ಸ್ಯಥ ॥**
(ಶಂ. ಭಾ.)

ಯಜ್ಞವೇ ದೇವತೆಗಳಿಗೆ ಅನ್ನರೂಪವೆಂದೂ, ಈ ಅನ್ನವನ್ನು ಮಾನವರು ಯಜ್ಞರೂಪದಿಂದ ಅರ್ಪಿಸಬೇಕೆಂದೂ, ಇದರಿಂದ ತೃಪ್ತರಾದ ದೇವತೆಗಳು ವೃಷ್ಟ್ಯಾದಿಗಳಿಂದ ಮಾನವರ ಸ್ಥಿತಿಗೂ ವೃದ್ಧಿಗೂ ಕಾರಣರಾಗಬೇಕೆಂದೂ ಭಗವದ್ಗೀತೆಯಲ್ಲಿ ಉಪದೇಶವಿದೆ. ಇದರಿಂದ ಸಮಸ್ತವಾದ ಶ್ರೇಯಸ್ಸಿಗೂ ಯಜ್ಞವೇ ಸಾಧನವೆಂದಾಯಿತು. ಈ ಯಜ್ಞವು ಲೋಕಕ್ಕೆಲ್ಲಾ ಶ್ರೇಯಸ್ಸಾಧನವು ಎಂಬ ತತ್ತ್ವವನ್ನರಿತು ಇದನ್ನು ಸೇವಾದೃಷ್ಟಿಯಿಂದ ಆಚರಿಸಿದರೆ ಇದು ಬ್ರಹ್ಮಜ್ಞಾನಕ್ಕೂ ಸಾಧನವಾಗುವುದೆಂದು ಶಂಕರಾದಿಗಳು ವಿವರಿಸಿದಾರೆ.

ಈ ಯಜ್ಞತತ್ತ್ವವು ವಿಶ್ವದ ಐಕ್ಯವನ್ನೂ, ಈ ಐಕ್ಯದ ನೆಲೆಯು ಪರಬ್ರಹ್ಮವೆಂಬ ತತ್ತ್ವವನ್ನೂ ತಿಳಿಸುವುದಾಗಿದೆ. ಉಪನಿಷದಾದಿಗಳಲ್ಲಿ ಯಾವ ಮೂಲತತ್ತ್ವವನ್ನು ಪರಬ್ರಹ್ಮವೆಂದು ಕರೆದಿದೆಯೋ ಅದನ್ನು ಸಂಹಿತಾ ಮತ್ತು ಬ್ರಾಹ್ಮಣಗಳಲ್ಲಿ ಪ್ರಜಾಪತಿಯೆಂದು ಕರೆದಿದೆ ಮತ್ತು ಯಜ್ಞಕ್ಕೂ ಪ್ರಜಾಪತಿಗೂ ತಾದಾತ್ಮ್ಯವನ್ನು ಹೇಳಿದೆ. ವಿಶ್ವಸೃಷ್ಟಿಯು ಪ್ರಜಾಪತಿಯ ಯಜ್ಞದ ಮತ್ತು ತಪಸ್ಸಿನ ಫಲವು. ಜಗತ್ಕಾರಣನೂ, ಜಗತ್ಸೃಷ್ಟಿಗೆ ಪೂರ್ವಭಾವಿಯಾಗಿ ಅದ್ವಿತೀಯನಾಗಿಯೂ ಇದ್ದ ಪ್ರಜಾಪತಿಯು ಸೃಷ್ಟಿಸಾಧನವಾದ ಯಜ್ಞವನ್ನು ನಿರ್ವಹಿಸಬೇಕಾದರೆ ಅದಕ್ಕೆ ತನ್ನನ್ನೇ ಆಹುತಿಯಾಗಿ ಅರ್ಪಿಸಬೇಕಾಯಿತು.

**ಯ ಆತ್ಮದಾ ಬಲದಾ ಯಸ್ಯ ವಿಶ್ವ ಉಪಾಸತೇ ಪ್ರಶಿಷಂ ಯಸ್ಯ ದೇವಾಃ ।**
**ಯಸ್ಯ ಛಾಯಾಮೃತಂ ಯಸ್ಯ ಮೃತ್ಯುಃ ಕಸ್ಮೈ ದೇವಾಯ ಹವಿಷಾ ವಿಧೇಮ ॥**
(ಋ. ಸಂ. ೧೦-೧೨೧-೨)

ಇತ್ಯಾದಿ ಮಂತ್ರಗಳಲ್ಲಿ ವರ್ಣಿತವಾಗಿರುವಂತೆ ತನ್ನ ವಿಶ್ವಯಜ್ಞದಲ್ಲಿ ತನ್ನನ್ನೇ ಅರ್ಪಿಸಿ ಪ್ರಜಾಪತಿಯು ಸೃಷ್ಟಿಕಾರ್ಯವನ್ನು ನಿರ್ವಹಿಸಿದನು. ಅವನ ಆಜ್ಞೆಯನ್ನೇ ದೇವಾದಿಗಳೆಲ್ಲರೂ ಪಾಲಿಸುತ್ತಾರೆ. ಮೃತ್ಯುವೂ, ಅಮೃತತ್ತ್ವವೂ ಅವನ ಛಾಯೆಗಳು. ಇಂತಹ ವಿಶ್ವಹೇತುವಾದ ಪ್ರಜಾಪತಿಗೆ ನಾವೂ ಸಹ ಹವಿರಾದಿಗಳನ್ನರ್ಪಿಸಿ ಯಜ್ಞಾದಿಕರ್ಮಗಳಿಂದ

ಆರಾಧಿಸೋಣ ಎಂದು ಯಜ್ಞದ ಪ್ರಾಶಸ್ತ್ಯವನ್ನು ಸ್ತುತಿಸಿದೆ. ಯಜ್ಞವು ಸೃಷ್ಟಿಯ ಮೂಲವು, ಸ್ಥಿತಿಗೆ ಹೇತುವು ಮತ್ತು ಶ್ರೇಯಸ್ಸಿಗೆ ಸಾಧಕವು. ಈ ವಿಷಯವನ್ನೇ ಶತಪಥಬ್ರಾಹ್ಮಣದಲ್ಲಿ ಈರೀತಿ ವರ್ಣಿಸಿದೆ—

**ಅಥ ದೇವಾಃ ॥ ಅನ್ಯೋಽನ್ಯಸ್ಮಿನ್ನೇವ ಜುಹ್ವತಶ್ಚೇರುಸ್ತೇಭ್ಯಃ ಪ್ರಜಾಪತಿರಾತ್ಮಾನಂ ಪ್ರದದೌ ಯಜ್ಞೋ ಹೈಷಾಮಾಸ ಯಜ್ಞೋ ಹಿ ದೇವಾನಾಮನ್ನಂ ॥**

(ಶ. ಬ್ರಾ. ೧೧-೧-೮-೨)

ದೇವತೆಗಳು ಯಜ್ಞವನ್ನಾಚರಿಸಿ ಪರಸ್ಪರಾನುಕೂಲವಾದ ಆಹುತಿಗಳನ್ನರ್ಪಿಸಿದರು. ಆಗ ಪ್ರಜಾಪತಿಯು ಅವರಿಗೆ ತನ್ನನ್ನೇ ಅರ್ಪಿಸಿದನು. ಆಗ ಯಜ್ಞವೇ ದೇವತೆಗಳ ಸ್ವತ್ತಾಯಿತು. ಆದುದರಿಂದಲೇ ಯಜ್ಞವನ್ನು ದೇವತೆಗಳ ಅನ್ನವೆಂದು (ಅನ್ನಸಾಧನವೆಂದು) ಕರೆಯುತ್ತಾರೆ. ಇದಲ್ಲದೆ,

**ಸ ಏತೇನ ಯಜ್ಞೇನ ದೇವೇಭ್ಯ ಆತ್ಮಾನಂ ನಿರಕ್ರೀಣೀತ ಯದ್ವ್ರತಮುಪೈತಿ ಯಥೈವ ತತ್ಪ್ರಜಾಪತಿರ್ದೇವೇಭ್ಯ ಆತ್ಮಾನಂ ಪ್ರಾಯಚ್ಛದೇವಮೇವೈಷ ಏತದ್ದೇವೇಭ್ಯ ಆತ್ಮಾನಂ ಪ್ರಯಚ್ಛತಿ ತಸ್ಮಾದು ಸಂಯತ ಏವೈತಾಗ್ಂ ರಾತ್ರಿಂ ಚಿಚರಿಷೇದ್ಯಥಾ ಹವಿಷಾ ಚರೇದೇ-ವಗ್ಂ ಹವಿರ್ಹ್ಯೇಷ ದೇವಾನಾಂ ಭವತಿ ॥**

(ಶ. ಬ್ರಾ. ೧೧-೧-೮-೩)

ದೇವತೆಗಳ ಯಜ್ಞದಿಂದ ತೃಪ್ತನಾದ ಪ್ರಜಾಪತಿಯು ಅವರಿಗೆ ತನ್ನನ್ನೇ ಅರ್ಪಿಸಿದನಂತರ ಪುನಃ ಯಜ್ಞಪ್ರತಿನಿಧಿಯಾದ ತನ್ನ ಪ್ರತಿರೂಪವನ್ನು ಸೃಷ್ಟಿಸಿದನು. ಈ ರೀತಿ ಯಜ್ಞಾರ್ಥವಾಗಿ ತನ್ನ ಪ್ರತಿರೂಪವನ್ನು ಸೃಷ್ಟಿಸಿ ಯಜ್ಞವನ್ನು ಪ್ರತಿಬಿಂಬಿಸಿದುದರಿಂದ ತಿಳಿದವರು ಪ್ರಜಾಪತಿಯನ್ನೇ ಯಜ್ಞವೆಂಬ ಪರ್ಯಾಯನಾಮದಿಂದ ಕರೆಯುತ್ತಾರೆ.

**ಅಥ ಯದ್ಯಜ್ಞಂ ತನುತೇ । ಯಜ್ಞೇನೈವೈತದ್ದೇವೇಭ್ಯ ಆತ್ಮಾನಂ ನಿಷ್ಕ್ರೀಣೀತೇ ಯಥೈವ ತತ್ಪ್ರಜಾಪತಿರ್ನಿರಕ್ರೀಣೀತೈವಂ ಅಥ ಯದ್ಧವಿರ್ನಿರ್ವಪತಿ ಹವಿಷೈವೈತದ್ಯಜ್ಞಂ ನಿಷ್ಕ್ರೀಣಾತಿ ಹವಿರನುವಾಕ್ಯಾನುವಾಕ್ಯಾನುವದಾನೇನಾವದಾನಂ ಯಾಜ್ಯಯಾ ಯಾಜ್ಯಾಂ ವಷಟ್ಕಾರೇಣ ವಷಟ್ಕಾರಂ ॥**

(ಶ. ಬ್ರಾ. ೧೧-೧-೮-೪)

ಪ್ರಜಾಪತಿಯ ಮಾರ್ಗವನ್ನೇ ಅನುಸರಿಸಿ ಯಾವನು ಯಜ್ಞಕರ್ಮವನ್ನಾಚರಿಸುತ್ತಾನೆಯೋ ಮತ್ತು ತನ್ನ ಋಣವನ್ನು ತೀರಿಸಿ ಆ ದೇವಋಣದಿಂದ ಮುಕ್ತನಾಗುತ್ತಾನೆಯೋ ಅವನು ಪ್ರಜಾಪತಿಯ ಸೃಷ್ಟಿಕಾರ್ಯದಲ್ಲಿ ನೆರವಾಗುತ್ತಾನೆ ಎಂದು ಶತಪಥದಲ್ಲಿ ಹೇಳಿರುವ ಅಂಶವನ್ನೇ ಭಗವದ್ಗೀತೆಯಲ್ಲಿಯೂ ಸಹ,

**ಇಷ್ಟಾನ್ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ।**
**ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ।**
**ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।**
**ತೇ ತ್ವಘಂ ಭುಂಜತೇ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥**

(ಭ. ಗೀ. ೩-೧೨, ೧೩)

ಯಜ್ಞದಿಂದ ತೃಪ್ತರಾದ ದೇವತೆಗಳು ಮಾನವರಿಗೆ ಅದಕ್ಕೆ ಪ್ರತಿಯಾಗಿ ಅವರರವರ ಇಷ್ಟಾರ್ಥಗಳನ್ನು ಕೊಡುತ್ತಾರೆ. ದೇವತೆಗಳಿಂದ ಅನ್ನಾದಿಸಂಪತ್ತುಗಳನ್ನು ಪಡೆದು ಪುನಃ ಅದಕ್ಕೆ ಪ್ರತಿಯಾಗಿ ದೇವತೆಗಳಿಗೆ ತೃಪ್ತಿಕರವಾದ ಯಜ್ಞಾಹುತಿಯನ್ನರ್ಪಿಸಿದಿದ್ದರೆ ಅವನು ಚೋರನಾಗುತ್ತಾನೆ. ಯಜ್ಞಕರ್ಮವನ್ನು ನೆರವೇರಿಸುವ ಸತ್ಪುರುಷರು ಪಾಪರಹಿತರಾಗುತ್ತಾರೆ. ಅದಿಲ್ಲದವರು ಪಾಪಿಗಳಾಗಿ ಪಾಪಫಲವನ್ನನುಭವಿಸುತ್ತಾರೆ ಏಕೆಂದರೆ ಈ ಯಜ್ಞವು ವಿಶ್ವಕ್ಕೆಲ್ಲಾ ಏಕಸಂಬಂಧವನ್ನು ತೋರಿಸತಕ್ಕ ತಂತುವಾಗಿದೆ. ಇದನ್ನೇ ವಿಶ್ವಚಕ್ರವೆಂದೂ ಕರೆದಿದೆ. ಉದಾಹರಣೆಗೆ—

**ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ |**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ||**

**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಂ |**
**ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ ||**

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ |**
**ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ||**

(ಭ. ಗೀ. ೩–೧೩ ರಿಂದ ೧೬)

ಕರ್ಮರೂಪವಾದ ಯಜ್ಞದಿಂದ ಪರ್ಜನ್ಯವೂ (ವೃಷ್ಟಿಯೂ) ಪರ್ಜನ್ಯದಿಂದ ಅನ್ನವೂ ಅನ್ನದಿಂದ ಭೂತ (ಪ್ರಾಣಿ)ಗಳೂ ಉತ್ಪನ್ನವಾಗುವವು. ಈ ಯಜ್ಞರೂಪವಾದ ಕರ್ಮವು ಬ್ರಹ್ಮನಿಂದ ಉತ್ಪನ್ನವಾಯಿತು. ಆದುದರಿಂದ ವಿಶ್ವದ ಸೃಷ್ಟಿಯಿಂದ ಪ್ರಾರಂಭಿಸಿ ಸಕಲವಿಧವಾದ ವ್ಯವಹಾರಗಳಿಗೂ ಪುನರಾವೃತ್ತಿರೂಪವಾದ ವಿಶ್ವಚಕ್ರಕ್ಕೂ ಸಹ ಮೂಲವಾದ ಪರಬ್ರಹ್ಮನೇ ಯಜ್ಞದಲ್ಲಿ ನಿತ್ಯವಾಗಿ ಪ್ರತಿಷ್ಠಿತನಾಗಿದ್ದಾನೆ. ಯಾವ ವ್ಯಕ್ತಿಯು ಯಜ್ಞರೂಪವಾದ ಈ ವಿಶ್ವತತ್ತ್ವವನ್ನರಿಯದೆ, ನಿಯತವಾದ ಈ ವಿಶ್ವಚಕ್ರದ ಮಾರ್ಗವನ್ನನುಸರಿಸದೆ ಸ್ವೇಚ್ಛೆಯಾಗಿರುವನೋ ಅವನು ಪಾಪಿಷ್ಠನು. ಇತ್ಯಾದಿಯಾಗಿ ಗೀತಾದಿಗಳಲ್ಲಿ ಶ್ರುತಿವಾಕ್ಯಪ್ರತಿಪಾದಿತವಾದ ಯಜ್ಞತತ್ತ್ವವು ವಿವರಿಸಲ್ಪಟ್ಟಿದೆ. ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವ **ಭುವನಸ್ಯ ನಾಭಿಃ** ಎಂಬ ಈ ಯಜ್ಞತತ್ತ್ವವನ್ನು ಋಕ್ಸಂಹಿತೆಯ ಬೇರೆ ಭಾಗಗಳಲ್ಲಿಯೂ ಇದೇ ರೀತಿ ಪ್ರಶಂಸಿಸಿದೆ—

**ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ |**
**ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ||**

(ಋ. ಸಂ. ೧-೧೬೪-೫೦ ; ೧೦-೯೦-೧೬)

ದೇವತೆಗಳು ತಮ್ಮ ಸಂಕಲ್ಪರೂಪವಾದುದೂ ಧ್ಯಾನಾತ್ಮಕವಾದುದೂ ಆದ ಯಜ್ಞದಿಂದ ಯಜ್ಞಸ್ವರೂಪಿಯಾದ ಪ್ರಜಾಪತಿಯನ್ನು ಆರಾಧಿಸಿದರು. ಪ್ರಾಪಂಚಿಕವಾದ ಧರ್ಮಗಳಿಗೆಲ್ಲಾ ಈ ವಿಧವಾದ ಯಜ್ಞವೇ ಮೂಲವಾಯಿತು. ಈ ಧರ್ಮಗಳೇ ಅಂತರಿಕ್ಷದಲ್ಲಿ ಸ್ಥಾಪಿತವಾಗಿ ದ್ಯುಲೋಕಸ್ಥರಾದ ದೇವತೆಗಳನ್ನು ಅವರವರ ಸ್ಥಾನಗಳಲ್ಲಿರಿಸುತ್ತದೆ. ಯಜ್ಞದಿಂದಲೇ ಪ್ರಜಾಪತಿಯಿಂದ ಸೃಷ್ಟವಾದ ಸಕಲ ಭೂತಗಳೂ ತಮ್ಮ ಸ್ಥಿತಿಹೇತುವಾದ ಅನ್ನವನ್ನೂ ಶಕ್ತಿಯನ್ನೂ ಪಡೆಯುತ್ತವೆ. ಆದುದರಿಂದ ಯಜ್ಞದ ಆವಶ್ಯಕತೆಯನ್ನು ತೈತ್ತಿರೀಯಸಂಹಿತೆಯಲ್ಲಿ ಈರೀತಿ ತಿಳಿಸಿದೆ—

**ಪ್ರಜಾಪತಿಃ ಪ್ರಜಾ ಅಸೃಜತ ತಾಃ ಸೃಷ್ಟಾಃ ಕ್ಷುಧಂ ನ್ಯಾಯನ್ತ್ಸ ಏತಂ ನವರಾತ್ರಮಪಶ್ಯ-ತ್ತಮಾಹರತ್ತೇನಾಯಜತ ತತೋ ವೈ ಪ್ರಜಾಭ್ಯೋಽಕಲ್ಪತ ಯರ್ಹಿ ಪ್ರಜಾಃ ಕ್ಷುಧಂ ನಿಗಚ್ಛೇಯುಸ್ತರ್ಹಿ ನವರಾತ್ರೇಣ ಯಜೇತೇಮೇ ಹಿ ವಾ ಏತಾಸಾಂ ಲೋಕಾ ಅಕ್ಲೃಪ್ತಾ॥**

(ತೈ. ಸಂ. ೭-೨-೪-೧)

ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿದನಂತರ ಅವು ಹಸಿವಿನಿಂದ ಬಾಧೆಪಡಲಾರಂಭಿಸಿದವು. ಅವುಗಳ ಹಸಿವನ್ನು ಪರಿಹಾರಮಾಡುವುದಕ್ಕಾಗಿ ನವರಾತ್ರಾತ್ಮಕವಾದ ಯಜ್ಞವನ್ನು ಕಂಡು ಅದರಿಂದ ಯಜ್ಞವನ್ನು ನಿರ್ವಹಿಸಿದನು. ಅದರಿಂದ ಆ ಪ್ರಜೆಗಳ ಕ್ಷುತ್ತಿನ ಶಮನವಾಯಿತು. ಆದುದರಿಂದ ಕ್ಷುತ್ತಿನ ಶಮನಕ್ಕಾಗಿ ಯಜ್ಞವನ್ನು ಆಚರಿಸ ಬೇಕಾದುದು ಸಹಜವಾಗಿದೆ. ಈ ಯಜ್ಞವೇ ಮೂರು ಲೋಕಗಳನ್ನೂ ಒಂದು ಸ್ಥಿತಿಯಲ್ಲಿಯೂ ನಿಯಮನದಲ್ಲಿಯೂ ಇಡುತ್ತದೆ. ಹೇಗೆಂದರೆ—

**ಕಲ್ಪಂತೇಽಸ್ಮಾ ಇಮೇ ಲೋಕಾ ಊರ್ಜಂ ಪ್ರಜಾಸು ದಧಾತಿ ತ್ರಿರಾತ್ರೇಣೈವೇಮಂ ಲೋಕಂ ಕಲ್ಪಯತಿ ತ್ರಿರಾತ್ರೇಣಾಂತರಿಕ್ಷಂ ತ್ರಿರಾತ್ರೇಣಾಮುಂ ಲೋಕಂ ಯಥಾ ಗುಣೇ ಗುಣ-ಮನ್ವಸ್ಯತ್ಯೇವಮೇವ ತಲ್ಲೋಕೇ ಲೋಕಮನ್ವಸ್ಯತಿ ಧೃತ್ಯಾ ಅಶಿಥಿಲಂ ಭಾವಾಯ ॥**

(ತೈ. ಸಂ. ೭-೨-೪-೨)

ನವರಾತ್ರರೂಪವಾದ ಈ ಯಜ್ಞದಿಂದ ಲೋಕತ್ರಯಕ್ಕೂ ಚೈತನ್ಯವು ದೊರೆಯಿತು. ತ್ರಿರಾತ್ರದಿಂದ ಪೃಥ್ವಿಗೂ. ತ್ರಿರಾತ್ರದಿಂದ ಅಂತರಿಕ್ಷಕ್ಕೂ, ಉಳಿದ ತ್ರಿರಾತ್ರದಿಂದ ದ್ಯುಲೋಕಕ್ಕೂ ಪ್ರಜಾಪತಿಯು ಸ್ಥಿತಿಶಕ್ತಿಯನ್ನು ಈ ಯಜ್ಞದ ಶಕ್ತಿಯಿಂದ ಕಲ್ಪಿಸಿದನು. ಓತಪ್ರೋತರೂಪದಿಂದ ತಂತುವಿನೊಡನೆ ತಂತುವನ್ನು ಸೇರಿಸಿ ಬಟ್ಟೆಯನ್ನು ನಿರ್ಮಿಸುವಂತೆ ಶೈಥಿಲ್ಯವನ್ನು ಕಲ್ಪಿಸುವುದಕ್ಕೂ ಮತ್ತು ವಿಶ್ವಕ್ಕೆಲ್ಲಾ ಸಂಬಂಧಿಸಿದ ಒಂದೇ (ಏಕಮಾತ್ರ) ಶಕ್ತಿಯನ್ನು ಉತ್ಪಾದನೆಮಾಡಿ ಮೂರು ಲೋಕಗಳೂ ಅವುಗಳ ನಿಯತವಾದ ಸ್ಥಿತಿಯಲ್ಲಿರುವುದಕ್ಕೂ ಈ ಯಜ್ಞದಿಂದ ಲೋಕತ್ರಯಕ್ಕೂ ಓತಪ್ರೋತ ರೂಪವಾದ ಸಂಬಂಧವನ್ನು ಕಲ್ಪಿಸಿದನು. ಈ ಯಜ್ಞವು ವಿಶ್ವಜೀವದ ನಾಡಿಯಾಗಿದೆ. ಅದನ್ನು,

**ಸರ್ವೇಷಾಂ ವಾ ಏಷ ಭೂತಾನಾಗ್ಂ ಸರ್ವೇಷಾಂ ದೇವಾನಾಮಾತ್ಮಾ ಯದ್ಯಜ್ಞಸ್ತಸ್ಯ ಸಮೃದ್ಧಿ-ಮನು ಯಜಮಾನಃ ಪ್ರಜಯಾ ಪಶುಭಿರ್ಋಧ್ಯತೇ ॥**

(ಶ. ಬ್ರಾ. ೧೪-೩-೨-೧)

ಎಂದು ಶತಪಥದಲ್ಲಿ ವಿವರಿಸಿದೆ. ಈ ಯಜ್ಞವು ಸಕಲ ಮಾನವರ ಮತ್ತು ಸಕಲ ದೇವತೆಗಳ ಆತ್ಮವೇ ಆಗಿದೆ. ಯಾವ ಪುರುಷನು ಈ ಯಜ್ಞವನ್ನು ನಿರ್ವಹಿಸುತ್ತಾನೆಯೋ ಅವನು ಸತ್ಸಂತಾನವನ್ನೂ ಪಶುಸಂಪತ್ತನ್ನೂ ಪಡೆಯುತ್ತಾನೆ. ಮತ್ತು

**ಸ ಯದಗ್ನೌ ಜುಹೋತಿ। ತದ್ದೇವೇಷು ಜುಹೋತಿ ತಸ್ಮಾದ್ದೇವಾಃ ಸಂತ್ಯಥ ಯತ್ಸದಪಿ ಭಕ್ಷಯಂತಿ ತನ್ಮನುಷ್ಯೇಷು ಜುಹೋತಿ ತಸ್ಮಾನ್ಮನುಷ್ಯಾಃ ಸಂತ್ಯಥ ಯದ್ಧವಿರ್ಧಾನಯೋ-ರ್ನಾರಾಶಗ್ಂಸಾಃ ಸೀದಂತಿ ತತ್ಪಿತೃಷು ಜುಹೋತಿ ತಸ್ಮಾತ್ಪಿತರಃ ಸಂತಿ ॥**

(ಶ. ಬ್ರಾ. ೨-೬-೨-೨೫)

ಅಗ್ನಿಯಲ್ಲಿ ಹುತವಾದುದು ದೇವತೆಗಳಿಗೆ ಅರ್ಪಿತವಾಗುತ್ತದೆ. ಆದುದರಿಂದಲೇ ದೇವತೆಗಳು ತಮ್ಮ ಸ್ಥಿತಿಯನ್ನು ಕಾಪಾಡಿಕೊಂಡಿದ್ದಾರೆ. ಸದಸ್ಸಿನಲ್ಲಿ ಹಂಚಲ್ಪಟ್ಟ (ಸೋಮ) ರಸದಿಂದ ಮಾನವರ ಸ್ಥಿತಿಯಿದೆ. ನಾರಾಶಂಸಪಾತ್ರೆಯಿಂದ ಅರ್ಪಿತವಾದ ಆಹುತಿಯು ಪಿತೃಗಳನ್ನು ತೃಪ್ತಿಪಡಿಸುತ್ತದೆ. ಆದುದರಿಂದ ಮಾನವನು ತನ್ನ ದೇವಋಣವನ್ನೂ ಪಿತೃಋಣವನ್ನೂ ಸಹ ಯಜ್ಞಕರ್ಮದಿಂದಲೇ ತೀರಿಸಬೇಕು: ಇದಿಲ್ಲದೆ ಇವನಿಗೆ ವಿಮೋಚನೆಯಿಲ್ಲ. ತೈತ್ತಿರೀಯಸಂಹಿತೆಯಿಂದ ಹಿಂದೆ ಉದಾಹರಿಸಿದ,

**ತೆಲ್ಲೋಕೇ ಲೋಕಮುನ್ನಸ್ಯತಿ ಧೃತ್ಯಾ ಅಶಿಥಿಲಂಭಾವಾಯ |**

(ತೈ. ಸಂ. ೬-೨-೪-೨)

ಎಂಬ ವಾಕ್ಯದಲ್ಲಿ ವಿಶ್ವದ ಅಸ್ತಿತ್ವವು ಶಿಥಿಲವಾಗದೆ ಭದ್ರವಾಗಿರುವುದಕ್ಕಾಗಿಯೂ ಮತ್ತು ಮೂರು ಲೋಕಗಳ ಸಂಬಂಧವೂ ಓತಪ್ರೋತಗಳಂತೆ ಹೆಣೆದುಕೊಂಡಿರುವುದಕ್ಕಾಗಿಯೂ ಸಹ ಯಜ್ಞಕರ್ಮದ ಅವಶ್ಯಕತೆಯಿದೆಯೆಂದು ತಿಳಿಸಿದೆ. ಋಣತ್ರಯದ ವಿಷಯವನ್ನು ಹೇಳುವಾಗಲೂ ಸಹ ಈ ಪರಸ್ಪರವಾದ ಬಂಧನವು ವರ್ಣಿತವಾಗಿರುತ್ತದೆ.

**ಋಣಗ್ಂ ಹ ವೈ ಜಾಯತೇ ಯೋಽಸ್ತಿ ಸ ಜಾಯಮಾನ ಏವ ದೇವೇಭ್ಯ ಋಷಿಭ್ಯಃ ಪಿತೃಭ್ಯೋ ಮನುಷ್ಯೇಭ್ಯಃ ||**

(ಶ. ಬ್ರಾ. ೧-೭-೨-೧)

ಪ್ರತಿಯೊಬ್ಬ ವ್ಯಕ್ತಿಯ ಸ್ಥಿತಿಯ ಕಾಲದಲ್ಲಿಯೂ ಸಹ ಅವನ ಜನ್ಮದಿಂದಲೇ ಪ್ರಾಪ್ತವಾದ ದೇವಋಣವೂ, ಋಷಿಋಣವೂ, ಪಿತೃಋಣವೂ ಅವನ ಮೇಲಿನ ಹೊರೆಯಾಗಿದ್ದೇ ಇರುತ್ತದೆ.

**ಸ ಯದೇವ ಯಜೇತ | ತೇನ ದೇವೇಭ್ಯ ಋಣಂ ಜಾಯತೇ ತದ್ಧ್ಯೇಭ್ಯ ಏತತ್ಕರೋತಿ ಯದೇಭ್ಯೋ ಜುಹೋತಿ ||**

(ಶ. ಬ್ರಾ. ೧-೭-೨-೨)

ಈ ಋಣದಿಂದ ಮುಕ್ತನಾಗಿ ವಿಶ್ವದ ಸ್ಥಿತಿಯಲ್ಲಿ ತಾನೂ ಸಹ ಭಾಗವಹಿಸುವಂತೆ ತನ್ನ ಅಸ್ತಿತ್ವವನ್ನು ಕಾಪಾಡಿಕೊಳ್ಳಬೇಕಾದರೆ ಪ್ರತಿಯೊಂದು ವ್ಯಕ್ತಿಯೂ ಯಜ್ಞಮಾಡಿ ದೇವಋಣವನ್ನು ತೀರಿಸಿ ಆ ಋಣದಿಂದ ಮುಕ್ತನಾಗಲೇಬೇಕು. ಈ ವಿಷಯವನ್ನು ತೈತ್ತಿರೀಯಸಂಹಿತೆಯಲ್ಲಿ ಇನ್ನೂ ವಿಶದವಾಗಿ ತಿಳಿಸಿದೆ.

**ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರ್ಋಣವಾ ಜಾಯತೇ ಬ್ರಹ್ಮಚರ್ಯೇಣರ್ಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯ ಏಷ ವಾ ಅನೃಣೋ ಯಃ ಪುತ್ರೀ ಯಜ್ವಾ ಬ್ರಹ್ಮಚಾರಿವಾಸೀ ||**

(ತೈ. ಸಂ. ೬-೩-೧೧-೫)

ಬ್ರಾಹ್ಮಣನಾದವನು ಹುಟ್ಟುವಾಗಲೇ ಋಷಿಋಣ, ದೇವಋಣ, ಪಿತೃಋಣಗಳೆಂಬ ಮೂರು ವಿಧವಾದ ಋಣಗಳನ್ನು ಹೊತ್ತುಕೊಂಡೇ ಹುಟ್ಟುವನು. ಇಲ್ಲಿ ಋಷಿಋಣವೆಂದರೆ ಬ್ರಾಹ್ಮಣನಾದವನು ಋಷಿಗಳ ವಿಷಯದಲ್ಲಿ ನಡೆಸಬೇಕಾದ ಕರ್ತವ್ಯವೆಂದರ್ಥವು- ಇದರಂತೆ ದೇವಋಣ, ಪಿತೃಋಣಗಳಿಗೂ ಅರ್ಥವು. ಬ್ರಹ್ಮಚರ್ಯವ್ರತದಿಂದ ಗುರುಕುಲದಲ್ಲಿ ವಾಸಮಾಡುತ್ತಾ ನಿಯಮವಾಗಿ ಗುರುವಿನಿಂದ ಉಪದೇಶಪೂರ್ವಕವಾಗಿ ವೇದಾಧ್ಯಯನಮಾಡುವುದರಿಂದ ಋಷಿ

ಋಣವು ತೀರುವುದು. ಯಜ್ಞಾದಿಕರ್ಮಗಳಿಂದ ದೇವತೆಗಳನ್ನು ಆರಾಧಿಸುವುದರಿಂದ ದೇವಋಣವು ತೀರುವುದು. ವಿವಾಹವಾದ ಪತ್ನಿಯಲ್ಲಿ ಧರ್ಮಪ್ರಜೋತ್ಪಾದನೆಮಾಡುವುದರಿಂದ ಪಿತೃಋಣವು ತೀರುವುದು. ಆದುದರಿಂದ ಬ್ರಾಹ್ಮಣನಾದವನು ಗೃಹಸ್ಥನಾಗಿ ಈ ಮೂರು ವಿಧವಾದ ಕರ್ತವ್ಯವನ್ನು ಪಾಲಿಸಲೇಬೇಕು ಎಂದು ಉಕ್ತವಾಗಿರುವುದು.

ಇತ್ಯಾದಿಯಾಗಿ ವಿಶ್ವತತ್ತ್ವದಲ್ಲಿ ಪ್ರತಿವ್ಯಕ್ತಿಯೂ ಸಹ ತನ್ನ ಪ್ರಭಾವಪೂರಿತವಾದ ಅಸ್ತಿತ್ವವನ್ನು ಕಾಪಾಡಿಕೊಳ್ಳಬೇಕಾದರೆ ಯಜ್ಞವು ಈ ಸಾಮಾನ್ಯ ವಿಶೇಷಗಳಿಗೆ ಸಂಬಂಧವನ್ನು ಕಲ್ಪಿಸುವ ಸೂತ್ರವಾಗಿರುತ್ತದೆ. ಸೂತ್ರರೂಪವಾದ ಈ ಯಜ್ಞವೂ ಸಹ ವಿಶ್ವದ ವಿಕಾಸ ಮತ್ತು ಸಂಕೋಚಗಳೊಡನೆ ತಾನೂ ಸಹ ಒಂದುಸಲ ಬೆಳೆಯುತ್ತದೆ, ಇನ್ನೊಂದುಸಲ ಸಂಕುಚಿತವಾಗುತ್ತದೆ. ವಿಶ್ವಗತಿಯೊಡನೆ ತನ್ನ ಗತಿಯನ್ನು ಹೊಂದಿಸಿಕೊಳ್ಳುತ್ತದೆ. ಈ ಅಂಶವನ್ನು ವಿವರಿಸುತ್ತಾ ಶತಪಥಬ್ರಾಹ್ಮಣದಲ್ಲಿ ಯಜ್ಞಶಬ್ದದ ನಿರ್ವಚನವನ್ನು ತಿಳಿಸಿದೆ.

**ಅಥ ಯಸ್ಮಾದ್ಯಜ್ಞೋ ನಾಮ । ಘ್ನಂತಿ ವಾ ಏನಮೇತದ್ಯದಭಿಷುಣ್ವಂತಿ ತದ್ಯದೇನಂ ತನ್ವತೇ ತದೇನಂ ಜನಯಂತಿ ಸ ತಾಯಮಾನೋ ಜಾಯತೇ ಸ ಯನ್ ಜಾಯತೇ ತಸ್ಮಾದ್ಯಜ್ಞೋ ಯಂಜ್ಞೋ ಹ ವೈ ನಾಮೈತದ್ಯಜ್ಞ ಇತಿ ॥**

(ಶ. ಬ್ರಾ. ೩-೯-೪-೨೩)

ಅಭಿಷವಕಾಲದಲ್ಲಿ ಹನನಮಾಡುತ್ತಾರೆ (ಸೋಮಲತೆಗಳನ್ನು ಕಲ್ಲಿನಿಂದ ಜಜ್ಜುತ್ತಾರೆ, ಇದೇ ಹನನವು). ಪುನಃ ಉತ್ಪನ್ನವಾಗುವಂತೆ ಮಾಡುತ್ತಾರೆ). ಪ್ರಸಾರರೂಪವಾದ ಗತಿಯೊಂದಿಗೆ ಉತ್ಪನ್ನವಾಗುವುದರಿಂದ ಯಜ್ಞವೆಂಬ ಹೆಸರು ಪ್ರಸಿದ್ಧವಾಯಿತು ಎಂದು ಆವಶ್ಯಕತೆಗಳಿಗೆ ತಕ್ಕಂತೆ ಸಂಕೋಚವಿಕಾಸಗಳೂ ಇವೆಯೆಂದು ತಿಳಿಸಿದೆ ಮತ್ತು ವಿಶ್ವದ ಸ್ಥಿತಿಗತಿಗಳಿಗನುಗುಣವಾಗಿಯೇ ಇರುವುದರಿಂದ ವಿಶ್ವಕ್ಕೆ ಉಪಕಾರವಾಗಿದೆ. ಹೇಗೆಂದರೆ—

**ಭುಜ್ಯುಃ ಸುಪರ್ಣ ಇತಿ । ಯಜ್ಞೋ ವೈ ಭುಜ್ಯುಃ ಯಜ್ಞೋ ಹಿ ಸರ್ವಾಣಿ ಭುನಕ್ತಿ ಯಜ್ಞೋ ಗಂಧರ್ವಃ ॥**

(ಶ. ಬ್ರಾ. ೯-೪-೧-೧೧)

ಯಜ್ಞವು ಸಕಲ ಭೂತಗಳನ್ನೂ ತನ್ನ ಆಹುತಿಗಾಗಿ ಅಪೇಕ್ಷಿಸುತ್ತದೆ. ಪುನಃ ಸಕಲ ಭೂತಗಳ ಉಪಕಾರಕ್ಕಾಗಿ ಪ್ರಸರಿಸುತ್ತದೆ. ಇತ್ಯಾದಿಯಾಗಿ ವಿಶ್ವತತ್ತ್ವಕ್ಕೂ ಯಜ್ಞಕ್ಕೂ ಇರತಕ್ಕ ತಾದಾತ್ಮ್ಯಸಂಬಂಧವನ್ನು ತಿಳಿಸಿ ವ್ಯಾವಹಾರಿಕವಾದ ಸಮಸ್ತ ವಿಶ್ವವ್ಯವಹಾರಗಳಿಗೂ ಸಹ ಯಜ್ಞವು ಕಾರಣವು, ಅದೇ ರಕ್ಷಕವು ಮತ್ತು ಅದೇ ಸೂತ್ರರೂಪವಾದ ಸಂಬಂಧವು ಇತ್ಯಾದಿಯಾಗಿ ನಾನಾ ಶ್ರುತಿವಾಕ್ಯಗಳಲ್ಲಿ ವರ್ಣಿಸಿರುವ ಅಂಶವನ್ನು ಪ್ರಕೃತವಾದ ಋಕ್ಕಿನಲ್ಲಿ **ಯಜ್ಞೋ ವಿಶ್ವಸ್ಯ ನಾಭಿಃ** ಎಂಬ ವಾಕ್ಯದಿಂದ ವರ್ಣಿಸಲಾಗಿದೆ. ಆದುದರಿಂದಲೇ ವಿಶ್ವನಾಭಿಯಾದ ಈ ಯಜ್ಞವನ್ನು ನಿರ್ವಹಿಸಬೇಕಾದರೆ ದೇವಮಾನವಾದಿಗಳೆಲ್ಲರಿಗೂ ಸಮಾನವಾದ ಶ್ರದ್ಧೆಯು ಅತ್ಯವಶ್ಯವೆಂದು ತಿಳಿಸಿದೆ.

**ಯೋ ವೈ ಶ್ರದ್ಧಾಮನಾರಭ್ಯ ಯಜ್ಞೇನ ಯಜತೇ ನಾಸ್ಯೇಷ್ಟಾಯ ಶ್ರದ್ದಧತೇಽಪಃ ಪ್ರಣಯತಿ ಶ್ರದ್ಧಾ ವಾ ಆಪಃ ಶ್ರದ್ಧಾಮೇವಾರಭ್ಯ ಯಜ್ಞೇನ ಯಜತ ಉಭಯೇಽಸ್ಯ ದೇವಮನುಷ್ಯಾ ಇಷ್ಟಾಯ ಶ್ರದ್ದಧತೇ ॥**

(ತೈ. ಸಂ. ೧-೬-೮-೧)

ಶ್ರದ್ಧಾರಹಿತನಾಗಿ ಯಜ್ಞಮಾಡಿದವನ ಯಜ್ಞವು ಸಿದ್ಧಿಸುವುದಿಲ್ಲ ಎಂದರೆ ಫಲಕಾರಿಯಾಗುವುದಿಲ್ಲ. ಶ್ರದ್ಧಾರೂಪವಾದ ಉದಕವನ್ನು ಮುಂದಿಟ್ಟುಕೊಂಡು ಯಜ್ಞವನ್ನು ನೆರವೇರಿಸಬೇಕು. ದೇವಮಾನವಾದಿ ಸಕಲರೂ ಸಹ ಶ್ರದ್ಧೆಯಿಂದಲೇ ಯಜ್ಞದಲ್ಲಿ ಭಾಗವಹಿಸುವರು ಎಂದು ಶ್ರದ್ಧೆಯ ಆವಶ್ಯಕತೆಯನ್ನೂ ತಿಳಿಸಿದೆ. ಇದಲ್ಲದೆ,

**ಶ್ರದ್ಧಯಾಗ್ನಿಃ ಸಮಿಧ್ಯತೇ ಶ್ರದ್ಧಯಾ ಹೂಯತೇ ಹವಿಃ ।**

(ಋ. ಸಂ. ೧೦-೧೫೧-೧)

ಯಜ್ಞಕರ್ಮಗಳಲ್ಲಿ ಶ್ರದ್ಧೆಯಿಂದಲೇ ಅಗ್ನಿಮಥನವನ್ನು ಮಾಡಿ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಬೇಕು. ಆ ಅಗ್ನಿಯಲ್ಲಿ ದೇವತೆಗಳನ್ನುದ್ದೇಶಿಸಿ ಆಹುತಿಗಳನ್ನರ್ಪಿಸುವುದನ್ನೂ ಸಹ ಶ್ರದ್ಧೆಯಿಂದಲೇ ನೆರವೇರಿಸಬೇಕು ಎಂದು ಋಗ್ವೇದದಲ್ಲಿಯೂ ಹೇಳಿದೆ.

ಯಜ್ಞತತ್ತ್ವದಲ್ಲಿಡಬೇಕಾದ ಈ ಶ್ರದ್ಧೆಯು ಕೇವಲ ಅಂಧಶ್ರದ್ಧೆಯಲ್ಲ. ಈ ಶ್ರದ್ಧೆಯು ಆಧ್ಯಾತ್ಮಿಕವಾದ ತತ್ತ್ವವನ್ನು ಗ್ರಹಣಮಾಡುವ ಶಕ್ತಿಯುಳ್ಳದ್ದಾಗಿರಬೇಕು. ಇದು ಭುವನನಾಭಿಯಾದ ಯಜ್ಞಕ್ಕೂ ಬ್ರಹ್ಮತತ್ತ್ವಕ್ಕೂ ಇರುವ ಸಂಬಂಧವನ್ನು ತಿಳಿಸುವಂತಿರಬೇಕು. ಆಧ್ಯಾತ್ಮಿಕಜ್ಞಾನದ ಆಧಾರದಮೇಲೆ ನಿಂತಿರುವ ಈ ಶ್ರದ್ಧೆಯುಳ್ಳ ಯಜಮಾನನು ತನಗೂ ಯಜ್ಞಕ್ಕೂ ತಾದಾತ್ಮ್ಯವನ್ನು ಕಲ್ಪಿಸಿಕೊಳ್ಳುತ್ತಾನೆ. ಅನಂತರ ಯಜ್ಞಕ್ಕೂ ಪ್ರಜಾಪತಿಗೂ ಇರುವ ತಾದಾತ್ಮ್ಯವನ್ನರಿಯುತ್ತಾನೆ. ಪ್ರಜಾಪತಿರೂಪಿಯಾದ ಪರಬ್ರಹ್ಮನ ವಿಶ್ವವ್ಯವಹಾರಗಳೆಲ್ಲವೂ ಈ ಯಜ್ಞತತ್ತ್ವದಲ್ಲಡಗಿರುತ್ತದೆಂದರಿಯುತ್ತಾನೆ ಮತ್ತು ಆ ವಿಶ್ವಚಕ್ರದಲ್ಲಿ ತಾನೂ ಸಹ ಭಾಗವನ್ನು ವಹಿಸುತ್ತಾನೆ

ಇನ್ನು ಮೂರನೆಯ ಪ್ರಶ್ನೆಯಾದ ಪೃಚ್ಛಾಮಿ ತ್ವಾ ವೃಷ್ಣೋ ಅಶ್ವಸ್ಯ ರೇತಃ ಎಂಬ ವಾಕ್ಯಕ್ಕೆ **ಅಯಂ ವೃಷ್ಣೋ ಅಶ್ವಸ್ಯ ರೇತಃ** ಎಂದು ಉತ್ತರವನ್ನು ಹೇಳಲಾಗಿದೆ ಎಂದರೆ ವೃಷ್ಟ್ಯಾದಿಗಳನ್ನು ಸುರಿಸುವವನೂ, ಜಗದ್ವ್ಯಾಪಕನೂ ಆದ ಆದಿತ್ಯನ (ಬ್ರಹ್ಮನ) ರೇತಸ್ಸು ಎಂದರೆ ಜಗದುತ್ಪತ್ತಿಕಾರಣವಾದ ಶಕ್ತಿಸಾಮರ್ಥ್ಯವು ಯಾವುದು ಎಂಬುದೇ ಪ್ರಶ್ನೆ. ಅದಕ್ಕೆ ಸೋಮವೇ ಆ ರೇತಸ್ಸು ಎಂದು ಉತ್ತರವನ್ನು ಹೇಳಿದೆ. ಇಲ್ಲಿ ಅಶ್ವವೆಂಬ ಪರ್ಯಾಯಪದವು ಆದಿತ್ಯನ ಯಾವ ಗುಣವನ್ನು ತೋರಿಸುತ್ತದೆ ಎಂಬುದನ್ನು ತಿಳಿದು ಅನಂತರ ಸೋಮವು ಅವನ ರೇತಸ್ಸು ಎಂಬುದರ ಅರ್ಥವೇನು ಎಂಬ ವಿಷಯವನ್ನು ಪರಿಶೀಲಿಸಬೇಕು. ಶತಪಥಬ್ರಾಹ್ಮಣದಲ್ಲಿ ಅಶ್ವಶಬ್ದದ ನಿರ್ವಚನವನ್ನು ಈ ರೀತಿ ತಿಳಿಸಿದೆ.

**ಪ್ರಜಾಪತೇರಕ್ಷ್ಯಶ್ವಯತ್ ತತ್ಪರಾಪತತ್ತತೋಽಶ್ವಃ ಸಮಭವದ್ಯದಶ್ವಯತ್ತದಶ್ವಸ್ಯಾಶ್ವತ್ವಂ ॥**

(ಶ. ಬ್ರಾ. ೧೩-೩-೧-೧)

ಪ್ರಜಾಪತಿಯ ಅಕ್ಷಿಯು (ಕಣ್ಣು) ಉಬ್ಬಿಕೊಂಡು ಕೆಳಕ್ಕೆ ಬಿದ್ದುಹೋಯಿತು. ಅದರಿಂದ ಅಶ್ವವು ಉತ್ಪನ್ನವಾಯಿತು. ಅದು ವೃದ್ಧವಾದುದರಿಂದ ಅದಕ್ಕೆ ಅಶ್ವವೆಂದು ಹೆಸರು ಪ್ರಸಿದ್ಧವಾಯಿತು ಎಂದು ತಿಳಿಸಿ ಅನಂತರ ಈ ಅಶ್ವಕ್ಕೂ ಆದಿತ್ಯನಿಗೂ ಇರುವ ತಾದಾತ್ಮ್ಯವು ಹೇಗೆ ಎಂಬುದನ್ನು ವಿವರಿಸಿದೆ.

**ಪ್ರಜಾಪತಿರ್ವಾ ಇದಮಗ್ರ ಆಸೀತ್ । . . . . ನಿರಮಿಮೀತ ಮನಸಃ ಪುರುಷಂ ಚಕ್ಷುಷೋಽಶ್ವಂ ।**

(ಶ. ಬ್ರಾ. ೭-೫-೨-೬)

ಈ ಅಶ್ವವು ಪ್ರಜಾಪತಿಯ ಚಕ್ಷುಸ್ಸಿನಿಂದ ಸೃಷ್ಟವಾಯಿತು ಎಂದು ಹೇಳಿ ಅನಂತರ ವರುಣನಿಗೂ ಈ ಅಶ್ವಕ್ಕೂ ಇರತಕ್ಕ ನಿಕಟವಾದ ಸಂಬಂಧವನ್ನು ಅನೇಕ ಕಡೆಗಳಲ್ಲಿ ತಿಳಿಸಿದೆ.

**ವಾರುಣೋ ವಾ ಅಶ್ವಃ । ತಂ ದೇವತಯಾ ವ್ಯರ್ಧಯತಿ । ಯತ್ಪ್ರಾಜಾಪತ್ಯಂ ಕರೋತಿ । ನಮೋ ರಾಜ್ಞೇ ನಮೋವರುಣಾಯೇತ್ಯಾಹ । ವಾರುಣೋ ವಾ ಅಶ್ವಃ ॥**

(ತೈ. ಬ್ರಾ. ೩-೯-೧೬-೧)

ಎಂದು ವರುಣನಿಗೂ ಅಶ್ವಕ್ಕೂ ಇರುವ ಸಂಬಂಧವನ್ನು ತಿಳಿಸುವಾಗ ಸಾಯಣರು **ಅಶ್ವಸ್ಯಾಬ್ಯೋನಿತ್ವಾದ್ವರುಣಸ್ಯ ಚಾಪಾಂ ಪತಿತ್ವಾದಯಮಶ್ವೋ ವಾರುಣಃ ।** ಅಶ್ವವು ವಿಶ್ವವ್ಯಾಪಕವಾದ ನೀರಿನಿಂದ ಜನಿಸಿದುದರಿಂದಲೂ, ವರುಣನು ನೀರಿಗೆ ಒಡೆಯನಾದುದರಿಂದಲೂ ಯಜ್ಞಾಶ್ವವು ವರುಣದೇವತೆಗೆ ಸಂಬಂಧಿಸಿದುದು ಎಂದು ವಿವರಣೆ ಮಾಡಿದ್ದಾರೆ. ಈ ವಾರುಣಾಶ್ವದ ರಹಸ್ಯಾರ್ಥವೇನು ಎಂಬ ವಿಷಯವನ್ನು ವಿಮರ್ಶಿಸುತ್ತಾ Eggelling ಎಂಬ ಪಂಡಿತನು ಶತಪಥಬ್ರಾಹ್ಮಣದ ಪರಿವರ್ತನದಲ್ಲಿ ಈ ರೀತಿ ಹೇಳಿದ್ದಾನೆ. ದ್ಯಾವಾಪೃಥಿವಿಗಳಿಗೆಲ್ಲಾ ಪ್ರಭುವಾದ ವರುಣನ ಈ ಅಶ್ವವು ಯಾವುದೆಂದರೆ ತನ್ನ ದೈನಂದಿನ ಪರಿಭ್ರಮಣವನ್ನು ಹೊಂದುತ್ತಿರುವ ಸೂರ್ಯನಲ್ಲದೆ ಬೇರೆಯಲ್ಲ. ವರುಣನಿಗೂ ಈ ಅಶ್ವದೊಡನೆ ಇರತಕ್ಕ ಸಂಬಂಧವು ತೈತ್ತಿರೀಯ ಸಂಹಿತೆಯಲ್ಲಿ ಈ ರೀತಿ ವರ್ಣಿತ ವಾಗಿದೆ.

**ಪ್ರಜಾಪತಿರ್ವರುಣಾಯಾಶ್ವಮನಯತ್ಸ ಸ್ವಾಂ ದೇವತಾಮಾರ್ಚ್ಛತ್ಸ ಪರ್ಯದೀರ್ಯತ ಸ ಏತಂ ವಾರುಣಂ ಚತುಷ್ಕಪಾಲಮಪಶ್ಯತ್ತಂ ನಿರವಪತ್ತತೋ ವೈ ಸ ವರುಣಪಾಶಾದಮುಚ್ಯತ ವರುಣೋ ವಾ ಏತಂ ಗೃಹ್ಣಾತಿ ಯೋಽಶ್ವಂ ಪ್ರತಿಗೃಹ್ಣಾತಿ ॥**

(ತೈ. ಸಂ. ೨-೩-೧೨-೧)

ಪ್ರಜಾಪತಿಯು ಈ ಅಶ್ವವನ್ನು ವರುಣನಲ್ಲಿಗೆ ಕರೆದುಕೊಂಡುಹೋದನು. ಆದರೆ ಆ ಅಶ್ವವು ತನ್ನ ಸ್ವಂತದೇವತೆಯಾದ ಪ್ರಜಾಪತಿಯ ಬಳಿಗೇ ಹೋಯಿತು. ಆಗ ವರುಣನಿಗೆ ಖೇದವುಂಟಾದುದರಿಂದ ಪ್ರಜಾಪತಿಯು ವರುಣನನ್ನುದ್ದೇಸಿಸಿ ಚತುಷ್ಕಪಾಲವನ್ನರ್ಪಿಸಿದನು. ಆಗ ಪ್ರಜಾಪತಿಯು ವರುಣನ ಪಾಶದಿಂದ ಮುಕ್ತನಾದನು ಎಂಬುದಾಗಿ ವಿವರಿಸಿದೆ. ಈ ಅಂಶವನ್ನು ವಿಶದವಾಗಿ ತಿಳಿಯಲು ಇನ್ನೂ ಕೆಲವು ಮಂತ್ರಗಳು ಸಹಾಯಕಗಳಾಗಿರುವವು. ಇವು ಅಶ್ವಪದವು ಸೂರ್ಯನಿಗೆ ಪರ್ಯಾಯಪದವಾಗಿರುವುದನ್ನು ಸೂಚಿಸುತ್ತವೆ— ಋ. ಸಂ. ೧-೫೦-೧; ತೈ. ಸಂ. ೨-೨-೧೨-೧; ಋ. ಸಂ. ೧-೧೧೫-೧; ತೈ. ಸಂ. ೨-೫-೧೨-೧ ಇತ್ಯಾದಿ. ವಿಶ್ವವ್ಯಾಪಿಯಾದ (ಅಶ್ವಸ್ಯ) ಈ ಆದಿತ್ಯನಿಗೆ ಸೋಮವು ರೇತೋರೂಪವಾಗಿರುವುದು ಎಂದರೆ ಆದಿತ್ಯರೂಪದಲ್ಲಿರುವ ಪರಬ್ರಹ್ಮನಿಗೆ ಸೋಮವೇ ರೇತಸ್ಸಾಗಿರುವುದೆಂದು ಹೇಳ ಬಹುದು. ಹೇಗೆಂದರೆ, ಸಕಲ ಭೂತಗಳ ಸೃಷ್ಟಿಗೆ ಸೋಮವೇ ಉತ್ಪಾದಕವಾದ ಬೀಜವೆಂಬುದನ್ನು ಬೃಹದಾರಣ್ಯಕೋಪನಿಷತ್ತಿನಲ್ಲಿ ಈರೀತಿ ಹೇಳಿದೆ—

**ಅಥ ಯತ್ಕಿಂಚೇದಮಾರ್ದ್ರಂ ತದ್ರೇತಸೋಽಸೃಜತ ತದು ಸೋಮ ಏತಾವದ್ವಾ ಇದಂ ಸರ್ವ-ಮನ್ನಂ ಚೈವಾನ್ನಾದಶ್ಚ ಸೋಮ ಏವಾನ್ನಮಗ್ನಿರನ್ನಾದಃ ॥**

(ಬೃ. ಉ. ೧-೪-೬)

ಅದ್ವಿತೀಯನಾದ ಪರಬ್ರಹ್ಮನು ತನ್ನ ರೇತಸ್ಸಿನಿಂದ ವಿಶ್ವದಲ್ಲಿ ಆರ್ದ್ರವಾಗಿರುವ ಸಕಲವಸ್ತುಗಳನ್ನೂ ಸೃಷ್ಟಿಸಿದನು. ಆ ರೇತಸ್ಸೇ ಸೋಮವು. ಈ ಸೋಮವು ಅಗ್ನಿಯಲ್ಲಿ ಅರ್ಪಿತವಾಗಿ ಎರಡೂ ಪರಸ್ಪರ ಭಕ್ಷ್ಯಭಕ್ಷಕಗಳಾಗುತ್ತವೆ. ಇದನ್ನೇ ಮೈತ್ರ್ಯುಪನಿಷತ್ತಿನಲ್ಲಿ—

**ರವಿಮಧ್ಯೇ ಸ್ಥಿತಃ ಸೋಮಃ ಸೋಮಮಧ್ಯೇ ಹುತಾಶನಃ ||**

(ಮೈ. ಉ. ೬-೩೮)

ಎಂದು ವರ್ಣಿಸಿದೆ. ಎಂದರೆ ಸೋಮನು ಆದಿತ್ಯಮಂಡಲದ ಮಧ್ಯವರ್ತಿಯಾಗಿಯೂ, ಅಗ್ನಿಯು ಸೋಮದ ಮಧ್ಯವರ್ತಿಯಾಗಿಯೂ ಇದ್ದಾರೆಂದು ತಿಳಿಸಿದೆ. ಸಾಧಾರಣವಾಗಿ ಆದಿತ್ಯನಿಗೂ ಸೋಮನಿಗೂ ಇರುವ ಸಂಬಂಧ ವನ್ನು ಋಕ್ಸಂಹಿತೆಯಲ್ಲಿ ಅನೇಕ ಕಡೆ ವರ್ಣಿಸಿದೆ.

**ಮಹತ್ತತ್ಸೋಮೋ ಮಹಿಷಶ್ಚಕಾರಾಪಾಂ ಯದ್ಗರ್ಭೋಽವೃಣೀತ ದೇವಾನ್ ।**
**ಅದಧಾದಿಂದ್ರೇ ಪವಮಾನ ಓಜೋಽಜನಯತ್ಸೂರ್ಯೇ ಜ್ಯೋತಿರಿಂದುಃ ||**

(ಋ. ಸಂ. ೯-೯೭-೪೧)

ಆದಿತ್ಯಸ್ಥವಾದ ಉದಕಗಳ ಗರ್ಭಭೂತವಾದ ಸೋಮವು ದೇವತೆಗಳಿಗೂ ತೃಪ್ತಿಯನ್ನುಂಟುಮಾಡಿತು. ವೀರ್ಯ ರೂಪದಲ್ಲಿದ್ದು ಆದಿತ್ಯನಲ್ಲಿ ವಿಶ್ವಜ್ಯೋತಿಯನ್ನು ಸೃಷ್ಟಿಸಿತು ಎಂದಿದೆ. ಮತ್ತು—

**ತ್ವಂ ಸಮುದ್ರೋ ಅಸಿ ವಿಶ್ವವಿತ್ಕವೇ ತವೇಮಾಃ ಪಂಚ ಪ್ರದಿಶೋ ವಿಧರ್ಮಣಿ ।**
**ತ್ವಂ ದ್ಯಾಂ ಚ ಪೃಥಿವೀಂ ಚಾತಿ ಜಭ್ರಿಷೇ ತವ ಜ್ಯೋತೀಂಷಿ ಪವಮಾನ ಸೂರ್ಯಃ ||**

(ಋ. ಸಂ. ೯-೮೬-೨೯)

ಎಂಬಲ್ಲಿ ಸೋಮವೇ ಅಂತರಿಕ್ಷಸ್ಥವಾದ ಸಮುದ್ರವೆಂದೂ, ಸಕಲ ಜ್ಯೋತಿಗೂ ಆಧಾರವೆಂದೂ, ಆದಿತ್ಯನೇ ಸೋಮನ ಪ್ರಭಾವದಿಂದ ಬೆಳಗುತ್ತಿರುವನೆಂದೂ ತಿಳಿಸಿದೆ. ಇಲ್ಲಿ ಸೋಮವು ಯಾವ ತತ್ವವನ್ನು ಪ್ರತಿಬಿಂಬಿಸುತ್ತದೆ ಎಂಬುದನ್ನು ಪ್ರಕೃತವಾದ ಋಕ್ಕಿನಲ್ಲಿ ಸಾಯಣರು ವಿವರಿಸುವಾಗ **ಅಗ್ನೌ ಹುತಃ ಸೋಮರಸಃ ಆದಿತ್ಯಂ ಪ್ರಾಪ್ಯ ವೃಷ್ಟ್ಯಾದಿಫಲಂ ಜನಯತಿ** । ಅಗ್ನಿಯಲ್ಲಿ ಅರ್ಪಿಸಿದ ಸೋಮವು ಆದಿತ್ಯನನ್ನು ಸೇರಿ ವೃಷ್ಟ್ಯಾದಿಫಲವನ್ನು ಉತ್ಪನ್ನವಾಗುವಂತೆ ಮಾಡುತ್ತದೆ. ಆದುದರಿಂದ ಆದಿತ್ಯನ ರೇತಸ್ಸೆಂದು ಇಲ್ಲಿ ವರ್ಣಿತವಾಗಿದೆಯೆಂದು ತಿಳಿಸಿದ್ದಾರೆ. ಇಲ್ಲಿ ಕೇವಲ ಅಧಿದೈವತಪಕ್ಷದಲ್ಲಿಯೇ ಅರ್ಥ ಮಾಡದೆ ಅಧ್ಯಾತ್ಮಪಕ್ಷದಲ್ಲಿಯೂ ಅರ್ಥ ಮಾಡಬೇಕು. ಅಧ್ಯಾತ್ಮ ಪಕ್ಷದಲ್ಲಿ ಮೇಲೆ ಉದಹರಿಸಿರುವ ಉಪನಿಷದ್ವಾಕ್ಯಗಳಲ್ಲಿ ರೇತಸ್ಸಿನ ರೂಪದಲ್ಲಿರುವ ಸೋಮನಿಗಿರುವ ವಿಶ್ವೋತ್ಪಾದನ ಶಕ್ತಿಯನ್ನೂ, ಸೋಮನಿಗೂ ಆದಿತ್ಯನಿಗೂ ಇರುವ ಸಂಬಂಧವನ್ನೂ ತಿಳಿಸಿದೆ.

(4) ನಾಲ್ಕನೆಯ ಪ್ರಶ್ನೆಯಾದ— **ಪೃಚ್ಛಾಮಿ ವಾಚಃ ಪರಮಂ ವ್ಯೋಮ** । ಸಕಲ ವ್ಯವಹಾರಗಳಿಗೂ ಕಾರಣವಾದ ವಾಕ್ಕಿನ ಪರಮಸ್ಥಾನವಾವುದು ಎಂಬುದಕ್ಕೆ— **ಬ್ರಹ್ಮಾಯಂ ವಾಚಃ ಪರಮಂ ವ್ಯೋಮ । ಮಂತ್ರಾದಿರೂಪಾಯಾಃ ವಾಚಃ ಪ್ರಜಾಪತಿರೇವ ಉತ್ಕೃಷ್ಟಂ ರಕ್ಷಕಂ ಸ್ಥಾನಂ । ತತ್ರೈವ ಉತ್ಪತ್ತೇ-ಸ್ತತ್ರೈವ ಪರ್ಯವಸಾನಾಚ್ಚ ||** ಮಂತ್ರಾದಿರೂಪವಾದ ವಾಕ್ಕಿಗೆ ಪ್ರಜಾಪತಿಯೇ (ಬ್ರಹ್ಮನೇ) ಉತ್ಪತ್ತಿಸ್ಥಾನವೂ, ಅವನೇ ಪರ್ಯವಸಾನವೂ (ಅಂತ್ಯವೂ) ಆಗಿರುವುದರಿಂದ ಅವನೇ ವ್ಯೋಮವು (ಸ್ಥಾನವು) ಎಂದು ತಿಳಿಸಿದೆ. ಇಲ್ಲಿ

ವ್ಯೋಮಶಬ್ದಕ್ಕೆ **ಉತ್ಕೃಷ್ಟಂ ರಕ್ಷಕಂ ಸ್ಥಾನಂ ।** ಅತಿಶಯವಾದುದೂ ರಕ್ಷಕವೂ, ಆದ ಆಧಾರ (ಆಶ್ರಯ) ಸ್ಥಾನವೆಂದು ಅರ್ಥಮಾಡಿದ್ದಾರೆ.

ವ್ಯೋಮಶಬ್ದವು ನಿರುಕ್ತದಲ್ಲಿ ಅಂತರಿಕ್ಷನಾಮಗಳಲ್ಲಿ (ನಿ. ೨-೧೦) ಪಠಿತವಾಗದೆ. ವ್ಯಾಪಿಸು, ಆಚ್ಛಾದಿಸು ಎಂಬರ್ಥವುಳ್ಳ ವ್ಯೇಞ್ ಧಾತುವಿನಿಂದ ವ್ಯೋಮಶಬ್ದವು ನಿಷ್ಪನ್ನವಾಗಿದೆ. ಸರ್ವವ್ಯಾಪಕವಾದ ಅಂತರಿಕ್ಷವೆಂದರ್ಥ. ಇದಲ್ಲದೆ ರಕ್ಷಣಾರ್ಥವಾದ ಅವ ಧಾತುವಿಗೆ ವಿ ಎಂಬ ಉಪಸರ್ಗವು ಸೇರಿ ವ್ಯೋಮಪದವು ನಿಷ್ಪನ್ನವಾಗಬಹುದು. ನಾನಾವಿಧ ರಕ್ಷಣೆಗಳಿಂದ ಕೂಡಿದ ಸ್ಥಾನವೆಂದು ಅರ್ಥವಾಗುತ್ತದೆ. ಇದೇ ಅರ್ಥದಲ್ಲಿ—

**ಋತೇನ ಋತಂ ಧರುಣಂ ಧಾರಯಂತ ಯಜ್ಞಸ್ಯ ಶಾಕೇ ಪರಮೇ ವ್ಯೋಮನ್ ।**
**ದಿವೋ ಧರ್ಮನ್ಧರುಣೇ ಸೇದುಷೋ ನೄಞ್ಜಾತೈರಜಾತಾँ ಅಭಿ ಯೇ ನನಕ್ಷುಃ ॥**

(ಋ- ಸಂ. ೫-೧೫-೨)

ಎಂಬಲ್ಲಿಯೂ ಸಹ ಉತ್ತರವೇದಿಗೆ ಈ ಪದವು ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ.

**ವ್ಯೋಮಸದಿತ್ಯೇಷ ವೈ ವ್ಯೋಮಸದ್ವ್ಯೋಮ ವಾ ಏತತ್ಸದ್ಮಾನಾಂ ಯಸ್ಮಿನ್ನೇಷ ಆಸನ್ನಸ್ತಪತಿ ॥**

(ಐ. ಬ್ರಾ. ೪-೨೦)

ಎಂಬ ಐತರೇಯಬ್ರಾಹ್ಮಣದ ವಾಕ್ಯದಲ್ಲಿಯೂ ರಕ್ಷಣಾಸ್ಥಾನ ಅಥವಾ ಆಧಾರಸ್ಥಾನ ಎಂಬರ್ಥದಲ್ಲಿ ಈ ಪದದ ಪ್ರಯೋಗವಿರುವುದು.

ಪ್ರಜಾಪತಿಯು(ಬ್ರಹ್ಮನು)ವಾಕ್ಕಿಗೆ ಆಧಾರ ಅಥವಾ ರಕ್ಷಣಾಸ್ಥಾನವಾಗಿರುವುದು ಹೇಗೆಂದರೆ, ಅವನೇ ಅದರ ಉತ್ಪತ್ತಿಗೂ, ಅದರ ಪರ್ಯವಸಾನಕ್ಕೂ (ಅಂತ್ಯ ಅಥವಾ ನಾಶ) ಕಾರಣನು ಎಂದು ಸಾಯಣರು ಅಧ್ಯಾತ್ಮರೂಪವಾದ ಅರ್ಥವನ್ನು ಹೇಳಿದಾರೆ. ಪರಬ್ರಹ್ಮನಿಗೂ ವಾಕ್ಕಿಗೂ ತಾದಾತ್ಮ್ಯವನ್ನೇ ಹೇಳಿ ಲೋಕದ ಸಕಲ ವ್ಯವಹಾರಗಳೂ ವಾಕ್ಕಿನ ಆಧಾರದ ಮೇಲೆಯೇ ನಡೆಯುತ್ತವೆ ಮತ್ತು ಈ ವಾಕ್ಕಿಗೆ ಪರಬ್ರಹ್ಮನೇ ಆಧಾರನು. ಅವನ ತತ್ತ್ವವನ್ನೇ ಇದು ಬಾಹ್ಯವಾಗಿ ಪ್ರಕಾಶಗೊಳಿಸುತ್ತದೆ ಎಂಬ ವಿಷಯವನ್ನು ಬೃಹದಾರಣ್ಯಕೋಪನಿಷತ್ತಿನಲ್ಲಿ ಈರೀತಿ ತಿಳಿಸಿದೆ—

**ಜನಕೋ ಹ ವೈದೇಹ ಆಸಾಂಚಕ್ರೇಽಥ ಹ ಯಾಜ್ಞವಲ್ಕ್ಯ ಆವವ್ರಾಜ ತಂ ಹೋವಾಚ ಯಾಜ್ಞವಲ್ಕ್ಯ ಕಿಮರ್ಥಮಚಾರೀಃ ಪಶೂನಿಚ್ಛನ್ನಣ್ವಂತಾನೀತಿ । ಉಭಯಮೇವ ಸಮ್ರಾಡಿತಿ ಹೋವಾಚ ॥**

(ಬೃ. ಉ. ೪-೧)

ಜನಕವೈದೇಹನು ತನ್ನ ಆಸ್ಥಾನದಲ್ಲಿ ಕುಳಿತಿರುವಾಗ ಅವನಲ್ಲಿಗೆ ಯಾಜ್ಞವಲ್ಕ್ಯನೆಂಬ ಋಷಿಯು ಬಂದನು. ಆಗ ಜನಕನು ಅವನನ್ನು ಕುರಿತು—ನೀನು ಬಂದ ಉದ್ದೇಶವೇನು ? ಪಶುವನ್ನು (ಪಶುರೂಪವಾದ ಸಂಪತ್ತು ಎಂದರೆ ದ್ರವ್ಯ) ಪಡೆಯಲು ಬಂದೆಯಾ ? ಅಥವಾತಾತ್ತ್ವಿಕವಾದ ಚರ್ಚೆಯನ್ನು ನಡೆಸಲು ಬಂದೆಯಾ ? ಎಂದು ಕೇಳಲು, ಯಾಜ್ಞವಲ್ಕ್ಯನು ಎಲೈ ಪ್ರಭುವೇ, ನಾನು ಎರಡನ್ನೂ ಉದ್ದೇಶಿಸಿ ಬಂದಿರುವೆನು ಎಂದು ಹೇಳಿದನು.

**ಯತ್ತೇ ಕಶ್ಚಿದಬ್ರವೀತ್ತಚ್ಛೃಣವಾಮೇತ್ಯಬ್ರವೀನ್ಮೇ ಜಿಹ್ವಾ ಶೈಲಿನಿರ್ವಾಗ್ವೈ ಬ್ರಹ್ಮೇತಿ ಯಥಾ ಮಾತೃಮಾನ್ ಪಿತೃಮಾನಾಚಾರ್ಯಮಾನ್ ಬ್ರೂಯಾತ್ತಥಾ ತಚ್ಛೈಲನಿರಬ್ರವೀದ್ವಾಗ್ವೈ ಬ್ರಹ್ಮೇತ್ಯವದತೋ ಹಿ ಕಿಂ ಸ್ಯಾದಿತ್ಯಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಂ ನ ಮೇಽಬ್ರವೀದಿತ್ಯೇಕಪಾದ್ವಾ ಏತತ್ಸಮ್ರಾಡಿತಿ ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ ||**

(ಬೃ. ಉ. ೪-೧)

ಈ ತತ್ತ್ವದ ವಿಷಯದಲ್ಲಿ ನಿನಗೆ ತಿಳಿದುದನ್ನು ಅಥವಾ ನೀನು ಇತರರಿಂದ ತಿಳಿದುಕೊಂಡಿರುವುದನ್ನು ವಿವರಿಸು ಎಂದು ಜನಕನನ್ನು ಯಾಜ್ಞವಲ್ಕ್ಯನು ಪ್ರಶ್ನಿಸಿದನು. ಅದಕ್ಕೆ ಉತ್ತರವಾಗಿ ಜನಕನು—ವಾಕ್ಕೇ ಬ್ರಹ್ಮವೆಂದು ಶೈಲಿನಿಯು ಹೇಳಿದನು ಎಂದು ತಿಳಿಸಿದನು. ಯಾಜ್ಞವಲ್ಕ್ಯನು ಅದನ್ನು ಒಪ್ಪಿ ಅದರಲ್ಲಿ ಸತ್ಯದ ಒಂದಂಶವನ್ನು ಮಾತ್ರ ಹೇಳಿದಂತಾಯಿತು. ಆದರೆ ಆ ವಾಗ್ರೂಪವಾದ ಬ್ರಹ್ಮನಿಗೆ ಆಯತನವಾದುದು ಮತ್ತು ಪ್ರತಿಷ್ಠೆ (ಆಧಾರಸ್ಥಾನ) ಯಾವುದು ಎಂಬುದನ್ನು ಹೇಳಿದನೇ ಎಂದು ಕೇಳಲು, ಅವನು ಅದನ್ನು ಹೇಳಲಿಲ್ಲವೆಂದು ಜನಕನು ತಿಳಿಸಿದನು. ಆಗ ಯಾಜ್ಞವಲ್ಕ್ಯನು ಈ ಬ್ರಹ್ಮನಿಗೆ ಏಕಪಾದಮಾತ್ರವಿರುತ್ತದೆ ಎಂದನು. ಅದು ಹೇಗೆಂದು ವಿವರಿಸಬೇಕೆಂದು ಜನಕನು ಕೇಳಿದಾಗ ಯಾಜ್ಞವಲ್ಕ್ಯನು ಈರೀತಿ ವಿವರಿಸಿದ್ದಾನೆ—

**ವಾಗೇವಾಯತನಮಾಕಾಶಃ ಪ್ರತಿಷ್ಠಾ ಪ್ರಜ್ಞೇತ್ಯೇತದುಪಾಸೀತ |**

ವಾಗ್ರೂಪಿಯಾದ ಈ ಬ್ರಹ್ಮನಿಗೆ ಜಿಹ್ವೆಯೇ ಆಯತನವು, ಆಕಾಶವೇ ಪ್ರತಿಷ್ಠಾಸ್ಥಾನವು. ಇದನ್ನೇ ಪ್ರಜ್ಞೆಯೆಂದು ತಿಳಿದು ಉಪಾಸನೆಮಾಡಬೇಕು ಎಂದಾಗ,

**ಕಾ ಪ್ರಜ್ಞತಾ ಯಾಜ್ಞವಲ್ಕ್ಯ | ವಾಗೇವ ಸಮ್ರಾಡಿತಿ ಹೋವಾಚ | ವಾಚಾ ವೈ ಸಮ್ರಾಡ್ಬಂಧುಃ ಪ್ರಜ್ಞಾಯತ ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನೀಷ್ಟಂ ಹುತಮಾಶಿತಂ ಪಾಯಿತಮಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ವಾಚೈವ ಸಮ್ರಾಟ್ ಪ್ರಜ್ಞಾಯಂತೇ ವಾಗ್ವೈ ಸಮ್ರಾಟ್ ಪರಮಂ ಬ್ರಹ್ಮ ನೈನಂ ವಾಗ್ಜಹಾತಿ ಸರ್ವಾಣ್ಯೇನಂ ಭೂತಾನ್ಯಭಿ ರಕ್ಷಂತಿ ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನೇತದುಪಾಸ್ತೇ ||**

(ಬೃ. ಉ. ೪-೧)

ಜನಕನು ಆ ಪ್ರಜ್ಞೆಯ ಸ್ವರೂಪವೇನೆಂದು ಕೇಳಿದನು. ಅದಕ್ಕೆ ಯಾಜ್ಞವಲ್ಕ್ಯನು ಈರೀತಿ ಉತ್ತರವಿತ್ತನು—ವಾಕ್ಕೇ ಈ ಜ್ಞಾನವು, ಇದೇ ಬಂಧುವು, ಇದೇ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಇತಿಹಾಸ ಪುರಾಣಾದಿಗಳು, ಅವುಗಳ ವ್ಯಾಖ್ಯಾನುವ್ಯಾಖ್ಯಾನಗಳು, ಯಜ್ಞಾಹುತಿಗಳು, ಈ ಲೋಕತತ್ತ್ವ, ಪರಲೋಕತತ್ತ್ವ ಮುಂತಾದ ಸಮಸ್ತವೂ ಸಹ ಈ ವಾಕ್ಕಿನ ಸಹಾಯದಿಂದಲೇ ತಿಳಿಯಲ್ಪಡುತ್ತವೆ. ವಾಕ್ಕಿನಿಂದಲೇ ಬ್ರಹ್ಮವೂ ತಿಳಿಯಲ್ಪಡುತ್ತದೆ. ವಾಕ್ಕೇ ಪರಬ್ರಹ್ಮವು. ಈ ತಾತ್ತ್ವಿಕಜ್ಞಾನದಿಂದ ಯಾರು ವಾಗ್ರೂಪಿಯಾದ ಬ್ರಹ್ಮವನ್ನು ಆರಾಧಿಸುತ್ತಾರೆಯೋ ಅವರನ್ನು ವಾಕ್ಕು ತ್ಯಜಿಸುವುದಿಲ್ಲ. ಅವನೂ ಸಹ ದೇವತ್ವವನ್ನು ಪಡೆಯುತ್ತಾನೆ. ಇತ್ಯಾದಿಯಾಗಿ **ಬ್ರಹ್ಮಾಯಂ ವಾಚಃ ಪರಮಂ ವ್ಯೋಮ** | ಎಂಬ ವಾಕ್ಯದಲ್ಲಿ ಹೇಳಿರುವ ಅಂಶವನ್ನು ವಿವರಿಸಿದ್ದಾರೆ. ಎಂದರೆ ವಾಕ್ಕಿಗೂ ಪರಬ್ರಹ್ಮಕ್ಕೂ ತಾದಾತ್ಮ್ಯವನ್ನೇ ಹೇಳಿದ್ದಾರೆ. ಇದನ್ನೇ ಶತಪಥಬ್ರಾಹ್ಮಣದಲ್ಲಿಯೂ ಸಹ,

**ವಾಚಸ್ಪತಿರ್ವಾಚಂ ನಃ ಸ್ವದತು ಸ್ವಾಹೇತಿ ಪ್ರಜಾಪತಿರ್ವೈ ವಾಚಸ್ಪತಿಃ ।**

(ಶ. ಬ್ರಾ. ೫.೧-೧-೧೬)

ಇತ್ಯಾದಿ ವಾಕ್ಯಗಳಿಂದ ತಿಳಿಸಿದೆ ಮತ್ತು ಸೃಷ್ಟಿಯ ಕ್ರಮವನ್ನು ವಿವರಿಸುವಾಗ ಪರಬ್ರಹ್ಮವು ವಾಗ್ರೂಪದಲ್ಲಿ ತನ್ನನ್ನು ಪ್ರಕಾಶಪಡಿಸಿದನು ಎಂಬ ವಿವರಣೆಯಲ್ಲಿಯೂ ಸಹ ವ್ಯಾಕ್ಕಿಗೂ ಬ್ರಹ್ಮಕ್ಕೂ ಇರುವ ಆಧಾರಾಧೇಯ ಭಾವವನ್ನು ತಿಳಿಯಬಹುದು.

**ಪ್ರಜಾಪತಿಃ ಪ್ರಜಾ ಅಸೃಜತ । ತಾಃ ಸೃಷ್ಟಾಃ ಸಮಶ್ಲಿಷ್ಯನ್ । ತಾ ರೂಪೇಣಾನುಪ್ರಾವಿಶತ್ । ತಸ್ಮಾದಾಹುಃ । ರೂಪಂ ವೈ ಪ್ರಜಾಪತಿರಿತಿ । ತಾ ನಾಮ್ನಾನುಪ್ರಾವಿಶತ್ । ತಸ್ಮಾದಾಹುಃ । ನಾಮ ವೈ ಪ್ರಜಾಪತಿರಿತಿ ॥**

(ತೈ. ಬ್ರಾ. ೨-೨-೭-೧)

ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿದನಂತರ ಅವೆಲ್ಲವೂ ಪರಸ್ಪರವಾದ ವ್ಯಕ್ತಿತ್ವವನ್ನು ತೋರಿಸದೆ ಸಂಶ್ಲಿಷ್ಟವಾದವು. ಆಗ ಅವುಗಳ ವಿಶೇಷ ಧರ್ಮಗಳನ್ನು ತೋರಿಸುವುದಕ್ಕಾಗಿ ನಾಮ (ಹೆಸರು) ಮತ್ತು ರೂಪ (ಆಕಾರ) ಇವೆರಡನ್ನೂ ಸೃಷ್ಟಿಸಿದನು. ರೂಪವು ಮಾನಸಿಕವಾದ ವಿಭಜನೆಗೂ ನಾಮವು ವಾಗ್ರೂಪವಾದ ವಿಭಜನೆಗೂ ಸಹಾಯವಾಯಿತೆಂದು ತಿಳಿಸಿದೆ. ಶತಪಥಬ್ರಾಹ್ಮಣದಲ್ಲಿಯೂ,

**ಮರ್ತ್ಯಾ ಹ ವಾ ದೇವಾ ಅಸುಃ । ಸ ಯದ್ವೈವ ತೇ ಬ್ರಹ್ಮಣಾಪುರಥಾಮೃತಾ ಆಸುಃ ಸ ಯಂ ಮನಸ ಆಘಾರಯತಿ ಮನೋ ವೈ ರೂಪಂ ಮನಸಾ ಹಿ ವೇದೇದಗ್ಂ ರೂಪಮಿತಿ ತೇನ ರೂಪಮಾಪ್ನೋತ್ಯಥ ಯಂ ವಾಚ ಆಘಾರಯತಿ ವಾಗ್ವೈ ನಾಮ ವಾಚಾ ಹಿ ನಾಮ ಗೃಹ್ಣಾತಿ ತೇನ ನಾಮಾಪ್ನೋತ್ಯೇತಾವದ್ವಾ ಇದಗ್ಂ ಸರ್ವಂ ಯಾವದ್ರೂಪಂ ಚೈವ ನಾಮ ಚ ತತ್ಸರ್ವಮಾಪ್ನೋತಿ ॥**

(ಶ. ಬ್ರಾ. ೧೧-೨-೩-೬)

ಎಂದು ಹೇಳಿದೆ. ಪ್ರಾರಂಭದಲ್ಲಿ ದೇವತೆಗಳು ಮರ್ತ್ಯರಾಗಿದ್ದರು ಎಂದರೆ ಅವರೂ ಮರಣಕ್ಕೀಡಾಗುತ್ತಿದ್ದರು. ಅವರು ಬ್ರಹ್ಮನನ್ನು ಸಾಕ್ಷಾತ್ಕರಿಸಿ ಅಮೃತತ್ವವನ್ನು (ಮರಣವಿಲ್ಲದಿರುವುದನ್ನು) ಪಡೆದರು. ಆ ಬ್ರಹ್ಮನಿಗೆ ನಾಮ ಮತ್ತು ರೂಪಗಳೆಂಬ ಎರಡು ರೂಪಗಳು. ರೂಪವು ಮನಸ್ಸಿಗೆ ಮಾತ್ರ ಗೋಚರವಾಗುವ ತತ್ತ್ವವು. ಆದುದರಿಂದ ಮಾನಸಿಕವಾದ ಆಘಾರದಿಂದ ವಾಗಾತ್ಮಕವಾದ ಬ್ರಹ್ಮವನ್ನರಿಯುತ್ತಾನೆ. ಮನೋರೂಪವಾದುದೂ, ವಾಗ್ರೂಪವಾದುದೂ ಆದ ಈ ಬ್ರಹ್ಮತತ್ತ್ವವನ್ನರಿಯುವುದರಿಂದ ಮಾನವನೂ ಸಹ ಬ್ರಹ್ಮತ್ವವನ್ನು ಎಂದರೆ ಅಮೃತತ್ವವನ್ನು ಪಡೆಯುತ್ತಾನೆ ಎಂದು ವಾಕ್ಕಿಗೂ ಬ್ರಹ್ಮನಿಗೂ ಇರುವ ಸಂಬಂಧವನ್ನು ತಿಳಿಸಿದೆ.

ಈ ರೀತಿಯಾಗಿ ಪರಬ್ರಹ್ಮನಿಗೆ ಸಂಬಂಧಪಟ್ಟ ಯಾವ ತತ್ತ್ವವನ್ನಾದರೂ ಯಜ್ಞಕಾಲದಲ್ಲಿ ಜಿಜ್ಞಾಸೆ ಮಾಡುವುದಕ್ಕೆ ಬ್ರಹ್ಮೋದ್ಯವೆಂದು ಹೆಸರು. ತೈತ್ತಿರೀಯಬ್ರಾಹ್ಮಣದಲ್ಲಿಯೂ ಸಹ ಬ್ರಹ್ಮೋದ್ಯಕ್ಕಾಗಿ ಚರ್ಚಿಸಲ್ಪಡಬೇಕಾದ ಪ್ರಶ್ನೆಗಳೂ ಉತ್ತರಗಳೂ ಇವೆ.

ಪ್ರಶ್ನೆ—**ಕಿಗ್ಂಸ್ವಿದಾಸೀತ್ಪೂರ್ವಚಿತ್ತಿರಿತ್ಯಾಹ**

ಉತ್ತರ—**ದ್ಯೌರ್ವೈ ವೃಷ್ಟಿಃ ಪೂರ್ವಚಿತ್ತಿಃ**

ಪ್ರಶ್ನೆ—ಕಿಗ್‌ಂಸ್ವಿದಾಸೀದ್ಬೃಹದ್ವಯ ಇತ್ಯಾಹ
ಉತ್ತರ—ಅಶ್ವೋ ವೈ ಬೃಹದ್ವಯಃ
ಪ್ರಶ್ನೆ—ಕಿಗ್‌ಂಸ್ವಿದಾಸೀತ್ಪಿಶಂಗಿಲೇತ್ಯಾಹ
ಉತ್ತರ—ರಾತ್ರಿರ್ವೈ ಪಿಶಂಗಿಲಾ
ಪ್ರ—ಕಿಗ್‌ಂಸ್ವಿದಾಸೀತ್ಪಿಲಿಪ್ಪಿಲೇತ್ಯಾಹ
ಉ—ಶ್ರೀರ್ವೈ ಪಿಲಿಪ್ಪಿಲಾ
ಪ್ರ—ಕಃ ಸ್ವಿದೇಕಾಕೀ ಚರತೀತ್ಯಾಹ
ಉ—ಅಸೌ ವಾ ಆದಿತ್ಯ ಏಕಾಕೀ ಚರತಿ
ಪ್ರ—ಕ ಉ ಸ್ವಿಜ್ಜಾಯತೇ ಪುನರಿತ್ಯಾಹ
ಉ—ಚಂದ್ರಮಾ ವೈ ಜಾಯತೇ ಪುನಃ
ಪ್ರ—ಕ್ಮಿಗ್‌ಸ್ವಿದ್ಧಿಮಸ್ಯ ಭೇಷಜಮಿತ್ಯಾಹ
ಉ—ಅಗ್ನಿರ್ವೈ ಹಿಮಸ್ಯ ಭೇಷಜಂ
ಪ್ರ—ಕಿಗ್‌ಸ್ವಿದಾವಪನಂ ಮಹದಿತ್ಯಾಹ
ಉ—ಅಯಂ ವೈ ಲೋಕ ಆವಪನಂ ಮಹತ್
ಪ್ರ—ಪೃಚ್ಛಾಮಿ ತ್ವಾ ಪರಮಂತಂ ಪೃಥಿವ್ಯಾ ಇತ್ಯಾಹ
ಉ—ವೇದಿರ್ವೈ ಪರೋಽನ್ತಃ ಪೃಥಿವ್ಯಾಃ
ಪ್ರ—ಪೃಚ್ಛಾಮಿ ತ್ವಾ ಭುವನಸ್ಯ ನಾಭಿಮಿತ್ಯಾಹ
ಉ—ಯಜ್ಞೋ ವೈ ಭುವನಸ್ಯ ನಾಭಿಃ
ಪ್ರ—ಪೃಚ್ಛಾಮಿ ತ್ವಾ ವೃಷ್ಣೋ ಅಶ್ವಸ್ಯ ರೇತ ಇತ್ಯಾಹ
ಉ—ಸೋಮೋ ವೈ ವೃಷ್ಣೋ ಅಶ್ವಸ್ಯ ರೇತಃ
ಪ್ರ—ಪೃಚ್ಛಾಮಿ ವಾಚಃ ಪರಮಂ ವ್ಯೋಮೇತ್ಯಾಹ
ಉ—ಬ್ರಹ್ಮೈವ ವಾಚಃ ಪರಮಂ ವ್ಯೋಮ

(ತೈ. ಬ್ರಾ. ೩-೯-೫-೨ ರಿಂದ ೬)

ಬ್ರಹ್ಮೋದ್ಯದಲ್ಲಿ ಬ್ರಹ್ಮವಿಷಯಕವಾದ ಯಾವ ಚರ್ಚೆ ಬೇಕಾದರೂ ನಡೆಯಬಹುದು. ಮೇಲೆ ಹನ್ನೆರಡು ಪ್ರಶ್ನೆಗಳೂ ಅವುಗಳಿಗೆ ಉತ್ತರಗಳೂ ಉಕ್ತವಾಗಿವೆ. ಕೊನೆಯ ನಾಲ್ಕು ಪ್ರಶ್ನೆಗಳನ್ನೂ ಅವುಗಳ ಉತ್ತರವನ್ನೂ ನಾವು ಇದುವರೆಗೆ ವಿಸ್ತಾರವಾಗಿ ವಿವರಿಸಿದ್ದೇವೆ. ಇದೇ ರೀತಿ ಇತರ ಪ್ರಶ್ನೆಗಳಿಗೂ ಉತ್ತರವನ್ನು ವಿಮರ್ಶೆ ಮಾಡಬಹುದು ಮತ್ತು ಇಂತಹ ಅನೇಕ ವಿಷಯಗಳು ವಿಮರ್ಶಾರ್ಹವಾಗಿರುವುವು. ಅವೆಲ್ಲವನ್ನೂ ಇಲ್ಲಿ ವಿಮರ್ಶೆ ಮಾಡುವುದು ಸಾಧ್ಯವಿಲ್ಲ ಮತ್ತು ಅಪ್ರಕೃತ. ಮತ್ತು ಅಲ್ಲಿಯೇ,

**ತೇಜಸಾ ವಾ ಏಷ ಬ್ರಹ್ಮವರ್ಚಸೇನ ವ್ಯೃರ್ಧತೇ । ಯೋಽಶ್ವಮೇಧೇನ ಯಜತೇ । ಹೋತಾ ಚ ಬ್ರಹ್ಮಾ ಚ ಬ್ರಹ್ಮೋದ್ಯಂ ವದತಃ ॥**

(ತೈ. ಬ್ರಾ. ೩-೯-೫-೧)

ಹೇಳಿದೆ ಎಂದರೆ ಈ ಬ್ರಹ್ಮೋದ್ಯವಿಷಯವಾದ ಚರ್ಚೆಯಲ್ಲಿ ಹೋತೃವೆಂಬ ಋತ್ವಿಜನೂ ಬ್ರಹ್ಮನೆಂಬ ಋತ್ವಿಜನೂ ಭಾಗ ವಹಿಸುತ್ತಾರೆ ಎಂದಿದೆ. ಏಕೆಂದರೆ ಋತ್ವಿಕ್ಕುಗಳಲ್ಲೆಲ್ಲಾ ಅವರಿಬ್ಬರೇ ಹೆಚ್ಚು ತಿಳುವಳಿಕೆಯುಳ್ಳವರೆಂದೂ ಇಂತಹ ಉತ್ತಮವರ್ಗದ ಚರ್ಚೆಯನ್ನು ನಡೆಸಲು ಸಾಮಾನ್ಯರಿಗೆ ಶಕ್ಯವಲ್ಲವೆಂಬೂ ತಿಳಿಸುವುದಕ್ಕಾಗಿಯೂ ಇತರ ಋತ್ವಿಕ್ಕುಗಳಿಗಿಂತ ಅವರಿಗೆ ಗೌರವಪ್ರಶಸ್ತಿಗಳು ಹೆಚ್ಚಾಗಿರುವವೆಂದೂ ತಿಳಿಯಪಡಿಸುವುದಕ್ಕಾಗಿಯೇ ಇಲ್ಲಿ **ಹೋತಾ ಚ ಬ್ರಹ್ಮಾ ಚ** ಎಂದು ಹೋತೃ ಮತ್ತು ಬ್ರಹ್ಮನ ಹೆಸರನ್ನು ಮಾತ್ರ ಸೂಚಿಸಿದೆ. ಇತರ ಋತ್ವಿಕ್ಕುಗಳು ಯಜಮಾನ ಮುಂತಾದವರು ಇಂತಹ ವಿಷಯಗಳನ್ನು ಚರ್ಚಿಸಲು ಸಮರ್ಥರಾಗಿದ್ದಲ್ಲಿ ಅವರೂ ಸಹ ಇದರಲ್ಲಿ ಭಾಗವಹಿಸಲು ಯಾವ ನಿರ್ಬಂಧವೂ ಇರುವುದಿಲ್ಲ.

ಸಂಹಿತಾಪಾಠಃ

**ಯೇ ತೇ ವಿಪ್ರ ಬ್ರಹ್ಮಕೃತಃ ಸುತೇ ಸಚಾ ವಸೂನಾಂ ಚ ವಸುನಶ್ಚ ದಾವನೇ।**
**ಪ್ರ ತೇ ಸುಮ್ನಸ್ಯ ಮನಸಾ ಪಥಾ ಭುವನ್ಮದೇ ಸುತಸ್ಯ ಸೋಮ್ಯಸ್ಯಾನ್ಧಸಃ ॥**

ಪದಪಾಠಃ

**ಯೇ । ತೇ । ವಿಪ್ರ । ಬ್ರಹ್ಮಽಕೃತಃ । ಸುತೇ । ಸಚಾ । ವಸೂನಾಂ । ಚ । ವಸುನಃ । ಚ । ದಾವನೇ ॥**
**ಪ್ರ । ತೇ । ಸುಮ್ನಸ್ಯ । ಮನಸಾ । ಪಥಾ । ಭುವನ್ । ಮದೇ । ಸುತಸ್ಯ । ಸೋಮ್ಯಸ್ಯ । ಅಂಧಸಃ ॥೭॥**

ಸಾಯಣಭಾಷ್ಯಂ

**ಹೇ ವಿಪ್ರ ಮೇಧಾವಿನ್ನಿಂದ್ರ ತೇ ತುಭ್ಯಂ ಯೇ ಬ್ರಹ್ಮಕೃತಃ ಸ್ತೋತ್ರಕೃತೋ ಹವಿಷ್ಕರ್ತಾರೋ ವಾ ಸ್ತೋತಾರಃ ಸಚಾ ಸಂಘೀಭೂತಾಃ ಸುತೇ ಸೋಮೇಽಭಿಷುತೇ ವಸೂನಾಂ ಬಹೂನಾಂ ಧನಾನಾಂ ವಸುನಶ್ಚೈಕಸ್ಯ ನಿವಾಸಯೋಗ್ಯಸ್ಯ ಧನಸ್ಯ ಚ ದಾವನೇ ದಾನಾಯ ಪರಿಚರಂತೀತಿ ಶೇಷಃ । ಅತ್ರ ವಸೂನಾಮಿತಿ ಬಹುವಚನೇನೈಹಿಕಭೋಗಸಾಧನಾನಿ ಧನಾನ್ಯಭಿಪ್ರೇತಾನಿ । ಏಕವಚನಾಂತೇನ ಚ ನಿವಾಸಯೋಗ್ಯಂ ಸ್ವರ್ಗಾಖ್ಯಂ ಧನಮಭಿಪ್ರೇತಮಿತ್ಯವಗಂತವ್ಯಂ । ತೇಽನುಷ್ಠಾತಾರಃ ಸುಮ್ನಸ್ಯ ಸುಖಸ್ಯ ಲಾಭಾಯ ಮನಸಾ ಪಥಾ ಮನೋಮಾರ್ಗೇಣ । ಸ್ತೋತ್ರವರ್ತ್ಮನೇತ್ಯರ್ಥಃ । ಪ್ರ ಭುವನ್ । ಪ್ರಭವಂತು । ಉಕ್ತವಸುದಾನಾಯ ಯೋಗ್ಯಾ ಭವಂತ್ವಿತ್ಯರ್ಥಃ । ಕದೇತಿ ಉಚ್ಯತೇ । ಸುತಸ್ಯಾಭಿಷುತಸ್ಯ ಸೋಮ್ಯಸ್ಯ ಸೋಮಸಂಬಂಧಿನೋಽಂಧಸೋಽನ್ನಸ್ಯ ಮದೇ ಸತಿ ॥**

ಪ್ರತಿಪದಾರ್ಥ

**ವಿಪ್ರ**—ಮೇಧಾವಿಯಾದ ಎಲೈ ಇಂದ್ರನೇ । **ತೇ**—ನಿನಗಾಗಿ । **ಯೇ ಬ್ರಹ್ಮಕೃತಃ**—ಸ್ತೋತ್ರ ಮಾಡುತ್ತಿರುವ ಅಥವಾ ಹೋಮಮಾಡುತ್ತಿರುವ ಯಾವ ಋತ್ವಿಗ್ಯಜಮಾನರಾದಿ ಪುರುಷರಿರುವರೋ । **ಸಚಾ**—

ಅವರೆಲ್ಲರೂ ಸೇರಿ | **ಸುತೇ**—ಸೋಮರಸವು ಹಿಂಡಲ್ಪಟ್ಟಮೇಲೆ | **ವಸೂನಾಂ**—ಬಹಳವಾದ ಐಹಿಕವಸ್ತುಗಳ ನ್ನೊಳಗೊಂಡ ಮತ್ತು | **ವಸುನಶ್ಚ**—ಒಬ್ಬ ಮನುಷ್ಯನಿಗೆ ಮಾತ್ರ ಬೇಕಾಗುವ ಸ್ವರ್ಗಾಖ್ಯವಾದ ಧನದ | **ದಾವನೇ**—ಲಾಭಕ್ಕಾಗಿ ನಿನ್ನನ್ನು ಉಪಚರಿಸುತ್ತಾರೆ | **ತೇ**—ಆ ಯಜ್ಞಾನುಷ್ಠಾನಕರ್ತರು | **ಸುಮ್ನಸ್ಯ**—ಸುಖಪ್ರಾಪ್ತಿಗಾಗಿ | **ಮನಸಾ ಪಥಾ**—ಮನಸ್ಸಿನಲ್ಲಿಯೇ ಧ್ಯಾನಮಾಡುವ ಸ್ತುತಿರೂಪವಾದ ಮಾರ್ಗದಿಂದ | **ಸುತಸ್ಯ**—ಹಿಂಡಲ್ಪಟ್ಟ | **ಸೋಮ್ಯಸ್ಯ**—ಸೋಮರಸಸಂಬಂಧವಾದ | **ಅಂಧಸಃ**—ಅನ್ನದಿಂದ | **ಮದೇ**—ಇಂದ್ರನು ಹರ್ಷಗೊಂಡಾಗ | **ಪ್ರ ಭುವನ್**—ಮೇಲೆ ಹೇಳಿದ ಧನಾದಿಗಳನ್ನು ಪಡೆಯಲು ಸಮರ್ಥರಾಗುತ್ತಾರೆ.

**ಭಾವಾರ್ಥ**

ಎಲೈ ಮೇಧಾವಿಯಾದ ಇಂದ್ರನೇ, ನಿನ್ನನ್ನುದ್ದೇಶಿಸಿ ಸ್ತೋತ್ರಮಾಡುತ್ತಿರುವ ಅಥವಾ ಯಜ್ಞಾನುಷ್ಠಾನ ಮಾಡುತ್ತಿರುವ ಋತ್ವಿಗ್ಯಜಮಾನರಾದಿ ಪುರುಷರೆಲ್ಲರೂ ಸೇರಿ ಸೋಮರಸವು ಹಿಂಡಲ್ಪಟ್ಟಮೇಲೆ ಐಹಿಕಧನಗಳ ಮತ್ತು ಸ್ವರ್ಗಾಖ್ಯಸುಖದ ಪ್ರಾಪ್ತಿಗಾಗಿ ನಿನ್ನನ್ನು ಉಪಚರಿಸುತ್ತಾರೆ. ಹಿಂಡಲ್ಪಟ್ಟ ಸೋಮರಸದಿಂದ ಇಂದ್ರನು ಹರ್ಷಗೊಂಡಾಗ ಆ ಸ್ತುತಿಕರ್ತರು ಮನಸ್ಸಿನಲ್ಲಿಯೇ ಸ್ತೋತ್ರಮಾಡುತ್ತಾ ತಾವು ಅಪೇಕ್ಷಿಸುವ ಧನಾದಿಗಳನ್ನೂ ಸುಖವನ್ನೂ ಇಂದ್ರನಿಂದ ಪಡೆಯಲು ಸಮರ್ಥರಾಗುತ್ತಾರೆ.

## English Translation

Sage Indra, the reciters of pious hymns to you who assembled together when (the Soma) is effused, (worship you) for the donation of riches and treasures : may they be competent (to acquire) your felicity by the pathway of the mind ; when you are exhilarated with the effused Soma food.

# ಐವತ್ತೊಂದನೆಯ ಸೂಕ್ತ

**ಪೀಠಿಕೆ**

ಈ ಸೂಕ್ತಕ್ಕೂ ಮುಂದಿನ ಎರಡು ಸೂಕ್ತಗಳಿಗೂ (೫೧,೫೨, ೫೩ ನೇ ಸೂಕ್ತಗಳು) ಸೌಚೀಕೋಽಗ್ನಿಃ ಎಂಬ ಅಗ್ನಿಯು ಋಷಿಯು. ೫೧ ನೇ ಸೂಕ್ತದಲ್ಲಿ ಕಾರಣಾಂತರದಿಂದ ಅಗ್ನಿಯು ದೇವತೆಗಳಿಗೆ ಹವಿಸ್ಸನ್ನು ವಹಿಸುವ ಕಾರ್ಯವನ್ನು ಬಿಟ್ಟು ಓಡಿಹೋಗಿ ನೀರಿನಲ್ಲಿ ಅಡಗಿಕೊಂಡಿದ್ದನೆಂದೂ ದೇವತೆಗಳು ಅವನನ್ನು ಕಂಡು ಪುನಃ ನೀರಿನಿಂದ ಬಂದು ತಮಗೆ ಹವಿಸ್ಸನ್ನು ವಹಿಸುವ ಕಾರ್ಯವನ್ನು ವಹಿಸಬೇಕೆಂದು ಪ್ರಾರ್ಥಿಸಿದ ಸಂಭಾಷಣೆ ಇದೆ. ಅಗ್ನಿಯ ಸಂಬಂಧವಾದ ವಿಷಯವನ್ನು ನಾವು ಅಲ್ಲಲ್ಲಿ ವಿಸ್ತಾರವಾಗಿ ವಿವರಿಸಿದ್ದರೂ ಇಲ್ಲಿ ಸಂದರ್ಭಾನುಸಾರ ಸಾಮಾನ್ಯವಿವರಣೆಯನ್ನು ಬರೆದು ಅನಂತರ ಸೌಚೀಕೋಽಗ್ನಿಯ ವಿಷಯವನ್ನು ವಿವರಿಸುತ್ತೇವೆ.

ಋಕ್ಸಂಹಿತೆಯಲ್ಲಿ ವರ್ಣಿತವಾಗಿರುವ ದೇವತೆಗಳಲ್ಲಿ ಅಗ್ನಿಯೇ ಅತ್ಯಂತ ಪ್ರಧಾನದೇವತೆ. ಇಂದ್ರನ ಸ್ತುತಿವಾಕ್ಯಗಳನ್ನು ಬಿಟ್ಟರೆ ಋಕ್ಸಂಹಿತೆಯಲ್ಲೆಲ್ಲಾ ಅಗ್ನಿಯನ್ನು ಪ್ರಶಂಸಿಸಿ ವರ್ಣಿಸುವ ಸೂಕ್ತಗಳೇ ಅತ್ಯಧಿಕವಾಗಿರುತ್ತವೆ. ೮, ೯ ನೆಯ ಮಂಡಲಗಳನ್ನು ಬಿಟ್ಟರೆ ಉಳಿದ ಎಲ್ಲಾ ಮಂಡಲಗಳೂ ಅಗ್ನಿದೇವತಾಕವಾದ ಸೂಕ್ತದಿಂದಲೇ

ಪ್ರಾರಂಭವಾಗುವುವು. ಆದುದರಿಂದ ಅಗ್ನಿದೇವತೆಯ ವಿಷಯವಾಗಿ ಅವಶ್ಯಕವಾಗಿ ತಿಳಿದುಕೊಳ್ಳಬೇಕಾದ ಕೆಲವು ಸಂಗತಿಗಳನ್ನು ಇಲ್ಲಿ ವಿವರಿಸಲಾಗಿದೆ.

### ಅಗ್ನಿಯ ಕರ್ಮಗಳು

ಮಾನವನ ವ್ಯವಹಾರಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದ ಯಜ್ಞಕರ್ಮಗಳೊಂದಿಗೆ ಸಾಕ್ಷಾತ್ಸಂಬಂಧವನ್ನು ಹೊಂದಿರುವುದರಿಂದಲೇ ಅಗ್ನಿಗೆ ಅತ್ಯಂತ ಪ್ರಧಾನವಾದುದೂ, ಪೂಜ್ಯವಾದುದೂ ಆದ ಸ್ಥಾನವಿರುತ್ತದೆ. ಅಗ್ನಿಯ ಪ್ರಧಾನಗುಣವು ಅವನ ಅಮರ್ತ್ಯತ್ವ (೧-೪೪-೬; ೧-೫೮-೧; ೨-೧೦-೧, ೨; ೩-೨-೧; ೩-೩-೧; ೩-೧೧-೨; ೩-೨೭-೫; ೩-೨೭-೨; ೬-೯-೪; ೭-೪-೪; ೮-೬೦-೧೧; ೧೦-೭೯-೧)

ಸ್ವಾಭಾವಿಕವಾಗಿ ಮರಣಧರ್ಮರಹಿತನಾದರೂ ಸಹ; ಅಗ್ನಿಯು ಮಾನವರಿಗೆಲ್ಲಾ ಅನುಕೂಲವಾಗಲೆಂದು ಮರ್ತ್ಯರಾದ ಮಾನವರ ಅನುಗ್ರಹಕ್ಕಾಗಿ ಅವರ ಅತಿಥಿಯಾಗಿ ಅವರೊಂದಿಗೆ ಪೃಥ್ವೀಸ್ಥನಾಗಿರುತ್ತಾನೆ. (೧-೪೪-೪; ೧-೫೮-೬; ೨-೪-೧; ೩-೨-೨; ೪-೧-೨೦; ೫-೧-೮; ೫-೮-೨; ೫-೧೮-೧; ೬-೨-೭; ೬-೧೫-೧; ೬-೧೫-೪; ೮-೮-೪; ೮-೭೩-೧; ೧೦-೧-೫; ೧೦-೯೧-೨; ೧೦-೯೨-೧)

ಅಮರ್ತ್ಯನೂ, ಮಾನವರಿಗೆ ಅನುಗ್ರಹಾತ್ಮಕನೂ ಆದ ಅಗ್ನಿಯು ಯಜಮಾನನ ಯಜ್ಞಗೃಹದಲ್ಲಿ ಶಾಶ್ವತನಾದ ಋತ್ವಿಕ್ಕಾಗುತ್ತಾನೆ. **ಪುರೋಹಿತ, ಋತ್ವಿಕ್. ಹೋತೃ, ಬ್ರಹ್ಮ** ಇತ್ಯಾದಿ ವಿಶೇಷಣಗಳಿಂದ ವರ್ಣಿತನಾಗಿದ್ದಾನೆ. ಉಷೋದೇವಿಯೊಡನೆ ಪ್ರಬುದ್ಧನಾಗುವವನೆಂದು ಕೆಲವು ವಾಕ್ಯಗಳಲ್ಲಿಯೂ ಉಷಸ್ಸಿಗಿಂತಲೂ ಪೂರ್ವಭಾವಿಯಾಗಿಯೇ ಆವಿರ್ಭೂತನಾಗುವನೆಂದು ಇನ್ನು ಕೆಲವು ವಾಕ್ಯಗಳಲ್ಲಿಯೂ ಸ್ತುತಿಸಿದೆ. ೧-೧-೧ ೧-೧೨-೧; ೧-೧೩-೧, ೪; ೧-೨೬-೭; ೧-೩೬-೩, ೫; ೧-೪೪-೭; ೧-೪೪-೧೨; ೧-೪೫-೩-೭; ೧-೫೮-೧,೬; ೧-೬೦-೪; ೧-೬೮-೪, ೭; ೧-೭೬-೨, ೪; ೧-೧೨೭-೧; ೧-೧೪೧-೧೨; ೧-೧೪೯-೪,೫; ೨-೫-೧; ೨-೬-೬; ೨-೯-೧; ೩-೭-೯; ೩-೧೦-೨, ೭; ೩-೧೧-೧; ೩-೧೪-೧; ೩-೧೯-೧; ೪-೧-೮; ೫-೧೧-೨; ೫-೨೬-೭; ೬-೧೫-೧, ೪,೧೬; ೬-೧೬-೧; ೭-೭-೫; ೭-೧೦-೫; ೭-೧೧-೧; ೭-೧೬-೫, ೧೨; ೮-೪೪-೬; ೮-೪೯-೧; ೯-೬೬-೨೦; ೧೦-೧-೬; ೧೦-೯೨-೨)

ದೇವಮಾನವಾದಿಗಳಿಂದೆಲ್ಲಾ ಪ್ರಾರ್ಥಿತನೂ, ನಿಯಮಿತನೂ ಆಗಿ ಸಕಲ ಯಜ್ಞಕರ್ಮಗಳನ್ನೂ ತನ್ನಲ್ಲೇ ಲೀನಮಾಡಿಕೊಳ್ಳುತ್ತಾನೆ. ತಾನೇ ನಿಜವಾದ ಕರ್ಮಕರ್ತನಾಗಿ, ಯಜಮಾನರು, ಅಧ್ವರ್ಯು, ಹೋತೃ, ಪೋತೃ ಇತ್ಯಾದಿ ಬೇರೆಬೇರೆ ಋತ್ವಿಕ್ಕುಗಳಿಗೆ ನಿಯಮಿಸತಕ್ಕ ಸಕಲವಾದ ಯಜ್ಞಕರ್ಮಗಳನ್ನೂ ತಾನೊಬ್ಬನೇ ನಿರ್ವಹಿಸಲು ಸಮರ್ಥನಾಗುತ್ತಾನೆ.

(೧-೯೪-೬: ೨-೧-೨; ೨-೫-೨; ೪-೯-೩, ೪; ೧೦-೨-೧) ಈ ನಿರ್ವಹಣಶಕ್ತಿಯಿರುವುದರಿಂದಲೇ. ಯಜಮಾನರಿಂದ ಈರೀತಿ ಪ್ರಾರ್ಥಿತನಾಗಿದ್ದಾನೆ. ಎಲೈ ಅಗ್ನಿಯೇ, ನೀನು ಹೋತೃಗಳಲ್ಲೆಲ್ಲಾ ಅತ್ಯುತ್ತಮವಾದ ಹೋತೃವಾಗಿದ್ದೀಯೆ. ನೀನು ನಿತ್ಯತರುಣನು. ದೇವತಾತ್ಮರಾದ ಇತರ ಋತ್ವಿಕ್ಕುಗಳೊಡನೆ ಸೇರಿ, ಋತುಕಾಲಾನುಗುಣವಾದ ಕರ್ಮಗಳನ್ನಾಚರಿಸುತ್ತ ಯಜ್ಞಕಾಮರಾದ ದೇವತೆಗಳನ್ನು ಪೂಜಿಸಿ ತೃಪ್ತಿಪಡಿಸು. ಇದೇ ವಿಧವಾಗಿ ಅಗ್ನಿಯ ಮಹದ್ಗುಣಗಳನ್ನು ವರ್ಣಿಸುವ ಇನ್ನೂ ಕೆಲವು ವಾಕ್ಯಗಳನ್ನು ವಿವರಿಸಿ ಕೆಳಗೆ ಉದಾಹರಿಸಲಾಗುತ್ತದೆ.

"ಅಗ್ನಿಯು ಮೇಧಾವಿಯಾದ ಕವಿಯು, ಕವಿಗಳಲ್ಲೆಲ್ಲಾ ದಿವ್ಯರೂಪನು. **(ಅಸುರೋ ವಿಪಶ್ಚಿತಾಂ)**"
(೩-೩-೪)

" ಇಂತಹ ವಿಪಶ್ಚಿತ್ತಾದ ಅಗ್ನಿಯು ಎಲ್ಲಾ ವಿಧವಾದ ಪೂಜಾಕರ್ಮಗಳನ್ನೂ ಅರಿತಿದ್ದಾನೆ. ಉತ್ತಮನಾದ ನೇತೃವು. ಸುಲಭವಾಗಿ ಸಿದ್ಧಿಯನ್ನು ತರತಕ್ಕವನು. ಸಕಲ ಕರ್ಮಗಳಿಗೂ ರಕ್ಷಕನು. ಭಕ್ತರಿಗೆ ಸುಲಭವಲ್ಲದ ಕರ್ಮಗಳಲ್ಲಿ ಸಹಾಯಮಾಡಿ ಕರ್ಮವನ್ನು ಸಾಂಗಗೊಳಿಸತಕ್ಕವನು."

"ಎಲೈ ಅಗ್ನಿಯೇ, ಯಾವ ಯಜ್ಞವನ್ನು ನೀನು ಸುತ್ತುವರಿದು ನೆರವೇರುವಂತೆ ಮಾಡುತ್ತೀಯೋ ಅದು ಖಂಡಿತ ದೇವತೆಗಳಲ್ಲಿ ಹೋಗಿ ಸೇರುತ್ತದೆ."

(೧-೧-೪)

"ಎಲೈ ಅಗ್ನಿಯೇ, ನೀನು ಅಂಗಿರಾಋಷಿಗಳಲ್ಲಿ ಪ್ರಥಮನು. (ಮುಖ್ಯನು) ದೇವತೆಗಳಿಗೆಲ್ಲಾ ಕಲ್ಯಾಣ ಕಾರಕನಾದ ಸಖನು."

(೧-೩೧-೧)

"ಎಲೈ ಅಗ್ನಿಯೇ, ನೀನೇ ಯಜ್ಞಕರ್ಮನಿರ್ವಹಣಕ್ಕೆಲ್ಲಾ ಪ್ರಧಾನವಾದ ಸಾಧನವು."

(೩-೩-೩)

"ಎಲೈ ಅತ್ಯುತ್ತಮನಾದ ಋಷಿಯೇ, ನೀನು ಪ್ರಜ್ವಲಿತನಾಗಿದ್ದೀಯೆ. ಯಜ್ಞವನ್ನು ರಕ್ಷಿಸು."

(೩-೨೧-೩)

"ಯಜ್ಞಸಾಧನವಾದವನೂ, ಋಷಿರೂಪನೂ ಆದ ಅಗ್ನಿಯು ಯಜ್ಞವನ್ನು ವೃದ್ಧಿಗೊಳಿಸುತ್ತಾ ಮುಂಭಾಗದಲ್ಲಿ ನೇತ್ರರೂಪನಾಗಿದ್ದಾನೆ."

(೩-೨೭-೨, ೭)

"ಪ್ರಾಜ್ಞರಲ್ಲದವರ ನಡುವೆ ಇರುವ ಅವನೊಬ್ಬನೇ ಪ್ರಾಜ್ಞನಾದ ಕವಿಯು- ಅತ್ಯುತ್ತಮವಾದ ಜ್ಞಾನವುಳ್ಳವನು."

(೭-೪-೪)

"ಎಲೈ ದೇವತೆಗಳೇ, ವಿಧಿವಿಹಿತವಾದ ಕರ್ಮಾಚರಣೆಯಲ್ಲಿ ನಾವು ಯಾವ ಲೋಪದೋಷಗಳನ್ನು ಮಾಡಿದರೂ ಸಹ, ಋತುಕಾಲನಿಯಮಗಳನ್ನರಿತವನೂ, ದೇವತೆಗಳಿಗೆ ಯಾವ ರೀತಿ ತೃಪ್ತಿಯನ್ನುಂಟುಮಾಡಬೇಕೆಂಬ ತಿಳುವಳಿಕೆಯುಳ್ಳವನೂ ಆದ ಅಗ್ನಿಯು ನಮ್ಮ ಲೋಪದೋಷಗಳನ್ನೆಲ್ಲಾ ತಿದ್ದಿಸರಿಪಡಿಸುತ್ತಾನೆ."

(೧೦-೨-೪)

"ಯಜ್ಞನಿರ್ವಹಣಕ್ಕೆ ಉಪಯುಕ್ತವಾದ ಅನೇಕ ವಿಷಯಗಳು ಮಂದಮತಿಗಳಾದ ನಮ್ಮ ತಿಳುವಳಿಕೆಗೆ ಬಂದಿರುವುದೇ ಇಲ್ಲ. ಆದರೂ ಸಹ ಅಗ್ನಿಯು ಸರ್ವಜ್ಞನಾದುದರಿಂದಲೂ, ಪೂಜ್ಯನಾದ ಋತ್ವಿಕ್ಕಾದುದರಿಂದಲೂ, ಈ ಮರ್ಮಗಳನ್ನೆಲ್ಲಾ ಅರಿತು, ದೇವತೆಗಳನ್ನು ಸಕಾಲದಲ್ಲಿ ಪೂಜಿಸಿ ಅವರವರಿಗೆ ಉಪಯುಕ್ತವಾದ ಹವಿರಾದಿಗಳನ್ನರ್ಪಿಸಿ ಎಲ್ಲರಿಗೂ ತೃಪ್ತಿಯನ್ನುಂಟುಮಾಡುತ್ತಾನೆ.

(೧೦-೨-೫)

"ಯಜಮಾನರಾದ ಮಾನವರ ದೃಷ್ಟಿಗಳು ಸೂರ್ಯನಕಡೆ ಯಾವ ರೀತಿ ತಿರುಗುತ್ತವೆಯೋ, ಅದೇ ರೀತಿ ಅಗ್ನ್ಯಭಿಮುಖವಾಗಿಯೂ ತಿರುಗುತ್ತವೆ."

(೧೦-೯೧-೩)

“ಅಗ್ನಿಯೇ, ಸಕಲ ಯಜಮಾನರಿಗೂ ಪಿತೃವು, ಅವನೇ ಪ್ರಭುವು. ಈಶ್ವರನು ಯಜ್ಞಕ್ಕೆ ಬಾಹ್ಯಾವಿರ್ಭಾವವನ್ನು ಹೊಂದಿದ ಧ್ವಜರೂಪನು, ಸಕಲ ವೈದಿಕಕರ್ಮಗಳಿಗೂ ಅಧ್ಯಕ್ಷನು.” **(ಕೇತುಂ ಯಾಜ್ಞಾನಾಂ, ಪಿತಾ ಯಾಜ್ಞಾನಾಂ, ಸಮ್ರಾಜಂ)**, ೩-೩-೩,೪, ೩-೧೦-೪, ೩-೧೧-೨, ೪-೩-೧; ೬-೨-೩, ೮-೪೩-೨೪, ೧೦-೧-೫, ೧೦-೬-೩.

“ಶೀಘ್ರಸಂಚಾರಿಯಾದ ಅಗ್ನಿಯು **(ರಘುಪತ್ವಃ)** ದೇವತೆಗಳಿಂದ ಪ್ರಾರ್ಥಿತನಾಗಿ, ಪೃಥಿವಿಯಿಂದ ಅಂತರಿಕ್ಷಕ್ಕೂ, ಅಂತರಿಕ್ಷದಿಂದ ಪೃಥಿವಿಗೂ ಸಂಚರಿಸುತ್ತಾ, ದೇವದೂತನೂ, ಮಾನವನಾದ ಯಜಮಾನನ ದೂತನೂ ಆಗಿ ದೇವಮಾನವಾದಿಗಳ ನಿತ್ಯಸಂಬಂಧವನ್ನು ಬೆಳೆಸುತ್ತಾನೆ. ಮಾನವರಿಂದ ಅರ್ಪಿತವಾದ ದಿವ್ಯವಾದ ಸ್ತುತಿಗಳನ್ನೂ ಹವಿರಾದಿಗಳನ್ನೂ ದೇವತೆಗಳಿಗೆ ಒಪ್ಪಿಸುತ್ತಾನೆ. ಅಪೇಕ್ಷಿತವಾದ ಕಾಲಗಳಲ್ಲೆಲ್ಲಾ ದೇವತೆಗಳನ್ನು ಸ್ವರ್ಗದಿಂದ ಪೃಥ್ವಿಯ ಯಜ್ಞಭೂಮಿಗೆ ಕರೆದುಕೊಂಡು ಬರುತ್ತಾನೆ.”

(೧೦-೧೦೦-೧೧; ೧೦-೧೫೦-೪)

ಅಗ್ನಿಯ ದೇವದೂತತ್ವವೂ, ಮಾನವದೂತತ್ವವೂ ತೈತ್ತಿರೀಯಸಂಹಿತೆಯಲ್ಲಿ ಈರೀತಿ ವರ್ಣಿತವಾಗಿದೆ—

**“ಅಗ್ನಿರ್ದೇವಾನಾಂ ದೂತ ಆಸೀದುಶನಾ ಕಾವ್ಯೋಽಸುರಾಣಾಂ”**

**(ತೈ. ಸಂ. ೩-೫-೮-೫)**

ಅಗ್ನಿಯು ದೇವದೂತನಾಗಿಯೂ, ಕಾವ್ಯ ಉಶನಸ್ಸು ಅಸುರದೂತನಾಗಿಯೂ ಇದ್ದರು. ಇದೇ ದೂತತ್ವದಿಂದ ದೇವಮಾನವಾದಿಗಳ ಸಂಬಂಧವು ಯಾವರೀತಿ ಬೆಳೆಯಲು ಅವಕಾಶವಾಯಿತೆಂದು ತೈತ್ತಿರೀಯಬ್ರಾಹ್ಮಣದಲ್ಲಿ ಅಗ್ನಿಯ ಈ ಕಾರ್ಯವನ್ನು ಈರೀತಿ ಪ್ರಶಂಸಿಸಿದೆ.

**ಆ ತಂತುಮಗ್ನಿರ್ದಿವ್ಯಂ ತತಾನ । ತ್ವಂ ನಸ್ತಂತುರುತ ಸೇತುರಗ್ನೇ । ತ್ವಂ ಪಂಥಾ ಭವಸಿ ದೇವಯಾನ್ಯಃ । ತ್ವಯಾ ಅಗ್ನೇ ಪೃಷ್ಠಂ ವಯಮಾರುಹೇಮ । ಅಥ ದೇವೈಃ ಸಧಮಾದಂ ಮದೇಮ ॥**

**(ತೈ. ಬ್ರಾ. ೨-೪-೧-೬)**

ಎಲೈ ಅಗ್ನಿಯೇ, ದೇವಮಾನವಾದಿಗಳಿಗಿರುವ ಸಂಬಂಧರೂಪವಾದ ತಂತುವನ್ನು ನೀನು ವಿಸ್ತರಿಸುವೆ. ನೀನೇ ನಮಗೆ ತಂತುಪ್ರಾಯನು. ಸ್ವರ್ಗಕ್ಕೆ ಹೋಗಲು ಮುಖ್ಯ ಸೇತುವೆಯು, ದೇವಲೋಕಕ್ಕೆ ಹೋಗುವ ಮುಖ್ಯ ಮಾರ್ಗವು ನೀನೇ. ನಿನ್ನ ಅನುಗ್ರಹದಿಂದ ನಿನ್ನ ಪೂಜಕರಾದ ನಾವೂ ಸಹ ಸ್ವರ್ಗವನ್ನು ಸೇರಿ ಅಲ್ಲಿರುವ ದೇವತೆಗಳು ಯಾವ ಸುಖವನ್ನನುಭವಿಸುವರೋ ಅದೇ ಸುಖವನ್ನು ಅವರೊಡನೆ ನಾವೂ ಅನುಭವಿಸುವಂತಾಗಲಿ.

ಇದೇ ವಿಧವಾಗಿ ದೇವದೂತತ್ವವೂ; ಈ ದೌತ್ಯದಿಂದ ದೇವಮಾನವಾದಿಗಳ ಸಂಬಂಧಾಭಿವೃದ್ಧಿಗೆ ಸಾಧಕತ್ವವೂ ಪ್ರಶಂಸಿತವಾಗಿರುವ ಸನ್ನಿವೇಶಗಳೂ ಋಕ್ಸಂಹಿತೆಯಲ್ಲಿ ಬಹಳ ಹೇರಳವಾಗಿವೆ. “**ಅಗ್ನಿಂ ದೂತಂ ವೃಣೀ ಮಹೇ**” ಇತ್ಯಾದಿ ವಾಕ್ಯಗಳು ಅಗ್ನಿಯ ಸಹಾಯವನ್ನು ಪ್ರಶಂಸಿಸುವುವಾಗಿವೆ. (೧-೧೨-೧; ೨-೪-೮; ೧-೩೬-೩, ೪, ೫; ೧-೪೪, ೨, ೩, ೫, ೯, ೧೨; ೨-೧೦-೬; ೩-೧೧-೨; ೪-೨-೩; ೫-೨೧-೩; ೭-೧೭-೬; ೮-೩೯-೧, ೯; ೧೦-೯೧-೧೧; ೧-೨೭-೪; ೧-೧೮೮-೧; ೩-೫-೨; ೩-೧೭-೪; ೪-೭-೮; ೬-೧೫-೮ ರಿಂದ ೧೦; ೮-೧೯-೨೧; ೮-೪೪-೩; ೧೦ ೧೨೨-೭; ೧-೫೮-೧; ೨-೬-೬, ೭; ೩-೬-೫; ೩-೨೧-೧, ೫; ೪-೮-೨, ೪;

೭-೧೧-೪; ೮-೩೩-೧೮, ೧೯; ೧೦-೪-೨, ೧-೭೪-೪, ೭; ೨-೯-೨; ೩-೯-೮; ೪-೧-೮; ೫-೮-೬; ೭-೧೬-೪; ೧೦-೪೬-೧೦ ಇತ್ಯಾದಿ.)

ಇದೇ ಅಗ್ನಿಯು ದ್ಯುಲೋಕದ ಅಂತಸ್ಸತ್ವವನ್ನು ಪೂರ್ಣವಾಗಿ ಅರಿತವನಾಗಿ ಸಕಲ ದೇವತೆಗಳನ್ನೂ ಅವರವರ ಯೋಗ್ಯತಾನುಸಾರವಾದ ಯಜ್ಞಭಾಗವನ್ನು ಸ್ವೀಕರಿಸಲು ಕರೆತರಲು ಯೋಗ್ಯನಾಗಿದ್ದಾನೆ.

(೪-೮-೨)

ಯಾವ ರಥಗಳಲ್ಲಿ ದೇವತೆಗಳು ಬರುವರೋ, ಅಗ್ನಿಯೂ ಅದೇ ರಥದಲ್ಲಿ ಕುಳಿತು ಬರುತ್ತಾನೆ.

(೩-೪-೧೧; ೭-೧೧-೧)

ಅಥವಾ ಸಮಯವನ್ನರಿತು ಅವರಿಗಿಂತಲೂ ಪೂರ್ವಭಾವಿಯಾಗಿಯೇ ಬರುತ್ತಾನೆ.

(೧೦-೭೦-೨)

ಉಳಿದ ಸಕಲ ದೇವತೆಗಳಿಗೂ ಯಾವ ಪೂಜೆಯುಂಟೋ, ಯಾವ ಯಜ್ಞಭಾಗವುಂಟೋ ಅವೆಲ್ಲವೂ ಅಗ್ನಿಗೂ ಸೇರತಕ್ಕವಾಗಿವೆ ಮತ್ತು ಅರ್ಪಿತವಾಗುತ್ತವೆ.

(೧-೩೬-೪; ೨-೧೨-೧)

ಯಜ್ಞಕ್ಕೆ ವರುಣನನ್ನು ಕರೆತರುತ್ತಾನೆ. ಇಂದ್ರನನ್ನು ದ್ಯುಲೋಕದಿಂದಲೂ, ಮರುತ್ತುಗಳನ್ನು ಅಂತರಿಕ್ಷದಿಂದಲೂ ಕರೆತರುತ್ತಾನೆ.

(೧೦-೭೦-೧೧)

ಯಜ್ಞದಲ್ಲಿ ಅರ್ಪಿತವಾದ ಹವಿಸ್ಸುಗಳನ್ನು ಸುಗಂಧಯುಕ್ತವಾಗುವಂತೆ ಮಾಡುತ್ತಾನೆ. **(ಹವ್ಯಾನೀ ಸುರಭೀಣಿ ಕೃತ್ವೀ)**

(೧೦-೧೫-೧೨ ; ವಾ. ಸಂ. ೧೯-೬೬)

ಯಜ್ಞದಲ್ಲಿ ಅಗ್ನಿಯ ಸಹಾಯವಿಲ್ಲದಿದ್ದರೆ ದೇವತೆಗಳಿಗೆ ಯಾವ ವಿಧವಾದ ತೃಪ್ತಿಯೂ ಇರುವುದಿಲ್ಲ.

(೭-೧೧-೧)

ಆದುದರಿಂದ ಆ ದೇವತೆಗಳಿಗೆಲ್ಲಾ ಅಗ್ನಿಯೇ ಸಾಕ್ಷಾತ್ತಾಗಿ ಹವಿಸ್ಸುಗಳನ್ನು ಅರ್ಪಿಸುತ್ತಾನೆ.

(೭-೧೧-೩; ೮-೯೧-೧೬; ೧೦- ೭-೬)

ಅಗ್ನಿಯ ಮೂಲಕವೇ ದೇವತೆಗಳು ಹವಿರಾದಿಗಳನ್ನು ಸ್ವೀಕರಿಸುವುದರಿಂದ ಅನೇಕವೇಳೆ ಅಗ್ನಿಯು ದೇವಮಾನವಾದಿಗಳಿಂದ ನಿರ್ವಹಿಸಲ್ಪಡುವ ಯಜ್ಞದಲ್ಲಿ ಪ್ರಧಾನಪಾತ್ರವಹಿಸಿ ದೇವತೆಗಳ ಮುಖವೆಂದೂ, ಅವರು ಸೋಮಾದಿಗಳನ್ನು ಪಾನಮಾಡುವ ಜಿಹ್ವೆಯೇ ಇವನೆಂದೂ ಪ್ರಶಂಸಿತನಾಗಿದ್ದಾನೆ. **(ಆಸ್ಯಂ ತ್ವಾಂ ಜಿಹ್ವಾಂ)** (೨-೧-೧೩; ೨-೧-೧೪) ಇನ್ನು ಕೆಲವೆಡೆಗಳಲ್ಲಿ ಅವನೇ ಸಕಲ ಹವಿಸ್ಸುಗಳನ್ನೂ ಭಕ್ಷಿಸಬೇಕೆಂದೂ ಪ್ರಾರ್ಥಿತನಾಗಿದ್ದಾನೆ ಮತ್ತು ಯಜ್ಞದಲ್ಲಿ ಅರ್ಪಿತವಾದ ಸೋಮವನ್ನು ಪಾನಮಾಡುವುದಕ್ಕೆ ಸಾಕ್ಷಾತ್ತಾಗಿ ಆಹೂತನಾಗಿದ್ದಾನೆ.

(೩-೨೧-೧; ೩-೨೮-೧ ರಿಂದ ೬; ೧-೧೪-೧೦; ೭-೧೯-೯)

## ಅಗ್ನಿಯು ನೀರಿನಲ್ಲಿ ಅವಿತುಕೊಂಡಿದ್ದ ವಿಚಾರ

ಎಲ್ಲಕ್ಕಿಂತಲೂ ಮೊದಲು ಈ ಪ್ರಕರಣದಲ್ಲಿ ಅಗ್ನಿಯ ಹವ್ಯವಾಹಕತ್ವವು ಪ್ರಶಂಸಿತವಾಗಿದೆ. ಜಗದ್ವ್ಯವಹಾರಕ್ಕೆಲ್ಲಾ ಆಧಾರಭೂತವಾದ ಯಜ್ಞನಿರ್ವಹಣವು ಜಗತ್ತಿನ ಸ್ಥಿತಿಗತಿಗಳಿಗೆ ಅತ್ಯವಶ್ಯಕವಾಗಿದೆ. ಈ ಯಜ್ಞವು ಪರಿಪೂರ್ಣವಾಗಿ ನಿರ್ವಹಿಸಲ್ಪಡಬೇಕಾದರೆ ಅಗ್ನಿಯೇ ಈ ಕಾರ್ಯಸಾಧಕನಾಗಿರಬೇಕು. ಆದುದರಿಂದ ಅವನೇ ಮುಖ್ಯ ಹೋತೃವೂ ಹವಿರ್ವಾಹಕನೂ ಆಗಿರಬೇಕು. **"ಮನ್ಯೇ ತ್ವಾ ಜಾತವೇದಸಂ ಸ ಹವ್ಯಾವಕ್ಷ್ಯಾನುಷಕ್"** ಜಾತವೇದೋರೂಪನಾದ ಅಗ್ನಿಯೇ ನಿರಂತರವಾದ ಹವ್ಯವಾಹಕನೆಂದು ನನ್ನ ದೃಢವಿಶ್ವಾಸವಿದೆಯೆಂದು ಋಷಿಯು ತನ್ನ ಶ್ರದ್ಧೆಯನ್ನು ಪ್ರಥಮತಃ ವ್ಯಕ್ತಪಡಿಸಿದ್ದಾನೆ (೫-೯-೧).

ಹವಿಸ್ಸನ್ನೇ ಆಹಾರವನ್ನಾಗಿ ನಂಬಿಕೊಂಡಿರುವ ದೇವತೆಗಳು ಯಜ್ಞಹವಿಸ್ಸನ್ನು ಹಂಚುವ ಅಗ್ನಿಯು ಸ್ವಲ್ಪ ಕಣ್ಮರೆಯಾದರೂ ಪ್ರಕ್ಷುಬ್ಧರಾಗುತ್ತಾರೆ. ಅಂತಹ ಸನ್ನಿವೇಶಗಳಲ್ಲಿ ಅಗ್ನಿಯನ್ನು ವಿನಯದಿಂದ ಪ್ರಾರ್ಥಿಸಿ ಹವಿರ್ವಹನ ಕರ್ಮವನ್ನು ನೆರವೇರಿಸುವಂತೆ ಪ್ರಾರ್ಥಿಸುತ್ತಾರೆ. ಇಂತಹ ಕೆಲವು ಸನ್ನಿವೇಶಗಳು ಋಕ್ಸಂಹಿತೆಯಲ್ಲಿಯೇ ವರ್ಣಿತವಾಗಿರುತ್ತವೆ. ಉದಾಹರಣೆಗೆ, ಋ. ಸಂ. ೧೦-೫೧ ನೇ ಸೂಕ್ತದ ವಿವರಣೆಯನ್ನು ಇಲ್ಲಿ ಪರಿಶೀಲಿಸಬಹುದು. ಉದಾಹೃತವಾಗುವ ಈ ಸೂಕ್ತದಲ್ಲಿ ದೇವತೆಗಳು ಹವಿರ್ವಹನಕರ್ಮಕ್ಕಾಗಿ ಅಗ್ನಿಯನ್ನು ಪ್ರಾರ್ಥಿಸುತ್ತಾರೆ. ಅಗ್ನಿಯು ತನ್ನ ಪ್ರಿಯವಾದ ಒಂದು ನಿಯಮವನ್ನು ಸೂಚಿಸಿ ದೇವತೆಗಳು ಆ ನಿಯಮವನ್ನು ಪಾಲಿಸುವುದಾದರೆ ತಾನು ಹವಿರ್ವಹನಕರ್ಮವನ್ನು ನಿರ್ವಹಿಸುವುದಾಗಿ ಭರವಸೆಯನ್ನು ನೀಡುತ್ತಾನೆ.

ಅಗ್ನಿಯು ನೀರಿನಲ್ಲಿ ಏತಕ್ಕೆ ಅಡಗಿಕೊಂಡಿದ್ದನು ಎಂಬ ವಿಷಯದಲ್ಲಿ ಒಂದು ಪೂರ್ವೇತಿಹಾಸವು ಋಗ್ವೇದದ ಪ್ರಕೃತ ಸೂಕ್ತದಲ್ಲಿಯೂ ಯಜುರ್ವೇದದಲ್ಲಿಯೂ ಉಕ್ತವಾಗಿರುವುದು.

**ಅಗ್ನೇಃ ಪೂರ್ವೇ ಭ್ರಾತರೋ ಅರ್ಥಮೇತಂ ರಥೀವಾಧ್ವಾನಮನ್ವಾವರೀವುಃ ।**
**ತಸ್ಮಾದ್ಭಿಯಾ ವರುಣ ದೂರಮಾಯಂ ಗೌರೋ ನ ಕ್ಷೇಪ್ನೋರವಿಜೇ ಜ್ಯಾಯಾಃ ।**
**ಕುರ್ಮಸ್ತ ಆಯುರಜರಂ ಯದಗ್ನೇ ಯಥಾ ಯುಕ್ತೋ ಜಾತವೇದೋ ನ ರಿಷ್ಯಾಃ ।**
**ಅಥಾ ವಹಾಸಿ ಸುಮನಸ್ಯಮಾನೋ ಭಾಗಂ ದೇವೇಭ್ಯೋ ಹವಿಷಃ ಸುಜಾತ ॥**
**ಪ್ರಯಾಜಾನ್ಮೇ ಅನುಯಾಜಾಂಶ್ಚ ಕೇವಲಾನೂರ್ಜಸ್ವಂತಂ ಹವಿಷೋ ದತ್ತ ಭಾಗಂ ।**
**ಘೃತಂ ಚಾಪಾಂ ಪುರುಷಂ ಚೌಷಧೀನಾಮಗ್ನೇಶ್ಚ ದೀರ್ಘಮಾಯುರಸ್ತು ದೇವಾಃ ॥**
**ತವ ಪ್ರಯಾಜಾ ಅನುಯಾಜಾಶ್ಚ ಕೇವಲ ಊರ್ಜಸ್ವಂತೋ ಹವಿಷಃ ಸಂತು ಭಾಗಾಃ ।**
**ತವಾಗ್ನೇ ಯಜ್ಞೋಽಯಮಸ್ತು ಸರ್ವಸ್ತುಭ್ಯಂ ನಮಂತಾಂ ಪ್ರದಿಶಶ್ಚತಸ್ರಃ ॥**

(ಋ ಸಂ. ೧೦-೫೧-೬ ರಿಂದ ೯)

ಈ ಸೂಕ್ತದಲ್ಲಿ ದೇವತೆಗಳಿಗೂ ಅಗ್ನಿಗೂ ನಡೆದ ಸಂಭಾಷಣೆಯು ಉಕ್ತವಾಗಿದೆ. ಮುಖ್ಯವಿಚಾರವೇನೆಂದರೆ—ಅಗ್ನಿಗೆ ಭೂಪತಿಃ, ಭುವನಪತಿಃ ಭೂತಾನಾಂಪತಿಃ ಎಂಬ ಹೆಸರಿನ ಮೂರು ಜ್ಯೇಷ್ಠಸಹೋದರರಿದ್ದರು. ಅವರೂ ಅಗ್ನಿಯಂತೆಯೇ ಯಜ್ಞದಲ್ಲಿ ಯಜಮಾನರು ಅರ್ಪಿಸುವ ಹವಿಸ್ಸನ್ನು ದೇವತೆಗಳ ಬಳಿಗೆ ವಹಿಸುತ್ತಿದ್ದರು. ಹೀಗಿರುವಲ್ಲಿ ಯಜ್ಞದಲ್ಲಿ ಹೋಮಮಾಡುವಾಗ ವಜ್ರಸದೃಶವಾದ ವಷಟ್ಕಾರಶಬ್ದಪೂರ್ವಕವಾದ ಹೋಮಗಳಿಂದ ಈ ಮೂವರು ಸಹೋದರರೂ ಮೃತರಾದರು. ಅದನ್ನು ಕಂಡು ಕಿರಿಯವನಾದ ಅಗ್ನಿಯು ತನಗೂ ಆ ದೆಶೆ ಸಂಭವಿಸಬಹುದೆಂದು

ಭೀತನಾಗಿ ನೀರಿನಲ್ಲಿ ಹೋಗಿ ಅವಿತುಕೊಂಡಿದ್ದನು. ದೇವತೆಗಳು ಅಗ್ನಿಯನ್ನು ಎಲ್ಲಿಯೂ ಕಾಣದೆ ಹುಡುಕುತ್ತಿರುವಾಗ ನೀರಿನಲ್ಲಿದ್ದ ಮೀನುಗಳು ಅಗ್ನಿಯು ನೀರಿನಲ್ಲಿರುವನೆಂದು ದೇವತೆಗಳಿಗೆ ತಿಳಿಸಿದವು. ಆಗ ದೇವತೆಗಳು ಅಗ್ನಿಯ ಬಳಿಗೆ ಬಂದು ಅವನೊಡನೆ ಈರೀತಿ ಸಂಭಾಷಿಸಿದರು. ಈ ಸಂಭಾಷಣೆಯೇ ಈ ಸೂಕ್ತದಲ್ಲಿ ವಿವರಿಸಲ್ಪಟ್ಟಿದೆ. ದೇವತೆಗಳು ಅಗ್ನಿಯನ್ನು ನೀರಿನಿಂದ ಎದ್ದುಬರಬೇಕೆಂದೂ ಹಿಂದಿನಂತೆ ತಮಗೆ ಹವಿಸ್ಸನ್ನು ವಹಿಸಬೇಕೆಂದೂ ಪ್ರಾರ್ಥಿಸಲು ಅಗ್ನಿಯು, ತನ್ನ ಸಹೋದರರು ಮೃತರಾದುದರಿಂದ ತನಗೂ ಅದೇ ಗತಿ ಪ್ರಾಪ್ತವಾಗುವುದೆಂದೂ ಆದ್ದರಿಂದ ತಾನು ಬರುವುದಿಲ್ಲವೆಂದೂ ಹೇಳಿದನು. ಅದಕ್ಕೆ ದೇವತೆಗಳು ಮರಣಕ್ಕಾಗಿ ಹೆದರಬೇಡವೆಂದೂ ನಿನಗೆ ಮರಣಭಯವುಂಟಾಗ ದಂತೆ ಮಾಡುವೆವೆಂದೂ ಹೇಳಲು ಅಗ್ನಿಯು ಪುನಃ ಇಂತೆಂದನು—ಒಳ್ಳೆಯದು. ಮರಣಭಯವನ್ನು ನನಗೆ ತಪ್ಪಿಸುವು ದಲ್ಲದೆ ಯಜ್ಞಗಳಲ್ಲಿ ಪ್ರಯಾಜಾ, ಅನುಯಾಜಾ. ಉರ್ಜಸ್ವತ್, ಸ್ವಿಷ್ಟಕೃತ್, ಆಜ್ಯಭಾಗ ಮೊದಲಾದ ಕೆಲವು ವಿಶೇಷ ಆಹುತಿಗಳನ್ನು ನನಗೆ ಕೊಡಬೇಕು ಎಂದನು. ದೇವತೆಗಳು ಹಾಗೆಯೇ ಆಗಲೆಂದೊಪ್ಪಿ ಅವನು ಕೇಳಿದ ಹವಿರ್ಭಾಗ ಗಳನ್ನು ಕೊಟ್ಟು ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸುವಂತೆಯೂ, ಸರ್ವರಿಂದಲೂ ನಮಸ್ಕೃತನಾಗುವಂತೆಯೂ, ದೀರ್ಘಾಯುವಾಗುವಂತೆಯೂ ವರವನ್ನಿತ್ತು ಪೂರ್ವದಂತೆ ಹವಿರ್ವಹನಕಾರ್ಯದಲ್ಲಿ ಅವನನ್ನು ನಿಯಮಿಸಿದರು ಎಂದು ಈ ಸೂಕ್ತದ ಮುಖ್ಯಾಭಿಪ್ರಾಯವು. ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿ ಈ ವಿಷಯವಾಗಿ ಈರೀತಿ ಇರುವುದು.

**ಅಗ್ನೇಸ್ತ್ರಯೋ ಜ್ಯಾಯಾಗ್ಂಸೋ ಭ್ರಾತರ ಆಸನ್ತೇ ದೇವೇಭ್ಯೋ ಹವ್ಯಂ ವಹಂತಃ ಪ್ರಾಮೀಯಂತ ಸೋಽಗ್ನಿರಬಿಭೇದಿತ್ಥಂ ವಾವ ಸ್ಯ ಆರ್ತಿಮಾರಿಷ್ಯತೀತಿ ಸ ನಿಲಾಯತ ಸೋಽಪಃ ಪ್ರಾವಿಶತ್ತಂ ದೇವತಾಃ ಪ್ರೈಷಮೈಚ್ಛನ್ತಂ ಮತ್ಸ್ಯಃ ಪ್ರಾಬ್ರವೀತ್ತಮಶಪದ್ಧಿ- ಯಾಧಿಯಾ ತ್ವಾ ವಧ್ಯಾಸುರ್ಯೋ ಮಾ ಪ್ರಾವೋಚ ಇತಿ ತಸ್ಮಾನ್ಮತ್ಸ್ಯಂ ಧಿಯಾಧಿಯಾ ಘ್ನಂತಿ ಶಪ್ತೋ ಹಿ ತಮನ್ವವಿಂದನ್ತಮಬ್ರುವನ್ನುಪ ನ ಆ ವರ್ತಸ್ವ ಹವ್ಯಂ ನೋ ವಹೇತಿ ಸೋಽಬ್ರವೀದ್ವರಂ ವೃಣೈ ಯದೇವ ಗೃಹೀತಸ್ಯಾಹುತಸ್ಯ ಬಹಿಃ ಪರಿಧಿಸ್ಕಂದಾತ್ತನ್ಮೇ ಭ್ರಾತೃಣಾಂ ಭಾಗಧೇಯಮಸದಿತಿ ತಸ್ಮಾದ್ಯದ್ಗೃಹೀತಸ್ಯಾಹುತಸ್ಯ ಬಹಿಃ ಪರಿಧಿ ಸ್ಕಂದತಿ ತೇಷಾಂ ತದ್ಭಾಗಧೇಯಂ ತಾನೇವ ತೇನ ಪ್ರೀಣಾತಿ ಪರಿಧೀನ್ಪರಿ ದಧಾತಿ ರಕ್ಷಸಾಮಪಹತ್ಯೈ॥**

(ತೈ. ಸಂ. ೨-೬-೬-೧, ೨)

ಪೂರ್ವದಲ್ಲಿ ಅಗ್ನಿಗೆ ಮೂರುಮಂದಿ ಜ್ಯೇಷ್ಠಸಹೋದರರಿದ್ದರು. ಅವರು ದೇವತೆಗಳಿಗೆ ಯಜ್ಞಯಾಗಾದಿಗಳಲ್ಲಿ ಯಜಮಾನನು ಅರ್ಪಿಸುವ ಹವಿಸ್ಸನ್ನು ಒಯ್ಯುತ್ತಿದ್ದರು. ಅವರು ಮೃತರಾಗಲು ಅಗ್ನಿಯು ತನಗೂ ಆ ಗತಿ ಪ್ರಾಪ್ತ ವಾಗಬಹುದೆಂದು ಹೆದರಿ ಓಡಿಹೋಗಿ ನೀರಿನಲ್ಲಿ ಪ್ರವೇಶಿಸಿ ಯಾರಿಗೂ ಕಾಣದಂತೆ ಅವಿತುಕೊಂಡಿದ್ದನು. ದೇವತೆಗಳು ಅಗ್ನಿಯು ಎಲ್ಲಿಹೋದನೆಂದು ಹುಡುಕುತ್ತಿರುವಾಗ ನೀರಿನಲ್ಲಿದ್ದ ಒಂದು ಮೀನು ಅಗ್ನಿಯು ನೀರಿನಲ್ಲಿ ಅವಿತುಕೊಂಡಿ ರುವುದನ್ನು ದೇವತೆಗಳಿಗೆ ಹೇಳಿತು. ಮೀನಿನ ಈ ಚಾಡಿಮಾತನ್ನು ಕೇಳಿ ಅಗ್ನಿಗೆ ಕೋಪಬಂದು ಇನ್ನುಮೇಲೆ ನೀರಿ ನಲ್ಲಿರುವ ಮೀನುಗಳನ್ನು ಜನರು ಬಲೆ ಮೊದಲಾದ ಸಾಧನಗಳಿಂದ ಹಿಡಿದು ಕೊಲ್ಲುವಂತೆ ಶಪಿಸಿದನು. ಅದರಂತೆ ಈಗಲೂ ಜನರು ಮೀನುಗಳನ್ನು ಬಲೆ ಮೊದಲಾದ ಸಾಧನಗಳಿಂದ ಹಿಡಿದು ಕೊಂದು ತಿನ್ನುತ್ತಿರುವರು. ಬಳಿಕ ದೇವತೆ ಗಳು ಅಗ್ನಿಯನ್ನು ಕುರಿತು ಎಲೈ ಅಗ್ನಿಯೇ, ನೀನು ಹಿಂತಿರುಗಿಬಂದು ನಮಗೆ ಹವಿರ್ವಹನಕಾರ್ಯದಲ್ಲಿ ಉದ್ಯುಕ್ತ ನಾಗಿರು ಎನ್ನಲು ಅದಕ್ಕೆ ಅಗ್ನಿಯು ಯಜ್ಞದಲ್ಲಿ ಹೋಮಮಾಡುವಾಗ ಪರಿಧಿಯು (ರಾಕ್ಷಸರು ಬಂದು ಯಜ್ಞಕ್ಕೆ

ವಿಘ್ನ ಮಾಡದಂತೆ *ಅಗ್ನಿ ಕುಂಡದ ನಾಲ್ಕು ದಿಕ್ಕುಗಳಲ್ಲಿಯೂ ಇಡುವ ದರ್ಭೆ ವಿಶೇಷಗಳಿಗೆ ಪರಿಧಿ ಎಂದು ಹೆಸರು). ಹೊರಗಡೆ ಎಂದರೆ ಈಚೆ ಬೀಳುವ ಆಜ್ಯವೇ ಮೊದಲಾದ ಆಹುತಿಗಳ ಭಾಗವು ನನ್ನ ಸಹೋದರರಿಗೆ ಹವಿರ್ಭಾಗುವಂತೆ ವರವನ್ನು ಕೊಟ್ಟರೆ ತಾನು ನೀರಿನಿಂದ ಎದ್ದು ಬಂದು ಪೂರ್ವದಂತೆ ಹವಿಸ್ಸನ್ನು ಒಯ್ಯುವೆನೆಂದು ಹೇಳಿದನು. ಅದಕ್ಕೆ ದೇವತೆಗಳು ಸಮ್ಮತಿಸಿ ಅವನಿಗೆ ಆ ರೀತಿ ವರವನ್ನು ಕೊಟ್ಟರು ಇತ್ಯಾದಿ ಉಪಾಖ್ಯಾನವಿದೆ.

ಯಜ್ಞದಲ್ಲಿ ಪ್ರಾಧಾನ್ಯವನ್ನು ವಹಿಸಿ ದೇವತೆಗಳಿಗೆ ಸಹಾಯಮಾಡಬೇಕೆಂದು ಅಗ್ನಿಯು ಪ್ರಾರ್ಥಿತನಾದಾಗ ಅಗ್ನಿಗೂ ಇತರ ದೇವತೆಗಳಿಗೂ ನಡೆದ ಒಂದು ಸಂಭಾಷಣೆಯು ಅಗ್ನಿಯ ಪ್ರಾಶಸ್ತ್ಯವನ್ನೂ ಅತಿಶಯವಾದ ಶಕ್ತಿಯನ್ನೂ ತಿಳಿಸುತ್ತದೆ. ಪ್ರಕೃತ ಸೂಕ್ತದ ಸಾರಾಂಶವಾದ ಆ ಸಂಭಾಷಣೆಯು ಈರೀತಿಯಿರುತ್ತದೆ.

(೧೦-೫೧)

**ದೇವತೆಗಳು**—ಎಲೈ ಅಗ್ನಿಯೇ; ನೀನು ಮರೆಮಾಡಿಕೊಂಡು ಯಾವ ಆವರಣದೊಂದಿಗೆ ನೀರಿನಲ್ಲಿ ಅಂತರ್ಗತನಾಗಿದ್ದೀಯೋ, ಆ ಆವರಣವು ಬಹಳ ಸ್ಥೂಲವಾದುದೂ, ಪೂರ್ಣವಾಗಿ ಮುಚ್ಚತಕ್ಕದ್ದಾಗಿಯೂ ಇದೆ. ಆದರೆ, ಎಲೈ ಜಾತವೇದಸ್ಸೇ, ಒಬ್ಬ ದೇವನು ಮಾತ್ರ (ಪ್ರಜಾಪತಿ) ನಿನ್ನ ಅನೇಕ ವಿಧವಾದ ಸ್ವರೂಪಗಳನ್ನು ಪೂರ್ಣವಾಗಿ ಅರಿತವನಾಗಿದ್ದಾನೆ.

**ಅಗ್ನಿ**—ನಿಮ್ಮಲ್ಲಿ ನನ್ನ ಸ್ವರೂಪಗಳನ್ನು ಅರಿತಿರುವವನಾರು ? ನನ್ನ ರೂಪವೈವಿಧ್ಯವನ್ನೆಲ್ಲಾ ಪೂರ್ಣವಾಗಿ ಅರಿತಿರುವ ದೇವನಾರು ? ಎಲೈ ಮಿತ್ರಾವರುಣರೇ, ದೇವತೆಗಳಿಗೆ ಹವಿಸ್ಸನ್ನು ವಹಿಸಲು ಸಾಧನವಾದವೂ, ದೀಪ್ತಿಯುತವಾದುವೂ ಆದ ನನ್ನ ಸ್ವರೂಪಗಳನ್ನು ನಿಮ್ಮಲ್ಲಿ ತಿಳಿದಿರುವನೊಬ್ಬನು ಇದ್ದ ಪಕ್ಷದಲ್ಲಿ ಅವೆಲ್ಲವೂ ಎಲ್ಲಿ ಅಡಗಿಕೊಂಡಿವೆ ಎಂಬುದನ್ನು ತಿಳಿಸುವಿರಾ ?

**ದೇವತೆಗಳು**—ಎಲೈ ಅಗ್ನಿಯೇ, ನಾನಾ ರೂಪಗಳನ್ನು ಧರಿಸಿ ನೀರಿನಲ್ಲಿಯೂ, ಓಷಧಿಗಳಲ್ಲಿಯೂ ಅಂತರ್ಗತನಾದ ನಿನ್ನನ್ನು ಪಡೆಯಲು ನಾವು ನಿನ್ನನ್ನು ಹುಡುಕಿದೆವು. ಆಗ ಯಮನು ಮಾತ್ರ ಪೃಥಿವ್ಯಾದಿ ಹತ್ತು ಸ್ಥಾನಗಳಲ್ಲೂ ಅಡಗಿಕೊಂಡಿರುವ ನಿನ್ನ ಮಹಾಜ್ವಾಲೆಗಳನ್ನು ಕಂಡುಕೊಂಡನು.

**ಅಗ್ನಿ**—ಎಲೈ ವರುಣನೇ, ದೇವತೆಗಳು ನನಗೆ ಎಲ್ಲಿ ಹವಿರ್ವಹನಕರ್ಮವನ್ನು ಪುನಃ ಎಲ್ಲಿ ವಹಿಸುವರೋ ಎಂಬ ಭಯದಿಂದ ನಾನು ಇಲ್ಲಿಗೆ ಬಂದು ಮರೆಯಾಗಿದ್ದೇನೆ. ಆದುದರಿಂದಲೇ, ನಾನು ಬೇರೆಬೇರೆ ರೂಪಗಳಿಂದ ಉದಕಾಂತರ್ಗತನಾಗಿ ಮರೆಯಾಗಿದ್ದೇನೆ. ಪುನಃ ಆ ಕಾರ್ಯದ ಭಾರವನ್ನು ವಹಿಸಲು ನನಗಿಷ್ಟವಿಲ್ಲ ಎಂಬುದನ್ನು ಮಾತ್ರ ಹೇಳಬಲ್ಲೆ.

**ದೇವತೆಗಳು**—ಎಲೈ ಅಗ್ನಿಯೇ, ಭಕ್ತನಾದ ಮನುವು ನಿನಗೆ ಪೂಜೆಯನ್ನರ್ಪಿಸಿ ಯಜ್ಞವನ್ನು ನಿರ್ವಹಿಸಬೇಕೆಂದು ಕಾದಿದ್ದಾನೆ. ನೀನು ನಿನ್ನನ್ನಲಂಕರಿಸಿಕೊಂಡು ಉದಕಾಂತರ್ಗತನಾಗಿದ್ದೀಯೆ. ದೇವತೆಗಳು ಸಂಚರಿಸತಕ್ಕ ಮಾರ್ಗಗಳನ್ನು ಸುರಕ್ಷಿತಗಳನ್ನಾಗಿ ಮಾಡು ಮತ್ತು ಅರ್ಪಿತವಾದ ಹವಿಸ್ಸುಗಳನ್ನು ದೇವತೆಗಳಿಗೆ ತೆಗೆದುಕೊಂಡು ಹೋಗು.

**ಅಗ್ನಿ**—ಎಲೈ ವರುಣನೇ, ಇದೇ ಹವಿರ್ವಹನಕರ್ತವ್ಯವನ್ನು ನನ್ನ ಹಿರಿಯ ಸಹೋದರರು ನೆರವೇರಿಸಲು ಒಪ್ಪಿಕೊಂಡರು. ಆದರೆ, ಆ ಕರ್ತವ್ಯನಿರ್ವಹಣಕಾಲದಲ್ಲಿ ಅವರು ಮೃತಿಗೊಂಡರು. ಆ ಕಾರಣದಿಂದಲೇ ನಾನು

ಬೆದರಿ ಇಲ್ಲಿಗೆ ಓಡಿಬಂದೆನು. ಧನ್ವಿಯ ಬಿಲ್ಲುಬಾಣಗಳನ್ನು ನೋಡಿದೊಡನೆಯೇ ಗೌರಮೃಗವು ಬೆದರಿ ಓಡುವಂತೆ ನಾನೂ ನಡುಗುತ್ತಾ ಓಡಿಬಂದೆನು. (ಈ ಸಂದರ್ಭವನ್ನು ಹಿಂದೆ ತಿಳಿಸಿದೆ).

**ದೇವತೆಗಳು**—ಎಲೈ ಅಗ್ನಿಯೇ, ನೀನು ಆ ಭೀತಿಯನ್ನಿಡಬೇಕಾಗಿಲ್ಲ. ನಿನಗೆ ಕ್ಷಯರಹಿತವಾದ ಆಯುಸ್ಸನ್ನು ನಾವು ಕೊಡುತ್ತೇವೆ. ಅದರ ಸಹಾಯದಿಂದ ನೀನು ಮೃತ್ಯುವನ್ನು ತಪ್ಪಿಸಿಕೊಳ್ಳಬಹುದು. ಶ್ರೇಷ್ಠವಾದ ಉತ್ಪನ್ನವುಳ್ಳ ಎಲೈ ಅಗ್ನಿಯೇ, ನೀನು ನಮ್ಮಲ್ಲಿ ಅನುಗ್ರಹಬುದ್ಧಿಯುಳ್ಳವನಾಗಿ ದೇವತೆಗಳ ಹವಿಸ್ಸನ್ನು ಒಯ್ದು ಅವರಿಗೆ ಅದನ್ನು ಹಂಚುವ ಭಾರವನ್ನು ಪುನಃ ವಹಿಸು.

**ಅಗ್ನಿ**—ಎಲೈ ದೇವತೆಗಳೇ, ವೀರ್ಯವತ್ತಾದ, ಪ್ರಯಾಜ ಮತ್ತು ಅನುಯಾಜರೂಪಗಳಾದ ಹವಿಸ್ಸುಗಳನ್ನು ನನಗಾಗಿಯೇ ಪ್ರತ್ಯೇಕವಾಗಿ ಉದ್ದೇಶಿಸಿ ಇಟ್ಟುಬಿಡಿ. ಉದಕಗಳ ಸಾರವನ್ನೂ (ಘೃತ) ಓಷಧಿಗಳ ಸಾರವನ್ನೂ ನನಗೆ ಅರ್ಪಿಸಿರಿ. ಅಗ್ನಿರೂಪನಾದ ನನ್ನ ಆಯುಸ್ಸು ದೀರ್ಘಕಾಲವಿರುವಂತಾಗಲಿ.

**ದೇವತೆಗಳು**—ಎಲೈ ಅಗ್ನಿಯೇ, ಪ್ರಯಾಜಾನುಯಾಜರೂಪವಾದ ಹವಿಸ್ಸುಗಳನ್ನು ಪ್ರತ್ಯೇಕವಾಗಿ ನಿನ್ನನ್ನುದ್ದೇಶಿಸಿಯೇ ಇಡುತ್ತೇವೆ. ಹವಿಸ್ಸುಗಳಲ್ಲಿ ವೀರ್ಯವತ್ತಾದ ಭಾಗಗಳೆಲ್ಲವೂ ನಿನ್ನದಾಗಿಯೇ ಇರಲಿ. ಎಲೈ ಅಗ್ನಿಯೇ, ಈ ಯಜ್ಞವೂ ನಿನಗೇ ಅರ್ಪಿತವಾಗಲಿ. ನಾಲ್ಕುದಿಕ್ಕುಗಳೂ ನಮ್ರತೆಯಿಂದ ನಿನ್ನಮುಂದೆ ತಲೆಬಾಗಿ ನಿನಗೆ ನಮಸ್ಕಾರ ಮಾಡಲಿ ಎಂಬುದಾಗಿ ೧೦-೫೧ ನೇ ಸೂಕ್ತದ ಸಂಭಾಷಣೆಯ ವಿವರಣೆಯಾಗಿರುತ್ತದೆ. ಇದಾದನಂತರವೇ ಮುಂದಿನ ಸೂಕ್ತದಲ್ಲಿ ಅಗ್ನಿಯು ತಾನೇ ಯಜ್ಞಕ್ಕೆಲ್ಲಾ ಪ್ರಭುವೆಂದು ಪ್ರಕಟಿಸಿಕೊಳ್ಳುತ್ತಾನೆ. ಅಲ್ಲದೇ, ದೇವತೆಗಳಿಗೆ ತನ್ನ ಸಹಕಾರವನ್ನು ನೀಡುವುದಾಗಿಯೂ ತಕ್ಕ ಭರವಸೆಯನ್ನು ಕೊಡುತ್ತಾನೆ. ತಾನು ಯಾವರೀತಿ ಅವರಿಗೆ ಸಹಾಯ ಮಾಡಬಹುದೆಂದೂ ತಿಳಿಸಬೇಕಾಗಿ ಕೇಳಿಕೊಳ್ಳುತ್ತಾನೆ.

ಸೌಚೀಕೋಗ್ನಿಯ ವಿಷಯವಿರುವ ೫೧, ೫೨, ೫೩ ನೆಯ ಸೂಕ್ತಗಳ ವಿಷಯದಲ್ಲಿ ಶೌನಕಮಹರ್ಷಿಯು ತಮ್ಮ ಬೃಹದ್ದೇವತಾ ಎಂಬ ಗ್ರಂಥದ ಏಳನೆಯ ಅಧ್ಯಾಯದಲ್ಲಿ ಈರೀತಿ ಹೇಳಿರುತ್ತಾರೆ—

**ವೈಶ್ವಾನರೇ ಗೃಹಪತೌ ಯವಿಷ್ಠೇಽಗ್ನೌ ಚ ಪಾವಕೇ ।**
**ವಷಟ್ಕಾರೇಣ ವೃಕ್ಣೇಷು ಭ್ರಾತೃಷ್ವಗ್ನೌ ಸಹಃಸುತೇ ॥ ೬೧ ॥**

**ಅಪಚಕ್ರಾಮ ದೇವೇಭ್ಯಃ ಸೌಚೀಕೋಽಗ್ನಿರಿತಿ ಶ್ರುತಿಃ ।**

ವೈಶ್ವಾನರ, ಗೃಹಪತಿ, ಪಾವಕ ಮೊದಲಾದ ಹೆಸರುಗಳಿಂದ ಪ್ರಸಿದ್ಧನಾದ ಅಗ್ನಿಗೆ ಮೂರುಮಂದಿ ಸಹೋದರರಿದ್ದರು. ಭೂಪತಿ, ಭುವನಪತಿ, ಭೂತಾನಾಂ ಪತಿ ಎಂದು ಅವರ ಹೆಸರು. ಈ ಸಹೋದರರಲ್ಲಿ ಅಗ್ನಿಯೇ ಕಿರಿಯವನು. ಪೂರ್ವದಲ್ಲಿ ಅಗ್ನಿಯ ಮೂರುಮಂದಿ ಹಿರಿಯ ಸಹೋದರರು ಯಜ್ಞಾದಿಗಳಲ್ಲಿ ಯಜಮಾನರು ವಷಟ್ಕಾರಪೂರ್ವಕವಾಗಿ ದೇವತೆಗಳಿಗೆ ಅರ್ಪಿಸುವ ಆಹುತಿಗಳನ್ನು ಒಯ್ದು ಅವರಿಗೆ ತಲಪಿಸುತ್ತಿದ್ದರು. **ವಜ್ರೋ ವೈ ವಷಟ್ಕಾರಃ । ವಜ್ರಮೇವ ಭ್ರಾತೃವ್ಯೇಭ್ಯಃ ಪ್ರಹರತಿ ।** ಎಂಬ ಶ್ರುತಿವಾಕ್ಯದಂತೆ ವಷಟ್ಕಾರಾಹುತಿಗಳಲ್ಲಿ ಸ್ವಲ್ಪ ಹೆಚ್ಚುಕಡಿಮೆಯಾದರೂ ಅದು ವಜ್ರಾಯುಧದಂತೆ ಮಂತ್ರವನ್ನು ಉಚ್ಚರಿಸುವವರನ್ನೂ, ಹವಿಸ್ಸನ್ನು ಒಯ್ಯುವವರನ್ನೂ ಪ್ರಹರಿಸುವುದು. ಆದರಿಂದ ವಷಟ್ಕಾರಾಹುತಿಗಳನ್ನು ದೇವತೆಗಳ ಬಳಿಗೆ ಒಯ್ಯುತ್ತಿದ್ದ ಅಗ್ನಿಯ ಹಿರಿಯ ಸಹೋದರರು ವಷಟ್ಕಾರಪ್ರಹಾರದಿಂದ ಮೃತಿಯನ್ನೈದಿದರು. ಇದನ್ನು ಕಂಡ ಕಿರಿಯವನಾದ ಸೌಚೀಕೋಗ್ನಿಯು ತನಗೂ ಅದೇ ಗತಿಯೊದಗುವುದೆಂದು

ಹೆದರಿ ದೇವತೆಗಳ ಬಳಿಯಿಂದ ದೂರ ಓಡಿಹೋದನು. ಈ ವಿಷಯವು ಶ್ರುತಿವಾಕ್ಯಗಳಲ್ಲಿಯೇ ಹೇಳಿರುವುದು.

**ಸ ಪ್ರಾವಿಶದಪಕ್ರಮ್ಯ ಋತೂನಪೋ ವನಸ್ಪತೀನ್ || ೬೨ ||**

**ತತೋಽಸುರಾಃ ಪ್ರಾದುರಾಸನ್ನಸ್ವೇಽಗ್ನೌ ಹವ್ಯವಾಹನೇ |**
**ತೇಽಗ್ನಿಮೇವಾನ್ವವೈಕ್ಷಂತ ದೇವಾ ಹತ್ವಾಸುರಾನ್ಮೃಧಿ || ೬೩ ||**

**ತಂ ತು ದೂರಾದ್ಯಮುಶ್ಚೈವ ವರುಣಶ್ಚಾನ್ವಪಶ್ಯತಾಂ |**
**ಉಭಾವೇನಂ ಸಮಾದಾಯ ದೇವಾನೇವಾಭಿಜಗ್ಮತುಃ || ೬೪ ||**

ಅಗ್ನಿಯು ದೇವತೆಗಳನ್ನು ಬಿಟ್ಟು ಓಡಿಹೋಗಿ ಋತುಗಳು, ವೃಕ್ಷಗಳು ಮತ್ತು ನೀರು ಇವುಗಳಲ್ಲಿ ಪ್ರವೇಶಿಸಿ ಯಾರಿಗೂ ಕಾಣದಂತೆ ಅಡಗಿಕೊಂಡಿದ್ದನು. ಅಗ್ನಿಯು ಹೊರಟುಹೋದಬಳಿಕ ದೇವತೆಗಳಿಗೂ ಅಸುರರಿಗೂ ಯುದ್ಧವು ಪ್ರಾಪ್ತವಾಗಿ ದೇವತೆಗಳು ಅಸುರರನ್ನು ಯುದ್ಧದಲ್ಲಿ ಕೊಂದು ಜಯಶಾಲಿಗಳಾದರು. ಅನಂತರ ತಮ್ಮ ಬಳಿಗೆ ಹವ್ಯಾದಿಗಳನ್ನು ಒಯ್ಯುತ್ತಿದ್ದ ಅಗ್ನಿಯನ್ನೂ ಕಾಣದೆ ಎಲ್ಲಾ ಸ್ಥಳಗಳಲ್ಲಿ ಹುಡುಕುತ್ತಿದ್ದರು. ಆಗ ದೇವತೆಗಳ ಮಧ್ಯದಲ್ಲಿದ್ದ ಯಮ ಮತ್ತು ವರುಣರು ಅಗ್ನಿಯಿರುವ ಸ್ಥಳವನ್ನು ಕಂಡು ಅವನನ್ನು ತಮ್ಮ ಜತೆಯಲ್ಲಿಯೇ ಕರೆದುಕೊಂಡು ದೇವತೆಗಳ ಬಳಿಗೆ ಹೋದರು,

**ದೃಷ್ಟ್ವಾ ದೇವಾಸ್ತ್ವೇನಮೂಚುರಗ್ನೇ ಹವ್ಯಾನಿ ನೋ ವಹ |**
**ವರಾನ್ ಗೃಹಾಣ ಚಾಸ್ಮತ್ತಶ್ಚಿತ್ರಭಾನೋ ಭಜಸ್ವ ನಃ |**
**ದೇವಯಾನಾನ್ ಸುಗಾನ್ ಪಥಃ ಕುರುಷ್ವ ಸುಮನಾಃ ಸ್ವಯಂ ||೬೫||**

**ಪ್ರತ್ಯುವಾಚ ತಾನಗ್ನಿರ್ವಿಶ್ವೇ ದೇವಾ ಯದೂಚ ಮಾಂ |**
**ತತ್ಕರಿಷ್ಯೇ ಜುಷಂತಾಂ ತು ಹೋತ್ರಂ ಪಂಚ ಜನಾ ಮಮ || ೬೬ ||**

ಅಗ್ನಿಯು ತಮ್ಮ ಬಳಿಗೆ ಬಂದುದನ್ನು ದೇವತೆಗಳು ಕಂಡು—ಎಲೈ ಅಗ್ನಿಯೇ, ನೀನು ಚಿತ್ರವಿಚಿತ್ರವಾದ ಕಾಂತಿಯಿಂದ ಬೆಳಗುವವನು. ಇನ್ನು ಮೇಲೆ ನೀನು ನಮಗೆ ಯಜ್ಞದಲ್ಲಿ ಯಜಮಾನರು ಅರ್ಪಿಸುವ ಹವಿರಾದಿಗಳನ್ನು ತಂದೊಯ್ಯಬೇಕು. ನಿನಗೆ ಬೇಕಾದ ವರಗಳನ್ನು ಕೇಳಿಕೋ, ಕೊಡುವೆವು ಎನಲು, ಅಗ್ನಿಯು—ಎಲೈ ದೇವತೆಗಳೇ, ನೀವು ಹೇಳುವಂತೆಯೇ ಮಾಡುತ್ತೇನೆ. ಆದರೆ ಪಂಚಜನರು ನನ್ನ ಹೋತೃತ್ವವನ್ನು ಎಂದರೆ (ಪುರೋಹಿತತ್ವವನ್ನು) ಅಂಗೀಕರಿಸಿ ನನಗೆ ಸಹಾಯಕರಾಗಬೇಕು ಎಂದನು.

**ಶಾಲಾಮುಖ್ಯಃ ಪ್ರಣೀತಶ್ಚ ಪುತ್ರೋ ಗೃಹಪತೇಶ್ಚ ಯಃ |**
**ಉತ್ತರೋ ದಕ್ಷಿಣಶ್ಚಾಗ್ನಿರೇತೇ ಪಂಚ ಜನಾಃ ಸ್ಮೃತಾಃ || ೬೭ ||**

ಇಲ್ಲಿ ಪಂಚಜನರು ಯಾರು ಎಂಬ ವಿಷಯದಲ್ಲಿ ವಿವರಣೆಯು ಅವಶ್ಯಕವಾದ್ದರಿಂದ ಅದನ್ನು ಹೇಳುವರು. ಈ ವಿಷಯದಲ್ಲಿ ಅಭಿಪ್ರಾಯಭೇದಗಳಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ವಿವರಿಸಲಾಗುವುದು. ಸ್ಥಾನಭೇದಗಳಿಂದ ಅಗ್ನಿಯು ಐದು ವಿಧವೆಂದು ಪ್ರತೀತಿ ಇರುವುದು. (೧) ಯಾಗಶಾಲೆಯ ದ್ವಾರಸಮೀಪದಲ್ಲಿ ಸ್ಥಾಪಿತವಾಗಿರುವ ಅಗ್ನಿ; (೨) ಅಗ್ನಿಮಥನಸ್ಥಾನದಿಂದ ಉತ್ತರವೇದಿಯ ಬಳಿಗೆ ವಿಧ್ಯುಕ್ತವಾಗಿಯೂ, ಮಂತ್ರಪೂರ್ವಕವಾಗಿಯೂ ಕರೆತರಲ್ಪಡುವ ಯಜ್ಞವೇದಿಯಲ್ಲಿ ಪ್ರತಿಷ್ಠಾಪಿತನಾಗುವ ಅಗ್ನಿ; (೩) ಯಜಮಾನರ ಗೃಹ ಅಥವಾ ಯಜ್ಞಗೃಹ

ದಲ್ಲಿ ಸ್ಥಾಪಿತವಾಗಿರುವ ಗೃಹಪತಿ (ಗೃಹಕ್ಕೆ ಪಾಲಕನು) ಎಂಬ ಅಗ್ನಿ ; (೪) ಉತ್ತರವೇದಿಯಲ್ಲಿರುವ ಆಹವನೀಯಾಗ್ನಿ ; (೫) ದಕ್ಷಿಣಾಗ್ನಿ ಎಂಬ ಅಗ್ನಿ. ಈ ಐದು ವಿಧವಾದ ಅಗ್ನಿಗಳನ್ನೇ ಪಂಚಜನರೆಂದು ಕೆಲವರು ಹೇಳುವರು.

**ಮನುಷ್ಯಾಃ ಪಿತರೋ ದೇವಾ ಗಂಧರ್ವೋರಗರಾಕ್ಷಸಾಃ ।**
**ಗಂಧರ್ವಾಃ ಪಿತರೋ ದೇವಾ ಅಸುರಾ ಯಕ್ಷರಾಕ್ಷಸಾಃ ॥ ೭೮ ॥**

**ಯಾಸ್ಕೌಪಮನ್ಯವಾವೇತಾನಾಹತುಃ ಪಂಚ ವೈ ಜನಾನ್ ।**

ಮನುಷ್ಯರು, ಪಿತೃಗಳು, ದೇವತೆಗಳು, ಗಂಧರ್ವರು, ಸರ್ಪಗಳು, ರಾಕ್ಷಸರು—ಅಥವಾ ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ಯಕ್ಷರಾಕ್ಷಸರು ಎಂಬ ಐದು ವಿಧ ಸಂಗಡಗಳೇ ಪಂಚಜನರು ಎಂದು ಯಾಸ್ಕ ಮತ್ತು ಔಪಮನ್ಯವ ಎಂಬ ಆಚಾರ್ಯರ ಮತವು.

**ನಿಷಾದಪಂಚಮಾನ್ ವರ್ಣಾನ್ಮನ್ಯಂತೇ ಶಾಕಟಾಯನಃ ॥ ೭೯ ॥**
**ಋತ್ವಿಜೋ ಯಜಮಾನಂ ಚ ಶಾಕಪೂಣಿಸ್ತು ಮನ್ಯತೇ ।**
**ಹೋತಾಧ್ವರ್ಯುಸ್ತಥೋದ್ಗಾತಾ ಬ್ರಹ್ಮಾ ಚೇತಿ ವದಂತಿ ತಾನ್ ॥ ೮೦ ॥**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ನಿಷಾದ (ಬೇಡರು) ಎಂಬ ಐದು ಜಾತಿಯ ಜನರಿಗೆ ಪಂಚಜನರೆಂದು ಹೆಸರು ಎಂದು ಶಾಕಟಾಯನ ಎಂಬ ಆಚಾರ್ಯರ ಮತವು. ಹೋತೃ, ಅಧ್ವರ್ಯು, ಉದ್ಗಾತೃ, ಬ್ರಹ್ಮಾ, ಯಜಮಾನ ಎಂಬ ಯಜಮಾನಸಹಿತರಾದ ನಾಲ್ಕುಮಂದಿ ಋತ್ವಿಕ್ಕುಗಳೇ ಪಂಚಜನರೆಂದು ಶಾಕಪೂಣಿ ಎಂಬುವರ ಮತವು.

**ಚಕ್ಷುಃ ಶ್ರೋತ್ರಂ ಮನೋ ವಾಕ್ ಚ ಪ್ರಾಣಶ್ಚೇತ್ಯಾತ್ಮವಾದಿನಃ ।**
**ಗಂಧರ್ವಾಪ್ಸರಸೋ ದೇವಾ ಮನುಷ್ಯಾಃ ಪಿತರಸ್ತಥಾ ॥ ೮೧ ॥**

**ಸರ್ಪಾಶ್ಚ ಬ್ರಾಹ್ಮಣೇ ಚೈವ ಶ್ರೂಯಂತೇ ಹ್ಯೈತರೇಯಕೇ ।**
**ಯೇ ಚಾನ್ಯೇ ಪೃಥಿವೀಜಾತಾ ದೇವಾಶ್ಚಾನ್ಯೇಽಥ ಯಜ್ಞಿಯಾಃ ॥ ೮೨ ॥**

ಚಕ್ಷುಃ (ಕಣ್ಣು) ಶ್ರೋತ್ರಂ (ಕಿವಿ) ಮನಸ್ಸು, ವಾಕ್ (ಮಾತು) ಪ್ರಾಣ ಎಂಬ ಈ ಐದೂ ಪಂಚಜನರೆಂದು ಆತ್ಮವಾದಿಗಳು ಎಂದರೆ ವೇದಾಂತಿಗಳು ಹೇಳುವರು ; ಗಂಧರ್ವರು ಮತ್ತು ಅಪ್ಸರಸ್ಸುಗಳು, ದೇವತೆಗಳು, ಮನುಷ್ಯರು, ಪಿತೃಗಳು, ಸರ್ಪಗಳು ಎಂಬ ಈ ಐದು ಜಾತಿಗಳೂ ಪಂಚಜನರೆಂದು ಪ್ರಸಿದ್ಧಿಯು ಎಂದು ಐತರೇಯಬ್ರಾಹ್ಮಣದಲ್ಲಿ ಹೇಳಿರುವುದು ಇದಲ್ಲದೆ ಭೂಮಿಯಮೇಲೆ ಉತ್ಪನ್ನರಾಗಿರುವ ಯಜ್ಞಾರ್ಹರಾದ ಯಾವ ಐದು ಸಂಗಡದ ಜನರಾಗಲೀ ಅಥವಾ ಮೇಲೆ ಹೇಳಿದ ಪಟ್ಟಿಯಲ್ಲಿಲ್ಲದ ಇತರ ದೇವತೆಗಳಾಗಲಿ ಪಂಚಜನರೆಂದು ಪರಿಗಣಿಸಲ್ಪಡಬಹುದು.

**ಆಯುರಸ್ತು ಚ ನೋ ದೀರ್ಘಂ ಹವೀಂಷಿ ವಿವಿಧಾನಿ ಚ ।**
**ಅರಿಷ್ಟಿಃ ಪೂರ್ವಜಾನಾಂ ಚ ಭ್ರಾತೄಣಾಮಧ್ವರೇಽಧ್ವರೇ ॥ ೮೩ ॥**

**ಪ್ರಯಾಜಾಶ್ಚಾನುಯಾಜಾಶ್ಚ ಘೃತಂ ಸೋಮೋ ಚ ಯಃ ಪಶುಃ ।**
**ಮದ್ದೈವತ್ಯಾನಿ ವೈ ಸಂತು ಯಜ್ಞೋ ಮದ್ದೇವತೋಽಸ್ತು ಚ ॥ ೮೪ ॥**

ಅಗ್ನಿಯು ತನಗೆ ಬೇಕಾದ ವರಗಳನ್ನು ಕೇಳುತ್ತಾ ಈ ರೀತಿ ಮುಂದುವರೆದು ಹೇಳಿದನು— ನಾನು ಬಹಳಕಾಲ ಜೀವಿಸುವಂತಾಗಲಿ ಎಂದರೆ ದೀರ್ಘಾಯುಸ್ಸು ಲಭಿಸಲಿ ಮತ್ತು ನನಗೆ ನಾನಾ ವಿಧ ಹವಿಸ್ಸುಗಳು ಅರ್ಪಿಸಲ್ಪಡಬೇಕು. ನನ್ನ ಜ್ಯೇಷ್ಠ ಸಹೋದರರಿಗೆ ಅಪಾಯ ಸಂಭವಿಸದಂತೆ ಎಲ್ಲಾ ಯಜ್ಞಗಳಲ್ಲಿಯೂ ರಕ್ಷಣೆಯು ದೊರಕಬೇಕು. ಆಹುತಿಗಳನ್ನರ್ಪಿಸುವಾಗ ನನಗೆ ಮೊದಲು ಅರ್ಪಿತವಾಗುವ ಪ್ರಯಾಜಾಹುತಿಗಳೂ, ಕೊನೆಯಲ್ಲಿ ಅರ್ಪಿತವಾಗುವ ಅನೂಯಾಜಾಹುತಿಗಳೂ, ಘೃತವೂ (ಆಜ್ಯ ಅಥವಾ ತುಪ್ಪ) ಸೋಮಯಾಗದಲ್ಲಿ ಅರ್ಪಿತವಾಗುವ ಪಶುವೂ ಇವೆಲ್ಲವೂ ನನಗೇ ಸೇರಬೇಕು ಮತ್ತು ಇವುಗಳಿಗೆಲ್ಲಾ ನಾನೇ ದೇವತೆಯಾಗಿರಬೇಕು- ಯಜ್ಞದಲ್ಲಿಯೂ ಸಹ ನಾನೇ ದೇವತೆಯಾಗಿ ನನ್ನ ಪ್ರಭಾವವೇ ಹೆಚ್ಚಾಗಿರಬೇಕು ಎಂದು ತನಗೆ ಬೇಕಾದ ವರಗಳನ್ನು ಕೇಳಿದನು.

**ತವಾಗ್ನೇ ಯಜ್ಞ ಇತ್ಯೇತೇತ್ಪ್ರತ್ಯಾರ್ಥಿ ಸ್ವಿಷ್ಟಕೃಚ್ಚ ಸಃ |**
**ಯಸ್ಯ ತ್ರೀಣಿ ಸಹಸ್ರಾಣಿ ನವ ತ್ರೀಣಿ ಶತಾನಿ ಚ || ೭೫ ||**

**ತ್ರಿಂಶಚ್ಚೈವ ತು ದೇವಾನಾಂ ಸರ್ವಾನೇವ ವರಾನ್ದದುಃ |**

ಹಾಗೆಯೇ ಆಗಲೆಂದು ದೇವತೆಗಳು ಒಪ್ಪಿದರು. ಎಲೈ ಅಗ್ನಿಯೇ, ಈ ಯಜ್ಞವು ನಿನಗೆ ಸೇರಲಿ ಎಂದರೆ ನೀನೇ ಅದರಲ್ಲಿ ಪ್ರಧಾನಪಾತ್ರವನ್ನು ವಹಿಸಿ ಅದನ್ನು ಸಾಂಗವಾಗಿ ನೆರವೇರಿಸು ಎಂದು ಮೂರುಸಾವಿರದ ಮುನ್ನೂರ ಮೂವತ್ತೊಂಭತ್ತು ಮಂದಿ ದೇವತೆಗಳೆಲ್ಲರೂ ಸೇರಿ ಅಗ್ನಿಗೆ ವರವನ್ನು ಕೊಟ್ಟರು.

**ತತೋಽಗ್ನಿಃ ಸುಮನಾಃ ಪ್ರೀತೋ ವಿಶ್ವೈರ್ದೇವೈಃ ಪುರಸ್ಕೃತಃ || ೭೬ ||**

**ವಿಧೂಯಾಂಗಾನಿ ಯಜ್ಞೇಷು ಚಕ್ರೇ ಹೋತ್ರಮತಂದ್ರಿತಃ |**
**ಭ್ರಾತೃಭಿಃ ಸಹಿತಃ ಪ್ರೀತೋ ದಿವ್ಯಾತ್ಮಾ ಹವ್ಯವಾಹನಃ || ೭೭ ||**

ಅನಂತರ ಸಮಸ್ತ ದೇವತೆಗಳಿಂದಲೂ ಗೌರವಿಸಲ್ಪಟ್ಟು ಆ ಅಗ್ನಿಯು ಮನಸ್ಸಿನಲ್ಲಿ ಸಮಾಧಾನವನ್ನು ಹೊಂದಿ ಸಂತುಷ್ಟನಾದನು. ಯಾವ ಆತಂಕಗಳೂ ಇಲ್ಲದೆ ಪ್ರೀತಮನಸ್ಕನಾಗಿಯೂ ಹವ್ಯವನ್ನು ವಹಿಸತಕ್ಕವನಾಗಿಯೂ ಇರುವ ಆ ಅಗ್ನಿಯು ತನ್ನ ಸಹೋದರರೊಡನೆ ಸಂತೋಷದಿಂದಿರುತ್ತಾ ಯಜ್ಞಗಳ ಸಮಸ್ತ ಕರ್ಮಾಂಗಗಳಲ್ಲಿಯೂ ಹೋತೃತ್ವದನ್ನು ಎಂದರೆ ಯಜ್ಞನಿರ್ವಹಣೆಯನ್ನು ವಹಿಸುತ್ತಿದ್ದನು.

**ತಸ್ಯಾಸ್ಥಿ ದೇವದಾರ್ವಾಸೀನ್ಮೇದೋ ಮಾಂಸಂ ಚ ಗುಗ್ಗುಲುಃ |**
**ಸುಗಂಧಿತೇಜನಂ ಸ್ನಾಯು ಶುಕ್ರಂ ರಜತಕಾಂಚನೇ || ೭೮ ||**

**ರೋಮಾಣಿ ಕಾಶಾಃ ಕೇಶಾಸ್ತು ಕುಶಾಃ ಕೂರ್ಮಾ ನಖಾನಿ ಚ |**
**ಅಂತ್ರಾಣಿ ಚೈವಾಪ್ಯವಕಾ ಮಜ್ಜಾ ಸಿಕತಶರ್ಕರಾಃ || ೭೯ ||**

**ಅಸೃಕ್ ಪಿತ್ತಂ ಚ ವಿವಿಧಾ ಧಾತವೋ ಗೈರಿಕಾದಯಃ |**
**ಏವಮಗ್ನಿಶ್ಚ ದೇವಾಶ್ಚ ಸೂಕ್ತೈರ್ಮಹದಿತಿ ತ್ರಿಭಿಃ || ೮೦ ||**

ಯಜ್ಞಕರ್ಮನಿರ್ವಾಹಕನಾದ ಅಗ್ನಿಯ ಅಸ್ಥಿಯು (ಮೂಳೆಯು) ದೇವದಾರು ವೃಕ್ಷವಾಯಿತು. ಅವನ ಕೊಬ್ಬು (ಮೇದಸ್ಸು) ಮತ್ತು ಮಾಂಸವು ಗುಗ್ಗುಲುವಾಗಿ (ಸುಗಂಧದ್ರವ್ಯವಾಗಿ) ಪರಿವರ್ತಿತವಾಯಿತು. ಅವನ ಸ್ನಾಯುಗಳು

(ನರಗಳು) ಸುಗಂಧಯುಕ್ತವಾದ ತೇಜನವೆಂಬ ದರ್ಭೆಗಳಾದವು. ಅವನ ರೇತಸ್ಸು ಬೆಳ್ಳಿ ಮತ್ತು ಚಿನ್ನವಾಯಿತು, ರೋಮಗಳು (ಕೂದಲುಗಳು) ಕಾಶವೆಂಬ ಹುಲ್ಲಾಯಿತು. ಶಿರಸ್ಸಿನ ಕೇಶಗಳು ಕುಶವೆಂಬ ದರ್ಭೆಯಾಯಿತು; ಉಗುರುಗಳು ಆಮೆಗಳಾದವು, ಕರಳುಗಳು (entrails) ಅವಕ ಎಂಬ ಬಳ್ಳಿಗಳಾದವು. ಕೊಬ್ಬು, ಮರಳು ಮತ್ತು ಮಣ್ಣಾಯಿತು, ರಕ್ತ ಮತ್ತು ಪಿತ್ತವು ನಾನಾವಿಧ ಗೈರಿಕಾದಿಧಾತುಗಳೂ ಲೋಹಗಳೂ ಆದವು. ಈರೀತಿಯಾಗಿ ದೇವತೆಗಳೂ ಅಗ್ನಿಯೂ ಸೇರಿ ನಡೆಸಿದ ಸಂಭಾಷಣೆಯು ಮಹತ್ತತ್ ಎಂದು ಮೊದಲಾಗುವ ಮೂರು ಸೂಕ್ತಗಳಲ್ಲಿ (೫೧-೫೩ ನೇ ಸೂಕ್ತಗಳಲ್ಲಿ) ವಿವೃತವಾಗಿದೆ.

ಸಾಯಣಭಾಷ್ಯಂ

ಮಹತ್ತದಿತಿ ನವರ್ಚಂ ನವಮಂ ಸೂಕ್ತಂ। ವಜ್ರಭೂತೇನ ವಷಟ್ಕಾರೇಣ ದೇವಾನಾಂ ಹವಿರ್ವಹನೇನ ಚ ಹತೇಷು ಭ್ರಾತೃಷು ಕನಿಷ್ಠಃ ಸೌಚೀಕೋ ನಾಮಾಗ್ನಿರ್ವಷಟ್ಕಾರಹವಿರ್ವಹನಾಭ್ಯಾಂ ಭೀತೋ ದೇವೇಭ್ಯೋ ನಿರ್ಗತ್ಯಾಪಃ ಪ್ರಾವಿಶತ್। ಸ ಚ ಮತ್ಸ್ಯೈಃ ಪ್ರದರ್ಶಿತಃ ಸನ್ನನ್ವಿಷ್ಯಾಗತೈರ್ದೇವೈಃ ಸಹೇದಮಾದಿಸೂಕ್ತತ್ರಯೇಣ ಸಂವಾದಂ ಕೃತವಾನ್। ಅಸ್ಯ ಸೂಕ್ತಸ್ಯ ದ್ವಿತೀಯಾದ್ಯಯುಜಶ್ಚತಸ್ರೋ ವಿಶ್ವೇ ದೇವಾಃ ಶಾಸ್ತನೇತಿ ಷಡೃಚಮುತ್ತರಸೂಕ್ತಂ ಚೇತಿ ದಶರ್ಚೋಽಗ್ನಿವಾಕ್ಯಂ। ಅಯುಜಃ ಪ್ರಥಮಾದ್ಯಾಃ ಪಂಚರ್ಚೋ ಯನ್ಮೈಚ್ಛಾಮ ಮನಸೇತ್ಯೇಕಾದಶರ್ಚಮುತ್ತರಸೂಕ್ತಂ ಚ ದೇವಾನಾಂ ವಾಕ್ಯಂ। ತತ್ರ ತದದ್ಯ ವಾಚಃ ಪ್ರಥಮಂ ಮಸೀಯೇತಿ ದ್ವ್ಯೃಚಸ್ತ್ವಗ್ನೇರ್ವಾಕ್ಯಂ। ಅತೋಽಗ್ನಿವಾಕ್ಯೇಷು ದೇವಾ ದೇವತಾಗ್ನಿರ್ಋಷಿಃ। ದೇವೋಕ್ತಿಷ್ವಗ್ನಿರ್ದೇವತಾ ದೇವಾ ಋಷಯಃ। ಅನಾದೇಶಪರಿಭಾಷಯೇದಮುತ್ತರಂ ಚ ದ್ವೇ ತ್ರಿಷ್ಟುಭೇ ವಿಶೇಷಾನಭಿಧಾನಾತ್। ತಥಾ ಚಾನುಕ್ರಾಂತಂ। ವಷಟ್ಕಾರೇಣ ವೃಕ್ಣೇಷು ಭ್ರಾತೃಷು ಸೌಚೀಕೋಽಗ್ನಿರಪಃ ಪ್ರವಿಶ್ಯ ದೇವೈಃ ಸಮವದದುತ್ತರೈಸ್ತ್ರಿಭಿರ್ಮಹತ್ತನ್ನವ ತತ್ರ ಯುಜೋಽಗ್ನಿವಾಕ್ಯಂ ವಿಶ್ವ ಇತ್ಯುತ್ತರಂ ಷಟ್ಕಮಯುಜೋ ದೇವಾನಾಂ ಯನ್ಮೈಚ್ಛಾಮೇತ್ಯುತ್ತರಂ ಚೈಕಾದಶಕಂ ತದದ್ಯೇತಿ ತು ದ್ವ್ಯೃಚೋಽಗ್ನೇರಿತಿ॥ ಗತೋ ವಿನಿಯೋಗಃ॥ ಸೂಕ್ತತ್ರಯೋಕ್ತಾರ್ಥೇ ತೈತ್ತಿರೀಯಬ್ರಾಹ್ಮಣಂ। ಅಗ್ನೇಸ್ತ್ರಯೋ ಜ್ಯಾಯಾಂಸೋ ಭ್ರಾತರ ಆಸನ್ ತೇ ದೇವೇಭ್ಯೋ ಹವ್ಯಂ ವಹಂತಃ ಪ್ರಾಮೀಯಂತ ಸೋಽಗ್ನಿರಬಿಭೇದಿತ್ಥಂ ವಾವ ಸ್ಯ ಅರ್ತಿಮಾರಿಷ್ಯತೀತಿ ಸ ನಿಲಾಯತ ಸೋಽಪಃ ಪ್ರಾವಿಶತ್ತಂ ದೇವಾಃ ಪ್ರೈಷಮೈಚ್ಛನ್ನಿತ್ಯಾದಿ। ತೈ. ಸಂ. ೨-೬-೬। ತತ್ರಾದ್ಯಯಾ ದೇವಾ ಅಗ್ನಿಮಾಹುಃ॥

ಅನುವಾದವು—**ಮಹತ್ತತ್** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತದಲ್ಲಿ ಒಂದು ಉಪಾಖ್ಯಾನವು ಉಕ್ತವಾಗಿರುವುದು—ವಜ್ರಾಯುಧ ಸದೃಶವಾದ ವಷಟ್ಕಾರಾಹುತಿಗಳಿಂದ ದೇವತೆಗಳಿಗೆ ಹವಿಸ್ಸನ್ನು ವಹಿಸುತ್ತಿದ್ದ ಅಗ್ನಿಯ ಮೂರುಮಂದಿ ಜ್ಯೇಷ್ಠ ಸಹೋದರರು ಮೃತರಾಗಲು ಕಿರಿಯವನಾದ ಸೌಚೀಕಾಗ್ನಿಯು, ಇದನ್ನು ಕಂಡು ಹೆದರಿ ವಷಟ್ಕಾರಪೂರ್ವಕವಾದ ಆಹುತಿಯನ್ನು ದೇವತೆಗಳ ಬಳಿಗೆ ಒಯ್ಯುವುದು ಬಹಳ ಅಪಾಯಕರವಾದ ಕೆಲಸವೆಂದು ತಿಳಿದು ಹೇಳದೇ ಕೇಳದೆ ದೇವತೆಗಳ ಬಳಿಯಿಂದ ಓಡಿಹೋಗಿ ನೀರಿನಲ್ಲಿ ಪ್ರವೇಶಿಸಿ ಅವಿತುಕೊಂಡಿದ್ದನು. ಅಗ್ನಿಯು ಎಲ್ಲಿಗೆ ಹೋದನೆಂದು ದೇವತೆಗಳು ಹುಡುಕುತ್ತಿರುವಾಗ ನೀರಿನಲ್ಲಿದ್ದ ಒಂದು ಮೀನು ಅಗ್ನಿಯು ನೀರಿನಲ್ಲಿ ಅಡಗಿಕೊಂಡಿರುವನೆಂದು ದೇವತೆ

ಗಳಿಗೆ ಹೇಳಿತು. ಅನಂತರ ದೇವತೆಗಳು ನೀರಿನ ಬಳಿಗೆ ಬಂದು ಅಗ್ನಿಯನ್ನು ಕಂಡು ನಡೆಸಿದ ಸಂಭಾಷಣೆಯೇ ಈ ಸೂಕ್ತದಲ್ಲಿಯೂ ಮುಂದಿನ ಎರಡು ಸೂಕ್ತಗಳಲ್ಲಿಯೂ ವಿವರಿಸಲಾಗಿದೆ. ಈ ಸೂಕ್ತದಲ್ಲಿ ೨, ೪, ೬, ೮ ಎಂಬ ಸಮ ಸಂಖ್ಯೆಯ ಋಕ್ಕುಗಳೂ ಮುಂದಿನ ಸೂಕ್ತದ ವಿಶ್ವೇದೇವಾಃ ಶಾಸ್ತನ ಎಂದು ಮೊದಲಾಗುವ ಆರು ಋಕ್ಕುಗಳೂ ಒಟ್ಟು ೧೦ ಋಕ್ಕುಗಳೂ ಅಗ್ನಿಯ ವಾಕ್ಯವು. ೧, ೩, ೫, ೭, ೯ ಎಂಬ ಅಸಮಸಂಖ್ಯೆಯ ೫ ಋಕ್ಕುಗಳೂ ಯಮೈಚ್ಛಾಮ ಎಂಬ ೫೩ ನೇ ಸೂಕ್ತದ ೪-೫ ನೇ ಋಕ್ಕುಗಳನ್ನು ಬಿಟ್ಟು ಉಳಿದ ೯ ಋಕ್ಕುಗಳು, ಒಟ್ಟು ೧೪ ಋಕ್ಕುಗಳು ದೇವತೆಗಳ ವಾಕ್ಯವು. ೫೩ ನೇ ಸೂಕ್ತದ ೪-೫ ನೇ ಋಕ್ಕುಗಳು ಅಗ್ನಿಯ ವಾಕ್ಯವು. ಆದ್ದರಿಂದ ಅಗ್ನಿವಾಕ್ಯಗಳಿರುವ ಋಕ್ಕುಗಳಿಗೆ ಅಗ್ನಿಯೇ ಋಷಿಯು, ದೇವತೆಗಳು ದೇವತೆಯು; ದೇವತೆಗಳ ವಾಕ್ಯವಿರುವ ಋಕ್ಕುಗಳಿಗೆ ದೇವತೆಗಳು ಋಷಿಯು, ಅಗ್ನಿಯು ದೇವತೆಯು. ಈ ಸೂಕ್ತ ಮತ್ತು ಮುಂದಿನ ಸೂಕ್ತದ ಋಕ್ಕುಗಳು ತ್ರಿಷ್ಟುಪ್ ಛಂದಸ್ಸವು. ಅನುಕ್ರಮಣಿಕೆಯಲ್ಲಿ—**ವಷಟ್ಕಾರೇಣ ವೃಕ್ಣೇಷು ಭ್ರಾತೃಷು ಸೌಚೀಕೋಽಗ್ನಿರಪಃ ಪ್ರವಿಶ್ಯ ದೇವೈಃ ಸಮವದದುತ್ತರೈಸ್ತ್ರಿಭಿರ್ಮಹತ್ತನ್ನವ ತತ್ರ ಯುಜೋಽಗ್ನಿವಾಕ್ಯಂ ವಿಶ್ವ ಇತ್ಯುತ್ತರಂ ಷಟ್ಕಮಯುಜೋ ದೇವಾನಾಂ ಯಮೈಚ್ಛಾಮೇತ್ಯುತ್ತರಂ ಜೈಕಾದಶಕಂ ತೆಪದ್ಯೇತಿ ತು ದ್ವ್ಯೃಚೋಽಗ್ನೇಃ** । ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ಈ ಮೂರು ಸೂಕ್ತಗಳಲ್ಲಿ ಹೇಳಿರುವ ವಿಷಯವು ತೈತ್ತಿರೀಯ ಸಂಹಿತೆಯ—**ಅಗ್ನೇಸ್ತ್ರಯೋ ಜ್ಯಾಯಾಗ್ಂಸೋ ಭ್ರಾತರ ಆಸನ್ತೇ ದೇವೇಭ್ಯೋ ಹವ್ಯಂ ವಹನ್ತಃ ಪ್ರಾಮೀಯಂತ ಸೋಽಗ್ನಿರಬಿಭೇದಿತ್ಥಂ ವಾವ ಸ್ಯ ಆರ್ತಿಮಾರಿಷ್ಯತೀತಿ ಸ ನಿಲಾಯತ ಸೋಽಪಃ ಪ್ರಾವಿಶತ್ತಂ ದೇವತಾಃ ಪ್ರೈಷಮೈಚ್ಛನ್** । ಎಂದು ಮೊದಲಾಗುವ ವಾಕ್ಯಗಳಲ್ಲಿ (ತೈ. ಸಂ. ೨-೬-೬) ತಿಳಿಸಲಾಗಿದೆ.ಮಹತ್ತತ್ ಎಂಬ ಪ್ರಕೃತಸೂಕ್ತದ ಮೊದಲನೆಯ ಋಕ್ಕಿನಲ್ಲಿ ದೇವತೆಗಳು ಅಗ್ನಿಯನ್ನುದ್ದೇಶಿಸಿ ಹೇಳುವರು.

## ಸೂಕ್ತ—೫೧

ಮಂಡಲ—೧೦ ॥ ಅನುವಾಕ—೪ ॥ ಸೂಕ್ತ—೫೧ ॥
ಅಷ್ಟಕ—೮ ॥ ಅಧ್ಯಾಯ—೧ ॥ ವರ್ಗ—೧೦, ೧೧॥
**ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥**
**ಋಷಿಃ—೧, ೩, ೫, ೭, ೯. ದೇವಾಃ । ೨, ೪, ೬, ೮. ಅಗ್ನಿಃ ಸೌಚೀಕಃ ॥**
**ದೇವತಾ—೧, ೩, ೫, ೭, ೯. ಅಗ್ನಿಃ ಸೌಚೀಕಃ । ೨, ೪ .೬, ೮. ದೇವಾಃ ॥**
**ಛಂದಃ—ತ್ರಿಷ್ಟುಪ್ ॥**

**ಸಂಹಿತಾಪಾಠಃ**

**ಮಹತ್ತದುಲ್ಬಂ ಸ್ಥವಿರಂ ತದಾಸೀದ್ಯೇನಾವಿಷ್ಟಿತಃ ಪ್ರವಿವೇಶಿಥಾಪಃ ।**
**ವಿಶ್ವಾ ಅಪಶ್ಯದ್ಬಹುಧಾ ತೇ ಅಗ್ನೇ ಜಾತವೇದಸ್ತನ್ವೋ ದೇವ ಏಕಃ ॥ ೧ ॥**

**ಪದಪಾಠಃ**

**ಮಹತ್ । ತತ್ । ಉಲ್ಬಂ । ಸ್ಥವಿರಂ । ತತ್ । ಆಸೀತ್ । ಯೇನ । ಆऽವಿಷ್ಟಿತಃ । ಪ್ರऽವಿವೇಶಿಥ । ಅಪಃ ॥**

**ವಿಶ್ವಾಃ । ಅಪಶ್ಯತ್ । ಬಹುಧಾ । ತೇ । ಅಗ್ನೇ । ಜಾತಽವೇದಃ । ತನ್ವಃ । ದೇವಃ । ಏಕಃ ॥ ೧ ॥**

ಸಾಯಣಭಾಷ್ಯಂ

**ತದುಲ್ಬಂ ವಕ್ಷ್ಯಮಾಣಂ ಪ್ರಾವರಣಂ ಮಹತ್ ಸ್ಥವಿರಮತ್ಯಂತಂ ಸ್ಥೂಲಂ ಚ ತದಾಸೀತ್ ಯೇನೋಲ್ಬೇನಾವಿಷ್ಟಿತ ಆವೇಷ್ಟಿತಃ ಸನ್ ಹೇ ಅಗ್ನೇ ಪ್ರವಿವೇಶಿಥಾಪಃ ಉದಕಾನಿ ಪ್ರವಿಷ್ಟವಾನಸಿ । ಹೇ ಅಗ್ನೇ ಜಾತವೇದೋ ಜಾತಪ್ರಜ್ಞಾನ ವಿಶ್ವಾಃ ಸರ್ವಾಸ್ತನ್ವಸ್ತನೂಃ ಸರ್ವಾಣ್ಯಂಗಾನಿ ಬಹುಧಾ ಬಹುಪ್ರಕಾರಮೇಕೋ ದೇವೋಽಪಶ್ಯತ್ । ದೃಷ್ಟವಾನ್ ॥**

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ಯೇನ**—ಯಾವ ಹೊದ್ದಿಕೆಯಿಂದ । **ಆವಿಷ್ಟಿತಃ**—ನೀನು ಆವರಿಸಲ್ಪಟ್ಟವನಾಗಿ । **ಅಪಃ**—ಉದಕಗಳನ್ನು । **ಪ್ರವಿವೇಶಿಥ**—ಪ್ರವೇಸಿಶಿದೆಯೋ । **ತತ್ ಉಲ್ಬಂ**—ಆ ಹೊದ್ದಿಕೆಯು । **ಮಹತ್**—ಮಹತ್ಸ್ವರೂಪವುಳ್ಳದ್ದೂ । **ಸ್ಥವಿರಂ ಆಸೀತ್**—ಸ್ಥೂಲ (ದಪ್ಪ) ವಾದದ್ದೂ ಆಗಿದೆ । **ಜಾತವೇದಃ**—ಜಾತವೇದೋರೂಪನಾದ ಎಲೈ ಅಗ್ನಿಯೇ । **ತೇ**—ನಿನ್ನ । **ವಿಶ್ವಾಃ ತನ್ವಃ**—ಸಕಲ ಸ್ವರೂಪಗಳನ್ನೂ । **ಬಹುಧಾ**—ಅನೇಕ ಪ್ರಕಾರವಾಗಿ । **ಏಕಃ ದೇವಃ**—ಒಬ್ಬ ದೇವನು ಮಾತ್ರ । **ಅಪಶ್ಯತ್**—ನೋಡಿದ್ದಾನೆ.

ಭಾವಾರ್ಥ

ದೇವತೆಗಳು—ಎಲೈ ಅಗ್ನಿಯೇ, ಯಾವ ಉಲ್ಬರೂಪವಾದ ಹೊದ್ದಿಕೆಯಿಂದ ನೀನು ಆವರಿಸಲ್ಪಟ್ಟವನಾಗಿ ಉದಕಗಳನ್ನು ಪ್ರವೇಶಿಸಿದೆಯೋ ಆ ಹೊದ್ದಿಕೆಯು ಮಹತ್ಸ್ವರೂಪವುಳ್ಳದ್ದೂ, ಸ್ಥೂಲವಾದದ್ದೂ ಆಗಿದೆ. ಜಾತವೇದೋರೂಪನಾದ ಎಲೈ ಅಗ್ನಿಯೇ, ನಿನ್ನ ಸಕಲಸ್ವರೂಪಗಳನ್ನೂ ಅನೇಕ ಪ್ರಕಾರವಾಗಿ ಒಬ್ಬ ದೇವನು ಮಾತ ನೋಡಿದ್ದಾನೆ.

English Translation

(The gods speak :) Great and very dense is the covering enveloped by which, Agni, you have entered into the waters. Agni Jatavedas, one deity has beheld all your mainfold forms,

ವಿಶೇಷವಿಷಯಗಳು

**ಉಲ್ಬಂ**—ಯಾಸ್ಕರು ಈ ಶಬ್ದಕ್ಕೆ **ಉಲ್ಬಮೂರ್ಣೋತೇರ್ವೃಣೋತೇರ್ವಾ । ಮಹತ್ತದುಲ್ಬಂ ಸ್ಥವಿರಂ ತದಾಸೀದಿತ್ಯಪಿ ನಿಗಮೋ ಭವತಿ** (ನಿ. ೬-೩೫) ಎಂದು ನಿರ್ವಚನವನ್ನು ಹೇಳಿದ್ದಾರೆ. ಮುಚ್ಚು, ಆಚ್ಛಾದಿಸು ಎಂಬರ್ಥವುಳ್ಳ **ಊರ್ಣು** ಧಾತುವಿನಿಂದಾಗಲಿ, **ವೃ** ಧಾತುವಿನಿಂದಾಗಲಿ ಉಲ್ಬಶಬ್ದವು ನಿಷ್ಪನ್ನವಾಗಿದೆ ಆವರಣ, ಹೊದ್ದಿಕೆ ಎಂದರ್ಥ. **ಉಲ್ಬಂ ಗರ್ಭೋ ಜರಾಯು** ಎಂಬ ಶ್ರುತಿವಾಕ್ಯದಲ್ಲಿ ಹೇಳಿರುವಂತೆ ಉಲ್ಬ, ಗರ್ಭ, ಜರಾಯು ಎಂಬ ಪದಗಳು ಪರ್ಯಾಯನಾಮಗಳು. ಶಿಶುವನ್ನು ಆವರಿಸಿರುವ (ಮುಚ್ಚಿರುವ) ಚರ್ಮದ ಪದರಕ್ಕೆ ಗರ್ಭವೆಂದು ಹೆಸರು. ಉಳಿದ ಶಬ್ದಗಳಿಗೂ ಇದೇ ಅರ್ಥವು.

ಸಂಹಿತಾಪಾಠಃ

ಕೋ ಮಾ ದದರ್ಶ ಕತಮಃ ಸ ದೇವೋ ಯೋ ಮೇ ತನ್ವೋ ಬಹುಧಾ ಪರ್ಯಪಶ್ಯತ್ ।
ಕ್ವಾಹ ಮಿತ್ರಾವರುಣಾ ಕ್ಷಿಯಂತ್ಯಗ್ನೇರ್ವಿಶ್ವಾಃ ಸಮಿಧೋ ದೇವಯಾನೀಃ ॥

ಪದಪಾಠಃ

ಕಃ । ಮಾ । ದದರ್ಶ । ಕತಮಃ । ಸಃ । ದೇವಃ । ಯಃ । ಮೇ । ತನ್ವಃ । ಬಹುಧಾ । ಪರಿಽಅಪಶ್ಯತ್ ॥
ಕ್ವ । ಅಹ । ಮಿತ್ರಾವರುಣಾ । ಕ್ಷಿಯಂತಿ । ಅಗ್ನೇಃ । ವಿಶ್ವಾಃ । ಸಂಽಇಧಃ । ದೇವಽಯಾನೀಃ ॥ ೨ ॥

ಸಾಯಣಭಾಷ್ಯಂ

ಇಪದಮುಗ್ನೇರ್ವಾಕ್ಯಂ । ಏಕೋ ದೇವೋಽಪಶ್ಯದಿತ್ಯುಕ್ತೇ ಪೃಚ್ಛತಿ । ಕೋ ಮಾ ಮಾಂ ದದರ್ಶ ದೃಷ್ಟವಾನ್ । ಸ ದೇವಃ ಕತಮಃ । ಯೋ ಮೇ ಮಮ ತನ್ವಸ್ತನೂರ್ಬಹುಧಾ ಬಹುಪ್ರಕಾರಂ ಸ್ಥಿತಾಃ ಪರ್ಯಪಶ್ಯತ್ ಪರಿದೃಷ್ಟವಾನ್ । ಹೇ ಮಿತ್ರಾವರುಣಾ ಮಿತ್ರಾವರುಣೌ ಅಗ್ನೇರ್ಮಮ ವಿಶ್ವಾಃ ಸರ್ವಾಃ ಸಮಿಧೋ ದೀಪ್ತಾ ದೇವಯಾನೀರ್ದೇವಯಾನಸಾಧನಭೂತಾಸ್ತನ್ವೋ ದೃಷ್ಟ್ವಾ ಇತ್ಯುಕ್ತಂ ಯದಿ ದೃಷ್ಟ್ವಾಶ್ಚೇತ್ತರ್ಹಿ ಕ್ವ ಕ್ಷಿಯಂತಿ ಕ್ವ ನಿವಸಂತೀತ್ಯೇವಂ ದೇವಾನಾಂ ಪುರತೋ ವರ್ತಮಾನೌ ಮಿತ್ರಾ-ವರುಣಾವಾಹಾಗ್ನಿಃ ॥

ಪ್ರತಿಪದಾರ್ಥ

**ಕಃ**—ಯಾರು । **ಮಾ**—ನನ್ನನ್ನು । **ದದರ್ಶ**—ನೋಡಿದ್ದಾನೆ ? । **ಯಃ**—ಯಾರು । **ಮೇ**—ನನ್ನ । **ತನ್ವಃ**—ಶರೀರಗಳನ್ನು । **ಬಹುಧಾ**—ಅನೇಕ ಪ್ರಕಾರವಾಗಿರುವುದನ್ನು । **ಪರ್ಯಪಶ್ಯತ್**—ನೋಡಿರುವನೋ । **ಸಃ**—ಅಂತಹ । **ದೇವಃ**—ದೇವನು । **ಕತಮಃ**—ದೇವತೆಗಳ ನಡುವೆ ಯಾರು ? । **ಮಿತ್ರಾವರುಣಾ**—ಎಲೈ ಮಿತ್ರಾವರುಣರೇ,। **ಅಗ್ನೇಃ**—ಅಗ್ನಿರೂಪನಾದ ನನ್ನ। **ಸಮಿಧಃ**—ಪ್ರಭಾವಯುತವಾದ। **ವಿಶ್ವಾಃ ದೇವಯಾನೀಃ**—ದೇವತೆಗಳಿಗೆ ಹವಿಸ್ಸನ್ನು ವಹಿಸುವ ಸಕಲ ಸಾಧನಗಳೂ । **ಕ್ವ**—ಎಲ್ಲಿ । **ಕ್ಷಿಯಂತಿ**—ವಾಸಿಸುತ್ತವೆ ?

ಭಾವಾರ್ಥ

ಅಗ್ನಿ—ನನ್ನ ಸ್ವರೂಪವನ್ನು ನಿಜವಾಗಿಯೂ ಅರಿತಿರುವವರು ಯಾರು ? ನನ್ನ ಅನೇಕ ಪ್ರಕಾರವಾದ ಶರೀರ ಗಳನ್ನು ದೇವತೆಗಳ ನಡುವೆ ಯಾರು ಅರಿತಿದ್ದಾರೆ ? ಎಲೈ ಮಿತ್ರಾವರುಣರೇ, ಅಗ್ನಿರೂಪನಾದ ನನ್ನ ಪ್ರಭಾವ ಯುತವಾದ ಮತ್ತು ದೇವತೆಗಳಿಗೆ ಹವಿಸ್ಸನ್ನು ವಹಿಸುವ ಸಕಲ ಸಾಧನಗಳೂ ಎಲ್ಲಿ ಇರುತ್ತವೆ ?

## English Translation

(Agni speaks :) Who has beheld me ? Which is it of the deities who has fully seen my manifold forms ? Where, Mitra and Varvna, do Agni's luminous vehicles of the gods abide ?

ಸಂಹಿತಾಪಾಠಃ

ಐಚ್ಛಾಮ ತ್ವಾ ಬಹುಧಾ ಜಾತವೇದಃ ಪ್ರವಿಷ್ಟಮಗ್ನೇ ಅಪ್ಸ್ವೋಷಧೀಷು ।
ತಂ ತ್ವಾ ಯಮೋ ಅಚಿಕೇಚ್ಚಿತ್ರಭಾನೋ ದಶಾಂತರುಷ್ಯಾದತಿರೋಚ-
ಮಾನಂ ॥ ೩ ॥

ಪದಪಾಠಃ

ಐಚ್ಛಾಮ । ತ್ವಾ । ಬಹುಧಾ । ಜಾತऽವೇದಃ । ಪ್ರऽವಿಷ್ಟಂ । ಅಗ್ನೇ । ಅಪ್ऽಸು । ಓಷಧೀಷು ॥
ತಂ । ತ್ವಾ । ಯಮಃ । ಅಚಿಕೇತ್ । ಚಿತ್ರಭಾನೋ ಇತಿ ಚಿತ್ರऽಭಾನೋ । ದಶऽಅಂತರುಷ್ಯಾತ್ ।
ಅತಿऽರೋಚಮಾನಂ ॥ ೩ ॥

ಸಾಯಣಭಾಷ್ಯಂ

ಏವಮುಗ್ನಿನಾ ಪೃಷ್ಟಾ ದೇವಾ ಅಗ್ನಿಂ ಬ್ರುವಂತಿ । ಹೇ ಜಾತವೇದೋ ಜಾತಪ್ರಜ್ಞಾಗ್ನೇ ತ್ವಾ ತ್ವಾಮನ್ವೈಚ್ಛಾಮ । ಕೀದೃಶಂ ತ್ವಾಂ । ಅಪ್ಸೂದಕೇಷ್ವೋಷಧೀಷು ಚ ಬಹುಧಾ ಪ್ರವಿಷ್ಟಂ । ಅನ್ವಿಷ್ಯ ಚ ತಂ ತಾದೃಶಂ ಪ್ರವಿಷ್ಟಂ ತ್ವಾ ತ್ವಾಂ ಯಮೋ ದೇವೋऽಚಿಕೇತ್ ಜ್ಞಾತವಾನ್ ಹೇ ಚಿತ್ರಭಾನೋ ಚಾಯನೀಯರಶ್ಮೇ । ಕುತ್ರ ಸ್ಥಿತಂ ಜ್ಞಾತವಾನಿತಿ ತದುಚ್ಯತೇ । ದಶಾಂತರುಷ್ಯಾತ್ । ಅಂತರುಷ್ಯಂ ಗೂಢವಾಸಸ್ಥಾನಂ ತಚ್ಚ ಸ್ಥಾನಂ ದಶಸಂಖ್ಯೋಪೇತಂ। ತಾದೃಶಂ ಸ್ಥಾನಮತಿರೋಚಮಾನಮತೀತ್ಯ ಪ್ರಕಾಶಮಾನಂ । ಅಗ್ನೇರ್ಹಿ ಗೂಢಾನಿ ದಶ ಸ್ಥಾನಾನಿ ಭವಂತಿ ಪೃಥಿವ್ಯಾದಯಸ್ತ್ರಯೋ ಲೋಕಾ ಅಗ್ನಿವಾಯ್ವಾದಿತ್ಯಾಸ್ತ್ರಯೋ ದೇವಾ ಆಪ ಓಷಧಯೋ ವನಸ್ಪತಯಃ ಪ್ರಾಣಿಶರೀರಮಿತಿ ದಶ ಸ್ಥಾನಾನಿ ॥

ಪ್ರತಿಪದಾರ್ಥ

**ಜಾತವೇದಃ**—ಜಾತವೇದೋರೂಪನಾದ । **ಅಗ್ನೇ**—ಎಲೈ ಅಗ್ನಿಯೇ । **ಅಪ್ಸು**—ಜಲಗಳಲ್ಲಿಯೂ । **ಓಷಧೀಷು**—ಲತಾದಿಗಳಲ್ಲಿಯೂ । **ಬಹುಧಾ**—ಅನೇಕ ಕ್ರಮವಾಗಿ । **ಪ್ರವಿಷ್ಟಂ**—ಪ್ರವೇಶಿಸಿದ । **ತ್ವಾ**—ನಿನ್ನನ್ನು । **ಐಚ್ಛಾಮ**—ಅರಿಯಲು ಇಚ್ಛಿಸಿ ಹುಡುಕಿದೆವು । **ಚಿತ್ರಭಾನೋ**—ಪೂಜ್ಯವಾದ (ಆಕರ್ಷಕವಾದ) ಪ್ರಭೆಯುಳ್ಳ ಎಲೈ ಅಗ್ನಿಯೇ । **ದಶಾಂತರುಷ್ಯಾತ್**—ನಿನ್ನ ರಹಸ್ಯವಾದ ಹತ್ತು ವಾಸಸ್ಥಾನಗಳಿಂದಲೂ ।

**ಅತಿರೋಚಮಾನಂ**—ಹೊರಹೊರಟು ಪ್ರಕಾಶಿಸುವ | **ತಂ ತ್ವಾ**—ಪ್ರಸಿದ್ಧನಾದ ನಿನ್ನನ್ನು | **ಯಮಃ**—ಯಮನು | **ಅಚಿಕೇತ್**—ಅರಿತಿದ್ದಾನೆ.

ಭಾವಾರ್ಥ

ದೇವತೆಗಳು-ಜಾತವೇದೋರೂಪನಾದ ಎಲೈ ಅಗ್ನಿಯೇ, ಜಲಗಳಲ್ಲಿಯೂ, ಲತಾದಿಗಳಲ್ಲಿಯೂ ಅನೇಕಪ್ರಕಾರವಾಗಿಪ್ರವೇಶಿಸಿದ ನಿನ್ನನ್ನು ಅರಿಯಲು ನಾವೆಲ್ಲರೂ ಇಚ್ಛಿಸಿ ಹುಡುಕಿದವು. ಅಕರ್ಷಕವಾದ ಪ್ರಭೆಯುಳ್ಳ ಎಲೈ ಅಗ್ನಿಯೇ, ಪೃಥಿವೀ, ಅಂತರಿಕ್ಷ, ಸ್ವರ್ಗ, ಅಗ್ನಿ, ವಾಯು, ಆದಿತ್ಯ, ಆಪಃ, ಓಷಧಿ, ವನಸ್ಪತಿ ಪ್ರಾಣಿಶರೀರವೆಂಬ ನಿನ್ನ ರಹಸ್ಯವಾದ ಹತ್ತು ವಾಸಸ್ಥಾನಗಳಿಂದಲೂ ಹೊರಹೊರಟು ಪ್ರಕಾಶಿಸುವ ಪ್ರಸಿದ್ಧನಾದ ನಿನ್ನನ್ನು ಯಮನು ಅರಿತಿದ್ದಾನೆ.

English Translalion

(The gods :) We sought for you, Agni Jatavedas, who had entered in many ways into the waters, into the plants : Yama recognized you, who have adorable rays, blazing from your ten hiding-places.

ಸಂಹಿತಾಪಾಠಃ

ಹೋತ್ರಾದಹಂ ವರುಣ ಬಿಭ್ಯದಾಯಂ ನೇದೇವ ಮಾ ಯುನಜನ್ನತ್ರ ದೇವಾಃ ।
ತಸ್ಯ ಮೇ ತನ್ವೋ ಬಹುಧಾ ನಿವಿಷ್ಟಾ ಏತಮರ್ಥಂ ನ ಚಿಕೇತಾಹಮಗ್ನಿಃ ॥೪॥

ಪದಪಾಠಃ

ಹೋತ್ರಾತ್ । ಅಹಂ । ವರುಣ । ಬಿಭ್ಯತ್ । ಆಯಂ । ನ । ಇತ್ । ಏವ । ಮಾ । ಯುನಜನ್ । ಅತ್ರ । ದೇವಾಃ ॥
ತಸ್ಯ । ಮೇ । ತನ್ವಃ । ಬಹುಧಾ । ನಿऽವಿಷ್ಟಾಃ । ಏತಂ । ಅರ್ಥಂ । ನ । ಚಿಕೇತ । ಅಹಂ । ಅಗ್ನಿಃ ॥೪॥

ಸಾಯಣಭಾಷ್ಯಂ

ಅನಯಾ ದೇವಗಣಾ ಮಾಂ ಜ್ಞಾತವಂತ ಇತಿ ನಿಶ್ಚಿತ್ಯ ಗೂಹನಸ್ಯ ಪ್ರಯೋಜನಮಾಹ । ಹೇ ವರುಣ ದೇವ ಅಹಂ ಹೋತ್ರಾದ್ಧೋತವ್ಯಾತ್ । ಹವಿರ್ವಹನಾದಿತ್ಯರ್ಥಃ । ತಸ್ಮಾದ್ಬಿಭ್ಯದಾಯಂ । ಆಗತವಾನಸ್ಮಿ । ಅತೋ ಮಾ ಮಾಮೇವೈವಂ ಪೂರ್ವಪ್ರಕಾರೇಣಾತ್ರಾಸ್ಮಿನ್ಹವಿರ್ವಹನಪ್ರಯೋಜನೇ ನೇದ್ಯುನಜನ್ನೈವ ಯೋಜಯಂತ ದೇವಾಃ । ತಸ್ಯ ತಾದೃಶಸ್ಯ ಬಿಭ್ಯತೋ ಮೇ ತನ್ವೋ ಬಹುಧಾ

**ನಿವಿಷ್ಟಾ ಅಪ್ಸು । ಏತಮರ್ಥಮೋತದ್ಧವಿರ್ವಹನಕಾರ್ಯಮಗ್ನಿರಹಂ ನ ಚಿಕೇತ । ನ ಬುಧ್ಯೇ । ನಾಂಗೀಕರೋಮಿ ॥**

ಪ್ರತಿಪದಾರ್ಥ

**ವರುಣ**—ಎಲೈ ವರುಣನೇ । **ಅಹಂ**—ನಾನು । **ಹೋತ್ರಾತ್**—ಹವಿರ್ವಹನಕರ್ಮದಿಂದ । **ಬಿಭ್ಯತ್**—ಬೆದರಿದವನಾಗಿ । **ಆಯಂ**—ಇಲ್ಲಿ ಬಂದಿದ್ದೇನೆ । **ಮಾ**—ನನ್ನನ್ನು । **ಏವ**—ಹಿಂದಿನಂತೆ । **ಅತ್ರ**—ಹವಿರ್ವಹನಕರ್ಮದಲ್ಲಿ । **ದೇವಾಃ**—ದೇವತೆಗಳು । **ನ ಯುನಜನ್ ಇತ್**—ಖಂಡಿತ ಯೋಜಿಸಲಾರರು । **ತಸ್ಯ**—ಅದೇ ರೀತಿ ಬೆದರಿದ । **ಮೇ ತನ್ವಃ**—ನನ್ನ ಶರೀರಗಳು । **ಬಹುಧಾ**—ಅನೇಕಪ್ರಕಾರವಾಗಿ । **ನಿವಿಷ್ಟಾಃ**—(ಜಲಾದಿಗಳಲ್ಲಿ) ಅಡಗಿವೆ । **ಏತಮರ್ಥಂ**—ಈ ಕಾರ್ಯಕ್ಕಾಗಿ । **ಅಗ್ನಿಃ**—ಅಗ್ನಿಯಾದ। **ಅಹಂ**—ನಾನು । **ನ ಚಿಕೇತ**—ಖಂಡಿತ ಒಪ್ಪುವುದಿಲ್ಲ.

ಭಾವಾರ್ಥ

ಅಗ್ನಿ-ಎಲೈ ವರುಣನೇ, ನಾನು ಹವಿರ್ವಹನಕರ್ಮದಿಂದ ಬೆದರಿದವನಾಗಿ ಇಲ್ಲಿ ಬಂದಿದ್ದೇನೆ. ನನ್ನನ್ನು ಹಿಂದಿನಂತೆ ಹವಿರ್ವಹನಕರ್ಮದಲ್ಲಿ ದೇವತೆಗಳು ಖಂಡಿತ ಸೇರಿಸಲಾರರು. ಆ ಕಾರಣದಿಂದಲೇ ಬೆದರಿದ ನನ್ನ ಶರೀರಗಳು ಅನೇಕ ಪ್ರಕಾರವಾಗಿ ಜಲಾದಿಗಳಲ್ಲಿ ಅಡಗಿವೆ. ಈ ಕಾರ್ಯಕ್ಕೆ ನಾನು ಖಂಡಿತ ಒಪ್ಪುವುದಿಲ್ಲ.

English Translation

(Agni :) Divine Varuna, I have come hither, being afraid of Hotra, lest the gods should again associate me with him ; my forms have therefore entered (into the waters)in various places. I, Agni, do not consent (to undertake) that office.

ಸಂಹಿತಾಪಾಠಃ

ಏಹಿ ಮನುರ್ದೇವಯುರ್ಯಜ್ಞಕಾಮೋಽರಂಕೃತ್ಯಾ ತಮಸಿ ಕ್ಷೇಷ್ಯಗ್ನೇ ।
ಸುಗಾನ್ಪಥಃ ಕೃಣುಹಿ ದೇವಯಾನಾನ್ವಹ ಹವ್ಯಾನಿ ಸುಮನಸ್ಯಮಾನಃ ॥೫॥

ಪದಪಾಠಃ

ಆ । ಇಹಿ । ಮನುಃ । ದೇವಽಯುಃ । ಯಜ್ಞಽಕಾಮಃ । ಅರಂಽಕೃತ್ಯ । ತಮಸಿ । ಕ್ಷೇಷಿ । ಅಗ್ನೇ ॥
ಸುಽಗಾನ್ । ಪಥಃ । ಕೃಣುಹಿ । ದೇವಽಯಾನಾನ್ । ವಹ । ಹವ್ಯಾನಿ । ಸುಽಮನಸ್ಯಮಾನಃ ॥ ೫ ॥

ಸಾಯಣಭಾಷ್ಯಂ

**ಅಗ್ನಿನೈವಮುಕ್ತಾ ದೇವಾಃ ಪುನರಗ್ನಿಮಾಹ್ವಯಂತಿ। ಹೇ ಅಗ್ನೇ ಏಹಿ। ಆಗಚ್ಛ। ಮನುರ್ಮನುಷ್ಯೋ ಯಷ್ಟಾ ಮನನೀಯೋ ಮನೂ ರಾಜಾ ವಾ ದೇವಯುರ್ದೇವಾನ್ಯಷ್ಟುಮಿಚ್ಛನ್ ಯಜ್ಞಕಾಮಶ್ಚ ಭವತಿ। ಅತ ಏಹಿ। ಕಿಂ ಕುರ್ವನ್ ಯಜ್ಞಕಾಮೋ ಭವತೀತಿ ಚೇತ್ ಉಚ್ಯತೇ। ಅರಂಕೃತ್ಯ ಕೇವಲಂ ತೇಜಃಪುಂಜಮೇವಾಲಂಕುರ್ವನ್। ಯದ್ವೇದಮುತ್ತರತ್ರ ಸಂಬಧ್ಯತೇ। ತ್ವಮಲಂಕೃತ್ಯಾತ್ಮಾನಮಲಂಕುರ್ವನ್ ತಮಸ್ಯಸ್ಯೈಜ್ಞಾತುಮಶಕ್ಯೇಽಂಧಕಾರೇ ಕ್ಷೇಷಿ। ನಿವಸಸಿ। ಹೇ ಅಗ್ನೇ ಆಗತ್ಯ ಚ ದೇವಯಾನಾನ್ ದೇವಾಸ್ಸ್ವ್ರತಿ ಯೈರ್ಮನುಷ್ಯಾ ಗಚ್ಛಂತಿ ತಾನ್ಪಥೋ ಮಾರ್ಗಾನ್ ಸುಗಾನ್ಕೃಣುಹಿ। ಕುರು॥ ಕೃವಿ ಹಿಂಸಾಕರಣಯೋಶ್ಚ। ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ॥ ಸಂಮನಸ್ಯಮಾನೋ ಯಜ್ಞನಿಷ್ಪತ್ತೇರ್ದೇವಯಾನಾಃ ಸುಪಥಾ ಭವಂತಿ। ವಹ ಹವ್ಯಾನ್ಯಸ್ಮದೀಯಾನಿ ಸುಮನಸ್ಯಮಾನಃ ಸೌಮನಸ್ಯಮಾಚರಂಸ್ತ್ವಂ॥**

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ। **ಏಹಿ**—ದಯಮಾಡು। **ಮನುಃ**—ದೊರೆಯಾದ ಮನುವು (ಅಥವಾ ಅವನ ಸಂತತಿಯವನಾದ ಮಾನವನು)। **ದೇವಯುಃ**—ದೇವತೆಗಳನ್ನು ಪೂಜಿಸಲಿಚ್ಛೆಯುಳ್ಳವನೂ। **ಯಜ್ಞಕಾಮಶ್ಚ**—ಯಜ್ಞವನ್ನು ನೆರವೇರಿಸಲಿಚ್ಛೆಯುಳ್ಳವನೂ ಆಗಿದ್ದಾನೆ। **ಅರಂಕೃತ್ಯ**—ನಿನ್ನನ್ನು ಮಾತ್ರ ಅಲಂಕರಿಸಿಕೊಂಡು। **ತಮಸಿ**—ಯಾರಿಗೂ ತಿಳಿಯದ ರಹಸ್ಯಪ್ರದೇಶದಲ್ಲಿ। **ಕ್ಷೇಷಿ**—ವಾಸಿಸುತ್ತೀಯೆ। (ನೀನು ಬಂದು) **ದೇವಯಾನಾನ್**—ದೇವತೆಗಳು ಸಂಚರಿಸುವ। **ಪಥಃ**—ಮಾರ್ಗಗಳನ್ನು। **ಸುಗಾನ್**—ಸಂಚರಿಸಲು ಯೋಗ್ಯವಾದವನ್ನಾಗಿ। **ಕೃಣುಹಿ**—ಮಾಡು। **ಸುಮನಸ್ಯಮಾನಃ**—ನಮಗೆ ಒಳ್ಳೆಯದನ್ನು ಮಾಡಲಿಚ್ಛೆಯುಳ್ಳವನಾಗಿ। **ಹವ್ಯಾನಿ**—ಹವಿಸ್ಸುಗಳನ್ನು। **ವಹ**—ವಹಿಸು.

ಭಾವಾರ್ಥ

ದೇವತೆಗಳು—ಎಲೈ ಅಗ್ನಿಯೇ, ನಮ್ಮ ಪ್ರಾರ್ಥನೆಗಳನ್ನಂಗೀಕರಿಸಿ ದಯಮಾಡು. ದೊರೆಯಾದ ಮನುವು ಯಜ್ಞವನ್ನಾಚರಿಸಿ ದೇವತೆಗಳನ್ನು ಪೂಜಿಸಲಿಚ್ಛಿಸುತ್ತಾನೆ. ನೀನು ನಿನ್ನನ್ನು ಮಾತ್ರ ಅಲಂಕರಿಸಿಕೊಂಡು ಯಾರಿಗೂ ತಿಳಿಯದ ರಹಸ್ಯಪ್ರದೇಶದಲ್ಲಿ ವಾಸಿಸುತ್ತೀಯೆ. ಇಲ್ಲಿ ಬಂದು ದೇವತೆಗಳು ಸಂಚರಿಸುವ ಮಾರ್ಗಗಳನ್ನು ಸಂಚರಿಸಲು ಯೋಗ್ಯವನ್ನಾಗಿ ಮಾಡು. ನಮಗೆ ಒಳ್ಳೆಯದನ್ನು ಮಾಡಲಿಚ್ಛೆಯುಳ್ಳವನಾಗಿ ಹವಿಸ್ಸುಗಳನ್ನು ವಹಿಸು.

English Translation

(The gods:) Come, Agni, the devout Manu (is) desirous of offering sacrifice adorning yourself, you abide in darkness: make straight the paths traversed by the gods, and with a benevolent mind convey our oblations,

ಸಂಹಿತಾಪಾಠಃ

**ಅಗ್ನೇ ಪೂರ್ವೇ ಭ್ರಾತರೋ ಅರ್ಥಮೇತಂ ರಥೀವಾಧ್ವಾನಮನ್ವಾವರೀವುಃ।**

ತಸ್ಮಾದ್ಭಿಯಾ ವರುಣ ದೂರಮಾಯಂ ಗೌರೋ ನ ಕ್ಷೇಪ್ನೋರವಿಜೇ ಜ್ಯಾಯಾಃ ॥ ೬ ॥

ಪದಪಾಠಃ

ಅಗ್ನೇಃ । ಪೂರ್ವೇ । ಭ್ರಾತರಃ । ಅರ್ಥಂ । ಏತಂ । ರಥೀಽಇವ । ಅಧ್ವಾನಂ । ಅನು । ಆ । ಅವರೀವುರಿತಿ ॥

ತಸ್ಮಾತ್ । ಭಿಯಾ । ವರುಣ । ದೂರಂ । ಆಯಂ । ಗೌರಃ । ನ । ಕ್ಷೇಪ್ನೋಃ । ಅವಿಜೇ । ಜ್ಯಾಯಾಃ ॥

ಸಾಯಣಭಾಷ್ಯಂ

ಅನಯಾಗ್ನಿಃ ಸ್ವಪಲಾಯನನಿಮಿತ್ತಮಾಹ । ಹೇ ದೇವಾ ಅಗ್ನೇ ರ್ಮಮ ಪೂರ್ವೇ ಪೂರ್ವಮುತ್ಪನ್ನಾ ಭ್ರಾತರೋ ಭೂಪತಿರ್ಭುವನಪತಿರ್ಭೂತಾನಾಂ ಪತಿರಿತಿ ತ್ರಯೋಽಗ್ರಜಾ ಏತಮರ್ಥಂ ಹವಿರ್ವಹನಾಖ್ಯಮರ್ಥಮನ್ವಾವರೀವುಃ । ಅನುಕ್ರಮೇಣ ವೃತವಂತಃ ॥ ತತ್ರ ವೃಞೋ‌ರ್ಯಙ್ಲುಗಂತಾಲ್ಲುಙಿ ಝೇಃಶ್ಛಾಂದಸೋ ಲುಕ್ । ಬಹುಲಂ ಛಂದಸೀತ್ಯುಕ್ತಂ ॥ ಆವರಣೇ ದೃಷ್ಟಾಂತಃ । ರಥೀವಾಧ್ವಾನಂ । ಅಧ್ವಾನಂ ಯಥಾ ರಥೀ ವೃಣುತೇ ತದ್ವತ್ । ತೇ ಭ್ರಾತರಸ್ತಥಾ ಕುರ್ವಂತೋ ಹತಾಃ । ತಸ್ಮಾನ್ಮರಣಾದ್ಭಿಯಾ ಭೀತ್ಯಾ ಹೇ ವರುಣ ದೂರಂ ದೇಶಮಾಯಂ । ಕಿಂ ಚ ಕ್ಷೇಪ್ನೋರಿಷುಕ್ಷೇಪ್ತುರ್ಧನುಷೋ ಜ್ಯಾಯಾಃ ಸಕಾಶಾದ್ಗೌರೋ ನ ಮೃಗ ಇವ ಸ ಯಥಾ ಬಿಭೇತಿ ಚಲತಿ ವಾ ತದ್ವದವಿಜೇ । ಅಕಂಪೇ । ಓವಿಜೀ ಭಯಚಲನಯೋಃ । ಅನುದಾತ್ತೇತ್ತ್ವಾದಾದಿಕಃ । ತಸ್ಯ ಲಙ್ಯುತ್ತಮೇರೂಪಂ ॥

ಪ್ರತಿಪದಾರ್ಥ

(ಎಲೈ ದೇವತೆಗಳೇ) **ರಥೀ**—ರಥವನ್ನು ನಡೆಸುವವನು । **ಅಧ್ವಾನಂ ಇವ**—ಮಾರ್ಗವನ್ನೇ ಸುತ್ತಿ ಸಂಚರಿಸಿ ಕೃಶನಾಗುವಂತೆ । **ಅಗ್ನೇಃ**—ನನ್ನ । **ಪೂರ್ವೇ ಭ್ರಾತರಃ**—ಹಿರಿಯ ಸಹೋದರರು । **ಏತಂ ಅರ್ಥಂ**—ಇದೇ ಹವಿರ್ವಹನಕರ್ಮವನ್ನು ನಿರ್ವಹಿಸಿ । **ಅನ್ವಾವರೀವುಃ**—ಒಬ್ಬರಾದಮೇಲೆ ಇನ್ನೊಬ್ಬರು ಹತರಾದರು । **ವರುಣ**—ಎಲೈ ವರುಣನೇ । **ಗೌರಃ**—ಗೌರಸಂಜ್ಞಕವಾದ ಮೃಗವು । **ಕ್ಷೇಪ್ನೋಃ**—ಬಾಣವನ್ನು ಬಿಡುವ ಧನುರ್ಧಾರಿಯ । **ಜ್ಯಾಯಾಃ ನ ಅವಿಜೇ**—ಹೆದೆಯಿಂದ ಬೆದರಿ ಓಡುವಂತೆ । **ತಸ್ಮಾದ್ಭಿಯಾ**—ಅದೇ ಭಯದಿಂದ । **ದೂರಂ ಆಯಂ**—ನಾನು ದೂರದೇಶಕ್ಕೆ ಬಂದಿದ್ದೇನೆ.

ಭಾವಾರ್ಥ

ಅಗ್ನಿ—ಎಲೈ ವರುಣನೇ, ಸಾರಥಿಯು ಮಾರ್ಗವನ್ನೇ ಸುತ್ತಿ ಸಂಚರಿಸಿ ಕೃಶನಾಗುವಂತೆ, ನನ್ನ ಹಿರಿಯ ಸಹೋದರರು ಇದೇ ಹವಿರ್ವಹನಕರ್ಮವನ್ನು ನಿರ್ವಹಿಸಿ ಒಬ್ಬರಾದಮೇಲೆ ಇನ್ನೊಬ್ಬರು ಹತರಾದರು. ಎಲೈವರುಣನೇ, ಗೌರಸಂಜ್ಞಕವಾದ ಮೃಗವು ಬಾಣವನ್ನು ಬಿಡುವ ಧನುರ್ಧಾರಿಯ ಹೆದೆಯಿಂದ ಬೆದರಿ ನಡಗುತ್ತ ಓಡುವಂತೆ, ನಾನೂ ಅದೇ ಭಯದಿಂದ ನಡಗುತ್ತ ಈ ದೂರದೇಶಕ್ಕೆ ಓಡಿಬಂದಿದ್ದೇನೆ.

## English Translation

(Agni :) The elder brothers of Agni performed that duty, as the driver of a chariot covers the road. (They were slain), and therefore, Varuna, I fled afar through fear. I trembled as a wild ox (trembles) at the bowstring of the archer.

ಸಂಹಿತಾಪಾಠಃ

ಕುರ್ಮಸ್ತ ಆಯುರಜರಂ ಯದಗ್ನೇ ಯಥಾ ಯುಕ್ತೋ ಜಾತವೇದೋ ನ ರಿಷ್ಯಾಃ ।
ಅಥಾ ವಹಾಸಿ ಸುಮನಸ್ಯಮಾನೋ ಭಾಗಂ ದೇವೇಭ್ಯೋ ಹವಿಷಃ ಸುಜಾತ॥

ಪದಪಾಠಃ

ಕುರ್ಮಃ । ತೇ । ಆಯುಃ । ಅಜರಂ । ಯತ್ । ಅಗ್ನೇ । ಯಥಾ । ಯುಕ್ತಃ । ಜಾತऽವೇದಃ । ನ । ರಿಷ್ಯಾಃ ॥
ಅಥ । ವಹಾಸಿ । ಸುऽಮನಸ್ಯಮಾನಃ । ಭಾಗಂ । ದೇವೇಭ್ಯಃ । ಹವಿಷಃ । ಸುऽಜಾತ ॥ ೭ ॥

ಸಾಯಣಭಾಷ್ಯಂ

ಇದಂ ದೇವಾನಾಂ ವಾಕ್ಯಂ । ಹೇ ಅಗ್ನೇ ಯದಾಯುರಾಯುಷ್ಯಮಜರಂ ಜರಾರಹಿತಮಸ್ತಿ ತತ್ತೇ ಕುರ್ಮಃ । ತಥಾ ತೇನಾಯುಷಾ ಯುಕ್ತಸ್ತ್ವಂ ಹೇ ಜಾತವೇದೋ ಜಾತಪ್ರಜ್ಞ ಯಥಾ ನ ರಿಷ್ಯಾ ನ ವಿನ್ರಿಯಸೇ ತಥಾ ಕುರ್ಮಃ । ಅಥ ವಹಾಸಿ ವಹ ಸುಮನಸ್ಯಮಾನಃ ಸೌಮನಸ್ಯಂ ಕುರ್ವನ್। ವೋಢವ್ಯಂ ವಹನ್ । ತದೇವ ದರ್ಶಯತಿ। ಹವಿಷೋ ಯಜಮಾನಪ್ರತ್ತಸ್ಯ ಭಾಗಂ । ಕೇಭ್ಯಃ । ದೇವೇಭ್ಯಃ । ಹೇ ಸುಜಾತ ಶೋಭನಜನ್ಮನ್ನಗ್ನೇ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ। **ಯತ್ ಆಯುಃ**—ಯಾವ ಆಯುಸ್ಸು । **ಅಜರಂ**—ಕ್ಷಯಿಸುವುದಿಲ್ಲವೋ ಅದನ್ನು । **ತೇ**—ನಿನಗೆ। **ಕುರ್ಮಃ**—ಅನುಗ್ರಹಿಸುತ್ತೇವೆ । **ಜಾತವೇದಃ**—ಜಾತವೇದೋರೂಪನಾದ ಎಲೈ ಅಗ್ನಿಯೇ। **ಯುಕ್ತಃ**—ಆ ಆಯುಸ್ಸಿನಿಂದ ಕೂಡಿದ ನೀನು। **ಯಥಾ ನ ರಿಷ್ಯಾಃ**—ನಾಶವಾಗದಂತೆ ನಾವು ನೋಡಿಕೊಳ್ಳುತ್ತೇವೆ । **ಅಥ**—ಆದುದರಿಂದ। **ಸುಜಾತ**—ಉತ್ತಮವಾದ ಜನ್ಮವುಳ್ಳ ಎಲೈ ಅಗ್ನಿಯೇ।

**ಸುಮನಸ್ಯಮಾನಃ**—ಒಳ್ಳೆಯದನ್ನು ಮಾಡಲಿಚ್ಛೆಯುಳ್ಳವನಾಗಿ | **ಹವಿಷಃ**—ಹವಿಸ್ಸಿನ ಭಾಗಗಳನ್ನು | **ದೇವೇಭ್ಯಃ**—ಆಯಾ ದೇವತೆಗಳಿಗೆ | **ವಹಾಸಿ**—ವಹಿಸು.

ಭಾವಾರ್ಥ

ದೇವತೆಗಳು—ಎಲೈ ಅಗ್ನಿಯೇ, ಯಾವ ಆಯುಸ್ಸು ಕ್ಷಯಿಸುವುದಿಲ್ಲವೋ ಆ ಆಯುಸ್ಸನ್ನು ನಿನಗೆ ಅನುಗ್ರಹಿಸುತ್ತೇವೆ. ಜಾತವೇದೋರೂಪನಾದ ಎಲೈ ಅಗ್ನಿಯೇ, ಆ ಆಯುಸ್ಸಿನಿಂದ ಕೂಡಿದ ನೀನು ನಾಶವಾಗದಂತೆ ನಾವು ನೋಡಿಕೊಳ್ಳುತ್ತೇವೆ. ಆದುದರಿಂದ ಉತ್ತಮವಾದ ಜನ್ಮವುಳ್ಳ ಎಲೈ ಅಗ್ನಿಯೇ, ಒಳ್ಳೆಯದನ್ನು ಮಾಡಲಿಚ್ಛೆಯುಳ್ಳವನಾಗಿ ಆಯಾ ದೇವತೆಗಳಿಗೆ ಹವಿಸ್ಸಿನ ಭಾಗಗಳನ್ನು ವಹಿಸು.

English Translation

(The gods :) We grant you life, Agni, which (is) exempt from decay, so that tbus endowed, Jatavedas, your will not die; so, becoming conciliated, well-born Agni, bear their portion of the oblation to the gods.

ಸಂಹಿತಾಪಾಠಃ

ಪ್ರಯಾಜಾನ್ಮೇ ಅನುಯಾಜಾಂಶ್ಚ ಕೇವಲಾನೂರ್ಜಸ್ವಂತಂ ಹವಿಷೋ ದತ್ತ ಭಾಗಂ |
ಘೃತಂ ಚಾಪಾಂ ಪುರುಷಂ ಚೌಷಧೀನಾಮಗ್ನೇಶ್ಚ ದೀರ್ಘಮಾಯುರಸ್ತು ದೇವಾಃ || ೮ ||

ಪದಪಾಠಃ

ಪ್ರಽಯಾಜಾನ್ | ಮೇ | ಅನುಽಯಾಜಾನ್ | ಚ | ಕೇವಲಾನ್ | ಊರ್ಜಸ್ವಂತಂ | ಹವಿಷಃ | ದತ್ತ | ಭಾಗಂ ||
ಘೃತಂ | ಚ | ಅಪಾಂ | ಪುರುಷಂ | ಚ | ಓಷಧೀನಾಂ | ಅಗ್ನೇಃ | ಚ | ದೀರ್ಘಂ | ಆಯುಃ | ಅಸ್ತು | ದೇವಾಃ || ೮ ||

ಸಾಯಣಭಾಷ್ಯಂ

ಅನೇನಾಗ್ನಿರ್ಹವಿರ್ವಹನೇ ದಾತಾವ್ಯಾನುಕ್ತ್ವಾ ದತ್ತೇತಿ ಪ್ರತಿಜಾನಾತಿ | ಹೇ ದೇವಾಃ ಮೇ ಮಹ್ಯಂ ಪ್ರಯಾಜಾನ್ ಪ್ರಧಾನಸ್ಯ ಪ್ರಮುಖೇ ಯಷ್ಟವ್ಯಾನೇತನ್ನಾಮಕಾನ್ ಹವಿರ್ಭಾಗಾನ್ ತಥಾನುಯಾಜಾನನುಪ್ರಧಾನಾತ್ಪಶ್ಚಾದ್ಯಷ್ಟವ್ಯಾನೇತನ್ನಾಮಕಾನ್ ಕೇವಲಾನಸಾಧಾರಣಾನ್ದತ್ತ | ಪ್ರಯಚ್ಛತ| ತಥೋರ್ಜಸ್ವಂತಂ ಪ್ರತ್ಯಭಿಘಾರಣಾತ್ಸಾರವಂತಂ ಹವಿಷಃ ಸರ್ವಸ್ಯಾಪಿ ಚರುಪುರೋಡಾಶಾದೇರ್ಭಾಗಂ

**ಸ್ವಿಷ್ಟಕೃದಾಖ್ಯಂ ಭಾಗಂ ದತ್ತ । ಅಥವೋರ್ಜಸ್ವಂತಂ ಹವಿಷೋ ಭಾಗಂ ಪ್ರಯಾಜಾನುಯಾಜಾಖ್ಯಂ ದತ್ತೇತಿ ಯೋಜ್ಯಂ । ಕಿಂಚಾಪಾಂ ಸಾರಭೂತಂ ತಾಭ್ಯ ಉತ್ಪನ್ನಂ ವಾ ಘೃತಮಾಜ್ಯಭಾಗಾದಿಸಾಧನಮೋಷಧೀನಾಮೋಷಧೀಭ್ಯ ಉತ್ಪನ್ನಂ ಪುರುಷಂ ಚ ಭಾಗಂ ದತ್ತ । ಕಿಂಚಾಗ್ನೇರ್ಮಮ ದೀರ್ಘಮಾಯುಶ್ಚಾಸ್ತು। ವಷಟ್ಕಾರಕೃತವಧಭಯಂ ಮಾ ಭೂದಿತ್ಯರ್ಥಃ। ಅನುಮಿತಿಹಾಸಂ ಪ್ರಸ್ತುತ್ಯ ಕೌಷೀತಕಿಬ್ರಾಹ್ಮಣಂ । ತಸ್ಮಾದಾಹುರಾಗ್ನೇಯಾಃ ಪ್ರಯಾಜಾ ಆಗ್ನೇಯಾ ಅನುಯಾಜಾ ಆಗ್ನೇಯಮಾಜ್ಯಮಾಗ್ನೇಯಃ ಪುರೋಡಾಶ ಇತಿ । ಶರೀರದಾಯಾ ಹ ವಾ ಅಗ್ನಯೋ ಭವಂತೀತಿ ಚ ಬ್ರಾಹ್ಮಣಂ ಪುರುಷಾಹುತಿರ್ಯಸ್ಯ ಪ್ರಿಯತಮೇತಿ ಚ ॥**

### ಪ್ರತಿಪದಾರ್ಥ

**ದೇವಾಃ**—ಎಲೈ ದೇವತೆಗಳೇ । **ಮೇ**—ನನಗೆ । **ಪ್ರಯಾಜಾನ್**—(ಆರಂಭದಲ್ಲಿ ಅರ್ಪಿಸುವ) ಪ್ರಯಾಜಸಂಜ್ಞಕಗಳಾದ ಹವಿಸ್ಸುಗಳನ್ನು । **ಅನುಯಾಜಾನ್**—ಅನಂತರ ಅರ್ಪಿಸುವ ಅನುಯಾಜಸಂಜ್ಞಕಗಳಾದ ಹವಿಸ್ಸುಗಳನ್ನು । **ಕೇವಲಾನ್**—ಕೇವಲ ನನಗೆ ಮಾತ್ರ ಸೇರುವಂತೆ । **ದತ್ತ**—ಒದಗಿಸಿರಿ । **ಹವಿಷಃ**....ಹವಿಸ್ಸಿನ । **ಊರ್ಜಸ್ವಂತಂ**—ಸಾರವತ್ತಾದ । **ಭಾಗಂ**—ಭಾಗವನ್ನು । (**ದತ್ತ**—ಕೊಡಿರಿ) । **ಅಪಾಂ**—ಉದಕಗಳಿಗೆ ಸಾರಭೂತವಾದ । **ಘೃತಂ**—ಆಜ್ಯವನ್ನೂ । **ಓಷಧೀನಾಂ**—ಓಷಧಿಗಳಿಗೆ ಸಾರಭೂತವಾದ । **ಪುರುಷಂ**—ಪುರುಷಭಾಗವನ್ನು (ಅನ್ನವನ್ನು) ಕೊಡಿರಿ । **ಅಗ್ನೇಃ**—ನನಗೆ । **ದೀರ್ಘಂ ಆಯುಃ**—ಬಹುಕಾಲ ಬದುಕುವ ಶಕ್ತಿಯು । **ಅಸ್ತು**—ಉಂಟಾಗಲಿ.

### ಭಾವಾರ್ಥ

ಅಗ್ನಿ—ಎಲೈ ದೇವತೆಗಳೇ, ಪ್ರಯಾಜಸಂಜ್ಞಕಗಳಾದ ಹವಿಸ್ಸುಗಳನ್ನೂ ಅನುಯಾಜಸಂಜ್ಞಕಗಳಾದ ಹವಿಸ್ಸುಗಳನ್ನೂ ಕೇವಲ ನನಗೆ ಮಾತ್ರ ಸೇರುವಂತೆ ಅರ್ಪಿಸಿರಿ. ನನಗೆ ಹವಿಸ್ಸಿನ ಸಾರವತ್ತಾದ ಭಾಗವನ್ನು ಕೊಡಿರಿ. ಉದಕಗಳಿಗೆ ಸಾರಭೂತವಾದ ಆಜ್ಯವನ್ನೂ, ಓಷಧಿಗಳಿಗೆ ಸಾರಭೂತವಾದ ಪುರುಷಭಾಗವನ್ನೂ (ಅನ್ನವನ್ನೂ) ಕೊಡಿರಿ. ನನಗೆ ಬಹುಕಾಲ ಬದುಕುವ ಶಕ್ತಿಯುಂಟಾಗಲಿ.

## English Translation

(Agni :) Only grant to me, deities, the concentrated portion of the oblation, the Prayajas and the Anuyajas exclusively : (give me) the butter (the essence) of the waters and man (the essence) of the plants; and let the life of Agni be long.

### ವಿಶೇಷವಿಷಯಗಳು

ಪ್ರಕೃತ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ಪ್ರಯಾಜಾಃ ಮತ್ತು ಅನುಯಾಜಾಃ ಎಂಬ ಶಬ್ದಗಳ ಪ್ರಯೋಗವಿದೆ. ಈ ಶಬ್ದಗಳಿಗೆ ಅರ್ಥವೇನು ಎಂಬ ವಿಷಯದಲ್ಲಿ ಯಾಸ್ಕರು ನಿರ್ವಚನವನ್ನು ಈರೀತಿ ಹೇಳಿದಾರೆ.

**ಅಥ ಕಿಂ ದೇವತಾಃ ಪ್ರಯಾಜಾನುಯಾಜಾಃ । ಅಗ್ನೇಯಾ ಇತ್ಯೇಕೇ । ಪ್ರಯಾಜಾನ್ಮೇ ಅನು-ಯಾಜಾಂಶ್ಚ ಕೇವಲಾನೂರ್ಜಸ್ವಂತಂ ಹವಿಷೋ ದತ್ತಭಾಗಂ । ಘೃತಂ ಚಾಪಾಂ ಪುರುಷಂ ಚೌಷಧೀನಾಮಗ್ನೇಶ್ಚ ದೀರ್ಘಮಾಯುರಸ್ತು ದೇವಾಃ । ತವ ಪ್ರಯಾಜಾ ಅನುಯಾಜಾಶ್ಚ ಕೇವಲ ಊರ್ಜಸ್ವಂತೋ ಹವಿಷಃ ಸಂತು ಭಾಗಾಃ । ತವಾಗ್ನೇ ಯಜ್ಞೋಽಯಮಸ್ತು ಸರ್ವಸ್ತುಭ್ಯಂ ನಮಂತಾಂ ಪ್ರದಿಶಶ್ಚತಸ್ರಃ ॥ ಆಗ್ನೇಯಾ ವೈ ಪ್ರಯಾಜಾ ಆಗ್ನೇಯಾ ಅನುಯಾಜಾ ಇತಿ ಚ ಬ್ರಾಹ್ಮಣಂ ॥**

(ನಿ. ೮-೨೨)

**ಪ್ರಯಾಜಾನುಯಾಜಾಃ** ಎಂದರೆ ಯಾವ ದೇವತೆಗಳು ? ಎಂದು ಪ್ರಶ್ನೆಮಾಡಿ ಅದಕ್ಕೆ— **ಆಗ್ನೇಯಾ ಇತ್ಯೇಕೇ** ಅಗ್ನಿಯೇ ಆ ಮಂತ್ರಗಳ ದೇವತೆಯು' ಎಂದು ಕೆಲವರ ಮತವೆಂದು ಇಲ್ಲಿ ಹೇಳಿದೆ. ಇಲ್ಲಿ ಸ್ವಲ್ಪ ವಿವರಣೆಯು ಆವಶ್ಯಕವು. ಯಜ್ಞಾದಿಕರ್ಮಗಳಲ್ಲಿ ಪರೋಕ್ಷವಾದ ದೇವತೆಗಳನ್ನುದ್ದೇಶಿಸಿ ಅಗ್ನಿಯಲ್ಲಿ ಆಹುತಿಯನ್ನರ್ಪಿಸಿ ಹೋಮ ಮಾಡುವುದು ಸರಿಯಷ್ಟೆ. ಉದ್ದಿಷ್ಟರಾದ ಮತ್ತು ಆಹೂತರಾದ (ಕರೆಯಲ್ಪಟ್ಟ) ದೇವತೆಗಳನ್ನುದ್ದೇಶಿಸಿ ಮಾಡುವ ಆಹುತಿಗಳಿಗೆ ಪ್ರಧಾನಾಹುತಿ (ಮುಖ್ಯಾಹುತಿ) ಗಳೆಂದು ಹೆಸರು. ಈ ಪ್ರಧಾನಾಹುತಿಗಳಿಗೆ ಪೂರ್ವಭಾವಿಯಾಗಿಯೂ ಅನಂತರವೂ ಕೆಲವು ಉಪಹೋಮಗಳನ್ನು ಮಾಡುವುದು ರೂಢಿಯು. ಆದ್ದರಿಂದ ಪ್ರಧಾನಾಹುತಿಗಳಿಗೆ ಪೂರ್ವಭಾವಿಯಾಗಿ ಮಾಡುವ ಉಪಹೋಮಗಳಿಗೆ ಪ್ರಯಾಜಾಃ ಎಂದೂ ಪ್ರಧಾನಾಹುತಿಯ ಅನಂತರ ಮಾಡುವ ಉಪಹೋಮಕ್ಕೆ ಅನುಯಾಜಾ ಎಂದೂ ಹೆಸರು. ಮೇಲೆ ಉದಾಹರಿಸಿರುವ ಎರಡು ಋಕ್ಕುಗಳಲ್ಲಿ ಈ ಪ್ರಯಾಜಾನುಯಾಜಗಳೆಂಬ ಆಹುತಿಗಳನ್ನು ತನ್ನನ್ನುದ್ದೇಶಿಸಿಯೇ ಅರ್ಪಿಸಬೇಕೆಂದೂ ಆ ಆಹುತಿಗಳಿಗೆ ತಾನೇ ದೇವತೆಯಾಗಬೇಕೆಂದೂ ಅಗ್ನಿಯು ದೇವತೆಗಳಿಂದ ವರವನ್ನು ಪಡೆದ ಪ್ರಕಾರ ದೇವತೆಗಳು ಹಾಗೇ ಆಗಲೆಂದು ವರವನ್ನು ಕೊಟ್ಟರು. ಆದಕಾರಣ ಈ ಪ್ರಯಾಜಾನುಯಾಜಾಮಂತ್ರಗಳಿಗೂ ಆಹುತಿಗಳಿಗೂ ಅಗ್ನಿಯೇ ದೇವತೆಯೆಂದು ಕೆಲವರ ಮತವೆಂದು ಯಾಸ್ಕರು ಇಲ್ಲಿ ವಿವರಿಸಿದಾರೆ. ಈ ವಿಷಯದಲ್ಲಿ **ಆಗ್ನೇಯಾ ವೈ ಪ್ರಯಾಜಾ ಆಗ್ನೇಯಾ ಅನುಯಾಜಾ** ಎಂಬ ಬ್ರಾಹ್ಮಣವಾಕ್ಯವನ್ನೂ ಉದಾಹರಿಸಿದಾರೆ. ಇದೇ ರೀತಿ ಬೇರೆಬೇರೆ ಮತದವರ ಅಭಿಪ್ರಾಯಗಳನ್ನೂ ಈರೀತಿ ತಿಳಿಸಿದಾರೆ—

**ಛಂದೋದೇವತಾ ಇತ್ಯಪರಂ । ಛಂದಾಂಸಿ ವೈ ಪ್ರಯಾಜಾಶ್ಛಂದಾಂಸ್ಯನುಯಾಜಾ ಇತಿ ಚ ಬ್ರಾಹ್ಮಣಂ ॥**

**ಋತುದೇವತಾ ಇತ್ಯಪರಂ । ಋತವೋ ವೈ ಪ್ರಯಾಜಾ ಋತವೋಽನುಯಾಜಾ ಇತಿ ಚ ಬ್ರಾಹ್ಮಣಂ ॥**

**ಪಶುದೇವತಾ ಇತ್ಯಪರಂ । ಪಶವೋ ವೈ ಪ್ರಯಾಜಾ ಪಶವೋಽನುಯಾಜಾ ಇತಿ ಚ ಬ್ರಾಹ್ಮಣಂ॥**

**ಪ್ರಾಣದೇವತಾ ಇತ್ಯಪರಂ । ಪ್ರಾಣಾ ವೈ ಪ್ರಯಾಜಾಃ ಪ್ರಾಣಾ ವಾ ಅನುಯಾಜಾ ಇತಿ ಚ ಬ್ರಾಹ್ಮಣಂ ॥**

**ಆತ್ಮದೇವತಾ ಇತ್ಯಪರಂ। ಆತ್ಮಾ ವೈ ಪ್ರಯಾಜಾ ಆತ್ಮಾ ವಾ ಅನುಯಾಜಾ ಇತಿ ಚ ಬ್ರಾಹ್ಮಣಂ॥**

ಕೆಲವರು ಪ್ರಯಾಜಾನುಯಾಜಮಂತ್ರಗಳಿಗೆ ಛಂದಸ್ಸೇ ದೇವತೆಯೆಂದು ಹೇಳುವರು. ಈ ವಿಷಯದಲ್ಲಿ—**ಛಂದಾಂಸಿ ವೈ ಪ್ರಯಾಜಾಶ್ಛಂದಾಂಸ್ಯನುಯಾಜಾ** ಎಂಬ ಬ್ರಾಹ್ಮಣವಾಕ್ಯವಿರುವುದು. ಮತ್ತೆ ಕೆಲವರು ಈ ಮಂತ್ರಗಳಿಗೆ

ಋತುಗಳೇ (ವಸಂತಾದಿ ಋತುಗಳು) ದೇವತೆಗಳೆಂದು ಹೇಳುವರು. ಇದನ್ನು—**ಋತವೋ ವೈ ಪ್ರಯಾಜಾ ಋತವೋಽನುಯಾಜಾ** ಎಂಬ ಬ್ರಾಹ್ಮಣವಾಕ್ಯವು ಸಮರ್ಥಿಸುವುದು. ಮತ್ತೆ ಕೆಲವರು ಇವುಗಳಿಗೆ ಗೋವುಗಳೇ ಮೊದಲಾದ ಪಶುಗಳೇ ದೇವತೆಯೆಂದು ಹೇಳುವರು. ಇದಕ್ಕೆ **ಪಶವೋ ವೈ ಪ್ರಯಾಜಾ ಪಶವೋಽನುಯಾಜಾ** ಎಂಬ ಬ್ರಾಹ್ಮಣವಾಕ್ಯವೇ ಆಧಾರವಾಗಿರುವುದು. ಮತ್ತೆ ಕೆಲವರು ಈ ಮಂತ್ರಗಳಿಗೆ ಪ್ರಾಣವೇ ದೇವತೆಯೆಂದು ಹೇಳಿ **ಪ್ರಾಣಾ ವಾ ಪ್ರಯಾಜಾಃ ಪ್ರಾಣಾ ವಾ ಅನುಯಾಜಾ** ಎಂಬ ಬ್ರಾಹ್ಮಣವಾಕ್ಯವನ್ನು ಆಧಾರವಾಗಿ ತೋರಿಸುವರು. ಮತ್ತೆ ಕೆಲವರು ಈ ಮಂತ್ರಗಳಿಗೆ ಆತ್ಮವೇ ದೇವತೆಯೆಂದು ಹೇಳುವರು. ಇದನ್ನು ಸಮರ್ಥಿಸುವುದಕ್ಕಾಗಿ **ಆತ್ಮಾ ವೈ ಪ್ರಯಾಜಾ ಆತ್ಮಾ ವಾ ಅನುಯಾಜಾ** ಎಂಬ ಬ್ರಾಹ್ಮಣವಾಕ್ಯವೇ ಪ್ರಮಾಣವಾಗಿರುವುದೆಂದು ಪ್ರತಿಪಾದಿಸುವರು.

> **ಆಗ್ನೇಯಾ ಇತಿ ತು ಸ್ಥಿತಿಃ । ಭಕ್ತಿಮಾತ್ರಮಿತರತ್। ಕಿಮರ್ಥಂ ಪುನರಿದಮುಚ್ಯತೇ । ಯಸ್ಯೈ ದೇವತಾಯೈ ಹವಿರ್ಗೃಹೀತಂ ಸ್ಯಾತ್ತಾಂ ಮನಸಾ ಧ್ಯಾಯೇದ್ವಷಟ್ಕರಿಷ್ಯನ್ನಿತಿ ಹ ವಿಜ್ಞಾಯತೇ ॥**
>
> (ನಿ. ೮-೨೨)

ಇಷ್ಟೆಲ್ಲಾ ಮತಭೇದಗಳೂ ಅಭಿಪ್ರಾಯಭೇದಗಳೂ ಇದ್ದರೂ ಈ ಮಂತ್ರಗಳಿಗೆ ಅಗ್ನಿಯೇ ದೇವತೆಯೆಂಬ ಮತವೇ ಪ್ರಮಾಣಾರ್ಹವಾದುದು ಎಂದು ನಿರ್ಧರಿಸಲ್ಪಟ್ಟಿರುವುದು. ಹೀಗಿದ್ದರೂ ನಾನಾ ಮತಬೇಧಗಳನ್ನು ಹೇಳಿರುವುದು ಯಾಕೆ ? ಇದರಿಂದ ಏನು ಪ್ರಯೋಜನ ಎಂದರೆ ಪ್ರಯಾಜಾನುಯಾಜಮಂತ್ರಗಳನ್ನು ವಷಟ್ಕಾರಪೂರ್ವಕವಾಗಿ ಅಗ್ನಿಯಲ್ಲಿ ಆಹುತಿಯನ್ನರ್ಪಿಸುವಾಗ ಆಯಾ ಮಂತ್ರಗಳ ದೇವತೆಗಳನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಆಹುತಿಯನ್ನರ್ಪಿಸಬೇಕೆಂದು ವಿಧಿಯೂ ಸಂಪ್ರದಾಯವೂ ಇರುವುದರಿಂದ ಇದನ್ನೆಲ್ಲಾ ಇಲ್ಲಿ ವಿಶದವಾಗಿ ತಿಳಿಸಬೇಕಾಯಿತು.

**ಸಂಹಿತಾಪಾಠಃ**

## ತವ ಪ್ರಯಾಜಾ ಅನುಯಾಜಾಶ್ಚ ಕೇವಲ ಊರ್ಜಸ್ವಂತೋ ಹವಿಷಃ ಸಂತು ಭಾಗಾಃ ।
## ತವಾಗ್ನೇ ಯಜ್ಞೋ೩ಽಯಮಸ್ತು ಸರ್ವಸ್ತುಭ್ಯಂ ನಮಂತಾಂ ಪ್ರದಿಶಶ್ಚತಸ್ರಃ ॥ ೯ ॥

**ಪದಪಾಠಃ**

ತವ । ಪ್ರಯಾಜಾಃ । ಅನುಽಯಾಜಾಃ । ಚ । ಕೇವಲೇ । ಊರ್ಜಸ್ವಂತಃ । ಹವಿಷಃ । ಸಂತು । ಭಾಗಾಃ ॥

ತವ । ಅಗ್ನೇ । ಯಜ್ಞಃ । ಅಯಂ । ಅಸ್ತು । ಸರ್ವಃ । ತುಭ್ಯಂ । ನಮಂತಾಂ । ಪ್ರಽದಿಶಃ । ಚತಸ್ರಃ ॥

ಸಾಯಣಭಾಷ್ಯಂ

**ಏವಮುಗ್ನಿನಾ ಯೊಚ್ಯಮಾನಾ ದೇವಾಃ ಪ್ರತಿ ಬ್ರುವತೇ। ಹೇ ಅಗ್ನೇ ತವ ಪ್ರಯೊಜಾ ಅನುಯೊಜಾಶ್ಚ ಕೇವಲೇಽಸಾಧಾರಣಾ ಊರ್ಜಸ್ವಂತೋ ಬಲವಂತೋ ಹವಿಷೋ ಭಾಗಾಃ ಸಂತು। ಹೇ ಅಗ್ನೇ ಅಯಂ ಸರ್ವೋ ಯಜ್ಞಶ್ಚ ತವಾಸ್ತು। ತಥಾ ಪ್ರದಿಶಃ ಪ್ರಕೃಷ್ಟಾ ಮುಖ್ಯಾಶ್ಚ ತಸ್ರೋ ದಿಶಸ್ತುಭ್ಯಂ ನಮಂತಾಂ। ಅತ ಏಹಿ ಹವಿರ್ವಹೇತಿ ಶೇಷಃ ॥**

ಪ್ರತಿದಾರ್ಥ

**ಅಗ್ನೇ**—ಎಲೈ ಅಗ್ನಿಯೇ। **ಪ್ರಯೊಜಾಃ**—ಪ್ರಯಾಜರೂಪವಾದ ಹವಿಸ್ಸುಗಳೂ। **ಅನುಯೊಜಾಶ್ಚ**—ಅನುಯಾಜಸಂಜ್ಞಕಗಳಾದ ಹವಿಸ್ಸುಗಳೂ। **ಕೇವಲೇ ತವ**—ಕೇವಲ ನಿನಗಾಗಿಯೇ। **ಸಂತು**—ಉದ್ದಿಷ್ಟವಾಗಿರುತ್ತವೆ। **ಹವಿಷಃ**—ಹವಿಸ್ಸುಗಳ। **ಊರ್ಜಸ್ವಂತಃ**—ಸಾರವತ್ತಾದ। **ಭಾಗಾಃ**—ಭಾಗಗಳು। ನಿನಗಾಗಿಯೇ ಇರುತ್ತವೆ। **ಅಯಂ ಸರ್ವಃ ಯಜ್ಞಃ**—ಈ ಸಕಲ ಯಜ್ಞವೂ। **ತವ**—ನಿನ್ನನ್ನೇ ಉದ್ದೇಶಿಸಿ। **ಅಸ್ತು**—ಅರ್ಪಿತವಾಗಲಿ। **ಚತಸ್ರಃ ಪ್ರದಿಶಃ**—ನಾಲ್ಕು ಮುಖ್ಯವಾದ ದಿಕ್ಕುಗಳೂ। **ತುಭ್ಯಂ**—ನಿನಗೆ। **ನಮಂತಾಂ**—ನಮಸ್ಕರಿಸಲಿ.

ಭಾವಾರ್ಥ

ದೇವತೆಗಳು—ಎಲೈ ಅಗ್ನಿಯೇ, ಪ್ರಯಾಜರೂಪವಾದ ಹವಿಸ್ಸುಗಳೂ, ಅನುಯಾಜಸಂಜ್ಞಕಗಳಾದ ಹವಿಸ್ಸುಗಳೂ ಕೇವಲ ನಿನಗಾಗಿಯೇ ಉದ್ದಿಷ್ಟವಾಗಿರುತ್ತವೆ. ಹವಿಸ್ಸುಗಳ ಸಾರವತ್ತಾದ ಭಾಗಗಳು ನಿನಗಾಗಿಯೇ ಇರುತ್ತವೆ.ಸಕಲ ಯಜ್ಞವೂ ನಿನ್ನನೇ ಉದ್ದೇಶಿಸಿ ಅರ್ಪಿತವಾಗಲಿ. ನಾಲ್ಕು ಮುಖ್ಯವಾದ ದಿಕ್ಕುಗಳೂ ನಿನಗೆ ನಮಸ್ಕರಿಸಲಿ.

## English Translation

(The gods :) yours, Agni, be the Prayajas and Anuyajas exclusively; yours be the concentrated portions of the oblations : let this sacrifice, Agni, be all yours and let the four quarters of space bow down before you.

# ಐವತ್ತೆಡರನೆಯ ಸೂಕ್ತ

ಪೀಠಿಕೆ

ಈ ಸೂಕ್ತದಲ್ಲಿ ವಿಶ್ವೇದೇವತೆಗಳು ಪ್ರತಿಪಾದಿತರಾಗಿರುವುದರಿಂದ ಈ ದೇವತೆಗಳ ವಿಷಯವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುತ್ತೇವೆ. ಅಶ್ವಿನೌ ಮೊದಲಾದ ದೇವತಾವಿಶೇಷಗಳನ್ನು ಸೂಚಿಸುವ ಮೂವತ್ತೊಂದು ನಾಮಗಳ ಮಧ್ಯದಲ್ಲಿ ಈ ದೇವತೆಗಳ ಹೆಸರು ಪಠಿತವಾಗಿರುವುದು. ಇವರು ಪ್ರತ್ಯೇಕವಾದ ವಿಶೇಷ ದೇವತೆಗಳೆಂದು ಭಾಷ್ಯಕಾರರು ಹೇಳುವರು. ಕೆಲವರು ಎಲ್ಲಾ ದೇವತೆಗಳೆಂದು ಹೇಳುವರು. ಆದರೆ ವಿಶ್ವೇದೇವತೆಗಳೆಂದು ಪ್ರತ್ಯೇಕವಾದ ದೇವತೆಗಳನ್ನು ಋಷಿಗಳು ಆರಾಧಿಸುತ್ತಿದ್ದರೆಂದು ಇತರ ಸೂಕ್ತಗಳಲ್ಲಿರುವ ವಿಷಯಗಳಿಂದ ಸ್ಪಷ್ಟವಾಗಿ ಹೇಳಬಹುದು. ಈ ವಿಚಾರದಲ್ಲಿ ಯಾಸ್ಕರು ಓಮಾಸಃ ಎಂಬ ಋಕ್ಕಿಗೆ ವಿವರಣೆಯನ್ನು ಬರೆದಿರುವರು.

**ಆವಿತಾರೋ ನಾವನೀಯಾ ವಾ ಮನುಷ್ಯಧೃತೇಃ ಸರ್ವೇ ದೇವಾ ಇಹಾ ಗಚ್ಛತ ಹತ್ತವಂತೋ ದತ್ತವತಃ ಸುತಮಿತಿ. ತದೇತದೇಕಮೇವ ವೈಶ್ವದೇವಂ ಗಾಯತ್ರಂ ತೃಚಂ ದಶತಯೀಷು ವಿದ್ಯತೇ ಯತ್ತು ಕಿಂಚಿದ್ಬಹುದೈವತಂ ತದ್ವೈಶ್ವದೇವಾನಾಂ ಸ್ಥಾನೇ ಯುಜ್ಯತೇ ಯದೇವ ವಿಶ್ವಲಿಂಗಮಿತಿ ಶಾಕಪೂಣಿಃ (ನಿ. ೧೨-೪೦)** ಈ ಋಕ್ಕಿನ ಅರ್ಥವಿಚಾರದಲ್ಲಿ ನಾವು ಹೇಳಿರುವ ಅರ್ಥಕ್ಕೂ, ಯಾಸ್ಕರ ಅರ್ಥಕ್ಕೂ ಏನೂ ವ್ಯತ್ಯಾಸವಿಲ್ಲ. ಆದರೆ ಯಾಸ್ಕರ ಅಭಿಪ್ರಾಯದಂತೆ **ವಿಶ್ವೇದೇವಾಃ** ಎಂದರೆ ಎಲ್ಲಾ ದೇವತೆಗಳು ಎಂದೂ, ಮತ್ತು ವಿಶ್ವೇದೇವರೆಂದರೆ ಆ ಹೆಸರಿನಿಂದ ಕರೆಯಲ್ಪಡುವ ವಿಶೇಷ ದೇವತೆಗಳೆಂದು ಶಾಕಪೂಣಿ ಎಂಬುವರ ಮತವೆಂದೂ ಯಾಸ್ಕರೇ ಹೇಳಿರುವರು. ಆದುದರಿಂದ ಅವರ ಕಾಲದಲ್ಲಿಯೇ ಈ ವಿಚಾರದಲ್ಲಿ ಭಿನ್ನಾಭಿಪ್ರಾಯವಿತ್ತೆಂದು ದೃಢವಾಗಿ ಹೇಳಬಹುದು. ಈಗ ಗೃಹ್ಯಾದಿ ಕರ್ಮಗಳಲ್ಲಿ ರೂಢಿಯಿರುವಂತೆ ಹೇಳುವುದಾದರೆ ಈ ವಿಶ್ವೇದೇವತೆಗಳು ಸಾಧಾರಣದೇವತೆಗಳ ಗುಂಪಿಗೆ ಸೇರಿದವರಲ್ಲವೆಂದೂ, ಇವರದ್ದೇ ಹದಿಮೂರು ಜನರ ವಿಶೇಷ ಗುಂಪೆಂದೂ ತಿಳಿದು ಬರುವುದು. ಅದು ಹೇಗಾದರೂ ಇರಲಿ. ಋಗ್ವೇದದಲ್ಲಿ ವರ್ಣಿಸಿರುವ ವಿಶ್ವೇದೇವತೆಗಳು ಪ್ರತ್ಯೇಕವಾದ ದೇವತೆಗಳ ಗುಂಪಿಗೆ ಸೇರಿದವರೆಂದು ಹೇಳುವುದೇ ಯುಕ್ತವಾಗಿ ತೋರುವುದು.

ಋಗ್ವೇದದಲ್ಲಿ ವಿಶ್ವೇದೇವತೆಗಳನ್ನು ಮಾತ್ರ ಸ್ತೋತ್ರ ಮಾಡಿರುವ ೬೩ ಸೂಕ್ತಗಳಿವೆ. ಇದಲ್ಲದೆ ಋ. ಸಂ. ೧-೧೬೪ ನೆಯ ಸೂಕ್ತದಲ್ಲಿ ಮೊದಲನೆಯ ೪೧ ಋಕ್ಕುಗಳು ವಿಶ್ವೇದೇವತೆಗಳ ಪರವಾಗಿವೆ. ಇವುಗಳಲ್ಲೆಲ್ಲಾ— ಋ. ಸಂ. ೧೦-೧೫೫ ಈ ಸೂಕ್ತವನ್ನು ಬಿಟ್ಟು ಉಳಿದ ಎಲ್ಲಾ ಸೂಕ್ತಗಳಲ್ಲಿಯೂ ಅನೇಕ ದೇವತೆಗಳನ್ನು ಎಂದರೆ ಇತರ ಸೂಕ್ತಗಳಲ್ಲಿರುವಂತೆ ಅಗ್ನಿ, ಇಂದ್ರ ಮೊದಲಾದ ದೇವತೆಗಳನ್ನು ಸ್ತುತಿಸಿರುವುದಲ್ಲದೆ ವೃಕ್ಷಗಳು, ನದಿಗಳು, ಪರ್ವತಗಳು, ಗೋವುಗಳು, ಅಶ್ವಗಳು ಮೊದಲಾದುವುಗಳೂ ಪ್ರತಿಪಾದಿಸಲ್ಪಟ್ಟಿವೆ. ಇವುಗಳಲ್ಲದೆ ಇತರ ದೇವತಾಕ ವಾದ ಸೂಕ್ತಗಳಲ್ಲಿ ಅನೇಕ ಕಡೆ ಒಟ್ಟು ೧೭ ಋಕ್ಕುಗಳು ವಿಶ್ವೇದೇವತಾಕವಾಗಿವೆ. ಈ ಸ್ಥಳಗಳಲ್ಲೆಲ್ಲಾ ವಿಶ್ವೇದೇವತೆಗಳೇ ಈ ಋಕ್ಕುಗಳಿಗೆ ದೇವತೆಗಳೆಂದು ಹೇಳಲ್ಪಟ್ಟಿದೆ ಮತ್ತು ಋ. ಸಂ. ೧೦-೧೨೫-೧ ನೆಯ ಮಂತ್ರದಲ್ಲಿ ವಿಶ್ವೇದೇವತೆಗಳ ಜೊತೆಯಲ್ಲಿ ವಸುರುದ್ರಾದಿತ್ಯರೂ ಸೇರಿದ್ದಾರೆ.

ವಾಜಸನೇಯಸಂಹಿತೆಯ (ಶುಕ್ಲಯಜುರ್ವೇದ) ೨-೨೨ ನೆಯ ಮಂತ್ರದಲ್ಲಿ ಇಂದ್ರನು, ಆದಿತ್ಯರು, ವಸು ಗಳು, ಮರುತ್ತು, ವಿಶ್ವೇದೇವತೆಗಳೊಡನೆ ಸೇರಬೇಕೆಂದು ಪ್ರಾರ್ಥಿಸಲ್ಪಟ್ಟಿರುವರು. ಅದೇ ಸಂಹಿತೆಯ ೩೩-೪೫ ರಿಂದ ೪೭ ಮಂತ್ರಗಳಲ್ಲಿ ಇಂದ್ರ, ವಾಯು ಮತ್ತು ಇತರ ದೇವತೆಗಳು ವಿಶ್ವೇದೇವತೆಗಳ ಜೊತೆಯಲ್ಲಿ ಸ್ತುತಿಸಲ್ಪಟ್ಟಿದ್ದಾರೆ.

ಅಥರ್ವಣವೇದದ ೨೦-೬೨-೬ ನೇ ಮಂತ್ರದಲ್ಲಿ ವಿಶ್ವೇದೇವತೆಗಳನ್ನು ಏಕವಚನದಲ್ಲಿ ಸೂಚಿಸಲಾಗಿದೆ ಮತ್ತು ವಿಶ್ವೇದೇವತೆಗಳ ಪರವಾದ ಅನೇಕ ಸೂತ್ರಗಳು ಅಥರ್ವಣವೇದದಲ್ಲಿವೆ.

ಬ್ರಾಹ್ಮಣಗಳಲ್ಲಿಯೂ ಸಹ ವಿಶ್ವೇದೇವತೆಗಳ ಹೆಸರು ಅಲ್ಲಲ್ಲಿ ಸೂಚಿತವಾಗಿದೆ. ಕೌಷೀತಕೀ ಬ್ರಾಹ್ಮಣದ ೪-೧೪, ಗೋಪಥ ಬ್ರಾಹ್ಮಣದ ೧-೨೦ ನೇ ಮಂತ್ರಗಳಲ್ಲಿ ಎಲ್ಲಾ ದೇವತೆಗಳನ್ನೂ ವಿಶ್ವೇದೇವತೆಗಳೆಂಬ ಹೆಸರಿನಿಂದಲೇ ಸಂಬೋಧನೆಮಾಡಲಾಗಿದೆ. ಶತಪಥಬ್ರಾಹ್ಮಣದ ೩-೯-೨-೬ನೇ ಮಂತ್ರದಲ್ಲಿ ವಿಶ್ವೇದೇವತೆಗಳು ಸೂರ್ಯನ ಕಿರಣಗಳೆಂದೂ ಶ. ಬ್ರಾ. ೧೪-೨-೨-೩೭ ರಲ್ಲಿ ಪ್ರಾಣಾದಿವಾಯುಗಳೆಂದೂ, ಶ. ಬ್ರಾ. ೭-೧-೧-೪೨ ರಲ್ಲಿ ಯಜ್ಞಕರ್ಮಗಳೆಂದೂ, ಶ. ಬ್ರಾ. ೨-೪-೪-೧೩ ರಲ್ಲಿ ಇಂದ್ರಾಗ್ನಿಗಳೆಂದೂ ಕರೆಯಲ್ಪಟ್ಟಿದ್ದಾರೆ. ತೈತ್ತಿರೀಯ ಆರಣ್ಯಕದಲ್ಲಿ (ತೈ. ಆ. ೫-೧-೬) ವಿಶ್ವೇದೇವತೆಗಳ ಜೊತೆಯಲ್ಲಿ ಇಂದ್ರಾಗ್ನಿಗಳು ಸ್ತುತಿಸಲ್ಪಟ್ಟಿದ್ದಾರೆ.

ಪುರಾಣಗಳಲ್ಲಿ ಕೆಲವುಕಡೆ ಈ ವಿಶ್ವೇದೇವತೆಗಳು ದಿಕ್ಕುಗಳಿಗೆ ಅಧಿಪತಿಗಳೆಂದು ಹೇಳಲ್ಪಟ್ಟಿದೆ. ನಿರುಕ್ತದಲ್ಲಿ (ನಿ. ೧೨-೩೯) ವಿಶ್ವೇದೇವತೆಗಳೆಂದರೆ ಎಲ್ಲಾ ದೇವತೆಗಳೂ ಎಂದಿದೆ. ನಿರುಕ್ತದ ಭಾಷ್ಯಕಾರರಾದ ದುರ್ಗಾಚಾರ್ಯರೆಂಬುವರು ವಿಶ್ವೇದೇವತೆಗಳೆಂದರೆ ಸೂರ್ಯನ ಕಿರಣಗಳೆಂದು ಅರ್ಥಮಾಡಿದಾರೆ. ನಿರುಕ್ತಕಾರರಾದ ಯಾಸ್ಕರು ವಿಶ್ವೇದೇವತೆಗಳೆಂದರೆ ಸಮಸ್ತ ದೇವತೆಗಳು ಎಂದು ತಮ್ಮ ಅಭಿಪ್ರಾಯವನ್ನು ಹೇಳಿರುವುದಲ್ಲದೆ ಶಾಕಪೂಣಿ ಎಂಬುವರ ಅಭಿಪ್ರಾಯವನ್ನೂ ಸೂಚಿಸಿರುವರು. ಶೌನಕರು ತಮ್ಮ ಬೃಹದ್ದೇವತಾ ಎಂಬ ಗ್ರಂಥದಲ್ಲಿ (ಬೃ. ದೇ. ೨-೧೪೮ ರಿಂದ ೧೩೪ ಶ್ಲೋಕಗಳು) ವಿಶ್ವೇದೇವತೆಗಳ ವಿಷಯವಾಗಿ ಹೇಳುವಾಗ, ವಿಶ್ವೇದೇವಾಃ ಎಂದರೆ ಸಮಸ್ತ ದೇವತೆಗಳು ಎಂದು ಯಾಸ್ಕರು ಮತ್ತು ಶಾಂಡಿಲ್ಯರು ಅಭಿಪ್ರಾಯಪಡುವರೆಂದು ಹೇಳಿದಾರೆ. ಶೌನಕರ ಮತವೂ ಅದೇರೀತಿ ಇದೆ.

ಸಾಯಣಾಚಾರ್ಯರು ಈ ಋಕ್ಕಿಗೆ ವ್ಯಾಖ್ಯಾನಮಾಡುವಾಗ ವಿಶ್ವೇದೇವರೆಂದರೆ ಅಶ್ವಿನೀದೇವತೆಗಳೇ ಮೊದಲಾದ ಮೂವತ್ತೊಂದುಮಂದಿ ದೇವತೆಗಳೂ ಸೇರಿ ವಿಶ್ವೇದೇವತೆಗಳೆಂದು ಕರೆಯಲ್ಪಡುವರೆಂಬುದಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಪಾಶ್ಚಾತ್ಯಪಂಡಿತರಲ್ಲಿ Langlois, Kaegi, Hopkins ಎಂಬುವರು ವಿಶ್ವೇದೇವತೆಗಳೆಂದರೆ ಸಮಸ್ತ ದೇವತೆಗಳು ಎಂದೂ, Wilson, Griffith, Macdonell ಎಂಬುವರು ವಿಶ್ವೇದೇವತೆಗಳೆಂದರೆ ಸಮಸ್ತ ದೇವತೆಗಳು ಅಥವಾ ವಿಶ್ವೇದೇವತೆಗಳೆಂಬ ಪ್ರತ್ಯೇಕವಾದ ದೇವತೆಗಳ ಸಮೂಹ ಎಂಬ ಎರಡು ವಿಧವಾದ ಅರ್ಥವನ್ನೂ ಅನುಮೋದಿಸುವರು.

ಮುಖ್ಯಾಭಿಪ್ರಾಯವೇನೆಂದರೆ—ಪೂರ್ವದಲ್ಲಿ ಎಂದರೆ ಬಹುಪ್ರಾಚೀನಕಾಲದಲ್ಲಿ ವಿಶ್ವೇದೇವತೆಗಳೆಂದರೆ ಸಮಸ್ತ ದೇವತೆಗಳೆಂಬ ಅರ್ಥವೇ ರೂಢಿಯಲ್ಲಿದ್ದು, ಕಾಲಕ್ರಮೇಣ ವಿಶ್ವೇದೇವರೆಂದರೆ, ಆ ಹೆಸರಿನ ಪ್ರತ್ಯೇಕ ದೇವತೆಗಳ ಸಮೂಹವೆಂದು ಭಾವಿಸುವುದು ಬಳಕೆಗೆ ಬಂತೆಂದೂ ಹೇಳಬಹುದು. ಅನೇಕ ಬ್ರಾಹ್ಮಣಗಳಲ್ಲಿಯೂ, ಪುರಾಣಗಳಲ್ಲಿಯೂ ವಿಶ್ವೇದೇವತೆಗಳೇ ಒಂದು ಪ್ರತ್ಯೇಕವಾದ ದೇವತೆಗಳ ಗುಂಪೆಂದೂ ಸೂಚಿಸಲ್ಪಟ್ಟಿದೆ. ಆದರೆ ಯಾಸ್ಕರ ಕಾಲದಲ್ಲಿಯೂ ಸಹ ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿತ್ತೆಂದು ಯಾಸ್ಕರ ನಿರುಕ್ತದಿಂದಲೇ ತಿಳಿದುಬರುತ್ತದೆ.

ಋಗ್ವೇದದಲ್ಲಿ ವಿಶ್ವೇದೇವತೆಗಳ ಪರವಾದ ಋಕ್ಕುಗಳು ಅಲ್ಲಲ್ಲಿ ಬರುವುದಲ್ಲದೆ ವಿಶ್ವೇದೇವತಾಕವಾದ ಪ್ರತ್ಯೇಕ ಸೂಕ್ತಗಳೇ ೫೮ ಇರುವವು. ಋ. ಸಂ. ಪ್ರಥಮಮಂಡಲದಲ್ಲಿ ೧೪, ೮೯, ೯೦, ೧೦೫, ೧೦೬, ೧೦೭, ೧೨೧, ೧೨೨ ನೇ ಸೂಕ್ತಗಳು ; ಎರಡನೇ ಮಂಡಲದಲ್ಲಿ ೨೯-೩೧ ನೇ ಸೂಕ್ತಗಳು; ಮೂರನೇ ಮಂಡಲದಲ್ಲಿ ೫೪ ನೇ ಸೂಕ್ತವು; ನಾಲ್ಕನೇ ಮಂಡಲದಲ್ಲಿ ೫೫ ನೇ ಸೂಕ್ತವು; ಐದನೇ ಮಂಡಲದಲ್ಲಿ ೪೧, ೪೨, ೪೩, ೪೪, ೪೫, ೪೭, ೪೮, ೪೯, ೫೦, ೫೧; ಆರನೇ ಮಂಡಲದಲ್ಲಿ ೪೯, ೫೦, ೫೧, ೫೨; ಏಳನೆಯ ಮಂಡಲದಲ್ಲಿ ೩೫, ೩೬, ೩೭, ೩೯, ೪೦, ೪೨, ೪೩; ಎಂಟನೇ ಮಂಡಲದಲ್ಲಿ ೨೭, ೨೮, ೨೯, ೩೦, ೫೮, ೮೩; ಹತ್ತನೆಯ ಮಂಡಲದಲ್ಲಿ ೩೧, ೩೨, ೩೫, ೩೬, ೫೧, ೬೪, ೬೫, ೬೬, ೯೨, ೯೩, ೧೦೦, ೧೦೧, ೧೦೯, ೧೧೪, ೧೨೬, ೧೨೮, ೧೩೭, ೧೪೧, ೧೫೭, ೧೮೧ ಎಂಬ ಸೂಕ್ತಗಳು ವಿಶ್ವೇದೇವತಾಕವು.

ವಿಶ್ವೇದೇವತೆಗಳಾರು ? ಅವರ ಸ್ವರೂಪವೇನು ? ಇತ್ಯಾದಿ ವಿಷಯಗಳನ್ನು ಇಲ್ಲಿ ವಿಮರ್ಶಿಸುವುದು ಆವಶ್ಯಕವಾಗಿದೆ.

**ಕೋ ನು ವಾಂ ವೈಶ್ವದೇವಾನಿ ಏಕಾದಶ ಪರಾಣ್ಯತಃ ।**

(ಬೃ. ದೇ. ೫-೩೬)

**ಕೋ ನು ವಾಂ ಮಿತ್ರಾವರುಣೌ** ಎಂಬ ಮಂತ್ರದಿಂದ ಆರಂಭವಾಗುವ ಸೂಕ್ತದಿಂದ ಮೊದಲುಗೊಂಡು ಒಟ್ಟು ಹನ್ನೊಂದು ಸೂಕ್ತಗಳು ವಿಶ್ವೇದೇವತೆಗಳನ್ನು ಉದ್ದೇಶಿಸಿ ಪ್ರಶಂಸಿಸುವ ಸೂಕ್ತಗಳಾಗಿವೆ ಎಂಬ ಬೃಹದ್ದೇವತಾ ವಾಕ್ಯವು ಋಕ್ಸಂಹಿತೆಯಲ್ಲಿ ಐದನೆಯ ಮಂಡಲದ ೪೧ ನೇ ಸೂಕ್ತದಿಂದ ೫೧ ನೇ ಸೂಕ್ತಗಳವರೆಗಿನ ಹನ್ನೊಂದು ಸೂಕ್ತಗಳಲ್ಲಿ ಪ್ರಶಂಸಿತವಾಗಿರುವ ವಿವರಗಳನ್ನು ಸೂಚಿಸುವುದಾಗಿದೆ. ಇದನ್ನೇ ಸರ್ವಾನುಕ್ರಮಣಿಕೆಯಲ್ಲಿ **ವೈಶ್ವದೇವಂ ಹ್ಯೈ ತತ್** ಎಂದು ತಿಳಿಸಿದೆ.

(Maedonell's Brihad Dewata, English Translation P. 175)

ವಿಶ್ವೇದೇವತೆಗಳೆಂದರೇನು ? ಎಂಬ ವಿಷಯದಲ್ಲಿ ನಿಷ್ಕೃಷ್ಟವಾದ ಅಭಿಪ್ರಾಯವನ್ನು ಹೇಳುವುದು ಸುಲಭವಲ್ಲ. ಎಲ್ಲಾ ದೇವತೆಗಳ ಸಮೂಹವೆಂದರ್ಥವೇ ಅಥವಾ ಒಂದು ನಿರ್ದಿಷ್ಟವಾದ ಸಂಖ್ಯೆಯನ್ನು ತಿಳಿಸುವ ದೇವತೆಗಳ ಪ್ರತ್ಯೇಕವಾದ ಒಂದು ಗಣವೇ ಎಂಬ ವಿಷಯದಲ್ಲಿ ಮತಭೇದಗಳಿರುತ್ತವೆ. ಆದರೆ ವಿಶ್ವೇದೇವಗಣಗಳೆಂದು ಋಕ್ಸಂಹಿತೆಯಲ್ಲಿ ಸಕಲ ದೇವತೆಗಳನ್ನೂ ಸ್ಪಷ್ಟವಾಗಿ ನಿರ್ದೇಶಿಸಿರುವ ಪ್ರಕರಣವೂ ಇರುತ್ತದೆ.

**ಅಮೀ ಯೇ ದೇವಾ ಸ್ಥನ ತ್ರಿಷ್ವಾ ರೋಚನೇ ದಿವಃ** |

(ಋ. ಸಂ. ೧-೧೦೫-೫)

ಎಂಬ ಮಂತ್ರದಲ್ಲಿ ಯಾವ ಲೋಕತ್ರಯದ ದೇವತೆಗಳೆಲ್ಲರೂ ನಿರ್ದಿಷ್ಟರಾಗಿದ್ದಾರೋ, ಅದೇ ದೇವತೆಗಳ ವಿಷಯವನ್ನು ಬೃಹದ್ದೇವತೆಯಲ್ಲಿ ತಿಳಿಸುತ್ತಾ,

**ಬೃಹಸ್ಪತಿಪ್ರಚೋದಿತಾ ವಿಶ್ವೇದೇವಗಣಾಸ್ತ್ರಯಃ** |
**ಜಗ್ಮುಸ್ತ್ರಿತಸ್ಯ ತಂ ಯಜ್ಞಂ ಭಾಗಾಂಶ್ಚ ಜಗೃಹುಃ ಸಹ** ||

(ಬೃ. ದೇ. ೧-೧೩೬)

ಪೃಥಿವ್ಯಾದಿ ಮೂರು ಲೋಕಗಳಲ್ಲೂ ಮೂರು ಗುಂಪುಗಳಾಗಿ ವಿಭಕ್ತರಾಗಿರುವ ಸಕಲ ದೇವತೆಗಳೂ ಸಹ ಬೃಹಸ್ಪತಿಯಿಂದ ಪ್ರಚೋದಿತರಾಗಿ ತ್ರಿತನ ಯಜ್ಞಕ್ಕೆ ಬಂದು ಅದರಲ್ಲಿ ಭಾಗವಹಿಸಿದರು ಎಂದು **ವಿಶ್ವದೇವ**ಶಬ್ದಕ್ಕೆ ಸಕಲ ದೇವತೆಗಳೆಂದರ್ಥಮಾಡಿದೆ. ಇದೇ ಅಭಿಪ್ರಾಯವನ್ನು ಶತಪಥಬ್ರಾಹ್ಮಣದಲ್ಲೂ ವಿವರಿಸುತ್ತಾ,

**ವೈಶ್ವದೇವಶ್ಚತುರ್ಥಮಹರ್ಭವತಿ | ವಿಶ್ವೇ ವೈ ಸರ್ವೇ ದೇವಾಃ ಸರ್ವೇಷಾಂ ದೇವಾನಾಮಾಪ್ತ್ಯೈ ವೈಶ್ವದೇವಾ ಗ್ರಹಾ ಭವಂತಿ ವೈಶ್ವದೇವ್ಯಃ ಪರೋರುಚಃ ಸರ್ವಂ ವೈಶ್ವದೇವಮುಸದಿತಿ** ||

(ಶ. ಬ್ರಾ. ೧೩-೬-೧-೬)

ಚತುರ್ಥವಾದ ಅಹಸ್ಸು ವೈಶ್ವದೇವವಾದುದು. ವಿಶ್ವೇದೇವತೆಗಳೆಂದರೆ, ಸಕಲ ದೇವತೆಗಳೆಂದರ್ಥ. ಚತುರ್ಥದಿನದಲ್ಲಿ ಅವರ ಪೂರ್ಣವಾದ ಅನುಗ್ರಹವು ಲಭ್ಯವಾಗಬೇಕಾದುದೇ ಉದ್ದಿಶ್ಯ. ಸೋಮಗ್ರಹಗಳು ವೈಶ್ವದೇವಗ್ರಹಗಳಾಗಿವೆ. ಪರೋರುಕ್‌ಸಂಜ್ಞಿಕಗಳಾದ ಕಲಾಪಗಳೂ ಸಹ ಸಕಲ ದೇವತೆಗಳ ಅನುಗ್ರಹವನ್ನೇ ಸಂಪಾದಿಸುವುದಾಗಿದೆ. ಆದುದರಿಂದ ಈ ಗ್ರಹಗಳು ಸಕಲ ದೇವತೆಗಳನ್ನೂ ತೃಪ್ತಿಪಡಿಸಬೇಕು ಎಂಬುದಾಗಿಯೂ, ಇದರಂತೆಯೇ,

**ಇತಿ ಹ ಸ್ಮಾಹ ಸತ್ಯಕಾಮೋ ಜಾಬಾಲೋ ವಿಶ್ವೇ ವೈ ಸರ್ವೇ ದೇವಾಸ್ತದೇನಾನ್ಯಥಾ ದೇವತಂ ಪ್ರೀಣಾತೀತಿ** ||

(ಶ. ಬ್ರಾ. ೧೩-೫-೨-೧)

ವಿಶ್ವೇದೇವತೆಗಳೆಂದರೆ ಸಕಲ ದೇವತೆಗಳೆಂದರ್ಥವು, ಆದುದರಿಂದಲೇ ವಿಶ್ವೇದೇವತಾಕವಾದ ಈ ಕರ್ಮದಿಂದ ಸಕಲ ದೇವತೆಗಳಿಗೂ ವೈಯಕ್ತಿಕವಾದ ತೃಪ್ತಿಯು ಲಭಿಸುತ್ತದೆ ಎಂದು ಸತ್ಯಕಾಮಜಾಬಾಲನು ಘೋಷಿಸಿದ್ದಾನೆ ಎಂದು ಶತಪಥದಲ್ಲಿ ಸ್ಪಷ್ಟವಾಗಿ ತಿಳಿಸಿದೆ. ಹೀಗೆ ಸಕಲ ದೇವತೆಗಳಿಗೂ ಅನ್ವಯಿಸುವುದೆಂಬ ಮತವು ವೈದಿಕವಾಕ್ಯಗಳಲ್ಲೇ ಕೆಲವೆಡೆಗಳಲ್ಲಿದ್ದರೂ ಸಹ ಇನ್ನೂ ಕೆಲವೆಡೆಗಳಲ್ಲಿ ವೈಕಲ್ಪಿಕವಾದ ತಾತ್ಪರ್ಯಕ್ಕೆ ಅವಕಾಶವಾಗಿದೆ. ಉದಾಹರಣೆಗೆ,

**ಸ ನೈವ ವ್ಯಭವತ್ಸ ವಿಶಮಸೃಜತ ಯಾನ್ಯೇತಾನಿ ದೇವಜಾತಾನಿ ಗಣಶ ಆಖ್ಯಾಯಂತೇ ವಸವೋ ರುದ್ರಾ ಆದಿತ್ಯಾ ವಿಶ್ವೇ ದೇವಾ ಮರುತ ಇತಿ ||**

(ಬೃ. ಉ. ೧-೪-೧೨)

ಸೃಷ್ಟಿಕರ್ಮದಲ್ಲಿ ಉದ್ಯುಕ್ತನಾದ ಪ್ರಜಾಪತಿಯು ಇನ್ನೂ ಸೃಷ್ಟಿರೂಪವಾದ ಪೌಷ್ಕಲ್ಯವನ್ನು ಹೊಂದಿರಲಿಲ್ಲ. ಆಗ ಅವನು ಪ್ರಜೆಗಳನ್ನೂ ಗಣರೂಪಗಳಲ್ಲಿ ನಿರ್ದಿಷ್ಟರಾಗುವ ದೇವತೆಗಳನ್ನೂ ಸೃಷ್ಟಿಸಿದನು. ಅವರೇ ವಸುಗಳು, ರುದ್ರರು, ಆದಿತ್ಯರು ಮತ್ತು ವಿಶ್ವೇದೇವತೆಗಳು. ಅಲ್ಲದೇ ಮರುತ್ತುಗಳು ಎಂದಿರುವಾಗ, ಈ ಗಣಗಳಲ್ಲಿ ವಸುಗಳು ಅಷ್ಟಸಂಖ್ಯಾಕವಾದ ಗಣವನ್ನೂ, ರುದ್ರರು ಏಕಾದಶ (೧೧) ಸಂಖ್ಯಾಕವಾದ ಗಣವನ್ನೂ, ಆದಿತ್ಯರು ದ್ವಾದಶಸಂಖ್ಯೆಯುಳ್ಳ (೧೨) ಗಣವನ್ನೂ ಮತ್ತು ಮರುತ್ತುಗಳು ಸಪ್ತಸಂಖ್ಯಾಕವಾದ ಗಣವನ್ನು ತೋರುವುವು ಎಂದು ವಿವರಿಸಿ ವಿಶ್ವೇದೇವಪದಕ್ಕೆ ಈರೀತಿ ಅರ್ಥವನ್ನು ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ತಿಳಿಸಿದ್ದಾರೆ.

**ವಿಶ್ವೇದೇವಾಸ್ತ್ರಯೋದಶ ವಿಶ್ವಾಯಾ ಅಪತ್ಯಾನಿ । ಸರ್ವೇ ವಾ ದೇವಾಃ ।**

(ಬೃ. ಉ. ಶಂ. ಭಾ. ೧-೪-೧೨)

**ವಿಶ್ವಾ** ಎಂಬುವಳ ಪುತ್ರರಾದ ಹದಿಮೂರು ದೇವತೆಗಳ ಗುಂಪೆಂದು ಒಂದರ್ಥ ಅಥವಾ ಸಕಲ ದೇವತೆಗಳೆಂದು ಇನ್ನೊಂದರ್ಥ ಎಂದು ವೈಕಲ್ಪಿಕವಾದ ಅರ್ಥವುಂಟೆಂದು ಹೇಳಿದ್ದಾರೆ. ಈ ವಿಶ್ವೆ ಎಂಬುವಳು ಯಾರು, ಇವಳ ಪುತ್ರತ್ವವು ದೇವತೆಗಳಿಗೆ ಹೇಗೆ ಪ್ರಾಪ್ತವಾಯಿತು ಎಂಬುದನ್ನು ಹೇಳುವುದು ಸುಲಭವಲ್ಲ. ಸಂಹಿತಾದಿಗಳಲ್ಲಿ ಇವಳು ಅಷ್ಟು ಪ್ರಖ್ಯಾತಳಾದ ವ್ಯಕ್ತಿಯೂ ಅಲ್ಲ. ಬೃಹದ್ದೇವತೆಯಲ್ಲಿ ಮಾತ್ರ ಒಂದುಕಡೆಯಲ್ಲಿ ಇವಳ ಹೆಸರು ನಿರ್ದಿಷ್ಟವಾಗಿದೆ.

**ಅದಿತಿರ್ದಿತಿರ್ದನುಃ ಕಾಲಾ ದನಾಯುಃ ಸಿಂಹಿಕಾ ಮುನಿಃ ।**
**ಕ್ರೋಧಾ ವಿಶ್ವಾ ವರಿಷ್ಠಾ ಚ ಸುರಭಿರ್ವಿನತಾ ತಥಾ ।**
**ಕದ್ರೂಶ್ಚೈವೇತಿ ದುಹಿತ್ರಃ ಕಶ್ಯಪಾಯ ದದೌ ಸ ಚ ||**

(ಬೃ. ದೇ. ೫-೧೪೪)

ಮರೀಚಿಪುತ್ರನಾದ ಕಶ್ಯಪನಿಗೆ ಹದಿಮೂರು ದೇವಪತ್ನಿಯರಿದ್ದರು. ಅವರಾರೆಂದರೆ—ಅದಿತಿ, ದಿತಿ, ದನು, ಕಾಲಾ, ದನಾಯು, ಸಿಂಹಿಕಾ, ಮುನಿ, ಕ್ರೋಧಾ, ವಿಶ್ವಾ, ವರಿಷ್ಠಾ ಸುರಭಿ, ವಿನತಾ, ಕದ್ರು ಇವರು ದಕ್ಷನ ಪುತ್ರಿಯರು. ಈ ಹದಿಮೂರು ಕನ್ಯೆಯರನ್ನೂ ದಕ್ಷನು ಕಶ್ಯಪನಿಗೆ ಕೊಟ್ಟು ವಿವಾಹಮಾಡಿದನು.

**ತಾಸು ದೇವಾಸುರಾಶ್ಚೈವ ಗಂಧರ್ವೋರಗರಾಕ್ಷಸಾಃ ।**

(ಬೃ. ದೇ. ೫-೧೪೫)

ಈ ದಕ್ಷಪುತ್ರಿಯರಲ್ಲಿ ದೇವತೆಗಳೂ, ಅಸುರರೂ, ಗಂಧರ್ವರೂ, ಪನ್ನಗಗಳೂ, ರಾಕ್ಷಸಾದಿಗಳೂ ಉತ್ಪನ್ನರಾದರು.

ಅದಿತಿಗೆ ಹನ್ನೆರಡು ಪುತ್ರರುತ್ಪನ್ನರಾದರು ಇತ್ಯಾದಿಯಾದ ವಿವರವನ್ನು ಕೊಡುತ್ತಾ ಅಗಸ್ತ್ಯ ಮತ್ತು ವಸಿಷ್ಠರ ಜನನ ಕ್ರಮವನ್ನು ವಿವರಿಸಿದೆ. ಅದೇ ಸಂದರ್ಭದಲ್ಲಿ,

**ಸರ್ವತ್ರ ಪುಷ್ಕರಂ ತತ್ರ ವಿಶ್ವೇ ದೇವಾ ಅಧಾರಯನ್ ।**

(ಬೃ. ದೇ. ೫-೧೫೫)

ಪುಷ್ಕರ (ಕಮಲಪುಷ್ಪ) ದಲ್ಲಿ ಸ್ಥಿತನಾಗಿದ್ದ ವಸಿಷ್ಠನನ್ನು ವಿಶ್ವೇದೇವತೆಗಳು ಧರಿಸಿದರು ಎಂದಿದೆ. **ವಿಶ್ವಾ** ಎಂಬುವಳು ಕಶ್ಯಪನ ಪತ್ನಿಯೆಂದಿದ್ದರೂ ಸಹ ವಿಶ್ವೇದೇವತೆಗಳು ಅವಳ ಪುತ್ರರೆಂದು ತಿಳಿಸಿಲ್ಲ. ಆದರೆ ಪುಷ್ಕರಸ್ಥನಾಗಿದ್ದ ವಸಿಷ್ಠನನ್ನು ಧರಿಸಿದ್ದು ಋಕ್ಸಂಹಿತೆಯಲ್ಲಿಯೂ ವರ್ಣಿತವಾಗಿದೆ.

**ಉತಾಸಿ ಮೈತ್ರಾವರುಣೋ ವಸಿಷ್ಠೋರ್ವಶ್ಯಾ ಬ್ರಹ್ಮನ್ಮನಸೋಽಧಿ ಜಾತಃ ।**
**ದ್ರಪ್ಸಂ ಸ್ಕನ್ನಂ ಬ್ರಹ್ಮಣಾ ದೈವ್ಯೇನ ವಿಶ್ವೇ ದೇವಾಃ ಪುಷ್ಕರೇ ತ್ವಾದದಂತ ॥**

(ಋ. ಸಂ. ೭-೩೩-೧೧)

ಎಲೈ ವಸಿಷ್ಠನೇ, ನೀನು ಮಿತ್ರಾವರುಣದಿಂದ ಊರ್ವಶಿಯಲ್ಲಿ ಉತ್ಪನ್ನನಾದವನು. ಪುಷ್ಕರಸ್ಥನಾದ ನಿನ್ನನ್ನು ವಿಶ್ವೇದೇವತೆಗಳು ಧರಿಸಿದರು ಎಂದಿದೆ. ಇಲ್ಲಿ ವಿಶ್ವೇ **ದೇವಾಃ** ಎಂದರೆ ಯಾರು ಎಂಬುದನ್ನು ಸಾಯಣರು ತಿಳಿಸಿಲ್ಲ. ನಿರುಕ್ತಕಾರರು ಇದೇ ವಾಕ್ಯಕ್ಕೆ ತಾತ್ಪರ್ಯವನ್ನು ತಿಳಿಸುವಾಗ,

**ಸರ್ವೇ ದೇವಾಃ ತ್ವಾಧಾರಯಂತ ।**

(ನಿ. ೫-೧೪)

ಎಂಬುದಾಗಿ **ವಿಶ್ವೇ ದೇವಾಃ** ಎಂಬುದಕ್ಕೆ ಸಕಲ ದೇವತೆಗಳೂ ಸಹ ಎಂದರ್ಥಮಾಡಿದ್ದಾರೆ.

ಮತ್ಸ್ಯಪುರಾಣದಲ್ಲಿ ಮಾತ್ರ ಒಂದುಕಡೆ ವಿಶ್ವೇದೇವತೆಗಳು **ವಿಶ್ವಾ** ಎಂಬುವಳ ಪುತ್ರರೆಂದೂ, ಅವರಾರೆಂದರೆ **ಕ್ರತು, ದಕ್ಷ, ವಸು, ಸತ್ಯ, ಕಾಲಕಾಮ, ಮುನಿ, ಕುರಜ, ಮನುಜ, ವೀಜ, ರೋಚಮಾನ** ಎಂಬ ಹತ್ತು ಮಂದಿಗಳೆಂದೂ ತಿಳಿಸಿದೆ. ಇವರು ಹವ್ಯಕವ್ಯಗಳಲ್ಲಿ ಪೂಜನೀಯರೆಂದೂ ಪ್ರಶಂಸಿಸಿದೆ (ಮತ್ಸ್ಯ ೨೦೩). ಇವರು ವಿಶ್ವಾಮಿತ್ರನಿಂದ ಶಾಪವನ್ನು ಹೊಂದಿದರೆಂದು ಮಾರ್ಕಂಡೇಯಪುರಾಣದಲ್ಲಿ ತಿಳಿಸಿದೆ (ಮಾರ್ಕಂಡೇಯ ೭). ಆದರೆ ಸದ್ಯಃ ಪುರಾಣದ ಆಧಾರಗಳಿಂದ ನಾವು ವೈದಿಕವಾಕ್ಯಗಳ ಅರ್ಥವನ್ನು ನಿಷ್ಕರ್ಷಿಸಲು ಸಾಧ್ಯವಿಲ್ಲ.

ವೈದಿಕವಾಕ್ಯಗಳಲ್ಲಿ, ವಿಶ್ವೇದೇವತೆಗಳ ಪ್ರಶಂಸೆಯು ಮೂರುಬಗೆಯುಳ್ಳವಾಗಿವೆ. ಅದನ್ನೇ ಬೃಹದ್ದೇವತೆಯಲ್ಲಿ ಈರೀತಿ ತಿಳಿಸಿದೆ-

**ವೈಶ್ವದೇವಾನಿ ಸೂಕ್ತಾನಿ ತ್ರಿವಿಧಾನಿ ಭವಂತಿ ತು ।**
**ಸೂರ್ಯಸಂಸ್ತವಸಂಯುಕ್ತಂ ವಿಶ್ವಲಿಂಗಂ ಪೃಥಕ್‌ಸ್ತುತಿ ॥**

(ಬೃ. ದೇ. ೩-೪೨)

ವಿಶ್ವದೇವತೆಗಳನ್ನು ಪ್ರಶಂಸಿಸಿ ಪ್ರಾರ್ಥಿಸತಕ್ಕ ಸೂಕ್ತಗಳು ಮೂರುವಿಧವಾಗಿವೆ. ಸೂರ್ಯಪ್ರಶಂಸೆಗಳೊಡನೆ ಕೂಡಿಕೊಂಡಿರತಕ್ಕ ಸೂಕ್ತಗಳು ಮೊದಲನೆಯ ಪಂಗಡಕ್ಕೆ ಸೇರಿದವು. ಸಕಲ ದೇವತೆಗಳ ಸಾಮಾನ್ಯ ಧರ್ಮಗಳನ್ನು ನಿರ್ದೇಶಿಸಿ ಪ್ರಶಂಸಿಸುವ ಸೂಕ್ತಗಳು ಎರಡನೆಯ ಪಂಗಡದವು. ಅದಲ್ಲದೆ, ವೈಯಕ್ತಿಕವಾದ ದೇವತೆಯನ್ನೇ

ಪ್ರಶಂಸಿಸಿ ಆಯಾ ದೇವತೆಯ ವೈಯಕ್ತಿಕವಾದ ಗುಣಗಳನ್ನು ಸ್ತುತಿಸುವುದು (ಪೃಥಕ್‌ಸ್ತುತಿ) ಮೂರನೆಯ ಪಂಗಡಕ್ಕೆ ಸೇರಿದವು.

**ಪೃಥಕ್‌ಸ್ತುತೀತಿ ಯತ್ಪ್ರೋಕ್ತಂ ತದ್ವಿದ್ಯಾದ್ವ್ಯಪದೈವತಂ ।**
**ವಿಶ್ವಲಿಂಗಂ ತು ತದ್ಯತ್ರ ವಿಶ್ವೈಃಸ್ವೈಃ ಕರ್ಮಜೈರ್ಗುಣೈಃ ॥**
(ಬೃ. ದೇ. ೩–೪೩)

ಮೇಲಿನ ಶ್ಲೋಕದಲ್ಲಿ ವಿವರಿಸಿದ (೧) **ಸೂರ್ಯಸಂಸ್ತವಸಂಯುಕ್ತ,** (೨) ವಿಶ್ವಲಿಂಗ, (೩) **ಪೃಥಕ್‌ಸ್ತುತಿ** ಎಂಬ ಈ ಮೂರುಬಗೆಯಾದ ಸ್ತುತಿಗಳಲ್ಲಿ; ಪೃಥಕ್‌ಸ್ತುತಿಯು ಅನೇಕ ದೇವತೆಗಳ ವೈಯಕ್ತಿಕಪ್ರಶಂಸೆಯುಳ್ಳದ್ದಾಗಿರುತ್ತದೆ. ದೇವತೆಗಳ ಸಾಮಾನ್ಯ ಧರ್ಮಗಳನ್ನು ತಿಳಿಸುವುದೇ ವಿಶ್ವಲಿಂಗವು. ಇದೇ ಅಂಶವನ್ನು ಬೇರೊಂದುಕಡೆಯಲ್ಲಿ ತಿಳಿಸುತ್ತಾ **ವಿಶ್ವಲಿಂಗ**ವೆಂದರೇನು ಎಂಬುದನ್ನು ವಿವರಿಸಿದೆ.

**ಋಷಿರ್ದೇವತಾಃ ಸರ್ವಾ ವಿಶ್ವಾಭಿಃ ಸ್ತುತಿಭಿಃ ಸ್ತುತಾಃ ।**
**ಸಂಜ್ಞಾ ತು ವಿಶ್ವಮಿತ್ಯೇಷಾ ಸರ್ವಾವಾಪ್ತೌ ನಿಪಾತಿತಾ ॥**
(ಬೃ. ದೇ. ೨–೧೩)

ಸಕಲ ದೇವತೆಗಳೂ ಸಹ ಸಂಯುಕ್ತವಾದ ಮತ್ತು ವಿಶ್ವಗುಣಗಳನ್ನು ವರ್ಣಿಸುವ ಸ್ತುತಿಗಳ ಮೂಲಕ ಋಷಿಗಳಿಂದ ಪ್ರಶಂಸಿತರಾಗಿದ್ದಾರೆ. **ವಿಶ್ವ** ಎಂಬ ಸಂಜ್ಞೆಯು **ಸರ್ವಾವಾಪ್ತಿ** ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. **ಸರ್ವಾವಾಪ್ತಿ** ಎಂದರೆ ಸಕಲವನ್ನೂ ಅಡಕಮಾಡಿಕೊಂಡಿರುವುದು ಎಂದರ್ಥ. **ವಿಶ್ವೇದೇವಾಃ** ಎಂದರೆ, ಈ ಸಂಜ್ಞೆಯು ಪ್ರಕಾರ ಸಕಲ ದೇವತೆಗಳನ್ನೂ ಸೇರಿಸಿಕೊಂಡಿರುವುದು ಎಂದರ್ಥ. ಇವನ್ನೇ ಮೇಲೆ, **ವಿಶ್ವಲಿಂಗ** ಎಂಬ ಸಂಜ್ಞೆಯಿಂದ ವ್ಯವಹರಿಸಿದೆ. ನಿರುಕ್ತಕಾರರು **ವಿಶ್ವಲಿಂಗ**ವೆಂಬ ಸಂಜ್ಞೆಯನ್ನು ವಿವರಿಸುತ್ತಾ, **ವಿಶ್ವ**ವೆಂಬ ಪದದಿಂದ ಸೂಚಿತವಾಗಿರತಕ್ಕ ದೇವತಾಪ್ರಶಂಸಕವಾದ ಸೂಕ್ತಗಳು ಮಾತ್ರ **ವೈಶ್ವದೇವ** ಸೂಕ್ತಗಳೆಂದು ಹೇಳಿರುವ **ಶಾಕಪೂಣಿ**ಯವರ ಮತವನ್ನೂ ತಿಳಿಸಿದ್ದಾರೆ (ನಿ. ೧೨-೪೦).

**ವಿಶ್ವೈಃ ಸ್ವೈಃ ಕರ್ಮಜೈರ್ಗುಣೈಃ** (೩–೪೩) ವಿಶ್ವಸಾಧಾರಣಗಳಾದ ಗುಣಗಳು ಆಯಾ ದೇವತೆಗಳ ವೈಯಕ್ತಿಕವಾದ ಕರ್ಮಜವೆಂದೂ ತಿಳಿಸಿದೆ. ಈ ಅರ್ಥದಲ್ಲಿ **ವಿಶ್ವಲಿಂಗ** ಮತ್ತು **ಪೃಥಕ್‌ಸ್ತುತಿ** ಈ ಎರಡು ಗುಂಪಿನ ಸೂಕ್ತಗಳಿಗೂ ಅಧಿಕವಾದ ವ್ಯತ್ಯಾಸವಿರುವುದಿಲ್ಲ. ಹೇಗೆಂದರೆ, **ಸ್ವಕರ್ಮಜ**ವೆಂದರೇನು ಎಂಬುದನ್ನು ವಿವರಿಸುತ್ತಾ ಸ್ವಕರ್ಮಜವಾದ ವಿಶ್ವಗುಣಗಳೇನೆಂಬುದನ್ನು ಈರೀತಿ ಸೂಚಿಸಿದೆ.

**ಸ್ತೂಯಂತೇ ದೇವತಾ ಹ್ಯಾಸು ಕರ್ಮಭಿಃ ಸ್ವೈಃ ಪೃಥಕ್‌ಪೃಥಕ್ ।**
**ಸ್ತುತಾಃ ಕರ್ಮಗುಣೈಃ ಸ್ವೈಃ ಸ್ವೈರ್ದೇವತಾ ಯತ್ರ ತತ್ರ ತು ॥**
**ಪೃಥಕ್ಕರ್ಮಸ್ತುತಿರ್ನಾಮ ವೈಶ್ವದೇವಂ ತದೇವ ತು ।**
(ಬೃ. ದೇ. ೬–೬೯, ೭೦)

ಎಲ್ಲೆಲ್ಲಿ ದೇವತೆಗಳು ಆಯಾ ವೈಯಕ್ತಿಕವಾದ ಗುಣಗಳ ವರ್ಣನೆಯಿಂದಲೂ ಆಯಾ ದೇವತೆಯ ವೈಯಕ್ತಿಕವಾದ ವ್ಯವಹಾರಗಳಿಂದಲೂ ಸ್ತುತರಾಗಿದ್ದಾರೆಯೋ ಅಲ್ಲೆಲ್ಲಾ **ಪೃಥಕ್ಕರ್ಮಸ್ತುತಿ** (ವೈಯಕ್ತಿಕವಾದ ಕರ್ಮಗಳ ಸ್ತುತಿ) ಗಳಿಗೆ ಅವಕಾಶವಾಗಿರುತ್ತದೆ. ಇಂತಹ ಸ್ತುತಿಯು ವೈಶ್ವದೇವಿಕವಾಗಿರುತ್ತದೆ.

ಮೂರನೆಯದಾ।., **ಸೂರ್ಯಸಂಸ್ತವಸಂಯುಕ್ತಂ** ಎಂಬ ವಾಕ್ಯದಿಂದ ವರ್ಣಿತವಾಗಿರುವ ವೈಶ್ವದೇವ ಸ್ತುತಿಯ ಸ್ವರೂಪವೇನೆಂಬುದನ್ನು ಪರಿಶೀಲಿಸಿದರೆ, ಅದರ ಸ್ವರೂಪವನ್ನು ಈರೀತಿ ತಿಳಿಸಿದೆ.

**ವಿಶ್ವಾನುದ್ದಿಶ್ಯ ಯದ್ದೇವಾನ್ ಸ್ತೌತಿ ಸೂರ್ಯಮನೇಕಧಾ ।**
**ದೇವಾನೇವಾಭಿಸಂಸ್ತೌತಿ ತಂ ಪ್ರಾಹುಃ ಸೂರ್ಯಸಂಸ್ತವಂ ॥**

(ಬೃ. ದೇ. ೩-೪೪)

ಯಾವ ಮಂತ್ರವು ವಿಶ್ವೇದೇವತೆಗಳನ್ನುದ್ದೇಶಿಸಿ ಬಹಳವಾಗಿ ಸೂರ್ಯನನ್ನೇ ಪ್ರಶಂಸಿಸುವುದೋ ಅಲ್ಲದೇ ಮುಖ್ಯವಾಗಿ ದೇವತಾಪ್ರಶಂಸಕವೇ ಆಗಿರುವುದೋ ಅದು **ಸೂರ್ಯಸಂಸ್ತವ** ಎಂಬ ಹೆಸರಿನಿಂದ ಕರೆಯಲ್ಪಡುತ್ತದೆ. ಆದರೆ, ಈ ನಿಯಮಕ್ಕೆ ಒಂದೆರಡುಕಡೆಗಳಲ್ಲಿ ಅವ್ಯಾಪ್ತಿಯೂ ಇರುತ್ತದೆ. ಉದಾಹರಣೆಗೆ—

**ನ ತು ಭಾಗಸ್ಯ ಸೂಕ್ತಾದೌ ಸೂಕ್ತೇಷ್ವೇವೌಷಸೇಷು ವಾ ।**
**ನ ಸಾವಿತ್ರೇ ಹ್ವಯಾಮೀತಿ ನ ಸೂರ್ಯಾಯಾಂ ಕ್ರತೌ ಮಖೇ ॥**

(ಬೃ. ದೇ. ೩-೪೫)

ಋಕ್ಸಂಹಿತೆಯಲ್ಲೆಲ್ಲಾ ಭಗೋದ್ದಿಷ್ಟವಾಗಿ ಏಕಮಾತ್ರಸೂಕ್ತವಾದ ೭-೪೧ ನೇ ಸೂಕ್ತದಲ್ಲಿ ಅನೇಕ ದೇವತೆಗಳು ನಿರ್ದಿಷ್ಟರಾಗಿದ್ದಾರೆ. ಆದರೆ ಅದು ವೈಶ್ವದೇವಸೂಕ್ತವಾಗಲಾರದು. ಈ ಸೂಕ್ತದ ಮೊದಲನೇ ಮಂತ್ರದಲ್ಲೇ ಸವಿತೃವಿನೊಡನೆ ಇಂದ್ರ, ಅಗ್ನಿ ಇತ್ಯಾದಿ ನಾನಾ ದೇವತೆಗಳನ್ನು ಪ್ರಶಂಸಿಸಿ ಪ್ರಾರ್ಥಿಸಿದೆ. ಆದರೆ ಅದೂ ವೈಶ್ವದೇವವಲ್ಲ. ಋ. ಸಂ. ೧೦-೮೫ ನೇ ಸೂಕ್ತಕ್ಕೂ ಇದೇ ನಿಯಮವು ಅನ್ವಯಿಸುತ್ತದೆ. ಅದು ಕೇವಲ ಸೂರ್ಯಾಸೂಕ್ತವೆನಿಸಿಕೊಳ್ಳುತ್ತದೆ. ಅನೇಕ ದೇವತಾಕವಾಗಿದ್ದರೂ ಸಹ ಈ ಮಂತ್ರಗಳೆಲ್ಲವೂ ಯಜ್ಞಕರ್ಮಗಳಲ್ಲಿ ಉಪಯುಕ್ತವಾಗುವ ವೈಶ್ವದೇವವೆನಿಸಿಕೊಳ್ಳುವುದಿಲ್ಲ. ಇದರಂತೆಯೇ,

**ಹ್ವಯಾಮ್ಯಗ್ನಿಂ ಪ್ರಥಮಂ ಸ್ವಸ್ತಯೇ ಹ್ವಯಾಮಿ ಮಿತ್ರಾವರುಣಾ ವಿಹಾವಸೇ ।**
**ಹ್ವಯಾಮಿ ರಾತ್ರೀಂ ಜಗತೋ ನಿವೇಶನೀಂ ಹ್ವಯಾಮಿ ದೇವಂ ಸವಿತಾರಮೂತಯೇ ॥**

(ಋ. ಸಂ. ೧-೩೫-೧)

ಇತ್ಯಾದಿ ಸ್ಥಳಗಳಲ್ಲಿ **ಸೂರಸಂಸ್ತವಸಂಯುಕ್ತ**ವಾದ ವೈಶ್ವದೇವ ಎಂಬ ಗುಂಪಿಗೆ ಸೇರಿಸಬಹುದಾದ ಮಂತ್ರಗಳಿದ್ದು, ಸವಿತೃವಿನೊಡನೆ ಇತರ ದೇವತೆಗಳ ಪ್ರಶಂಸೆಯಿದೆ. ಆದರೆ ಇದೂ ಸಹ ವೈಶ್ವದೇವವಲ್ಲ. ಹೀಗೆ ಮೂರನೆಯ ಪಂಗಡಕ್ಕೆ ಸೇರಬಹುದೆಂದು ತೋರುವ ಅನೇಕ ಸೂಕ್ತಗಳು ಈ ನಿಯಮಕ್ಕೆ ಒಳಪಡುವುದಿಲ್ಲ.

ಈರೀತಿ ವಿಧಿಪ್ರತಿಷೇಧಗಳನ್ನು ಪರಿಶೀಲಿಸುವ ಸಂದರ್ಭದಲ್ಲಿ ವೈಶ್ವದೇವಸೂಕ್ತಗಳಲ್ಲಿ ಆನುಷಂಗಿಕವಾಗಿ ನಿರ್ದಿಷ್ಟರಾಗಿರುವ ದೇವತೆಗಳಾರು ಎಂಬುದನ್ನೂ ಅರಿಯಬೇಕು.

**ದೇವತಾವಿದವೇಕ್ಷೇತ ಪ್ರಯೋಗೇ ಸರ್ವಕರ್ಮಣಾಂ ।**

(ಬೃ. ದೇ. ೮-೧೨೪)

ಸಕಲ ಕರ್ಮಗಳೂ ಪ್ರಯೋಗಕೌಶಲ್ಯವನ್ನು ಪಡೆಯುವುದಕ್ಕಾಗಿ ವೈಯಕ್ತಿಕವೂ, ಸಾಂಘಿಕವೂ ಆದ ಈ ದೇವತಾಸ್ವರೂಪಗಳನ್ನು ಪೂರ್ಣವಾಗಿ ತಿಳಿಯಬೇಕಾಗಿದೆ. ಆ ದೇವತೆಗಳಾರೆಂದರೆ,

**ಸಪ್ತರ್ಷಯೋ ವಸವಶ್ಚಾಪಿ ದೇವಾ ಅಥರ್ವಾಣೋ ಭೃಗವಃ ಸೋಮಸೂರ್ಯಾಃ ।**
**ಪಥ್ಯಾಸ್ವಸ್ತೀ ರೋದಸೀ ಚೋಕ್ತಮಂತ್ರೇ ಕುಹೂರ್ಗುಂಗೂರದಿತಿರ್ಧೇನುರಘ್ನ್ಯಾ ॥**

(ಬೃ. ದೇ. ೮-೧೨೫)

ಸಪ್ತರ್ಷಿಗಳು, ವಸುಗಳು, ದೇವತೆಗಳು, ಅಥರ್ವರು, ಭೃಗುಗಳು, ಸೋಮ, ಸೂರ್ಯ, ಪೃಥ್ಯಾಸ್ವಸ್ತೀ, ಉಪಮಂತ್ರರಾದ ದ್ಯಾವಾಪೃಥಿವಿಗಳು, ಕುಹು, ಗುಂಗೂ, ಧೇನು ಮತ್ತು ಅಘ್ನ್ಯಾ.

**ಅಸುನಿತೀರಿಳಾ ಚಾಪ್ತ್ಯಾ ವಿಧಾತಾನುಮತಿರ್ಹ ಯಾ ।**
**ಅಂಗಿರೋಭಿಃ ಸಹೈತಾಃ ಸ್ಯುರುಕ್ತಮಂತ್ರಾಶ್ಚ ದೇವತಾಃ ॥**

(ಬೃ. ದೇ. ೮-೧೨೬)

ಅಸುನೀತಿ, ಇಳಾ, ಆಪ್ತ್ಯರು, ವಿಧಾತೃ, ಅಂಗಿರಸಹಿತವಾದ ಅನುಮತಿ, ಇವರೆಲ್ಲರೂ ಉಕ್ತಮಂತ್ರರಾದ ದೇವತೆಗಳೆಂದು ಪರಿಗಣಿತರಾಗಿದ್ದಾರೆ. (ಇಲ್ಲಿ ನಿರ್ದಿಷ್ಟರಾದ ದೇವತೆಗಳು ಅಪರೂಪವಾಗಿ ಪ್ರಶಂಸಿತರಾಗಿರುವರು. ಇವರೆಲ್ಲರೂ ವೈಶ್ವದೇವಸೂಕ್ತಗಳಲ್ಲಿ ಪ್ರಶಂಸಿತರಾಗಿದ್ದಾರೆ).

**ವೈಶ್ವಾನರೋ ಹಿ ಸುಪರ್ಣೋ ವಿವಸ್ವಾನ್ ಪ್ರಜಾಪತಿ ದ್ಯೌಃ ಸುಧನ್ವಾ ನಗೋಹ್ಯಃ ।**
**ಅಪಾಂನಪಾದರ್ಯಮಾ ವಾತಜೂತಿರಿಳಸ್ಪತಿಶ್ಚಾಪಿ ರಥಸ್ಪತಿಶ್ಚ ॥**

(ಬೃ. ದೇ. ೮-೧೨೭)

ವೈಶ್ವಾನರ, ಸುಪರ್ಣಾ, ವಿವಸ್ವಾನ್, ಪ್ರಜಾಪತಿ, ದ್ಯೌಃ, ಸುಧನ್ವಾ, ನಗೋಹ್ಯ, ಅಪಾಂನಪಾತ್, ಅರ್ಯಮನ್, ವಾತಜೂತಿ, ಇಳಸ್ಪತಿ ಮತ್ತು ರಥಸ್ಪತಿ.

**ಋಭವಃ ಪರ್ಜನ್ಯಃ ಪರ್ವತಾ ಗ್ನಾಶ್ಚ ದಕ್ಷೋ ಭಗೋ ದೇವಪತ್ನೀರ್ದಿಶಶ್ಚ ।**
**ಆದಿತ್ಯಾಃ ರುದ್ರಾಃ ಪಿತರೋಽಥ ಸಾಧ್ಯಾ ನಿಪಾತಿನೋ ವೈಶ್ವದೇವೇಷು ಸರ್ವೇ ॥**

(ಬೃ. ದೇ. ೮-೧೨೮)

ಋಭುಗಳು, ಪರ್ಜನ್ಯ, ಪರ್ವತಗಳು, ಸ್ತ್ರೀದೇವತೆಗಳು, ದಕ್ಷ, ಭಗ, ದೇವಪತ್ನಿಯರು, ದಿಗ್ದೇವತೆಗಳು, ಆದಿತ್ಯರು, ರುದ್ರರು, ಪಿತೃಗಳು, ಸಾಧ್ಯರು ಇವರೆಲ್ಲರೂ ವೈಶ್ವದೇವಸೂಕ್ತದಲ್ಲಿ ಅನುಷಂಗಿಕವಾಗಿ ನಿರ್ದಿಷ್ಟರೂ, ಪ್ರಾರ್ಥಿತರೂ ಆದ ದೇವತೆಗಳು.

ಒಟ್ಟಿನಲ್ಲಿ ವೈಶ್ವದೇವಸೂಕ್ತಗಳೆಂದರೇನು ಎಂಬ ಪ್ರಶ್ನೆಗೆ ಉತ್ತರವಾಗಿ ಅವುಗಳ ಸಾಮಾನ್ಯಲಕ್ಷಣವನ್ನು ತೋರಿಸುವ ಕೆಳಗಿನ ವಾಕ್ಯವನ್ನು ಉದಾಹರಿಸಿದೆ.

**ಅಸ್ತು ಶ್ರೌಷಡ್ವೈಶ್ವದೇವಂ ತೃತೀಯ ವೈಶ್ವದೇವಂ ಸ್ಯಾದ್ಬಹುದೇವತೇಷು ।**

(ಬೃ. ದೇ. ೪-೭)

**ಅಸ್ಯವಾಮಸ್ಯ ಪಲಿತಸ್ಯ** (೧-೧೬೪) ಇತ್ಯಾದಿ ಸೂಕ್ತಗಳಲ್ಲಿ ತೋರಿರುವಂತೆ ಬಹುದೇವತಾಕವಾಗಿ ಸ್ತುತಿಯಿರುವೆಡೆಗಳಲ್ಲೆಲ್ಲಾ ವೈಶ್ವದೇವಸೂಕ್ತಗಳೆಂದು ನಿರ್ಧರಿಸತಕ್ಕದ್ದು ಎಂಬುದು ಸಾಮಾನ್ಯ ನಿಯಮ. (ಆದರೆ, ನಿಯಮಕ್ಕಿರುವ

ಅತಿವ್ಯಾಪ್ತಿ ಮತ್ತು ಅವ್ಯಾಪ್ತಿಗಳನ್ನು ಮೇಲಿನ ವಾಕ್ಯಗಳಲ್ಲಿ ವಿವರಿಸಿದೆ). ಈ ವಿಧವಾದ ವೈಶ್ವದೇವಸೂಕ್ತಗಳು ಋಕ್ಸಂಹಿತೆಯಲ್ಲಿ ಬಹಳವಾಗಿವೆ. ಅವುಗಳಲ್ಲಿ, ಕೆಲವು ಪ್ರತ್ಯೇಕವಾದ ಸೂಕ್ತಗಳಾಗಿಯೂ, ಇನ್ನು ಕೆಲವು ಇತರ ದೇವತಾಕವಾದ ಸೂಕ್ತಗಳಲ್ಲಿ ಅಂತರ್ಗತವಾದ ಮಂತ್ರಗಳಾಗಿಯೂ ಇರುತ್ತವೆ. ಅವುಗಳಾವುವೆಂದರೆ—

೧-೩-೭ ರಿಂದ ೯; ೧-೧೪; ೧೨೩-೧೦ ರಿಂದ ೧೨; ೧-೮೯; ೧-೯೦; ೧-೧೦೫ ರಿಂದ ೧೦೭; ೧-೧೨೨; ೧-೧೩೯-೧, ೧೧; ೧-೧೬೪-೧ ರಿಂದ ೪೧; ೧-೧೮೬; ೨-೨೯; ೨-೩೧; ೨-೪೧-೧೩ ರಿಂದ ೧೫, ೩-೨೦-೧ ರಿಂದ ೫; ೩-೫೪ ರಿಂದ ೫೭; ೪-೫೫; ೫-೨೬-೯; ೪-೪೧; ೫-೪೨-೧ ರಿಂದ ೧೦, ೧೨ ರಿಂದ ೧೮; ೫-೪೩ ರಿಂದ ೪೫; ೫-೪೬-೧ ರಿಂದ ೬, ೫-೪೭ ರಿಂದ ೫೧; ೬-೨೧-೯, ೧೧; ೬-೪೯ ರಿಂದ ೫೨; ೭-೩೪-೧ ರಿಂದ ೧೫, ೧೮ ರಿಂದ ೨೫; ೭-೩೫ ರಿಂದ ೩೭; ೭-೩೯; ೭-೪೦; ೭-೪೨; ೭-೪೩; ೭-೫೦-೩; ೮-೨೫-೧೦ ರಿಂದ ೧೨; ೮-೨೭ ರಿಂದ ೩೦; ೮-೫೪-೩, ೪; ೮-೫೮-೨, ೩; ೮-೬೯-೧೧; ೮-೮೩; ೧೦-೩೧; ೧೦-೩೨; ೧೦-೩೩-೧; ೧೦-೩೫; ೧೦-೩೬; ೧೦-೫೬; ೧೦-೫೭; ೧೦-೬೧; ೧೦-೬೨-೭; ೧೦-೬೩-೧ ರಿಂದ ೧೪, ೧೭; ೧೦-೬೪-೬೬; ೧೦-೯೨; ೧೦-೯೩; ೧೦-೧೦೦; ೧೦-೧೦೯; ೧೦-೧೧೪; ೧೦-೧೨೬; ೧೦-೧೨೮; ೧೦-೧೩೭; ೧೦-೧೪೧; ೧೦-೧೫೫-೫; ೧೦-೧೫೭; ೧೦-೧೬೫; ೧೦-೧೮೧.

ವಿಶ್ವೇದೇವಾಃ ಅಥವಾ ಅಗ್ನಿಃ—೯-೬೭-೨೭;
ವಿಶ್ವೇದೇವಾಃ ಅಥವಾ ಅಂಗಿರಸಃ—೧೦-೬೨-೧ ರಿಂದ ೬;
ವಿಶ್ವೇದೇವಾಃ ಅಥವಾ ಇಂದ್ರಃ—೧-೧೨೧;
ವಿಶ್ವೇದೇವಾಃ ಅಥವಾ ಋತ್ವಿಜಃ—೮-೫೮-೧ ; ೧೦-೧೦೧;
ವಿಶ್ವೇದೇವಾಃ ಅಥವಾ ಯೂಪಾಃ—೩-೮-೮.

ಈ ಸೂಕ್ತಗಳ ದರ್ಶನವನ್ನು ಪಡೆದು ವಿಶ್ವೇದೇವತೆಗಳನ್ನು ಪ್ರಶಂಸಿಸಿ ಪ್ರಾರ್ಥಿಸಿರುವ ಋಷಿಗಳ ನಾಮವನ್ನು ಕೆಳಗಿನ ವಾಕ್ಯಗಳಲ್ಲಿ ತಿಳಿಸಿದೆ

**ಮೇಧಾತಿಥಿರಗಸ್ತ್ಯಸ್ತು ಬೃಹದುಕ್ಥೋ ಮನುರ್ಗಯಃ ।**
**ಋಜಿಶ್ವಾ ವಸುಕರ್ಣಶ್ಚ ಶಾರ್ಯಾತೋ ಗೋತಮೋ ಲುಶಃ ॥**
**ಸ್ವಸ್ತ್ಯಾತ್ರೇಯಃ ಪರುಚ್ಛೇಪಃ ಕಕ್ಷೀವಾನ್ ಗಾಥಿನೌರ್ವಶೌ ।**
**ನಾಭಾಕಶ್ಚೈವ ನಿರ್ದಿಷ್ಟೋ ದುವಸ್ಯುರ್ಮನುತಾಸುತಃ ॥**
**ವಿಹವ್ಯಃ ಕಶ್ಯಪ ಋಷಿರವತ್ಸಾರಶ್ಚ ನಾಮ ಯಃ ।**
**ವಾಮದೇವೋ ಮಧುಚ್ಛಂದಾಃ ಪಾರ್ಥೋ ದಕ್ಷಸುತಾದಿತಿಃ ॥**
**ಜುಹೂರ್ಗೃತ್ಸಮದಶ್ಚರ್ಷಿರ್ದೇವಾಃ ಸಪ್ತರ್ಷಯಶ್ಚ ಯೇ ।**
**ಯಮೋಽಗ್ನಿಸ್ತಾಪಸಃ ಕುತ್ಸಃ ಕುಸೀದೀ ಚಿತ್ರ ಏವ ಚ ॥**
**ಬಂಧುಪ್ರಭೃತಯಶ್ಚೈವ ಚತ್ವಾರೋ ಭ್ರಾತರಃ ಪೃಥಕ್ ।**
**ವಿಷ್ಣುಶ್ಚ ನೇಜಮೇಷಶ್ಚ ನಾಮ್ನಾ ಸಂವನನಶ್ಚ ಯಃ ।**
**ಏತೇ ತು ಸರ್ವ ಏವಾಸ್ಯ ವಿಶ್ವೈಃ ಸ್ವೈಃ ಕರ್ಮಜೈರ್ಗುಣೈಃ ।**
**ಸಮಸ್ತೈರಥ ಚ ವ್ಯಸ್ತೈಃ ಪೃಥಕ್ಸೂಕ್ತೇಷು ತುಷ್ಟುವುಃ ॥**

(ಬೃ. ದೇ. ೩-೫೫ ರಿಂದ ೬೦)

ಮೇಧಾತಿಥಿ, ಅಗಸ್ತ್ಯ, ಬೃಹದುಕ್ಥ, ಮನು, ಗಯ, ಋಜಿಶ್ವಾ, ವಸುಕರ್ಣ, ಶಾರ್ಯಾತ, ಗೋತಮ, ಉಶ, ಸ್ವಸ್ತ್ಯಾತ್ರೇಯ, ಪರುಚ್ಛೇಪ, ಕಕ್ಷೀವಾನ್, ಗಾಧಿಪುತ್ರನಾದ ವಿಶ್ವಾಮಿತ್ರ, ಊರ್ವಶೀಪುತ್ರನಾದ ವಸಿಷ್ಠ, ನಾಭಾಕ, ದುವಸ್ಯ, ಮಮತಾಪುತ್ರನಾದ ದೀರ್ಘತಮಸ್ಸು, ವಿಹವ್ಯ, ಕಶ್ಯಪ, ಅವತ್ಸಾರ, ವಾಮದೇವ, ಮಧುಚ್ಛಂದಸ್, ಪಾರ್ಥ, ದಕ್ಷಪುತ್ರಿಯಾದ ಅದಿತಿ, ಜುಹೂ, ಗೃತ್ಸಮದ, ಸಪ್ತರ್ಷಿಗಳು, ಯಮ, ಅಗ್ನಿ, ತಾಪಸ, ಕುತ್ಸ, ಕುಸೀದಿ, ತ್ರಿತ, ಬಂಧು ಮತ್ತು ತತ್ಸಹೋದರರು, ವಿಷ್ಣು, ನೇಜಮೇಷ ಮತ್ತು ಸಂವನನ.

ಮೇಲೆ ಹೇಳಿದ ಈ ಋಷಿಗಳೆಲ್ಲರೂ ಸಹ ಪ್ರತ್ಯೇಕ ಸೂಕ್ತಗಳಲ್ಲಿ ಅಗ್ನಿಯನ್ನು ವಿಧವಿಧವಾಗಿ ಸ್ತುತಿಸಿದ್ದಾರೆ.

**ಏತೇ ತು ಸರ್ವ ಏವಾಸ್ಯ ವಿಶ್ವೈಃ ಸ್ವೈಃ ಕರ್ಮಜೈರ್ಗುಣೈಃ |**
**ಸಮಸ್ತೈರಥ ಚ ವ್ಯಸ್ತೈಃ ಪೃಥಕ್ಸೂಕ್ತೇಷು ತುಷ್ಟುವುಃ ||**
(ಬೃ. ದೇ. ೩-೬೦)

ಅಗ್ನಿದೇವನ ನಾನಾವಿಧವಾದ ಕರ್ಮೋತ್ಪನ್ನವಾದ ವಿಶ್ವಗುಣಗಳ ವರ್ಣನವೇ ವಿಶ್ವೇದೇವತೆಗಳ ವರ್ಣನವು. ಎಂದರೆ ಬೇರೆಬೇರೆ ದೇವತೆಗಳೆಲ್ಲರೂ ಅಗ್ನಿಯ ರೂಪಾಂತರಗಳೇ ಆಗಿರುವುದರಿಂದ ಅನೇಕ ದೇವತೆಗಳ ಸ್ತುತಿಯು ಅಗ್ನಿಯ ಅನೇಕ ಗುಣಗಳ ಪ್ರಶಂಸನವು. ಮೇಲೆ ನಿರ್ದಿಷ್ಟರಾದ ಸಕಲ ಋಷಿಗಳೂ ಸಹ ತಮ್ಮತಮ್ಮ ಕೃತಿಗಳಾದ ವೈಯಕ್ತಿಕವಾದ ಸೂಕ್ತಗಳಲ್ಲಿ ವಿಶ್ವೇದೇವರೂಪಿಯಾದ ಅಗ್ನಿದೇವನ ವಿಶ್ವಗುಣಗಳನ್ನೇ ಪೂರ್ಣವಾಗಿ ಸ್ತುತಿಸಿದ್ದಾರೆ ಎಂಬುದೇ ತಾತ್ಪರ್ಯವು. ಇದೇ ಅಭಿಪ್ರಾಯವನ್ನೇ ಇನ್ನೂ ಕೆಲವೆಡೆಗಳಲ್ಲೂ ಸ್ಪಷ್ಟವಾಗಿ ತಿಳಿಸಿದೆ. ಉದಾಹರಣೆಗೆ—

**ಆಗ್ನೇಯಂ ಸೂಕ್ತಮೈಭಿರ್ಯದ್ವೈಶ್ವದೇವಮಿಹೋಚ್ಯತೇ |**
**ತದ್ವಿಶ್ವಲಿಂಗಂ ಗಾಯತ್ರಂ ವೈಶ್ವದೇವೇಷು ಶಸ್ಯತೇ ||**
(ಬೃ. ದೇ. ೩-೩೩)

**ಐಭಿರಗ್ನೇ** (ಋ. ಸಂ. ೧-೧೪) ಎಂಬ ಮಂತ್ರದಲ್ಲಿ ಅಗ್ನಿಯನ್ನುದ್ದೇಶಿಸಿದ್ದರೂ ಸಹ ವಿಶ್ವೇದೇವತಾಕವಾಗಿದೆ. ಗಾಯತ್ರೀಛಂದಸ್ಸಿನಲ್ಲಿ ನಿರ್ಮಿತವಾಗಿರುವುದರಿಂದ ಈ ಸೂಕ್ತದ ಮಂತ್ರಗಳು ವಿಶ್ವಲಿಂಗಾತ್ಮಕವಾಗಿವೆ ಮತ್ತು ವಿಶ್ವಗುಣಗಳನ್ನೂ ಪ್ರಶಂಸಿಸುವುವಾಗಿವೆ. ಆದುದರಿಂದಲೇ,

**ಯದ್ವೈಭಿರಿತಿ ಚೈತಸ್ಮಿನ್ ವೈಶ್ವದೇವೇಽಗ್ನಿಮರ್ಚತಿ |**
(ಬೃ. ದೇ. ೩-೫೧)

ಎಂದು ಇದೇ ಭಾವವನ್ನು ಪದೇಪದೇ ತಿಳಿಸಿದೆ, ಅಲ್ಲದೇ ಅಗ್ನಿಹೋತ್ರಕ್ಕೂ, ವಿಶ್ವೇದೇವತೆಗಳಿಗೂ ಇರುವ ಸಂಬಂಧವನ್ನು ವಿವರಿಸುತ್ತಾ ಐತರೇಯಬ್ರಾಹ್ಮಣದಲ್ಲಿ,

**ಯೋ ವಾ ಅಗ್ನಿಹೋತ್ರಂ ವೈಶ್ವದೇವಂ ಷೋಳಶಕಲಂ ಪಶುಷು ಪ್ರತಿಷ್ಠಿತಂ ವೇದ ವೈಶ್ವದೇವೇನಾಗ್ನಿಹೋತ್ರೇಣ ಷೋಳಶಕಲೇನ ಪಶುಷು ಪ್ರತಿಷ್ಠಿತೇನ ರಾಧ್ನೋತಿ ||**
(ಐ. ಬ್ರಾ. ೫-೩೬)

ಹದಿನಾರು ತಲೆಗಳುಳ್ಳದ್ದೂ, ಪಶುಗಳಲ್ಲಿ ಪ್ರತಿಷ್ಠಿತವಾದುದೂ ಆದ ಅಗ್ನಿಹೋತ್ರವು ವೈಶ್ವದೇವವೆಂದು ಯಾವನು ಅರಿಯುವನೋ ಮತ್ತು ವಿಶ್ವದೇವತಾಕವಾದ ಈ ಅಗ್ನಿಹೋತ್ರವನ್ನಾಚರಿಸುವನೋ ಅವನು ಪಶ್ವಾದಿಸಂಪದ್ಯುಕ್ತನಾಗಿ ಆಗುತ್ತಾನೆ ಎಂದು ಪ್ರಶಂಸಿಸಿದೆ. ಆದುದರಿಂದಲೇ,

**ಯಸ್ಯಾಗ್ನಿಹೋತ್ರಮದರ್ಶಮಪೌರ್ಣಮಾಸಮಚಾತುರ್ಮಾಸ್ಯಮನಾಗ್ರಯಣಮತಿಥಿವರ್ಜಿತಂಚ |**
**ಅಹುತಮವೈಶ್ವದೇವಮವಿಧಿನಾ ಹುತಮಾಸಪ್ತಮಾಂಸ್ತಸ್ಯ ಲೋಕಾನ್ ಹಿನಸ್ತಿ ||**

(ಮುಂಡಕ ೧-೨-೩)

ಅಗ್ನಿಹೋತ್ರವು, ಪೌರ್ಣಮಾಸ, ಚಾತುರ್ಮಾಸ್ಯ, ಆಗ್ರಯಣ, ವೈಶ್ವದೇವ ಇತ್ಯಾದಿ ಕರ್ಮರಹಿತವಾಗಿದ್ದರೆ, ಸಪ್ತ ಲೋಕಗಳಲ್ಲೂ ಸಹ ಪುರುಷನ ಭವಿಷ್ಯಕ್ಕೆ ಕುಂದನ್ನುಂಟುಮಾಡುತ್ತದೆ ಎಂದು ವೈಶ್ವದೇವಕ್ರಿಯೆಯ ಪ್ರಾಶಸ್ತ್ಯವನ್ನು ಪ್ರಶಂಸಿಸಿದೆ. ಅಗ್ನಿಯಲ್ಲಿಯೇ ವಿಶ್ವದೇವತೆಗಳೆಲ್ಲರೂ ಅಂತರ್ಗತರಾಗಿದ್ದಾರೆ ಅಥವಾ ಇತರ ಸಕಲ ದೇವತೆಗಳ ಸ್ವರೂಪಗಳೆಲ್ಲವೂ ಅಗ್ನಿಯ ರೂಪಾಂತರಗಳು. ಆದುದರಿಂದಲೇ ಅಗ್ನಿಹೋತ್ರಕ್ಕೂ, ವೈಶ್ವದೇವಕರ್ಮಕ್ಕೂ ತಾದಾತ್ಮ್ಯ ಸಂಬಂಧವು ಎಂಬ ಈ ಅಂಶವನ್ನು ವೈಶ್ವದೇವನಿವಿನ್ಮಂತ್ರದಿಂದ ತಿಳಿಯಬಹುದು. ಇದರಂತೆಯೇ ಇನ್ನೂ ಕೆಲವು ಮಂತ್ರಗಳಲ್ಲೂ ಸಹ ವಿಶ್ವೇದೇವತೆಗಳು ಅಗ್ನಿಯಲ್ಲಿ ಅಡಗಿರುವ ವಿಷಯವನ್ನು ಸ್ಪಷ್ಟವಾಗಿಯೇ ತಿಳಿಸಿದೆ. ಉದಾಹರಣೆಗೆ—

**ತ್ವಮಗ್ನೇ ವರುಣೋ ಜಾಯಸೇ ಯತ್ತ್ವಂ ಮಿತ್ರೋ ಭವಸಿ ಯತ್ಸಮಿದ್ಧಃ |**
**ತ್ವೇ ವಿಶ್ವೇ ಸಹಸಸ್ಪುತ್ರ ದೇವಾಸ್ತ್ವ ಮಿಂದ್ರೋ ದಾಶುಷೇ ಮರ್ತ್ಯಾಯ ||**

(ಋ. ಸಂ. ೫-೩-೧)

ಎಲೈ ಅಗ್ನಿಯೇ, ನೀನೇ ವರುಣನು, ನೀನೇ ಮಿತ್ರನು ಮತ್ತು ನಿನ್ನಲ್ಲೇ ಸಕಲ ವಿಶ್ವದೇವತೆಗಳೂ ಅಂತರ್ಗತರಾಗಿದ್ದಾರೆ. ನಿನ್ನಲ್ಲಿ ಅರ್ಪಿತವಾದ ಹವಿಸ್ಸಿನಿಂದಲೇ ಅವರೆಲ್ಲರೂ ಜೀವಿಸುತ್ತಾರೆ. ನಿನಗರ್ಪಿತವಾಗುವ ಹವಿಸ್ಸೇ ಅವರಿಗೂ ಸೇರಕ್ಕದ್ದು ಮತ್ತು ಅವರೆಲ್ಲರಿಗೂ ಅರ್ಪಿತವಾಗತಕ್ಕದ್ದೂ ನಿನ್ನನ್ನೇ ಸೇರತಕ್ಕದ್ದು ಇತ್ಯಾದಿಯಾದ ಪ್ರಶಂಸೆಯಿದೆ. ಆದರೆ ಅವರಾರು ? ಎಷ್ಟು ಸಂಖ್ಯೆಯುಳ್ಳವರು ಎಂಬುದನ್ನು ವೈಶ್ವದೇವನಿವಿನ್ಮಂತ್ರದಲ್ಲಿ ತಿಳಿಸಿದೆ.

**ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಂ ತ್ರಿಂಶಚ್ಚ ದೇವಾ ನವ ಚಾಸಪರ್ಯನ್ |**
**ಔಕ್ಷನ್ ಘೃತೈರಸ್ತೃಣನ್ಬರ್ಹಿರಸ್ಮಾ ಆದಿದ್ಧೋತಾರಂ ನ್ಯಸಾದಯಂತ ||**

(ಋ. ಸಂ. ೩-೯-೯)

ಎಂಬುದು ವೈಶ್ವದೇವನಿವಿನ್ಮಂತ್ರವೆಂದು ಪರಿಗಣಿತವಾಗಿದೆ. ಇದರಲ್ಲಿ ದೇವತೆಗಳ ಸಂಖ್ಯಾನಿರ್ದೇಶವಿದೆ. ಇದೇ ವಿಶ್ವೇದೇವತೆಗಳ ಸಂಖ್ಯೆ ಎಂದು ಬೃಹದಾರಣ್ಯಕದಲ್ಲಿ ಇದರ ವಿವರಣೆಯನ್ನು ತಿಳಿಸಿದೆ. ಅಗ್ನ್ಯಂತರ್ಗತವಾದ ಈ ಸಕಲ ದೇವತೆಗಳ ಸಂಖ್ಯೆಯನ್ನು ವಿವರಿಸುತ್ತಾ—

**ಅಥ ಹೈನಂ ವಿದಗ್ಧಃ ಶಾಕಲ್ಯಃ ಪಪ್ರಚ್ಛ ಕತಿ ದೇವಾ ಯಾಜ್ಞವಲ್ಕ್ಯೇತಿ ಸ ಹೈತಯೈವ ನಿವಿದಾ ಪ್ರತಿಪೇದೇ ಯಾವಂತೋ ವೈಶ್ವದೇವಸ್ಯ ನಿವಿದುಚ್ಯಂತೇ ತ್ರಯಶ್ಚ ತ್ರೀ ಚ ಶತಾ ತ್ರಯಶ್ಚ ತ್ರೀ ಚ ಸಹಸ್ರೇತ್ಯೋಮಿತಿ ||**

(ಬೃ. ಉ. ೩-೯-೧)

ಎಂದು ತಿಳಿಸಿದೆ. ಮೇಲೆ ಉದ್ಧೃತವಾಗಿರುವ ಋ. ಸಂ. ೩-೯-೯ ನೇ ಮಂತ್ರದ ಭಾಷ್ಯದಲ್ಲಿ ಸಾಯಣರು ಈ ಉಪನಿಷದ್ವಾಕ್ಯವನ್ನು ಉದಹರಿಸಿ ವಿವರಿಸಿದ್ದಾರೆ. ಇಲ್ಲಿ ವಿದಗ್ಧಶಾಕಲ್ಯನಿಗೂ, ಯಾಜ್ಞವಲ್ಕ್ಯನಿಗೂ ದೇವತಾಸಂಖ್ಯೆಗಳ ವಿಷಯದಲ್ಲಿ ನಡೆದ ಸಂಭಾಷಣೆಯಿರುತ್ತದೆ.

**ವಿದಗ್ಧ ಶಾಕಲ್ಯ**—ಯಾಜ್ಞವಲ್ಕ್ಯನೇ, ದೇವತೆಗಳ ಒಟ್ಟು ಸಂಖ್ಯೆಯೆಷ್ಟು? **ಯಾಜ್ಞವಲ್ಕ್ಯ**—ವಿಶ್ವದೇವ ನಿವಿನ್ಮಂತ್ರದಲ್ಲಿ ನಿರ್ದಿಷ್ಟರಾದ ಸಂಖ್ಯೆಯೇನಿದೆಯೋ ಅದೇ ವಿಶ್ವೇದೇವತೆಗಳ ಸಂಖ್ಯೆ ಎಂದರೆ, ಮುನ್ನೂರಮೂರು ಮತ್ತು ಮೂರುಸಾವಿರದ ಮೂರು. ಒಟ್ಟು ಮೂರುಸಾವಿರದ ಮುನ್ನೂರ ಆರು. ಆದರೆ ಈ ಸಂಖ್ಯೆಯು ಬೇರೆಡೆಯಲ್ಲಿ ಹೇಳಿರುವ ಸಂಖ್ಯೆಗಿಂತ ಕೊಂಚ ವ್ಯತ್ಯಸ್ತವಾಗಿದೆ. ಅದರಪ್ರಕಾರ ೧೧ x ೩ = ೩೩ ನ್ನು ಸೇರಿಸಿಕೊಳ್ಳಬೇಕು. ಎಂದರೆ ಒಟ್ಟು ಮೂರುಸಾವಿರದ ಮುನ್ನೂರ ಮೂವತ್ತೊಂಭತ್ತು. ಇದೇ ಅಗ್ನ್ಯಂತರ್ಗತವಾದ ವಿಶ್ವೇದೇವತೆಗಳ ಸಂಖ್ಯೆ. ಈ ವಿಶ್ವೇದೇವತೆಗಳ ಪೂಜೆಯೇ ಅಗ್ನಿಪೂಜೆ ಮತ್ತು ಮತ್ತು ಅಗ್ನಿಪೂಜೆಯೇ ವಿಶ್ವೇದೇವತೆಗಳ ಪೂಜೆ.

ಈರೀತಿಯಾದ ವರ್ಣನೆಗಳಲ್ಲಿ ವಿಶ್ವೇದೇವತೆಗಳು ಅಗ್ನ್ಯಂತರ್ಗತರಾಗಿರುವರು ಎಂದು ಹೇಳಿರುವುದು ಒಂದು ಕ್ರಮವಾದರೆ, ವಿಶ್ವೇದೇವತೆಗಳು ಪಂಚಜನಾತ್ಮಕರು ಎಂದು ಹೇಳಿ ವರ್ಣಿತವಾಗಿರುವ ಪ್ರಕರಣಗಳೂ ಕೆಲವಿವೆ. ಪಂಚಜನರೆಂದರೆ, ಇಂತಹ ಸಂದರ್ಭಗಳಲ್ಲಿ, ದೇವತೆಗಳು, ಮಾನವರು, ಯಕ್ಷರು, ಗಂಧರ್ವರು ಮತ್ತು ಪಿತೃಗಳು ಎಂಬ ಅಂಶವನ್ನು ವೈಶ್ವದೇವಶಸ್ತ್ರಪ್ರಕರಣದಲ್ಲಿ ಈರೀತಿ ವಿವರಿಸಿದೆ—

**ಪಾಂಚಜನ್ಯಂ ವಾ ಏತದುಕ್ಥಂ ಯದ್ವೈಶ್ವದೇವಂ ಸರ್ವೇಷಾಂ ವಾ ಏತತ್ಪಂಚಜನಾನಾಮುಕ್ಥಂ ದೇವಮನುಷ್ಯಾಣಾಂ ಗಂಧರ್ವಾಪ್ಸರಸಾಂ ಸರ್ಪಾಣಾಂ ಚ ಪಿತ್ರ್ಯಾಣಾಂ ಚೈತೇಷಾಂ ವಾ ಏತತ್ಪಂಚಜನಾನಾಮುಕ್ಥಂ ಸರ್ವ ಏನಂ ಪಂಚಜನಾ ವಿದುಃ ॥**

(ಐ. ಬ್ರಾ. ೩-೩೧)

ವೈಶ್ವದೇವಕರ್ಮವು ಪಾಂಚಜನ್ಯವಾದುದು ಎಂದರೆ ಐದುಗಂಪಿನ ಜನರಿಗೂ ಸಂಬಂಧಿಸಿದುದು ಎಂದರೆ, ದೇವ, ಮನುಷ್ಯ, ಗಂಧರ್ವ, ಅಪ್ಸರಸ್ ಮತ್ತು ಪಿತೃಗಳು. ಈ ತತ್ತ್ವವನ್ನರಿತವನು ಈ ಕರ್ಮಕುಶಲನು ಎಂದು ವೈಶ್ವದೇವ ಕರ್ಮಪ್ರಶಂಸೆಯೂ ವಿಶ್ವೇದೇವತೆಗಳ ವರ್ಣನವೂ ಇರುತ್ತದೆ. ಈ ಕರ್ಮದ ಮಹತ್ತ್ವವನ್ನು ಪ್ರಶಂಸಿಸುವ ಇತರ ಸನ್ನಿವೇಶಗಳನ್ನೂ ಮುಂದೆ ತಿಳಿಸಲಾಗುತ್ತದೆ.

ಹೀಗೆ ಸರ್ವದೇವತಾಮಯನಾದ ಅಗ್ನಿಯಲ್ಲಿಯೇ ವಿಶ್ವೇದೇವತೆಗಳು ಅಡಕರಾಗಿರುವರು ಎಂಬುದು ಒಂದು ಸನ್ನಿವೇಶ; ವಿಶ್ವೇದೇವತೆಗಳಲ್ಲಿಯೇ ದೇವಮಾನವಾದಿ ಸಕಲ ಭೂತಗಳೂ ಅಡಕವಾಗಿರುವುವು ಎಂಬುದು ಇನ್ನೊಂದು ಸನ್ನಿವೇಶ. ಇವೇ ಅಲ್ಲದೇ, ಮೂರನೇ ಬಗೆಯಾದ ವರ್ಣನವೂ ವೈದಿಕವಾಕ್ಯಗಳಲ್ಲಿ ಪ್ರಸಿದ್ಧವಾಗಿವೆ. ವಿಶ್ವೇದೇವತೆಗಳು ಸೃಷ್ಟಿನಿಯಮದಲ್ಲಿ ವರ್ಣಪ್ರಭೇದವನ್ನು ತೋರಿಸುವ ಒಂದು ಶಕ್ತಿಸಂಜ್ಞೆ ಎಂಬುದೇ ಈ ಮೂರನೆಯದು. ಈ ವರ್ಣನದ ಪ್ರಕಾರ ಅಗ್ನಿ, ಇಂದ್ರ, ವಿಶ್ವೇದೇವತೆಗಳು, ಈ ಮೂವರೂ ಮೂರು ವರ್ಣಗಳನ್ನು ಪ್ರತಿಬಿಂಬಿಸತಕ್ಕ ದೇವತಾವಿಶೇಷಗಳು. ಋಕ್ಸಂಹಿತೆಯಲ್ಲಿ ಸೂಕ್ತವಿಭಾಗಕ್ರಮವೂ ಸಹ ಈ ಅಂಶವನ್ನು ಸೂಚಿಸುವುದಾಗಿದೆ. ಎಂಟನೆಯ ಮತ್ತು ಒಂಬತ್ತನೆಯ ಮಂಡಲಗಳನ್ನು ಬಿಟ್ಟರೆ ಉಳಿದ ಎಲ್ಲಾ ಮಂಡಲಗಳಲ್ಲೂ ಸಹ ಆದಿಯಲ್ಲಿ **ಅಗ್ನಿ**ಪ್ರಶಂಸಕವೂ, ಅನಂತರ **ಇಂದ್ರ**ಪ್ರಶಂಸಕವೂ ಆದ ಸೂಕ್ತಗಳಿರುತ್ತವೆ. ತದನಂತರ ಸಾಧಾರಣವಾಗಿ ವಿಶ್ವೇದೇವಪ್ರಶಂಸಕವಾದ ಸೂಕ್ತಗಳು ಮುಂದುವರಿಯುತ್ತವೆ. ಮುಂದೆ ಬ್ರಾಹ್ಮಣಾದಿಗಳಲ್ಲೆಲ್ಲಾ ಅಗ್ನಿ, ಇಂದ್ರ ಮತ್ತು ವಿಶ್ವೇದೇವತೆಗಳಿಗೂ, ಬ್ರಾಹ್ಮಣ ಕ್ಷತ್ರ ಮತ್ತು ವೈಶ್ಯ ಎಂಬ ಮೂರು ವರ್ಣಗಳಿಗೂ ಕ್ರಮವಾಗಿ ತಾದಾತ್ಮ್ಯವನ್ನು ತೋರಿಸಿದೆ. ಕೆಲವು ಉದಾಹರಣೆಗಳು ಈ ಅಂಶವನ್ನು ಸ್ಪಷ್ಟಪಡಿಸುತ್ತವೆ.

**ಪ್ರಜಾಪತಿರ್ವಾವ ಜ್ಯೇಷ್ಠಸ್ಸ ಹ್ಯೇತೇನಾಗ್ರೇಽಯಜತ ಪ್ರಜಾಪತಿರಕಾಮಯತ ಪ್ರ ಜಾಯೇ- ಯೇತಿ ಸ ಮುಖತಸ್ತ್ರಿವೃತಂ ನಿರಮಿಮೀತ ತಮಗ್ನಿರ್ದೇವತಾನ್ವಸೃಜತ ಗಾಯತ್ರೀ- ಚ್ಛಂದೋ ರಥಂತರಗ್ಂಸಾಮ ಬ್ರಾಹ್ಮಣೋ ಮನುಷ್ಯಾಣಾಮಜಃ ಪಶೂನಾಂ ||**

(ತೈ. ಸಂ. ೭-೧-೧-೪)

ಎಲ್ಲಕ್ಕಿಂತಲೂ ಪ್ರಥಮತಃ ಯಜ್ಞಕರ್ಮವನ್ನಾಚರಿಸಿದುದರಿಂದ ಪ್ರಜಾಪತಿಯೇ ಸರ್ವಶ್ರೇಷ್ಠನು. ಆಗ "ನಾನು ಸಂತತಿಯನ್ನು ಪಡೆಯಬೇಕು" ಎಂದು ಆಶಿಸಿದನು. ಆಗ ತ್ರಿವೃತವನ್ನು ಮುಖದಿಂದ ಪ್ರಕಟಿಸಿದನು. ಅದ ರಿಂದ ಅಗ್ನಿದೇವನೂ, ಗಾಯತ್ರೀಚ್ಛಂದಸ್ಸೂ, ರಥಂತರಸಾಮವೂ, ಮಾನವರಲ್ಲಿ ಬ್ರಾಹ್ಮಣರೂ, ಪಶುಗಳಲ್ಲಿ ಅಜವೂ, ಉತ್ಪನ್ನವಾದವು. ಮುಖದಿಂದ ಉತ್ಪನ್ನವಾದುದರಿಂದ ಅವೆಲ್ಲವೂ ಶ್ರೇಷ್ಠತೆಯನ್ನು ಪಡೆದವು.

**ಉರಸೋ ಬಾಹುಭ್ಯಾಂ ಪಂಚದಶಂ ನಿರಮಿಮೀತ ತಮಿಂದ್ರೋ ದೇವತಾನ್ವಸೃಜ್ಯತ ತ್ರಿಷ್ಟುಪ್- ಛಂದೋ ಬೃಹತ್ಸಾಮ ರಾಜನ್ಯೋ ಮನುಷ್ಯಾಣಾಮವಿಃ ಪಶೂನಾಂ ತಸ್ಮಾತ್ತೇ ವೀರ್ಯಾವಂತೋ ವೀರ್ಯಾದ್ಧ್ಯಸೃಜ್ಯಂತ ||**

(ತೈ. ಸಂ. ೭-೧-೧-೪,೫)

ಉರಸ್ಸಿನಿಂದಲೂ, ಬಾಹುಗಳಿಂದಲೂ ಪಂಚದಶವನ್ನು ಪ್ರಕಟಿಸಿದನು. ಅದರಿಂದ ಇಂದ್ರದೇವನೂ ತ್ರಿಷ್ಟುಪ್ ಛಂದಸ್ಸೂ, ಬೃಹತ್ಸಾಮವೂ, ಮಾನವರ ನಡುವೆ ಕ್ಷತ್ರಿಯರೂ, ಪಶುಗಳ ನಡುವೆ ಮೇಷಗಳೂ ಉತ್ಪನ್ನವಾದವು. ಬಾಹುವಿನ ವೀರ್ಯದಿಂದ ಜನಿಸಿದುದರಿಂದ ಅವೆಲ್ಲವೂ ವೀರ್ಯಸೂಚಕವಾದವು.

**ಮಧ್ಯತಸ್ಸಪ್ತದಶಂ ನಿರಮಿಮೀತ ತಂ ವಿಶ್ವೇದೇವಾ ದೇವತಾ ಅನ್ವಸೃಜ್ಯಂತ ಜಗತೀ ಛಂದೋ ವೈರೂಪಗ್ಂಸಾಮ ವೈಶ್ಯೋ ಮನುಷ್ಯಾಣಾಂ ಗಾವಃ ಪಶೂನಾಂ ತಸ್ಮಾತ್ತ ಆದ್ಯಾ ಅನ್ನ- ಧಾನಾದ್ಧ್ಯಸೃಜ್ಯಂತ ತಸ್ಮಾದ್ಭೂಯಾಗ್ಂಸೋಽನ್ಯೇಭ್ಯೋ ಭೂಯಿಷ್ಠಾ ಹಿ ದೇವತಾ ಅನ್ವಸೃಜ್ಯಂತ ||**

(ತೈ. ಸಂ. ೭-೧-೧-೫)

ಅನಂತರ ತನ್ನ ಮಧ್ಯಭಾಗದಿಂದ ಸಪ್ತದಶಸ್ತೋಮವನ್ನು ಪ್ರಕಟಿಸಿದನು. ಅದರಿಂದ ವಿಶ್ವೇದೇವತೆಗಳು ಉತ್ಪನ್ನ ರಾದರು. ಛಂದಸ್ಸುಗಳಲ್ಲಿ ಜಗತಿಯೂ, ಸಾಮಗಳಲ್ಲಿ ವೈರೂಪವೂ, ಪ್ರಜೆಗಳಲ್ಲಿ ವೈಶ್ಯರೂ, ಪಶುಗಳಲ್ಲಿ ಗೋವುಗಳೂ ಉತ್ಪನ್ನವಾದವು. ಇವೆಲ್ಲವೂ ಅನ್ನಕೋಶದಿಂದ ಉತ್ಪನ್ನವಾದುದರಿಂದ ಅನ್ನಸಂಪದ್ಯುಕ್ತವೂ ಭೋಗಾರ್ಹವೂ ಆದವು. ವಿಶ್ವೇದೇವತೆಗಳ ಸಂಬಂಧಿಗಳಾದುದರಿಂದ ಇವುಗಳ ಸಂಖ್ಯೆಯೂ ಸಹ ಅತ್ಯಧಿಕವಾದುವು ಇತ್ಯಾದಿಯಾಗಿ ಅಗ್ನಿ, ಇಂದ್ರ ಮತ್ತು ವಿಶ್ವೇದೇವತೆಗಳ ಉತ್ಪತ್ತಿ ಕ್ರಮವನ್ನೂ, ಶಕ್ತಿಪ್ರಭೇದಗಳನ್ನೂ ತಿಳಿಸಿದೆ. ಇದೇ ಅಂಶವನ್ನು ಶತಪಥಬ್ರಾಹ್ಮಣದಲ್ಲಿಯೂ ಕೆಳಗೆ ಹೇಳಿರುವಂತೆ ವಿವರಿಸಿದೆ.

**ಕ್ಷತ್ರಂ ವಾ ಇಂದ್ರಾಗ್ನೀ। ವಿಶೋ ವಿಶ್ವೇದೇವಾ ಯತ್ರ ವೈ ಕ್ಷತ್ರಮುಜ್ಜಯತ್ಯನ್ವಾಭಕ್ತಾ ವೈ ತತ್ರ ವಿಡ್ವದ್ವಿಶ್ವಾನ್ದೇವಾನನ್ವಾಭಜತಾಂ ತಸ್ಮಾದೇಷ ವೈಶ್ವದೇವಶ್ಚರುರ್ಭವತಿ ||**

(ಶ. ಬ್ರಾ. ೨-೪-೩-೬)

ಇಂದ್ರಾಗ್ನಿಗಳು ಕ್ಷಾತ್ರಸ್ವಭಾವದವರು, ವಿಶ್ವದೇವರುಗಳು ವೈಶ್ಯಸ್ವಭಾವದವರು. ಕ್ಷತ್ರಿಯರು ಎಲ್ಲೆಲ್ಲಿ ಜಯವನ್ನು ಪಡೆಯುವರೋ, ಅಲ್ಲೆಲ್ಲಾ ವೈಶ್ಯರೂ ಭಾಗವನ್ನು ಹೊಂದುವರು. ಆದುದರಿಂದಲೇ ಇಂದ್ರಾಗ್ನಿಗಳ ಜಯದಲ್ಲಿ ವಿಶ್ವದೇವತೆಗಳೂ ಭಾಗವಹಿಸುವರು ಎಂದು ತಿಳಿಸಿದೆ. ಈ ವರ್ಣವಿಭಾಗವು ಒಂದು ವಿಧದಲ್ಲಿ ಸಹಜವಾಗಿಯೇ ಇದೆಯೆಂದು ಹೇಳಬಹುದು. ಹೇಗೆಂದರೆ ಯಜ್ಞಾಗ್ನಿರೂಪದಲ್ಲಿ ದೇವತೆಗಳನ್ನು ಯಜ್ಞಕ್ಕೆ ಬರಮಾಡುತ್ತಲೂ ದೇವತೆಗಳಿಗೆ ಹವಿಸ್ಸನ್ನು ವಹಿಸುತ್ತಲೂ ಮತ್ತು ದೇವಮಾನವರಿಗೆ ಸಂಬಂಧವನ್ನು ಬೆಳೆಸುತ್ತಲೂ ಅಗ್ನಿಯು ಪುರೋಹಿತರೂಪದಲ್ಲಿರುತ್ತಾನೆ. ತೀಕ್ಷ್ಣವಾದ ತೇಜಸ್ಸೂ ಮತ್ತು ವರ್ಚಸ್ಸೂ ಸಹ ಬ್ರಾಹ್ಮಣಲಕ್ಷಣಗಳು. ಅಸುರಾದಿಗಳೊಂದಿಗೆ ಸರ್ವದಾ ಯುದ್ಧ ಮಾಡಿ ಜಯಲಾಭವನ್ನು ಪಡೆಯುವ ಇಂದ್ರನು ಸಹಜವಾದ ಕ್ಷಾತ್ರಶಕ್ತಿಯನ್ನು ಹೊಂದಿರುತ್ತಾನೆ. ಇವನ್ನುಳಿದರೆ ಉಳಿದ ಪ್ರಜೆಗಳು ವೈಶ್ಯರೆಂದು ಕರೆಯಲ್ಪಡುವಂತೆ ಇಂದ್ರಾಗ್ನಿಗಳನ್ನುಳಿದ ಇತರ ದೇವತೆಗಳು ವೈಶ್ಯಗುಂಪಿಗೆ ಸೇರಿದವರು ಎಂದಿರುವ ಈ ವಿಭಾಗದಲ್ಲಿ ವಿಶ್ವೇದೇವತೆಗಳು ಇಂದ್ರಾಗ್ನಿಗಳಿಗಿಂತಲೂ ಭಿನ್ನರೆಂದು ಇಂದ್ರಾಗ್ನಿಗಳ ತೇಜಸ್ಸಾಗಲಿ ಅಥವಾ ವೀರ್ಯವಾಗಲೀ ಅವರಿಗಿರುವಷ್ಟಿಲ್ಲವೆಂದೂ ಅರ್ಥವಾಗುತ್ತದೆ.

ಈ ವಿಭಾಗಾನುಸಾರವಾಗಿಯೇ ಮೂರು ಸವನಗಳಲ್ಲಿಯೂ ಇದರ ಭಾಗಗಳು ಕ್ಲೃಪ್ತವಾಗಿವೆ. ಈ ವಿಭಾಗ ಕ್ರಮವನ್ನು ಸಂಹಿತಾ ಮತ್ತು ಬ್ರಾಹ್ಮಣವಾಕ್ಯಗಳಲ್ಲಿ ಕಾಣಬಹುದು.

**ಪ್ರಜಾಪತಿರ್ವೈ ಯಜ್ಞಂ ಛಂದಾಂಸಿ ದೇವೇಭ್ಯೋ ಭಾಗಧೇಯಾನಿ ವ್ಯಭಜತ್ಸ ಗಾಯತ್ರೀಮೇ-ವಾಗ್ನಯೇ ವಸುಭ್ಯಃ ಪ್ರಾತಃಸವನೇಽಭಜತ್ತ್ರಿಷ್ಟುಭಮಿಂದ್ರಾಯ ರುದ್ರೇಭ್ಯೋ ಮಧ್ಯಂ-ದಿನೇ ಜಗತೀಂ ವಿಶ್ವೇಭ್ಯೋ ದೇವೇಭ್ಯ ಆದಿತ್ಯೇಭ್ಯಸ್ತೃತೀಯಸವನೇ ॥**

(ಐ. ಬ್ರಾ. ೩-೧೩)

ಪ್ರಜಾಪತಿಯು ಯಜ್ಞಭಾಗಗಳನ್ನೂ, ಛಂದಸ್ಸುಗಳನ್ನೂ ದೇವತೆಗಳಿಗೆ ಹಂಚಿದನು. ಪ್ರಾತಃಸವನದಲ್ಲಿ ಗಾಯತ್ರಿಯನ್ನು ಅಗ್ನಿಗೂ ಮತ್ತು ವಸುಗಳಿಗೂ, ಮಾಧ್ಯಂದಿನಸವನದಲ್ಲಿ ತ್ರಿಷ್ಟುಪ್ಪನ್ನು ಇಂದ್ರನಿಗೂ ಮತ್ತು ರುದ್ರರಿಗೂ, ತೃತೀಯಸವನದಲ್ಲಿ ಜಗತಿಯನ್ನು ವಿಶ್ವೇದೇವತೆಗಳಿಗೂ ಮತ್ತು ಆದಿತ್ಯರಿಗೂ ಹಂಚಿದನು ಎಂದಿರುವ ಇದೇ ಪ್ರಕರಣವು ಶತಪಥಬ್ರಾಹ್ಮಣದಲ್ಲಿ ಕೊಂಚ ವ್ಯತ್ಯಸ್ತವಾಗಿದೆ. ಅದು ಹೇಗೆಂದರೆ,

**ಅಥ ಪ್ರಾತಃ । ಆಗ್ನೇಯಃ ಪುರೋಡಾಶೋ ಭವತ್ಯೈಂದ್ರಗ್ಂ ಸಾಂನಾಯ್ಯಂ ಪ್ರಾತಃಸವನ-ಮೇವಾಸ್ಯಾಗ್ನೇಯಃ ಪುರೋಡಾಶ ಆಗ್ನೇಯಗ್ಂ ಹಿ ಪ್ರಾತಃಸವನಮಥೈಂದ್ರಗ್ಂ ಸಾಂನಾಯ್ಯಂ ಮಾಧ್ಯಂದಿನಮೇವಾಸ್ಯ ತತ್ಸವನಮೈಂದ್ರಗ್ಂ ಹಿ ಮಾಧ್ಯಂದಿನಗ್ಂ ಸವನಂ ॥**

(ಶ. ಬ್ರಾ. ೨-೪-೪-೧೨)

ಪ್ರಾತಃಕಾಲದಲ್ಲಿ ಆಗ್ನೇಯವಾದ ಪುರೋಡಾಶವೂ ಇಂದ್ರಾರ್ಥವಾದ ಸಾಂನಾಯ್ಯವೂ ಅರ್ಪಿತವಾಗುವುದು. ಪ್ರಾತಃಸವನವೇ ಅಗ್ನಿಪ್ರೀತಿಕರವಾದುದು. ಅವರಂತೆಯೇ ಮಾಧ್ಯಂದಿನಸವನವು ಇಂದ್ರಪ್ರೀತಿಕರವಾದುದು.

**ಅಥ ಯತ್ಪೂರ್ವೇದ್ಯುಃ । ಐಂದ್ರಾಗ್ನೇನ ಯಜತೇಽಮಾವಾಸ್ಯಾಯಾಂ ತೃತೀಯಸವನಮೇ-ವಾಸ್ಯ ತದ್ವೈಶ್ವದೇವಂ ವೈ ತೃತೀಯಸವನಮಿಂದ್ರಾಗ್ನೀ ವೈ ವಿಶ್ವೇದೇವಾಃ ॥**

(ಶ. ಬ್ರಾ. ೨-೪-೪-೧೩)

ಅಮಾವಾಸ್ಯೆಯದಿನ ಅರ್ಪಿತವಾಗುವ ಐಂದ್ರಾಗ್ನಿಸಂಬಂಧವಾದ ಪುರೋಡಾಶವೇ ವೈಶ್ವದೇವೋದ್ದಿಷ್ಟವಾದ ತೃತೀಯ ಸವನವು. ಇಂದ್ರಾಗ್ನಿಗಳೇ ವಿಶ್ವೇದೇವತೆಗಳು ಎಂದು ವರ್ಣಿತವಾಗಿರುವ ಈ ಸಂದರ್ಭದಲ್ಲಿ ಇಂದ್ರಾಗ್ನಿಗಳಿಗೂ, ವಿಶ್ವೇದೇವತೆಗಳಿಗೂ ತಾದಾತ್ಮ್ಯವನ್ನು ತಿಳಿಸಿದೆ.

ಇದಲ್ಲದೇ, ವಿಶ್ವೇದೇವತೆಗಳಿಗೆ ತೃತೀಯಸವನದಲ್ಲಿ ಪ್ರಾಧಾನ್ಯವುಂಟು ಎಂದು ತಿಳಿಸುವ ಒಂದು ಐತಿಹಾಸಿಕ ಸಂದರ್ಭವೂ ಐತರೇಯಬ್ರಾಹ್ಮಣದಲ್ಲಿ ಈರೀತಿ ವರ್ಣಿತವಾಗಿದೆ.

**ದೇವಾ ವೈ ಯಜ್ಞಮತನ್ವತ ತಾಂಸ್ತನ್ವಾನಾನಸುರಾ ಅಭ್ಯಾಯನ್ ಯಜ್ಞವೇಶಸಮೇಷಾಂ ಕರಿಷ್ಯಾಮ ಇತಿ..................ತೇ ವೈ ಪುರಸ್ತಾದಪಹತಾ ಅಸುರಾಃ ಪಶ್ಚಾತ್ಪರೀತ್ಯ ಪ್ರಾವಿ-ಶಂಸ್ತೇ ದೇವಾಃ ಪ್ರತಿಬುಧ್ಯ ವಿಶ್ವಾನ್ದೇವಾನಾತ್ಮಾನಂ ಪಶ್ಚಾತ್ತೃತೀಯಸವನೇ ಪತ್ಯಾ-ಹಂಸ್ತೇ ವಿಶ್ವೈರೇವ ದೇವೈರಾತ್ಮಭಿಃ ಪಶ್ಚಾತ್ತೃತೀಯಸವನೇಽಸುರರಕ್ಷಾಂಸ್ಯಪಾಘ್ನತ ತಥೈವೈತದ್ಯಜಮಾನಾ ವಿಶ್ವೈರೇವ ದೇವೈರಾತ್ಮಭಿಃ ಪಶ್ಚಾತ್ತೃತೀಯಸವನೇಽಸುರರಕ್ಷಾಂ-ಸ್ಯಪಾಘ್ನತೇ ತಸ್ಮಾದ್ವೈಶ್ವದೇವಂ ತೃತೀಯಸವನಂ ॥**

(ಐ. ಬ್ರಾ. ೬-೪)

ದೇವತೆಗಳು ಯಜ್ಞವನ್ನು ನೆರವೇರಿಸಬೇಕೆಂದು ಪ್ರಯತ್ನಿಸಿದಾಗ ಅಸುರರು ಪ್ರವೇಶಿಸಿ "ನಾವು ಇದಕ್ಕೆ ವಿಘ್ನವನ್ನುಂಟುಮಾಡುವೆವು" ಎಂದು ಪ್ರಯತ್ನಿಸಿದರು. ಆಗ ಪ್ರಾತಃಸವನದಲ್ಲಿ ಮಿತ್ರಾವರುಣರ ಸಹಾಯದಿಂದ ದಕ್ಷಿಣ ದಿಕ್ಕಿನಿಂದ ಪ್ರವೇಶಿಸಿದ ಅಸುರರನ್ನು ಓಡಿಸಿದರು. ಇಂದ್ರನು ಮಧ್ಯಭಾಗಕ್ಕೆ ರಕ್ಷಕನಾದನು ಮತ್ತು ಇಂದ್ರಾಗ್ನಿಗಳು ಒಟ್ಟಿಗೆ ಸೇರಿ ಉತ್ತರದಿಕ್ಪಾಲಕರಾದರು. ಅಗ್ನಿಯು ಮುಂಭಾಗಕ್ಕೆ ರಕ್ಷಕನಾದನು. ಮುಂಭಾಗದ ಪ್ರವೇಶಕ್ಕೆ ಅವಕಾಶವಿಲ್ಲದ ಅಸುರರು ಹಿಂಭಾಗದಿಂದ ಪ್ರವೇಶಿಸತೊಡಗಿದರು. ಆಗ ದೇವತೆಗಳು ತೃತೀಯಸವನದಲ್ಲಿ ವಿಶ್ವೇದೇವತೆಗಳನ್ನು ಅಲ್ಲಿ ಪಾಲಕರನ್ನಾಗಿ ನಿಯಮಿಸಿದರು. ಅವರ ಸಹಾಯದಿಂದ ಹಿಂಭಾಗದಿಂದ ಪ್ರವೇಶಿಸುತ್ತಿದ್ದ ಅಸುರರನ್ನು ಓಡಿಸಿದರು. ಆದುದರಿಂದಲೇ ತೃತೀಯಸವನದಲ್ಲಿ ವಿಶ್ವೇದೇವತೆಗಳಿಗೆ ಪ್ರಾಧಾನ್ಯವಿರುತ್ತದೆ. ಈ ತತ್ತ್ವವನ್ನರಿತವನು ಅಸುರರನ್ನು ಓಡಿಸಲು ಸಮರ್ಥನಾಗುತ್ತಾನೆ.

ಹೀಗೆ ಬ್ರಾಹ್ಮಣಾದಿಗಳಲ್ಲಿ ಅಗ್ನಿ, ಇಂದ್ರ, ವಿಶ್ವೇದೇವತೆಗಳು ಎಂಬ ಕ್ರಮವಿದ್ದರೆ ಉಪನಿಷತ್ತುಗಳಲ್ಲಿ ವಸು, ರುದ್ರ, ಆದಿತ್ಯ ಮತ್ತು ವಿಶ್ವೇದೇವತೆಗಳು ಎಂಬ ಕ್ರಮವಿರುತ್ತದೆ. ಹೇಗೆಂದರೆ—

**ಬ್ರಹ್ಮವಾದಿನೋ ವದಂತಿ ಯದ್ವಸೂನಾಂ ಪ್ರಾತಃಸವನಂ ರುದ್ರಾಣಾಂ ಮಾಧ್ಯಂದಿನಂ ಸವನ-ಮಾದಿತ್ಯಾನಾಂ ಚ ವಿಶ್ವೇಷಾಂ ಚ ದೇವಾನಾಂ ತೃತೀಯಸವನಂ ॥**

(ಛಾ. ಉ. ೨-೨೪-೧)

ವಸುಗಳಿಗೆ ಪ್ರಾತಃಸವನವೂ, ರುದ್ರರಿಗೆ ಮಾಧ್ಯಂದಿನಸವನವೂ, ಆದಿತ್ಯ ಮತ್ತು ವಿಶ್ವೇದೇವತೆಗಳಿಗೆ ತೃತೀಯ ಸವನವೂ ವಿಹಿತವಾಗಿವೆಯೆಂದು ಬ್ರಹ್ಮಜ್ಞಾನಿಗಳು ಹೇಳಿದ್ದಾರೆ.

**ಅಥ ಜುಹೋತಿ ನಮ ಆದಿತ್ಯೇಭ್ಯಶ್ಚ ವಿಶ್ವೇಭ್ಯಶ್ಚ ದೇವೇಭ್ಯೋ ದಿವಿಕ್ಷಿದ್ಭ್ಯೋ ಲೋಕ-ಕ್ಷಿದ್ಭ್ಯೋ ಲೋಕಂ ಮೇ ಯಜಮಾನಾಯ ವಿಂದತ ॥**

(ಛಾ. ಉ. ೨-೨೪-೧೫)

**ತಸ್ಮಾ ಆದಿತ್ಯಾಶ್ಚ ವಿಶ್ವೇ ಚ ದೇವಾಸ್ತೃತೀಯಸವನಂ ಸಂಪ್ರಯಚ್ಛಂತ್ಯೇಷ ಹ ವೈ ಯಜ್ಞಸ್ಯ ಮಾತ್ರಾಂ ವೇದ ಯ ಏವಂ ವೇದ ಯ ಏವಂ ವೇದ ||**

(ಛಾ. ಉ. ೨-೨೪-೧೬)

ಅನಂತರ, ಆದಿತ್ಯರಿಗೆ ನಮಸ್ಕಾರವು. ವಿಶ್ವೇದೇವತೆಗಳಿಗೆ ನಮಸ್ಕಾರವು. ಅಂತರಿಕ್ಷಸ್ಥರೂ, ಪೃಥ್ವೀಸ್ಥರೂ ಆದ ದೇವತೆಗಳಿಗೆ ನಮಸ್ಕಾರವು. ಯಜ್ಞಕರ್ತನಾದ ನನ್ನ ವಾಸಕ್ಕೆ ಒಂದು ಲೋಕವನ್ನು ಸಿದ್ಧಪಡಿಸಿ ಎಂದು ಪ್ರಾರ್ಥಿಸಿದಾಗ ಆದಿತ್ಯರೂ, ವಿಶ್ವೇದೇವತೆಗಳೂ ಅವನನ್ನು ತೃತೀಯಸವನದಿಂದ ಅನುಗ್ರಹಿಸುತ್ತಾರೆ.

ಪೃಷ್ಠ್ಯ ಷಡಹರೂಪವಾದ ಯಾಗಕಾಲಗಳಲ್ಲೂ ಸಹ ಇದೇ ರೀತಿಯಾದ ಕ್ರಮದಿಂದ ಅಗ್ನಿ, ಇಂದ್ರ ಮತ್ತು ವಿಶ್ವೇದೇವತೆಗಳಿಗೆ ಪ್ರಥಮಾಹ, ದ್ವಿತೀಯಾಹ ಮತ್ತು ತೃತೀಯಾಹಗಳಲ್ಲಿ ಪ್ರಾಧಾನ್ಯವಿರುವುದೆಂದು ಐತರೇಯ ಬ್ರಾಹ್ಮಣವು ವರ್ಣಿಸುತ್ತದೆ.

**(೧) ಅಗ್ನಿರ್ವೈ ದೇವತಾ ಪ್ರಥಮಮಹರ್ವಹತಿ ತ್ರಿವೃತ್ಸ್ತೋಮೋ ರಥಂತರಂ ಸಾಮ ಗಾಯತ್ರೀಚ್ಛಂದಃ ||**

(ಐ. ಬ್ರಾ. ೪-೨೯)

**(೨) ಇಂದ್ರೋ ವೈ ದೇವತಾ ದ್ವಿತೀಯಮಹರ್ವಹತಿ ಪಂಚದಶಸ್ತೋಮೋ ಬೃಹತ್ಸಾಮ ತ್ರಿಷ್ಟುಪ್ಛಂದಃ ||**

(ಐ. ಬ್ರಾ. ೪-೩೧)

**(೩) ವಿಶ್ವೇ ವೈ ದೇವಾ ದೇವತಾಸ್ತೃತೀಯಮಹರ್ವಹಂತಿ ಸಪ್ತದಶಃ ಸ್ತೋಮೋ ವೈರೂಪಂ ಸಾಮ ಜಗತೀಛಂದಃ ||**

(ಐ. ಬ್ರಾ. ೫-೧)

ಪೃಷ್ಠ್ಯಷಡಹಗಳಲ್ಲಿ ಪ್ರಥಮದಿನ ಅಗ್ನಿದೇವತೆಯು ತ್ರಿವೃತ್ಸ್ತೋಮವನ್ನೂ, ರಥಂತರ ಸಾಮವನ್ನೂ ಮತ್ತು ಗಾಯತ್ರೀ ಛಂದಸ್ಸನ್ನೂ ಕೂಡಿಕೊಂಡಿರುತ್ತಾನೆ. ಎರಡನೆಯದಿನ ಇಂದ್ರದೇವತೆಯು ಪಂಚದಶಸ್ತೋಮವನ್ನೂ, ಬೃಹತ್ಸಾಮವನ್ನೂ ಮತ್ತು ತ್ರಿಷ್ಟುಪ್ಛಂದಸ್ಸನ್ನೂ ಕೂಡಿಕೊಂಡಿರುತ್ತಾನೆ. ಮೂರನೆಯದಿನ ವಿಶ್ವೇದೇವತೆಗಳು ಸಪ್ತದಶಸ್ತೋಮವು, ವೈರೂಪಸಾಮ ಮತ್ತು ಜಗತೀಛಂದಸ್ಸನ್ನು ಕೂಡಿಕೊಂಡಿರುತ್ತಾರೆ ಎಂದು ವಿಶ್ವೇದೇವತೆಗಳಿಗೆ ಮೂರನೆಯ ಸ್ಥಾನವನ್ನು ನಿರ್ದೇಶಿಸಿದೆ. ಈ ರೀತಿ ವಿಶ್ವೇದೇವತೆಗಳ ಸ್ಥಾನಮಾನಗಳಲ್ಲಿ ವ್ಯತ್ಯಸ್ತವಾದ ಅಭಿಪ್ರಾಯಗಳನ್ನು ತಿಳಿಸಿದೆ. ಆದರೆ ಇದೇ ವಿಶ್ವೇದೇವತೆಗಳು ನಾನಾ ತತ್ತ್ವಗಳನ್ನು ಪ್ರತಿಬಿಂಬಿಸುವುದರಿಂದ ಇವರನ್ನು ಅನೇಕ ಕಡೆಗಳಲ್ಲಿ ಅನೇಕ ವಿಧವಾಗಿ ವರ್ಣಿಸಿದೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉದಾಹರಣೆಗಾಗಿ ತೆಗೆದುಕೊಳ್ಳಬಹುದು.

**ಇಮೇ ವೈ ಪ್ರಾಣಾಃ । ಮನೋಜಾತಾ ಮನೋಯುಜೋ ದಕ್ಷಕ್ರತವೋ ವಾಗೇವಾಗ್ನಿಃ ಪ್ರಾಣೋದಾನೌ ಮಿತ್ರಾವರುಣೌ ಚಕ್ಷುರಾದಿತ್ಯಃ ಶ್ರೋತ್ರಂ ವಿಶ್ವೇದೇವಾಃ ||**

(ಶ. ಬ್ರಾ. ೩-೨-೨-೧೩)

ಚೈತನ್ಯಯುಕ್ತಗಳಾದ ಈ ಪ್ರಾಣಗಳು ಮನೋಜನ್ಯವಾದವು. ಅಗ್ನಿಯೇ ವಾಕ್ಕು. ಮಿತ್ರಾವರುಣರೇ ಉಚ್ಛ್ವಾಸ ನಿಶ್ವಾಸಗಳು. ಆದಿತ್ಯನೇ ಚಕ್ಷುಸ್ತತ್ತ್ವವು. ವಿಶ್ವೇದೇವತೆಗಳೇ ಶ್ರೋತ್ರೇಂದ್ರಿಯತತ್ತ್ವವು.

**ವೈಶ್ವದೇವಂ ವಾ ಅಂತರಿಕ್ಷಂ ತದ್ಯದೇನೇನೇಮಾಃ ಪ್ರಜಾಃ ಪ್ರಾಣತ್ಯಶ್ಚೋದಾನತ್ಯಶ್ಚಾಂತರಿಕ್ಷ ಮನುಚರಂತಿ ತೇನ ವೈಶ್ವದೇವಂ ವಷಟ್ಕೃತೇ ಜುಹೋತಿ ||**

(ಶ. ಬ್ರಾ. ೩-೮-೨-೩೨)

ಶ್ರವಣೇಂದ್ರಿಯಕ್ಕೆ ಸಂಬಂಧಿಸಿದ ಶಬ್ದದ ಸಂಚಾರಕ್ಕೆ ಸಾಧನವಾಗಿರುವುದರಿಂದಲೂ, ಉಚ್ಛ್ವಾಸನಿಃಶ್ವಾಸಗಳ ಮೂಲಕ ಅಂತರಿಕ್ಷದಲ್ಲಿಯೇ ಸಕಲ ಭೂತಗಳೂ ವ್ಯವಹರಿಸುವುದರಿಂದಲೂ ಇವುಗಳಿಗೆಲ್ಲಾ ಅಧಿದೇವತೆಗಳಾದ ವಿಶ್ವೇದೇವತೆಗಳೇ ಅಂತರಿಕ್ಷತತ್ತ್ವವನ್ನು ಪ್ರತಿಬಿಂಬಿಸುವವರಾಗಿದ್ದಾರೆ.

**ಏತಸ್ಮೈ ವೈ ಗೃಹ್ಣಾತಿ ಯ ಏಷ ತಪತಿ ವಿಶ್ವೇಭ್ಯೋ ಹ್ಯೇನಾ ದೇವೇಭ್ಯೋ ಗೃಹ್ಣಾತಿ ರಶ್ಮಯೋ ಹ್ಯಸ್ಯ ವಿಶ್ವೇ ದೇವಾಸ್ತಸ್ಮಾದಾಹ ಹವಿಷ್ಮಾ ಅಸ್ತು ಸೂರ್ಯ ಇತಿ ||**

(ಶ. ಬ್ರಾ. ೩-೯-೨-೧೨)

ಸೂರ್ಯನಿಗೆ ಅರ್ಪಿತವಾಗುವ ಹವಿಸ್ಸುಗಳೆಲ್ಲವೂ ವಿಶ್ವೇದೇವತೆಗಳಿಗೆ ಅರ್ಪಿತವಾದಂತೆ. ಏಕೆಂದರೆ, ಸಕಲ ಸೂರ್ಯರಶ್ಮಿಗಳೂ ವಿಶ್ವೇದೇವತೆಗಳ ತತ್ತ್ವಸ್ವರೂಪಗಳೇ ಆಗಿವೆ. ಆದುದರಿಂದ ಸಂಚಾರವಿಷಯಗಳಾದ ಸೂರ್ಯರಶ್ಮಿಗಳೂ ಮತ್ತು ಸಂಚಾರಸಾಧನವಾದ ಅಂತರಿಕ್ಷವೂ ವಿಶ್ವೇದೇವತೆಗಳ ಪ್ರತೀಕಗಳೇ ಆಗಿವೆ. ಈ ಕಾರಣದಿಂದಲೇ ಇವರನ್ನು ದಿಕ್ಕುಗಳಿಗೆ ನಿರ್ಮಾಪಕರೆಂದೂ ತಿಳಿಸಿದೆ.

**ವಿಶ್ವೇದೇವಾಃ ವೈಶ್ವಾನರಾ ದಿಶಃ ಕೃತ್ವಾ ತಾಸ್ವೇತಾಮಾಶಿಷಮಾಶಾಸತೆ |**

(ಶ. ಬ್ರಾ. ೬-೫-೨-೬)

ವಿಶ್ವೇದೇವತೆಗಳು ದಿಕ್ಕುಗಳನ್ನೆಲ್ಲಾ ನಿರ್ಮಿಸಿ ಅವುಗಳನ್ನು ಆಶೀರ್ವದಿಸಿದರು. ದಿಕ್ಕುಗಳಿಗೂ ತದ್ವ್ಯಾಪಕವಾದ ಅಂತರಿಕ್ಷಕ್ಕೂ ಇವರೇ ಅಧಿದೇವತೆಗಳಾದುದರಿಂದ ಇವರೇ ಋತ್ವಾದಿಗಳಿಗೆಲ್ಲಾ ನಿಯಾಮಕರು ಮತ್ತು ತದನುಸಾರವಾಗಿ ವೃಷ್ಟ್ಯುತ್ಪಾದಕರು ಎಂದೂ ವರ್ಣಿತರಾಗಿದ್ದಾರೆ.

**ಋತವೋ ವೈ ವಿಶ್ವೇದೇವಾಸ್ತದೇನಾಂ ವಿಶ್ವೈರ್ದೇವೈರ್ಋತುಭಿಃ ಸಂವಿದಾನಃ |**

(ಶ. ಬ್ರಾ. ೭-೧-೧-೪೩)

**ವಿಶ್ವೇಚ ವೈ ದೇವಾ ಮರುತಶ್ಚ ವರ್ಷಸ್ಯೇಶತೆ ಊರ್ಜಸ್ವತೀ |**

(ಶ. ಬ್ರಾ. ೭-೨-೨-೧೦)

ಇತ್ಯಾದಿಯಾದ ವಾಕ್ಯಗಳಿಂದ ಇವರ ಸರ್ವವ್ಯಾಪಕತ್ವವೂ ಅತಿಶಯವಾದ ಪ್ರಭಾವವೂ ಪ್ರಶಂಸಿತವಾಗಿವೆ. ಇಂತಹ ಅತಿಶಯವಾದ ಪ್ರಭಾವವಿರುವುದರಿಂದಲೇ ಇದರ ಪ್ರಶಂಸಕವಾಗಿ,

**ವಿಶ್ವೇ ವೈ ದೇವಾ ದೇವಾನಾಂ ಯಶಸ್ವಿತಮಾ ಯಶ ಏವಾಸ್ಮಿನ್ದಧಾತಿ |**

(ಶ. ಬ್ರಾ. ೧೩-೧-೨-೮)

ಸಕಲ ದೇವತೆಗಳ ನಡುವೆಯೂ ವಿಶ್ವೇದೇವತೆಗಳೇ ಅತ್ಯಂತ ಯಶಸ್ವಿಗಳು ಮುಂತಾದ ಸ್ತುತಿವಾಕ್ಯಗಳಿರುತ್ತವೆ. ಹೀಗೆ ಕೆಲವೆಡೆಗಳಲ್ಲಿ ಇಂದ್ರಾಗ್ನಿಗಳೊಡನೆ ತಾದಾತ್ಮ್ಯವನ್ನು ತೋರಿಸಿಯೂ ಕೆಲವೆಡೆಗಳಲ್ಲಿ ವೈಯಕ್ತಿಕವಾದ ಸ್ವರೂಪವನ್ನು ವರ್ಣಿಸಿಯೂ ಇವರನ್ನು ಅನೇಕವಿಧವಾಗಿ ಸ್ತುತಿಸಿರುತ್ತದೆ. ಈ ಎಲ್ಲಾ ವಿಧವಾದ ವರ್ಣನೆಗಳನ್ನು

ಪರಿಶೀಲಿಸಿದರೆ, ಒಟ್ಟಿನಲ್ಲಿ ವಿಶ್ವೇದೇವತೆಗಳು ವಿಶ್ವದಲ್ಲಿ ಸಕಲ ಶಕ್ತಿಗಳನ್ನು ಪ್ರತಿಬಿಂಬಿಸುವ ದೇವತೆಗಳೆಂದು ಹೇಳಬಹುದು ಅಥವಾ ಸಕಲ ತತ್ತ್ವಗಳನ್ನೂ ಒಳಗೊಂಡಿರುವ ಬ್ರಹ್ಮಸ್ವರೂಪವೇ ವಿಶ್ವೇದೇವತಾಕವೆಂದೂ ಹೇಳಬಹುದು. ಹೇಗೆಂದರೆ—

**ತದ್ವೈ ತತ್ಪಶ್ಯನ್ನೃಷಿರಭ್ಯನೂವಾದ । ಭೂತಂ ಭವಿಷ್ಯತ್ಪ್ರಸ್ತೌಮಿ ಮಹದ್ಬ್ರಹ್ಮೈಕಮಕ್ಷರಂ ಬಹು ಬ್ರಹ್ಮೈಕಮಕ್ಷರಮಿತ್ಯೇತದ್ಧ್ಯೇವಾಕ್ಷರಗ್ಂ ಸರ್ವೇ ದೇವಾಃ ಸರ್ವಾಣಿ ಭೂತಾನ್ಯಭಿಸಂಪದ್ಯಂತೇ ತದೇತದ್ಬ್ರಹ್ಮ ಚ ಕ್ಷತ್ರಂ ಚಾಗ್ನಿರೇವ ಬ್ರಹ್ಮೇಂದ್ರಃ ಕ್ಷತ್ರಮಿಂದ್ರಾಗ್ನೀ ವೈ ವಿಶ್ವೇದೇವಾ ವಿಡು ವಿಶ್ವೇದೇವಾಸ್ತದೇತದ್ಬ್ರಹ್ಮ ಕ್ಷತ್ರಂ ವಿಟ್ ॥**

(ಶ. ಬ್ರಾ. ೧೦-೪-೧-೯)

ಮಹತತ್ತ್ವದ ದರ್ಶನವನ್ನು ಪಡೆದ ಋಷಿವಾಕ್ಯವಿದು. ಭೂತಕಾಲಗಳಲ್ಲಿದ್ದುದೂ, ಭವಿಷ್ಯತ್ತುಗಳಲ್ಲಿ ಇರುವುದೂ, ಮಹತ್ತಾದುದೂ, ನಾಶರಹಿತವಾದುದೂ, ನಾನಾರೂಪಾತ್ಮಕವಾದುದೂ ಆದ ಬ್ರಹ್ಮತತ್ತ್ವದನ್ನು ನಾನು ಸ್ತುತಿಸುತ್ತೇನೆ. ಸಕಲ ದೇವತೆಗಳೂ, ಸಕಲ ಭೂತಗಳೂ ಈ ತತ್ತ್ವದಲ್ಲೇ ಅಂತರ್ಧಾನವನ್ನು ಹೊಂದುತ್ತವೆ. ಇದೇ ಬ್ರಹ್ಮರೂಪವು, ಇದೇ ಕ್ಷತ್ರರೂಪವು, ಅಗ್ನಿಯೇ ಬ್ರಹ್ಮಶಕ್ತಿಪ್ರತಿಪಾದಕನು, ಇಂದ್ರನೇ ಕ್ಷಾತ್ರಶಕ್ತಿಪ್ರತಿಪಾದಕನು, ವಿಶ್ವೇದೇವತೆಗಳೇ ಇಂದ್ರಾಗ್ನಿಗಳು. ಆದರೆ ವಿಶ್ವೇದೇವತೆಗಳು ವೈಶ್ಯಶಕ್ತಿಗೂ ಪ್ರತಿಪಾದಕರು, ಆದುದರಿಂದಲೇ ಸಕಲವನ್ನೂ ಅಡಕ ಮಾಡಿಕೊಂಡಿರುವ ಈ ತತ್ತ್ವವು ಬ್ರಹ್ಮ, ಕ್ಷತ್ರ ಮತ್ತು ವಿಟ್ ಎಂಬ ಈ ಎಲ್ಲಾ ಶಕ್ತಿಗಳಿಗೂ ಮೂಲವಾಗಿದೆ.

### ವೈಶ್ವದೇವ ಸೂಕ್ತಗಳಲ್ಲಿ ನೈಮಿತ್ತಿಕವಾಗಿ ಪ್ರಶಂಸಿತರಾಗತಕ್ಕ ದೇವತೆಗಳು
### ಐದನೆಯ ಮಂಡಲದ ೪೧-೪೬ ಸೂಕ್ತಗಳು

ವಿಶ್ವೇದೇವತೆಗಳಾರು ? ಇವು ಒಂದು ಗುಂಪೇ ಅಥವಾ ಸಕಲ ದೇವತೆಗಳನ್ನೊಳಗೊಂಡ ಪೂರ್ಣದೇವತಾ ಸಮೂಹವೇ ಎಂಬ ವಿಷಯದಲ್ಲಿ ಋ. ಸಂ. ೫-೪೧ ನೇ ಸೂಕ್ತದ ಪೂರ್ವಪೀಠಿಕೆಯಲ್ಲಿ ವಿಮರ್ಶಿಸಲಾಗಿದೆ. ಒಂದುವೇಳೆ ವೈಶ್ವದೇವಸೂಕ್ತಗಳಲ್ಲಿ ನಿರ್ದಿಷ್ಟರಾದ ದೇವತೆಗಳ ಸಂಘವೇ ಬೇರೆ ಎಂಬ ಅಭಿಪ್ರಾಯವನ್ನು ಒಪ್ಪಿದರೂ ಸಹ ಆಗಲೂ ಆ ಗುಂಪಿನ ದೇವತೆಗಳೇ ಅಲ್ಲದೇ, ಆನುಷಂಗಿಕವಾಗಿ ಪ್ರಶಂಸಿತರಾಗಿರತಕ್ಕ ಇತರ ದೇವತೆಗಳೂ ಆ ಸೂಕ್ತಗಳಲ್ಲಿ ಅಂತರ್ಗತರಾಗಿರುತ್ತಾರೆ. ಈ ವಿಧವಾಗಿ ನೈಮಿತ್ತಿಕವಾದ ದೇವತೆಗಳು ಯಾರುಯಾರು ಎಂಬ ವಿಷಯದಲ್ಲಿ ಬೃಹದ್ದೇವತೆಯಲ್ಲಿ ಒಂದು ಪ್ರಕರಣವೇ ಇರುತ್ತದೆ. ಈ ವಿಷಯವನ್ನು ಮುಂದೆ ವಿಶದವಾಗಿ ತಿಳಿಸಲಾಗುವುದು. ಆದರೆ, ಪ್ರಕೃತದಲ್ಲಿ, ಆ ನೈಮಿತ್ತಿಕವಾಗಿ ಸ್ತುತರಾಗತಕ್ಕ ದೇವತೆಗಳಾರು ಎಂಬುದನ್ನು ತಿಳಿಸಲಾಗುತ್ತದೆ. **ಸಪ್ತರ್ಷಯೋ ವಸವಶ್ಚಾಪಿ ದೇವಾಃ** (ಬೃ. ದೇ. ೮-೧೨೫) ಇತ್ಯಾದಿಯಾಗಿ, ಬೃಹದ್ದೇವತೆಯಲ್ಲಿ ಈ ನೈಮಿತ್ತಿಕವಾದ ದೇವತೆಗಳನ್ನು ತಿಳಿಸುತ್ತಾ **ನಿಪಾತಿನೋ ವೈಶ್ವದೇವೇಷು ಸರ್ವೇ** (೮-೧೨೮) ಎಂದು ಮುಕ್ತಾಯಮಾಡಿದೆ. ಅವರಾರೆಂದರೆ,

ಸಪ್ತರ್ಷಿಗಳು, ವಸುಗಳು, ದೇವತಾತ್ಮರಾದ ಅಥರ್ವರು, ಭೃಗುಗಳು, ಸೋಮ, ಸೂರ್ಯ, ಪಥ್ಯಾಸ್ವಸ್ತಿ, ದ್ಯಾವಾಪೃಥಿವಿಗಳು, ಕುಹೂ, ಗುಂಗೂ, ಅದಿತಿ, ಧೇನು, ಅಘ್ನ್ಯಾ, ಅಸುನೀತಿ, ಇಳಾ, ಅಪ್ಸರು, ವಿಧಾತೃ, ಅನುಮತಿ, ಸಂಗತರಾದ ಅಂಗಿರಸ್ಸುಗಳು, ವೈಶ್ವಾನರ, ಸುಪರ್ಣ, ವಿವಸ್ವತ್, ಪ್ರಜಾಪತಿ, ದ್ಯೌಃ ಸುಧನ್ವನ್, ನಗೋಹ್ಯ, ಅಪಾಂನಪಾತ್, ಅರ್ಯಮನ್, ವಾತಜೂತಿ, ಇಳಸ್ಪತಿ, ರಥಸ್ಪತಿ, ಋಭುಗಳು, ಪರ್ಜನ್ಯ, ಪರ್ವತಗಳು,

ಗ್ನಾ, ದಕ್ಷ, ಭಗ, ದೇವಪತ್ನಿಗಳು, ದಿಗ್ದೇವತೆಗಳು, ಆದಿತ್ಯರು, ರುದ್ರರು, ಪಿತೃಗಳು ಮತ್ತು ಸಾಧ್ಯರು. (ಬೃ. ದೇ. ೮–೧೨೫ ರಿಂದ ೧೨೮)

ಈ ಸಮುದಾಯದಲ್ಲಿರುವ ದೇವತೆಗಳೆಲ್ಲರೂ ನೈಮಿತ್ತಿಕದೇವತೆಗಳೇ ಆದರೆ ನಿತ್ಯದೇವತೆಗಳಾರು ಎಂಬುದನ್ನು ಇತ್ಯರ್ಥಮಾಡುವುದೂ ಶ್ರಮವಾಗುತ್ತದೆ. **ಅಗ್ನಿ, ಸೋಮ, ಬೃಹಸ್ಪತಿ** ಇತ್ಯಾದಿ ದೇವತೆಗಳು ವೈಶ್ವದೇವಸೂಕ್ತಗಳಲ್ಲೆಲ್ಲಾ ನಿಯತವಾಗಿಯೇ ಪ್ರಶಂಸಿತರಾಗಿರತಕ್ಕವರಾಗಿದ್ದಾರೆ. ಈ ಪ್ರಕರಣವನ್ನು ಎಂದರೆ (೫-೪೧ ರಿಂದ ೪೬)ನೇ ಸೂಕ್ತಗಳಲ್ಲಿ ಅಂತರ್ಗತವಾಗಿರುವ ದೇವತೆಗಳ ವಿಷಯವನ್ನು ತಿಳಿಸುವಾಗ ಬೃಹದ್ದೇವತೆಯಲ್ಲಿ ಕೆಲವು ದೇವತೆಗಳ ನಿರ್ದೇಶವನ್ನು ಮಾತ್ರ ಮಾಡಿದೆ. ಆದುದರಿಂದ, ಅಲ್ಲಿ ನಿರ್ದಿಷ್ಟರಾಗಿರುವ ದೇವತೆಗಳೆಲ್ಲಾ ಈ ಸೂಕ್ತಗಳಲ್ಲಿ ನೈಮಿತ್ತಿಕ ದೇವತೆಗಳೆಂದು ಪರಿಶೀಲಿಸಬಹುದೇ ಎಂಬುದು ಒಂದು ಪ್ರಶ್ನೆ. ಎರಡನೆಯದಾಗಿ, ಕೆಲವು ಮಂತ್ರಗಳಲ್ಲಿ ನಿಷ್ಕೃಷ್ಟವಾಗಿ ಯಾವ ದೇವತೆಯನ್ನು ಪ್ರಶಂಸಿಸಿದೆ ಎಂಬ ವಿಷಯದಲ್ಲೂ ಯಾಸ್ಕಾದಿಗಳು ಮತವೈವಿಧ್ಯವನ್ನು ತೋರಿಸಿದ್ದಾರೆ. ಆದು ಹೇಗೆಂದರೆ.

**ಪ್ರ ಸುಷ್ಟುತಿಃ ಸ್ತನಯಂತಂ ರುವಂತಮಿಳಸ್ಪಂತಂ ಜರಿತರ್ನೂನಮಶ್ಯಾಃ ।**
**ಯೋ ಅಬ್ದಿಮಾँ ಉದನಿಮಾँ ಇಯರ್ತಿ ಪ್ರ ವಿದ್ಯುತಾ ರೋದಸೀ ಉಕ್ಷಮಾಣಃ ॥**

(ಋ. ಸಂ. ೫–೪೨–೧೪)

ಎಂಬ ಮಂತ್ರದಲ್ಲಿ **ಇಳಸ್ಪತಿಯು** ಪ್ರಶಂಸೆಯಿದೆ. ಈ ಇಳಸ್ಪತಿಯು ಯಾರು ಎಂಬ ವಿಷಯದಲ್ಲಿ ನಿಷ್ಕೃಷ್ಟವಾದ ಅಭಿಪ್ರಾಯವೇ ಇರುವುದಿಲ್ಲ. **ಇಳಃ** ಅನ್ನಸ್ಯ **ಉದಕಸ್ಯ ವಾ ಪತಿಂ ಸ್ವಾಮಿನಂ** (ಪರ್ಜನ್ಯಂ) ಅನ್ನ ಅಥವಾ ಉದಕಕ್ಕೆ ಒಡೆಯನಾದ ಪರ್ಜನ್ಯನನ್ನು ಎಂದು ಸಾಯಣರು ವಿವರಿಸಿದ್ದಾರೆ. ಇದು ಒಂದು ಮತ. ಯಾಸ್ಕಾದಿಗಳ ಮತವನ್ನು ಬೃಹದ್ದೇವತೆಯಲ್ಲಿ ಈರೀತಿ ತಿಳಿಸಿದೆ—

**ತಮುಷ್ಟುಹೀತಿ ರೌದ್ರೀ ತು ಪ್ರ ಸುಷ್ಟುತಿರಿತಿ ತ್ವೃಚಿ ।**
**ಶೌನಕಾದಿಭಿರಾಚಾರ್ಯೈರ್ದೇವತಾ ಬಹುಧೇರಿತಾ ।**
**ಇಳಸ್ಪತಿಂ ಶಾಕಪೂಣಿಃ ಪರ್ಜನ್ಯಾಗ್ನೀ ತು ಗಾಲವಃ ॥**
**ಯಾಸ್ಕಸ್ತು ಪೂಷಣಂ ಮೇನೇ ಸ್ತುತಮಿಂದ್ರಂ ತು ಶೌನಕಃ ।**
**ವೈಶ್ವಾನರಂ ಭಾಗುರಿಸ್ತು ಮಾರುತ್ಯೇಷ ಸಮಾಪ್ತಿನಾ ॥**

(ಬೃ. ದೇ. ೫–೩೮ ರಿಂದ ೪೦)

ಮೇಲೆ ಉದ್ಧೃತವಾದ ಮಂತ್ರದಲ್ಲಿ ನಿರ್ದಿಷ್ಟವಾದ ದೇವತೆಯಾರೆಂಬ ವಿಷಯದಲ್ಲಿ ಶೌನಕಾದಿಗಳು ಮತವೈವಿಧ್ಯವನ್ನು ತೋರಿಸಿದ್ದಾರೆ. ಶಾಕಪೂಣಿಯವರು **ಇಳಸ್ಪತಿ**ಯೆಂದೇ ಕರೆದರು. ಗಾಲವರು **ಪರ್ಜನ್ಯಾಗ್ನಿ**ಯೆಂದರು. ಯಾಸ್ಕರು **ಪೂಷದೇವ**ನೆಂದರು. ಶೌನಕರು **ಇಂದ್ರ**ನೆಂದಭಿಪ್ರಾಯಪಟ್ಟಿದ್ದಾರೆ. ಭಾಗುರಿಯು ವೈಶ್ವಾನರನೆಂದರು. ಇವೇ ರೀತಿ ಮತವೈವಿಧ್ಯವಿರುತ್ತದೆ. ಹೀಗೆಯೇ,

**ತಂ ಪ್ರತ್ನಥಾ ಪೂರ್ವಥಾ ವಿಶ್ವಥೇಮಥಾ ಜ್ಯೇಷ್ಠತಾತಿಂ ಬರ್ಹಿಷದಂ ಸ್ವರ್ವಿದಂ ।**
**ಪ್ರತೀಚೀನಂ ವೃಜನಂ ದೋಹಸೇ ಗಿರಾಶುಂ ಜಯಂತಮನು ಯಾಸು ವರ್ಧಸೇ ॥**

(ಬೃ. ಸಂ. ೫-೪೪-೧)

ಎಂಬ ಮಂತ್ರದಲ್ಲಿ **ತಂ ಇಂದ್ರಂ** ಎಂದು ಸಾಯಣರು ಇಂದ್ರಸ್ತುತಿಯಿದೆಯೆಂದು ತಿಳಿಸಿದ್ದಾರೆ. ಆದರೆ ಬೃಹದ್ದೇವತಾಕಾರರು ಈ ಮಂತ್ರದಲ್ಲಿ ಪ್ರಶಂಸಿತವಾಗಿರುವ ದೇವತೆ ಯಾರು ಎಂಬುದನ್ನು ನಿಷ್ಕೃಷ್ಟವಾಗಿ ತಿಳಿಸದೆ ಅನೇಕ ವಿಕಲ್ಪಗಳನ್ನು ತೋರಿಸಿದ್ದಾನೆ.

**ತಂ ಪ್ರತ್ನಥೇತಿ ಸೌಮೀ ವಾ ದೈವ್ಯೈಂದ್ರೀ ವಾ ಪ್ರಜಾಪತೇಃ ।**
**ಪರೋಕ್ಷವೈಶ್ವದೇವಂ ತದಾಹ ಕೌಷೀತಕಿಃ ಸ್ವಯಂ ॥**

(ಬೃ. ದೇ. ೫-೪೪)

**ತಂ ಪ್ರತ್ನಥಾ** ಎಂಬ ಮಂತ್ರದಲ್ಲಿ ಉದ್ದಿಷ್ಟವಾದ ದೇವತೆಯು ಸೋಮನಾಗಬಹುದು ಅಥವಾ ಇನ್ನಾವುದಾದರೂ ದೇವತಾದಿವಿಶೇಷವಾಗಬಹುದು ಅಥವಾ ಇಂದ್ರನಾಗಬಹುದು. ಅದೂ ಅಲ್ಲದಿದ್ದರೆ, ಪ್ರಜಾಪತಿಯೇ ಉದ್ದಿಷ್ಟನಾಗ ಬಹುದು ಎಂದು ಪೂರ್ವಾರ್ಧದಲ್ಲಿ ವೈಕಲ್ಪಿಕವಾದ ಅರ್ಥವನ್ನು ತಿಳಿಸಿದೆ. ಉತ್ತರಾರ್ಧದಲ್ಲಿ ಕೌಷೀತಕೀಬ್ರಾಹ್ಮಣದ ಅಭಿಪ್ರಾಯವನ್ನು ತಿಳಿಸುತ್ತಾ, "ಈ ಮಂತ್ರದಲ್ಲಿ ವಿಶ್ವೇದೇವತೆಗಳೇ ಪರೋಕ್ಷವಾಗಿ ನಿರ್ದಿಷ್ಟರಾಗಿದ್ದಾರೆ" ಎಂದು ಕೌಷೀತಕಿಯು ಹೇಳಿರುವ ವಾಕ್ಯವನ್ನುದಾಹರಿಸಿದೆ (ಕೌ. ಬ್ರಾ. ೨೪-೯).

ಹೀಗೆ ಅನೇಕ ಮಂತ್ರಗಳಲ್ಲಿ ನಿರ್ದಿಷ್ಟರಾಗಿರುವ ದೇವತೆಯ ವಿಷಯದಲ್ಲೇ ನಿಷ್ಕೃಷ್ಟವಾದ ಅಭಿಪ್ರಾಯ ವಿಲ್ಲದಿರುವಾಗ, ವೈಶ್ವದೇವಗಣದಲ್ಲಿ ಸೇರತಕ್ಕ ನಿತ್ಯದೇವತೆಗಳಾರು ಮತ್ತು ನೈಮಿತ್ತಿಕದೇವತೆಗಳಾರು ಎಂಬ ಅಂಶವನ್ನು ಪ್ರಕೃತವಾದ ಪ್ರಕರಣದಲ್ಲಿ (೫-೪೧-೪೬) ನಿರ್ಧರಿಸುವುದು ಶ್ರಮವಾಗುತ್ತದೆ.

ಸಾಯಣಭಾಷ್ಯಂ

**ವಿಶ್ವೇ ದೇವಾಃ ಶಾಸ್ತನೇತಿ ಷಡೃಚಂ ದಶಮಂ ಸೂಕ್ತಂ ಸೌಚೀಕಸ್ಯಾಗ್ನೇರಾರ್ಷಂ ವೈಶ್ವದೇವಂ॥ ಗತಃ ಸೂಕ್ತವಿನಿಯೋಗಃ ॥ ಸುಗ್ಗ್ರಾದಾಪನಾತ್ಪೂರ್ವಭಾವಿನಿ ಜಪೇ ವಿನಿಯುಕ್ತಾ । ಸೂತ್ರಿತಂ ಚ । ವಿಶ್ವೇ ದೇವಾಃ ಶಾಸ್ತನ ಮಾ ಯಥೇಹಾರಾಧಿ ಹೋತಾ ನಿಷದಾ ಯಜೀಯಾನ್ । ಆ. ೧-೪ । ಇತಿ ॥**

ಅನುವಾದವು—**ವಿಶ್ವೇದೇವಾಃ ಶಾಸ್ತನ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಸೌಚೀಕಸಂಜ್ಞಕನಾದ ಅಗ್ನಿಯೇ ಋಷಿಯು; ವಿಶ್ವೇದೇವತೆಗಳೇ ದೇವತೆಯು. ತ್ರಿಷ್ಟುಪ್ ಛಂದಸ್ಸು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ಆಜ್ಯಹೋಮ ಮಾಡುವುದಕ್ಕಾಗಿ ಸ್ರುಕ್ ಎಂಬ ಮರದ ಸೌಟನ್ನು ಸ್ವೀಕರಿಸುವುದಕ್ಕೆ ಪೂರ್ವಭಾವಿಯಾಗಿ ಜಪ ಮಾಡುವಾಗ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ವಿಶ್ವೇದೇವಾಃ ಶಾಸ್ತನ ಮಾ ಯಥೇಹಾರಾಧಿ ಹೋತಾ ನಿಷದಾ ಯಜೀಯಾನ್** ಎಂಬ ಸೂತ್ರದಿಂದ (ಆ ೧-೪) ವಿವೃತವಾಗಿರುವುದು.

## ಸೂಕ್ತ—೫೨

ಮಂಡಲ—೧೦ ॥ ಅನುವಾಕ—೪ ॥ ಸೂಕ್ತ—೫೨ ॥
ಅಷ್ಟಕ—೮ ॥ ಅಧ್ಯಾಯ—೧ ॥ ವರ್ಗ—೧೨ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ಅಗ್ನಿಃ ಸೌಚೀಕಃ ॥
ದೇವತಾ—ದೇವಾಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ವಿಶ್ವೇ ದೇವಾಃ ಶಾಸ್ತನ ಮಾ ಯಥೇಹ ಹೋತಾ ವೃತೋ ಮನವೈ ಯನ್ನಿ-
ಷದ್ಯ ।
ಪ್ರ ಮೇ ಬ್ರೂತ ಭಾಗಧೇಯಂ ಯಥಾ ವೋ ಯೇನ ಪಥಾ ಹವ್ಯಮಾ
ವೋ ವಹಾನಿ ॥ ೧ ॥

ಪದಪಾಠಃ

ವಿಶ್ವೇ । ದೇವಾಃ । ಶಾಸ್ತನ । ಮಾ । ಯಥಾ । ಇಹ । ಹೋತಾ । ವೃತಃ । ಮನವೈ । ಯತ್ । ನಿಽಸದ್ಯ ॥
ಪ್ರ । ಮೇ । ಬ್ರೂತ । ಭಾಗಽಧೇಯಂ । ಯಥಾ । ವಃ । ಯೇನ । ಪಥಾ । ಹವ್ಯಂ । ಆ । ವಃ ।
ವಹಾನಿ ॥ ೧ ॥

ಸಾಯಣಭಾಷ್ಯಂ

ಏತತ್ಸೂಕ್ತಂ ಕೃತ್ಸ್ನಮಾಗ್ನೇಯಂ । ಹೇ ವಿಶ್ವೇ ದೇವಾಃ ಯೂಯಂ ಮಾ ಮಾಂ ಶಾಸ್ತನ । ಅನುಜ್ಞಾಂ ದತ್ತ । ಯಥೇಹ ಯಜ್ಞೇ ಹೋತಾ ದೇವಾನಾಮಾಹ್ವಾತಾ ಸನ್ ವೃತೋ ಹೋತೃತ್ವೇನ ವೃತೋಽಹಂ ಮನವೈ ಸ್ತೌಮಿ ಭವತಃ । ಯದ್ಯಸ್ಮಾನ್ನಿಷದ್ಯ ಸ್ತೌಮಿ ತಸ್ಮಾಚ್ಛಾಸ್ತನ । ಮೇ ಮಮ ಭಾಗಧೇಯಂ ಪ್ರ ಬ್ರೂತ। ಯಥಾ ವೋ ಯೂಯಂ ಭಾಗಂ ಕಲ್ಪಿತವಂತಃ ತಥಾ ತಂ ಭಾಗಂ ಪ್ರ ಬ್ರೂತ ಯೇನ ಚ ಪಥಾ ವೋ ಹವ್ಯಮಾ ವಹಾನಿ । ವಹನಂ ಕರೋಮಿ ॥

ಪ್ರತಿಪದಾರ್ಥ

**ವಿಶ್ವೇ ದೇವಾಃ**—ಎಲೈ ದೇವತೆಗಳೇ । **ಯತ್**—ಯಾವ ನಿಮಿತ್ತವಾಗಿ । **ಹೋತಾ**—ಹೋತೃವಾಗಿ । **ವೃತಃ**—ನಾನು ಆರಿಸಲ್ಪಟ್ಟಿರುವೆನೋ ಆದುದರಿಂದಲೇ । **ಇಹ**—ಇಲ್ಲಿ । **ನಿಷದ್ಯ**—ಕುಳಿತು । **ಯಥಾ**—ಯಾವ ರೀತಿ । **ಮನವೈ**—ಸ್ತುತಿಸಲಿ ಎಂಬುದನ್ನು । **ಮಾ**—ನನಗೆ । **ಶಾಸ್ತನ**—ಉಪದೇಶಿಸಿರಿ । **ಯಥಾ**—ಯಾವ ರೀತಿ । **ವಃ**—ನೀವು । **ಮೇ**—ನನಗೆ । **ಭಾಗಧೇಯಂ**—ಯಜ್ಞಭಾಗವನ್ನು ಕಲ್ಪಿಸಿರುವಿರೋ। (ಮತ್ತು) **ಯೇನ**—**ಪಥಾ**—ಯಾವ ಮಾರ್ಗವಾಗಿ । **ವಃ**—ನಿಮ್ಮ । **ಹವ್ಯಂ**—ಹವಿಸ್ಸನ್ನು । **ಆ ವಹಾನಿ**—ನಿಮಗೆ ವಹಿಸಲಿ ಎಂಬುದನ್ನೂ । **ಪ್ರ ಬ್ರೂತ**—ಹೇಳಿರಿ.

ಭಾವಾರ್ಥ

ಎಲೈ ದೇವತೆಗಳೇ, ನಾನು ಹೋತೃಸ್ಥಾನಕ್ಕೆ ಆರಿಸಲ್ಪಟ್ಟಿರುವುದರಿಂದ ಇಲ್ಲಿ ಕುಳಿತು ಯಾವ ರೀತಿ ನಿಮ್ಮನ್ನು ಸ್ತುತಿಸಲಿ ಎಂಬುದನ್ನು ನನಗೆ ಉಪದೇಶಿಸಿರಿ. ಯಾವ ರೀತಿ ನನಗೆ ಯಜ್ಞಭಾಗವನ್ನು ಕಲ್ಪಿಸಿರುವಿರೋ ಮತ್ತು ಯಾವ ಮಾರ್ಗವಾಗಿ ನಿಮ್ಮ ಹವಿಸ್ಸನ್ನು ನಿಮಗೆ ವಹಿಸಲಿ ಎಂಬುದನ್ನೂ ಹೇಳಿರಿ.

## English Translation

Instruct me, Vishwedevas, since I am appointed Hotri, how sitting here I ought to praise you : declare to me your portion, how. you have acquired it, and by what path I may convey the oblation to you.

ಸಂಹಿತಾಪಾಠಃ

ಅಹಂ ಹೋತಾ ನ್ಯಸೀದಂ ಯಜೀಯಾನ್ ವಿಶ್ವೇ ದೇವಾ ಮರುತೋ ಮಾ ಜುನಂತಿ ।
ಅಹರಹರಶ್ವಿನಾಧ್ವರ್ಯವಂ ವಾಂ ಬ್ರಹ್ಮಾ ಸಮಿದ್ಭವತಿ ಸಾಹುತಿರ್ವಾಂ ॥

ಪದಪಾಠಃ

ಅಹಂ । ಹೋತಾ । ನಿ । ಆಸೀದಂ । ಯಜೀಯಾನ್ । ವಿಶ್ವೇ । ದೇವಾಃ । ಮರುತಃ । ಮಾ । ಜುನಂತಿ ॥
ಅಹಃऽಅಹಃ । ಅಶ್ವಿನಾ । ಆಧ್ವರ್ಯವಂ । ವಾಂ । ಬ್ರಹ್ಮಾ । ಸಂऽಇತ್ । ಭವತಿ । ಸಾ । ಆऽಹುತಿಃ । ವಾಂ ॥ ೨ ॥

ಸಾಯಣಭಾಷ್ಯಂ

ಯಜೀಯಾನ್ ಯಷ್ಟೃತಮೋಽಹಂ ಹೋತಾ ಸನ್ನ್ಯಸೀದಂ । ನಿಷಣ್ಣೋಽಸ್ಮಿ । ನಿಷದನೇತಂ ನಿಷಣ್ಣಂ ವಿಶ್ವೇ ವ್ಯಾಪ್ತಾ ಮರುತೋ ದೇವಾ ಜುನಂತಿ । ಪ್ರೇರಯಂತಿ ಹವಿರ್ವಹನಾಯ । ಹೇ ಅಶ್ವಿನಾ ವಾಂ ಯುವಯೋರಾಧ್ವರ್ಯವಮಹರಹಃ ಪ್ರತಿದಿನಂ ಕರ್ತವ್ಯಮಿತಿ ಶೇಷಃ । ಆಧ್ವರ್ಯವಂ ಭವದ್ಭ್ಯಾಮನುಜ್ಞಾತವ್ಯಮಿತ್ಯರ್ಥಃ । ಬ್ರಹ್ಮಾ ಭವತಿ ಭವತು । ಕಃ ಸಮಿತ್ ಸಮಿದ್ಧಶ್ಚಂದ್ರಮಾಃ । ಚಂದ್ರಮಾ ಬ್ರಹ್ಮಾ ಭವತು । ಕಿಂಚ ಸಾ । ಸ ಇತ್ಯರ್ಥಃ । ಸ ಚ ಸಮಿತ್ ಸಮಿದ್ಧಶ್ಚಂದ್ರಮಾ ವಾಂ ಯುವಯೋರ್ಹೋಮಾರ್ಥಂ ವಾಂ ಯುವಾಭ್ಯಾಂ ಕ್ರಿಯಮಾಣಾಯಾಧ್ವರ್ಯವಕರ್ಮಣ ಆಹುತಿರ್ಭವತ್ವಿತ್ಯರ್ಥಃ । ಸೋಮಾತ್ಮಕೋ ಹಿ ಚಂದ್ರಮಾ ಹೂಯತೇ । ಏಷ ವೈ ಸೋಮೋ ರಾಜೇತ್ಯುಪಕ್ರಮ್ಯ ತದೇವೋಭಯಂ ಭವತೀತಿ ಹಿ ಛಂದೋಗಬ್ರಾಹ್ಮಣಂ । ಅಥವೈವಂ ಯೋಜನಾ । ಯಾಹುತಿರಾಧ್ವರ್ಯವಮನುಷ್ಠಿತವದ್ಭ್ಯಾಂ ಹೋತವ್ಯಾ ಸಾ ವಾಂ ಯುವಯೋರ್ಯುವಾಭ್ಯಾಂ ಭವತಿ । ಭವತು । ಆಧ್ವರ್ಯವಂ ವಾಮಿತ್ಯಸ್ಯೈವ ವಿವರಣಮೇತತ್ ॥

ಪ್ರತಿಪದಾರ್ಥ

**ಯಜೀಯಾನ್**—ಯಜ್ಞಾರ್ಹನಾದ । **ಅಹಂ**—ನಾನು । **ಹೋತಾ**—ಹೋತೃವಾಗಿ । **ನ್ಯಸೀದಂ**—ಕುಳಿತಿದ್ದೇನೆ । **ವಿಶ್ವೇ ಮರುತಃ ದೇವಾಃ**—ಸಕಲ ಮರುತ್ತುಗಳೂ, ದೇವತೆಗಳೂ ಅಥವಾ ದೇವಾತ್ಮರಾದ ಸಕಲ

ಮರುತ್ತುಗಳೂ | **ಜುನಂತಿ**—ಹವಿರ್ವಹನಕ್ಕಾಗಿ ನನ್ನನ್ನು ಪ್ರೇರಿಸುತ್ತಾರೆ | **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ | **ವಾಂ**—ನಿಮ್ಮಿಂದ | **ಅಹರಹಃ**—ಪ್ರತಿದಿನವೂ | **ಅಧ್ವರ್ಯವಂ**—ಅಧ್ವರ್ಯುವಿನ ಕರ್ಮವು (ನಿರ್ವಹಿಸಲ್ಪಡಬೇಕು) | **ಸಮಿತ್**—ಪ್ರಜ್ವಲಿತನಾದ (ಪ್ರಕಾಶಿಸುವ) ಚಂದ್ರನು (ಸೋಮನು) | **ಬ್ರಹ್ಮಾ ಭವತಿ**—ಬ್ರಹ್ಮಸ್ಥಾನದಲ್ಲಿರಲಿ | **ಸಾ**—ಅದೇ ಸೋಮನು | **ವಾಂ**—ನಿಮಗೆ | **ಆಹುತಿಃ**—ಆಹುತಿಯಾಗಲಿ.

ಭಾವಾರ್ಥ

ಯಜ್ಞಾರ್ಹನಾದ ನಾನು ಹೋತೃವಾಗಿ ಕುಳಿತಿದ್ದೇನೆ. ಸಕಲ ಮರುತ್ತುಗಳೂ ದೇವತೆಗಳೂ ಅಥವಾ ದೇವಾತ್ಮರಾದ ಸಕಲ ಮರುತ್ತುಗಳೂ ಹವಿರ್ವಹನಕ್ಕಾಗಿ ನನ್ನನ್ನು ಪ್ರೇರಿಸುತ್ತಾರೆ. ಎಲೈ ಅಶ್ವಿನೀದೇವತೆಗಳೇ, ನಿಮ್ಮಿಂದ ಪ್ರತಿದಿನವೂ ಅಧ್ವರ್ಯುವಿನ ಕರ್ಮವು ನಿರ್ವಹಿಸಲ್ಪಡಬೇಕು. ಸೋಮನು ಬ್ರಹ್ಮಸ್ಥಾನದಲ್ಲಿರಲಿ. ಅದೇ ಸೋಮನು ನಿಮಗೆ ಆಹುತಿಯಾಗಲಿ.

## English Translation

Best entitled to the sacrifice, I have sat down as the Hotri : all the divine Maruts urge me (to bear the oblation) : the office of the Adhwaryu is to be discharged daily, Ashwins, by you : let the moon be the Brahman, and let it be also your oblation.

ಸಂಹಿತಾಪಾಠಃ

ಅ॒ಯಂ ಯೋ ಹೋತಾ॒ ಕಿರು॒ ಸ ಯ॒ಮಸ್ಯ॒ ಕಮಪ್ಯೂ॒ಹೇ ಯತ್ಸ॒ಮಂಜಂತಿ
ದೇ॒ವಾಃ ।
ಅಹರಹರ್ಜಾಯತೇ ಮಾ॒ಸಿಮಾ॒ಸ್ಯಥಾ ದೇ॒ವಾ ದಧಿರೇ ಹ॒ವ್ಯವಾಹಂ ॥ ೩ ॥

ಪದಪಾಠಃ

ಅ॒ಯಂ । ಯಃ । ಹೋತಾ । ಕಿಃ । ಊ॒ಂ ಇತಿ । ಸಃ । ಯ॒ಮಸ್ಯ । ಕಂ । ಅಪಿ । ಊ॒ಹೇ॒ । ಯತ್ ।
ಸ॒ಂಽಅ॒ಂಜಂತಿ । ದೇ॒ವಾಃ ॥
ಅಹಃಽಅಹಃ । ಜಾ॒ಯ॒ತೇ॒ । ಮಾ॒ಸಿಽಮಾಸಿ । ಅಥ । ದೇ॒ವಾಃ । ದ॒ಧಿ॒ರೇ॒ । ಹ॒ವ್ಯ॒ಽವಾಹಂ ॥ ೩ ॥

ಸಾಯಣಭಾಷ್ಯಂ

**ಯೋಽಯಂ ಹೋತಾ ಸ ಕಿಃ | ಕೋ ಭವತಿ | ಕೀದೃಶೋ ಭವತಿ | ತಸ್ಯ ಕೋ ವ್ಯಾಪಾರ ಇತ್ಯರ್ಥಃ | ತಸ್ಯೋತ್ತರಮುಚ್ಯತೇ | ಯಮಸ್ಯ ಮೃತ್ಯೋರ್ಭೀತಃ ಸನ್ನಿತಿ ಶೇಷಃ | ಕಮಪಿ ಹುತ-**

**ಮೂಹೇ । ವಹತಿ । ಯದ್ವಾ । ಸರ್ವಮೃತ್ವಿಗ್ವಾತಂ ನಿಯಮಯತೀತಿ ಯಮೋ ಯಜಮಾನಃ । ತಸ್ಯ ಕಮಪಿ ಹುತಮೂಹೇ। ವಹತಿ ದೇವಾನ್ಪ್ರತಿ । ಯತ್ಸಮುಂಜಂತಿ ಯದ್ಧವಿಃ ಪ್ರಾಪ್ನುವಂತಿ ದೇವಾಃ । ಕಿಂಚಾಗ್ನಿರಹರಹಃ ಪ್ರತಿದಿನಮಗ್ನಿಹೋತ್ರಾರ್ಥಂ ಜಾಯತೇ। ಪ್ರಾದುರ್ಭವತಿ । ತಥಾ ಮಾಸಿಮಾಸಿ ಪ್ರತಿಮಾಸಂ ಜಾಯತೇ ಪಿತೃಯಜ್ಞಾರ್ಥಂ । ಏತೆತ್ಕಾಲದ್ವಯಮುಪಲಕ್ಷಣಂ ಪಕ್ಷಚತುರ್ಮಾಸಷಣ್ಮಾಸ-ಸಂವತ್ಸರಾದೀನಾಂ । ಅಪರೇ ಪುನರೇವಮಾಹುಃ । ಅಹರಹಃ ಸೂರ್ಯಾತ್ಮನಾ ಜಾಯತೇ ಮಾಸಿ ಮಾಸಿ ಚಂದ್ರಾತ್ಮನೇತಿ । ಅಥ ತಮಿಮಮಗ್ನಿಂ ದೇವಾ ದಧಿರೇ ಹವ್ಯವಾಹಂ । ಹವಿಷಾಂ ವೋಢಾರಂ । ಏವ-ಮಗ್ನಿರಾತ್ಮಾನಂ ಸ್ವಯಮೇವೋಕ್ತವಾನ್ ॥**

ಪ್ರತಿಪದಾರ್ಥ

**ಯಃ ಅಯಂ ಹೋತಾ**—ಯಾರು ಈ ಹೋತೃವಾಗಿರುವನೋ । **ಸಃ**—ಅವನು । **ಕಃ**—ಯಾರು ಎಂದರೆ ಅವನ ಸ್ವರೂಪವೇನು ? । **ಯಮಸ್ಯ**—ಋತ್ವಿಕ್ಕುಗಳನ್ನು ನಿಯಮದಲ್ಲಿಡುವ ಯಜಮಾನನ । **ಯತ್**—ಯಾವ ಹವಿಸ್ಸನ್ನು । **ದೇವಾಃ**—ದೇವತೆಗಳು । **ಸಮುಂಜಂತಿ**—ಸ್ವೀಕರಿಸುವರೋ ಅಂತಹ । **ಕಮಪಿ**—ಎಲ್ಲ ಹವಿಸ್ಸುಗಳನ್ನೂ । **ಊಹೇ**—ವಹಿಸುತ್ತಾನೆ । (**ಅಗ್ನಿಃ**—ಅಗ್ನಿಯು) । **ಅಹರಹಃ**—ಪ್ರತಿದಿನವೂ । **ಜಾಯತೇ**—ಉತ್ಪನ್ನನಾಗುತ್ತಾನೆ । **ಮಾಸಿಮಾಸಿ**—ಪ್ರತಿ ಮಾಸವೂ ಉತ್ಪನ್ನನಾಗುತ್ತಾನೆ । **ಅಥ**—ಆದುದರಿಂದಲೇ । **ದೇವಾಃ**—ದೇವತೆಗಳು । **ಹವ್ಯವಾಹಂ**—ಹವಿಸ್ಸನ್ನು ವಹಿಸುವ ದೂತನನ್ನು । **ದಧಿರೇ**—ಧರಿಸಿ (ಗೌರವಿಸಿ) ಪೂಜಿಸುತ್ತಾರೆ.

ಭಾವಾರ್ಥ

ಹೋತೃವಾಗಿರುವ ಈ ಅಗ್ನಿಯ ಸ್ವರೂಪವೇನು ? ಯಜಮಾನನ ಯಾವ ಹವಿಸ್ಸುಗಳನ್ನು ದೇವತೆಗಳು ಸ್ವೀಕರಿಸುವರೋ ಅಂತಹ ಎಲ್ಲ ಹವಿಸ್ಸುಗಳನ್ನೂ ಅಗ್ನಿಯು ವಹಿಸುತ್ತಾನೆ. ಇದೇ ಅಗ್ನಿಯು ಪ್ರತಿದಿನವೂ ಉತ್ಪನ್ನನಾಗುತ್ತಾನೆ. ಆದುದರಿಂದಲೇ ದೇವತೆಗಳು ಹವಿರ್ವಾಹಕನಾದ ದೂತನನ್ನು ಧರಿಸಿ (ಗೌರವಿಸಿ) ಪೂಜಿಸುತ್ತಾರೆ.

## English Translation

Who is this, who is the Hotri ? (Afraid) of Yama, what offering does he bear that the gods accept ? Agni is born day by day; and month by month, and so the gods have made for themselves a bearer of oblations.

ವಿಶೇಷವಿಷಯಗಳು

ಅಹರಹಃ-ಪ್ರತಿದಿನವೂ ; ಅಗ್ನಿಹೋತ್ರವೆಂಬ ಕರ್ಮವನ್ನು ಪ್ರತಿದಿನವೂ ಮಾಡಬೇಕಾಗಿರುವುದು. ಆದಕ್ಕಾಗಿ ಅಗ್ನಿಯನ್ನು ಪ್ರತಿದಿನವೂ ಉತ್ಪನ್ನಮಾಡುವುದರಿಂದ ಅಥವಾ ಪೂಜಿಸುವುದರಿಂದ ಅಗ್ನಿಯು ಪ್ರತಿದಿನವೂ ಉತ್ಪನ್ನನಾಗುವನೆಂದು ಇಲ್ಲಿ ಹೇಳಿದೆ. ಅದರಂತೆ ಮಾಸಿಮಾಸಿ—ಪ್ರತಿ ಮಾಸದಲ್ಲಿಯೂ ದರ್ಶಪೂರ್ಣಮಾಸಾದಿ ಯಾಗಗಳನ್ನು ಮಾಡುವುದರಿಂದ ಆದಕ್ಕಾಗಿ ಅಗ್ನಿಯನ್ನು ಪ್ರತಿ ಯಾಗದಲ್ಲಿಯೂ ಅರಣಿಗಳಲ್ಲಿ ಕಡೆದು ಉತ್ಪನ್ನ ಮಾಡುವುದು ವಿಧಿಯಾದ್ದರಿಂದ ಅಗ್ನಿಯು ಪ್ರತಿ ಮಾಸದಲ್ಲಿಯೂ ಉತ್ಪನ್ನನಾಗುವನೆಂದು ಇಲ್ಲಿ ವಿವರಿಸಿದೆ.

ಸಂಹಿತಾಪಾಠಃ

ಮಾಂ ದೇವಾ ದಧಿರೇ ಹವ್ಯವಾಹನಮಪಮ್ಲುಕ್ತಂ ಬಹು ಕೃಚ್ಛ್ರಾ ಚರಂತಂ।
ಅಗ್ನಿರ್ವಿದ್ವಾನ್ಯಜ್ಞಂ ನಃ ಕಲ್ಪಯಾತಿ ಪಂಚಯಾಮಂ ತ್ರಿವೃತಂ ಸಪ್ತ-
ತಂತುಂ ॥ ೪ ॥

ಪದಪಾಠಃ

ಮಾಂ । ದೇವಾಃ । ದಧಿರೇ । ಹವ್ಯಽವಾಹಂ । ಅಪಽಮ್ಲುಕ್ತಂ । ಬಹು । ಕೃಚ್ಛ್ರಾ । ಚರಂತಂ ॥
ಅಗ್ನಿಃ । ವಿದ್ವಾನ್ । ಯಜ್ಞಂ । ನಃ । ಕಲ್ಪಯಾತಿ । ಪಂಚಽಯಾಮಂ । ತ್ರಿಽವೃತಂ । ಸಪ್ತಽತಂತುಂ ॥

ಸಾಯಣಭಾಷ್ಯಂ

ಮಾಮಗ್ನಿಂ ದೇವಾ ಹವ್ಯವಾಹಂ ಹವಿರ್ವೋಢಾರಂ ದಧಿರೇ । ಕೃತವಂತಃ । ಕೀದೃಶಂ ಮಾಂ । ಅಪಮ್ಲುಕ್ತಮಪಕ್ರಮ್ಯಾಗತಂ । ಬಹು ಕೃಚ್ಛ್ರಾ ಬಹೂನಿ ಕೃಚ್ಛ್ರಾಣಿ ಸ್ಥಾನಾನಿ ಚರಂತಂ ಗಚ್ಛಂತಂ । ಕಯಾ ಮನೀಷಯಾ ದಧಿರ ಇತಿ ಉಚ್ಯತೇ । ಅಯಮಗ್ನಿರ್ವಿದ್ವಾನ್ ಸರ್ವಂ ಜಾನನ್ನೋಽಸ್ಮಾಕಂ ಯಜ್ಞಂ ಕಲ್ಪಯಾತಿ । ಕೀದೃಶಂ ಯಜ್ಞಂ । ಪಂಚಯಾಮಂ । ಪಂಚವಿಧಗಮನಂ । ಪಾಂಕ್ತೋ ಹಿ ಯಜ್ಞಃ. । ತ್ರಿವೃತಂ । ಸವನತ್ರಯಭೇದೇನ ತ್ರಿಪ್ರಕಾರಂ ಸಪ್ತತಂತುಂ ಸಪ್ತಭಿಶ್ಛಂದೋಮಯೈಃ ಸ್ತುತಿಭಿರ್ವಿಸ್ತೃತಂ ॥

ಪ್ರತಿಪದಾರ್ಥ

**ಅಪಮ್ಲುಕ್ತಂ**—ಇಲ್ಲಿಂದ ಹೊರಟುಹೋಗಿ ಪುನಃ ಬಂದವನೂ । **ಬಹು ಕೃಚ್ಛ್ರಾ**—ಅನೇಕ ಕಷ್ಟಗಳನ್ನೂ । **ಚರಂತಂ**—ಸಹಿಸಿದವನೂ ಆದ । **ಮಾಂ**—ನನ್ನನ್ನು । **ದೇವಾಃ**—ದೇವತೆಗಳು । **ಹವ್ಯವಾಹಂ**—ಹವಿರ್ವಾಹಕನನ್ನಾಗಿ । **ದಧಿರೇ**—ಹೊಂದಿದ್ದಾರೆ । **ವಿದ್ವಾನ್**—ಸಕಲವನ್ನೂ ಅರಿತ । **ಅಗ್ನಿಃ**—ಅಗ್ನಿಯು । **ನಃ**—ನಮಗಾಗಿ । **ಪಂಚಯಾಮಂ**—ಐದು ವಿಧವಾದ ಗಮನವುಳ್ಳದ್ದೂ । **ತಿವೃತಂ**—ಮೂರು ಸವನಗಳುಳ್ಳದ್ದೂ । **ಸಪ್ತತಂತುಂ**—ಏಳು ಛಂದಸ್ಸುಗಳುಳ್ಳದ್ದೂ ಆದ । **ಯಜ್ಞಂ**—ಯಜ್ಞವನ್ನು । **ಕಲ್ಪಯಾತಿ**—ನಿರ್ಮಿಸುತ್ತಾನೆ.

ಭಾವಾರ್ಥ

ಇಲ್ಲಿಂದ ಹೊಂಟುಹೋಗಿ ಪುನಃ ಬಂದವನೂ, ಅನೇಕ ಕಷ್ಟಗಳನ್ನು ಸಹಿಸಿದವನೂ ಆದ ನನ್ನನ್ನು ದೇವತೆಗಳು ಹವಿರ್ವಾಹಕನನ್ನಾಗಿ ಹೊಂದಿದ್ದಾರೆ. ಸಕಲವನ್ನೂ ಅರಿತ ಅಗ್ನಿಯು ನಮಗಾಗಿ ಐದು ವಿಧವಾದ ಗಮನವುಳ್ಳದ್ದೂ, ಮೂರು ಸವನಗಳುಳ್ಳದ್ದೂ, ಏಳು ಛಂದಸ್ಸುಗಳುಳ್ಳದ್ದೂ ಆದ ಯಜ್ಞವನ್ನು ನಿರ್ಮಿಸುತ್ತಾನೆ.

## English Translation

The gods have made me the bearer of oblations returning after departure, and passing many difficult places : (saying) this Agni is wise ; he will accomplish the sacrifice for us, whether it be that of the five ways, the three kinds, or the seven threads.

ಸಂಹಿತಾಪಾಠಃ

**ಆ ವೋ ಯಕ್ಷ್ಯಮೃತತ್ವಂ ಸುವೀರಂ ಯಥಾ ವೋ ದೇವಾ ವರಿವಃ ಕರಾಣಿ।**
**ಆ ಬಾಹ್ವೋರ್ವಜ್ರಮಿಂದ್ರಸ್ಯ ಧೇಯಾಮಥೇಮಾ ವಿಶ್ವಾಃ ಪೃತನಾ ಜಯಾತಿ ॥ ೫ ॥**

ಪದಪಾಠಃ

**ಆ । ವಃ । ಯಕ್ಷಿ । ಅಮೃತऽತ್ವಂ । ಸುऽವೀರಂ । ಯಥಾ । ವಃ । ದೇವಾಃ । ವರಿವಃ । ಕರಾಣಿ ।**
**ಆ । ಬಾಹ್ವೋಃ । ವಜ್ರಂ । ಇಂದ್ರಸ್ಯ । ಧೇಯಾಂ । ಅಥ । ಇಮಾಃ । ವಿಶ್ವಾಃ । ಪೃತನಾಃ । ಜಯಾತಿ ॥**

ಸಾಯಣಭಾಷ್ಯಂ

**ಹೇ ದೇವಾ ವೋ ಯುಷ್ಮಾನಾ ಯಕ್ಷಿ । ಆಯಾಚೇ । ಕಿಂ । ಅಮೃತತ್ವಮವಿನಾಶಿತ್ವಂ ಸುವೀರಂ ಸುಪುತ್ರಂ ಚ । ಹೇ ದೇವಾಃ ವೋ ಯುಷ್ಮಾಕಂ ವರಿವಃ ಪರಿಚರ್ಯಾಂ ಹವೀರೂಪಂ ಧನಂ ವಾ ಯಥಾ ಕರಾಣಿ ಕರವಾಣಿ ತದರ್ಥಮಿತ್ಯರ್ಥಃ । ಕಿಂಚೇಂದ್ರಸ್ಯ ಬಾಹ್ವೋರ್ವಜ್ರಮಾ ಧೇಯಾಂ । ಗ್ರಾಹಯಾಮೀತ್ಯರ್ಥಃ । ಅಗ್ನೇರ್ಹೋತೃತ್ವಾಭಾವ ಇಂದ್ರಸ್ಯ ಸೋಮಾದ್ಯಭಾವಾದ್ದುರ್ಬಲತ್ವೇನ ವಜ್ರಧಾರಣಂ ನೋಪಪದ್ಯತೇ । ಅತಸ್ತತ್ಕೃತ್ವಾ ವಜ್ರಂ ಗ್ರಾಹಯಾಮೀತ್ಯರ್ಥಃ । ಅಥೈವಂ ಸತೀಮಾ ವಿಶ್ವಾಃ ಸರ್ವಾಃ ಪೃತನಾಃ ಶತ್ರುಸೇನಾಃ ಜಯಾತಿ । ಜಯತಿ । ಜಯತು ವಾ ॥**

ಪ್ರತಿಪದಾರ್ಥ

**ದೇವಾಃ**—ಎಲೈ ದೇವತೆಗಳೇ । **ವಃ**—ನಿಮ್ಮನ್ನುದ್ದೇಶಿಸಿ । **ವರಿವಃ**—ಹವಿಸ್ಸಿನಿಂದ ಕೂಡಿದ ಪೂಜೆಯನ್ನು । **ಯಥಾ**—ಯಾವರೀತಿ । **ಕರಾಣಿ**—ಅರ್ಪಿಸುವೆನೋ ಅದಕ್ಕಾಗಿ । **ಅಮೃತತ್ವಂ**—ಮರಣರಹಿತತ್ವವನ್ನೂ । **ಸುವೀರಂ**—ಉತ್ತಮನಾದ ಪುತ್ರನನ್ನೂ ಅನುಗ್ರಹಿಸಬೇಕೆಂದು । **ವಃ**—ನಿಮ್ಮನ್ನು । **ಆ ಯಕ್ಷಿ**—ಯಾಚಿಸುತ್ತೇನೆ । **ಇಂದ್ರಸ್ಯ**—ಇಂದ್ರನ । **ಬಾಹ್ವೋಃ**—ಬಾಹುಗಳಲ್ಲಿ । **ವಜ್ರಂ**—ವಜ್ರಾಯುಧವನ್ನು । **ಆ ಧೇಯಾಂ**—ಹಿಡಿಯುವಂತೆ ಮಾಡುತ್ತೇನೆ । **ಅಥ**—ಅನಂತರ । **ಇಮಾಃ ವಿಶ್ವಾಃ ಪೃತನಾಃ**—ಈ ಸಕಲ ಶತ್ರುಸೈನ್ಯಗಳನ್ನೂ । **ಜಯಾತಿ**—ಸೋಲಿಸುತ್ತಾನೆ.

ಭಾವಾರ್ಥ

ಎಲೈ ದೇವತೆಗಳೇ, ನಿಮ್ಮನ್ನುದ್ದೇಶಿಸಿ ಹವಿಸ್ಸಿನಿಂದ ಕೂಡಿದ ಪೂಜೆಯನ್ನು ನಿರಂತರ ಅರ್ಪಿಸುವುದಕ್ಕಾಗಿ ನನಗೆ ಮರಣರಹಿತತ್ವವನ್ನೂ, ಉತ್ತಮನಾದ ಪುತ್ರನನ್ನೂ ಅನುಗ್ರಹಿಸಬೇಕೆಂದು ನಿಮ್ಮನ್ನು ಯಾಚಿಸುತ್ತೇನೆ. ಇಂದ್ರನ ಬಾಹುಗಳಲ್ಲಿ ವಜ್ರಾಯುಧವನ್ನು ಹಿಡಿಯುವಂತೆ ಮಾಡುತ್ತೇನೆ. ಅನಂತರ ಅವನು ಸಕಲ ಶತ್ರುಸೈನ್ಯಗಳನ್ನೂ ನಾಶ ಮಾಡುತ್ತಾನೆ.

English Translation

Gods, I solicit of you immortality and excellent male offspring, that I may offer you adoration. I cause Indra to take the thunderbolt in his hands, wherewith he may overcome all these hostile hosts.

ಸಂಹಿತಾಪಾಠಃ

ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಂ ತ್ರಿಂಶಚ್ಚ ದೇವಾ ನವ ಚಾಸಪರ್ಯನ್ ।
ಔಕ್ಷನ್ಘೃತೈರಸ್ತೃಣನ್ಬರ್ಹಿರಸ್ಮಾ ಆದಿದ್ಧೋತಾರಂ ನ್ಯಸಾದಯಂತ ॥ ೬ ॥

ಪದಪಾಠಃ

ತ್ರೀಣಿ । ಶತಾ । ತ್ರೀ । ಸಹಸ್ರಾಣಿ । ಅಗ್ನಿಂ । ತ್ರಿಂಶತ್ । ಚ । ದೇವಾಃ । ನವ । ಚ । ಅಸಪರ್ಯನ್ ।
ಔಕ್ಷನ್ । ಘೃತೈಃ । ಅಸ್ತೃಣನ್ । ಬರ್ಹಿಃ । ಅಸ್ಮೈ । ಆತ್ । ಇತ್ । ಹೋತಾರಂ । ನಿ । ಅಸಾದಯಂತ ॥ ೬ ॥

ಸಾಯಣಭಾಷ್ಯಂ

ತ್ರೀಣಿ ಶತಾ ಶತಾನಿ ತ್ರೀಣಿ ಸಹಸ್ರಾಣಿ ತ್ರಿಂಶಚ್ಚ ನವ ಚ ಏತತ್ಸಂಖ್ಯಾಕಾ ದೇವಾ ಅಗ್ನಿಂ ತ್ವಾಮಾಮು ಪರ್ಯನ್ । ಪರ್ಯಚರನ್ । ಪರಿಚರ್ಯಾಪ್ರಕಾರ ಉಚ್ಯತೇ । ಘೃತೈಃ ಕ್ಷರದ್ಭಿರಾಜ್ಯೈರೌಕ್ಷನ್ । ಸಿಕ್ತವಂತಃ । ಅಸ್ಮಾ ಅಗ್ನಯೇ ಮುಖ್ಯಂ ಚ ಬರ್ಹಿರಸ್ತೃಣನ್ । ಆಸ್ತೃತವಂತಃ । ಆದಿದಾಸ್ತರಣಾನಂತರಂ ಹೋತಾರಮಾಹ್ವಾತಾರಂ ನ್ಯಸಾದಯಂತ । ನಿಯಮೇನಾಸಾದಿತವಂತಃ ॥

ಪ್ರತಿಪದಾರ್ಥ

**ತ್ರೀಣಿ ಶತಾ**—ಮುನ್ನೂರು ಸಂಖ್ಯೆಯುಳ್ಳವರೂ । **ತ್ರೀ ಸಹಸ್ರಾಣಿ**—ಮೂರು ಸಹಸ್ರಸಂಖ್ಯೆಯುಳ್ಳವರೂ । **ತ್ರಿಂಶಚ್ಚ ನವ ಚ**—ಮೂವತ್ತೊಂಭತ್ತು ಸಂಖ್ಯೆಯುಳ್ಳವರೂ ಆದ । **ದೇವಾಃ**—ದೇವತೆಗಳು । **ಅಗ್ನಿಂ**—ಅಗ್ನಿಯೆಂದವನನ್ನು । **ಅಸಪರ್ಯನ್**—ಪೂಜಿಸಿದರು । **ಅಸ್ಮೈ**—ನನಗೆ ಕುಳಿತುಕೊಳ್ಳುವುದಕ್ಕಾಗಿ । **ಬರ್ಹಿಃ**—

ದರ್ಭಾಸನವನ್ನು | **ಅಸ್ತೃಣನ್**— ಹರಡಿದರು | **ಘೃತೈಃ**—ಸ್ರವಿಸುವ ಆಜ್ಯಗಳಿಂದ | **ಔಕ್ಷನ್**—ಚುಮುಕಿಸಿದರು | **ಆದಿತ್**—ಆ ಒಡನೆಯೇ | **ಹೋತಾರಂ**— ಹೋತೃಕಾರ್ಯಕ್ಕಾಗಿ | **ನ್ಯಸಾದಯಂತ**— ಕುಳ್ಳಿರಿಸಿದರು.

ಭಾವಾರ್ಥ

ಮೂರುಸಾವಿರದ ಮುನ್ನೂರ ಮೂವತ್ತೊಂಭತ್ತು ಸಂಖ್ಯೆಯುಳ್ಳ ದೇವತೆಗಳು ನನ್ನನ್ನು ಪೂಜಿಸಿದರು. ನನಗೆ ಕುಳಿತುಕೊಳ್ಳಲು ದರ್ಭಾಸನವನ್ನು ಹರಡಿದರು. ಸ್ರವಿಸುವ ಆಜ್ಯಗಳಿಂದ ಚುಮುಕಿಸಿದರು. ಆ ಒಡನೆಯೇ ಹೋತೃ ಕಾರ್ಯಕ್ಕಾಗಿ ಕುಳ್ಳಿರಿಸಿದರು.

## English Translalion

Three thousand three hundred and thirty-and-nine deities worshipped Agni, they sprinkled (me) with butter, they strewed thc sacred grass, and then made the invoker of the gods sit down.

ವಿಶೇಷವಿಷಯಗಳು

ಪ್ರಕೃತ ಋಕ್ಕಿನಲ್ಲಿ **ತ್ರೀಣಿ ಶತಾ ತ್ರೀ ಸಹಸ್ರಾಣಿ ತ್ರಿಂಶಚ್ಚ ದೇವಾಃ** | ಮೂರುಸಾವಿರದ ಮುನ್ನೂರ ಮೂವತ್ತಮೂರುಮಂದಿ ದೇವತೆಗಳು ಎಂದು ದೇವತೆಗಳ ಸಂಖ್ಯೆಯನ್ನು ನಿರ್ದೇಶಿಸಿದೆ. ಈ ದೇವತೆಗಳು ಯಾರು ? ಇವರ ಸಂಖ್ಯಾಪರಿಮಿತಿಯೆಷ್ಟು ಎಂಬ ವಿಷಯವನ್ನು ಇಲ್ಲಿ ಸೂಕ್ಷ್ಮವಾಗಿ ಪರಿಶೀಲಿಸಬಹುದು.

ಈ ಋಕ್ಕಿನಲ್ಲಿ ದೇವತೆಗಳ ಸಂಖ್ಯಾಪರಿಮಿತಿಯನ್ನು ತಿಳಿಸಿದೆ. **ಯೇ ದೇವಾಸೋ ದಿವ್ಯೇಕಾದಶಸ್ಥ** ಎಂಬ ಋಕ್ಕಿನಲ್ಲಿ ಪೃಥಿವ್ಯಂತರಿಕ್ಷಸ್ವರ್ಗಗಳಲ್ಲಿ ಮೂವತ್ತುಮೂರು ದೇವತೆಗಳಿರುವರೆಂದು ತಿಳಿಸಿದೆ. **ದಿವಿ ಏಕಾದಶ, ಪೃಥಿವ್ಯಾಂ ಏಕಾದಶ, ಅಪ್ಸುಕ್ಷಿತಃ ಏಕಾದಶ** ಎಂದು ಒಟ್ಟು ದೇವತೆಗಳ ಸಂಖ್ಯೆಯು ಮೂವತ್ತಮೂರೆಂದು ಹೇಳಿದೆ. ಸಾಯಣರು—**ಯದ್ಯಪಿ ತಿಸ್ರ ಏವ ದೇವತಾಃ** (ನಿ. ೭-೫) ಎಂಬ ನಿರುಕ್ತವಚನವನ್ನುದಾಹರಿಸಿ **ಕ್ಷಿತ್ಯಾದ್ಯಭಿಮಾನಿನ್ಯೋ ದೇವತಾಸ್ತ್ರಿಸ್ರ ಏವ ತಥಾಪಿ ಸ್ವಸ್ವವಿಭೂತ್ಯಾ ತ್ರಯಸ್ತ್ರಿಂಶತ್ಸಂಖ್ಯಾತಾ ಭವಂತಿ | ತತ್ತತ್ಸ್ಥಾನಾ ಅನ್ಯಾಸ್ತದ್ವಿಭೂತಯ ಇತ್ಯುಕ್ತತ್ವಾತ್** | ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕಾಭಿಮಾನಿಗಳ ಸಂಖ್ಯೆಯು ಮೂರೇ ಆದರೂ ಸಹ ಅವರು ಅವರವರ ಮಹಿಮೆಯಿಂದ ೩೩ ಸಂಖ್ಯೆಯುಳ್ಳವರಾಗಿ ಕಾಣುತ್ತಾರೆ. ಅಯಾ ಲೋಕಗಳಲ್ಲಿರುವ ಉಳಿದ ದೇವತೆಗಳೆಲ್ಲಾ ಇವರ ವಿಭೂತಿಗಳು ಎಂದು ವಿವರಿಸಿದ್ದಾರೆ. ನಿರುಕ್ತಕಾರರೂ ಸಹ—

> **ತಿಸ್ರ ಏವ ದೇವತಾ ಇತಿ ನೈರುಕ್ತಾಃ | ಅಗ್ನಿಃ ಪೃಥಿವೀಸ್ಥಾನಃ | ವಾಯುರ್ವಾ ಇಂದ್ರೋ ವಾ ಅಂತರಿಕ್ಷಸ್ಥಾನಃ | ಸೂರ್ಯೋ ದ್ಯುಸ್ಥಾನಃ | ತಾಸಾಂ ಮಹಾಭಾಗ್ಯಾತ್ ಏಕೈಕಸ್ಯಾ ಅಪಿ ಬಹೂನಿ ನಾಮಧೇಯಾನಿ ಭವಂತಿ | ಅಪಿ ವಾ ಕರ್ಮಪೃಥಕ್ತ್ವಾತ್ ||**
>
> (ನಿ. ೭-೫)

ನೈರುಕ್ತಕಾರರ ಮತದಂತೆ ಅಗ್ನಿ, ವಾಯು ಅಥವಾ ಇಂದ್ರ ಮತ್ತು ಸೂರ್ಯ ಎಂಬ ಮೂರು ದೇವತೆಗಳೂ ಸಹ ಪೃಥಿವೀ, ಅಂತರಿಕ್ಷ, ಸ್ವರ್ಗ ಎಂಬ ಮೂರು ಲೋಕಗಳ ಅಧಿದೇವತೆಗಳು, ಈ ದೇವತೆಗಳಿಗೆ ಅವರವರ ಮಹತ್ತ್ವಕ್ಕನುಗುಣವಾಗಿ ಅಥವಾ ಕ್ರಿಯಾವೈವಿಧ್ಯಗಳ ದೆಸೆಯಿಂದ ಅನೇಕವಿಧವಾದ ನಾಮಧೇಯಗಳಿರುತ್ತವೆ. ಆ ನಾಮಧೇಯ

ಗಳೇ ನಾನಾ ದೇವತೆಗಳು ಎಂದು ಹೇಳಿ **ಅಥಾತೋಽನುಕ್ರಮಿಷ್ಯಾಮಃ ಅಗ್ನಿಃ ಪೃಥಿವೀಸ್ಥಾನಃ ತಂ ಪ್ರಥಮಂ ವ್ಯಾಖ್ಯಾಸ್ಯಾಮಃ** ಎಂದು ನಿ. ೭–೧೪ ರಿಂದ ೯-೪೩ ರ ವರೆಗಿನ ಖಂಡಗಳಲ್ಲಿ ಪೃಥಿವೀಸ್ಥರಾದ ದೇವತೆಗಳ ಸ್ವರೂಪವನ್ನೂ, **ಅಥಾತೋ ಮಧ್ಯಸ್ಥಾನಾ ದೇವತಾಃ। ತಾಸಾಂ ವಾಯುಃ ಪ್ರಥಮಾಗಾಮೀ ಭವತಿ** ಎಂದು ನಿ. ೧೦–೧ ರಿಂದ ೧೧-೫೦ ವರೆಗಿನ ಖಂಡಗಳಲ್ಲಿ ಮಧ್ಯಸ್ಥಾನವಾದ ಅಂತರಿಕ್ಷದ ದೇವತೆಗಳ ಸ್ವರೂಪವನ್ನೂ, **ಅಥಾತೋ ದುಸ್ಥಾನಾ ದೇವತಾಃ** ಎಂದು ನಿ. ೧೨–೧ ರಿಂದ ಅಧ್ಯಾಯದ ಕೊನೆಯವರೆಗೆ ದ್ಯುಲೋಕಸ್ಥರಾದ ದೇವತೆಗಳ ಸ್ವರೂಪವನ್ನೂ ಹೇಳಿದೆ. ಹೀಗೆ ವಿಭಾಗಿಸಿರುವ ಈ ದೇವತೆಗಳ ಸಂಖ್ಯೆಯೆಷ್ಟು ಎಂಬ ವಿಷಯದಲ್ಲಿ ಮತಭೇದಗಳಿದ್ದರೂ ಋಸ್ಸಂಹಿತೆಯ ಅನೇಕಕಡೆಗಳಲ್ಲಿ ಒಂದೇವಿಧವಾದ ಅಭಿಪ್ರಾಯವು ಕಂಡುಬರುತ್ತದೆ.

**ಆ ನಾಸತ್ಯಾ ತ್ರಿಭಿರೇಕಾದಶೈರಿಹ ದೇವೇಭಿರ್ಯಾತಂ ಮಧುಪೇಯಮಶ್ವಿನಾ ।**
**ಪ್ರಾಯುಸ್ತಾರಿಷ್ಟಂ ನೀ ರಪಾಂಸಿ ಮೃಕ್ಷತಂ ಸೇಧತಂ ದ್ವೇಷೋ ಭವತಂ ಸಚಾಭುವಾ ॥**

(ಋ. ಸಂ. ೧-೩೪-೧೧)

ಎಂಬ ಋಕ್ಕಿನಲ್ಲಿ ಮೂವತ್ತಮೂರು ದೇವತೆಗಳೊಂದಿಗೆ ಈ ಯಜ್ಞಭೂಮಿಗೆ ಬಂದು ಸೋಮಪಾನಮಾಡಿರಿ ಎಂದು ಅಶ್ವಿನೀದೇವತೆಗಳನ್ನು ಸ್ತುತಿಸಿದೆ.

**ಶ್ರುಷ್ಟೀವಾನೋ ಹಿ ದಾಶುಷೇ ದೇವಾ ಅಗ್ನೇ ವಿಚೇತಸಃ ।**
**ತಾನ್ರೋಹಿದಶ್ವ ಗಿರ್ವಣಸ್ತ್ರಯಸ್ತ್ರಿಂಶತಮಾ ವಹ ॥**

(ಋ. ಸಂ. ೧-೪೫-೨)

ಎಂಬ ಋಕ್ಕಿನಲ್ಲಿ ಮೂವತ್ತಮೂರು ದೇವತೆಗಳನ್ನು ಕರೆದುಕೊಂಡು ಬಾ ಎಂದು ಅಗ್ನಿಯನ್ನು ಪ್ರಾರ್ಥಿಸಿದೆ.

**ಐಭಿರಗ್ನೇ ಸರಥಂ ಯಾಹ್ಯರ್ವಾಙ್ ನಾನಾರಥಂ ವಾ ವಿಭವೋ ಹ್ಯಶ್ವಾಃ ।**
**ಪತ್ನೀವತಸ್ತ್ರಿಂಶತಂ ತ್ರೀಂಶ್ಚ ದೇವಾನನುಷ್ವಧಮಾ ವಹ ಮಾದಯಸ್ವ ॥**

(ಋ. ಸಂ. ೩-೬-೯)

**ಇತಿ ಸ್ತುತಾಸೋ ಅಸಥಾ ರಿಶಾದಸೋ ಯೇ ಸ್ಥ ತ್ರಯಶ್ಚ ತ್ರಿಂಶಚ್ಚ ।**
**ಮನೋರ್ದೇವಾ ಯಜ್ಞಿಯಾಸಃ ॥**

(ಋ. ಸಂ. ೮-೩೦-೨)

**ವಿಶ್ವೈರ್ದೇವೈಸ್ತ್ರಿಭಿರೇಕಾದಶೈರಿಹಾದ್ಭಿರ್ಮರುದ್ಭಿರ್ಭೃಗುಭಿಃ ಸಚಾಭುವಾ ।**

(ಋ. ಸಂ. ೮-೩೫-೩)

**ತವ ತ್ಯೇ ಸೋಮ ಪವಮಾನ ನಿಣ್ಯೇ ವಿಶ್ವೇ ದೇವಾಸ್ತ್ರಯ ಏಕಾದಶಾಸಃ ।**
**ದಶ ಸ್ವಧಾಭಿರಧಿ ಸಾನೋ ಅವ್ಯೇ ಮೃಜಂತಿ ತ್ವಾ ನದ್ಯಃ ಸಪ್ತ ಯಹ್ವೀಃ ॥**

(ಋ. ಸಂ. ೯-೯೨-೪)

ಇತ್ಯಾದಿ ಋಕ್ಕುಗಳಲ್ಲಿಯೂ ಸಹ ದೇವತೆಗಳ ಸಂಖ್ಯೆಯು ಮೂವತ್ತಮೂರೆಂಬುದು ಸ್ಪಷ್ಟವಾಗಿದೆ. ಶತಪಥಬ್ರಾಹ್ಮಣದಲ್ಲಿಯೂ ಸಹ

**ಅಷ್ಟೌ ವಸವಃ । ಏಕಾದಶ ರುದ್ರಾಃ । ದ್ವಾದಶಾದಿತ್ಯಾ ಇಮೇ ಏವ ದ್ಯಾವಾಪೃಥಿವೀ ತ್ರಯ-ಸ್ತ್ರಿಂಶದ್ವೈ ದೇವಾಃ ಪ್ರಜಾಪತಿಶ್ಚತುಸ್ತ್ರಿಂಶಃ ॥**

(ಶ. ಬ್ರಾ. ೪-೫-೭-೨)

ಎಂಟುಮಂದಿ ವಸುಗಳೂ, ಹನ್ನೊಂದುಮಂದಿ ರುದ್ರರೂ, ಹನ್ನೆರಡುಮಂದಿ ಆದಿತ್ಯರೂ ಮತ್ತು ದ್ಯಾವಾಪೃಥಿವಿಗಳೂ ಸೇರಿ ಮೂವತ್ತಮೂರು ದೇವತೆಗಳು- ಇವರಲ್ಲದೆ ಪ್ರಜಾಪತಿಯು ಮೂವತ್ತನಾಲ್ಕನೆಯವನು ಎಂದು ಒಂದುಕಡೆ ಹೇಳಿದೆ. ಆದರೆ ಇನ್ನೊಂದು ಸ್ಥಳದಲ್ಲಿ ಅದೇ ಮೂವತ್ತಮೂರು ಸಂಖ್ಯೆಯಿದ್ದರೂ ಸಹ ದ್ಯಾವಾಪೃಥಿವಿಗಳಿಗೆ ಬದಲಾಗಿ ಇಂದ್ರನನ್ನೂ, ಪ್ರಜಾಪತಿಯನ್ನೂ ಸೇರಿಸಿದೆ.

**ತೇ ತ್ರಯಸ್ತ್ರಿಂಶದಿತ್ಯಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಸ್ತ ಏಕತ್ರಿಂಶದಿಂದ್ರಶ್ಚೈವ ಪ್ರಜಾಪತಿಶ್ಚ ತ್ರಯಸ್ತ್ರಿಂಶಾವಿತಿ ॥**

(ಶ. ಬ್ರಾ. ೧೧-೬-೩-೫)

ಐತರೇಯಬ್ರಾಹ್ಮಣದಲ್ಲಿಯೂ ಸಹ

**ತ್ರಯಸ್ತ್ರಿಂಶದ್ವೈ ದೇವಾಃ ಸೋಮಪಾಸ್ತ್ರಯಸ್ತ್ರಿಂಶದಸೋಮಪಾ ಅಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಃ ಪ್ರಜಾಪತಿಶ್ಚ ವಷಟ್ಕಾರಶ್ಚೈತೇ ದೇವಾಃ ಸೋಮಪಾಃ ॥**

(ಐ. ಬ್ರಾ. ೨-೧೮)

ಸೋಮಪಾನವನ್ನು ಮಾಡತಕ್ಕವರು ಮೂವತ್ತಮೂರುಮಂದಿ ದೇವತೆಗಳು, ಅವರು ಅಷ್ಟವಸುಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ಪ್ರಜಾಪತಿ ಮತ್ತು ವಷಟ್ಕಾರ. ಹೀಗೆ ಸಂಹಿತೆಯಲ್ಲಿಯೂ, ಬ್ರಾಹ್ಮಣಗಳಲ್ಲಿಯೂ ಈ ಸಂಖ್ಯೆಯ ವಿಷಯದಲ್ಲಿ ಒಂದೇ ಅಭಿಪ್ರಾಯವಿದೆ. ಆದರೆ,

**ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಂ ತ್ರಿಂಶಚ್ಚ ದೇವಾ ನವ ಚಾಸಪರ್ಯನ್ ।**
**ಔಕ್ಷನ್ ಘೃತೈರಸ್ತೃಣನ್ಬರ್ಹಿರಸ್ಮಾ ಆದಿದ್ಧೋತಾರಂ ನ್ಯಸಾದಯಂತ ॥**

(ಋ. ಸಂ. ೩-೯-೯)

ಎಂಬ ಋಕ್ಕಿನಲ್ಲಿ ಪಠಿತವಾಗಿರುವುದನ್ನೇ ಪ್ರಕೃತ ಋಕ್ಕಿನಲ್ಲಿಯೂ ಪುನಃ ಪಠಿತವಾಗಿದೆ. ಇಲ್ಲಿ ಮೂರುಸಾವಿರದ ಮುನ್ನೂರಮೂವತ್ತೊಂಭತ್ತುಮಂದಿ ದೇವತೆಗಳು ಅಗ್ನಿಯನ್ನು ಪೂಜಿಸಿದರೆಂದು ಹೇಳಿದೆ. ವಾಜಸನೇಯಸಂಹಿತೆಯಲ್ಲಿಯೂ ಇದೇ ರೀತಿ (೩೩-೭) ಇದೆ.

**ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋ ನಮ ಆಶಿನೇಭ್ಯಃ ॥**
**ಯಜಾಮ ದೇವಾನ್ಯದಿ ಶಕ್ನವಾಮ ಮಾ ಜ್ಯಾಯಸಃ ಶಂಸಮಾ ವೃಕ್ಷಿ ದೇವಾಃ ॥**

(ಋ. ಸಂ. ೧-೨೭-೧೩)

ದೊಡ್ಡವರೂ, ಸಣ್ಣವರೂ, ತರುಣರೂ, ವೃದ್ಧರೂ ಆದ ಸಕಲವಿಧವಾದ ದೇವತೆಗಳಿಗೂ ನಮಸ್ಕಾರವೆಂದು ಹೇಳುವಾಗ ದೇವತೆಗಳಲ್ಲಿ ಸ್ವರೂಪವೈವಿಧ್ಯವಿದೆಯೆಂದು ತಿಳಿಯುತ್ತದೆ- ಈ ಋಕ್ಕನ್ನೇ ಐತರೇಯಬ್ರಾಹ್ಮಣದಲ್ಲಿಯೂ (ಐ. ಬ್ರಾ. ೭-೧೬) ಶುನಶ್ಶೇಪೋಖ್ಯಾನದಲ್ಲಿ ವಿಶ್ವೇದೇವಪ್ರಾರ್ಥನಾಸಂದರ್ಭದಲ್ಲಿ ಪಠಿಸಿದೆ. ಆದರೆ

**ನ ಹಿ ವೋ ಅಸ್ತ್ಯರ್ಭಕೋ ದೇವಾಸೋ ನ ಕುಮಾರಕಃ ।**
**ವಿಶ್ವೇ ಸತೋಮಹಾಂತ ಇತ್ ॥**

(ಋ. ಸಂ. ೮-೩೦-೧)

ಎಂಬಲ್ಲಿ ದೇವತೆಗಳ ಮಧ್ಯದಲ್ಲಿ ದೊಡ್ಡವರು ಚಿಕ್ಕವರು ಎಂಬ ಭೇದವೇ ಇಲ್ಲ. ಸಕಲ ದೇವತೆಗಳೂ ಮಹಾತ್ಮರೇ ಆಗಿದ್ದಾರೆ ಎಂಬ ಪ್ರಶಂಸೆ ಇದೆ.

# ಐವತ್ತಮೂರನೆಯ ಸೂಕ್ತ

ಸಾಯಣಭಾಷ್ಯಂ

**ಯಮೈಚ್ಛಾಮೇತ್ಯೇಕಾದಶರ್ಚಮೇಕಾದಶಂ ಸೂಕ್ತಂ । ದೇವಾನಾಂ ವಾಕ್ಯತ್ವಾದ್ದೇವಾ ಋಷಯಃ । ತದದ್ಯೇತಿ ತೃಚಸ್ಯ ಸೌಚೀಕೋಽಗ್ನಿರ್ಋಷಿಃ । ತಂತುಂ ತನ್ವನ್ನಿತ್ಯಾದ್ಯಾ ಅಷ್ಟಮೀವರ್ಜಿತಾ ಜಗತ್ಯಃ । ಅಷ್ಟಮೀ ಶಿಷ್ಟಾಶ್ಚ ತ್ರಿಷ್ಟುಭಃ । ತಥಾ ಚಾನುಕ್ರಾಂತಂ । ತಂತುಮಾದ್ಯಾ ಜಗತ್ಯೋಽಷ್ಟಮೀವರ್ಜಮಿತಿ । ಶಿಷ್ಟಮುಕ್ತಂ ॥ ಗತಃ ಸೂಕ್ತವಿನಿಯೋಗಃ ॥**

ಅನುವಾದವು— **ಯಮೈಚ್ಛಾಮ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತದಲ್ಲಿ ದೇವತೆಗಳ ವಾಕ್ಯವಿರುವುದರಿಂದ ಈ ಸೂಕ್ತಕ್ಕೆ ದೇವತೆಗಳೇ ಋಷಿಯು; **ತದದ್ಯ** ಎಂದು ಮೊದಲಾಗುವ ಎರಡು ಋಕ್ಕುಗಳಿಗೆ ಮಾತ್ರ (೪-೫ ಋಕ್ಕುಗಳಿಗೆ) ಸೌಚಿಕೋಗ್ನಿಯು ಋಷಿಯು. ಉಳಿದ ಋಕ್ಕುಗಳಿಗೆ ದೇವತೆಗಳು ಋಷಿಯು; ಅಗ್ನಿಯು ದೇವತೆಯು. **ತಂತುಂ ತನ್ವನ್** ಎಂಬ ಋಕ್ಕಿನವರೆಗಿರುವ ಮೊದಲಿದ ೫ ಋಕ್ಕುಗಳನ್ನೂ, ೮ ನೇ ಋಕ್ಕನ್ನು ಬಿಟ್ಟು ಉಳಿದ ಋಕ್ಕುಗಳು ಜಗತೀಛಂದಸ್ಕವು, ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ— **ತಂತುಮಾದ್ಯಾ ಜಗತ್ಯೋಽಷ್ಟಮೀವರ್ಜಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೩

ಮಂಡಲ—೧೦ ॥ ಅನುವಾಕ—೪ ॥ ಸೂಕ್ತ—೫೩ ॥
ಅಷ್ಟಕ—೮ ॥ ಅಧ್ಯಾಯ—೧ ॥ ವರ್ಗ—೧೩, ೧೪ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
ಋಷಿಃ—೧-೩, ೬—೧೧, ದೇವಾಃ । ೪-೫. ಅಗ್ನಿಃ ಸೌಚೀಕಃ ॥
ದೇವತಾ—೧-೩, ೬-೧೧. ಅಗ್ನಿಃ ಸೌಚೀಕಃ । ೪-೫. ದೇವಾಃ ॥
ಛಂದಃ—೧-೫, ೮. ತ್ರಿಷ್ಟುಪ್ । ೬, ೭, ೯—೧೧. ಜಗತೀ ॥

ಸಂಹಿತಾಪಾಠಃ

ಯಮೈಚ್ಛಾಮ ಮನಸಾ ಸೋ೩ಽಯಮಾಗಾದ್ಯಜ್ಞಸ್ಯ ವಿದ್ವಾನ್ಪರುಷಶ್ಚಿಕಿತ್ವಾನ್ ।

ಸ ನೋ ಯಕ್ಷದ್ದೇವತಾತಾ ಯಜೀಯಾನ್ನಿ ಹಿ ಷತ್ಸದಂತರಃ ಪೂರ್ವೋ ಅಸ್ಮತ್ ॥ ೧ ॥

ಪದಪಾಠಃ

ಯಂ । ಐಚ್ಛಾಮ । ಮನಸಾ । ಸಃ । ಅಯಂ । ಆ । ಅಗಾತ್ । ಯಜ್ಞಸ್ಯ । ವಿದ್ವಾನ್ । ಪರುಷಃ । ಚಿಕಿತ್ವಾನ್ ।

ಸಃ । ನಃ । ಯಕ್ಷತ್ । ದೇವಽತಾತಾ । ಯಜೀಯಾನ್ । ನಿ । ಹಿ । ಸತ್ಸತ್ । ಅಂತರಃ । ಪೂರ್ವಃ । ಅಸ್ಮತ್ ॥ ೧ ॥

ಸಾಯಣಭಾಷ್ಯಂ

ಯಮಗ್ನಿಮೈಚ್ಛಾಮ ಅನಿಷ್ಯಾಮಂತೋ ವಯಂ ಮನಸಾ ಹವಿಷ್ಪ್ರಾಪಣಬುದ್ಧ್ಯಾ । ಮಹ್ಯಂ ಹವಿಃ ಪ್ರಾಪಯಿಷ್ಯತೀತಿ ಬುದ್ಧ್ಯೇತ್ಯರ್ಥಃ । ಸೋಽಯಮಗ್ನಿರಾಗಾತ್ । ಆಜಗಾಮ । ಕೀದೃಶೋಽಗ್ನಿಃ । ಯಜ್ಞಸ್ಯ ಯಜ್ಞಂ ವಿದ್ವಾನ್ ತಥಾ ಪರುಷಃ ಪರೂಂಷಿ ಸಂಧಾತವ್ಯಾನ್ಯಂಗಾನಿ ಚಿಕಿತ್ವಾನಭಿಗಚ್ಛನ್ । ಸೋಽಗ್ನಿರ್ಯಜೀಯಾನ್ಯಷ್ಟೃತಮೋ ನೋಽಸ್ಮಾನ್ದೇವತಾತಾ ದೇವತಾತೌ ಯಜ್ಞೇ ಯಕ್ಷತ್ । ಯಜತು । ನಿ ಹಿ ಷತ್ಸತ್ । ನ್ಯಸೀದತ್ಖಲು ವೇದ್ಯಾಮಿತಿ ಶೇಷಃ । ಕೀದೃಶಃ ಸನ್ । ಅಂತರ ಋತ್ವಿಜಾಂ ಯಷ್ಟವ್ಯಾನಾಂ ದೇವಾನಾಂ ಚ ಮಧ್ಯೇ ಸಂಚರನ್ ಅಸ್ಮತ್ಪೂರ್ವೋಽಸ್ಮತ್ತೋ ದೇವೇಭ್ಯಃ ಪೂರ್ವಭಾವೀ ಸನ್ । ಅಗ್ನಿಂ ಸಮಿಧ್ಯ ಪಶ್ಚಾದ್ಧಿ ದೇವಾ ಆಹ್ವಯಂತೇ ॥

ಪ್ರತಿಪದಾರ್ಥ

**ಮನಸಾ**— ಧ್ಯಾನಾತ್ಮಕವಾದ ಮನಸ್ಸಿನಿಂದ । **ಯಂ**— ಯಾವ ಅಗ್ನಿಯನ್ನು । **ಐಚ್ಛಾಮ**— ನಾವು ಹುಡುಕುತ್ತಿದ್ದೆವೋ । **ಸಃ**— ಅಂತಹ । **ಯಜ್ಞಸ್ಯ ವಿದ್ವಾನ್**— ಯಜ್ಞದ ಸ್ವರೂಪವನ್ನರಿತವನೂ । **ಪರುಷಃ**— ಬೇರೆಬೇರೆಯಾದ ಯಜ್ಞಾವಯವಗಳನ್ನು ಒಂದುಗೂಡಿಸಲು। **ಚಿಕಿತ್ವಾನ್**— ತಿಳಿದವನೂ ಆದ। **ಅಯಂ**— ಅಗ್ನಿಯು। **ಆಗಾತ್**— ಬಂದಿದ್ದಾನೆ । **ಯಜೀಯಾನ್**— ಪೂಜ್ಯನಾದವನೂ । **ನಿಷತ್ಸದ್ಧಿ**— ಯಜ್ಞವೇದಿಯಲ್ಲಿ ಕುಳಿತವನೂ । **ಅಸ್ಮತ್ ಪೂರ್ವಃ**— ನಮಗಿಂತಲೂ ಪೂರ್ವಭಾವಿಯಾಗಿಯೇ । **ಅಂತರಃ**— ಋತ್ವಿಕ್ಕುಗಳ ನಡುವೆ ಸೇರಿರುವವನೂ ಆದ । **ಸಃ**— ಅದೇ ಅಗ್ನಿಯು । **ನಃ**— ನಮ್ಮನ್ನು । **ದೇವತಾತಾ**— ಯಜ್ಞದಲ್ಲಿ । **ಯಕ್ಷತ್**— ಪೂಜಿಸಲಿ.

ಭಾವಾರ್ಥ

ಧ್ಯಾನಾತ್ಮಕವಾದ ಮನಸ್ಸಿನಿಂದ ಯಾವ ಅಗ್ನಿಯನ್ನು ನಾವು ಹುಡುಕುತ್ತಿದ್ದೆವೋ ಅಂತಹ ಯಜ್ಞದ ಸ್ವರೂಪವನ್ನರಿತವನೂ, ಬೇರೆಬೇರೆಯಾದ ಯಜ್ಞಾಂಗಗಳನ್ನು ಒಂದುಗೂಡಿಸಲು ತಿಳಿದವನೂ ಆದ ಅಗ್ನಿಯು ಬಂದಿದ್ದಾನೆ. ಪೂಜ್ಯನೂ, ಯಜ್ಞವೇದಿಯಲ್ಲಿ ಕುಳಿತವನೂ, ನಮಗಿಂತಲೂ ಪೂರ್ವಭಾವಿಯಾಗಿಯೇ ಋತ್ವಿಕ್ಕುಗಳ ನಡುವೆ ಸೇರಿರುವವನೂ ಆದ ಅಗ್ನಿಯು ಯಜ್ಞದಲ್ಲಿ ನಮ್ಮನ್ನು ಪೂಜಿಸಲಿ.

## English Translation

(The gods :) He whom we sought with (anxious) minds has arrived; he who understands the sacrifice and is acquainted with its different parts ; may he who is most skilled in worship, sacrifice for us at the worship of the gods, being seated (at the altar), taking place among (the priests), and preceding us.

ಸಂಹಿತಾಪಾಠಃ

ಅರಾಧಿ ಹೋತಾ ನಿಷದಾ ಯಜೀಯಾನಭಿ ಪ್ರಯಾಂಸಿ ಸುಧಿತಾನಿ ಹಿ
ಖ್ಯತ್ ।
ಯಜಾಮಹೈ ಯಜ್ಞಿಯಾನ್ಹಂತ ದೇವಾँ ಈಳಾಮಹಾ ಈಡ್ಯಾँ ಆಜ್ಯೇನ ॥

ಪದಪಾಠಃ

ಅರಾಧಿ । ಹೋತಾ । ನಿಽಸದಾ । ಯಜೀಯಾನ್ । ಅಭಿ । ಪ್ರಯಾಂಸಿ । ಸುಽಧಿತಾನಿ । ಹಿ । ಖ್ಯತ್ ।
ಯಜಾಮಹೈ । ಯಜ್ಞಿಯಾನ್ । ಹಂತ । ದೇವಾನ್ । ಈಳಾಮಹೈ । ಈಡ್ಯಾನ್ । ಆಜ್ಯೇನ ॥ ೨ ॥

ಸಾಯಣಭಾಷ್ಯಂ

ದರ್ಶಪೂರ್ಣಮಾಸಯೋಃ ಪುರಾರಾಧೀತ್ಯೇಷಾ ಜಪ್ಯಾ । ಸೂತ್ರಮುದಾಹೃತಂ ॥

ಅಯಮಗ್ನಿರ್ಹೋತಾ ಹೋಮನಿಷ್ಪಾದಕೋ ಯಜೀಯಾನ್ ಯಷ್ಟೃತಮಶ್ಚ ಸನ್ನಿಷದಾ ವೇದ್ಯಾಂ ನಿಷದನೇನಾರಾಧಿ । ಸಿದ್ಧೋಽಭೂತ್ । ಆಹುತಿಯೋಗ್ಯೋಽಭೂದಿತ್ಯರ್ಥಃ । ತಥಾ-ಭೂತೋಽಯಂ ಸುಧಿತಾನಿ ಸುಷ್ಠು ನಿಹಿತಾನಿ ಪ್ರಯಾಂಸಿ ಚರುಪುರೋಡಾಶಾದ್ಯನ್ನಾನ್ಯಭಿ ಹಿ ಖ್ಯತ್ । ಅಭಿಚಷ್ಟೇ । ಸರ್ವತಃ ಪಶ್ಯತಿ । ಹೀತಿ ಪಾದಪೂರಣಃ । ಕಯಾ ಬುದ್ಧ್ಯೇತಿ । ಯಜ್ಞಿಯಾನ್ಯಷ್ಟವ್ಯಾ-ನಾಹುತಿಭಾಜೋ ದೇವಾನ್ ಹಂತ ಶೀಘ್ರಮಾಜ್ಯೇನ ಯಜಾಮಹೈ ತಥೇಡ್ಯಾನ್ ಸ್ತುತಿಭಾಜೋ ದೇವಾನ್ ಸ್ತುತ್ಯೇಳಾಮಹಾ ಇತಿ ಬುದ್ಧ್ಯೇತಿ ಶೇಷಃ ॥

ಪ್ರತಿಪದಾರ್ಥ

**ಹೋತಾ**—ಹೋಮಸಂಪಾದಕನೂ । **ಯಜೀಯಾನ್**—ಪೂಜ್ಯನೂ ಆದ ಅಗ್ನಿಯು । **ನಿಷದಾ**—ಯಜ್ಞವೇದಿಯಲ್ಲಿ ಕುಳಿತಿರುವುದರಿಂದ । **ಅರಾಧಿ**—ಪೂಜೆಗೆ ಯೋಗ್ಯನಾಗಿದ್ದಾನೆ । **ಸುಧಿತಾನಿ**—ಉತ್ತಮವಾಗಿ

ಅರ್ಪಿಸಿದ | **ಪ್ರಯಾಂಸಿ**—ಚರುಪುರೋಡಾಶಗಳನ್ನು | **ಅಭಿ ಹಿ ಖ್ಯತ್**—ಸುತ್ತಲೂ ನೋಡುತ್ತಾನೆ | **ಯಜ್ಞಿಯಾನ್**—ಯಜ್ಞಾರ್ಹರಾದ | **ದೇವಾನ್**—ದೇವತೆಗಳನ್ನು | **ಹಂತ**—ಶೀಘ್ರವಾಗಿ | **ಆಜ್ಯೇನ**-ಆಜ್ಯದ ಅರ್ಪಣೆಯಿಂದ | **ಯಜಾಮಹೈ**—ಪೂಜಿಸೋಣ | **ಈಡ್ಯಾನ್**—ಸ್ತುತಿಗೆ ಯೋಗ್ಯರಾದ ದೇವತೆಗಳನ್ನು | **ಈಳಾಮಹೈ**—ಸ್ತುತಿಸೋಣ.

ಭಾವಾರ್ಥ

ಹೋಮಸಂಪಾದಕನೂ, ಪೂಜ್ಯನೂ ಆದ ಅಗ್ನಿಯು ಯಜ್ಞವೇದಿಯಲ್ಲಿ ಕುಳಿತಿರುವುದರಿಂದ ಪೂಜೆಗೆ ಯೋಗ್ಯನಾಗಿದ್ದಾನೆ. ಉತ್ತಮವಾಗಿ ಅರ್ಪಿಸಿದ ಚರುಪುರೋಡಾಶಾದಿಗಳನ್ನು ಸುತ್ತಲೂ ನೋಡುತ್ತಾನೆ. ಯಜ್ಞಾರ್ಹರಾದ ದೇವತೆಗಳನ್ನು ಆಜ್ಯದ ಅರ್ಪಣೆಯಿಂದ ಶೀಘ್ರವಾಗಿ ಪೂಜಿಸೋಣ. ಸ್ತುತಿಗೆ ಯೋಗ್ಯರಾದ ದೇವತೆಗಳನ್ನು ಸ್ತುತಿಸೋಣ.

## English Translation

The hotri, most skilled in worship, has been sanctified by his seat (at the altar); he contemplated the sacred offerings reverently placed (before him) : let us speedily worship with ghi the gods to whom worship is due ; let us praise those who are entitled to praise.

ವಿಶೇಷವಿಷಯಗಳು

ದರ್ಶಪೂರ್ಣಮಾಸಯಾಗಗಳ ಪ್ರಾರಂಭದಲ್ಲಿ **ಅರಾಧಿ** ಎಂಬ ಈ ಋಕ್ಕನ್ನು ಜಪಿಸಬೇಕೆಂದು ಹೇಳಿರುವ ಸೂತ್ರವನ್ನು ಹಿಂದೆಯೇ ಉದಾಹರಿಸಲಾಗಿದೆ.

ಸಂಹಿತಾಪಾಠಃ

ಸಾಧ್ವೀಮಕರ್ದೇವವೀತಿಂ ನೋ ಅದ್ಯ ಯಜ್ಞಸ್ಯ ಜಿಹ್ವಾಮವಿದಾಮ ಗುಹ್ಯಾಂ ।
ಸ ಆಯುರಾಗಾತ್ಸುರಭಿರ್ವಸಾನೋ ಭದ್ರಾಮಕರ್ದೇವಹೂತಿಂ ನೋ ಅದ್ಯ ॥ ೩ ॥

ಪದಪಾಠಃ

ಸಾಧ್ವೀಂ । ಅಕಃ । ದೇವऽವೀತಿಂ । ನಃ । ಅದ್ಯ । ಯಜ್ಞಸ್ಯ । ಜಿಹ್ವಾಂ । ಅವಿದಾಮ । ಗುಹ್ಯಾಂ ।

ಸಃ । ಆಯುಃ । ಆ । ಅಗಾತ್ । ಸುರಭಿಃ । ವಸಾನಃ । ಭದ್ರಾಂ । ಅಕಃ । ದೇವऽಹೂತಿಂ । ನಃ । ಅದ್ಯ ॥

ಸಾಯಣಭಾಷ್ಯಂ

ಯಸ್ಮಿನ್ಯಜಮಾನೇ ಜೀವತಿ ಮೃತಶಬ್ದೋ ಜಾಯತೇ ತಸ್ಯ ಸುರಭಿಮತೀಷ್ಟಿಃ ಕರ್ತವ್ಯಾ। ಸಾಧ್ವೀಮಕರಿತ್ಯೇಷಾ ತತ್ರ ಯಾಜ್ಯಾ । ಸೂತ್ರಿತಂ ಚ । ಅಗ್ನಿರ್ಹೋತಾ ನ್ಯಸೀದದ್ಯಜೀಯಾನ್ ಸಾಧ್ವೀಮಕರ್ದೇವವೀತಿಂ ನೋ ಅದ್ಯ । ಆ-೩-೧೩ । ಇತಿ ॥

ಅಯಮಗ್ನಿರದ್ಯ ನೋಽಸ್ಮಾಕಂ ದೇವವೀತಿಂ ದೇವಾನಾಮಾಗಮನವಂತಂ ದೇವಾನಾಂ ಹವಿರ್ಭಕ್ಷಣೋಪೇತಂ ವಾ ಯಜ್ಞಂ ಸಾಧ್ವೀಮಕಃ । ಸಾಧುಮಕರೋತ್ । ವಯಂ ಚ ಯಜ್ಞಸ್ಯ ಜಿಹ್ವಾಂ ಗುಹ್ಯಾಂ ಗೂಢತರಾಂ ಜಿಹ್ವಾಮವಿದಾಮ । ಲಬ್ಧವಂತಃ ಸ್ಮ । ಅಗ್ನಿರ್ಹಿ ಯಜ್ಞಸ್ಯ ಜಿಹ್ವಾ ತೇನ ದೇವಾನಾಂ ಪಾನಾಜ್ಜಿಹ್ವಾತ್ವೇನೋಪಚಾರಃ । ಸ ತಾದೃಶೋಽಗ್ನಿಃ ಸುರುಭಿಃ ಸುಗಂಧ ಆಯುರ್ದೇವೈರ್ದತ್ತಮಾಯುಷ್ಯಂ ವಸಾನ ಆಚ್ಛಾದಯನ್ನಾಗಾತ್ ಆಗಚ್ಛತಿ । ಆಗತ್ಯ ಚ ನೋಽಸ್ಮದರ್ಥಂ ದೇವಹೂತಿಂ ದೇವಾನಾಮಾಹ್ವಾನವಂತಂ ಯಜ್ಞಂ ಭದ್ರಾಮಕಃ । ಕಲ್ಯಾಣಂ ಕೃತವಾನ್। ಅದ್ಯೇದಾನೀಂ ॥

ಪ್ರತಿಪದಾರ್ಥ

**ಅದ್ಯ**—ಇಂದು । **ಅಗ್ನಿಃ**—ಅಗ್ನಿಯು । **ನಃ**—ನಮ್ಮಿಂದ । **ದೇವವೀತಿಂ**—ದೇವತೆಗಳಿಗಾಗಿ ಅರ್ಪಿಸಿದ ಹವಿಸ್ಸನ್ನು । **ಸಾಧ್ವೀಂ**—ಭಕ್ಷಿಸಲು ಯೋಗ್ಯವಾದುದನ್ನಾಗಿ । **ಅಕಃ**—ಮಾಡಿದ್ದಾನೆ । (**ವಯಂ**-ನಾವು) । **ಯಜ್ಞಸ್ಯ**—ಯಜ್ಞದ । **ಗುಹ್ಯಾಂ**—ರಹಸ್ಯಾತ್ಮಕವಾದ । **ಜಿಹ್ವಾಂ**—ಜಿಹ್ವೆಯನ್ನು । **ಅವಿದಾಮ**—ಹೊಂದಿದ್ದೇವೆ । **ಸಃ**—ಅಗ್ನಿಯು । **ಸುರಭಿಃ**—ಸುಗಂಧಯುಕ್ತನಾಗಿಯೂ । **ಆಯುಃ**—ದೇವತೆಗಳಿಂದ ಅನುಗ್ರಹೀತವಾದ ಆಯುಸ್ಸನ್ನು । **ವಸಾನಃ**—ಹೊಂದಿದವನಾಗಿಯೂ । **ಆಗಾತ್**—ಬರುತ್ತಾನೆ । **ಅದ್ಯ**—ಇಂದು । **ನಃ**—ನಮಗಾಗಿ । **ದೇವಹೂತಿಂ**—ದೇವತೆಗಳನ್ನು ಆಕರ್ಷಿಸುವ ಯಜ್ಞವನ್ನು । **ಭದ್ರಾಂ**—ಮಂಗಳಯುಕ್ತವನ್ನಾಗಿ । **ಅಕಃ**—ಮಾಡಿದ್ದಾನೆ.

ಭಾವಾರ್ಥ

ನಮ್ಮಿಂದ ದೇವತೆಗಳಿಗೆ ಅರ್ಪಿಸಿದ ಹವಿಸ್ಸನ್ನು ಅಗ್ನಿಯು ಭಕ್ಷಿಸಲು ಯೋಗ್ಯವಾದುದನ್ನಾಗಿ ಮಾಡಿದ್ದಾನೆ. ನಾವು ಯಜ್ಞದ ರಹಸ್ಯಾತ್ಮಕವಾದ ಜಿಹ್ವೆಯನ್ನು ಹೊಂದಿದ್ದೇವೆ. ಅಗ್ನಿಯು ಸುಗಂಧಯುಕ್ತನಾಗಿಯೂ, ದೇವತೆಗಳಿಂದ ಅನುಗ್ರಹೀತವಾದ ಆಯುಸ್ಸನ್ನು ಹೊಂದಿದವನಾಗಿಯೂ ಬರುತ್ತಾನೆ. ಇಂದು ನಮಗಾಗಿ ದೇವತೆಗಳನ್ನು ಆಕರ್ಷಿಸುವ ಯಜ್ಞವನ್ನು ಮಂಗಳಯುಕ್ತವನ್ನಾಗಿ ಮಾಡಿದ್ದಾನೆ.

## English Translation

He has to-day made our banquet to the gods effiicacious : we have obtained the mysterious tongue of sacriffices : he has come, fragrant, clothed with life : he makes our oblation to the gods to-day auspicious.

ವಿಶೇಷವಿಷಯಗಳು

ಯಜ್ಞಮಾಡುವ ಯಜಮಾನನು ಜೀವಿಸಿರುವಾಗ ಅವನ ವಿಷಯದಲ್ಲಿ ಮೃತನಾದನೆಂಬ ಶಬ್ದವು ಕಾರಣಾಂತರದಿಂದ ಕೇಳಿಬಂದರೆ ಅದರ ಪ್ರಾಯಶ್ಚಿತಾರ್ಥವಾಗಿ ಸುರಭಿಮತಿ ಎಂಬ ಇಷ್ಟಿಯನ್ನು ಮಾಡಬೇಕು. ಆ ಇಷ್ಟಿಯಲ್ಲಿ **ಸಾಧ್ವೀಮಕಃ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಅಗ್ನಿರ್ಹೋತಾ ನ್ಯಸೀದದ್ಯಜೀಯಾನ್ ಸಾಧ್ವೀಮಕರ್ದೇವವೀತಿಂ ನೋ ಅದ್ಯ** ಎಂಬ ಸೂತ್ರದಿಂದ (ಆ. ೩-೧೩) ವಿವೃತವಾಗಿರುವುದು.

ಸಂಹಿತಾಪಾಠಃ

**ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾँ ಅಭಿ ದೇವಾ ಅಸಾಮ।**
**ಊರ್ಜಾದ ಉತ ಯಜ್ಞಿಯಾಸಃ ಪಂಚ ಜನಾ ಮಮ ಹೋತ್ರಂ ಜುಷಧ್ವಂ ॥ ೪ ॥**

ಪದಪಾಠಃ

**ತತ್ । ಅದ್ಯ । ವಾಚಃ । ಪ್ರಥಮಂ । ಮಸೀಯ । ಯೇನ । ಅಸುರಾನ್ । ಅಭಿ। ದೇವಾಃ । ಅಸಾಮ ॥**
**ಊರ್ಜಽಅದಃ । ಉತ । ಯಜ್ಞಿಯಾಸಃ । ಪಂಚ । ಜನಾಃ । ಮಮ । ಹೋತ್ರಂ । ಜುಷಧ್ವಂ ॥**

ಸಾಯಣಭಾಷ್ಯಂ

ದರ್ಶಪೂರ್ಣಮಾಸಯೋಃ ಸಾಮಿಧೇನ್ಯರ್ಥಂ ಪ್ರೇಷಿತೇನ ಹೋತ್ರಾ ತದದ್ಯ ವಾಚ ಇತ್ಯೇಷಾ ಜಪ್ಯಾ । ಸ್ರುಗಾದಾಪನಾತ್ಪೂರ್ವಮಪಿ ಜಪ್ಯಾ । ಸೂತ್ರಿತಂ ಚ। ತದದ್ಯ ವಾಚಃ ಪ್ರಥಮಂ ಮಸೀಯೇತಿ ಸಮಾಪ್ಯ । ಆ. ೧-೨ । ಇತಿ ॥

ಇದಮುತ್ತರಂ ಚಾಗ್ನೇರ್ವಾಕ್ಯಮಿತ್ಯುಕ್ತಂ। ಅದ್ಯೇದಾನೀಂ ಪ್ರಥಮಂ। ಮುಖ್ಯನಾಮ್ನೈತತ್। ವಾಚಾಂ ಮುಖ್ಯಂ ತದ್ವಾಚೋ ವಚೋ ವಚನಂ ಮಸೀಯ । ಮಂಸೀಯ । ಉಚ್ಚಾರಯಾಮಿ । ಯೇನ ವಚಸಾಹಂ ದೇವಾಶ್ಚ ವಯಮಸುರಾನಭ್ಯಸಾಮ । ಅಭಿಭವೇಮ । ಕಿಂ ತತ್ಪ್ರಥಮಂ ವಚನಮಿತಿ ಉಚ್ಯತೇ । ಊರ್ಜಾದೋ ಹೇ ಅನ್ನಾದ ಉತಾಪಿ ಚ ಯಜ್ಞಿಯಾಸೋ ಯಜ್ಞಾರ್ಹಾ ಹೇ ಪಂಚ ಜನಾ ದೇವಮನುಷ್ಯಾದಯಃ ಯೂಯಂ ಮಮ ಹೋತ್ರಂ ಜುಷಧ್ವಂ । ಸೇವಧ್ವಮಿತಿ । ಏವಂ

**ಬಹೂಚ್ಯಮಾನೇಽಗ್ನಿಮನೂದ್ಯಂತಿ ಸರ್ವೇ ದೇವಾ ಇತ್ಯಭಿಪ್ರಾಯಃ । ಅತ್ರ ತದದ್ಯ ವಾಚ ಇತ್ಯಾದಿ ನಿರುಕ್ತಂ ದ್ರಷ್ಟವ್ಯಂ । ೩-೩-೮ ॥**

ಪ್ರತಿಪದಾರ್ಥ

**ಯೇನ**—ಯಾವ ವಾಗ್ರೂಪವಾದ ಉಪದೇಶದಿಂದ । **ದೇವಾಃ**—ಸಕಲ ದೇವತೆಗಳೂ । **ಅಸುರಾನ್**—ಅಸುರರನ್ನು । **ಅಭ್ಯಸಾಮ**—ಸೋಲಿಸಬಲ್ಲರೋ ಅಂತಹ । **ಪ್ರಥಮಂ**—ಶ್ರೇಷ್ಠವಾದ । **ತದ್ವಚಃ**—ಅದೇ ವಾಗುಪದೇಶವನ್ನು । **ಅದ್ಯ**—ಇಂದು । **ಮನೀಯಿ**—ಉಚ್ಚರಿಸುತ್ತೇನೆ । **ಊರ್ಜಾದಃ**—ಹವಿಸ್ಸನ್ನು ಭಕ್ಷಿಸುವವರೂ । **ಉತ**—ಮತ್ತು । **ಯಜ್ಞಿಯಾಸಃ**—ಯಜ್ಞಾರ್ಹರೂ । **ಪಂಚ ಜನಾಃ**—ದೇವಮಾನವಾದಿ ಐದು ವಿಭಾಗವಾಗಿರುವವರೂ ಆದ ಎಲೈ ಪಂಚಜನರೇ । **ಮಮ**—ನನ್ನ । **ಹೋತ್ರಂ**—ಹೋತೃವಿನ ಕರ್ಮವನ್ನು । **ಜುಷಧ್ವಂ**—ಸೇವಿಸಿರಿ.

ಭಾವಾರ್ಥ

ಯಾವ ವಾಗ್ರೂಪವಾದ ಉಪದೇಶದಿಂದ ಸಕಲ ದೇವತೆಗಳೂ ಅಸುರರನ್ನು ಸೋಲಿಸಬಲ್ಲರೋ ಅಂತಹ ಶ್ರೇಷ್ಠವಾದ ಅದೇ ವಾಗುಪದೇಶವನ್ನು ನಾನು ಇಂದು ಉಚ್ಚರಿಸುತ್ತೇನೆ. ಹವಿಸ್ಸನ್ನು ಭಕ್ಷಿಸುವವರೂ ಯಜ್ಞಾರ್ಹರೂ ದೇವಮಾನವಾದಿ ಐದು ವಿಭಾಗವಾಗಿ ಇರುವವರೂ ಆದ ಎಲೈ ಪಂಚಜನರೇ, ನನ್ನ ಹೋತೃವಿನ ಕರ್ಮವನ್ನು ಸೇವಿಸಿರಿ.

## English Translation

(Agni speaks :) I communicate to-day the best advice by which we gods may overcome the Asuras : do you who are the eaters of sacrificial food, who are entitled to worship, and you five orders of men, be pleased by my (discharge of ) the office of hotri.

ವಿಶೇಷವಿಷಯಗಳು

ದರ್ಶಪೂರ್ಣಮಾಸಯಾಗಗಳಲ್ಲಿ ಸಾಮಿಧೇನೀ ಋಕ್ಕುಗಳನ್ನು ಪಠಿಸುವ ಸಂದರ್ಭದಲ್ಲಿ ಪ್ರೈಷಾರ್ಥವಾಗಿ ಹೋತೃವು **ತದದ್ಯ ವಾಚಃ** ಎಂಬ ಈ ಋಕ್ಕನ್ನು ಜಪಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತದದ್ಯ ವಾಚಃ ಪ್ರಥಮಂ ಮಸೀಯೇತಿ ಸಮಾಪ್ಯ** ಎಂಬ ಸೂತ್ರದಿಂದ (ಆ. ೧-೨) ವಿವೃತವಾಗಿರುವುದು.

**ಪಂಚ ಜನಾಃ** — ಋಗ್ವೇದದಲ್ಲಿ **ಪಂಚ ಜನಾಃ** ಮತ್ತು **ಪಂಚ ಕ್ಷಿತಯಃ** ಎಂಬ ಶಬ್ದಗಳು ಅಲ್ಲಲ್ಲಿ ಉಪಯೋಗಿಸಿರುವುದು ಕಂಡುಬರುತ್ತದೆ. ಈ ಎರಡು ವಿಧವಾದ ಶಬ್ದಗಳಿಗೂ ಒಂದೇ ಅರ್ಥವು. ಆದ್ದರಿಂದ **ಪಂಚ ಜನಾಃ** ಅಥವಾ **ಪಂಚ ಕ್ಷಿತಯಃ** ಎಂದರೆ ಇವರು ಯಾರು ಎಂಬ ವಿಷಯದಲ್ಲಿ ಸಾಯಣರು ಎರಡುವಿಧವಾದ ಅರ್ಥವನ್ನು ಹೇಳಿದ್ದಾರೆ. ಮೊದಲನೆಯದಾಗಿ,

೧. **ದೇವಾ ಮನುಷ್ಯಾಃ ಪಿತರಃ ಪಶವಃ ಪಕ್ಷಿಣಶ್ಚೇತಿ ಪಂಚ ಜನಾಃ** । ದೇವತೆಗಳು, ಮನುಷ್ಯರು, ಪಿತೃಗಳು, ಪಶುಗಳು ಮತ್ತು ಪಕ್ಷಿಗಳು ಎಂಬ ಐದುವಿಧವೆಂದೂ, ಎರಡನೆಯದಾಗಿ,

೨. **ಚತ್ವಾರೋ ವರ್ಣಾಃ ನಿಷಾದಪಂಚಮಾಃ ಪಂಚ ಜನಾ ಇತ್ಯನ್ಯೇ** | ನಿಷಾದರೊಡಗೂಡಿದ ನಾಲ್ಕುವರ್ಣದ ಜನರೆಂದು ಇನ್ನೊಂದುವಿಧವಾಗಿಯೂ ವಿವರಿಸಿದ್ದಾರೆ. ಈ ಎರಡು ಅರ್ಥಗಳಿಗೂ ಶ್ರುತಿವಾಕ್ಯಗಳ ಆಧಾರಗಳನ್ನು ತೋರಿಸಬಹುದು. ಮೊದಲು **ಕ್ಷಿತಿ** ಶಬ್ದದ ನಿರ್ವಚನವನ್ನು ಪರಿಶೀಲಿಸಿ, ಅನಂತರ **ಪಂಚಕ್ಷಿತಿ**ಯೆಂಬುದಕ್ಕೆ ಪ್ರಕೃತದಲ್ಲಿ ಯಾವ ಅರ್ಥವನ್ನು ಹೇಳಬಹುದೆಂದು ಅನಂತರ ವಿಮರ್ಶಿಸಬಹುದು.

**ಕ್ಷಿತೀನಾಂ—ಕ್ಷಿಯಂತಿ ನಿವಸಂತಿ ಗಚ್ಛಂತಿ ವಾ᳚ ಕ್ಷಿತಯೋ ಮನುಷ್ಯಾಃ** | ವಾಸಿಸುತ್ತಾರೆ ಅಥವಾ ಸಂಚರಿಸುತ್ತಾರೆ. ಆದ್ದರಿಂದ ಮಾನವರಿಗೆ ಈ ವಿಶೇಷಣವಿದೆ ಎಂದು ಸಾಯಣರು ವಿವರಿಸಿದ್ದಾರೆ. ನಿರುಕ್ತಕಾರರು **ಕ್ಷಿತಿ** ಶಬ್ದವನ್ನು **ನರಃ** ಇತ್ಯಾದಿ ೨೫ ಮನುಷ್ಯನಾಮಗಳಲ್ಲಿ ಪಠಿಸಿದ್ದಾರೆ (ನಿ. ೩-೭).

**ಅಗ್ನಿರ್ನೇತಾ ಭಗ ಇವ ಕ್ಷಿತೀನಾಂ ದೈವೀನಾಂ ದೇವ ಋತುಪಾ ಋತಾವಾ |**
**ಸ ವೃತ್ರಹಾ ಸನಯೋ ವಿಶ್ವವೇದಾಃ ಪರ್ಷದ್ವಿಶ್ವಾತಿ ದುರಿತಾ ಗೃಣಂತಂ ||**
(ಋ. ಸಂ. ೩-೨೦-೪)

ಇತ್ಯಾದಿ ಋಕ್ಕುಗಳಲ್ಲಿ ಮಾನವರಿಗೂ ದೇವಸಂಬಂಧಿಗಳಾದ ಪ್ರಜೆಗಳಿಗೂ ಇರುವ ವ್ಯತ್ಯಾಸವನ್ನು ತೋರಿಸುವಾಗ **ಕ್ಷಿತಿ**ಶಬ್ದದಿಂದ ಪೃಥ್ವೀಯ ಪ್ರಜೆಗಳಾದ ಮಾನವರೆಂದು ಸೂಚಿಸಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಪಾರ್ಥಿವವಾದ ಮಾನವರೇ ಎಂದು ನಿಶ್ಕೃಷ್ಟವಾಗಿ ಹೇಳುವಂತಿಲ್ಲ. ಏಕೆಂದರೆ, ಇಂದ್ರನ ಐಶ್ವರ್ಯವು ಪೃಥಿವ್ಯಂತರಿಕ್ಷಗಳಲ್ಲೆಲ್ಲಾ ವ್ಯಾಪಿಸಿರುತ್ತದೆ.

**ನ ಯಸ್ಯ ದೇವಾ ದೇವತಾ ನ ಮರ್ತಾ ಆಪಶ್ಚ ನ ಶವಸೋ ಅಂತಮಾಪುಃ |**
**ಸ ಪ್ರರಿಕ್ವಾ ತ್ವಕ್ಷಸಾ ಕ್ಷ್ಮೋ ದಿವಶ್ಚ ಮರುತ್ವಾನ್ನೋ ಭವತ್ವಿಂದ್ರ ಊತೀ ||**
(ಋ. ಸಂ. ೧-೧೦೦-೧೫)

ಇತ್ಯಾದಿ ಋಕ್ಕುಗಳಲ್ಲಿ ದಾನಾದಿಗುಣಗಳಿಂದ ದೇವತಾತ್ಮಕನಾದ ಇಂದ್ರನ ಶಕ್ತಿಯು ಲೋಕದ ಇತರ ಎಲ್ಲಾ ಶಕ್ತಿಗಿಂತಲೂ ಮೀರಿದುದೆಂದೂ, ಅದರ ಅಂತವನ್ನು ದೇವತೆಗಳಾಗಲೀ, ಮಾನವರಾಗಲೀ, ಪಡೆಯಲಾಗಲಿಲ್ಲವೆಂದೂ ಮತ್ತು ಇಂದ್ರನು ಶತ್ರುನಾಶಕವಾದುದೂ, ಪ್ರಭಾವಯುತವಾದುದೂ ಆದ ತನ್ನ ಶಕ್ತಿಯಿಂದ ಪೃಥಿವೀ ಮತ್ತು ಸ್ವರ್ಗಗಳೆರಡನ್ನೂ ಒಟ್ಟಿಗೆ ಪ್ರಕಾಶಿಸುವಂತೆ ಮಾಡುತ್ತಾನೆಂದು ವರ್ಣಿಸಿರುವುದರಿಂದಲೂ, ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಇಂದ್ರನ ಐಶ್ವರ್ಯವು ಸರ್ವವ್ಯಾಪಿಯೆಂದು ವರ್ಣಿತವಾಗಿರುವುದರಿಂದಲೂ ಸಹ **ಪಂಚಕ್ಷಿತೀನಾಂ** ಎನ್ನುವುದಕ್ಕೆ ಕೇವಲ ನಿಷಾದಪಂಚಮರಿಂದ ಕೂಡಿದ ವರ್ಗಚತುಷ್ಟಯವೆಂದು ಹೇಳಲಾಗುವುದಿಲ್ಲ. ಈ ವಿಷಯದಲ್ಲಿ ನಿರುಕ್ತಕಾರರು ತಮ್ಮ ಮತವೇನೆಂದು ಹೇಳದೆ ಇತರರ ಅಭಿಪ್ರಾಯಗಳನ್ನು ಮಾತ್ರ ತಿಳಿಸಿರುವರು.

**ಪಂಚಜನಾ "ಮಮ ಹೋತ್ರಂ ಜುಷಧ್ವಂ" ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇಕೇ | ಚತ್ವಾರೋ ವರ್ಣಾ ನಿಷಾದಃ ಪಂಚಮ ಇತ್ಯೌಪಮನ್ಯವಃ ||**
(ನಿ. ೩-೮)

ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು ಎಂದು ಐದುವಿಧವಾದ ಗುಂಪುಗಳೆಂದು ಕೆಲವರೂ ಬ್ರಾಹ್ಮಣಾದಿ ನಾಲ್ಕುವರ್ಣದವರೊಂದಿಗೆ ನಿಷಾದರೆಂಬ ಐದನೆಯ ಗುಂಪೂ ಸೇರಿ **ಪಂಚಜನ**ರೆಂದು ಉಪಮನ್ಯುವೇ ಮುಂತಾದವರೂ ಅಭಿಪ್ರಾಯಪಡುವರೆಂದು ಇತರರ ಅಭಿಪ್ರಾಯಗಳನ್ನು ಮಾತ್ರ ಹೇಳಿರುವರು.

ಹಿಂದೆ ದೇವತೆಗಳೆಲ್ಲರೂ ಅಗ್ನಿಯನ್ನು ಕುರಿತು ತಮಗಾಗಿ ಯಜ್ಞದಲ್ಲಿ ಅರ್ಪಿತವಾದ ಹವಿಸ್ಸನ್ನು ಸ್ವೀಕರಿಸಿ ಎಲ್ಲರಿಗೂ ಹಂಚಬೇಕೆಂದು ಪ್ರಾರ್ಥಿಸಿದಾಗ ಅಗ್ನಿಯು ಅದಕ್ಕೆ ಒಪ್ಪಿಕೊಂಡು

**ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾँ ಅಭಿ ದೇವಾ ಅಸಾಮ ।**
**ಊರ್ಜಾದ ಉತ ಯಜ್ಞಿಯಾಸಃ ಪಂಚ ಜನಾ ಮಮ ಹೋತ್ರಂ ಜುಷಧ್ವಂ ॥**

(ಋ. ಸಂ. ೧೦-೫೩-೪)

**ಪಂಚಜನರೂ** ಸೇರಿ ಈ ಹವಿಸ್ಸನ್ನು ಭೋಗಿಸಲಿ ಎಂದು ಉತ್ತರವನ್ನು ಕೊಟ್ಟಿರುವ ಈ ವಾಕ್ಯವನ್ನು ಬೃಹದ್ದೇವತಾ ಕಾರರು ಉದಹರಿಸಿ **ಪಂಚಜನ**ರ ವಿಷಯದಲ್ಲಿ ಅಭಿಪ್ರಾಯಭೇದಗಳನ್ನು ತೋರಿಸಿ ಚರ್ಚಿಸಿದ್ದಾರೆ.

**ಪ್ರತ್ಯುವಾಚಾಥ ತಾನಗ್ನಿರ್ವಿಶ್ವೇದೇವಾ ಯದೂಚ ಮಾಂ ।**
**ತತ್ಕರಿಷ್ಯೇ ಜುಷಂತಾಂ ತು ಹೋತ್ರಂ ಪಂಚಜನಾ ಮಯಾ ॥**

(ಬೃ. ದೇ. ೭-೬೬)

ಎಂಬ ಶ್ಲೋಕದಲ್ಲಿ ಅಗ್ನಿಯು ದೇವತೆಗಳಿಗೆ ಕೊಟ್ಟ ಉತ್ತರವನ್ನು ತಿಳಿಸಿ ಅನಂತರ **ಪಂಚಜನ**ಶಬ್ದವನ್ನು ವಿವರಿಸಿದ್ದಾರೆ.

**ಶಾಲಾಮುಖ್ಯಃ ಪ್ರಣೀತಶ್ಚ ಪುತ್ರೋ ಗೃಹಪತೇಶ್ಚ ಯಃ ।**
**ಉತ್ತರೋ ದಕ್ಷಿಣಶ್ಚಾಗ್ನಿರೇತೇ ಪಂಚಜನಾಃ ಸ್ಮೃತಾಃ ॥**

(ಬೃ. ದೇ. ೭-೬೭)

ಎಂದರೆ ಯಜ್ಞಶಾಲೆಯ ಪ್ರವೇಶಭಾಗದಲ್ಲಿರುದ ಅಗ್ನಿಯೂ, ಪ್ರಣೀತವಾದ ಆಹವನೀಯಾಗ್ನಿಯೂ, ಯಜಮಾನನ ಪುತ್ರಭೂತನಾದ ಗಾರ್ಹಪತ್ಯಾಗ್ನಿಯೂ, ದಕ್ಷಿಣೋತ್ತರಾಗ್ನಿಗಳೂ ಸೇರಿ ಈ ಐದುವಿಧವಾದ ಅಗ್ನಿಗಳೂ ಐದುಬಗೆಯ ಪಂಚಜನರೆಂದು ಸಾಂಪ್ರದಾಯಕವಾದ ವ್ಯವಹಾರವಾಗಿದೆ. ಈ ಮತವಲ್ಲದೇ,

**ಮನುಷ್ಯಾಃ ಪಿತರೋ ದೇವಾ ಗಂಧರ್ವೋರಗರಾಕ್ಷಸಾಃ ।**
**ಗಂಧರ್ವಾ ಪಿತರೋ ದೇವಾ ಅಸುರಾ ಯಕ್ಷರಾಕ್ಷಸಾಃ ॥**

(ಬೃ. ದೇ. ೭-೬೮)

ಮೊದಲನೆಯ ಅಭಿಪ್ರಾಯದಂತೆ ಮನುಷ್ಯಾದಿಗಳ ಜತೆಗೆ **ಉರಗರಾಕ್ಷಸರು** ಸೇರಿ ಒಂದು ಗುಂಪು; ಎರಡನೆಯ ಅಭಿಪ್ರಾಯದಂತೆ ಯಕ್ಷರಾಕ್ಷಸರು ಸೇರಿ ಒಂದು ಗುಂಪು.

**ಯಾಸ್ಕೌಪಮನ್ಯವಾವೇತಾನಾಹತುಃ ಪಂಚ ವೈ ಜನಾನ್ ।**
**ನಿಷಾದಪಂಚಮಾನ್ವರ್ಣಾ ಮನ್ಯತೇ ಶಾಕಟಾಯನಃ ॥**

(ಬೃ. ದೇ. ೭-೬೯)

ಯಾಸ್ಕರ ಮತವು ಮೊದಲನೆಯದೆಂದು ಬೃಹದ್ದೇವತಾಕಾರರು ಈ ವಾಕ್ಯದಲ್ಲಿ ಹೇಳಿರುವರು. ಆದರೆ ನಿರುಕ್ತದಲ್ಲಿ ಇತರರ ಮತಗಳನ್ನು ಹೇಳಿದೆಯೇ ಹೊರತು ಯಾಸ್ಕರು ತಮ್ಮ ಮತವನ್ನು ಸ್ಪಷ್ಟವಾಗಿ ತಿಳಿಸಿಲ್ಲ.

**ಋತ್ವಿಜೋ ಯಜಮಾನಂ ಚ ಶಾಕಪೂಣಿಸ್ತು ಮನ್ಯತೇ ।**

(ಬೃ. ದೇ. ೭-೭೦)

ಹೋತ್ರಾದಿ ನಾಲ್ಕು ಋತ್ವಿಕ್ಕುಗಳೂ, ಯಜಮಾನನೂ ಸೇರಿ ಐದು ಗುಂಪೆಂದು ಶಾಕಪೂಣಿಯವರ ಮತವಾಗಿದೆ.

**ಚಕ್ಷುಃಶ್ರೋತ್ರಂ ಮನೋ ವಾಕ್ ಚ ಪ್ರಾಣಶ್ಚೇತ್ಯಾತ್ಮವಾದಿನಃ ।**
**ಗಂಧರ್ವಾಪ್ಸರಸೋ ದೇವಾ ಮನುಷ್ಯಾಃ ಪಿತರಸ್ತಥಾ ।**
**ಸರ್ಪಾಶ್ಚ ಬ್ರಾಹ್ಮಣೇ ಚೈವ ಶ್ರೂಯಂತೇ ಹ್ಯೈತರೇಯಕೇ ॥**

(ಬೃ. ದೇ. ೭-೭೧, ೭೨)

ಚಕ್ಷಸ್ಸು, ಶ್ರೋತ್ರ, ಮನಸ್ಸು, ವಾಕ್ಕು ಮತ್ತು ಪ್ರಾಣ ಈ ಐದೂ **ಪಂಚಜನ**ರೆಂದು ಆಧ್ಯಾತ್ಮಿಕವಾದಿಗಳ ಮತ. ಗಂಧರ್ವಾದಿಗಳೆಂದು ಐತರೇಯಬ್ರಾಹ್ಮಣದಲ್ಲಿ ವಿವರಿಸಿದೆ. (ಐ. ಬ್ರಾ. ೩-೩೧-೫) ಇಂತಹ ಪಂಚಜನರೂ ಹವಿಸ್ಸನ್ನು ಭೋಗಿಸಲಿ ಎಂದು ಅಗ್ನಿಯು ದೇವತೆಗಳಿಗೆ ಉತ್ತರವನ್ನು ಕೊಟ್ಟಿದ್ದಾನೆ ಎಂದು ಬೃಹದ್ದೇವತೆಯ ವಿವರಣೆಯಲ್ಲಿಯೂ ಅಭಿಪ್ರಾಯಭೇದಗಳು ತಿಳಿಸಲ್ಪಟ್ಟಿದೆ.

ಪಂಚಜನರು ಯಾರು ಎಂಬ ವಿಷಯವನ್ನು ವಿವರಿಸುವುದಕ್ಕಾಗಿ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಈ ರೀತಿ ಹೇಳಿದ್ದಾರೆ—

**ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾँ ಅಭಿ ದೇವಾ ಅಸಾಮ । ಊರ್ಜಾದ ಉತ ಯಜ್ಞಿಯಾಸಃ ಪಂಚಜನಾ ಮಮ ಹೋತ್ರಂ ಜುಷಧ್ವಂ ॥ ತದದ್ಯ ವಾಚಃ ಪರಮಂ ಮಂಸೀಯ ಯೇನಾಸುರಾನಭಿಭವೇಮ ದೇವಾಃ । ಅಸುರಾ ಅಸುರತಾಃ ಸ್ಥಾನೇಷ್ವಸ್ತಾ ಸ್ಥಾನೇಭ್ಯ ಇತಿ ವಾ । ಅಪಿ ವಾಸುರಿತಿ ಪ್ರಾಣನಾಮಾಸ್ತಃ ಶರೀರೇ ಭವತಿ ತೇನ ತದ್ವಂತಃ । ಸೋರ್ದೇವಾನಸೃಜತ ತತ್ಸುರಾಣಾಂ ಸುರತ್ವಂ, ಅಸೋರಸುರಾನಸೃಜತ ತದಸುರಾಣಾಮಸುರತ್ವಮಿತಿ ವಿಜ್ಞಾಯತೇ । ಊರ್ಜಾದ ಉತ ಯಜ್ಞಿಯಾಸಃ । ಅನ್ನಾದಾಶ್ಚ ಯಜ್ಞಿಯಾಶ್ಚ । ಊರ್ಗಿತ್ಯನ್ನನಾಮೋರ್ಜಯತೀತಿ ಸತಃ । ಪಕ್ವಂ ಸುಪ್ರವೃಕ್ಣಮಿತಿ ವಾ । ಪಂಚಜನಾ ಮಮ ಹೋತ್ರಂ ಜುಷಧ್ವಂ । ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇಕೇ । ಚತ್ವಾರೋ ವರ್ಣಾ ನಿಷಾದಃ ಪಂಚಮ ಇತ್ಯೌಪಮನ್ಯವಃ । ನಿಷಾದಃ ಕಸ್ಮಾನ್ನಿಷದನೋ ಭವತಿ ನಿಷಣ್ಣಮಸ್ಮಿನ್ ಪಾಪಕಮಿತಿ ನೈರುಕ್ತಾಃ । ಯತ್ ಪಾಂಚಜನ್ಯಯಾ ವಿಶಾ । ಪಂಚಜನೀನಯಾ ವಿಶಾ । ಪಂಚಪೃಕ್ತಾ ಸಂಖ್ಯಾ ಸ್ತ್ರೀಪುಂನಪುಂಸಕೇಷ್ವವಿಶಿಷ್ಟಾ ॥**

(ನಿ. ೩-೮)

ಯಾವ ಉತ್ಕೃಷ್ಟವಾದ ವಾಕ್ಕಿನಿಂದ ಅಸುರರನ್ನು ನಾವು ಸೋಲಿಸಲು ಶಕ್ತರಾಗುವೆವೋ ಅಂತಹ ಅತಿ ಶ್ರೇಷ್ಠವಾದ ವಾಕ್ಕನ್ನು ನಾನು ಮನಸ್ಸಿನಲ್ಲಿ ಧ್ಯಾನಿಸಿ ತಿಳಿಯುತ್ತೇನೆ ಎಂದು ಈ ಋಕ್ಕಿನ ಪೂರ್ವಾರ್ಧದ ಅಭಿಪ್ರಾಯವು. **ಅಸುರಾಃ** ಎಂದರೆ ಕೆಟ್ಟಸ್ಥಳಗಳಲ್ಲಿ ವಾಸಮಾಡಲು ಸಂತೋಷಪಡುವವರು ಅಥವಾ **ಅ+ಸು+ರತಾಃ । ನ ಸುಷ್ಠು ಸ್ಥಾನೇಷು ರತಾಃ ಚಪಲಾ ಇತ್ಯರ್ಥಃ** । ಒಳ್ಳೆಯ ಸ್ಥಾನಗಳಲ್ಲಿರಲು ಇಷ್ಟಪಡದಿರುವವರು ಅಥವಾ **ಸ್ಥಾನೇಷು**

**ಅಸ್ತಾಃ** ತಮ್ಮ ಸ್ವಸ್ಥಾನಗಳಿಂದ (ದೇವಾದಿಗಳಿಂದ ಸೋಲಿಸಲ್ಪಟ್ಟು) ಓಡಿಸಲ್ಪಡುವವರು. ಅಥವಾ ಅಸು ಎಂದರೆ ಪ್ರಾಣಕ್ಕೆ ಹೆಸರು ಎಂದರೆ ಪ್ರಾಣವಾಯುವು. ಅಂತಹ ಪ್ರಾಣವಾಯುವು ಇರುವ ಶರೀರದಲ್ಲಿ ವಾಸಮಾಡುವ ಪ್ರಾಣಿಗಳು ಎಂದು ಹೇಳಬಹುದು. ಇದಲ್ಲದೆ **ಸು** ಎಂದರೆ ಪ್ರಶಸ್ತವಾದ ಸ್ಥಾನವು. **ಸೋರ್ದೇವಾನಸೃಜತ** ಎಂಬ ಬ್ರಾಹ್ಮಣವಾಕ್ಯದಂತೆ ಪ್ರಜಾಪತಿಯು ತನ್ನ ಉತ್ತಮವಾದ ಸ್ಥಾನದಿಂದ ಎಂದರೆ ಉತ್ತಮಾಂಗದಿಂದ ದೇವತೆಗಳನ್ನು ಸೃಷ್ಟಿಮಾಡಿದನು. ಆದ್ದರಿಂದ ದೇವತೆಗಳಿಗೆ **ಸುರಾಃ** ಎಂದು ಹೆಸರು. ಅದರಂತೆ ಪ್ರಶಸ್ತವಲ್ಲದ ಎಂದರೆ ನಿಕೃಷ್ಟವಾದ ತನ್ನ ಅವಯವದಿಂದ ಪ್ರಜಾಪತಿಯು ಅಸುರರನ್ನು ಸೃಷ್ಟಿಸಿದನು. ಆದ್ದರಿಂದಲೇ ಅವರಿಗೆ ಅಸುರರೆಂದು ಹೆಸರು. ಊರ್ಕ್ ಎಂದರೆ ಅನ್ನಕ್ಕೆ ಹೆಸರು. **ಊರ್ಜಯತೀತಿ ಸತಃ** ಎಂದರೆ ಅನ್ನದಿಂದ ಬಲವು ಶರೀರದಲ್ಲಿ ಉತ್ಪನ್ನವಾಗುವುದು ಅಥವಾ **ಪಕ್ವಂ ಸುಪ್ರವೃಕ್ಣಮಿತಿ ವಾ** ಅನ್ನವನ್ನು ಬೇಯಿಸಿದಾಗ ಅದನ್ನು ಸುಲಭವಾಗಿ ಮುರಿದು ಅಥವಾ ವಿಂಗಡಿಸಿ ತಿನ್ನಬಹುದು. ಪಂಚಜನರೆಂದರೆ—ಗಂಧರ್ವರು. ಪಿತೃಗಣಗಳು, ದೇವತೆಗಳು, ಅಸುರರು, ಎಂದು ಐದುವಿಧವಾದ ವರ್ಗದವರು ಅಥವಾ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬನಾಲ್ಕುವರ್ಣದ ಜನರ ಜತೆಗೆ **ನಿಷಾದ** ಎಂಬ ಬೇಡರ ಜಾತಿಯ ಜನರೂ ಸೇರಿದರೆ ಆಗುವ ಐದು ಗುಂಪಿನ ಜನರಿಗೆ ಪಂಚಜನರೆಂದು ಹೆಸರೆಂದು ಔಪಮನ್ಯವ ಎಂಬ ಆಚಾರ್ಯರ ಮತವು. ನಿಷಾದ ಎಂಬ ಹೆಸರು ಬೇಡರಿಗೆ ಹೇಗೆ ಬಂತು ಎಂದರೆ ಬೇಡನು ಪ್ರಾಣಿಗಳನ್ನು ಕೊಂದು ಜೀವಿಸುವನು ಅಥವಾ ಪ್ರಾಣಿಗಳನ್ನು ಕೊಲ್ಲುವುದೇ ಮೊದಲಾದ ಹಿಂಸೆಯಿಂದ ಉಂಟಾಗುವ ಪಾಪವು ಇವನಲ್ಲಿ ನೆಲಸಿರುವುದರಿಂದ ಇವನಿಗೆ ನಿಷಾದನೆಂದು ಹೆಸರು ಬಂದಿದೆಯೆಂದು ನಿರುಕ್ತಕಾರರ ಮತವು. **ಪಾಂಚಜನ್ಯಯಾ ವಿಶಾ** ಎಂಬಲ್ಲಿ ಐದುವಿಧವಾದ ಪ್ರಜೆಗಳ ಸಮುದಾಯದಿಂದ ಎಂದು ಹೇಳುವಾಗ ಈ ಸಮುದಾಯದಲ್ಲಿ ಸ್ತ್ರೀಯರು, ಪುರುಷರು, ನಪುಂಸಕರು ಮೊದಲಾದ ಎಲ್ಲಾವಿಧ ಜನರೂ ಇರುವರು ಎಂದಭಿಪ್ರಾಯವು.

ಸಂಹಿತಾಪಾಠಃ

**ಪಂಚ ಜನಾ ಮಮ ಹೋತ್ರಂ ಜುಷಂತಾಂ ಗೋಜಾತಾ ಉತ ಯೇ ಯಜ್ಞಿಯಾಸಃ ।**
**ಪೃಥಿವೀ ನಃ ಪಾರ್ಥಿವಾತ್ಪಾತ್ವಂಹಸೋಽಂತರಿಕ್ಷಂ ದಿವ್ಯಾತ್ಪಾತ್ವಸ್ಮಾನ್ ॥೫॥**

ಪದಪಾಠಃ

**ಪಂಚ । ಜನಾಃ । ಮಮ । ಹೋತ್ರಂ । ಜುಷಂತಾಂ । ಗೋऽಜಾತಾಃ । ಉತ । ಯೇ । ಯಜ್ಞಿಯಾಸಃ ।**
**ಪೃಥಿವೀ । ನಃ । ಪಾರ್ಥಿವಾತ್ । ಪಾತು । ಅಂಹಸಃ । ಅಂತರಿಕ್ಷಂ । ದಿವ್ಯಾತ್ । ಪಾತು । ಅಸ್ಮಾನ್ ॥ ।**

ಸಾಯಣಭಾಷ್ಯಂ

**ಪಂಚ ಜನಾ ದೇವಾದಯೋ ಮಮ ಹೋತ್ರಂ ಹವಮಾಹ್ವಾನಂ ಜುಷಂತಾಂ । ಸೇವಂತಾಂ । ಅಪಿ ಚ ಗೋಜಾತಾ ಭೂಮ್ಯಾಮುತ್ಪನ್ನಾಃ । ಯದ್ವಾ । ಗೋಶಬ್ದೇನ ತಜ್ಜಂ ಪಯ ಆದಿಕಮುಚ್ಯತೇ ।**

**ಹವಿರರ್ಥಂ ಪ್ರಾದುರ್ಭೂತಾ ಇತ್ಯರ್ಥಃ । ತಾದೃಶೇ ಯೇ ಸಂತಿ । ಉತಾಪಿ ಚ ಯೇ ಯಜ್ಞಿಯಾಸೋ ಯಜ್ಞಾರ್ಹಾಃ ಸಂತಿ ತೇ ಮಮ ಹೋತ್ರಂ ಜುಷಂತಾಂ । ಕಿಂಚ ಪೃಥಿವೀ ಪೃಥಿವೀದೇವತಾ ಪಾರ್ಥಿವಾತ್ಪೃಥಿವೀಸಂಬಂಧಾನ್ನೋಽಸ್ಮಾನಂಹಸಃ ಪಾಪಾತ್ಪಾತು । ರಕ್ಷತು । ತಥಾಂತರಿಕ್ಷಮಂತರಿಕ್ಷದೇವತಾ ದಿವ್ಯಾದಾಂತರಿಕ್ಷಾದಂಹಸಃ ಪಾಪಸಕಾಶಾದಸ್ಮಾನ್ಪಾತು ॥**

ಪ್ರತಿಪದಾರ್ಥ

**ಪಂಚಜನಾಃ**—ದೇವಮಾನವಾದಿ ಪಂಚಜನರೂ । **ಗೋಜಾತಾಃ**—ಆಜ್ಯಾದಿಗಳನ್ನು ಭಕ್ಷಿಸಲು ಉತ್ಪನ್ನರಾಗಿರುವವರೂ । **ಉತ**—ಮತ್ತು । **ಯೇ**—ಯಾರು । **ಯಜ್ಞಿಯಾಸಃ**—ಯಜ್ಞಾರ್ಹರೋ ಅವರೂ । **ಮಮ**—ನನ್ನ । **ಹೋತ್ರಂ**—ಹೋತೃಕರ್ಮವನ್ನು । **ಜುಷಂತಾಂ**—ಸೇವಿಸಲಿ । **ಪೃಥಿವೀ**—ಪೃಥ್ವಿಯು । **ನಃ**—ನಮ್ಮನ್ನು । **ಪಾರ್ಥಿವಾತ್**—ಪೃಥ್ವೀಸಂಬಂಧದ । **ಅಂಹಸಃ**—ಪಾಪದಿಂದ । **ಪಾತು**—ರಕ್ಷಿಸಲಿ । **ಅಂತರಿಕ್ಷಂ**—ಅಂತರಿಕ್ಷವು । **ಅಸ್ಮಾನ್**—ನಮ್ಮನ್ನು । **ದಿವ್ಯಾತ್**—ಅಂತರಿಕ್ಷಸಂಬಂಧವಾದ ಪಾಪದಿಂದ । **ಪಾತು**—ರಕ್ಷಿಸಲಿ.

ಭಾವಾರ್ಥ

ಯಜ್ಞಾರ್ಹನೂ, ಆಜ್ಯಾದಿಗಳನ್ನು ಭಕ್ಷಿಸಲು ಉತ್ಪನ್ನರಾಗಿರುವವರೂ ಆದ ದೇವಮಾನವಾದಿ ಪಂಚಜನರೂ ನನ್ನ ಹೋತೃಕರ್ಮವನ್ನು ಸೇವಿಸಲಿ. ಪೃಥ್ವಿಯು ನಮ್ಮನ್ನು ಪೃಥ್ವೀಸಂಬಂಧವಾದ ಪಾಪದಿಂದಲೂ, ಅಂತರಿಕ್ಷವು ಅಂತರಿಕ್ಷಸಂಬಂಧವಾದ ಪಾಪದಿಂದಲೂ ರಕ್ಷಿಸಲಿ.

## English Translation

May the five orders of men, may those who were born for the sake of ghi, may those who are entitled to worship be pleased by my (discharge of) the office of hotri : may earth preserve us from all earrhly sin : may the firmament preserve us from beavenly.

ಸಂಹಿತಾಪಾಠಃ

ತಂತುಂ ತನ್ವನ್ರಜಸೋ ಭಾನುಮನ್ವಿಹಿ ಜ್ಯೋತಿಷ್ಮತಃ ಪಥೋ ರಕ್ಷ ಧಿಯಾ ಕೃತಾನ್ ।
ಅನುಲ್ಬಣಂ ವಯತ ಜೋಗುವಾಮಪೋ ಮನುರ್ಭವ ಜನಯಾದೈವ್ಯಂ ಜನಂ ॥ ೬ ॥

ಪದಪಾಠಃ

ತಂತುಂ । ತನ್ವನ್ । ರಜಸಃ । ಭಾನುಂ । ಅನು । ಇಹಿ । ಜ್ಯೋತಿಷ್ಮತಃ । ಪಥಃ । ರಕ್ಷ । ಧಿಯಾ । ಕೃತಾನ್ ।

ಅನುಲ್ಬಣಂ । ವಯತ । ಜೋಗುವಾಂ । ಅಪಃ । ಮನುಃ । ಭವ । ಜನಯ । ದೈವ್ಯಂ । ಜನಂ ॥ ೬ ॥

ಸಾಯಣಭಾಷ್ಯಂ

ಗಾರ್ಹಪತ್ಯಾದಾರಭ್ಯಾಹವನೀಯಾದ್ವೇದಿಂ ವೇದತೃಣೈರಾಸ್ತೃಣಾತಿ ತಂತುಮಿತ್ಯನಯಾ । ಸೂತ್ರಿತಂ ಚ । ಅವಿಧೂನ್ವನ್ ಸಂತತಂ ಸ್ತೃಣನ್ ಸರ್ವೇಣ ಗಾರ್ಹಪತ್ಯಾದಾಹವನೀಯಮೇತಿ ತಂತುಂ ತನ್ವನ್ರಜಸೋ ಭಾನುಮನ್ವಿಹಿ । ಆ.೧೧-೧ । ಇತಿ ॥ ಅಗ್ನಿಹೋತ್ರಹೋಮೇಽಪ್ಯನಯೋದಕಧಾರಾ ಸ್ರಾವಣೀಯಾ । ಸೂತ್ರಿತಂ ಚ । ಗಾರ್ಹಪತ್ಯಾದವಿಚ್ಛಿನ್ನಾಮುದಕಧಾರಾಂ ಹರೇತ್ತಂತುಂ ತನ್ವನ್ರಜಸೋ ಭಾನುಮನ್ವಿಹಿ । ಆ-೨-೨ । ಇತಿ । ಅಗ್ನ್ಯಂತರಾಲೇ ಶ್ವಾತಿಕ್ರಮಣೇಽನಯಾ ಗಾರ್ಹಪತ್ಯಾಹವನೀಯ-ಯೋರ್ಮಧ್ಯ ಉದಕೇನ ಭಸ್ಮನಾ ಚಾಪೂರಯೇತ್ । ಸೂತ್ರಿತಂ ಚ । ಗಾರ್ಹಪತ್ಯಾಹವನೀಯ-ಯೋರಂತರಂ ಭಸ್ಮರಾಜ್ಯೋದಕರಾಜ್ಯಾ ಚ ಸಂತನುಯಾತ್ । ಆ.೩.೧೦ । ಇತಿ ॥ ಆಗ್ನಿಮಾರುತೇಽ ಪ್ಯೇಷಾ ಧಾಯ್ಯಾ । ಸೂತ್ರಿತಂ ಚ । ತಂತುಂ ತನ್ವನ್ರಜಸೋ ಭಾನುಮನ್ವಿಹ್ಯೇವಾನ ಇಂದ್ರೋ ನುಘವಾ ವಿರಪ್ಶೀ । ಆ.೫-೨೦ । ಇತಿ ॥

ಹೇ ಅಗ್ನೇ ತಂತುಂ ಯಜ್ಞಂ ತನ್ವನ್ವಿಸ್ತಾರಯನ್ರಜಸೋ ರಂಜನಾತ್ಮಕಸ್ಯ ಲೋಕಸ್ಯ ಭಾನುಂ ಭಾಸಕಮಾದಿತ್ಯಮನ್ವಿಹಿ । ಅನುಗಚ್ಛ । ರಶ್ಮಿದ್ವಾರಾ ಸೂರ್ಯಮಂಡಲಂ ಪ್ರವಿಶೇತ್ಯರ್ಥಃ । ಕಿಂಚ ಜ್ಯೋತಿಷ್ಮತಃ । ಪ್ರಕಾಶವತೋ ಯಜ್ಞಸ್ಯ ಪಥೋ ಗಮನಮಾರ್ಗಾನ್ ಅಥವಾ ಜ್ಯೋತಿಷ್ಮತೋ ದೀಪ್ತಿಮತಃ ಸ್ವರ್ಗಸ್ಯ ಪಥೋ ಮಾರ್ಗಾನ್ದೇವಯಾನಾನ್ ರಕ್ಷ । ಪಾಲಯ । ಕೀದೃಶಾನ್ಮಾರ್ಗಾನ್ । ಧಿಯಾ ಕರ್ಮಣಾ ಕೃತಾನ್ ಸಂಪಾದಿತಾನ್ । ಕಿಂಚ ಸೋಽಗ್ನಿರ್ಜೋಗುವಾಂ ಸ್ತೋತೄಣಾಮಪಃ । ಕರ್ಮನಾಮೈತತ್ । ಕ್ರಿಯಯಾ ವ್ಯಾಪ್ಯಂ ಕರ್ಮಾನುಲ್ಬಣಮನತಿರಿಕ್ತಂ ವಯತ । ಕರೋತು । ಯದೇವ ಯಜ್ಞ ಉಲ್ಬಣಂ ಕ್ರಿಯತೇ ತಸ್ಯೈವೈಷಾ ಶಾಂತಿಃ। ತೈ. ಸಂ. ೩-೪-೩-೭॥ ಇತಿ ಹಿ ಬ್ರಾಹ್ಮಣಂ। ಸ ತ್ವಂ ಮನುರ್ಭವ ।ಮಂತವ್ಯೋ ಭವ । ಸ್ತುತ್ಯೋ ಭವೇತ್ಯರ್ಥಃ । ಕಿಂಚ ದೈವ್ಯಂ ಜನಂ ದೇವಸಂಘಂ ಜನಯ । ಉತ್ಪಾ-ದಯ । ಯಜ್ಞಾಭಿಗಮನವಂತಂ ಕುರ್ವಿತ್ಯರ್ಥಃ ॥

ಪ್ರತಿಪದಾರ್ಥ

(ಎಲೈ ಅಗ್ನಿಯೇ) **ತಂತುಂ**—ಯಜ್ಞವನ್ನು । **ತನ್ವನ್**—ವಿಸ್ತರಿಸುತ್ತ । **ರಜಸಃ**—ಲೋಕಕ್ಕೆಲ್ಲ । **ಭಾನುಂ**—ಪ್ರಕಾಶಕನಾದ ಆದಿತ್ಯನನ್ನು । **ಅನ್ವಿಹಿ**—ಅನುಸರಿಸು । **ಜ್ಯೋತಿಷ್ಮತಃ**—ಪ್ರಕಾಶಮಾನವಾದ ಯಜ್ಞಸಂಬಂಧಿಯಾದುದೂ । **ಧಿಯಾ**—ಉತ್ತಮವಾದ ಕರ್ಮದಿಂದ । **ಕೃತಾನ್**—ಸಂಪಾದಿತವಾದುದೂ ಆದ । **ಪಥಃ**—ಮಾರ್ಗಗಳನ್ನು । **ರಕ್ಷ**—ರಕ್ಷಿಸು । (**ಅಗ್ನಿಃ**—ಅಗ್ನಿಯು) । **ಜೋಗುವಾಂ**—ಸ್ತೋತೃಗಳ । **ಅಪಃ**—ಕರ್ಮಗಳನ್ನು । **ಅನುಲ್ಬಣಂ**—ನ್ಯೂನಾತಿರೇಕಗಳಿಲ್ಲದವಾಗಿ । **ವಯತ**—ಮಾಡಲಿ । **ಮನುಃ**—(ಎಲೈ ಅಗ್ನಿಯೇ ನೀನು ಪೂಜ್ಯನಾದ) ಉತ್ಪಾದಕನಾಗಿ । **ಭವ**—ಆಗು । **ದೈವ್ಯಂ ಜನಂ**—ದೇವಜನವನ್ನು । **ಜನಯ**—ಉತ್ಪನ್ನಮಾಡು.

ಭಾವಾರ್ಥ

ಎಲೈ ಅಗ್ನಿಯೇ, ಯಜ್ಞವನ್ನು ವಿಸ್ತರಿಸುತ್ತ, ಲೋಕಕ್ಕೆಲ್ಲ ಪ್ರಕಾಶಕನಾದ ಆದಿತ್ಯನನ್ನು ಅನುಸರಿಸು. ಪ್ರಕಾಶಮಾನವಾದ ಯಜ್ಞಸಂಬಂಧಿಯಾದುದೂ, ಉತ್ತಮವಾದ ಕರ್ಮದಿಂದ ಸಂಪಾದಿತವಾದುದೂ ಆದ ಮಾರ್ಗಗಳನ್ನು ರಕ್ಷಿಸು. ಅಗ್ನಿಯು ಸ್ತೋತೃಗಳ ಕರ್ಮಗಳನ್ನು ನ್ಯೂನಾತಿರೇಕಗಳಿಲ್ಲದವಾಗಿ ಮಾಡಲಿ. ಎಲೈ ಅಗ್ನಿಯೇ, ನೀನು ಪೂಜ್ಯನಾದ ಉತ್ಪಾದಕನಾಗು. ದೇವಜನವನ್ನು ಉತ್ಪನ್ನಮಾಡು.

English Translation

(The gods :) Spreading out the sacrifice, follow the illuminator of the world (the sun) ; protect the luminous paths (of the gods) constructed by sacred acts : may Agni render the pious works of the worshipper free from defect : become Manu, generate the people of heaven.

ವಿಶೇಷವಿಷಯಗಳು

ಗಾರ್ಹಪತ್ಯಾಗ್ನಿಕುಂಡದಿಂದ ಆಹವನೀಯಾಗ್ನಿಕುಂಡದವರೆಗೆ ಯಜ್ಞವೇದಿಯಮೇಲೆ ದರ್ಭೆಗಳನ್ನು ಹರಡುವಾಗ **ತಂತುಂ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶೌತಸೂತ್ರದ—**ಧೂನ್ವನ್ ಸಂತತಂ ಸ್ತೃಣನ್ ಸವ್ಯೇನ ಗಾರ್ಹಪತ್ಯಾದಾಹವನೀಯಮೇತಿ ತಂತುಂ ತನ್ವನ್ರಜಸೋ ಭಾನುಮನ್ವಿಹಿ** ಎಂಬ ಸೂತ್ರದಿಂದ (ಆ. ೧ ೧೧) ವಿವೃತವಾಗಿರುವುದು. ಅಗ್ನಿಹೋತ್ರಹೋಮದಲ್ಲಿಯೂ ಈ ಋಕ್ಕನ್ನು ಪಠಿಸುತ್ತಾ ಉದಕಧಾರೆಯಿಂದ ಸಿಂಪಡಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ- **ಗಾರ್ಹಪತ್ಯಾದವಿಚ್ಛಿನ್ನಾಮುದಕಧಾರಾಂ ಹರೇತ್ತಂತುಂ ತನ್ವನ್ರಜಸೋ ಭಾನುಮನ್ವಿಹಿ** ಎಂಬ ಸೂತ್ರದಿಂದ (ಆ. ೨-೨) ವಿವೃತವಾಗಿರುವುದು. ಗಾರ್ಹಪತ್ಯ ಮತ್ತು ಆಹವನೀಯಾಗ್ನಿಗಳ ಮಧ್ಯದಲ್ಲಿ ನಾಯಿಯು ಪ್ರವೇಶಿಸಿದರೆ ಆಗ ಆ ಅಗ್ನಿಗಳ ಮಧ್ಯದಲ್ಲಿ ಉದಕದಿಂದಲೂ ಭಸ್ಮ (ಬೂದಿ) ಯಿಂದಲೂ ಆ ಪ್ರದೇಶವನ್ನು ಶುದ್ಧಿಗೊಳಿಸುವಾಗ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಗಾರ್ಹಪತ್ಯಾಹವನೀಯಯೋರಂತರಂ ಭಸ್ಮರಾಜ್ಯೋದಕರಾಜ್ಯಾ ಚ ಸಂತನುಯಾತ್** ಎಂಬ ಸೂತ್ರದಿಂದ (ಆ. ೩-೧೦) ವಿವೃತವಾಗಿರುವುದು. ಆಗ್ನಿಮಾರುತಶಸ್ತ್ರಮಂತ್ರಗಳಲ್ಲಿ ಈ ಋಕ್ಕನ್ನು ಧಾಯ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ತಂತುಂ ತನ್ವನ್ರಜಸೋ ಭಾನುಮನ್ವಿಹ್ಯೇವಾ ನ ಇಂದ್ರೋ ಮಘವಾ ವಿರಪ್ಶೀ** ಎಂಬ ಸೂತ್ರದಿಂದ (ಆ. ೫-೨೦) ವಿವೃತವಾಗಿರುವುದು.

ಸಂಹಿತಾಪಾಠಃ

ಅಕ್ಷಾನಹೋ ನಹ್ಯತನೋತ ಸೋಮ್ಯಾ ಇಷ್ಕೃಣುಧ್ವಂ ರಶನಾ ಓತ ಪಿಂಶತ।
ಅಷ್ಟಾವಂಧುರಂ ವಹತಾಭಿತೋ ರಥಂ ಯೇನ ದೇವಾಸೋ ಅನಯನ್ನಭಿಪ್ರಿಯಂ । ೭ ॥

ಪದಪಾಠಃ

ಅಕ್ಷSನಹಃ । ನಹ್ಯತನ । ಉತ । ಸೋಮ್ಯಾಃ । ಇಷ್ಕೃಣುಧ್ವಂ । ರಶನಾಃ। ಆ । ಉತ । ಪಿಂಶತ ।

ಅಷ್ಟಾಽವಂಧುರಂ । ವಹತ । ಅಭಿತಃ । ರಥಂ । ಯೇನ । ದೇವಾಸಃ । ಅನಯನ್ । ಅಭಿ । ಪ್ರಿಯಂ ॥

ಸಾಯಣಭಾಷ್ಯಂ

ಅತ್ರ ಯಜ್ಞಜಿಗಮಿಷವೋ ದೇವಾಃ ಪರಸ್ಪರಂ ಬ್ರುವತೇ । ಹೇ ಸೋಮ್ಯಾಃ ಸೋಮಾರ್ಹಾ ದೇವಾಃ ಯೂಯಮಕ್ಷಾನಹೋಽಕ್ಷೇಷು ನಹ್ಯಾನ್ ಬಂಧನೀಯಾನಶ್ವಾನ್ನಹ್ಯತನ । ನಹ್ಯತ । ಬಧ್ನೀತ ರಥೇ । ಉತಾಪಿ ಚ ರಶನಾ ಅಶ್ವಬಂಧನಪ್ರಗ್ರಹಾನಿಷ್ಕೃಣುಧ್ವಂ । ನಿಷ್ಕುರುತ । ಸಮ್ಯಕ್ ಸಂಸ್ಕುರುತ ॥ ನಕಾರಲೋಪಶ್ಛಾಂದಸಃ ॥ ಉತಾಪಿ ಚಾಪಿಂಶತ ॥ ಪಿಶ ಅವಯವೇ ॥ ಅಶ್ವಾನಲಂಕುರುತೇತ್ಯರ್ಥಃ । ಅಷ್ಟಾವಂಧುರಂ । ವಂಧುರಂ ಸಾರಥಿನಿವಾಸಸ್ಥಾನಂ । ಅಷ್ಟಸಂಖ್ಯಾಕವಂಧುರೋಪೇತಂ ರಥಂ ಸೂರ್ಯ-ಸಂಬಂಧಿನಮಭಿತಃ ಸರ್ವತೋ ವಹತ । ಸೂರ್ಯರಥೇನ ಸಾಕಂ ಯುಷ್ಮದೀಯಾನ್ರಥಾನ್ಯಜ್ಞಂ ಪ್ರತಿ ಗಮಯತೇತ್ಯರ್ಥಃ । ಯೇನ ದೇವಾಸೋ ದೇವಾಃ ಪ್ರಿಯಮಸ್ಮಾನನಯನ್ ಅಭಿಗಮಯಂತಿ ತಂ ರಥಮಭಿತೋ ವಹತೇತಿ ಸಂಬಂಧಃ । ಯದ್ವಾ ।ತಂ ಯಜ್ಞಂ ಪ್ರತಿ ವಹತೇತಿ ಯೋಜ್ಯಂ ॥

ಪ್ರತಿಪದಾರ್ಥ

**ಸೋಮ್ಯಾಃ**—ಸೋಮಭಕ್ಷಕರಾದ ಎಲೈ ದೇವತೆಗಳೇ । **ಅಕ್ಷಾನಹಃ**—ನೊಗಗಳಿಗೆ ಕಟ್ಟತಕ್ಕ ಅಶ್ವಗಳನ್ನು । **ನಹ್ಯತನ**—ರಥಕ್ಕೆ ಸೇರಿಸಿ ಕಟ್ಟಿರಿ । **ರಶನಾಃ**—ಕಡಿವಾಣಗಳನ್ನು । **ಇಷ್ಕೃಣುಧ್ವಂ**—ಸಂಸ್ಕರಿಸಿರಿ । **ಆ ಪಿಂಶತ**—ಅಶ್ವಗಳನ್ನು ಅಲಂಕರಿಸಿರಿ । **ಯೇನ**—ಯಾವ ರಥದಿಂದ । **ದೇವಾಸಃ**—ದೇವತೆಗಳು । **ಪ್ರಿಯಂ**—ನಮಗೆ ಪ್ರೀತಿಪಾತ್ರವಾದ ಸಂಪತ್ತನ್ನು । **ಅಭ್ಯನಯನ್**—ನಮಗೆ ತರುವರೋ ಅಂತಹುದೂ । **ಅಷ್ಟಾವಂಧುರಂ**—ಎಂಟು ಆಸನಗಳುಳ್ಳವೂ್ದ ಆದ । **ರಥಂ**—ರಥವನ್ನು ಹತ್ತಿ । **ಅಭಿತಃ**—ಸುತ್ತಲೂ ಸೇರಿ । **ವಹತ**—ಯಜ್ಞಕ್ಕೆ ಬರಮಾಡಿರಿ.

ಭಾವಾರ್ಥ

ಸೋಮಭಕ್ಷಕರಾದ ಎಲೈ ದೇವತೆಗಳೇ, ನೊಗಗಳಿಗೆ ಕಟ್ಟತಕ್ಕ ಅಶ್ವಗಳನ್ನು ರಥಕ್ಕೆ ಸೇರಿಸಿ ಕಟ್ಟಿರಿ. ಕಡಿವಾಣಗಳನ್ನು ಸಂಸ್ಕರಿಸಿ. ಅಶ್ವಗಳನ್ನು ಅಲಂಕರಿಸಿರಿ. ಯಾವ ರಥದಿಂದ ದೇವತೆಗಳು ನಮಗೆ ಪ್ರೀತಿಪಾತ್ರವಾದ ಸಂಪತ್ತನ್ನು ನಮಗಭಿಮುಖವಾಗಿ ತರುವರೋ ಅಂತಹುದೂ, ಎಂಟು ಆಸನಗಳುಳ್ಳದ್ದೂ ಆದ ರಥವನ್ನು ಹತ್ತಿ ಕುಳಿತು ಸುತ್ತಲೂ ಸೇರಿ (ನಾನಾ ದಿಕ್ಕುಗಳಿಂದ) ಯಜ್ಞಕ್ಕೆ ಬರಮಾಡಿರಿ.

## English Translation

(The gods to one another :) Drinkers of the soma, bind (the horses) that are to be fastened to the pole; prepare reins ; caparison (the steeds); accompany everywhere (in your cars) the chariot which has eight seats with which the gods bring us acceptable (wealth).

ಸಂಹಿತಾಪಾಠಃ

ಅಶ್ಮನ್ವತೀ ರೀಯತೇ ಸಂ ರಭಧ್ವಮುತ್ತಿಷ್ಠತ ಪ್ರ ತರತಾ ಸಖಾಯಃ ।

**ಅತ್ರಾ ಜಹಾಮ ಯೇ ಅಸನ್ನಶೇವಾಃ ಶಿವಾನ್ವಯಮುತ್ತರೇಮಾಭಿ ವಾಜಾನ್ ॥ ೮ ॥**

ಪದಪಾಠಃ

ಅಶ್ಮನ್ಽವತೀ । ರೀಯತೇ । ಸಂ । ರಭಧ್ವಂ । ಉತ್ । ತಿಷ್ಠತ । ಪ್ರ । ತರತ । ಸಖಾಯಃ ।
ಅತ್ರ । ಜಹಾಮ । ಯೇ । ಅಸನ್ । ಅಶೇವಾಃ । ಶಿವಾನ್ । ವಯಂ । ಉತ್ । ತರೇಮ । ಅಭಿ ।
ವಾಜಾನ್ ॥ ೮ ॥

ಸಾಯಣಭಾಷ್ಯಂ

ವೈವಾಹಿಕೇ ಪ್ರಯಾಣೇ ಯದಿ ನಾವಾ ತಾರ್ಯಾ ನದೀ ಸ್ಯಾತ್ ತದಾನೀಮಶ್ಮನ್ವತೀತ್ಯರ್ಧರ್ಚೇನ ವಧೂಂ ನಾವಮಾರೋಹಯೇತ್ ಉತ್ತರೇಣಾರ್ಧರ್ಚೇನ ನದೀಮುತ್ಕ್ರಮಯೇತ್। ಸೂತ್ರಿತಂ ಚ । ಅಶ್ಮನ್ವತೀ ರೀಯತೇ ಸಂ ರಭಧ್ವಮಿತ್ಯರ್ಧರ್ಚೇನ ನಾವಮಾರೋಹಯೇದುತ್ತರೇಣೋತ್ಕ್ರಮಯೇತ್ । ಆ. ಗೃ. ೧-೮-೨, ೩ । ಇತಿ ॥

ಅನಯಾಪಿ ದೇವಾ ಯಜ್ಞಜಿಗಮಿಷವಃ ಪರಸ್ಪರಂ ಬ್ರುವತೇ। ಅಶ್ಮನ್ವತೀ ನಾಮ ನದೀ ರೀಯತೇ । ಗಚ್ಛತಿ ॥ ರೀ ಗತಿರೇಷಣಯೋಃ ॥ ತಾಂ ಯಜ್ಞಗಮನಾಯೋತ್ತರೀತುಮುತ್ತಿಷ್ಠತ। ಉದ್ಗಚ್ಛತ । ತಥಾ ಕೃತ್ವಾ ಪ್ರತರತ । ತಾಂ ನದೀಮುಲ್ಲಂಘಯತ । ಹೇ ಸಖಾಯೋ ಯಜಮಾನಸ್ಯ ಸಖಿಭೂತಾ ಇತಿ ದೇವಾನಾಂ ಸಂಬೋಧನಂ। ಅತ್ರಾಸ್ಯಾಂ ನದ್ಯಾಂ ಜಹಾಮ । ಪರಿತ್ಯಜಾಮ । ಕಾನಿತಿ ಉಚ್ಯತೇ । ಯೇಽಶೇವಾಃ। ಶೇವಮಿತಿ ಸುಖನಾಮ । ಯೇಽಸುಖಭೂತಾ ಅಸನ್ ಅಭವನ್ ಅಸ್ಮಾನಾಶ್ರಿತ್ಯ ವರ್ತಂತೇ ತಾಞ್ಜಹಾಮ । ತಥಾ ಕೃತ್ವಾ ಶಿವಾನ್ ಸುಖಕರಾಣಿ ವಾಜಾನನ್ನಾನಿ ಹವೀಂಷ್ಯಭಿಪ್ರಾಪ್ತುಮುತ್ತರೇಮ ॥

ಪ್ರತಿಪದಾರ್ಥ

(ಎಲೈ ದೇವತೆಗಳೇ) **ಉತ್ತಿಷ್ಠತ**—ಏಳಿರಿ । **ಅಶ್ಮನ್ವತೀ**—ಅಶ್ಮನ್ವತಿಯೆಂಬ ನದಿಯು । **ರೀಯತೇ**—ಇಲ್ಲಿ ಪ್ರವಹಿಸುತ್ತದೆ । **ಸಂ ರಭಧ್ವಂ**—ಯಜ್ಞಕ್ಕೆ ಹೋಗಲು ಸಿದ್ಧಮಾಡಿಕೊಳ್ಳಿರಿ । **ಪ್ರ ತರತ**—ಈ ನದಿಯನ್ನು ದಾಟಿರಿ । **ಸಖಾಯಃ**—ಎಲೈ ಮಿತ್ರರೇ । **ಯೇ**—ಯಾವ ಯಾವ ವಸ್ತುಗಳು । **ಅಶೇವಾಃ ಅಸನ್**—ನಮಗೆ ದುಃಖಕಾರಕಗಳೋ ಅವನ್ನು । **ಅತ್ರ**—ಈ ನದಿಯಲ್ಲಿ । **ಜಹಾಮ**—ಬಿಟ್ಟುಬಿಡೋಣ । **ಶಿವಾನ್**—ಮಂಗಳಕರಗಳಾದ । **ವಾಜಾನ್**—ಅನ್ನಗಳನ್ನು । **ಅಭಿ**—ಹೊಂದಲು । **ವಯಂ**—ನಾವು । **ಉತ್ತರೇಮ**—ನದಿಯನ್ನು ದಾಟೋಣ.

ಭಾವಾರ್ಥ

ಎಲೈ ದೇವತೆಗಳೇ, ಏಳಿರಿ, ಅಶ್ಮನ್ವತಿಯೆಂಬ ನದಿಯು ಇಲ್ಲಿ ಪ್ರವಹಿಸುತ್ತದೆ. ಯಜ್ಞಕ್ಕೆ ಹೋಗಲು ಸಿದ್ಧಮಾಡಿಕೊಳ್ಳಿರಿ. ಈ ನದಿಯನ್ನು ದಾಟಿರಿ. ಎಲೈ ಮಿತ್ರರೇ, ನಮಗೆ ದುಃಖಕಾರಕವಾದ ವಸ್ತುಗಳನ್ನೆಲ್ಲ ಇಲ್ಲಿ ಬಿಟ್ಟುಬಿಡೋಣ. ನಾವು ಮಂಗಳಕಾರಕಗಳಾದ ಅನ್ನಗಳನ್ನು ಹೊಂದಲು ಈ ನದಿಯನ್ನು ದಾಟೋಣ.

## English Translation

The Ashmanvati flows along : be alert ; rise up, cross over, my friends ; here let us leave those who are unhappy, so that we may cross over to auspicious sacrificial viands.

### ವಿಶೇಷವಿಷಯಗಳು

ವಿವಾಹಾರ್ಥವಾಗಿ ಪ್ರಯಾಣಮಾಡುತ್ತಿರುವಾಗ ದಾರಿಯಲ್ಲಿ ಸಿಕ್ಕುವ ನದಿಯನ್ನು ದೋಣಿಯ ಮೂಲಕ ದಾಟಬೇಕಾದ ಸಂದರ್ಭದಲ್ಲಿ ಈ ಋಕ್ಕಿನ ಪೂರ್ವಾರ್ಧದಿಂದ ವಧುವನ್ನು ನಾವೆಯಮೇಲೆ ಹತ್ತಿಸಿ ಉತ್ತರಾರ್ಧದಿಂದ ನದಿಯನ್ನು ದಾಟಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ಅಶ್ಮನ್ವತೀರೀಯತೇ ಸಂರಭಧ್ವಮಿತ್ಯರ್ಧರ್ಚೇನ ನಾವಮಾರೋಹಯೇದುತ್ತರೇಣೋತ್ಕ್ರಮಯೇತ್** ಎಂಬ ಸೂತ್ರದಿಂದ (ಆ. ಗೃ. ೧-೮-೩, ೩) ವಿವೃತವಾಗಿರುವುದು.

### ಸಂಹಿತಾಪಾಠಃ

**ತ್ವಷ್ಟಾ ಮಾಯಾ ವೇದಪಸಾಮಪಸ್ತಮೋ ಬಿಭ್ರತ್ಪಾತ್ರಾ ದೇವಪಾನಾನಿ ಶಂತಮಾ ।**
**ಶಿಶೀತೇ ನೂನಂ ಪರಶುಂ ಸ್ವಾಯಸಂ ಯೇನ ವೃಶ್ಚಾದೇತಶೋ ಬ್ರಹ್ಮಣಸ್ಪತಿಃ ॥ ೯ ॥**

### ಪದಪಾಠಃ

**ತ್ವಷ್ಟಾ । ಮಾಯಾಃ । ವೇತ್ । ಅಪಸಾಂ । ಅಪಃಽತಮಃ । ಬಿಭ್ರತ್ । ಪಾತ್ರಾ । ದೇವಽಪಾನಾನಿ । ಶಂಽತಮಾ ।**
**ಶಿಶೀತೇ । ನೂನಂ । ಪರಶುಂ । ಸುಽಆಯಸಂ । ಯೇನ । ವೃಶ್ಚಾತ್ । ಏತಶಃ । ಬ್ರಹ್ಮಣಃ । ಪತಿಃ ॥**

### ಸಾಯಣಭಾಷ್ಯಂ

**ಅಯಂ ತ್ವಷ್ಟಾ ದೇವಶಿಲ್ಪೀ ಮಾಯಾಃ । ಕರ್ಮನಾಮೈತತ್ । ಕರ್ಮಾಣಿ ಪಾತ್ರನಿರ್ಮಾಣವಿಷಯಾಣಿ ವೇತ್ । ವೇತ್ತಿ । ಜಾನಾತಿ । ಸ ಚ ತ್ವಷ್ಟಾಪಸಾಂ ಶೋಭನಕರ್ಮವತಾಂ ಮಧ್ಯೇಽಪಸ್ತಮೋಽತಿಶಯೇನ ಶೋಭನಕರ್ಮಾ ದೇವಪಾನಾನಿ । ದೇವಾಃ ಪಿಬಂತಿ ಯೇಷು ತಾನಿ ಪಾತ್ರಾ ಸೋಮಪಾತ್ರಾಣಿ ಬಿಭ್ರದ್ಧಾರಯನ್ವರ್ತತ ಇತಿ ಶೇಷಃ । ಸ ಚ ತ್ವಷ್ಟಾ ನೂನಮಿದಾನೀಮಾಗ್ನಾ ಹವಿರ್ವಹನಾಯಾಂಗೀಕೃತೇ ಸತಿ ಸ್ವಾಯಸಂ ಶೋಭನಾಯಃಸಾರಭೂತಂ ಪರಶುಂ ಶಿಶೀತೇ । ತೀಕ್ಷ್ಣಯತಿ । ತ್ವಷ್ಟಾ ಪಾತ್ರಸಂಪಾದನಾರ್ಥಂ ಯೇನ ಪರಶುನೈತಶ ಏತಶವರ್ಣೋ ಬ್ರಹ್ಮಣಸ್ಪತಿರ್ಬ್ರಹ್ಮಣೋ ಮಂತ್ರಸ್ಯ ಪಾತಾ ಪಾತ್ರಾದಿಸಂಪಾದನರೂಪಸ್ಯ ಕರ್ಮಣಃ ಸ್ವಾಮೀ ವಾ ವೃಶ್ಚಾತ್ ವೃಶ್ಚತಿ ॥**

ಪ್ರತಿಪದಾರ್ಥ

**ತ್ವಷ್ಟಾ**—ದೇವಶಿಲ್ಪಿಯಾದ ತ್ವಷ್ಟೃವು | **ಮಾಯಾಃ**—ಪಾತ್ರನಿರ್ಮಾಣವಿಧಾನಗಳನ್ನು | **ವೇತ್**—ತಿಳಿದಿದ್ದಾನೆ | **ಅಪಸಾಂ**—ಕರ್ಮಗಳಲ್ಲಿ | **ಅಪಸ್ತಮಃ**—ಉತ್ತಮವಾದ ಕರ್ಮಕರ್ತನಾದ ತ್ವಷ್ಟೃವು | **ದೇವಪಾನಾನಿ**—ದೇವತೆಗಳು ಪಾನಮಾದಲು ಯೋಗ್ಯವಾದವೂ | **ಶಂತಮಾ**—ಮಂಗಳಕರವೂ ಆದ | **ಪಾತ್ರಾ**—ಸೋಮಪಾನಪಾತ್ರೆಗಳನ್ನು | **ಬಿಭ್ರತ್**—ಹೊಂದಿದ್ದಾನೆ | **ನೂನಂ**—ಈಗ | **ಯೇನ**—ಯಾವುದರಿಂದ | **ಏತಶಃ**—ಶುಭ್ರವರ್ಣವುಳ್ಳ | **ಬ್ರಹ್ಮಣಸ್ಪತಿಃ**—ಬ್ರಹ್ಮಣಸ್ಪತಿಯು | **ವೃಶ್ಚಾತ್**—ಆ ಪಾತ್ರೆಗಳನ್ನು ಕಡಿಯುವನೋ ಅಂತಹ | **ಸ್ವಾಯಸಂ**—ಉಕ್ಕಿನಿಂದ ನಿರ್ಮಿತವಾದ | **ಪರಶುಂ**—ತನ್ನ ಕೊಡಲಿಯನ್ನು | **ಶಿಶೀತೇ**—ತೀಕ್ಷ್ಣಮಾಡಿಕೊಳ್ಳುತ್ತಾನೆ.

ಭಾವಾರ್ಥ

ದೇವಶಿಲ್ಪಿಯಾದ ತ್ವಷ್ಟೃವು ಪಾತ್ರನಿರ್ಮಾಣವಿಧಾನಗಳನ್ನು ತಿಳಿದ್ದಾನೆ. ಕರ್ಮಗಳಲ್ಲಿ ಉತ್ತಮವಾದ ಕರ್ಮಕರ್ತನಾದ ತ್ವಷ್ಟೃವು ದೇವತೆಗಳು ಪಾನಮಾಡಲು ಯೋಗ್ಯವಾದವೂ, ಮಂಗಳಕರವೂ ಆದ ಸೋಮಪಾನಪಾತ್ರೆಗಳನ್ನು ಹೊಂದಿದ್ದಾನೆ. ಶುಭ್ರ ವರ್ಣವುಳ್ಳ ಬೃಹಸ್ಪತಿಯು ಹವಿರ್ವಹನಾರ್ಥವಾಗಿ ಯಾವ ಪಾತ್ರೆಗಳನ್ನು ಉಪಯೋಗಿಸುವನೋ ಆ ಪಾತ್ರೆಗಳನ್ನು ನಿರ್ಮಿಸಲು ತಷ್ಟೃವು ತನ್ನ ಕೊಡಲಿಯನ್ನು ಹರಿತವನ್ನಾಗಿ ಮಾಡಿಕೊಳ್ಳುತ್ತಾನೆ.

English Translatin

Twashtri knows the arts of fabricating (drinking vessels), the most skilful of artificers bearing the sacred drinking cups out of which the gods drink—verily he sharpens his axe of good iron, wherewith the white complexioned Brahmanaspati cuts them.

ಸಂಹಿತಾಪಾಠಃ

**ಸತೋ ನೂನಂ ಕವಯಃ ಸಂ ಶಿಶೀತ ವಾಶೀಭಿರ್ಯಾಭಿರಮೃತಾಯ ತಕ್ಷಥ।**
**ವಿದ್ವಾಂಸಃ ಪದಾ ಗುಹ್ಯಾನಿ ಕರ್ತನ ಯೇನ ದೇವಾಸೋ ಅಮೃತತ್ವಮಾನಶುಃ ॥ ೧೦ ॥**

ಪದಪಾಠಃ

**ಸತಃ । ನೂನಂ । ಕವಯಃ । ಸಂ । ಶಿಶೀತ । ವಾಶೀಭಿಃ । ಯಾಭಿಃ । ಅಮೃತಾಯ । ತಕ್ಷಥ ।**
**ವಿದ್ವಾಸಃ । ಪದಾ । ಗುಹ್ಯಾನಿ । ಕರ್ತನ । ಯೇನ । ದೇವಾಸಃ । ಅಮೃತ್ಕತ್ವಂ । ಆನಶುಃ ॥ ೧೦ ॥**

ಸಾಯಣಭಾಷ್ಯಂ

**ಹೇ ಕವಯೋ ಮೇಧಾವಿನಸ್ತ್ವಷ್ಟುರ್ಮಮ ಶಿಷ್ಯಾ ಋಭವಃ ಸತಃ । ಸಂತ ಇತ್ಯರ್ಥಃ । ಪ್ರಶಸ್ತಾಃ ಯೂಯಂ ನೂನಮಿದಾನೀಂ ಸಂ ಶಿಶೀತ। ಅತ್ಯರ್ಥಂ ತೀಕ್ಷ್ಣೀಕುರುತ ವಾಶೀಃ। ಯಾಭಿರ್ವಾ-**

ಶೀಭಿಃ ಪಾತ್ರಾಣ್ಯಮೃತಾಯ ಸೋಮಾಯ । ತೆತ್ಪಾನಾಯೇತ್ಯರ್ಥಃ । ಯದ್ವಾ । ಯುಷ್ಮಾಕಮಮೃತತ್ವಾಯ ತದರ್ಥಂ ತಕ್ಷತ । ಸಂಪಾದಯಥ । ಹೇ ಕವಯೋ ವಿದ್ವಾಂಸಃ ಯೂಯಂ ಗುಹ್ಯಾನಿ ಗೋಪನೀಯಾನಿ ಪದಾ ಪದಾನಿ ನಿವಾಸಸ್ಥಾನಾನಿ ಕರ್ತನ । ಕುರುತ। ಯೇನ ಸ್ಥಾನಕರಣೇನ ದೇವಾಸೋ ದೇವಾಃ ಯೂಯಮಮೃತತ್ವಮಾನಶುಃ ಪ್ರಾಪ್ತಾ ಯೂಯಂ । ಏವಂ ಸ್ವಶಿಷ್ಯಾನಾಹ ॥

ಪ್ರತಿಪದಾರ್ಥ

**ಕವಯಃ**—ಮೇಧಾವಿಗಳಾದ ಎಲೈ ಋಭುಗಳೇ । **ಸತಃ**—ಸತ್ಪುರುಷರಾದ ನೀವು । **ಯಾಭಿಃ ವಾಶೀಭಿಃ**—ಯಾವ ಪಾತ್ರೆಗಳನ್ನು । **ಅಮೃತಾಯ**—ಅಮೃತಪಾನಕ್ಕಾಗಿ । **ತಕ್ಷಥ**—ಸಂಪಾದಿಸುವಿರೋ ಆ ಪಾತ್ರೆಗಳನ್ನು । **ನೂನಂ**—ಈಗ । **ಸಂ ಶಿಶೀತ**—ಸಂಸ್ಕರಿಸಿರಿ । **ಯೇನ**—ಯಾವ ನಿರ್ಮಾಣಕ್ರಿಯೆಯಿಂದ । **ದೇವಾಸಃ**—ಪೂಜ್ಯರಾದ ನೀವು । **ಅಮೃತತ್ವಂ**—ಮರಣರಾಹಿತ್ಯವನ್ನು । **ಆನಶುಃ**—ಹೊಂದಿದಿರೋ ಅಂತಹ । **ಗುಹ್ಯಾನಿ**—ರಹಸ್ಯಾತ್ಮಕವಾದ । **ಪದಾ**—ನಿವಾಸಸ್ಥಾನಗಳನ್ನು । **ವಿದ್ವಾಂಸಃ**—ಪ್ರಾಜ್ಞರಾದ ನೀವು । **ಕರ್ತನ**—ನಿರ್ಮಿಸಿರಿ.

ಪದಪಾಠಃ

ಮೇಧಾವಿಗಳಾದ ಎಲೈ ಋಭುಗಳೇ, ಸತ್ಪುರುಷರಾದ ನೀವು ಯಾವ ಪಾತ್ರೆಗಳನ್ನು ಅಮೃತಪಾನಕ್ಕಾಗಿ ಸಂಪಾದಿಸುವಿರೋ ಆ ಪಾತ್ರೆಗಳನ್ನು ಈಗ ಸಂಸ್ಕರಿಸಿರಿ. ಯಾವ ನಿರ್ಮಾಣಕ್ರಿಯೆಂದ ಪೂಜ್ಯರಾದ ನೀವು ಮರಣ ರಾಹಿತ್ಯವನ್ನು ಹೊಂದಿದಿರೋ ಆ ರಹಸ್ಯಾತ್ಮಕವಾದ ನಿವಾಸಸ್ಥಾನಗಳನ್ನು ಪ್ರಾಜ್ಞರಾದ ನೀವು ನಿರ್ಮಿಸಿ.

## English Translalion

Verily being sages, (Ribhus) sharpen the instruments with which you fabricate the cups for the nectar. Do you, who are wise, prepare the mysterious paths whereby gods have attained to immortality.

ಸಂಹಿತಾಪಾಠಃ

ಗರ್ಭೇ ಯೋಷಾಮದಧುರ್ವತ್ಸಮಾಸನ್ಯಪೀಚ್ಯೇನ ಮನಸೋತ ಜಿಹ್ವಯಾ ।
ಸ ವಿಶ್ವಾಹಾ ಸುಮನಾ ಯೋಗ್ಯಾ ಅಭಿ ಸಿಷಾಸನಿರ್ವನತೇ ಕಾರ ಇಜ್ಜಿತಿಂ ॥

ಪದಪಾಠಃ

ಗರ್ಭೇ । ಯೋಷಾಂ । ಅದಧುಃ । ವತ್ಸಂ । ಆಸನಿ । ಅಪೀಚ್ಯೇನ । ಮನಸಾ । ಉತ । ಜಿಹ್ವಯಾ ।
ಸಃ । ವಿಶ್ವಾಹಾ । ಸುಽಮನಾಃ । ಯೋಗ್ಯಾಃ । ಅಭಿ । ಸಿಸಾಸನಿಃ । ವನತೇ । ಕಾರಃ । ಇತ್ । ಜಿತಿಂ ॥

ಸಾಯಣಭಾಷ್ಯಂ

**ತೇ ಮರುತೋ ಗರ್ಭೇ ಮೃತಾಯಾ ಗೋರ್ಮಧ್ಯೇ ಗ್ರಾಹಕೇ ಚರ್ಮಣಿ ಮೃತಾಯಾ ಗೋಃ ಸಂಬಂಧಿನಿ ಯೋಷಾಂ ಕಾಂಚಿದ್ಗಾಮುದಧುಃ । ಧಾರಿತವಂತಃ । ನಿಶ್ಚರ್ಮಣೋ ಗಾಮರಿಣೀತ ಧೀತಿಭಿಃ। ಋ. ೧-೧೬೧-೭ । ಇತ್ಯುಕ್ತಂ । ತಥಾಸನಿ ಮೃತಾಯಾ ಅಸ್ಯೇ ವತ್ಸಮುದಧುಃ । ಕೇನ ಸಾಧನೇನ । ಅಪೀಚ್ಯೇನ ಮನಸಾ ದೇವತ್ವಮಾಕಾಂಕ್ಷತೋತಾಪಿ ಚ ಜಿಹ್ವಯಾ । ಸಾದೃಶ್ಯಪ್ರಧಾನೋऽಯಂ ನಿರ್ದೇಶಃ । ಜಿಹ್ವಾವದಾಯತಯಾ ವಾಶ್ಯೇತ್ಯರ್ಥಃ । ಯದ್ವಾ ಜಿಹ್ವಯಾ ಯುಕ್ತಾಂ ಯೋಷಾಮಿತಿ ಸಂಬಂಧಃ । ಸಿಷಾಸನಿಃ ಸಂಭಜನಶೀಲಃ ಸ ಋಭುಸಂಘೋ ವಿಶ್ವಾಹಾ ಸರ್ವೇಷ್ವಹಃಸು ಸರ್ವದಾ ಯೋಗ್ಯಾಃ ಸ್ತೋಚಿತಾಃ ಸುಮನಾಃ ಸ್ತುತೀರಭಿವನತೇ । ಸ ಚ ಸಂಘೋ ಜಿತಿಂ ಶತ್ರುಜಯಂ ಕಾಮಂ ಕಾರ ಇತ್ ಕರ್ತೈವ । ಶತ್ರುಜಯಕರ್ತೈವ ॥**

ಪ್ರತಿಪದಾರ್ಥ

**ಅಪೀಚ್ಯೇನ ಮನಸಾ**-ದೇವತ್ವವನ್ನು ಹೊಂದುವ ಇಚ್ಛೆಯುಳ್ಳ ಮನಸ್ಸಿನಿಂದ ಕೂಡಿದ । (**ಮರುತಃ**-ಮರುತ್ತುಗಳು) । **ಗರ್ಭೇ**—ಮೃತವಾದ ಗೋವಿನ ಮಧ್ಯಭಾಗದಲ್ಲಿ । **ಜಿಹ್ವಯಾ**—ಉತ್ತಮವಾದ ನಾಲಿಗೆಯಿಂದ ಕೂಡಿದ । **ಯೋಷಾಂ**—ಬೇರೊಂದು ಗೋವನ್ನು । **ಅದಧುಃ**—ಇಟ್ಟರು । **ಅಸನಿ**—ಅದರ ಮುಖದಲ್ಲಿ । **ವತ್ಸಂ**—ಒಂದು ಕರುವನ್ನು ಇಟ್ಟರು । **ಸಿಷಾಸನಿಃ**—ಔದಾರ್ಯದಿಂದ ಕೂಡಿದ । **ಸಃ**—ಆ ಋಭುಗಳ ಸಂಘವು । **ವಿಶ್ವಾಹಾ**—ಸಕಲದಿನಗಳಲ್ಲಿಯೂ । **ಯೋಗ್ಯಾಃ**—ದೇವತೆಗಳಿಗೆ ಅರ್ಪಿಸಲು ಯೋಗ್ಯವಾದ । **ಸುಮನಾಃ**—ಉತ್ತಮವಾದ ಸ್ತುತಿಗಳನ್ನು । **ಅಭಿ ವನತೇ**—ಅರ್ಪಿಸುತ್ತದೆ । **ಜಿತಿಂ**—ಶತ್ರುಜಯವನ್ನು । **ಕಾರ ಇತ್**—ಹೊಂದಿಯೇ ತೀರುತ್ತದೆ.

ಭಾವಾರ್ಥ

ದೇವತ್ವವನ್ನು ಹೊಂದಲು ಇಚ್ಛೆಯುಳ್ಳ ಮನಸ್ಸಿನಿಂದ ಕೂಡಿದ ಮರುತ್ತುಗಳು ಮೃತವಾದ ಗೋವಿನ ಮಧ್ಯಭಾಗದಲ್ಲಿ ಉತ್ತಮವಾದ ನಾಲಿಗೆಯಿಂದ ಕೂಡಿದ ಬೇರೊಂದು ಗೋವನ್ನು ಇಟ್ಟರು. ಅದರ ಮುಖದಲ್ಲಿ ಒಂದು ಕರುವನ್ನು ಇಟ್ಟರು. ಔದಾರ್ಯದಿಂದ ಕೂಡಿದ ಆ ಋಭುಗಳ ಸಂಘವು ಸಕಲದಿನಗಳಲ್ಲಿಯೂ ದೇವತೆಗಳಿಗೆ ಅರ್ಪಿಸಲು ಯೋಗ್ಯವಾದ ಉತ್ತಮವಾದ ಸ್ತುತಿಗಳನ್ನು ಅರ್ಪಿಸುತ್ತದೆ. ಶತ್ರುಜಯವನ್ನು ಹೊಂದಿಯೇ ತೀರುತ್ತದೆ.

English Translation

(The Maruts) placed a female in the enveloping hide (of a dead cow) and a calf in the mouth (of a dead cow), with mind and tongue, aiming (at deification) ; daily the generous (fraternity of the Ribhus) offers suitable praises (to the gods), granting victory over our foes.

## ಐವತ್ತನಾಲ್ಕನೆಯ ಸೂಕ್ತ

ಸಾಯಣಭಾಷ್ಯಂ

**ತಾಂ ಸು ತೆ ಇತಿ ಷಡೃಚಂ ದ್ವಾದಶಂ ಸೂಕ್ತಂ ವಾಮದೇವಗೋತ್ರಸ್ಯ ಬೃಹದುಕ್ಥಸ್ಯಾರ್ಷಂ ತ್ರೈಷ್ಟುಭಮೈಂದ್ರಂ । ತಥಾ ಚಾನುಕ್ರಾಂತಂ । ತಾಂ ಸು ಷಡ್ ಬೃಹದುಕ್ಥೋ ವಾಮದೇವ್ಯ ಇತಿ ॥**

**ಸಮೂಢಸ್ಯ ದಶರಾತ್ರಸ್ಯ ದ್ವಿತೀಯೇ ಛಂದೋಮ ಏತತ್ಸೂಕ್ತಂ । ಸೂತ್ರಿತಂ ಚ । ಅಪೂರ್ವ್ಯಾ ಪುರುತಮಾನಿ ತಾಂ ಸು ತೇ ಕೀರ್ತಿಂ ಮಹಾ ಇಂದ್ರ । ಆ. ೮-೭ । ಇತಿ ॥ ಮಹಾವ್ರತೇ ನಿಷ್ಕೇವಲ್ಯ ಏತತ್ಸೂಕ್ತಂ । ಸೂತ್ರಿತಂ ಚ । ತಾಂ ಸು ತೇ ಕೀರ್ತಿಂ ಮಘವನ್ಮಹಿತ್ವಾ ಭೂಯ ಇದ್ವಾವೃಧೇ ವೀರ್ಯಾಯ। ಐ. ಆ. ೫-೧-೬ । ಇತಿ ॥**

ಅನುವಾದವು—**ತಾಂ ಸು ತೇ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವಗೋತ್ರದ ಬೃಹದುಕ್ಥನೆಂಬುವನು ಋಷಿಯು, ಇಂದ್ರನು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ತಾಂ ಸು ಷಟ್ ಬೃಹದುಕ್ಥೋ ವಾಮದೇವ್ಯಃ** ಎಂದು ಹೇಳಿರುವುದು. ಸಮೂಳ್ಹವೆಂಬ ದಶರಾತ್ರಯಾಗದ ದ್ವಿತೀಯಛಂದೋಮದಲ್ಲಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಪೂರ್ವ್ಯಾ ಪುರುತಮಾನಿ ತಾಂ ಸು ತೇ ಕೀರ್ತಿಂ ತ್ವಂ ಮಹಾ ಇಂದ್ರ** ಎಂಬ ಸೂತ್ರದಿಂದ ವಿವೃತವಾಗಿರುವುದು. ಮಹಾವ್ರತೇಷ್ಟಿಯಲ್ಲಿಯೂ ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ ಈ ಸೂಕ್ತವನ್ನು ಪಠಿಸಬೇಕೆಂದು ಐತರೇಯಾರಣ್ಯಕದ **ತಾಂ ಸು ತೇ ಕೀರ್ತಿಂ ಮಘವನ್ಮಹಿತ್ವಾ ಭೂಯ ಇದ್ವಾವೃಧೇ ವೀರ್ಯಾಯ** ಎಂಬ ವಾಕ್ಯದಿಂದ (ಐ, ಆ. ೫-೧-೬) ನಿರ್ದಿಷ್ಟವಾಗಿರುವುದು.

## ಸೂಕ್ತ—೫೪

ಮಂಡಲ—೧೦ ॥ ಅನುವಾಕ—೪ ॥ ಸೂಕ್ತ—೫೪ ॥
ಅಷ್ಟಕ—೮ ॥ ಅಧ್ಯಾಯ—೧ ॥ ವರ್ಗ—೧೫ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ಬೃಹದುಕ್ಥೋ ವಾಮದೇವ್ಯಃ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

**ತಾಂ ಸು ತೇ ಕೀರ್ತಿಂ ಮಘವನ್ಮಹಿತ್ವಾ ಯತ್ತ್ವಾ ಭೀತೇ ರೋದಸೀ ಅಹ್ವಯೇತಾಂ ।**
**ಪ್ರಾವೋ ದೇವಾಁ ಆತಿರೋ ದಾಸಮೋಜಃ ಪ್ರಜಾಯೈ ತ್ವಸ್ಯೈ ಯದಶಿಕ್ಷ ಇಂದ್ರ ॥ ೧ ॥**

ಪದಪಾಠಃ

**ತಾಂ । ಸು । ತೇ । ಕೀರ್ತಿಂ । ಮಘ್ಽವನ್ । ಮಹಿಽತ್ವಾ । ಯತ್ । ತ್ವಾ । ಭೀತೇ ಇತಿ । ರೋದಸೀ ಇತಿ । ಅಹ್ವಯೇತಾಂ ।**

ಪ್ರ । ಆವಃ । ದೇವಾನ್ । ಆ । ಅತಿರಃ । ದಾಸಂ । ಓಜಃ । ಪ್ರಜಾಯೈ । ತ್ವಸ್ಯೈ । ಯತ್ । ಅಶಿಕ್ಷಃ । ಇಂದ್ರ ॥ ೧ ॥

ಸಾಯಣಭಾಷ್ಯಂ

ಹೇ ಇಂದ್ರ ಮಘವನ್ ಧನವನ್ ತೇ ತವ ಸಂಬಂಧಿನೀಂ ಮಹಿತ್ವಾ ಮಹತ್ತ್ವೇನಾಗತಾಂ ಕೀರ್ತಿಂ ಸು ಸುಷ್ಠು ಕೀರ್ತಯಾಮೀತಿ ಶೇಷಃ । ಕಿಂಚ ಯದ್ಯದಾ ತ್ವಾ ತ್ವಾಂ ಪ್ರತಿ ಭೀತೇ ಅಸುರೈರ್ಭಯಂ ಪ್ರಾಪ್ತೇ ರೋದಸೀ ದ್ಯಾವಾಪೃಥಿವ್ಯಾವಹ್ವಯೇತಾಂ ಅವೇತ್ಯಬ್ರೂತಾಂ ತದಾನೀಂ ದೇವಾನ್ಪ್ರಾವಃ । ಪ್ರಾರಕ್ಷಃ । ತಥಾ ದಾಸಂ ದೇವಾನಾಮುಪಕ್ಷಯಕರ್ತಾರಮಸುರಮಾತಿರಃ । ವ್ಯನಾಶಯಃ । ಅಸುರಾನ್ ಹತ್ವಾ ದೇವಾನಾಂ ರಕ್ಷಣೇನ ದ್ಯಾವಾಪೃಥಿವ್ಯೋರ್ಭೀತಿಂ ಪರ್ಯಹರ ಇತಿ ಯದಸ್ತಿ ಕಿಂಚ ತ್ವಸ್ಯಾ ಏಕಸ್ಯೈ ಪ್ರಜಾಯೈ ಯಜಮಾನರೂಪಾಯೈ ಯದ್ಬಲಮಶಿಕ್ಷಃ ಪ್ರಾಯಚ್ಛಃ ತಾಂ ಕೀರ್ತಿಂ ಕೀರ್ತಯಾಮೀತ್ಯರ್ಥಃ ॥

ಪ್ರತಿಪದಾರ್ಥ

**ಮಘವನ್**—ಧನವಂತನಾದ ಎಲೈ ಇಂದ್ರನೇ । **ತೇ**—ನಿನ್ನ । **ಮಹಿತ್ವಾ**—ಮಾಹಾತ್ಮ್ಯದಿಂದ ಸಂಪಾದಿಸಿದ । **ತಾಂ ಕೀರ್ತಿಂ**—ಆ ಕೀರ್ತಿಯನ್ನು । **ಸು**—ಅತಿಶಯವಾಗಿ ಪಠಿಸುತ್ತೇನೆ । **ಯತ್**—ಯಾವಾಗ । **ಭೀತೇ**—ಅಸುರರಿಂದ ಬೆದರಿದ । **ರೋದಸೀ**—ದ್ಯಾವಾಪೃಥಿವಿಗಳು । **ತ್ವಾ ಅಹ್ವಯೇತಾಂ**—ನಿನ್ನನ್ನು ಪ್ರಾರ್ಥಿಸಿದವೋ ಆಗ । **ದೇವಾನ್**—ದೇವತೆಗಳನ್ನು । **ಪ್ರಾವಃ**—ನೀನು ರಕ್ಷಿಸಿದೆ । **ದಾಸಂ**—ಅಸುರರನ್ನು । **ಆತಿರಃ**—ನಾಶಪಡಿಸಿದೆ । **ಇಂದ್ರ**—ಎಲೈ ಇಂದ್ರನೇ । **ತ್ವಸ್ಯೈ ಪ್ರಜಾಯೈ**—ಒಬ್ಬ ಯಜಮಾನನಿಗೆ । **ಯತ್**—ಯಾವ ಅಭಿಮಾನದಿಂದ । **ಓಜಃ**—ಶಕ್ತಿಯನ್ನು । **ಅಶಿಕ್ಷಃ**—ಅನುಗ್ರಹಿಸಿದೆಯೋ ಆದುದರಿಂದಲೇ ನಿನ್ನನ್ನು ಪ್ರಶಂಸಿಸುತ್ತೇನೆ.

ಭಾವಾರ್ಥ

ಧನವಂತನಾದ ಎಲೈ ಇಂದ್ರನೇ, ನಿನ್ನ ಮಾಹಾತ್ಮ್ಯದಿಂದ ಸಂಪಾದಿಸಿದ ಆ ಕೀರ್ತಿಯನ್ನು ನಾನು ಅತಿಶಯವಾಗಿ ಪಠಿಸುತ್ತೇನೆ. ಅಸುರರಿಂದ ಬೆದರಿದ ದ್ಯಾವಾಪೃಥಿವಿಗಳು ಯಾವಾಗ ನಿನ್ನನ್ನು ಪ್ರಾರ್ಥಿಸಿದವೋ ಆಗ ನೀನು ದೇವತೆಗಳನ್ನು ರಕ್ಷಿಸಿದೆ. ಅಸುರರನ್ನು ನಾಶಪಡಿಸಿದೆ. ಎಲೈ ಇಂದ್ರನೇ, ಯಜಮಾನನಿಗೆ ಯಾವ ಅಭಿಮಾನದಿಂದ ನೀನು ಶಕ್ತಿಯನ್ನು ಅನುಗ್ರಹಿಸಿದೆಯೋ ಆ ಕಾರಣಕ್ಕಾಗಿಯೇ ನಿನ್ನನ್ನು ಪ್ರಶಂಸಿಸುತ್ತೇನೆ.

## English Translation

(I celebrate), Maghavat, the great glory (you have acquired) by your might ; when heaven and earth alarmed called upon you, you defended the gods, and destroyed (their) adversary ; (I celebrate your glory), Indra, in that you gave strength to one person (the worshipper).

ಸಂಹಿತಾಪಾಠಃ

ಯದಚರಸ್ತನ್ವಾ ವಾವೃಧಾನೋ ಬಲಾನೀಂದ್ರ ಪ್ರಬ್ರುವಾಣೋ ಜನೇಷು ।
ಮಾಯೇತ್ಸಾ ತೇ ಯಾನಿ ಯುದ್ಧಾನ್ಯಾಹುರ್ನಾದ್ಯ ಶತ್ರುಂ ನನು ಪುರಾ ವಿವಿತ್ಸೇ ॥ ೨ ॥

ಪದಪಾಠಃ

ಯತ್ । ಅಚರಃ । ತನ್ವಾ । ವವೃಧಾನಃ । ಬಲಾನಿ । ಇಂದ್ರ । ಪ್ರಬ್ರುವಾಣಃ । ಜನೇಷು ।
ಮಾಯಾ । ಇತ್ । ಸಾ । ತೇ । ಯಾನಿ । ಯುದ್ಧಾನಿ । ಆಹುಃ । ನ । ಅದ್ಯ । ಶತ್ರುಂ । ನನು । ಪುರಾ । ವಿವಿತ್ಸೇ ॥ ೨ ॥

ಸಾಯಣಭಾಷ್ಯಂ

ಹೇ ಇಂದ್ರ ತನ್ವಾ ಶರೀರೇಣ ಸ್ತೋತ್ರೇಣ ವಾ ವಾವೃಧಾನೋ ವರ್ಧಮಾನೋ ಜನೇಷು ಪ್ರಾಣಿಷು ಬಲಾನಿ ಪ್ರಬ್ರುವಾಣೋ ವೃತ್ರವಧಾದಿರೂಪಾಣಿ ಸಾಮರ್ಥ್ಯಾನಿ ಪ್ರಕರ್ಷೇಣ ಕಥಯನ್ನಚರ ಇತಿ ಯತ್ಸಂಚಾರಂ ಕೃತವಾನಿತಿ ಯದಸ್ತಿ ತೇ ತವ ಸಾ ಗತಿರ್ಮಾಯೇನ್ಮಾಯೈವ । ಮೃಷೇತ್ಯರ್ಥಃ। ಕಿಂಚ ಯಾನಿ ಯುದ್ಧಾನಿ ಶತ್ರುವಿಷಯಾಣ್ಯಾಹುಃ ಬ್ರುವತೇ ಪುರಾವಿದ ಋಷಯಃ ತಾನ್ಯಪಿ ಮಾಯೈವ। ಕುತ ಇತಿ ಆಹ । ಅದ್ಯೇದಾನೀಂ ಶತ್ರುಂ ಹಂತವ್ಯಂ ನ ವಿವಿತ್ಸೇ । ನ ಲಭಸೇ । ಅದ್ಯ ಮಾ ಭೂತ್ ಪೂರ್ವಂ ಹತವಾನಸ್ಮೀತಿ ಯದ್ಬ್ರೂಷೇ ತದಪಿ ನೇತ್ಯಾಹ । ನನ್ವಿತಿ ಪ್ರಶ್ನೇ । ಕಿಂ ಪುರಾ ಶತ್ರುಮುಲಭಥಾಃ। ತದಪಿ ನೇತ್ಯರ್ಥಃ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ತನ್ವಾ**—ಸ್ತುತಿಯಿಂದ । **ವಾವೃಧಾನಃ**—ವೃದ್ಧಿಯನ್ನು ಹೊಂದಿದವನಾಗಿ । **ಜನೇಷು**—ಸಕಲ ಪ್ರಾಣಿಗಳ ನಡುವೆಯೂ । **ಬಲಾನಿ**—ನಿನ್ನ ಶತ್ರುಗಳನ್ನು । **ಪ್ರ ಬ್ರುವಾಣಃ**—ಪ್ರಕಟಿಸುತ್ತ। **ಅಚರಃ**—ನೀನು ಸಂಚರಿಸಿದೆ ಎಂಬ । **ಯತ್**—ಯಾವ ವ್ಯವಹಾರವಿದೆಯೋ ಅಂತಹ । **ತೇ ಸಾ**—ಆ ನಿನ್ನ ಸಂಚಾರವು । **ಮಾಯಾ ಇತ್**—ಖಂಡಿತ ಸುಳ್ಳಾದುದು । **ಯಾನಿ ಯುದ್ಧಾನಿ**—ಯಾವ ನಿನ್ನ ಯುದ್ಧಗಳನ್ನು । **ಆಹುಃ**—ಪ್ರಶಂಸಿಸುವರೋ (ಆ ಯುದ್ಧಗಳೂ ಸುಳ್ಳು) । **ಅದ್ಯ**—ಈಗ । **ಶತ್ರುಂ**—ನೀನು ಪ್ರತಿಭಟಿಸಲು ಯಾವ ಶತ್ರುವನ್ನೂ । **ನ ವಿವಿತ್ಸೇ**—ನೀನು ಹೊಂದಿರುವುದಿಲ್ಲ । **ನನು ಪುರಾ**—ನಿನಗೆ ಹಿಂದೆ ತಾನೇ ಯಾವ ಶತ್ರುಗಳಿದ್ದರು ?

ಭಾವಾರ್ಥ

ಎಲೈ ಇಂದ್ರನೇ, ನೀನು ಸ್ತುತಿಯಿಂದ ವೃದ್ಧಿಯನ್ನು ಹೊಂದಿ ಸಕಲ ಪ್ರಾಣಿಗಳ ನಡುವೆಯೂ ನಿನ್ನ ಶಕ್ತಿಗಳನ್ನು ಪ್ರಕಟಿಸುತ್ತ ನೀನು ಸಂಚರಿಸಿದೆ ಎಂಬ ಯಾವ ವ್ಯವಹಾರವಿದೆಯೋ ಅಂತಹ ಆ ನಿನ್ನ ಸಂಚಾರವು ಖಂಡಿತ

ಸುಳ್ಳಾದುದು. ಯಾವ ನಿನ್ನ ಯುದ್ಧಗಳನ್ನು ಜನರು ಪ್ರಶಂಸಿಸುವರೋ ಆ ಯುದ್ಧಗಳೂ ಸುಳ್ಳು. ನಿನ್ನೊಡನೆ ಪ್ರತಿಭಟಿಸಲು ಈಗ ಯಾವ ಶತ್ರುವೂ ಇಲ್ಲ. ಹಿಂದೆಯೂ ನಿನಗೆ ಸಮಾನನಾದ ಶತ್ರುವು ಯಾರು ತಾನೇ ಇದ್ದರು ?

English Translation

When your proceed, Indra, increasing in form, and proclaiming your powers among mankind, false is that your (wandering), false the combats which they have narrated ; you (find) now no enemy (to attack), did you formerly find one ?

ಸಂಹಿತಾಪಾಠಃ

ಕ ಉ ನು ತೇ ಮಹಿಮನಃ ಸಮಸ್ಯಾಸ್ಮತ್ಪೂರ್ವ ಋಷಯೋಽಂತಮಾಪುಃ ।
ಯನ್ಮಾತರಂ ಚ ಪಿತರಂ ಚ ಸಾಕಮಜನಯಥಾಸ್ತನ್ವಃ ಸ್ವಾಯಾಃ ॥೩॥

ಪದಪಾಠಃ

ಕೇ । ಊಂ ಇತಿ । ನು । ತೇ । ಮಹಿಮನಃ । ಸಮಸ್ಯ । ಅಸ್ಮತ್ । ಪೂರ್ವೇ । ಋಷಯಃ । ಅಂತಂ । ಆಪುಃ ।

ಯತ್ । ಮಾತರಂ । ಚ । ಪಿತರಂ । ಚ । ಸಾಕಂ । ಅಜನಯಥಾಃ । ತನ್ವಃ । ಸ್ವಾಯಾಃ ॥ ೩ ॥

ಸಾಯಣಭಾಷ್ಯಂ

ಹೇ ಇಂದ್ರ ತೇ ತವ ಮಹಿಮನೋ ಮಹಿಮ್ನಃ ಸಮಸ್ಯ ಸರ್ವಸ್ಯಾಪ್ಯಂತಂ ಪಾರಮಸ್ಮದಸ್ಮತ್ತಃ ಪೂರ್ವ ಋಷಯಃ ಕ ಆಪುಃ । ಪ್ರಾಪ್ನುವನ್ । ನ ಕೋಽಪೀತ್ಯರ್ಥಃ। ಯದ್ಯಪಿ ಮಹತ್ತ್ವಂ ಪ್ರಖ್ಯಾಪಯಂತಿ ತಥಾಪಿ ನ ಕಾರ್ತ್ಸ್ನ್ಯೇನೇತಿ । ತತ್ರ ಕಾರಣಮಾಹ । ಯದ್ಯಸ್ಮಾನ್ಮಾತರಂ ಪಿತರಂ ಚ । ದ್ಯೌಃ ಪಿತಾ ಪೃಥಿವೀ ಮಾತೇತಿ ಹಿ ಶ್ರುತಂ । ಅತೋ ದ್ಯಾವಾಪೃಥಿವ್ಯಾವಿತ್ಯರ್ಥಃ । ತೇ ಉಭೇ ಅಪಿ ಸಾಕಂ ಸಹೈವ ಸ್ವಾಯಾಸ್ತನ್ವಃ ಸ್ವಕೀಯಾಚ್ಛರೀರಾದಜನಯಥಾಃ । ಉದಪಾದಯಃ । ಅತೋ ನಾಪುರಿತಿ ಸಂಬಂಧಃ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) **ಯತ್**—ಯಾವ ನಿನ್ನ ಮಾಹಾತ್ಮ್ಯದಿಂದ । **ಮಾತರಂ**—ಪೃಥ್ವಿಯನ್ನೂ । **ಪಿತರಂ**—ದ್ಯುಲೋಕವನ್ನೂ । **ಸಾಕಂ**—ಒಟ್ಟಿಗೆ । **ಸ್ವಾಯಾಃ ತನ್ವಃ**—ನಿನ್ನ ಸ್ವಶರೀರದಿಂದ । **ಅಜನಯಥಾಃ**—ನೀನು ಉತ್ಪನ್ನಮಾಡಿದೆಯೋ ಆದುದರಿಂದಲೇ । **ತೇ**—ನಿನ್ನ । **ಸಮಸ್ಯ**—ಸಂಪೂರ್ಣವಾದ । **ಮಹಿಮನಃ**—

ಮಾಹಾತ್ಮ್ಯದ | **ಅಂತಂ**—ಸಾರವನ್ನು | **ಅಸ್ಮತ್**—ನಮ್ಮಲ್ಲಿ | **ಪೂರ್ವೇ ಋಷಯಃ**—ಶ್ರೇಷ್ಠರಾದ ಋಷಿಗಳು | **ತೇ**—ಯಾರು ತಾನೆ | **ಆಪುಃ**—ಹೊಂದಿದ್ದಾರೆ.

ಭಾವಾರ್ಥ

ಎಲೈ ಇಂದ್ರನೇ, ಯಾವ ನಿನ್ನ ಮಾಹಾತ್ಮ್ಯದಿಂದಲೇ ನೀನು ದ್ಯಾವಾಪೃಥಿವಿಗಳೆರಡನ್ನೂ ಒಟ್ಟಿಗೆ ನಿನ್ನ ಸ್ವಶರೀರದಿಂದಲೇ ಉತ್ಪನ್ನಮಾಡಿದೆಯೋ, ಆ ಕಾರಣದಿಂದಲೇ ನಿನ್ನ ಮಹತ್ವಕ್ಕೆ ಸರಿಯಾದ ಮಾಹಾತ್ಮ್ಯವುಳ್ಳವರು ಯಾರೂ ಇಲ್ಲ. ನಮ್ಮ ಗುಂಪಿನಲ್ಲಿಯೂ ಸಹ ಶ್ರೇಷ್ಠರಾದ ಋಷಿಗಳ ನಡುವೆ ನಿನ್ನ ಮಾಹಾತ್ಮ್ಯವನ್ನು ಚೆನ್ನಾಗಿ ತಿಳಿದವರು ಯಾರಿದ್ದಾರೆ ?

English Translation

Who among the Rishis before us have obtained the limit of your entire greatness. since from your own person you have generated at oace both mother and father (or earth and heaven) ?

ಸಂಹಿತಾಪಾಠಃ

ಚತ್ವಾರಿ ತೇ ಅಸುರ್ಯಾಣಿ ನಾಮಾದಾಭ್ಯಾನಿ ಮಹಿಷಸ್ಯ ಸಂತಿ |
ತ್ವಮಂಗ ತಾನಿ ವಿಶ್ವಾನಿ ವಿತ್ಸೇ ಯೇಭಿಃ ಕರ್ಮಾಣಿ ಮಘವಞ್ಚಕರ್ಥ ||

ಪದಪಾಠಃ

ಚತ್ವಾರಿ | ತೇ | ಅಸುರ್ಯಾಣಿ | ನಾಮ | ಅದಾಭ್ಯಾನಿ | ಮಹಿಷಸ್ಯ | ಸಂತಿ |
ತ್ವಂ | ಅಂಗ | ತಾನಿ | ವಿಶ್ವಾನಿ | ವಿತ್ಸೇ | ಯೇಭಿಃ | ಕರ್ಮಾಣಿ | ಮಘ್ವನ್ | ಚಕರ್ಥ || ೪ ||

ಸಾಯಣಭಾಷ್ಯಂ

**ಹೇ ಇಂದ್ರ ಮಹಿಷಸ್ಯ ಮಹತಃ ಪೂಜ್ಯಸ್ಯ ತೇ ತವ ಚತ್ವಾರ್ಯಸುರ್ಯಾಣ್ಯಸುರವಿಘಾತೀನ್ಯದಾಭ್ಯಾನ್ಯನ್ಯೈರಹಿಂಸ್ಯಾನ್ಯುತ್ತರಸೂಕ್ತ ಉಪಾಂತ್ಯವರ್ಜಿತೇ ದೂರೇ ತನ್ನಾಮೇತ್ಯಾದಿಷು ಪ್ರತಿಪಾದಿತಾನಿ ಯಾನಿ ನಾಮ ನಾಮಕಾನಿ ಶರೀರಾಣಿ ಸಂತಿ ಅಂಗ ಸಖೇ ತ್ವಂ ತಾನಿ ವಿಶ್ವಾನಿ ಸರ್ವಾಣಿ ವಿತ್ಸೇ | ಅದಾಭ್ಯಾನ್ಯಹಿಂಸ್ಯಾನಿ ವೇತ್ಸಿ | ಜಾನಾಸಿ | ಯೇಭಿರ್ಯೈರ್ನಾಮಭಿಃ ಕರ್ಮಾಣಿ ವೃತ್ರವಧಾದಿರೂಪಾಣಿ ಚಕರ್ಥ ಕುರುಷೇ ಹೇ ಮಘವನ್ ತಾನಿ ವೇತ್ಸೀತಿ ||**

ಪ್ರತಿಪದಾರ್ಥ

(ಎಲೈ ಇಂದ್ರನೇ) **ಮಹಿಷಸ್ಯ**—ಮಹಾತ್ಮನಾದ | **ತೇ**—ನಿನಗೆ | **ಅಸುರ್ಯಾಣಿ**—ಶತ್ರುಹಿಂಸಕವಾದುದೂ | **ಅದಾಭ್ಯಾನಿ**—ಇತರರ ಹಿಂಸೆಗೆ ಒಳಪಡದೆ ಇರುವುದೂ ಆದ | **ಚತ್ವಾರಿ ನಾಮ**—ನಾಲ್ಕು ಶರೀರ

ಗಳು | **ಸಂತಿ**—ಇರುತ್ತವೆ | **ಅಂಗ**—ಮಿತ್ರನಾದ | **ಮಘವನ್**—ಎಲೈ ಇಂದ್ರನೇ | **ತ್ವಂ**—ನೀನು | **ಯೇಭಿಃ**—ಯಾವ ಶರೀರಗಳಿಂದ | **ಕರ್ಮಾಣಿ**—ವೃತ್ರವಧಾದಿರೂಪವಾದ ಕರ್ಮಗಳನ್ನು | **ಚಕರ್ಥ**—ನೀನು ಮಾಡಿದೆಯೋ | **ವಿಶ್ವಾನಿ ತಾನಿ**—ಆ ಸಕಲ ಶರೀರಗಳ ಸ್ವರೂಪಗಳನ್ನು | **ವಿತ್ಸೇ**—ಅರಿತಿದ್ದೀಯೆ.

ಭಾವಾರ್ಥ

ಎಲೈ ಇಂದ್ರನೇ, ಮಹಾತ್ಮನಾದ ನಿನಗೆ ಶತ್ರುಹಿಂಸಕವಾದುದೂ, ಇತರರ ಹಿಂಸೆಗೆ ಒಳಪಡದಿರುವುದೂ ಆದ ನಾಲ್ಕು ಶರೀರಗಳು ಇರುತ್ತವೆ. ಮಿತ್ರನಾದ ಎಲೈ ಇಂದ್ರನೇ, ಯಾವ ನಿನ್ನ ಶರೀರಗಳಿಂದ ವೃತ್ರವಧಾದಿರೂಪವಾದ ಕರ್ಮಗಳನ್ನು ನೀನು ಮಾಡಿದೆಯೋ ಆ ಸಕಲ ಶರೀರಗಳ ಸ್ವರೂಪಗಳನ್ನೂ ನೀನು ಮಾತ್ರ ಅರಿತಿದ್ದೀಯೆ.

English Translation

Four are the Asura-slaying uninjurable forms of you the mighty one: you know them all where-with, Maghavat you have achieved your exploits.

ಸಂಹಿತಾಪಾಠಃ

ತ್ವಂ ವಿಶ್ವಾ ದಧಿಷೇ ಕೇವಲಾನಿ ಯಾನ್ಯಾವಿರ್ಯಾ ಚ ಗುಹಾ ವಸೂನಿ |
ಕಾಮಮಿನ್ಮೇ ಮಘವನ್ಮಾ ವಿ ತಾರೀಸ್ತ್ವಮಾಜ್ಞಾತಾ ತ್ವಮಿಂದ್ರಾಸಿ ದಾತಾ || ೫ ||

ಪದಪಾಠಃ

ತ್ವಂ | ವಿಶ್ವಾ | ದಧಿಷೇ | ಕೇವಲಾನಿ | ಯಾನಿ | ಆವಿಃ | ಯಾ | ಚ | ಗುಹಾ | ವಸೂನಿ |
ಕಾಮಂ | ಇತ್ | ಮೇ | ಮಘऽವನ್ | ಮಾ | ವಿ | ತಾರೀಃ | ತ್ವಂ | ಆऽಜ್ಞಾತಾ | ತ್ವಂ | ಇಂದ್ರ | ಅಸಿ | ದಾತಾ || ೫ ||

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ವಿಶ್ವಾ ಸರ್ವಾಣಿ ಕೇವಲಾನ್ಯನ್ಯೇಷಾಮಸಾಧಾರಣಾನಿ ವಸೂನಿ ಧನಾನಿ ದಧಿಷೇ| ಧಾರಯಸಿ | ವಿಶ್ವಾನೀತ್ಯುಕ್ತಂ ಕಥಂ ವಿಶ್ವತ್ವಮಿತ್ಯತ ಆಹ | ಯಾನ್ಯಾವಿರಾವಿರ್ಭೂತಾನಿ ಸರ್ವೈಃ ಪ್ರಸಿದ್ಧಾನಿ ವಸೂನಿ ವಾಸಯೋಗ್ಯಾನಿ ಧನಾನಿ ಸಂತಿ ಯಾ ಚ ಗುಹಾ ಗುಹಾಯಾಂ ನಿಗೂಢೇ ಪ್ರದೇಶೇ ವರ್ತಮಾನಾನಿ ವಸೂನಿ ಸಂತಿ ತಾನಿ ವಿಶ್ವಾನಿ ದಧಿಷ ಇತಿ | ಯಸ್ಮಾದೇವಂ ತಸ್ಮಾನ್ಮೇ ಮಮ ಕಾಮಂ ಕಾಂಕ್ಷಿತಂ ಹೇ ಮಘವನ್ ಧನವನ್ನಿಂದ್ರ ಮಾ ವಿ ತಾರೀಃ | ಮಾ ಹಿಂಸೀಃ | ಇದಿತಿ ಪಾದಪೂರಣಃ |

**ವರ್ಧಯೇತಿ ಶೇಷಃ । ಹೇ ಇಂದ್ರ ತ್ವಮಾಜ್ಞಾತಾಸಿ ಪ್ರಾಪಯಿತಾಸ್ಯಭಿಲಷಿತಂ ಧನಂ । ತಥಾ ಹೇ ಇಂದ್ರ ತ್ವಂ ದಾತಾಸಿ ॥**

ಪ್ರತಿಪದಾರ್ಥ

**ಮಘವನ್**—ಧನವಂತನಾದ । **ಇಂದ್ರ**—ಎಲೈ ಇಂದ್ರನೇ । **ಯಾನಿ**—ಯಾವ ಸಂಪತ್ತುಗಳು । **ಆವಿಃ**—ಆವಿರ್ಭೂತಗಳಾಗಿವೆಯೋ । **ಯಾ ಚ**—ಯಾವ ಸಂಪತ್ತುಗಳು । **ಗುಹಾ**—ರಹಸ್ಯವಾಗಿವೆಯೋ ಅಂತಹ । **ಕೇವಲಾನಿ**—ಅಸಾಧಾರಣವಾದ । **ವಿಶ್ವಾ ವಸೂನಿ**—ಸಕಲ ಸಂಪತ್ತುಗಳನ್ನೂ । **ದಧಿಷೇ**—ನೀನು ಹೊಂದಿದ್ದೀಯೆ (ಆದುದರಿಂದ) । **ಮೇ**—ನನ್ನ । **ಕಾಮಂ**—ಧನೇಚ್ಛೆಯನ್ನು । **ಮಾ ವಿ ತಾರೀಃ**—ನಾಶಪಡಿಸಬೇಡ । **ತ್ವಂ**—ನೀನು । **ಆಜ್ಞಾತಾ**—ನನ್ನ ಧನೇಚ್ಛೆಯನ್ನು ತಿಳಿದಿದ್ದೀಯೆ । **ತ್ವಂ**—ನೀನೇ । **ದಾತಾ ಅಸಿ**—ದಾತೃವೂ ಆಗಿದ್ದೀಯೆ.

ಭಾವಾರ್ಥ

ಧನವಂತನಾದ ಎಲೈ ಇಂದ್ರನೇ, ಯಾವ ಸಂಪತ್ತುಗಳು ಆವಿರ್ಭೂತಗಳಾಗಿವೆಯೋ, ಯಾವ ಸಂಪತ್ತುಗಳು ರಹಸ್ಯವಾಗಿವೆಯೋ, ಅಂತಹ ಅಸಾಧಾರಣವಾದ ಸಕಲ ಸಂಪತ್ತುಗಳನ್ನೂ ನೀನು ಹೊಂದಿದ್ದೀಯೆ. ಆದುದರಿಂದ ನನ್ನ ಧನೇಚ್ಛೆಯನ್ನು ನೀನು ನಾಶಪಡಿಸಬೇಡ. ನನ್ನ ಧನೇಚ್ಛೆಯನ್ನು ನೀನು ತಿಳಿದಿದ್ದೀಯೆ. ನೀನೇ ದಾತೃವೂ ಆಗಿದ್ದೀಯೆ.

English Translation

You have in your keeping all treasures, which are yours exclusively' whether they be manifest or hidden : thwart not, therefore, Maghavat, my desire (for wealth) ; for you are cognizant (of my desire), you are the donor.

ಸಂಹಿತಾಪಾಠಃ

**ಯೋ ಅದಧಾಜ್ಜ್ಯೋತಿಷಿ ಜ್ಯೋತಿರಂತರ್ಯೋ ಅಸೃಜನ್ಮಧುನಾ ಸಂ ಮಧೂನಿ ।**
**ಅಧ ಪ್ರಿಯಂ ಶೂಷಮಿಂದ್ರಾಯ ಮನ್ಮ ಬ್ರಹ್ಮಕೃತೋ ಬೃಹದುಕ್ಥಾದವಾಚಿ ॥ ೬ ॥**

ಪದಪಾಠಃ

**ಯಃ । ಅದಧಾತ್ । ಜ್ಯೋತಿಷಿ । ಜ್ಯೋತಿಃ । ಅಂತಃ । ಯಃ । ಅಸೃಜತ್ । ಮಧುನಾ । ಸಂ । ಮಧೂನಿ ।**
**ಅಧ । ಪ್ರಿಯಂ । ಶೂಷಂ । ಇಂದ್ರಾಯ । ಮನ್ಮ । ಬ್ರಹ್ಮऽಕೃತಃ । ಬೃಹತ್ऽಉಕ್ಥಾತ್ । ಅವಾಚಿ ॥೬॥**

ಸಾಯಣಭಾಷ್ಯಂ

**ಯ ಇಂದ್ರೋ ಜ್ಯೋತಿಷಿ ದ್ಯೋತಮಾನ ಆದಿತ್ಯಾದಿಕೇ ತೇಜಸ್ಯಂತಜ್ಯೋ೯ತಿಸ್ತೇಜೋಽದಧಾತ್ ಧಾರಿತವಾನ್ । ಯದಾದಿತ್ಯಾಗ್ನ್ಯಾದಿಷು ತೇಜೋಽಸ್ತಿ ತದಿಂದ್ರಕೃತಮಿತ್ಯರ್ಥಃ । ಯಶ್ಚ ಮಧುನಾ ಮಧುರೇಣ ರಸೇನ ಮಧೂನಿ ಸೋಮಾದಿಮಧುದ್ರವ್ಯಾಣಿ ಸಮಸೃಜತ್ ಸಮಯೋಜಯತ್। ಯದ್ವಾ । ಮಧುನಾ । ಅತ್ರ ಮಧುಶಬ್ದೇನ ಸರ್ವೈಃ ಸೇವ್ಯಮಾನ ಆದಿತ್ಯ ಉಚ್ಯತೇ । ತೇನ ಸಹ ಮಧೂನ್ಯುದಕಾನಿ ಸಮಸೃಜತ್ । ಅಥ ಸಂಪ್ರತಿ ತಸ್ಮಾ ಇಂದ್ರಾಯ ಪ್ರಿಯಂ ಪ್ರೀತಿಜನಕಂ ಶೂಷಂ ಬಲಂ ಶತ್ರೂಣಾಂ ಶೋಷಕತ್ವಾದ್ಬಲಕರಂ ಮನ್ಮ ಮನನೀಯಂ ಸ್ತೋತ್ರಂ ಬ್ರಹ್ಮಕೃತೋ ಮಂತ್ರಕೃತೋ ಬೃಹದುಕ್ಥಾತ್ ಪ್ರಭೂತಶಸ್ತ್ರಯುಕ್ತಾದೇತನ್ನಾಮಕಾದೃಷೇರ್ಮತ್ತೋಽವಾಚಿ । ಉಕ್ತಮಭೂತ್ ॥**

ಪ್ರತಿಪದಾರ್ಥ

**ಯಃ**—ಯಾವ ಇಂದ್ರನು । **ಜ್ಯೋತಿಷಿ ಅಂತಃ**—ಆದಿತ್ಯಾದಿ ಜ್ಯೋತಿರ್ಮಂಡಲಗಳಲ್ಲಿ । **ಜ್ಯೋತಿಃ**—ತೇಜಸ್ಸನ್ನು । **ಅದಧಾತ್**—ಸ್ಥಾಪಿಸಿದನೋ । **ಯಃ**—ಯಾರು । **ಮಧುನಾ**—ಮಧುರವಾದ ರಸದಿಂದ । **ಮಧೂನಿ**—ಸೋಮಾದಿ ಮಧುದ್ರವ್ಯಗಳನ್ನು । **ಸಮಸೃಜತ್**—ಸಂಯೋಜಿಸಿದನೋ । **(ತಸ್ಮೈ) ಇಂದ್ರಾಯ**—ಆ ಇಂದ್ರನನ್ನುದ್ದೇಶಿ । **ಅಥ**—ಈಗ । **ಪ್ರಿಯಂ**—ಹಿತಕರವಾದ । **ಶೂಷಂ**—ಬಲವನ್ನು ಕೊಡುವ । **ಮನ್ಮ**—ಸ್ತುತಿಯು । **ಬ್ರಹ್ಮಕೃತಃ**—ಸ್ತುತಿಕರ್ತನಾದ । **ಬೃಹದುಕ್ಥಾನ್**—ಬೃಹದುಕ್ಥಋಷಿಯಿಂದ (ನನ್ನಿಂದ) । **ಅವಾಚಿ**—ಪಠಿತವಾಗಿದೆ.

ಭಾವಾರ್ಥ

ಯಾವ ಇಂದ್ರನು ಆದಿತ್ಯಾದಿ ಜ್ಯೋತಿರ್ಮಂಡಲಗಳಲ್ಲಿ ತೇಜಸ್ಸನ್ನು ಸ್ಥಾಪಿಸಿದನೋ, ಯಾರು ಮಧುರವಾದ ರಸದಿಂದ ಸೋಮಾದಿಮಧುದ್ರವ್ಯಗಳನ್ನು ಸಂಯೋಜಿಸಿದನೋ, ಆ ಇಂದ್ರನನ್ನುದ್ದೇಶಿಸಿ ಹಿತಕರವಾದ ಬಲವನ್ನು ಕೊಡುವ ಸ್ತುತಿಯು ಸ್ತುತಿಕರ್ತನಾದ ಬೃಹದುಕ್ಥನಿಂದ (ನನ್ನಿಂದ) ಈಗ ಪಠಿತವಾಗಿದೆ.

English Translation

To that Indra, who has deposited the light in luminous bodies, who has flavoured sweet things with sweetness, this acceptable invigorating praise has been recited by Brihaduktha, the author of the prayer

# ಐವತ್ತೈದನೆಯ ಸೂಕ್ತ

ಸಾಯಣಭಾಷ್ಯಂ

**ದೂರೇ ತದಿತ್ಯಷ್ಟರ್ಚಂ ತ್ರಯೋದಶಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ದೂರ ಇತ್ಯನುಕ್ರಾಂತಂ । ಗತಃ ಸೂಕ್ತವಿನಿಯೋಗಃ ॥**

ಅನುವಾದವು–**ದೂರೇ ತತ್** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ—ದೂರೇ ಇತ್ಯಾದಿಯಾಗಿ ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೫

ಮಂಡಲ—೧೦ || ಅನುವಾಕ—೪ || ಸೂಕ್ತ—೫೫ ||
ಅಷ್ಟಕ—೮ || ಅಧ್ಯಾಯ—೧ || ವರ್ಗ—೧೬, ೧೭ ||
ಸೂಕ್ತದಲ್ಲಿರುವ ಋಕ್ಸಂಖ್ಯೆ— ೮||
ಋಷಿಃ—ಬೃಹದುಕ್ಥೋ ವಾಮದೇವ್ಯಃ ||
ದೇವತಾ—ಇಂದ್ರಃ ||
ಛಂದಃ—ತ್ರಿಷ್ಟುಪ್ ||

ಸಂಹಿತಾಪಾಠಃ

ದೂರೇ ತನ್ನಾಮ ಗುಹ್ಯಂ ಪರಾಚೈರ್ಯತ್ತ್ವಾ ಭೀತೇ ಅಹ್ವಯೇತಾಂ ವಯೋಧೈ ।
ಉದಸ್ತಭ್ನಾಃ ಪೃಥಿವೀಂ ದ್ಯಾಮಭೀಕೇ ಭ್ರಾತುಃ ಪುತ್ರಾನ್ಮಘವನ್ತಿತ್ವಿಷಾಣಃ || ೧ ||

ಪದಪಾಠಃ

ದೂರೇ । ತತ್ । ನಾಮ । ಗುಹ್ಯಂ । ಪರಾಚೈಃ । ಯತ್ । ತ್ವಾ । ಭೀತೇ ಇತಿ । ಅಹ್ವಯೇತಾಂ । ವಯಃऽಧೈ ।
ಉತ್ । ಅಸ್ತಭ್ನಾಃ । ಪೃಥಿವೀಂ । ದ್ಯಾಂ । ಅಭೀಕೇ । ಭ್ರಾತುಃ । ಪುತ್ರಾನ್ । ಮಘಽವನ್ । ತಿತ್ವಿಷಾಣಃ || ೧ ||

ಸಾಯಣಭಾಷ್ಯಂ

ಅನಯೋ ಚತ್ವಾರಿ ತೇ ಅಸುರ್ಯಾಣಿ ನಾಮೇತ್ಯುಕ್ತಸ್ಯಾದ್ಯಂ ನಾಮ ಸ್ತೂಯತೇ ಹೇ ಇಂದ್ರ ತೇ ತವ ತದ್ವಕ್ಷ್ಯಮಾಣಂ ನಾಮ ಸರ್ವೇಷಾಂ ನಾಮಕಂ ಶರೀರಂ ಪರಾಚೈಃ ಪರಾಙ್ಮುಖೈರ್ಮನುಷ್ಯೈಃ। ಮನುಷ್ಯಾಣಾಮಿತ್ಯರ್ಥಃ । ಗುಹ್ಯಂ ಗೋಪನೀಯಮಪ್ರಕಾಶಿತಂ ಸದ್ದೂರ ಇತೋ ವಿಪ್ರಕೃಷ್ಟೇ ದೂರದೇಶೇ ವರ್ತತ ಇತಿ ಶೇಷಃ । ಯದ್ಯದಾ ತ್ವಾ ತ್ವಾಂ ರೋದಸೀ ದ್ಯಾವಾಪೃಥಿವ್ಯೌ ಭೀತೇ ಸತೀ ಅಹ್ವಯೇತಾಂ । ಅವೇತ್ಯಬ್ರೂತಾಂ । ಕಿಮರ್ಥಂ । ವಯೋಧಾ ಅನ್ನಸ್ಯ ನಿಧಾನಾರ್ಥಂ । ಜಗತೋऽನ್ನಸ್ಯ ಸಾಧನಾಯೇತ್ಯರ್ಥಃ। ತದಾನೀಂ ತೇನ ಶರೀರೇಣಾಭೀಕೇ । ಅಂತಿಕನಾಮೈತತ್ । ತವ ಸಮೀಪ ಏವ ಪೃಥಿವೀಂ ದ್ಯಾಂ ಚೋದೂರ್ಧ್ವಂ ಪರಸ್ಪರವಿಯುಕ್ತಂ ಯಥಾ ಭವತಿ ತಥಾಸ್ತಭ್ನಾಃ । ಸ್ತಂಭಿತವಾನಸಿ । ಕಿಂ ಕುರ್ವನ್ । ಹೇ ಮಘವನ್ನಿಂದ್ರ ಭ್ರಾತುಃ ಪರ್ಜನ್ಯಸ್ಯ ಪುತ್ರಾನ್ ಪುತ್ರಸ್ಥಾನೀಯಾನುದಕಸಂಸ್ತ್ಯಾಯಾಂಸ್ತಿತ್ವಿಷಾಣೋ ದೀಪಯನ್ ||

ಪ್ರತಿಪದಾರ್ಥ

**ಮಘವನ್**—ಎಲೈ ಇಂದ್ರನೇ । **ತೇ**—ನಿನ್ನ । **ತತ್**—ಪ್ರಸಿದ್ಧವಾದ । **ನಾಮ**—ಶರೀರವು । **ಪರಾಚೈಃ**—ಅದನ್ನು ತಿಳಿಯಲರಿಯದೆ ಪರಾಙ್ಮುಖರಾದ ಮಾನವರಿಗಿಂತಲೂ । **ಗುಹ್ಯಂ**—ರಹಸ್ಯವಾಗಿದ್ದು ।

**ದೂರೇ**—ಇಲ್ಲಿಗಿಂತಲೂ ಬಹುದೂರದಲ್ಲಿರುತ್ತದೆ | **ಯತ್**—ಯಾವಾಗ | **ತ್ವಾ**—ನಿನ್ನನ್ನು | **ಭೀತೇ**—ಬೆದರಿದ ದ್ಯಾವಾಪೃಥಿವಿಗಳು | **ವಯೋಧೈ**—ಅನ್ನದ ಸ್ಥಾನಾರ್ಥವಾಗಿ | **ಅಹ್ವಯೇತಾಂ**—ಕರೆದವೋ ಆಗ | **ಅಭೀಕೇ**—ನಿನ್ನ ಸಮಿಾಪದಲ್ಲಿಯೇ | **ಭ್ರಾತುಃ**—ಪರ್ಜನ್ಯನ | **ಪುತ್ರಾನ್**—ಪುತ್ರರೂಪರಾದ ಉದಕಸಂಘಗಳನ್ನು | **ತಿತ್ವಿಷಾಣಃ**—ಬೆಳಗಿಸುತ್ತ | **ಪೃಥಿವೀಂ**—ಪೃಥ್ವಿಯನ್ನೂ | **ದ್ಯಾಂ**—ದ್ಯುಲೋಕವನ್ನೂ | **ಉತ್**—ಊರ್ಧ್ವಮುಖವಾಗಿ | **ಅಸ್ತಭ್ನಾಃ**—ಸ್ಥಾಪಿಸಿದೆ.

### ಭಾವಾರ್ಥ

ಎಲೈ ಇಂದ್ರನೇ, ಪ್ರಸಿದ್ಧವಾದ ನಿನ್ನ ಶರೀರವು ಅದನ್ನು ತಿಳಿಯಲರಿಯದೇ ಪರಾಙ್ಮುಖರಾದ ಮಾನವರಿಗಿಂತಲೂ ರಹಸ್ಯವಾಗಿದ್ದು ಇಲ್ಲಿಗಿಂತಲೂ ಬಹುದೂರದಲ್ಲಿಗುತ್ತದೆ. ಬೆದರಿದ ದ್ಯಾವಾಪೃಥಿವಿಗಳು ಯಾವಾಗ ನಿನ್ನನ್ನು ಅನ್ನದ ಸ್ಥಾಪನಾರ್ಥವಾಗಿ ಕರೆದವೋ ಆಗ ನಿನ್ನ ಸಮಿಾಪದಲ್ಲಿಯೇ ಪರ್ಜನ್ಯನ ಪುತ್ರರೂಪವಾದ ಉದಕಸಂಘಗಳನ್ನು ಬೆಳಗಿಸುತ್ತ ಪೃಥ್ವಿಯನ್ನೂ ದ್ಯುಲೋಕವನ್ನೂ ಊರ್ಧ್ವಮುಖವಾಗಿ ಸ್ಥಾಪಿಸಿದೆ.

## English Translation

Your form held secret by (men)with averted faces, is far from hence; when (heaven and earth) alarmed, called upon you for thc sustenance (of the world), then you fixed in their proximity the heaven and earth, illuming, Maghavat, the sons of (your) brother·

### ಸಂಹಿತಾಪಾಠಃ

ಮಹತ್ತನ್ನಾಮ ಗುಹ್ಯಂ ಪುರುಸ್ಪೃಗ್ಯೇನ ಭೂತಂ ಜನಯೋ ಯೇನ ಭವ್ಯಂ।
ಪ್ರತ್ನಂ ಜಾತಂ ಜ್ಯೋತಿರ್ಯದಸ್ಯ ಪ್ರಿಯಂ ಪ್ರಿಯಾಃ ಸಮವಿಶಂತ ಪಂಚ ||

### ಪದಪಾಠಃ

ಮಹತ್ | ತತ್ | ನಾಮ | ಗುಹ್ಯಂ | ಪುರುऽಸ್ಪೃಕ್ | ಯೇನ | ಭೂತಂ | ಜನಯಃ | ಯೇನ | ಭವ್ಯಂ|
ಪ್ರತ್ನಂ | ಜಾತಂ | ಜ್ಯೋತಿಃ | ಯತ್ | ಅಸ್ಯ | ಪ್ರಿಯಂ | ಪ್ರಿಯಾಃ | ಸಂ | ಅವಿಶಂತ | ಪಂಚ || ೨ ||

### ಸಾಯಣಭಾಷ್ಯಂ

ಹೇ ಇಂದ್ರ ತವ ತದ್ಗುಹ್ಯಂ ಗೋಪನೀಯಮನ್ಯೈರವಿಜ್ಞಾತಂ ಪುರುಸ್ಪೃಗ್ಬಹುಭಿರ್ವ್ಯಕ್ತಿಭಿಃ ಸ್ಪೃಹಣೀಯಮಾಕಾಶಾತ್ಮಕಂ ನಾಮ ಶರೀರಂ ಮಹದತ್ಯಂತಂ ಪ್ರವೃದ್ಧಂ ಯೇನ ನಾಮ್ನಾ ಭೂತಂ ಭವ್ಯಂ ಚ ಪೂರ್ವಂ ಜನಯಃ ಉತ್ಪಾದಿತವಾನಸಿ | ಭೂತಭವ್ಯೋಭಯೋಸ್ಸಯಾಯ ಯೇನೇತ್ಯಸ್ಯಾವೃತ್ತಿಃ ಸ್ಯಾತ್ | ಆಕಾಶಾತ್ಮಕಾದ್ಧಿ ಪರಮೇಶ್ವರಸ್ವರೂಪಾದ್ಭೂತಭವ್ಯಾತ್ಮಕಂ

**ಜಗದುತ್ಪದ್ಯತೇ । ಆಕಾಶಾದ್ವಾಯುರಿತ್ಯಾದಿಶ್ರುತೇಃ । ಕಿಂಚ ಪ್ರತ್ನಂ ಪುರಾಣಂ ಪೂರ್ವಕಾಲೀನಂ ಯಜ್ಜ್ಯೋತಿರ್ದ್ಯೋತಮಾನಮಾದಿತ್ಯಾಖ್ಯಮುದಕಾಖ್ಯಂ ವಾಸ್ಯೇಂದ್ರಸ್ಯ ಪ್ರಿಯಂ ಪ್ರಿಯಭೂತಂ ತತ್ತ್ವಂ ಜಾತಮುತ್ಪನ್ನಂ ಪ್ರಿಯಾಃ ಪ್ರೀಯಮಾಣಾಃ ಪಂಚ। ಪಂಚ ಜನಾ ಇತಿ ಶೇಷಃ । ಭೀಮಸೇನೋ ಭೀಮ ಇತಿವದೇಕದೇಶಲಕ್ಷಣಾ । ನಿಷಾದಪಂಚಮಾಶ್ಚತ್ವಾರೋ ವರ್ಣಾಃ ಸಮವಿಶಂತ । ಸಂವಿಶಂತೇ । ಸ್ವನಿರ್ವಾಹಾರ್ಥಂ ಭಜಂತ ಇತ್ಯರ್ಥಃ॥**

ಪ್ರತಿಪದಾರ್ಥ

(ಎಲೈ ಇಂದ್ರನೇ) **ಯೇನ**—ಆಕಾಶರೂಪವಾದ ಯಾವ ನಿನ್ನ ದಿವ್ಯಶರೀರದಿಂದ (ಜ್ಯೋತಿಯಿಂದ) । **ಭೂತಂ**—ಹಿಂದಿನ ತತ್ತ್ವಗಳನ್ನೂ । **ಭವ್ಯಂ**—ಭವಿಷ್ಯತ್ಕಾಲದ ತತ್ತ್ವಗಳನ್ನೂ । **ಜನಯಃ**—ನೀನು ಉತ್ಪನ್ನ ಮಾಡಿದೆಯೋ ಮತ್ತು । **ಅಸ್ಯ**—ನಿನ್ನ । **ಪ್ರಿಯಂ**—ಪ್ರೀತಿಕರವಾಗಿ । **ಜಾತಂ**—ಉತ್ಪನ್ನವಾದ । **ಪ್ರತ್ನಂ**—ಪುರಾತನವಾದ । **ಯತ್ ಜ್ಯೋತಿಃ**—ಯಾವ ದಿವ್ಯಜ್ಯೋತಿಯನ್ನು । **ಪ್ರಿಯಾಃ**—ನಿನಗೆ ಪ್ರಿಯರಾದ । **ಪಂಚ**—ದೇವಮಾನವಾದಿ ಪಂಚಜನರೂ । **ಸಮವಿಶಂತ**—ಸೇವಿಸುವರೋ । **ತತ್ ನಾಮ**—ಆ ದಿವ್ಯ ಜ್ಯೋತಿಯು । **ಗುಹ್ಯಂ**—ರಹಸ್ಯಾತ್ಮಕವಾಗಿಯೂ । **ಪುರುಸ್ಪೃಕ್**—ಅನೇಕರಿಂದ ಅಪೇಕ್ಷಿತವಾದುದಾಗಿಯೂ । **ಮಹತ್**—ಅತ್ಯಂತ ಪ್ರವೃದ್ಧಮಾನವಾದುದಾಗಿಯೂ ಇರುತ್ತದೆ.

ಭಾವಾರ್ಥ

ಎಲೈ ಇಂದ್ರನೇ, ಆಕಾಶರೂಪವಾದ ಯಾವ ನಿನ್ನ ದಿವ್ಯಜ್ಯೋತಿಯಿಂದ ಹಿಂದಿನ ತತ್ತ್ವಗಳನ್ನೂ ಮತ್ತು ಭವಿಷ್ಯತ್ಕಾಲದ ತತ್ತ್ವಗಳನ್ನೂ ನೀನು ಉತ್ಪನ್ನಮಾಡಿದೆಯೋ ಮತ್ತು ನಿನ್ನ ಪ್ರೀತಿಕರವಾಗಿ ಉತ್ಪನ್ನವಾದ ಪುರಾತನವಾದ ಯಾವ ದಿವ್ಯಜ್ಯೋತಿಯನ್ನು ನಿನಗೆ ಪ್ರಿಯರಾದ ದೇವಮಾನವಾದಿ ಪಂಚಜನರೂ ಸೇವಿಸುವರೋ ಆ ದಿವ್ಯ ಜ್ಯೋತಿಯು ರಹಸ್ಯಾತ್ಮಕವಾಗಿಯೂ ಅನೇಕರಿಂದ ಅಪೇಕ್ಷಿತವಾದುದಾಗಿಯೂ ಅತ್ಯಂತ ಪ್ರವೃದ್ಧಮಾನವಾದುದಾಗಿಯೂ ಇರುತ್ತದೆ.

English Translation

That mighty mysterious form, desired of many, wherewith you have engendered the past, and (engender) the future, the ancient manifested light, the beloved of Indra, into which the five (orders of beings) delighted enter.

ಸಂಹಿತಾಪಾಠಃ

**ಆ ರೋದಸೀ ಅಪೃಣಾದೋತ ಮಧ್ಯಂ ಪಂಚ ದೇವಾ ಋತುಶಃ ಸಪ್ತಸಪ್ತ ।**
**ಚತುಸ್ತ್ರಿಂಶತಾ ಪುರುಧಾ ವಿ ಚಷ್ಟೇ ಸರೂಪೇಣ ಜ್ಯೋತಿಷಾ ವಿವ್ರತೇನ ॥**

ಪದಪಾಠಃ

**ಆ । ರೋದಸೀ ಇತಿ । ಅಪೃಣಾತ್ । ಆ । ಉತ । ಮಧ್ಯಂ । ಪಂಚ । ದೇವಾನ್ । ಋತುಽಶಃ । ಸಪ್ತಽಸಪ್ತ ।**

**ಚತುಃಽತ್ರಿಂಶತಾ । ಪುರುಧಾ । ವಿ । ಚಷ್ಟೇ । ಸಽರೂಪೇಣ । ಜ್ಯೋತಿಷಾ । ವಿಽವ್ರತೇನ ॥ ೩ ॥**

### ಸಾಯಣಭಾಷ್ಯಂ

**ಅಯಮಿಂದ್ರ ಆತ್ಮೀಯೇನ ಶರೀರೇಣ ತೇಜಸಾ ವಾ ರೋದಸೀ ದ್ಯಾವಾಪೃಥಿವ್ಯಾವಾ ಸರ್ವತೋಽಪೃಣಾತ್ । ಪೂರಯತಿ । ಉತಾಪಿ ಚ ಮಧ್ಯಂ ದ್ಯುಭೂಮ್ಯಪೇಕ್ಷಯಾ ಮಧ್ಯಭೂತಮಂತರಿಕ್ಷಮಪೃಣಾದಿತಿ ವರ್ತತೇ । ತದಪಿ ಸ್ವಶರೀರೇಣ ತೇಜಸಾ ವಾ ಪೂರಯತಿ । ಕಿಂಚ ಪಂಚ ದೇವಾನ್ ದೇವಮನುಷ್ಯಪಿತ್ರಸುರರಾಕ್ಷಸಸಂಜ್ಞಕಾನ್ ತಥಾ ಸಪ್ತ ಸಪ್ತ । ದ್ವಿರುಕ್ತ್ಯಾ ಸಪ್ತಸಂಖ್ಯಾಕಾನಿ ತತ್ತ್ವಾನಿ ಲೋಕೇ ಯಾನಿ ಸಂತಿ ತಾನಿ ಪರಿಗೃಹ್ಯಂತೇ । ಕಾನಿ ತಾನೀತಿ ಸಪ್ತಮರುದ್ಗಣಾನ್ ಸಪ್ತಾದಿತ್ಯರಶ್ಮೀನ್ ಸಪ್ತ ಚೇಂದ್ರಿಯಾಣಿ ಸಪ್ತ ಲೋಕಾನನ್ಯಾನಪಿ ಸಪ್ತಸಂಖ್ಯೋಪೇತಾನೃತುಶಃ ಕಾಲೇ ಕಾಲೇ ಚತುಸ್ತ್ರಿಂಶತಾ ಚತುಸ್ತ್ರಿಂಶತ್ಸಂಖ್ಯಾಕೇನ ದೇವಗಣೇನ ಸಹ ಪುರುಧಾ ಬಹುಪ್ರಕಾರಂ ವಿ ಚಷ್ಟೇ । ವಿಪಶ್ಯತಿ । ಸರ್ವದೇಕ್ಷತೇ । ಅಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಃ ಪ್ರಜಾಪತಿಶ್ಚ ವಷಟ್ಕಾರಶ್ಚ ವಿರಾಟ್ ಚೇತಿ ಚತುಸ್ತ್ರಿಂಶತ್ತ್ವಂ ದೇವಾನಾಂ । ಕೇನೇತಿ ತದುಚ್ಯತೇ । ಸರೂಪೇಣ ಸಮಾನರೂಪೇಣ ಜ್ಯೋತಿಷಾ ಪ್ರಕಾಶಕೇನ ವಿವ್ರತೇನ ವಿವಿಧೇನ ಕರ್ಮಣಾ ॥**

### ಪ್ರತಿಪದಾರ್ಥ

(ಇಂದ್ರಃ— ಇಂದ್ರನು) । **ರೋದಸೀ**—ದ್ಯಾವಾಪೃಥಿವಿಗಳನ್ನು । **ಆ**—ಸರ್ವತ್ರ । **ಆ ಅಪೃಣಾತ್**—(ತನ್ನ ತೇಜಸ್ಸಿನಿಂದ) ವ್ಯಾಪಿಸುತ್ತಾನೆ । **ಸರೂಪೇಣ**—ಒಂದೇವಿಧವಾದ । **ಜ್ಯೋತಿಷಾ**—ಕಾಂತಿಯಿಂದಲೂ। **ವಿವ್ರತೇನ**—ಅನೇಕವಿಧವಾದ ಕರ್ಮದಿಂದಲೂ । **ಪಂಚ ದೇವಾನ್**—ದೇವಮಾನವಾದಿ ಪಂಚಜನರನ್ನೂ । **ಸಪ್ತ ಸಪ್ತ**—ಆದಿತ್ಯರಶ್ಮಿಮೂಲವಾದ ಸಕಲ ಸಪ್ತಸಂಖ್ಯಾಕವಾದ ತತ್ತ್ವಗಳನ್ನೂ । **ಋತುಶಃ**—ಆಯಾ ಕಾಲಕ್ಕೆ ಸರಿಯಾಗಿ । **ಚತುಸ್ತ್ರಿಂಶತಾ**—ಮೂವತ್ತುನಾಲ್ಕು ಸಂಖ್ಯೆಯುಳ್ಳ ದೇವಸಂಘಗಳೊಡನೆ । **ಪುರುಧಾ**—ಅನೇಕ ಪ್ರಕಾರವಾಗಿ । **ವಿ ಚಷ್ಟೇ**—ನೋಡುತ್ತಾನೆ.

### ಭಾವಾರ್ಥ

ಇಂದ್ರನು ತನ್ನ ತೇಜಸ್ಸಿನಿಂದ ದ್ಯಾವಾಪೃಥಿವಿಗಳನ್ನೂ, ಅಂತರಿಕ್ಷವನ್ನೂ ಪೂರ್ಣವಾಗಿ ವ್ಯಾಪಿಸುತ್ತಾನೆ. ಒಂದೇ ವಿಧವಾದ ಕಾಂತಿಯಿಂದಲೂ, ಅನೇಕವಿಧವಾದ ಕರ್ಮಗಳಿಂದಲೂ, ದೇವಮಾನವಾದಿ ಪಂಚಜನರನ್ನೂ, ಆದಿತ್ಯರಶ್ಮಿಮೂಲವಾದ ಸಕಲ ಸಪ್ತಸಂಖ್ಯಾಕವಾದ ತತ್ತ್ವಗಳನ್ನೂ ಆಯಾ ಕಾಲಕ್ಕೆ ಸರಿಯಾಗಿ ಮೂವತ್ತುನಾಲ್ಕು ಸಂಖ್ಯೆಯುಳ್ಳ ದೇವಸಂಘಗಳೊಡನೆ ಅನೇಕಪ್ರಕಾರವಾಗಿ ನೋಡುತ್ತಾನೆ.

## English Translation

He has filled heaven and earth (with his ethereal form) as well as the mid-heaven ; he contemplates in various aspects the five orders of beings, the classes of seven in their seasons, with the thirty-four (deities), (endowed) with light of like nature, and with various functions.

ಸಂಹಿತಾಪಾಠಃ

ಯದುಷ ಔಚ್ಛಃ ಪ್ರಥಮಾವಿಭಾನಾಮಜನಯೋ ಯೇನ ಪುಷ್ಟಸ್ಯ ಪುಷ್ಟಂ ।
ಯತ್ತೇಜಾಮಿತ್ವಮವರಂ ಪರಸ್ಯಾ ಮಹನ್ಮಹತ್ಯಾ ಅಸುರತ್ವಮೇಕಂ ॥ ೪ ॥

ಪದಪಾಠಃ

ಯತ್ । ಉಷಃ । ಔಚ್ಛಃ । ಪ್ರಥಮಾ । ವಿಽಭಾನಾಂ । ಅಜನಯಃ । ಯೇನ । ಪುಷ್ಟಸ್ಯ । ಪುಷ್ಟಂ ।
ಯತ್ । ತೇ । ಜಾಮಿಽತ್ವಂ । ಅವರಂ । ಪರಸ್ಯಾಃ । ಮಹತ್ । ಮಹತ್ಯಾಃ । ಅಸುರಽತ್ವಂ । ಏಕಂ ॥

ಸಾಯಣಭಾಷ್ಯಂ

ಅತ್ರ ಪ್ರಸಂಗಾತ್ಸೂರ್ಯಾತ್ಮಕೇಂದ್ರಸಂಬಂಧಿನ್ಯುಷಾಃ ಸ್ತೂಯತೇ । ಹೇ ಉಷ ಉಷೋದೇವತೇ ವಿಭಾನಾಂ ವಿಭಾಸಕಾನಾಂ ಗ್ರಹನಕ್ಷತ್ರಾದೀನಾಂ ಪ್ರಥಮಾ ಪ್ರಥಮಭೂತಾ ಸತ್ಯೌಚ್ಛಃ । ವಿಭಾಸನಮಕರೋಃ। ಅಗ್ರೇ ಹ್ಯುಷಸಃ ಪ್ರಾದುರ್ಭವಂತಿ ಪಶ್ಚಾದನ್ಯಾನಿ ತೇಜಾಂಸಿ । ಯೇನ ಚ ತೇಜಸಾ ಪುಷ್ಟಸ್ಯ ಪೋಷಯುಕ್ತಸ್ಯಾಪಿ ಪದಾರ್ಥಸ್ಯ ಪುಷ್ಟಮತಿಶಯೇನ ಪೋಷಯುಕ್ತಮಾದಿತ್ಯಮಜನಯಃ । ಉದಪಾದಯಃ । ಯತ್ ಯದ್ವಾ ತೇ ತವ ಜಾಮಿತ್ವಂ ಬಾಂಧವಮವರಮವಾಙ್ಮುಖಂ । ಅಸ್ಮದಭಿಮುಖಮಿತ್ಯರ್ಥಃ । ಕೀದೃಶ್ಯಾಸ್ತವೇತ್ಯುಚ್ಯತೇ । ಪರಸ್ಯಾಃ । ಉಪರಿ ಸ್ಥಿತಾಯಾ ಇತ್ಯರ್ಥಃ । ತದಿದಂ ಮಹತ್ಯಾಸ್ತವ ಮಹದತಿಪ್ರವೃದ್ಧಮೇಕಮಸಾಧಾರಣಮೇಕಮೇವ ವಾಸುರತ್ವಂ ಪ್ರಕೃಷ್ಟಬಲವತ್ತ್ವಂ । ತವ ಬಲೇನ ಕೃತಮಿತ್ಯರ್ಥಃ ॥

ಪ್ರತಿಪದಾರ್ಥ

**ಉಷಃ**—ಎಲೈ ಉಷೋದೇವಿಯೇ । **ಯತ್**—ಯಾವ ನಿನ್ನ ಮಹತ್ತ್ವದಿಂದ । **ವಿಭಾನಾಂ**—ಪ್ರಕಾಶಮಾನವಾದ ಆದಿತ್ಯಾದಿಗಳಿಗಿಂತಲೂ । **ಪ್ರಥಮಾ**—ಮೊದಲನೆಯವಳಾಗಿ । **ಔಚ್ಛಃ**—ನೀನು ಪ್ರಕಾಶಿಸಿದೆಯೋ। **ಯೇನ**—ಯಾವ ನಿನ್ನ ಮಾಹಾತ್ಮ್ಯದಿಂದ । **ಪುಷ್ಟಸ್ಯ**—ಪುಷ್ಟಿಯನ್ನು ಹೊಂದಿರುವ ಸಕಲ ಪದಾರ್ಥಗಳಿಗಿಂತಲೂ। **ಪುಷ್ಟಂ**—ಅತ್ಯಧಿಕವಾದ ಪುಷ್ಟಿಯನ್ನು ಹೊಂದಿರುವ ಆದಿತ್ಯನನ್ನು । **ಅಜನಯಃ**—(ಅವೆಲ್ಲಕ್ಕೂ ಪೋಷಕನಾದ ಆದಿತ್ಯನನ್ನು) ಉತ್ಪನ್ನಮಾಡಿದೆಯೋ । **ಪರಸ್ಯಾಃ**—ಉನ್ನತವಾದ ಸ್ಥಾನದಲ್ಲಿದ್ದರೂ ಸಹ । **ತೇ**—ನಿನ್ನ । **ಜಾಮಿತ್ವಂ**—ಸಂಬಂಧವು । **ಯತ್**—ಯಾವ ಔದಾರ್ಯದಿಂದ । **ಅವರಂ**—ಕೆಳಗಿನ ಲೋಕದೊಡನೆ ಸಂಬಂಧಿಸಿರುವುದೋ ಅಂತಹ । **ಮಹತ್ಯಾಃ**—ಮಹತ್ಸ್ವರೂಪವುಳ್ಳ ನಿನ್ನ । **ಮಹತ್**—ಅತ್ಯಧಿಕವಾದ । **ಅಸುರತ್ವಂ**-ಶಕ್ತಿಯು । **ಏಕಂ**—ಅಸಾಧಾರಣವಾಗಿರುತ್ತದೆ.

ಭಾವಾರ್ಥ

ಎಲೈ ಉಷೋದೇವಿಯೇ, ಯಾವ ನಿನ್ನ ಮಹತ್ತ್ವದಿಂದ ಪ್ರಕಾಶಮಾನವಾದ ಆದಿತ್ಯಾದಿಗಳಿಗಿಂತಲೂ ಮೊದಲನೆಯವಳಾಗಿ ನೀನು ಪ್ರಕಾಶಿಸಿದೆಯೋ, ಯಾವ ನಿನ್ನ ಮಾಹಾತ್ಮ್ಯದಿಂದ ಸಕಲ ಲೋಕಕ್ಕೂ ಪೋಷಕನಾದ ಆದಿತ್ಯ

ನನ್ನು ಉತ್ಪನ್ನಮಾಡಿದೆಯೋ, ನೀನು ಉನ್ನತಸ್ಥಾನದಲ್ಲಿದ್ದರೂ ಸಹ ಯಾವ ನಿನ್ನ ಔದಾರ್ಯದಿಂದ ನಿನ್ನ ಸಂಬಂಧವು ಕೆಳಗಿನ ಲೋಕದೊಡನೆ ಇರುವುದೋ ಅಂತಹ ಮಹತ್ಸ್ವರೂಪವುಳ್ಳ ಅತ್ಯಧಿಕವಾದ ಶಕ್ತಿಯು ಅಸಾಧಾರಣ ವಾಗಿರುತ್ತದೆ.

English Translalion

Since you, Ushas, shone forth the first of luminaries, whereby you begot the nourishment of nourishment (the sun); unequalled is the mighty greatness of you who are mighty, since your relationship is downwards (towards us), though you are stationed on high.

ಸಂಹಿತಾಪಾಠಃ

ವಿಧುಂ ದದ್ರಾಣಂ ಸಮನೇ ಬಹೂನಾಂ ಯುವಾನಂ ಸಂತಂ ಪಲಿತೋ ಜಗಾರ ॥ ।
ದೇವಸ್ಯ ಪಶ್ಯ ಕಾವ್ಯಂ ಮಹಿತ್ವಾದ್ಯಾ ಮಮಾರ ಸ ಹ್ಯಃ ಸಮಾನ ॥ ೫ ॥

ಪದಪಾಠಃ

ವಿಽಧುಂ । ದದ್ರಾಣಂ । ಸಮನೇ । ಬಹೂನಾಂ । ಯುವಾನಂ । ಸಂತಂ । ಪಲಿತಃ । ಜಗಾರ ।
ದೇವಸ್ಯ । ಪಶ್ಯ । ಕಾವ್ಯಂ । ಮಹಿಽತ್ವಾ । ಅದ್ಯ । ಮಮಾರ । ಸಃ । ಹ್ಯಃ । ಸಂ । ಆನ ॥ ೫ ॥

ಸಾಯಣಭಾಷ್ಯಂ

ಮಹಾವ್ರತೇ ನಿಷ್ಕೇವಲ್ಯೇ ವಿಧುಂ ದದ್ರಾಣಮಿತ್ಯೇಷಾ । ಸೂತ್ರಿತಂ ಚ । ಆ ಯಾಹ್ಯರ್ವಾಙುಪ ವಂಧುರೇಷ್ಠಾ ವಿಧುಂ ದದ್ರಾಣಮಿತಿ ॥

ಅನಯಾ ಕಾಲಾತ್ಮಕ ಇಂದ್ರಃ ಸ್ತೂಯತೇ । ವಿಧುಂ ವಿಧಾತಾರಂ ಸರ್ವಸ್ಯ ಯುದ್ಧಾದೇಃ ಕರ್ತಾರಂ । ವಿಪೂರ್ವೋ ದಧಾತಿಃ ಕರೋತ್ಯರ್ಥಃ । ತಥಾ ಸಮನೇ ಅನನಮನಃ ಪ್ರಾಣನಂ । ಸಮ್ಯಗನನೋಪೇತೇ ಸಂಗ್ರಾಮೇ ಬಹೂನಾಂ ಶತ್ರೂಣಾಂ ದದ್ರಾಣಂ ದ್ರಾವಕಂ ಈದೃಕ್ಸಾಮರ್ಥ್ಯೋಪೇತಂ ಯುವಾನಂ ಸಂತಂ ಪುರುಷಂ ಪಲಿತೋ ಜರಾ ಜಗಾರ । ನಿಗಿರತೀಂದ್ರಾಜ್ಞಯಾ । ಏವಮುಕ್ತಲಕ್ಷಣಂ ವಕ್ಷ್ಯಮಾಣಲಕ್ಷಣಂ ಚ ದೇವಸ್ಯ ಕಾಲಾತ್ಮಕಸ್ಯೇಂದ್ರಸ್ಯ ಮಹಿತ್ವಾ ಮಹತ್ತ್ವೇನೋಪೇತಂ ಕಾವ್ಯಂ ಸಾಮರ್ಥ್ಯಂ ಪಶ್ಯ । ಪಶ್ಯತ ಹೇ ಜನಾಃ । ತಥಾ ಜರಸಾ ಪ್ರಾಪ್ತೋಽಯಂ ಮಮಾರ । ಮ್ರಿಯತೇ । ಸ ಹ್ಯಃ ಪರೇದ್ಯುಃ ಸಮಾನ । ಸಮ್ಯಕ್ಚೇಷ್ಟತೇ । ಪುನರ್ಜನ್ಮಾಂತರೇ ಪ್ರಾದುರ್ಭವತೀತ್ಯರ್ಥಃ । ತದೇವಂ ಚತ್ವಾರಿ ನಾಮಾನಿ ಶರೀರಾಣ್ಯುಕ್ತಾನಿ ॥

ಪ್ರತಿಪದಾರ್ಥ

**ವಿಧುಂ**—ಅನೇಕ ಯುದ್ಧಗಳನ್ನು ನಿರ್ವಹಿಸುವ ಸಾಮರ್ಥ್ಯವುಳ್ಳವನೂ | **ಸಮನೇ**—ಯುದ್ಧದಲ್ಲಿ | **ಬಹೂನಾಂ**—ಅನೇಕ ಶತ್ರುಗಳನ್ನು | **ದದ್ರಾಣಂ**—ಓಡಿಸತಕ್ಕವನೂ ಆದ ಪುರುಷನು | **ಯುವಾನಂ**--**ಸಂತಂ**— ಯುವಕನಾಗಿದ್ದರೂ ಸಹ | **ಪಲಿತಃ**—ಮುಪ್ಪು | **ಜಗಾರ**—ಅವನನ್ನು ಆವರಿಸುತ್ತದೆ | **ದೇವಸ್ಯ**—(ಎಲೈ ಮಾನವರೇ) ಕಾಲಾತ್ಮಕನಾದ ಇಂದ್ರನ | **ಮಹಿತ್ವಾ**—ಮಾಹಾತ್ಮ್ಯಯುಕ್ತವಾದ | **ಕಾವ್ಯಂ**— ಸಾಮರ್ಥ್ಯವನ್ನು | **ಪಶ್ಯ**—ನೋಡಿರಿ | **ಸಃ**—ಅದೇ ಪುರುಷನು | **ಅದ್ಯ**—ಇಂದು | **ಮಮಾರ**—ಮರಣವನ್ನು ಹೊಂದುತ್ತಾನೆ | **ಹ್ಯಃ**—ಮಾರನೆಯ ದಿನ | **ಸಮಾನ**—ಪುನಃ ಉಸಿರಾಡುತ್ತಾನೆ (ಪುನರ್ಜನ್ಮವನ್ನು ಹೊಂದುತ್ತಾನೆ).

ಭಾವಾರ್ಥ

ಅನೇಕ ಯುದ್ಧಗಳನ್ನು ನಿರ್ವಹಿಸುವ ಸಾಮರ್ಥ್ಯವುಳ್ಳವನೂ, ಯುದ್ಧದಲ್ಲಿ ಅನೇಕ ಶತ್ರುಗಳನ್ನು ನಾಶಮಾಡತಕ್ಕವನೂ ಆದ ಪುರುಷನು ಯುವಕನಾಗಿದ್ದರೂ ಸಹ ಮುಪ್ಪು ಅವನನ್ನು ಆವರಿಸುತ್ತದೆ. ಎಲೈ ಮಾನವರೇ, ಕಾಲಾತ್ಮಕನಾದ ಇಂದ್ರನ ಮಾಹಾತ್ಮ್ಯಯುಕ್ತವಾದ ಸಾಮರ್ಥ್ಯವನ್ನು ನೋಡಿರಿ. ಅದೇ ಪುರುಷನು ಇಂದು ಮರಣವನ್ನು ಹೊಂದುತ್ತಾನೆ. ಪುನಃ ಕಾಲಾನಂತರ ಪುನರ್ಜನ್ಮವನ್ನು ಹೊಂದುತ್ತಾನೆ.

## English Translation

The grey-haired has swallowed the warlike (man), the scatterer of many foes, in battle being young; behold the power of the deity (endowed) with might ; he dies to-day ; he is alive to-morrow.

ವಿಶೇಷವಿಷಯಗಳು

ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ **ವಿಧುಂ ದದ್ರಾಣಂ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಐತರೇಯಾರಣ್ಯಕದ— **ಆ ಯಾಹ್ಯರ್ವಾಙುಪ ವಂಧುರೇಷ್ಠಾ ವಿಧುಂ ದದ್ರಾಣಂ** ಎಂಬ ವಾಕ್ಯದಿಂದ (ಐ. ಆ. ೫-೩-೧) ವಿವೃತವಾಗಿರುವುದು.

ಸಂಹಿತಾಪಾಠಃ

**ಶಾಕ್ಮನಾ ಶಾಕೋ ಅರುಣಃ ಸುಪರ್ಣ ಆ ಯೋ ಮಹಃ ಶೂರಃ ಸನಾದನೀಳಃ ||**
**ಯಚ್ಚಿಕೇತ ಸತ್ಯಮಿತ್ತನ್ನ ಮೋಘಂ ವಸು ಸ್ಪಾರ್ಹಮುತ ಜೇತೋತ ದಾತಾ || ೬ ||**

ಪದಪಾಠಃ

**ಶಾಕ್ಮನಾ | ಶಾಕಃ | ಅರುಣಃ | ಸುऽಪರ್ಣಃ | ಆ | ಯಃ | ಮಹಃ | ಶೂರಃ | ಸನಾತ್ | ಅನೀಳಃ |**

ಯತ್ । ಚಿಕೇತ । ಸತ್ಯಂ । ಇತ್ । ತತ್ । ನ । ಮೋಘಂ । ವಸು । ಸ್ಪಾರ್ಹಂ । ಉತ । ಜೇತಾ । ಉತ । ದಾತಾ ॥ ೬ ॥

ಸಾಯಣಭಾಷ್ಯಂ

ಶಾಕ್ಮನಾ । ಶಕ್ತ್ಯೈವ ಶಾಕ್ಮ । ಶಕ್ಮನಾ ಬಲೇನ ಶಾಕಃ ಶಕ್ತಃ ॥ ಶಕ್ಲೃ ಶಕ್ತೌ । ಸ್ವಶಕ್ತ್ಯೈವ ಸರ್ವಂ ಕರ್ತುಂ ಶಕ್ತ ಇತ್ಯರ್ಥಃ। ನ ಹೀಂದ್ರಸ್ಯ ಸಹಾಯೋಂತರಾಪೇಕ್ಷಾಸ್ತೀಂದ್ರತ್ವಾದೇವ । ಅರುಣೋಽರುಣವರ್ಣಃ ಸುಪರ್ಣಃ ಕಶ್ಚಿಚ್ಛೋಭನಪರ್ಣಃ ಪಕ್ಷ್ಯಾ ಗಚ್ಛತೀತ್ಯಧ್ಯಾಹಾರಃ । ಉಪಸರ್ಗ-ಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ । ಯೋ ಮಹೋ ಮಹಾಞ್ಶೂರೋ ವಿಕ್ರಾಂತಃ ಸನಾತ್ ಪುರಾಣೋಽನೀಳೋಽನೀಡೋ ನೀಡಸ್ಯಾಕರ್ತಾ । ನ ಹೀಂದ್ರೋಽಗ್ನಿವತ್ ಕುತ್ರಚಿದಪಿ ಯಜ್ಞೇ ನಿಕೇತನಂ ಕರೋತಿ । ಏವಂ ಸುಪರ್ಣರೂಪೇಣೇಂದ್ರಮಾಹ । ಸ ಪಕ್ಷೀಂದ್ರೋ ಯಚ್ಚಿಕೇತ ಕರ್ತವ್ಯ-ತ್ವೇನ ಜಾನಾತಿ ತತ್ಸತ್ಯಮಿತ್ ಸತ್ಯಮೇವ ನ ತು ಮೋಘಂ ವ್ಯರ್ಥಂ ಭವತಿ । ಸ ಸ್ಪಾರ್ಹಂ ಸ್ಪೃಹ-ಣೀಯಂ ವಸೂತ ಜೇತಾ ಜಯತಿ ಶತ್ರುಭ್ಯಃ ಸಕಾಶಾತ್ ಉತಾಪಿ ದಾತಾ ಪ್ರಯಚ್ಛತಿ ಚ ಸ್ತೋತೃಭ್ಯಃ॥ ನ ಲೋಕಾವ್ಯಯೇತ್ಯಾದಿನಾ ಷಷ್ಠೀಪ್ರತಿಷೇಧಃ ॥

ಪ್ರತಿಪದಾರ್ಥ

**ಶಕ್ಮನಾ**—ಅಂತಶ್ಶಕ್ತಿಯೊಡಗೂಡಿದ । **ಶಾಕಃ**—ಬಲದೊಡನೆ ಕೂಡಿ । **ಯಃ**—ಯಾವ ಇಂದ್ರನು । **ಮಹಃ**—ಮಹಾತ್ಮನೂ । **ಶೂರಃ**—ಪರಾಕ್ರಮಿಯೂ । **ಸನಾತ್**—ಪುರಾತನನೂ । **ಅನೀಳಃ**—ಗೂಡಿಲ್ಲದ। **ಸುಪರ್ಣಃ**—ಪಕ್ಷಿರೂಪನೂ ಆಗಿರುವನೋ ಅಂತಹ । **ಅರುಣಃ**—ಹೊಂಬಣ್ಣದ ಇಂದ್ರನು । **ಆ**—ಬರುತ್ತಾನೆ। (**ಸಃ**—ಅದೇ ಇಂದ್ರನು) । **ಯತ್**—ಯಾವುದನ್ನು । **ಚಿಕೇತ**—ಅರಿಯುವನೋ । **ತತ್**—ಅದು । **ಸತ್ಯಂ ಇತ್**—ಸತ್ಯಾತ್ಮಕವಾಗಿಯೇ ಇದೆ । **ನ ಮೋಘಂ**—ಸುಳ್ಳಲ್ಲ ! **ಸ್ಪಾರ್ಹಂ**—ಎಲ್ಲರೂ ಅಪೇಕ್ಷಿಸುವ । **ವಸು**—ಧನವನ್ನು । **ಜೇತಾ**—ಜಯಿಸುವವನೂ । **ಉತ**—ಮತ್ತು । **ದಾತಾ**—ದಾನಮಾಡುವವನೂ ಆಗಿದ್ದಾನೆ.

ಭಾವಾರ್ಥ

ಅಂತಶ್ಶಕ್ತಿಯೊಡಗೂಡಿದ ಯಾವ ಇಂದ್ರನು ಮಹಾತ್ಮನೂ, ಪರಾಕ್ರಮಿಯೂ, ಪುರಾತನನೂ, ಗೂಡಿಲ್ಲದ ಪಕ್ಷಿರೂಪನೂ ಆಗಿರುವನೋ ಅಂತಹ ಹೊಂಬಣ್ಣದ ಇಂದ್ರನು ಬರುತ್ತಾನೆ. ಅದೇ ಇಂದ್ರನು ಯಾವುದನ್ನು ಅರಿಯುವನೋ ಅದು ಸತ್ಯಾತ್ಮಕವಾಗಿಯೇ ಇರುತ್ತದೆ. ಅದು ಸುಳ್ಳಾಗುವುದಿಲ್ಲ. ಇಂದ್ರನು ಆಕರ್ಷಕವಾದ ಧನವನ್ನು ಜಯಿಸುವವನೂ, ಅದನ್ನು ಕೊಡುವವನೂ ಆಗಿದ್ದಾನೆ.

## English Translation

Vigorous with (innate) vigour, (comes a) purple-coloured bird, mighty, heroic, ancient, having no nest : that which he knows is truth, and is not vain : (he is) the conqueror and distributor of desirable wealth.

ಸಂಹಿತಾಪಾಠಃ

ಐಭಿರ್ದದೇ ವೃಷ್ಣ್ಯಾ ಪೌಂಸ್ಯಾನಿ ಯೇಭಿರೌಕ್ಷದ್ವೃತ್ರಹತ್ಯಾಯ ವಜ್ರೀ ।
ಯೇ ಕರ್ಮಣಃ ಕ್ರಿಯಮಾಣಸ್ಯ ಮಹ್ನ ಋತೇಕರ್ಮಮುದಜಾಯಂತ ದೇವಾಃ ॥ ೭ ॥

ಪದಪಾಠಃ

ಆ । ಏಭಿಃ । ದದೇ । ವೃಷ್ಣ್ಯಾ । ಪೌಂಸ್ಯಾನಿ । ಯೇಭಿಃ । ಔಕ್ಷತ್ । ವೃತ್ರಽಹತ್ಯಾಯ । ವಜ್ರೀ ।
ಯೇ । ಕರ್ಮಣಃ । ಕ್ರಿಯಮಾಣಸ್ಯ । ಮಹ್ನಾ । ಋತೇಽಕರ್ಮಂ । ಉತ್ಽಅಜಾಯಂತ । ದೇವಾಃ ॥

ಸಾಯಣಭಾಷ್ಯಂ

ಇಂದ್ರ ಏಭಿರ್ಮರುದ್ಭಿಃ ಸಹ ವೃಷ್ಣ್ಯಾನಿ ವರ್ಷಕಾಣಿ ಪೌಂಸ್ಯಾನಿ ಬಲಾನ್ಯಾದದೇ । ಆದತ್ತೇ । ಯೇಭಿರ್ಮರುದ್ಭಿಃ ಸಹಿತೋ ವೃತ್ರಹತ್ಯಾಯ । ಪ್ರಾಣ್ಯುಪಕಾರಕವೃಷ್ಟ್ಯಾವರಕತ್ವಾದ್ವೃತ್ರಃ ಪಾಪಂ । ತಸ್ಯ ಹತ್ಯಾಯ । ಮನುಷ್ಯಾಣಾಮುಪದ್ರವಶಮನಾಯೇತ್ಯರ್ಥಃ । ತದರ್ಥಂ ವಜ್ರೀ ವಜ್ರವಾನಿಂದ್ರ ಔಕ್ಷತ್ । ವರ್ಷತಿ । ಯೇ ಚ ಮರುತೋ ದೇವಾ ಮಹ್ನಾ ಮಹತೇಂದ್ರೇಣ ಕ್ರಿಯಮಾಣಸ್ಯ ಕರ್ಮಣೋ ವೃಷ್ಟಿಪ್ರದಾನಲಕ್ಷಣಸ್ಯ ಸಾಹಾಯ್ಯಾರ್ಥಮೃತೇಕರ್ಮ ಮೃತಕರ್ಮವೃಷ್ಟಿಪ್ರದಾನಕರ್ಮ ಪ್ರತ್ಯುದಜಾಯಂತ ಉನ್ಮುಖಾ ಜಾಯಂತೇ ಸ್ವಯಮೇವ ತೈರೇಭಿರ್ದದ ಇತಿ ಸಮನ್ವಯಃ ॥

ಪ್ರತಿಪದಾರ್ಥ

**ಯೇಭಿಃ**—ಯಾವ ಮರುದ್ಗಣಗಳೊಂದಿಗೆ ಕೂಡಿದ । **ವಜ್ರೀ**—ಇಂದ್ರನು । **ವೃತ್ರಹತ್ಯಾಯ**—ಪಾಪನಾಶಕ್ಕಾಗಿ । **ಔಕ್ಷತ್**—ವೃಷ್ಟಿಯನ್ನು ಸುರಿಸಿದನೋ । **ದೇವಾಃ**—ದೇವತಾತ್ಮರಾದ । **ಯೇ**—ಯಾವ ಮರುತ್ತುಗಳು । **ಮಹ್ನಾ**—ಮಹಾತ್ಮನಾದ ಇಂದ್ರನಿಂದ । **ಕ್ರಿಯಮಾಣಸ್ಯ**—ನಿರ್ವಹಿಸಲ್ಪಡಬೇಕಾದ । **ಕರ್ಮಣಃ**—ಕಾರ್ಯಕ್ಕಾಗಿ । **ಋತೇಕರ್ಮಂ**—ವೃಷ್ಟಿಪ್ರದಾನಾದಿ ಕರ್ಮಗಳನ್ನು ರಕ್ಷಿಸಿ । **ಉದಜಾಯಂತ**—ಉತ್ಪನ್ನರಾದರೋ ಅಂತಹ । **ಏಭಿಃ**—ಮರುತ್ತುಗಳೊಡನೆ । **ವೃಷ್ಣ್ಯಾ**—ವರ್ಷಕಾರಕವಾದ । **ಪೌಂಸ್ಯಾನಿ**—ಶಕ್ತಿಗಳನ್ನು । **ಆ ದದೇ**—ಸ್ವೀಕರಿಸುತ್ತಾನೆ.

ಭಾವಾರ್ಥ

ಯಾವ ಮರುದ್ಗಣಗಳೊಂದಿಗೆ ಕೂಡಿದ ಇಂದ್ರನು ಪಾಪನಾಶಕ್ಕಾಗಿ ವೃಷ್ಟಿಯನ್ನು ಸುರಿಸಿದನೋ, ದೇವತಾತ್ಮರಾದ ಯಾವ ಮರುತ್ತುಗಳು ಮಹಾತ್ಮನಾದ ಇಂದ್ರನಿಂದ ನಿರ್ವಹಿಸಲ್ಪಡಬೇಕಾದ ಕಾರ್ಯಕ್ಕಾಗಿ ವೃಷ್ಟಿಪ್ರದಾನಾದಿ ಕರ್ಮಗಳನ್ನು ಲಕ್ಷಿಸಿ ಉತ್ಪನ್ನರಾದರೋ ಅಂತಹ ಮರುತ್ತುಗಳೊಡನೆ ವರ್ಷಕಾರಕವಾದ ಶಕ್ತಿಗಳನ್ನು ಸ್ವೀಕರಿಸುತ್ತಾನೆ.

## English Translatin

Indra bestows fertilizing energies (accompained by these Maruts) in whose company the thunderer sends down showers in order to destroy sin : the deities who were born for giving rain (to asist) in the act performed by great Indra.

ಸಂಹಿತಾಪಾಠಃ

ಯುಜಾ ಕರ್ಮಾಣಿ ಜನಯನ್ವಿಶ್ವೌಜಾ ಅಶಸ್ತಿಹಾ ವಿಶ್ವಮನಾಸ್ತುರಾ-
ಷಾಟ್ ।
ಪೀತ್ವೀ ಸೋಮಸ್ಯ ದಿವ ಆ ವೃಧಾನಃ ಶೂರೋ ನಿರ್ಯುಧಾಧಮದ್ದಸ್ಯೂನ್ ॥

ಪದಪಾಠಃ

ಯುಜಾ । ಕರ್ಮಾಣಿ । ಜನಯನ್ । ವಿಶ್ವಽಓಜಾಃ । ಅಶಸ್ತಿಽಹಾ । ವಿಶ್ವಽಮನಾಃ । ತುರಾಷಾಟ್ ।
ಪೀತ್ವೀ । ಸೋಮಸ್ಯ । ದಿವಃ । ಆ । ವೃಧಾನಃ । ಶೂರಃ । ನಿಃ । ಯುಧಾ । ಅಧಮತ್ । ದಸ್ಯೂನ್ ॥

ಸಾಯಣಭಾಷ್ಯಂ

ಸ ಇಂದ್ರೋ ಯುಜಾ ಮರುತಾಂ ಸಾಹಾಯ್ಯೇನ ಕರ್ಮಾಣಿ ಪ್ರವರ್ಷಣಾದೀನಿ ಜನಯನ್ನು-ತ್ಪಾದಯನ್ ವಿಶ್ವೌಜಾ ವ್ಯಾಪ್ತಬಲೋಽಶಸ್ತಿಹಾ ರಕ್ಷೋಹಾ ವಿಶ್ವಮನಾ ವ್ಯಾಪ್ತಮನಾ ಅತ್ಯಂತಂ ಮನಸ್ವೀ ತುರಾಷಾಟ್ ತೂರ್ಣಮಭಿಭವಿತಾ ಶತ್ರೂಣಾಂ । ಏವಂ ಮಹಾನುಭಾವ ಇಂದ್ರಃ ಸೋಮಸ್ಯ ಸೋಮಂ ಪೀತ್ವೀ ಪೀತ್ವಾ ದಿವೋ ದ್ಯುಲೋಕಾದಾಗತ್ಯ ಸೋಮಂ ಪೀತ್ವಾ ವೃಧಾನೋ ವರ್ಧಮಾನಃ ಶೂರಃ ಸನ್ ಯುಧಾಯುಧೇನ ಪ್ರಹಾರೇಣ ವಾ ದಸ್ಯೂನ್ಶತ್ರೂನ್ನಿರಧಮತ್ । ನಿರ್ಧಮತಿ । ಯುದ್ಧೇನಾಸುರಾನಪಬಾಧತ ಇತ್ಯರ್ಥಃ ॥

ಪ್ರತಿಪದಾರ್ಥ

**ಯುಜಾ**—ಮರುತ್ತುಗಳೊಡಗೂಡಿ । **ಕರ್ಮಾಣಿ**—ವೃಷ್ಟ್ಯಾದಿಕರ್ಮಗಳನ್ನು । **ಜನಯನ್**—ಉತ್ಪನ್ನಮಾಡುತ್ತ । **ವಿಶ್ವೌಜಾಃ**—ಸರ್ವತ್ರ ವ್ಯಾಪಿಸಿದ ಬಲವುಳ್ಳವನೂ । **ಅಶಸ್ತಿಹಾ**—ದುಷ್ಟನಾಶಕನೂ । **ವಿಶ್ವಮನಾಃ**—ಸರ್ವತ್ರ ಪ್ರಸರಿಸಿದ ಮನಸ್ಸುಳ್ಳವನೂ । **ತುರಾಷಾಟ್**—ಶತ್ರುಗಳನ್ನು ಶೀಘ್ರವಾಗಿ ಜಯಿಸುವವನೂ । **ಸೋಮಸ್ಯ**—ಸೋಮವನ್ನು । **ಪೀತ್ವೀ**—ಪಾನಮಾಡಿ । **ದಿವಃ**—ದ್ಯುಲೋಕದಿಂದ ಬಂದು । **ವೃಧಾನಃ**—ವೃದ್ಧಿಯನ್ನು ಹೊಂದಿದವನೂ । **ಶೂರಃ**—ಪರಾಕ್ರಮಿಯೂ ಆದ ಇಂದ್ರನು । **ಯುಧಾ**—ಆಯುಧಗಳಿಂದ । **ದಸ್ಯೂನ್**—ಶತ್ರುಗಳನ್ನು । **ನಿಃ ಅಧಮತ್**—ನಾಶಮಾಡುತ್ತಾನೆ.

### ಭಾವಾರ್ಥ

ಮರುತ್ತುಗಳೊಡಗೂಡಿ ವೃಷ್ಟ್ಯಾದಿಕರ್ಮಗಳನ್ನು ಉತ್ಪನ್ನಮಾಡುತ್ತ ಸರ್ವತ್ರ ವ್ಯಾಪಿಸಿದ ಬಲವುಳ್ಳವನೂ, ದುಷ್ಟನಾಶಕನೂ, ಸರ್ವತ್ರ ಪ್ರಸರಿಸಿದ ಮನಸ್ಸುಳ್ಳವನೂ, ಶತ್ರುಗಳನ್ನು ಶೀಘ್ರವಾಗಿ ಜಯಿಸುವವನೂ, ಸೋಮವನ್ನು ಪಾನಮಾಡಿ ದ್ಯುಲೋಕದಿಂದ ಬಂದು ವೃದ್ಧಿಯನ್ನು ಹೊಂದಿದವನೂ, ಪರಾಕ್ರಮಿಯೂ ಆದ ಇಂದ್ರನು ಆಯುಧಗಳಿಂದ ಶತ್ರುಗಳನ್ನು ನಾಶಮಾಡುತ್ತಾನೆ.

### English Translation

Accomplishing his duty with their assistance, the all-powerful Indra, the destroyer of the wicked, the all-wise, the quick subduer of foes, descending from heaven, and quaffing the Soma, invigorated and a hero he demolishes the Dasyus with his thunderbolt.

## ಐವತ್ತಾರನೆಯ ಸೂಕ್ತ

### ಪೀಠಿಕೆ

ಈ ಸೂಕ್ತದ ಋಷಿಯಾದ ಬೃಹದುಕ್ಥನು ತನ್ನ ವಾಜಿ ಎಂಬ ಮಗನು ಮೃತನಾಗಲು ಶೋಕಸಂತಪ್ತನಾಗಿ ಮೃತನ ನಾನಾ ಅಂಶಗಳು ಪಂಚಮಹಾಭೂತಗಳಲ್ಲಿ ಸೇರಿಹೋಗಲೆಂದು ಈ ಸೂಕ್ತದಲ್ಲಿ ಹೇಳಿದಾನೆ. ಅದರಂತೆ— ಶರೀರದಲ್ಲಿ ಶಾಖ (ಔಷ್ಣ್ಯ) ರೂಪದಿಂದ ಇದ್ದ ಅಗ್ನಿಯು ಬಾಹ್ಯಾಗ್ನಿಯಲ್ಲಿ ಸೇರಿಹೋಗಲೆಂದೂ ಅದರಂತೆ ಪ್ರಾಣ ವಾಯುವು ಆಕಾಶದಲ್ಲಿರುವ ಬಾಹ್ಯವಾಯುವಿನಲ್ಲಿಯೂ, ಆತ್ಮವು ಸ್ವರ್ಗದಲ್ಲಿ ಬೆಳಗುತ್ತಿರುವ ಪರಬ್ರಹ್ಮಸ್ವರೂಪವಾದ ಸೂರ್ಯನಲ್ಲಿ ಸೇರಿ ಐಕ್ಯವಾಗಲೆಂದೂ ಆಶಿಸಿದ್ದಾನೆ. ಈ ವಿಷಯಗಳನ್ನೇ ಈ ಸೂಕ್ತದ ಋಕ್ಕುಗಳಲ್ಲಿ ವಿವರಿಸಲಾಗಿದೆ.

### ಸಾಯಣಭಾಷ್ಯಂ

**ಇದಂ ತ ಇತಿ ಸಪ್ತರ್ಚಂ ಚತುರ್ದಶಂ ಸೂಕ್ತಂ। ವಾಮದೇವಪುತ್ರೋ ಬೃಹದುಕ್ಥ ಋಷಿಃ। ಚತುರ್ಥೀಪಂಚಮೀಷಷ್ಠ್ಯೋ ಜಗತ್ಯಃ। ಆದಿತಸ್ತಿಸ್ರಃ ಸಪ್ತಮೀ ಚ ತ್ರಿಷ್ಟುಭಃ। ವಿಶ್ವೇ ದೇವಾ ದೇವತಾ। ತಥಾ ಚಾನುಕ್ರಾಂತಂ। ಇದಂ ತೇ ಸಪ್ತ ವೈಶ್ವದೇವಂ ತು ಚತುರ್ಥ್ಯಾದ್ಯಾಸ್ತಿಸ್ರೋ ಜಗತ್ಯ ಇತಿ॥ ಗತಃ ಸೂಕ್ತವಿನಿಯೋಗಃ॥ ಆಹವನೀಯೇ ವಾದ್ಯಾದಿಕಾರಣೇನಾಯತನಾನ್ನಿಷ್ಕ್ರಮ್ಯ ಶಮ್ಯಾ-ಪರಾಸಾದರ್ವಾಚೀನೇ ದೇಶೇ ದೀಪ್ಯಮಾನೇ ಸತಿ ತಮಗ್ನಿಮನಯಾ ಪುನರಾಯತನೇ ಸಂವಪೇತ್। ಸೂತ್ರಿತಂ ಚ। ಆಹವನೀಯಮನುವದೀಪ್ಯಮಾನಮರ್ವಾಕ್ ಶಮ್ಯಾಪರಾಸಾದಿದಂ ತ ಏಕಂ ಪರ ಊ ತ ಏಕಮಿತಿ ಸಂವಪೇತ್। ಆ. ೩-೧೦। ಇತಿ॥**

ಅನುವಾದವು—**ಇದಂ ತ ಏಕಂ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವಪುತ್ರನಾದ ಬೃಹದುಕ್ಥನೆಂಬುವನು ಋಷಿಯು; ಈ ಸೂಕ್ತದ ನಾಲ್ಕು, ಐದು, ಆರನೆಯ ಋಕ್ಕುಗಳು ಜಗತೀಛಂದಸ್ಸುವು. ಸೂಕ್ತದ ಮೊದಲ ಮೂರು ಋಕ್ಕುಗಳೂ ಏಳನೆಯ ಋಕ್ಕೂ ತ್ರಿಷ್ಟುಪ್‌ಛಂದಸ್ಸುವು. ವಿಶ್ವೇದೇವತೆಗಳು ದೇವತೆಯು; ಅನುಕ್ರಮಣಿಕೆಯಲ್ಲಿ—

ಇದಂ ತೇ ಸಪ್ತ ವೈಶ್ವದೇವಂ ತು ಚತುರ್ಥ್ಯಾದ್ಯಾಸ್ತಿಸ್ರೋ ಜಗತ್ಯಃ ಎಂದು ಹೇಳಿರುವುದು. ಸೂಕ್ತ ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೬

ಮಂಡಲ—೧೦ || ಅನುವಾಕ—೪ || ಸೂಕ್ತ—೫೬ ||
ಅಷ್ಟಕ—೮ || ಅಧ್ಯಾಯ—೧ || ವರ್ಗ—೧೮ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ||
ಋಷಿಃ—ಬೃಹದುಕ್ಥೋ ವಾಮದೇವ್ಯಃ ||
ದೇವತಾ—ವಿಶ್ವೇ ದೇವಾಃ ||
ಛಂದಃ—೧-೩, ೭. ತ್ರಿಷ್ಟುಪ್ | ೪-೬. ಜಗತೀ ||

ಸಂಹಿತಾಪಾಠಃ

ಇದಂ ತ ಏಕಂ ಪರ ಊ ತ ಏಕಂ ತೃತೀಯೇನ ಜ್ಯೋತಿಷಾ ಸಂ ವಿಶಸ್ವ ।
ಸಂವೇಶನೇ ತನ್ವಶ್ಚಾರುರೇಧಿ ಪ್ರಿಯೋ ದೇವಾನಾಂ ಪರಮೇ ಜನಿತ್ರೇ ||

ಪದಪಾಠಃ

ಇದಂ | ತೇ | ಏಕಂ | ಪರಃ | ಊಂ ಇತಿ | ತೇ | ಏಕಂ | ತೃತೀಯೇನ | ಜ್ಯೋತಿಷಾ | ಸಂ | ವಿಶಸ್ವ |
ಸಂऽವೇಶನೇ | ತನ್ವಃ | ಚಾರುಃ | ಏಧಿ | ಪ್ರಿಯಃ | ದೇವಾನಾಂ | ಪರಮೇ | ಜನಿತ್ರೇ || ೧ ||

ಸಾಯಣಭಾಷ್ಯಂ

ಏತದಾದಿಭಿರ್ಬೃಹದುಕ್ಥೋ ವಾಜಿನಂ ನಾಮ ಸ್ವಪುತ್ರಂ ಮೃತಂ ವದತಿ | ಹೇ ಮೃತ ಪುತ್ರ ತೇ ತವೇದಂ | ಉಪರಿ ಜ್ಯೋತಿಷೇತಿ ವಕ್ಷ್ಯಮಾಣತ್ವಾದತ್ರೇದಂಶಬ್ದೇನ ಜ್ಯೋತಿರಭಿಧೀಯತೇ | ಇದಂ ಜ್ಯೋತಿರಗ್ನ್ಯಾಖ್ಯಮೇಕಮೇಕೋಽಂಶಃ | ಅತಸ್ತಮಗ್ನಿಂ ತವ ದೇಹಗತಾಗ್ನ್ಯಂಶೇನ ಬಾಹ್ಯಮಗ್ನಿಂ ಸಂ ವಿಶಸ್ವ | ಸಂಗಚ್ಛಸ್ವ | ತಥಾ ಪರ ಉ ಅನ್ಯೋಽಪಿ ತೇ ತವೈಕಂ ವಾಯ್ವಾಖ್ಯೋಽಂಶಃ | ತೇ ತವ ಪ್ರಾಣವಾಯ್ವಾಖ್ಯೇನಾಂಶೇನ ಸಂವಿಶಸ್ವ | ಶರೀರಾಗ್ನಿಪ್ರಾಣವಾಯ್ವೋರ್ಬಾಹ್ಯಾಗ್ನಿವಾಯ್ವೋಶ್ಚೈಕತ್ವಾ-ದಂಶತ್ವಮಿತಿ ಭಾವಃ | ತಥಾ ತೃತೀಯೇನ ಜ್ಯೋತಿಷಾದಿತ್ಯಾಖ್ಯೇನ ತೇಜಸಾ ತವಾತ್ಮನಾ ಸಂವಿಶಸ್ವ | ಸೂರ್ಯಗತಾತ್ಮಚೈತನ್ಯದೇಹಗತಾತ್ಮಚೈತನ್ಯಯೋರಭೇದಾದಂಶತ್ವಂ | ತದ್ಯೋಽಹಂ ಸೋಽಸೌ ಯೋಽಸೌ ಸೋಽಹಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚೇತಿ ಶ್ರುತೇರಾತ್ಮನಃ ಸೂರ್ಯಪ್ರವೇಶೋ ಯುಕ್ತಃ | ತನ್ವಸ್ತನ್ವಾಃ ಸಂವೇಶನೇ ತಸ್ಮಿನ್ಸೂರ್ಯೇ ಸಂವಿಶ್ಯ ಚಾರುರೇಧಿ | ಕಲ್ಯಾಣೋ ಭವ | ಕೀದೃಶಸ್ತ್ವಂ | ಪ್ರಿಯಸ್ತೇನ ಸಹ ಪ್ರೀಯಮಾಣಃ | ಕೀದೃಶೇ ತಸ್ಮಿನ್ | ದೇವಾನಾಂ ಪರಮ ಉತ್ತಮೇ ಜನಿತ್ರೇ ಜನಕೇ | ದೇವಾನಾಂ ಹ್ಯೇತತ್ಪರಮಂ ಜನಿತ್ರಂ ಯತ್ಸೂರ್ಯ ಇತಿ ಹಿ ಶ್ರುತಿಃ ||

ಪ್ರತಿಪದಾರ್ಥ

(ಎಲೈ ಮೃತಪುತ್ರನೇ, ನೀನು) **ತೇ**—ನಿನ್ನ । **ಇದಂ**—ಶರೀರಸಂಬಂಧವಾದ ಎಂದರೆ ಇದುವರೆಗೂ ಶರೀರಾಂತರ್ಗತವಾದ । **ಏಕಂ**—ತೇಜಸ್ಸಿನ ಒಂದು ಅಂಶದಿಂದ । **ಸಂ ವಿಶಸ್ವ**—ಬಾಹ್ಯಾಗ್ನಿಯನ್ನು ಪ್ರವೇಶಿಸಿ ಅದರೊಡನೆ ಐಕ್ಯವಾಗು (ಹಾಗೆಯೇ) । **ತೇ**—ನಿನ್ನ । **ಪರಃ ಉ**—ಶರೀರಾಂತರ್ಗತವಾದ ಪ್ರಾಣವಾಯುವಿನ । **ಏಕಂ**—ಮತ್ತೊಂದು ಅಂಶದಿಂದ । (**ಸಂ ವಿಶಸ್ವ**—ಬಾಹ್ಯವಾಯುವನ್ನು ಪ್ರವೇಶಿಸಿ ಅದರಲ್ಲಿ ಅಂತರ್ಗತನಾಗು (ಮತ್ತು) । **ತೃತೀಯೇನ ಜ್ಯೋತಿಷಾ**—ಮೂರನೆಯ ತೇಜಸ್ಸೆನಿಸಿದ ಆದಿತ್ಯನ ತೇಜಸ್ಸಿನೊಡನೆ । **ಸಂ ವಿಶಸ್ವ**-ನಿನ್ನ ಆತ್ಮದಿಂದ ಪ್ರವೇಶಿಸಿ ಅದರಲ್ಲಿ ಐಕ್ಯನಾಗು) । **ದೇವಾನಾಂ**—ದೇವತೆಗಳಿಗೆ। **ಪರಮೇ**—ಅತ್ಯುತ್ಕೃಷ್ಟವಾದ । **ಜನಿತ್ರೇ**—ಉತ್ಪತ್ತಿಸ್ಥಾನವಾದ ಆದಿತ್ಯನಲ್ಲಿ । **ತನ್ವಃ**—ನಿನ್ನ ಶರೀರಾಂಶಗಳ। **ಸಂವೇಶನೇ**—ಪ್ರವೇಶಕಾಲದಲ್ಲಿ । **ಪ್ರಿಯಃ**—ಆದಿತ್ಯನ ಪ್ರೀತಿಪಾತ್ರನಾಗಿ । **ಚಾರುಃ**—ಹರ್ಷವನ್ನು । **ಏಧಿ**–ಹೊಂದು.

ಭಾವಾರ್ಥ

ಎಲೈ ಮೃತಪುತ್ರನೇ, ನೀನು ನಿನ್ನ ದೇಹದ ಅಗ್ನಿರೂಪವಾದ ಅಂಶದಿಂದ ಬಾಹ್ಯಾಗ್ನಿಯನ್ನು ಪ್ರವೇಶಿಸಿ ಅದರೊಡನೆ ಒಂದಾಗು. ವಾಯುರೂಪವಾದ ತೇಜಸ್ಸಿನಿಂದ ಬಾಹ್ಯಾಕಾಶದಲ್ಲಿರುವ ವಾಯುವಿನೊಡನೆ ಪ್ರವೇಶಿಸಿ ಅದರೊಡನೆ ಒಂದಾಗು ಮತ್ತು ಮೂರನೆಯ ಆತ್ಮರೂಪವಾದ ಅಂಶದಿಂದ ಆದಿತ್ಯನೊಡನೆ ಪ್ರವೇಶಿಸಿ ಅವನಲ್ಲಿ ಐಕ್ಯನಾಗು ಮತ್ತು ದೇವತೆಗಳಿಗೂ ಅತ್ಯುತ್ತಮವಾದ ಉತ್ಪತ್ತಿಸ್ಥಾನವಾದ ಆದಿತ್ಯನನ್ನು ಪ್ರವೇಶಿಸುವಾಗ ಆದಿತ್ಯನ ಪ್ರೀತಿಗೆ ಪಾತ್ರನಾಗಿ ಹರ್ಷವನ್ನು ಹೊಂದು.

## English Translation

This (light) is one (portion) of you, and this other is one (portion); with your third light enter into (outer radiance); on the entrance of the body into (the sun), the supreme birthplace of the gods, become lovely and beloved.

ವಿಶೇಷವಿಷಯಗಳು

ಸಕಲ ಪ್ರಾಣಿಗಳ ಶರೀರದಲ್ಲಿ ಔಷ್ಣ್ಯದಿಂದಲೂ, ಉದರದಲ್ಲಿ ಜಾಠರಾಗ್ನಿರೂಪದಿಂದಲೂ ವೈಶ್ವಾನರಾಗ್ನಿಯು ವ್ಯಾಪಿಸಿದ್ದಾನೆ. ಈ ವಿಷಯವು ವೈಶ್ವಾನರಾಗ್ನಿಯನ್ನು ವಿವರಿಸುವಾಗ ತಿಳಿಸಿದೆ. ಭೂಮಿಯ ಮೇಲಿರುವ ಸಮಸ್ತ ವಿಧವಾದ ಔಷ್ಣ್ಯ ಅಥವಾ ಶಾಖಕ್ಕೂ ಅಗ್ನಿ ಅಥವಾ ಆದಿತ್ಯರೂಪದಿಂದಿರುವ ಅಗ್ನಿಯೇ ಮೂಲವು. ಆದ್ದರಿಂದ ಶರೀರವು ನಾಶವಾದಾಗ ಅದರಲ್ಲಿದ್ದ ಉಷ್ಣವು ತನಗೆ ಮೂಲಭೂತವಾದ ಬಾಹ್ಯಾಗ್ನಿಯಲ್ಲಿ ಸೇರಿಹೋಗಲೆಂದು ಬಯುಸವುದು ಸಹಜವಾಗಿದೆ. ಅದರಂತೆ ಪ್ರಾಣವಾಯುವು ಆಕಾಶದಲ್ಲಿರುವ ಬಾಹ್ಯವಾಯುವಿನಲ್ಲಿಯೂ ಆತ್ಮವು ಸಕಲ ಚೈತನ್ಯಗಳಿಗೂ ಕಾರಣಭೂತನಾದ ಸೂರ್ಯನಲ್ಲಿಯೂ ಸೇರಿಹೋಗಲೆಂದು ಹೇಳುವುದು ಯುಕ್ತವಾಗಿಯೇ ಇದೆ. ಇದಲ್ಲದೆ ಸೂರ್ಯ ಅಥವಾ ಆದಿತ್ಯನೇ ಪರಬ್ರಹ್ಮನೆಂದು **ಅಸಾವಾದಿತ್ಯೋ ಬ್ರಹ್ಮೇತಿ । ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ** ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಸ್ಪಷ್ಟವಾಗಿ ಹೇಳಿದೆ.

ಸಂಹಿತಾಪಾಠಃ

ತನೂಷ್ಟೇ ವಾಜಿನ್ತನ್ವಂ೧ನಯಂತೀ ವಾಮಮಸ್ಮಭ್ಯಂ ಧಾತು ಶರ್ಮ

ತುಭ್ಯಂ ।

ಅಹ್ರುತೋ ಮಹೋ ಧರುಣಾಯ ದೇವಾನ್ದಿವೀವ ಜ್ಯೋತಿಃ ಸ್ವಮಾ

ಮಿಮೀಯಾಃ ॥ ೨ ॥

ಪದಪಾಠಃ

ತನೂಃ । ತೇ । ವಾಜಿನ್ । ತನ್ವಂ । ನಯಂತೀ । ವಾಮಂ । ಅಸ್ಮಭ್ಯಂ । ಧಾತು । ಶರ್ಮ । ತುಭ್ಯಂ ।

ಅಹ್ರುತಃ । ಮಹಃ । ಧರುಣಾಯ । ದೇವಾನ್ । ದಿವಿಽಇವ । ಜ್ಯೋತಿಃ । ಸ್ವಂ । ಆ । ಮಿಮೀಯಾಃ ॥

ಸಾಯಣಭಾಷ್ಯಂ

ಹೇ ವಾಜಿನ್ನೇತನ್ನಾಮಕ ಪುತ್ರ ತೇ ತವ ತನ್ವಂ ಶರೀರಂ ನಯಂತೀ ಸ್ವಶರೀರಂ ಪ್ರಾಪಯಂತೀ ತನೂರಿಯಂ ಪೃಥಿವೀ । ಉಭಯೋರಪಿ ಪಾರ್ಥಿವತ್ವಾತ್ತ್ವತ್ತವ ಶರೀರಸ್ಯ ಪೃಥಿವೀಪ್ರಾಪ್ತೌ ಸತ್ಯಾಂ ತಸ್ಯಾಸ್ತವ ಶರೀರನಯನಂ ಯುಕ್ತಂ । ತಾದೃಶೀ ಪೃಥಿವೀ ವಾಮಂ ವನನೀಯಂ ಧನಮಸ್ಮಭ್ಯಂ ಧಾತು । ದಧಾತು । ಶರ್ಮ ಚ ಸುಖಂ ತುಭ್ಯಂ ಧಾತು । ದಧಾತು । ಸ ತ್ವಮಹ್ರುತೋಽನವಪತಿತಃ ಸನ್ ಮಹೋ ಮಹತೋ ದೇವಾಂಸ್ತವ ಕಾರಣಭೂತಾನ್ ದಿವೀವ ಜ್ಯೋತಿರ್ದ್ಯುಲೋಕೇ ವರ್ತಮಾನಂ ಸೂರ್ಯಂ ಚ । ಇವಶಬ್ದಶ್ಚಾರ್ಥೇ ನಿಪಾತಾನಾಮನೇಕಾರ್ಥತ್ವಾತ್ । ತಂ ಚ ಸ್ವಂ ತವ ಸ್ವಭೂತಮಾ ಮಿಮೀಯಾಃ । ಆವಿಶ ॥

ಪ್ರತಿಪದಾರ್ಥ

**ವಾಜಿನ್**—ಎಲೈ ವಾಜಿಸಂಜ್ಞಕನಾದ ಪುತ್ರನೇ । **ತೇ**—ನಿನ್ನ । **ತನ್ವಂ**—ಶರೀರವನ್ನು । **ನಯಂತೀ**—ವಹಿಸುವ । **ತನೂಃ**—ಈ ಪೃಥ್ವಿಯು । **ವಾಮಂ**—ಆಕರ್ಷಕವಾದ ಧನವನ್ನು । **ಅಸ್ಮಭ್ಯಂ**—ನಮಗೆ । **ಧಾತು**—ಕೊಡಲಿ । **ತುಭ್ಯಂ**—ನಿನಗೆ । **ಶರ್ಮ**—ಸುಖವನ್ನು ಕೊಡಲಿ । **ಅಹ್ರುತಃ**—ಎಲ್ಲಿಯೂ ಎಡರಿ ಬೀಳದೆ । **ಧರುಣಾಯ**—ನಿನ್ನ ಸ್ಥಿರವಾದ ಧಾರಣೆಗಾಗಿ । **ಮಹಃ**—ಮಹಾತ್ಮರಾದ । **ದೇವಾನ್**—ದೇವತೆಗಳನ್ನೂ । **ದಿವೀವ**—ದ್ಯುಲೋಕದಲ್ಲಿ । **ಜ್ಯೋತಿಃ**—ಆದಿತ್ಯನನ್ನೂ । **ಸ್ವಂ**—ನಿನ್ನ ಸ್ವಯಂರೂಪವನ್ನೂ **ಆ ಮಿಮೀಯಾಃ**—ಪ್ರವೇಶಿಸು.

ಭಾವಾರ್ಥ

ಎಲೈ ವಾಜಿಸಂಜ್ಞಕನಾದ ಪುತ್ರನೇ, ನಿನ್ನ ಶರೀರವನ್ನು ವಹಿಸುವ ಈ ಪೃಥ್ವಿಯು ನಮಗೆ ಆಕರ್ಷಕವಾದ ಧನವನ್ನು ಕೊಡಲಿ. ನಿನಗೆ ಸುಖವನ್ನು ಕೊಡಲಿ. ನೀನು ಎಲ್ಲಿಯೂ ಎಡರಿಬೀಳದೆ ನಿನ್ನ ಸ್ಥಿರವಾದ ಧಾರಣೆಗಾಗಿ ಮಹಾತ್ಮರಾದ ದೇವತೆಗಳನ್ನೂ, ದ್ಯುಲೋಕಸ್ಥನಾದ ಆದಿತ್ಯನನ್ನೂ ಮತ್ತು ನಿನ್ನ ಸ್ವಯಂರೂಪವನ್ನೂ ಪ್ರವೇಶಿಸು.

## English Translation

May this body (the earth) conveying your body; Vajin, give precious wealth to us and hapiness to you; and do you, without stumbling, enter among the great gods for their support; and the light that is in heaven (the sun) and your own (light).

ಸಂಹಿತಾಪಾಠಃ

**ವಾಜ್ಯಸಿ ವಾಜಿನೇನಾ ಸುವೇನೀಃ ಸುವಿತಃ ಸ್ತೋಮಂ ಸುವಿತೋ ದಿವಂ ಗಾಃ ।**
**ಸುವಿತೋ ಧರ್ಮ ಪ್ರಥಮಾನು ಸತ್ಯಾ ಸುವಿತೋ ದೇವಾನ್ತ್ಸುವಿತೋಽನು**
**ಪತ್ಮ ॥ ೩ ॥**

ಪದಪಾಠಃ

**ವಾಜೀ । ಅಸಿ । ವಾಜಿನೇನ । ಸುಽವೇನೀಃ । ಸುವಿತಃ । ಸ್ತೋಮಂ । ಸುವಿತಃ । ದಿವಂ । ಗಾಃ ।**
**ಸುವಿತಃ । ಧರ್ಮ । ಪ್ರಥಮಾ । ಅನು । ಸತ್ಯಾ । ಸುವಿತಃ । ದೇವಾನ್ । ಸುವಿತಃ । ಅನು । ಪತ್ಮ ॥ ೩ ॥**

ಸಾಯಣಭಾಷ್ಯಂ

ಹೇ ಪುತ್ರ ತ್ವಂ ಪಾಜಿನೇನಾನ್ನರಸೇನ ಬಲೇನ ವಾ ವಾಜ್ಯಸಿ । ತದ್ವಾನ್ಭವಸಿ । ಕೀದೃಶಸ್ತ್ವಂ । ಸುವೇನೀಃ । ಸುಷ್ಠು ಕಾಂತಃ ॥ ವಿ ಗತ್ಯಾದಿಷು ॥ ತಾದೃಶಸ್ತ್ವಂ ಸುವಿತಃ ಸುಷ್ಠು ಪ್ರೇರಿತಸ್ತ್ವಂ ಸ್ತೋಮಂ ಪೂರ್ವಂ ತ್ವಯಾ ಕೃತಂ ಸ್ತೋತ್ರಂ ತದಭಿಮಾನಿದೇವಮನು ಗಾಃ । ಅನ್ವಗಾಃ । ಅನುಗಚ್ಛ । ತಥಾ ಸುವಿತೋ ದಿವಂ ಗಾಃ । ತಥಾ ಸುವಿತೋ ಧರ್ಮತ್ವಯಾ ಸಂಪಾದಿತಾನಿ ಧರ್ಮಾಣ್ಯನುಗಚ್ಛ । ಕೀದೃಶಾನಿ । ಪ್ರಥಮಾ ಮುಖ್ಯಾನಿ ಸತ್ಯಾ ಸತ್ಯಫಲಾನಿ । ತಥಾ ಸುವಿತೋ ದೇವಾನಿಂದ್ರಾದೀನ್ । ತಥಾ ಸುವಿತಃ ಪತ್ಮ ಪತಜ್ಜ್ಯೋತಿರಾದಿತ್ಯಾಖ್ಯಮನು ಗಾಃ ॥

ಪ್ರತಿಪದಾರ್ಥ

(ಎಲೈ ಪುತ್ರನೇ) **ವಾಜಿನೇನ**—ಅನ್ನರಸದಿಂದ । **ವಾಜೀ ಅಸಿ**—ನೀನು ಶಕ್ತಿಯುತನಾಗಿದ್ದೀಯೆ । **ಸುವೇನೀಃ**—ಆಕರ್ಷಕವಾದ ರೂಪವನ್ನು ಹೊಂದಿದ್ದೀಯೆ । **ಸುವಿತಃ**—ಆದರಿಂದ ಪ್ರೇರಿತನಾಗಿ । **ಸ್ತೋಮಂ**—ನಿನ್ನ ಸ್ತುತಿಕರ್ಮದ ಗುರಿಯ ಕಡೆಗೆ । **ಅನು ಗಾಃ**—ಅನುಸರಿಸಿ ಹೋಗು । **ಸುವಿತಃ**—ಅಲ್ಲಿಂದ ಉತ್ತೇಜಿತನಾಗಿ । **ದಿವಂ**—ದ್ಯುಲೋಕಕ್ಕೆ । **ಗಾಃ**—ಹೋಗು । **ಸುವಿತಃ**—ಅಲ್ಲಿ ಪ್ರೇರಿತನಾಗಿ । **ಪ್ರಥಮಾ**—ಶ್ರೇಷ್ಠವಾದವೂ । **ಸತ್ಯಾ**—ಸತ್ಯಾತ್ಮಕವೂ ಆದ । **ಧರ್ಮ**—ನಿನ್ನಿಂದ ಮಾಡಲ್ಪಟ್ಟ ಧರ್ಮಾನುಸಾರವಾಗಿ ನಡೆ । **ಸುವಿತಃ**—ಆ ಧರ್ಮದಿಂದ ಪ್ರೇರಿತನಾಗಿ । **ದೇವಾನ್**—ಇಂದ್ರಾದಿ ದೇವತೆಗಳನ್ನು ಸೇರು । **ಸುವಿತಃ**—ಅಲ್ಲಿಂದಲೂ ಪ್ರೇರಿತನಾಗಿ । **ಪತ್ಮ**—ಆದಿತ್ಯರೂಪದ ಜ್ಯೋತಿಯನ್ನು । **ಅನು**—ಅನುಸರಿಸಿ ಹೋಗು.

ಭಾವಾರ್ಥ

ಎಲೈ ಪುತ್ರನೇ, ನೀನು ಅನ್ನರಸದಿಂದ ಶಕ್ತಿಯುತನಾಗಿದ್ದೀಯೆ. ಆಕರ್ಷಕವಾದ ರೂಪವನ್ನು ಹೊಂದಿದ್ದೀಯೆ. ಆದರಿಂದ ಪ್ರೇರಿತನಾಗಿ ನೀನು ಹಿಂದೆ ಮಾಡಿದ ಸ್ತುತಿಕರ್ತನ ಗುರಿಯನ್ನು ಅನುಸರಿಸಿ ಹೋಗು. ಅಲ್ಲಿಂದ ಉತ್ತೇಜಿತನಾಗಿ ದ್ಯುಲೋಕಕ್ಕೆ ಹೋಗು. ಅಲ್ಲಿ ಪ್ರೇರಿತನಾಗಿ ಶ್ರೇಷ್ಠವೂ, ಸತ್ಯಾತ್ಮಕವೂ ಆದ ಮತ್ತು ನಿನ್ನಿಂದ ಆಚರಿಸಲ್ಪಟ್ಟ ಧರ್ಮಾನುಸಾರವಾಗಿ ನಡೆ. ಆ ಧರ್ಮದಿಂದ ಪ್ರೇರಿತನಾಗಿ ಇಂದ್ರಾದಿ ದೇವತೆಗಳನ್ನು ಸೇರು. ಅಲ್ಲಿಯೂ ಪ್ರೇರಿತನಾಗಿ ಆದಿತ್ಯರೂಪದ ಜ್ಯೋತಿಯನ್ನು ಸೇರು.

English Translation

You are, Vajin, (strong) through food; you (are) well-beloved: urged thereto follow (the object of your) praise: urged thereto proceed to heaven: urged thereto pursue the duties that are the most important and sure of reward: urged thereto follow the gods: urged thereto follow (the light), descending (from heaven).

ಸಂಹಿತಾಪಾಠಃ

ಮಹಿಮ್ನ ಏಷಾಂ ಪಿತರಶ್ಚನೇಶಿರೇ ದೇವಾ ದೇವೇಷ್ವದಧುರಪಿ ಕ್ರತುಂ ।
ಸಮವಿವ್ಯಚುರುತ ಯಾನ್ಯತ್ವಿಷುರೈಷಾಂ ತನೂಷು ನಿ ವಿವಿಶುಃ ಪುನಃ ॥೪॥

ಪದಪಾಠಃ

ಮಹಿಮ್ನಃ । ಏಷಾಂ । ಪಿತರಃ । ಚನ । ಈಶಿರೇ । ದೇವಾಃ । ದೇವೇಷು । ಅದಧುಃ । ಅಪಿ । ಕ್ರತುಂ ।
ಸಂ । ಅವಿವ್ಯಚುಃ । ಉತ । ಯಾನಿ । ಅತ್ವಿಷುಃ । ಆ ಏಷಾಂ । ತನೂಷು । ನಿ । ವಿವಿಶುಃ । ಪುನರಿತಿ ॥

ಸಾಯಣಭಾಷ್ಯಂ

ಪಿತರಶ್ಚನಾಸ್ಮತ್ಪಿತರೋಽಪ್ಯಂಗಿರಸ ಏಷಾಂ ದೇವಾನಾಂ ಮಹಿಮ್ನೋ ಮಹತ್ತ್ವಸ್ಯೇಶಿರೇ । ಈಶ್ವರಾ ಅಭವನ್ । ತೇ ದೇವಾ ಅಪಿ ದೇವತ್ವಂ ಪ್ರಾಪ್ತಾ ಅಂಗಿರಸೋ ದೇವೇಷ್ವಿಂದ್ರಾದಿಷು ಕ್ರತುಂ ಸಂಕಲ್ಪಮದಧುಃ । ಧೃತವಂತಃ । ಉತಾಪಿ ಚ ಯಾನಿ ತೇಜಾಂಸ್ಯತ್ವಿಷುರ್ದೀಪ್ಯಂತೇ ತಾನಿ ಸಮವಿವ್ಯಚುಃ । ಸಂಗತಾ ಆಸನ್ । ಏಷಾಂ ದೇವಾನಾಂ ತನೂಷು ಶರೀರೇಷು ನಿ ವಿವಿಶುಃ । ನಿವಿಶಂತಿ ಪಿತರೋಽಂಗಿರಸಃ । ಅತಸ್ತ್ವಮಪಿ ತಥಾ ಕುರ್ವಿತ್ಯರ್ಥಃ ॥

ಪ್ರತಿಪದಾರ್ಥ

**ಪಿತರಶ್ಚನ**—ನಮ್ಮ ಪಿತೃಗಳಾದ ಅಂಗಿರಸ್ಸುಗಳು । **ಏಷಾಂ**—ಈ ದೇವತೆಗಳ । **ಮಹಿಮ್ನಃ**—ಮಾಹಾತ್ಮ್ಯಕ್ಕೆ । **ಈಶಿರೇ**—ಪ್ರಭುಗಳಾದರು । **ದೇವಾಃ**—ದೇವತ್ತ್ವವನ್ನು ಪಡೆದ ಅವರು । **ದೇವೇಷು ಅಪಿ**—

ಇಂದ್ರಾದಿ ದೇವತೆಗಳಲ್ಲಿಯೂ | **ಕ್ರತುಂ**—ತಮ್ಮ ಸಂಕಲ್ಪವನ್ನು | **ಅದಧುಃ**—ವಹಿಸಿದರು (ತಮ್ಮ ಸಂಕಲ್ಪವೇ ನೆರವೇರುವಂತೆ ಮಾಡಿಕೊಂಡರು) | **ಉತ**—ಮತ್ತು | **ಯೋನಿ**—ಯಾವ ತೇಜಸ್ಸುಗಳು | **ಅತ್ವಿಷುಃ**—ಪ್ರಕಾಶಿಸುವುವೋ ಅವನ್ನು | **ಸಮವಿವ್ಯಚುಃ**—ಸೇರಿ ಅವುಗಳೊಂದಿಗೆ ಐಕ್ಯರಾದರು | **ಏಷಾಂ**—ಈ ದೇವತೆಗಳ | **ತನೂಷು**—ಶರೀರಗಳಲ್ಲಿ | **ಪುನಃ**—ತಿರುಗಿಯೂ | **ನಿ ವಿವಿಶುಃ**—ಪ್ರವೇಶಿಸಿದ್ದಾರೆ.

ಭಾವಾರ್ಥ

ನಮ್ಮ ಪಿತೃಗಳಾದ ಅಂಗಿರಸ್ಸುಗಳು ದೇವತೆಗಳಿಗಿಂತಲೂ ಅಧಿಕವಾದ ಮಾಹಾತ್ಮ್ಯವನ್ನು ಪಡೆದು ಅವರಿಗೆಲ್ಲ ಪ್ರಭುಗಳಾದರು. ದೇವತ್ವವನ್ನು ಪಡೆದ ಅವರು ಇಂದ್ರಾದಿ ದೇವತೆಗಳಲ್ಲಿಯೂ ತಮ್ಮ ಸಂಕಲ್ಪವೇ ನೆರವೇರುವಂತೆ ಮಾಡಿಕೊಂಡರು ಮತ್ತು ಸಕಲ ತೇಜಸ್ಸುಗಳನ್ನೂ ಪ್ರವೇಶಿಸಿದರು. ಪುನಃ ದೇವತೆಗಳ ಶರೀರದಲ್ಲಿ ಪ್ರವೇಶಿಸಿದರು.

English Translation

Our progenitors (the Angirasas) were lords over the might of those (divinities), they having become gods imposed their will upon the gods; they attained also (the radiances) which shone forth and they again entered the bodies of those (gods).

ಸಂಹಿತಾಪಾಠಃ

**ಸಹೋಭಿರ್ವಿಶ್ವಂ ಪರಿ ಚಕ್ರಮೂ ರಜಃ ಪೂರ್ವಾ ಧಾಮಾನ್ಯಮಿತಾ ಮಿಮಾನಾಃ |**
**ತನೂಷು ವಿಶ್ವಾ ಭುವನಾ ನಿ ಯೇಮಿರೇ ಪ್ರಾಸಾರಯಂತ ಪುರುಧ ಪ್ರಜಾ ಅನು || ೫ ||**

ಪದಪಾಠಃ

**ಸಹಃಽಭಿಃ | ವಿಶ್ವಂ | ಪರಿ | ಚಕ್ರಮುಃ | ರಜಃ | ಪೂರ್ವಾ | ಧಾಮಾನಿ | ಅಮಿತಾ | ಮಿಮಾನಾಃ |**
**ತನೂಷು | ವಿಶ್ವಾ | ಭುವನಾ | ನಿ | ಯೇಮಿರೇ | ಪ್ರ | ಅಸಾರಯಂತ | ಪುರುಧ | ಪ್ರಽಜಾಃ | ಅನು ||**

ಸಾಯಣಭಾಷ್ಯಂ

**ಮದೀಯಾಃ ಪಿತರಃ ಸಹೋಭಿರ್ಬಲೈಃ ಸ್ವೀಯೈರ್ವಿಶ್ವಂ ಸರ್ವಂ ರಜೋ ಲೋಕಂ | ಲೋಕಾ ರಜಾಂಸ್ಯುಚ್ಯಂತ ಇತಿ ನಿರುಕ್ತಂ | ಪೂರ್ವಾ ಪೂರ್ವಾಣಿ ಧಾಮಾನಿ ಸ್ಥಾನಾನ್ಯಮಿತಾನ್ಯೈರಮಿತಾನಿ ಮಿಮಾನಾಃ ಪರಿಚ್ಛಿಂದಂತಃ ಪರಿಚಕ್ರಮುಃ | ಪರ್ಯಕ್ರಾಮನ್ | ಕಿಂಚ ತಥಾ ಕುರ್ವಂತೋ ವಿಶ್ವಾ ಸರ್ವಾಣಿ ಭುವನಾ ಭೂತಜಾತಾನಿ ನಿ ಯೇಮಿರೇ | ನಿಯಮಿತವಂತಃ | ಕಿಂ ಚ ಪುರುಧ ಪುರುಧಾ ಬಹು-**

ಪ್ರಕಾರಂ ಪ್ರಜಾ ಅನು ಜ್ಯೋತೀಂಷ್ಯುದಕಾನಿ ವಾ ಪ್ರಾಸಾರಯಂತ। ಪ್ರಸಾರಿತವಂತಃ। ಅಸ್ಮತ್ಪಿತರಃ ಪೂರ್ವೇಽಂಗಿರಸಃ ಸ್ವಸಾಮರ್ಥ್ಯೇನ ಸರ್ವಂ ಲೋಕಂ ವ್ಯಾಪ್ಯ ಪುರಾತನಾನಿ ಗ್ರಹನಕ್ಷತ್ರಾದೀನಿ ಪರಿಚ್ಛಿದ್ಯ ಸರ್ವಭೂತಾನಿ ನಿಯಮ್ಯ ಪ್ರಜಾ ಅನೂದಕಾನಿ ತೇಜಾಂಸಿ ವಾ ಪ್ರಸಾರಿತವಂತ ಇತ್ಯರ್ಥಃ। ಅತಸ್ತ್ವಮಪ್ಯೇವಂ ಕುರ್ವಿತಿ ಭಾವಃ ॥

ಪ್ರತಿಪದಾರ್ಥ

(**ಪಿತರಃ**—ನನ್ನ ಪಿತೃಗಳಾದ ಅಂಗಿರಸ್ಸುಗಳು। **ಅಮಿತಾ**—ಹಿಂದೆ ಯಾರಿಂದಲೂ ಅಳೆಯಲ್ಪಡದ। **ಪೂರ್ವಾ**—ಪುರಾತನಗಳಾದ। **ಧಾಮಾನಿ**—ಸ್ಥಾನಗಳನ್ನು। **ಸಹೋಭಿಃ**—ತಮ್ಮ ಶಕ್ತಿಗಳಿಂದ। **ಮಿಮಾನಾಃ**—ಅಳೆಯುತ್ತ। **ವಿಶ್ವಂ ರಜಃ**—ಸಕಲ ಲೋಕಗಳನ್ನೂ। **ಪರಿ ಚಕ್ರಮುಃ**—ಸಂಚರಿಸುತ್ತಾರೆ। **ವಿಶ್ವಾ**—ಸಕಲವಾದ। **ಭುವನಾ**—ಪ್ರಾಣಿಗಳನ್ನೂ। **ತನೂಷು**—ಆಯಾ ರೂಪಗಳಿಗನುಸಾರವಾಗಿ। **ನಿ ಯೇಮಿರೇ**—ನಿಯಮಿಸುತ್ತಾರೆ। **ಪುರುಧ**—ಅನೇಕ ಪ್ರಕಾರವಾಗಿ। **ಪ್ರಜಾಃ**—ಪ್ರಜೆಗಳನ್ನು। **ಅನು ಪ್ರಾಸಾರಯಂತ**—ವಿಭಾಗಮಾಡಿ ಲೋಕದಲ್ಲಿ ಹರಡಿದ್ದಾರೆ.

ಭಾವಾರ್ಥ

ನಮ್ಮ ಪಿತೃಗಳಾದ ಅಂಗಿರಸ್ಸುಗಳು ಹಿಂದೆ ಯಾರಿಂದಲೂ ಅಳೆಯಲ್ಪಡದ ಪುರಾತನ ಸ್ಥಾನಗಳನ್ನು ತಮ್ಮ ಶಕ್ತಿಗಳಿಂದ ಅಳೆಯುತ್ತ ಸಕಲ ಲೋಕಗಳನ್ನೂ ಸಂಚರಿಸುತ್ತಾರೆ. ಸಕಲ ಪ್ರಾಣಿಗಳನ್ನೂ ಆಯಾ ರೂಪಗಳಿಗನುಸಾರವಾಗಿ ನಿಯಮಿಸುತ್ತಾರೆ. ಅನೇಕ ಪ್ರಕಾರವಾಗಿ ಪ್ರಜೆಗಳನ್ನು ವಿಭಾಗಮಾಡಿ ಲೋಕದಲ್ಲಿ ಹರಡಿದ್ದಾರೆ.

## English Translation

By their powers they traversed the whole world, measuring the ancient divisions (till then) unmeasured : they restricted all existent beings to their proper forms ; they distributed in many directions (light) among the people.

ಸಂಹಿತಾಪಾಠಃ

ದ್ವಿಧಾ ಸೂನವೋಽಸುರಂ ಸ್ವರ್ವಿದಮಾಸ್ಥಾಪಯಂತ ತೃತೀಯೇನ ಕರ್ಮಣಾ।
ಸ್ವಾಂ ಪ್ರಜಾಂ ಪಿತರಃ ಪಿತ್ರ್ಯಂ ಸಹ ಆವರೇಷ್ವದಧುಸ್ತಂತುಮಾತತಂ ॥ ೬ ॥

ಪದಪಾಠಃ

ದ್ವಿಧಾ। ಸೂನವಃ। ಅಸುರಂ। ಸ್ವಃऽವಿದಂ। ಆ। ಅಸ್ಥಾಪಯಂತ। ತೃತೀಯೇನ। ಕರ್ಮಣಾ।
ಸ್ವಾಂ। ಪ್ರऽಜಾಂ। ಪಿತರಃ। ಪಿತ್ರ್ಯಂ। ಸಹಃ। ಆ। ಅವರೇಷು। ಅದಧುಃ। ತಂತುಂ। ಆऽತತಂ ॥

ಸಾಯಣಭಾಷ್ಯಂ

ಸೂನವ ಆದಿತ್ಯಸ್ಯ ಪುತ್ರಾ ದೇವಾ ಅಂಗಿರಸಃ। ದೇವಾನಾಂ ಹ್ಯೇತತ್ಪರಮಂ ಜನಿತ್ರಂ ಯತ್ಸೂರ್ಯ ಇತಿ ಪ್ರದರ್ಶಿತತ್ವಾದಾದಿತ್ಯಸ್ಯ ಸೂನವ ಇತಿ ಗಮ್ಯತೇ। ಅಸುರಂ ಬಲವಂತಂ ಸ್ವರ್ವಿದಂ

ಸರ್ವಜ್ಞಂ ಸ್ವರ್ಗಸ್ಯ ಲಂಭಕಂ ವಾದಿತ್ಯಂ ತೃತೀಯೇನ ಕರ್ಮಣಾ ಪ್ರಜೋತ್ಪತ್ತ್ಯಾಖ್ಯೇನ । ಬ್ರಹ್ಮಚರ್ಯೇಣರ್ಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯಃ । ತೈ. ಸಂ. ೬-೩-೧೦-೫ । ಇತಿ ಶ್ರುತೇಃ ಪ್ರಜೋತ್ಪಾದನಸ್ಯ ತೃತೀಯಕರ್ಮತ್ವಂ । ತೇನಾದಿತ್ಯಂ ದ್ವಿಧಾಸ್ಥಾಪಯಂತ । ದ್ವಿಪ್ರಕಾರಮಾಸ್ಥಾಪಯಂತಿ । ಉದಿತಂ ಚಾಸ್ತಮಿತಂ ಚ ಕುರ್ವಂತಿ । ಉದ್ಗ್ರಾಭಂ ಚ ನಿಗ್ರಾಭಂ ಚ ಬ್ರಹ್ಮ ದೇವಾ ಅವೀವೃಧನ್ । ತೈ. ಸಂ. ೧-೧-೧೩-೧ । ಇತಿ ಮಂತ್ರಸ್ಯ ಬ್ರಾಹ್ಮಣೇಽಸೌ ವಾ ಆದಿತ್ಯ ಉದ್ಯನ್ನುದ್ಗ್ರಾಭ ಏಷ ನಿಮ್ರೋಚನ್ನಿಗ್ರಾಭಃ । ತೈ. ಸಂ. ೫-೪-೬-೬ । ಇತಿ ಶ್ರುತತ್ವಾದ್ದೇವಾನಾಮಾದಿತ್ಯಸ್ಯ ದ್ವಿಃಸ್ಥಾಪನಮುದಯಾಸ್ತಮಯಕರಣಮಿತಿ ಗಮ್ಯತೇ । ಕಿಂಚ ಪಿತರೋ ಮದೀಯಾ ಅಂಗಿರಸಃ ಸ್ವಾಂ ಪ್ರಜಾಂ । ಉತ್ಪಾದ್ಯೇತಿ ಶೇಷಃ। ಪಿತ್ರ್ಯಂ ಸಹಃ ಪಿತುರಾದಿತ್ಯಸ್ಯ ಸಂಬಂಧಿನಮುಪರಾಭಿಭವಕ್ಷಮಂ ಬಲಮವರೇಷ್ವಾದಧುಃ । ನಿಕೃಷ್ಟೇಷು ಸ್ವಪ್ರಜಾಭೂತೇಷು ಮನುಷ್ಯೇಷು ಸ್ಥಾಪಿತವಂತಃ । ಯಥಾ ಪಿತ್ರ್ಯಂ ಧನಂ ಸಮ್ಯಕ್ ಪರಿರಕ್ಷ್ಯ ಸ್ವಪುತ್ರೇಭ್ಯಃ ಪ್ರಯಚ್ಛಂತಿ ತದ್ವತ್ಪಿತುರಾದಿತ್ಯಸ್ಯ ಪ್ರಕಾಶಾದಿಬಲಂ ಮನುಷ್ಯೇಷು ನ್ಯದಧುರಿತ್ಯರ್ಥಃ। ಕಿಂಚ ತಂತುಂ ಪ್ರಜಾಮಾತತಂ ವಿತತಂ ಕೃತವಂತ ಇತಿ ಶೇಷಃ । ಪುತ್ರಪೌತ್ರಾದಿರೂಪೇಣಾನವಚ್ಛಿನ್ನಾಂ ಪ್ರಜಾಮಿತ್ಯರ್ಥಃ । ಅಯಂ ಹ್ಯಾತತತಂತುರ್ಯತ್ಪ್ರಜೇತಿ ಬ್ರಾಹ್ಮಣಂ । ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ । ತೈ. ಆ. ೭-೧೧-೧ । ಇತಿ ಚ । ತಂತುಂ ತನ್ವನ್ । ಋ. ೧೦-೫೩-೬ । ಇತ್ಯಸ್ಯ ಬ್ರಾಹ್ಮಣಂ ಪ್ರಜಾ ವೈ ತಂತುಃ । ಐ. ಬ್ರಾ. ೩-೩೮ । ಇತಿ ॥

### ಪ್ರತಿಪದಾರ್ಥ

**ಸೂನವಃ**—ಆದಿತ್ಯಪುತ್ರರಾದ ಅಂಗಿರಸ್ಸುಗಳು । **ತೃತೀಯೇನ ಕರ್ಮಣಾ**—ಪ್ರಜೋತ್ಪತ್ತಿರೂಪವಾದ ಮೂರನೆಯ ಕರ್ಮದಿಂದ । **ಅಸುರಂ**—ಶಕ್ತಿಯುತನಾದವನೂ । **ಸ್ವರ್ವಿದಂ**—ದ್ಯುಲೋಕಕ್ಕೆ ಆಶ್ರಯನೂ ಆದ ಆದಿತ್ಯನನ್ನು । **ದ್ವಿಧಾ**—ಉದಯಾಸ್ತಮಯರೂಪವಾದ ಎರಡು ಪ್ರಕಾರವಾಗಿ । **ಆ ಸ್ಥಾಪಯಂತ**—ಸ್ಥಾಪಿಸಿದ್ದಾರೆ । **ಪಿತರಃ**—ನಮ್ಮ ಪಿತೃಗಳಾದ ಅಂಗಿರಸ್ಸುಗಳು । **ಸ್ವಾಂ ಪ್ರಜಾಂ**—ತಮ್ಮ ಪ್ರಜೆಗಳನ್ನು ಉತ್ಪನ್ನಮಾಡಿ । **ಅವರೇಷು**—ನಿಕೃಷ್ಟರಾದ ಆ ಮಾನವರಲ್ಲಿಯೂ ಸಹ । **ಪಿತ್ರ್ಯಂ ಸಹಃ**—ಆದಿತ್ಯನ ಶಕ್ತಿಯನ್ನು । **ಆ ದಧುಃ**—ಸ್ಥಾಪಿಸಿದ್ದಾರೆ । **ತಂತುಂ**—ಪ್ರಜಾಸಂತತಿಯನ್ನು । **ಆ ತತಂ**—ವಿಸ್ತಾರವಾಗಿ ಬೆಳೆಸಿದ್ದಾರೆ.

### ಭಾವಾರ್ಥ

ಆದಿತ್ಯಪುತ್ರರಾದ ಅಂಗಿರಸ್ಸುಗಳು ಪ್ರಜೋತ್ಪತ್ತಿರೂಪವಾದ ತಮ್ಮ ಮೂರನೆಯ ಕರ್ಮದಿಂದ ಶಕ್ತಿಯುತನೂ ದ್ಯುಲೋಕಕ್ಕೆ ಆಶ್ರಯನೂ ಆದ ಆದಿತ್ಯನನ್ನು ಉದಯಾಸ್ತಮಯರೂಪವಾದ ಎರಡು ಪ್ರಕಾರವಾಗಿ ಸ್ಥಾಪಿಸಿದ್ದಾರೆ. ನಮ್ಮ ಪಿತೃಗಳಾದ ಅಂಗಿರಸ್ಸುಗಳು ತಮ್ಮ ಪ್ರಜೆಗಳನ್ನು ಉತ್ಪನ್ನಮಾಡಿ ನಿಕೃಷ್ಟರಾದ ಆ ಮಾನವರಲ್ಲಿಯೂ ಸಹ ಆದಿತ್ಯನ ಶಕ್ತಿಯನ್ನು ಸ್ಥಾಪಿಸಿದ್ದಾರೆ. ಪ್ರಜಾಸಂತತಿಯನ್ನು ವಿಸ್ತಾರವಾಗಿ ಬೆಳೆಸಿದ್ದಾರೆ.

## English Translation

The sons (of Aditya, the Angirasas), established by the third act of duty, the mighty, all-wise (sun) in his two-fold (condition of rising and setting): our progenitors (having begotten) their own progeny, deposited

in the best (of them) the paternal strength, (making) an extended line (of progeny).

ವಿಶೇಷವಿಷಯಗಳು

ದೇವತೆಗಳೂ, ಅಂಗಿರಸ್ಸುಗಳೂ ಆದಿತ್ಯನ ಪುತ್ರರು ಹೇಗಾದರೆಂಬ ವಿಷಯದಲ್ಲಿ ಭಾಷ್ಯಕಾರರು- **ದೇವಾನಾಂ ಹ್ಯೇತತ್ಪರಮಂ ಜನಿತ್ರಂ ಯತ್ಸೂರ್ಯಃ** ಎಂಬ ಬ್ರಾಹ್ಮಣವಾಕ್ಯವನ್ನು ಉದಾಹರಿಸಿದಾರೆ. **ಅಸೌ ವಾ ಆದಿತ್ಯೋ ಬಹ್ಮ** ಎಂದು ಶ್ರುತಿವಾಕ್ಯವಿರುವುದರಿಂದ ದೇವತೆಗಳು ಬ್ರಹ್ಮಸ್ವರೂಪವಾದ ಆದಿತ್ಯನ ಪುತ್ರರೆಂದು ಹೇಳುವುದು ಸಹಜವಾಗಿದೆ.

**ತೃತೀಯೇನ ಕರ್ಮಣಾ**—ಪ್ರಜೋತ್ಪತ್ತಿಯೇ ಮೂರನೆಯ ಕರ್ಮವೆಂದು ಹೇಳುವುದು ರೂಢಿಯು. ಹೇಗೆಂದರೆ—

**ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರ್ಋಣವಾ ಜಾಯತೇ ಬ್ರಹ್ಮಚರ್ಯೇಣರ್ಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯಃ ||**

(ತೈ. ಸಂ. ೬-೩-೧೦-೫)

ಎಂದು ತೈತ್ತಿರೀಯಸಂಹಿತೆಯಲ್ಲಿ ಹೇಳಿರುವಂತೆ ಬ್ರಾಹ್ಮಣನಾದವನು ಹುಟ್ಟುವಾಗಲೇ ಮೂರುವಿಧವಾದ ಋಣಗಳನ್ನು (ಸಾಲವನ್ನು ಅಥವಾ ಕರ್ತವ್ಯವನ್ನು) ಹೊತ್ತುಕೊಂಡೇ ಹುಟ್ಟುವನು. ಅವುಗಳನ್ನು ತೀರಿಸಬೇಕಾದರೆ ಯಜ್ಞವನ್ನು ಮಾಡಿ ದೇವತೆಗಳ ವಿಷಯದಲ್ಲಿ ನೆರವೇರಿಸಬೇಕಾದ ಕರ್ತವ್ಯವನ್ನು (ಋಣವನ್ನು) ತೀರಿಸಬೇಕು. ವೇದಾಧ್ಯಯನ ಮಾಡಿ ಋಷಿಗಳ ಋಣವನ್ನು ತೀರಿಸಬೇಕು. ಧರ್ಮಪ್ರಜೋತ್ಪಾದನೆಯಿಂದ ಪಿತೃಗಳ ಋಣವನ್ನು ತೀರಿಸಬೇಕು. ಆದ್ದರಿಂದ ಯಜ್ಞ, ವೇದಾಧ್ಯಯನ, ಪ್ರಜೋತ್ಪಾದನ ಎಂಬ ಮೂರುವಿಧವಾದ ಕರ್ತವ್ಯಕರ್ಮಗಳಲ್ಲಿ ಪ್ರಜೋತ್ಪಾದನೆಯೇ ಮೂರನೆಯ ಕರ್ಮವೆಂದು ಇಲ್ಲಿ ಹೇಳಿದೆ.

**ಆ ಅಸ್ಥಾಪಯಂತ-ದ್ವಿಧಾ ದ್ವಿಪ್ರಕಾರಮಾಸ್ಥಾಪಯಂತಿ | ಉದಿತಂ ಚಾಸ್ತಮಿತಂ ಚ ಕುರ್ವಂತಿ||** ದೇವತೆಗಳು ಎರಡುವಿಧವಾಗಿ ಸ್ಥಾಪನೆಮಾಡಿದರು ಎಂದರೆ ಸೂರ್ಯನಿಗೆ ಉದಯ, ಅಸ್ತಮಯಗಳೆಂಬ ಎರಡುವಿಧ ಕರ್ಮಗಳನ್ನು ಗೊತ್ತುಮಾಡಿದರು ಎಂದಭಿಪ್ರಾಯವು. ಈ ವಿಷಯದಲ್ಲಿ—**ಉದ್ಗ್ರಾಭಂ ಚ ನಿಗ್ರಾಭಂ ಚ ಬ್ರಹ್ಮ ದೇವಾ ಅವೀವೃಧನ್** (ತೈ. ಸಂ. ೧-೧-೧೩-೧); **ಅಸೌ ವಾ ಆದಿತ್ಯ ಉದ್ಯನ್ನುದ್ಗ್ರಾಭ ಏಷ ನಿಮ್ರೋಚನ್ನಿಗ್ರಾಭಃ** (ತೈ. ಸಂ. ೫.೪-೬-೬) ಎಂಬ ಎರಡು ಶ್ರುತಿವಾಕ್ಯಗಳನ್ನು ಭಾಷ್ಯಕಾರರು ಉದಾಹರಿಸಿದಾರೆ.

**ತಂತುಂ ಆತತಂ**—ಇಲ್ಲಿ ತಂತುವೆಂದರೆ ಪ್ರಜಾಸಂತತಿ. ತಂತುವು (ದಾರವು) ಯಾವರೀತಿ ಎಡಬಿಡದೆ ಅವಿಚ್ಛಿನ್ನವಾಗಿರುವುದೋ ಅದೇರೀತಿ ಪುತ್ರಪೌತ್ರಾದಿ ಸಂತತಿಯೂ ಇರುವುದರಿಂದ ಪ್ರಜಾಸಂತತಿಯನ್ನು ತಂತುವೆಂದು ಕರೆಯುವರು. ಈ ವಿಧವಾದ ಅವಿಚ್ಛಿನ್ನವಾದ ಪ್ರಜಾಸಂತತಿಯನ್ನು ವಿಸ್ತಾರವಾಗುವಂತೆ ಎಂದರೆ ಅಭಿವೃದ್ಧಿಯಾಗುವಂತೆ ಮಾಡಿದರು ಎಂದಭಿಪ್ರಾಯವು.

ಸಂಹಿತಾಪಾಠಃ

**ನಾವಾ ನ ಕ್ಷೋದಃ ಪ್ರದಿಶಃ ಪೃಥಿವ್ಯಾಃ ಸ್ವಸ್ತಿಭಿರತಿ ದುರ್ಗಾಣಿ ವಿಶ್ವಾ ।**
**ಸ್ವಾಂ ಪ್ರಜಾಂ ಬೃಹದುಕ್ಥೋ ಮಹಿತ್ವಾವರೇಷ್ವದಧಾದಾ ಪರೇಷು ॥ ೭ ॥**

ಪದಪಾಠಃ

ನಾವಾ । ನ । ಕ್ಷೋದಃ । ಪ್ರಽದಿಶಃ । ಪೃಥಿವ್ಯಾಃ । ಸ್ವಸ್ತಿಽಭಿಃ । ಅತಿ । ದುಃಽಗಾನಿ । ವಿಶ್ವಾ ।

ಸ್ವಾಂ । ಪ್ರಜಾಂ । ಬೃಹತ್ಽಉಕ್ಥಃ । ಮಹಿಽತ್ವಾ । ಆ । ಅವರೇಷು । ಅದಧಾತ್ । ಆ । ಪರೇಷು ॥

ಸಾಯಣಭಾಷ್ಯಂ

ನಾವಾ ನೋದಕೋತ್ತರಣಸಾಧನೇನೇವ ಕ್ಷೋದ ಉದಕಂ ಯಥಾ ಮನುಷ್ಯಾ ನಾವೋದಕಮ. ತಿತೆರಂತಿ ಯಥಾ ವಾ ಸ್ವಸ್ತಿಭಿಃ ಕ್ಷೇಮ್ಯೈರ್ವಿಶ್ವಾ ಸರ್ವಾಣಿ ದುರ್ಗಾಣಿ ದುಃಖೇನ ಗಂತವ್ಯಾನ್ಯತಿತೆರಂತಿ ತದ್ವದ್ಬೃಹದುಕ್ಥಃ ಸ್ವಾಂ ಪ್ರಜಾಂ ವಾಜಿನಂ ಮೃತಂ ಪುತ್ರಂ ಮಹಿತ್ವಾ ಸ್ವಮಹತ್ತ್ವೇನಾವರೇಷ್ವಗ್ನ್ಯಾದಿಷ್ವಾದಧಾತ್ । ಕೃತವಾನ್ । ತದಾ ಪರೇಷು ದಿವ್ಯೇಷು ಸೂರ್ಯಾದಿಷ್ವಾದಧಾತ್। ಏವಮೃಷಿರ್ಬ್ರೂತೇ ಸ್ವಯಮೇವ ವಾ ಸ್ವಾತ್ಮಾನಂ ಪರೋಕ್ಷೇಣಾಹ ॥

ಪ್ರತಿಪದಾರ್ಥ

**ಪೃಥಿವ್ಯಾಃ**—ಪೃಥಿವಿಯ । **ಪ್ರದಿಶಃ**—ನಾನಾ ದಿಕ್ಕುಗಳಿಗೆ ಹೋಗಿ ಸೇರಲು । **ಕ್ಷೋದಃ**—ದಾರಿಯಲ್ಲಿ ಸಿಕ್ಕುವ ಉದಕವನ್ನು ।**ನಾವಾ ನ**—ದೋಣಿಯಿಂದ ದಾಟುವಂತೆಯೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ವಿಶ್ವಾ**—ಸಮಸ್ತವಾದ । **ದುರ್ಗಾಣಿ ಅತಿ**—ದುಃಖಗಳನ್ನು ದಾಟುವಂತೆಯೂ। **ಬೃಹದುಕ್ಥಃ**—ಬೃಹದುಕ್ಥನೆಂಬ ಋಷಿಯು । **ಸ್ವಾಂ ಪ್ರಜಾಂ**—ಮೃತನಾದ ತನ್ನ ಪುತ್ರನನ್ನು । **ಮಹಿತ್ವಾ**—ತನ್ನ ಮಾಹಾತ್ಮ್ಯದಿಂದ । **ಅವರೇಷು**—ಪೃಥ್ವೀಸ್ಥವಾದ ಅಗ್ನ್ಯಾದಿ ತೇಜಸ್ಸುಗಳಲ್ಲಿ । **ಆ ದಧಾತ್**—ಸ್ಥಾಪಿಸಿದ್ದಾನೆ । **ಪರೇಷು ಆ**—ದ್ಯುಲೋಕಸ್ಥವಾದ ಆದಿತ್ಯಾದಿ ತೇಜಸ್ಸುಗಳಲ್ಲೂ ಸ್ಥಾಪಿಸಿದ್ದಾನೆ.

ಭಾವಾರ್ಥ

ಪೃಥಿವಿಯ ನಾನಾ ದಿಕ್ಕುಗಳಿಗೆ ಹೋಗಿ ಸೇರಲು ದಾರಿಯಲ್ಲಿ ಸಿಕ್ಕುವ ಉದಕವನ್ನು ದೋಣಿಯಿಂದ ದಾಟುವಂತೆಯೂ, ಕಲ್ಯಾಣಗಳಿಂದ ಸಕಲವಾದ ದುಃಖಗಳನ್ನೂ ದಾಟುವಂತೆಯೂ, ಬೃಹದುಕ್ಥನೆಂಬ ಋಷಿಯು ಮೃತನಾದ ತನ್ನ ಪುತ್ರನನ್ನು ತನ್ನ ಮಾಹಾತ್ಮ್ಯದಿಂದ ಪೃಥ್ವೀಸ್ಥವಾದ ಅಗ್ನ್ಯಾದಿ ತೇಜಸ್ಸುಗಳಲ್ಲಿ ಸ್ಥಾಪಿಸಿದ್ದಾನೆ. ದ್ಯುಲೋಕಸ್ಥವಾದ ಆದಿತ್ಯಾದಿ ತೇಜಸ್ಸುಗಳಲ್ಲಿಯೂ ಸ್ಥಾಪಿಸಿದ್ದಾನೆ.

English Translation

As men pass over the water to the several quarters of the earth in a ship ; (as they pass over) all difficulties by the blessings (of fortune), Brihaduktha by his might has committed his own offspring to those on this side, and to those on the other side.

# ಐವತ್ತೇಳನೆಯ ಸೂಕ್ತ

ಪೀಠಿಕೆ

ಈ ಮಂಡಲದ ೫೭ ನೆಯ ಸೂಕ್ತದಿಂದ ೬೦ ನೆಯ ಸೂಕ್ತದವರೆಗೆ ಇರುವ ೪ ಸೂಕ್ತಗಳಿಗೆ ಗೋಪಾಯನ ಪುತ್ರರಾದ ಬಂಧು ಮೊದಲಾದ ಸಹೋದರರು ಋಷಿಗಳು. ಇವರು ಇಕ್ಷ್ವಾಕುವಂಶದ ಅಸಮಾತಿ ಎಂಬ ರಾಜನಿಗೆ

ಪುರೋಹಿತರಾಗಿದ್ದರು. ಆ ರಾಜನು ಕೆಲವರ ದುರ್ಬೋಧನೆಗೆ ಒಳಗಾಗಿ ತನಗೆ ಪುರೋಹಿತರಾಗಿದ್ದ ಬಂಧು, ಸುಬಂಧು, ಶ್ರುತಬಂಧು, ವಿಪ್ರಬಂಧು ಎಂಬ ನಾಲ್ವರು ಸಹೋದರರನ್ನು ತ್ಯಜಿಸಿ ಮಾಯಾವಿದ್ಯೆಗಳಲ್ಲಿ ಕುಶಲರಾದ ಕಿಲಾತ ಮತ್ತು ಆಕುಲಿ ಎಂಬಿಬ್ಬರನ್ನು ನೇಮಿಸಿಕೊಂಡನು. ಇದರಿಂದ ಬಂಧು ಮೊದಲಾದ ಹಿಂದಿನ ಪುರೋಹಿತರಿಗೂ, ಕಿಲಾತಾಕುಲಿಗಳೆಂಬ ಹೊಸ ಪುರೋಹಿತರಿಗೂ ದ್ವೇಷವುಂಟಾಗಿ ಬಂಧು ಮೊದಲಾದ ನಾಲ್ವರಲ್ಲಿ ಒಬ್ಬನಾದ ಸುಬಂಧುವಿನ ಮರಣದಲ್ಲಿ ಪರ್ಯವಸಾನವನ್ನು ಹೊಂದಿತು. ಈ ವಿಷಯವನ್ನು ಭಾಷ್ಯಕಾರರು ಈ ಸೂಕ್ತದ ಪೀಠಿಕೆಯಲ್ಲಿ ಸೂಕ್ಷ್ಮವಾಗಿ ವಿವರಿಸಿರುವುದನ್ನು ನಾವು ಮುಂದೆ ವಿವರಿಸಿದೇವೆ. ಈಗ ಈವಿಷಯದಲ್ಲಿ ಶೌನಕರು ತಮ್ಮ ಬೃಹದ್ದೇವತಾ ಗ್ರಂಥದಲ್ಲಿ ಹೇಳಿರುವುದನ್ನು ವಿವರಿಸಲಾಗುವುದು.

ಸೂಕ್ತಮಾಖ್ಯಾನಸಂಯುಕ್ತಂ ವಕ್ತುಕಾಮಸ್ಯ ಮೇ ಶೃಣು ।
ಸಂಮೋಹನಾನ್ನಷ್ಟಸಂಜ್ಞಸ್ಯ ಶತ್ರುಣಾಭಿಹತಸ್ಯ ತು ॥ ೮೪ ॥
ಜೀವಾವೃತ್ತಿಃ ಸುಬಂಧೋರ್ವಾ ಯದಿ ವಾ ಮನಸಃ ಸ್ತವಃ ।
ರಾಜಾಸಮಾತಿರೈಕ್ಷ್ವಾಕೂ ರಥಪ್ರೋಷ್ಠಃ ಪುರೋಹಿತಾನ್ ॥ ೮೫ ॥
ವ್ಯುದಸ್ಯ ಬಂಧುಪ್ರಭೃತೀನ್ ದ್ವೈಪದಾ ಯೇಽತ್ರಿಮಂಡಲೇ ।
ದ್ವೌ ಕಿರಾತಾಕುಲೀ ನಾಮ ತತೋ ಮಾಯಾವಿನೌ ದ್ವಿಜೌ ॥ ೮೬ ॥
ಅಸಮಾತಿಃ ಪುರೋಽಧತ್ತ ವರಿಷ್ಠೌ ತೌ ಹಿ ಮನ್ಯತೇ ।
(ಬೃ. ದೇ. ಅಧ್ಯಾಯ ೫-೮೪, ೮೫, ೮೬)

ಈ ಸೂಕ್ತಗಳ ವಿಷಯವಾಗಿ (೫೭-೬೦ ಸೂಕ್ತಗಳು) ಒಂದು ಉಪಾಖ್ಯಾನವಿರುವುದು. ಅದನ್ನು ಹೇಳುವೆನು, ಕೇಳಿ. ಇಕ್ಷ್ವಾಕುವಂಶದ ರಾಜರಲ್ಲಿ ರಥಪ್ರೋಷ್ಠನೆಂಬುವನ ಪುತ್ರನಾದ ಅಸಮಾತಿ ಎಂಬೊಬ್ಬ ರಾಜನಿದ್ದನು. ಅವನು ತನ್ನ ಕುಲಪುರೋಹಿತರೂ, ಅತ್ರಿಕುಲದವರೂ, ದ್ವಿಪದಾ ವಿರಾಟ್‌ಛಂದಸ್ಸಿನ ಋಕ್ಕುಗಳ (ಋ. ಸಂ. ೫-೨೪) ದ್ರಷ್ಟೃಗಳೂ ಆದ ಬಂಧು ಮೊದಲಾದ ನಾಲ್ವರು ಸಹೋದರರನ್ನು ಪೌರೋಹಿತ್ಯದಿಂದ ತೆಗೆದುಹಾಕಿ ಕಿರಾತ, ಆಕುಲಿ ಎಂಬಿಬ್ಬರು ದ್ವಿಜರನ್ನು ಪುರೋಹಿತಕರ್ಮದಲ್ಲಿ ಶ್ರೇಷ್ಠರೆಂದೂ, ಕುಶಲರೆಂದೂ ತಿಳಿದು ಅವರನ್ನು ತನ್ನ ಪುರೋಹಿತರನ್ನಾಗಿ ನೇಮಿಸಿಕೊಂಡನು.

ತೌ ಕಪೋತೌ ದ್ವಿಜೌ ಭೂತ್ವಾ ಗತ್ವಾ ಗೌಪಾಯನಾನಭಿ ॥ ೮೭ ॥
ಮಾಯಾಬಲಾಚ್ಚ ಯೋಗಾಚ್ಚ ಸುಬಂಧುಮಭಿಪೇತತುಃ ।
ಸ ದುಃಖಾದಭಿಘಾತಾಚ್ಚ ಮುಮೋಹ ಚ ಪಪಾತ ಚ ॥ ೮೮ ॥
ತೌ ತತೋಽಸ್ಯಾಸುಮಾಲುಚ್ಯ ರಾಜಾನಮಭಿಜಗ್ಮತುಃ ।
ತತಃ ಸುಬಂಧೌ ಪತಿತೇ ಗತಾಸೌ ಭ್ರಾತರಸ್ತ್ರಯಃ ॥ ೮೯ ॥
ಜೇಪುಃ ಸ್ವಸ್ತ್ಯಯನಂ ಸರ್ವೇ ನೇತಿ ಗೌಪಾಯನಾಃ ಸಹ ।
ಮನ ಆವರ್ತನಂ ತಸ್ಯ ಸೂಕ್ತಂ ಯದಿತಿ ತೇಽಭ್ಯಯುಃ ॥ ೯೦ ॥

ಈ ಹೊಸ ಪುರೋಹಿತರು ತಮ್ಮ ಮಾಯಾಬಲದಿಂದಲೂ ಯೋಗಶಕ್ತಿಯಿಂದಲೂ ಪಾರಿವಾಳದ ಹಕ್ಕಿಗಳ ರೂಪವನ್ನು ಧರಿಸಿ ಗೋಪಾಯನಪುತ್ರರಾದ ಬಂಧ್ವಾದಿಗಳ ಬಳಿಗೆ ಹೋಗಿ ಸುಬಂಧುವೆಂಬುವನನ್ನು ಮೂರ್ಛೆಗೊಂಡು ಬೀಳುವಂತೆ

ಮಾಡಿದರು. ಅನಂತರ ಅವನ ಪ್ರಾಣವನ್ನು ಅಪಹರಿಸಿ ತಮ್ಮ ರಾಜನಾದ ಅಸಮಾತಿಯ ಬಳಿಗೆ ಹೋದರು. ಸುಬಂಧುವು ಪ್ರಾಣವನ್ನು ಬಿಟ್ಟು ನೆಲದಮೇಲೆ ನಿಶ್ಚೇಷ್ಟಿತನಾಗಿ ಬಿದ್ದಿರುವುದನ್ನು ಕಂಡು ಅವನ ಸಹೋದರರಾದ ಬಂಧು, ಶ್ರುತಬಂಧು, ವಿಪ್ರಬಂಧುಗಳೆಂಬುವರು ಮೃತನಾದ ತಮ್ಮ ಸಹೋದರ ಸುಬಂಧುವಿನ ಶ್ರೇಯಸ್ಸಿಗಾಗಿ **ಮಾ ಪ್ರಗಾಮ** (ಋ. ಸಂ. ೧೦-೫೭ ನೇ ಸೂಕ್ತ) ಎಂಬ ಸೂಕ್ತವನ್ನೂ ಅವನ ಪ್ರಾಣವನ್ನು ಶರೀರಕ್ಕೆ ಹಿಂತಿರುಗಿಸುವುದಕ್ಕಾಗಿ **ಯತ್ತೇ ಯಮಂ** (೫೮ ನೇ ಸೂಕ್ತ) ಎಂಬ ಸೂಕ್ತವನ್ನೂ ಪಠಿಸಿದರು.

**ಜೇಪುಶ್ಚ ಭೇಷಜಾರ್ಥಂ ಯಂ ಪ್ರ ತಾರೀತಿ ಪರಂ ತತಃ |**
**ಸೂಕ್ತಸ್ಯಾದ್ಯಸ್ತ್ಯೃಚಸ್ತತ್ರ ನಿರ್ಋತೇರಪನೋದನಃ || ೯೧ ||**

**ತ್ರಯಃ ಪಾದಾ ನೋ ಷ್ವಿತಿ ತು ಸೌಮ್ಯಾ ನೈರ್ಋತ ಉತ್ತಮಃ |**
**ಋಕ್ಸೌಮ್ಯಾ ನೈರ್ಋತೀ ಚೈಷಾ ಅಸುನೀತೇ ಸ್ತುತಿಃ ಪರೇ || ೯೨ ||**

**ದ್ವ್ಯೃಚೇ ತ್ವಾನುಮತಂ ಪಾದಮಂತ್ಯಂ ಯಾಸ್ಕಸ್ತು ಮನ್ಯತೇ |**
**ಭೂರ್ದ್ಯೌಃ ಸೋಮಶ್ಚ ಪೂಷಾ ಚ ಖಂ ಪಥ್ಯಾ ಸ್ವಸ್ತಿರೇವ ಚ || ೯೩ ||**

**ಸುಬಂಧೋರೇವ ಶಾಂತ್ಯರ್ಥಂ ಪುನರ್ನ ಋಚಿ ತು ಸ್ಮೃತಾಃ |**
**ತೃಚಃ ಶಮಿತಿ ರೋದಸ್ಯೋರ್ಯೇಂದ್ರೋಽರ್ಧರ್ಚಃ ಸಮಿತ್ಯೃಚಿ || ೯೪ ||**

ಅನಂತರ ಮೃತನ ಭೇಷಜಾರ್ಥವಾಗಿ (ಗುಣಹೊಂದುವುದಕ್ಕಾಗಿ) ಪ್ರತಾರ್ಯಾಯುಃ ಎಂದು ಮೊದಲಾಗುವ ಮೂರು ಋಕ್ಕುಗಳನ್ನು(೫೯ನೇ ಸೂಕ್ತದ ಮೊದಲಿನ ಮೂರು ಋಕ್ಕುಗಳನ್ನು )ಪಾಪದೇವತೆಯಾದ ನಿರ್ಋತಿಯನ್ನು ಓಡಿಸುವುದಕ್ಕಾಗಿ ಪಠಿಸಲ್ಪಡಬೇಕು. ಈ ಸೂಕ್ತದ ನಾಲ್ಕನೆಯ ಋಕ್ಕಾದ **ಮೋ ಷು ಣಃ ಸೋಮ** ಎಂಬ ಋಕ್ಕಿನ ಮೊದಲಿನ ಮೂರು ಪಾದಗಳಲ್ಲಿ ಸೋಮದೇವತೆಯನ್ನು ಸ್ತುತಿಸಲಾಗಿದೆ. ನಾಲ್ಕನೆಯ ಪಾದವು ನಿರ್ಋತಿಪರವಾಗಿದೆ. ಆದ್ದರಿಂದ **ಈ** ಋಕ್ಕೆಲ್ಲವೂ ಸೋಮ ಮತ್ತು ನಿರ್ಋತಿಯನ್ನು ಸ್ತುತಿಸುವುದಾಗಿದೆ. ಮುಂದಿನ ಎರಡು ಎಂದರೆ ೫-೬ ನೆಯ ಋಕ್ಕುಗಳಲ್ಲಿ ಅಸುನೀತಿಯನ್ನು ಸ್ತುತಿಸಲಾಗಿದೆ. ಆದರೆ ೬ನೇ ಋಕ್ಕಿನ ಕೊನೆಯ ಪಾದದಲ್ಲಿ ಅನುಮತಿಯೆಂಬ ದೇವತೆಯನ್ನು ಸ್ತುತಿಸಿದೆಯೆಂದು ಯಾಸ್ಕರು ಅಭಿಪ್ರಾಯಪಡುವರು- ಮತ್ತು ೭ನೆಯ ಋಕ್ಕಿನಲ್ಲಿ ಭೂಃ, ದ್ಯೌಃ, ಸೋಮ, ಪೂಷಾ, ಅಂತರಿಕ್ಷ, ಪಥ್ಯಾ, ಸ್ವಸ್ತಿ ಎಂಬ ದೇವತೆಗಳು ಸುಬಂಧುವಿನ ಶಾಂತ್ಯರ್ಥವಾಗಿ ಸ್ತುತರಾಗಿರುವರು. ಮತ್ತು ೮-೧೦ ನೆಯ ಋಕ್ಕುಗಳಲ್ಲಿ ದ್ಯಾವಾಪೃಥಿವಿಗಳನ್ನು ಶಾಂತ್ಯರ್ಥವಾಗಿ ಸ್ತುತಿಸಲಾಗಿದೆ. ಕೊನೆಯ **ಸಮಿಂದ್ರೇರಯ** ಎಂಬ ಹತ್ತನೆಯ ಋಕ್ಕಿನ ಪೂರ್ವಾರ್ಧದಲ್ಲಿ ಇಂದ್ರನನ್ನು ಸ್ತುತಿಸಲಾಗಿದೆ.

**ರಪಸೋ ನಾಶನಾರ್ಥಂ ವೈ ತುಷ್ಟುವುಸ್ತ್ವಥ ರೋದಸೀ |**
**ರಪ ಇತ್ಯಭಿಧಾನಂ ತು ಗದಿತಂ ಪಾಪಕೃಚ್ಛ್ರಯೋಃ || ೯೫ ||**

**ಋಗ್ಭಿರೇತಿ ಚತಸೃಭಿಸ್ತತ ಐಕ್ಷ್ವಾಕುಮಸ್ತುವನ್ |**
**ಇಂದ್ರ ಕ್ಷತ್ರೇತ್ಯೃಚಾ ಚಾಸ್ಯ ಸ್ತುತ್ವಾಶಂಸಿಷುರಾಶಿಷಃ || ೯೬ ||**

**ಅಗಸ್ತ್ಯಸ್ಯೇತಿ ಮಾತಾ ಚ ತೇಷಾಂ ತುಷ್ಟಾವ ತಂ ನೃಪಂ |**
**ಸ್ತುತಃ ಸ ರಾಜಾ ಸವ್ರೀಳಸ್ತಸ್ಥೌ ಗೌಪಾಯನಾನಭಿ || ೯೭ ||**

ಶರೀರದ ಅಸ್ವಸ್ಥತೆಯ ನಾಶಕ್ಕಾಗಿ ದ್ಯಾವಾಪೃಥಿವಿಗಳನ್ನು ಸ್ತೋತ್ರಮಾಡಿದರು. ಅಸ್ವಸ್ಥತೆಯು (ರಪಃ) ಅಥವಾ ವ್ಯಾಧಿಯು ಹಿಂದೆ ಮಾಡಿದ ಪಾಪದ ಹೆಗ್ಗುರುತಾಗಿದೆ. ಮುಂದಿನ ಸೂಕ್ತದ (೬೦ ನೇ ಸೂಕ್ತದ) ಮೊದಲಿನ ೪ ಋಕ್ಕುಗಳಿಂದ ಇಕ್ಷ್ವಾಕುವಂಶದ ತಿಲಕಪ್ರಾಯನಾದ (ಅಸಮಾತಿ) ರಾಜನನ್ನು ಪ್ರಸಂಸೆಮಾಡಿದರು. ಅನಂತರ ಅವನ ಶ್ರೇಯೋಭಿವೃದ್ಧಿಗಾಗಿ **ಇಂದ್ರ ಕ್ಷತ್ರ** ಎಂಬ ಋಕ್ಕಿನಿಂದ ಇಂದ್ರನನ್ನು ಪ್ರಾರ್ಥಿಸಿದರು. ಈರೀತಿ ತನ್ನನ್ನು ಪ್ರಶಂಸೆ ಮಾಡಿ ತನ್ನ ಶ್ರೇಯೋಭಿವೃದ್ಧಿಗಾಗಿ ಇಂದ್ರನನ್ನು ಪ್ರಾರ್ಥಿಸುತ್ತಿರುವುದನ್ನು ಕಂಡು ಅಸಮಾತಿರಾಜನು ತಾನು ಮಾಡಿದ ಅಕೃತ್ಯಕ್ಕಾಗಿ ಲಜ್ಜೆಗೊಂಡು ಗೋಪಾಯನಪುತ್ರರಾದ ಬಂಧ್ವಾದಿಗಳ ಬಳಿಗೆ ಹೋಗಿ ನಾಚಿಕೆಯಿಂದ ತಲೆತಗ್ಗಿಸಿ ಸುಮ್ಮನೆ ನಿಂತುಕೊಂಡನು.

**ಸೂಕ್ತೇನಾಪ್ಯಸ್ತುವನ್ನಗ್ನಿಂ ದ್ವೈಪದೇನ ಯಥಾತ್ರಿಷು ।**
**ಅಗ್ನಿರಪ್ಯಬ್ರವೀದೇತಾನಯಮಂತಃ ಪರಿಧ್ಯಸುಃ** ॥ ೯೮ ॥

**ಸುಬಂಧೋರಸ್ಯ ಚೈಕ್ಷ್ವಾಕೋರ್ಮಯಾ ಗುಪ್ತೋ ಹಿತಾರ್ಥಿನಾ ।**
**ಸುಬಂಧವೇ ಪ್ರದಾಯಾಸುಂ ಜೀವೇತ್ಯುಕ್ತ್ವಾ ಚ ಪಾವಕಃ** ॥ ೯೯ ॥

**ಸ್ತುತೋ ಗೌಪಾಯನೈಃ ಪ್ರೀತೋ ಜಗಾಮ ತ್ರಿದಿವಂ ಪ್ರತಿ ।**
**ಅಯಂ ಮಾತೇತಿ ಹೃಷ್ಟಾಸ್ತೇ ಸುಬಂಧೋರಸುಮಾಹ್ವಯನ್** ॥ ೧೦೦ ॥

**ಶರೀರಮಭಿನಿರ್ದಿಶ್ಯ ಸುಬಂಧೋಃ ಪತಿತಂ ಭುವಿ ।**
**ಸೂಕ್ತಶೇಷಂ ಜಗುಶ್ಚಾಸ್ಯ ಚೇತಸೋ ಧಾರಣಾಯ ತೇ** ॥ ೧೦೧ ॥

**ಲಬ್ಧಾಸುಂ ಚಾಯಮಿತ್ಯಸ್ಯಾಂ ಪೃಥಕ್ಪಾಣಿಭಿರಸ್ಪೃಶನ್ ।**

(ಬೃ. ದೇ. ಅಧ್ಯಾಯ ೭)

ಹಿಂದೆ ಅತ್ರಿಮಂಡಲದಲ್ಲಿ (೫ ನೇ ಮಂಡಲದ ೨೪ ನೇ ಸೂಕ್ತ) ಅಗ್ನಿಯನ್ನು ಸ್ತುತಿಸಿದಂತೆ ಈಗಲೂ ದ್ವಿಪದಾವಿರಾಟ್ ಛಂದಸ್ಸಿನ ಋಕ್ಕುಗಳಿಂದ ಅಗ್ನಿಯನ್ನು ಸ್ತುತಿಸಿದರು. ಅದರಿಂದ ಅಗ್ನಿಯು ಸಂತುಷ್ಟನಾಗಿ ಇಂತೆಂದನು—ಎಲೈ ಬಂಧ್ವಾದಿಗಳೇ, ಇಗೋ, ನಿಮ್ಮ ಸಹೋದರನಾದ ಸುಬಂಧುವಿನ ಮತ್ತು ಇಕ್ಷ್ವಾಕುವಂಶದ (ಅಸಮಾತಿ) ರಾಜನ ಪ್ರಾಣವು ಯಜ್ಞಾಗ್ನಿಯ ಪರಿಧಿಯ ಮಧ್ಯದಲ್ಲಿಯೇ ಇರುವುದು. ಇವರಿಬ್ಬರ ಅಸುಗಳನ್ನು ಎಂದರೆ ಪ್ರಾಣಗಳನ್ನು ಇದುವರೆಗೆ ನಾನೇ ರಕ್ಷಿಸುತ್ತಿದ್ದೆನು ಎಂದು ಹೇಳಿ ಎಲೈ ಸುಬಂಧುವೇ, ಪುನಃ ಜೀವಿಸು ಎಂದು ಹೇಳುತ್ತಾ ಅವನ ಪ್ರಾಣವನ್ನು ಪುನಃ ಹಿಂದಕ್ಕೆ ಕೊಟ್ಟನು. ಅನಂತರ ಅಗ್ನಿಯು ಗೌಪಾಯನರಿಂದ ಎಂದರೆ ಗೋಪಾಯನಪುತ್ರರಾದ ಬಂಧ್ವಾದಿಗಳಿಂದ ಅತಿಶಯವಾಗಿ ಸ್ತುತಿಸಲ್ಪಟ್ಟು ಸಂತೋಷಯುಕ್ತನಾಗಿ ಸ್ವರ್ಗಕ್ಕೆ ಹೊರಟುಹೋದನು. ಬಳಿಕ ಬಂಧ್ವಾದಿಗಳು ಸಂತುಷ್ಟಚಿತ್ತರಾಗಿ ಈಸೂಕ್ತದ **ಅಯಂ ಮಾತಾ** ಎಂಬ ೭ನೆಯಋಕ್ಕಿನಿಂದ ಸುಬಂಧುವಿನ ಪ್ರಾಣವನ್ನು (ಆತ್ಮವನ್ನು) ಹಿಂತಿರುಗಿ ಬರುವಂತೆ ಕರೆದು ಅಲ್ಲಿಯೇ ನಿಶ್ಚೇಷ್ಟಿತವಾಗಿ ಬಿದ್ದಿದ್ದ ಸುಬಂಧುವಿನ ಶರೀರವನ್ನು ತೋರಿಸಿ ಅದರಲ್ಲಿ ಪುನಃ ಪ್ರವೇಶಿಸಬೇಕೆಂದು ಪ್ರಾರ್ಥಿಸಿ ಅದಕ್ಕಾಗಿ ಎಂದರೆ ಮೃತಶರೀರದಲ್ಲಿ ಚೈತನ್ಯವುಂಟಾಗುವುದಕ್ಕಾಗಿ ಈ ಸೂಕ್ತದ ಋಕ್ಕುಗಳನ್ನು ಕೊನೆಯವರೆಗೂ ಜಪಿಸಿದರು ಮತ್ತು **ಅಯಂ ಮೇ ಹಸ್ತೋ ಭಗವಾನ್** ಎಂಬ ಕೊನೆಯ (೧೨ ನೆಯ) ಋಕ್ಕನ್ನು ಪಠಿಸುತ್ತಾ ಆ ಮೂರುಮಂದಿ ಸಹೋದರರಲ್ಲಿ ಪ್ರತಿಯೊಬ್ಬರೂ ಬೇರೆಬೇರೆಯಾಗಿ ಪುನಃ ಜೀವಂತನಾದ ಆ ಸುಬಂಧುವನ್ನು ತಮ್ಮ ಹಸ್ತಗಳಿಂದ ಸ್ಪರ್ಶನಮಾಡಿದರು (ಕೈಯಿಂದ ಮುಟ್ಟಿದರು).

ಸಾಯಣಭಾಷ್ಯಂ

**ಮಾ ಪ್ರ ಗಾಮೇತಿ ಷಡೃಚಂ ಪಂಚದಶಂ ಸೂಕ್ತಂ ಗಾಯತ್ರಂ ವೈಶ್ವದೇವಂ । ಐಕ್ಷ್ವಾಕೋಽಸಮಾತಿರ್ನಾಮ ರಾಜಾ । ತಸ್ಯ ಬಂಧುಃ ಸುಬಂಧುಃ ಶ್ರುತಬಂಧುರ್ವಿಪ್ರಬಂಧುಶ್ಚೇತಿ ಚತ್ವಾರಃ ಪುರೋಹಿತಾ ಆಸನ್ । ತೇ ಚ ಗೌಪಾಯನಾಃ । ಸ ಚ ರಾಜಾ ತಾಂಸ್ತ್ಯಕ್ತ್ವಾನ್ಯೌ ಮಾಯಾವಿನಾವೃಷೀ ಪುರೋಹಿತತ್ವೇನಾವೃಣೀತ। ತತೋ ಬಂಧ್ವಾದಯಃ ಕ್ರುದ್ಧಾಃ ಸಂತ ಇಮಂ ರಾಜಾನಮಭಿಚರಿತವಂತಃ। ಏತಜ್ಜ್ಞಾತ್ವಾ ಮಾಯಾವಿನೌ ಪುರೋಹಿತಾವೇಷಾಮನ್ಯತಮಂ ಸುಬಂಧುಂ ಪ್ರಾಣೈರ್ವಿಯೋಜಿತವಂತೌ। ಮೃತಸ್ಯಾಸ್ಯ ಭ್ರಾತರೋ ಬಂಧುಃ ಶ್ರುತಬಂಧುರ್ವಿಪ್ರಬಂಧುರಿತ್ಯೇತೇಽವಿನಾಶಪ್ರಾಪ್ತಿಹೇತುಭೂತಮಿದಂ ದೃಷ್ಟ್ವಾ ಜಪಂತಿ ಸ್ಮ। ಅತಸ್ತೇಽಸ್ಯ ಸೂಕ್ತಸ್ಯರ್ಷಯಃ । ಪ್ರತಿಪಾದ್ಯತ್ವಾದಾವರ್ತಮಾನಂ ಮನೋ ದೇವತಾ । ತಥಾ ಚಾನುಕ್ರಾಂತಂ । ಅಥ ಹೈಕ್ಷ್ವಾಕೋ ರಾಜಾಸಮಾತಿರ್ಗೌಪಾಯನಾನ್ಬಂಧ್ವಾದೀನ್ಪುರೋಹಿತಾಂಸ್ತ್ಯಕ್ತ್ವಾನ್ಯೌ ಮಾಯಾವಿನೌ ಶ್ರೇಷ್ಠತಮೌ ಮತ್ವಾ ಪುರೋದಧೇ ತಮಿತರೇ ಕ್ರುದ್ಧಾ ಅಭಿಚೇರುಃ ಅಥ ತೌ ಮಾಯಾವಿನೌ ಸುಬಂಧೋಃ ಪ್ರಾಣಾನಾಚಿಕ್ಷಿಪತುರಥ ಹಾಸ್ಯ ಭ್ರಾತರಸ್ತ್ರಯೋ ಮಾ ಪ್ರ ಗಾಮೇತಿ ಷಟ್ಕಂ ಗಾಯತ್ರಂ ಸ್ವಸ್ತ್ಯಯನಂ ಜಪ್ತ್ವೇತಿ ॥ ಅಗ್ನಿಸಮೀಪಾದ್ದೇಶಾಂತರಗಮನಸಮಯ ಇದಂ ಸೂಕ್ತಂ ಜಪ್ಯಂ । ಸೂತ್ರಿತಂ ಚ । ಪ್ರವ್ರಜೇದನಪೇಕ್ಷಮಾಣೋ ಮಾ ಪ್ರ ಗಾಮೇತಿ ಸೂಕ್ತಂ ಜಪನ್ । ಆ. ೨-೫ । ಇತಿ । ಮಹಾಪಿತೃಯಜ್ಞೇಽಪ್ಯೇತದೃತ್ವಿಗ್ಭಿರ್ಜಪ್ಯಂ । ಸೂತ್ರಿತಂ ಚ । ಮಾ ಪ್ರ ಗಾಮಾಗ್ನೇತ್ವಂ ನ ಇತಿ ಜಪಂತಃ । ಆ. ೨-೧೯ । ಇತಿ ॥ ನಿವಿದಃ ಸ್ಥಾನಾತಿಪತ್ತಾವಿದಂ ಸೂಕ್ತಂ ಶಸ್ತ್ವಾ ಸೂಕ್ತಾಂತರೇ ನಿವಿತ್ಪ್ರಕ್ಷೇಪ್ತವ್ಯಾ । ಸೂತ್ರಿತಂ ಚ । ಸ್ಥಾನಂ ಚೇನ್ನಿವಿದೋಽತಿಹರೇನ್ಮಾ ಪ್ರ ಗಾಮೇತಿ ಪುರಸ್ತಾತ್ಸೂಕ್ತಂ ಶಸ್ತ್ವಾ । ಆ. ೬-೬ । ಇತಿ ॥**

ಅನುವಾದವು—**ಮಾ ಪ್ರ ಗಾಮ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಿಶ್ವೇದೇವತೆಗಳು ದೇವತೆಯು ; ಗಾಯತ್ರೀ ಛಂದಸ್ಸು. ಪೂರ್ವದಲ್ಲಿ ಇಕ್ಷ್ವಾಕು ವಂಶದ ರಾಜರಲ್ಲಿ ಅಸಮಾತಿ ಎಂಬ ಹೆಸರಿನ ಓರ್ವ ರಾಜನಿದ್ದನು. ಅವನಿಗೆ ಗೋಪಾಯನ ಎಂಬ ಹೆಸರಿನ ಋಷಿಯ ಪುತ್ರರಾದ ಬಂಧು, ಸುಬಂಧು, ಶ್ರುತಬಂಧು, ವಿಪ್ರಬಂಧು ಎಂಬ ಹೆಸರಿನ ನಾಲ್ವರು ಋಷಿಗಳು ಪುರೋಹಿತರಾಗಿದ್ದರು. ಆದರೆ ಆ ರಾಜನು ತನ್ನ ಕುಲಪುರೋಹಿತರಾದ ಬಂಧು ಮೊದಲಾದ ನಾಲ್ವರನ್ನು ತ್ಯಜಿಸಿ ಮಾಯಾವಿಗಳಾದ (ಕಪಟಿಗಳಾದ) ಬೇರೆ ಇಬ್ಬರನ್ನು ಪುರೋಹಿತರನ್ನಾಗಿ ನೇಮಿಸಿಕೊಂಡನು. ಇದನ್ನು ಕಂಡು ಬಂಧ್ವಾದಿ ಸಹೋದರರು ಕೋಪಗೊಂಡು ರಾಜನಿಗೆ ಅಭಿಚಾರ (ಮಾಯ ಅಥವಾ ಮಾಟ) ಕರ್ಮದಿಂದ ಕೆಡುಕನ್ನು ಮಾಡಿದರು. ಇದನ್ನು ರಾಜಪುರೋಹಿತರಾದ ಆ ಇಬ್ಬರು ಋಷಿಗಳು ತಿಳಿದು ಆ ನಾಲ್ವರು ಸಹೋದರರಲ್ಲಿ ಎರಡನೆಯವನಾದ ಸುಬಂಧು ಎಂಬುವನ ಪ್ರಾಣಾಪಹರಣ ಮಾಡಿದರು. ತಮ್ಮ ಸಹೋದರನಾದ ಸುಬಂಧುವು ಮೃತನಾದುದನ್ನು ಕಂಡು ಉಳಿದ ಮೂವರು ಸಹೋದರರೂ ತಮ್ಮ ಮೃತಸಹೋದರನ ಸ್ವಸ್ತ್ಯರ್ಥವಾಗಿ ಈ ಸೂಕ್ತವನ್ನು ಜಪಿಸಿದರು. ಆದ್ದರಿಂದ ಈ ಸೂಕ್ತಕ್ಕೆ ಬಂಧು, ಶ್ರುತಬಂಧು, ವಿಪ್ರಬಂಧು ಎಂಬ ಮೂವರು ಸಹೋದರರು ಋಷಿಗಳು ; ಅನುಕ್ರಮಣಿಕೆಯಲ್ಲಿ- **ಅಥ ಹೈಕ್ಷ್ವಾಕೋ ರಾಜಾಸಮಾತಿರ್ಗೌಪಾಯನಾನ್ಬಂಧ್ವಾದೀನ್ಪುರೋಹಿತಾಂಸ್ತ್ಯಕ್ತ್ವಾನ್ಯೌ ಮಾಯಾವಿನೌ ಶ್ರೇಷ್ಠತಮೌ ಮತ್ವಾ ಪುರೋದಧೇ । ತಮಿತರೇ ಕ್ರುದ್ಧಾ ಅಭಿಚೇರುಃ । ಅಥ ತೌ ಮಾಯಾವಿನೌ ಸುಬಂಧೋಃ ಪ್ರಾಣಾನಾಚಿಕ್ಷಿಪತುರಥ ಹಾಸ್ಯ ಭ್ರಾತರ-**

**ಸ್ತ್ರಯೋ ಮಾ ಪ್ರ ಗಾಮೇತಿ ಷಟ್ಕಂ ಗಾಯತ್ರಂ ಸ್ವಸ್ತ್ಯಯನಂ ಜಪ್ತ್ವಾ** ಎಂದು ಹೇಳಿರುವುದು. ಗೃಹಸ್ಥನಾದವನು ತನ್ನ ಅಗ್ನಿಹೋತ್ರಾದಿಯನ್ನು ಬಿಟ್ಟು ಪರಸ್ಥಳಕ್ಕೆ ಹೋಗುವ ಸಂದರ್ಭದಲ್ಲಿ ಈ ಸೂಕ್ತವನ್ನು ಜಪಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಪ್ರವ್ರಜೇದನಪೇಕ್ಷಮಾಣೋ ಮಾ ಪ್ರ ಗಾಮೇತಿ ಸೂಕ್ತಂ ಜಪನ್** ಎಂಬ ಸೂತ್ರದಿಂದ (ಆ. ೨-೫) ವಿವೃತವಾಗಿರುವುದು. ಮಹಾಪಿತೃಯಜ್ಞವೆಂಬ ಇಷ್ಟಿಯಲ್ಲಿಯೂ ಈ ಸೂಕ್ತವನ್ನು ಋತ್ವಿಕ್ಕುಗಳು ಜಪಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಮಾ ಪ್ರಗಾಮಾಗ್ನೇ ತ್ವಂ ನ ಇತಿ ಜಪಂತಃ** ಎಂಬ ಸೂತ್ರದಿಂದ (ಆ. ೨-೧೯) ವಿವೃತವಾಗಿರುವುದು. ಮತ್ತು ನಿವಿತ್‌ಸೂಕ್ತವನ್ನು ಪಠಿಸುವ ಸಂದರ್ಭದಲ್ಲಿ ಬೇರೆ ಸೂಕ್ತವನ್ನು ಪಠಿಸಬೇಕಾದಾಗ ಈ ಸೂಕ್ತವನ್ನು ಅದರಸ್ಥಾನದಲ್ಲಿ ಎಂದರೆ ಅದಕ್ಕೆಬದಲಾಗಿ ಪಠಿಸಿ ನಿವಿತ್ ಸೂಕ್ತವನ್ನು ಬೇರೆ ಸೂಕ್ತದ ಮಧ್ಯದಲ್ಲಿ ಸೇರಿಸಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಸ್ಥಾನಂ ಚೇನ್ನಿವಿದೋಽತಿಹರೇನ್ಮಾ ಪ್ರ ಗಾಮೇತಿ ಪುರಸ್ತಾತ್ಸೂಕ್ತಂ ಶಸ್ತ್ವಾ** ಎಂಬ ಸೂತ್ರದಿಂದ (ಆ. ೬-೬) ವಿವೃತವಾಗಿರುವುದು.

## ಸೂಕ್ತ—೫೭

ಮಂಡಲ—೧೦ ॥ ಅನುವಾಕ—೪ ॥ ಸೂಕ್ತ—೫೭ ॥
ಅಷ್ಟಕ—೮ ॥ ಅಧ್ಯಾಯ—೧ ॥ ವರ್ಗ—೧೯॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ಬಂಧುಃಶ್ರುತಬಂಧುರ್ವಿಪ್ರಬಂಧುರ್ಗೌಪಾಯನಾಃ ॥
ದೇವತಾ—ವಿಶ್ವೇದೇವಾಃ ॥
ಛಂದಃ—ಗಾಯತ್ರೀ ॥

ಸಂಹಿತಾಪಾಠಃ

ಮಾ ಪ್ರ ಗಾಮ ಪಥೋ ವಯಂ ಮಾ ಯಜ್ಞಾದಿಂದ್ರ ಸೋಮಿನಃ ।
ಮಾಂತಃಸ್ಥುರ್ನೋ ಅರಾತಯಃ ॥ ೧ ॥

ಪದಪಾಠಃ

ಮಾ । ಪ್ರ । ಗಾಮ । ಪಥಃ । ವಯಂ । ಮಾ । ಯಜ್ಞಾತ್ । ಇಂದ್ರ । ಸೋಮಿನಃ ॥
ಮಾ । ಅಂತರಿತಿ । ಸ್ಥುಃ । ನಃ । ಅರಾತಯಃ ॥ ೧ ॥

ಸಾಯಣಭಾಷ್ಯಂ

ಅತ್ರೋಕ್ತಾಖ್ಯಾನೇ ಶಾಟ್ಯಾಯನಕಂ । ಅಸಮಾತಿಂ ರಾಥಪ್ರೌಷ್ಠಂ ಗೌಪಾಯನಾ ಅಭ್ಯಗ-ಮಂಸ್ತೇ ಖಾಂಡವೇ ಸತ್ತ್ರಮಾಸತಾಥ ಹಾಸಸಾತೌ ರಾಥಪ್ರೌಷ್ಠೇ ಕಿಲಾತಾಕುಲೀ ಊಷತುರಸುರ-ಮಾಯೌ ತಂ ಹ ಸ್ಮಾನಗ್ನೌ ನಿಧಾಯೌದನಂ ಪಚತೋಽಗ್ನೌ ಮಾಂಸಮಥಾಸುರಾನ್ನಂ ದಗ್ಧ್ವೇಕ್ಷ್ವಾ-ಕವಃ ಪರಾಬಭೂವುಃ । ತಮಸಮಾತಿಂ ರಾಥಪ್ರೌಷ್ಠಂ ಗೌಪಾಯನಾನಾಮಾಹುತಯೋಽಭ್ಯತಪನ್ ಸೋಽಬ್ರವೀದಿಮೌ ಕಿಲಾತಾಕುಲೀ ಇಮಾ ವೈ ಮಾ ಗೌಪಾಯನಾನಾಮಾಹುತಯೋಽಭಿತಪಂತೀತಿ ತಾವಬ್ರೂತಾಂ ತಸ್ಯ ವಾ ಆವಾಮೇವ ಭಿಷಜೌ ಸ್ವ ಆವಾಂ ಪ್ರಾಯಶ್ಚಿತ್ತಿರಾವಾಂ ತಥಾ ಕರಿಷ್ಯಾವೋ

ಯಥಾ ನ್ವೇತಾ ನಾಭಿತಪಂತೀತಿ | ತೌ ಪರೇತ್ಯ ಸುಬಂಧೋರ್ಗೌಪಾಯನಸ್ಯ ಸ್ವಪತಃ ಪ್ರಮತ್ತಸ್ಯಾಸುಮಾಹುತ್ಯಾಂತಃಪರಿಧಿ ನ್ಯಧತ್ತಾಮಿತ್ಯಾದಿ | ತಂ ಸುಬಂಧೋರಸುಮಾದಾತುಂ ಖಾಂಡವಾದಸಮಾತಿಂ ಪ್ರತಿಗಚ್ಛಂತೋ ಗೌಪಾಯನಾ ವದಂತಿ | ಹೇ ಇಂದ್ರ ವಯಂ ಗೌಪಾಯನಾಃ ಪಥಃ ಸಮೀಚೀನಾನ್ಮಾರ್ಗಾನ್ಮಾ ಪ್ರ ಗಾಮ | ಮಾ ಪರಾಗಚ್ಛಾಮ | ಅಸಮಾತಿಗೃಹಮೇವ ಗಚ್ಛಾಮ | ಮಾ ಚ ಸೋಮಿನೋऽಸಮಾತೇರ್ಯಜ್ಞಾತ್ಪ್ರ ಗಾಮ | ಮಾ ಸ್ಥುರ್ನೋ ತಿಷ್ಠಂತು ನೋऽಸ್ಮಾಕಮಂತರ್ಮಾರ್ಗಮಧ್ಯೇऽರಾತಯಃ ಶತ್ರವಃ | ಯದ್ವಾ | ಸೋಮಿನಃ ಸೋಮವತೋ ಯಾಗಾನ್ಮಾ ಪ್ರ ಗಾಮ ||

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ | **ವಯಂ**—ನಾವು | **ಪಥಃ**—ಉತ್ತಮವಾದ ಮಾರ್ಗದಿಂದ | **ಮಾ ಪ್ರ ಗಾಮ**—ದೂರ ಸರಿದು ಹೋಗದಿರುವಂತಾಗಲಿ | **ಸೋಮಿನಃ**—ಸೋಮವನ್ನು ಅರ್ಪಿಸುವ ಅಸಮಾತಿಯ | **ಯಜ್ಞಾತ್ ಮಾ**—ಯಜ್ಞದಿಂದ ದೂರ ಹೋಗದಿರುವಂತಾಗಲಿ | **ನಃ**—ನಮ್ಮ | **ಅಂತಃ**—ಮಾರ್ಗಮಧ್ಯದಲ್ಲಿ | **ಅರಾತಯಃ**—ಶತ್ರುಗಳು | **ಮಾ ಸ್ಥುಃ**—ಅಡ್ಡಲಾಗಿ ನಿಲ್ಲದಿರಲಿ.

ಭಾವಾರ್ಥ

ಎಲೈ ಇಂದ್ರನೇ, ನಾವು ಉತ್ತಮವಾದ ಮಾರ್ಗದಿಂದ ದೂರ ಸರಿದು ಹೋಗದಿರುವಂತಾಗಲಿ. ಸೋಮವನ್ನು ಅರ್ಪಿಸುವ ಅಸಮಾತಿರಾಜನ ಯಜ್ಞದಿಂದಲೂ ದೂರ ಹೋಗದಿರುವಂತಾಗಲಿ. ನಮ್ಮ ಮಾರ್ಗಮಧ್ಯದಲ್ಲಿ ಶತ್ರುಗಳು ಅಡ್ಡಲಾಗಿ ನಿಲ್ಲದಿರಲಿ.

English Translation

Let us not depart, Indra, from the path; let us not (depart) from the sacrifice of the offerer of the libation; let not our adversaries remain (in our place).

ವಿಶೇಷವಿಷಯಗಳು

ಈ ಋಕ್ಕಿನ ಭಾಷ್ಯದಲ್ಲಿ ಸಾಯಣರು ಶಾಟ್ಯಾಯನಬ್ರಾಹ್ಮಣದಲ್ಲಿರುವ ಒಂದು ಉಪಾಖ್ಯಾನವನ್ನು ಉದಾಹರಿಸಿದಾರೆ.

> ಅಸಮಾತಿಂ ರಾಥಪ್ರೌಷ್ಠಂ ಗೌಪಾಯನಾ ಅಭ್ಯಗಮಂಸ್ತೇ ಖಾಂಡವೇ ಸತ್ರಮಾಸತಾಥ ಹಾಸಮಾತೌ ರಾಥಪ್ರೌಷ್ಠೇ ಕಿಲಾತಾಕುಲೀ ಊಷತುರಸುರಮಾಯೌ ತಂ ಹ ಸ್ಮಾನಗ್ನೌ ನಿಧಾಯೌದನಂ ಪಚತೋऽಗ್ನೌ ಮಾಂಸಮಥಾಸುರಾನ್ನಂ ದಗ್ಧ್ವೇಕ್ಷ್ವಾಕವಃ ಪರಾಬಭೂವುಃ | ತಮಸಮಾತಿಂ ರಾಥಪ್ರೌಷ್ಠಂ ಗೌಪಾಯನಾನಾಮಾಹುತಯೋऽಭ್ಯತಪನ್ ಸೋऽಬ್ರವೀದಿಮೌ ಕಿಲಾತಾಕುಲೀ ಇಮಾ ವೈ ಮಾ ಗೌಪಾಯನಾನಾಮಾಹುತಯೋऽಭಿತಪಂತೀತಿ ತಾವಬ್ರೂತಾಂ ತಸ್ಯ ವಾ ಆವಾಮೇವ ಭಿಷಜೌ ಸ್ವ ಆವಾಂ ಪ್ರಾಯಶ್ಚಿತ್ತಿರಾವಾಂ ತಥಾ ಕರಿಷ್ಯಾವೋ ಯಥಾ ನ್ವೇತಾ ನಾಭಿತಪಂತೀತಿ | ತೌ ಪರೇತ್ಯ ಸುಬಂಧೋರ್ಗೌಪಾಯನಸ್ಯ ಸ್ವಪತಃ ಪ್ರಮತ್ತಸ್ಯಾಸುಮಾಹುತ್ಯಾಂತಃಪರಿಧಿ ನ್ಯಧತ್ತಾಂ | ಇತ್ಯಾದಿ ||

ಒಂದು ಸಮಯದಲ್ಲಿ ಗೋಪಾಯನಪುತ್ರರಾದ ಬಂಧ್ವಾದಿಗಳು ಖಾಂಡವವೆಂಬ ವನಪ್ರದೇಶದಲ್ಲಿ ಸತ್ರಯಾಗವನ್ನು ಮಾಡುತ್ತಿದ್ದರು. ಆಗ ಅವರು ರಥಪ್ರೋಷ್ಠನ ಪುತ್ರನಾದ ಅಸಮಾತಿ ಎಂಬ ರಾಜನ ಬಳಿಗೆ ಬಂದರು. ಆ ಕಾಲದಲ್ಲಿ

ಆ ರಾಜನ ಬಳಿ ಕಿಲಾತ, ಆಕುಲೀ ಎಂಬ ಇಬ್ಬರು ಪುರೋಹಿತರಿದ್ದರು. ಅವರು ಅಸುರರು ನಡೆಸುವ ಅಭಿಚಾರ ಮತ್ತು ಮಾಯಾ (ಮಾಟ) ಕರ್ಮಗಳಲ್ಲಿ ಕುಶಲರಾಗಿದ್ದರು. ಅವರು ರಾಜನ ಕೈಯಿಂದ ಅಗ್ನಿಯಲ್ಲಿ ಮಾಂಸವನ್ನೂ ಅಸುರಾನ್ನವನ್ನೂ ಹೋಮಮಾಡಿಸಿದರು. ಅದರಿಂದ ಇಕ್ಷ್ವಾಕುವಂಶದ ರಾಜರು ಯುದ್ಧದಲ್ಲಿ ಸೋತುಹೋದರು. ಇದರಿಂದ ಅಸಮಾಧಾನಗೊಂಡ ಗೋಪಾಯನಪುತ್ರರಾದ ಬಂಧ್ವಾದಿಗಳು ಅಗ್ನಿಯಲ್ಲಿ ಹೋಮಮಾಡಲು ಆ ಹೋಮದಿಂದ ರಥಪ್ರೋಷ್ಠನ ಪುತ್ರನಾದ ಅಸಮಾತಿ ರಾಜನಿಗೆ ಶರೀರದಲ್ಲಿ ಬಹಳವಾಗಿ ಸುಡುವಂತೆ ತಾಪವುಂಟಾಯಿತು. ಅದರಿಂದ ವ್ಯಾಕುಲನಾದ ಅಸಮಾತಿಯು ತನ್ನ ಹೊಸಪುರೋಹಿತರಾದ ಕಿಲಾತಾಕುಲಿಗಳನ್ನು ಕುರಿತು— ಈ ಗೋಪಾಯನ ಪುತ್ರರು ಅಗ್ನಿಯಲ್ಲಿ ಅರ್ಪಿಸಿದ ಆಹುತಿಗಳು ನನ್ನನ್ನು ದಹಿಸುತ್ತಿವೆ ಎಂದು ಹೇಳಲು, ಅದಕ್ಕೆ ಅವರು ಹೆದರಬೇಡ ನಾವು ನಿನಗೆ ವೈದ್ಯರಾಗಿರುವೆವು. ಇದಕ್ಕೆ ಪ್ರಾಯಶ್ಚಿತ್ತರೂಪವಾದ ಕರ್ಮವನ್ನು ಮಾಡಿ ಶರೀರತಾಪವನ್ನು ಪರಿಹರಿಸುವೆವು ಎಂದು ಅವನನ್ನು ಸಮಾಧಾನಮಾಡಿ ಅಲ್ಲಿಂದ ಹೊರಟು ಗೋಪಾಯನಪುತ್ರರಾದ ಬಂಧ್ವಾದಿಗಳ ಬಳಿಗೆ ಬಂದರು. ಆಗ ಅವರಲ್ಲಿ ಎಚ್ಚರವಿಲ್ಲದೆ ನಿದ್ರಿಸುತ್ತಿದ್ದ ಸುಬಂಧು ಎಂಬುವನ ಪ್ರಾಣವನ್ನು ತಮ್ಮ ಮಾಯಾಶಕ್ತಿಯಿಂದ ಅಪಹರಿಸಿ ತಂದು ಅಗ್ನಿಯ ಅಂತಃಪರಿಧಿಯ ಮಧ್ಯದಲ್ಲಿ ಇಟ್ಟರು ಎಂದು ಮೊದಲಾಗಿ ಉಪಾಖ್ಯಾನವಿದೆ. ಮೃತನಾದ ಸುಬಂಧುವಿನ ಪ್ರಾಣವನ್ನು ಹಿಂತಿರುಗಿಸುವುದಕ್ಕಾಗಿ ಅಸಮಾತಿರಾಜನ ಗೃಹಕ್ಕೆ ಹೋಗುವಾಗ ಬಂಧ್ವಾದಿಗಳು ಇಂದ್ರನನ್ನು ಈ ಸೂಕ್ತದ **ಮಾ ಪ್ರ ಗಾಮ** ಎಂದು ಮೊದಲಾದ ಋಕ್ಕುಗಳಿಂದ ಸ್ತುತಿಸಿದ್ದಾರೆ.

ಸಂಹಿತಾಪಾಠಃ

**ಯೋ ಯಜ್ಞಸ್ಯ ಪ್ರಸಾಧನಸ್ತಂತುರ್ದೇವೇಷ್ವಾತತಃ ।**

**ತಮಾಹುತಂ ನಶೀಮಹಿ ॥ ೨ ॥**

ಪದಪಾಠಃ

**ಯಃ । ಯಜ್ಞಸ್ಯ । ಪ್ರಽಸಾಧನಃ । ತಂತುಃ । ದೇವೇಷು । ಆಽತತಃ ॥**

**ತಂ । ಆಽಹುತಂ । ನಶೀಮಹಿ ॥**

ಸಾಯಣಭಾಷ್ಯಂ

**ಯೋಽಯಮಗ್ನ್ಯಾಖ್ಯಸ್ತಂತುರಾಹವನೀಯಾದಿರೂಪೇಣ ವಿಸ್ತೃತೋ ಯಜ್ಞಸ್ಯ ಪ್ರಸಾಧನಃ ಪ್ರಕರ್ಷೇಣ ಸಾಧಯಿತಾ ದೈವ್ಯೈಃ ಸ್ತೋತೃಭಿರ್ಋತ್ವಿಗ್ಭಿರ್ವಿಸ್ತಾರಿತೋ ವರ್ತತೇ ವೇದ್ಯಾಂ ತಮಾಹುತಂ ಸರ್ವತೋ ಹೂಯಮಾನಂ ನಶೀಮಹಿ । ಪ್ರಾಪ್ನುಯಾಮ । ನಶತಿರ್ವ್ಯಾಪ್ತಿಕರ್ಮಾ ॥**

ಪ್ರತಿಪದಾರ್ಥ

**ಯಃ**— ಯಾವ ಅಗ್ನಿಯು । **ತಂತುಃ**— ಯಜ್ಞಕ್ಕೆ ಸೂತ್ರಪ್ರಾಯನೋ । **ಯಜ್ಞಸ್ಯ**— ಯಜ್ಞಕ್ಕೆ **ಪ್ರಸಾಧನಃ**— ಅಲಂಕಾರಪ್ರಾಯನೋ । **ದೇವೇಷು**— ಋತ್ವಿಕ್ಕುಗಳಿಂದ । **ಆತತಃ**— ಯಜ್ಞಕ್ಕೆ ಬರಮಾಡಲ್ಪಡುವನೋ । **ತಂ**— ಅಂತಹ । **ಆಹುತಂ**— ಆಹ್ವಾನಕ್ಕೆ ಪಾತ್ರನಾದ (ಸರ್ವತ್ರ ಆಹುತಿಯನ್ನರ್ಪಿಸಲ್ಪಡುವ) ಅಗ್ನಿಯನ್ನು । **ನಶೀಮಹಿ**— ಸಮೀಪಿಸೋಣ.

ಭಾವಾರ್ಥ

ಯಜ್ಞಕ್ಕೆ ಸೂತ್ರಪ್ರಾಯನೂ, ಅಲಂಕಾರಪ್ರಾಯನೂ, ಋತ್ವಿಕ್ಕುಗಳಿಂದ ಬರವಾಡಲ್ಪಡುವವನೂ, ಸರ್ವತ್ರ ಆಹುತಿಯನ್ನರ್ಪಿಸಲ್ಪಡುವವನೂ ಆದ ಅಗ್ನಿಯನ್ನು ನಾವು ಸಮೀಪಿಸೋಣ.

## English Translation

May we obtain (the favour of) him to whom burnt offerings are presented, (Agni), who is the thread, the perfecter of sacrifice, drawn out (by the priests) to the gods.

ಸಂಹಿತಾಪಾಠಃ

ಮನೋ ನ್ವಾ ಹುವಾಮಹೇ ನಾರಾಶಂಸೇನ ಸೋಮೇನ ।
ಪಿತೄಣಾಂ ಚ ಮನ್ಮಭಿಃ ॥ ೩ ॥

ಪದಪಾಠಃ

ಮನಃ । ನು । ಆ । ಹುವಾಮಹೇ । ನಾರಾಶಂಸೇನ । ಸೋಮೇನ ॥
ಪಿತೄಣಾಂ । ಚ । ಮನ್ಮಭಿಃ ॥ ೩ ॥

ಸಾಯಣಭಾಷ್ಯಂ

**ಪಿಂಡಪಿತೃಯಜ್ಞೇ ಮನೋ ನ್ವಾ ಹುವಾಮಹ ಇತಿ ತೃಚೇನ ಪಿಂಡಾಭಿಮಾನಿನಃ ಪಿತರ ಉಪಸ್ಥೇಯಾಃ । ಸೂತ್ರಿತಂ ಚ । ಮನೋ ನ್ವಾ ಹುವಾಮಹ ಇತಿ ಚತಸೃಭಿರಥೈನಾನ್ಪ್ರವಾಹಯೇತ್ । ಆ.೨-೭ । ಇತಿ ॥**

**ವಯಂ ಬಂಧುಶ್ರುತಬಂಧ್ವಾದಯೋ ಮನಃ ಸುಬಂಧೋಃ ಸಂಬಂಧಿ ಮಾಯೋಪಿಭಿರಪಹೃತಂ ನು ಕ್ಷಿಪ್ರಮಾ ಹುವಾಮಹೇ । ಕೇನ ಸಾಧನೇನೇತಿ ತದುಚ್ಯತೇ । ನಾರಾಶಂಸೇನ ನರಾಶಂಸಚಮಸಗತೇನ ಸೋಮೇನ । ನರೈಃ ಶಸ್ಯಂತ ಇತಿ ನರಾಶಂಸಾಃ ಪಿತರಃ । ತೇಷಾಂ ಚಮಸಾನಾಂ ಕಂಪನಮೇವ ಹೋಮಃ । ತಥಾವಿಧೇನ ಸೋಮೇನ ಪಿತೄಣಾಮಂಗಿರಸಾಂ ಮನ್ಮಭಿರ್ಮನನೀಯೈಃ ಸ್ತೋತ್ರೈಶ್ಚ ॥**

ಪ್ರತಿಪದಾರ್ಥ

**ನಾರಾಶಂಸೇನ**—ಪಿತೃಗಳಿಗೆ ಉದ್ದಿಷ್ಟವಾದ ಚಮಸಪಾತ್ರೆಯಿಂದ ಅರ್ಪಿತವಾದ । **ಸೋಮೇನ**—ಸೋಮದಿಂದಲೂ । **ಪಿತೄಣಾಂ**—ಅಂಗಿರಸ್ಸುಗಳ । **ಮನ್ಮಭಿಃ**—ಸ್ತುತಿಗಳಿಂದಲೂ । **ಮನಃ**—ಸುಬಂಧುವಿನ ಮನಸ್ಸನ್ನು । **ನು**—ಶೀಘ್ರವಾಗಿ । **ಆ ಹುವಾಮಹೇ**—ಕರೆಯುತ್ತೇವೆ.

ಭಾವಾರ್ಥ

ಪಿತೃಗಳಿಗೆ ಉದ್ದಿಷ್ಟವಾದ ಚಮಸಪಾತ್ರೆಯಿಂದ ಅರ್ಪಿತವಾದ ಸೋಮದಿಂದಲೂ, ಅಂಗಿರಸ್ಸುಗಳ ಸ್ತುತಿಗಳಿಂದಲೂ ಸುಬಂಧುವಿನ ಮನಸ್ಸನ್ನು ಶೀಘ್ರವಾಗಿ ಕರೆಯುತ್ತೇವೆ.

English Translation

We call upon the spirit (of Subandhu) with the Soma appropriated to the progenitors, with the praises of the pitris·

ವಿಶೇಷವಿಷಯಗಳು

ಪಿಂಡಪಿತೃಯಜ್ಞವೆಂಬ ಇಷ್ಟಿಯಲ್ಲಿ ಪಿಂಡಾಭಿಮಾನಿ ಪಿತೃದೇವತೆಗಳನ್ನು ಉಪಸ್ಥಾನ (ಪ್ರಾರ್ಥನೆ) ಮಾಡುವಾಗ **ಮನೋ ನ್ವಾ ಹುವಾಮಹೇ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು (೩-೬) ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಮನೋ ನ್ವಾ ಹುವಾಮಹ ಇತಿ ಚ ತಿಸೃಭಿರಥೈನಾನ್ಪ್ರವಾಹಯೇತ್** ಎಂಬ ಸೂತ್ರದಿಂದ (ಆ. ೨-೭) ವಿವೃತವಾಗಿರುವುದು.

ಸಂಹಿತಾಪಾಠಃ

ಆ ತ ಏತು ಮನಃ ಪುನಃ ಕ್ರತ್ವೇ ದಕ್ಷಾಯ ಜೀವಸೇ ।
ಜ್ಯೋಕ್ಚ ಸೂರ್ಯಂ ದೃಶೇ ॥ ೪ ॥

ಪದಪಾಠಃ

ಆ । ತೇ । ಏತು । ಮನಃ । ಪುನರಿತಿ । ಕ್ರತ್ವೇ । ದಕ್ಷಾಯ । ಜೀವಸೇ ॥
ಜ್ಯೋಕ್ । ಚ । ಸೂರ್ಯಂ । ದೃಶೇ ॥ ೪ ॥

ಸಾಯಣಭಾಷ್ಯಂ

**ಹೇ ಸಂಬಂಧೋ ತೇ ಮನಃ ಪುನರೈತು । ಅಭಿಚರತಃ ಸಕಾಶಾತ್ಪುನರಾಗಚ್ಛತು । ಕಿಮರ್ಥ. ಮಿತಿ ಉಚ್ಯತೇ । ಕ್ರತ್ವೇ ಕರ್ಮಣೇ ಲೌಕಿಕವೈದಿಕವಿಷಯಾಯ ದಕ್ಷಾಯ ಬಲಾಯ ಚ । ಯದ್ವಾ । ಕ್ರತ್ವೇಽಪಾನಾಯ ದಕ್ಷಾಯ ಪ್ರಾಣಾಯ । ಪ್ರಾಣೋ ವೈ ದಕ್ಷೋಽಪಾನಃ ಕ್ರತುರಿತಿ ಹಿ ಶ್ರುತಿಃ । ಜೀವಸೇ ಜೀವನಾಯ ಚ । ಜ್ಯೋಕ್ಚ ಚಿರಕಾಲಂ ಸೂರ್ಯಂ ದೃಶೇ । ಸೂರ್ಯಂ ದ್ರಷ್ಟುಂ । ಅತ್ಯಂತಂ ಚಿರಜೀವನಾಯೇತ್ಯರ್ಥಃ ॥**

ಪ್ರತಿಪದಾರ್ಥ

(ಎಲೈ ಸುಬಂಧುವೇ) **ಕ್ರತ್ವೇ**—ಉತ್ತಮವಾದ ಕರ್ಮವನ್ನು ಆಚರಿಸುವುದಕ್ಕಾಗಿ । **ದಕ್ಷಾಯ**—ಶಕ್ತಿಸ್ಥಾಪನಕ್ಕಾಗಿಯೂ । **ಜೀವಸೇ**—ಜೀವಿಸುವುದಕ್ಕಾಗಿಯೂ । **ಜ್ಯೋಕ್**—ಬಹುಕಾಲ । **ಸೂರ್ಯಂ**—ಸೂರ್ಯ

ನನ್ನು । ದೃಶೇ—ನೋಡುವುದಕ್ಕಾಗಿಯೂ । ತೇ—ನಿನ್ನ । ಮನಃ—ಮನಸ್ಸು । ಪುನಃ—ತಿರುಗಿಯೂ । ಆ ಏತು—ಅಭಿಚಾರಕರ್ಮದಿಂದ ಹಿಂತಿರುಗಿ ಬರಲಿ.

ಭಾವಾರ್ಥ

ಎಲೈ ಸುಬಂಧುವೇ, ಉತ್ತಮವಾದ ಕರ್ಮವನ್ನು ಆಚರಿಸುವುದಕ್ಕಾಗಿಯೂ, ಶಕ್ತಿಸ್ಥಾಪನಕ್ಕಾಗಿಯೂ, ಜೀವಿಸುವುದಕ್ಕಾಗಿಯೂ, ಬಹುಕಾಲ ಸೂರ್ಯನನ್ನು ನೋಡುವುದಕ್ಕಾಗಿಯೂ, ನಿನ್ನ ಮನಸ್ಸು (ಪ್ರಾಣವು) ತಿರುಗಿಯೂ ಮಾಯಾವಿಯಿಂದ ಹಿಂತಿರುಗಿ ಬರಲಿ.

## English Translation

May (your) spirit (of Subandhu) come back again to perform pious acts; to exercise strength; to live; and long to see the sun.

ಸಂಹಿತಾಪಾಠಃ

ಪುನರ್ನಃ ಪಿತರೋ ಮನೋ ದದಾತು ದೈವ್ಯೋ ಜನಃ ।
ಜೀವಂ ವ್ರಾತಂ ಸಚೇಮಹಿ ॥ ೫ ॥

ಪದಪಾಠಃ

ಪುನಃ । ನಃ । ಪಿತರಃ । ಮನಃ । ದದಾತು । ದೈವ್ಯಃ । ಜನಃ ॥
ಜೀವಂ । ವ್ರಾತಂ । ಸಚೇಮಹಿ ॥ ೫ ॥

ಸಾಯಣಭಾಷ್ಯಂ

ನೋಽಸ್ಮಾಕಂ ಪಿತರಃ ಪಿತೃಭೂತಾ ಅಂಗಿರಸೋ ಜನಃ । ತೇಷಾಂ ಸಂಘ ಇತ್ಯರ್ಥಃ । ಸ ಚ ಜೀವಂ ವ್ರಾತಂ ಪ್ರಾಣಾದೀಂದ್ರಿಯಸಂಘಾತಂ ಪುನರ್ದದಾತು । ತಥಾ ದೈವ್ಯೋ ಜನಃ । ಜನಶಬ್ದಃ ಸಂಘವಚನಃ । ದೇವಾನಾಂ ಸಂಘೋಽಪಿ ಜೀವಂ ವ್ರಾತಂ ಚ ದದಾತು । ವಯಂ ಚ ತದುಭಯಂ ಸಚೇಮಹಿ । ಪ್ರಾಪ್ನುಯಾಮ ॥

ಪ್ರತಿಪದಾರ್ಥ

ಪಿತರಃ ಜನಃ—ನಮ್ಮ ಪಿತೃಗಳಾದ ಅಂಗಿರಸ್ಸುಗಳು । ನಃ—ನಮಗೆ । ಜೀವಂ ವ್ರಾತಂ ಮನಃ—ಇಂದ್ರಿಯಾದಿಗಳಿಂದ ಕೂಡಿದ ಪ್ರಾಣಸಂಘಾತವನ್ನು । ಪುನಃ—ತಿರುಗಿಯೂ । ದದಾತು—ಅನುಗ್ರಹಿಸಲಿ । ದೈವ್ಯಃ—ದೇವತೆಗಳ ಸಮೂಹವೂ ಸಹ ನಮಗೆ ಅದನ್ನು ದಯಪಾಲಿಸಲಿ । ಸಚೇಮಹಿ—ನಾವು ಅದನ್ನು ಪೂರ್ಣವಾಗಿ ಹೊಂದಿ ಅನುಭವಿಸೋಣ.

ಭಾವಾರ್ಥ

ನಮ್ಮ ಪಿತೃಗಳಾದ ಅಂಗಿರಸ್ಸುಗಳು ನಮಗೆ ಇಂದ್ರಿಯಾದಿಗಳಿಂದ ಕೂಡಿದ ಪ್ರಾಣಸಂಘಾತವನ್ನು ತಿರುಗಿಯೂ ಅನುಗ್ರಹಿಸಲಿ, ದೇವತೆಗಳ ಸಮೂಹವೂ ಸಹ ನಮಗೆ ಅದನ್ನು ದಯಪಾಲಿಸಲಿ. ನಾವು ಅದನ್ನು ಪೂರ್ಣವಾಗಿ ಅನುಭವಿಸುವಂತಾಗಲಿ.

English Translation

May our progenitors, may the host of the gods, restore (your) spirit; may we obtain (for you) the aggregate of the functions of life.

ಸಂಹಿತಾಪಾಠಃ

ವಯಂ ಸೋಮ ವ್ರತೇ ತವ ಮನಸ್ತನೂಷು ಬಿಭ್ರತಃ ।
ಪ್ರಜಾವಂತಃ ಸಚೇಮಹಿ ॥ ೬ ॥

ಪದಪಾಠಃ

ವಯಂ । ಸೋಮ । ವ್ರತೇ । ತವ । ಮನಃ । ತನೂಷು । ಬಿಭ್ರತಃ ॥
ಪ್ರಜಾಽವಂತಃ । ಸಚೇಮಹಿ ॥ ೬ ॥

ಸಾಯಣಭಾಷ್ಯಂ

ಹೇ ಸೋಮ ದೇವ ವಯಂ ಬಂಧ್ವಾದಯಸ್ತವ ವ್ರತೇ ತ್ವದೀಯೇ ಕರ್ಮಣಿ । ವ್ರತಮಿತಿ ಕರ್ಮನಾಮ । ತವ ತನೂಷು ತದೀಯೇಷ್ವಂಗೇಷು ಚ ಮನೋ ವಿಭ್ರತಸ್ತಾತ್ಪರ್ಯಯುಕ್ತಾಂ ಬುದ್ಧಿಂ ಧಾರಯಂತಃ ಪ್ರಜಾವಂತಃ ಪ್ರಜಾಭಿಃ ಪುತ್ರಪೌತ್ರಾದಿಭಿರ್ಯುಕ್ತಾಃ ಸಚೇಮಹಿ । ಸಂಗಚ್ಛೇಮಹಿ । ಜೀವಂ ವ್ರಾತಂ ಚೇತಿ ಶೇಷಃ ॥

ಪ್ರತಿಪದಾರ್ಥ

**ಸೋಮ**--ಎಲೈ ಸೋಮದೇವನೇ । **ವಯಂ**—ನಾವು । **ತವ ವ್ರತೇ**—ನಿನ್ನನ್ನು ಪೂಜಿಸುವ ಕರ್ಮದಲ್ಲಿಯೂ । **ತನೂಷು**—ನಿನ್ನ ವಿಷಯದಲ್ಲಿಯೂ । **ಮನಃ**—ಮನಸ್ಸನ್ನು । **ಬಿಭ್ರತಃ**—ಇಟ್ಟವರಾಗಿ । **ಪ್ರಜಾವಂತಃ**—ಪುತ್ರಾದಿಗಳಿಂದ ಕೂಡಿ । **ಸಚೇಮಹಿ**—ಸೌಖ್ಯವನ್ನು ಹೊಂದುವಂತಾಗಲಿ.

ಭಾವಾರ್ಥ

ಎಲೈ ಸೋಮದೇವನೇ, ನಾವು ನಿನ್ನನ್ನು ಪೂಜಿಸುವ ಕರ್ಮದಲ್ಲಿಯೂ ನಿನ್ನ ವಿಷಯದಲ್ಲಿಯೂ ನಿನ್ನನ್ನೇ ಧ್ಯಾನಿಸುತ್ತ ಪುತ್ರಾದಿಗಳನ್ನು ಪಡೆಯುವ ಸೌಖ್ಯವನ್ನು ಹೊಂದುವಂತಾಗಲಿ.

English Translation

Soma, fixing our minds on your worship and its details, may we, blessed with progeny, obtain (the aggregate of the functions of life).

# ಐವತ್ತೆಂಟನೆಯ ಸೂಕ್ತ

ಸಾಯಣಭಾಷ್ಯಂ

**ಯತ್ತೇ ಯಮಮಿತಿ ದ್ವಾದಶರ್ಚಂ ಷೋಡಶಂ ಸೂಕ್ತಮಾನುಷ್ಟುಭಂ । ಬಂಧ್ವಾದಯ ಋಷಯಃ ಸುಬಂಧುದೇಹಾನ್ನಿರ್ಗತಸ್ಯೇಂದ್ರಿಯವರ್ಗಸಹಿತಸ್ಯ ಮನಸಃ ಪುನಸ್ತಸ್ಮಿನ್ಪ್ರವೇಶನಾರ್ಥಮಿದಂ ಸೂಕ್ತಂ ದೃಷ್ಟ್ವಾಜಪನ್ । ಅತಸ್ತೇಽಸ್ಯರ್ಷಯಃ । ಪ್ರತಿಪಾದ್ಯತ್ವಾದಾವರ್ತಮಾನಂ ಮನ ಏವ ದೇವತಾ । ತಥಾ ಚಾನುಕ್ರಾಂತಂ । ಯತ್ತ ಇತಿ ದ್ವಾದಶರ್ಚಮಾನುಷ್ಟುಭಂ ಮನಆವರ್ತನಂ ಜೇಪುರಿತಿ । ಗತೋ ವಿನಿಯೋಗಃ ॥**

ಅನುವಾದವು—**ಯತ್ತೇ ಯಮಂ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿನಾರನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೋಪಾಯನಪುತ್ರರಾದ ಬಂಧ್ವಾದಿಗಳು ಋಷಿಗಳು; ಅನುಷ್ಟುಪ್‌ಛಂದಸ್ಸು. ಸುಬಂಧುವಿನ ಮೃತದೇಹದಿಂದ ಹೊರಟುಹೋದ ಇಂದ್ರಿಯಸಹಿತವಾದ ಮನಸ್ಸನ್ನು (ಆತ್ಮವನ್ನು) ಪುನಃ ಆ ಮೃತಶರೀರದಲ್ಲಿ ಬಂದು ನೆಲೆಸಬೇಕೆಂದು ಈ ಸೂಕ್ತದಲ್ಲಿ ಬಂಧ್ವಾದಿಗಳು ಪ್ರಾರ್ಥಿಸಿದಾರೆ. ಆದ್ದರಿಂದ ಈ ಸೂಕ್ತಕ್ಕೆ ಬಂಧ್ವಾದಿಗಳೇ ಋಷಿಗಳು. ಸೂಕ್ತದಲ್ಲಿ ಪ್ರತಿಪಾದಿತವಾಗಿರುವ ಮನಸ್ಸೇ (ಪ್ರಾಣವೇ) ದೇವತೆಯು. ಅನುಕ್ರಮಣಿಕೆಯಲ್ಲಿ—**ಯತ್ತ ಇತಿ ದ್ವಾದಶರ್ಚಮಾನುಷ್ಟುಭಂ ಮನ ಆವರ್ತನಂ ಜೇಪುಃ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೮

ಮಂಡಲ—೧೦ ॥ ಅನುವಾಕ—೪ ॥ ಸೂಕ್ತ—೫೮ ॥
ಅಷ್ಟಕ—೮ ॥ ಅಧ್ಯಾಯ—೧ ॥ ವರ್ಗ—೨೦, ೨೧ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥
ಋಷಿಃ—ಬಂಧುಃ ಶ್ರುತಬಂಧುರ್ವಿಪ್ರಬಂಧುರ್ಗೌಪಾಯನಾಃ ॥
ದೇವತಾ—ಮನಆವರ್ತನಂಃ ॥
ಛಂದಃ—ಅನುಷ್ಟುಪ್ ॥

ಸಂಹಿತಾಪಾಠಃ

**ಯತ್ತೇ ಯಮಂ ವೈವಸ್ವತಂ ಮನೋ ಜಗಾಮ ದೂರಕಂ ।**
**ತತ್ತ ಆ ವರ್ತಯಾಮಸೀಹ ಕ್ಷಯಾಯ ಜೀವಸೇ ॥ ೧ ॥**

ಪದಪಾಠಃ

**ಯತ್ । ತೇ । ಯಮಂ । ವೈವಸ್ವತಂ । ಮನಃ । ಜಗಾಮ । ದೂರಕಂ ।**

**ತತ್ । ತೇ । ಆ । ವರ್ತಯಾಮಸಿ । ಇಹ । ಕ್ಷಯಾಯ । ಜೀವಸೇ ॥ ೧ ॥**

ಸಾಯಣಭಾಷ್ಯಂ

**ಪುರುಷಸ್ಯ ಮ್ರಿಯಮಾಣಸ್ಯ ಮನೋ ನಾಮ ಮಹದ್ಭೂತಂ ಬಹುಧಾ ವಿಶೀರ್ಣಂ ಭವತಿ। ತಸ್ಯ ಪುನಃಸಂಭರಣಮತ್ರೋಚ್ಯತೇ । ಹೇ ಮ್ರಿಯಮಾಣ ಪುರುಷ ಯತ್ತೇ ತವ ಮನೋ ವೈವಸ್ವತಂ ವಿವಸ್ವತಃ ಪುತ್ರಂ ಯಮಂ ದೂರಕಮತ್ಯಂತಂ ದೂರಂ ಯಥಾ ಭವತಿ ತಥಾ ಜಗಾಮ ತೇ ತವ ತನ್ಮನ ಆ ವರ್ತಯಾಮಸಿ । ಆವರ್ತಯಾಮಃ । ಕಿಮರ್ಥಂ । ಇಹ ಕ್ಷಯಾಯೇಹ ಲೋಕೇ ನಿವಾಸಾಯ ಜೀವಸೇ । ಚಿರಕಾಲಜೀವನಾಯೇತ್ಯರ್ಥಃ ॥**

ಪ್ರತಿಪದಾರ್ಥ

(ಮರಣೋನ್ಮುಖನಾದ ಎಲೈ ಸುಬಂಧುವೇ) **ಯತ್**—ಒಂದುವೇಳೆ । **ತೇ ಮನಃ**—ನಿನ್ನ ಚೇತನವು । **ವೈವಸ್ವತಂ**—ವಿವಸ್ವಂತನ ಪುತ್ರನಾದ । **ಯಮಂ**—ಯಮನಲ್ಲಿಗೆ । **ದೂರಕಂ**—ನಮ್ಮಿಂದ ಬಹಳ ದೂರವಾಗಿರುವಂತೆ । **ಜಗಾಮ**—ಹೋಗಿದ್ದರೂ ಸಹ । **ತೇ**—ನಿನ್ನ । **ತತ್**—ಅದೇ ಮನಸ್ಸನ್ನು । **ಇಹ**—ಈ ಲೋಕದಲ್ಲಿ । **ಕ್ಷಯಾಯ**—ವಾಸಿಸುವುದಕ್ಕೂ । **ಜೀವಸೇ**—ಬಹುಕಾಲ ಜೀವಿಸುವುದಕ್ಕೂ। **ಆ ವರ್ತಯಾಮಸಿ**—ಹಿಂತಿರುಗಿ ಬರುವಂತೆ ಮಾಡುತ್ತೇವೆ.

ಭಾವಾರ್ಥ

ಮರಣೋನ್ಮುಖನಾದ ಎಲೈ ಸುಬಂಧುವೇ, ಒಂದುವೇಳೆ ನಿನ್ನ ಮನಸ್ಸು (ಪ್ರಾಣವು) ನಮ್ಮಿಂದ ಬಹುದೂರವಾಗಿರುವಂತೆ ವಿವಸ್ವಂತನ ಪುತ್ರನಾದ ಯಮನಲ್ಲಿಗೆ ಹೋಗಿದ್ದರೂ ಸಹ ನಿನ್ನ ಅದೇ ಮನಸ್ಸನ್ನು ಈ ಲೋಕದಲ್ಲಿ ವಾಸಿಸುವುದಕ್ಕೂ ಮತ್ತು ಬಹುಕಾಲ ಜೀವಿಸುವುದಕ್ಕೂ ಹಿಂತಿರುಗಿ ಬರುವಂತೆ ಮಾಡುತ್ತೇವೆ.

English Translation

Although your spirit have gone far away to Yama, son of Vivaswat, we bring back that (spirit) of yours to dwell here, to live (long).

ವಿಶೇಷವಿಷಯಗಳು

ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕುಗಳಲ್ಲಿಯೂ ಇರುವ ಮನಃ ಎಂಬ ಶಬ್ದಕ್ಕೆ ಚೈತನ್ಯ, ಪ್ರಾಣ ಅಥವಾ ಆತ್ಮವೆಂಬರ್ಥವಿರುವುದು. ಮೃತನಾದ ಸುಬಂಧುವಿನ ಶರೀರದಲ್ಲಿದ್ದ ಪ್ರಾಣವು ಅಥವಾ ಆತ್ಮವು ಬಹುದೂರಪ್ರದೇಶದಲ್ಲಿರುವ ಯಮಲೋಕದಲ್ಲಿ ಯಮನ ಬಳಿಗೆ ಹೊರಟುಹೋಗಿರುವುದನ್ನು ನಾವು ಪುನಃ ಹಿಂತಿರುಗಿಸಲು ಪ್ರಯತ್ನಿಸುತ್ತೇವೆ ಎಂದು ಬಂಧ್ವಾದಿಗಳ ವಾಕ್ಯವು ಈ ಸೂಕ್ತದ ಋಕ್ಕುಗಳಲ್ಲಿ ವಿವೃತವಾಗಿದೆ. ಹೆಚ್ಚು ವಿವರಣೆಗಾಗಿ ೫೭ ನೇ ಸೂಕ್ತದ ಪೀಠಿಕೆಯನ್ನೂ ಭಾಷ್ಯಕಾರರ ವಿವರಣೆಯನ್ನೂ ನೋಡಿ.

ಸಂಹಿತಾಪಾಠಃ

ಯತ್ತೇ ದಿವಂ ಯತ್ಪೃಥಿವೀಂ ಮನೋ ಜಗಾಮ ದೂರಕಂ ।
ತತ್ತ ಆ ವರ್ತಯಾಮಸೀಹ ಕ್ಷಯಾಯ ಜೀವಸೇ ॥ ೨ ॥

ಪದಪಾಠಃ

ಯತ್ । ತೇ । ದಿವಂ । ಯತ್ । ಪೃಥಿವೀಂ । ಮನಃ । ಜಗಾಮ । ದೂರಕಂ ।
ತತ್ । ತೇ । ಆ । ವರ್ತಯಾಮಸಿ । ಇಹ । ಕ್ಷಯಾಯ । ಜೀವಸೇ ॥ ೨ ॥

ಸಾಯಣಭಾಷ್ಯಂ

ಹೇ ಸುಬಂಧೋ ಯನ್ಮನೋ ದಿವಂ ಜಗಾಮ ಯಚ್ಚ ಪೃಥಿವೀಂ ದೂರಕಂ । ದೂರಕಮಿತಿ ಕ್ರಿಯಾವಿಶೇಷಣಂ । ತದಿಹ ನಿವಾಸಾಯ ಜೀವನಾಯ ಚಾವತರ್ಯಾಮಃ ॥

ಪ್ರತಿಪದಾರ್ಥ

(ಎಲೈ ಸುಬಂಧುವೇ) **ಯತ್**—ಒಂದುವೇಳೆ । **ತೇ ಮನಃ**—ನಿನ್ನ ಚೇತನವು । **ದೂರಕಂ**—ನಮ್ಮಿಂದ ದೂರವಾಗಿರುವಂತೆ । **ದಿವಂ**—ದ್ಯುಲೋಕಕ್ಕೆ । **ಜಗಾಮ**—ಹೋಗಿದ್ದರೂ । **ಯತ್**—ಒಂದುವೇಳೆ । **ಪೃಥಿವೀಂ**—ಪೃಥ್ವಿಗೆ (ಹೋಗಿದ್ದರೂ) । **ತತ್ ತೇ**—ನಿನ್ನ ಅದೇ ಚೇತನವನ್ನು । **ಇಹ**—ಈ ಲೋಕದಲ್ಲಿ । **ಕ್ಷಯಾಯ**—ವಾಸಿಸುವುದಕ್ಕೂ । **ಜೀವಸೇ**—ಬಹುಕಾಲ ಜೀವಿಸುವುದಕ್ಕೂ । **ಆ ವರ್ತಯಾಮಸಿ**—ಹಿಂತಿರುಗಿ ಬರುವಂತೆ ಮಾಡುತ್ತೇವೆ.

ಭಾವಾರ್ಥ

ಎಲೈ ಸುಬಂಧುವೇ, ನಿನ್ನ ಚೇತನವು ನಮ್ಮಿಂದ ದೂರವಾಗಿರುವಂತೆ ಒಂದುವೇಳೆ ದ್ಯುಲೋಕಕ್ಕೆ ಹೋಗಿರಲಿ ಅಥವಾ ಪೃಥ್ವಿಗೆ ಹೋಗಿರಲಿ, ನಿನ್ನ ಅದೇ ಚೇತನವನ್ನು ಈ ಲೋಕದಲ್ಲಿ ವಾಸಿಸುವುದಕ್ಕೂ ಬಹುಕಾಲ ಜೀವಿಸುವುದಕ್ಕೂ ಇಲ್ಲಿಗೆ ಹಿಂತಿರುಗಿ ಬರುವಂತೆ ಮಾಡುತ್ತೇವೆ.

English Translatin

Although your spirit have gone far away to heaven, or to earth, we bring back that (spirit) of yours to dwell here, to live (long).

ಸಂಹಿತಾಪಾಠಃ

ಯತ್ತೇ ಭೂಮಿಂ ಚತುರ್ಭೃಷ್ಟಿಂ ಮನೋ ಜಗಾಮ ದೂರಕಂ ।

ತತ್ತ ಆ ವರ್ತಯಾಮಸೀಹ ಕ್ಷಯಾಯ ಜೀವಸೇ ॥ ೩ ॥

ಪದಪಾಠಃ

**ಯತ್ । ತೇ । ಭೂಮಿಂ । ಚತುಃಽಭೃಷ್ಟಿಂ । ಮನಃ । ಜಗಾಮ । ದೂರಕಂ ।**

**ತತ್ । ತೇ । ಆ । ವರ್ತಯಾಮಸಿ । ಇಹ । ಕ್ಷಯಾಯ । ಜೀವಸೇ ॥ ೩ ॥**

ಸಾಯಣಭಾಷ್ಯಂ

**ಹೇ ಸುಬಂಧೋ ಯನ್ಮನೋ ಭೂಮಿಂ ಚತುರ್ಭೃಷ್ಟಿಂ । ಚತುರ್ದಿಕ್ಷು ಭ್ರಂಶೋ ಯಸ್ಯಾಃ ಸಾ । ತಾಂ ಜಗಾಮ ತದಾವರ್ತಯಾಮಃ ॥**

ಪ್ರತಿಪದಾರ್ಥ

(ಎಲೈ ಸುಬಂಧುವೇ) **ಯತ್**—ಒಂದುವೇಳೆ । **ತೇ ಮನಃ**—ನಿನ್ನ ಚೇತನವು । **ದೂರಕಂ**-ನಮ್ಮಿಂದ ದೂರವಾಗಿರುವಂತೆ । **ಚತುರ್ಭೃಷ್ಟಿಂ**—ನಾಲ್ಕು ದಿಕ್ಕುಗಳಿಂದ ವ್ಯಾಪ್ತವಾದ । **ಭೂಮಿಂ**—ಭೂಮಿಗೆ । **ಜಗಾಮ**—ಹೋಗಿದ್ದರೂ । **ತತ್ ತೇ**—ಅದೇ ನಿನ್ನ ಚೇತನವನ್ನು । **ಇಹ**—ಇಲ್ಲಿ । **ಕ್ಷಯಾಯ**—ವಾಸಿಸುವುದಕ್ಕೂ । **ಜೀವಸೇ**—ದೀರ್ಘಕಾಲ ಜೀವಿಸುವುದಕ್ಕೂ । **ಆ ವರ್ತಯಾಮಸಿ**—ಹಿಂತಿರುಗಿ ಬರುವಂತೆ ಮಾಡುತ್ತೇವೆ.

ಭಾವಾರ್ಥ

ಎಲೈ ಸುಬಂಧುವೇ, ಒಂದುವೇಳೆ ನಿನ್ನ ಚೇತನವು ನಮ್ಮಿಂದ ದೂರವಾಗಿರುವಂತೆ ನಾಲ್ಕು ದಿಕ್ಕುಗಳಿಂದ ವ್ಯಾಪ್ತವಾದ ಭೂಮಿಗೆ ಹೋಗಿದ್ದರೂ, ಅದೇ ನಿನ್ನ ಚೇತನವನ್ನು ಇಲ್ಲಿ ವಾಸಿಸುವುದಕ್ಕೂ ದೀರ್ಘಕಾಲ ಜೀವಿಸುವುದಕ್ಕೂ ಹಿಂತಿರುಗಿ ಬರುವಂತೆ ಮಾಡುತ್ತೇವೆ.

English Translation

Although your spirit have gone far away to the four-quartered earth, we bring back that (spirit) of yours to dwell here, to live (long).

ಸಂಹಿತಾಪಾಠಃ

ಯತ್ತೇ ಚತಸ್ರಃ ಪ್ರದಿಶೋ ಮನೋ ಜಗಾಮ ದೂರಕಂ ।

ತತ್ತ ಆ ವರ್ತಯಾಮಸೀಹ ಕ್ಷಯಾಯ ಜೀವಸೇ ॥ ೪ ॥

ಪದಪಾಠಃ

**ಯತ್ । ತೇ । ಚತಸ್ರಃ । ಪ್ರಽದಿಶಃ । ಮನಃ । ಜಗಾಮ । ದೂರಕಂ ।**

**ತತ್ । ತೇ । ಆ । ವರ್ತಯಾಮಸಿ । ಇಹ । ಕ್ಷಯಾಯ । ಜೀವಸೇ ॥ ೪ ॥**

ಸಾಯಣಭಾಷ್ಯಂ

**ಹೇ ಸುಬಂಧೋ ಯತ್ತೇ ಮನಃ ಪ್ರದಿಶಃ ಪ್ರಕೃಷ್ಟಾ ಮಹಾದಿಶಶ್ಚತಸ್ರೋ ಜಗಾಮ ತದಾವರ್ತಯಾಮಃ ॥**

ಪ್ರತಿಪದಾರ್ಥ

(ಎಲೈ ಸುಬಂಧುವೇ) **ಯತ್**—ಒಂದುವೇಳೆ । **ತೇ ಮನಃ**—ನಿನ್ನ ಚೇತನವು । **ದೂರಕಂ**—ನಮ್ಮಿಂದ ದೂರವಾಗಿರುವಂತೆ । **ಚತಸ್ರಃ ಪ್ರದಿಶಃ**—ನಾಲ್ಕು ದಿಗಂತಗಳಿಗೂ । **ಜಗಾಮ**—ಹೋಗಿದ್ದರೂ । **ತತ್ ತೇ**—ಅದೇ ನಿನ್ನ ಚೇತನವನ್ನು । **ಇಹ**—ಇಲ್ಲಿ । **ಕ್ಷಯಾಯ**—ವಾಸಿಸುವುದಕ್ಕೂ । **ಜೀವಸೇ**—ದೀರ್ಘಕಾಲ ಜೀವಿಸುವುದಕ್ಕೂ । **ಆ ವರ್ತಯಾಮಸಿ**—ಹಿಂತಿರುಗಿ ಬರುವಂತೆ ಮಾಡುತ್ತೇವೆ.

ಭಾವಾರ್ಥ

ಎಲೈ ಸುಬಂಧುವೇ, ಒಂದುವೇಳೆ ನಿನ್ನ ಚೇತನವು ನಮ್ಮಿಂದ ದೂರವಾಗಿರುವಂತೆ ನಾಲ್ಕು ದಿಗಂತಗಳಿಗೂ ಹೋಗಿದ್ದರೂ, ಆದೇ ನಿನ್ನ ಚೇತನವನ್ನು ಇಲ್ಲಿ ವಾಸಿಸುವುದಕ್ಕೂ, ದೀರ್ಘಕಾಲ ಬದುಕುವುದಕ್ಕೂ ಹಿಂತಿರುಗಿ ಬರುವಂತೆ ಮಾಡುತ್ತೇವೆ.

## English Translation

Although your spirit have gone far away to the four regions (of space), we bring back that (spirit) of yours to dwell here, to live (long).

ಸಂಹಿತಾಪಾಠಃ

**ಯತ್ತೇ ಸಮುದ್ರಮರ್ಣವಂ ಮನೋ ಜಗಾಮ ದೂರಕಂ ।**
**ತತ್ತ ಆ ವರ್ತಯಾಮಸೀಹ ಕ್ಷಯಾಯ ಜೀವಸೇ ॥ ೫ ॥**

ಪದಪಾಠಃ

**ಯತ್ । ತೇ । ಸಮುದ್ರಂ । ಅರ್ಣವಂ । ಮನಃ । ಜಗಾಮ । ದೂರಕಂ ।**
**ತತ್ । ತೇ । ಆ । ವರ್ತಯಾಮಸಿ । ಇಹ । ಕ್ಷಯಾಯ । ಜೀವಸೇ ॥ ೫ ॥**

ಸಾಯಣಭಾಷ್ಯಂ

**ಹೇ ಸುಬಂಧೋ ಯತ್ತೇ ಮನೋಽರ್ಣವಂ । ಅರ್ಣಾಂಸ್ಯುದಕಾನಿ । ತದ್ವಂತಂ ಸಮುದ್ರಂ ಮೇಘಂ ವಾ ಜಗಾಮ ತದಾವರ್ತಯಾಮಃ ॥**

ಪ್ರತಿಪದಾರ್ಥ

(ಎಲೈ ಸುಬಂಧುವೇ) **ಯತ್**—ಒಂದುವೇಳೆ | **ತೇ ಮನಃ**—ನಿನ್ನ ಚೇಶನವು | **ದೂರಕಂ**—ನಮ್ಮಿಂದ ದೂರವಾಗುವಂತೆ | **ಅರ್ಣವಂ**—ನೀರಿನಿಂದ ತುಂಬಿದ | **ಸಮುದ್ರಂ**—ಸಮುದ್ರಕ್ಕೆ (ಅಥವಾ ಜಲಭರಿತವಾದ ಮೇಘದ ಪ್ರದೇಶಕ್ಕೆ) | **ಜಗಾಮ**—ಹೋಗಿದ್ದರೂ | **ತತ್ ತೇ**—ಅದೇ ನಿನ್ನ ಚೇತನವನ್ನು | **ಇಹ**—ಇಲ್ಲಿ | **ಕ್ಷಯಾಯ**—ವಾಸಿಸುವುದಕ್ಕೂ | **ಜೀವಸೇ**—ಬದುಕುವುದಕ್ಕೂ | **ಆ ವರ್ತಯಾಮಸಿ**—ಹಿಂತಿರುಗಿ ಬರುವಂತೆ ಮಾಡುತ್ತೇವೆ.

ಭಾವಾರ್ಥ

ಎಲೈ ಸುಬಂಧುವೇ, ಒಂದುವೇಳೆ ನಿನ್ನ ಚೇತನವು ನಮ್ಮಿಂದ ದೂರವಾಗಿರುವಂತೆ ಜಲಭರಿತವಾದ ಸಮುದ್ರದ ಅಥವಾ ಮೇಘದ ಪ್ರದೇಶಕ್ಕೆ ಹೋಗಿದ್ದರೂ ಅದೇ ನಿನ್ನ ಚೇತನವನ್ನು ಇಲ್ಲಿ ವಾಸಿಸುವುದಕ್ಕೂ ಮತ್ತು ಬಹುಕಾಲ ಬದುಕುವುದಕ್ಕೂ ಹಿಂತಿರುಗಿ ಬರುವಂತೆ ಮಾಡುತ್ತೇವೆ.

English Translation

Although your spirit have gone far away to the watery ocean, we bring back that (spirit) of yours to dwell here, to live (long).

ಸಂಹಿತಾಪಾಠಃ

**ಯತ್ತೇ ಮರೀಚೀಃ ಪ್ರವತೋ ಮನೋ ಜಗಾಮ ದೂರಕಂ ।**

**ತತ್ತ ಆ ವರ್ತಯಾಮಸೀಹ ಕ್ಷಯಾಯ ಜೀವಸೇ ॥ ೬ ॥**

ಪದಪಾಠಃ

**ಯತ್ । ತೇ । ಮರೀಚೀಃ । ಪ್ರವತಃ । ಮನಃ । ಜಗಾಮ । ದೂರಕಂ ।**

**ತತ್ । ತೇ । ಆ । ವರ್ತಯಾಮಸಿ । ಇಹ । ಕ್ಷಯಾಯ । ಜೀವಸೇ ॥ ೬ ॥**

ಸಾಯಣಭಾಷ್ಯಂ

**ಹೇ ಸುಬಂಧೋ ಯತ್ತೇ ಮನಃ ಪ್ರವತಃ ಪ್ರಗಚ್ಛಂತೀರ್ಮರೀಚೀರ್ದೀಪ್ತೀರ್ಜಗಾಮ ತದಿತಿ ಗತಂ ॥**

ಪ್ರತಿಪದಾರ್ಥ

(ಎಲೈ ಸುಬಂಧುವೇ) **ಯತ್**—ಒಂದುವೇಳೆ | **ತೇ ಮನಃ**—ನಿನ್ನ ಚೇತನವು | **ದೂರಕಂ**—ನಮ್ಮಿಂದ ದೂರವಾಗುವಂತೆ | **ಪ್ರವತಃ**—ಸರ್ವದಾ ಚಲಿಸುತ್ತಿರುವ | **ಮರೀಚೀಃ**—ಪ್ರಭೆಗಳ (ಸೂರ್ಯ) ಲೋಕಕ್ಕೆ | **ಜಗಾಮ**—ಹೋಗಿದ್ದರೂ | **ತತ್ ತೇ**—ಅದೇ ನಿನ್ನ ಚೇತನವನ್ನು | **ಇಹ**—ಇಲ್ಲಿ | **ಕ್ಷಯಾಯ**—ವಾಸಿಸುವುದಕ್ಕೂ | **ಜೀವಸೇ**—ದೀರ್ಘಕಾಲ ಬದುಕುವುದಕ್ಕೂ | **ಆ ವರ್ತಯಾಮಸಿ**—ಹಿಂತಿರುಗಿ ಬರುವಂತೆ ಮಾಡುತ್ತೇವೆ.

ಭಾವಾರ್ಥ

ಎಲೈ ಸುಬಂಧುವೇ, ಒಂದುವೇಳೆ ನಿನ್ನ ಚೇತನವು ನಮ್ಮಿಂದ ದೂರವಾಗಿರತಕ್ಕ ಮತ್ತು ಸರ್ವನಾ ಚಲಿಸುತ್ತಿರುವ ಪ್ರಭೆಗಳ ಲೋಕಕ್ಕೆ ಹೋಗಿದ್ದರೂ, ಅದೇ ನಿನ್ನ ಚೇತನವನ್ನು ಇಲ್ಲಿ ವಾಸಿಸುವುದಕ್ಕೂ ಮತ್ತು ದೀರ್ಘಕಾಲ ಬದುಕುವುದಕ್ಕೂ ಹಿಂತಿರುಗಿ ಬರುವಂತೆ ಮಾಡುತ್ತೇವೆ.

English Translation

Although your spirit have gone far away to the advancing rays of light, we bring back that (spirit) of yours to dwelling here, to live (long).

ಸಂಹಿತಾಪಾಠ

ಯತ್ತೇ ಅಪೋ ಯದೋಷಧೀರ್ಮನೋ ಜಗಾಮ ದೂರಕಂ ।
ತತ್ತ ಆ ವರ್ತಯಾಮಸೀಹ ಕ್ಷಯಾಹ ಜೀವಸೇ ॥ ೭ ॥

ಪದಪಾಠಃ

ಯತ್ । ತೇ । ಅಪಃ । ಯತ್ । ಓಷಧೀಃ । ಮನಃ । ಜಗಾಮ । ದೂರಕಂ ।
ತತ್ । ತೇ । ಆ । ವರ್ತಯಾಮಸಿ । ಇಹ । ಕ್ಷಯಾಯ । ಜೀವಸೇ ॥ ೭ ॥

ಸಾಯಣಭಾಷ್ಯಂ

ಹೇ ಸುಬಂಧೋ ಯತ್ತೇ ಮನೋಽಪ ಉದಕಂ ಯದೋಷಧೀರ್ವನಸ್ಪತೀನಿತಿ ತದಿತಿ ಗತಂ ॥

ಪ್ರತಿಪದಾರ್ಥ

(ಎಲೈ ಸುಬಂಧುವೇ) **ಯತ್**—ಒಂದುವೇಳೆ । **ತೇ ಮನಃ**—ನಿನ್ನ ಚೇತನವು । **ದೂರಕಂ**—ಅತ್ಯಂತ ದೂರವಾಗಿರುವ । **ಅಪಃ**—ಜಲವನ್ನೂ । **ಓಷಧೀಃ**—ಲತಾದಿಗಳನ್ನೂ । **ಜಗಾಮ**—ಹೋಗಿ ಸೇರಿದ್ದರೂ । **ತತ್ ತೇ**—ಅದೇ ನಿನ್ನ ಚೇತನವನ್ನು । **ಇಹ**—ಇಲ್ಲಿ । **ಕ್ಷಯಾಯ**—ವಾಸಿಸುವುದಕ್ಕೂ । **ಜೀವಸೇ**—ಬಹುಕಾಲ ಬದುಕುವುದಕ್ಕೂ । **ಆ ವರ್ತಯಾಮಸಿ**—ಹಿಂತಿರುಗಿ ಬರುವಂತೆ ಮಾಡುತ್ತೇವೆ.

ಭಾವಾರ್ಥ

ಎಲೈ ಸುಬಂಧುವೇ, ಒಂದುವೇಳೆ ನಿನ್ನ ಚೇತನವು ಅತ್ಯಂತ ದೂರವಾಗಿರುವ ಜಲವನ್ನೂ, ಅಥವಾ ಲತಾದಿಗಳನ್ನೂ ಹೋಗಿಸೇರಿದ್ದರೂ, ಅದೇ ನಿನ್ನ ಚೇತನವನ್ನು ಇಲ್ಲಿ ವಾಸಿಸುವುದಕ್ಕೂ, ಬಹುಕಾಲ ಬದುಕುವುದಕ್ಕೂ ಹಿಂತಿರುಗಿ ಬರುವಂತೆ ಮಾಡುತ್ತೇವೆ.

## English Translation

Although your spirit have gone far away to the waters, to the plants, we bring back that (spirit) of yours to dwell here, to live (long).

ಸಂಹಿತಾಪಾಠಃ

ಯತ್ತೇ ಸೂರ್ಯಂ ಯದುಷಸಂ ಮನೋ ಜಗಾಮ ದೂರಕಂ ।
ತತ್ತ ಆ ವರ್ತಯಾಮಸೀಹ ಕ್ಷಯಾಯ ಜೀವಸೇ ॥ ೮ ॥

ಪದಪಾಠಃ

ಯತ್ । ತೇ । ಸೂರ್ಯಂ । ಯತ್ । ಉಷಸಂ । ಮನಃ । ಜಗಾಮ । ದೂರಕಂ ।
ತತ್ । ತೇ । ಆ । ವರ್ತಯಾಮಸಿ । ಇಹ । ಕ್ಷಯಾಯ । ಜೀವಸೇ ॥ ೮ ॥

ಸಾಯಣಭಾಷ್ಯಂ

ಹೇ ಸುಬಂಧೋ ಯತ್ತೇ ಮನಃ ಸೂರ್ಯಂ ಸೂರ್ಯಮಿವ ಯದುಷಸಂ ತದಿತಿ ಗತಂ ॥

ಪ್ರತಿಪದಾರ್ಥ

(ಎಲೈ ಸುಬಂಧುವೇ) **ಯತ್**—ಒಂದುವೇಳೆ । **ತೇ ಮನಃ**—ನಿನ್ನ ಚೇತನವು । **ದೂರಕಂ**—ನಮಗಿಂತ ಬಹುದೂರವಿರುವ । **ಸೂರ್ಯಂ**—ಸೂರ್ಯಲೋಕಕ್ಕೂ । **ಉಷಸಂ**—ಉಷಸ್ಸಿನ ಲೋಕಕ್ಕೂ । **ಜಗಾಮ**—ಹೋಗಿದ್ದರೂ ಸಹ । **ತತ್ ತೇ**—ಅದೇ ನಿನ್ನ ಚೇತನವನ್ನು । **ಇಹ**—ಇಲ್ಲಿಗೆ । **ಕ್ಷಯಾಯ**—ವಾಸಿಸುವುದಕ್ಕೂ । **ಜೀವಸೇ**—ಬಹುಕಾಲ ಜೀವಿಸುವುದಕ್ಕೂ । **ಆ ವರ್ತಯಾಮಸಿ**—ಹಿಂತಿರುಗಿ ಬರುವಂತೆ ಮಾಡುತ್ತೇವೆ.

ಭಾವಾರ್ಥ

ಎಲೈ ಸುಬಂಧುವೇ, ಒಂದುವೇಳೆ ನಿನ್ನ ಚೇತನವು ನಮಗಿಂತ ಬಹುದೂರವಿರುವ ಸೂರ್ಯಲೋಕಕ್ಕೂ, ಉಷಸ್ಸಿನ ಲೋಕಕ್ಕೂ ಹೋಗಿದ್ದರೂ ಸಹ ಅದೇ ನಿನ್ನ ಚೇತನವನ್ನು ಇಲ್ಲಿ ವಾಸಿಸುವುದಕ್ಕೂ, ಬಹುಕಾಲ ಜೀವಿಸುವುದಕ್ಕೂ ಹಿಂತಿರುಗಿ ಬರುವಂತೆ ಮಾಡುತ್ತೇವೆ.

## English Translation

Although your spirit have gone far away to the sun, to the dawn, we bring back that (spirit) of yours to dwell here, to live (long).

ಸಂಹಿತಾಪಾಠಃ

ಯತ್ತೇ ಪರ್ವತಾನ್ಬೃಹತೋ ಮನೋ ಜಗಾಮ ದೂರಕಂ ।

ತತ್ತ ಆ ವರ್ತಯಾಮಸೀಹ ಕ್ಷಯಾಯ ಜೀವಸೇ ॥ ೯ ॥

ಪದಪಾಠಃ

ಯತ್ । ತೇ । ಪರ್ವತಾನ್ । ಬೃಹತಃ । ಮನಃ । ಜಗಾಮ । ದೂರಕಂ ।

ತತ್ । ತೇ । ಆ । ವರ್ತಯಾಮಸಿ । ಇಹ । ಕ್ಷಯಾಯ । ಜೀವಸೇ ॥ ೯ ॥

ಸಾಯಣಭಾಷ್ಯಂ

ಹೇ ಸುಬಂಧೋ ಯತ್ತೇ ಮನೋ ಬೃಹತಃ ಪರ್ವತಾನ್ ತದಿತಿ ಗತಂ ॥

ಪ್ರತಿಪದಾರ್ಥ

(ಎಲೈ ಸುಬಂಧುವೇ) **ಯತ್**—ಒಂದುವೇಳೆ । **ತೇ ಮನಃ**—ನಿನ್ನ ಚೇತನವು । **ದೂರಕಂ**—ನಮಗಿಂತ ದೂರವಾಗಿರುವಂತೆ । **ಬೃಹತಃ**—ಬಹು ದೊಡ್ಡವಾದ । **ಪರ್ವತಾನ್**—ಪರ್ವತಪ್ರದೇಶಗಳಿಗೆ । **ಜಗಾಮ**—ಹೋಗಿದ್ದರೂ । **ತತ್ ತೇ**—ಅದೇ ನಿನ್ನ ಚೇತನವನ್ನು । **ಇಹ**—ಇಲ್ಲಿ । **ಕ್ಷಯಾಯ**—ವಾಸಿಸುವುದಕ್ಕೂ । **ಜೀವಸೇ**—ಬಹುಕಾಲ ಜೀವಿಸುವುದಕ್ಕೂ । **ಆ ವರ್ತಯಾಮಸಿ**—ಹಿಂತಿರುಗಿ ಬರುವಂತೆ ಮಾಡುತ್ತೇವೆ.

ಭಾವಾರ್ಥ

ಎಲೈ ಸುಬಂಧುವೇ, ಒಂದುವೇಳೆ ನಿನ್ನ ಚೇತನವು ನಮ್ಮಿಂದ ಬಹುದೂರವಾಗಿರುವ ಮತ್ತು ಬಹು ದೊಡ್ಡವಾದ ಪರ್ವತಪ್ರದೇಶಗಳಿಗೆ ಹೋಗಿದ್ದರೂ, ಅದೇ ನಿನ್ನ ಚೇತನವನ್ನು ಇಲ್ಲಿ ವಾಸಿಸುವುದಕ್ಕೂ, ಬಹುಕಾಲ ಜೀವಿಸುವುದಕ್ಕೂ ಹಿಂತಿರುಗಿ ಬರುವಂತೆ ಮಾಡುತ್ತೇವೆ.

## English Translation

Although your spirit have gone far away to the great mountains, we bring back that (spirit) of yours to dwell here, to live (long).

ಸಂಹಿತಾಪಾಠಃ

ಯತ್ತೇ ವಿಶ್ವಮಿದಂ ಜಗನ್ಮನೋ ಜಗಾಮ ದೂರಕಂ ।

ತತ್ತ ಆ ವರ್ತಯಾಮಸೀಹ ಕ್ಷಯಾಯ ಜೀವಸೇ ॥ ೧೦ ॥

ಪದಪಾಠಃ

ಯತ್ । ತೇ । ವಿಶ್ವಂ । ಇದಂ । ಜಗತ್ । ಮನಃ । ಜಗಾಮ । ದೂರಕಂ ।

**ತತ್ । ತೇ । ಆ । ವರ್ತಯಾಮಸಿ । ಇಹ । ಕ್ಷಯಾಯ । ಜೀವಸೇ ॥ ೧೦ ॥**

ಸಾಯಣಭಾಷ್ಯಂ

**ಹೇ ಸುಬಂಧೋ ಯತ್ತೇ ಮನೋ ವಿಶ್ವಮಿತಿ ತದಿತಿ ಗತಂ । ಚತಸ್ರ ಋಚೋ ನಿಗದಸಿದ್ಧಾಃ ॥**

ಪ್ರತಿಪದಾರ್ಥ

(ಎಲೈ ಸುಬಂಧುವೇ) **ಯತ್**—ಒಂದುವೇಳೆ । **ತೇ ಮನಃ**—ನಿನ್ನ ಚೇತನವು । **ದೂರಕಂ**—ನಮ್ಮಿಂದ ಬಹುದೂರವಾಗಿರುವಂತೆಯೂ । **ಇದಂ ವಿಶ್ವಂ ಜಗತ್**—ಈ ಸಕಲ ಜಗತ್ತನ್ನೂ ವ್ಯಾಪಿಸುವಂತೆ । **ಜಗಾಮ**—ಹೋಗಿದ್ದರೂ । **ತತ್ ತೇ**—ಅದೇ ನಿನ್ನ ಚೇತನವನ್ನು । **ಇಹ**—ಇಲ್ಲಿ । **ಕ್ಷಯಾಯ**—ವಾಸಿಸುವುದಕ್ಕೂ । **ಜೀವಸೇ**—ಜೀವಿಸುವುದಕ್ಕೂ । **ಆ ವರ್ತಯಾಮಸಿ**—ಹಿಂತಿರುಗಿ ಬರುವಂತೆ ಮಾಡುತ್ತೇವೆ.

ಭಾವಾರ್ಥ

ಎಲೈ ಸುಬಂಧುವೇ, ಒಂದುವೇಳೆ ನಿನ್ನ ಚೇತನವು ನಮ್ಮಿಂದ ಬಹುದೂರವಾಗಿರುವಂತೆ, ಈ ಸಕಲ ಜಗತ್ತನ್ನೂ ವ್ಯಾಪಿಸುವಂತೆ ಹೋಗಿದ್ದರೂ, ಅದೇ ನಿನ್ನ ಚೇತನವನ್ನು ಇಲ್ಲಿ ವಾಸಿಸುವುದಕ್ಕೂ, ಜೀವಿಸುವವಕ್ಕೂ ಹಿಂತಿರುಗಿ ಬರುವಂತೆ ಮಾಡುತ್ತೇವೆ.

English Translation

Although your spirit have gone to the remotest regions of this universe, we bring back that spirit of yours to dwell here, to live (long).

ಸಂಹಿತಾಪಾಠಃ

**ಯತ್ತೇ ಪರಾಃ ಪರಾವತೋ ಮನೋ ಜಗಾಮ ದೂರಕಂ ।**
**ತತ್ತ ಆ ವರ್ತಯಾಮಸೀಹ ಕ್ಷಯಾಯ ಜೀವಸೇ ॥ ೧೧ ॥**

ಪದಪಾಠಃ

**ಯತ್ । ತೇ । ಪರಾಃ । ಪರಾಽವತಃ । ಮನಃ । ಜಗಾಮ । ದೂರಕಂ ।**

**ತತ್ । ತೇ । ಆ । ವರ್ತಯಾಮಸಿ । ಇಹ । ಕ್ಷಯಾಯ । ಜೀವಸೇ ॥ ೧೧ ॥**

ಸಾಯಣಭಾಷ್ಯಂ

**ಹೇ ಸುಬಂಧೋ ಯತ್ತೇ ಮನಃ ಪರಾಃ ಪರಾವತೋಽತ್ಯಂತಂ ದೂರದೇಶಾಜ್ಜಗಾಮ ತದಿತಿ ಗತಂ ॥**

ಪ್ರತಿಪದಾರ್ಥ

(ಎಲೈ ಸುಬಂಧುವೇ) **ಯತ್**—ಒಂದುವೇಳೆ | **ತೇ ಮನಃ**—ನಿನ್ನ ಚೇತನವು | **ದೂರಕಂ**—ನಮ್ಮಿಂದ ದೂರವಾಗಿರುವಂತೆ | **ಪರಾಃ ಪರಾವತಃ**—ಅತ್ಯಂತ ದೂರಪ್ರದೇಶಕ್ಕೆ | **ಜಗಾಮ**—ಹೋಗಿದ್ದರೂ | **ತತ್ ತೇ**—ಅದೇ ನಿನ್ನ ಚೇತನವನ್ನು | **ಇಹ**—ಇಲ್ಲಿ | **ಕ್ಷಯಾಯ**—ವಾಸಿಸುವುದಕ್ಕೂ | **ಜೀವಸೇ**—ಬಹುಕಾಲ ಜೀವಿಸುವುದಕ್ಕೂ | **ಆ ವರ್ತಯಾಮಸಿ**—ಹಿಂತಿರುಗಿ ಬರುವಂತೆ ಮಾಡುತ್ತೇವೆ.

ಭಾವಾರ್ಥ

ಎಲೈ ಸುಬಂಧುವೇ, ಒಂದುವೇಳೆ ನಿನ್ನ ಚೇತನವು ನಮ್ಮಿಂದ ದೂರವಾಗಿರುವಂತೆ ಅತ್ಯಂತ ದೂರಪ್ರದೇಶಕ್ಕೆ ಹೋಗಿದ್ದರೂ ಅದೇ ನಿನ್ನ ಚೇತನವನ್ನು ಇಲ್ಲಿ ವಾಸಿಸುವುದಕ್ಕೂ, ಬಹುಕಾಲ ಜೀವಿಸುವುದಕ್ಕೂ ಹಿಂತಿರುಗಿ ಬರುವಂತೆ ಮಾಡುತ್ತೇವೆ.

English Translation

Althougb your spirit have gone far away to the remotest regions, we bring back that (spirit) of yours to dwell here, to live (long).

ಸಂಹಿತಾಪಾಠಃ

ಯತ್ತೇ ಭೂತಂ ಚ ಭವ್ಯಂ ಚ ಮನೋ ಜಗಾಮ ದೂರಕಂ |
ತತ್ತ ಆ ವರ್ತಯಾಮಸೀಹ ಕ್ಷಯಾಯ ಜೀವಸೇ || ೧೨ ||

ಪದಪಾಠಃ

ಯತ್ | ತೇ | ಭೂತಂ | ಚ | ಭವ್ಯಂ | ಚ | ಮನಃ | ಜಗಾಮ | ದೂರಕಂ |
ತತ್ | ತೇ | ಆ | ವರ್ತಯಾಮಸಿ | ಇಹ | ಕ್ಷಯಾಯ | ಜೀವಸೇ || ೧೨ ||

ಸಾಯಣಭಾಷ್ಯಂ

ಹೇ ಸುಬಂಧೋ ಯತ್ತೇ ಮನೋ ಭೂತಂ ಚ ಭವ್ಯಂ ಚೇತ್ಯನೇನ ಭೂತಭವ್ಯಾತ್ಮಕವ್ಯತಿರೇಕೇಣ ಕಸ್ಯಚಿದಭಾವಾದ್ವರ್ತಮಾನಸ್ಯ ಪೃಥಗೇವಾಭಿಧಾನಾತ್ ಕೃತ್ಸ್ನಂ ಪ್ರಪಂಚಮುಕ್ತಂ ಭವತಿ | ತತ್ರ ಸರ್ವತ್ರ ಗತಂ ಮನೋ ಜೀವನಾಯ ನಿವಾಸಾಯ ಚಾವರ್ತಯಾಮಃ ||

ಪ್ರತಿಪದಾರ್ಥ

(ಎಲೈ ಸುಬಂಧುವೇ) **ಯತ್**—ಒಂದುವೇಳೆ | **ತೇ ಮನಃ**—ನಿನ್ನ ಚೇತನವು | **ದೂರಕಂ**—ನಮ್ಮಿಂದ ದೂರವಾಗಿರುವಂತ | **ಭೂತಂ**—ಭೂತಕಾಲದ ತತ್ತ್ವಗಳಲ್ಲಿಯೂ | **ಭವ್ಯಂ**—ಭವಿಷ್ಯತ್ಕಾಲದ ತತ್ತ್ವಗಳಲ್ಲಿಯೂ |

**ಜಗಾಮ**—ಹೋಗಿ ಐಕ್ಯವಾಗಿದ್ದರೂ | **ತತ್ ತೇ**—ಅದೇ ನಿನ್ನ ಚೇತನವನ್ನು | **ಇಹ**—ಇಲ್ಲಿ | **ಕ್ಷಯಾಯ**-ವಾಸಿಸುವುದಕ್ಕೂ | **ಜೀವಸೇ**—ಬಹುಕಾಲ ಜೀವಿಸುವುದಕ್ಕೂ | **ಆ ವರ್ತಯಾಮಸಿ**—ಹಿಂತಿರುಗಿ ಬರುವಂತೆ ಮಾಡುತ್ತೇವೆ.

ಭಾವಾರ್ಥ

ಎಲೈ ಸುಬಂಧುವೇ, ಒಂದುವೇಳೆ ನಿನ್ನ ಚೇತನವು ನಮ್ಮಿಂದ ದೂರವಾಗಿರುವಂತೆ ಭೂತಕಾಲದ ತತ್ತ್ವಗಳಲ್ಲಿಯೂ, ಭವಿಷ್ಯತ್ಕಾಲದ ತತ್ತ್ವಗಳಲ್ಲಿಯೂ ಹೋಗಿ ಐಕ್ಯವಾಗಿದ್ದರೂ, ಅದೇ ನಿನ್ನ ಚೇತನವನ್ನು ಇಲ್ಲಿ ವಾಸಿಸುವುದಕ್ಕೂ, ಬಹುಕಾಲ ಜೀವಿಸುವುದಕ್ಕೂ ಹಿಂತಿರುಗಿ ಬರುವಂತೆ ಮಾಡುತ್ತೇವೆ.

## English Translation

Although your spirit have gone far away to what has been, or to what is to be, we bring back that (spirit) of yours to dwell here, to live (long).

# ಐವತ್ತೊಂಭತ್ತನೆಯ ಸೂಕ್ತ

ಸಾಯಣಭಾಷ್ಯಂ

**ಪ್ರ ತಾರೀತಿ ದಶರ್ಚಂ ಸಪ್ತದಶಂ ಸೂಕ್ತಂ ಬಂಧ್ವಾದೀನಾಂ ತ್ರಯಾಣಾಂ ಗೌಪಾಯನಾನಾಮಾರ್ಷಂ | ಆದಿತಃ ಸಪ್ತ ತ್ರಿಷ್ಟುಭಃ | ಅಷ್ಟಮೀ ಪಂಚಾಷ್ಟಕಾ ಪಂಕ್ತಿಃ | ನವಮೀ ಷಡಷ್ಟಕಾ ಮಹಾಪಂಕ್ತಿಃ | ದಶಮೀ ಪಂಕ್ತ್ಯುತ್ತರಾ | ಆದ್ಯೌ ದಶಕಾವಷ್ಟಕಾಸ್ತ್ರಯಃ | ಅನು. ೯-೧೧. | ಇತ್ಯುಕ್ತಲಕ್ಷಣಸದ್ಭಾವಾತ್ | ಏಕಾಕ್ಷರಾಧಿಕ್ಯಾದ್ಭೂರಿಗ್ವಿಶೇಷೇಣೇಯಂ ವೇದಿತವ್ಯಾ | ಸೂಕ್ತಸ್ಯಾದಿತಶ್ಚತಸೃೃಭಿರ್ದೇಹಾತ್ಪ್ರಾಣಾನ್ನಿರ್ಗಮಯಿತ್ರ್ಯಾ ನಿರ್ಋತೇರ್ನಿವೃತ್ತ್ಯರ್ಥಂ ಬಂಧ್ವಾದಯೋಽಜಪನ್ | ಮೋ ಷು ಣಃ ಸೋಮೇತಿ ಚತುರ್ಥ್ಯಾಮೇವ ಮೃತ್ಯುನಿವೃತ್ತ್ಯರ್ಥಂ ಸೋಮಮಸ್ತುವನ್ | ಅತಶ್ಚತಸೃಣಾಂ ನಿರ್ಋತಿರ್ದೇವತಾ ಚತುರ್ಥ್ಯಾಃ ಸೋಮಶ್ಚ | ಅಸುನೀತೇ ಮನ ಇತಿ ದ್ವಾಭ್ಯಾಮಸುನೀತಿನಾಮ್ನೀಂ ದೇವೀಮಸ್ತುವನ್ | ಅತಸ್ತಯೋಃ ಸಾ ದೇವತಾ | ಪುನರ್ನೋ ಅಸುಮಿತ್ಯಸ್ಯಾಃ ಪೃಥಿವ್ಯಾದ್ಯಾ ಲಿಂಗೋಕ್ತಾ ದೇವತಾಃ | ತತಸ್ತಿಸೃಭಿಃ ಶಿಷ್ಟಾಭಿಃ ಪಂಕ್ತಿಮಹಾಪಂಕ್ತಿಪಂಕ್ತ್ಯುತ್ತರಾಭಿರ್ದ್ಯಾವಾಪೃಥಿವ್ಯಾವಿತಿ ದ್ಯಾವಾಪೃಥಿವ್ಯೌ ದೇವತೇ | ಸಮಿಂದ್ರೇತ್ಯರ್ಧರ್ಚಸ್ಯೇಂದ್ರೋ ದೇವತಾ | ತಥಾ ಚಾನುಕ್ರಾಂತಂ | ಪ್ರ ತಾರೀತಿ ದಶರ್ಚೇ ಚತಸೃೃಭಿರ್ನಿರ್ಋತ್ಯಪನೋದನಾರ್ಥಂ ಜೇಪುಶ್ಚತುರ್ಥ್ಯಾಂ ಸೋಮಂ ಚಾಸ್ತುವನ್ಮೃತ್ಯೋರಪಗಮಾಯೋತ್ತ-ರಾಭ್ಯಾಂ ದೈವೀಮಸುನೀತಿಂ ಸಪ್ತಮ್ಯಾಂ ಲಿಂಗೋಕ್ತದೇವತಾಃ ಶಿಷ್ಟಾಭಿಃ ಪಂಕ್ತಿಮಹಾಪಂಕ್ತಿಪಂಕ್ತ್ಯು-ತ್ತರಾಭಿರ್ದ್ಯಾವಾಪೃಥಿವ್ಯೌ ಸಮಿಂದ್ರೇತೀಂದ್ರಂ ಚಾರ್ಧರ್ಚೇನೇತಿ || ಗತೋ ವಿನಿಯೋಗಃ ||**

ಅನುವಾದವು—**ಪ್ರ ತಾರ್ಯಾಯುಃ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿನೇಳನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೋಪಾಯನಪುತ್ರರಾದ ಬಂಧ್ವಾದಿ ಮೂರು ಮಂದಿ ಸಹೋದರರು ಋಷಿಗಳು. ಈ ಸೂಕ್ತದ ಮೊದಲಿನ ಏಳು ಋಕ್ಕುಗಳು ತ್ರಿಷ್ಟುಪ್‌ಛಂದಸ್ಸುವು. ಎಂಟನೆಯ ಋಕ್ಕು ಎಂಟೆಂಟು ಅಕ್ಷರಗಳ ಐದು ಪಾದಗಳುಳ್ಳ ಪಂಕ್ತಿಛಂದಸ್ಸುವು. ಒಂಭತ್ತನೆಯ ಋಕ್ಕು ಎಂಟೆಂಟು ಅಕ್ಷರಗಳ

ಆರು ಪಾದಗಳುಳ್ಳ ಮಹಾಪಂಕ್ತಿ ಎಂಬ ಛಂದಸ್ಸಿನದು. ಹತ್ತನೆಯ ಋಕ್ಕು ಪಂಕ್ತ್ಯುತ್ತರಾ ಎಂಬ ಛಂದಸ್ಸಿನದು. ಈ ಛಂದಸ್ಸಿನ ಋಕ್ಕಿನಲ್ಲಿ ಐದು ಪಾದಗಳಿದ್ದು ಮೊದಲಿನ ಎರಡು ಪಾದಗಳಲ್ಲಿ ಹತ್ತುಹತ್ತು ಅಕ್ಷರಗಳೂ ಉಳಿದ ಮೂರು ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಇರುವವು (ಅನು. ೯-೧೧) ಎಂದು ಈ ಛಂದಸ್ಸಿನ ಲಕ್ಷಣವು. ಪ್ರಕೃತ ಋಕ್ಕಿನಲ್ಲಿ ಒಂದು ಅಕ್ಷರವು ಅಧಿಕವಾಗಿರುವುದು. ಈ ಸೂಕ್ತದ ಮೊದಲಿನ ನಾಲ್ಕು ಋಕ್ಕುಗಳಲ್ಲಿ ದೇಹದಿಂದ ಪ್ರಾಣವನ್ನು ಬೇರ್ಪಡಿಸಿ ಒಯ್ಯುವ ನಿರ್ಋತಿದೇವತೆಯ ಪುನರಾಗಮನಾರ್ಥವಾಗಿ ಬಂಧ್ವಾದಿಗಳು ಪ್ರಾರ್ಥಿಸಿ ಜಪಿಸಿದಾರೆ. **ಮೋ ಷು ಣಃ ಸೋಮ** ಎಂಬ ನಾಲ್ಕನೆಯ ಋಕ್ಕಿನಲ್ಲಿ ಮೃತ್ಯುವಿನ ನಿವೃತ್ತ್ಯರ್ಥವಾಗಿ ಸೋಮದೇವತೆಯನ್ನು ಸ್ತುತಿಸಿದಾರೆ. ಆದ್ದರಿಂದ ಈ ನಾಲ್ಕು ಋಕ್ಕುಗಳಿಗೆ ನಿರ್ಋತಿಯೇ ದೇವತೆಯು, ನಾಲ್ಕನೆಯ ಋಕ್ಕಿಗೆ ನಿರ್ಋತಿಯ ಜತೆಗೆ ಸೋಮನೂ ಸೇರಿ ದೇವತೆಯು. **ಅಸುನೀತೇ ಮನಃ** ಎಂಬ ಋಕ್ಕಿಗೂ ಅದರ ಮುಂದಿನ (೫-೬ ಋಕ್ಕುಗಳು) ಋಕ್ಕುಗಳಲ್ಲಿ ಅಸುನೀತೀ ಎಂಬ ಹೆಸರಿನ ದೇವತೆಯನ್ನು ಸ್ತುತಿಸಿರುವುದರಿಂದ ಆ ಋಕ್ಕುಗಳಿಗೂ ಅಸುನೀತಿಯೇ ದೇವತೆಯು , **ಪುನರ್ನೋ ಅಸುಂ** ಎಂಬ ಏಳನೆಯ ಋಕ್ಕಿಗೆ ಪೃಥಿವಿಯೇ ಮೊದಲಾದ ಋಕ್ಕಿನಲ್ಲಿ ಪ್ರತಿಪಾದಿತರಾಗಿರುವವರು ದೇವತೆಗಳು. ಅದರ ಮುಂದಿನ ಋಕ್ಕುಗಳಿಗೆ ಎಂದರೆ ಪಂಕ್ತಿ, ಮಹಾಪಂಕ್ತಿ, ಪಂಕ್ತ್ಯುತ್ತರಾ ಎಂಬ ಛಂದಸ್ಸಿನ ಮೂರು ಋಕ್ಕುಗಳಿಗೆ (೮-೧೦ ಋಕ್ಕುಗಳಿಗೆ) ದ್ಯಾವಾಪೃಥಿವಿಗಳು ದೇವತೆಯು ; ಆದರೆ **ಸಮಿಂದ್ರೇರಯ** ಎಂಬ ೧೦ ನೇ ಋಕ್ಕಿನ ಪೂರ್ವಾರ್ಧಕ್ಕೆ ಇಂದ್ರನು ದೇವತೆಯು. ಅನುಕ್ರಮಣಿಕೆಯಲ್ಲಿ— **ಪ್ರ ತಾರೀತಿ ದಶರ್ಚೇ ಚತಸೃೋ ನಿರ್ಋತ್ಯಪನೋದನಾರ್ಥಂ ಜೇಪುಶ್ಚತುರ್ಥ್ಯಾಂ ಸೋಮಂ ಚಾಸ್ತುವನ್ನೃತ್ಯೋರಪಗಮಾಯೋತ್ತರಾಭ್ಯಾಂ ದ್ವೈವೀಮಸುನೀತಿಂ ಸಪ್ತಮ್ಯಾಂ ಲಿಂಗೋಕ್ತದೇವತಾಃ ಶಿಷ್ಟಾಭಿಃ ಪಂಕ್ತಿಮಹಾಪಂಕ್ತಿಪಂಕ್ತ್ಯುತ್ತರಾಭಿರ್ದ್ಯಾವಾಪೃಥಿವ್ಯೌ ಸಮಿಂದ್ರೇತೀಂದ್ರಂ ಚಾರ್ಧರ್ಚೇನ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೫೯

ಮಂಡಲ—೧೦ ‖ ಅನುವಾಕ—೪ ‖ ಸೂಕ್ತ—೫೯ ‖
ಅಷ್ಟಕ—೮ ‖ ಅಧ್ಯಾಯ—೧ ‖ ವರ್ಗ—೨೨,೨೩ ‖
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ‖

ಋಷಿಃ—ಬಂಧುಃ ಶ್ರುತಬಂಧುರ್ವಿಪ್ರಬಂಧುರ್ಗೌಪಾಯನಾಃ ‖

ದೇವತಾ—೧-೩. ನಿರ್ಋತಿಃ । ೪. ನಿರ್ಋತಿಃ ಸೋಮಶ್ಚ । ೫-೬. ಅಸುನೀತಿಃ । ೭. ಲಿಂಗೋಕ್ತದೇವತಾಃ (ಪೃಥಿವೀ, ದ್ಯೌಃ ಅಂತರಿಕ್ಷಂ ಸೋಮಃ ಪೂಷಾ ಪಥ್ಯಾ ಸ್ವಸ್ತಿ) । ೮-೯, ೧೦ರಲ್ಲಿ ಉತ್ತರಾರ್ಧ. ದ್ಯಾವಾಪೃಥಿವ್ಯೌ । ೧೦ರಲ್ಲಿ ಪೂರ್ವಾರ್ಧ. ದ್ಯಾವಾಪೃಥಿವ್ಯಾವಿಂದ್ರಶ್ಚ ‖

ಛಂದಃ—೧-೭- ತ್ರಿಷ್ಟುಪ್ । ೮. ಪಂಕ್ತಿಃ । ೯. ಮಹಾಪಂಕ್ತಿಃ ।
೧೦. ಪ್ರಂಕ್ತ್ಯುತ್ತರಾ ‖

ಸಂಹಿತಾಪಾಠಃ

ಪ್ರ ತಾ॒ರ್ಯಾಯುಃ॑ ಪ್ರತ॒ರಂ ನವೀ॑ಯಃ॒ ಸ್ಥಾ॑ತಾರೇ॑ವ ಕ್ರತು॑ಮತಾ॒ ರಥ॑ಸ್ಯ ।
ಅಧ॒ ಚ್ಯವಾ॑ನ॒ ಉತ್ತ್ಯ॑ವೀತ್ಯರ್ಥಂ ಪ॑ರಾತ॒ರಂ ಸು ನಿರ್ಋ॑ತಿರ್ಜಿಹೀತಾಂ ‖೧‖

ಪದಪಾಠಃ

ಪ್ರ । ತಾರಿ । ಆಯುಃ । ಪ್ರಽತರಂ । ನವೀಯಃ । ಸ್ಥಾತಾರಾಽಇವ । ಕ್ರತುಽಮತಾ । ರಥಸ್ಯ ।

ಅಧ । ಚ್ಯವಾನಃ । ಉತ್ । ತವೀತಿ । ಅರ್ಥಂ । ಪರಾಽತರಂ । ಸು । ನಿಃಽಋತಿಃ । ಜಿಹೀತಾಂ ॥ ೧ ॥

ಸಾಯಣಭಾಷ್ಯಂ

ಸುಬಂಧೋರಾಯುರಾಯುಷ್ಯಂ ಪ್ರ ತಾರಿ । ಪ್ರವರ್ಧತಾಂ । ಪ್ರಪೂರ್ವಸ್ತಿರತಿರ್ವರ್ಧನಾರ್ಥಃ । ಕಥಂ ಪ್ರವರ್ಧತಾಮಿತಿ ಉಚ್ಯತೇ । ಪ್ರತರಂ ಪ್ರವೃದ್ಧತರಂ ನವೀಯೋ ನವತರಂ । ಯೌವನೋಪೇತ-ಮಿತ್ಯರ್ಥಃ । ನಿರ್ಋತ್ಯನುಗ್ರಹಾದೇವಮಾಯುರ್ವರ್ಧತಾಂ । ತತ್ರ ದೃಷ್ಟಾಂತಃ । ಕ್ರತುಮತಾ ಕರ್ಮ-ವತಾ ಸಾರಥಿನಾ ರಥಸ್ಯ ಸ್ಥಾತಾರೇವ ರಥೇ ಸ್ಥಿತಾವಿವ ವರ್ಧೇತಿ ತದ್ವತ್। ಅಧಾಥ ಚ್ಯವಾನೋ ಜೀವಿತಾ-ತ್ಪ್ರಚ್ಯವಮಾನೋಽರ್ಥಂ ಸ್ವಾಭಿಲಷಿತಮಾಯುರ್ಲಕ್ಷಣಮುತ್ತವೀತಿ । ವರ್ಧಯತಿ । ಸುಬಂಧುಪ್ರಾಣಾ-ಪಹರ್ತ್ರೀ ನಿರ್ಋತಿಃ ಪಾಪದೇವತಾ ಪರಾತರಮತ್ಯಂತಂ ದೂರತರಂ ಜಿಹೀತಾಂ । ಪರಿತ್ಯಜತು । ಗಚ್ಛತು॥

ಪ್ರತಿಪದಾರ್ಥ

**ಕ್ರತುಮತಾ**—ಕರ್ಮಕುಶಲನಾದ ಸಾರಥಿಯಿಂದ । **ರಥಸ್ಯ ಸ್ಥಾತಾರಾ ಇವ**—ರಥದಲ್ಲಿರುವ ಜನರು ಸುರಕ್ಷಿತವಾಗಿ ಒಯ್ಯಲ್ಪಡುವಂತೆ । **ಆಯುಃ**—ಸುಬಂಧುವಿನ ಅಯುಸ್ಸು । **ಪ್ರತರಂ**—ದೀರ್ಘವಾಗಿಯೂ । **ನವೀಯಃ**—ಯೌವನದಿಂದ ಕೂಡಿದುದಾಗಿಯೂ । **ಪ್ರ ತಾರಿ**—ಬೆಳೆಯಲಿ (ವೃದ್ಧಿಯನ್ನು ಹೊಂದಲಿ) । **ಅಧ**—ಕೊನೆಯಲ್ಲಿ । **ಚ್ಯವಾನಃ**—ಜೀವಿಕೆಯಿಂದ ನಿವೃತ್ತಿಯನ್ನು ಹೊಂದುವ ಪುರುಷನು (ಸಾವನ್ನು ಸಮೀಪಿಸುವವನು) । **ಅರ್ಥಂ**—ತಾನು ಜೀವಿಸಬೇಕೆಂಬ ಆಸೆಯನ್ನು । **ಉತ್ತವೀತಿ**—ಬೆಳೆಸುತ್ತಾನೆ । **ನಿರ್ಋತಿಃ**—ನಿರ್ಋತಿಸಂಜ್ಞಕಳಾದ ಪಾಪದೇವತೆಯು । **ಪರಾತರಂ**—ಬಹುದೂರದೇಶಕ್ಕೆ । **ಸು ಜಿಹೀತಾಂ**—ಹೊರಟುಹೋಗಲಿ.

ಭಾವಾರ್ಥ

ಕರ್ಮಕುಶಲನಾದ ಸಾರಥಿಯಿಂದ ರಥದಲ್ಲಿರುವ ಜನರು ಸುರಕ್ಷಿತವಾಗಿ ಒಯ್ಯಲ್ಪಡುವಂತೆ, ಸುಬಂಧುವಿನ ಆಯುಸ್ಸು ದೀರ್ಘವಾಗಿಯೂ, ಯೌವನದಿಂದ ಕೂಡಿದುದಾಗಿಯೂ ಬೆಳೆಯಲಿ. ಸಾವನ್ನು ಸಮೀಪಿಸುವ ಪುರುಷನಿಗೆ ತಾನು ಇನ್ನೂ ಬದುಕಬೇಕೆಂಬ ಆಸೆಯು ಬೆಳೆಯುತ್ತದೆ. ನಿರ್ಋತಿಸಂಜ್ಞಕಳಾದ ಪಾಪದೇವತೆಯು ಬಹುದೂರಕ್ಕೆ ಹೊರಟುಹೋಗಲಿ.

English Translation

May the life of Subandhu be augmented so as to be more lasting and newer, as men conveyed in car (are carried on) by a skilfull (driver) : he who falls (from life), increases (his) desire to live : may Nirriti depart far off.

ಸಂಹಿತಾಪಾಠಃ

ಸಾಮನ್ನು ರಾಯೇ ನಿಧಿಮನ್ನ್ವನ್ನಂ ಕರಾಮಹೇ ಸು ಪುರುಧ ಶ್ರವಾಂಸಿ ।

ತಾ ನೋ೭ ವಿಶ್ವಾನಿ ಜರಿತಾ ಮಮತ್ತು ಪರಾತರಂ ಸು ನಿರ್‌ಋತಿರ್ಜಿಹೀತಾಂ॥

ಪದಪಾಠಃ

ಸಾಮನ್ । ನು । ರಾಯೇ । ನಿಧಿऽಮತ್ । ನು । ಅನ್ನಂ । ಕರಾಮಹೇ । ಸು । ಪುರುಧ । ಶ್ರವಾಂಸಿ ।

ತಾ । ನಃ । ವಿಶ್ವಾನಿ । ಜರಿತಾ । ಮಮತ್ತು । ಪರಾऽತರಂ । ಸು । ನಿಃऽಋತಿಃ । ಜಿಹೀತಾಂ ॥ ೨ ॥

ಸಾಯಣಭಾಷ್ಯಂ

ಸಾಮನ್ನು ಸಾಮ್ನಿ ಗೀಯಮಾನೇ ಸತಿ । ನು ಚಾರ್ಥೇ । ರಾಯೇ ಜೀವಾಯುರೂಪಧನಾರ್ಥಂ ನಿಧಿಮನ್ನಿಧಾನವದನ್ನಂ ಹವಿಶ್ಚ ಕರಾಮಹೇ । ಕುರ್ಮಃ । ಅತ್ರ ನ್ವಿತಿ ಚಾರ್ಥೇ । ನಿರ್‌ಋತ್ಯೈ ಸ್ತುತಿಂ ಹವಿರ್ಶ್ಚೋಭಯಂ ಕುರ್ಮ ಇತ್ಯರ್ಥಃ । ತದೇವಾಹ । ಸು ಸುಷ್ಠು ಪುರುಧ ಪುರುಧಾ ಬಹುಪ್ರಕಾರಂ ಶ್ರವಾಂಸ್ಯನ್ನಾನಿ ಹವೀಂಷಿ ಕರಾಮಹೇ । ತಾ ತಾನಿ ಹವೀಂಷಿ ನೋऽಸ್ಮಾಕಂ ಸಂಬಂಧೀನಿ ವಿಶ್ವಾನಿ ಸರ್ವಾಣಿ ಜರಿತಾ ಜೀರ್ಣಾ ಸ್ತುತಾ ವಾ । ಜರಾ ಸ್ತುತಿಃ । ನಿ.೧೦-೮ । ಮಮತ್ತು । ಸ್ವದತಾಂ । ಆಸ್ವಾದ್ಯ ಚ ನಿರ್‌ಋತಿಃ ಪರಾತರಮತ್ಯಂತಂ ದೂರದೇಶಂ ಜಿಹೀತಾಂ । ಗಚ್ಛತಾಂ ॥

ಪ್ರತಿಪದಾರ್ಥ

**ಸಾಮನ್ ನು**—ಸಾಮಗಾನವು ಪಠಿತವಾಗುವ ಕಾಲದಲ್ಲಿ । **ರಾಯೇ**—ಆಯುಸ್ಸಿನ ರೂಪದ ಧನಾರ್ಥವಾಗಿ । **ನಿಧಿಮತ್**—ನಿಧಿಯಂತೆ ಪುಷ್ಕಲವಾದ । **ಅನ್ನಂ**—ಹವಿಸ್ಸನ್ನು । **ಕರಾಮಹೇ**—ಅರ್ಪಿಸುತ್ತೇವೆ । **ಸು**—ಉತ್ತಮವಾಗಿಯೂ । **ಪುರುಧ**—ಅನೇಕವಿಧವಾಗಿಯೂ । **ಶ್ರವಾಂಸಿ**—ಅನ್ನಗಳನ್ನೂ (ಅರ್ಪಿಸುತ್ತೇವೆ) । **ಸ್ತುತಾ**—ನಮ್ಮಿಂದ ಪ್ರಶಂಸಿತಳಾದ ನಿರ್‌ಋತಿಯು । **ನಃ**—ನಮ್ಮಿಂದ ಅರ್ಪಿತವಾದ । **ತಾ ವಿಶ್ವಾನಿ**—ಆ ಸಕಲವಾದ ಅನ್ನಗಳನ್ನು । **ಮಮತ್ತು**—ಭಕ್ಷಿಸಲಿ । **ನಿರ್‌ಋತಿಃ**—ನಿರ್‌ಋತಿದೇವಿಯು । **ಪರಾತರಂ**—ಅಧಿಕವಾದ ದೂರ ದೇಶಕ್ಕೆ । **ಸು ಜಿಹೀತಾಂ**—ಹೊರಟುಹೋಗಲಿ.

ಭಾವಾರ್ಥ

ಸಾಮಗಾನವು ಪಠಿತವಾಗುವ ಕಾಲದಲ್ಲಿ ಆಯುರ್ವೃದ್ಧಿಗಾಗಿ ನಿಧಿಯಂತೆ ಪುಷ್ಕಲವಾದ ಹವಿಸ್ಸನ್ನು ನಿರ್‌ಋತಿದೇವಿಗೆ ಅರ್ಪಿಸುತ್ತೇವೆ. ಉತ್ತಮವೂ, ಅನೇಕವಿಧವೂ ಆದ ಅನ್ನಗಳನ್ನು ಅರ್ಪಿಸುತ್ತೇವೆ. ನಮ್ಮಿಂದ ಪ್ರಶಂಸಿತಳಾದ ನಿರ್‌ಋತಿಯು ನಮ್ಮಿಂದ ಅರ್ಪಿತವಾದ ಸಕಲ ಅನ್ನವನ್ನೂ ಭಕ್ಷಿಸಲಿ. ನಮ್ಮನ್ನು ಬಿಟ್ಟು ಅಧಿಕವಾದ ದೂರ ದೇಶಕ್ಕೆ ಹೊರಟುಹೋಗಲಿ.

## English Translation

(When) the hymn (is being sung) let us offer (sacrificial) food, like a treasure (to Nirriti) for the sake of riches, and many kinds of sacrificial viands; may she, being praised, partake of all these our (offerings); may Nirriti depart far off.

ಸಂಹಿತಾಪಾಠಃ

ಅಭೀ ಷ್ವ೧ರ್ಯಃ ಪೌಂಸ್ಯೈರ್ಭವೇಮ ದ್ಯೌರ್ನ ಭೂಮಿಂ ಗಿರಯೋ ನಾಜ್ರಾನ್ ।
ತಾ ನೋ ವಿಶ್ವಾನಿ ಜರಿತಾ ಚಿಕೇತ ಪರಾತರಂ ಸು ನಿರ್ಋತಿರ್ಜಿಹೀತಾಂ ॥

ಪದಪಾಠಃ

ಅಭಿ । ಸು । ಅರ್ಯಃ । ಪೌಂಸ್ಯೈಃ । ಭವೇಮ । ದ್ಯೌಃ । ನ । ಭೂಮಿಂ । ಗಿರಯಃ । ನ । ಅಜ್ರಾನ್ ।
ತಾ । ನಃ । ವಿಶ್ವಾನಿ । ಜರಿತಾ । ಚಿಕೇತ । ಪರಾಽತರಂ । ಸು । ನಿಃಽಋತಿಃ । ಜಿಹೀತಾಂ ॥ ೩ ॥

ಸಾಯಣಭಾಷ್ಯಂ

ವಯಮರ್ಯೋಽರೀಞ್ಶತ್ರೂನ್ಪೌಂಸ್ಯೈಃ ಪುಂಸ್ತ್ವೈರ್ಬಲೈಃ ಸು ಸುಷ್ಠ್ವಭಿಭವೇಮ । ದ್ಯೌರ್ನ ಭೂಮಿಂ ಸೂರ್ಯೋ ಯಥಾ ಸ್ವರಶ್ಮಿಭಿರ್ಭೂಮಿಮಭಿಭವತಿ ತದ್ವತ್ । ಗಿರಯೋ ನಾಜ್ರಾನ್ । ಗಿರಿರ್ವಜ್ರಃ । ತೇ ಯಥಾಜ್ರಾನಜನಶೀಲಾನ್ಮೇಘಾನಭಿಭವಂತಿ ತದ್ವತ್ । ತಾ ತಾನಿ ಯಾನಿ ನೋಽಸ್ಮಾಭಿಃ ಕೃತಾನಿ ಸ್ತೋತ್ರಾಣಿ ತಾನಿ ವಿಶ್ವಾನಿ ಸರ್ವಾಣಿ ಜರಿತಾ ಸ್ತುತಾ ಸತೀ ನಿರ್ಋತಿಶ್ಚಿಕೇತ । ಜಾನಾತಿ । ಶಿಷ್ಟಮುಕ್ತಂ ॥

ಪ್ರತಿಪದಾರ್ಥ

**ದ್ಯೌಃ**—ಸೂರ್ಯನು । **ಭೂಮಿಂ ನ**—ಭೂಮಿಯನ್ನು ಕಿರಣಗಳಿಂದ ಆವರಿಸುವಂತೆಯೂ । **ಗಿರಯಃ**—ವಜ್ರಾಯುಧವು । **ಅಜ್ರಾನ್ ನ**—ಮೇಘಗಳನ್ನು ಆವರಿಸುವಂತೆಯೂ । (**ವಯಂ**—ನಾವು) । **ಅರ್ಯಃ**—ಶತ್ರುಗಳನ್ನು । **ಪೌಂಸ್ಯೈಃ**—ನಮ್ಮ ಪುರುಷಶಕ್ತಿಗಳಿಂದ । **ಸು**—ಪೂರ್ಣವಾಗಿ । **ಅಭಿ ಭವೇಮ**—ಆಕ್ರಮಿಸಿ ಸೋಲಿಸುವಂತಾಗಲಿ । **ಜರಿತಾ**—ನಮ್ಮಿಂದ ಪ್ರಶಂಸಿತಳಾದ । **ನಿರ್ಋತಿಃ**—ನಿರ್ಋತಿಯು । **ನಃ**—ನಮ್ಮಿಂದ ಪಠಿತವಾದ । **ವಿಶ್ವಾನಿ ತಾ**—ಸಕಲ ಸ್ತುತಿಗಳನ್ನೂ । **ಚಿಕೇತ**—ಅರಿಯುತ್ತಾಳೆ । **ಪರಾತರಂ**—ನಮ್ಮಿಂದ ದೂರವಾಗಿ । **ಸು ಜಿಹೀತಾಂ**—ಹೊರಟುಹೋಗಲಿ.

ಭಾವಾರ್ಥ

ಸೂರ್ಯನು ತನ್ನ ಕಿರಣಗಳಿಂದ ಭೂಮಿಯನ್ನು ಆವರಿಸುವಂತೆಯೂ, ವಜ್ರಾಯುಧವು ಮೇಘಗಳನ್ನು ಆವರಿಸುವಂತೆಯೂ ನಾವು ನಮ್ಮ ಪುಂಶಕ್ತಿಗಳಿಂದ ಶತ್ರುಗಳನ್ನು ಪೂರ್ಣವಾಗಿ ಆಕ್ರಮಿಸಿ ಸೋಲಿಸುವಂತಾಗಲಿ. ನಮ್ಮಿಂದ ಪ್ರಶಂಸಿತಳಾದ ನಿರ್ಋತಿಯು ನಮ್ಮಿಂದ ಪಠಿತವಾದ ಸಕಲ ಸ್ತುತಿಗಳನ್ನೂ ಅರಿಯುತ್ತಾಳೆ. ಅವಳು ನಮ್ಮಿಂದ ದೂರವಾಗಿ ಹೊರಟುಹೋಗಲಿ.

English Translalion

May we, by our manly exertions, overcome our enemies, as the Sun the earth, as thunderbolts the clouds : she, being praised, knows all these our (exploits) : may Nirriti depart far off.

ಸಂಹಿತಾಪಾಠಃ

ಮೋ ಷು ಣಃ ಸೋಮ ಮೃತ್ಯವೇ ಪರಾ ದಾಃ ಪಶ್ಯೇಮ ನು ಸೂರ್ಯಮುಚ್ಚರಂತಂ
ದ್ಯುಭಿರ್ಹಿತೋ ಜರಿಮಾ ಸೂನೋ ಅಸ್ತು ಪರಾತರಂ ಸು ನಿರ್ಋತಿರ್ಜಿಹೀತಾಂ

ಪದಪಾಠಃ

ಮೋ ಇತಿ । ಸು । ನಃ । ಸೋಮ । ಮೃತ್ಯವೇ । ಪರಾ । ದಾಃ । ಪಶ್ಯೇಮ । ನು । ಸೂರ್ಯಂ । ಉತ್ಽಚರಂತಂ ।
ದ್ಯುಽಭಿಃ । ಹಿತಃ । ಜರಿಮಾ । ಸು । ನಃ । ಅಸ್ತು । ಪರಾಽತರಂ । ಸು । ನಿಃಽಋತಿಃ । ಜಿಹೀತಾಂ ॥ ೪ ॥

ಸಾಯಣಭಾಷ್ಯಂ

ಹೇ ಸೋಮ ನೋಽಸ್ಮಾನ್ ಸು ಸುಷ್ಠು ಮೃತ್ಯವೇ ಮೋ ಪರಾ ದಾಃ । ಮೈವ ಪರಾದಾನಂ ಕುರು । ಮೃತ್ಯ್ವಧೀನಾನ್ಮೋಽಸ್ಮಾನ್ಮಾ ಕಾರ್ಷೀಃ । ಕಿಂತು ನ್ವಿದಾನೀಮುಚ್ಚರಂತಮೂರ್ಧ್ವಂ ಗಚ್ಛಂತಮುದಯಂತಂ ಸೂರ್ಯಂ ಪಶ್ಯೇಮ । ಚಿರಕಾಲಂ ಜೀವೇಮೇತ್ಯರ್ಥಃ । ಜೀವಾಭಾವೇ ಸೂರ್ಯಾದರ್ಶನಾದಿತ್ಯಭಿಪ್ರಾಯಃ । ಕಿಂಚ ದ್ಯುಭಿಃ । ಅಹರ್ನಾಮೈತತ್ । ಅಹೋಭಿರ್ದಿವಸೈರ್ಹಿತಃ ಪ್ರೇರಿತೋ ಜರಿಮಾ ಜರಾಭಾವೋ ನೋಽಸ್ಮಾಕಂ ಸು ಸುಖಕರೋಽಸ್ತು । ಶಿಷ್ಟಮುಕ್ತಂ ॥

ಪ್ರತಿಪದಾರ್ಥ

**ಸೋಮ**—ಎಲೈ ಸೋಮನೇ । **ನಃ**—ನಮ್ಮನ್ನು । **ಮೃತ್ಯವೇ**—ಮೃತ್ಯುವಿಗೆ । **ಸು ಮೋ ಪರಾ ದಾಃ**—ಪೂರ್ಣವಾಗಿ ಬಿಟ್ಟುಕೊಡಬೇಡ । **ನು**—ಈಗ । **ಉಚ್ಚರಂತಂ**—ಉದಯಿಸುತ್ತಿರುವ । **ಸೂರ್ಯಂ**—ಸೂರ್ಯನನ್ನು । **ಪಶ್ಯೇಮ**—ನೋಡುವಂತಾಗಲಿ । **ದ್ಯುಭಿಃ**—ಅಹಸ್ಸುಗಳು ಕಳೆಯುವುದರಿಂದ । **ಹಿತಃ**—ಪ್ರೇರಿತವಾಗುವ । **ಜರಿಮಾ**—ಮುಪ್ಪು । **ನಃ**—ನಮಗೆ । **ಸು**—ಸುಖಕರವಾಗಿ । **ಅಸ್ತು**—ಆಗಿರಲಿ । **ನಿರ್ಋತಿಃ**—ನಿರ್ಋತಿಯು । **ಪರಾತರಂ**—ನಮ್ಮಿಂದ ದೂರಕ್ಕೆ । **ಸು ಜಿಹೀತಾಂ**—ಬಿಟ್ಟುಹೋಗಲಿ.

ಭಾವಾರ್ಥ

ಎಲೈ ಸೋಮನೇ, ನಮ್ಮನ್ನು ಮೃತ್ಯುವಿಗೆ ಬಿಟ್ಟುಕೊಡಬೇಡ. ನಾವು ಉದಯಿಸುತ್ತಿರುವ ಸೂರ್ಯನನ್ನು ಅನೇಕಕಾಲ ನೋಡುವಂತಾಗಲಿ. ವಯಸ್ಸು ಕಳೆಯುವುದರಿಂದ ಪ್ರಾಪ್ತವಾಗುವ ಮುಪ್ಪಿನಕಾಲವು ನಮಗೆ ಸುಖಕರವಾಗಲಿ. ನಿರ್ಋತಿಯು ನಮ್ಮನ್ನು ಬಿಟ್ಟು ದೂರಕ್ಕೆ ಹೊರಟುಹೋಗಲಿ.

## English Translation

Give us not up, Soma, to death : may we (long) behold the rising sun : may our old age brought on by (passing) days be happy : may Nirriti depart for off.

ಸಂಹಿತಾಪಾಠಃ

ಅಸುನೀತೇ ಮನೋ ಅಸ್ಮಾಸು ಧಾರಯ ಜೀವಾತ್ಮವೇ ಸು ಪ್ರ ತಿರಾ ನ ಆಯುಃ ।
ರಾರಂಧಿ ನಃ ಸೂರ್ಯಸ್ಯ ಸಂದೃಶಿ ಘೃತೇನ ತ್ವಂ ತನ್ವಂ ವರ್ಧಯಸ್ವ ॥ ೫ ॥

ಪದಪಾಠಃ

ಅಸುऽನೀತೇ । ಮನಃ । ಅಸ್ಮಾಸು । ಧಾರಯ । ಜೀವಾತವೇ । ಸು । ಪ್ರ । ತಿರ । ನಃ । ಆಯುಃ ।
ರರಂಧಿ । ನಃ । ಸೂರ್ಯಸ್ಯ । ಸಂऽದೃಶಿ । ಘೃತೇನ । ತ್ವಂ । ತನ್ವಂ । ವರ್ಧಯಸ್ವ ॥ ೫ ॥

ಸಾಯಣಭಾಷ್ಯಂ

**ಹೇ ಅಸುನೀತೇ ಮನುಷ್ಯಾಣಾಮಸೂನಾಂ ನೇತ್ರಿ ದೇವಿ ಅಸ್ಮಾಸು ಮನಃ ಪುನರ್ಧಾರಯ । ಕಿಂಚ ಜೀವಾತವೇ ಜೀವಿತುಂ ಸು ಪ್ರ ತಿರ ಸುಷ್ಠು ವರ್ಧಯ ನೋಽಸ್ಮಾಕಮಾಯುಃ । ಕಿಂಚ ರಾರಂಧಿ ಸ್ಥಾಪಯ ನೋಽಸ್ಮಾನ್ ಸೂರ್ಯಸ್ಯ ಸಂದೃಶಿ ಚಿರಸಂದರ್ಶನೇ । ತ್ವಂ ಚ ಘೃತೇನಾಸ್ಮಾಭಿರ್ದತ್ತೇನ ತನ್ವಂ ಶರೀರಂ ವರ್ಧಯ । ವರ್ಧಯಸ್ವ ॥**

ಪ್ರತಿಪದಾರ್ಥ

**ಅಸುನೀತೇ**—ಪ್ರಾಣದಾತ್ರಿಯಾದ ಎಲೈ ಅಸುನೀತಿದೇವಿಯೇ । **ಅಸ್ಮಾಸು**—ನಮಗೆ । **ಮನಃ**—ಕಳೆದುಹೋದ ಚೇತನವನ್ನು । **ಧಾರಯ**—ಪುನಃ ಕೊಡು । **ಜೀವಾತವೇ**—ನಾವು ದೀರ್ಘಕಾಲ ಜೀವಿಸಲು । **ನಃ**—ನಮ್ಮ । **ಆಯುಃ**—ಆಯುಸ್ಸನ್ನು । **ಸು ಪ್ರ ತಿರ**—ಅತ್ಯಧಿಕವಾಗಿ ಬೆಳೆಯುವಂತೆ ಮಾಡು । **ನಃ**—ನಮ್ಮನ್ನು । **ಸೂರ್ಯಸ್ಯ ಸಂದೃಶಿ**—ಸೂರ್ಯನನ್ನು ಅನೇಕಕಾಲ ನೋಡುವಂತೆ । **ರರಂಧಿ**—ಸ್ಥಾಪಿಸು । **ಘೃತೇನ**—ನಮ್ಮಿಂದ ಅರ್ಪಿತವಾದ ಘೃತದಿಂದ । **ತ್ವಂ**—ನೀನು । **ತನ್ವಂ**—ಶರೀರವನ್ನು । **ವರ್ಧಯಸ್ವ**—ಬೆಳೆಸು.

ಭಾವಾರ್ಥ

ಪ್ರಾಣಗಳ ನೇತ್ರಿಯಾದ ಎಲೈ ಅಸುನೀತಿದೇವಿಯೇ, ನಮಗೆ ಕಳೆದುಹೋದ ಚೇತನವನ್ನು ಪುನಃ ಕೊಡು. ನಾವು ದೀರ್ಘಕಾಲ ಜೀವಿಸಲು ನಮ್ಮ ಆಯುಸ್ಸನ್ನು ಅಧಿಕವಾಗಿ ಬೆಳೆಯುವಂತೆ ಮಾಡು. ನಾವು ಅನೇಕಕಾಲ ಸೂರ್ಯನನ್ನು ನೋಡುವಂತೆ ಮಾಡು. ನಮ್ಮಿಂದ ಅರ್ಪಿತವಾದ ಘೃತದಿಂದ ನೀನು ಶರೀರವನ್ನು ಬೆಳೆಸು.

English Translation

Asuniti, give us back the (departed) spirit : extend our life that we may live (long) : establish us that we may (long) behold the sun : do you cherish the body with the ghi (that we have offered).

ವಿಶೇಷವಿಷಯಗಳು

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ಅಸುನೀತೇ ಮನಃ ಅಸ್ಮಾಸು ಧಾರಯ ಚಿರಂ ಜೀವನಾಯ ಪ್ರವರ್ಧಯ ಚ ನ ಆಯೂ**

**ರಂಧಯ ಚ ನಃ ಸೂರ್ಯಸ್ಯ ಸಂದರ್ಶನಾಯ । ರಧ್ಯತಿರ್ವಶಗಮನೇಽಪಿ ದೃಶ್ಯತೇ । ಮಾ ರಧಾಮ ದ್ವಿಷತೇ ಸೋಮ ರಾಜನ್ । ಇತ್ಯಪಿ ನಿಗಮೋ ಭವತಿ । ಘೃತೇನ ತ್ವಮಾತ್ಮಾನಂ ತನ್ವಂ ವರ್ಧಯಸ್ವ ॥**

(ನಿ. ೧೦-೪೦)

ಎಲೈ ಅಸುನೀತಿಯೆಂಬ ದೇವಿಯೇ, ನಮ್ಮ ಶರೀರದಲ್ಲಿರುವ ಮನಸ್ಸನ್ನು (ಇಲ್ಲಿ ಮನಸ್ಸೆಂದರೆ ಪ್ರಾಣ ಅಥವಾ ಆತ್ಮಾ ಎಂಬರ್ಥವು ಸೂಚಿತವಾಗುವುದು). ಬಹುಕಾಲ ಜೀವಿಸಿರುವುದಕ್ಕಾಗಿ ಸ್ಥಿರವಾಗಿ ನೆಲಸುವಂತೆ ಮಾಡು ಮತ್ತು ನಮ್ಮ ಆಯುಸ್ಸನ್ನೂ ವೃದ್ಧಿಪಡಿಸು. ಅದನ್ನು ನಮ್ಮ ವಶವಾಗುವಂತೆ ಮಾಡು. ನಾವು ಬಹುಕಾಲ ಜೀವಿಸಿದ್ದು ಸೂರ್ಯನನ್ನು ನೋಡುತ್ತಿರುವಂತಾಗಲಿ. ಇಲ್ಲಿ ರಧ್ ಧಾತುವಿಗೆ ವಶಮಾಡು ಎಂಬರ್ಥವಿರುವುದು. **ಮಾ ರಧಾಮ ದ್ವಿಷತೇ ಸೋಮ ರಾಜನ್** ಎಂಬ ಶ್ರುತಿವಾಕ್ಯವು ಇದನ್ನು ಸಮರ್ಥಿಸುವುದು. ನಾವು ಅರ್ಪಿಸುವ ಘೃತದಿಂದ ಎಲೈ ಅಸುನೀತಿಯೇ, ನಿನ್ನ ಶರೀರವನ್ನು ಪುಷ್ಟಿಗೊಳಿಸು ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

**ಸೂರ್ಯಸ್ಯ ಸಂದೃಶಿ**—ಸೂರ್ಯನನ್ನು ಯಾವಾಗಲೂ ನೋಡುತ್ತಿರುವುದು ಎಂದರೆ ಬಹುಕಾಲ ಜೀವಿಸಿರುವುದು ಎಂದರ್ಥವು. ಈ ಅರ್ಥದಲ್ಲಿ **ಜ್ಯೋಕ್ ಚ ಸೂರ್ಯಂ ದೃಶೇ** ಇತ್ಯಾದಿ ಶ್ರುತಿವಾಕ್ಯಗಳಿರುವವು.

**ಘೃತೇನ ತ್ವಂ ತನ್ವಂ ವರ್ಧಯಸ್ವ**–ಈ ವಾಕ್ಯಕ್ಕೆ ಸಾಯಣರು **ತ್ವಂ ಚ ಅಸ್ಮಾಭಿರ್ದತ್ತೇನ ಘೃತೇನ ಶರೀರಂ ವರ್ಧಯ** ನಾವು ನಿನಗೆ ಅರ್ಪಿಸುವ ಘೃತದಿಂದ ನಿನ್ನ ಶರೀರವನ್ನು ಪುಷ್ಟಿಗೊಳಿಸು ಎಂದು ಹೇಳಿದಾರೆ. ಈ ವಿಷಯದಲ್ಲಿ ನಿರುಕ್ತವ್ಯಾಖ್ಯಾಕಾರರಾದ ದುರ್ಗಾಚಾರ್ಯರು—**ಘೃತೇನ ಉದಕೇನ ತ್ವಮಾತ್ಮಾನಂ ಯಥಾಕಾಲಂ ವರ್ಧಯಸ್ವ । ತ್ವಂ ಹ್ಯುದಕಂ ದದತಿ ಸರ್ವಮಿದಂ ಭವತಿ । ಅಹವಿರ್ಭಾಕ್ತ್ವಾದಸುನೀತೇರ್ಘೃತಮಿತ್ಯುದಕನಾಮೇತ್ಯತ್ರೋಪಪದ್ಯತೇ ॥**—ಘೃತಶಬ್ದಕ್ಕೆ ಉದಕವೆಂಬ ಅರ್ಥಮಾಡಿದಾರೆ. ಅಸುನೀತಿದೇವತೆಯು ಹವಿಸ್ಸನ್ನು ಭುಜಿಸುವುದಿಲ್ಲವಾದ್ದರಿಂದ ಇಲ್ಲಿ ಘೃತಶಬ್ದಕ್ಕೆ ಉದಕವೆಂದು ಅರ್ಥಮಾಡುವುದು ಸಮಂಜಸವಾಗಿದೆ ಎಂದು ಹೇಳಿದ್ದಾರೆ.

ಸಂಹಿತಾಪಾಠಃ

ಅಸುನೀತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹ ನೋ ಧೇಹಿ ಭೋಗಂ ।
ಜ್ಯೋಕ್ ಪಶ್ಯೇಮ ಸೂರ್ಯಮುಚ್ಚರಂತಮನುಮತೇ ಮೃಳಯಾ ನಃ ಸ್ವಸ್ತಿ ॥ ೬ ॥

ಪದಪಾಠಃ

**ಅಸುಽನೀತೇ । ಪುನಃ । ಅಸ್ಮಾಸು । ಚಕ್ಷುಃ । ಪುನರಿತಿ । ಪ್ರಾಣಂ । ಇಹ । ನಃ । ಧೇಹಿ । ಭೋಗಂ ।**

**ಜ್ಯೋಕ್ । ಪಶ್ಯೇಮ । ಸೂರ್ಯಂ । ಉತ್ಽಚರಂತಂ । ಅನುಽಮತೇ । ಮೃಳಯ । ನಃ । ಸ್ವಸ್ತಿ ॥ ೬ ॥**

ಸಾಯಣಭಾಷ್ಯಂ

ಹೇ ಅಸುನೀತೇ ಪ್ರಾಣದಾಯಿನಿ ದೇವಿ ಅಸ್ಮಾಸು । ಅಸ್ಮದೀಯೇ ಸುಬಂಧಾವಿತ್ಯರ್ಥಃ । ಪುನಶ್ಚಕ್ಷುಃ ಪ್ರಕಾಶಕಂ ನಯನಂ । ಈಕ್ಷಣಸಾಮರ್ಥ್ಯಮಿತ್ಯರ್ಥಃ । ಕಿಂಚ ಪುನಃ ಪ್ರಾಣಮಸ್ಮಾಸು ಧೇಹಿ । ಸ್ಥಾಪಯ । ವಯಂ ಚ ಜ್ಯೋಕ್ಚಿರಮುಚ್ಚರಂತಮುದ್ಗಚ್ಛಂತಂ ಸೂರ್ಯಂ ಪಶ್ಯೇಮ । ಹೇ ಅನುಮತೇ ದೇವಿ ಸ್ವಸ್ತ್ಯವಿನಾಶಂ ಯಥಾ ಸ್ಯಾತ್ತಥಾ ನೋಽಸ್ಮಾನ್ಮೃಳಯ । ಸುಖಯ ॥

ಪ್ರತಿಪದಾರ್ಥ

**ಅಸುನೀತೇ**—ಎಲೈ ಅಸುನೀತಿದೇವಿಯೇ । **ಅಸ್ಮಾಸು**—ನಮ್ಮಲ್ಲಿ । **ಪುನಃ**—ತಿರುಗಿಯೂ । **ಚಕ್ಷುಃ**—ದರ್ಶನಸಾಮರ್ಥ್ಯವನ್ನೂ । **ಪ್ರಾಣಂ**—ಪ್ರಾಣವನ್ನೂ । **ಧೇಹಿ**—ಸ್ಥಾಪಿಸು । **ನಃ**—ನಮಗೆ । **ಭೋಗಂ**—ಸೌಖ್ಯವನ್ನೂ । **ಧೇಹಿ**—ಒದಗಿಸು । **ಉಚ್ಚರಂತಂ**—ಉದಯಿಸುತ್ತಿರುವ । **ಸೂರ್ಯಂ**—ಸೂರ್ಯನನ್ನು । **ಜ್ಯೋಕ್**—ಬಹುಕಾಲ । **ಪಶ್ಯೇಮ**—ನಾವು ನೋಡುವಂತಾಗಲಿ । **ಅನುಮತೇ**—ಉದಾರಚರಿತಳಾಗಿ ಎಲೈ ಅನುಮತಿದೇವಿಯೇ । **ನಃ**—ನಮಗೆ । **ಸ್ವಸ್ತಿ**—ಕಲ್ಯಾಣವಾಗುವಂತೆ । **ಮೃಳಯ**—ಸುಖಪಡಿಸು.

ಭಾವಾರ್ಥ

ಎಲೈ ಅಸುನೀತಿದೇವಿಯೇ, ನಮ್ಮಲ್ಲಿ ತಿರುಗಿಯೂ ದರ್ಶನಸಾಮರ್ಥ್ಯವನ್ನೂ ಪ್ರಾಣವನ್ನೂ ಸ್ಥಾಪಿಸು, ನಮಗೆ ಸೌಖ್ಯವನ್ನೂ ಒದಗಿಸು. ಉದಯಿಸುತ್ತಿರುವ ಸೂರ್ಯನನ್ನು ಬಹುಕಾಲ ನಾವು ನೋಡುವಂತಾಗಲಿ. ಉದಾರ ಚರಿತಳಾದ ಎಲೈ ಅನುಮತಿದೇವಿಯೇ, ನಮಗೆ ಕಲ್ಯಾಣವನ್ನುಂಟುಮಾಡಿ ಸುಖಪಡಿಸು.

English Translation

Restore to us, Asuniti, sight and breath, and enjoyment in this world : long may we behold the rising sun ; make us happy, gracious (goddess), with prosperity.

ಸಂಹಿತಾಪಾಠಃ

ಪುನರ್ನೋ ಅಸುಂ ಪೃಥಿವೀ ದದಾತು ಪುನರ್ದ್ಯೌರ್ದೇವೀ ಪುನರಂತರಿಕ್ಷಂ ।
ಪುನರ್ನಃ ಸೋಮಸ್ತನ್ವಂ ದದಾತು ಪುನಃ ಪೂಷಾ ಪಥ್ಯಾಂ೩ ಯಾ ಸ್ವಸ್ತಿಃ ॥

ಪದಪಾಠಃ

ಪುನಃ । ನಃ । ಅಸುಂ । ಪೃಥಿವೀ । ದದಾತು । ಪುನಃ । ದ್ಯೌಃ । ದೇವೀ । ಪುನಃ । ಅಂತರಿಕ್ಷಂ ।
ಪುನಃ । ನಃ । ಸೋಮಃ । ತನ್ವಂ । ದದಾತು । ಪುನರಿತಿ । ಪೂಷಾ । ಪಥ್ಯಾಂ । ಯಾ । ಸ್ವಸ್ತಿ ॥ ೭ ॥

ಸಾಯಣಭಾಷ್ಯಂ

ಪೃಥಿವೀ ದೇವೀ ನೋಽಸ್ಮಭ್ಯಮಸುಂ ಪ್ರಾಣಂ ದದಾತು ಪುನಃ । ದ್ಯೌರ್ದೇವತಾಸುಂ ದದಾತು । ತಥಾಂತರಿಕ್ಷಮಂತರಿಕ್ಷದೇವತಾಸುಂ ದದಾತು । ತಥಾ ಸೋಮೋ ನಸ್ತನ್ವಂ ಶರೀರಂ ಪುನರ್ದದಾತು । ತಥಾ ಪೂಷಾ ಪೋಷಾಭಿಮಾನಿನೀ ದೇವತಾ ಪಥ್ಯಾಂ । ಪಂಥಾ ಅಂತರಿಕ್ಷಂ । ನಿ-೧೧-೪೫ । ತತ್ರ ಭವಾಂ

**ವಾಚಂ । ವಾಗಾತ್ಮಕಃ ಶಬ್ದೋ ಹ್ಯಾಕಾಶಾದುತ್ಪದ್ಯತೇ। ತಾಂ ಪುನರ್ದದಾತು । ಕಿಂಚ ಯಾ ಸ್ವಸ್ತಿರ್ಯಾ ಲೋಕೇ ವೇದೇ ಚ ಸ್ವಸ್ತಿರುಚ್ಯತೇ ತಾಮಪಿ ಪೂಷಾ ಪ್ರಯಚ್ಛತು । ಯದ್ವಾ । ಪೂಷಾ ಪೋಷಂ ಪ್ರಯಚ್ಛತು । ಯಾ ಸ್ವಸ್ತಿರ್ವಾಗ್ಘ್ಯಾಮ್ನೀ ದೇವ್ಯಸ್ತಿ ಸಾ ಪಥ್ಯಾಂ ವಾಚಂ ಪ್ರಯಚ್ಛತು । ವಾಗ್ವೈ ಪಥ್ಯಾ ಸ್ವಸ್ತಿಃ । ಶತ. ೩-೨-೩-೮ । ಇತಿ ಬ್ರಾಹ್ಮಣಂ ॥**

ಪ್ರತಿಪದಾರ್ಥ

**ಪೃಥಿವೀ**— ಪೃಥ್ವೀದೇವಿಯು । **ನಃ**— ನಮಗೆ । **ಅಸುಂ**— ಪ್ರಾಣವನ್ನು । **ದದಾತು**— ಕೊಡಲಿ । **ದ್ಯೌಃ**—ದ್ಯುಲೋಕಾಧಿದೇವತೆಯು । **ಪುನಃ**— ತಿರುಗಿಯೂ ನಮಗೆ ಪ್ರಾಣವನ್ನು ಕೊಡಲಿ । **ಅಂತರಿಕ್ಷಂ**— ಅಂತರಿಕ್ಷವು ನಮ್ಮನ್ನು ಪುನಃ ಬದುಕಿಸಲಿ । **ಸೋಮಃ**— ಸೋಮದೇವನು । **ನಃ**— ನಮ್ಮ । **ತನ್ವಂ**— ಶರೀರವನ್ನು । **ಪುನಃ**— ತಿರುಗಿಯೂ । **ದದಾತು**— ಕೊಡಲಿ । **ಯಾ**— ಯಾವುದು । **ಸ್ವಸ್ತಿಃ**— ಕಲ್ಯಾಣಕಾರಕವೆಂದು ಹೇಳಲ್ಪಡುವುದೋ ಅಂತಹ ಮಂಗಳವನ್ನೂ । **ಪಥ್ಯಾಂ**— ವಾಕ್‌ಶಕ್ತಿಯನ್ನೂ । **ಪೂಷಾ**— ಪೂಷದೇವನು ನಮಗೆ ಒದಗಿಸಲಿ.

ಭಾವಾರ್ಥ

ಪೃಥ್ವೀದೇವಿಯು ನಮಗೆ ಪ್ರಾಣವನ್ನು ಕೊಡಲಿ. ದ್ಯುಲೋಕಾಧಿದೇವತೆಯು ತಿರುಗಿಯೂ ನಮಗೆ ಪ್ರಾಣವನ್ನು ಕೊಡಲಿ. ಅಂತರಿಕ್ಷವು ನಮ್ಮನ್ನು ಪುನಃ ಬದುಕಿಸಲಿ. ಸೋಮದೇವನು ನಮ್ಮ ಶರೀರವನ್ನು ಪುನಃ ಕೊಡಲಿ. ಕಲ್ಯಾಣಕಾರಕಳಾದ ವಾಗ್ದೇವಿಯು ಕಲ್ಯಾಣವನ್ನುಂಟುಮಾಡಲಿ. ಪೂಷದೇವನು ನಮಗೆ ಪುಷ್ಟಿಯನ್ನು ಉಂಟುಮಾಡಲಿ.

## English Translation

May earth restore the (departed) soul to us : may the divine heaven, may the firmament (restore it) : may Soma restore the body to us : may Pushan restore to us speech, which is prosperity.

ಸಂಹಿತಾಪಾಠಃ

**ಶಂ ರೋದಸೀ ಸುಬಂಧವೇ ಯಹ್ವೀ ಋತಸ್ಯ ಮಾತರಾ ।**
**ಭರತಾಮಪ ಯದ್ರಪೋ ದ್ಯೌಃ ಪೃಥಿವಿ ಕ್ಷಮಾ ರಪೋ ಮೋ ಷು ತೇ ಕಿಂ ಚನಾಮಮತ್ ॥ ೮ ॥**

ಪದಪಾಠಃ

**ಶಂ । ರೋದಸೀ ಇತಿ । ಸುಽಬಂಧವೇ । ಯಹ್ವೀ ಇತಿ । ಋತಸ್ಯ । ಮಾತರಾ ।**
**ಭರತಾಂ । ಅಪ । ಯತ್ । ರಪಃ । ದ್ಯೌಃ । ಪೃಥಿವಿ । ಕ್ಷಮಾ । ರಪಃ । ಮೋ ಇತಿ । ಸು । ತೇ । ಕಿಂ । ಚನ । ಆಮಮತ್ ॥ ೮ ॥**

ಸಾಯಣಭಾಷ್ಯಂ

ಇದಮಾದಿಭಿಸ್ತಿಸೃಭಿರ್ದ್ಯಾವಾಪೃಥಿವ್ಯೋಃ ಸ್ತುತಿಃ । ರೋದಸೀ ದ್ಯಾವಾಪೃಥಿವ್ಯೌ ಸುಬಂಧವೇ ಶಂ ಸುಖಂ ಪ್ರಯಚ್ಛತಾಂ । ಕೀದೃಶ್ಯೌ ತೇ । ಯಹ್ವೀ ಮಹತ್ಯೌ ಋತಸ್ಯ ಯಜ್ಞಸ್ಯೋದಕಸ್ಯ ವಾ ಮಾತರಾ ನಿರ್ಮಾತ್ರ್ಯೌ । ಯದ್ರಪಃ ಪಾಪಂ ಕೃಚ್ಛ್ರಮಸ್ತಿ ತದಪ ಭರತಾಂ । ಅಪಹರತಾಂ । ಅಪನಯತಾಂ । ಹೇ ದ್ಯೌಃ ಹೇ ಪೃಥಿವಿ ಹೇ ದ್ಯಾವಾಪೃಥಿವ್ಯೌ ಕ್ಷಮಾ ಕ್ಷಮಾಯಾಂ ಸತ್ಯಾಂ । ಯದ್ವಾ ಕ್ಷಮಾ ಪೃಥಗಪ್ಯುಚ್ಯತೇ । ಕ್ಷಮಾಪ್ಯಪಹರತು। ಏವಮುಕ್ತ್ವಾ ಸುಬಂಧುಂ ಬಂಧ್ವಾದಯೋ ಬ್ರುವತೇ। ಹೇ ಸುಬಂಧೋ ತೇ ತ್ವಾಂ ಮೋ ಷು ಮೈವ ಸು ಸುಷ್ಠು ಕಿಂ ಚನ ಪರಂ ರಪಃ ಕೃಚ್ಛ್ರಮಾಮಮತ್ । ಹಿನಸ್ತು ॥

ಪ್ರತಿಪದಾರ್ಥ

**ಯಹ್ವೀ**— ಮಹತ್ಸ್ವರೂಪವುಳ್ಳವರೂ । **ಋತಸ್ಯ**—ಯಜ್ಞಕ್ಕೆ । **ಮಾತರಾ**—ನಿರ್ಮಾಪಕರೂ ಆದ। **ರೋದಸೀ**—ದ್ಯಾವಾಪೃಥಿವಿಗಳು । **ಸುಬಂಧವೇ**—ಸುಬಂಧುವಿಗೆ । **ಶಂ**—ಸುಖವನ್ನು ಒದಗಿಸಲಿ । **ಯತ್**—ಯಾವ । **ರಪಃ**—ಪಾಪಕಾರ್ಯವಿದೆಯೋ (ಯಾವ ರೋಗವಿದೆಯೋ) ಅದನ್ನು । **ಅಪ ಭರತಾಂ**—ನಾಶಮಾಡಲಿ। **ದ್ಯೌಃ**—ಎಲೈ ದ್ಯುಲೋಕಾಧಿದೇವಿಯೇ । **ಪೃಥಿವಿ**—ಎಲೈ ಪೃಥ್ವಿಯೇ । **ಕ್ಷಮಾ ರಪಃ**—ಪೃಥ್ವೀಸಂಬಂಧವಾದ ಸಕಲ ರೋಗಗಳನ್ನೂ ನಾಶಮಾಡಿರಿ । **ತೇ**—(ಎಲೈ ಸುಬಂಧುವೇ) ನಿನ್ನನ್ನು । **ಕಿಂ ಚನ**—ಯಾವ ಪಾಪವೂ (ರೋಗವೂ) । **ಮೋ ಷು ಆಮಮತ್**—ಹಿಂಸಿಸದಿರಲಿ.

ಭಾವಾರ್ಥ

ಮಹತ್ಸ್ವರೂಪವುಳ್ಳವರೂ, ಯಜ್ಞಕ್ಕೆ ನಿರ್ಮಾಪಕರೂ ಆದ ದ್ಯಾವಾಪೃಥಿವಿಗಳು ಸುಬಂಧುವಿಗೆ ಸುಖವನ್ನು ಒದಗಿಸಲಿ, ಸಕಲ ಪಾಪಗಳನ್ನೂ ನಾಶಮಾಡಲಿ. ಅವರ ಅನುಗ್ರಹದಿಂದ ಸುಬಂಧುವನ್ನು ಯಾವ ಪಾಪವೂ ಹಿಂಸಿಸದಿರಲಿ.

English Translation

May the great heaven and earth, the parents of sacrifice, (grant) happiness to Subandhu : heaven and earth, remove all iniquity ; let heaven (take away) iniquity : may no ill ever approach you.

ಸಂಹಿತಾಪಾಠಃ

ಅವ ದ್ವಕೇ ಅವ ತ್ರಿಕಾ ದಿವಶ್ಚರಂತಿ ಭೇಷಜಾ ।
ಕ್ಷಮಾ ಚರಿಷ್ಣ್ವೇಕಕಂ ಭರತಾಮಪ ಯದ್ರಪೋ ದ್ಯೌಃ ಪೃಥಿವಿ ಕ್ಷಮಾ
ರಪೋ ಮೋ ಷು ತೇ ಕಿಂ ಚ ನಾಮಮತ್ ॥೯ ॥

ಪದಪಾಠಃ

ಅವ । ದ್ವಕೇ ಇತಿ । ಅವ । ತ್ರಿಕಾ । ದಿವಃ । ಚರಂತಿ । ಭೇಷಜಾ ।

**ಕ್ಷ್ಮಮಾ । ಚರಿಷ್ಣು । ಏಕಕಂ । ಭರತಾಂ । ಅಪ । ಯತ್ । ರಪಃ । ದ್ಯೌಃ । ಪೃಥಿವಿ । ಕ್ಷ್ಮಮಾ । ರಪಃ ।**
**ಮೋ ಇತಿ । ಸು । ತೇ । ಕಿಂ । ಚನ । ಆಮಮತ್ ॥ ೯ ॥**

ಸಾಯಣಭಾಷ್ಯಂ

**ದಿವೋ ದ್ಯುಲೋಕಾದ್ಭೇಷಜಾ ಭೇಷಜಾನಿ ದ್ವಕೇ ದ್ವಿಕಂ ತ್ರಿಕಾ ತ್ರಿಕಂ ಚಾವ ಚರಂತಿ। ಅತ್ರಾ-ಶ್ವಿನೌ ದ್ವಿಕಮವಚರತಃ । ಇಳಾ ಸರಸ್ವತೀ ಭಾರತೀ ತ್ರಿಕಮವಚರಂತಿ । ಕ್ಷ್ಮಮಾ ಕ್ಷ್ಮಮಾಯಾಂ ಚರಿಷ್ಣು ಚರತ್ಯೇಕಕಮೇಕಂ ಭೇಷಜಮಿತ್ಯಭಿಪ್ರಾಯಮಾಹ । ತಾನಿ ಸರ್ವಾಣಿ ಸುಬಂಧೋಃ ಪ್ರಾಣಂ ರಕ್ಷಂತ್ವಿತಿ ಶೇಷಃ ॥**

ಪ್ರತಿಪದಾರ್ಥ

**ದಿವಃ**—ದ್ಯುಲೋಕದಿಂದ । **ಭೇಷಜಾ**—ರೋಗನಾಶಕರವಾದ ಔಷಧಿಗಳು । **ದ್ವಿಕೇ**—ಅಶ್ವಿನೀದೇವತೆಗಳೆಂಬ ಎರಡು ರೂಪಗಳಲ್ಲೂ । **ತ್ರಿಕಾ**—ಇಳಾ, ಸರಸ್ವತೀ ಮತ್ತು ಭಾರತೀ ಎಂಬ ಮೂರು ರೂಪಗಳಲ್ಲೂ । **ಅವ ಚರಂತಿ**—ಸಂಚರಿಸುತ್ತವೆ (ಪೃಥ್ವಿಗೆ ಇಳಿದುಬರುತ್ತವೆ) । **ಕ್ಷ್ಮಮಾ**—ಪೃಥ್ವಿಯಲ್ಲಿ । **ಏಕಕಂ**—ಒಂದೇ ರೂಪದಲ್ಲಿ । **ಚರಿಷ್ಣು**—ಸಂಚರಿಸುತ್ತದೆ । **ಯತ್ ರಪಃ**—ಯಾವ (ರೋಗ) ಪಾಪಗಳಿವೆಯೋ ಅವನ್ನು । **ಅಪ ಭರತಾಂ**—ನಾಶಮಾಡಲಿ । **ದ್ಯೌಃ**—ಎಲೈ ದ್ಯುಲೋಕಾಧಿದೇವಿಯೇ । **ಪೃಥಿವಿ**—ಎಲೈ ಪೃಥ್ವಿಯೇ । **ಕ್ಷ್ಮಮಾ ರಪಃ**—ಪೃಥ್ವೀಸಂಬಂಧವಾದ ಸಕಲ ಪಾಪ (ರೋಗ) ಗಳನ್ನೂ ನಾಶಮಾಡಿರಿ । **ತೇ**—(ಎಲೈ ಸುಬಂಧುವೇ) ನಿನ್ನನ್ನು । **ಕಿಂ ಚ ನ**—ಯಾವ ಪಾಪವೂ (ರೋಗವೂ) । **ಮೋ ಷು ಆಮಮತ್**—ಹಿಂಸಿಸದಿರಲಿ.

ಭಾವಾರ್ಥ

ರೋಗನಾಶಕರಗಳಾದ ಔಷಧಿಗಳು ಅಶ್ವಿನೀದೇವತೆಗಳೆಂಬ ಎರಡು ರೂಪಗಳಲ್ಲೂ, ಇಳಾ, ಸರಸ್ವತೀ ಮತ್ತು ಭಾರತೀ ಎಂಬ ಮೂರು ರೂಪಗಳಲ್ಲೂ ದ್ಯುಲೋಕದಿಂದ ಪೃಥ್ವಿಗೆ ಇಳಿದುಬರುತ್ತವೆ ಮತ್ತು ಪೃಥ್ವಿಯಲ್ಲಿ ಮಾತ್ರ ಒಂದೇ ರೂಪವುಳ್ಳದ್ದಾಗಿರುತ್ತದೆ. ಎಲೈ ದ್ಯಾವಾಪೃಥ್ವಿಗಳೇ, ಪೃಥ್ವೀಸಂಬಂಧವಾದ ಸಕಲ ಪಾಪಗಳನ್ನೂ ನಾಶಮಾಡಿರಿ. ಎಲೈ ಸುಬಂಧುವೇ, ನಿನ್ನನ್ನು ಯಾವ ಪಾಪವೂ ಹಿಂಸಿಸದಿರಲಿ.

English Translation

Remedies come down from heaven by tows and by threes : one wanders singly in heaven ; heaven and earth, remove all iniquity : let heaven (takc away) iniquity : may no ill ever approach you.

ಸಂಹಿತಾಪಾಠಃ

**ಸಮಿಂದ್ರೇರಯ ಗಾಮನಡ್ವಾಹಂ ಯ ಆವಹದುಶೀನರಾಣ್ಯಾ ಅನಃ ।**
**ಭರತಾಮಪ ಯದ್ರಪೋ ದ್ಯೌಃ ಪೃಥಿವಿ ಕ್ಷ್ಮಮಾ ರಪೋ ಮೋ ಷು ತೇ ಕಿಂ ಚನಾಮಮತ್ ॥ ೧೦ ॥**

ಪದಪಾಠಃ

**ಸಂ । ಇಂದ್ರ । ಈರಯ । ಗಾಂ । ಅನಡ್ವಾಹಂ । ಯಃ । ಆ । ಅವಹತ್ । ಉಶೀನರಾಣ್ಯಾಃ । ಅನಃ । ಭರತಾಂ । ಅಪ । ಯತ್ । ರಪಃ । ದ್ಯೌಃ । ಪೃಥಿವಿ । ಕ್ಷಮಾ । ರಪಃ । ನೋ ಇತಿ । ಸು । ತೇ । ಕಿಂ । ಚನ । ಆಮಮತ್ ॥ ೧೧ ॥**

ಸಾಯಣಭಾಷ್ಯಂ

**ಹೇ ಇಂದ್ರ ಸಮೀರಯ ಪ್ರೇರಯ । ಕಿಂ । ಗಾಂ ಗಂತಾರಮನಡ್ವಾಹಮನೋವಹನಸಮರ್ಥಂ। ಯೋಽನಡ್ವಾನಾವಹತ್ ಆವಹತ್ಯಸ್ಮಾನ್ಪ್ರತಿ । ಕಿಂ । ಅನಃ ಶಕಟಂ । ಕಸ್ಯ । ಉಶೀನರಾಣ್ಯಾ ಏತನ್ನಾಮಿಕಾಯಾ ಓಷಧೇಃ । ಯಯೋರ್ತಮನುಲಿಂಪಂತಿ ಸೋಽಶೀನರಾಣೀ । ಭರತಾಮಿತ್ಯಾದಿ ಗತಂ ॥**

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ಉಶೀನರಾಣ್ಯಾಃ**—ಉಶೀನರಾಣೀ ಎಂಬ ಓಷಧಿಯನ್ನು ತುಂಬಿರುವ । **ಅನಃ**—ಬಂಡಿಯನ್ನು । **ಯಃ**—ಯಾವ ಎತ್ತು । **ಆವಹತ್**—ಹೊತ್ತುಕೊಂಡು ಬರುವುದೋ ಅಂತಹ । **ಗಾಂ**—ಸುಖವಾಗಿ ಸಂಚರಿಸುವ । **ಅನಡ್ವಾಹಂ**—ಎತ್ತನ್ನು । **ಸಮೀರಯ**—ನಮ್ಮಲ್ಲಿಗೆ ಕಳುಹಿಸು । **ಯತ್ ರಪಃ**—ಯಾವ ರೋಗರೂಪವಾದ ಪಾಪವಿದೆಯೋ ಅದೆಲ್ಲವೂ । **ಅಪ ಭರತಾಂ**—ನಾಶವಾಗಲಿ । **ದ್ಯೌಃ**—ಎಲೈ ದ್ಯುಲೋಕಾಧಿದೇವತೆಯೇ । **ಪೃಥಿವಿ**—ಎಲೈ ಪೃಥ್ವಿಯೇ । **ಕ್ಷಮಾ ರಪಃ**—ಪೃಥ್ವೀಸಂಬಂಧವಾದ ಸಕಲ ರೋಗಗಳನ್ನೂ ನಾಶಮಾಡಿರಿ । (ಎಲೈ ಸುಬಂಧುವೇ) **ತೇ**—ನಿನ್ನನ್ನು । **ಕಿಂ ಚನ**—ಯಾವ ರೋಗವೂ । **ನೋ ಷು ಆಮಮತ್**—ಹಿಂಸಿಸದಿರಲಿ.

ಭಾವಾರ್ಥ

ಎಲೈ ಇಂದ್ರನೇ, ಉಶೀನರಾಣೀ ಎಂಬ ಓಷಧಿಯನ್ನು ತುಂಬಿರುವ ಬಂಡಿಯನ್ನು ಯಾವ ಎತ್ತು ಹೊತ್ತುಕೊಂಡುಬರುವುದೋ ಅಂತಹ ಸುಖವಾಗಿ ಸಂಚರಿಸುವ ಎತ್ತನ್ನು ನಮ್ಮಲ್ಲಿಗೆ ಕಳುಹಿಸಿಕೊಡು. ಯಾವ ರೋಗರೂಪವಾದ ಪಾಪವಿದೆಯೋ ಅವೆಲ್ಲವೂ ನಾಶವಾಗಲಿ. ಎಲೈ ದ್ಯುಲೋಕಾಧಿದೇವಿಯೇ, ಎಲೈ ಪೃಥ್ವಿಯೇ, ಪೃಥ್ವೀಸಂಬಂಧವಾದ ಸಕಲ ರೋಗಗಳನ್ನೂ ನಾಶಮಾಡಿರಿ. ಎಲೈ ಸುಬಂಧುವೇ ನಿನ್ನನ್ನು ಯಾವ ರೋಗವೂ ಹಿಂಸಿಸದಿರಲಿ.

English Translation

Send, Indra, tbe active ox, who may bring the cart (leaden with) the Ushinarani grass : heaven and earth, remove all iniquity ; let heaven (take away) iniquity ; may no ill ever approach you.

## ಅರವತ್ತನೆಯ ಸೂಕ್ತ

ಸಾಯಣಭಾಷ್ಯಂ

**ಆ ಜನಮಿತಿ ದ್ವಾದಶರ್ಚಮಷ್ಟಾದಶಂ ಸೂಕ್ತಂ । ಗೌಪಾಯನಾ ಬಂಧ್ವಾದಯೋ ಋಷಯಃ । ಷಷ್ಠ್ಯಾಃ ಸ್ತ್ವಗಸ್ತ್ಯಸ್ಯ ಸ್ವಸೈಷಾಂ ಮಾತರ್ಷಿಕಾ । ಆದಿತಃ ಪಂಚ ಗಾಯತ್ರ್ಯಃ । ಅಷ್ಟಮೀನವಮ್ಯೌ**

**ಪಂಕ್ತೀ ಶಿಷ್ಟಾ ಅನುಷ್ಟುಭಃ । ಆದಿತಶ್ಚತಸೃಣಾಮಸಮಾತಿನಾಮ್ನೋ ರಾಜ್ಞಃ ಸ್ತೂಯಮಾನತ್ವಾತ್ ಸ ಏವ ದೇವತಾ । ಪಂಚಮ್ಯಾ ಇಂದ್ರಃ । ಷಷ್ಠ್ಯಾ ಅಪ್ಯಸಮಾತಿಃ । ತತಃ ಪಂಚಾನಾಂ ಸುಬಂಧೋರ್ಜೀವಿತಾಹ್ವಾನರೂಪೋಽರ್ಥೋ ದೇವತಾ । ಅಯಂ ಮೇ ಹಸ್ತ ಇತ್ಯಸ್ಯಾ ಲಬ್ಧಸಂಜ್ಞಸ್ಯ ಸುಬಂಧೋಃ ಸ್ಪರ್ಶನಹೇತುಭೂತೋ ದೇವತಾ । ತಥಾ ಚಾನುಕ್ರಾಂತಂ । ಆ ಜನಮಿತಿ ದ್ವಾದಶರ್ಚಮಾನುಷ್ಟುಭಂ ಚತಸೃಭಿರಸಮಾತಿಮಸ್ತುವನ್ಪಂಚಮ್ಯೇಂದ್ರಂ ಷಷ್ಠ್ಯಾಗಸ್ತ್ಯಸ್ಯ ಸ್ವಸಾ ಮಾತೈಷಾಂ ರಾಜಾನಮಸ್ತೌತ್ಪರಾಭಿಃ ಸುಬಂಧೋರ್ಜೀವನಮಾಹ್ವಯಂಸ್ತಮಂತ್ಯಯಾ ಲಬ್ಧಸಂಜ್ಞಮಸ್ಪೃಶನ್ ಪಂಚಮ್ಯಾದ್ಯಾ ಗಾಯತ್ರ್ಯೋಽಷ್ಟಮ್ಯಾದ್ಯೇ ಪಂಕ್ತೀ ಇತಿ ॥**

ಅನುವಾದವು— **ಆ ಜನಂ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿನೆಂಟನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೋಪಾಯನಪುತ್ರರಾದ ಬಂಧ್ವಾದಿಗಳು ಋಷಿಗಳು; ಈ ಸೂಕ್ತದ ಆರನೆಯ ಋಕ್ಕಿಗೆ ಅಗಸ್ತ್ಯಋಷಿಯ ಸೊಸೆಯೂ ಈ ಬಂಧ್ವಾದಿಗಳ ತಾಯಿಯೂ ಆದ ಓರ್ವ ಸ್ತ್ರೀಯು ಋಷಿಯು. ಈ ಸೂಕ್ತದ ಮೊದಲಿನ ಐದು ಋಕ್ಕುಗಳು ಗಾಯತ್ರೀಛಂದಸ್ಕವು; ಎಂಟು ಮತ್ತು ಒಂಭತ್ತನೆಯ ಋಕ್ಕುಗಳು ಪಂಕ್ತಿಶ್ಛಂದಸ್ಕವು; ಉಳಿದ ಋಕ್ಕುಗಳು ಅನುಷ್ಟುಪ್‌ಛಂದಸ್ಕವು. ಈ ಸೂಕ್ತದ ಮೊದಲಿನ ನಾಲ್ಕು ಋಕ್ಕುಗಳಲ್ಲಿ ಅಸಮಾತಿ ಎಂಬ ರಾಜನು ಸ್ತುತಿಸಲ್ಪಟ್ಟಿರುವುದರಿಂದ ಈ ನಾಲ್ಕು ಋಕ್ಕುಗಳಿಗೆ ಈ ಅಸಮಾತಿಯೇ ದೇವತೆಯು; ಐದನೆಯ ಋಕ್ಕಿಗೆ ಇಂದ್ರನು ದೇವತೆಯು, ಆರನೇ ಋಕ್ಕಿಗೆ ಅಸಮಾತಿಯು ದೇವತೆಯು. ಅದರ ಮುಂದಿನ ಐದು ಋಕ್ಕುಗಳಲ್ಲಿ (೭-೧೧ ಋಕ್ಕುಗಳಲ್ಲಿ) ಸುಬಂಧುವಿನ ಜೀವಿತಾಹ್ವಾನವು ಪಠಿತವಾಗಿರುವುದರಿಂದ ಆ ಅರ್ಥವೇ ದೇವತೆಯು. **ಅಯಂ ಮೇ ಹಸ್ತಃ** ಎಂಬ ಹನ್ನೆರಡನೆಯ ಋಕ್ಕಿಗೆ ಪುನಃ ಚೈತನ್ಯವನ್ನು ಪಡೆದು ಸುಬಂಧುವನ್ನು ಸ್ಪರ್ಶನಮಾಡಿರುವ ವಿಷಯವೇ ದೇವತೆಯು. ಅನುಕ್ರಮಣಿಕೆಯಲ್ಲಿ— **ಆ ಜನಮಿತಿ ದ್ವಾದಶರ್ಚಮಾನುಷ್ಟುಭಂ ಚತಸೃಭಿರಸಮಾತಿಮಸ್ತುವನ್ಪಂಚಮ್ಯೇಂದ್ರಂ ಷಷ್ಠ್ಯಾಗಸ್ತ್ಯಸ್ಯ ಸ್ವಸಾ ಮಾತೈಷಾಂ ರಾಜಾನಮಸ್ತೌತ್ಪರಾಭಿಃ ಸುಬಂಧೋರ್ಜೀವನಮಾಹ್ವಯಂಸ್ತಮಂತ್ಯಯಾ ಲಬ್ಧಸಂಜ್ಞಮಸ್ಪೃಶನ್ ಪಂಚಾದ್ಯಾ ಗಾಯತ್ರ್ಯೋಽಷ್ಟಮ್ಯಾದ್ಯೇ ಪಂಕ್ತೀ** ಎಂದು ಹೇಳಿರುವುದು.

## ಸೂಕ್ತ—೬೦

ಮಂಡಲ—೧೦ ॥ ಅನುವಾಕ—೪ ॥ ಸೂಕ್ತ—೬೦ ॥
ಅಷ್ಟಕ—೮ ॥ ಅಧ್ಯಾಯ—೧ ॥ ವರ್ಗ—೨೪,೨೫ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥

ಋಷಿಃ—ಬಂಧುಃ ಶ್ರುತಬಂಧುರ್ವಿಪ್ರಬಂಧುರ್ಗೌಪಾಯನಾಃ । ೬. ಅಗಸ್ತ್ಯಸ್ಯ ಸ್ವಸೈಷಾಂ ಮಾತಾ ॥

ದೇವತಾ—೧-೪,೬ ಅಸಮಾತೀ ರಾಜಾ । ೫. ಇಂದ್ರಃ । ೭-೧೧. ಸುಬಂಧೋರ್ಜೀವಿತಾಹ್ವಾನಂ। ೧೨. ಹಸ್ತಃ ॥

ಛಂದಃ—೧-೫. ಗಾಯತ್ರೀ । ೬, ೭, ೧೦-೧೨. ಅನುಷ್ಟುಪ್ । ೮,೯. ಪಂಕ್ತಿಃ ॥

ಸಂಹಿತಾಪಾಠಃ

**ಆ ಜನಂ ತ್ವೇಷಸಂದೃಶಂ ಮಾಹೀನಾನಾಮುಪಸ್ತುತಂ ।**

ಅಗನ್ಮ ಬಿಭ್ರತೋ ನಮಃ ॥ ೧ ॥

ಪದಪಾಠಃ

ಆ । ಜನಂ । ತ್ವೇಷಽಸಂದೃಶಂ । ಮಾಹೀನಾನಾಂ । ಉಪಽಸ್ತುತಂ ।

ಅಗನ್ಮ । ಬಿಭ್ರತಃ । ನಮಃ ॥ ೧ ॥

ಸಾಯಣಭಾಷ್ಯಂ

ಇದಮಾದಿಭಿಸ್ತಿಸೃಭೀ ರಾಜಾನಂ ಸ್ತುವಂತಿ । ವಯಂ ಬಂಧ್ವಾದಯೋ ಜನಂ ಜನಪದಮಸುನೀತಿಸ್ವಭೂತಮಾಗನ್ಮ । ಅಭಿಗತಾಃ ॥ ಗಮೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ । ಮ್ವೋಶ್ಚೇತಿ ಮಕಾರಸ್ಯ ನಕಾರಃ ॥ ಕೀದೃಶಂ ಜನಂ । ತ್ವೇಷಸಂದೃಶಂ ದೀಪ್ತದರ್ಶನಂ ಮಾಹೀನಾನಾಂ ಮಹತಾಮುಪಸ್ತುತಮುಪಗತಸ್ತುತಿಂ ॥ ತಾದೌ ಚೇತಿ ಗತೇಃ ಪ್ರಕೃತಿಸ್ವರಃ ॥ ಕೀದೃಶಾ ವಯಂ । ನಮೋ ನಮಸ್ಕಾರಂ ಬಿಭ್ರತೋ ಧಾರಯಂತಃ । ಕುರ್ವಂತ ಇತ್ಯರ್ಥಃ । ಯದ್ವಾ । ಜನಮಸಮಾತಿಮಿತ್ಯರ್ಥಃ । ಶಿಷ್ಟಂ ಸಮಾನಂ । ನಮೋ ಬಿಭ್ರತ ಇತಿ ರಾಜಕೃತೇ ನಮಸ್ಕಾರಂ ಧಾರಯಂತ ಇತ್ಯರ್ಥಃ ॥

ಪ್ರತಿಪದಾರ್ಥ

(**ವಯಂ**—ನಾವು) । **ನಮಃ**—ನಮಸ್ಕಾರವನ್ನು । **ಬಿಭ್ರತಃ**—ಮಾಡುತ್ತಾ । **ತ್ವೇಷಸಂದೃಶಂ**—ಪ್ರಕಾಶಮಾನವಾದ ರೂಪವುಳ್ಳವನೂ । **ಮಾಹೀನಾನಾಂ**—ಮಹಾತ್ಮರಿಂದಲೂ । **ಉಪಸ್ತುತಂ**—ಪ್ರಶಂಸಿತನಾದವನೂ ಆದ । **ಜನಂ**—ಅಸಮಾತಿಯೆಂಬ ರಾಜನಲ್ಲಿಗೆ । **ಆ ಅಗನ್ಮ**—ಬಂದಿದ್ದೇವೆ.

ಭಾವಾರ್ಥ

ರಾಜನಿಗೆ ಯೋಗ್ಯವಾದ ನಮಸ್ಕಾರವನ್ನು ಮಾಡುತ್ತಾ ಪ್ರಕಾಶಮಾನವಾದ ರೂಪವುಳ್ಳವನೂ, ಮಹಾತ್ಮರಿಂದಲೂ ಪ್ರಶಂಸಿತನಾದವನೂ ಆದ ಅಸಮಾತಿಯೆಂಬ ರಾಜನಲ್ಲಿಗೆ ನಾವು ಬಂದಿದ್ದೇವೆ.

## English Translation

We have come to the person of splendid appearance, the honoured of the mighty, bringing him reverential homage.

ಸಂಹಿತಾಪಾಠಃ

ಅಸಮಾತಿಂ ನಿತೋಶನಂ ತ್ವೇಷಂ ನಿಯಯಿನಂ ರಥಂ ।

ಭಜೇರಥಸ್ಯ ಸತ್ಪತಿಂ ॥ ೨ ॥

ಪದಪಾಠಃ

ಅಸಮಾತಿಂ । ನಿಽತೋಶನಂ । ತ್ವೇಷಂ । ನಿಽಯಯಿನಂ । ರಥಂ ।

ಭಜೇಽರಥಸ್ಯ । ಸತ್ಽಪತಿಂ ॥ ೨ ॥

ಸಾಯಣಭಾಷ್ಯಂ

ಅಸಮಾತಿಂ ರಾಜಾನಂ ನಿತೋಶನಂ ಶತ್ರೂಣಾಂ ಹಂತಾರಂ । ನಿತೋಶತಿರ್ವಧಕರ್ಮಾ। ತ್ವೇಷಂ ದೀಪ್ತಂ । ನಿಯಯಿನಂ ರಥಮಿತ್ಯುಪಮಾಪ್ರಧಾನೋ ನಿರ್ದೇಶಃ । ರಥವತ್ಸರ್ವಾಭಿಮತಪ್ರಾಪ್ತಿಸಾಧನಂ ಭಜೇರಥಸ್ಯೈತನ್ನಾಮಕಸ್ಯ ರಾಜ್ಞೋ ವಂಶೇ ಜಾತಂ । ಯದ್ವಾ । ಏತನ್ನಾಮಾ ಕಶ್ಚಿದಸ್ಯ ಶತ್ರುಃ । ತಸ್ಯ ನಿಯಯಿನಂ ॥ ಹಲದಂತಾತ್ । ಪಾ. ೬-೩-೯ । ಇತಿ ಸಪ್ತಮ್ಯಾ ಅಲುಕ್ ॥ ಸತ್ಪತಿಂ ಸತಾಂ ಪಾಲಕಂ ॥

ಪ್ರತಿಪದಾರ್ಥ

**ನಿತೋಶನಂ**—ಶತ್ರುನಾಶಕನೂ । **ತ್ವೇಷಂ**—ಪ್ರಕಾಶಯುತನೂ । **ನಿಯಯಿನಂ**—ಉತ್ತಮವಾಗಿ ಚಲಿಸುವ । **ರಥಂ**—ರಥದಂತೆ ಇಷ್ಟಾರ್ಥವನ್ನು ಒದಗಿಸುವವನೂ । **ಭಜೇರಥಸ್ಯ**—ಭಜೇರಥನ ವಂಶೋತ್ಪನ್ನನೂ। ಅಥವಾ **ಭಜೇರಥಸ್ಯ ನಿಯಯಿನಂ**—ಭಜೇರಥನೆಂಬ ಶತ್ರುನಾಶಕನೂ । **ಸತ್ಪತಿಂ**—ಸಜ್ಜನರ ಪಾಲಕನೂ ಆದ । **ಅಸಮಾತಿಂ**--ಅಸಮಾತಿಯಲ್ಲಿಗೆ (ಬಂದಿದ್ದೇವೆ).

ಭಾವಾರ್ಥ

ಶತ್ರುನಾಶಕನೂ, ಪ್ರಕಾಶಯುತನೂ, ಉತ್ತಮವಾಗಿ ಚಲಿಸುವ ರಥದಂತೆ ಇಷ್ಟಾರ್ಥವನ್ನು ಒದಗಿಸುವವನೂ ಭಜೇರಥನ ವಂಶೋತ್ಪನ್ನನೂ ಸಜ್ಜನರ ಪಾಲಕನೂ ಆದ ಅಸಮಾತಿಯಲ್ಲಿಗೆ ಬಂದಿದ್ದೇವೆ.

## English Translation

To Asamati, the destroyer (of foes), radiant, a quick-moving chariot (for the bringing of benefits), the descendant) of Bhajeratha, the protector of the good.

ಸಂಹಿತಾಪಾಠಃ

**ಯೋ ಜನಾನ್ಮಹಿಷಾँ ಇವಾತಿತಸ್ಥೌ ಪವೀರವಾನ್ ।**

**ಉತಾಪವೀರವಾನ್ಯುಧಾ ॥ ೩ ॥**

ಪದಪಾಠಃ

ಯಃ । ಜನಾನ್ । ಮಹಿಷಾನ್ಽಇವ । ಅತಿಽತಸ್ಥೌ । ಪವೀರವಾನ್ ।

ಉತ । ಅಪವೀರವಾನ್ । ಯುಧಾ ॥ ೩ ॥

ಸಾಯಣಭಾಷ್ಯಂ

ಯೋಽಸಮಾತಿರ್ಜನಾನ್ ಸ್ವವಿರೋಧಿಭೂತಾನತಿತಸ್ಥೌ ಅತಿಕ್ರಮ್ಯ ತಿಷ್ಠತಿ । ಪರಾಭಾವಯತೀತ್ಯರ್ಥಃ । ಕ ಇವ । ಮಹಿಷಾನ್ ಸಿಂಹ ಇವ । ಕೀದೃಶಃ ಸನ್ । ಪವೀರವಾನ್ । ಪವೀರ ಪವಿಃ। ಖಡ್ಗ-

ವಾನ್ । ಉತಾಪಿ ಚಾಪವೀರವಾನಪಗತಖಡ್ಗಃ ಸನ್ । ಶಸ್ತ್ರಸಾಹಾಯ್ಯಮಪಿ ಕದಾಚಿನ್ನಾಪೇಕ್ಷತ ಇತ್ಯರ್ಥಃ । ಕಿಂ ಕುರ್ವನ್ । ಯುಧಾ ಯೋಧನೇನ । ಯುದ್ಧೇನೇತ್ಯರ್ಥಃ ॥

ಪ್ರತಿಪದಾರ್ಥ

**ಪವೀರವಾನ್**—ಕತ್ತಿಯನ್ನು ಹೊಂದಿರಲಿ । **ಉತ**—ಅಥವಾ । **ಅಪವೀರವಾನ್**—ಕತ್ತಿಯನ್ನು ಹೊಂದದೇ ಇರಲಿ । **ಯಃ**—ಯಾವ ಅಸಮಾತಿಯು । **ಮಹಿಷಾನ್ ಇವ**—ಸಿಂಹವು ಕಾಡುಕೋಣಗಳನ್ನು ಕೊಲ್ಲುವಂತೆ (ಸುಲಭವಾಗಿ) । **ಜನಾನ್**—ಶತ್ರುಜನರನ್ನು । **ಯುಧಾ**—ಯುದ್ಧಮಾಡಿ । **ಅತಿತಸ್ಥೌ**—ಸೋಲಿಸಿ ನಾಶಮಾಡುವನೋ (ಆ ಅಸಮಾತಿಯಲ್ಲಿಗೆ ಬಂದಿದ್ದೇವೆ).

ಭಾವಾರ್ಥ

ಯಾವ ಅಸಮಾತಿಯು ತನ್ನಲ್ಲಿ ಖಡ್ಗವಿರಲಿ ಅಥವಾ ಖಡ್ಗವಿಲ್ಲದಿರಲಿ, ಸಿಂಹವು ಕಾಡುಕೋಣಗಳನ್ನು ಕೊಲ್ಲುವಷ್ಟು ಸುಲಭವಾಗಿ ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲುವನೋ ಆ ಅಸಮಾತಿಯಲ್ಲಿಗೆ ಬಂದಿದ್ದೇವೆ.

## English Translation

Who, whether armed or unarmed with a sword, overcomes adversaries in fight, as (a lion destroys) buffaloes.

ವಿಶೇಷವಿಷಯಗಳು

**ಪವೀರವಾನ್—ಪವಿಃ ಶಲ್ಯೋ ಭವತಿ । ಯದ್ವಿಪುನಾತಿ ಕಾಯಂ ತದ್ವತ್ಪವೀರಮಾಯುಧಂ ತದ್ವಾನಿಂದ್ರಃ ಪವೀರವಾನ್** । (ನಿ. ೧೨-೩೦) ಪವಿಃ ಎಂದರೆ ಶಲ್ಯವು, ಭರ್ಜಿಯು. ಏಕೆಂದರೆ ಅದು ಶರೀರದಲ್ಲಿ ಪ್ರವೇಶಿಸಿ ಅದನ್ನು ಸೀಳುವುದು. ಪವೀರವು ಎಂದರೆ ಮೊನಚಾದ ಆಯುಧವು.

ಸಂಹಿತಾಪಾಠಃ

ಯಸ್ಯೇಕ್ಷ್ವಾಕುರುಪ ವ್ರತೇ ರೇವಾನ್ಮರಾಯ್ಯೇಧತೇ ।
ದಿವೀವ ಪಂಚ ಕೃಷ್ಟಯಃ ॥ ೪ ॥

ಪದಪಾಠಃ

ಯಸ್ಯ । ಇಕ್ಷ್ವಾಕುಃ । ಉಪ । ವ್ರತೇ । ರೇವಾನ್ । ಮರಾಯೀ । ಏಧತೇ ॥
ದಿವಿಽಇವ । ಪಂಚ । ಕೃಷ್ಟಯಃ ॥ ೪ ॥

ಸಾಯಣಭಾಷ್ಯಂ

ಯಸ್ಯ ಜನಪದಸ್ಯೇಕ್ಷ್ವಾಕುಃ ರಾಜಾ ವ್ರತೇ ಕರ್ಮಣಿ ರಕ್ಷಣರೂಪ ಉಪೈಧತೇ ಪ್ರವರ್ಧತೇ । ಕೀದೃಶಃ ಸನ್ । ರೇವಾನ್ ರಯಿವಾನ್ ಮರಾಯೀ ಶತ್ರೂಣಾಂ ಮಾರಕಶ್ಚ ಸನ್ । ವಿಶೇಷಣದ್ವಯೇನ

**ಜನಾನಾಂ ದಾನಾದಿರೂಪೇಣ ಧನಲಾಭಃ ಪರರಾಜೋಪದ್ರವಾಪತ್ತಿಶ್ಚೋಕ್ತಾ ಭವತಿ । ಏವಾ ಸತಿ ತದ್ವಿಷಯಸ್ಥಾಃ ಪಂಚ ಕೃಷ್ಟಯೋ ನಿಷಾದಪಂಚಮಾಶ್ಚತ್ವಾರೋ ವರ್ಣಾ ದಿವೀವ ದ್ಯುಲೋಕೇ ಯಥಾ ಸಂಕಲ್ಪಸಿದ್ಧಾಃ ಸಂತಃ ಸುಖಿನೋ ಭವಂತಿ ತದ್ವತ್ಸುಖಿನೋ ಭವಂತೀತಿ ಶೇಷಃ ॥**

ಪ್ರತಿಪದಾರ್ಥ

**ಯಸ್ಯ**—ಯಾವನ ರಾಜ್ಯದಲ್ಲಿ । **ಪಂಚ ಕೃಷ್ಟಯಃ**—ಐದು ಪಂಗಡದ ಜನರೂ । **ದಿವೀವ**—ದ್ಯುಲೋಕದಲ್ಲಿರುವಂತೆ ಸುಖವಾಗಿರಲು । **ರೇವಾನ್**—ಧನವಂತನೂ । **ಮರಾಯೀ**—ಶತ್ರುನಾಶಕನೂ ಆದ । **ಇಕ್ಷ್ವಾಕುಃ**—ಇಕ್ಷ್ವಾಕುವೆಂಬ ರಾಜನು । **ವ್ರತೇ**—ಪ್ರಜಾರಕ್ಷಣರೂಪವಾದ ಕರ್ಮದಲ್ಲಿ । **ಉಪ ಏಧತೇ**—ವೃದ್ಧಿಯನ್ನು ಹೊಂದುವನೋ (ಅಂತಹ ಅಸಮಾತಿಯಲ್ಲಿಗೆ ಬಂದಿದ್ದೇವೆ).

ಭಾವಾರ್ಥ

ಯಾವ ಅಸಮಾತಿಯ ರಾಜ್ಯದಲ್ಲಿ ಐದು ಪಂಗಡದ ಜನರೂ ದ್ಯುಲೋಕದಲ್ಲಿರುವಂತೆ ಸುಖವಾಗಿರಲು ಧನವಂತನೂ, ಶತ್ರುನಾಶಕನೂ ಆದ ಇಕ್ಷ್ವಾಕುವೆಂಬ ರಾಜನು ಪ್ರಜಾರಕ್ಷಣಾರೂಪವಾದ ಕರ್ಮದಲ್ಲಿ ವೃದ್ಧಿಯನ್ನು ಹೊಂದುವನೋ ಅಂತಹ ಅಸಮಾತಿಯಲ್ಲಿಗೆ ಬಂದಿದ್ದೇವೆ.

## English Translation

In the good government of whose (realm) the opulent and victorious Ikshwaku prospers (so that) the five orders of men (are as happy) as if they were in heaven.

ಸಂಹಿತಾಪಾಠಃ

ಇಂದ್ರ ಕ್ಷತ್ರಾಸಮಾತಿಷು ರಥಪ್ರೋಷ್ಠೇಷು ಧಾರಯ ।
ದಿವೀವ ಸೂರ್ಯಂ ದೃಶೇ ॥ ೫ ॥

ಪದಪಾಠಃ

ಇಂದ್ರ । ಕ್ಷತ್ರಾ । ಅಸಮಾತಿಷು । ರಥಽಪ್ರೋಷ್ಠೇಷು । ಧಾರಯ ।
ದಿವಿಽಇವ । ಸೂರ್ಯಂ । ದೃಶೇ ॥ ೫ ॥

ಸಾಯಣಭಾಷ್ಯಂ

**ಅನಯೇಂದ್ರಮಾಹ್ವಯತೇಽಸಮಾತ್ಯರ್ಥಂ । ಹೇ ಇಂದ್ರ ಕ್ಷತ್ರಾ ಕ್ಷತ್ರಾಣಿ ಬಲಾನಿ ರಥಪ್ರೋಷ್ಠೇಷ್ವಸಮಾತಿಷು ॥ ಏಕಸ್ಮಿನ್ಬಹುವಚನಂ ಪೂಜಾರ್ಥಂ ॥ ರಥಪ್ರೋಷ್ಠೇಽಸಮಾತೌ ಧಾರಯ । ದಿವೀವ ಸೂರ್ಯಂ ದಿವಿ ಯಥಾ ಸೂರ್ಯಂ ದೃಶೇ ಸರ್ವೇಷಾಂ ಸಂದರ್ಶನಾಯ ಸ್ಥಾಪಿತವಾನಸಿ ತದ್ವದತ್ರ ಬಲಂ ಧಾರಯ ॥**

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ | **ದೃಶೇ**—ಸಕಲರಿಗೂ ಗೋಚರವಾಗಲು | **ದಿವಿ**—ಅಂತರಿಕ್ಷದಲ್ಲಿ | **ಸೂರ್ಯಂ**–ಸೂರ್ಯನನ್ನು ಸ್ಥಾಪಿಸಿರುವಂತೆ | **ರಥಪ್ರೋಷ್ಠೇಷು**—ರಥಪ್ರೋಷ್ಠನ ಸಂತತಿಯ | **ಅಸಮಾತಿಷು**—ಅಸಮಾತಿಯೆಂಬ ರಾಜನಲ್ಲಿ | **ಕ್ಷತ್ರಾ**—ಬಲವನ್ನು | **ಧಾರಯ**—ಸ್ಥಾಪಿಸು.

ಭಾವಾರ್ಥ

ಎಲೈ ಇಂದ್ರನೇ, ಸಕಲರಿಗೂ ಗೋಚರವಾಗಲು ಅಂತರಿಕ್ಷದಲ್ಲಿ ಸೂರ್ಯನನ್ನು ಸ್ಥಾಪಿಸಿರುವಂತೆ, ರಥಪ್ರೋಷ್ಠನ ಸಂತತಿಗೆ ಸೇರಿದ ಅಸುಮಾತಿಯೆಂಬ ರಾಜನಲ್ಲಿ ಬಲವನ್ನು ಸ್ಥಾಪಿಸು.

English Translation

Maintain, Indra, vigour in the Rathaproshtha Asamatis, as (you maintain) the sun in heaven for the sight (of all).

ಸಂಹಿತಾಪಾಠಃ

ಅಗಸ್ತ್ಯಸ್ಯ ನದ್ಭ್ಯಃ ಸಪ್ತೀ ಯುನಕ್ಷಿ ರೋಹಿತಾ ।
ಪಣೀನ್ನ್ಯಕ್ರಮೀರಭಿ ವಿಶ್ವಾನ್ರಾಜನ್ನರಾಧಸಃ ॥ ೬ ॥

ಪದಪಾಠಃ

ಅಗಸ್ತ್ಯಸ್ಯ । ನತ್ಽಭ್ಯಃ । ಸಪ್ತೀ ಇತಿ । ಯುನಕ್ಷಿ । ರೋಹಿತಾ ।
ಪಣೀನ್ । ನಿ । ಅಕ್ರಮೀಃ । ಅಭಿ । ವಿಶ್ವಾನ್ । ರಾಜನ್ । ಅರಾಧಸಃ ॥ ೬ ॥

ಸಾಯಣಭಾಷ್ಯಂ

**ಅನಯಾಗಸ್ತ್ಯಸ್ಯ ಸ್ವಸಾ ಬಂಧ್ವಾದೀನಾಂ ಮಾತಾ ರಾಜಾನಂ ಸ್ತೌತಿ । ಹೇ ರಾಜನ್ನಸಮಾತೇ ತ್ವಮಗಸ್ತ್ಯಸ್ಯರ್ಷೇರ್ನದ್ಭ್ಯೋ ನಂದಯಿತೃಭ್ಯೋ ಬಂಧ್ವಾದಿಭ್ಯೋ ನಿಮಿತ್ತಭೂತೇಭ್ಯಸ್ತೇಷಾಂ ಧನಪ್ರಾಪ್ತಯೇ ಸಪ್ತೀ ಸರ್ಪಣಸ್ವಭಾವಾವಶ್ವೌ ರೋಹಿತಾ ರೋಹಿತವರ್ಣೌ ಯುನಕ್ಷಿ । ಯೋಜಯ ರಥೇ । ತಥಾ ಕೃತ್ವಾ ವಿಶ್ವಾನ್ ಸರ್ವಾನರಾಧಸೋಽದಾತೄನಯಜಮಾನಾನ್ಪಣೀನ್ವಣಿಜೋ ಲುಬ್ಧಕಾನ್ನಿಕೃಷ್ಟಂ ನಿತರಾಂ ವಾಭ್ಯಕ್ರಮೀಃ । ಅಭಿಭವ ॥**

ಪ್ರತಿಪದಾರ್ಥ

**ರಾಜನ್**—ಎಲೈ ಅಸಮಾತಿಯೇ | **ಅಗಸ್ತ್ಯಸ್ಯ**—ಅಗಸ್ತ್ಯಸ್ಯಋಷಿಯ | **ನದ್ಭ್ಯಃ**—ಬಂಧುಗಳಿಗೆಲ್ಲ ಧನವನ್ನು ಒದಗಿಸಲು | **ರೋಹಿತಾ**—ಹೊಂಬಣ್ಣದ | **ಸಪ್ತೀ**—ಅಶ್ವಗಳನ್ನು | **ಯುನಕ್ಷಿ**—ರಥಕ್ಕೆ ಯೋಜಿಸು |

**ಅರಾಧಸಃ**—ಯಜ್ಞಕರ್ತರಲ್ಲದ | **ವಿಶ್ವಾನ್ ಪಣೀನ್**—ಸಕಲ ಲೋಭಿಗಳನ್ನೂ | **ನಿ ಅಭಿ ಅಕ್ರಮೀಃ**—ಸೋಲಿಸಿ ನಾಶಪಡಿಸು.

ಭಾವಾರ್ಥ

ಎಲೈ ಅಸಮಾತಿಯೇ, ಅಗಸ್ತ್ಯಋಷಿಯ ಬಂಧುಗಳಿಗೆಲ್ಲ ಧನವನ್ನು ಒದಗಿಸಲು ಹೊಂಬಣ್ಣದ ಅಶ್ವಗಳನ್ನು ನಿನ್ನ ರಥಕ್ಕೆ ಯೋಜಿಸು. ಯಜ್ಞಕರ್ತರಲ್ಲದ ಸಕಲ ಲೋಭಿಗಳನ್ನೂ ಸೋಲಿಸಿ ನಾಶಪಡಿಸು.

## English Translation

Yoke the two red horses to your chariot, for the nephews of Agastya, and overcome, Raja, all the niggard withholders of oblations.

ಸಂಹಿತಾಪಾಠಃ

ಅಯಂ ಮಾತಾಯಂ ಪಿತಾಯಂ ಜೀವಾತುರಾಗಮತ್ ।
ಇದಂ ತವ ಪ್ರಸರ್ಪಣಂ ಸುಬಂಧವೇಹಿ ನಿರಿಹಿ ॥ ೭ ॥

ಪದಪಾಠಃ

ಅಯಂ । ಮಾತಾ । ಅಯಂ । ಪಿತಾ । ಅಯಂ । ಜೀವಾತುಃ । ಆ । ಅಗಮತ್ ।
ಇದಂ । ತವ । ಪ್ರಽಸರ್ಪಣಂ । ಸುಬಂಧೋ ಇತಿ ಸುಽಬಂಧೋ । ಆ । ಇಹಿ । ನಿಃ । ಇಹಿ ॥ ೭ ॥

ಸಾಯಣಭಾಷ್ಯಂ

ಅತ್ರ ಶೇಷೇ ಶಾಟ್ಯಾಯನಕಂ । ಅಥಾಗ್ನಿಂ ದ್ವೈಪದೇನ ಸೂಕ್ತೇನಾಸ್ತುವನ್ ಅಗ್ನಿಃ ಸ್ತುತ ಆಜಗಾಮ। ಆಗತ್ಯ ಚಾಹ ಕಿಂಕಾಮಾ ಮಾಗಚ್ಛತೇತಿ। ಸುಬಂಧೋರೇವಾಸುಂ ಪುನರ್ವನುಯಾಮೇತ್ಯ-ಬ್ರುವನ್ । ಏಷಾಂತಃಪರಿಧೀತ್ಯಬ್ರವೀತ್ತಮಾದಧ್ವಮಿತಿ । ತನ್ನಿರಾಹ । ಅಯಂ ಮಾತಾಯಂ ಪಿತೇತಿ । ಶೌನಕಶ್ಚ ।

ಸ್ತುತಃ ಸ ರಾಜಾ ಸುಪ್ರೀತಸ್ತಸ್ಥೌ ಗೌಪಾಯನಾನಭಿ ।
ಸೂಕ್ತೇನ ತೇಽಸ್ತುವನ್ನಗ್ನಿಂ ದ್ವೈಪದೇನ ಯಥಾತ್ರಿಷು ॥
ಅಥಾಗ್ನಿರಬ್ರವೀದೇತಾನಯಮಂತ್ರಃ ಪರಿಧ್ಯಸುಃ ।
ಸುಬಂಧೋರಸ್ಯ ಚೇಕ್ಷ್ವಾಕೋರ್ಮಯಾ ಗುಪ್ತೋ ಹಿತಾರ್ಥಿನಾ ॥
ಸುಬಂಧವೇ ಪ್ರದಾಯಾಸುಂ ಜೀವೇತ್ಯುಕ್ತ್ವಾ ಚ ಪಾವಕಃ ।
ಸ್ತುತೋ ಗೌಪಾಯನೈಃ ಪ್ರೀತೋ ಜಗಾಮ ತ್ರಿದಿವಂ ಪ್ರತಿ ॥
ಅಯಂ ಮಾತೇತಿ ಹೃಷ್ಟಾಸ್ತೇ ಸುಬಂಧೋರುಸುಮಾಹ್ವಯನ್ ।

**ಶರೀರಮಭಿನಿರ್ದಿಶ್ಯ ಸುಬಂಧೋಃ ಪತಿತಂ ಭುವಿ |**
**ಸೂಕ್ತಶೇಷಂ ಜಗುಶ್ಚಾಸ್ಯ ಚೇತಸೋ ಧಾರಣಾಯತ ಇತಿ ||**

(ಬೃ. ೭-೧೦೭ ರಿಂದ ೧೦೭೬)

**ಅಯಮಗ್ನಿರ್ಮಾತಾ | ಅಯಮೇವ ಪಿತಾ | ಅಯಂ ಜೀವಾತುರ್ಜೀವಯಿತಾಗಮತ್ | ಆಜಗಾಮ | ಅತೋ ಹೇ ಸುಬಂಧೋ ಜೀವಪರಿಧೌ ವರ್ತಮಾನ ಇದಂ ತವ ಶರೀರಂ ತವ ಪ್ರಸರ್ಪಣಂ| ಪ್ರಕರ್ಷೇಣ ಸರ್ಪಣಸಾಧನಂ| ಅತ ಇದಂ ಪ್ರತ್ಯೇಹಿ | ಆಗಚ್ಛ| ನಿರಿಹಿ| ನಿರ್ಗಚ್ಛ ಪರಿಧೇಃ ಸಕಾಶಾತ್ | ಅನ್ಯ ಏವಂ ವ್ಯಾಚಕ್ಷತೇ | ಹೇ ನಿರ್ಗತಪ್ರಾಣ ಸುಬಂಧೋ ಅಯಂ || ವಿಭಕ್ತಿವ್ಯತ್ಯಯಃ || ಇಯಂ ಮಾತಾಯಂ ಪಿತಾಯಂ ಜೀವಾತುರ್ಜೀವನಫಲಭೂತಃ ಪುತ್ರಶ್ಚಾಗಮದಿತಿ ಸಂಬಧ್ಯತೇ | ಸರ್ವೇ ತ್ವಾಮಾಗತಾ ದುಃಖಿತಾಃ ಸಂತಃ | ಶಿಷ್ಟಂ ಸಮಾನಂ ||**

ಪ್ರತಿಪದಾರ್ಥ

**ಸುಬಂಧೋ**—ಎಲೈ ಸುಬಂಧುವೇ | **ಅಯಂ**—ಈ ಅಗ್ನಿಯು | **ಮಾತಾ**—ನಿನ್ನ ತಾಯಿಯು | **ಅಯಂ**—ಇದೇ ಅಗ್ನಿಯು | **ಪಿತಾ**—ನಿನ್ನ ತಂದೆಯು | **ಅಯಂ**—ಇದೇ ಅಗ್ನಿಯು | **ಜೀವಾತುಃ**—ನಿನಗೆ ಜೀವವನ್ನು ಕೊಡತಕ್ಕವನು | **ಆಗಮತ್**—ಇದೋ ಇಲ್ಲಿಗೆ ಬಂದಿದ್ದಾನೆ | **ಪ್ರಸರ್ಪಣಂ**—ಚಲಿಸತಕ್ಕ| **ತವ ಇದಂ**—ನಿನ್ನ ಈ ಶರೀರಕ್ಕೆ | **ಏಹಿ**—ಬಂದು ಪ್ರವೇಶಿಸು | **ನಿರಿಹಿ**—ಪರಿಧಿಯಿಂದ ಹೊರಕ್ಕೆ ಬಾ.

ಭಾವಾರ್ಥ

ಎಲೈ ಸುಬಂಧುವೇ, ಈ ಅಗ್ನಿಯೇ ನಿನ್ನ ಮಾತಾಪಿತೃರೂಪವಾಗಿದ್ದಾನೆ. ನಿನಗೆ ಜೀವವನ್ನು ತುಂಬಿಸುವ ಈ ಅಗ್ನಿಯು ಇಲ್ಲಿಗೆ ಬಂದಿದ್ದಾನೆ. ನೀನು ಬಂದು ನಿನ್ನ ಚಲಿಸುವ ಸ್ವಭಾವವುಳ್ಳ ದೇಹಕ್ಕೆ ಪ್ರವೇಶಿಸು. ಪರಿಧಿಯಿಂದ ಹೊರಕ್ಕೆ ಬಾ.

ಅಥವಾ

ಎಲೈ ಸುಬಂಧುವೇ, ನಿನ್ನ ಮರಣವನ್ನು ಕೇಳಿ ದುಃಖಿಸುತ್ತ ಇದೋ, ನಿನ್ನ ತಾಯಿ, ತಂದೆ, ಮಗು ಎಲ್ಲರೂ ಬಂದಿದ್ದಾರೆ. ನೀನು ಪುನಃ ಶರೀರವನ್ನು ಪ್ರವೇಶಿಸಿ ಜೀವಂತನಾಗು. ಇವರಿಗೆ ಸುಖಕಾರಕನಾಗು. ಎಂದು ಇನ್ನೊಂದು ವಿಧವಾದ ಅರ್ಥವು ಸಾಧ್ಯವೆಂದು ಸಾಯಣರು ತಿಳಿಸಿದ್ದಾರೆ.

English Translation

This (Agni) your mother, this your father, this the giver of life to you, has arrived ; come back, Subandhu, to this your (body) that is capable of motion; come forth.

ವಿಶೇಷವಿಷಯಗಳು

ಈ ಋಕ್ಕಿನ ಅರ್ಥವಿವರಣೆಯ ವಿಷಯದಲ್ಲಿ ಭಾಷ್ಯಕಾರರು ಶಾಟ್ಯಾಯನ ಬ್ರಾಹ್ಮಣದ ವಾಕ್ಯವನ್ನು ಉದಹರಿಸಿದಾರೆ—

**ಅಥಾಗ್ನಿಂ ದ್ವೈಪದೇನ ಸೂಕ್ತೇನಾಸ್ತುವನ್ | ಅಗ್ನಿಃ ಸ್ತುತ ಆಜಗಾಮ | ಆಗತ್ಯ ಚಾಹ ಕಿಂಕಾಮಾ ಮಾಗಚ್ಛತೇತಿ | ಸುಬಂಧೋರೇವಾಸುಂ ಪುನರ್ವನುಯಾಮೇತ್ಯಬ್ರುವನ್ | ಏಷಾಂತಃಪರಿಧೀತ್ಯಬ್ರವೀತ್ತಮಾದಧ್ವಮಿತಿ | ತನ್ನಿರಾಹ | ಅಯಂ ಮಾತಾಯಂ ಪಿತಾ ಇತಿ||**

ಬಂಧ್ವಾದಿಗಳು ಅಗ್ನಿಯನ್ನು ದ್ವಿಪದಾವಿರಾಟ್‌ಛಂದಸ್ಸಿನ ಸೂಕ್ತದಿಂದ (ಋ. ಸಂ. ೫-೨೪) ಸ್ತೋತ್ರಮಾಡಿದರು. ಅದರಿಂದ ಸಂತುಷ್ಟನಾದ ಅಗ್ನಿಯು ಅಲ್ಲಿಗೆ ಬಂದು—ನಿಮ್ಮ ಅಪೇಕ್ಷೆಯೇನು? ಏತಕ್ಕಾಗಿ ನನ್ನನ್ನು ಬರಮಾಡಿದಿರಿ ಎಂದು ಕೇಳಲು, ಅವರು—ಈ ಸುಬಂಧುವಿನ ಪ್ರಾಣವು ಪುನಃ ಬರಬೇಕೆಂದು ಅಪೇಕ್ಷಿಸುತ್ತೇವೆ ಎಂದರು. ಈ ಸುಬಂಧುವಿನ ಪ್ರಾಣವು ಅಗ್ನಿಯ ಅಂತಃಪರಿಧಿಯಲ್ಲಿದೆಯೆಂದು ಅಗ್ನಿಯು ಹೇಳಲು ಅದನ್ನು ತರಬೇಕೆಂದು ಪ್ರಾರ್ಥಿಸಿದರು. ಆ ಪ್ರಾರ್ಥನೆಯೇ **ಅಯಂ ಮಾತಾ** ಎಂದು ಮೊದಲಾಗಿ ಈ ಋಕ್ಕಿನಲ್ಲಿ ಹೇಳಿರುವುದು.

ಶೌನಕಮಹರ್ಷಿಯೂ ಕೂಡ ಈ ವಿಷಯವನ್ನು ತಮ್ಮ ಬೃಹದ್ದೇವತಾಗ್ರಂಥದಲ್ಲಿ—**ಸ್ತುತಃ ಸ ರಾಜಾ ಸುಪ್ರೀತಃ** ಎಂದು ಆರಂಭಮಾಡಿ, **ಚೇತಸೋ ಧಾರಣಾಯ ತೇ** ಎನ್ನುವವರೆಗೆ ವಿವರಿಸಿರುವರು. ಈ ವಿಷಯವನ್ನು ನಾವು ೫೭ ನೇ ಸೂಕ್ತದ ಪೀಠಿಕೆಯಲ್ಲಿ (ಪುಟ 352-353) ವಿವರಿಸಿದೇವೆ.

ಸಂಹಿತಾಪಾಠಃ

**ಯಥಾ ಯುಗಂ ವರತ್ರಯಾ ನಹ್ಯಂತಿ ಧರುಣಾಯ ಕಂ ।**
**ಏವಾ ದಾಧಾರ ತೇ ಮನೋ ಜೀವಾತವೇ ನ ಮೃತ್ಯವೇಽಥೋ ಅರಿಷ್ಟತಾತಯೇ ॥ ೮ ॥**

ಪದಪಾಠಃ

**ಯಥಾ । ಯುಗಂ । ವರತ್ರಯಾ । ನಹ್ಯಂತಿ । ಧರುಣಾಯ । ಕಂ ।**
**ಏವ । ದಾಧಾರ । ತೇ । ಮನಃ । ಜೀವಾತವೇ । ನ । ಮೃತ್ಯವೇ । ಅಥೋ ಇತಿ । ಅರಿಷ್ಟಽತಾತಯೇ ॥**

ಸಾಯಣಭಾಷ್ಯಂ

**ಯಥಾ ಯುಗಂ ವರತ್ರಯಾ ಪಾಶೇನ ನಹ್ಯಂತಿ ಬಧ್ನಂತಿ ಧರುಣಾಯ ರಥಾದಿಧಾರಣಾಯ । ಕಮಿತಿ ಪಾದಪೂರಣಃ । ಏವ್ಮೇವಂ ತೇ ಮನೋ ದಾಧಾರ ಪರಿಧಾವಗ್ನಿಃ । ಕಿಮರ್ಥಂ । ಜೀವಾತವೇ ಜೀವನಾಯ ನ ಮೃತ್ಯವೇ ಮರಣಾಯ ನ ಅಥೋ ಅಪಿ ಚಾರಿಷ್ಟತಾತಯೇಽವಿನಾಶಾಯ ॥ ಸ್ವಾರ್ಥಿಕಸ್ತಾತಿಃ ॥**

ಪ್ರತಿಪದಾರ್ಥ

**ಯಥಾ**—ಯಾವ ರೀತಿ । **ಯುಗಂ**—ನೊಗವನ್ನು । **ಧರುಣಾಯ**—ಅದು ಸ್ಥಿರವಾಗಿ ನಿಲ್ಲುವುದಕ್ಕಾಗಿ । **ವರತ್ರಯಾ**—ಹಗ್ಗದಿಂದ । **ನಹ್ಯಂತಿ**—ಕಟ್ಟುವರೋ । **ಏವ**—ಅದೇ ರೀತಿಯಲ್ಲಿ । **ತೇ ಮನಃ**—ನಿನ್ನ ಚೇತನವನ್ನು । **ಜೀವಾತವೇ**—ಜೀವಿಸುವುದಕ್ಕಾಗಿ । **ದಾಧಾರ**—ಪರಿಧಿಯಲ್ಲಿ ಸೇರಿಸಿ ಸ್ಥಾಪಿಸಿದ್ದಾನೆ । **ಅರಿಷ್ಟತಾತಯೇ**—ಕಲ್ಯಾಣಕ್ಕಾಗಿಯೇ ಹೊರತು । **ನ ಮೃತ್ಯವೇ**—ಸಾಯುವುದಕ್ಕಾಗಿ ಸ್ಥಾಪಿಸಿಲ್ಲ.

ಭಾವಾರ್ಥ

ನೊಗವನ್ನು ಅದು ಸ್ಥಿರವಾಗಿ ನಿಲ್ಲುವುದಕ್ಕಾಗಿ ಯಾವರೀತಿ ಹಗ್ಗದಿಂದ ಕಟ್ಟುವರೋ ಅದೇರೀತಿ ನಿನ್ನ ಚೇತನವನ್ನು ಅಗ್ನಿಯು ಅದು ಜೀವಿಸಿರುವುದಕ್ಕಾಗಿ ಪರಿಧಿಯಲ್ಲಿ ಸೇರಿಸಿ ಸ್ಥಾಪಿಸಿದ್ದಾನೆ. ಕಲ್ಯಾಣಲಾಭಾರ್ಥವಾಗಿಯೇ ಅದನ್ನು ಸ್ಥಾಪಿಸಿದ್ದಾನೆಯೇ ವಿನಾ ಅದರ ಸಾವಿಗಾಗಿಯಲ್ಲ.

English Translation

As men bind the yoke with cords for its support, so has (Agni) placed your spirit (in the body) for life, not for death, but for security.

ಸಂಹಿತಾಪಾಠಃ

ಯಥೇಯಂ ಪೃಥಿವೀ ಮಹೀ ದಾಧಾರೇಮಾನ್ವನಸ್ಪತೀನ್ ।
ಏವಾ ದಾಧಾರ ತೇ ಮನೋ ಜೀವಾತವೇ ನ ಮೃತ್ಯವೇಽಥೋ ಅರಿಷ್ಟತಾತಯೇ ॥ ೯ ॥

ಪದಪಾಠಃ

ಯಥಾ । ಇಯಂ । ಪೃಥಿವೀ । ಮಹೀ । ದಾಧಾರ । ಇಮಾನ್ । ವನಸ್ಪತೀನ್ ।
ಏವ । ದಾಧಾರ । ತೇ । ಮನಃ । ಜೀವಾತವೇ । ನ । ಮೃತ್ಯವೇ । ಅಥೋ ಇತಿ । ಅರಿಷ್ಟಽತಾತಯೇ ॥೯॥

ಸಾಯಣಭಾಷ್ಯಂ

ಯಥೇಯಂ ಪೃಥಿವೀ ಮಹೀಮಾನ್ವನಸ್ಪತೀನ್ವೃಕ್ಷಾದೀನ್ದಾಧಾರ । ಶಿಷ್ಟಮುಕ್ತಂ ॥

ಪ್ರತಿಪದಾರ್ಥ

**ಯಥಾ**—ಯಾವ ರೀತಿಯಲ್ಲಿ । **ಮಹೀ**—ಮಹತ್ಸ್ವರೂಪವುಳ್ಳ । **ಪೃಥಿವೀ**—ಪೃಥ್ವಿಯು । **ಇಮಾನ್ ವನಸ್ಪತೀನ್**—ಈ ವೃಕ್ಷಗಳನ್ನು । **ದಾಧಾರ**—ದೃಢವಾಗಿ ಧರಿಸಿದೆಯೋ । **ಏವ**—ಅದೇ ರೀತಿ (ಅಗ್ನಿಯು) । **ತೇ ಮನಃ**—ನಿನ್ನ ಚೇತನವನ್ನು । **ಜೀವಾತವೇ**—ಜೀವಿಸಿರುವುದಕ್ಕಾಗಿ । **ದಾಧಾರ**—ಪರಿಧಿಯಲ್ಲಿ ಸ್ಥಾಪಿಸಿ ಹಿಡಿದಿದ್ದಾನೆ । **ಅರಿಷ್ಟತಾತಯೇ**—ಕಲ್ಯಾಣಕ್ಕಾಗಿಯೇ ವಿನ । **ನ ಮೃತ್ಯವೇ**—ಸಾಯುವುದಕ್ಕಾಗಿ ಅಲ್ಲ.

ಭಾವಾರ್ಥ

ಯಾವರೀತಿ ಮಹತ್ಸ್ವರೂಪವುಳ್ಳ ಪೃಥ್ವಿಯು ಈ ವೃಕ್ಷಗಳನ್ನು ದೃಢವಾಗಿ ಧರಿಸಿದೆಯೋ, ಅದೇ ರೀತಿ ಅಗ್ನಿಯು ನಿನ್ನ ಚೇತನವನ್ನು ಜೀವಿಸಿರುವುದಕ್ಕಾಗಿ ಪರಿಧಿಯಲ್ಲಿ ಸ್ಥಾಪಿಸಿ ಹಿಡಿದಿದ್ದಾನೆ. ಅದರ ಕಲ್ಯಾಣಕ್ಕಾಗಿಯೇ ವಿನಾ ಅದು ಸಾಯುವುದಕ್ಕಾಗಿ ಅಲ್ಲ.

English Translation

As this spacious earth supports these trees so has (Agni) placed your spirit (in the body) for life, not for death, but for security.

ಸಂಹಿತಾಪಾಠಃ

ಯಮಾದಹಂ ವೈವಸ್ವತಾತ್ಸುಬಂಧೋರ್ಮನ ಆಭರಂ ।

ಜೀವಾತವೇ ನ ಮೃತ್ಯವೇಽಥೋ ಅರಿಷ್ಟತಾತಯೇ ॥ ೧೦ ॥

ಪದಪಾಠಃ

ಯಮಾತ್ । ಅಹಂ । ವೈವಸ್ವತಾತ್ । ಸುಽಬಂಧೋಃ । ಮನಃ । ಆ । ಅಭರಂ ।
ಜೀವಾತವೇ । ನ । ಮೃತ್ಯವೇ । ಅಥೋ ಇತಿ । ಅರಿಷ್ಟಽತಾತಯೇ ॥ ೧೦ ॥

ಸಾಯಣಭಾಷ್ಯಂ

ಇಯಂ ನಿಗದಸಿದ್ಧಾ ॥

ಪ್ರತಿಪದಾರ್ಥ

**ಸುಬಂಧೋಃ**—ಸುಬಂಧುವಿನ । **ಮನಃ**—ಚೇತನವನ್ನು । **ಅಹಂ**—ನಾನು । **ವೈವಸ್ವತಾತ್**—ವಿವಸ್ವಂತನ ಪುತ್ರನಾದ । **ಯಮಾತ್**—ಯಮನಿಂದ । **ಆಭರಂ**—ಕರೆತಂದಿದ್ದೇನೆ । **ಜೀವಾತವೇ**—ಅದು ಜೀವಿಸಿರುವುದಕ್ಕಾಗಿಯೂ। **ಅರಿಷ್ಟತಾತಯೇ**-ಅದರ ಕಲ್ಯಾಣಕ್ಕಾಗಿಯೂ ಕರೆತಂದಿದ್ದೇನೆ । **ನ ಮೃತ್ಯವೇ**-ಅದು ಸಾಯುವುದಕ್ಕಾಗಿ ಅಲ್ಲ.

ಭಾವಾರ್ಥ

ಸುಬಂಧುವಿನ ಚೇತನವನ್ನು ನಾನು ವಿವಸ್ವಂತನ ಪುತ್ರನಾದ ಯಮನಿಂದ ಕರೆತಂದಿದ್ದೇನೆ. ಅದು ಜೀವಿಸಿರುವುದಕ್ಕಾಗಿಯೂ ಅದರ ಕಲ್ಯಾಣಕ್ಕಾಗಿಯೂ ಕರೆತಂದಿದ್ದೇನೆ. ಅದು ಸಾಯುವುದಕ್ಕಾಗಿ ಅಲ್ಲ.

English Translation

(Agni speaks :) I bring the spirit of Subandhu from Yama, the son of Vivaswat, for life, not for death, but for security.

ಸಂಹಿತಾಪಾಠಃ

ನ್ಯ೧ಗ್ವಾತೋಽವ ವಾತಿ ನ್ಯಕ್ತಪತಿ ಸೂರ್ಯಃ ।
ನೀಚೀನಮಘ್ನ್ಯಾ ದುಹೇ ನ್ಯಗ್ಭವತು ತೇ ರಪಃ ॥ ೧೧ ॥

ಪದಪಾಠಃ

ನ್ಯಕ್ । ವಾತಃ । ಅವ । ವಾತಿ । ನ್ಯಕ್ । ತಪತಿ । ಸೂರ್ಯಃ ।
ನೀಚೀನಂ । ಅಘ್ನ್ಯಾ । ದುಹೇ । ನ್ಯಕ್ । ಭವತು । ತೇ । ರಪಃ ॥ ೧೧ ॥

ಸಾಯಣಭಾಷ್ಯಂ

**ವಾತೋ ವಾಯುರ್ದ್ಯುಲೋಕಾನ್ನ್ಯಗ್ನೀಚೀನಮವ ವಾತಿ। ಗಚ್ಛತಿ। ಸೂರ್ಯಶ್ಚ ನ್ಯಕ್ ತಪತಿ। ಅಘ್ನ್ಯಾಹನನೀಯಾ ಗೌರ್ನೀಚೀನಂ ದುಹೇ । ದುಗ್ಧೇ। ಏವಂ ತೇ ರಪಃ ಪಾಪಂ ನ್ಯಗ್ನೀಚೀನಂ ಭವತು ॥**

ಪ್ರತಿಪದಾರ್ಥ

**ವಾತಃ**—ವಾಯುವು । **ನ್ಯಕ್**—ಅಧೋಮುಖವಾಗಿ । **ಅವ ವಾತಿ**—ಬೀಸುತ್ತದೆ । **ಸೂರ್ಯಃ**—ಸೂರ್ಯನು । **ನ್ಯಕ್**—ಅಧೋಮುಖವಾದ ಕಿರಣಗಳುಳ್ಳವನಾಗಿ । **ತಪತಿ**—ದಹಿಸುತ್ತಾನೆ । **ಅಘ್ನ್ಯಾ**—ರಕ್ಷಣಾರ್ಹವಾದ ಹಸುವು । **ನೀಚೀನಂ**—ಕೆಳಭಾಗದಲ್ಲಿರುವ ಕೆಚ್ಚಲಿನಿಂದ । **ದುಹೇ**—ಹಾಲನ್ನು ಕರೆಯುತ್ತದೆ । **ತೇ**—ನಿನ್ನ । **ರಪಃ**—ಪಾಪವು । **ನ್ಯಕ್ ಭವತು**—ಅಧೋಭಾಗದ ಗಮನವುಳ್ಳದ್ದಾಗಿ ಆಗಲಿ.

ಭಾವಾರ್ಥ

ವಾಯುವು ಅಧೋಮುಖವಾಗಿ ಬೀಸುತ್ತದೆ. ಸೂರ್ಯನು ಅಧೋಮುಖವಾವ ಕಿರಣಗಳುಳ್ಳವನಾಗಿ ದಹಿಸುತ್ತಾನೆ. ರಕ್ಷಣಾರ್ಹವಾದ ಹಸುವು ಕೆಳಭಾಗದ ಕೆಚ್ಚಲಿನಿಂದ ಹಾಲನ್ನು ಕರೆಯುತ್ತದೆ. ನಿನ್ನ ಪಾಪವು ಅಧೋಭಾಗದ ಗಮನವುಳ್ಳದ್ದಾಗಿ ನಾಶವಾಗಲಿ.

English Translation

The wind blows downwards, the sun burns downwards, the cow yields her milk downwards, so be your sin cast down.

ಸಂಹಿತಾಪಾಠಃ

ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ ।
ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ ॥ ೧೨ ॥

ಪದಪಾಠಃ

ಅಯಂ । ಮೇ । ಹಸ್ತಃ । ಭಗಽವಾನ್ । ಅಯಂ । ಮೇ । ಭಗವತ್ಽತರಃ ।
ಅಯಂ । ಮೇ । ವಿಶ್ವಽಭೇಷಜಃ । ಅಯಂ । ಶಿವಽಅಭಿಮರ್ಶನಃ ॥ ೧೨ ॥

ಸಾಯಣಭಾಷ್ಯಂ

**ಅನಯಾ ಬಂಧ್ವಾದಯೋ ಲಬ್ಧಜೀವಂ ಸುಬಂಧುಂ ಪಾಣಿಭಿರಸ್ಪೃಶನ್। ಅಯಂ ಮೇ ಹಸ್ತೋ ಭಗವಾನ್ ಯಸ್ಮಾತ್ಸಜೀವಂ ಸುಬಂಧುಂ ಸ್ಪೃಶತಿ ತಸ್ಮಾತ್ । ತಥಾಯಂ ಮೇ ಹಸ್ತೋ ಭಗವತ್ತರಃ । ಅತಿಶಯೇನ ಭಗವಾನ್ । ತಥಾಯಂ ಮೇ ಹಸ್ತೋ ವಿಶ್ವಭೇಷಜೋ ಜೀವಚಿಕಿತ್ಸಾಸಾಧನಸರ್ವೌಷಧವಾನ್ ತತ್ಸ್ಪರ್ಶನೀಯೋ ವಾ । ಅಯಂ ಶಿವಾಭಿಮರ್ಶನೋ ಮಂಗಲಸ್ಪರ್ಶನಃ । ಯತೋ ಜೀವಂತಂ ಸ್ಪೃಶತ್ಯತ ಇತ್ಯರ್ಥಃ ॥**

ಪ್ರತಿಪದಾರ್ಥ

(ಜೀವಂತನಾದ ಸುಬಂಧುವನ್ನು ಮುಟ್ಟತಕ್ಕ) **ಮೇ**—ನನ್ನ । **ಅಯಂ ಹಸ್ತಃ**—ಈ ಹಸ್ತವು । **ಭಗವಾನ್**—ಧನ್ಯವಾದುದು । **ಮೇ**—ನನ್ನ । **ಅಯಂ**—ಇನ್ನೊಂದು ಹಸ್ತವು । **ಭಗವತ್ತರಃ**—ಇನ್ನೂ ಧನ್ಯವಾದುದು । **ಅಯಂ ಮೇ**—ನನ್ನ ಈ ಹಸ್ತವು । **ವಿಶ್ವಭೇಷಜಃ**—ಮೃತನನ್ನು ಬದುಕಿಸುವಂತೆ ಮಾಡುವ ಔಷಧವನ್ನು ಹೊಂದಿರುವುದಾಗಿದೆ । **ಅಯಂ**—ನನ್ನ ಈ ಹಸ್ತವು । **ಶಿವಾಭಿಮರ್ಶನಃ**—ಕಲ್ಯಾಣಕಾರಕವಾದ ಸ್ಪರ್ಶವುಳ್ಳದ್ದಾಗಿದೆ.

ಭಾವಾರ್ಥ

ಜೀವಂತನಾದ ಸುಬಂಧುವನ್ನು ಮುಟ್ಟತಕ್ಕ ನನ್ನ ಈ ಹಸ್ತವು ಧನ್ಯವಾದುದು. ನನ್ನ ಇನ್ನೊಂದು ಹಸ್ತವು ಇನ್ನೂ ಧನ್ಯವಾದುದು. ನನ್ನ ಈ ಹಸ್ತವು ಮೃತನನ್ನು ಬದುಕಿಸುವಂತೆ ಮಾಡುವ ಔಷಧವನ್ನು ಹೊಂದಿರುವುದಾಗಿದೆ. ನನ್ನ ಈ ಹಸ್ತವು ಕಲ್ಯಾಣಕಾರಕವಾದ ಸ್ಪರ್ಶವುಳ್ಳದ್ದಾಗಿದೆ.

## English Translalion

(The Rishis speak :) This my hand is fortunate ; this my (other hand) is (still) more fortunate : this my (hand) has all medicaments : this has a blessed touch.

# ಅರವತ್ತೊಂದನೆಯ ಸೂಕ್ತ

## ಪೀಠಿಕೆ

ಈ ಸೂಕ್ತದ ವಿಷಯದಲ್ಲಿ ಒಂದು ಉಪಾಖ್ಯಾನವು ಐತರೇಯಬ್ರಾಹ್ಮಣದಲ್ಲಿಯೂ (ಐ. ಬ್ರಾ. ೨೨-೧೪) ತೈತ್ತಿರೀಯ ಸಂಹಿತೆಯಲ್ಲಿಯೂ (ತೈ. ಸಂ. ೩-೧-೯-೪) ಉಕ್ತವಾಗಿರುವುದು. ಅದನ್ನೇ ಇಲ್ಲಿ ವಿವರಿಸಲಾಗಿದೆ—

ಪ್ರಉಗಶಸ್ತ್ರಮಂತ್ರಪಠನಕಾಲದಲ್ಲಿ ಬಹುದೇವತಾಕವಾದ ಅನೇಕ ಸೂಕ್ತಗಳನ್ನು ಪಠಿಸಬೇಕಾಗಿರುವುದು. ಅವುಗಳಲ್ಲಿ ವಿಶ್ವೇದೇವತಾಕವಾದ ಎರಡು ಸೂಕ್ತಗಳನ್ನೂ ಪಠಿಸಬೇಕು.

**ಇದಮಿತ್ಥಾ ರೌದ್ರಂ ಗೂರ್ತವಚಾ ಯೇ ಯಜ್ಞೇನ ದಕ್ಷಿಣಯಾ ಸಮಕ್ತಾ ಇತಿ ವೈಶ್ವದೇವಂ ॥**
(ಐ. ಬ್ರಾ. ೨೨-೧೩)

ಅವು ಯಾವುವೆಂದರೆ—ಋಗ್ವೇದ ಸಂಹಿತೆಯ ೧೦ ನೆಯ ಮಂಡಲದಲ್ಲಿರುವ **ಇದಮಿತ್ಥಾ ರೌದ್ರಂ ಗೂರ್ತವಚಾ** ಎಂಬ ೬೧ನೆಯ ಸೂಕ್ತವನ್ನೂ **ಯೇ ಯಜ್ಞೇನ ದಕ್ಷಿಣಯಾ ಸಮಕ್ತಾ** ಎಂಬ ೬೨ ನೆಯ ಸೂಕ್ತವನ್ನೂ ಪಠಿಸಬೇಕು.

**ನಾಭಾನೇದಿಷ್ಠಂ ಶಂಸತಿ ।** (ಐ. ಬ್ರಾ. ೨೨-೧೪)

ಈ ಸೂಕ್ತಗಳಿಗೆ ನಾಭಾನೇದಿಷ್ಠ ಸೂಕ್ತಗಳೆಂದು ಹೆಸರು. ಏಕೆಂದರೆ ಈ ಸೂಕ್ತಗಳಿಗೆ ನಾಭಾನೇದಿಷ್ಠನೆಂಬ ಋಷಿಯೇ ದ್ರಷ್ಟೃವು. ಋಷಿಯ ಹೆಸರಿನಿಂದ ಸೂಕ್ತವನ್ನು ಕರೆಯುವುದು ರೂಢಿಯಾಗಿದೆ. ಆದ್ದರಿಂದ ಈ ಸೂಕ್ತಗಳಿಗೆ ನಾಭಾನೇದಿಷ್ಠಸೂಕ್ತಗಳೆಂದು ಹೆಸರು. ಈ ನಾಭಾನೇದಿಷ್ಠಋಷಿಯ ವಿಷಯದಲ್ಲಿ ಒಂದು ಉಪಾಖ್ಯಾನವಿರುವುದು. ಅದನ್ನು ಇಲ್ಲಿ ವಿವರಿಸಲಾಗಿದೆ—

**ನಾಭಾನೇದಿಷ್ಠಂ ವೈ ಮಾನವಂ ಬ್ರಹ್ಮಚರ್ಯಂ ವಸಂತಂ ಭ್ರಾತರೋ ನಿರಭಜನ್ನ್ಸೋಽಬ್ರವೀ-**

**ದೇತ್ಯ ಕಿಂ ಮಹ್ಯಮಭಾಕ್ತೇತ್ಯೇತಮೇವ ನಿಷ್ಠಾವಮವವದಿತಾರಮಿತ್ಯಬ್ರುವಂಸ್ತಸ್ಮಾದ್ಧಾ-ಪ್ಯೇತರ್ಹಿ ಪಿತರಂ ಪುತ್ರಾ ನಿಷ್ಠಾವೋಽವವದಿತೇತ್ಯೇವಾಚಕ್ಷತೇ ||**

(ಐ. ಬ್ರಾ. ೨೨-೧೪)

ಮನುಪುತ್ರನಾದ ನಾಭಾನೇದಿಷ್ಠನೆಂಬುವನು ಉಪನಯನವಾದಕೂಡಲೇ ಬ್ರಹ್ಮಚರ್ಯದಿಂದ ಗುರುಕುಲದಲ್ಲಿ ವಾಸ ಮಾಡುತ್ತಾ ವೇದಾಧ್ಯಯನವನ್ನು ಮಾಡುತ್ತಿದ್ದನು. ಅವನು ತಂದೆಯ ಮನೆಯಲ್ಲಿಲ್ಲದ ವೇಳೆಯಲ್ಲಿ ಅವನ ಜ್ಯೇಷ್ಠ ಸಹೋದರರು—ತಮ್ಮ ತಮ್ಮನಾದ ನಾಭಾನೇದಿಷ್ಠನು ಇನ್ನೂ ಬಾಲಕನು, ಅವನು ಗುರುಕುಲದಲ್ಲಿ ವಿದ್ಯಾಭ್ಯಾಸವನ್ನು ಮಾಡುತ್ತಿರುವನು. ಅವನಿಗೆ ಧನದ ಅವಶ್ಯಕತೆ ಇಲ್ಲ. ಆದ್ದರಿಂದ ತಂದೆಯ ಧನವನ್ನೂ ಆಸ್ತಿಯನ್ನೂ ನಾವುಗಳೇ ಹಂಚಿಕೊಳ್ಳೋಣ ಎಂದು ಸ್ವಾರ್ಥಬುದ್ಧಿಯಿಂದ ಆಲೋಚಿಸಿ ನಾಭಿನೇದಿಷ್ಠನಿಗೆ ಏನನ್ನೂ ಉಳಿಸದೇ ಇದ್ದ ಆಸ್ತಿ ಯನ್ನೆಲ್ಲಾ ತಾವೇ ಹಂಚಿಕೊಂಡರು. ಕೆಲವುಕಾಲಾನಂತರ ನಾಭಾನೇದಿಷ್ಠನು ವಿದ್ಯಾಭ್ಯಾಸವನ್ನು ಮುಗಿಸಿ ಗುರುಕುಲ ದಿಂದ ಹಿಂತಿರುಗಿಬಂದು ತನ್ನ ಜ್ಯೇಷ್ಠಸಹೋದರನನ್ನು ಕುರಿತು ಇಂತೆಂದನು—ಎಲೈ ಸಹೋದರರೇ, ನೀವು ಆಸ್ತಿ ಯೆಲ್ಲವನ್ನೂ ನೀವುನೀವೇ ಹಂಚಿಕೊಂಡಿರುತ್ತೀರಿ. ನನಗೆ ಏನನ್ನೂ ಉಳಿಸಿಲ್ಲ. ನನ್ನ ಭಾಗದ ಆಸ್ತಿ ಎಲ್ಲಿ ಎಂದು ಕೇಳಲು ಅವರು ಅಲ್ಲಿಯೇ ನಿಂತಿದ್ದ ತಮ್ಮ ತಂದೆಯಾದ ಮನುವನ್ನು ಕೈಯಿಂದ ತೋರಿಸಿ—ಎಲೈ ನಾಭಾನೇದಿಷ್ಠನೇ, ನಿಮ್ಮ ತಂದೆಯನ್ನು ಕೇಳು, ಈ ವಿಷಯ ನಮಗೇನೂ ತಿಳಿಯದು. ನಿಮ್ಮ ತಂದೆಯಾದರೋ ಧರ್ಮಶಾಸ್ತ್ರವನ್ನೇ ನಿರ್ಣಯಿಸಿ ಧರ್ಮರಹಸ್ಯವನ್ನು ಚೆನ್ನಾಗಿ ಬಲ್ಲವನು. ಅವನನ್ನು ಕೇಳು ಎಂದರು.

ಇಲ್ಲಿ **ನಿಷ್ಠಾವಃ ಅವವದಿತಾ** ಎಂಬ ಶಬ್ದಗಳ ಪ್ರಯೋಗವಿದೆ. ಅವುಗಳನ್ನು ವಿವರಿಸುವುದು ಅವಶ್ಯಕವಾಗಿದೆ.

**ಧನವಿಭಾಗಾದೇರ್ಧರ್ಮರಹಸ್ಯಂ ನಿಃಶೇಷೇಣ ಸ್ಥಿತಿನಿರ್ಣಯೋ ನಿಷ್ಠಾ | ಸಾ ಯಸ್ಮಿನ್ನಸ್ತಿ ಸ ನಿಷ್ಠಾವಃ | ತಾದೃಶಂ ಧರ್ಮರಹಸ್ಯನಿರ್ಣೇತಾರಮಿತ್ಯರ್ಥಃ ||**

(ಸಾ. ಭಾ.)

ಧನವಿಭಾಗವನ್ನು ಮಾಡುವುದರಲ್ಲಿ ಧರ್ಮರಹಸ್ಯವನ್ನು ತಿಳಿದು ಅದರಂತೆ ನಿರ್ಣಯಮಾಡುವುದಕ್ಕೆ **ನಿಷ್ಠಾ** ಎಂದು ಹೆಸರು. ಇಂತಹ ನಿಷ್ಠೆಯು ಯಾರಲ್ಲಿ ಇರುವುದೋ ಆ ಪುರುಷನಿಗೆ ನಿಷ್ಠಾವಃ ಎಂದು ಹೆಸರು. ಎಂದರೆ ಧರ್ಮ ರಹಸ್ಯವನ್ನು ತಿಳಿದು ಅದರಂತೆ ಪುತ್ರಾದಿಗಳಿಗೆ ಧನವನ್ನು ವಿಭಾಗಮಾಡಿಕೊಡಲು ಸಮರ್ಥನಾದ ಪುರುಷನು ಎಂದಭಿಪ್ರಾಯವು.

**ಅವವದಿತಾರಂ | ಜ್ಯೇಷ್ಠಪುತ್ರಸ್ಯೈತಾವತ್ | ದ್ವಿತೀಯಸ್ಯೈತಾವತ್ | ಅನ್ಯಸ್ಯೈತಾವತ್ | ಇತ್ಯವಚ್ಛಿದ್ಯ ವದಿತುಂ ಸಮರ್ಥೋಽವವದಿತಾ | ತಾದೃಶಂ | ಅಯಂ ಮನುರ್ಧರ್ಮ-ಶಾಸ್ತ್ರಕರ್ತೃತ್ವಾದ್ಧರ್ಮರಹಸ್ಯನಿರ್ಣಯವಾನ್ಪಿತೃತ್ವೇನ ಚ ತವೈತಾವದಿತ್ಯವಚ್ಛಿದ್ಯ ವಕ್ತುಂ ಸಮರ್ಥಶ್ಚ ||**

(ಸಾ. ಭಾ.)

ಜ್ಯೇಷ್ಠಪುತ್ರನಿಗೆ ಇಂತಿಂತಹ ಭಾಗವು; ಎರಡನೆಯ ಪುತ್ರನಿಗೆ ಇಂತಹ ಭಾಗವು; ಮೂರನೆಯವನಿಗೆ ಈ ಭಾಗವು ಎಂದು ಪ್ರತ್ಯೇಕವಾಗಿ ವಿಭಾಗಮಾಡಿ ಅದನ್ನು ಅವರ ಮುಂದೆ ಹೇಳುವವನು. ಇಲ್ಲಿ ಮನುವು ಧರ್ಮಶಾಸ್ತ್ರಕರ್ತ ನಾದುದರಿಂದ ಧರ್ಮಶಾಸ್ತ್ರರಹಸ್ಯವನ್ನು ತಿಳಿದು ಅದರಂತೆ ತನ್ನ ಪುತ್ರರಿಗೆ ಆಸ್ತಿಯನ್ನು ವಿಭಾಗಮಾಡಿಕೊಟ್ಟಿರುವನು. ಈ ವಿಷಯದಲ್ಲಿ ಅವನು ಸ್ವಯಂಸಮರ್ಥನು. ಆದ್ದರಿಂದ ನಿನ್ನ ಆಸ್ತಿಯ ವಿಷಯದಲ್ಲಿ ಅವನನ್ನೇ ಕೇಳು ಎಂದು ಜ್ಯೇಷ್ಠಸಹೋದರರು ತಮ್ಮ ಕಿರಿಯಸಹೋದರನಾದ ನಾಭಾನೇದಿಷ್ಠನಿಗೆ ಹೇಳಿದರು ಎಂದಭಿಪ್ರಾಯವು.

**ಸ ಪಿತರಮೇತ್ಯಾಬ್ರವೀತ್ತ್ವಾಂ ಹ ವಾವ ಮಹ್ಯಂ ತ (ತಾ) ತಾಭಾಕ್ಷುರಿತಿ ತಂ ಪಿತಾಬ್ರವೀನ್ಮಾ ಪುತ್ರಕ ತದಾದೃಥಾ ಅಂಗಿರಸೋ ವಾ ಇಮೇ ಸ್ವರ್ಗಾಯ ಲೋಕಾಯ ಸತ್ರಮಾಸತೇ ತೇ ಷಷ್ಠಂ ಷಷ್ಠಮೇವಾಹರಾಗತ್ಯ ಮುಹ್ಯಂತಿ ತಾನೇತೇ ಸೂಕ್ತೇ ಷಷ್ಠೇಽಹನಿ ಶಂಸಯ ತೇಷಾಂ ಯತ್ಸಹಸ್ರಂ ಸತ್ರಪರಿವೇಷಣಂ ತತ್ತೇ ಸ್ವರ್ಯಂತೋ ದಾಸ್ಯಂತೀತಿ ತಥೇತಿ ॥**

ಅನಂತರ ತನ್ನ ಸಹೋದರರ ಮಾತಿನಂತೆ ನಾಭಾನೇದಿಷ್ಠನು ತನ್ನ ತಂದೆಯ ಬಳಿಗೆ ಬಂದು ಇಂತೆಂದನು—ಎಲೈ ತಂದೆಯೇ, ನನ್ನ ಜ್ಯೇಷ್ಠಸಹೋದರರಿಗೆ ಆಸ್ತಿಯನ್ನೂ ನೀನೇ ವಿಭಾಗಮಾಡಿಕೊಟ್ಟಿರುವುದರಿಂದ ನನ್ನ ಭಾಗವು ನಿನ್ನಲ್ಲಿಯೇ ಇರುವುದು, ಅದನ್ನು ನಿನ್ನಿಂದ ತೆಗೆದುಕೋ ಎಂದು ಹೇಳಿದರು. ಆದ್ದರಿಂದ ನಿನ್ನಲ್ಲಿ ಉಳಿದಿರುವ ನನ್ನ ಭಾಗದ ಆಸ್ತಿಯನ್ನು ನನಗೆ ಕೊಡು ಎಂದು ಕೇಳಿದನು. ಅದನ್ನು ಕೇಳಿ ತಂದೆಯಾದ ಮನುವು ಎಲೈ ಬಾಲಕನೇ, ನಿನ್ನ ಸಹೋದರರ ಮಾತಿನಲ್ಲಿ ನಂಬಿಕೆಯನ್ನಿಡಬೇಡ, ಅವರ ಮಾತು ನಿಜವಲ್ಲ. ನಿನಗೆ ಕೊಡಬೇಕಾದ ಭಾಗವು ನನ್ನಲ್ಲಿರುವುದಿಲ್ಲ. ಎಲ್ಲವನ್ನೂ ಅವರೇ ತೆಗೆದುಕೊಂಡುಬಿಟ್ಟರು. ಆದರೂ ಚಿಂತೆಯಿಲ್ಲ. ನಿನಗೆ ಧನವು ಲಭಿಸುವುದಕ್ಕೆ ಒಂದುಪಾಯವನ್ನು ಹೇಳುವೆನು ಕೇಳು. ಇಲ್ಲಿಗೆ ಸಮೀಪವಾಗಿರುವ ಪ್ರದೇಶದಲ್ಲಿ ಅಂಗಿರಸರೆಂಬ ಮಹರ್ಷಿಗಳು ಸ್ವರ್ಗಕ್ಕೆ ಹೋಗಬೇಕೆಂದು ಬಯಸಿ ಅದಕ್ಕಾಗಿ ಸತ್ರಯಾಗವನ್ನು ಮಾಡುತ್ತಿರುವರು. ಹಿಂದೆ ಅನೇಕಾವರ್ತಿ ಸತ್ರಯಾಗವನ್ನು ಮಾಡಲು ಪ್ರಾರಂಭಿಸಿದರೂ ಅದನ್ನು ಪೂರ್ತಿಗೊಳಿಸಲು ಸಾಧ್ಯವಾಗಲಿಲ್ಲ. ಆ ಯಾಗದ ಆರನೆಯ ದಿವಸ ಮಂತ್ರಪಠನಕಾಲದಲ್ಲಿ ಸಮಯೋಚಿತವಾದ ಯಾವ ಮಂತ್ರವನ್ನು ಪಠಿಸಬೇಕೆಂದು ತಿಳಿಯದೆ ಸಂಶಯಗ್ರಸ್ತರಾಗಿರುವರು. ಸತ್ರಯಾಗದ ಸಮಾಪ್ತಿಯಿಲ್ಲದೆ ಅವರಗೆ ಸ್ವರ್ಗಪ್ರಾಪ್ತಿಯು ಲಭಿಸಿರುವುದಿಲ್ಲ. ಆದ್ದರಿಂದ ಅವರು ಬಹಳವಾಗಿ ಚಿಂತಾಸಕ್ತರಾಗಿರುವರು. ನೀನು ಸತ್ರಯಾಗದ ಆರನೆಯ ದಿವಸ ಅವರ ಯಜ್ಞಕ್ಕೆ ಹೋಗಿ **ಇದಮಿತ್ಥಾ** ಮತ್ತು **ಯೇ ಯಜ್ಞೇನ** (೧೦ ನೆಯ ಮಂಡಲದ ೬೧ ಮತ್ತು ೬೨ ನೆಯ ಸೂಕ್ತಗಳು) ಎಂಬ ಸೂಕ್ತಗಳನ್ನು ಪಠಿಸು. ಅದರಿಂದ ಅವರು ಮಾಡುತ್ತಿರುವ ಸತ್ರಯಾಗವು ಪೂರ್ಣವಾಗಿ, ಯಾಗಕ್ಕಾಗಿ ಸಹಸ್ರಸಂಖ್ಯಾಕವಾಗಿ ಸಂಗ್ರಹಿಸಿದ್ದ ಧನದಲ್ಲಿ ಉಳಿದಿರುವುದನ್ನೆಲ್ಲಾ ನಿನಗೆ ಕೊಡುವರು ಎಂದು ಹೇಳಿದನು. ಅದನ್ನು ಕೇಳಿ ನಾಭಾನೇದಿಷ್ಠನು ಹಾಗೆಯೇ ಆಗಲೆಂದು ಸಮ್ಮತಿಸಿ ಅವರ ಯಜ್ಞಕ್ಕೆ ಹೊರಡಲುದ್ಯುಕ್ತನಾದನು.

**ತಾನುಪೈತ್ಪ್ರತಿಗೃಭ್ಣೀತ ಮಾನವಂ ಸುಮೇಧಸ ಇತಿ ತಮಬ್ರುವನ್ಕಿಂಕಾಮೋ ವದಸೀತೀದಮೇವ ವಃ ಷಷ್ಠಮಹಃ ಪ್ರಜ್ಞಾಪಯಾನೀತ್ಯಬ್ರವೀದಥ ಯದ್ವ ಏತತ್ಸಹಸ್ರಂ ಸತ್ರಪರಿವೇಷಣಂ ತನ್ಮೇ ಸ್ವರ್ಯಂತೋ ದತ್ತೇತಿ ತಥೇತಿ ತಾನೇತೇ ಸೂಕ್ತೇ ಷಷ್ಠೇಽಹನ್ಯಶಂಸಯತ್ತತೋ ವೈ ತೇ ಪ್ರ ಯಜ್ಞಮಜಾನನ್ಪ್ರ ಸ್ವರ್ಗಂ ಲೋಕಂ ತದ್ಯದೇತೇ ಸೂಕ್ತೇ ಷಷ್ಠೇಽಹನಿ ಶಂಸತಿ ಯಜ್ಞಸ್ಯ ಪ್ರಜ್ಞಾತ್ಯೈ ಸ್ವರ್ಗಸ್ಯ ಲೋಕಸ್ಯಾನುಖ್ಯಾತ್ಯೈ ॥**

ಬಳಿಕ ನಾಭಾನೇದಿಷ್ಠನು ಅಂಗಿರಸರು ಯಜ್ಞಮಾಡುವ ಸ್ಥಳಕ್ಕೆ ಹೋಗಿ ಅವರನ್ನುದ್ದೇಶಿಸಿ—**ಪ್ರತಿ ಗೃಭ್ಣೀತ ಮಾನವಂ ಸುಮೇಧಸಃ** । (ಇದು ಋ. ಸಂ. ೧೦-೬೨ ನೆಯ ಸೂಕ್ತದ ೧-೪ ನೆಯ ಋಕ್ಕುಗಳಲ್ಲಿರುವ ಕೊನೆಯ ಪಾದವು). ಎಲೈ ಮೇಧಾವಿಗಳಾದ (ಬುದ್ಧಿವಂತರಾದ) ಋಷಿಗಳೇ, ಮನುವಿನ ಪುತ್ರನಾದ ನನ್ನನ್ನು (ನಾಭಾನೇದಿಷ್ಠನನ್ನು) ಸ್ವೀಕರಿಸಿ ಎಂದು ಪ್ರಾರ್ಥಿಸಿದನು. ಅದನ್ನು ಕೇಳಿ ಅಂಗಿರಸರು—ಎಲೈ ನಾಭಾನೇದಿಷ್ಠನೇ, ನಿನ್ನ ಅಪೇಕ್ಷೆಯೇನು ? ಏತಕ್ಕಾಗಿ ನೀನು ನಮ್ಮ ಬಳಿಗೆ ಬಂದು ಹೀಗೆ ಹೇಳುತ್ತಿರುವೆ ? ಎಂದು ಕೇಳಿದರು. ಅದಕ್ಕೆ ನಾಭಾನೇದಿಷ್ಠನು—ಎಲೈ ಋಷಿಗಳೇ, ಈಗ ನೀವು ಮಾಡುತ್ತಿರುವ ಸತ್ರಯಾಗದಲ್ಲಿ ಇದು ಆರನೆಯ ದಿನವು. ಈದಿನ ಯಾವ

ಮಂತ್ರಗಳನ್ನು ಪಠಿಸಿ ಯಾವರೀತಿ ಕರ್ಮಾನುಷ್ಠಾನಮಾಡಬೇಕೆಂಬ ವಿಷಯದಲ್ಲಿ ನಿಮಗೆ ಇರುವ ಸಂಶಯವನ್ನು ಪರಿಹರಿಸಿ ಮುಂದಿನ ಕರ್ತವ್ಯವನ್ನು ತಿಳಿಸುತ್ತೇನೆ. ಕದೇಠಂತೆ ನೀವು ಸತ್ರಯಾಗವನ್ನು ಮಾಡಿ ಪೂರೈಸಿದಮೇಲೆ ಸ್ವರ್ಗಕ್ಕೆ ಹೋಗುವಾಗ ಯಜ್ಞಾರ್ಥವಾಗಿ ಸಂಗ್ರಹಿಸಿ ಉಳಿದಿರುವ ಸಹಸ್ರ ಗೋವುಗಳನ್ನೂ, ಇತರ ಧನವನ್ನೂ ನನಗೆ ಕೊಡಿ ಎಂದನು. ಹಾಗೆಯೇ ಆಗಲೆಂದು ಋಷಿಗಳು ಒಪ್ಪಿಕೊಳ್ಳಲು ನಾಭಾನೇದಿಷ್ಠನು—**ಇದಮಿತ್ಥಾ ರೌದ್ರಂ** (ಋ. ಸಂ. ೧೦ ೬೧) ಎಂಬ ಸೂಕ್ತವನ್ನೂ **ಯೇ ಯಜ್ಞೇನ** (ಋ. ಸಂ. ೧೦-೬೨) ಎಂಬ ಸೂಕ್ತವನ್ನೂ ಪಠಿಸಿ ಅವರಿಂದಲೂ ಪಠಿಸಿಸಿದನು. ಅದರಿಂದ ಋಷಿಗಳ ಯಜ್ಞವು ಸಾಂಗವಾಗಿ ನೆರವೇರಿ ಅವರು ಯಜ್ಞಾನುಷ್ಠಾನಸ್ವರೂಪವನ್ನೂ, ಸ್ವರ್ಗಲೋಕದ ಪ್ರಾಪ್ತಿಯನ್ನೂ ಕಂಡುಕೊಂಡರು. ಆದ್ದರಿಂದ ಯಜ್ಞದ ಆರನೆಯ ದಿವಸ ಹೋತೃವು ಈ ಎರಡು ಸೂಕ್ತಗಳನ್ನೂ ಪಠಿಸಬೇಕು. ಆದರಿಂದ ಯಜ್ಞಾನುಷ್ಠಾನ ಮತ್ತು ಸ್ವರ್ಗಪ್ರಾಪ್ತಿಯು ಉಂಟಾಗುವುದು.

> **ತಂ ಸ್ವರ್ಯಂತೋಽಬ್ರುವನ್ನೇತತ್ತೇ ಬ್ರಾಹ್ಮಣ ಸಹಸ್ರಮಿತಿ ತದೇನಂ ಸಮಾಕುರ್ವಾಣಂ ಪುರುಷಃ ಕೃಷ್ಣಶವಾಸ್ಯುತ್ತರತ ಉಪೋತ್ಥಾಯಾಬ್ರವೀನ್ಮಮ ವಾ ಇದಂ ಮಮ ವೈ ವಾಸ್ತುಹಮಿತಿ ಸೋಽಬ್ರವೀನ್ಮಹ್ಯಂ ವಾ ಇದಮದುರಿತಿ ತಮಬ್ರವೀತ್ತದ್ವೈನೌ ತನ್ವೈವ ಪಿತರಿ ಪ್ರಶ್ನ ಇತಿ ಸ ಪಿತರಮೈತ್ತಂ ಪಿತಾಬ್ರವೀನ್ನನು ತೇ ಪುತ್ರಕಾದೂ ೩ ರಿತ್ಯದುರೇವ ಮ ಇತ್ಯಬ್ರವೀತ್ತತ್ತು ಮೇ ಪುರುಷಃ ಕೃಷ್ಣಶವಾಸ್ಯುತ್ತರತ ಉಪೋದತಿಷ್ಠನ್ಮಮ ವಾ ಇದಂ ಮಮ ವೈ ವಾಸ್ತುಹಮಿತ್ಯಾದಿತೇತಿ ತಂ ಪಿತಾಬ್ರವೀತ್ತಸ್ಯೈವ ಪುತ್ರಕ ತತ್ತತ್ತು ಸ ತುಭ್ಯಂ ದಾಸ್ಯತೀತಿ ಸ ಪುನರೇತ್ಯಾಬ್ರವೀತ್ತವ ಹ ವಾವ ಕಿಲ ಭಗವ ಇದಮಿತಿ ಮೇ ಪಿತಾಹೇತಿ ಸೋಽಬ್ರವೀತ್ತದಹಂ ತುಭ್ಯಮೇವ ದದಾಮಿ ಯ ಏವ ಸತ್ಯಮವಾದೀರಿತಿ ||**

ಯಜ್ಞಪರಿಸಮಾಪ್ತಿಯಾದನಂತರ ಅಂಗಿರಾಋಷಿಗಳು ನಾಭಾನೇದಿಷ್ಠನನ್ನು ಕರೆದು, ಎಲೈ ಬ್ರಾಹ್ಮಣನೇ, ನಾವು ಸ್ವರ್ಗಕ್ಕೆ ಹೋಗುತ್ತೇವೆ. ಆದ್ದರಿಂದ ನಮಗೆ ಈ ಗೋವುಗಳ ಅವಶ್ಯಕತೆ ಇಲ್ಲ. ಹಿಂದೆ ಹೇಳಿದಂತೆ ಈ ಸಹಸ್ರ ಗೋವುಗಳನ್ನು ನಿನಗೆ ಕೊಟ್ಟಿದೇವೆ. ಅವುಗಳನ್ನು ತೆಗೆದುಕೋ ಎಂದರು. [ಇಲ್ಲಿ ಎಂದರೆ ಮೇಲಿನ ಬ್ರಾಹ್ಮಣವಾಕ್ಯದಲ್ಲಿ **ಸಹಸ್ರಂ** ಎಂಬ ಶಬ್ದಮಾತ್ರವಿರುವುದು. ಸಹಸ್ರಶಬ್ದಕ್ಕೆ ಸಹಸ್ರ ಗೋವುಗಳು ಎಂದರ್ಥವು ಹೇಗಾಯಿತು ಎಂಬ ವಿಷಯದಲ್ಲಿ ಭಾಷ್ಯಕಾರರು—**ತೇ ಸುವರ್ಗಂ ಲೋಕಂ ಯಂತೋ ಯ ಏಷಾಂ ಪಶವ ಆಸಂಸ್ತಾನಸ್ಮಾ ಅದದುಃ** ಎಂಬ ಶಾಖಾಂತರಬ್ರಾಹ್ಮಣವಾಕ್ಯವನ್ನು ಉದಾಹರಿಸಿದಾರೆ]. ಋಷಿಗಳ ಮಾತಿನಂತೆ ನಾಭಾನೇದಿಷ್ಠನು ಅವರು ಕೊಟ್ಟ ಗೋವುಗಳನ್ನು ತನ್ನ ಹತ್ತಿರ ಒಟ್ಟಾಗಿ ಸೇರಿಸುತ್ತಿರುವಾಗ ಆ ಯಜ್ಞಭೂಮಿಯ ಉತ್ತರಭಾಗದಲ್ಲಿ ಕೊಳಕಾದ ಬಟ್ಟೆಗಳನ್ನು ಧರಿಸಿದ ಓರ್ವಪುರುಷನು ಆವಿರ್ಭವಿಸಿ ನಾಭಾನೇದಿಷ್ಠನನ್ನು ಕುರಿತು ಇಂತೆಂದನು—(ಮೂಲದಲ್ಲಿ **ಕೃಷ್ಣಶವಾಸೀ** ಎಂದಿರುವುದು. **ಅತಿಶಯೇನ ಕೃಷ್ಣಂ ಮಲಿನಂ ವಸ್ತ್ರಂ ಕೃಷ್ಣಶಂ ತದ್ವಸ್ತ್ರ ಆಚ್ಛಾದಯತೀತಿ ಕೃಷ್ಣಶವಾಸೀ | ಅತ್ರಾಯಂ ಮಲಿನವಸ್ತ್ರಃ ಪುರುಷಃ ಪಶುಸ್ವಾಮೀ ರುದ್ರ ಇತ್ಯವಗಂತವ್ಯಂ | ತಥಾ ಚ ಶಾಖಾಂತರೇ ಪಠ್ಯತೇ—ತಂ ಪಶುಭಿಶ್ಚರಂತಂ ಯಜ್ಞವಾಸ್ತೌ ರುದ್ರ ಆಗಚ್ಛತ್ |** ಅತಿಶಯವಾಗಿ ಕೊಳಕಾದ ಒಟ್ಟೆಗೆ ಕೃಷ್ಣಶವೆಂದೂ, ಅಂತಹ ಮಲಿನವಸ್ತ್ರವನ್ನು ಧರಿಸಿದವನಿಗೆ ಕೃಷ್ಣಶವಾಸೀ ಎಂದು ಹೆಸರು. ಇಲ್ಲಿ ಆ ಮಲಿನ ವಸ್ತ್ರಧಾರಿಯು ಯಾರೆಂದರೆ, ಅವನು ರುದ್ರನೇ ಹೊರತು ಬೇರೆ ಯಾರೂ ಅಲ್ಲ. ಈ ವಿಷಯದಲ್ಲಿ—**ತಂ ಪಶುಭಿಶ್ಚರಂತಂ ಯಜ್ಞವಾಸ್ತೌ ರುದ್ರ ಆಗಚ್ಛತ್** ಎಂದು ಶ್ರುತಿವಾಕ್ಯವಿರುವುದು). ಎಲೈ ನಾಭಾನೇದಿಷ್ಠನೇ. ಈ ಯಜ್ಞಭೂಮಿಯಲ್ಲಿ ಉಳಿದಿರುವ ಪಶುಗಳೆಲ್ಲವೂ ನನ್ನದು. ಇವುಗಳನ್ನು ನೀನು ತೆಗೆದುಕೊಳ್ಳಕೂಡದು ಎಂದನು. (ಮೂಲ

ದಲ್ಲಿ **ವಾಸ್ತುಹಂ** ಎಂಬ ಶಬ್ದಪ್ರಯೋಗವಿದೆ. ವಾಸ್ತು ಎಂದರೆ ಯಜ್ಞಭೂಮಿಯು. **ವಾಸ್ತೌ ಯಜ್ಞಭೂಮೌ ಹೀನಂ ಕರ್ಮಾಂತೇ ಪರಿತ್ಯಕ್ತಂ ವಾಸ್ತುಹಂ ತಾದೃಶಂ ಸರ್ವಂ ಮಮೈವ ಸ್ವಂ**—ಕರ್ಮಸಮಾಪ್ತಿಯಾದ ಮೇಲೆ ಯಜ್ಞಭೂಮಿಯಲ್ಲಿ ಉಳಿದ ಸಮಸ್ತವೂ ನನ್ನ ಸ್ವತ್ತಾದುದರಿಂದ ನನಗೆ ಸೇರಬೇಕು ಎಂದು ರುದ್ರನ ವಾಕ್ಯವು). ಅದನ್ನು ಕೇಳಿ ನಾಭಾನೇದಿಷ್ಠನು ಆ ಪುರುಷನನ್ನು ಕುರಿತು—ಎಲೈ ರುದ್ರನೇ, ಈ ಸಹಸ್ರ ಗೋವುಗಳನ್ನು ನನಗೆ ಅಂಗಿರಸರು ಕೊಟ್ಟರು. ಆದ್ದರಿಂದ ಅವು ನನ್ನದು ಎನ್ನಲು, ಪುನಃ ರುದ್ರನು ಎಲೈ ನಾಭಾನೇದಿಷ್ಠನೇ, ಈ ಗೋವುಗಳು ನನ್ನದೆಂದು ನಾನೂ, ನನಗೆ ಸೇರಬೇಕೆಂದು ನೀನೂ ಹೇಳುತ್ತಿರುವುದರಿಂದ ಈ ಪ್ರಶ್ನೆಯ ಇತ್ಯರ್ಥವು ನಿನ್ನ ತಂದೆಯಿಂದಲೇ ಆಗಬೇಕಾಗಿದೆ. ಆದ್ದರಿಂದ ನೀನು ನಿನ್ನ ತಂದೆಯ ಬಳಿಗೆ ಹೋಗಿ ಈ ಗೋವುಗಳು ಯಾರದು ಎಂದು ಕೇಳಿಕೊಂಡು ಬಾ ಎಂದನು. ರುದ್ರನ ಮಾತಿನಂತೆ ನಾಭಾನೇದಿಷ್ಠನು ತನ್ನ ತಂದೆಯ ಬಳಿಗೆ ಹೋಗಲು ಅವನ ತಂದೆಯಾದ ಮನುವು ನಾಭಾನೇದಿಷ್ಠನನ್ನು ಕುರಿತು ಎಲೈ ಬಾಲಕನೇ, ಅಂಗಿರಸರು ನಿನಗೆ ಗೋವುಗಳನ್ನು ಕೊಡಲಿಲ್ಲವೇ ಎಂದು ಕೇಳಲು, ನಾಭಾನೇದಿಷ್ಠನು, ಅಂಗಿರಾಋಷಿಗಳು ಗೋವುಗಳನ್ನು ನನಗೆ ಕೊಟ್ಟರು ಎಂದನು. ಮನುವು ಹಾಗಾದರೆ ಈಗ ಏನು ವಿಚಾರ, ಗೋವುಗಳನ್ನು ತರದೆ ಬರಿಕೈಯಲ್ಲಿ ಏಕೆ ಬಂದಿದ್ದೀಯೆ ಎಂದು ಪ್ರಶ್ನೆ ಮಾಡಲು ನಾಭಾನೇದಿಷ್ಠನು—ಋಷಿಗಳು ಗೋವುಗಳನ್ನು ಕೊಟ್ಟರು. ಅವುಗಳನ್ನು ನಾನು ತೆಗೆದುಕೊಳ್ಳುತ್ತಿರುವ ಸಮಯದಲ್ಲಿ ಕೊಳಕು ಬಟ್ಟೆಯನ್ನುಟ್ಟ ಓರ್ವ ಪುರುಷನು ಯಜ್ಞಭೂಮಿಯ ಉತ್ತರದಿಕ್ಕಿನಿಂದ ಬಂದು ಈ ಸಹಸ್ರ ಗೋವುಗಳೂ ನನ್ನದು. ಏಕೆಂದರೆ ಯಜ್ಞಭೂಮಿಯಲ್ಲಿ ಕರ್ಮಸಮಾಪ್ತಿಯಾದಮೇಲೆ ಉಳಿಯುವ ಸ್ವತ್ತಿಗೆ ನಾನೇ ಒಡೆಯನು ಎಂದು ಹೇಳಿ ಆ ಗೋವುಗಳನ್ನೆಲ್ಲಾ ತಾನೇ ತೆಗೆದುಕೊಂಡನು ಎಂದು ಹೇಳಿ ಸುಮ್ಮನೆ ನಿಂತುಕೊಂಡನು. ಬಳಿಕ ತಂದೆಯು—ಎಲೈ ಪುತ್ರನೇ, ಆ ಮಲಿನವಸ್ತ್ರಧಾರಿಯಾದ ಪುರುಷನು ಹೇಳುವುದು ಸರಿ. ಯಜ್ಞಭೂಮಿಯಲ್ಲಿ ಉಳಿಯುವ ಗೋವುಗಳಿಗೂ, ಇತರ ಧನಾದಿಗಳಿಗೂ ರುದ್ರನೇ ಒಡೆಯನು. ಏಕೆಂದರೆ, ರುದ್ರನೇ ಪಶುಗಳಿಗೆ ಅಧಿಪತಿಯು ಮತ್ತು ಯಜ್ಞಾವಶಿಷ್ಟಕ್ಕೂ ಅವನೇ ಒಡೆಯನು. ಆದರೂ ನೀನು ಈ ವಿಷಯದಲ್ಲಿ ಯೋಚನೆ ಮಾಡಬೇಡ. ಆ ರುದ್ರನು ಗೋವುಗಳನ್ನು ನಿನಗೇ ಕೊಡುವನು ಎಂದು ಹೇಳಿಕಳುಹಿಸಿದನು. ತಂದೆಯ ಮಾತನ್ನು ಕೇಳಿ ನಾಭಾನೇದಿಷ್ಠನು ಪುನಃ ರುದ್ರನ ಬಳಿಗೆ ಬಂದು ತಂದೆಯ ಮಾತನ್ನು ಈ ರೀತಿ ತಿಳಿಸಿದನು—ಈ ಪಶುಗಳೆಲ್ಲವೂ ಯಜ್ಞಕಾಲದಲ್ಲಿ ಅಂಗಿರಸರದಾಗಿತ್ತು. ಯಜ್ಞಸಮಾಪ್ತಿಯಾದನಂತರ ಉಳಿದ ಪಶುಗಳಿಗೂ ಧನಕ್ಕೂ ರುದ್ರನೇ ಸ್ವಾಮಿಯು. ಆದ್ದರಿಂದ ಅವುಗಳನ್ನು ಇತರರಿಗೆ ಕೊಡಲು ಅಂಗಿರಸರಿಗೆ ಯಾವ ಅಧಿಕಾರವೂ ಇಲ್ಲ. ಆದ್ದರಿಂದ ಎಲೈ ಪೂಜ್ಯನೇ, ಇವೆಲ್ಲವೂ ನಿನ್ನದೇ ಆಗಿದೆ ಎಂದು ತಂದೆಯು ವಚನವನ್ನು ರುದ್ರನಿಗೆ ತಿಳಿಸಿದನು. (ಶಾಖಾಂತರದಲ್ಲಿ ರುದ್ರವಚನವು ಈ ರೀತಿ ಇರುವುದೆಂದು—**ನ ವೈ ತಸ್ಯ ತದೀಶತ ಇತ್ಯಬ್ರವೀದ್ಯಜ್ಞವಾಸ್ತೌ ಹೀಯತೇ ಮಮ ವೈ ತತ್** ಎಂದು ಭಾಷ್ಯಕಾರರು ಶ್ರುತಿವಾಕ್ಯವನ್ನುದಾಹರಿಸಿದ್ದಾರೆ.) ರುದ್ರನು ನಾಭಾನೇದಿಷ್ಠನ ಮಾತಿಗೆ ಸಂತೋಷಪಟ್ಟು ಎಲೈ ಬ್ರಾಹ್ಮಣನೇ, ನೀನು ಸುಳ್ಳು ಹೇಳದೆ ಸತ್ಯವನ್ನೇ ನುಡಿದಿರುವಿಯಾದ್ದರಿಂದ ಆ ಸಹಸ್ರ ಗೋವುಗಳನ್ನು ನಿನಗೆ ಕೊಡುತ್ತೇನೆ ತೆಗೆದುಕೋ ಎಂದು ಹೇಳಿ ಸಹಸ್ರ ಗೋವುಗಳನ್ನೂ ಅವನಿಗೆ ಕೊಟ್ಟನು.

**ತಸ್ಮಾದೇವಂ ವಿದುಷಾ ಸತ್ಯಮೇವ ವದಿತವ್ಯಂ ಸ ಏಷ ಸಹಸ್ರಸನಿರ್ಮಂತ್ರೋ ಯನ್ನಾಭಾನೇದಿಷ್ಠಃ ಉಪೈನಂ ಸಹಸ್ರಂ ನಮತಿ ಪ್ರ ಷಷ್ಠೇನಾಹ್ನಾ ಸ್ವರ್ಗಂ ಲೋಕಂ ಜಾನಾತಿ ಯ ಏವಂ ವೇದ ॥**

(ಐ. ಬ್ರಾ. ೨೨–೧೪)

ಆದ್ದರಿಂದ ವಿದ್ವಾಂಸನಾಗಿ ಎಲ್ಲವನ್ನೂ ತಿಳಿದವನು ಯಾವಾಗಲೂ ಸತ್ಯವನ್ನೇ ಹೇಳಬೇಕು. ನಾಭಾನೇದಿಷ್ಠನಿಂದ ಪಠಿತವಾದ ಈ ಮಂತ್ರವು ಸಹಸ್ರಸಂಖ್ಯಾಕವಾದ ವಸ್ತುಗಳನ್ನು ಕೊಡುವುದರಿಂದ ಇದು ಸಹಸ್ರಸನಿಃ ಎಂದು ಪ್ರಸಿದ್ಧವಾಗಿದೆ. ಈ ಮಂತ್ರವನ್ನೂ ಈ ಮಂತ್ರದ ಅರ್ಥವನ್ನೂ ತಿಳಿದಿರುವ ಪುರುಷನು ಸಹಸ್ರಸಂಖ್ಯಾಕವಾದ ಧನವನ್ನು ಪಡೆಯುವುದಲ್ಲದೆ, ಯಾಗದ ಆರನೆಯ ದಿನ ಇದರಂತೆ ಕರ್ಮಾನುಷ್ಠಾನ ಮಾಡಿ ಸ್ವರ್ಗಲೋಕವನ್ನು ಹೊಂದುವ ವಿಧಾನವನ್ನು ತಿಳಿದುಕೊಳ್ಳುವನು.

ಕೃಷ್ಣಯಜುರ್ವೇದ ತೈತ್ತಿರೀಯ ಸಂಹಿತೆಯಲ್ಲಿಯೂ ಈ ವಿಷಯದ ಪ್ರಸ್ತಾಪವಿದೆ. ಮಂಥಿಸಂಸ್ರಾವ ಹೋಮದ ವಿಷಯವನ್ನು ವಿವರಿಸುತ್ತಾ ಅದರ ಅವಶ್ಯಕತೆಯನ್ನು ತಿಳಿಸುವುದಕ್ಕಾಗಿ ಈ ಉಪಾಖ್ಯಾನದ ವಿವರಣೆ ಇದೆ—

**ಮನುಃ ಪುತ್ರೇಭ್ಯೋ ದಾಯಂ ವ್ಯಭಜತ್ಸ ನಾಭಾನೇದಿಷ್ಠಂ ಬ್ರಹ್ಮಚರ್ಯಂ ವಸಂತಂ ನಿರ–ಭಜತ್ಸ ಆಗಚ್ಛತ್ಸೋಽಬ್ರವೀತ್ಕಥಾ ಮಾ ನಿರಭಾಗಿತಿ ನ ತ್ವಾ ನಿರಭಾಕ್ಷಮಿತ್ಯಬ್ರವೀದಂಗಿರಸ ಇಮೇ ಸತ್ರಮಾಸತೇ ತೇ ಸುವರ್ಗಂ ಲೋಕಂ ನ ಪ್ರ ಜಾನಂತಿ ತೇಭ್ಯ ಇದಂ ಬ್ರಾಹ್ಮಣಂ ಬ್ರೂಹಿ ತೇ ಸುವರ್ಗಂ ಲೋಕಂ ಯಂತೋ ಯ ಏಷಾಂ ಪಶವಸ್ತಾಗ್ ಸ್ತೇ ದಾಸ್ಯಂತೀತಿ ತದೇಭ್ಯೋಽಬ್ರವೀತ್ತೇ ಸುವರ್ಗಂ ಲೋಕಂ ಯಂತೋ ಯ ಏಷಾಂ ಪಶವ ಆಸನ್ತಾನಸ್ಮಾ ಅದದುಸ್ತಂ ಪಶುಭಿಶ್ಚರಂತಂ ಯಜ್ಞವಾಸ್ತೌ ರುದ್ರ ಆಗಚ್ಛತ್ಸೋಽಬ್ರವೀನ್ಮಮ ವಾ ಇಮೇ ಪಶವ ಇತ್ಯದುರ್ವೈ ಮಹ್ಯಮಿಮಾನಿತ್ಯಬ್ರವೀನ್ನ ವೈ ತಸ್ಯ ತ ಈಶತ ಇತ್ಯಬ್ರವೀದ್ಯಜ್ಞವಾಸ್ತೌ ಹೀಯತೇ ಮಮ ವೈ ತದಿತಿ ತಸ್ಮಾದ್ಯಜ್ಞವಾಸ್ತು ನಾಭ್ಯವೇತ್ಯಗ್ಂ ಸೋಽಬ್ರವೀದ್ಯಜ್ಞೇ ಮಾಭಜಾಥ ತೇ ಪಶೂನ್ನಾಭಿ ಮಗ್ಂಸ್ಯ ಇತಿ ತಸ್ಮಾ ಏತಂ ಮಂಥಿನಸ್ಸಗ್ಂಸ್ರಾವಮಜುಹೋ-ತ್ತತೋ ವೈ ತಸ್ಯ ರುದ್ರಃ ಪಶೂನ್ನಾಭ್ಯಮನ್ಯತ ಯತ್ರೈತಮೇವಂ ವಿದ್ವಾನ್ಮಂಥಿನಸ್ಸಗ್ಂ-ಸ್ರಾವಂ ಜುಹೋತಿ ನ ತತ್ರ ರುದ್ರಃ ಪಶೂನಭಿ ಮನ್ಯತೇ ॥**

(ತೈ. ಸಂ. ೩-೧-೯-೪,೫,೬,೭)

ಪೂರ್ವದಲ್ಲಿ ಮನುವು ತನ್ನ ಆಸ್ತಿಯನ್ನು ತನ್ನ ಪುತ್ರರಿಗೆ ವಿಭಾಗಮಾಡಿಕೊಟ್ಟನು. ಆ ಕಾಲದಲ್ಲಿ ಅವನ ಕಿರಿಯ ಪುತ್ರನಾದ ನಾಭಾನೇದಿಷ್ಠನೆಂಬುವನು ತಂದೆಯ ಬಳಿ ಇರಲಿಲ್ಲ. ಗುರುವಿನ ಬಳಿ ಬ್ರಹ್ಮಚರ್ಯವ್ರತಸ್ಥನಾಗಿ ವೇದಾಧ್ಯಯನವನ್ನು ಮಾಡುತ್ತಿದ್ದನು. ಆದ್ದರಿಂದ ಅವನ ಜ್ಞಾಪಕವಿಲ್ಲದ್ದರಿಂದಲೋ ಅಥವಾ ಅವನ ಜ್ಯೇಷ್ಠ ಸಹೋದರರ ಪ್ರೇರಣೆಯಿಂದಲೋ ಅಥವಾ ಮತ್ತಾವ ಕಾರಣದಿಂದಲೋ ನಾಭಾನೇದಿಷ್ಠನನ್ನು ಬಿಟ್ಟು ಉಳಿದ ಪುತ್ರರಿಗೆ ಎಲ್ಲಾ ಆಸ್ತಿಯನ್ನೂ ವಿಭಾಗಮಾಡಿ ಹಂಚಿದನು. ಕೆಲವು ಕಾಲದಮೇಲೆ ಗುರುಕುಲದಲ್ಲಿದ್ದ ನಾಭಾನೇದಿಷ್ಠನು ತನ್ನ ವಿದ್ಯಾಭ್ಯಾಸವನ್ನು ಮುಗಿಸಿ ತಂದೆಯ ಬಳಿಗೆ ಬಂದು ಆಸ್ತಿಯೆಲ್ಲವೂ ತನ್ನ ಜ್ಯೇಷ್ಠ ಸಹೋದರರಿಗೇ ಸೇರಿಹೋಗಿರುವುದನ್ನೂ ತನಗೆ ಏನೂ ಇಲ್ಲದಿರುವುದನ್ನೂ ಕಂಡು ತನ್ನ ತಂದೆಯನ್ನು ಕುರಿತು—ಎಲೈ ತಂದೆಯೇ, ಏತಕ್ಕಾಗಿ ನನಗೆ ಆಸ್ತಿಯಲ್ಲಿ ಭಾಗವನ್ನು ಕೊಡಲಿಲ್ಲ ಎಂದು ಪ್ರಶ್ನೆ ಮಾಡಲು, ಅದಕ್ಕೆ ಮನುವು—ಎಲೈ ಪುತ್ರನೇ, ನಿನಗೆ ಆಸ್ತಿಯಲ್ಲಿ ಭಾಗವಿಲ್ಲದಂತೆ ನಾನು ಮಾಡಿಲ್ಲ. ನಿನಗಿರುವ ಆಸ್ತಿಯನ್ನು ತಿಳಿಸುವೆನು ಕೇಳು. ಈಗ ಅಂಗಿರಸರೆಂಬ ಋಷಿಗಳು ಸ್ವರ್ಗಕ್ಕೆ ಹೋಗಬೇಕೆಂದು ಬಯಸಿ ಸತ್ರಯಾಗವನ್ನು ಮಾಡುತ್ತಿರುವರು. ಆದರೆ ಸ್ವರ್ಗಪ್ರಾಪ್ತಿಗಾಗಿ ಯಾವ ಮಂತ್ರವನ್ನು ಪಠಿಸಬೇಕು ? ಸ್ವರ್ಗಸಾಧನ ಉಪಾಯ ಯಾವುದು ? ಎಂಬುದನ್ನು ತಿಳಿಯದೆ ಪೇಚಾಡು

ತ್ತಿರುವರು. ನೀನು ಅವರು ಮಾಡುತ್ತಿರುವ ಯಜ್ಞಭೂಮಿಗ ಹೋಗಿ ಈ ಮಂತ್ರವನ್ನು (ಋ. ಸಂ. ೧೦ನೇ ಮಂಡಲದ ೬೧ ಮತ್ತು ೬೨ ನೇ ಸೂಕ್ತಗಳನ್ನು) ಅವರಿಗೆ ತಿಳಿಸು. ಅದರಿಂದ ಅವರು ಯಜ್ಞವನ್ನು ಸಾಂಗವಾಗಿ ನೆರವೇರಿಸಿ ಯಜ್ಞಾರ್ಥವಾಗಿ ಸಂಗ್ರಹಿಸಿರುವ ಪಶುಗಳಲ್ಲಿ ಉಳಿದಿರುವ ಪಶುಗಳನ್ನು ನಿನಗೆ ಕೊಡುವರು. ಅದೇ ನಿನ್ನ ಭಾಗವು ಎಂದು ಹೇಳಿದನು. ಅದರಂತೆ ನಾಭಾನೇದಿಷ್ಠನು ಅಂಗಿರಸರ ಬಳಿಗೆ ಹೋಗಿ ತಂದೆಯು ತಿಳಿಸಿದ ಮಂತ್ರವನ್ನು ಉಪದೇಶಿಸಲು ಅವರು ಸಂತುಷ್ಟರಾಗಿ ಯಜ್ಞವನ್ನು ಮುಗಿಸಿ ಸ್ವರ್ಗಕ್ಕೆ ಹೋಗುವ ಸಮಯದಲ್ಲಿ ಯಜ್ಞಶೇಷವಾಗಿ ಉಳಿದಿದ್ದ ಗೋವುಗಳನ್ನೆಲ್ಲಾ ನಾಭಾನೇದಿಷ್ಠನಿಗೆ ಕೊಟ್ಟರು. ಆ ಪಶುಗಳನ್ನು ತೆಗೆದುಕೊಳ್ಳುವ ಸಮಯದಲ್ಲಿ ಅಲ್ಲಿಯೇ ಯಜ್ಞಭೂಮಿಯಲ್ಲಿ ಸಂಚರಿಸುತ್ತಿದ್ದ ರುದ್ರನು ಬಂದು, ಎಲೈ ನಾಭಾನೇದಿಷ್ಠನೆ, ಈ ಪಶುಗಳು ನನ್ನವು ಅದನ್ನು ನೀನು ತೆಗೆದುಕೊಳ್ಳಕೂಡದು ಎಂದು ತಡೆದನು. ನಾಭಾನೇದಿಷ್ಠನು ಇದನ್ನು ಕೇಳಿ—ಎಲೈ ರುದ್ರನೇ, ಈ ಪಶುಗಳನ್ನು ಅಂಗಿರಸರು ಕೊಟ್ಟಿರುವರು. ಆದ್ದರಿಂದ ಅವು ನನಗೆ ಸೇರಬೇಕು ಎನ್ನಲು ರುದ್ರನು ಪುನಃ—ಯಜ್ಞ ಸಮಾಪ್ತಿ ಕಾಲದಲ್ಲಿ ಉಳಿಯುವ ಪಶುಗಳಿಗೆ ಅಂಗಿರಸರು ಒಡೆಯರಲ್ಲ. ಅವರಿಗೆ ಅವುಗಳ ಮೇಲೆ ಯಾವ ಅಧಿಕಾರವೂ ಇಲ್ಲ. ಆದ್ದರಿಂದ ಅವುಗಳನ್ನು ಇತರರಿಗೆ ದಾನ ಮಾಡುವ ಅಧಿಕಾರವೂ ಅವರಿಗಿಲ್ಲ. ಅದರ ಸ್ವಾಮಿತ್ವವು ನನಗೆ ಸೇರಿದೆ—ಎಂದು ಹೇಳಿ ಮತ್ತಿಂತೆಂದನು. ಎಲೈ ನಾಭಾನೇದಿಷ್ಠನೆ, ಒಂದು ವೇಳೆ ಈ ಗೋವುಗಳನ್ನು ನೀನು ಅಪೇಕ್ಷಿಸುವಿಯಾದರೆ ಯಜ್ಞದಲ್ಲಿ ನನ್ನನ್ನು ಭಜಿಸು ಎಂದರೆ ನನ್ನನ್ನುದ್ದೇಶಿಸಿ ಮಂಥಿಸಂಸ್ರಾವಹೋಮವನ್ನು ಅರ್ಪಿಸು. ಅದರಿಂದ ನಾನು ಸಂತುಷ್ಟನಾಗಿ ಪಶುಗಳನ್ನು ನೀನು ತೆಗೆದುಕೊಳ್ಳುವುದಕ್ಕೆ ನಾನು ಸಮ್ಮತಿಸುವೆನು ಎಂದನು. ಅದನ್ನು ಕೇಳಿ ನಾಭಾನೇದಿಷ್ಠನು ಮಂಥಿಸಂಸ್ರಾವಹೋಮವನ್ನು ಅರ್ಪಿಸಿ ಗೋವುಗಳನ್ನು ಪಡೆದನು. ಆದ್ದರಿಂದ ವಿವೇಕಿಯಾದ ಪುರುಷನು ರುದ್ರನಿಗೆ ಮಂಥಿಸಂಸ್ರಾವಹೋಮವನ್ನು ಅರ್ಪಿಸಿದರೆ ಪಶುಪ್ರಾಪ್ತಿಯ ವಿಷಯದಲ್ಲಿ ರುದ್ರನು ಅವನಿಗೆ ಯಾವ ಅಡ್ಡಿಯನ್ನೂ ಮಾಡುವುದಿಲ್ಲ.

ಐತರೇಯಬ್ರಾಹ್ಮಣದಲ್ಲಿ ಹೇಳಿರುವ ಉಪಾಖ್ಯಾನಕ್ಕೂ ಇದಕ್ಕೂ ಕೊನೆಯ ಭಾಗದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಮುಖ್ಯ ವಿಷಯಗಳಲ್ಲಿ ಏನೂ ವ್ಯತ್ಯಾಸವಿಲ್ಲ. ಈ ಉಪಾಖ್ಯಾನದಲ್ಲಿ ಅಂಗಿರಸರು ಸತ್ರಯಾಗವನ್ನು ಮಾಡಿದ ವಿಷಯವು ಉಕ್ತವಾಗಿರುವುದನ್ನು ತೈತ್ತಿರೀಯಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ—

**ಅಂಗಿರಸೋ ವೈ ಸತ್ರಮಾಸತ । ತೇಷಾಂ ಪೃಶ್ನಿರ್ಘರ್ಮಧುಗಾಸೀತ್ । ಸರ್ಜೀಷೇಣಾಜೀವತ್ । ತೇಽಬ್ರುವನ್ । ಕಸ್ಮೈ ನು ಸತ್ರಮಾಸ್ಮಹೇ । ಯೇಽಸ್ಯಾ ಓಷಧೀರ್ನ ಜನಯಾಮ ಇತಿ । ತೇ ದಿವೋ ವೃಷ್ಟಿಮಸೃಜಂತ । ಯಾವಂತಸ್ತೋಕಾ ಅವಾಪದ್ಯಂತ । ತಾವತೀರೋಷಧಯೋಽಜಾಯಂತ । ತಾ ಜಾತಾಃ ಪಿತರೋ ವಿಷೇಣಾಲಿಂಪನ್ । ತಾಸಾಂ ಜಗ್ಧ್ವಾ ರುಪ್ಯಂತ್ಯೈತ್ । ತೇಽಬ್ರುವನ್ । ಕ ಇದಮಿತ್ಥಮಕರಿತಿ । ವಯಂ ಭಾಗಧೇಯಮಿಚ್ಛಮಾನಾ ಇತಿ ಪಿತರೋಽಬ್ರುವನ್ । ಕಿಂ ವೋ ಭಾಗಧೇಯಮಿತಿ । ಅಗ್ನಿಹೋತ್ರ ಏವ ನೋಽಪ್ಯಸ್ತ್ವಿತ್ಯಬ್ರುವನ್ । ತೇಭ್ಯ ಏತದ್ಭಾಗಧೇಯಂ ಪ್ರಾಯಚ್ಛನ್ । ಯದ್ಧುತ್ವಾ ನಿಮಾರ್ಷ್ಟಿ । ತತೋ ವೈ ತ ಓಷಧೀರಸ್ವದಯನ್ । ಯ ಏವಂ ವೇದ । ಸ್ವದಂತೇಽಸ್ಮಾ ಓಷಧಯಃ । ತೇ ವತ್ಸಮುಪಾವಾಸೃಜನ್ । ಇದಂ ನೋ ಹವ್ಯಂ ಪ್ರದಾಪಯೇತಿ । ಸೋಽಬ್ರವೀದ್ವರಂ ವೃಣೈ । ದಶ ಮಾ ರಾತ್ರೀರ್ಜಾತಂ ನ ದೋಹನ್ । ಆಸಂಗವಂ ಮಾತ್ರಾ ಸಹ ಚರಾಣೀತಿ । ತಸ್ಮಾದ್ವತ್ಸಂ ಜಾತಂ ದಶ ರಾತ್ರೀರ್ನ ದುಹಂತಿ । ಆಸಂಗವಂ ಮಾತ್ರಾ ಸಹ ಚರತಿ । ವಾರೇ-**

**ವೃತಗ್ಂ ಹ್ಯಸ್ಯ । ತಸ್ಮಾದ್ವತ್ಸಗ್ಂ ಸಗ್ಂಸೃಷ್ಟಧಯಗ್ಂ ರುದ್ರೋ ಘಾತುಕಃ । ಅತಿ ಹಿ ಸಂಧಾಂ ಧಯತಿ ॥**

(ತೈ. ಬ್ರಾ. ೨-೧-೧-೧, ೨, ೩)

ಅಗ್ನಿಹೋತ್ರವನ್ನು ವಿವರಿಸುವುದಕ್ಕಾಗಿ ಅಂಗಿರಸರೆಂಬ ಋಷಿಗಳು ಸತ್ರಯಾಗವನ್ನು ಮಾಡಿದ ವಿಷಯವನ್ನು ಪೀಠಿಕಾ ರೂಪವಾಗಿ ಪ್ರಸ್ತಾಪಮಾಡಲಾಗಿದೆ. ಅಂಗಿರಸರೆಂಬ ಋಷಿಗಳು ಸತ್ರಯಾಗವನ್ನು ಮಾಡಿದಾಗ ಪೃಶ್ನೀ ಎಂಬ ಶ್ವೇತ ವರ್ಣದ ಗೋವು (ಈ ಗೋವು ಮರುದ್ದೇವತೆಗಳ ಮಾತೆಯೆಂದು ಪ್ರಸಿದ್ಧವಾಗಿದೆ. ಇದರ ವಿಷಯವನ್ನು ನಾವು ಹಿಂದೆ ವಿಸ್ತಾರದಾಗಿ ವಿವರಿಸಿದ್ದೇವೆ). ಪ್ರವರ್ಗ್ಯಾರ್ಥವಾಗಿ ಹಾಲನ್ನು ಕರೆಯುತ್ತಿತ್ತು. ಆ ಕಾಲದಲ್ಲಿ ಅನಾವೃಷ್ಟಿಯಿದ್ದುದರಿಂದ ಗೋವುಗಳ ಆಹಾರವಾದ ಹುಲ್ಲಿಗೆ ಅಭಾವವಾಗಿತ್ತು. ಆದ್ದರಿಂದ ಆ ಪೃಶ್ನಿಯೆಂಬ ಧೇನುವು ಆಹಾರಕ್ಕಾಗಿ ಋಜೀಷವೆಂಬ ರಸವನ್ನು ತೆಗೆದ ಸೋಮಲತೆಗಳ ಸಿಪ್ಪೆಯನ್ನು ತಿಂದು ಜೀವಿಸಬೇಕಾಗಿತ್ತು. ಈ ರೀತಿ ಆಹಾರಕ್ಕಾಗಿ ತೊಂದರೆಪಡುತ್ತಿರುವ ಪೃಶ್ನಿಯನ್ನು ನೋಡಿ ಅಂಗಿರಸಋಷಿಗಳು ತಮ್ಮತಮ್ಮಲ್ಲಿ ಈರೀತಿ ಮಾತನಾಡಿಕೊಂಡರು ಯಾವ ಪ್ರಯೋಜನಕ್ಕಾಗಿ ನಾವು ಸತ್ರಯಾಗವನ್ನು ಮಾಡುತ್ತಿದ್ದೇವೆ ? ಈ ಗೋವಿಗೆ ತೃಣಾದಿಗಳಿಲ್ಲದೆ ಕಷ್ಟಪಡುತ್ತಿದೆಯಲ್ಲಾ ಇದಕ್ಕೆ ಏನುಮಾಡಬೇಕು ? ಹಸುರುಹುಲ್ಲು ಮೊದಲಾದ ವನಸ್ಪತಿಲತಾದಿಗಳು ಯಥೇಚ್ಛವಾಗಿ ಬೆಳೆಯುವಂತೆ ಮಾಡಬೇಕು. ಇದಕ್ಕಾಗಿ ಅಂತರಿಕ್ಷದಿಂದ ಮಳೆಬರುವಂತೆ ಮಾಡಬೇಕು ಎಂದಾಲೋಚಿಸಿ ಅದರಂತೆ ವೃಷ್ಟಿಯನ್ನು ಉತ್ಪತ್ತಿಮಾಡಿದರು. ಆ ವೃಷ್ಟಿಯಿಂದ ಭೂಮಿಯ ಮೇಲೆ ಎಷ್ಟು ಹನಿಗಳು (ಬಿಂದುಗಳು) ಬಿದ್ದವೋ ಅಷ್ಟು ಸಂಖ್ಯೆಯಲ್ಲಿ ಓಷಧಿವನಸ್ಪತಿಗಳು ಉತ್ಪನ್ನವಾದವು. ಆಗ ಪಿತೃದೇವತೆಗಳು ಅಗ್ನಿಹೋತ್ರದಲ್ಲಿ ತಮಗೂ ಒಂದು ಭಾಗ ಬೇಕೆಂದು ಅಪೇಕ್ಷಿಸಿ ಅದನ್ನು ಹೊಂದುವುದಕ್ಕಾಗಿ ವೃಷ್ಟಿಯಿಂದ ಉತ್ಪನ್ನವಾದ ಓಷಧಿವನಸ್ಪತಿಗಳನ್ನು ವಿಷದಿಂದ ಸವರಿ ಕಹಿಯಾಗುವಂತೆ ಮಾಡಿದರು. ಕಹಿಯಾದ ತೃಣಾದಿಗಳನ್ನು ಭಕ್ಷಿಸಿ ಆ ಪ್ರಶ್ನಿಯು ಮೂರ್ಛೆಯನ್ನು ಹೊಂದಿತು. ಇದನ್ನು ಕಂಡು ಅಂಗಿರಾಋಷಿಗಳು— ಈ ತೃಣಾದಿಗಳನ್ನು ಕಹಿಯಾಗುವಂತೆ ಯಾರು ಮಾಡಿದರು ಎಂದು ಕೇಳಲು, ಪಿತೃದೇವತೆಗಳು ನಮಗೆ ಆಹುತಿಯಲ್ಲಿ ಒಂದು ಭಾಗವು ಬೇಕೆಂದು ಬಯಸಿ ಅದಕ್ಕಾಗಿ ತೃಣಾದಿಗಳನ್ನು ಕಹಿಯಾಗುವಂತೆ ನಾವೇ ಮಾಡಿದೆವು ಎಂದು ಪ್ರತ್ಯುತ್ತರವಿತ್ತರು, ನಿಮ್ಮ ಭಾಗವೇನು ? ನಿಮಗೆ ಏನು ಬೇಕು ? ಎಂದು ಪುನಃ ಕೇಳಲು, ಅಗ್ನಿಹೋತ್ರದಲ್ಲಿ ನಮಗೂ ಒಂದು ಭಾಗವಿರಬೇಕೆಂದು ಕೇಳಿದರು. ಅಂಗಿರಸಋಷಿಗಳು ಹಾಗೆಯೇ ಆಗಲೆಂದು ಪಿತೃಗಳಿಗೂ (ಸ್ವಧಾ ಪಿತೃಭ್ಯಃ ಎಂಬ ಆಹುತಿಯನ್ನು) ಒಂದು ಭಾಗವನ್ನು ಕೊಡಲು ಅವರು ತೃಣಾದಿಗಳಲ್ಲಿದ್ದ ಕಹಿಯನ್ನು ಹೋಗಲಾಡಿಸಿ ಸಿಹಿಯಾಗಿ ರುಚಿಕರವಾಗಿರುವಂತೆ ಮಾಡಿದರು. ಈ ವಿಷಯವನ್ನು ತಿಳಿದ ಪುರುಷನ ವಿಷಯದಲ್ಲಿ ತೃಣಲತಾದಿಗಳು ಸ್ವಾದು (ರುಚಿ) ಯಾಗಿಯೇ ಇರುತ್ತವೆ.

ಅನಂತರ ಆ ಅಂಗಿರಸಋಷಿಗಳು ಹಾಲನ್ನು ಕರೆಯುವುದಕ್ಕಾಗಿ ಕರುವನ್ನು ಗೋವಿನ ಬಳಿಗೆ ಕರೆತಂದು ಎಲೈ ವತ್ಸವೇ, (ಕರುವೇ) ಯಜ್ಞದಲ್ಲಿ ಹವ್ಯವನ್ನು ಸಿದ್ಧಪಡಿಸುವುದಕ್ಕಾಗಿ ಹಾಲು ಬೇಕಾಗಿರುವುದು, ಅದನ್ನು ನಮ್ಮಗೆ ಕೊಡು ಎಂದು ಕೇಳಿದರು. ಅದಕ್ಕೆ ಕರುವು ನಿಮಗೆ ಹಾಲು ಬೇಕಾದರೆ ನನಗೆ ಒಂದು ವರವನ್ನು ಕೊಡಬೇಕು. ಕರುವು ಹುಟ್ಟಿದಮೇಲೆ ಹತ್ತುರಾತ್ರಿಗಳವರೆಗೆ (ಹತ್ತುದಿನಗಳವರೆಗೆ) ಹಸುವಿನಿಂದ ಹಾಲನ್ನು ಕರೆಯಕೂಡದು, ಹತ್ತು ದಿನಗಳ ಕಳೆದನಂತರವೂ ಹಾಲನ್ನು ಕರೆಯುವ ಸಮಯದಲ್ಲಿ ಪ್ರತಿದಿನವೂ ತಾಯಿಯೊಡನೆ ನಾನು ಅರ್ಧಪ್ರಹರಕಾಲ ಹಾಲನ್ನು ಪಾನಮಾಡುತ್ತಾ ಸುಖವಾಗಿ ಸಂಚರಿಸುತ್ತಿರಬೇಕು ಎಂದು ವರವನ್ನು ಕೇಳಿತು. ಋಷಿಗಳು ಹಾಗೆಯೇ ಆಗಲೆಂದೊಪ್ಪಿ ಅದರಂತೆ ವರವನ್ನು ಕೊಟ್ಟರು. ಆದ್ದರಿಂದ ಈಗಲೂ ಹೋಮಾರ್ಥವಾಗಿ ಗೋದೋಹನಮಾಡುವಾಗ

ಹೊಸದಾಗಿ ಕರುಹಾಕಿದ ಗೋವಿನಲ್ಲಿ ಹತ್ತುದಿನಗಳವರೆಗೆ ಹಾಲನ್ನು ಕರೆಯುವುದಿಲ್ಲ. ಕರುವೂ ಹಾಲನ್ನು ಪಾನ ಮಾಡುತ್ತಾ ತಾಯಿಯ ಬಳಿ ಇರುವುದು. ಒಂದು ವೇಳೆ ಇದಕ್ಕೆ ವಿರುದ್ಧವಾಗಿ ಹತ್ತುದಿನಗಳು ಕಳೆಯುವುದಕ್ಕೆ ಮುಂಚಿತವಾಗಿಯೇ ಹೋಮಾರ್ಥವಾಗಿ ಹಾಲನ್ನು ಕರೆದರೆ ಅಥವಾ ಹತ್ತುರಾತ್ರೆ ಕಳೆದನಂತರ ಕೆಚ್ಚಲಿನಲ್ಲಿರುವ ಹಾಲನ್ನೆಲ್ಲಾ ಕರೆದು ಕರುವಿಗೆ ಸ್ವಲ್ಪವೂ ಬಿಡದಿದ್ದರೆ ಅಂತಹ ಪುರುಷನನ್ನು ರುದ್ರದೇವನೇ ದಂಡಿಸುವನು. ಅವನ ಯಜ್ಞವನ್ನು ನಾಶಮಾಡುವನು ಎಂದು ಈ ಉಪಾಖ್ಯಾನದ ವಿವರಣೆ ಇದೆ.

ಸಾಯಣಭಾಷ್ಯಂ

**ಪಂಚಮೇಽನುವಾಕೇಽಷ್ಟೌ ಸೂಕ್ತಾನಿ । ತತ್ರೇದಮಿತ್ಥೇತಿ ಸಪ್ತವಿಂಶತ್ಯೃಚಂ ಪ್ರಥಮಂ ಸೂಕ್ತಂ ಮಾನವಸ್ಯ ನಾಭಾನೇದಿಷ್ಠಸ್ಯಾರ್ಷಂ ತ್ರೈಷ್ಟುಭಂ।ಇದಮಾದೀನಿ ಷಟ್ ಸೂಕ್ತಾನಿ ವೈಶ್ವದೇವಾನಿ। ತಥಾ ಚಾನುಕ್ರಾಂತಂ । ಇದಮಿತ್ಥಾ ಸಪ್ತಾಧಿಕಾ ನಾಭಾನೇದಿಷ್ಠೋ ಮಾನವೋ ವೈಶ್ವದೇವಂ ತದಿತಿ ॥ ಪೃಷ್ಠ್ಯಸ್ಯ ಷಷ್ಠೇಽಹನಿ ವೈಶ್ವದೇವಶಸ್ತ್ರ ಆಭಿಪ್ಲವಿಕಾತಿದೇಶಪ್ರಾಪ್ತಸ್ಯೋಷಾಸಾನಕ್ತೇತ್ಯಸ್ಯ ಸ್ಥಾನ ಇದಂ ಸೂಕ್ತಂ ।ಸೂತ್ರಿತಂ ಚ। ಉದ್ಧೃತ್ಯ ಚೋತ್ತಮಂ ಸೂಕ್ತಂ ತ್ರೀಣೀದಮಿತ್ಥಾ ರೌದ್ರಮಿತಿ। ಆ.೮-೧। ಇತಿ॥ ಅತ್ರೈತರೇಯಬ್ರಾಹ್ಮಣಂ । ನಾಭಾನೇದಿಷ್ಠಂ ವೈ ಮಾನವಂ ಬ್ರಹ್ಮಚರ್ಯಂ ವಸಂತಂ ಭ್ರಾತರೋ ನಿರ-ಭಜಂತ್ಸೋಽಬ್ರವೀದೇತ್ಯ ಕಿಂ ಮಹ್ಯಮಭಾಕ್ತೇತ್ಯೇತಮೇವ ನಿಷ್ಠಾವಮವವದಿತಾರಮಿತ್ಯಬ್ರುವನ್ನಿತ್ಯಾದಿ। ಐ.ಬ್ರಾ. ೫-೧೪ ॥ ತತ್ರ ನಾಭಾನೇದಿಷ್ಠೋ ಭ್ರಾತೃಭಿರ್ಭಾಗೇ ನಿರಾಕೃತಃ ಪಿತೃಸಾಮೀಪ್ಯಮಾಗತ್ಯ ಕಿಂ ಮಹ್ಯಂ ಭಾಗಂ ನ ಕಲ್ಪಿತವಾನಸೀತ್ಯಪೃಚ್ಛತ್ । ಸ ಚ ಕಿಮನೇನ ಭಾಗೇನ । ಅಂಗಿರಸಃ ಸ್ವರ್ಗಾರ್ಥಂ ಸತ್ರಮಾಸೀನಾಃ ಷಷ್ಠಾಹಃಪರ್ಯಂತಮನುಷ್ಠಾಯ ಮುಹ್ಯಂತಿ । ತಾನಿದಮಿತ್ಥೇತಿ ಸೂಕ್ತೇ ಶಂಸಯ ತೇ ಸ್ವರ್ಗಂ ಯಂತೋ ವಸಿಷ್ಠಾ ಗಾಃ ಸಹಸ್ರಸಂಖ್ಯಾಕಾನ್ದಾಸ್ಯಂತೀತಿ ಪಿತ್ರಾ ಪ್ರೇರಿತೋಽಂಗಿರಸಾಂ ಸಮೀಪ-ಮಾಗತ್ಯ ತೇಭ್ಯಃ ಸತ್ರಪರಿವೇಷಣಂ ಗೋಸಹಸ್ರಮುತ್ಕೋಚಂ ಪರಿಕಲ್ಪ್ಯ ತಾನೇತೇ ಸೂಕ್ತೇ ಷಷ್ಠೇಽ-ಹನ್ಯಶಂಸಯತ್ । ತೇ ಚ ತತ್ಸೂಕ್ತಸಾಮರ್ಥ್ಯಾದ್ಯಜ್ಞಂ ಪಾರಂ ಪ್ರಾಪಯ್ಯ ಸ್ವರ್ಜಿಗಮಿಷವೋಽಸ್ಮೈ ಗೋಸಹಸ್ರಂ ಪ್ರಾದುಃ । ತಂ ಚ ತದ್ಗೋಸಹಸ್ರಂ ಸ್ವೀಕುರ್ವಾಣಂ ಕಶ್ಚನ ಕೃಷ್ಣಶವಾಸೀ ಪುರುಷ ಉತ್ತರತ ಉತ್ಥಾಯ ಬ್ರಾಹ್ಮಣ ಮದೀಯಂ ಯಜ್ಞಶೇಷಭಾಗಂ ಮಾ ಸ್ವೀಕುರ್ವಿತ್ಯಬ್ರವೀತ್ । ಸ ಚ ಮಹ್ಯಮಂಗಿರಸಃ ಪ್ರಾದುರಿತಿ ಪ್ರತ್ಯಬ್ರವೀತ್ । ತರ್ಹಿ ಬ್ರಾಹ್ಮಣ ತವ ಪಿತರಮೇವ ಪೃಚ್ಛ ಕಸ್ಮೈ ಭಾಗಃ ಪ್ರಾಪ್ನುಯಾದಿತ್ಯುಕ್ತಃ ಪಿತೃಸಮೀಪಮಾಗತ್ಯ ಪಿತ್ರಾ ರುದ್ರಾಯಾಯಂ ನ್ಯಾಯ್ಯ ಇತಿ ತೇನೋಕ್ತಸ್ತವೈ-ವಾಯಂ ಭಾಗ ಇತಿ ಮಮ ಪಿತಾಬ್ರವೀದಿತಿ ಪ್ರತ್ಯುವಾಚ । ತತೋ ಯಥಾರ್ಥಕಥನೇನ ತುಷ್ಟಃ ಪುರುಷೋ ನಾಭಾನೇದಿಷ್ಠಾಯೈವ ಸ್ವಂ ಭಾಗಂ ಪ್ರಾದಾದಿತ್ಯುಕ್ತಂ॥ ತಥಾಧ್ವರ್ಯುಬ್ರಾಹ್ಮಣೇಽಪಿ ಮನುಃ ಪುತ್ರೇಭ್ಯೋ ದಾಯಂ ವ್ಯಭಜತ್ ಸ ನಾಭಾನೇದಿಷ್ಠಂ । ತೈ. ಸಂ. ೩-೧-೯-೪ । ಇತ್ಯಾದಿನಾಯಮರ್ಥ ಉಕ್ತಃ । ತತ್ಸರ್ವಮತ್ರಾನುಸಂಧೇಯಂ ॥**

ಅನುವಾದವು—ಹತ್ತನೆಯ ಮಂಡಲದ ಐದನೆಯ ಅನುವಾಕದಲ್ಲಿ ಎಂಟು ಸೂಕ್ತಗಳಿರುವುವು. ಅವುಗಳಲ್ಲಿ **ಇದಮಿತ್ಥಾ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಇಪ್ಪತ್ತೇಳು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಮನುಪುತ್ರನಾದ ನಾಭಾನೇದಿಷ್ಠನೆಂಬುವನು ಋಷಿಯು ; ತ್ರಿಷ್ಟುಪ್ ಛಂದಸ್ಸು. ಈ ಸೂಕ್ತದಿಂದ ಮುಂದಿನ ಆರು ಸೂಕ್ತಗಳು ವಿಶ್ವೇದೇವತಾಕವು. ಅನುಕ್ರಮಣಿಕೆಯಲ್ಲಿ— **ಇದಮಿತ್ಥಾ ಸಪ್ತಾಧಿಕಾ ನಾಭಾನೇದಿಷ್ಠೋ**

**ಮಾನವೋ ವೈಶ್ವದೇವಂ ತತ್** ಎಂದು ಹೇಳಿರುವುದು. ಪೃಷ್ಠ್ಯ ಯಾಗದ ಆರನೆಯ ದಿನ ವೈಶ್ವದೇವಶಸ್ತ್ರಮಂತ್ರದಲ್ಲಿ ಆಭಿಪ್ಲವಿಕಸಂಬಂಧವಾದ ಉಷಾಸಾನಕ್ತಾ ಎಂಬ ಸೂಕ್ತದ ಸ್ಥಾನದಲ್ಲಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಉದ್ಧೃತ್ಯ ಚೋತ್ತಮಂ ಸೂಕ್ತಂ ತ್ರೀಣೀದಮಿತ್ಥಾ ರೌದ್ರಮಿತಿ** ಎಂಬ ಸೂತ್ರದಿಂದ (೮-೧) ವಿವೃತವಾಗಿರುವುದು. ಈ ಸೂಕ್ತದ ವಿಷಯವಾಗಿ ಐತರೇಯ ಬ್ರಾಹ್ಮಣದಲ್ಲಿ ಈ ರೀತಿ ಹೇಳಿರುವುದು—**ನಾಭಾನೇದಿಷ್ಠಂ ವೈ ಮಾನವಂ ಬ್ರಹ್ಮಚರ್ಯಂ ವಸಂತಂ ಭ್ರಾತರೋ ನಿರಭಜನ್ಸೋಽಬ್ರವೀದೇತ್ಯ ಕಿಂ ಮಹ್ಯಮಭಾಕ್ತೇತ್ಯೇತಮೇವ ನಿಷ್ಠಾವಮವವದಿತಾರಮಿತ್ಯಬ್ರುವನ್** (ಐ. ಬ್ರಾ. ೫-೧೪) ಎಂದು ಮೊದಲಾಗಿ ಹೇಳಿರುವುದು. ಆ ವಿಷಯವನ್ನೇ ಇಲ್ಲಿ ಭಾಷ್ಯಕಾರರು ಸೂಕ್ಷ್ಮವಾಗಿ ಹೇಳಿದ್ದಾರೆ. ಮನುವಿಗೆ ನಾಭಾನೇದಿಷ್ಠನೆಂಬ ಪುತ್ರನಿದ್ದನು. ಅವನು ಬ್ರಹ್ಮಚರ್ಯದಿಂದ ಗುರುಕುಲದಲ್ಲಿ ವೇದಾಧ್ಯಯನವನ್ನು ಮಾಡುತ್ತಿದ್ದನು. ಆಗ ಅವನ ಜ್ಯೇಷ್ಠ ಸಹೋದರರು ತಮ್ಮ ತಂದೆಯಾದ ಮನುವಿನ ಆಸ್ತಿಯನ್ನು ಭಾಗಮಾಡಿ ತಮ್ಮತಮ್ಮಲ್ಲಿಯೇ ಹಂಚಿಕೊಂಡರು. ವೇದಾಧ್ಯಯನವನ್ನು ಮುಗಿಸಿಬಂದ ನಾಭಾನೇದಿಷ್ಠನು ತನ್ನ ಆಸ್ತಿಯನ್ನೂ ತನ್ನ ಸಹೋದರರೇ ಹಂಚಿಕೊಂಡಿರುವುದನ್ನು ಕಂಡು ನನ್ನ ಪಾಲಿನ ಆಸ್ತಿ ಎಲ್ಲಿ ಎಂದು ಅವರನ್ನು ಕೇಳಲು ಅವರು ನಿಮ್ಮ ತಂದೆಯನ್ನು ಕೇಳು ಎಂದರು. ಅದರಂತೆ ತನ್ನ ತಂದೆಯನ್ನು ಕೇಳಲು ಅವನು—ಎಲೈ ಪುತ್ರನೇ, ನಿನ್ನ ಸಹೋದರು ಆಸ್ತಿಯೆಲ್ಲವನ್ನೂ ತೆಗೆದುಕೊಂಡರೆ ತೆಗೆದುಕೊಳ್ಳಲಿ. ಏನೂ ಯೋಚನೆ ಮಾಡಬೇಡ. ಈಗ ಅಂಗಿರಾಋಷಿಗಳು ಸತ್ರಯಾಗವನ್ನು ಮಾಡುತ್ತಿರುವರು. ಅವರು ಆರನೆಯ ದಿನ ಪರ್ಯಂತರ ಆ ಯಾಗವನ್ನು ಮಾಡಿ ಆ ದಿನ ಏನು ಮಾಡಬೇಕೆಂಬ ವಿಷಯದಲ್ಲಿ ತಿಳಿಯದೆ ಸಂಶಯವುಳ್ಳವರಾಗಿರುವರು. ನೀನು ಅಲ್ಲಿಗೆ ಹೋಗಿ **ಇದಮಿತ್ಥಾ** ಎಂಬ ಈ ಸೂಕ್ತವನ್ನು ಪಠಿಸು. ಅವರ ಯಜ್ಞವು ಮುಂದುವರೆದು ನಿನಗೆ ಸಹಸ್ರ ಗೋವುಗಳನ್ನು ಕೊಟ್ಟು ಅವರು ಸ್ವರ್ಗಕ್ಕೆ ಹೋಗುವರು ಎಂದನು. ನಾಭಾನೇದಿಷ್ಠನು ತಂದೆಯ ಮಾತಿನಂತೆ ಅಂಗಿರಸರಲ್ಲಿಗೆ ಹೋಗಿ ಅವರ ಯಜ್ಞದಲ್ಲಿ ಈ ಸೂಕ್ತವನ್ನು ಪಠಿಸಿದನು. ಅದರಿಂದ ಅವರ ಯಜ್ಞವು ನೆರವೇರಿ ಅವರು ಸಹಸ್ರ ಗೋವುಗಳನ್ನು ಕೊಟ್ಟರು. ಆ ಗೋವುಗಳನ್ನು ತೆಗೆದುಕೊಂಡು ಹಿಂತಿರುಗಿ ಬರುತ್ತಿರುವಾಗ ದಾರಿಯಲ್ಲಿ ಮಾಸಲು ಬಟ್ಟೆಯನ್ನುಟ್ಟಿದ್ದ ಒಬ್ಬ ಪುರುಷನು ಎದುರಾಗಿ ಎಲೈ ನಾಭಾನೇದಿಷ್ಠನೇ, ಈಗ ಈಗ ನೀನು ತೆಗೆದುಕೊಂಡುಹೋಗುತ್ತಿರುವ ಯಜ್ಞಶೇಷಭಾಗವಾದ ಈ ಸಹಸ್ರ ಗೋವುಗಳು ನನ್ನದು ಎಂದನು. ಅದಕ್ಕೆ ನಾಭಾನೇದಿಷ್ಠನು ಅದು ಹೇಗೆ? ಈ ಗೋವುಗಳನ್ನು ಯಜ್ಞದಲ್ಲಿ ಅಂಗಿರಸರೇ ನನಗೆ ಕೊಟ್ಟಿರುವರು ಎನ್ನಲು, ಆ ಪುರುಷನು ಹಾಗಾದರೆ ಈ ವಿಷಯವನ್ನು ನಿನ್ನ ತಂದೆಯನ್ನೇ ಕೇಳು ಎಂದನು. ಅದರಂತೆ ನಾಭಾನೇದಿಷ್ಠನು ತಂದೆಯ ಬಳಿಗೆ ಬಂದು ನಡೆದ ಸಂಗತಿಯನ್ನು ತಿಳಿಸಿ ಆ ಗೋವುಗಳು ಯಾರಿಗೆ ಸೇರಬೇಕು ಎನಲು, ತಂದೆಯಾದ ಮನುವು—ಎಲೈ ಪುತ್ರನೇ, ಆ ಪುರುಷನು ಹೇಳಿದಂತೆ ಈ ಗೋವುಗಳು ರುದ್ರನಾದ ಆ ಪುರುಷನಿಗೇ ಸೇರಬೇಕಾದುದು ನ್ಯಾಯವಾಗಿದೆ ಎಂದನು. ಅದನ್ನು ಕೇಳಿ ನಾಭಾನೇದಿಷ್ಠನು ಆ ಪುರುಷನ ಬಳಿಗೆ ಬಂದು ಎಲೈ ಪುರುಷನೇ, ನೀನು ಹೇಳಿದಂತೆ ಈ ಗೋವುಗಳು ನಿನಗೇ ಸೇರಬೇಕು ಎಂದು ನನ್ನ ತಂದೆಯು ಹೇಳಿರುವನು. ಅದನ್ನು ನೀನು ತೆಗೆದುಕೊಳ್ಳಬಹುದು ಎಂದನು. ನಾಭಾನೇದಿಷ್ಠನು ಸತ್ಯವನ್ನೇ ಹೇಳಿದುದನ್ನು ಕೇಳಿ ಸಂತೋಷಪಟ್ಟು ಆ ಪುರುಷನು ಆ ಸಹಸ್ರ ಗೋವುಗಳನ್ನು ನಾಭಾನೇದಿಷ್ಠನಿಗೆ ಹಿಂತಿರುಗಿ ಕೊಟ್ಟನು ಎಂದು ಈ ಉಪಾಖ್ಯಾನದ ಮುಖ್ಯಾಭಿಪ್ರಾಯವು. ತೈತ್ತಿರೀಯ ಸಂಹಿತೆಯಲ್ಲಿಯೂ ಸಹ—**ಮನುಃ ಪುತ್ರೇಭ್ಯೋ ದಾಯಂ ವ್ಯಭಜತ್ಸನಾಭಾನೇದಿಷ್ಠಂ** (ತೈ. ಸಂ. ೩-೧-೯-೪) ಇತ್ಯಾದಿ ವಾಕ್ಯಗಳಿಂದ ಈ ವಿಷಯವು ವಿವೃತವಾಗಿರುವುದು. ಅವುಗಳನ್ನು ಅಲ್ಲಿ ನೋಡಿ ತಿಳಿಯಬಹುದು.

## ಸೂಕ್ತ—೬೧

ಮಂಡಲ—೧೦ ‖ ಅನುವಾಕ—೫ ‖ ಸೂಕ್ತ—೬೧ ‖
ಅಷ್ಟಕ—೮ ‖ ಅಧ್ಯಾಯ—೧ ‖ ವರ್ಗ—೨೬,೨೭,೨೮,೨೯,೩೦ ‖
ಸೂಕ್ತದಲ್ಲಿರುವ ಋಕ್ಸಂಖ್ಯೆ—೨೭ ‖
ಋಷಿಃ—ನಾಭಾನೇದಿಷ್ಠೋ ಮಾನವಃ ‖
ದೇವತಾ—ವಿಶ್ವೇದೇವಾಃ ‖
ಛಂದಃ—ತ್ರಿಷ್ಟುಪ್ ‖

ಸಂಹಿತಾಪಾಠಃ

ಇದಮಿತ್ಥಾ ರೌದ್ರಂ ಗೂರ್ತವಚಾ ಬ್ರಹ್ಮ ಕ್ರತ್ವಾ ಶಚ್ಯಾಮಂತರಾಜೌ ।
ಕ್ರಾಣಾ ಯದಸ್ಯ ಪಿತರಾ ಮಂಹನೇಷ್ಠಾಃ ಪರ್ಷತ್ಪಕ್ಥೇ ಅಹನ್ನಾ ಸಪ್ತ
ಹೋತೄನ್ ‖ ೧ ‖

ಪದಪಾಠಃ

ಇದಂ । ಇತ್ಥಾ । ರೌದ್ರಂ । ಗೂರ್ತऽವಚಾಃ । ಬ್ರಹ್ಮ । ಕ್ರತ್ವಾ । ಶಚ್ಯಾಂ । ಅಂತಃ । ಆಜೌ ।
ಕ್ರಾಣಾ । ಯತ್ । ಅಸ್ಯ । ಪಿತರಾ । ಮಂಹನೇऽಸ್ಥಾಃ । ಪರ್ಷತ್ । ಪಕ್ಥೇ । ಅಹನ್ । ಆ । ಸಪ್ತ ।
ಹೋತೄನ್ ‖ ೧ ‖

ಸಾಯಣಭಾಷ್ಯಂ

ಗೂರ್ತವಚಾ ಉದ್ಯತವಚನೋ ನಾಭಾನೇದಿಷ್ಠ ಇದಂ ಬ್ರಹ್ಮ ಸ್ತೋತ್ರಂ ರೌದ್ರಂ ರುದ್ರಪ್ರಣೀತಮಿತ್ಥೇತ್ಥಮಿದಾನೀಂಕ್ರಿಯಮಾಣಪ್ರಕಾರಂ ಕ್ರತ್ವಾ ಪ್ರಜ್ಞಾನೇನ ನಿಷ್ಪಾದ್ಯಂ ಸ್ತೋತ್ರಂ ಶಚ್ಯಾಮಂತಃ ಕರ್ಮಣಿ ಸತ್ರಮಧ್ಯ ಆಜಾವಂಗಿರಸಾಂ ಸಂಘೇ ಕರೋತೀತಿ ಶೇಷಃ । ಯತ್ಸ್ತೋತ್ರಂ ಕ್ರಾಣಾ ಭಾಗಂ ಕುರ್ವಾಣಾ ಭಾಗಂ ಕುರ್ವಾಣಾವಸ್ಯ ಪಿತರಾ ಪಿತರಾವಸ್ಯೇ ಚ ಮಂಹನೇಷ್ಠಾ ಭಾಗಪ್ರದಾನೇ ವರ್ತಮಾನಾ ಭ್ರಾತರಶ್ಚ ಗೋಲಾಭಸಾಧನತ್ವೇನಾಕಲ್ಪಯನ್ನಿತಿ ಶೇಷಃ । ತೇನ ನಾಭಾನೇದಿಷ್ಠಃ ಪಕ್ಥೇ ಪಕ್ತವ್ಯೇऽಹನ್ನಹನಿ । ಷಷ್ಠೇऽಹನೀತ್ಯರ್ಥಃ । ತೇ ಷಷ್ಠಂ ಷಷ್ಠಮೇವಾಹರಾಗತ್ಯ ಮುಹ್ಯಂತಿ ತಾನೇತೇ ಸೂಕ್ತೇ ಷಷ್ಠೇऽಹನಿ ಶಂಸಯ । ಐ.ಬ್ರಾ. ೫-೧೪ । ಇತ್ಯುಕ್ತತ್ವಾತ್ । ಸಪ್ತ ಹೋತೄನ್ ಹೋತೃಪ್ರಶಾಸ್ತೃಬ್ರಾಹ್ಮಣಾಚ್ಛಂಸ್ಯಾದಿಕಾನಾ ಪರ್ಷತ್ । ಸರ್ವತೋऽಪೂರಯತ್ । ಇದಮಿತ್ಥೇತಿ ಸೂಕ್ತಾಭ್ಯಾಂ ಯಜ್ಞಪಾರಂ ಪ್ರಾಪಯಾಮಾಸೇತ್ಯರ್ಥಃ ‖

ಪ್ರತಿಪದಾರ್ಥ

**ಕ್ರಾಣಾ**—ಭಾಗಮಾಡಲು ನಿರತರಾದ । **ಅಸ್ಯ ಪಿತರಾ**—ನಾಭಾನೇದಿಷ್ಠನ ಮಾತಾಪಿತೃಗಳೂ । **ಮಂಹನೇಷ್ಠಾಃ**—ಭಾಗಪ್ರದಾನದಲ್ಲಿ ನಿರತರಾದ ಇವನ ಸಹೋದರರೂ । **ಯತ್**—ಯಾವ ಸ್ತೋತ್ರವನ್ನು

ಗೋಲಾಭಸಾಧನವನ್ನಾಗಿ ಮಾಡಿಕೊಂಡರೋ ಅಂತಹ | **ರೌದ್ರಂ**—ರುದ್ರನನ್ನು ಸ್ತುತಿಸುವ | **ಇದಂ ಬ್ರಹ್ಮ**—ಈ ಸ್ತೋತ್ರವನ್ನು | **ಗೂರ್ತವಚಾಃ**—ಉಚ್ಚಸ್ವರವುಳ್ಳ ನಾಭಾನೇದಿಷ್ಠನು | **ಇತ್ಥಾ**—ಮುಂದೆ ತಿಳಿಸುವಂತೆ | **ಕ್ರತ್ವಾ**—ತನ್ನ ಪ್ರಜ್ಞಾಪ್ರಭಾವದಿಂದ | **ಶಚ್ಯಾಂ ಅಂತಃ**—ಕರ್ಮದ ಮಧ್ಯಭಾಗದಲ್ಲಿ | **ಆಜೌ**—ಅಂಗಿರಸ್ಸುಗಳ ನಡುವೆ ನಿರ್ಮಿಸಿದನು | (ಈ ಮಂತ್ರದ ಸಹಾಯದಿಂದ) **ಪಕ್ಥ್ಯೇ ಅಹನ್**—ಕರ್ಮವು ಪೂರ್ಣತೆಯನ್ನು ಹೊಂದುವ ಆರನೆಯ ದಿವಸ | **ಸಪ್ತ ಹೋತೄನ್**—ಹೋತ್ರಾದಿ ಏಳು ಋತ್ವಿಕ್ಕುಗಳನ್ನೂ | **ಆ ಪರ್ಷತ್**—ಯಜ್ಞವು ಪೂರ್ಣವಾಗುವಂತೆ ಸಿದ್ಧಗೊಳಿಸಿದನು.

ಭಾವಾರ್ಥ

ಭಾಗಮಾಡಲು ನಿರತರಾದ ನಾಭಾನೇದಿಷ್ಠನ ಮಾತಾಪಿತೃಗಳೂ, ಭಾಗಪ್ರದಾನದಲ್ಲಿ ನಿರತರಾದ ಸಹೋದರರೂ, ಯಾವ ಸ್ತೋತ್ರವನ್ನು ಗೋಲಾಭಸಾಧನವನ್ನಾಗಿ ಮಾಡಿಕೊಂಡರೋ, ಅಂತಹ ರುದ್ರನನ್ನು ಸ್ತುತಿಸುವ ಈ ಸ್ತೋತ್ರವನ್ನು ಉಚ್ಚಸ್ವರವುಳ್ಳ ನಾಭಾನೇದಿಷ್ಠನು ಮುಂದೆ ತಿಳಿಸುವಂತೆ ತನ್ನ ಪ್ರಜ್ಞಾಪ್ರಭಾವದಿಂದ ಕರ್ಮದ ಮಧ್ಯೆ ಅಂಗಿರಸ್ಸುಗಳ ನಡುವೆ ನಿರ್ಮಿಸಿದನು. ಈ ಮಂತ್ರದ ಸಹಾಯದಿಂದ, ಕರ್ಮವು ಪೂರ್ಣತೆಯನ್ನು ಹೊಂದುವ ಆರನೆಯ ದಿನ ಹೋತ್ರಾದಿ ಏಳು ಋತ್ವಿಕ್ಕುಗಳಿಂದ ಯಜ್ಞವು ಪೂರ್ಣವಾಗುವಂತೆ ಸಿದ್ಧಪಡಿಸಿದನು.

## English Translation

The fierce-voiced (Nabhanedishtha repeated) through his intelligence this praise of Rudra, in the midst of the ceremony at the assembly (of the Angirasas), which (praise)his parents, making (the partition)and his brothers engaged in giving (the shares accomplished) ; he perfected the seven priests (therewith) on the day on which the rite was to be matured.

ಸಂಹಿತಾಪಾಠಃ

ಸ ಇದ್ದಾನಾಯ ದಭ್ಯಾಯ ವನ್ವಞ್ಚ್ಯವಾನಃ ಸೂದೈರಮಿಮೀತ ವೇದಿಂ |
ತೂರ್ವಯಾಣೋ ಗೂರ್ತವಚಸ್ತಮಃ ಕ್ಷೋದೋ ನ ರೇತ ಇತಊತಿ
ಸಿಂಚತ್ || ೨ ||

ಪದಪಾಠಃ

ಸ | ಇತ್ | ದಾನಾಯ | ದಭ್ಯಾಯ | ವನ್ವನ್ | ಚ್ಯವಾನಃ | ಸೂದೈಃ | ಅಮಿಮೀತ | ವೇದಿಂ |
ತೂರ್ವಯಾಣಃ | ಗೂರ್ತವಚಃಽತಮಃ | ಕ್ಷೋದಃ | ನ | ರೇತಃ | ಇತಃಽಊತಿ | ಸಿಂಚತ್ || ೨ ||

ಸಾಯಣಭಾಷ್ಯಂ

ಸ ಇತ್ ಸ ಕೃಷ್ಣಶವಾಸೀ ಪುರುಷೋ ರುದ್ರಾಖ್ಯೋ ದಾನಾಯ ಸ್ತೋತೄಣಾಂ ಧನಪ್ರದಾನಾಯ ದಭ್ಯಾಯ ಶತ್ರೂಣಾಂ ವಧಾಯ ಚ ವನ್ವನ್ ಸ್ತೋತೄನ್ಸಂಭಜನ್ ಸೂದೈಃ ಸೂದಕೈರ್ಹಿಂಸಕೈಃ

ಶಸ್ತ್ರೈರ್ಛ್ಯವಾನೋ ರಕ್ಷಾಂಸಿ ಚ್ಯಾವಯನ್ ವೇದಿಮಮಿಮೀತ । ಪರಿಮಿತವಾನ್ । ಯಜ್ಞವಾಸ್ತ್ವಧಿಷ್ಠಿತವಾನಿತ್ಯರ್ಥಃ । ತಂ ಕೃಷ್ಣಶವಾಸ್ಯುತ್ತರತ ಉಪೋತ್ಥಾಯಾಬ್ರವೀನ್ಮಮ ವಾ ಇದಂ ಮಮ ವೈ ವಾಸ್ತುಹಮಿತೀತಿ ಬ್ರಾಹ್ಮಣಂ । ಐ. ಬ್ರಾ. ೫-೧೪ । ತದೇವಾಹ । ತೂರ್ವಯಾಣಸ್ತೂರ್ಣಗಮನೋ ಗೂರ್ತವಚಸ್ತಮೋಽತ್ಯಂತಮುದ್ಯತವಚಾ ರುದ್ರಃ ಕ್ಷೋದೋ ನೋದಕಮಿವ । ಉದಕಂ ಯಥಾ ಘನಃ ಸಿಂಚತಿ ತದ್ವದ್ರೇತಃ ಸ್ವಸಾಮರ್ಥ್ಯಮಿತಊತೀತೋಗಮನವದ್ಯಥಾ ಭವತಿ ತಥಾ ಸಿಂಚತ್ । ಪ್ರೇರಿತವಾನಿತ್ಯರ್ಥಃ। ಯದ್ವಾ । ಅನೇನೋತ್ತರಾರ್ಧೇನೋತ್ತರಾಭ್ಯಾಂ ಚ ಪ್ರಾಸಂಗಿಕ್ಯಶ್ವಿನೋಃ ಸ್ತುತಿಃ ಕ್ರಿಯತೇ । ತೂರ್ವಯಾಣಸ್ತೂರ್ಣಗಮನೋಽತಿಶಯೇನೋದ್ಯತವಚನೋ ರುದ್ರಃ ಕ್ಷೋದೋ ನೋದಕಮಿವ ರೇತಃ ಉತ್ಪಾದನಸಾಮರ್ಥ್ಯೋಪೇತಂ ರೇತ ಇತಊತಿ ಸಿಂಚತ್ । ಜನಯಾಮಾಸಾಶ್ವಿನೌ । ಅನ್ಯತ್ರೇತಊತೀತ್ಯಶ್ವಿನೋರಭಿಧಾನಾದನ್ಯತ್ರ ತಯೋ ರುದ್ರಪುತ್ರತ್ವಸಿದ್ಧೇಶ್ಚಾಯಮರ್ಥೋ ಲಭ್ಯತೇ ॥

ಪ್ರತಿಪದಾರ್ಥ

**ಸ ಇತ್**—ಅದೇ ರುದ್ರನು । **ದಾನಾಯ**—ಸ್ತೋತೃಗಳಿಗೆ ಧನವನ್ನು ಕೊಡುವುದಕ್ಕಾಗಿಯೂ । **ದಭ್ಯಾಯ**—ಶತ್ರುನಾಶಕ್ಕಾಗಿಯೂ । **ವನ್ವನ್**—ಸ್ತೋತೃಗಳನ್ನು ತೃಪ್ತಿಗೊಳಿಸುತ್ತಲೂ । **ಸೂದೈಃ**—ಹಿಂಸಕವಾದ ಶಸ್ತ್ರಗಳಿಂದ । **ಚ್ಯವಾನಃ**—ಶತ್ರುಗಳನ್ನು ಹೊಡೆದೋಡಿಸುತ್ತಲೂ । **ವೇದಿಂ**—ಯಜ್ಞವೇದಿಯನ್ನು । **ಅಮಿಮೀತ**—ನಿರ್ಮಿಸಿದ್ದಾನೆ । **ತೂರ್ವಯಾಣಃ**—ಶೀಘ್ರಗಾಮಿಯೂ । **ಗೂರ್ತವಚಸ್ತಮಃ**—ಅತ್ಯಂತ ಉಚ್ಚತರವಾದ ಶಬ್ದವುಳ್ಳವನೂ ಆದ ರುದ್ರನು । **ಕ್ಷೋದೋ ನ**—ಮೇಘವು ಉದಕವನ್ನು ಸುರಿಸುವಂತೆ । **ರೇತಃ**—ತನ್ನ ಸೃಷ್ಟಿಸಾಧಕವಾದ ಸಾಮರ್ಥ್ಯವನ್ನು । **ಇತಊತಿ**—ಸುತ್ತಲೂ ಹರಡುವಂತೆ । **ಸಿಂಚತ್**—ಪ್ರೇರಿಸಿದ್ದಾನೆ.

ಭಾವಾರ್ಥ

ಅದೇ ರುದ್ರನು ತನ್ನ ಸ್ತೋತೃಗಳಿಗೆ ಧನದಾನವನ್ನು ಮಾಡಿ ಅವರಿಗೆ ತೃಪ್ತಿಯನ್ನುಂಟುಮಾಡುವ ಉದ್ದಿಶ್ಯದಿಂದ ತನ್ನ ಶತ್ರುಹಿಂಸಕವಾದ ಶಸ್ತ್ರಗಳಿಂದ ಶತ್ರುಗಳನ್ನು ಹೊಡೆದೋಡಿಸುತ್ತ ಯಜ್ಞವೇದಿಯನ್ನು ನಿರ್ಮಿಸಿದ್ದಾನೆ. ಶೀಘ್ರಗಾಮಿಯೂ, ಅತ್ಯಂತ ಉಚ್ಚತರವಾದ ಶಬ್ದವುಳ್ಳವನೂ ಆದ ರುದ್ರನು ಮೇಘವು ಉದಕವನ್ನು ಸುರಿಸುವಂತೆ ತನ್ನ ಸೃಷ್ಟಿಸಾಧಕವಾದ ಸಾಮರ್ಥ್ಯವನ್ನು ಸುತ್ತಲೂ ಹರಡುವಂತೆ ಪ್ರೇರಿಸಿದ್ದಾನೆ.

## English Translation

He (Rudra) bestowing on his worshippers the gift (of wealth) and the defeat (of their foes), casting down (the Rakshasas) with his weapons, has constructed the altar ; rapid in movement, most fierce in speech, and shedding the procreative fluid like water around.

ಸಂಹಿತಾಪಾಠಃ

ಮನೋ ನ ಯೇಷು ಹವನೇಷು ತಿಗ್ಮಂ ವಿಪಃ ಶಚ್ಯಾ ವನುಥೋ ದ್ರವಂತಾ।

ಆ ಯಃ ಶರ್ಯಾಭಿಸ್ತುವಿನೃಮ್ಣೋ ಅಸ್ಯಾಶ್ರೀಣೀತಾದಿಶಂ ಗಭಸ್ತೌ ॥ ೩ ॥

ಪದಪಾಠಃ

ಮನಃ । ನ । ಯೇಷು । ಹವನೇಷು । ತಿಗ್ಮಂ । ವಿಪಃ । ಶಚ್ಯಾ । ವನುಥಃ । ದ್ರವಂತಾ ।

ಆ । ಯಃ । ಶರ್ಯಾಭಿಃ । ತುವಿಽನೃಮ್ಣಃ । ಅಸ್ಯ । ಅಶ್ರೀಣೀತ । ಆಽದಿಶಂ । ಗಭಸ್ತೌ ॥ ೩ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಯುವಾಂ ಮನೋ ನ ಮನ ಇವ ಯಥಾ ಮನಸ್ತಿಗ್ಮಂ ತೀಕ್ಷ್ಣಮಾಶು ಧಾವತಿ ಆಗಚ್ಛತಿ ಏವಂ ಯೇಷು ಹವನೇಷ್ವಾಹ್ವಾನೇಷು ವಿಪಃ ಸ್ತೋತುಃ ಶಚ್ಯಾ ಪ್ರಜ್ಞಾನೇನ ಗಂತವ್ಯಮಿತಿ ಬುದ್ಧ್ಯಾ ದ್ರವಂತಾ ದ್ರವಂತೌ ಗಚ್ಛಂತೌ ವನುಥಃ ಸಂಭಜಥಃ । ಯೋಽಧ್ವರ್ಯುರ್ಗಾ ಅಭಿಮುಖ್ಯೇನ ತುವಿನೃಮ್ಣಃ ಪ್ರಭೂತಹವಿರ್ಲಕ್ಷಣಧನಃ ಸನ್ನಸ್ಯ ಕರ್ಮಣಿ ಪ್ರವೃತ್ತಸ್ಯ ಮಮ ಸಂಬಂಧೀ ಶರ್ಯಾಭಿರಂಗುಲೀಭಿರಶ್ರೀಣೀತ ಶ್ರೀಣಾತಿ । ಕಿಂ ಕೃತ್ವಾ । ಗಭಸ್ತೌ ಹಸ್ತೇ ಧೃತ್ವಾದಿಶಂ । ಇದಮಶ್ವಿಭ್ಯಾಮಿತಿ ನಿರ್ದಿಶ್ಯೇತ್ಯರ್ಥಃ । ತಾದೃಶಂ ಮದೀಯಮಧ್ವರ್ಯುಂ ಯೇಷು ಹವನೇಷು ವನುಥಃ ಸಂಭಜಥಃ ತೌ ಯುವಾಂ ಹುವ ಇತ್ಯುತ್ತರತ್ರ ಸಂಬಂಧಃ ॥

ಪ್ರತಿಪದಾರ್ಥ

(ಎಲೈ ಅಶ್ವಿನೀದೇವತೆಗಳೇ) **ಯಃ**—ಯಾವ ಅಧ್ವರ್ಯುವು । **(ಯೇಷು**—ಯಾವ ಯಜ್ಞಕಾಲಗಳಲ್ಲಿ**)** । **ಗಭಸ್ತೌ**—ತನ್ನ ಹಸ್ತದಲ್ಲಿ । **ತುವಿನೃಮ್ಣಃ**—ಅಧಿಕವಾದ ಹವಿಸ್ಸನ್ನು ಹೊಂದಿ । **ಆದಿಶಂ**—ನಿಮ್ಮನ್ನೇ ಉದ್ದೇಶಿಸಿ । **ಅಸ್ಯ**—ಈ ಕರ್ಮದಲ್ಲಿ ನಿರತವಾದ । **ಶರ್ಯಾಭಿಃ**—ಅಂಗುಲಿ (ಬೆರಳು) ಗಳಿಂದ । **ಅಶ್ರೀಣೀತ**-ಹವಿಸ್ಸನ್ನು ಸಂಸ್ಕರಿಸುವನೋ । (ಮತ್ತು) **ಯೇಷು ಹವನೇಷು**—ಯಾವ ಆಹ್ವಾನಕಾಲಗಳಲ್ಲಿ । **ಯುವಾಂ**—ನೀವು) । **ಮನೋ ನ**—ಮನಸ್ಸಿನ ವೇಗದಂತೆ । **ತಿಗ್ಮಂ**—ಶೀಘ್ರವಾಗಿ । **ವಿಪಃ**—ಸ್ತೋತೃವಿಗೆ (ಸ್ತುತಿಕರ್ತನಲ್ಲಿಗೆ) । **ಶಚ್ಯಾ**—ನಿಮ್ಮ ಅನುಗ್ರಹಬುದ್ಧಿಯೊಡನೆ । **ದ್ರವಂತಾ**—ಓಡಿಬಂದು । **ವನುಥಃ**—ಯಜಮಾನನನ್ನು ತೃಪ್ತಿಗೊಳಿಸುವಿರೋ (ಅಂತಹ ನಿಮ್ಮನ್ನು ಕರೆಯುತ್ತೇವೆ).

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಯಾವ ಯಜ್ಞಕಾಲಗಳಲ್ಲಿ ಅಧ್ವರ್ಯುವು ತನ್ನ ಹಸ್ತದಲ್ಲಿ ಪೂರ್ಣವಾಗಿ ಹವಿಸ್ಸನ್ನು ತುಂಬಿಕೊಂಡು ನಿಮ್ಮನ್ನೇ ಉದ್ದೇಶಿಸಿ ಕರ್ಮದಲ್ಲಿ ನಿರತವಾದ ಬೆರಳುಗಳಿಂದ ಹವಿಸ್ಸನ್ನು ಸಂಸ್ಕರಿಸುವನೋ ಮತ್ತು ಯಾವ ಯಜ್ಞಗಳಲ್ಲಿ ನೀವು ಶೀಘ್ರವಾಗಿ ಬಂದು ನಿಮ್ಮ ಅನುಗ್ರಹಬುದ್ಧಿಯಿಂದ ಯಜಮಾನನನ್ನು ತೃಪ್ತಿಗೊಳಿಸುವಿರೋ, ಆ ಯಾಗಗಳಿಗೆ ನಿಮ್ಮನ್ನು ಕರೆಯುತ್ತೇವೆ.

English Translation

(I call you to these) oblations, to which hastening, (Ashwins), swift as thought at the invitation of the worshipper, you rejoice my (worshipper),

who, affluent in the wealth of sacrifice, mixes (the oblation) with his fingers in your presence, (holding) in his hand the sacrifice intended (for you)

ಸಂಹಿತಾಪಾಠಃ

ಕೃಷ್ಣಾ ಯದ್ಗೋಷ್ವರುಣೀಷು ಸೀದದ್ದಿವೋ ನಪಾತಾಶ್ವಿನಾ ಹುವೇ ವಾಂ ।
ವೀತಂ ಮೇ ಯಜ್ಞಮಾ ಗತಂ ಮೇ ಅನ್ನಂ ವವನ್ವಾಂಸಾ ನೇಷಮಸ್ಮೃತಧ್ರೂ ॥ ೪ ॥

ಪದಪಾಠಃ

ಕೃಷ್ಣಾ । ಯತ್ । ಗೋಷು । ಅರುಣೀಷು । ಸೀದತ್ । ದಿವಃ । ನಪಾತಾ । ಅಶ್ವಿನಾ । ಹುವೇ । ವಾಂ । ವೀತಂ । ಮೇ । ಯಜ್ಞಂ । ಆ । ಗತಂ । ಮೇ । ಅನ್ನಂ । ವವನ್ವಾಂಸಾ । ನ । ಇಷಂ । ಅಸ್ಮೃತಧ್ರೂ ಇತ್ಯಸ್ಮೃತಽಧ್ರೂ ॥ ೪ ॥

ಸಾಯಣಭಾಷ್ಯಂ

ಕೃಷ್ಣಾ ರಾತ್ರಿರ್ಯದ್ಯದಾರುಣೀಷ್ವರುಣವರ್ಣಾಸು ಗೋಷು ಸೀದತ್ ನಿವಸತಿ । ಉಷಾ ವಿಭಾಸನಾಯ ರಥಮಧಿತಿಷ್ಠತೀತ್ಯರ್ಥಃ । ಅರುಣ್ಯೋ ಗಾವ ಉಷಸಾಮಿತಿ ನಿರುಕ್ತಂ । ಉಷಃಕಾಲೇ ಹೇ ದಿವೋ ನಪಾತಾ ದೀಪ್ಯಮಾನಸ್ಯ ಸ್ವರ್ಗಸ್ಯ ಪ್ರಕಾಶಾತ್ಮಕಸ್ಯ ಯೋಗಸ್ಯ ವಾ ನ ಪಾತಯಿತಾರೌ ಹೇ ಅಶ್ವಿನೌ ವಾಂ ಹುವೇ । ಆಹ್ವಯೇ । ವೀತಂ ಕಾಮಯೇಥಾಂ ಮೇಽನ್ನಂ ಹವಿರ್ಲಕ್ಷಣಂ । ತದರ್ಥಂ ಮೇ ಯಜ್ಞಮಾ ಗತಂ । ಆಗಚ್ಛತಂ । ಇಷಮನ್ನಂ ವವನ್ವಾಂಸಾ ನ ಸಂಭಜಮಾನಾವಶ್ವಾವಿವ । ತದ್ವದಾ ಗತಂ । ಕೀದೃಶೌ ಯುವಾಂ । ಅಸ್ಮೃತಧ್ರೂ । ಅಸ್ಮೃತದ್ರೋಹೌ ಮಯಿ ದ್ರೋಹಮಸ್ಮರಂತೌ ॥

ಪ್ರತಿಪದಾರ್ಥ

**ದಿವೋ ನಪಾತಾ**—ಸ್ವರ್ಗಲೋಕದ ಪುತ್ರರಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯತ್**—ಯಾವಾಗ । **ಕೃಷ್ಣಾ**—ಕೃಷ್ಣವರ್ಣವುಳ್ಳ ರಾತ್ರಿಯು । **ಅರುಣೀಷು**—ಹೊಂಬಣ್ಣವುಳ್ಳ । **ಗೋಷು**—ಗೋವುಗಳಲ್ಲಿ । **ಸೀದತ್**—ಒಂದಾಗುವಳೋ (ರಾತ್ರಿಯು ಕಳೆದು ಯಾವಾಗ ಉಷಸ್ಸಿನ ಆವಿರ್ಭಾವವಾಗುವುದೋ ಆಗ । **ವಾಂ**—ನಿಮ್ಮನ್ನು । **ಹುವೇ**—ಯಜ್ಞಕ್ಕೆ ಕರೆಯುತ್ತೇನೆ । **ಅಸ್ಮೃತಧ್ರೂ**—ನಮಗೆ ದ್ರೋಹವನ್ನು ಬಯಸದ ನೀವು । **ಮೇ**—ನನ್ನ । **ಅನ್ನಂ**—ಹವಿಸ್ಸನ್ನು । **ವೀತಂ**—ಇಚ್ಛಿಸಿರಿ । **ಇಷಂ**—ಅನ್ನವನ್ನು । **ವವನ್ವಾಂಸಾ ನ**—ಒಟ್ಟಿಗೆ ತಿನ್ನತಕ್ಕ ಎರಡು ಅಶ್ವಗಳಂತೆ ಒಟ್ಟುಗೂಡಿದ ನೀವು । **ಮೇ ಯಜ್ಞಂ**—ನನ್ನ ಯಜ್ಞಕ್ಕೆ । **ಆ ಗತಂ**—ಬನ್ನಿರಿ.

ಭಾವಾರ್ಥ

ಸ್ವರ್ಗಲೋಕದ ಪುತ್ರರಾದ ಎಲೈ ದೇವತೆಗಳೇ, ಯಾವಾಗ ಕೃಷ್ಣವರ್ಣವುಳ್ಳ ರಾತ್ರಿಯು ಉಷಸ್ಸಿನೊಡನೆ ಸೇರುವಳೋ ಎಂದರೆ, ಉಷಸ್ಸಿನ ಆವಿರ್ಭಾವಕಾಲದಲ್ಲಿ ನಿಮ್ಮನ್ನು ನಮ್ಮ ಯಜ್ಞಕ್ಕೆ ಕರೆಯುತ್ತೇನೆ. ನಮಗೆ ದ್ರೋಹ

ವನ್ನು ಬಯಸದ ನೀವು ನಮ್ಮ ಹವಿಸ್ಸನ್ನು ಇಚ್ಛಿಸಿರಿ. ಒಟ್ಟಿಗೆ ಕಬಳವನ್ನು ತಿನ್ನುವ ಎರಡು ಅಶ್ವಗಳಂತೆ ಒಂದಾಗಿರುವ ನೀವು ನನ್ನ ಯಜ್ಞಕ್ಕೆ ಬನ್ನಿರಿ.

### English Translation

When the dark night retires before the purple oxen (of the chariot of the dawn), I inyoke you, Ashwins, children of heaven : be desirous of my sacrifice : come to my food and to my viands like (two horses) eating together, oblivious of offence.

ಸಂಹಿತಾಪಾಠಃ

ಪ್ರಥಿಷ್ಟ ಯಸ್ಯ ವೀರಕರ್ಮಮಿಷ್ಣದನುಷ್ಠಿತಂ ನು ನರ್ಯೋ ಅಪೌಹತ್ ।
ಪುನಸ್ತದಾ ವೃಹತಿ ಯತ್ಕನಾಯಾ ದುಹಿತುರಾ ಅನುಭೃತಮನರ್ವಾ ॥೫॥

ಪದಪಾಠಃ

ಪ್ರಥಿಷ್ಟ । ಯಸ್ಯ । ವೀರಽಕರ್ಮಂ । ಇಷ್ಣತ್ । ಅನುಽಸ್ಥಿತಂ । ನು । ನರ್ಯಃ । ಅಪ । ಔಹತ್ ।
ಪುನರಿತಿ । ತತ್ । ಆ । ವೃಹತಿ । ಯತ್ । ಕನಾಯಾಃ । ದುಹಿತುಃ । ಆಃ। ಅನುಽಭೃತಂ । ಅನರ್ವಾ ॥

ಸಾಯಣಭಾಷ್ಯಂ

ಯಥಾ ಸ್ವಾಂಶೇನ ಭಗವಾನ್ರುದ್ರಃ ಪ್ರಜಾಪತಿರ್ವಾಸ್ತೋಷ್ಪತಿಂ ರುದ್ರಮಸೃಜತ್ ತದೇತದಾದಿಭಿಸ್ತಿಸೃಭಿರ್ವದತಿ। ಯಸ್ಯ ಪ್ರಜಾಪತೇರಿಷ್ಣದೇಷಣವದ್ವೀರಕರ್ಮಂ॥ ಲಿಂಗವ್ಯತ್ಯಯಃ ॥ ವೀರಕರ್ಮ। ರೇತ ಇತ್ಯರ್ಥಃ । ಯೇನ ರೇತಸೋತ್ಪನ್ನಾ ವೀರಾ ಭವಂತಿ ತಾದೃಗ್ರೇತಃ ಪ್ರಥಿಷ್ಟ ಪ್ರಥಿತಮಾಸೀತ್ ತದ್ರೇತೋಽನುಷ್ಠಿತಂ ಪ್ರಜಾಪತಿನಾಪತ್ಯಾರ್ಥಂ ನಿಷಿಕ್ತಂ ನರ್ಯೋ ನರೇಭ್ಯೋ ಹಿತೋ ಯದ್ವಾ ನೇತೃಭ್ಯೋ ದೇವೇಭ್ಯೋ ಹಿತೋ ರುದ್ರೋಽಪೌಹತ್ । ಅಪೋಹತಿ । ತದೇವಾಹ । ಪುನಸ್ತದ್ರೇತ ಆ ವೃಹತಿ । ಸರ್ವತ ಉತ್ಖಿದತಿ । ಉದ್ಗಮಯತಿ ಪುರುಷಾಕಾರೇಣ ಸ್ವಯಮುತ್ಪನ್ನಃ ಸನ್ । ಕೀದೃಶಂ ರೇತಃ । ಯದ್ರೇತಃ ಕನಾಯಾಃ ಕಾಂತಾಯಾ ದುಹಿತುಃ ಸ್ವಪುತ್ರ್ಯಾಃ । ತಸ್ಯಾಮಿತ್ಯರ್ಥಃ । ತತ್ರ ಪ್ರಜಾಪತಿನಾನುಭೃತಮಾಃ ಆಸೀತ್ ॥ ಅಸ್ತೇಃ ಸಿಪಿ— — — ॥ ಕೀದೃಶೋ ರುದ್ರಃ । ಅನರ್ವಾನ್ಯಸ್ಮಿನ್ನಪ್ರತ್ಯೃತಃ । ಪ್ರಜಾಪತಿರ್ವೈ ಸ್ವಾಂ ದುಹಿತರಮಭ್ಯಧ್ಯಾಯದ್ದಿವಮಿತ್ಯನ್ಯ ಆಹುರುಷಸಮಿತ್ಯನ್ಯೇ । ಐ. ಬ್ರಾ. ೩-೩೩ । ಇತಿ ಬ್ರಾಹ್ಮಣಂ ॥

ಪ್ರತಿಪದಾರ್ಥ

**ಯಸ್ಯ**–ಯಾವ ಪ್ರಜಾಪತಿಯ । **ಇಷ್ಣತ್**–ಪ್ರಜೋತ್ಪಾದಕವಾದ। **ವೀರಕರ್ಮಂ**–ರೇತಸ್ಸು । **ಪ್ರಥಿಷ್ಟ**–ವೃದ್ಧಿಯಾಗಿ ಪ್ರಸರಿಸುವುದರಲ್ಲಿದ್ದಿತೋ ಅಂತಹ । **ಅನುಷ್ಠಿತಂ**—ಸಂತತಿಗಾಗಿ ಪ್ರಯುಕ್ತವಾದ ರೇತಸ್ಸನ್ನು ।

**ನರ್ಯಃ**—ಮಾನವರಿಗೆ ಹಿತಕಾರಿಯಾದ ರುದ್ರನು । **ಅಪೌಹತ್**—ತಡೆದು ನಿಲ್ಲಿಸಿದನು । **ಯತ್**—ಯಾವ ರೇತಸ್ಸನ್ನು । **ಕನಾಯಾಃ**—ಕನ್ಯಾರೂಪಿಯಾದ । **ದುಹಿತುಃ**—ತನ್ನ (ಪ್ರಜಾಪತಿಯ) ಪುತ್ರಿಯಲ್ಲಿ । **ಅನರ್ವಾ**—ಅಪ್ರತಿಹತನಾದ ರುದ್ರನು । **ಅನುಭೃತಂ ಅಃ**—ಸ್ಥಾಪಿಸಿದನೋ । **ತತ್ ರೇತಃ**—ಅದೇ ರೇತಸ್ಸನ್ನು । **ಪುನಃ**—ತಿರುಗಿಯೂ । **ಆ ವೃಹತಿ**—ಉತ್ಪನ್ನ ಸಾಧಕವಾಗುವಂತೆ ಮಾಡುತ್ತಾನೆ.

### ಭಾವಾರ್ಥ

ಯಾವ ಪ್ರಜಾಪತಿಯ ಪ್ರಜೋತ್ಪಾದಕವಾದ ರೇತಸ್ಸು ವೃದ್ಧಿಯಾಗಿ ಪ್ರಸರಿಸುವುದರಲ್ಲಿದ್ದಿತ್ತೋ ಅಂತಹ ಸಂತತಿಗಾಗಿ ಪ್ರಯುಕ್ತವಾದ ಆ ರೇತಸ್ಸನ್ನು ಮಾನವರಿಗೆ ಹಿತಕಾರಿಯಾದ ರುದ್ರನು ತಡೆದು ನಿಲ್ಲಿಸಿದನು. ಯಾವ ರೇತಸ್ಸನ್ನು ಕನ್ಯಾರೂಪಿಯಾದ ಪ್ರಜಾಪತಿಯ ಪುತ್ರಿಯಲ್ಲಿ ಅಪ್ರತಿಹತನಾದ ರುದ್ರನು ಸ್ಥಾಪಿಸಿದನೋ, ಅದೇ ರೇತಸ್ಸನ್ನು ತಿರುಗಿಯೂ ಉತ್ಪನ್ನ ಸಾಧಕವಾಗುವಂತೆ ಮಾಡುತ್ತಾನೆ.

## English Translation

(Rudra), the benefactor of man, whose eager virile energy was developed, drew it back when disseminated (for the generation of offspring); again the irresistiblc (Rudra) concentrates (the energy) which was communicated to his maiden daughter·

### ವಿಶೇಷವಿಷಯಗಳು

ಈ ಋಕ್ಕಿನಲ್ಲಿಯೂ ಮುಂದಿನ ಎರಡು ಋಕ್ಕುಗಳಲ್ಲಿಯೂ ಪ್ರಜಾಪತಿಯು ತನ್ನ ಪುತ್ರಿಯಾದ ಉಷಸ್ಸಿನೊಡನೆ ಸಂಗವನ್ನು ಬಯಸಿದನೆಂದೂ ಅದನ್ನು ರುದ್ರನು ತಡೆಗಟ್ಟಿದನೆಂದೂ ಹೇಳಿರುವ ವಿಷಯದಲ್ಲಿ ಐತರೇಯ ಬ್ರಾಹ್ಮಣದಲ್ಲಿ ಒಂದು ಉಪಾಖ್ಯಾನವಿದೆ. ಅದನ್ನು ಇಲ್ಲಿ ವಿವರಿಸಿದೇವೆ—

ಐತರೇಯಬ್ರಾಹ್ಮಣದಲ್ಲಿ (ಐ. ಬ್ರಾ. ೧೩-೩೩, ೩೪) ವಿವರಿಸಿರುವ ಉಪಾಖ್ಯಾನವನ್ನು ಅಲ್ಲಿರುವಂತೆಯೇ ವಿವರಿಸಲಾಗಿದೆ—

> **ಪ್ರಜಾಪ್ರತಿರ್ವೈ ಸ್ವಾಂ ದುಹಿತರಮಭ್ಯಧ್ಯಾಯದ್ದಿವಮಿತ್ಯನ್ಯ ಆಹುರುಷಸಮಿತ್ಯನ್ಯೇ ತಾಮೃಶ್ಯೋ ಭೂತ್ವಾ ರೋಹಿತಂ ಭೂತಾಮಭ್ಯೈತ್ತಂ ದೇವಾ ಅಪಶ್ಯನ್ನಕೃತಂ ವೈ ಪ್ರಜಾಪತಿಃ ಕರೋತೀತಿ ತೇ ತಮೈಚ್ಛನ್ಯ ಏನಮಾರಿಷ್ಯತ್ಯೇತಮನ್ಯೋನ್ಯಸ್ಮಿನ್ನಾವಿಂದಂಸ್ತೇಷಾಂ ಯಾ ಏವ ಘೋರತಮಾಸ್ತನ್ವ ಆಸಂಸ್ತಾ ಏಕಧಾ ಸಮಭರಂಸ್ತಾಃ ಸಂಭೃತಾ ಏಷ ದೇವೋಽಭವತ್ತದಸ್ಯೈತದ್ಭೂತವನ್ನಾಮ ಭವತಿ ವೈ ಸ ಯೋಽಸ್ಯೈತದೇವಂ ನಾಮ ವೇದ ॥**
>
> (ಐ. ಬ್ರಾ. ೧೩-೩೩)

ಪೂರ್ವದಲ್ಲಿ ಒಂದಾನೊಂದು ಸಮಯದಲ್ಲಿ ಪ್ರಜಾಪತಿಯು ತನ್ನ ಸ್ವಂತ ಪುತ್ರಿಯನ್ನು ನೋಡಿ ಪತ್ನಿಯನ್ನು ಮೋಹಿಸುವಂತೆ ಮೋಹಗೊಂಡನು. ಅವಳ ರೂಪವನ್ನೇ ಮನಸ್ಸಿನಲ್ಲಿ ಚಿಂತಿಸುತ್ತಿದ್ದನು. ಆ ಪ್ರಜಾಪತಿಯ ಪುತ್ರಿಯು ಯಾರೆಂಬ ವಿಷಯದಲ್ಲಿ ಮಹರ್ಷಿಗಳಲ್ಲಿಯೇ ಮತಭೇದವಿದೆ. ಕೆಲವರು ದ್ಯುಲೋಕಾಧಿದೇವತೆಯೆಂದೂ ಮತ್ತೆ ಕೆಲವರು ಉಷೋದೇವತೆಯೆಂದೂ ಹೇಳುವರು. ಅದು ಹೇಗಾದರೂ ಇರಲಿ ಆಗ ಪ್ರಜಾಪತಿಯು ಋಶ್ಯವೆಂಬ ಒಂದು

ವಿಧವಾದ ಜಿಂಕೆಯ (ವೃಗದ) ರೂಪವನ್ನು ಧರಿಸಿದನು. ಅವನ ಪುತ್ರಿಯು ರೋಹಿತವೆಂಬ ಕೆಂಪುಬಣ್ಣದ ಜಿಂಕೆಯ ರೂಪವನ್ನು ಧರಿಸಿದಳು. (ಇಲ್ಲಿ **ರೋಹಿತಂ ಸ್ರಾಪ್ತಾ** ಎಂಬ ಶಬ್ದಗಳಿಗೆ ಋತಿಮತಿಯಾದಳು ಎಂದು ಭಾಷ್ಯಕಾರರ ವಿವರಣೆ ಇದೆ.) ರೋಹಿತರೂಪದಲ್ಲಿರುವ ತನ್ನ ಪುತ್ರಿಯನ್ನು ಪ್ರಜಾಪತಿಯು ಸಮಿಾಪಿಸಿ ಮಿಥುನಕಾರ್ಯಾಸಕ್ತನಾದನು. ಈರೀತಿ ತನ್ನ ಪುತ್ರಿಯಲ್ಲೇ ಅನುರಕ್ತನಾಗಿ ಸಂಭೋಗಿಸಲು ಉದ್ಯುಕ್ತನಾಗಿರುವ ಪ್ರಜಾಪತಿಯನ್ನು ನೋಡಿ ದೇವತೆಗಳು ಪರಸ್ಪರವಾಗಿ ಈರೀತಿ ಮಾತನಾಡಿಕೊಂಡರು—ಈ ಪ್ರಜಾಪತಿಯು ಯಾರೂ ಯಾವಾಗಲೂ ಮಾಡದಿರುವ ನಿಷಿದ್ಧಕರ್ಮಾಚರಣೆಯಲ್ಲಿ ಆಸಕ್ತನಾಗಿರುವನು. ಈ ಕಾರ್ಯವನ್ನು ನಡೆಯದಂತೆ ತಡೆಗಟ್ಟಲು ಸಮರ್ಥನಾದ ಪುರುಷನಾರು ಎಂದು ಎಲ್ಲಾ ಕಡೆಯಲ್ಲಿಯೂ ಹುಡುಕಿನೋಡಿದರು. ಎಷ್ಟು ಹುಡುಕಿದರೂ ಪ್ರಜಾಪತಿಯನ್ನು ನಿಗ್ರಹಿಸಲು ಶಕ್ತನಾದ ಪುರುಷನು ಸಿಕ್ಕಲಿಲ್ಲ. ನಿನಗೆ ಶಕ್ತಿಯಿದ್ದರೆ ನೀನು ಪ್ರಜಾಪತಿಯನ್ನು ಸಂಹರಿಸು ಎಂದು ದೇವತೆಗಳು ತಮ್ಮತಮ್ಮಲ್ಲಿ ಪ್ರತಿಯೊಬ್ಬನನ್ನೂ ಪ್ರಶ್ನಿಸಿನೋಡಲು ಅವರಲ್ಲಿ ಯಾರಿಗೂ ಆ ಸಾಮರ್ಥ್ಯವಿದ್ದಂತೆ ಕಂಡುಬರಲಿಲ್ಲ. ಆಗ ದೇವತೆಗಳೆಲ್ಲರೂ ಸೇರಿ ತಮ್ಮತಮ್ಮ ಘೋರರೂಪಗಳನ್ನೆಲ್ಲಾ (ದೇವತೆಗಳಿಗೆ ಯಾವ ರೂಪವನ್ನು ಬೇಕಾದರೂ ಧರಿಸಲು ಶಕ್ತಿಯಿರುವುದೆಂದು ಪ್ರಸಿದ್ಧಿಯು. ಆದ್ದರಿಂದ ತಮ್ಮ ಸೌಮ್ಯರೂಪಗಳನ್ನು ಬಿಟ್ಟು ಘೋರವಾದ ಆಕಾರಗಳನ್ನು ಎಂದು ಇಲ್ಲಿ ಹೇಳಿದೆ) ಒಟ್ಟಿಗೆ ಕೇಂದ್ರೀಕರಿಸಿ ಅತ್ಯಂತ ಘೋರಾಕಾರವುಳ್ಳ ಓರ್ವ ಪುರುಷನನ್ನು ಸೃಷ್ಟಿಸಿದರು. ಈ ಪುರುಷನೇ ರುದ್ರನೆಂಬ ಅಭಿಧಾನವನ್ನು ಪಡೆದನು. ಆದ್ದರಿಂದ ರುದ್ರನಿಗೆ ಭೂತವಾನ್ ಭೂತಪತಿ ಎಂಬ ಹೆಸರುಗಳು ಲೋಕದಲ್ಲಿ ಪ್ರಸಿದ್ಧವಾಗಿವೆ. ಆದ್ದರಿಂದ ರುದ್ರನ ಈರೀತಿಯಾದ ಭೂತವದ್ಭಾವವನ್ನು ತಾಳಿದ ಪುರುಷನು ಭೂತಿಮಂತ (ಐಶ್ವರ್ಯವಂತ) ನಾಗುವನು.

**ತಂ ದೇವಾ ಅಬ್ರುವನ್ನಯಂ ವೈ ಪ್ರಜಾಪತಿರಕೃತಮಕರಿಮಂ ವಿಧ್ಯೇತಿ ಸ ತಥೇತ್ಯಬ್ರವೀತ್ಸ ವೈ ವೋ ವರಂ ವೃಣಾ ಇತಿ ವೃಣೀಷ್ವೇತಿ ಸ ಏನಮೇವ ವರಮವೃಣೀತ ಪಶೂನಾಮಾಧಿಪತ್ಯಂ ತದಸ್ಯೈತತ್ಪಶುಮನ್ನಾಮ ಪಶುಮಾನ್ಭವತಿ ಯೋಽಸ್ಯೈತದೇವಂ ನಾಮ ವೇದ ||**

(ಐ. ಬ್ರಾ. ೧೩-೩೩)

ಅನಂತರ ದೇವತೆಗಳು ಆ ಪುರುಷನನ್ನು (ರುದ್ರನನ್ನು) ಉದ್ದೇಶಿಸಿ—ಎಲೈ ರುದ್ರನೇ, ಪ್ರಜಾಪತಿಯು ನಿಷಿದ್ಧಕಾರ್ಯವನ್ನು ಮಾಡಿರುವನು. ಆದುದರಿಂದ ಅವನನ್ನು ಶಿಕ್ಷಿಸುವುದಕ್ಕಾಗಿ ನೀನು ಈ ಬಾಣದಿಂದ ಅವನನ್ನು ಪ್ರಹರಿಸು ಎಂದರು. ರುದ್ರನು ಹಾಗೆಯೇ ಆಗಲೆಂದೊಪ್ಪಿದನು. ಆದರೆ ತಾನು ಪಶುಗಳಿಗೆಲ್ಲಾ ಅಧಿಪತಿಯಾಗುವಂತೆ ವರವನ್ನು ಕೇಳಿದನು. ದೇವತೆಗಳು ಅದರಂತೆ ವರವನ್ನು ಕೊಟ್ಟರು. ಆದ್ದರಿಂದ ರುದ್ರನು ಪಶುಪತಿಯೆಂಬ ಹೆಸರಿನಿಂದ ಪ್ರಸಿದ್ಧನಾದನು. ಈ ವಿಷಯವನ್ನು ತಿಳಿದ ಪುರುಷನು ಪಶುಸಂಪತ್ತನ್ನು ಪಡೆಯುವನು.

**ತಮಭ್ಯಾಯತ್ಯಾವಿಧ್ಯತ್ಸ ವಿದ್ಧ ಊರ್ಧ್ವ ಉದಪ್ರಪತತ್ತಮೇತಂ ಮೃಗ ಇತ್ಯಾಚಕ್ಷತೇ ಯ ಉ ಏವ ಮೃಗವ್ಯಾಧಃ ಸ ಉ ಏವ ಸ ಯಾ ರೋಹಿತ್ಸಾ ರೋಹಿಣೀ ಯೋ ಏವೇಷುಸ್ತ್ರಿಕಾಂಡಾ ಸೋ ಏವೇಷುಸ್ತ್ರಿಕಾಂಡಾ ||**

ಅನಂತರ ಆ ರುದ್ರನು ಮುಂದೆ ಬಂದು ತನ್ನ ಧನುಸ್ಸಿಗೆ ಹೆದೆಯನ್ನು ಏರಿಸಿ ಬಾಣವನ್ನು ಹೂಡಿ ಅದನ್ನು ಹಿಂದಕ್ಕೆ ಎಳೆದು ಪ್ರಜಾಪತಿಗೆ ಗುರಿಯಿಟ್ಟು ಹೊಡೆದನು. ಋಶ್ಯರೂಪದಲ್ಲಿದ್ದ ಪ್ರಜಾಪತಿಗೆ ಆ ಬಾಣವು ತಗುಲಿ ಅವನು ಊರ್ಧ್ವಾಭಿಮುಖವಾಗಿ ಅಂತರಿಕ್ಷಕ್ಕೆ ನೆಗೆದನು. ಅಂತರಿಕ್ಷದಲ್ಲಿ ಊರ್ಧ್ವಾಭಿಮುಖವಾಗಿ ನೆಗೆಯುತ್ತಿರುವ ಪ್ರಜಾಪತಿಯನ್ನು ಜನರೆಲ್ಲರೂ ನೋಡಿ ಅದನ್ನು ಮೃಗವೆಂಬ ನಕ್ಷತ್ರರಾಶಿಯೆಂದು ಕರೆಯುತ್ತಾರೆ (Stars in the Orion)

ಎಂದರೆ, ರೋಹಿಣೀ ಮತ್ತು ಆರ್ದ್ರಾನಕ್ಷತ್ರಗಳ ಮಧ್ಯದಲ್ಲಿರುವ ಮೃಗಶೀರ್ಷನಕ್ಷತ್ರವೆಂದು ಹೇಳುವರು. ಪ್ರಜಾಪತಿಯು ನಕ್ಷತ್ರರೂಪನಾಗಿ ಇರುವನೆಂದಭಿಪ್ರಾಯವು. ಮೃಗರೂಪದಿಂದಿದ್ದ ಪ್ರಜಾಪತಿಯನ್ನು ಬಾಣದಿಂದ ಪ್ರಹರಿಸಿದ ರುದ್ರನು ಮೃಗವ್ಯಾಧನೆಂಬ ಹೆಸರಿನಿಂದ ಆಕಾಶದಲ್ಲಿ ಗೋಚರಿಸುತ್ತಾನೆ. ರೋಹಿತವೆಂಬ ಕೆಂಪು ಜಿಂಕೆಯ ರೂಪದಿಂದಿದ್ದ (ಮೃಗೀ) ಪ್ರಜಾಪತಿಯ ಪುತ್ರಿಯು ಆಕಾಶದಲ್ಲಿ ರೋಹಿಣೀನಕ್ಷತ್ರರೂಪದಿಂದ ಗೋಚರಿಸುತ್ತಾಳೆ. ರುದ್ರನಿಂದ ಪ್ರೇರಿತವಾದ ಬಾಣವು ಕಾಂಡ (ಬಾಣದ ಉದ್ದವಾದ ಕಡ್ಡಿ) ಶಲ್ಯ (ಅಲಗು) ತುದಿ (ಹರಿತವಾದ ಮೊನೆ) ಎಂಬ ಮೂರು ಭಾಗಗಳುಳ್ಳದ್ದಾಯಿತು. ಆದ್ದರಿಂದ ಬಾಣದಲ್ಲಿ ಈಗಲೂ ಮೂರು ಭಾಗಗಳಿರುವುವು.

**ತದ್ವಾ ಇದಂ ಪ್ರಜಾಪತೇ ರೇತಃ ಸಿಕ್ತಮಧಾವತ್ತತ್ಸರೋಽಭವತ್ತೇ ದೇವಾ ಅಬ್ರುವನ್ಮೇದಂ ಪ್ರಜಾಪತೇ ರೇತೋ ದುಷದಿತಿ ಯದಬ್ರುವನ್ಮೇದಂ ಪ್ರಜಾಪತೇ ರೇತೋ ದುಷದಿತಿ ತನ್ಮಾದುಷಮಭವತ್ತನ್ಮಾದುಷಸ್ಯ ಮಾದುಷತ್ವಂ ಮಾದುಷಂ ಹ ವೈ ನಾಮೈತದ್ಯನ್ಮಾನುಷಂ ಸನ್ಮಾನುಷಮಿತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ ॥**

(ಐ. ಬ್ರಾ. ೧೩-೩೩)

ಇನ್ನು ಮೃಗರೂಪದಲ್ಲಿದ್ದ ಪ್ರಜಾಪತಿಯು ರೇತಸ್ಸು (ವೀರ್ಯವು) ಬಹಳವಾಗಿದ್ದುದರಿಂದ ತನ್ನ ಪುತ್ರಿಯಾದ ಮೃಗಿಯಲ್ಲಿ ಸಿಕ್ತವಾಗಿ ಉಳಿದ ಭಾಗವು ಭೂಮಿಯಲ್ಲಿ ಬಿದ್ದು ಪ್ರವಾಹರೂಪದಿಂದ ನದಿಯಂತೆ ಹರಿಯಲುಪಕ್ರಮಿಸಿ ಒಂದು ತಗ್ಗಾದ ಪ್ರದೇಶದಲ್ಲಿ ಸಂಗ್ರಹವಾಗಿ ಮಹಾಸರೋವರವಾಗಿ ಪರಿಣಮಿಸಿತು. ಅದನ್ನು ನೋಡಿ ದೇವತೆಗಳು ಪ್ರಜಾಪತಿಯ ವೀರ್ಯವು **ಅಸ್ಪೃಶ್ಯ** (ಮುಟ್ಟಬಾರದೆಂದು) ವೆಂದೂ **ಮಾದುಷತ್** ಕೆಟ್ಟದ್ದೆಂದೂ ಜನರು ಭಾವಿಸದಂತಾಗಲೀ ಎಂದೂ ಅಪೇಕ್ಷಿಸಿದರು. ದೇವತೆಗಳು ಅದನ್ನು ಮಾದುಷತ್ ಎಂದು ಕರೆದದ್ದರಿಂದ ದೋಷರಹಿತವಾದ ಪ್ರಜಾಪತಿಯ ರೇತೋರೂಪವಾದ ಸರೋವರಕ್ಕೆ ಮಾದುಷತ್ ಎಂದೇ ಹೆಸರಾಯಿತು. ಜನರು ಮಾದುಷ ಎಂಬ ಶಬ್ದದ ದಕಾರ ಸ್ಥಾನದಲ್ಲಿ ನಕಾರವನ್ನು ಸೇರಿಸಿ ಪಠಿಸುವುದರಿಂದ ಬ್ರಾಹ್ಮಣಕ್ಷತ್ರಿಯಾದಿ ಜನರನ್ನು ಮಾನುಷ ಎಂದು ಕರೆಯುತ್ತಾರೆ. ನ್ಯಾಯವಾಗಿ ನೋಡಿದರೆ ಮಾನುಷಶಬ್ದಕ್ಕೆ (ಮಾದುಷ) ದೋಷರಹಿತವಾಗಿರುವುದು ಎಂದೇ ಅರ್ಥವು. ಹೀಗಿರುವಾಗ ಜನರು ತಮ್ಮ ಶರೀರವನ್ನು ಸಾಧಾರಣಾರ್ಥವಿರುವ ಮಾನುಷಶಬ್ದದಿಂದ ವ್ಯವಹರಿಸುವುದಕ್ಕೆ ಬದಲಾಗಿ ಪರೋಕ್ಷಾರ್ಥವಿರುವ (ಎಂದರೆ ಮಾದುಷ ಎಂಬ ಶ್ರೇಷ್ಠಾರ್ಥವಿರುವ) ಶಬ್ದದಿಂದಲೇ ವ್ಯವಹರಿಸುತ್ತಾರೆ. ಆದ್ದರಿಂದ ದೇವತೆಗಳಂತೆ ಯೋಗ್ಯರೂ ಪೂಜ್ಯರೂ ಆದ ಪುರುಷರು ಲೋಕವ್ಯವಹಾರದಲ್ಲಿ ಪರೋಕ್ಷಪ್ರಿಯರಾಗಿಯೇ (ಪ್ರತ್ಯಕ್ಷವಾಗಿ ತೋರುವ ಅರ್ಥವಿಲ್ಲದೆ ಗೂಢಾರ್ಥವಿರುವ ಶಬ್ದಗಳಿಂದಲೇ ತೃಪ್ತರಾಗಿ) ಇರುತ್ತಾರೆ. ಹೇಗೆಂದರೆ ತಮಗೆ ಮಾತಾಪಿತೃಗಳು ಇಟ್ಟ ದೇವದತ್ತ ಮೊದಲಾದ ಸಾಮಾನ್ಯ ನಾಮಗಳಿಂದ ತಮ್ಮ ಯಶಸ್ಸನ್ನು ಪ್ರಕಾಶಗೊಳಿಸುವ ಉಪಾಧ್ಯಾಯ, ಆಚಾರ್ಯ, ಸ್ವಾಮಿ ಎಂದು ಮೊದಲಾದ ಅನ್ವರ್ಥನಾಮಗಳಿಂದಲೇ ತೃಪ್ತಿಪಡುತ್ತಾರೆ. 'ದೇವತೆಗಳೂ ಪ್ರತ್ಯಕ್ಷವಾಗಿ ಗೋಚರಿಸದೆ ಪರೋಕ್ಷದಲ್ಲಿದ್ದುಕೊಂಡೇ ಸ್ತುತ್ಯಾದಿಗಳನ್ನು ಸ್ವೀಕರಿಸುತ್ತಾರೆ. ಆದ್ದರಿಂದ ದೇವತೆಗಳು ಪರೋಕ್ಷಪ್ರಿಯರು ಎಂದು ಹೇಳುವರು. ಆದ್ದರಿಂದ ಪರೋಕ್ಷತ್ವವನ್ನು ಪ್ರದರ್ಶಿಸುವುದಕ್ಕಾಗಿ **ಮಾದುಷ**ಶಬ್ದದಲ್ಲಿ **ದ**ಕಾರಕ್ಕೆ ಬದಲಾಗಿ **ನ**ಕಾರವನ್ನು ಸೇರಿಸಿ **ಮಾನುಷ** ಎಂದು ಉಪಯೋಗಿಸುವರು.

**ತದಗ್ನಿನಾ ಪರ್ಯಾದಧುಸ್ತನ್ಮರುತೋಽಧೂನ್ವಂಸ್ತದಗ್ನಿರ್ನ ಪ್ರಾಚ್ಯಾವಯತ್ತದಗ್ನಿನಾ ವೈಶ್ವಾನರೇಣ ಪರ್ಯಾದಧುಸ್ತನ್ಮರುತೋಽಧೂನ್ವಂಸ್ತದಗ್ನಿರ್ವೈಶ್ವಾನರಃ ಪ್ರಾಚ್ಯಾವಯತ್ತಸ್ಯ ಯದ್ರೇತಸಃ ಪ್ರಥಮಮುದದೀಪ್ಯತ ತದಸಾವಾದಿತ್ಯೋಽಭವದ್ಯದ್ವಿತೀಯಮಾಸೀತ್ತದ್ಭೃ**

**ಗುರಭವತ್ತಂ ವರುಣೋ ನ್ಯಗೃಹ್ಣೀತ ತಸ್ಮಾತ್ಸ ಭೃಗುರ್ವಾರುಣಿರಥ ಯತ್ತೃತೀಯಮದೀ-ದೇವಿವ ತೆ ಆದಿತ್ಯಾ ಅಭವನ್ಯೇಽಙ್ಗಾರಾ ಆಸಂಸ್ತೇಽಙ್ಗಿರಸೋಽಭವನ್ಯದಂಗಾರಾಃ ಪುನ-ರವಶಾಂತಾ ಉದದೀಪ್ಯಂತ ತದ್ಬೃಹಸ್ಪತಿರಭವತ್ ||**

(ಐ. ಬ್ರಾ. ೧೩-೩೪)

ಅನಂತರ ದೇವತೆಗಳು ಪ್ರಜಾಪತಿಯ ಸಂಬಂಧವಾದ ರೇತಸ್ಸನ್ನು ದೋಷರಹಿತವನ್ನಾಗಿ ಮಾಡಿದಮೇಲೆ ಸರೋವರದ ರೂಪಿನಲ್ಲಿ ದ್ರವರೂಪದಿಂದಿರುವ ಆ ರೇತಸ್ಸನ್ನು ದ್ರವರಹಿತವನ್ನಾಗಿ ಮಾಡಬೇಕೆಂದು ಯೋಚಿಸಿ ಆ ಸರೋವರದ ಸುತ್ತಲೂ ಅಗ್ನಿಯನ್ನು ಹೊತ್ತಿಸಿ ಉಂಸತೊಡಗಿದರು. ಸರೋವರದ ಸುತ್ತಲೂ ಅಗ್ನಿಯು ಪ್ರಜ್ವಲಿತವಾಗಿ ಉರಿಯು ತ್ತಿರುವಾಗ ವಾಯುವು ರೇತಸ್ಸಿನಲ್ಲಿ ಸೇರಿರುವ ದ್ರವವನ್ನು ಒಣಗಿಸುವುದಕ್ಕಾಗಿ ರೇತಸ್ಸನ್ನು ಅಲ್ಲೋಲಕಲ್ಲೋಲ ವನ್ನಾಗಿ ಮಾಡಿತು. ಆದರೂ ಸಹ ಅಗ್ನಿಯು ತನ್ನ ಶಾಖದಿಂದ ರೇತಸ್ಸಿನಲ್ಲಿ ದ್ರವಭಾಗವು ವಿಶೇಷವಾಗಿದ್ದುದರಿಂದ ಅದನ್ನು ಪರಿಹರಿಸಿ ಅದನ್ನು ಪಿಂಡಾಕಾರಕ್ಕೆ (ಘನದ್ರವ್ಯ, ಘಟ್ಟಿಯಾದ ಪದಾರ್ಥ) ಪರಿವರ್ತಿಸಲು ಅಗ್ನಿಗೆ ಸಾಧ್ಯವಾಗ ಲಿಲ್ಲ. ಆದ್ದರಿಂದ ದೇವತೆಗಳು ಅಗ್ನಿಯಿಂದ ಸಾಧ್ಯವಾಗದ ಈ ಕಾರ್ಯವನ್ನು ವೈಶ್ವಾನರನಾಮಕವಾದ ಅಗ್ನಿಯ ರೂಪವಿಶೇಷದಿಂದ ಸಾಧಿಸಲು ಪ್ರಯತ್ನಮಾಡಿದನು. ಈ ವೈಶ್ವಾನರಾಗ್ನಿಯು ಸಮಸ್ತ ಪ್ರಾಣಿಗಳ ಉದರಗಳಲ್ಲಿ ಜಾಠರಾಗ್ನಿರೂಪದಿಂದ ಪ್ರವೇಶಮಾಡಿ ಅನ್ನಾಪಾನಾದಿಗಳ ಪಚನಕಾರ್ಯದಲ್ಲಿ ತೊಡಗಿರುವನು.

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ |**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ||**

ನಾನೇ ವೈಶ್ವಾನರಾಗ್ನಿರೂಪದಿಂದ ಪ್ರಾಣಿಗಳ ದೇಹದಲ್ಲಿದ್ದುಕೊಂಡು ಪ್ರಾಣ ಅಪಾನಗಳೆಂಬ ಪ್ರಾಣವಾಯು ಗಳ ಸಹಾಯದಿಂದ ಪ್ರಾಣಿಗಳು ತಿನ್ನುವ ನಾಲ್ಕುವಿಧವಾದ ಅನ್ನಾದ್ಯಾಹಾರಗಳನ್ನು ಪಚನಮಾಡುತ್ತೇನೆ ಎಂದು ಭಗವಂತನೇ ಹೇಳಿದ್ದಾನೆ. ಆದ್ದರಿಂದ ದೇವತೆಗಳು ವೈಶ್ವಾನರಾಗ್ನಿಯ ಸಾಮರ್ಥ್ಯವು ವಿಶೇಷವಾಗಿರುವುದೆಂದು ತಿಳಿದು ಆ ಪ್ರಜಾಪತಿಯ ರೇತಸ್ಸನ್ನು ಶೋಷಿಸಲು (ಒಣಗಿಸಲು) ವೈಶ್ವಾನರಾಗ್ನಿಯನ್ನು ಸರೋವರದ ಸುತ್ತಲೂ ಸ್ಥಾಪಿಸಿದರು. ವಾಯುವೂ ಪೂರ್ವದಂತೆ ಸರೋವರವನ್ನು ಪ್ರವೇಶಿಸಿ ಅದನ್ನು ಅಲ್ಲೋಲಕಲ್ಲೋಲವನ್ನಾಗಿ ಮಾಡಿ ಶೋಷಿಸಲು ಪ್ರಾರಂಭಿಸಿತು. ಹೀಗೆ ವಾಯುಸಹಾಯದಿಂದ ವೈಶ್ವಾನರಾಗ್ನಿಯು ಪ್ರಜಾಪತಿಯ ರೇತಸ್ಸನ್ನು ದ್ರವೀ ಭಾವದಿಂದ ಬೇರ್ಪಡಿಸಿ ಪಿಂಡಾಕಾರವಾದ ಘನಪದಾರ್ಥವನ್ನಾಗಿ ಪರಿವರ್ತಿಸಿದರು. ಈರೀತಿ ರೇತಸ್ಸು ಅನೇಕ ಪಿಂಡ ಗಳಾಗಿ (ಗೋಳಾಕಾರವಾಗಿ) ಪರಿವರ್ತಿಸಲ್ಪಟ್ಟು ಜ್ವಾಜಲ್ಯಮಾನವಾಗಿ ಪ್ರಕಾಶಿಸತೊಡಗಿತು. ಇವುಗಳಲ್ಲಿ ಮೊದಲನೇ ಪಿಂಡರೂಪವಾದ ತೇಜೋರಾಶಿಯೇ ಸ್ವರ್ಗದಲ್ಲಿ (ಆಕಾಶದಲ್ಲಿ) ಕಾಣುವ ಆದಿತ್ಯನಾಯಿತು. ಎರಡನೆಯ ಪಿಂಡವು ಭೃಗುಋಷಿಯಾಯಿತು. ಈ ಭೃಗುವನ್ನು ವರುಣನು ತನ್ನ ಪುತ್ರನನ್ನಾಗಿ ಸ್ವೀಕರಿಸಿದನು. ಆದ್ದರಿಂದ ಭೃಗುಋಷಿಗೆ **ಭೃಗುರ್ವಾರುಣಿಃ** ವರುಣಪುತ್ರನಾದ ಭೃಗುಋಷಿ ಎಂದು ಹೆಸರಾಯಿತು. ವರುಣನ ಮಗನಾದ್ದರಿಂದ ವಾರುಣಿ ಯೆಂದೂ ಹೇಳುವರು. ಇದನ್ನೇ ಗಮನದಲ್ಲಿಟ್ಟುಕೊಂಡು ತೈತ್ತಿರೀಯಶಾಖಾಧ್ಯಾಯಿಗಳು—**ಭೃಗುರ್ವೈ ವಾರುಣಿಃ | ವರುಣಂ ಪಿತರಮುಪಸಸಾರ** || (ತೈ. ಉ. ೩-೧) ಎಂದು ಪಠಿಸುವರು. ಅನಂತರ ಮೂರನೆಯ ಪಿಂಡವು ಅತಿ ಯಾಗಿ ಪ್ರಕಾಶಿಸುತ್ತಿದ್ದು, ಅದಿತಿಪುತ್ರರಾಗಿ ಆದಿತ್ಯರು ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಆದಿತ್ಯ ಎಂದರೆ ಮಂಡಲ ವರ್ತಿಯಾದ ಸೂರ್ಯನು. ಇಲ್ಲಿ ಆದಿತ್ಯಾಃ ಎಂಬ ಶಬ್ದದಿಂದ ಅದಿತಿಪುತ್ರರಾದ ಇತರ ದೇವತೆಗಳು ಸೂಚಿತವಾಗಿರು ವರು ಎಂದು ತಿಳಿಯಬೇಕು. ಅನಂತರ ಮತ್ತೆ ಕೆಲವು ಪಿಂಡಗಳು ಚೆನ್ನಾಗಿ ದಗ್ಧವಾಗಿ (ಉರಿದು) ಕೆಂಡಗಳಾದುವು.

ಆ ಕೆಂಡಗಳಿಂದ ಅಂಗಿರ ಎಂಬ ಋಷಿಗಳು ಉತ್ಪನ್ನರಾದರು ಮತ್ತು ಇನ್ನೂ ಉರಿಯುತ್ತಲೇ ಇದ್ದು ಆರಿಹೋಗದಿದ್ದ ಎಂದರೆ ಮತ್ತೆಮತ್ತೆ ಪ್ರಕಾಶಮಾನವಾಗಿ ಉರಿಯತೊಡಗಿದ್ದ ಕೆಂಡಗಳಿಂದ ಬೃಹಸ್ಪತಿಯು ಉತ್ಪನ್ನನಾದನು.

**ಯಾನಿ ಪರೀಕ್ಷಾಣಾನ್ಯಾಸಂಸ್ತೇ ಕೃಷ್ಣಾಃ ಪಶವೋಽಭವನ್ಯಾ ಲೋಹಿನೀ ಮೃತ್ತಿಕಾ ತೇ ರೋಹಿತಾ ಅಥ ಯದ್ಭಸ್ಮಾಸೀತ್ತತ್ಪರುಷ್ಯಂ ವ್ಯಸರ್ಪದ್ಗೌರೋ ಗವಯ ಋಶ್ಯ ಉಷ್ಟ್ರೋ ಗರ್ದಭ ಇತಿ ಯೇ ಚೈತೇಽರುಣಾಃ ಪಶವಸ್ತೇ ಚ ।**

(ಐ. ಬ್ರಾ. ೧೩-೩೪)

ಅನಂತರ ಕೆಂಡಗಳು ಆರಿಹೋಗಿ ಅಂಗಾರ (ಇಜ್ಜಲು) ಗಳಾದಮೇಲೆ ಅವುಗಳು ಕಪ್ಪುಬಣ್ಣದ ಪಶುಗಳಾದವು. ಅಗ್ನಿಯು ಉರಿದಮೇಲೆ ತಳದಲ್ಲಿ ಇದ್ದ ಕೆಂಪಾದ ಮೃತ್ತಿಕೆಯ (ಮಣ್ಣು) ಕೆಂಪುಬಣ್ಣದ ಪಶುಗಳಾದವು. ಬೂದಿಯಿಂದ (ಭಸ್ಮ) ಪರುಷ್ಯಪಶುಗಳು ಎಂದರೆ, ಗೌರ, ಗವಯ, ಋಶ್ಯ ಎಂಬ ಅರಣ್ಯಮೃಗಗಳು ಒಂಟೆ, ಕತ್ತೆ ಇವುಗಳೂ ಉತ್ಪನ್ನವಾದವು ಇತ್ಯಾದಿ. ಈ ಉಪಾಖ್ಯಾನದಿಂದ ಅಂಗಿರಾಋಷಿಗಳ ಉತ್ಪತ್ತಿವಿಚಾರವೂ. ಅಂಗಿರಾಋಷಿಗಳಿಗೂ ಅಗ್ನಿಗೂ ಇರುವ ಸಂಬಂಧವೂ, ಅಗ್ನಿಗೆ ಅಂಗಿರ ಎಂದು ಹೆಸರು ಬರಲು ಕಾರಣವೂ ಸಹ ವಿವೃತವಾಗಿರುವುದು.

ಸಂಹಿತಾಪಾಠಃ

ಮಧ್ಯಾ ಯತ್ಕರ್ತ್ವಮಭವದಭೀಕೇ ಕಾಮಂ ಕೃಣ್ವಾನೇ ಪಿತರಿ ಯುವತ್ಯಾಂ ।
ಮನಾನಗ್ರೇತೋ ಜಹತುರ್ವಿಯಂತಾ ಸಾನೌ ನಿಷಿಕ್ತಂ ಸುಕೃತಸ್ಯ ಯೋನೌ ॥ ೬ ॥

ಪದಪಾಠಃ

ಮಧ್ಯಾ । ಯತ್ । ಕರ್ತ್ವಂ । ಅಭವತ್ । ಅಭೀಕೇ । ಕಾಮಂ । ಕೃಣ್ವಾನೇ । ಪಿತರಿ । ಯುವತ್ಯಾಂ ।
ಮನಾನಕ್ । ರೇತಃ । ಜಹತುಃ । ವಿಽಯಂತಾ । ಸಾನೌ । ನಿಽಸಿಕ್ತಂ । ಸುಽಕೃತಸ್ಯ । ಯೋನೌ ॥ ೬ ॥

ಸಾಯಣಭಾಷ್ಯಂ

**ಕಾಮಂ ಯಥೇಚ್ಛಂ ಕೃಣ್ವಾನೇ ಕುರ್ವಾಣೇ ಪಿತರಿ ಪ್ರಜಾಪತೌ ಯುವತ್ಯಾಂ ದುಹಿತರ್ಯುಷಸಿ ದಿವಿ ವಾ । ದಿವಮಿತ್ಯನ್ಯ ಇತಿ ಹಿ ಬ್ರಾಹ್ಮಣಂ ಪ್ರದರ್ಶಿತಂ । ಮಧ್ಯಾ ತಯೋರ್ಮಧ್ಯೇಽಂತರಿಕ್ಷಮಧ್ಯೇ ವಾಭೀಕೇ ಸಮೀಪೇ ಯತ್ಕರ್ತ್ವಂ ಕರ್ಮಾಭವತ್ ಮಿಥುನೀಭಾವಾಖ್ಯಂ ತದಾನೀಂ ಮನಾನಗಲ್ಪಂ ರೇತೋ ಜಹತುಃ । ತ್ಯಕ್ತವಂತೌ । ಕಿಂ ಕುರ್ವಾಣಾವಿತಿ ತತ್ರಾಹ । ವಿಯಂತಾ ಪರಸ್ಪರಮಭಿಗಚ್ಛಂತೌ । ಪ್ರಜಾಪತಿನಾ ಸಾನೌ ಸಮುಚ್ಛ್ರಿತೇ ಸ್ಥಾನೇ ಸುಕೃತಸ್ಯ ಯಜ್ಞಸ್ಯ ಯೋನೌ ನಿಷಿಕ್ತಮಾಸೀದಿತ್ಯರ್ಥಃ । ತತೋ ರುದ್ರ ಉತ್ಪನ್ನ ಇತ್ಯರ್ಥಃ ॥**

ಪ್ರತಿಪದಾರ್ಥ

**ಕಾಮಂ**—ಸ್ವತಂತ್ರವಾಗಿ । **ಕೃಣ್ವಾನೇ**—ವ್ಯವಹರಿಸುತ್ತಿದ್ದ । **ಪಿತರಿ**—ತಂದೆಯಾದ ಪ್ರಜಾಪತಿಯೂ । **ಯುವತ್ಯಾಂ**—ಮಗಳಾದ ಉಷಸ್ಸೂ । **ಮಧ್ಯಾ**—ಅಂತರಿಕ್ಷದ ಮಧ್ಯಭಾಗದಲ್ಲಿ । **ಅಭೀಕೆ**—ಸಮೀಪವಾಗಿ ।

**ಯತ್**—ಯಾವಾಗ | **ಕರ್ತ್ವಂ**—ಒಟ್ಟಿಗೆ ಸೇರುವ ಕರ್ಮವನ್ನು | **ಅಭವತ್**—ನೆರವೇರಿಸಿದರೋ ಆಗ | **ವಿಯಂತಾ**—ಒಟ್ಟಿಗೆ ಸೇರಿದ ಅವರು | **ಮನಾನಕ್**—ಕೊಂಚವುಟ್ಟಿಗೆ | **ರೇತಃ**—ರೇತಸ್ಸನ್ನು | **ಜಹತುಃ**—ಸಡಿಲಿಸಿ ಬಿಟ್ಟರು | (ಆ ರೇತಸ್ಸು) **ಸಾನೌ**—ಉನ್ನತಪ್ರದೇಶದಲ್ಲಿರುವ | **ಸುಕೃತಸ್ಯ**—ಯಜ್ಞದ | **ಯೋನೌ**—ಮಧ್ಯಭಾಗದಲ್ಲಿ | **ನಿಷಿಕ್ತಂ**—ಸುರಿಯಲ್ಪಟ್ಟಿತು.

ಭಾವಾರ್ಥ

ಸ್ವತಂತ್ರವಾಗಿ ವ್ಯವಹರಿಸುತ್ತಿದ್ದ ತಂದೆಯಾದ ಪ್ರಜಾಪತಿಯೂ, ಮಗಳಾದ ಉಷಸ್ಸೂ, ಅಂತರಿಕ್ಷದ ಮಧ್ಯಭಾಗದಲ್ಲಿ ಯಾವಾಗ ಒಟ್ಟಿಗೆ ಸೇರಿದರೋ ಆಗ ಕೊಂಚಭಾಗ ರೇತಸ್ಸನ್ನು ಸಡಿಲಿಸಿಬಿಟ್ಟರು. ಆ ರೇತಸ್ಸು ಉನ್ನತ ಪ್ರದೇಶದಲ್ಲಿರುವ ಯಜ್ಞದ ಮಧ್ಯಭಾಗದಲ್ಲಿ ಸುರಿಯಲ್ಪಟ್ಟಿತು.

English Translation

When the deed was done in mid-heaven in the proximity of the father working his will, and the daughter coming together, they let the seed fall slightly ; it was poured upon the high place of sacrifice.

ಸಂಹಿತಾಪಾಠಃ

ಪಿತಾ ಯತ್ಸ್ವಾಂ ದುಹಿತರಮಧಿಷ್ಕನ್ಕ್ಷ್ಮಯಾ ರೇತಃ ಸಂಜಗ್ಮಾನೋ ನಿ ಷಿಂಚತ್ ।
ಸ್ವಾಧ್ಯೋಽಜನಯನ್ಬ್ರಹ್ಮ ದೇವಾ ವಾಸ್ತೋಷ್ಪತಿಂ ವ್ರತಪಾಂ ನಿರತಕ್ಷನ್ ॥

ಪದಪಾಠಃ

ಪಿತಾ । ಯತ್ । ಸ್ವಾಂ । ದುಹಿತರಂ । ಅಧಿಽಸ್ಕನ್ । ಕ್ಷ್ಮಯಾ । ರೇತಃ । ಸಂಽಜಗ್ಮಾನಃ । ನಿ । ಸಿಂಚತ್ ।
ಸುಽಆಧ್ಯಃ । ಅಜನಯನ್ । ಬ್ರಹ್ಮ । ದೇವಾಃ । ವಾಸ್ತೋಃ । ಪತಿಂ । ವ್ರತಽಪಾಂ । ನಿಃ । ಅತಕ್ಷನ್ ॥

ಸಾಯಣಭಾಷ್ಯಂ

ಪಿತಾ ಪ್ರಜಾಪತಿರ್ಯದ್ಯದಾ ಸ್ವಾಂ ದುಹಿತರಂ ದಿವಮುಷಸಂ ವಾಧಿಷ್ಕನ್ ಅಧ್ಯಸ್ಕಂದತ್ ತದಾಸೀನ್ಮೇವ ಕ್ಷ್ಮಯಾ ಪೃಥಿವ್ಯಾ ಸಹ ಸಂಜಗ್ಮಾನಃ ಸಂಗಚ್ಛಮಾನಃ ಪ್ರಜಾಪತಿರಸ್ಮಿಲ್ಲೋಕೇ ರೋಹಿತೋ ಭೂತ್ವಾ ರೇತೋ ನಿ ಷಿಂಚತ್ । ನಿಷೇಕಮುಕರೋತ್ । ತಾಮೃಶ್ಯೋ ಭೂತ್ವಾ ರೋಹಿತಂ ಭೂತಾಮುಭ್ಯೈದಿತಿ ಬ್ರಾಹ್ಮಣಂ । ಐ. ಬ್ರಾ. ೩-೩೩ । ತದಾನೀಂ ಸ್ವಾಧ್ಯಃ ಸುಧ್ಯಾನಾಃ ಸುಕರ್ಮಾಣೋ ವಾ ದೇವಾ ಬ್ರಹ್ಮಾಜನಯನ್ । ಉದಪಾದಯನ್ । ಕಿಂ ತದ್ಬ್ರಹ್ಮೇತಿ ತದಾಹ । ವಾಸ್ತೋಷ್ಪತಿಂ

ಯಜ್ಞವಾಸ್ತುಸ್ವಾಮಿನಂ ವ್ರತಪಾಂ ವ್ರತಸ್ಯ ಕರ್ಮಣೋ ರಕ್ಷಃಪ್ರಭೃತಿಭ್ಯಃ ಪಾಲಕಂ ನಿರತಕ್ಷನ್ । ಸಮುದಪಾದಯನ್ । ಯಜ್ಞವಾಸ್ತುಸ್ವಾಮಿತ್ವಂ ದತ್ತ್ವಾ ಕರ್ಮರಕ್ಷಕತ್ವೇನ ನಿರ್ಮಿತವಂತ ಇತ್ಯರ್ಥಃ ॥

ಪ್ರತಿಪದಾರ್ಥ

**ಪಿತಾ**—ತಂದೆಯಾದ ಪ್ರಜಾಪತಿಯು। **ಯತ್**—ಯಾವಾಗ । **ಸ್ವಾಂ ದುಹಿತರಂ**—ತನ್ನ ಪುತ್ರಿಯಾದ ಉಷಸ್ಸಿನೊಡನೆ । **ಅಧಿಷ್ಕನ್**—ಸೇರಿ ಸಂಗವನ್ನು ಹೊಂದಿದನೋ ಆಗ । **ಕ್ಷ್ಮಯಾ**—ಪೃಥ್ವಿಯೊಡನೆ । **ಸಂಜಗ್ಮಾನಃ**—ಒಂದಿಗೆ ಸೇರಿ । (ಈ ಲೋಕದಲ್ಲಿ) **ರೇತಃ**—ರೇತಸ್ಸನ್ನು । **ನಿ ಷಿಂಚತ್**—ಸುರಿಸಿದನು । (ಆಗ) **ಸ್ವಾಧ್ಯಃ**—ಉತ್ತಮವಾದ ಕರ್ಮಕರ್ತರಾದ । **ದೇವಾಃ**—ದೇವತೆಗಳು । **ಬ್ರಹ್ಮ**—ಬ್ರಹ್ಮನನ್ನು । **ಅಜನಯನ್**—ಉತ್ಪನ್ನಮಾಡಿದರು । **ವಾಸ್ತೋಷ್ಪತಿಂ**—ಯಜ್ಞಕ್ಕೆ ಪ್ರಭುವೂ । **ವ್ರತಪಾಂ**—ಕರ್ಮಪಾಲಕನೂ ಆದ ಬ್ರಹ್ಮನನ್ನು । (ವಾಸ್ತೋಷ್ಪತ್ತಿಯನ್ನು) **ನಿರತಕ್ಷನ್**—ಉತ್ಪನ್ನ ಮಾಡಿದರು.

ಭಾವಾರ್ಥ

ತಂದೆಯಾದ ಪ್ರಜಾಪತಿಯು ಯಾವಾಗ ತನ್ನ ಪುತ್ರಿಯಾದ ಉಷಸ್ಸಿನೊಡನೆ ಸೇರಿ ಸಂಗವನ್ನು ಮಾಡಿದನೋ ಆಗ ಪೃಥ್ವಿಯೊಡನೆ ಒಂದಾಗ ಸೇರಿ ಈ ಲೋಕದಲ್ಲಿ ರೇತಸ್ಸನ್ನು ಸುರಿಸಿದನು. ಆಗ ಉತ್ತಮವಾದ ಕರ್ಮಕರ್ತರಾದ ದೇವತೆಗಳು ಬ್ರಹ್ಮನನ್ನು ಉತ್ಪನ್ನಮಾಡಿದರು. ಯಜ್ಞಕ್ಕೆ ಪ್ರಭುವೂ, ಕರ್ಮಪಾಲಕನೂ ಆದ ಬ್ರಹ್ಮನನ್ನು (ವಾಸ್ತೋಷ್ಪತ್ತಿಯನ್ನು) ಉತ್ಪನ್ನಮಾಡಿದರು.

## English Translation

When the father united with the daughter, then associating with the earth, he sprinkled it with the effusion : then the thoughtful gods begot Brahma : they fabricated the lord of the hearth (of sacrifice); the defender of sacred rites.

ಸಂಹಿತಾಪಾಠಃ

ಸ ಈಂ ವೃಷಾ ನ ಫೇನಮಸ್ಯದಾಜೌ ಸ್ಮದಾ ಪರೈದಪ ದಭ್ರಚೇತಾಃ ।
ಸರತ್ಪದಾ ನ ದಕ್ಷಿಣಾ ಪರಾವೃಙ್ಙ ತಾ ನು ಮೇ ಪೃಶನ್ಯೋ ಜಗೃಭ್ರೇ ॥೮॥

ಪದಪಾಠಃ

ಸಃ । ಈಂ । ವೃಷಾ । ನ । ಫೇನಂ । ಅಸ್ಯತ್ । ಆಜೌ । ಸ್ಮತ್ । ಆ । ಪರಾ । ಐತ್ । ಅಪ । ದಭ್ರಚೇತಾಃ ।
ಸರತ್ । ಪದಾ । ನ । ದಕ್ಷಿಣಾ । ಪರಾಽವೃಕ್ । ನ । ತಾಃ । ನು । ಮೇ । ಪೃಶನ್ಯಃ । ಜಗೃಭ್ರೇ ॥ ೮ ॥

ಸಾಯಣಭಾಷ್ಯಂ

ಅಂಗಿರಸಾಂ ಸತ್ರಾಂತೇ ನಾಭಾನೇದಿಷ್ಠೋ ಗಾ ನಿರೋಧಯಂತಂ ವಾಸ್ತೋಷ್ಪತಿಂ ಪುರತಃ ಪಶ್ಯನ್ವದತಿ । ಸ ಈಂ । ಸೋಽಯಂ ವೃಷಾ ನ ವರ್ಷಕ ಇಂದ್ರ ಇವ ಸ ಯಥಾ ನಮುಚೇರ್ವಧಾರ್ಥ-ಮಾಜೌ ಸಂಗ್ರಾಮೇ ಫೇನಮಸ್ಯತ್ ಕ್ಷಿಪ್ತವಾನ್ ತದ್ವತ್ಕ್ಷೇಪಮನಾ ವಾಸ್ತೋಷ್ಪತಿರಿದಾನೀಂ ತವೈವ ವಾಸ್ತುಭಾಗೋ ಯುಕ್ತ ಇತಿ ಯಥಾರ್ಥಕಥನಾನಂತರಂ ಸ್ಮದಸ್ಮತ್ತ ಆಪ ಪರೈತ್ । ಅಪಪರಾಗಚ್ಛತಿ । ದಭ್ರಚೇತಾ ಅಲ್ಪಮನಸ್ಕೋ ಯಃ ಕಶ್ಚಿದ್ದಕ್ಷಿಣಾ ದಕ್ಷಿಣಾರ್ಥಾನಾಂ ಗವಾಂ ಪರಾವೃಕ್ ಪರಾವರ್ಜ-ಯಿತಾ ಸನ್ ಪದಾ ಪದಾನಿ ನ ಸರತ್ । ನ ಸರತಿ। ಅಸ್ಮದಭಿಮುಖಮಾಗಚ್ಛತಿ । ಮೇ ಮಮ ಸಂಬಂಧಿ-ನ್ಯಸ್ತಾ ಗಾ ಅಂಗಿರೋಭಿರ್ದತ್ತಾಃ ಪೃಶನ್ಯಃ ಪಥಿಕಾನಾಮಭಿಸ್ಪರ್ಶನಕುಶಲೋ ರುದ್ರೋ ನ ಜಗೃಭ್ರೇ । ನ ಗೃಹ್ಣಾತೀತ್ಯೇವಮಾಶಾಸ್ತೇ ॥

ಪ್ರತಿಪದಾರ್ಥ

**ಸ ಈಂ**—ಅದೇ ವಾಸ್ತೋಷ್ಪತ್ತಿಯು । **ವೃಷಾ ನ**—ವೃಷ್ಟಿಕಾರಕನಾದ ಇಂದ್ರನಂತೆ । **ಆಜಾ**—ಯುದ್ಧದಲ್ಲಿ । **ಫೇನಂ**—ನೊರೆಯನ್ನು । **ಅಸ್ಯತ್**—ಸುತ್ತಲೂ ಸುರಿಸಿ ಹರಡಿದನು । **ಸ್ಮತ್**—ನಮ್ಮಿಂದ । **ಆ ಅಪ ಪರೈತ್**—ದೂರ ಸರಿದು ಬಂದನು । **ದಭ್ರಚೇತಾಃ**—ಅಲ್ಪಮನಸ್ಸುಳ್ಳವನು । **ದಕ್ಷಿಣಾ**—ದಕ್ಷಿಣಾರ್ಥವಾದ ಗೋವುಗಳನ್ನು । **ಪರಾವೃಕ್**—ಬಿಟ್ಟುಬಿಟ್ಟು । **ಪದಾ**—ಒಂದು ಹೆಜ್ಜೆಯನ್ನೂ । **ನ ಸರತ್**—ಮುಂದಿಡುವುದಿಲ್ಲ । (ಆದರೆ) **ಪೃಶನ್ಯಃ**—ಸುಲಿಗೆಮಾಡುವುದರಲ್ಲಿ ಚತುರನಾದ ರುದ್ರನು । **ಮೇ**—ನನಗೆ ಸೇರಿದ। **ತಾಃ**—ಅದೇ ಗೋವುಗಳನ್ನು । **ನ ಜಗೃಭ್ರೇ**—ಕಸಿದುಕೊಳ್ಳಲಿಲ್ಲ,

ಭಾವಾರ್ಥ

ವಾಸ್ತೋಷ್ಪತ್ತಿಯು ವೃಷ್ಟಿಕಾರಕನಾದ ಇಂದ್ರನಂತೆ ಯುದ್ಧದಲ್ಲಿ ನೊರೆಯನ್ನು ಸುತ್ತಲೂ ಸುರಿಸಿ ಹರಡಿದನು. ನಮ್ಮಿಂದ ದೂರ ಸರಿದನು. ಅಲ್ಪಮನಸ್ಸುಳ್ಳ ಇತರರಾರಾದರೂ ಆಗಿದ್ದರೆ ದಕ್ಷಿಣಾರ್ಥವಾದ ಗೋವುಗಳನ್ನು ಬಿಟ್ಟು ಬಿಟ್ಟು ಒಂದು ಹೆಜ್ಜೆಯನ್ನೂ ಮುಂದಿಡುವುದಿಲ್ಲ. ಆದರೆ, ಸುಲಿಗೆಮಾಡುವುದರಲ್ಲಿ ಚತುರನಾದ ರುದ್ರನು ನನಗೆ ಸೇರಿದ ಅದೇ ಗೋವುಗಳನ್ನು ಕಸಿದುಕೊಳ್ಳಲಿಲ್ಲ.

## English Translation

He, like the showerer (Indra), cast foam around in the combat, and came away from us with a niggard mind ; he advances not a step, relinquishing the donations ; though skilled in rapine, he seizes not these my (cows)

ಸಂಹಿತಾಪಾಠಃ

ಮಕ್ಷೂ ನ ವಹ್ನಿಃ ಪ್ರಜಾಯಾ ಉಪಬ್ದಿರಗ್ನಿಂ ನ ನಗ್ನ ಉಪ ಸೀದದೂಧಃ ।
ಸನಿತೇಧ್ಮಂ ಸನಿತೋತ ವಾಜಂ ಸ ಧರ್ತಾ ಜಜ್ಞೇ ಸಹಸಾ ಯವೀಯುತ್ ॥

ಪದಪಾಠಃ

ಮಕ್ಷು । ನ । ವಹ್ನಿಃ । ಪ್ರಜಾಯಾಃ । ಉಪಬ್ದಿಃ । ಅಗ್ನಿಂ । ನ । ನಗ್ನಃ । ಉಪ । ಸೀದತ್ । ಊಧಃ॥
ಸನಿತಾ । ಇಧ್ಮಂ । ಸನಿತಾ । ಉತ । ವಾಜಂ । ಸಃ । ಧರ್ತಾ । ಜಜ್ಞೇ । ಸಹಸಾ । ಯವೀಯುತ್ ॥ ೯ ॥

ಸಾಯಣಭಾಷ್ಯಂ

ವಾಸ್ತೋಷ್ಪತಿನಾ ರುದ್ರೇಣ ಗೋಪ್ಯಮಾನೇಽಸ್ಮಿನ್ಯಜ್ಞೇ ವಹ್ನಿರ್ವಹ್ನಿವದ್ದಾಹಕೋ ರಾಕ್ಷಸಾದಿರ್ಮಕ್ಷು ನ ಶೀಘ್ರಂ ನೋಪ ಸೀದತ್ । ನಾಗಚ್ಛತಿ । ಯೋ ವಹ್ನಿಃ ಪ್ರಜಾಯಾ ಉಪಬ್ದಿರುಪಪೀಡಕೋ ಭವತಿ ಯಜ್ಞವಿಘಾತಾರ್ಥಮಾಗಚ್ಛತಿ । ಋತ್ವಿಗಾದಿರೂಪಾಯಾಃ ಪ್ರಜಾಯಾ ನ ಪೀಡಾಂ ಕರೋತ್ಯಹನಿ । ತಥೋಧಃ । ರಾತ್ರಿನಾಮೈತತ್ । ರಾತ್ರಾವಪ್ಯಗ್ನಿಂ ಜ್ವಲಂತಂ ನಗ್ನೋ ವಿವಸನೋ ರಾಕ್ಷಸಾದಿರ್ನೋಪ ಸೀದತ್ । ಏವಂ ರುದ್ರೇ ರಕ್ಷಿತರಿ ಸತಿ ಸೋಽಗ್ನಿರಿಧ್ಮಂ ಸನಿತಾ ಜಜ್ಞೇ । ಉತ್ಪನ್ನಃ । ಉತಾಪಿ ಚ ವಾಜಮನ್ನಂ ಹವಿಃ ಸನಿತಾ ಜಜ್ಞೇ । ಸ ಧರ್ತಾ ಯಜ್ಞಸ್ಯ ಫಲಸ್ಯ ವಾ ಧಾರಕ ಉತ್ಪನ್ನಃ ಸೋಽಗ್ನಿಃ ಸಹಸಾ ಬಲೇನ ಯವೀಯುದ್ಯಜ್ಞಮಿಶ್ರಯಿತೄಣಾಂ ರಕ್ಷಃಪ್ರಭೃತೀನಾಂ ಯೋದ್ಧಾ ಜಜ್ಞೇ॥

ಪ್ರತಿಪದಾರ್ಥ

(ರುದ್ರನು ನಮ್ಮ ಯಜ್ಞವನ್ನು ರಕ್ಷಿಸುವ ಕಾಲದಲ್ಲಿ) **ವಹ್ನಿಃ**—ಬೆಂಕಿಯಂತೆ ದಹಿಸಬಲ್ಲ ರಾಕ್ಷಸನು । **ಮಕ್ಷು**—ಶೀಘ್ರವಾಗಿ । **ನ ಉಪ ಸೀದತ್**—ಸಮೀಪಿಸಲಾರನು । **ಪ್ರಜಾಯಾಃ**—ಯಜಮಾನಾದಿಗಳಿಗೆ । **ಉಪಬ್ದಿಃ**—ಹಿಂಸಕನಾದವನೂ । **ನಗ್ನಃ**—ಬೆತ್ತಲೆಯಲ್ಲಿರುವವನೂ ಆದ ರಾಕ್ಷಸನು । **ಅಗ್ನಿಂ**—ಯಜ್ಞಾಗ್ನಿಯನ್ನು ।**ಊಧಃ**—ರಾತ್ರಿಕಾಲದಲ್ಲೂ । **ನ**—ಸಮೀಪಿಸಲಾರನು । **ಇಧ್ಮಂ**—ಪ್ರಜ್ವಲಸಾಧನನಾದ ಸಮಿದಾದಿಗಳನ್ನು । **ಸನಿತಾ**—ಕೊಡತಕ್ಕ ದೇವನು । **ಜಜ್ಞೇ**—ಉತ್ಪನ್ನನಾಗಿದ್ದಾನೆ । **ಉತ**—ಮತ್ತು । **ವಾಜಂ**—ಅನ್ನವನ್ನು । **ಸನಿತಾ**—ಒದಗಿಸಬಲ್ಲವನೂ । **ಯವೀಯುತ್**—ರಾಕ್ಷಸಾದಿಗಳನ್ನು ಹೊಡೆದೋಡಿಸುವವನೂ । **ಧರ್ತಾ**—ಯಜ್ಞಧಾರಕನೂ ಆದ । **ಸಃ**—ಅಗ್ನಿಯು । **ಸಹಸಾ**—ತನ್ನ ಶಕ್ತಿಯೊಡಗೂಡಿ (ಉತ್ಪನ್ನನಾಗಿದ್ದಾನೆ).

ಭಾವಾರ್ಥ

ರುದ್ರನು ನಮ್ಮ ಯಜ್ಞವನ್ನು ರಕ್ಷಿಸುವ ಕಾಲದಲ್ಲಿ ಬೆಂಕಿಯಂತೆ ದಹಿಸಬಲ್ಲ ರಾಕ್ಷಸನು ನಮ್ಮನ್ನು ಸುಲಭವಾಗಿ ಸಮೀಪಿಸಲಾರನು. ಯಜಮಾನಾದಿಗಳಿಗೆ ಹಿಂಸಕನೂ, ಬೆತ್ತಲೆಯಿರುವವನೂ ಆದ ರಾಕ್ಷಸನು ಯಜ್ಞಾಗ್ನಿಯನ್ನು ರಾತ್ರಿಕಾಲದಲ್ಲೂ ಸಮೀಪಿಸಲಾರನು. ಪ್ರಜ್ವಲನಸಾಧನವಾದ ಸಮಿದಾದಿಗಳನ್ನು ಕೊಡತಕ್ಕವನೂ, ಅನ್ನದಾತನೂ, ರಾಕ್ಷಸಾದಿಗಳನ್ನು ಹೊಡೆದೋಡಿಸುವವನೂ, ಯಜ್ಞಧಾರಕನೂ ಆದ ಅಗ್ನಿಯು ತನ್ನ ಶಕ್ತಿಯೊಡಗೂಡಿ ಉತ್ಪನ್ನನಾಗಿದ್ದಾನೆ.

## English Translation

The fire, harming the people, does not approach qnickly (by day): the naked (Rakshasas approach) not Agni by night; tbe giver of fuel, and

the giver of food, he the upholder (of the rite), is born, overcoming enemies by his might.

ಸಂಹಿತಾಪಾಠಃ

ಮಕ್ಷೂ ಕನಾಯಾಃ ಸಖ್ಯಂ ನವಗ್ವಾ ಋತಂ ವದಂತ ಋತಯುಕ್ತಿಮಗ್ಮನ್।
ದ್ವಿಬರ್ಹಸೋ ಯ ಉಪ ಗೋಪಮಾಗುರದಕ್ಷಿಣಾಸೋ ಅಚ್ಯುತಾ ದುದುಕ್ಷನ್ ॥ ೧೦ ॥

ಪದಪಾಠಃ

ಮಕ್ಷು । ಕನಾಯಾಃ । ಸಖ್ಯಂ । ನವऽಗ್ವಾಃ । ಋತಂ । ವದಂತಃ । ಋತಽಯುಕ್ತಿಂ । ಅಗ್ಮನ್ ।
ದ್ವಿಽಬರ್ಹಸಃ । ಯೇ । ಉಪ । ಗೋಪಂ । ಆ । ಅಗುಃ । ಅದಕ್ಷಿಣಾಸಃ । ಅಚ್ಯುತಾ । ದುಧುಕ್ಷನ್ ॥

ಸಾಯಣಭಾಷ್ಯಂ

ನವಗ್ವಾ ಅಂಗಿರಸಃ । ಗವಾಮಯನಾಖ್ಯಂ ಸತ್ರಮನುತಿಷ್ಠತಾಮಂಗಿರಸಾಂ ಮಧ್ಯೇ ಯೇ ನವಸು ಮಾಸೇಷು ಲಬ್ಧಗಾವಃ ಸಂತ ಉತ್ಥಿತಾಸ್ತೇ ನವಗ್ವಾಃ । ತ ಋತಂ ವದಂತೋ ಮಕ್ಷು ಶೀಘ್ರಂ ಕನಾಯಾಃ ಕಮನೀಯಾಯಾಃ ಸ್ತುತೇರ್ನಾಭಾನೇದಿಷ್ಠಪ್ರೇರಿತಾಯಾಃ ಸಕಾಶಾದೃತಯುಕ್ತಿಮಗ್ಮನ್ । ಉಕ್ತಯೋಗಪರಿಸಮಾಪ್ತಿಮಗ್ಮನ್ । ಪ್ರಾಪ್ತಾಃ । ಯದ್ವಾ । ಋತಯುಕ್ತಿಂ ಯಜ್ಞಯೋಗೋಪೇತಮೃತಂ ಶಬ್ದಂ ಸ್ತುತಿಂ ವದಂತೋಽಂಗಿರಸಃ ಕನಾಯಾಃ ಪೃಶ್ನ್ಯಾಃ ಸಖ್ಯಮಗ್ಮನ್ನಿತಿ ಯೋಜನಾ । ದ್ವಿಬರ್ಹಸೋ ದ್ವಯೋಃ ಸ್ಥಾನಯೋರ್ದ್ಯಾವಾಪೃಥಿವ್ಯೋಃ ಪರಿವೃಢಾ ಯೇಽಂಗಿರಸೋ ಗೋಪಂ ಗೋಪಾಯಿತಾರಂ ನಾಭಾನೇದಿಷ್ಠಮಿಂದ್ರಂ ವೋಪಾಗುಃ ಉಪಗತಾಃ ತೇಽದಕ್ಷಿಣಾಸೋ ದಕ್ಷಿಣಾರಹಿತಾಃ । ಅದಕ್ಷಿಣಾನಿ ಸತ್ರಾಣೀತ್ಯಾಹುರಿತಿ ಹಿ ವಚನಂ ಯೇ ಯಜಮಾನಾಸ್ತ ಋತ್ವಿಜ ಇತಿ । ತೇ ಚಾಚ್ಯುತೋದಕಾನ್ಯಕ್ಷೀಣಾನಿ ಫಲಾನಿ ವಾ ದುಧುಕ್ಷನ್ ॥

ಪ್ರತಿಪದಾರ್ಥ

**ಋತುಯುಕ್ತಿಂ**—ಯಜ್ಞಕ್ಕೆ ಉಪಯುಕ್ತವಾದ । **ಋತಂ**—ಸ್ತುತಿಯನ್ನು । **ವದಂತಃ**—ಪಠಿಸುವವರೂ । (Explained before) **ನವಗ್ವಾಃ**—ನವಗ್ವಸಂಜ್ಞಕರೂ ಆದ ಅಂಗಿರಸ್ಸುಗಳು । **ಮಕ್ಷು**—ಶೀಘ್ರವಾಗಿ । **ಕನಾಯಾಃ**—ಪೃಶ್ನಿಯ । **ಸಖ್ಯಂ**—ಸಖ್ಯವನ್ನು । **ಅಗ್ಮನ್**—ಹೊಂದಿದರು । **ದ್ವಿಬರ್ಹಸಃ**—ದ್ಯಾವಾಪೃಥಿವಿಗಳೆರಡರಲ್ಲೂ ಸ್ಥಾನವನ್ನು ಹೊಂದಿದ । **ಯೇ**—ಯಾವ ಅಂಗಿರಸ್ಸುಗಳು । **ಗೋಪಂ**—ರಕ್ಷಕನಾದ ಇಂದ್ರನನ್ನು । **ಉಪ ಆಗುಃ**—ಸಮೀಪಿಸಿದರೋ ಅವರು । **ಅದಕ್ಷಿಣಾಸಃ**—ದಕ್ಷಿಣೆಯನ್ನು ಪಡೆಯದೆ **ಅಚ್ಯುತಾ**—ನಾಶರಹಿತವಾದ ಉದಕಗಳನ್ನು । **ದುಧುಕ್ಷನ್**—ಕರೆದರು.

ಭಾವಾರ್ಥ

ಯಜ್ಞಕ್ಕೆ ಉಪಯುಕ್ತವಾದ ಸ್ತುತಿಯನ್ನು ಪಠಿಸುವವರೂ, ನವಗ್ವಸಂಜ್ಞಕರೂ ಆದ ಅಂಗಿರಸ್ಸುಗಳು ಶೀಘ್ರವಾಗಿ ಪೃಶ್ನಿ ಯೆಂಬ ಗೋವಿನ ಸಖ್ಯವನ್ನು ಹೊಂದಿದರು. ದ್ಯಾವಾಪೃಥಿವಿಗಳೆರಡರಲ್ಲೂ ಸ್ಥಾನವನ್ನು ಹೊಂದಿದ ಯಾವ

ಅಂಗಿರಸ್ಸುಗಳು ರಕ್ಷಕನಾದ ಇಂದ್ರನನ್ನು ಸಮೀಪಿಸಿದರೋ ಅವರು ದಕ್ಷಿಣೆಯನ್ನು ಹೊಂದದವರಾಗಿ ನಾಶರಹಿತವಾದ ಉದಕಗಳನ್ನು ಕರೆದರು.

English Translation

The Angirasas, who were engaged in the nine months' ceremonial, reciting the praise suited to the rite, quickly attained the friendship of the maiden : those who seated in the two seats (heaven and earth) came to their protector, as they had no donation, milked forth the inexhaustible (waters).

ಸಂಹಿತಾಪಾಠಃ

ಮಕ್ಷೂ ಕನಾಯಾಃ ಸಖ್ಯಂ ನವೀಯೋ ರಾಧೋ ನ ರೇತ ಋತಮಿತ್ತು
ರಣ್ಯನ್ ।
ಶುಚಿ ಯತ್ತೇ ರೇಕ್ಣ ಆಯಜಂತ ಸಬರ್ದುಘಾಯಾಃ ಪಯ
ಉಸ್ರಿಯಾಯಾಃ ॥ ೧೧ ॥

ಪದಪಾಠಃ

ಮಕ್ಷು । ಕನಾಯಾಃ । ಸಖ್ಯಂ । ನವೀಯಃ । ರಾಧಃ । ನಃ । ರೇತಃ । ಋತಂ । ಇತ್ । ತುರಣ್ಯನ್ ।

ಶುಚಿ । ಯತ್ । ತೇ । ರೇಕ್ಣಃ ।ಆಽ ಅಯಜಂತ । ಸಬಃಽದುಘಾಯಾಃ । ಪಯಃ । ಉಸ್ರಿಯಾಯಾಃ ॥

ಸಾಯಣಭಾಷ್ಯಂ

ಮಕ್ಷು ಶೀಘ್ರಂ ಕನಾಯಾಃ ಕಮನೀಯಾಯಾ ಘರ್ಮದೋಗ್ಧ್ರ್ಯಾ ನವೀಯೋ ನವತರಂ ಸಖ್ಯಂ । ಪ್ರಾಪ್ಯೇತಿ ಶೇಷಃ । ಅಥವಾ ನವೀಯ ಇತಿ ರಾಧೋವಿಶೇಷಣಂ । ನವತರಂ ರಾಧೋ ಧನಮಿವ ರೇತಃ ಸಿಚ್ಯಮಾನಮೃತಮುದಕಂ ತುರಣ್ಯನ್ । ದಿವಃ ಸಕಾಶಾತ್ಪ್ರೇರಿತವಂತಃ । ಹೇ ಇಂದ್ರ ತೇ ತುಭ್ಯಂ ಯದ್ಯದಾ ರೇಕ್ಣಃ ಪಾಥೋಲಕ್ಷಣಂ ಧನಮಾಭಿಮುಖ್ಯಮಯಜಂತ ಅಪೂಜಯನ್ । ಕೀದೃಶಂ ರೇಕ್ಣಃ । ಸಬರ್ದುಘಾಯಾಃ । ಸಬರಿತ್ಯಮೃತನಾಮ । ಅಮೃತದೋಗ್ಧ್ರ್ಯಾ ಉಸ್ರಿಯಾಯಾ ಗೋಃ ಪಯಃ ಪಾನಯೋಗ್ಯಂ ರಸಂ । ತದೋದಕಂ ತುರಣ್ಯನ್ನಿತಿ । ಅತ್ರಾಧ್ವರ್ಯುರ್ಬ್ರಾಹ್ಮಣಂ । ಅಂಗಿರಸೋ ವೈ ಸತ್ರಮಾಸತ ತೇಷಾಂ ಪೃಶ್ನಿರ್ಘರ್ಮಧುಗಾಸೀತ್ ಸರ್ಜೀಷೇಣಾಜೀವತ್ ತೇಽಬ್ರುವನ್ ಕಸ್ಮೈ ನು ಸತ್ರಮಾಸ್ಮಹೇ ಯೇಽಸ್ಯಾ ಓಷಧೀರ್ನ ಜನಯಾಮ ಇತಿ ತೇ ದಿವೋ ವೃಷ್ಟಿಮಸೃಜಂತ । ತೈ. ಬ್ರಾ. ೨-೧-೧-೧ । ಇತಿ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) **ಶುಚಿ**—ಶುದ್ಧವಾದ । **ಸಬರ್ದುಘಾಯಾಃ**—ಅಮೃತವನ್ನು ಕರೆಯತಕ್ಕ । **ಉಸ್ರಿಯಾಯಾಃ**—ಗೋವಿನ । **ಪಯಃ**—ಕ್ಷೀರರೂಪವಾದ । **ರೇಕ್ಣಃ**—ಧನವನ್ನು । **ಯತ್**—ಯಾವಾಗ ।

**ಯತ್**—ಯಾವಾಗ । **ತೇ**—ನಿನ್ನನ್ನುದ್ದೇಶಿಸಿ । **ಅಯುಜಂತ**—ಅರ್ಪಿಸಿದರೋ ಆಗ । **ಮಕ್ಷು**—ಶೀಘ್ರವಾಗಿ **ಕನಾಯಾಃ**—ಪೃಶ್ನಿಸಂಜ್ಞಕವಾದ ಧೇನುವಿನ । **ನವೀಯಃ**—ಹೊಸದಾದ । **ಸಖ್ಯಂ**—ಸ್ನೇಹವನ್ನು ಹೊಂದಿ। **ರೇತಃ**—ಪ್ರವಹಿಸುವ । **ಋತಂ**—ಉದಕವನ್ನು । **ರಾಧಃ ನ**—ಧನವನ್ನು ಸುರಿಸುವಂತೆ । **ತುರಜ್ಯನ್**—ಅಂತರಿಕ್ಷದಿಂದ ಸುರಿಸಿದರು.

ಭಾವಾರ್ಥ

ಎಲೈ ಇಂದ್ರನೇ, ಶುದ್ಧವಾದ ಅಮೃತವನ್ನು ಕರೆಯತಕ್ಕ ಗೋವಿನ ಪಾನಯೋಗ್ಯವಾದ ಕ್ಷೀರರೂಪವಾದ ಧನವನ್ನು ಯಾವಾಗ ನಿನ್ನನ್ನುದ್ದೇಶಿಸಿ ಅರ್ಪಿಸಿದರೋ ಆಗ ಶೀಘ್ರವಾಗಿ ಪೃಶ್ನೀಸಂಜ್ಞಕವಾದ ಧೇನುವಿನ ಹೊಸದಾದ ಸ್ನೇಹವನ್ನು ಹೊಂದಿ ಪ್ರವಹಿಸುವ ಉದಕವನ್ನು ಧನದಂತೆ ಅಂತರಿಕ್ಷದಿಂದ ಸುರಿಸಿದರು.

## English Translation

Quickly (obtaining) the friendship of the maiden, they poured forth water like new wealth, when they offered to you (Indra) the pure riches, the milk of the cow, that yields ambrosia.

ಸಂಹಿತಾಪಾಠಃ

**ಪಶ್ವಾ ಯತ್ಪಶ್ಚಾ ವಿಯುತಾ ಬುಧಂತೇತಿ ಬ್ರವೀತಿ ವಕ್ತರೀ ರರಾಣಃ ।**
**ವಸೋರ್ವಸುತ್ವಾ ಕಾರವೋಽನೇಹಾ ವಿಶ್ವಂ ವಿವೇಷ್ಟಿ ದ್ರವಿಣಮುಪ ಕ್ಷು ॥**

ಪದಪಾಠಃ

**ಪಶ್ವಾ । ಯತ್ । ಪಶ್ಚಾ । ವಿಽಯುತಾ । ಬುಧಂತ । ಇತಿ । ಬ್ರವೀತಿ । ವಕ್ತರಿ । ರರಾಣಃ ।**
**ವಸೋಃ । ವಸುಽತ್ವಾ । ಕಾರವಃ । ಅನೇಹಾ । ವಿಶ್ವಂ । ವಿವೇಷ್ಟಿ । ದ್ರವಿಣಂ । ಉಪ । ಕ್ಷು ॥ ೧೨ ॥**

ಸಾಯಣಭಾಷ್ಯಂ

**ಯದ್ಯದಾ ಸ್ತೋತಾರಃ ಪಶ್ವಾ ಪಶುನಾ । ಗೋಸಮೂಹೇನೇತ್ಯರ್ಥಃ । ತೇನ ವಿಯುತಾ ವಿಯುಕ್ತಾನಿ ಸ್ವಕೀಯಾನಿ ಗೋಸ್ಥಾನಾನಿ ಪಶ್ಚಾ ಪಶ್ಚಾದ್ಬುಧಂತ ಅಜಾನನ್ ತದಾನೀಂ ಕಾರವಃ। ಕಾರುರಿತ್ಯರ್ಥಃ । ಇತಿ ಬ್ರವೀತಿ । ಇತ್ಥಂ ಬ್ರೂತೇ । ಕಿಮಿತಿ । ವಕ್ತರಿ ಸ್ತೋತರಿ ರರಾಣೋ ರಮಮಾಣೋ ವಸೋರ್ವಾಸಕಾದ್ವಸುತ್ವಾತಿಶಯೇನ ವಾಸಯಿತಾ । ಯದ್ವಾ । ವಸುತ್ವೇತಿ ಸಮೂಹಾರ್ಥೇ ತ್ವಾ ನಾಮಕರಣಃ । ಗೋರೂಪಧನವತೋಽತಿಶಯೇನ ಗೋಸಮೂಹವಾನಿತ್ಯರ್ಥಃ । ಅನೇಹಾ ಅಪಾಪ ಇಂದ್ರೋ ವಿಶ್ವಂ ಸರ್ವಂ ದ್ರವಿಣಂ ಗೋರೂಪಂ ಪಣಿಭಿರಪಹೃತಂ ಧನಂ ಕ್ಷು । ಮಕ್ಷ್ವಿತ್ಯರ್ಥಃ । ಶೀಘ್ರಮುಪ ವಿವೇಷ್ಟಿ । ಉಪವ್ಯಾಪ್ನೋತಿ ಪುನರಾದಾತುಂ । ಅಯಮರ್ಥಃ । ಯದೇಂದ್ರಸ್ಯ ಸ್ತೋತಾರೋಽಸುರೈರಪಹೃತಮಾತ್ಮೀಯಂ ಗೋಧನಂ ಜಾನಂತಿ ತತಃ ಪ್ರಾಗೇವಾಗತ್ಯೇಂದ್ರಸ್ತಂ ಸ್ವರುಧದಿತಿ ॥**

ಪ್ರತಿಪದಾರ್ಥ

**ಯತ್**—ಯಾವಾಗ | **ಪಶ್ವಾ**—ಪಶುಗಳಿಂದ | **ವಿಯುತಾ**—ವಿರಹಿತವಾದ ಕೊಟ್ಟಿಗೆಗಳನ್ನು | **ಪಶ್ಚಾ**—ಅನಂತರದಲ್ಲಿ | **ಬುಧಂತ**—ಅರಿತರೋ ಆಗ | **ಕಾರವಃ**—ಸ್ತುತಿಕರ್ತನು | **ಇತಿ**—ಈ ಪ್ರಕಾರವಾಗಿ| **ಬ್ರವೀತಿ**—ಹೇಳುತ್ತಾನೆ | **ವಕ್ತರಿ**—ಸ್ತುತಿಕರ್ತನಲ್ಲಿ | **ರರಾಣಃ**—ಹರ್ಷವನ್ನು ಹೊಂದುದವನೂ | **ವಸೋಃ**-ಧನವಂತನಿಗಿಂತಲೂ | **ವಸುತ್ವಾ**—ಅತ್ಯಧಿಕವಾದ ಧನವುಳ್ಳವನೂ | **ಅನೇಹಾ**—ಪಾಪರಹಿತನೂ ಆದ ಇಂದ್ರನು | **ವಿಶ್ವಂ**—ಸಮಸ್ತವಾದ | **ದ್ರವಿಣಂ**—ಗೋರೂಪವಾದ ಧನವನ್ನೂ | **ಕ್ಷು**—ಶೀಘ್ರವಾಗಿ | **ಉಪ ವಿವೇಷ್ಟಿ**—ಹಿಂತಿರುಗಿ ಬರುವಂತೆ ಮಾಡುತ್ತಾನೆ.

ಭಾವಾರ್ಥ

ಯಾವಾಗ ಯಜಮಾನರು ತಮ್ಮ ಕೊಟ್ಟಿಗೆಗಳಿಂದ ಪಶುಗಳು ಅಪಹೃತವಾಗಿರುವುದನ್ನು ನೋಡುವರೋ ಆಗ ಸ್ತುತಿಕರ್ತನು "ಸ್ತೋತೃಗಳೊಡನೆ ಹರ್ಷವನ್ನು ಹೊಂದತಕ್ಕವನೂ, ಧನವಂತನಿಗಿಂತಲೂ ಅಧಿಕವಾದ ಧನವುಳ್ಳವನೂ, ಪಾಪರಹಿತನೂ ಆದ ಇಂದ್ರನು ಗೋರೂಪವಾದ ಸಕಲ ಧನವನ್ನೂ ಶೀಘ್ರವಾಗಿ ಹಿಂತಿರುಗಿ ಬರುವಂತೆ ಮಾಡುತ್ತಾನೆ" ಎಂದು ಪ್ರಕಟಿಸುತ್ತಾನೆ.

English Translation

" When (the worshippers) find (the stalls deserted) by the cattle " (then the performer of the rite) exclaims, "(Indra), pleasing to his adorer, the affluent lord of affluence, the compassionate the sinless, quickly recovers all the wealth (that has been carried off )."

ಸಂಹಿತಾಪಾಠಃ

**ತದಿನ್ನ್ವಸ್ಯ ಪರಿಷದ್ವಾನೋ ಅಗ್ಮನ್ಪುರೂ ಸದಂತೋ ನಾರ್ಷದಂ ಬಿಭಿತ್ಸನ್ ।**
**ವಿ ಶುಷ್ಣಸ್ಯ ಸಂಗ್ರಥಿತಮನರ್ವಾ ವಿದತ್ಪುರುಪ್ರಜಾತಸ್ಯ ಗುಹಾ ಯತ್ ॥**

ಪದಪಾಠಃ

ತತ್ । ಇತ್ । ನು । ಅಸ್ಯ । ಪರಿऽಸದ್ವಾನಃ । ಅಗ್ಮನ್ । ಪುರು । ಸದಂತಃ । ನಾರ್ಸದಂ । ಬಿಭಿತ್ಸನ್ ।
ವಿ । ಶುಷ್ಣಸ್ಯ । ಸಂऽಗ್ರಥಿತಂ । ಅನರ್ವಾ । ವಿದತ್ । ಪುರುऽಪ್ರಜಾತಸ್ಯ । ಗುಹಾ । ಯತ್ ॥ ೧೩ ॥

ಸಾಯಣಭಾಷ್ಯಂ

ತದಿತ್ತತ್ರೈವ ನು ಕ್ಷಿಪ್ರಮಸ್ಯೇಂದ್ರಸ್ಯ ಪರಿಷದ್ವಾನಃ ಪರಿತೋ ವರ್ತಮಾನಾಃ ಪರಿಚಾರಕಾ ರಕ್ಷಕಾ ಯೋऽಗ್ಮನ್ । ಪ್ರಕಾಶನಾರ್ಥಮಗಚ್ಛನ್ । ಪುರು ಪುರೂಣಿ ಕೃತ್ರಿಮಾಣಿ ಸದಂತಃ ಸೀದಂತೋऽಸುರಾ ನಾರ್ಷದಂ ನೃಷದಃ ಪುತ್ರಂ ಬಿಭಿತ್ಸನ್ । ಭೇತ್ತುಮೈಚ್ಛನ್ । ಕಿಂಚಾಯಂ ಶುಷ್ಣಸ್ಯೈತನ್ನಾಮ-

ಕೆಸ್ಯಾಸುರಸ್ಯ ಪುರುಪ್ರಜಾತಸ್ಯ ಬಹುಪ್ರಾದುರ್ಭಾವಸ್ಯ ಸಂಗ್ರಥಿತಂ ಮರ್ಮ ವಿದತ್ । ವೇತ್ತಿ । ಅಯಮಿಂದ್ರೋ ಯದಸುರಸ್ಯ ದುಜ್ಞೇಯಂ ಮರ್ಮ ಗುಹಾ ಗುಹಾಯಾಂ ಗೋಪಿತಂ ತದ್ವಿದತ್ ॥

ಪ್ರತಿಪದಾರ್ಥ

**ತದಿತ್**—ಆ ಒಡನೆಯೇ । **ನು**—ಕ್ಷಿಪ್ರವಾಗಿ । **ಅಸ್ಯ**—ಇಂದ್ರನ । **ಪರಿಷದ್ವಾನಃ**—ಸೇವಕರಂತಿರುವ ರಶ್ಮಿಗಳು । **ಅಗ್ಮನ್**—ಹೊರಕ್ಕೆ ಬಂದು ಪ್ರಕಾಶಿಸಿದವು । **ಪುರು**—ಅತ್ಯಧಿಕವಾಗಿ । **ಸದಂತಃ**—ನಾನಾಕಡೆಗಳಲ್ಲೂ ವಾಸಿಸುತ್ತಿರುವ ಅಸುರರು । **ನಾರ್ಷದಂ**—ನೃಷದನ ಪುತ್ರನನ್ನು । **ಬಿಭಿತ್ಸನ್**—ನಾಶಮಾಡಲಿಚ್ಛಿಸಿದರು । (ಆದರೆ) **ಪುರು ಪ್ರಜಾತಸ್ಯ**—ಅನೇಕ ವಿಧವಾದ ರೂಪಗಳನ್ನು ಹೊಂದುವ । **ಶುಷ್ಣಸ್ಯ**—ಶುಷ್ಣನೆಂಬ ಅಸುರನ । **ಯತ್ ಗುಹಾ**—ಯಾವ ಗುಪ್ತಸ್ಥಾನವಿದೆಯೋ ಅದರ । **ಸಂಗ್ರಥಿತಂ**—ಒತ್ತೊತ್ತಾಗಿ ರಚಿತವಾದ ಮರ್ಮಸ್ಥಾನವನ್ನು । **ಅನರ್ವಾ**—ಅಪ್ರತಿಹತನಾದ ಇಂದ್ರನು । **ವಿದತ್**—ಅರಿಯುತ್ತಾನೆ.

ಭಾವಾರ್ಥ

ಆ ಒಡನೆಯೇ ಕ್ಷಿಪ್ರವಾಗಿ ಇಂದ್ರನ ಸೇವಕರಂತಿರುವ ರಶ್ಮಿಗಳು ಹೊರಕ್ಕೆ ಬಂದು ಪ್ರಕಾಶಿಸಿದವು. ಅತ್ಯಧಿಕವಾಗಿ ನಾನಾಕಡೆಗಳಲ್ಲೂ ವಾಸಿಸುತ್ತಿರುವ ಅಸುರರು ನೃಷದನ ಪುತ್ರನನ್ನು ನಾಶಮಾಡಲಿಚ್ಛಿಸಿದರು. ಆದರೆ, ಅನೇಕ ವಿಧವಾದ ರೂಪಗಳನ್ನು ಹೊಂದುವ ಶುಷ್ಣನೆಂಬ ಅಸುರನ ಯಾವ ಗುಪ್ತಸ್ಥಾನವಿದೆಯೋ ಅದರ ಒತ್ತೊತ್ತಾಗಿ ರಚಿತವಾದ ಮರ್ಮಸ್ಥಾನವನ್ನು ಅಪ್ರತಿಹತನಾದ ಇಂದ್ರನು ಅರಿಯುತ್ತಾನೆ.

English Translalion

Then the attendant (rays of light) quickly gathered round him, and (the Asuras) dwelling in many regions sought to destroy the son of Nrishad, but the irresistible (Indra) found the wel-knit mail of Shushna, whose offspring was numerous, which was hidden in the cave.

ಸಂಹಿತಾಪಾಠಃ

ಭರ್ಗೋ ಹ ನಾಮೋತ ಯಸ್ಯ ದೇವಾಃ ಸ್ವ೧ರ್ಣ ಯೇ ತ್ರಿಷಧಸ್ಥೇ ನಿಷೇದುಃ ।
ಅಗ್ನಿರ್ಹ ನಾಮೋತ ಜಾತವೇದಾಃ ಶ್ರುಧೀ ನೋ ಹೋತರ್‌ಋತಸ್ಯ ಹೋತಾಧ್ರುಕ್ ॥ ೧೪ ॥

ಪದಪಾಠಃ

ಭರ್ಗಃ । ಹ । ನಾಮ । ಉತ । ಯಸ್ಯ । ದೇವಾಃ । ಸ್ವಃ । ನ । ಯೇ । ತ್ರಿಽಸಧಸ್ಥೇ । ನಿಽಸೇದುಃ ।

ಅ॒ಗ್ನಿಃ । ಹ॒ । ನಾಮ॑ । ಉ॒ತ । ಜಾ॒ತಃऽವೇ॑ದಾಃ । ಶ್ರು॒ಧಿ । ನ॒ಃ । ಹೋ॒ತಃ॒ । ಋ॒ತಸ್ಯ॑ । ಹೋತಾ॑ ।
ಅ॒ಧ್ರುಕ್ ॥ ೧೪ ॥

ಸಾಯಣಭಾಷ್ಯಂ

ಉತಾಪಿ ಚ ಭರ್ಗೋ ಹ ನಾಮ ತತ್ತೇಜಃ ಕಿಲ ಪ್ರಸಿದ್ಧಂ ಯಸ್ಯ ತೇಜಸ ಅಗ್ನೇಯಸ್ಯ ಸಂಬಂಧಿನಿ ತ್ರಿಷಧಸ್ಥೇ ಬರ್ಹಿಷಿ ಯೇ ದೇವಾಃ ಸಂತಿ ತೇ ಸರ್ವೇ ಸ್ವರ್ಣ ಸ್ವರ್ಗೇ ಯಥಾ ತಥೈವ ನಿಷೇದುಃ ನಿಷೀದಂತಿ । ಉತಾಪಿ ಚ ತತ್ತೇಜೋಽಗ್ನಿರ್ಹ ನಾಮಾಗ್ನಿಃ ಕಿಲ ನಾಮ । ಉತಾಪಿ ಚ ಜಾತವೇದಾ ಜಾತಪ್ರಜ್ಞೋ ಜಾತಾನಾಂ ವೇದಿತೈತದಪಿ ತಸ್ಯ ತೇಜಸೋ ನಾಮ । ಅಗ್ನೇರ್ಭರ್ಗ ಇತ್ಯಗ್ನಿರಿತಿ ಜಾತವೇದಾ ಇತಿ ಚ ತ್ರೀಣಿ ನಾಮಾನೀತ್ಯರ್ಥಃ । ಅಥ ಪ್ರತ್ಯಕ್ಷಕೃತಃ । ಹೇ ಹೋತರ್ಹೋಮನಿಷ್ಪಾದಕೋಕ್ತನಾಮಾಗ್ನೇ ಋತಸ್ಯ ಹೋತಾ ಯಜ್ಞಸ್ಯ ಸಂಬಂಧಿನಾಂ ದೇವಾನಾಮಾಹ್ವಾತಾಧ್ರುಗ್ದ್ರೋಹರಹಿತಸ್ತ್ವಂ ನೋಽಸ್ಮಾಕಮಾಹ್ವಾನಂ ಶ್ರುಧಿ । ಶೃಣು ॥

ಪ್ರತಿಪದಾರ್ಥ

**ಯೇ ದೇವಾಃ**—ಯಾವ ದೇವತೆಗಳಿರುವರೋ ಅವರು । **ಸ್ವರ್ಣ**—ಸ್ವರ್ಗದಲ್ಲಿ ಕುಳಿತಿರುವಂತೆ । **ಯಸ್ಯ**—ಯಾವ ಅಗ್ನಿತೇಜಸ್ಸಿನಿಂದ ಕೂಡಿದ । (Explained) **ತ್ರಿಷಧಸ್ಥೇ**—ದರ್ಭಾಸನದ ಮೇಲೆ । **ನಿಷೇದುಃ**—ಕುಳಿತುಕೊಳ್ಳುವರೋ । (**ತತ್**) **ಹ**—ಆ ತೇಜಸ್ಸಿಗೆ । **ಭರ್ಗೋ ಹ ನಾಮ**—ಭರ್ಗವೆಂದಾದರೂ ಹೆಸರಿರಬಹುದು । **ಉತ**—ಅಥವಾ । **ಅಗ್ನಿ ರ್ಹ ನಾಮ**—ಅದಕ್ಕೆ ಅಗ್ನಿಯೆಂಬ ಹೆಸರಿರಬಹುದು । ಅಥವಾ **ಜಾತವೇದಃ**—ಜಾತವೇದ (ಸರ್ವಜ್ಞ) ಎಂಬ ಹೆಸರಿರಬಹುದು । **ಹೋತಃ**—ಹೋತೃರೂಪಿಯಾದ ಎಲೈ ಅಗ್ನಿಯೇ। **ಋತಸ್ಯ**—ಯಜ್ಞಕ್ಕೆ । **ಹೋತಾ**—ದೇವತೆಗಳನ್ನು ಕರೆಯುವ ನೀನು । **ಅಧ್ರುಕ್**—ನಮಗೆ ದ್ರೋಹವನ್ನಾಚರಿಸದೆ । **ನಃ**—ನಮ್ಮ ಆಹ್ವಾನವನ್ನು । **ಶ್ರುಧಿ**—ಕೇಳು.

ಭಾವಾರ್ಥ

ದೇವತೆಗಳು ಸ್ವರ್ಗದಲ್ಲಿ ಕುಳಿತಿರುವಂತೆ ಯಾವ ಅಗ್ನಿತೇಜಸ್ಸಿನಿಂದ ಕೂಡಿದ ದರ್ಭಾಸನದ ಮೇಲೆ ಕುಳಿತುಕೊಳ್ಳುವರೋ ಆ ತೇಜಸ್ಸಿಗೆ ಭರ್ಗವೆಂದಾದರೂ ಹೆಸರಿರಬಹುದು ಅಥವಾ ಅದಕ್ಕೆ ಅಗ್ನಿಯೆಂಬ ಹೆಸರಿರಬಹುದು ಅಥವಾ ಜಾತವೇದಾಃ ಎಂಬ ಹೆಸರಿರಬಹುದು. ಹೋತೃರೂಪಿಯಾದ ಎಲೈ ಅಗ್ನಿಯೇ, ಯಜ್ಞಕ್ಕೆ ದೇವತೆಗಳನ್ನು ಕರೆಯುವ ನೀನು ನಮಗೆ ದ್ರೋಹವನ್ನಾಚರಿಸದೆ, ನಮ್ಮ ಆಹ್ವಾನವನ್ನು ಕೇಳು.

## English Translation

Whether Bharga is the name of that radiance, on the triple seat of which those who are gods are seated, as if in heaven, or whether it be Agni, or Jatavedas; invoker (of the gods), who are the ministrant priest of the sacrifice, here our guileless invocation.

ಸಂಹಿತಾಪಾಠಃ

ಉತ ತ್ಯಾ ಮೇ ರೌದ್ರಾವರ್ಚಿಮಂತಾ ನಾಸತ್ಯಾವಿಂದ್ರ ಗೂರ್ತಯೇ ಯಜಧ್ಯೈ ।
ಮನುಷ್ವದ್ವೃಕ್ತಬರ್ಹಿಷೇ ರರಾಣಾ ಮಂದೂ ಹಿತಪ್ರಯಸಾ ವಿಕ್ಷು ಯಜ್ಯೂ ॥ ೧೫ ॥

ಪದಪಾಠಃ

ಉತ । ತ್ಯಾ । ಮೇ । ರೌದ್ರೌ । ಅರ್ಚಿऽಮಂತಾ । ನಾಸತ್ಯಾ । ಇಂದ್ರ । ಗೂರ್ತಯೇ । ಯಜಧ್ಯೈ । ಮನುಷ್ವತ್ । ವೃಕ್ತऽಬರ್ಹಿಷೇ । ರರಾಣಾ । ಮಂದೂ ಇತಿ । ಹಿತऽಪ್ರಯಸಾ । ವಿಕ್ಷು । ಯಜ್ಯೂ ಇತಿ ॥ ೧೫ ॥

ಸಾಯಣಭಾಷ್ಯಂ

ಉತಾಪಿ ಚ ಹೇ ಇಂದ್ರ ತ್ಯಾ ತೌ ಪ್ರಸಿದ್ಧೌ ರೌದ್ರೌ ರುದ್ರಪುತ್ರೌ । ಕ್ಷೋದೋ ನ ರೇತ ಇತಊತಿ ಸಿಂಚತ್ । ಋ. ೧೦-೬೧-೨ । ಇತಿ ಹಿ ರುದ್ರಪುತ್ರತ್ವಮುಕ್ತಂ । ಅರ್ಚಿಮಂತಾ ದೀಪ್ತಿಮಂತೌ ನಾಸತ್ಯಾವಶ್ವಿನೌ ಮೇ ಗೂರ್ತಯೇ ಸ್ತುತಯೇ ಯಜಧ್ಯೈ ಯಾಗಾಯ ಚ ಭವೇತಾಮಿತಿ ಶೇಷಃ । ಕಿಂಚ ಮನುಷ್ವನ್ಮಮ ಪಿತುರ್ಮನೋರಿವ ತಸ್ಯ ಯಜ್ಞೇ ಯಥಾ ತಥೈವ ವೃಕ್ತಬರ್ಹಿಷೇ ಸ್ತೀರ್ಣಬರ್ಹಿಷೇ ಮಹ್ಯಂ ರರಾಣಾ ರಮಮಾಣೌ ಮಂದೂ ಮದಿಷ್ಣೂ ಹಿತಪ್ರಯಸಾ ಪ್ರೇರಿತಧನೌ ವಿಕ್ಷು ಪ್ರಜಾಸ್ವಸ್ಮದೀಯೇಷು ತಥಾ ಯಜ್ಯೂ ಯಷ್ಟವ್ಯೌ ಭವತಮಿತಿ ಶೇಷಃ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ತ್ಯಾ**—ಪ್ರಸಿದ್ಧರೂ । **ರೌದ್ರಾ**—ರುದ್ರಪುತ್ರರೂ । **ಅರ್ಚಿಮಂತಾ**—ಕಾಂತಿಯುತರೂ ಆದ । **ನಾಸತ್ಯಾ**—ಅಶ್ವಿನೀದೇವತೆಗಳೂ । **ಮೇ**—ನನ್ನ । **ಗೂರ್ತಯೇ**—ಸ್ತುತಿಗಭಿಮುಖವಾಗಿಯೂ । **ಯಜಧ್ಯೈ**—ಯಾಗಾಭಿಮುಖವಾಗಿಯೂ ಸ್ಥಿತರಾಗಿರಲಿ । **ಮನುಷ್ವತ್**—ಮನುವಿನ ಯಜ್ಞದಲ್ಲಿ ಕುಳಿತು ಅವನಿಗೆ ಸಂತೋಷವನ್ನುಂಟುಮಾಡಿದಂತೆ । **ವೃಕ್ತಬರ್ಹಿಷೇ**—ದರ್ಭಾಸನವನ್ನು ಸಂಸ್ಕರಿಸಿದ ನನಗೆ । **ರರಾಣಾ**—ಹರ್ಷವನ್ನುಂಟುಮಾಡುತ್ತ । **ವಿಕ್ಷು**—ನಮ್ಮಗಳ ನಡುವೆ । **ಮಂದೂ**—ಹರ್ಷಯುಕ್ತರಾಗಿಯೂ । **ಹಿತಪ್ರಯಸಾ**—ನಮಗೆ ದಾನಮಾಡುವ ಧನವುಳ್ಳವರಾಗಿಯೂ । **ಯಜ್ಯೂ**—ಯಜ್ಞಾರ್ಹರಾಗಿಯೂ ಇರಲಿ.

ಭಾವಾರ್ಥ

ಎಲೈ ಇಂದ್ರನೇ, ಪ್ರಸಿದ್ಧರೂ, ರುದ್ರಪುತ್ರರೂ, ಕಾಂತಿಯುತರೂ ಆದ ಅಶ್ವಿನೀದೇವತೆಗಳು ನನ್ನ ಸ್ತುತಿಗಭಿಮುಖವಾಗಿಯೊ, ಯಾಗಾಭಿಮುಖವಾಗಿಯೂ ಸ್ಥಿತರಾಗಿರಲಿ. ಮನುವಿನ ಯಜ್ಞದಲ್ಲಿ ಕುಳಿತು ಅವನಿಗೆ ಸಂತೋಷ

ವನ್ನುಂಟುಮಾಡಿದಂತೆ ದರ್ಭಾಸನವನ್ನು ಸಂಸ್ಕರಿಸಿದ ನನಗೆ ಹರ್ಷವನ್ನುಂಟುಮಾಡುತ್ತ, ಋತ್ವಿಕ್ಕುಗಳಾದ ನಮ್ಮ ನಡುವೆ ಹರ್ಷಯುಕ್ತರಾಗಿಯೂ, ನಮಗೆ ದಾನಮಾಡುವ ಧನವುಳ್ಳವರಾಗಿಯೂ ಯಜ್ಞಾರ್ಹರಾಗಿಯೂ ಇರಲಿ.

## English Translation

And, Indra, let those two brilliant sons of Rudra, the Nasatyas, (be present) at my praise and sacrifice ; being propitious to (me seated) on the strewn grass, as (at the sacrifiee of ) Manu, cheerful, liberal of wealth to the people, deserving of adoration

ಸಂಹಿತಾಪಾಠಃ

ಅಯಂ ಸ್ತುತೋ ರಾಜಾ ವಂದಿ ವೇಧಾ ಅಪಶ್ಚ ವಿಪ್ರಸ್ತರತಿ ಸ್ವಸೇತುಃ ।
ಸ ಕಕ್ಷೀವಂತಂ ರೇಜಯತ್ಸೋ ಅಗ್ನಿಂ ನೇಮಿಂ ನ ಚಕ್ರಮರ್ವತೋ ರಘುದ್ರು ॥ ೧೬ ॥

ಪದಪಾಠಃ

ಅಯಂ । ಸ್ತುತಃ । ರಾಜಾ । ವಂದಿ । ವೇಧಾಃ । ಅಪಃ । ಚ । ವಿಪ್ರಃ । ತರತಿ । ಸ್ವಽಸೇತುಃ ।
ಸಃ । ಕಕ್ಷೀವಂತಂ । ರೇಜಯತ್ । ಸಃ । ಅಗ್ನಿಂ । ನೇಮಿಂ । ನ । ಚಕ್ರಂ । ಅರ್ವತಃ । ರಘುಽದ್ರು ॥

ಸಾಯಣಭಾಷ್ಯಂ

ಅಯಂ ವೇಧಾಃ ಸರ್ವಸ್ಯ ವಿಧಾತಾ ರಾಜಾ ಸೋಮಃ ಸ್ತುತಃ ಸರ್ವೈರ್ವಂದಿ । ಸ್ತೂಯತೇಽಸ್ಮಾಭಿಃ । ಕಿಂಚ ವಿಪ್ರೋ ವಿಶೇಷೇಣ ಪೂರಕೋ ವಿಪ್ರವಚ್ಛೃದ್ಧೋ ವಾ ಸ್ವಸೇತುರ್ಯಸ್ಯ ಸ್ವಭೂತಾ ರಶ್ಮಯೋ ಜಗದ್ಬಂಧಕಾಃ ಸಂತಿ ಸ ಸೋಮೋಽಪಶ್ಚಾಂತರಿಕ್ಷಂ ಚ ತರತಿ । ಲಂಘಯತಿ ಪ್ರತಿದಿನಂ । ಸ ಸೋಮಃ ಕಕ್ಷೀವಂತಮೃಷಿಂ ಪರ್ವತಮಧ್ಯೇ ಸೋಮಾರ್ಥಂ ಗತಂ ರೇಜಯತ್ ಸಃ ಸ ಏವಾಗ್ನಿಂ ಹವಿರ್ವೋಢುಮಶಕ್ತಂ ಸಂತಂ ಪಲಾಯ್ಯಾಪ್ಸು ಪ್ರವಿಷ್ಟಂ ರೇಜಯತ್ । ಅಕಂಪಯತ್ । ಕಂಪನೇ ದೃಷ್ಟಾಂತಃ । ನೇಮಿಂ ನಮನಶೀಲಂ ರಘುದ್ರು ಲಘುಗಮನಂ ಚಕ್ರಮರ್ವತೋಽರ್ವಂತೋಽಶ್ವಾ ಇವ ತೇ ಯಥಾ ತಥಾ ರೇಜಯತ್ ॥ ನುಮಭಾವಶ್ಛಾಂದಸಃ ॥

ಪ್ರತಿಪದಾರ್ಥ

**ವೇಧಾಃ**—ಸೃಷ್ಟಿಕರ್ತನೂ । **ರಾಜಾ**—ಪ್ರಭುವೂ । **ಸ್ತುತಃ**—ಸಕಲರಿಂದಲೂ ಪ್ರಶಂಸಿತನೂ ಆದ । **ಅಯಂ**—ಈ ಸೋಮದೇವನು । **ವಂದಿ**—ನಮ್ಮಿಂದ ನಮಸ್ಕರಿಸಲ್ಪಡುತ್ತಾನೆ । **ವಿಪ್ರಃ**—ಮೇಧಾವಿಯೂ । **ಸ್ವಸೇತುಃ**—ತನ್ನ ರಶ್ಮಿಗಳಿಂದ ತಾನೇ ರಚಿಸಿದ ಸೇತುವೆಯುಳ್ಳವನೂ ಆದ ಸೋಮನು । **ಅಪಶ್ಚ**—ಅಂತರಿಕ್ಷವನ್ನು । **ತರತಿ**—ದಾಟುತ್ತಾನೆ । **ಸಃ**—ಅದೇ ಸೋಮನು । **ಕಕ್ಷೀವಂತಂ**—ಕಕ್ಷೀವಂತನೆಂಬ ಋಷಿಯನ್ನು । **ರೇಜಯತ್**

ನಡುಗಿಸಿದನು | **ಅರ್ವತಃ**— ಉತ್ತಮವಾದ ಅಶ್ವಗಳು | **ನೇಮಿಂ**—ಸಂಚಾರಯೋಗ್ಯವೂ | **ರಘುದ್ರು**—ಶೀಘ್ರವಾಗಿ ಚಲಿಸುವುದೂ ಆದ | **ಚಕ್ರಂ ನ**—ಚಕ್ರವನ್ನು (ಸುತ್ತಿಸಿ) ನಡುಗಿಸುವಂತೆ | **ಸಃ**—ಅದೇ ಸೋಮನು| **ಅಗ್ನಿಂ**—ಅಗ್ನಿಯನ್ನು ನಡಗುವಂತೆ ಮಾಡಿದನು.

ಭಾವಾರ್ಥ

ಸೃಷ್ಟಿಕರ್ತನೂ, ಪ್ರಭುವೂ, ಸಕಲರಿಂದಲೂ ಪ್ರಶಂಸಿತನೂ ಆದ ಸೋಮದೇವನು ನಮ್ಮಿಂದ ನಮಸ್ಕರಿಸಲ್ಪಡುತ್ತಾನೆ. ಮೇಧಾವಿಯೂ, ತನ್ನ ರಶ್ಮಿಗಳಿಂದ ತಾನೇ ರಚಿಸಿದ ಸೇತುವೆಯುಳ್ಳವನೂ ಆದ ಸೋಮನು ಅಂತರಿಕ್ಷವನ್ನು ದಾಟುತ್ತಾನೆ. ಅದೇ ಸೋಮನು ಕಕ್ಷೀವಂತನೆಂಬ ಋಷಿಯನ್ನು ನಡುಗಿಸಿದನು. ಸಂಚಾರಯೋಗ್ಯವೂ, ಶೀಘ್ರವಾಗಿ ಚಲಿಸುವುವೂ ಆದ ಚಕ್ರವನ್ನು ಅಶ್ವಗಳು ಸುತ್ತಿಸಿ ನಡುಗಿಸುವಂತೆ ಅದೇ ಸೋಮನು ಹವಿಸ್ಸನ್ನು ವಹಿಸದೆ ನೀರಿನಲ್ಲಿ ಅವಿತುಕೊಂಡಿದ್ದ ಅಗ್ನಿಯನ್ನು ನಡುಗುವಂತೆ ಮಾಡಿದನು.

English Translation

This royal (Soma), this glorified creator, is praised (by all), and, like a sage, constituting his own causeway, he traverses the firmament : he made Kakshivat tremble, he (made) Agni (shake) as horses (agitate) the light-whirling, revolving-wheel (of a chariot).

ಸಂಹಿತಾಪಾಠಃ

ಸ ದ್ವಿಬಂಧುರ್ವೈತರಣೋ ಯಷ್ಟಾ ಸಬರ್ಧುಂ ಧೇನುಮಸ್ವಂ ದುಹಧ್ಯೈ ।
ಸಂ ಯನ್ಮಿತ್ರಾವರುಣಾ ವೃಂಜ ಉಕ್ಥೈರ್ಜ್ಯೇಷ್ಠೇಭಿರರ್ಯಮಣಂ ವರೂಥೈಃ ॥ ೧೭ ॥

ಪದಪಾಠಃ

ಸಃ । ದ್ವಿಽಬಂಧುಃ । ವೈತರಣಃ । ಯಷ್ಟಾ । ಸಬಃಽಧುಂ । ಧೇನುಂ । ಅಸ್ವಂ । ದುಹಧ್ಯೈ ।
ಸಂ । ಯತ್ । ಮಿತ್ರಾವರುಣಾ । ವೃಂಜೇ । ಉಕ್ಥೈಃ । ಜ್ಯೇಷ್ಠೇಭಿಃ । ಅರ್ಯಮಣಂ । ವರೂಥೈಃ ॥೧೭॥

ಸಾಯಣಭಾಷ್ಯಂ

**ಸೋಽಗ್ನಿರ್ದ್ವಿಬಂಧುರ್ದ್ವಯೋರ್ಲೋಕಯೋರ್ಬಂಧುಭೂತೋ ವೈತರಣಃ ಸರ್ವಸ್ಯ ವಿಶೇಷೇಣ ತಾರಯಿತಾ । ಯದ್ವಾ । ವಿತರಣಾರ್ಹೋ ಹವಿಷ್ಪ್ರದಾನಾರ್ಹಃ । ಯಷ್ಟಾ ದೇವಾನಾಂ ಯಾಜಕೋಽಗ್ನಿಃ ಸಬರ್ಧುಮಮೃತೋಪಮಪಯೋದೋಗ್ಧ್ರೀಂ ಧೇನುಮಸ್ವಮಪ್ರಸೂತಾಂ ನಿವೃತ್ತಪ್ರಸವಾಂ ಶಯವೇ ದುಹಧ್ಯೈ ದೋಹಾಯಾಕರೋತ್ । ಯದ್ಯದಾ ಸ ಶಯುರ್ಮಿತ್ರಾವರುಣಾವರ್ಯಮಣಂ ಚ ಜ್ಯೇಷ್ಠೇಭಿರ್ಜ್ಯೇಷ್ಠೈಃ ಪ್ರಶಸ್ತೈರ್ವರೂಥೈರ್ವರಣೀಯೈರುಕ್ಥೈಃ ಶಸ್ತ್ರೈಃ ಸಂ ವೃಂಜೇ ಸಮ್ಯಕ್ ಸ್ತೌತಿ । ಯದಾ ಸ ಶಯುರ್ಮಿತ್ರಾವರುಣಾರ್ಯಮ್ಣಾಂ ಸ್ತುತಿಂ ಕರೋತಿ ತದಾ ತೇಷಾಮಾಜ್ಞಯಾಗ್ನಿರ್ನಿವೃತ್ತಪ್ರಸವಾಂ ಪಯೋದೋಗ್ಧ್ರೀಮಕರೋದಿತಿ ॥**

ಪ್ರತಿಪದಾರ್ಥ

**ಯತ್**—ಯಾವಾಗ । (ಸಃ—ಶಯುವು) । **ಮಿತ್ರಾವರುಣಾ**—ಮಿತ್ರಾವರುಣರನ್ನೂ । **ಅರ್ಯಮಣಂ**-ಅರ್ಯಮನನ್ನೂ । **ಜ್ಯೇಷ್ಠೇಭಿಃ**—ಪ್ರಶಸ್ಯವಾದವೂ । **ವರೂಥ್ಯೈಃ**—ಆರಿಸಲ್ಪಟ್ಟವೂ ಆದ । **ಉಕ್ಥೈಃ**—ಶಸ್ತ್ರಮಂತ್ರಗಳಿಂದ । **ಸಂ ವೃಂಜೇ**—ಪೂರ್ಣವಾಗಿ ಸ್ತುತಿಸಿದನೋ ಆಗ । **ದ್ವಿಬಂಧುಃ**—ದ್ಯಾವಾಪೃಥಿವಿಗಳೆರಡಕ್ಕೂ ಬಂಧುವೂ । **ವೈತರಣಃ**—ಸಕಲರನ್ನೂ (ಕಷ್ಟದಿಂದ) ದಾಟಿಸುವವನೂ । **ಯಕ್ಷ್ವಾ**—ದೇವತೆಗಳನ್ನು ಪೂಜಿಸುವವನೂ ಆದ । **ಸಃ**—ಅಗ್ನಿಯು । **ಸಬರ್ದುಘಾಂ**—ಅಮೃತವನ್ನು (ಹಾಲನ್ನು) ಕರೆಯುವ । **ಧೇನುಂ**—ಧೇನುವನ್ನು । **ಅಸ್ವಂ**—ಕರುವನ್ನು ಹಾಕದೇ ಇದ್ದಾಗ್ಯೂ । **ದುಹಧ್ಯೈ**—ಕರೆಯುವಂತೆ ಮಾಡಿದನು.

ಭಾವಾರ್ಥ

ಶಯುವು ಮಿತ್ರಾವರುಣರನ್ನೂ, ಅರ್ಯಮನನ್ನೂ, ಪ್ರಶಸ್ಯವಾದವೂ, ಆರಿಸಲ್ಪಟ್ಟವೂ ಆದ ಶಸ್ತ್ರಮಂತ್ರಗಳಿಂದ ಪೂರ್ಣವಾಗಿ ಸ್ತುತಿಸಿದ ಕಾಲದಲ್ಲಿ, ದ್ಯಾವಾಪೃಥಿವಿಗಳೆರಡಕ್ಕೂ ಬಂಧುವೂ, ಸಕಲರನ್ನೂ ಕಷ್ಟದಿಂದ ದಾಟಿಸುವವನೂ, ದೇವತೆಗಳನ್ನು ಪೂಜಿಸುವವನೂ ಆದ ಅಗ್ನಿಯು, ಅಮೃತವನ್ನು (ಹಾಲನ್ನು) ಕರೆಯುವ ಧೇನುವು ಕರುವನ್ನು ಹಾಕದೇ ಇದ್ದಾಗ್ಯೂ ಅದನ್ನು ಕ್ಷೀರವನ್ನು ಕರೆಯುವಂತೆ ಮಾಡಿದನು.

## English Translation

The kinsman of the two (worlds, Agni) the conveyer (of all), the sacrificer, (made) the ambrosia-yielding cow, which had not given birth, to yield milk (for Shayu), when he praises Mitra, Varuna and Aryaman, with most excellent and choice hymns.

ಸಂಹಿತಾಪಾಠಃ

**ತದ್ಬಂಧುಃ ಸೂರಿರ್ದಿವಿ ತೇ ಧಿಯಂಧಾ ನಾಭಾನೇದಿಷ್ಠೋ ರಪತಿ ಪ್ರ ವೇನನ್ ।**
**ಸಾ ನೋ ನಾಭಿಃ ಪರಮಾಸ್ಯ ವಾ ಘಾಹಂ ತತ್ಪಶ್ಚಾ ಕತಿಥಶ್ಚಿದಾಸ ॥ ೧೮ ॥**

ಪದಪಾಠಃ

ತತ್ಽಬಂಧುಃ । ಸೂರಿಃ । ದಿವಿ । ತೇ । ಧಿಯಂಽಧಾಃ । ನಾಭಾನೇದಿಷ್ಠಃ । ರಪತಿ । ಪ್ರ । ವೇನನ್ ।
ಸಾ । ನಃ । ನಾಭಿಃ । ಪರಮಾ । ಅಸ್ಯ । ವಾ । ಘ । ಅಹಂ । ತತ್ । ಪಶ್ಚಾ । ಕತಿಥಃ । ಚಿತ್ । ಆಸ ॥

ಸಾಯಣಭಾಷ್ಯಂ

**ತದ್ಬಂಧುಃ** । ದ್ಯೌರ್ವ ಪೃಥಿವೀ ಬಂಧುಕೋತ್ಪತ್ತ್ಯೈಭಿಷ್ಯಾನತ್ವೇನ ಯಸ್ಯಾಸೌ ತದ್ಬಂಧುಃ । ತನ್ನಾ-ಕೃಕ ಇತ್ಯರ್ಥಃ । **ಸೂರಿಃ** ಸ್ತುತೇಃ ಪ್ರೇರಕೋ ದಿವಿ ವರ್ತಮಾನಸ್ಯ ತೇ ತವ ಸ್ವಭೂತ ಇತಿ ಶೇಷಃ ।

ತ್ಯದಪತ್ಯಭೂತ ಇತಿ ಯಾವತ್ । ಷಷ್ಠೀಸಾಮರ್ಥ್ಯಾತ್ಸಂಬಂಧಸಾಮಾನ್ಯಂ ಪ್ರತೀಯತೇ । ತಚ್ಚಾದಿತ್ಯಪುತ್ರೋ ಮನುರ್ಮನೋಃ ಪುತ್ರೋ ನಾಭಾನೇದಿಷ್ಠ ಇತ್ಯೇವಂ ಸೂರ್ಯಾಪತ್ಯತ್ವಂ ಪರ್ಯವಸ್ಯತಿ । ಸೂರ್ಯನಾಭಾನೇದಿಷ್ಠಯೋಃ ಸಂಬಂಧಶ್ಚರಮಪಾದ ಉತ್ತರಮಂತ್ರೇ ಚ ವಕ್ಷ್ಯತೇ । ಸ ಚ ಧಿಯಂಧಾಃ ಕರ್ಮಣಾಂ ಧಾರಕೋ ನಾಭಾನೇದಿಷ್ಠೋ ವೇನನ್ನಂಗಿರೋದತ್ತಂ ಗೋಸಹಸ್ರಂ ವೇನನ್ಕಾಮಯನ್ ಪ್ರ ರಪತಿ । ಪ್ರಲಪತಿ । ಸ್ತೌತೀತ್ಯರ್ಥಃ । ವಾಪಿ ಚೇತ್ಯರ್ಥಃ । ಸಾ ದ್ಯೌರ್ನೋಽಸ್ಮಾಕಂ ಪರಮೋತ್ಕೃಷ್ಟಾ ನಾಭಿರ್ಬಂಧಿಕಾ ಚಾಸ್ಯಾದಿತ್ಯಸ್ಯಾಧಿಷ್ಠಾನಭೂತಾಸ್ತಿ । ಘೇತಿ ಪೂರಣಃ । ಅಹಂ ತತ್ತಸ್ಯಾದಿತ್ಯಸ್ಯ ಪಶ್ಚಾ ಪಶ್ಚಾದನಂತರಂ ಕತಿಥಃ ಕತಿಪಯಾನಾಂ ಪೂರಣ ಆಸ । ಅಭವಂ । ಅನೇನ ಮಮಾದಿತ್ಯೇನ ಜನ್ಯಜನಕಭಾವಃ ಸಂಬಂಧಃ ಸಂನಿಕೃಷ್ಟ ಇತ್ಯುಕ್ತಂ ಭವತಿ ॥

### ಪ್ರತಿಪದಾರ್ಥ

**ತದ್ಬಂಧುಃ**—ಪೃಥ್ವಿಗೆ ಸಮೀಪಬಂಧುವೂ । **ಸೂರಿಃ**—ಸ್ತುತಿಕಾರಕನೂ । **ದಿವಿ**—ದ್ಯುಲೋಕಸ್ಥನಾದ । **ತೇ**—ನಿನಗೆ ಸೇರಿದವನೂ । **ಧಿಯಂಧಾಃ**—ಕರ್ಮಧಾರಕನೂ ಆದ । **ನಾಭಾನೇದಿಷ್ಠಃ**—ನಾಭಾನೇದಿಷ್ಠನು । **ವೇನನ್**—ಗೋರೂಪವಾದ ಪ್ರತಿಫಲವನ್ನಪೇಕ್ಷಿಸಿ । **ಪ್ರ ರಪತಿ**—ಪ್ರಶಂಸಿಸುತ್ತಾನೆ । **ಸಾ**—ದ್ಯುಲೋಕವು । **ನಃ**—ನಮಗೆ । **ಪರಮಾ**—ಉತ್ಕೃಷ್ಟವಾದ । **ನಾಭಿಃ**—ಸಂಬಂಧವುಳ್ಳದ್ದಾಗಿಯೂ । **ಅಸ್ಯ**—ಆದಿತ್ಯನಿಗೆ (ವಾಸಸ್ಥಾನವಾಗಿಯೂ ಇರುತ್ತದೆ) । **ಅಹಂ**—ನಾನು । **ತತ್**—ಆದಿತ್ಯನಿಗಿಂತ । **ಪಶ್ಚಾ**—ಅನಂತರದಲ್ಲಿ । **ಕತಿಥಃ**—ಕೆಲವು ತಲೆಮಾರುಗಳನಂತರ । **ಆಸ**—ಉತ್ಪನ್ನನಾಗಿದ್ದೇನೆ.

### ಭಾವಾರ್ಥ

ಪೃಥ್ವಿಗೆ ಸಮೀಪಬಂಧುವೂ, ಸ್ತುತಿಕಾರಕನೂ, ದ್ಯುಲೋಕಸ್ಥನಾದ ನಿನಗೆ ಸೇರಿದವನೂ, ಕರ್ಮಧಾರಕನೂ ಆದ ನಾಭಾನೇದಿಷ್ಠನು ಗೋರೂಪವಾದ ಪ್ರತಿಫಲವನ್ನಪೇಕ್ಷಿಸಿ ಪ್ರಶಂಸಿಸುತ್ತಾನೆ. ದ್ಯುಲೋಕವು ನಮಗೆ ಉತ್ಕೃಷ್ಟವಾದ ಸಂಬಂಧವುಳ್ಳದ್ದಾಗಿಯೂ, ಆದಿತ್ಯನಿಗೆ ವಾಸಸ್ಥಾನವಾಗಿಯೂ ಇರುತ್ತದೆ. ನಾನು ಆದೇ ಆದಿತ್ಯನ ವಂಶದಲ್ಲಿ ಅವನಿಗಿಂತ ಕೆಲವು ತಲೆಮಾರುಗಳನಂತರ ಉತ್ಪನ್ನನಾಗಿದ್ದೇನೆ.

### English Translation

The kinsman of the earth, the utterer of praise(belonging)to you(who abide) in heaven, Nabhanedishtha, the supporter of the rite, desiring (the recompense), repeats (this praise) : the (heaven) our most excellent bond (is the site)of the (sun), and I was after many (degrees) descended from him.

### ಸಂಹಿತಾಪಾಠಃ

ಇಯಂ ಮೇ ನಾಭಿರಿಹ ಮೇ ಸಧಸ್ಥಮಿಮೇ ಮೇ ದೇವಾ ಅಯಮಸ್ಮಿ ಸರ್ವಃ ।

ದ್ವಿಜಾ ಅಹ ಪ್ರಥಮಜಾ ಋತಸ್ಯೇದಂ ಧೇನುರದುಹಜ್ಜಾಯಮಾನಾ ॥೧೯॥

ಪದಪಾಠಃ

ಇಯಂ । ಮೇ । ನಾಭಿಃ । ಇಹ । ಮೇ । ಸಧಸ್ಥಂ । ಇಮೇ । ಮೇ । ದೇವಾಃ । ಅಯಂ । ಅಸ್ಮಿ । ಸರ್ವಃ ।

ದ್ವಿऽಜಾಃ । ಅಹ । ಪ್ರಥಮಃऽಜಾಃ । ಋತಸ್ಯ । ಇದಂ । ಧೇನುಃ । ಅದುಹತ್ । ಜಾಯಮಾನಾ ॥೧೯॥

ಸಾಯಣಭಾಷ್ಯಂ

ಇಯಂ ಮಾಧ್ಯಮಿಕಾ ವಾಗ್ಮೇ ನಾಭಿಃ ಸಂನಾಹಿನೀ । ಆದಿತ್ಯಸ್ಯ ತಸ್ಯಾಶ್ಚಾಭೇದಾದಸ್ಯರ್ಷೇರ್ಮಾಧ್ಯಮಿಕಾ ವಾಕ್ಸಂಧಿಕಾ ಭವತಿ । ತಥಾ ಚ ಬ್ರಾಹ್ಮಣಂ। ಸಾ ಯಾ ವಾಗಸೌ ಸ ಆದಿತ್ಯ ಇತಿ ಬ್ರಾಹ್ಮಣಂ । ಇಹಾಸ್ಮಿನ್ಮಂಡಲೇ ಮೇ ಮಮ ಸಧಸ್ಥಂ ಸ್ಥಾನಂ। ಇಮೇ ಮೇ ದೇವಾ ದ್ಯೋತಮಾನಾ ರಶ್ಮಯೋ ಮೇ ಮಮ ಸ್ವಭೂತಾಃ । ಅಯಮಹಮಸ್ಮಿ ಸರ್ವಃ । ಸೂರ್ಯಸ್ಯ ಸ್ವಸ್ಯೋಕ್ತೇನ । ಪ್ರಕಾರೇಣಾಭೇದಾತ್ತದ್ವಾರಾ ಸರ್ವಾತ್ಮಕತ್ವಂ । ಅಹ ಕಿಂಚೇತ್ಯರ್ಥಃ । ದ್ವಿಜಾ ವಿಪ್ರಾ ಋತಸ್ಯ ಪ್ರಥಮಜಾಃ ಸತ್ಯಸ್ಯ ಪ್ರಥಮಜಾಃ ಸತ್ಯಭೂತಸ್ಯ ಬ್ರಹ್ಮಣಃ ಪ್ರಥಮೋತ್ಪನ್ನಾಃ । ಧೇನುಃ । ಪೃಶ್ನಿದೇವತಾ ಮಾಧ್ಯಮಿಕಾ ವಾಗ್ಜಾಯಮಾನೇದಂ ಸರ್ವಮದುಹತ್ । ದುದೋಹ । ಉದಪಾದಯದಿತ್ಯರ್ಥಃ ॥

ಪ್ರತಿಪದಾರ್ಥ

**ಇಯಂ**—ಈ ಮಾಧ್ಯಮಿಕಾವಾಗ್ದೇವಿಯು । **ಮೇ**—ನನಗೆ । **ನಾಭಿಃ**—ಸಮೀಪಸಂಬಂಧವುಳ್ಳವಳು । **ಇಹ**—ಈ ಆದಿತ್ಯಮಂಡಲದಲ್ಲಿ । **ಮೇ**—ನನ್ನ । **ಸಧಸ್ಥಂ**—ಸ್ಥಾನವಿರುತ್ತದೆ । **ದೇವಾಃ**—ಪ್ರಕಾಶಮಾನವಾದ । **ಇಮೇ**—ಈ ರಶ್ಮಿಗಳು । **ಮೇ**—ನನಗೆ ಸೇರಿದವಾಗಿವೆ । **ಅಯಂ**—ನಾನೇ । **ಸರ್ವಃ ಅಸ್ಮಿ**—ಸಕಲವೂ ಆಗಿದ್ದೇನೆ । **ಪ್ರಥಮಜಾಃ**—ಸತ್ಯರೂಪನಾದ ಬ್ರಹ್ಮನಿಂದ ಪ್ರಥಮೋತ್ಪನ್ನವಾದ । **ದ್ವಿಜಾಃ**—ದ್ವಿಜರೂಪದ ಗುಂಪುಗಳೂ ನಾನೇ ಆಗಿದ್ದೇನೆ । **ಧೇನುಃ**—ಪೃಶ್ನಿರೂಪದ ವಾಗ್ದೇವಿಯು । **ಜಾಯಮಾನಾ**—ಉತ್ಪನ್ನಳಾದೊಡನೆಯೇ । **ಇದಂ**—ಈ ಸಕಲ ವಿಶ್ವವನ್ನೂ । **ಅದುಹತ್**—ಉತ್ಪನ್ನಮಾಡಿದಳು.

ಭಾವಾರ್ಥ

ಮಾಧ್ಯಮಿಕಾವಾಗ್ದೇವಿಯು ನನಗೆ ಸಮೀಪಸಂಬಂಧವುಳ್ಳವಳು. ಈ ಆದಿತ್ಯಮಂಡಲದಲ್ಲಿ ನನ್ನ ಸ್ಥಾನವಿರುತ್ತದೆ. ಪ್ರಕಾಶಮಾನವಾದ ಈ ರಶ್ಮಿಗಳು ನನಗೆ ಸೇರಿದವಾಗಿವೆ. ನಾನೇ ಸಕಲವೂ ಆಗಿದ್ದೇನೆ. ಸತ್ಯರೂಪನಾದ ಬ್ರಹ್ಮನಿಂದ ಪ್ರಥಮೋತ್ಪನ್ನವಾದ ದ್ವಿಜರೂಪದ ಗುಂಪುಗಳೂ ನಾನೇ ಆಗಿದ್ದೇನೆ. ಪೃಶ್ನಿರೂಪದ ವಾಗ್ದೇವಿಯು ಉತ್ಪನ್ನಳಾದೊಡನೆಯೇ ಈ ಸಕಲ ವಿಶ್ವವನ್ನೂ ಉತ್ಪನ್ನಮಾಡಿದಳು.

## English Translation

This (aerial voice) is my bond of affinity : here, (in the solar orb) is my abiding-place : these are my resplendent (rays) : I am this all : I am

the twice-born : the first-born of truth ; the cow, as soon as born, milked forth this (universe).

ಸಂಹಿತಾಪಾಠಃ

ಅಥಾಸು ಮಂದ್ರೋ ಅರತಿರ್ವಿಭಾವಾವ ಸ್ಯತಿ ದ್ವಿವರ್ತನಿರ್ವನೇಷಾಟ್ ।
ಊರ್ಧ್ವಾ ಯಚ್ಛ್ರೇಣಿರ್ನ ಶಿಶುರ್ದನ್ಮಕ್ಷೂ ಸ್ಥಿರಂ ಶೇವೃಧಂ ಸೂತ ಮಾತಾ ॥

ಪದಪಾಠಃ

ಅಧ । ಆಸು । ಮಂದ್ರಃ । ಅರತಿಃ । ವಿಭಾऽವಾ । ಅವ । ಸ್ಯತಿ । ದ್ವಿऽವರ್ತನಿಃ । ವನೇಷಾಟ್ ।
ಊರ್ಧ್ವಾ । ಯತ್ । ಶ್ರೇಣಿಃ । ನ । ಶಿಶುಃ । ದನ್ । ಮಕ್ಷು । ಸ್ಥಿರಂ । ಶೇऽವೃಧಂ । ಸೂತ । ಮಾತಾ ॥

ಸಾಯಣಭಾಷ್ಯಂ

ಅಧಾಥಾಸು ಚೇತಸ್ಯಸು ದಿಕ್ಷು ಮಂದ್ರೋ ಮೋದಮಾನೋऽರತಿರ್ಗಂತಾ ವಿಭಾವಾ ದೀಪ್ತಿಮಾನ್ ದ್ವಿವರ್ತನಿರ್ದ್ವಯೋರ್ಲೋಕಯೋರ್ಗಂತಾ ವನೇಷಾಡ್ವನೇ ಕಾಷ್ಠಾನಾಮಭಿಭವಿತಾಗ್ನಿರವ ಸ್ಯತಿ । ಅವಸನ್ನೋ ಭವತಿ ಯಾಗಾರ್ಥಂ । ಯಚ್ಚ ಯೋऽಗ್ನಿರೂರ್ಧ್ವೋನ್ಮುಖಾ ಶ್ರೇಣಿರ್ನ ಶಿಶುಃ ಶಂಸನೀಯಃ ಸೇನೇವ ಮಕ್ಷು ಶೀಘ್ರಂ ದನ್ ಶತ್ರೂನ್ದಮಯತಿ ತಮಿಮಂ ಸ್ಥಿರಂ ನಿಶ್ಚಲಂ ಶೇವೃಧಂ ಸುಖಸ್ಯ ವರ್ಧಕಂ ಮಾತಾರಣಿಃ ಸೂತ । ಯಜ್ಞೇ ಜನಯಾಮಾಸ ॥

ಪ್ರತಿಪದಾರ್ಥ

**ಆಸು**—ಸಕಲ ದಿಕ್ಕುಗಳಲ್ಲಿಯೂ । **ಮಂದ್ರಃ**—ಹರ್ಷವನ್ನು ಹೊಂದುವವನೂ । **ಅರತಿಃ**—ಸಂಚಾರ ಶೀಲನೂ । **ವಿಭಾವಾ**—ಪ್ರಕಾಶಮಾನನೂ । **ದ್ವಿವರ್ತನಿಃ**—ಎರಡು ಲೋಕಗಳಲ್ಲೂ ಸಂಚರಿಸುವವನೂ । **ವನೇಷಾಟ್**—ವನವನ್ನು ದಹಿಸುವವನೂ ಆದ ಅಗ್ನಿಯು । **ಅವ ಸ್ಯತಿ**—ಯಾಗಾರ್ಥವಾಗಿ ಕೊನೆಗೊಳ್ಳುತ್ತಾನೆ। **ಯತ್**—ಯಾವ ಅಗ್ನಿಯು । **ಶ್ರೇಣಿಃ ನ**—ಉದ್ದವಾದ ಗೆರೆಯಂತೆ । **ಊರ್ಧ್ವಾ**—ಮೇಲ್ಭಾಗದ ಮುಖವುಳ್ಳವನೂ । **ಶಿಶುಃ**—ಪ್ರಶಂಸನೀಯನೂ ಆಗಿ । **ಮಕ್ಷು**—ಶೀಘ್ರವಾಗಿ । **ದನ್**—ಶತ್ರುಗಳನ್ನು ನಾಶಮಾಡುವನೋ ಅಂತಹ । **ಸ್ಥಿರಂ**—ಚಲನರಹಿತನೂ । **ಶೇವೃಧಂ**—ಸುಖವನ್ನು ಬೆಳೆಸುವವನೂ ಆದ ಅಗ್ನಿಯನ್ನು । **ಮಾತಾ**—ಅರಣಿಯು । **ಸೂತ**—ಹಡೆದಳು.

ಭಾವಾರ್ಥ

ಸಕಲ ದಿಕ್ಕುಗಳಲ್ಲಿಯೂ ಹರ್ಷವನ್ನು ಹೊಂದುವವನೂ, ಸಂಚಾರಶೀಲನೂ, ಪ್ರಕಾಶಮಾನನೂ, ಎರಡು ಲೋಕಗಳಲ್ಲೂ ಸಂಚರಿಸುವವನೂ, ವನವನ್ನು ದಹಿಸುವವನೂ ಆದ ಅಗ್ನಿಯು ಉದ್ದವಾದ ಗೆರೆಯಂತೆ ಮೇಲ್ಭಾಗದ ಮುಖವುಳ್ಳವನೂ, ಪ್ರಶಂಸನೀಯನೂ ಆಗಿ, ಶೀಘ್ರವಾಗಿ ಶತ್ರುಗಳನ್ನು ನಾಶಮಾಡುತ್ತಾನೆ. ಯಾಗಾರ್ಥವಾಗಿ ಅವಶ್ಯವಿದ್ದಾಗ ( ಯಜ್ಞಸಮಾಪ್ತಿಯಲ್ಲಿ ) ಕೊನೆಗೊಳ್ಳುತ್ತಾನೆ. ಚಲನರಹಿತನೂ, ಸುಖವನ್ನು ಬೆಳೆಸುವವನೂ ಆದ ಅಗ್ನಿಯನ್ನು ಅರಣಿಯು ಹಡೆದಳು.

## English Translation

He, who, exulting in these (regions), unresting, bright-shining, traversing the (two worlds), consuming the forest, terminates (in the fire of sacrifice), who, upward rising, like a line, adorable, quickly subdues (his foes) : him, unchangeable, the augmenter of happiness, his mother has brought forth.

ಸಂಹಿತಾಪಾಠಃ

ಅಧಾ ಗಾವ ಉಪಮಾತಿಂ ಕನಾಯಾ ಅನು ಶ್ವಾಂತಸ್ಯ ಕಸ್ಯ ಚಿತ್ಪರೇಯುಃ ।
ಶ್ರುಧಿ ತ್ವಂ ಸುದ್ರವಿಣೋ ನಸ್ತ್ವಂ ಯಾಳಾಶ್ವಘ್ನಸ್ಯ ವಾವೃಧೇ ಸೂನೃತಾಭಿಃ ॥

ಪದಪಾಠಃ

ಅಧ । ಗಾವಃ । ಉಪ್ಽಮಾತಿಂ । ಕನಾಯಾಃ । ಅನು । ಶ್ವಾಂತಸ್ಯ । ಕಸ್ಯ । ಚಿತ್ । ಪರಾ । ಈಯುಃ ।
ಶ್ರುಧಿ । ತ್ವಂ । ಸುಽದ್ರವಿಣಃ । ನಃ । ತ್ವಂ । ಯಾಟ್ । ಅಶ್ವಽಘ್ನಸ್ಯ । ವವೃಧೇ । ಸೂನೃತಾಭಿಃ ॥ ೨೦ ॥

ಸಾಯಣಭಾಷ್ಯಂ

ಅಧ ಸಂಪ್ರತಿ ಕಸ್ಯ ಚಿಚ್ಛ್ವಾಂತಸ್ಯ ಪ್ರವೃದ್ಧಸ್ಯ ಶ್ರಾಂತಸ್ಯ ವಾ । ಆತ್ಮನೋ ನಿರ್ದೇಶಃ । ಈದೃಶಸ್ಯ ನಾಭಾನೇದಿಷ್ಠಸ್ಯ ಕನಾಯಾಃ ಕಮನೀಯಾಯಾಃ ಸ್ತುತೇರ್ಗಾವೋ ವಾಚಃ । ಯದ್ವಾ । ವಾಚಃ ಸ್ತುತಯಃ ಕನಾಯಾಃ ಕಮನೀಯಾಯಾಃ ಸ್ತುತೇರುಪಮಾತಿಮುಪಮಾನಭೂತಮಿಂದ್ರಮನು ಪರೇಯುಃ । ಅನು ಪರಾಗಚ್ಛಂತಿ । ಹೇ ಸುದ್ರವಿಣಃ ಸುಧನಾಗ್ನೇ ತ್ವಂ ಶ್ರುಧಿ । ಶೃಣು । ನೋಽಸ್ಮಾಕಮಿಮಮಿಂದ್ರಂ ಯಾಟ್ । ಅಯಾಟ್ । ಯಜ । ತ್ವಂ ಚಾಶ್ವಘ್ನಸ್ಯ । ಅಶ್ವಘ್ನೋಽಶ್ವಮೇಧಯಾಜೀ ಮನುಃ । ತಸ್ಯ ಪುತ್ರಸ್ಯ ಮಮ ಸೂನೃತಾಭಿಃ ಸ್ತುತಿಭಿರ್ವವೃಧೇ । ವರ್ಧಸೇ ॥ ಪುರುಷವ್ಯತ್ಯಯಃ ॥ ಅಥವಾಯಂ ವರ್ಧತ ಇತಿ ಪರೋಕ್ಷೇಣ ನಿರ್ದೇಶಃ ॥

ಪ್ರತಿಪದಾರ್ಥ

**ಕಸ್ಯ ಚಿತ್ ಶ್ವಾಂತಸ್ಯ**—ಪ್ರಶಾಂತಚಿತ್ತನಾದ ನಾಭಾನೇದಿಷ್ಠನ । **ಕನಾಯಾಃ**—ರಮ್ಯವಾದ ಸ್ತುತಿಯ। **ಗಾವಃ**—ವಾಕ್ಕುಗಳು । **ಉಪಮಾತಿಂ**—ಆದರ್ಶಪುರುಷನಾದ ಇಂದ್ರನನ್ನು । **ಅನು ಪರೇಯುಃ**—ಹೊಂದಿ ಸೇರುತ್ತವೆ । **ಸುದ್ರವಿಣಃ**—ಉತ್ತಮವಾದ ಧನವುಳ್ಳ ಎಲೈ ಅಗ್ನಿಯೇ । **ತ್ವಂ**—ನೀನು । **ನಃ**—ನಮ್ಮ ಸ್ತುತಿಯನ್ನು । **ಶ್ರುಧಿ**—ಕೇಳು । **ಯಾಟ್**—ದೇವತೆಗಳನ್ನು ಪೂಜಿಸು । **ತ್ವಂ**—ನೀನು । **ಅಶ್ವಘ್ನಸ್ಯ**—ಅಶ್ವಮೇಧ ಯಜ್ಞಕರ್ತನಾದ ಮನುವಿನ ಪುತ್ರನಾದ ನನ್ನ। **ಸೂನೃತಾಭಿಃ**—ಉತ್ತಮವಾದ ಸ್ತುತಿಗಳಿಂದ । **ವವೃಧೇ**—ವೃದ್ಧಿಯನ್ನು ಹೊಂದುತ್ತೀಯೆ.

ಭಾವಾರ್ಥ

ಪ್ರಶಾಂತಚಿತ್ತನಾದ ನಾಭಾನೇದಿಷ್ಠನ ರಮ್ಯವಾದ ಸ್ತುತಿವಾಕ್ಯಗಳು ಆದರ್ಶಪುರುಷನಾದ ಇಂದ್ರನನ್ನು ಹೋಗಿ ಸೇರುತ್ತವೆ. ಉತ್ತಮವಾದ ಧನವುಳ್ಳ ಎಲೈ ಅಗ್ನಿಯೇ, ನೀನು ನಮ್ಮ ಸ್ತುತಿಯನ್ನು ಕೇಳು. ದೇವತೆಗಳನ್ನು ಪೂಜಿಸು. ಅಶ್ವಮೇಧ ಯಜ್ಞಕರ್ತನಾದ ಮನುವಿನಪುತ್ರನಾದ ನನ್ನ ಉತ್ತಮವಾದ ಸ್ತುತಿಗಳಿಂದ ನೀನು ವೃದ್ಧಿಯನ್ನು ಹೊಂದುತ್ತೀಯೆ.

English Translation

The words of the desiraale (praise), of a certain tranquil person (Nabhanedishtha), attain the prototype (Indra), Do you, who are the giver of wealth (Agni), here us : offer sacrifice, you are magnified by the sincere eulogiums of Ashwaghna,

ಸಂಹಿತಾಪಾಠಃ

ಅಧ ತ್ವಮಿಂದ್ರ ವಿದ್ಧ್ಯಸ್ಮಾನ್ಮಹೋ ರಾಯೇ ನೃಪತೇ ವಜ್ರಬಾಹುಃ ।
ರಕ್ಷಾ ಚ ನೋ ಮಘೋನಃ ಪಾಹಿ ಸೂರೀನನೇಹಸಸ್ತೇ ಹರಿವೋ ಅಭಿಷ್ಟೌ ॥

ಪದಪಾಠಃ

ಅಧ । ತ್ವಂ । ಇಂದ್ರ । ವಿದ್ಧಿ । ಅಸ್ಮಾನ್ । ಮಹಃ । ರಾಯೇ । ನೃಽಪತೇ । ವಜ್ರಽಬಾಹುಃ ।
ರಕ್ಷ । ಚ । ನಃ । ಮಘೋನಃ । ಪಾಹಿ । ಸೂರೀನ್ । ಅನೇಹಸಃ । ತೇ । ಹರಿಽವಃ । ಅಭಿಷ್ಟೌ ॥ ೨೨ ॥

ಸಾಯಣಭಾಷ್ಯಂ

ಹೇ ಇಂದ್ರ ಅಧಾಧುನಾ ವಜ್ರಬಾಹುಸ್ತ್ವಮಸ್ಮಾನ್ಮಹೋ ಮಹತೇ ರಾಯೇ ಧನಾಯ ವಿದ್ಧಿ । ಜಾನೀಹಿ । ಹೇ ಇಂದ್ರ ಮಘೋನೋ ಹವಿಷ್ಮತಃ ಸೂರೀನ್ ಸ್ತುತಿಪ್ರೇರಕಾನ್ನೋಽಸ್ಮಾನ್ರಕ್ಷ ಚ । ಹೇ ಹರಿವೋ ಹರಿಭ್ಯಾಂ ತದ್ವನ್ನಿಂದ್ರ ತೇ ತವಾಭಿಷ್ಟಾವಭಿಗಮನೇಽನೇಹಸೋಽಪಾಪಾಃ ಸ್ಯಾಮೇತಿ ಶೇಷಃ ॥

ಪ್ರತಿಪದಾರ್ಥ

ನೃಪತೇ—ಮಾನವರಿಗೆಲ್ಲಾ ಪ್ರಭುವಾದ । ಇಂದ್ರ—ಎಲೈ ಇಂದ್ರನೇ । ಅಧ—ಈಗ । ವಜ್ರಬಾಹುಃ—ವಜ್ರವನ್ನು ಕೈಯಲ್ಲಿ ಧರಿಸಿರುವ ನೀನು । ಅಸ್ಮಾನ್—ನಮ್ಮನ್ನು । ಮಹಃ—ಮಹತ್ತಾದ । ರಾಯೇ—ಧನಕ್ಕೆ । ವಿದ್ಧಿ—ಪಾತ್ರರೆಂದು ತಿಳಿ । ಮಘೋನಃ—ಹವಿಸ್ಸನ್ನು ಹೊಂದಿರುವ । ಸೂರೀನ್—ಸ್ತುತಿಕರ್ತರಾದ । ನಃ—ನಮ್ಮನ್ನು । (ಪಾಹಿ) ರಕ್ಷ—ರಕ್ಷಿಸು । ಹರಿವಃ—ಅಶ್ವಯುಕ್ತನಾದ ಎಲೈ ಇಂದ್ರನೇ । ತೇ—ನಿನ್ನ । ಅಭಿಷ್ಟೌ—ಆಗಮನಕಾಲದಲ್ಲಿ । ಅನೇಹಸಃ—ನಾವು ಪಾಪರಹಿತರಾಗಿರುವಂತಾಗಲಿ.

ಭಾವಾರ್ಥ

ಮಾನವರಿಗೆಲ್ಲ ಪ್ರಭುವಾದ ಎಲೈ ಇಂದ್ರನೇ, ವಜ್ರಾಯುಧವನ್ನು ಕೈಯಲ್ಲಿ ಧರಿಸಿರುವ ನೀನು ನಮ್ಮನ್ನು ಮಹತ್ತಾದ ಧನಕ್ಕೆ ಪಾತ್ರರೆಂದು ತಿಳಿ. ಹವಿಸ್ಸನ್ನು ಹೊಂದಿ ಸ್ತುತಿಕರ್ತರಾದ ನಮ್ಮನ್ನು ರಕ್ಷಿಸು. ಅಶ್ವಯುಕ್ತನಾದ ಎಲೈ ಇಂದ್ರನೇ, ನಿನ್ನ ಆಗಮನಕಾಲದಲ್ಲಿ ನಾವು ಪಾಪರಹಿತರಾಗಿರುವಂತಾಗಲಿ.

## English Translation

Do you, Indra, king of men, who are the bearer of the thunderbolt, regard us now to (give us) great riches, and protect us who are affluent in (oblations), who utter (your) praise ; may we, lord of bay steeds, (be) free from blame on your approach.

ಸಂಹಿತಾಪಾಠಃ

ಅಧ ಯದ್ರಾಜಾನಾ ಗವಿಷ್ಟೌ ಸರತ್ಸರಣ್ಯುಃ ಕಾರವೇ ಜರಣ್ಯುಃ ।
ವಿಪ್ರಃ ಪ್ರೇಷ್ಠಃ ಸ ಹ್ಯೇಷಾಂ ಬಭೂವ ಪರಾ ಚ ವಕ್ಷದುತ ಪರ್ಷದೇನಾನ್ ॥

ಪದಪಾಠಃ

ಅಧ । ಯತ್ । ರಾಜಾನಾ । ಗೋಽಇಷ್ಟೌ । ಸರತ್ । ಸರಣ್ಯುಃ । ಕಾರವೇ । ಜರಣ್ಯುಃ ।
ವಿಪ್ರಃ । ಪ್ರೇಷ್ಠಃ । ಸಃ । ಹಿ । ಏಷಾಂ । ಬಭೂವ । ಪರಾ । ಚ । ವಕ್ಷತ್ । ಉತ । ಪರ್ಷತ್ । ಏನಾನ್ ॥

ಸಾಯಣಭಾಷ್ಯಂ

**ಹೇ ರಾಜಾನಾ ರಾಜಮಾನೌ ಮಿತ್ರಾವರುಣೌ ಅಧಾಧುನಾ ಸತ್ರಸಮಾಪ್ತೌ ಯದ್ಯಸ್ಮಾದ್ಗವಿಷ್ಟೌ ಗವಾಮೇಷಣಾಯಾಂ ಸತ್ಯಾಂ ಸರಣ್ಯುಃ ಸರಣಶೀಲೋ ಯಮುಃ ಸರತ್ ಗಚ್ಛತಿ ಕಾರವೇ ಕರ್ಮಾಣಿ ಕುರ್ವತೇಽಙ್ಗಿರಸಾಂ ಗಣಾಯ । ಕಿಮಿಚ್ಛನ್ । ಜರಣ್ಯುಸ್ತಸ್ಮಾ ಅಂಗಿರಸಾಂ ಗಣಾಯ ಸ್ತುತಿಮಿಚ್ಛನ್ । ತಸ್ಮಾತ್ಸ ವಿಪ್ರೋ ನಾಭಾನೇದಿಷ್ಠ ಏಷಾಮಂಗಿರಸಾಂ ಪ್ರೇಷ್ಠಃ ಪ್ರಿಯತಮೋ ಬಭೂವ । ಭವತು । ಹೀತಿ ಪೂರಣಃ । ತೇಷಾಂ ಕರ್ತವ್ಯಂ ಪರಾ ಚ ವಕ್ಷತ್ । ಪರಾವಹತು । ಉತಾಪಿ ಚೈನಾನಂಗಿರಸಃ ಪರ್ಷತ್ ಪಾರಯತ್ವಿತ್ಯಾತ್ಮನ ಏವಾಶಾಸ್ತೇ ॥**

ಪ್ರತಿಪದಾರ್ಥ

**ರಾಜಾನಾ**—ಪ್ರಭುಗಳಾದ ಎಲೈ ಮಿತ್ರಾವರುಣರೇ । **ಅಧ**—ಈಗ । **ಯತ್**—ಯಾವ ನಿಮಿತ್ತವಾಗಿ । **ಗವಿಷ್ಟೌ**—ಗೋವುಗಳನ್ನು ಹುಡುಕುವ ಕಾಲದಲ್ಲಿ । **ಸರಣ್ಯುಃ**—ಸಂಚಾರಶೀಲನಾದ ಯಮನು । **ಕಾರವೇ**—ಸ್ತುತಿಕರ್ತರಾದ ಅಂಗಿರಸ್ಸುಗಳಿಗೆ ಸಹಾಯಮಾಡಲು । **ಜರಣ್ಯುಃ**—ಅವರ ಸ್ತುತಿಯನ್ನಿಚ್ಛಿಸಿ । **ಸರತ್**—

ಬರುವನೋ ಆದುದರಿಂದಲೇ । **ವಿಪ್ರಃ**—ಮೇಧಾವಿಯಾದ । **ಸಃ**—ಆ ನಾಭಾನೇದಿಷ್ಠನು । **ಏಷಾಂ—** ಈ ಅಂಗಿರಸ್ಸುಗಳಿಗೆ । **ಪ್ರೇಷ್ಠಃ**—ಅತ್ಯಂತ ಪ್ರಿಯತಮನಾಗಿ । **ಬಭೂವ**—ಆಗಿರಲಿ । **ಪರಾ ಚ ವಕ್ಷತ್**—ಅವರ ಕರ್ತವ್ಯವನ್ನು ನಿರ್ವಹಿಸಲಿ । **ಉತ**—ಮತ್ತು । **ಏನಾನ್**—ಅಂಗಿರಸ್ಸುಗಳನ್ನು । **ಪರ್ಷತ್**—ಅವರ ಕಾರ್ಯವನ್ನು ಸಾಧಿಸುವಂತೆ ಮಾಡಲಿ.

ಭಾವಾರ್ಥ

ಪ್ರಭುಗಳಾದ ಎಲೈ ಮಿತ್ರಾವರುಣರೇ, ಯಾವ ನಿಮಿತ್ತವಾಗಿ ಗೋವುಗಳನ್ನು ಹುಡುಕುವ ಕಾಲದಲ್ಲಿ ಸಂಚಾರಶೀಲನಾದ ಯಮನು ಸ್ತುತಿಕರ್ತರಾದ ಅಂಗಿರಸ್ಸುಗಳಿಗೆ ಸಹಾಯಮಾಡಲು ಅವರ ಸ್ತುತಿಯನ್ನಿಚ್ಛಿಸಿ ಬರುವನೋ ಆದುದರಿಂದಲೇ ಮೇಧಾವಿಯಾದ ನಾಭಾನೇದಿಷ್ಠನು ಈ ಅಂಗಿರಸ್ಸುಗಳಿಗೆ ಅತ್ಯಂತ ಪ್ರಿಯತಮನಾಗಿರಲಿ. ಅವರ ಕರ್ತವ್ಯವು ನಿರ್ವಿಘ್ನವಾಗಿ ನೆರವೇರುವಂತೆ ಮಾಡಲಿ.

English Translation

Since, royal (Mitra and Varuna), the impetuous (Yama) now approaches in expectation of (the gift of) cattle, and desiring praise for the sacrificing (band of the Angirasas) ; the sage (Nabhanedishtha) has been held most dear by them ; may he accomplish (what has to be effected), and make them successful.

ಸಂಹಿತಾಪಾಠಃ

ಅಧಾನ್ವಸ್ಯ ಜೇನ್ಯಸ್ಯ ಪುಷ್ಟೌ ವೃಥಾ ರೇಭಂತ ಈಮಹೇ ತದೂ ನು ।
ಸರಣ್ಯುರಸ್ಯ ಸೂನುರಶ್ವೋ ವಿಪ್ರಶ್ಚಾಸಿ ಶ್ರವಸಶ್ಚ ಸಾತೌ ॥ ೨೪ ॥

ಪದಪಾಠಃ

ಅಧ । ನು । ಅಸ್ಯ । ಜೇನ್ಯಸ್ಯ । ಪುಷ್ಟೌ । ವೃಥಾ । ರೇಭಂತಃ । ಈಮಹೇ । ತತ್ । ಊಂ ಇತಿ । ನು ।
ಸರಣ್ಯುಃ । ಅಸ್ಯ । ಸೂನುಃ । ಅಶ್ವಃ । ವಿಪ್ರಃ । ಚ । ಅಸಿ । ಶ್ರವಸಃ । ಚ । ಸಾತೌ ॥ ೨೪ ॥

ಸಾಯಣಭಾಷ್ಯಂ

ಅನಯಾ ವರುಣಂ ಪೃಥಕ್ ಸ್ತೌತಿ । ಅಧಾಥ ನು ಕ್ಷಿಪ್ರಮಸ್ಯ ಜೇನ್ಯಸ್ಯ ಜಯಶೀಲಸ್ಯ ಸ್ತುತ್ಯಾ ಜೇತವ್ಯಸ್ಯ ವಾ ತತ್ಸ್ವಭೂತಂ ಗವಾದಿಧನಂ ಪುಷ್ಟೌ ಪೋಷೇ ನಿಮಿತ್ತೇ ಸತಿ ತಸ್ಯ ಪುಷ್ಟ್ಯರ್ಥಂ ವಾ ವೃಥಾನಾಯಾಸೇನ ರೇಭಂತಃ ಸ್ತುವಂತೋ ನು ಕ್ಷಿಪ್ರಮೀಮಹೇ । ಯಾಚಾಮಹೇ । ಸರಣ್ಯುಃ ಶೀಘ್ರಸರಣಶೀಲೋಽಶ್ವೋಽಸ್ಯ ವರುಣಸ್ಯ ಸೂನುಃ ಪುತ್ರಃ। ವರುಣಾದ್ಧ್ಯಶ್ವ ಉತ್ಪನ್ನಃ । ಅಥ ಪ್ರತ್ಯಕ್ಷಕೃತಃ। ಹೇ ವರುಣ ತ್ವಂ ವಿಪ್ರಶ್ಚಾಸಿ । ವಿಪ್ರವತ್ಪೂಜ್ಯಃ ಶುದ್ಧೋ ವಾ ಭವಸಿ । ಶ್ರವಸಶ್ಚಾನ್ನಸ್ಯ ಸಾತೌ ಲಾಭೇಽಸ್ಮಾಕಮನ್ನಲಾಭಾಯ ಪ್ರವೃತ್ತಶ್ಚ ಭವಸಿ ॥

ಪ್ರತಿಪದಾರ್ಥ

**ಅಥ**—ಅನಂತರ | **ನು**—ಕ್ಷಿಪ್ರವಾಗಿ | **ಜೇನ್ಯಸ್ಯ ಅಸ್ಯ**—ಜಯಶೀಲನಾದ ವರುಣನ | **ತತ್**—ಗವಾದಿಧನವನ್ನು | **ಪುಷ್ಟ್ಯೈ**—ಪೋಷಿಸುವ ನಿಮಿತ್ತವಾಗಿ (ಅಥವಾ ವರುಣನ ತೃಪ್ತ್ಯರ್ಥವಾಗಿ) | **ವೃಥಾ**—ಸ್ವಯಂಪ್ರೇರಿತರಾಗಿ | **ರೇಭಂತಃ**—ಸ್ತುತಿಸುವ ನಾವು | **ಈಮಹೇ**—ಯಾಚಿಸುತ್ತೇವೆ | **ಸರಣ್ಯುಃ**—ಶೀಘ್ರಸಂಚಾರಿಯಾದ | **ಅಶ್ವಃ**—ಅಶ್ವವು | **ಅಸ್ಯ**—ವರುಣನಿಗೆ | **ಸೂನುಃ**—ಪುತ್ರರೂಪವಾಗಿದೆ | (ಎಲೈ ವರುಣನೇ) **ವಿಪ್ರಃ ಅಸಿ**—ನೀನು ಮೇಧಾವಿಯಾಗಿದ್ದೀಯೆ | **ಶ್ರವಸಃ ಸಾತೌ**—ನಮಗೆ ಅನ್ನದಾನಮಾಡಲು ಯೋಗ್ಯನಾಗಿದ್ದೀಯೆ.

ಭಾವಾರ್ಥ

ಜಯಶೀಲನಾದ ವರುಣನ ತೃಪ್ತ್ಯರ್ಥವಾಗಿ ಸ್ವಯಂಪ್ರೇರಿತರಾಗಿ ಸ್ತುತಿಸುವ ನಾವು ಯಾಚಿಸುತ್ತೇವೆ. ಶೀಘ್ರಸಂಚಾರಿಯಾದ ಅಶ್ವವು ವರುಣನಿಗೆ ಪುತ್ರರೂಪವಾಗಿದೆ. ಎಲೈ ವರುಣನೇ, ನೀನು ಮೇಧಾವಿಯಾಗಿದ್ದೀಯೆ ಅಥವಾ ವಿಪ್ರನಂತೆ ಪೂಜ್ಯನಾಗಿದ್ದೀಯೆ. ನಮಗೆ ಅನ್ನದಾನಮಾಡಲು ಪ್ರವೃತ್ತನಾಗಿಯೂ ಇದ್ದೀಯೆ.

## English Translation

And for the contentment of this victorious (Varuna), praising (him) without an effort, we solicit this (of him), (that) his progency, a swift horse, (may be ours), and you, (Varuna), are wise, and (are occupied) in procuring us food.

ವಿಶೇಷವಿಷಯಗಳು

ಅಶ್ವವು ವರುಣನಿಂದ ಉತ್ಪತ್ತಿಯಾಯಿತೆಂದು **ವಾರುಣೋ ವಾ ಅಶ್ವಃ** ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಹೇಳಿರುವುದರಿಂದ ಇಲ್ಲಿ ಅಶ್ವವು ವರುಣನ ಪುತ್ರರೂಪವಾಗಿದೆಯೆಂದು ವರ್ಣಿಸಿದೆ.

ಸಂಹಿತಾಪಾಠಃ

**ಯುವೋರ್ಯದಿ ಸಖ್ಯಾಯಾಸ್ಮೇ ಶರ್ಧಾಯ ಸ್ತೋಮಂ ಜುಜುಷೇ ನಮಸ್ವಾನ್ |**
**ವಿಶ್ವತ್ರ ಯಸ್ಮಿನ್ನಾ ಗಿರಃ ಸಮೀಚೀಃ ಪೂರ್ವೀವ ಗಾತುರ್ದಾಶತ್ಸೂನೃತಾಯೈ || ೨೫ ||**

ಪದಪಾಠಃ

**ಯುವೋಃ | ಯದಿ | ಸಖ್ಯಾಯ | ಅಸ್ಮೇ ಇತಿ | ಶರ್ಧಾಯ | ಸ್ತೋಮಂ | ಜುಜುಷೇ | ನಮಸ್ವಾನ್ | ವಿಶ್ವತ್ರ | ಯಸ್ಮಿನ್ | ಆ | ಗಿರಃ | ಸಂऽಈಚೀಃ | ಪೂರ್ವೀಃऽಇವ | ಗಾತುಃ | ದಾಶತ್ | ಸೂನೃತಾಯೈ ||**

ಸಾಯಣಭಾಷ್ಯಂ

ಹೇ ಮಿತ್ರಾವರುಣೌ ಯುವೋರ್ಯುವಯೋಃ ಶರ್ಧಾಯ ಬಲವತೇಽಸ್ಮೇ ಅಸ್ಮಾಕಂ ಸಖ್ಯಾಯ| ಯದ್ವಾ | ಯುವಯೋಃ ಸಖ್ಯಾಯಾಸ್ಮೇ ಅಸ್ಮಾಕಂ ಶರ್ಧಾಯ ಬಲಾಯ ಚ | ಯದಿ ನಮಸ್ವಾನನ್ನವಾನಧ್ವರ್ಯುಃ ಸ್ತೋತ್ರವಾನ್ಹೋತಾ ವಾ ಸೋಮಂ ಜುಜುಷೇ ಸೇವತೇ| ಯಸ್ಮಿನ್ ಸಖ್ಯೇ ಸಿದ್ಧೇ ಸತಿ ವಿಶ್ವತ್ರ ವಿಶ್ವಸ್ಮಿನ್ಯಜನಸದೇ ಗಿರೋಽಂಗಿರಸಾಂ ಸಂಬಂಧಿನ್ಯಃ ಸಮೀಚೀಃ ಸಮೀಚ್ಯ ಆ ಗಚ್ಛಂತೀತಿ ಶೇಷಃ | ಉದಾರಾಣಾಂ ಗೃಹ ಇದಂ ಗೃಹಾಣೇದಂ ಗೃಹಾಣೇತ್ಯೇವಂರೂಪಾಃ ಶ್ರೂಯಂತ ಇತ್ಯರ್ಥಃ | ಯದ್ವಾ | ಯಾಗಾನುಷ್ಠಾತೄಣಾಂ ಸ್ತುತಿಗಿರ ಆಗಚ್ಛಂತೀತಿ| ಪೂರ್ವೀವ ಗಾತುಃ ಪ್ರಾಚೀ ದಿಗಿವ ಸಾ ಯಥಾ ಗಚ್ಛತಾಂ ಸುಖಂ ಪ್ರಯಚ್ಛತಿ ತದ್ವತ್ | ಯದ್ವಾ| ಪೂರ್ವೀ ಪುರಾ ಪ್ರಸಿದ್ಧಾ ಪುರಾತನೀವ ಗಾತುಃ ಸರಣಿರಿವ ಸಾ ಯಥಾ ಗಚ್ಛತಾಂ ಸುಖಂ ಪ್ರಯಚ್ಛತಿ ತದ್ವತ್ | ಸೂನೃತಾಯೈ ಪ್ರಿಯಸತ್ಯರೂಪಾಯೈ ಸ್ತುತಿವಾಚೇ ದಾಶತ್ | ಪ್ರಯಚ್ಛತು ||

ಪ್ರತಿಪದಾರ್ಥ

(ಎಲೈ ಮಿತ್ರಾವರುಣರೇ) **ಯಸ್ಮಿನ್**—ಯಾವ ಮಿತ್ರತ್ವವು ಸಿದ್ಧಿಸಿದರೆ | **ಗಿರಃ**—ಅಂಗಿರಸ್ಸುಗಳ ಸ್ತುತಿಗಳು | **ವಿಶ್ವತ್ರ**—ಸಕಲ ಪ್ರದೇಶಗಳಲ್ಲೂ | **ಸಮೀಚೀಃ**—ಒಂದೇ ಗುರಿಯುಳ್ಳವಾಗಿ | **ಆ**—ಪ್ರಸರಿಸುವುವೋ ಅಂತಹ | **ಯುವೋಃ ಸಖ್ಯಾಯ**—ನಿಮ್ಮ ಮಿತ್ರತ್ವಕ್ಕಾಗಿಯೂ | **ಅಸ್ಮೇ**—ನಮ್ಮ | **ಶರ್ಧಾಯ**—ಬಲದ ಲಾಭಕ್ಕಾಗಿಯೂ | **ನಮಸ್ವಾನ್**—ಹವಿರ್ಯುಕ್ತವಾದ ಅಧ್ವರ್ಯುವು ಅಥವಾ ಹೋತೃವು | **ಸೋಮಂ**—ಸ್ತೋತ್ರವನ್ನು | **ಜುಜುಷೇ**—ಪಠಿಸುತ್ತಾನೆ | **ಪೂರ್ವೀ ಗಾತುಃ ಇವ**—ಪುರಾತನವಾದ ಮಾರ್ಗದ ಸಂಚಾರವು ಸುಖವನ್ನುಂಟುಮಾಡುವಂತೆ|**ಸೂನೃತಾಯೈ**-ಉತ್ತಮವಾದ ಸ್ತುತಿಕರ್ತನಿಗೆ | **ದಾಶತ್**-ಮಿತ್ರಾವರುಣರು ಸುಖವನ್ನು ಕೊಡಲಿ.

ಭಾವಾರ್ಥ

ಎಲೈ ಮಿತ್ರಾವರುಣರೇ, ಯಾವ ನಿಮ್ಮ ಮಿತ್ರತ್ವವು ಸಿದ್ಧಿಸಿದರೆ ಅಂಗಿರಸ್ಸುಗಳ ಸ್ತುತಿಗಳು ಸಕಲ ಪ್ರದೇಶಗಳಲ್ಲೂ ಒಂದೇ ಗುರಿಯುಳ್ಳವಾಗಿ ಪ್ರಸರಿಸುವುವೋ ಅಂತಹ ನಿಮ್ಮ ಮಿತ್ರತ್ವಕ್ಕಾಗಿಯೂ, ನಮ್ಮ ಬಲದ ಲಾಭಕ್ಕಾಗಿಯೂ, ಹವಿರ್ಯುಕ್ತನಾದ ಅಧ್ವರ್ಯುವೂ ಅಥವಾ ಸ್ತುತಿಕರ್ತನಾದ ಹೋತೃವು ಸ್ತೋತ್ರವನ್ನು ಪಠಿಸುತ್ತಾನೆ. ಪುರಾತನವಾದ ಮಾರ್ಗದ ಸಂಚಾರವುಸುಖವನ್ನುಂಟುಮಾಡುವಂತೆ ಉತ್ತಮವಾದ ಸ್ತುತಿಕರ್ತನಿಗೆ ಮಿತ್ರಾವರುಣರು ಸುಖವನ್ನು ಕೊಡಲಿ.

English Translation

If the priest offer homage to you two (Mitra and Varuna) for the sake of your friendship and our invigoration, on (the formation of) which (friendship) the praises (of the Angirasas go) everywhere in a common direction ; may he give (pleasure) to the utterer of praise, like an ancient road.

ಸಂಹಿತಾಪಾಠಃ

ಸ ಗೃಣಾನೋ ಅದ್ಭಿರ್ದೇವವಾನಿತಿ ಸುಬಂಧುರ್ನಮಸಾ ಸೂಕ್ತೈಃ ।

ವರ್ಧದುಕ್ಥೈರ್ವಚೋಭಿರಾ ಹಿ ನೂನಂ ವ್ಯಧ್ವೈತಿ ಪಯಸ ಉಸ್ರಿಯಾಯಾಃ॥

ಪದಪಾಠಃ

ಸಃ । ಗೃಣಾನಃ । ಅತ್ಽಭಿಃ । ದೇವಽವಾನ್ । ಇತಿ । ಸುಽಬಂಧುಃ । ನಮಸಾ । ಸುಽಉಕ್ತೈಃ । ವರ್ಧತ್ । ಉಕ್ಥೈಃ । ವಚಃಽಭಿಃ । ಆ । ಹಿ । ನೂನಂ । ವಿ । ಅಧ್ವಾ । ಏತಿ । ಪಯಸಃ । ಉಸ್ರಿಯಾಯಾಃ ॥ ೨೬ ॥

ಸಾಯಣಭಾಷ್ಯಂ

ದೇವತಾಭಿರ್ದೇವವಾನ್ ಸುಬಂಧುಃ ಶೋಭನಬಂಧನಃ ಸ ವರುಣ ಇತೀತ್ಥಂ ಕೃತಪ್ರಕಾರೇಣ ನಮಸಾ ನಮಸ್ಕಾರೇಣ ಸೂಕ್ತೈಶ್ಚ ಗೃಣಾನಃ ಸ್ತೂಯಮಾನಃ ಸನ್ವರ್ಧತ್ । ವರ್ಧತಾಂ । ಉಕ್ಥೈರ್ವಚೋಭಿರುಚ್ಯಮಾನೈಃ ಪ್ರಶಸ್ತೈರ್ವಾ ಸ್ತುತಿವಚೋಭಿರ್ನೂನಮಿದಾನೀಮಾ ಗಚ್ಛತ್ವಿತಿ ಶೇಷಃ । ಹೀತಿ ಪೂರಣಃ । ತಸ್ಯ ಯಾಗಾರ್ಥಮುಸ್ರಿಯಾಯಾ ಗೋಃ ಪಯಸೋಽಧ್ವಾ ಮಾರ್ಗೋ ವ್ಯೇತಿ। ಸ್ತನಾಗ್ರಾಣಿ ಕ್ಷರಂತೀತ್ಯರ್ಥಃ ॥

ಪ್ರತಿಪದಾರ್ಥ

**ಸ ವರುಣಃ**—ಪ್ರಸಿದ್ಧನಾದ ವರುಣನು । **ಅದ್ಭಿಃ**—ಸಕಲ ಜಲಗಳೊಡನೆಯೂ । **ದೇವವಾನ್**—ಸಕಲ ದೇವತೆಗಳೊಡನೆಯೂ ಕೂಡಿಕೊಂಡು । **ಸುಬಂಧುಃ**—ಉತ್ತಮವಾದ ಬಂಧುತ್ವವುಳ್ಳವನಾಗಿದ್ದಾನೆ । **ಇತಿ** —ಈ ಪ್ರಕಾರವಾಗಿ । **ನಮಸಾ**—ನಮಸ್ಕಾರದಿಂದಲೂ । **ಸೂಕ್ತೈಃ**—ಸ್ತುತಿಗಳಿಂದಲೂ । **ಗೃಣಾನಃ**—ಸ್ತುತಿಸಲ್ಪಟ್ಟ ವರುಣನು । **ವರ್ಧತ್**—ವೃದ್ಧಿಯನ್ನು ಹೊಂದುತ್ತಾನೆ। **ಉಕ್ಥೈಃ**—ಉಕ್ಥಮಂತ್ರಗಳಿಂದಲೂ । **ವಚೋಭಿಃ**—ಸ್ತುತಿವಾಕ್ಕುಗಳಿಂದಲೂ ಆಕರ್ಷಿತನಾಗಿ । **ನೂನಂ**— ಈಗ । **ಆ**—ಬರಲಿ । **ಉಸ್ರಿಯಾಯಾಃ**—ಗೋವಿನ । **ಪಯಸಃ**—ಕ್ಷೀರದ । **ಅಧ್ವಾ**—ಮಾರ್ಗವು । **ವಿ ಏತಿ**—ಅವನ ಪೂಜೆಗಾಗಿ ತೆರೆದಿದೆ.

ಭಾವಾರ್ಥ

"ಪ್ರಸಿದ್ಧನಾದ ವರುಣನು ಸಕಲ ಜಲಗಳೊಡನೆಯೂ, ಸಕಲ ದೇವತೆಗಳೊಡನೆಯೂ ಕೂಡಿಕೊಂಡು ಉತ್ತಮವಾದ ಬಂಧುತ್ವವುಳ್ಳವನಾಗಿದ್ದಾನೆ" ಎಂದು ಪ್ರಶಂಸಿಸಿ ನಮಸ್ಕರಿಸಲ್ಪಟ್ಟ ವರುಣನು ವೃದ್ಧಿಯನ್ನು ಹೊಂದುತ್ತಾನೆ. ಉಕ್ಥಮಂತ್ರಗಳಿಂದಲೂ, ಸ್ತುತಿಗಳಿಂದಲೂ ಆಕರ್ಷಿತನಾದ ವರುಣನು ನಮ್ಮಲ್ಲಿಗೆ ಬರಲಿ. ಗೋಕ್ಷೀರದ ಮಾರ್ಗವು ವರುಣನ ಪೂಜೆಗಾಗಿ ತೆರೆಯಲ್ಪಟ್ಟಿದೆ (ಸಿದ್ಧವಾಗಿದೆ).

## English Translation

Being praised with reverence and hymns thus, "the god-accompanied (Varuna) of good lineage, together with the waters," may he be magnified : (attracted) by hymns and prayers (may he) now (approach) ; the path of the milk of the cow is open (for his worship)

ಸಂಹಿತಾಪಾಠಃ

ತ ಊ ಷು ಣೋ ಮಹೋ ಯಜತ್ರಾ ಭೂತ ದೇವಾಸ ಊತಯೇ ಸಜೋಷಾಃ ||
ಯೇ ವಾಜಾ ಅನಯತಾ ವಿಯಂತೋ ಯೇ ಸ್ಥಾ ನಿಚೇತಾರೋ ಅಮೂರಾಃ || ೨೭ ||

ಪದಪಾಠಃ

ತೇ | ಊಂ ಇತಿ | ಸು | ನಃ | ಮಹಃ | ಯಜತ್ರಾಃ | ಭೂತ | ದೇವಾಸಃ | ಊತಯೇ | ಸಽಜೋಷಾಃ |
ಯೇ | ವಾಜಾನ್ | ಅನಯತ | ವಿಽಯಂತಃ | ಯೇ | ಸ್ಥ | ನಿಽಚೇತಾರಃ | ಅಮೂರಾಃ || ೨೭ ||

ಸಾಯಣಭಾಷ್ಯಂ

ಅನಯರ್ಷಿರಂಗಿರಸ ಆಶಾಸ್ತೇ | ಹೇ ಯಜತ್ರಾ ಯಷ್ಟವ್ಯಾ ದೇವಾಸೋ ದೇವಾಃ ತೇ ಯೂಯಂ | ಉ ಇತಿ ಪೂರಣಃ | ಮಹೋ ಮಹತೇ ನೋಽಸ್ಮಾಕಮೂತಯೇ ರಕ್ಷಣಾಯ ಸಜೋಷಾಃ ಸಂಗತಾ ಭೂತ| ಭವತ| ಯೇ ಚ ಯೂಯಮಂಗಿರಸೋ ಮಹ್ಯಂ ವಾಜಾನನ್ನಾನ್ಯನಯತ ಪ್ರಾಪಯತ| ವಿಯಂತಃ ಸತತಮುತ್ಕ್ರಾಯ ವಿವಿಧಂ ಗಚ್ಛಂತಃ ಸಂತಃ | ಯೇ ಚ ಯೂಯಮಮೂರಾಃ | ಷಷ್ಠ್ಯಾಹಃ | ಪ್ರಯೋಗಮೌಢ್ಯರಹಿತಾ ಇತ್ಯರ್ಥಃ | ತಾದೃಶಾ ನಿಚೇತಾರೋ ಗವಾಂ ವಿವಿಕ್ತಾರಃ ಸ್ಥ ಭವಥ | ತೇ ಸಜೋಷಾ ಭೂತೇತಿ ಸಮನ್ವಯಃ ||

ಪ್ರತಿಪದಾರ್ಥ

**ಯಜತ್ರಾಃ**—ಪೂಜ್ಯರಾದ | **ದೇವಾಸಃ**—ಎಲೈ ದೇವತೆಗಳೇ | **ಯೇ**—ಯಾವ ನೀವು | **ವಾಜಾನ್**—ಅನ್ನಗಳನ್ನು | **ಅನಯತ**—ನಮಗೆ ಹೊಂದಿಸುವಿರೋ (ಮತ್ತು) | **ವಿಯಂತಃ**—ಸರ್ವತ್ರ ಸಂಚರಿಸುತ್ತ | **ಯೇ**—ಯಾವ ನೀವು | **ಅಮೂರಃ**—ಭ್ರಾಂತಿಯಿಲ್ಲದವರಾಗಿ | **ನಿಚೇತಾರಃ**—ಗೋವುಗಳನ್ನು ಕಂಡುಹಿಡಿಯುತ್ತ | **ಸ್ಥ**—ಇರುವಿರೋ ಅಂತಹ | **ತೇ**—ನೀವು | **ನಃ**—ನಮ್ಮ | **ಮಹಃ**—ಮಹತ್ತಾದ | **ಊತಯೇ**—ರಕ್ಷಣಾರ್ಥವಾಗಿ | **ಸಜೋಷಾಃ**—ಒಂದುಗೂಡಿದವರಾಗಿ | **ಭೂತ**—ಇರಿ.

ಭಾವಾರ್ಥ

ಪೂಜ್ಯರಾದ ಎಲೈ ದೇವತೆಗಳೇ, ಯಾವ ನೀವು ನಮಗೆ ಅನ್ನದಾತರಾಗಿಯೂ ಮತ್ತು ಸರ್ವತ್ರ ಸಂಚರಿಸುತ್ತ ಕೊಂಚವೂ ಭ್ರಾಂತಿಯಿಲ್ಲದೆ ಗೋವುಗಳನ್ನು ಕಂಡುಹಿಡಿದುಕೊಡುವವರಾಗಿಯೂ ಇರುವಿರೋ, ಅಂತಹ ನೀವು ನಮ್ಮ ಮಹತ್ತಾದ ರಕ್ಷಣಾರ್ಥವಾಗಿ ಒಂದುಗೂಡಿದವರಾಗಿರಿ.

## English Translation

Adorable divinities, be consentient for our great preservation, both you who, going in various directions, are the bringers of food, and you who, being no longer perplexed, are the discoverers (of the cattle).

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕ ಭೂಪಾಲ
ಸಾಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ
ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇಽಷ್ಟಮಾಷ್ಟಕೇ
ಪ್ರಥಮೋಽಧ್ಯಾಯಃ ಸಮಾಪ್ತಃ ॥

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ಣಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಎಂಟನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯವು ಸಮಾಪ್ತವಾದುದು.

---

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ॥
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ।

॥ ಮಂಗಳಂ ॥





॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥
ವ್ಯಾಖ್ಯಾಯ ಪ್ರಥಮಂ ವಿದ್ವಾನಷ್ಟಮಸ್ಯಾಷ್ಟಕಸ್ಯ ಸಃ ।
ಅಧ್ಯಾಯಂ ಸಾಯಣಾಮಾತ್ಯೋ ದ್ವಿತೀಯಂ ವ್ಯಾಚಿಕೀರ್ಷತಿ ॥

### ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ



**(ಕರ್ಣಾಟಕ ಭಾಷಾರ್ಥಾನುವಾದ ವಿವರಣೆ ಸಹಿತವಾಗಿ)**

## ॥ ಅಷ್ಟಮಾಷ್ಟಕೇ ದ್ವಿತೀಯೋಽಧ್ಯಾಯಃ ॥

**ಎಂಟನೆಯ ಅಷ್ಟಕದಲ್ಲಿ ಎರಡನೆಯ ಅಧ್ಯಾಯವು**



## ಹತ್ತನೆಯ ಮಂಡಲದ ಅರವತ್ತೆರಡನೆಯ ಸೂಕ್ತ

### ಪೀಠಿಕೆ

ಹಿಂದಿನ ಅಧ್ಯಾಯದ **ಇದಮಿತ್ಥಾ** ಎಂಬ ೬೧ ನೆಯ ಸೂಕ್ತದಂತೆ ಈ ಸೂಕ್ತವೂ ನಾಭಾನೇದಿಷ್ಠ ಋಷಿಯಿಂದ ದೃಷ್ಟವಾಗಿರುವುದರಿಂದ ಈ ಎರಡು ಸೂಕ್ತಗಳಿಗೂ ಸಂಬಂಧಿಸಿದ ವಿಷಯಗಳನ್ನು ಹಿಂದಿನ ಸೂಕ್ತದ ಪೀಠಿಕೆಯಲ್ಲಿ ಎಂದರೆ 398—407 ನೇ ಪೇಜುಗಳಲ್ಲಿ ವಿವರಿಸಲಾಗಿದೆ. ಅವುಗಳನ್ನು ಅಲ್ಲಿಯೇ ನೋಡಿ ತಿಳಿಯಬಹುದು.

ಸಾಯಣಭಾಷ್ಯಂ

**ತತ್ರ ಯೇ ಯಜ್ಞೇನೇತ್ಯೇಕಾದಶರ್ಚಮನುವಾಕಾಪೇಕ್ಷಯಾ ದ್ವಿತೀಯಂ ಸೂಕ್ತಂ। ಮಾನವಸ್ಯ ನಾಭಾನೇದಿಷ್ಠಸ್ಯಾರ್ಷಂ। ಆದಿತಶ್ಚತಸ್ರೋ ಜಗತ್ಯಃ। ಪಂಚಮ್ಯನುಷ್ಟುಪ್। ಷಷ್ಠೀ ಬೃಹತೀ।**

**ಸಪ್ತಮೀ ಸತೋಬೃಹತೀ । ಅಷ್ಟಮೀನವಮ್ಯಾವನುಷ್ಟುಭೌ । ದಶಮೀ ಗಾಯತ್ರೀ । ಏಕಾದಶೀ ತ್ರಿಷ್ಟುಪ್ । ಆದಿತಃ ಷಣ್ಣಾಂ ವಿಶ್ವೇ ದೇವಾ ಅಂಗಿರಸೋ ವಾ ದೇವತಾ । ಸಪ್ತಮೀ ವೈಶ್ವದೇವೀ । ಅಷ್ಟಮ್ಯಾದ್ಯಾಸು ಚತಸೃಷು ಸಾವರ್ಣೇರ್ಮಹಾರಾಜಸ್ಯ ದಾನಂ ಸ್ತೂಯತೇ। ಅತಸ್ತಾಸ್ತದ್ದೇವತಾಕಾಃ। ತಥಾ ಚಾನುಕ್ರಮ್ಯತೇ। ಯೇ ಯಜ್ಞೇನೈಕಾದಶಾದ್ಯಾಃ ಷಳಂಗಿರಸಾಂ ಸ್ತುತಿರ್ವಾಂತ್ಯಾ ತ್ರಿಷ್ಟುಪ್ಪಂಚಮ್ಯನುಷ್ಟುಪ್ಪ್ರಗಾಥೋಽನುಷ್ಟುಭೌ ಗಾಯತ್ರೀ ಚತಸ್ರೋಽನ್ತ್ಯಾಃ ಸಾವರ್ಣೇರ್ದಾನಸ್ತುತಿರಿತಿ॥ ಷಷ್ಠೇಽಹನಿ ವೈಶ್ವದೇವಶಸ್ತ್ರ ಏತತ್ಸೂಕ್ತಂ । ಸೂತ್ರಿತಂ ಚ । ಇದಮಿತ್ಥಾ ರೌದ್ರಮಿತಿ ಪ್ರಾಗುಪೋತ್ತಮಾಯಾ ಯೇ ಯಜ್ಞೇನೇತ್ಯಾವಪತೇ । ಆ. ೮-೧ । ಇತಿ ॥**

**ಅನುವಾದವು**—ಹಿಂದಿನ ಅಧ್ಯಾಯದಲ್ಲಿ ಹತ್ತನೆಯ ಮಂಡಲದ ಅರವತ್ತೊಂದು ಸೂಕ್ತಗಳು ಮುಗಿದಿರುವವು. ಈಗ **ಯೇ ಯಜ್ಞೇನ** ಎಂಬ ಅರವತ್ತೆರಡನೆಯ ಸೂಕ್ತದಿಂದ ಈ ಅಧ್ಯಾಯವು ಪ್ರಾರಂಭಿಸಲ್ಪಡುವುದು. ಈ ಸೂಕ್ತವು ಹತ್ತನೆಯ ಮಂಡಲದ ಐದನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಮನುಪುತ್ರನಾದ ನಾಭಾನೇದಿಷ್ಠನು ಋಷಿಯು ; ಈ ಸೂಕ್ತದ ಮೊದಲಿನ ನಾಲ್ಕು ಋಕ್ಕುಗಳು ಜಗತೀಛಂದಸ್ಕವು : ಐದನೆಯದು ಅನುಷ್ಟುಪ್‌ಛಂದಸ್ಕವು ; ಆರನೆಯದು ಬೃಹತೀಛಂದಸ್ಕವು ; ಏಳನೆಯದು ಸತೋಬೃಹತೀಛಂದಸ್ಕವು ; ಎಂಟು ಮತ್ತು ಒಂಭತ್ತನೆಯ ಋಕ್ಕುಗಳು ಅನುಷ್ಟುಪ್‌ಛಂದಸ್ಕವು ; ಹತ್ತನೆಯದು ಗಾಯತ್ರೀಛಂದಸ್ಕವು ; ಹನ್ನೊಂದನೆಯದು ತ್ರಿಷ್ಟುಪ್‌ಛಂದಸ್ಕವು. ಈ ಸೂಕ್ತದ ಮೊದಲಿನ ಆರು ಋಕ್ಕುಗಳಿಗೆ ವಿಶ್ವೇದೇವತೆಗಳು ಅಥವಾ ಅಂಗಿರಸರು ದೇವತೆಗಳು ; ಏಳನೆಯ ಋಕ್ಕು ವಿಶ್ವೇದೇವತಾಕವು; ಎಂಟನೆಯ ಋಕ್ಕಿನಿಂದ ಮುಂದಿನ ನಾಲ್ಕು ಋಕ್ಕುಗಳಲ್ಲಿ (೮-೧೧ ಋಕ್ಕುಗಳಲ್ಲಿ) ಸಾವರ್ಣಿ ಎಂಬ ಹೆಸರಿನ ಮಹಾರಾಜನ ದಾನಸ್ತುತಿಯ ವರ್ಣನೆ ಇರುವುದರಿಂದ ಆ ನಾಲ್ಕು ಋಕ್ಕುಗಳಿಗೆ ಆ ದಾನಸ್ತುತಿಯೇ ದೇವತೆಯು; ಅನುಕ್ರಮಣಿಕೆಯಲ್ಲಿ—**ಯೇ ಯಜ್ಞೇನೈಕಾದಶಾದ್ಯಾಃ ಷಳಂಗಿರಸಾಂ ಸ್ತುತಿರ್ವಾಂತ್ಯಾ ತ್ರಿಷ್ಟುಪ್ಪಂಚಮ್ಯನುಷ್ಟುಪ್ಪ್ರಗಾಥೋಽನುಷ್ಟುಭೌ ಗಾಯತ್ರೀ ಚತಸ್ರೋಽನ್ತ್ಯಾಃ ಸಾವರ್ಣೇರ್ದಾನಸ್ತುತಿಃ** ಎಂದು ಹೇಳಿರುವುದು. ಯಜ್ಞದ ಆರನೇ ದಿವಸ ವೈಶ್ವದೇವಶಸ್ತ್ರಮಂತ್ರಗಳನ್ನು ಪಠಿಸುವಾಗ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಇದಮಿತ್ಥಾ ರೌದ್ರಮಿತಿ ಪ್ರಾಗುಪೋತ್ತಮಾಯಾ ಯೇ ಯಜ್ಞೇನೇತ್ಯಾವಪತೇ** ಎಂಬ ಸೂತ್ರದಿಂದ (ಆ.೮-೧) ವಿವೃತವಾಗಿರುವುದು.

## ಸೂಕ್ತ—೬೨

ಮಂಡಲ—೧೦ ॥ ಅನುವಾಕ—೫ ॥ ಸೂಕ್ತ—೬೨ ॥
ಅಷ್ಟಕ—೮ ॥ ಅಧ್ಯಾಯ—೨ ॥ ವರ್ಗ—೧, ೨ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥

ಋಷಿಃ—ನಾಭಾನೇದಿಷ್ಠೋ ಮಾನವಃ ॥

ದೇವತಾ—೧-೬. ವಿಶ್ವೇದೇವಾ ಅಂಗಿರಸೋ ವಾ। ೭. ವಿಶ್ವೇದೇವಾಃ। ೮-೧೧. ಸಾವರ್ಣೇರ್ದಾನಸ್ತುತಿಃ ॥

ಛಂದಃ—೧-೪. ಜಗತೀ । ೫, ೮, ೯. ಅನುಷ್ಟುಪ್ । ೬. ಬೃಹತೀ । ೭. ಸತೋಬೃಹತೀ । ೧೦. ಗಾಯತ್ರೀ । ೧೧. ತ್ರಿಷ್ಟುಪ್ ॥

ಸಂಹಿತಾಪಾಠಃ

ಯೇ ಯಜ್ಞೇನ ದಕ್ಷಿಣಯಾ ಸಮಕ್ತಾ ಇಂದ್ರಸ್ಯ ಸಖ್ಯಮಮೃತತ್ವಮಾನಶ।
ತೇಭ್ಯೋ ಭದ್ರಮಂಗಿರಸೋ ವೋ ಅಸ್ತು ಪ್ರತಿ ಗೃಭ್ಣೀತ ಮಾನವಂ
ಸುಮೇಧಸಃ ॥ ೧ ॥

ಪದಪಾಠಃ

ಯೇ । ಯಜ್ಞೇನ । ದಕ್ಷಿಣಯಾ । ಸಂऽಅಕ್ತಾಃ । ಇಂದ್ರಸ್ಯ । ಸಖ್ಯಂ । ಅಮೃತ್ऽತ್ವಂ । ಆನಶ ।
ತೇಭ್ಯಃ । ಭದ್ರಂ । ಅಂಗಿರಸಃ । ವಃ । ಅಸ್ತು । ಪ್ರತಿ । ಗೃಭ್ಣೀತ । ಮಾನವಂ । ಸುऽಮೇಧಸಃ ॥ ೧ ॥

ಸಾಯಣಭಾಷ್ಯಂ

ನಾಭಾನೇದಿಷ್ಠಃ ಸ್ವಪಿತ್ರಾ ಮನುನಾಭ್ಯನುಜ್ಞಾತಃ ಸತ್ರಮಾಸೀನಾನಂಗಿರಸೋಽಭ್ಯೇತ್ಯ ಮಾಂ ಪ್ರತಿಗೃಹ್ಣೀತ ಯುಷ್ಮಭ್ಯಂ ಯಜ್ಞಂ ಪ್ರಜ್ಞಾಪಯಾಮೀತಿ ಯದುಕ್ತವಾನ್ ತದುಚ್ಯತೇ। ಇತಿಹಾಸಸ್ತ್ವಿದಮಿತ್ಥೇತಿ ಪೂರ್ವಸೂಕ್ತೇ ನಾಭಾನೇದಿಷ್ಠಂ ಶಂಸತಿ ನಾಭಾನೇದಿಷ್ಠಂ ವೈ ಮಾನವಮಿತಿ ಬ್ರಾಹ್ಮಣಾನುಸಾರೇಣ ಮನುಃ ಪುತ್ರೇಭ್ಯೋ ದಾಯಂ ವ್ಯಭಜದಿತಿ ತೈತ್ತಿರೀಯಬ್ರಾಹ್ಮಣಾನುಸಾರೇಣ ಚ ಸಪ್ರಪಂಚಮಭಿಹಿತಃ। ತಥಾ ಚಾಸ್ಯಾ ಋಚೋಽಯಮರ್ಥಃ। ಯಜ್ಞೇನ ಯಜನೀಯೇನ ಹವಿಷಾ ದಕ್ಷಿಣಯರ್ತ್ವಿಗ್ಭ್ಯೋ ದೇಯಯಾ ಸಮಕ್ತಾಃ ಸಂಗತಾ ಯೇಽಹೀನೈಕಾಹಸತ್ರಾಣಿ ಕುರ್ವಂತೋ ಯೂಯಮಿಂದ್ರಸ್ಯ ಸಖ್ಯಂ ಸಖಿಕರ್ಮ ಅತ ಏವಾಮೃತತ್ವಮಮರಣಧರ್ಮಂ ದೇವತ್ವಮಾನಶ ಆನಶಿಧ್ವೇ ಪ್ರಾಪ್ತಾಃ ಸ್ಥ ॥ ಅಶ್ನೋತೇರ್ಲಿಟಿ ಮಧ್ಯಮೋ ವ್ಯತ್ಯಯೇನ ಬಹುವಚನಂ। ಅಶ್ನೋತೇಶ್ಚೇತಿ ನುಡಾಗಮಃ। ಯದ್ವೃತ್ತಯೋಗಾದನಿಘಾತಃ ॥ ಹೇ ಅಂಗಿರಸಃ ತೇಭ್ಯೋ ವೋ ಯುಷ್ಮಭ್ಯಂ ಭದ್ರಂ ಕಲ್ಯಾಣಂ ಕರ್ಮಾಸ್ತು। ಹೇ ಸುಮೇಧಸಃ ಸುಪ್ರಜ್ಞಾ ಹೇ ಅಂಗಿರಸಃ ತೇ ಯೂಯಮಿದಾನೀಮಾಗತಂ ಮಾನವಂ ಮನೋಃ ಪುತ್ರಂ ಮಾಂ ಪ್ರತಿ ಗೃಭ್ಣೀತ। ಪ್ರತಿಗೃಹ್ಣೀತ। ಮಯಿ ಪ್ರತಿಗೃಹೀತೇ ಸತಿ ಯಜ್ಞಂ ಸಾಧು ಕರಿಷ್ಯಾಮೀತಿ ತದರ್ಥಂ ಪ್ರತಿಗೃಹ್ಣೀತ ॥

ಪ್ರತಿಪದಾರ್ಥ

**ಯಜ್ಞೇನ**—ಯಜ್ಞಾರ್ಹವಾದ ಹವಿಸ್ಸಿನಿಂದಲೂ । **ದಕ್ಷಿಣಾಯ**—ಋತ್ವಿಕ್ಕುಗಳಿಗೆ ಕೊಡಬೇಕಾದ ಸಂಭಾವನಾರೂಪದ ಧನದಿಂದಲೂ । **ಸಮಕ್ತಾಃ**—ಕೂಡಿರುವ । **ಯೇ**—ಸತ್ರಯಾಗವನ್ನು ಮಾಡುತ್ತಿರುವ ಅಂಗಿರಸರಾದ ನೀವು । **ಇಂದ್ರಸ್ಯ**—ಇಂದ್ರನ । **ಸಖ್ಯಂ**—ಸ್ನೇಹವನ್ನೂ । **ಅಮೃತತ್ವಂ**—ಮರಣವಿಲ್ಲದಿರುವ ದೇವತ್ವವನ್ನೂ । **ಆನಶ**—ಪಡೆದಿದ್ದೀರಿ । **ತೇಭ್ಯಃ ವಃ**—ಅಂತಹ ನಿಮಗೆ । **ಭದ್ರಂ**—ಮಂಗಳವು ಅಥವಾ ಶ್ರೇಯಸ್ಸು । **ಅಸ್ತು**—ಉಂಟಾಗಲಿ । **ಸುಮೇಧಸಃ**—ಬುದ್ಧಿಶಾಲಿಗಳಾದ । (ಹೇ) **ಅಂಗಿರಸಃ**—ಎಲೈ ಅಂಗಿರಾಋಷಿಗಳೇ, ನೀವು । **ಮಾನವಂ**—ಮನುವಿನ ಪುತ್ರನಾದ ನನ್ನನ್ನು । **ಪ್ರತಿಗೃಭ್ಣೀತ**—ಸ್ವೀಕರಿಸಿರಿ.

ಭಾವಾರ್ಥ

ಎಲೈ ಅಂಗಿರಾಋಷಿಗಳೇ, ಯಜ್ಞಾರ್ಹವಾದ ಹವಿಸ್ಸನ್ನೂ, ಋತ್ವಿಕ್ಕುಗಳಿಗೆ ಕೊಡಬೇಕಾದ ದಕ್ಷಿಣೆಗಾಗಿ ಧನವನ್ನೂ ಸಿದ್ಧಪಡಿಸಿಕೊಂಡಿರುವ ನೀವು ಇಂದ್ರನ ಸ್ನೇಹವನ್ನೂ, ಮರಣವಿಲ್ಲದಿರುವ-ದೇವತ್ವವನ್ನೂ ಸಂಪಾದಿಸಿದ್ದೀರಿ. ಇಂತಹ ಗುಣವಿಶಿಷ್ಟರಾದ ನಿಮಗೆ ಮಂಗಳವುಂಟಾಗಲಿ. ಮೇಧಾವಿಗಳಾದ ಎಲೈ ಅಂಗಿರಸರೇ, ನಿಮ್ಮ ಬಳಿಗೆ ಬಂದಿರುವ ಮನುಪುತ್ರನಾದ ನನ್ನನ್ನು ಸ್ವೀಕರಿಸಿರಿ ಎಂದರೆ ನಾನು ಹೇಳುವ ಮಾತನ್ನು ಆದರದಿಂದ ಕೇಳಿರಿ.

English Translation

You, who associated with sacrifice and pious donotions, have acquired the friendship of Indra and immortality ; upon you, Angirasas, may good fortune attend ; welcome, sages, the son of Manu,

ವಿಶೇಷವಿಷಯಗಳು

ಹಿಂದಿನ ಸೂಕ್ತದ ಪೀಠಿಕೆಯಲ್ಲಿ ಹೇಳಿರುವಂತೆ ಈ ಸೂಕ್ತದ್ರಷ್ಟೃವಾದ ನಾಭಾನೇದಿಷ್ಠಋಷಿಯು ತನ್ನ ತಂದೆಯ ಮಾತಿನಂತೆ ಅಂಗಿರಾಋಷಿಗಳು ಯಜ್ಞವಮಾಡುತ್ತಿರುವ ಪ್ರದೇಶಕ್ಕೆ ಬಂದು ಅವರನ್ನು ಸಂಬೋಧಿಸಿ ಈರೀತಿ ಹೇಳಿರುವನು. ಅವನು ಹೇಳಿದ ವಿಷಯವು ಈ ಋಕ್ಕಿನಲ್ಲಿಯೂ, ಇದರ ಮುಂದಿನ ಮೂರು ಋಕ್ಕುಗಳಲ್ಲಿಯೂ ಉಕ್ತವಾಗಿದೆ. ವಿಶೇಷವಿವರಣೆಗಾಗಿ ೬೧ ನೆಯ ಸೂಕ್ತದ ಪೀಠಿಕೆಯನ್ನು ನೋಡಿ.

ಸಂಹಿತಾಪಾಠಃ

ಯ ಉದಾಜನ್ಪಿತರೋ ಗೋಮಯಂ ವಸ್ವೃತೇನಾಭಿಂದನ್ಪರಿವತ್ಸರೇ ವಲಂ ।
ದೀರ್ಘಾಯುತ್ವಮಂಗಿರಸೋ ವೋ ಅಸ್ತು ಪ್ರತಿ ಗೃಭ್ಣೀತ ಮಾನವಂ
ಸುಮೇಧಸಃ ॥ ೨ ॥

ಪದಪಾಠಃ

ಯೇ । ಉತ್ಽಆಜನ್ । ಪಿತರಃ । ಗೋಽಮಯಂ । ವಸು । ಋತೇನ । ಅಭಿಂದನ್ । ಪರಿವತ್ಸರೇ
ವಲಂ ।
ದೀರ್ಘಾಯುಽತ್ವಂ । ಅಂಗಿರಸಃ । ವಃ । ಅಸ್ತು । ಪ್ರತಿ । ಗೃಭ್ಣೀತ । ಮಾನವಂ । ಸುಽಮೇಧಸಃ ॥ ೨ ॥

ಸಾಯಣಭಾಷ್ಯಂ

ಯೇ ಅಂಗಿರಸಃ ಪಿತರೋಽಸ್ಮಾಕಂ ಪೂರ್ವಜತ್ವೇನ ಪಿತೃಭೂತಾ ಯೇ ಯೂಯಂ ಗೋಮಯಂ ಗವಾತ್ಮಕಂ ಪಣಿಭಿರಪಹೃತಂ ವಸು ಧನಮುದಾಜನ್ ತೈರಧಿಷ್ಠಿತಾತ್ಪರ್ವತಾದುದಗಮಯನ್ । ಕಿಂಚರ್ತೇನ ಸತ್ಯಭೂತೇನ ಯಜ್ಞೇನ ಪರಿವತ್ಸರೇ ಪರ್ಯಾಗತೇ ವತ್ಸರೇ ಸಂಪೂರ್ಣೇ । ಸತ್ರಾಂತೇ

**ಇತ್ಯರ್ಥಃ । ತತ್ರ ವಲಂ ವಲನಾಮಾನಂ ಗವಾಮಪಹರ್ತಾರಮಸುರಮಭಿಂದನ್ ವ್ಯನಾಶಯನ್ ತೇಭ್ಯೋ ವೋ ಯುಷ್ಮಭ್ಯಂ ದೀರ್ಘಾಯುತ್ವಂ ಪ್ರಭೂತಜೀವನಮಸ್ತು । ಶೇಷಂ ಪೂರ್ವವತ್ ॥**

ಪ್ರತಿಪದಾರ್ಥ

**ಅಂಗಿರಸಃ**—ಎಲೈ ಅಂಗಿರಾಋಷಿಗಳೇ । **ಪಿತರಃ**—ನಮಗೆ ಹಿರಿಯರಾದುದರಿಂದ ಪಿತೃಗಳೆಂದು ಕರೆಯಲ್ಪಡಲು ಅರ್ಹರಾದ । **ಯೇ**—(ಯಾವ) ನೀವು । **ಗೋಮಯಂ**—ಪಣಿಗಳಿಂದ ಅಪಹರಿಸಲ್ಪಟ್ಟ ಗೋವುಗಳ ರೂಪದಲ್ಲಿರುವ । **ವಸು**—ಧನವನ್ನು । **ಉದಾಜನ್**—ಪರ್ವತಪ್ರದೇಶದಿಂದ ಈಚೆಗೆ ಹೊರಡಿಸಿ ತಂದಿರೋ ಮತ್ತು । **ಋತೇನ**—ಯಜ್ಞದಿಂದ ಎಂದರೆ ಯಜ್ಞಾನುಷ್ಠಾನದಿಂದ । **ಪರಿವತ್ಸರೇ**—ಒಂದು ಸಂವತ್ಸರಕಾಲವು ನಿಮ್ಮಿಂದ ಕಳೆಯಲ್ಪಟ್ಟತೋ (ಮತ್ತು ನೀವು) । **ವಲಂ**—ವಲನೆಂಬ ಅಸುರನನ್ನು । **ಅಭಿಂದನ್**—ನಾಶಮಾಡಿದಿರೋ । **ವಃ**—ಅಂತಹ ನಿಮಗೆ । **ದೀರ್ಘಾಯುತ್ವಂ**—ದೀರ್ಘಾಯುಷ್ಯವು । **ಅಸ್ತು**—ಉಂಟಾಗಲಿ । **ಸುಮೇಧಸಃ**—ಮೇಧಾವಿಗಳಾದ ಎಲೈ ಅಂಗಿರಸರೇ ನೀವು । **ಮಾನವಂ**—ಮನುಪುತ್ರನಾದ ನನ್ನನ್ನು । **ಪ್ರತಿ ಗೃಭ್ಣೀತ**—ಸ್ವೀಕರಿಸಿರಿ.

ಭಾವಾರ್ಥ

ಎಲೈ ಅಂಗಿರಸರೇ, ನಮಗೆ ಹಿರಿಯರಾದುದರಿಂದ ನೀವು ಪಿತೃಗಳಂತೆ ಪೂಜ್ಯರಾಗಿದ್ದೀರಿ. ನೀವು ಪಣಿಗಳಿಂದ ಅಪಹೃತವಾದ ಗೋವುಗಳನ್ನು ಅವುಗಳನ್ನು ಬಚ್ಚಿಟ್ಟಿದ್ದ ಪರ್ವತಪ್ರದೇಶದಿಂದ ಹೊರಕ್ಕೆ ತಂದಿದ್ದೀರಿ. ಒಂದು ಸಂವತ್ಸರದವರೆಗೂ ನೀವು ನೆರವೇರಿಸುತ್ತಿದ್ದ ಸತ್ತ್ರಯಾಗವನ್ನು ಪೂರ್ಣಮಾಡಿದ್ದೀರಿ. ವಲನೆಂಬ ಅಸುರನನ್ನು ನಾಶಮಾಡಿದ್ದೀರಿ. ಇಂತಹ ನಿಮಗೆ ದೀರ್ಘಾಯುಸ್ಸುಂಟಾಗಲಿ. ಮನುಪುತ್ರನಾದ ನನ್ನನ್ನು ಸ್ವೀಕರಿಸಿರಿ.

English Translalion

May length of life be yours, Angirasas, our progenitors, who drove forth the wealth of cattle, and by means of your sacrifice when the year was ended, demolished (the Asura) Bala : welcome, sages, the son of Manu.

ವಿಶೇಷವಿಷಯಗಳು

ವಲನೆಂಬ ಅಸುರನ ವಿಷಯವನ್ನು ನಾವು ಋ. ಸಂ. ಭಾಗ 5, ಪುಟ 692 ಮತ್ತು 14-634 ಪುಟಗಳಲ್ಲಿಯೂ ವಿವರಿಸಿದೇವೆ.

ಸಂಹಿತಾಪಾಠಃ

**ಯ ಋತೇನ ಸೂರ್ಯಮಾರೋಹಯನ್ ದಿವ್ಯಪ್ರಥಯನ್ಪೃಥಿವೀಂ ಮಾತರಂ ವಿ ।**
**ಸುಪ್ರಜಾಸ್ತ್ವಮಂಗಿರಸೋ ವೋ ಅಸ್ತು ಪ್ರತಿ ಗೃಭ್ಣೀತ ಮಾನವಂ ಸುಮೇಧಸಃ ॥ ೩ ॥**

ಪದಪಾಠಃ

ಯೇ । ಋತೇನ । ಸೂರ್ಯಂ । ಆ । ಅರೋಹಯನ್ । ದಿವಿ । ಅಪ್ರಥಯನ್ । ಪೃಥಿವೀಂ । ಮಾತರಂ । ವಿ ।

ಸುಪ್ರಜಾಃऽತ್ವಂ । ಅಂಗಿರಸಃ । ವಃ । ಅಸ್ತು । ಪ್ರತಿ । ಗೃಭ್ಣೀತ । ಮಾನವಂ । ಸುऽಮೇಧಸಃ ॥ ೩ ॥

ಸಾಯಣಭಾಷ್ಯಂ

ಹೇ ಅಂಗಿರಸಃ ಯೇ ಭವಂತ ಋತೇನ ಸತ್ಯಭೂತೇನ ಯಜ್ಞೇನ ದಿವಿ ದ್ಯುಲೋಕೇ ಸೂರ್ಯಂ ಸುಷ್ಠು ಸರ್ವಸ್ಯ ಪ್ರೇರಕಮಾದಿತ್ಯಮಾರೋಹಯನ್ ಅಸ್ಥಾಪಯನ್ ಕಿಂಚ ಮಾತರಂ ಸರ್ವೇಷಾಂ ನಿರ್ಮಾತ್ರೀಂ ಪೃಥಿವೀಂ ವ್ಯಪ್ರಥಯನ್ ಪ್ರಸಿದ್ಧಾಮಕುರ್ವನ್ ಸತ್ರಾದಿಕರ್ಮಕರಣೇನ ತೇಭ್ಯೋ ಯುಷ್ಮಭ್ಯಂ ಸುಪ್ರಜಾಸ್ತ್ವಂ ಸುಪುತ್ರತ್ವಮಸ್ತು॥ ನಿತ್ಯಮಸಿಚ್ ಪ್ರಜಾಮೇಧಯೋರಿತ್ಯಸಿಚ್ಸಮಾಸಾಂತಃ। ತಸ್ಮಾದ್ಭಾವಪ್ರತ್ಯಯಃ ॥

ಪ್ರತಿಪದಾರ್ಥ

**ಅಂಗಿರಸಃ**—ಎಲೈ ಅಂಗಿರಸರೇ । **ಯೇ**—(ಯಾವ) ನೀವು । **ಋತೇನ**—ಸತ್ಯಸ್ವರೂಪವಾದ ಯಜ್ಞಾನುಷ್ಠಾನಪ್ರಭಾವದಿಂದ । **ದಿವಿ**—ಸ್ವರ್ಗ (ಅಂತರಿಕ್ಷ) ದಲ್ಲಿ । **ಸೂರ್ಯಂ**—ಸರ್ವಪ್ರೇರಕನಾದ ಆದಿತ್ಯನನ್ನು । **ಆರೋಹಯನ್**—ಸ್ಥಾಪಿಸಿದ್ದೀರಿ (ಮತ್ತು) । **ಮಾತರಂ**—ಸರ್ವರಿಗೂ ಮಾತೃಸ್ವರೂಪವಾದ । **ಪೃಥಿವೀಂ**—ಪೃಥಿವಿಯನ್ನು । **ವಿ ಅಪ್ರಥಯನ್**—ನಿಮ್ಮ ಸತ್ರಾದಿಯಾಗಗಳಿಂದ ಪ್ರಸಿದ್ಧವನ್ನಾಗಿ ಮಾಡಿದ್ದೀರಿ । **ವಃ**—ಅಂತಹ ನಿಮಗೆ । **ಸುಪ್ರಜಾಸ್ತ್ವಂ**—ಉತ್ತಮವಾದ ಪುತ್ರಸಂತತಿಯು । **ಅಸ್ತು**—ಉಂಟಾಗಲಿ **ಸುಮೇಧಸಃ**—ಮೇಧಾವಿಗಳಾದ ಎಲೈ ಅಂಗಿರಸರೇ । **ಮಾನವಂ**—ಮನುಪುತ್ರನಾದ ನನ್ನನ್ನು । **ಪ್ರತಿ ಗೃಭ್ಣೀತ**— ಪರಿಗ್ರಹಿಸಿರಿ.

ಭಾವಾರ್ಥ

ಎಲೈ ಅಂಗಿರಸರೇ, ಸತ್ಯಸ್ವರೂಪವಾದ ನಿಮ್ಮ ಯಜ್ಞಾನುಷ್ಠಾನಮಹಿಮೆಯಿಂದ ನೀವು ಸರ್ವಪ್ರೇರಕನಾದ ಆದಿತ್ಯನನ್ನು ಸ್ವರ್ಗ (ಅಂತರಿಕ್ಷ) ದಲ್ಲಿ ಸ್ಥಾಪಿಸಿದ್ದೀರಿ. ಸರ್ವರಿಗೂ ಮಾತೃಸ್ವರೂಪಿಯಾದ ಈ ಭೂಮಿಯನ್ನು ನಿಮ್ಮ ಯಜ್ಞಾನುಷ್ಠಾನಾದಿ ಸತ್ಕರ್ಮಗಳಿಂದ ಪ್ರಸಿದ್ಧವನ್ನಾಗಿ ಮಾಡಿದ್ದೀರಿ. ಎಲೈ ಮೇಧಾವಿಗಳಾದ ಅಂಗಿರಸರೇ, ನಿಮಗೆ ಉತ್ತಮವಾದ ಪ್ರಜಾಸಂತತಿಯು ಉಂಟಾಗಲಿ. ಮನುಪುತ್ರನಾದ ನನ್ನನ್ನು ಸ್ವೀಕರಿಸಿ.

English Translation

May the possession of posterity be yours, Angirasas, who elevated by the (power) of sacrifice the Sun in heaven, and made the maternal earth renowned : welcome, sages, the son of Manu.

ಸಂಹಿತಾಪಾಠಃ

ಅಯಂ ನಾಭಾ ವದತಿ ವಲ್ಗು ವೋ ಗೃಹೇ ದೇವಪುತ್ರಾ ಋಷಯಸ್ತಚ್ಛೃಣೋತನ ।

ಸುಬ್ರಹ್ಮಣ್ಯಮಂಗಿರಸೋ ವೋ ಅಸ್ತು ಪ್ರತಿ ಗೃಭ್ಣೀತ ಮಾನವಂ ಸುಮೇ-
ಧಸಃ ॥ ೪ ॥

ಪದಪಾಠಃ

ಅಯಂ । ನಾಭಾ । ವದತಿ । ವಲ್ಗು । ವಃ । ಗೃಹೇ । ದೇವಽಪುತ್ರಾಃ । ಋಷಯಃ । ತತ್ । ಶೃಣೋತನ ।
ಸುಽಬ್ರಹ್ಮಣ್ಯಂ । ಅಂಗಿರಸಃ । ವಃ । ಅಸ್ತು । ಪ್ರತಿ । ಗೃಭ್ಣೀತ । ಮಾನವಂ । ಸುಽಮೇಧಸಃ ॥ ೪ ॥

ಸಾಯಣಭಾಷ್ಯಂ

ಹೇ ದೇವಪುತ್ರಾ ದೇವಾನಾಂ ಪುತ್ರಾ ಅಗ್ನೇಃ ಪುತ್ರಾ ಋಷಯೋಽತೀಂದ್ರಿಯಾರ್ಥಸ್ಯ ದ್ರಷ್ಟಾರೋ ಹೇಽಂಗಿರಸಃ ಅಯಂ ನಾಭಾ ನಾಭಾನೇದಿಷ್ಠಃ ಪುರೋವರ್ತೀ ಜನೋ ವೋ ಯುಷ್ಮಾಕಂ ಗೃಹೇ ಗೃಹಭೂತೇ ಯಜ್ಞೇ ವಲ್ಗು ಕಲ್ಯಾಣಂ ವಚೋ ವದತಿ । ತದ್ವಾಕ್ಯಂ ಯೂಯಂ ಶೃಣೋತನ । ಮಹಾತಾದರೇಣ ಶೃಣುತ ॥ ಶ್ರು ಶ್ರವಣೇ । ತಪ್ತನಪ್ತನಥನಾಶ್ಚೇತಿ ತನಬಾದೇಶಃ ॥ ತೇಭ್ಯೋ ಯುಷ್ಮಭ್ಯಂ ಸುಬ್ರಹ್ಮಣ್ಯಂ ಶೋಭನಂ ಬ್ರಹ್ಮವರ್ಚಸಮಸ್ತು । ಇದಾನೀಮಾಗತಂ ಮಾನವಂ ಮಾಂ ಪ್ರತಿ ಗೃಭ್ಣೀತ । ಪ್ರತಿಗೃಹ್ಣೀತ ॥

ಪ್ರತಿಪದಾರ್ಥ

**ದೇವಪುತ್ರಾಃ**—ಅಗ್ನಿದೇವನ ಪುತ್ರರಾದವರೂ । **ಋಷಯಃ**—ಅತೀಂದ್ರಿಯವಿಷಯದ್ರಷ್ಟೃಗಳೂ ಆದ । **ಅಂಗಿರಸಃ**—ಎಲೈ ಅಂಗಿರಸರೇ । **ಅಯಂ ನಾಭಾ**—ಈ ನಾಭಾನೇದಿಷ್ಠನೆಂಬುವನು (ನಾನು) । **ವಃ**—ನಿಮ್ಮ । **ಗೃಹೇ**—ಯಜ್ಞಗೃಹದಲ್ಲಿ । **ವಲ್ಗು**—ಕಲ್ಯಾಣಾತ್ಮಕವಾದ ಮಾತನ್ನು । **ವದತಿ**—ಹೇಳುತ್ತಾನೆ । **ತತ್**—ಆ ವಾಕ್ಯವನ್ನು ನೀವು । **ಶೃಣೋತನ**—ಆದರದಿಂದ ಕೇಳಿರಿ । **ಅಂಗಿರಸಃ**—ಎಲೈ ಅಂಗಿರಸರೇ । **ವಃ**—ನಿಮಗೆ । **ಸುಬ್ರಹ್ಮಣ್ಯಂ**—ಉತ್ತಮವಾದ ಬ್ರಹ್ಮವರ್ಚಸ್ಸು । **ಅಸ್ತು**—ಉಂಟಾಗಲಿ । **ಸುಮೇಧಸಃ**—ಎಲೈ ಮೇಧಾವಿಗಳೇ । **ಮಾನವಂ**—ಮನುಪುತ್ರನಾದ ನನ್ನನ್ನು । **ಪ್ರತಿ ಗೃಭ್ಣೀತ**—ಸ್ವೀಕರಿಸಿರಿ.

ಭಾವಾರ್ಥ

ಅಗ್ನಿದೇವನ ಪುತ್ರರೂ, ಅತೀಂದ್ರಿಯವಸ್ತುಜ್ಞಾನಿಗಳೂ ಆದ ಎಲೈ ಅಂಗಿರಸರೇ, ಈಗ ನಿಮ್ಮೊಡನೆ ಸಂಭಾಷಿಸುತ್ತಿರುವ ನಾಭಾನೇದಿಷ್ಠನು (ನಾನು) ನಿಮ್ಮ ಯಜ್ಞಗೃಹದಲ್ಲಿ ಕಲ್ಯಾಣಾತ್ಮಕವಾದ ಒಂದು ಮಾತನ್ನು ಹೇಳುತ್ತಾನೆ. ಅದನ್ನು ಆದರದಿಂದ ಕೇಳಿರಿ. ನಿಮಗೆ ಉತ್ತಮವಾದ ಬ್ರಹ್ಮವರ್ಚಸ್ಸು ಉಂಟಾಗಲಿ. ಎಲೈ ಮೇಧಾವಿಗಳಾದ ಅಂಗಿರಸರೇ, ಮನುಪುತ್ರನಾದ ನನ್ನನ್ನು ಸ್ವೀಕರಿಸಿ ಎಂದರೆ ನಾನು ಹೇಳುವ ಮಾತನ್ನು ಆದರದಿಂದ ಗಮನಿಸಿ ಕೇಳಿ.

## English Translation

Rishis, sons of the gods, this (Nabhanedishtha) addresses to you in the house of (sacrifice) his bendiction ; here it : may divine splendour, Angirasas, be yours : welcome, sages the, son of Manu.

ಸಂಹಿತಾಪಾಠಃ

ವಿರೂಪಾಸ ಇದೃಷಯಸ್ತ ಇದ್ಗಂಭೀರವೇಪಸಃ ।

ತೇ ಅಂಗಿರಸಃ ಸೂನವಸ್ತೇ ಅಗ್ನೇಃ ಪರಿ ಜಜ್ಞಿರೇ ॥ ೫ ॥

ಪದಪಾಠಃ

ವಿಽರೂಪಾಸಃ । ಇತ್ । ಋಷಯಃ । ತೇ । ಇತ್ । ಗಂಭೀರಽವೇಪಸಃ ।

ತೇ । ಅಂಗಿರಸಃ । ಸೂನವಃ । ತೇ । ಅಗ್ನೇಃ । ಪರಿ । ಜಜ್ಞಿರೇ ॥ ೫ ॥

ಸಾಯಣಭಾಷ್ಯಂ

ಪರೋಕ್ಷಕೃತೇಯಮೃಗ್ಭಿರಾಹ । ಋಷಯಃ ಕರ್ಮಣಾಂ ದ್ರಷ್ಟಾರ ಏತ ಋಷಯೋ ವಿರೂಪಾಸ ಇದನ್ಯೋನ್ಯಂ ವರ್ಣತೋ ರೂಪತಶ್ಚ ನಾನಾರೂಪಾ ಭವಂತಿ । ತ ಇತ್ತ ಏವಾಮೀ ಅಂಗಿರಸೋ ಗಂಭೀರವೇಪಸಃ । ವೇಪ ಇತಿ ಕರ್ಮನಾಮ । ಗಂಭೀರಕರ್ಮಾಣೋ ಭವಂತಿ । ತ ಇಮೇಽಂಗಿರಸಃ ಸೂನವಃ ಪುತ್ರಾಃ ಖಲು । ತದೇವಾಹ । ತ ಇಮೇಽಗಿರಸೋಽಗ್ನೇಃ ಪರಿ ಜಜ್ಞಿರೇ। ಸರ್ವತೋ ಜಾತಾಃ ಪ್ರಾದುರ್ಭೂತಾಃ । ಯೋಽಂಗಾರಾ ಆಸಂಸ್ತೇಽಂಗಿರಸೋಽಭವನ್। ಐ. ಬ್ರಾ. ೩-೩೪ । ಇತಿ ಬ್ರಾಹ್ಮಣಂ । ಅತ್ರ ನಿರುಕ್ತಂ ಚ ದ್ರಷ್ಟವ್ಯಂ। ನಿ. ೩-೧೭ ॥

ಪ್ರತಿಪದಾರ್ಥ

**ಋಷಯಃ**—ಋಷಿಗಳಾದವರು । **ವಿರೂಪಾಸ ಇತ್**—ವರ್ಣದಲ್ಲಿಯೂ, ರೂಪದಲ್ಲಿಯೂ, ಆಕಾರದಲ್ಲಿಯೂ, ನಾನಾರೂಪವುಳ್ಳವರಾಗಿಯೇ ಇರುವರು । **ತ ಇತ್**—(ಆದ್ದರಿಂದ) ಈ ಅಂಗಿರಸರೂ । **ಗಂಭೀರವೇಪಸಃ**—ಗಂಭೀರ ಅಥವಾ ಗಹನವಾದ ಯಜ್ಞಾದಿಕರ್ಮಾನುಷ್ಠಾನಗಳಲ್ಲಿ ನಿರತರಾಗಿರುವರು । **ತೇ ಅಂಗಿರಸಃ**-ಈ ಅಂಗಿರಸಋಷಿಗಳು । **ಅಗ್ನೇಃ**—ಅಗ್ನಿಗೆ । **ಸೂನವಃ**—ಪುತ್ರರಾಗಿ । **ಪರಿ ಜಜ್ಞಿರೇ**—ಉತ್ಪನ್ನರಾಗಿದ್ದಾರೆ.

ಭಾವಾರ್ಥ

ವರ್ಣದಲ್ಲಿಯೂ, ರೂಪದಲ್ಲಿಯೂ, ಆಕಾರದಲ್ಲಿಯೂ ಋಷಿಗಳು ನಾನಾವಿಧವಾಗಿರುತ್ತಾರೆ. ಈ ಅಂಗಿರಸರು ಗಹನವಾದ ಯಜ್ಞಾನುಷ್ಠಾನಕರ್ಮಗಳಲ್ಲಿ ನಿರತರಾಗಿರುತ್ತಾರೆ. ಈ ಅಂಗಿರಸರು ಅಗ್ನಿಯ ಪುತ್ರರು ಎಂದರೆ ಅಗ್ನಿಗೆ ಪುತ್ರರಾಗಿ ಉತ್ಪನ್ನರಾಗಿದ್ದಾರೆ.

English Translation

These Rirhis, however different in form, are verily of profound piety: they are the Angirasas who have been born as the sons of Agni.

ವಿಶೇಷವಿಷಯಗಳು

ಯಾಸ್ಕರು ಅಂಗಿರಸಶಬ್ದಕ್ಕೆ ರೂಪನಿಷ್ಪತ್ತಿಯನ್ನು ತಿಳಿಸುತ್ತಾ **ಅಂಗಾರೇಷ್ವಂಗಿರಾಃ । ಅಂಗಾರಾ ಅಂಕನಾಃ ॥** (ನಿ. ೩-೧೭) ಎಂದು ಹೇಳಿದಾರೆ ಎಂದರೆ, ಅಂಗಾರ (ಕೆಂಡ) ಗಳಲ್ಲಿ ಉತ್ಪನ್ನರಾದುದರಿಂದ ಇವರಿಗೆ

**ಅಂಗಿರಾಃ** ಎಂಬ ಹೆಸರು ಬಂದಿದೆ. ಅಂಗಾರವೆಂದರೇನು ? ಇದನ್ನು ಇಟ್ಟ ಸ್ಥಳದಲ್ಲಿ ಆ ಸ್ಥಳವು ಕಪ್ಪಾಗುವುದರಿಂದ ಅಂಕನಾಃ ಎಂದು ಹೆಸರು ಎಂದು ಹೇಳಿ ಪ್ರಕೃತ ಋಕ್ಕನ್ನು ಈರೀತಿ ವಿವರಿಸಿದಾರೆ—

**ಬಹುರೂಪಾ ಋಷಯಸ್ತೇ ಗಂಭೀರಕರ್ಮಾಣೋ ವಾ ಗಂಭೀರಪ್ರಜ್ಞಾ ವಾ ತೇ ಅಂಗಿರಸಃ ಪುತ್ರಾಸ್ತೇ ಅಗ್ನೇರಧಿಜಜ್ಞಿರ ಇತ್ಯಗ್ನಿಜನ್ಮ ||**

(ನಿ. ೧೧-೧೭)

ಪ್ರಜಾಪತಿಯು ದ್ಯುಲೋಕಾಧಿದೇವತೆಯನ್ನು ಅಥವಾ ಉಷೋದೇವತೆಯನ್ನು ಕಾಮಿಸಿದಾಗ ಆ ಪ್ರಜಾಪತಿಯ ವೀರ್ಯವು ಸ್ಖಲನವಾಗಿ ಭೂಮಿಯ ಮೇಲೆ ಬಿದ್ದು ಒಂದು ದೊಡ್ಡ ಸರೋವರ ಆಕಾರದಲ್ಲಿ ನಿಂತಿತು. ಅದನ್ನು ದೇವತೆಗಳು ವೈಶ್ವಾನರಾಗ್ನಿಯ ಸಹಾಯದಿಂದ ಪ್ರಜ್ವಲಿತವನ್ನಾಗಿ ಮಾಡಲು ಆ ಪ್ರಜ್ವಲಿತಾಗ್ನಿಯಿಂದ ಆದಿತ್ಯ. ಭೃಗು, ಅಂಗಿರಸರು ಇವರ ಉತ್ಪತ್ತಿಯಾಯಿತೆಂದು ಐತರೇಯಬ್ರಾಹ್ಮಣದ (ಐ. ಬ್ರಾ. ೧೩-೩೪) ಉಪಾಖ್ಯಾನದಿಂದ ತಿಳಿಯಬಹುತ್ತದೆ. ಅಗ್ನಿಯಿಂದ ಅಥವಾ ಅಂಗಾರ (ಕೆಂಡ) ಗಳಿಂದ ಉತ್ಪನ್ನರಾದುದರಿಂದ ಈ ಋಷಿಗಳಿಗೆ ಅಂಗಿರಸರೆಂದು ಹೆಸರಾಯಿತು ಮತ್ತು ಇವರನ್ನು ಅಗ್ನಿಯ ಪುತ್ರರೆಂದೂ ಕರೆಯುವರು. ಅದನ್ನೇ ಇಲ್ಲಿ ಹೇಳಿದೆ, ಈ ಋಷಿಗಳು ಬಹುರೂಪಾಃ ಎಂದರೆ ನಾನಾವಿಧರೂಪವುಳ್ಳವರು ; ಗಂಭೀರವೇಪಸಃ ಎಂದರೆ ಗಂಭೀರವಾದ ಕರ್ಮಗಳನ್ನು ಮಾಡುವವರು ಅಥವಾ ಅಪ್ರಮೇಯಬುದ್ಧಿಯುಳ್ಳವರು ಎಂದು ನಿರ್ವಚನಾಭಿಪ್ರಾಯವು.

ಸಂಹಿತಾಪಾಠಃ

ಯೇ ಅಗ್ನೇಃ ಪರಿ ಜಜ್ಞಿರೇ ವಿರೂಪಾಸೋ ದಿವಸ್ಪರಿ ।
ನವಗ್ವೋ ನು ದಶಗ್ವೋ ಅಂಗಿರಸ್ತಮಃ ಸಚಾ ದೇವೇಷು ಮಂಹತೇ || ೬ ||

ಪದಪಾಠಃ

ಯೇ । ಅಗ್ನೇಃ । ಪರಿ । ಜಜ್ಞಿರೇ । ವಿऽರೂಪಾಸಃ । ದಿವಃ । ಪರಿ ।
ನವऽಗ್ವಃ । ನು । ದಶऽಗ್ವಃ । ಅಂಗಿರಃऽತಮಃ । ಸಚಾ । ದೇವೇಷು । ಮಂಹತೇ || ೬ ||

ಸಾಯಣಭಾಷ್ಯಂ

**ವಿರೂಪಾಸೋ ವಿವಿಧರೂಪಾ ಯೇऽಙ್ಗಿರಸೋ ದಿವಸ್ಪರಿ ದ್ಯುಲೋಕಾದಗ್ನೇಃ ಪರಿ ಜಜ್ಞಿರೇ ಪರಿತೋ ಜಾತಾಃ । ಯದ್ವಾ । ದಿವಸ್ಪರಿ । ಪರಿಃ ಪಂಚಮ್ಯರ್ಥದ್ಯೋತಕಃ । ಸ್ವತೇಜಸಾ ದೀಪ್ಯಮಾನಾದಗ್ನೇರ್ಜಾತಾಃ । ತೇಷಾಂ ಮಧ್ಯೇ ನವಗ್ವೋ ದಶಗ್ವಶ್ಚಾಂಗಿರಸ್ತಮೋऽಂಗಿರಸಾಂ ವರಿಷ್ಠಃ । ಸತ್ರಮಾಸೀನಾನಾಮಂಗಿರಸಾಂ ಮಧ್ಯೇ ಕೇಚನ ನವಸು ಮಾಸ್ಸು ಕರ್ಮ ಕೃತ್ವೋದತಿಷ್ಠನ್ ಕೇಚನ ದಶಸು ಮಾಸ್ವಿತ್ಯೇವಮಂಗಿರಸಾಮಯನಮುಕ್ತಂ । ತೇಷಾಮಗ್ನಿರ್ನವಗ್ವಶ್ಚ ದಶಗ್ವಶ್ಚೋಕ್ತಃ । ತಾದೃಶೋ ದೇವೇಷು ಸಚಾ ಸಹಾವಸ್ಥಿತಃ ಸೋऽಗ್ನಿರ್ಮಂಹತೇ । ಮಹ್ಯಂ ಧನಂ ಪ್ರಯಚ್ಛತಿ । ಮಂಹತಿರ್ದಾನಕರ್ಮಾ ||**

ಪ್ರತಿಪದಾರ್ಥ

**ವಿರೂಪಾಸಃ**—ನಾನಾವಿಧರೂಪಗಳುಳ್ಳ | **ಯೇ ಅಂಗಿರಸಃ**—ಯಾವ ಅಂಗಿರಾಋಷಿಗಳು | **ದಿವಃ ಪರಿ**—ಸ್ವರ್ಗಲೋಕದ ಮೇಲುಭಾಗದಲ್ಲಿ | **ಅಗ್ನೇಃ**—ಅಗ್ನಿಯಿಂದ | **ಪರಿ ಜಜ್ಞಿರೇ**—ಉತ್ಪನ್ನರಾದರೋ (ಅಂತಹ ಅಂಗಿರಾಋಷಿಗಳ ಮಧ್ಯದಲ್ಲಿ | **ನವಗ್ವಃ**—ಒಂಭತ್ತು ಮಾಸಗಳಲ್ಲಿ ಸತ್ರ್ರಯಾಗವನ್ನು ಪೂರಯಿಸಿದವರೂ| **ದಶಗ್ವಃ**—ಹತ್ತುಮಾಸಗಳಲ್ಲಿ ಸತ್ರ್ರಯಾಗವನ್ನು ಪೂರಯಿಸಿದವರೂ ಆದ | **ಅಂಗಿರಸ್ತಮಃ**—ಅಂಗಿರಸರಲ್ಲಿ ಶ್ರೇಷ್ಠರಾದವರಿದ್ದಾರೆ | **ದೇವೇಷು ಸಚಾ**—ದೇವತೆಗಳನೊಡನಿರುವ ಅಗ್ನಿಯು | **ಮಂಹತೇ**—ನನಗೆ ಧನವನ್ನು ಕೊಡುತ್ತಾನೆ.

ಭಾವಾರ್ಥ

ನಾನಾವಿಧರೂಪಗಳುಳ್ಳ ಅಂಗಿರಾಋಷಿಗಳು ಸ್ವರ್ಗಲೋಕದಲ್ಲಿ ಅಗ್ನಿಯಿಂದ ಉತ್ಪನ್ನರಾದರು. ಅವರಲ್ಲಿ ಕೆಲವರು (ಒಂದು ವರ್ಷದಲ್ಲಿ ಮಾಡಬೇಕಾದ) ಸತ್ರ್ರಯಾಗವನ್ನು ಒಂಭತ್ತು ತಿಂಗಳುಗಳಲ್ಲಿಯೂ, ಕೆಲವರು ಹತ್ತು ತಿಂಗಳುಗಳಲ್ಲಿಯೂ ಮುಗಿಸಿ ಅಂಗಿರಸರಲ್ಲಿ ಶ್ರೇಷ್ಠರೆಂದು ಪ್ರಸಿದ್ಧಿಯನ್ನು ಪಡೆದಿದ್ದಾರೆ. ದೇವತೆಗಳನೊಡನಿರುವ ಅಗ್ನಿಯು ನನಗೆ ಧನಾದಿಗಳನ್ನು ಅನುಗ್ರಹಿಸಿ ಕೊಡುತ್ತಾನೆ.

English Translation

Among those who have sprung from Agni is mauy forms, (and sprung) from heaven, the chief Angirasas, the celebrator of the nine-month rite, the celebrator of the ten-month rite, accompained by the gods bestows (upon me wealth).

ವಿಶೇಷವಿಷಯಗಳು

ನವಗ್ವ, ದಶಗ್ವ ಎಂಬ ಶಬ್ದಗಳ ವಿವರಣೆಗಾಗಿ ಋ. ಸಂ. 18-534, 19-501 ನೇ ಪೇಜುಗಳನ್ನು ನೋಡಿ.

ಸಂಹಿತಾಪಾಠಃ

ಇಂದ್ರೇಣ ಯುಜಾ ನಿಃ ಸೃಜಂತ ವಾಘತೋ ವ್ರಜಂ ಗೋಮಂತಮಶ್ವಿನಂ।
ಸಹಸ್ರಂ ಮೇ ದದತೋ ಅಷ್ಟಕರ್ಣ್ಯಃ ಶ್ರವೋ ದೇವೇಷ್ವಕ್ರತ ॥ ೭ ॥

ಪದಪಾಠಃ

ಇಂದ್ರೇಣ । ಯುಜಾ । ನಿಃ । ಸೃಜಂತ । ವಾಘತಃ । ವ್ರಜಂ । ಗೋಽಮಂತಂ । ಅಶ್ವಿನಂ ।
ಸಹಸ್ರಂ । ಮೇ । ದದತಃ । ಅಷ್ಟಽಕರ್ಣ್ಯಃ । ಶ್ರವಃ । ದೇವೇಷು । ಅಕ್ರತ ॥ ೭ ॥

ಸಾಯಣಭಾಷ್ಯಂ

**ವಾಘತಃ ಕರ್ಮಣಾಂ ವೋಢಾರೋ ವಿಶ್ವೇ ದೇವಾ ಅಂಗಿರಸೋ ವೇಂದ್ರೇಣ ಯುಜಾ ಸಹಾಯೇನ ನಿಃ ಸೃಜಂತ । ನಿರಗಮಯನ್ । ಕಿಂ । ಗೋಮಂತಂ ಗೋಯುಕ್ತಮಶ್ವಿನಮಶ್ವವಂತಂ ಪಣಿಭಿ-**

ರವರುದ್ಧಂ ವ್ರಜಂ । ತೇ ಮೇ ಮಾಂ ಪ್ರತಿ ಸಹಸ್ರಂ ಸಹಸ್ರಸಂಖ್ಯಾಕಂ ಧನಂ ಸತ್ತ್ರಪರಿವೇಷಣಮಷ್ಟ-ಕರ್ಣ್ಯಃ ॥ ಅಷ್ಟ ಇತಿ ಅಶೂ ವ್ಯಾಪ್ತೌ ನಿಷ್ಠಾಯಾಂ ರೂಪಂ ॥ ವಿಸ್ತೃತಕರ್ಣಾಃ । ಉಪಲಕ್ಷಣಮೇತತ್ । ವ್ಯಾಪ್ತಸರ್ವಾವಯವಾ ಗಾಶ್ಚ ದದತೋ ಮಹ್ಯಂ ಪ್ರಯಚ್ಛಂತೋ ದೇವೇಷ್ವಿಂದ್ರಾದಿಷು ಶ್ರವೋ ಹವಿ-ರ್ಲಕ್ಷಣಮನ್ನಂ ಕೀರ್ತಿಂ ವಾಕ್ರತ ಅಕೃಷತ ॥ ಕರೋತೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ ॥ ಏವಂ ನಾಭಾನೇದಿಷ್ಠೇನಾಂಗಿರಸಃ ಸ್ತುತಾಸ್ತಸ್ಮೈ ಧನಂ ಪ್ರಾದುಃ। ತದುಕ್ತಂ ಶೌನಕೇನ। ಋಷಯೋಽಂ-ಗಿರಸಸ್ತುಷ್ಟ್ವಾ ಯದ್ಧದುರ್ಮಾನವಾಯ ತು । ತತ್ಪುಣ್ಯಾಯ ಚ ಕರ್ಮಣಿ ಯೋ ಯಜ್ಞೇನೇತ್ಯ-ಕೀರ್ತಯತ್ ॥

ಪ್ರತಿಪದಾರ್ಥ

**ವಾಘತಃ**—(ಯಜ್ಞ) ಕರ್ಮನಿರ್ವಾಹಕರಾದ ವಿಶ್ವೇದೇವತೆಗಳು ಅಥವಾ ಅಂಗಿರಾಋಷಿಗಳು । **ಇಂದ್ರೇಣ**—ಇಂದ್ರನಿಂದಲೂ । **ಯುಜಾ**—ಅವನ ಸಹಾಯದಿಂದಲೂ । **ಗೋಮಂತಂ**—ಗೋವುಗಳಿಂದ ಸಹಿತವಾದುದೂ । **ಅಶ್ವಿನಂ**—ಅಶ್ವಗಳಿಂದ ಸಹಿತವಾದುದೂ ಆದ । **ವ್ರಜಂ**—ಪಶುಸಮೂಹವನ್ನು । **ನಿಃ ಸೃಜಂತ**-(ಅವುಗಳನ್ನು ಬಚ್ಚಿಟ್ಟಿದ್ದ ಪರ್ವತಪ್ರದೇಶದಿಂದ) ಈಚೆಗೆ ಹೊರಡಿಸಿದರು. ಆ ಅಂಗಿರಾಋಷಿಗಳು । **ಮೇ**—ನನಗೆ । **ಸಹಸ್ರಂ**—ಸಹಸ್ರಸಂಖ್ಯಾಕವಾದ । **ಅಷ್ಟಕರ್ಣ್ಯಃ**—ಉದ್ದವಾದ ಕಿವಿಗಳುಳ್ಳ ಗೋವುಗಳನ್ನು । **ದದತಃ**—ಕೊಡಲಿಚ್ಛೆಯುಳ್ಳವರಾಗಿ । **ದೇವೇಷು**—ದೇವತೆಗಳಲ್ಲಿ ಎಂದರೆ ದೇವತೆಗಳನ್ನುದ್ದೇಶಿಸಿ ಯಜ್ಞಸಮಾಪ್ತಿಗಾಗಿ । **ಶ್ರವಃ**—ಹವಿರ್ಲಕ್ಷಣದಿಂದಿರುವ ಅನ್ನವನ್ನು । **ಅಕ್ರತ**—ಹೋಮಮಾಡಿದರು.

ಭಾವಾರ್ಥ

ಯಜ್ಞನಿರ್ವಾಹಕರಾದ ಅಂಗಿರಾಋಷಿಗಳು (ಅಥವಾ ವಿಶ್ವೇದೇವತೆಗಳು) ಇಂದ್ರನ ಸಹಾಯದಿಂದ ಪಣಿಗಳೆಂಬ ಅಸುರರು ಅಪಹರಿಸಿ ರಹಸ್ಯವಾದ ಪರ್ವತಪ್ರದೇಶದಲ್ಲಿ ಬಚ್ಚಿಟ್ಟಿದ್ದ ಗೋವುಗಳ ಮತ್ತು ಅಶ್ವಗಳ ಸಮೂಹವನ್ನು ಆ ಪರ್ವತಪ್ರದೇಶದಿಂದ ಬಿಡಿಸಿ ಈಚೆಗೆ ಬರುವಂತೆ ಹೊರಡಿಸಿದರು. ಆ ಅಂಗಿರಸರು ನನಗೆ ಉದ್ದವಾದ ಕಿವಿಗಳುಳ್ಳ ಸಾವಿರ ಗೋವುಗಳನ್ನು ಕೊಡುವುದಕ್ಕಾಗಿ ದೇವತೆಗಳನ್ನುದ್ದೇಶಿಸಿ ಹವಿಸ್ಸನ್ನ ರ್ಪಿಸಿ ಯಜ್ಞಸಮಾಪ್ತಿಮಾಡಿದರು.

English Translation

The accepters of oblations, with Indra for their associate, have emptied pastures crowded with cows, and horses, giving me a thousand full-grown (cattle), they have gained renown among the gods,

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಅಂಗಿರಸರು ತಾವು ಮಾಡುತ್ತಿದ್ದ ಸತ್ತ್ರಯಾಗದ ಪರಿಸಮಾಪ್ತಿಯಲ್ಲಿ ನಾಭಾನೇದಿಷ್ಠನಿಗೆ ಸಹಸ್ರ ಗೋವುಗಳನ್ನು ಕೊಟ್ಟ ವಿಷಯದ ಪ್ರಸ್ತಾಪವಿದೆ. ಈ ವಿಷಯದಲ್ಲಿ ಶೌನಕಮಹರ್ಷಿಯು ತಮ್ಮ ಬೃಹದ್ದೇವತಾ ಎಂಬ ಗ್ರಂಥದಲ್ಲಿ—

**ಋಷಯೋಽಂಗಿರಸಸ್ತುಷ್ಟ್ವಾ ಯದ್ದದುರ್ಮಾನವಾಯ ತು ।**
**ತತ್ಪುಣ್ಯಾಯ ಚ ಕರ್ಮಾಣಿ ಯೋ ಯಜ್ಞೇನೇತ್ಯಕೀರ್ತಯತ್ ॥**

ಎಂದು ಹೇಳಿದಾರೆ. ಅಂಗಿರಸರು ನಾಭಾನೇದಿಷ್ಠನು ಪಠಿಸಿದ ಮಂತ್ರದಿಂದ ಸಂತುಷ್ಟರಾಗಿ ಅವನಿಗೆ ಗೋವುಗಳನ್ನು ಕೊಟ್ಟರು. ಈ ವಿಷಯವನ್ನು ನಾಭಾನೇದಿಷ್ಠನು **ಯೇ ಯಜ್ಞೇನ** ಎಂಬ ಪ್ರಕೃತ ಸೂಕ್ತದಿಂದ ವರ್ಣಿಸಿದಾನೆ.

### ಸಂಹಿತಾಪಾಠಃ

**ಪ್ರ ನೂನಂ ಜಾಯತಾಮಯಂ ಮನುಸ್ತೋಕ್ಮೇವ ರೋಹತು ।**

**ಯಃ ಸಹಸ್ರಂ ಶತಾಶ್ವಂ ಸದ್ಯೋ ದಾನಾಯ ಮಂಹತೇ ॥ ೮ ॥**

### ಪದಪಾಠಃ

ಪ್ರ । ನೂನಂ । ಜಾಯತಾಂ । ಅಯಂ । ಮನುಃ । ತೋಕ್ಮ೨ಇವ । ರೋಹತು ।

ಯಃ । ಸಹಸ್ರಂ । ಶತ೨ಅಶ್ವಂ । ಸದ್ಯಃ । ದಾನಾಯ । ಮಂಹತೇ ॥ ೮ ॥

### ಸಾಯಣಭಾಷ್ಯಂ

ಉತ್ತರಾಭಿಶ್ಚತಸೃಭಿರಸ್ಮೈ ಮಾನವಾಯರ್ಷಯೇ ಸಾವರ್ಣಿನಾ ಯದ್ದತ್ತಂ ತತ್ಪ್ರಶಸ್ಯತೇ । ತದಪ್ಯುಕ್ತಂ ಶೌನಕೇನ । ಸಾವರ್ಣಿನಾ ಚ ಯದ್ದತ್ತಂ ಮಾನವಾಯ ಮಹದ್ವಸು । ತದುಕ್ತಂ ಸೂಕ್ತಶೇಷೇಣ ಪ್ರ ನೂನಂ ಜಾಯತಾಮಿತಿ ॥

ಅಯಂ ಸಾವರ್ಣಿರ್ಮನುರ್ನೂನಂ ಕ್ಷಿಪ್ರಂ ಪ್ರ ಜಾಯತಾಂ । ಪ್ರಜಾತೋ ಭವತು ಧನಾದಿಭಿಃ ಪುತ್ರಾದಿಭಿಶ್ಚ ರೋಹತು । ಪ್ರಾದುರ್ಭವತು । ತತ್ರ ದೃಷ್ಟಾಂತಃ । ತೋಕ್ಮೇವ । ಯಥಾ ಜಲಕ್ಲಿನ್ನಂ ಬೀಜಂ ಪ್ರಾದುರ್ಭವತಿ ಏವಂ ಕರ್ಮಫಲಸಂಯುಕ್ತಃ ಸ ಮನುಃ ಪುತ್ರಾದಿಭೀ ರೋಹತು । ಯೋ೨ಯಂ ಮನುಃ ಶತಾಶ್ವಂ ಬಹ್ವಶ್ವಸಂಯುಕ್ತಂ ಸಹಸ್ರಂ ಗವಾಂ ಸದ್ಯಸ್ತದಾನೀಮೇವ ದಾನಾಯ ಮಂಹತೇ । ಅಸ್ಮಾ ಋಷಯೇ ದಾತುಂ ಪ್ರೇರಯತಿ ॥

### ಪ್ರತಿಪದಾರ್ಥ

**ಅಯಂ**— ಈ ಸಾವರ್ಣಿಯೆಂಬ । **ಮನುಃ**—ಮನುವು । **ನೂನಂ**— ಬೇಗನೆ । **ಪ್ರ ಜಾಯತಾಂ**– ಪ್ರಾದುರ್ಭೂತನಾಗಲಿ । **ತೋಕ್ಮೇವ**— ನೀರಿನಲ್ಲಿ ನೆನೆದಿರುವ ಬೀಜವು ಬೇಗನೆ ಮೊಳಕೆಯಾಗುವಂತೆ (ಈ ಸಾವರ್ಣಿಯು ಧನಾದಿಗಳಿಂದಲೂ ಪುತ್ರಾದಿಗಳಿಂದಲೂ) । **ರೋಹತು**— ಪ್ರಾದುರ್ಭೂತನಾಗಲಿ । **ಯಃ**—(ಯಾವ) ಈ ಮನುವು । **ಶತಾಶ್ವಂ**—ಅನೇಕ ಅಶ್ವಗಳನ್ನೂ । **ಸಹಸ್ರಂ**— ಸಾವಿರಾರು ಗೋವುಗಳನ್ನೂ । **ಸದ್ಯಃ**— ಈಗಲೇ । **ದಾನಾಯ**— ಈ ಋಷಿಗೆ ದಾನಮಾಡುವುದಕ್ಕಾಗಿ । **ಮಂಹತೇ**— ಪ್ರೇರಿಸುವನು.

### ಭಾವಾರ್ಥ

ಅನೇಕ ಅಶ್ವಗಳನ್ನೂ, ಸಾವಿರಾರು ಗೋವುಗಳನ್ನೂ ಈ ಋಷಿಗೆ ದಾನಮಾಡುವಂತೆ ಪ್ರೇರಿಸುವ ಈ ಸಾವರ್ಣಿಯೆಂಬ ಮನುವು ತನ್ನ ಪುತ್ರಾದಿಗಳಿಂದಲೂ, ಧನಾದಿಗಳಿಂದಲೂ ಸಹಿತನಾಗಿ ನೀರಿನಲ್ಲಿ ನೆನೆದ ಬೀಜವು ಬೇಗನೆ ಮೊಳಕೆಯಾಗುವಂತೆ ಈಗಲೇ ಇಲ್ಲಿ ಪ್ರಾದುರ್ಭೂತನಾಗಲಿ.

May this Manu (Savarni) quickly be born, may he increase like (well-watered) seed, who sends me at once a thousand and a hundred horses for a present.

ವಿಶೇಷವಿಷಯಗಳು

ಈ ಋಕ್ಕಿನಲ್ಲಿಯೂ ಮುಂದಿನ ಮೂರು ಋಕ್ಕುಗಳಲ್ಲಿಯೂ ಸಾವರ್ಣಿ ಎಂಬ ಮನುವು ಋಷಿಗೆ ದಾನಮಾಡಿದ ವಿಷಯದ ಪ್ರಶಂಸೆ ಇದೆ. ಅದನ್ನೂ ಶೌನಕರು—

**ಸಾವರ್ಣಿನಾ ಚ ಯದ್ದತ್ತಂ ಮಾನವಾಯ ಮಹದ್ವಸು ।**
**ತದುಕ್ತಂ ಸೂಕ್ತಶೇಷೇಣ ಪ್ರ ನೂನಂ ಜಾಯತಾಮಿತಿ ॥**

ಎಂದು ಹೇಳಿದಾರೆ ಎಂದರೆ ಸಾವರ್ಣಿ ಎಂಬ ಮನುವು ಮನುಪುತ್ರನಾದ ನಾಭಾನೇದಿಷ್ಠನಿಗೆ ಧನದಾನಮಾಡಿರುವುದನ್ನು ಪ್ರಕೃತಸೂಕ್ತದ **ಪ್ರ ನೂನಂ ಜಾಯತಾಂ** ಎಂದು ಮೊದಲಾದ ಋಕ್ಕುಗಳಿಂದ ಸೂಕ್ತದ ಕೊನೆಯವರಿಗೆ ಪ್ರಶಂಸೆ ಮಾಡಲಾಗಿದೆ.

ಸಂಹಿತಾಪಾಠಃ

**ನ ತಮಶ್ನೋತಿ ಕಶ್ಚನ ದಿವ ಇವ ಸಾನ್ವಾರಭಂ ।**
**ಸಾವರ್ಣ್ಯಸ್ಯ ದಕ್ಷಿಣಾ ವಿ ಸಿಂಧುರಿವ ಪಪ್ರಥೇ ॥ ೯ ॥**

ಪದಪಾಠಃ

ನ । ತಂ । ಅಶ್ನೋತಿ । ಕಃ । ಚನ । ದಿವಃऽಇವ । ಸಾನು । ಆऽರಭಂ ।
ಸಾವರ್ಣ್ಯಸ್ಯ । ದಕ್ಷಿಣಾ । ವಿ । ಸಿಂಧುಃऽಇವ । ಪಪ್ರಥೇ ॥ ೯ ॥

ಸಾಯಣಭಾಷ್ಯಂ

**ತಂ ಸಾವರ್ಣಿಂ ಮನುಂ ಕಶ್ಚನ ಕಶ್ಚಿದಪ್ಯಾರಭವಮಾರಬ್ಧುಂ ಸ್ವಕರ್ಮಣಾ ನಾಶ್ನೋತಿ । ನ ವ್ಯಾಪ್ನೋತಿ । ಯಥಾ ಮನುಃ ಪ್ರಯಚ್ಛತಿ ತಥಾನ್ಯೋ ದಾತುಂ ನ ಶಕ್ನೋತೀತ್ಯರ್ಥಃ । ಕಥಂಸ್ಥಿತಂ । ದಿವ ಇವ ದ್ಯುಲೋಕಸ್ಯ ಸಾನು ಸಮುಚ್ಛ್ರಿತಂ ತೇಜಸಾ ಕೈಶ್ಚಿದಪ್ಯಪ್ರಧೃಷ್ಯಮಾದಿತ್ಯಮಿವ ಸ್ಥಿತಂ ॥ ಆರಭಂ । ಶಕಿ ಣಮುಲ್ಕಮುಲೌ । ಪಾ. ೩-೪-೧೨. । ಇತಿ ಕಮುಲ್ ॥ ತಸ್ಯ ಸಾವರ್ಣ್ಯಸ್ಯ ಮನೋರಿಯಂ ಗವಾದಿದಕ್ಷಿಣಾ ಸಿಂಧುರಿವ ಸ್ಯಂದಮಾನಾ ನದೀವ ಪೃಥಿವ್ಯಾಂ ಪಪ್ರಥೇ । ವಿಪಪ್ರಥೇ । ವಿಸ್ತೀರ್ಣಾ ಭವತಿ ॥**

ಪ್ರತಿಪದಾರ್ಥ

**ದಿವ ಇವ**—ಸ್ವರ್ಗದಲ್ಲಿ ಬೆಳಗುತ್ತಿರುವ ಆದಿತ್ಯನಂತೆ । **ಸಾನು**—ತನ್ನ ತೇಜಸ್ಸಿನಿಂದ ಉನ್ನತಪ್ರದೇಶದಲ್ಲಿ ಕುಳಿತಿರುವ । **ತಂ**—ಆ ಸಾವರ್ಣಿಯೆಂಬ ಮನುವನ್ನು । **ಆರಭಂ**—ದಾನಾದಿಕರ್ಮಗಳಲ್ಲಿ ಸರಿಗಟ್ಟಲು । **ಕಶ್ಚನ**—ಯಾವ ಪುರುಷನೂ । **ನ ಅಶ್ನೋತಿ**—ಶಕ್ತನಾಗಲಾರನು । **ಸಾವರ್ಣ್ಯಸ್ಯ**—ಸಾವರ್ಣಿಯೆಂಬ

ಆ ಮನುವಿನ | **ದಕ್ಷಿಣಾ**—ದಾನಾದಿಗಳು | **ಸಿಂಧುರಿವ**—ಹರಿಯುತ್ತಿರುವ ನದಿಯಂತೆ | **ವಿ ಪಪ್ರಥೇ**—ಎಲ್ಲೆಲ್ಲಿಯೂ ವಿಸ್ತೀರ್ಣವಾಗಿ ಹರಡುತ್ತದೆ.

ಭಾವಾರ್ಥ

ಸ್ವರ್ಗದಲ್ಲಿ ಬೆಳಗುತ್ತಿರುವ ಸೂರ್ಯನಂತೆ ಉನ್ನತಪ್ರದೇಶದಲ್ಲಿ ಕುಳಿತು ರಾರಾಜಿಸುತ್ತಿರುವ ಆ ಸಾವರ್ಣಿಯೆಂಬ ಮನುವು ದಾನಮಾಡುವಂತೆ ಬೇರೆ ಯಾವ ಪುರುಷನೂ ಮಾಡಲು ಸಮರ್ಥನಾಗುವುದಿಲ್ಲ. ಆ ಸಾವರ್ಣಿಯೆಂಬ ಮನುವಿನ ಗವಾದಿದಾನಗಳು ಹರಿಯುತ್ತಿರುವ ನದಿಯಂತೆ ಎಲ್ಲೆಲ್ಲಿಯೂ ವ್ಯಾಪಿಸಿ ವಿಸ್ತಾರವಾಗಿ ಹರಡುತ್ತವೆ.

## English Translation

No one succeeds in reaching him; (elevated) like the summit of heaven, the liberality of Savarni has broadened out like a river.

ಸಂಹಿತಾಪಾಠಃ

**ಉತ ದಾಸಾ ಪರಿವಿಷೇ ಸ್ಮದ್ದಿಷ್ಟೀ ಗೋಪರೀಣಸಾ |**

**ಯದುಸ್ತುರ್ವಶ್ಚ ಮಾಮಹೇ || ೧೦ ||**

ಪದಪಾಠಃ

**ಉತ | ದಾಸಾ | ಪರಿऽವಿಷೇ | ಸ್ಮದ್ದಿಷ್ಟೀ ಇತಿ ಸ್ಮತ್ऽದಿಷ್ಟೀ | ಗೋऽಪರೀಣಸಾ |**

**ಯದುಃ | ತುರ್ವಃ | ಚ | ಮಮಹೇ || ೧೦ ||**

ಸಾಯಣಭಾಷ್ಯಂ

**ಉತಾಪಿ ಚ ಸ್ಮದ್ದಿಷ್ಟೀ ಕಲ್ಯಾಣಾದೇಶಿನೌ ಗೋಪರೀಣಸಾ ಗೋಪರೀಣಸೌ ಗೋಭಿಃ ಪರಿವೃತೌ ಬಹುಗವಾದಿಯುಕ್ತೌ ದಾಸಾ ದಾಸವತ್ಪ್ರೇಷ್ಯವತ್ಸ್ಥಿತೌ ತೇನಾಧಿಷ್ಠಿತೌ ಯದುಶ್ಚ ತುರ್ವಶ್ಚೈತನ್ನಾಮಕೌ ರಾಜರ್ಷೀ ಪರಿವಿಷೇऽಸ್ಯ ಸಾವರ್ಣೇರ್ಮನೋರ್ಭೋಜನಾಯ ಮಮಹೇ | ಪಶೂನ್ಪ್ರಯಚ್ಛತಃ || ಪ್ರತ್ಯೇಕಮನ್ವಯಾದೇಕವಚನಂ ||**

ಪ್ರತಿಪದಾರ್ಥ

**ಉತ**—ಮತ್ತು | **ಸ್ಮದ್ದಿಷ್ಟೀ**—ಕಲ್ಯಾಣಾತ್ಮಕವಾದ ವಾಕ್ಕುಳ್ಳವರೂ | **ಗೋಪರೀಣಸಾ**—ಅನೇಕ ಗೋವುಗಳಿಂದ ಕೂಡಿದವರೂ | **ದಾಸಾ**—ಉಪಚಾರಮಾಡತಕ್ಕವರೂ ಆದ | **ಯದುಃ**—ಯದುವೂ | **ತುರ್ವಶ್ಚ**-ತುರ್ವನೂ | **ಪರಿವಿಷೇ**—ಸಾವರ್ಣಿಯ ಭೋಗಕ್ಕಾಗಿ | **ಮಮಹೇ**—ಪಶುಗಳನ್ನು ಒದಗಿಸಿದರು.

ಭಾವಾರ್ಥ

ಕಲ್ಯಾಣಾತ್ಮಕವಾದ ವಾಕ್ಕುಳ್ಳವರೂ, ಅನೇಕ ಗೋವುಗಳಿಂದ ಕೂಡಿದವರೂ, ಉಪಚಾರಮಾಡತಕ್ಕವರೂ ಆದ ಯದುವೂ, ತುರ್ವನೂ, ಸಾವರ್ಣಿಯ ಭೋಗಕ್ಕಾಗಿ ಪಶುಗಳನ್ನು ಒದಗಿಸಿದರು.

## English Translation

Yadu and Indra speaking auspiciously, and possessed of numerous cattle, gave them like (appointed) servants, for the enjoyment (of Manu Savarni)

ಸಂಹಿತಾಪಾಠಃ

ಸಹಸ್ರದಾ ಗ್ರಾಮಣೀರ್ಮಾ ರಿಷನ್ಮನುಃ ಸೂರ್ಯೇಣಾಸ್ಯ ಯತಮಾನೈತು ದಕ್ಷಿಣಾ ।
ಸಾವರ್ಣೇರ್ದೇವಾಃ ಪ್ರ ತಿರಂತ್ವಾಯುರ್ಯಸ್ಮಿನ್ನಶ್ರಾಂತಾ ಅಸನಾಮ ವಾಜಂ ॥ ೧೧ ॥

ಪದಪಾಠಃ

ಸಹಸ್ರಽದಾಃ । ಗ್ರಾಮಽನೀಃ । ಮಾ । ರಿಷತ್ । ಮನುಃ । ಸೂರ್ಯೇಣ । ಅಸ್ಯ । ಯತಮಾನಾ । ಏತು । ದಕ್ಷಿಣಾ ।
ಸಾವರ್ಣೇಃ । ದೇವಾಃ । ಪ್ರ । ತಿರಂತು । ಆಯುಃ । ಯಸ್ಮಿನ್ । ಅಶ್ರಾಂತಾಃ । ಅಸನಾಮ । ವಾಜಂ ॥

ಸಾಯಣಭಾಷ್ಯಂ

ಸಹಸ್ರದಾ ಗವಾದೀನಾಂ ಸಹಸ್ರಸ್ಯ ದಾತಾ ಗ್ರಾಮಣೀರ್ಗ್ರಾಮಾಣಾಂ ನೇತಾ ಕರ್ತಾ ಜನಪದಾನಾಮಯಂ ಮನುರ್ಮಾ ರಿಷತ್ । ನ ಕೈಶ್ಚಿದಪಿ ರಿಷ್ಯೋ ಹಿಂಸಿತೋ ಭವತು । ಯದ್ವಾ । ಕರ್ಮನೇತ್ರ್ಯಾನಸ್ಮಾನ್ಮಾ ಹಿನಸ್ತು ಕಿಂತು ಧನಾದಿದಾನೇನ ಪೂಜಯತು । ಅಸ್ಯ ಯತಮಾನಾ ಗಚ್ಛಂತೀ ದಕ್ಷಿಣಾ ಸೂರ್ಯೇಣ ಸಹೈತು । ಸಂಗಚ್ಛತಾಂ । ತ್ರಿಷು ಲೋಕೇಷು ಪ್ರಸಿದ್ಧಾ ಭವತ್ವಿತ್ಯರ್ಥಃ । ತಸ್ಯಾಸ್ಯ ಸಾವರ್ಣೇಃ ಸವರ್ಣಪುತ್ರಸ್ಯ ಮನೋರ್ದೇವಾ ಇಂದ್ರಾದಯ ಆಯುರ್ಜೀವನಂ ಪ್ರ ತಿರಂತು । ಪ್ರವರ್ಧಯಂತು । ಅಶ್ರಾಂತಾಃ ಕರ್ಮಸ್ವನಲಸಾಃ ಸರ್ವಂ ಕರ್ಮ ಕುರ್ವಂತೋ ವಯಂ ಯಸ್ಮಿನ್ಮನೌ ವಾಜಂ ಗೋಲಕ್ಷಣಮನ್ನಮಸನಾಮ ಸಂಭಜೇಮಹಿ । ನಾಭಾನೇದಿಷ್ಠೋಽಹಮಲಭ ಇತ್ಯಾಶಾಸ್ತೇ ॥

ಪ್ರತಿಪದಾರ್ಥ

**ಸಹಸ್ರದಾಃ**—ಅನೇಕ ದಾನಗಳನ್ನು ಮಾಡತಕ್ಕವನೂ । **ಗ್ರಾಮಣೀಃ**—ಗ್ರಾಮಜನರಿಗೆಲ್ಲ ಮಾರ್ಗ ದರ್ಶಕನೂ ಆದ । **ಮನುಃ**—ಮನುವು । **ಮಾ ರಿಷತ್**—ಯಾರಿಂದಲೂ ಹಿಂಸಿಸಲ್ಪಡದಿರಲಿ । **ಅಸ್ಯ**—ಇವನಿಂದ । **ಯತಮಾನಾ**—ಉದಾರವಾಗಿ ಕೊಡಲ್ಪಡುವ । **ದಕ್ಷಿಣಾ**—ದಕ್ಷಿಣೆಯು । **ಸೂರ್ಯೇಣ**—ಸೂರ್ಯ ನೊಡನೆ । **ಏತು**—ಸೇರಿ ಕೊಳ್ಳಲಿ (ಮೂರು ಲೋಕಗಳಲ್ಲೂ ಪ್ರಸಿದ್ಧವಾಗಲಿ) । **ಯಸ್ಮಿನ್**—ಯಾರಲ್ಲಿ (ಯಾರ ಔದಾರ್ಯದಿಂದ) । **ವಾಜಂ**—ಗೋರೂಪವಾದ ಅನ್ನವನ್ನು । **ಅಶ್ರಾಂತಾಃ**—ಕರ್ಮದಲ್ಲಿ ಆಲಸ್ಯವಿಲ್ಲದ ನಾವು ।

**ಅಸನಾಮ**—ಅನುಭವಿಸುವೆವೋ ಅಂತಹ | **ಸಾವರ್ಣೇಃ**—ಸವರ್ಣಪುತ್ರನಾದ ಮನುವಿಗೆ | **ದೇವಾಃ**—ಇಂದ್ರಾದಿ ದೇವತೆಗಳು | **ಆಯುಃ**—ಆಯುಸ್ಸನ್ನು | **ಪ್ರ ತಿರಂತು**—ವೃದ್ಧಿ ಪಡಿಸಲಿ.

ಭಾವಾರ್ಥ

ಅನೇಕ ದಾನಗಳನ್ನು ಮಾಡತಕ್ಕವನೂ, ಗ್ರಾಮಜನರಿಗೆಲ್ಲ ಮಾರ್ಗದರ್ಶಕನೂ ಆದ ಸಾವರ್ಣಿಮನುವು ಯಾರಿಂದಲೂ ಹಿಂಸಿಸಲ್ಪಡದಿರಲಿ. ಇವನಿಂದ ಉದಾರವಾಗಿ ಕೊಡಲ್ಪಡುವ ದಕ್ಷಿಣೆಯು ಸೂರ್ಯನೊಡನೆ ಸೇರಿ ಮೂರು ಲೋಕಗಳಲ್ಲಿಯೂ ಖ್ಯಾತಿಯನ್ನು ಪಡೆಯಲಿ. ಯಾರ ಔದಾರ್ಯದಿಂದ ಕರ್ಮದಲ್ಲಿ ಉದಾಸೀನರಲ್ಲದ ನಾವು ಗೋರೂಪವಾದ ಅನ್ನವನ್ನು ಅನುಭವಿಸುವೆವೋ ಅಂತಹ ಸವರ್ಣಪುತ್ರನಾದ ಮನುವಿಗೆ ಇಂದ್ರಾದಿದೇವತೆಗಳು ಆಯುಸ್ಸನ್ನು ವೃದ್ಧಿ ಪಡಿಸಲಿ.

## English Translation

May the donor of a thousand (cows), the head of the district, the Manu, never suffer wrong, may his liberality go spreading (in glory) with the sun ; may the gods prolong the life of Savarni (from whom) unwearied (in his service) we enjoy abundant food.

ವಿಶೇಷವಿಷಯಗಳು

ನಹುಷಪುತ್ರನಾದ ಯಯಾತಿಯ ವಿಷಯದಲ್ಲಿ ಋ. ಸಂ. ಭಾಗ ೩, ಪುಟ 583 ರಲ್ಲಿ ಬರೆದಿರುವುದನ್ನು ನೋಡಿ.

# ಅರವತ್ತಮೂರನೆಯ ಸೂಕ್ತ

ಸಾಯಣಭಾಷ್ಯಂ

**ಪರಾವತೋ ಯ ಇತಿ ಸಪ್ತದಶರ್ಚಂ ತೃತೀಯಂ ಸೂಕ್ತಂ ಪ್ಲತೇಃ ಪುತ್ರಸ್ಯ ಗಯಸ್ಯಾರ್ಷಂ | ಷೋಡಶೀಸಪ್ತದಶ್ಯೌ ತ್ರಿಷ್ಟುಭೌ | ಪಂಚದಶೀ ತ್ರಿಷ್ಟುಬ್ಜಗತೀ ವಾ | ಶಿಷ್ಟಾಶ್ಚತುರ್ದಶ ಜಗತ್ಯಃ | ಸ್ವಸ್ತಿ ನಃ ಪಥ್ಯಾಸ್ವಿತಿ ದ್ವೇ ಪಥ್ಯಾಸ್ವಸ್ತಿದೇವತಾಕೇ | ಶಿಷ್ಟಾ ವೈಶ್ವದೇವ್ಯಃ| ತಥಾ ಚಾನುಕ್ರಾಂತಂ | ಪರಾವತ-ಸ್ತ್ರ್ಯೂನಾ ಗಯಃ ಪ್ಲಾತೋ ದ್ವಿತ್ರಿಷ್ಟುಬಂತಂ ತು ಸ್ವಸ್ತಿ ನಸ್ತ್ರಿಷ್ಟುಬ್ವಾ ಸಹ ಚೋತ್ತರಯಾ ಪಥ್ಯಾಸ್ವಸ್ತಿ-ದೇವತ್ಯೇತಿ || ಪೃಷ್ಠ್ಯಾಭಿಪ್ಲವಯೋಸ್ತೃತೀಯೇಽಹನಿ ವೈಶ್ವದೇವ ಏತತ್ಸೂಕ್ತಂ ವೈಶ್ವದೇವಂ ನಿವಿ-ದ್ಧಾನಂ | ಸೂತ್ರಿತಂ ಚ | ಅನಶ್ವೋ ಜಾತಃ ಪರಾವತೋ ಯ ಇತಿ ವೈಶ್ವದೇವಂ | ಆ. ೭-೭ | ಇತಿ ||**

**ಅನುವಾದವು—ಪರಾವತೋ ಯೇ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹದಿನೇಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪ್ಲತ ಎಂಬ ಋಷಿಯ ಪುತ್ರನಾದ ಗಯನೆಂಬುವನು ಋಷಿಯು ; ಈ ಸೂಕ್ತದ ಹದಿನಾರು ಮತ್ತು ಹದಿನೇಳನೆಯ ಋಕ್ಕುಗಳು ತ್ರಿಷ್ಟುಪ್ಛಂದಸ್ಕವು ; ಹದಿನೈದನೆಯ ಋಕ್ಕು ತ್ರಿಷ್ಟುಪ್ ಅಥವಾ ಜಗತೀಛಂದಸ್ಕವು ; ಉಳಿದ ಹದಿನಾಲ್ಕು ಋಕ್ಕುಗಳೂ ಜಗತೀಛಂದಸ್ಕವು. **ಸ್ವಸ್ತಿ ನಃ ಪಥ್ಯಾಸು** ಎಂದು ಮೊದಲಾಗುವ ಎರಡು ಋಕ್ಕುಗಳು (೧೫-೧೬ ನೇ ಋಕ್ಕುಗಳು) ಪಥ್ಯಾಸ್ವಸ್ತಿದೇವತಾಕವು ; ಉಳಿದ ಋಕ್ಕುಗಳು ವಿಶ್ವೇದೇವತಾಕವು. ಅನುಕ್ರಮಣಿಕೆಯಲ್ಲಿ—**ಪರಾವತಸ್ತ್ರ್ಯೂನಾ ಗಯಃ ಪ್ಲಾತೋ ದ್ವಿತ್ರಿ-**

**ಷ್ಟುಬಂತಂ ತು ಸ್ವಸ್ತಿ ನಸ್ತ್ರಿಷ್ಟುಬ್ವಾ ಸಹ ಚೋತ್ತರಯೋ ಪಥ್ಯಾಸ್ವಸ್ತಿದೇವತ್ಯಾ** ಎಂದು ಹೇಳಿರುವುದು. ಪೃಷ್ಠ್ಯ ಮತ್ತು ಅಭಿಪ್ಲವಷಡಹವೆಂಬ ಯಾಗಗಳ ಮೂರನೆಯ ದಿನ ವೈಶ್ವದೇವಶಸ್ತ್ರಮಂತ್ರಗಳಲ್ಲಿ ಈ ಸೂಕ್ತವನ್ನು ವೈಶ್ವದೇವ ನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅನಶ್ವೋ ಜಾತಃ ಪರಾವತೋ ಯ ಇತಿ ವೈಶ್ವದೇವಂ** ಎಂಬ ಸೂತ್ರದಿಂದ (ಆ. ೭-೭) ವಿವೃತವಾಗಿರುವುದು.

## ಸೂಕ್ತ—೬೦

ಮಂಡಲ—೧೦ ॥ ಅನುವಾಕ—೫ ॥ ಸೂಕ್ತ—೬೩ ॥
ಅಷ್ಟಕ—೮ ॥ ಅಧ್ಯಾಯ—೨ ॥ ವರ್ಗ—೩, ೪, ೫ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೭ ॥
ಋಷಿಃ—ಗಯಃ ಪ್ಲಾತಃ ॥
ದೇವತಾ—೧-೧೪, ೧೭. ವಿಶ್ವೇದೇವಾಃ । ೧೫, ೧೬. ಪಥ್ಯಾಸ್ವಸ್ತಿಃ ॥
ಛಂದಃ—೧-೧೪, ಜಗತೀ । ೧೫. ಜಗತೀ ತ್ರಿಷ್ಟುಬ್ವಾ । ೧೬-೧೭. ತ್ರಿಷ್ಟುಪ್ ॥

ಸಂಹಿತಾಪಾಠಃ

ಪರಾವತೋ ಯೇ ದಿಧಿಷಂತ ಆಪ್ಯಂ ಮನುಪ್ರೀತಾಸೋ ಜನಿಮಾ ವಿವಸ್ವತಃ।
ಯಯಾತೇರ್ಯೇ ನಹುಷ್ಯಸ್ಯ ಬರ್ಹಿಷಿ ದೇವಾ ಆಸತೇ ತೇ ಅಧಿ ಬ್ರುವಂತು ನಃ ॥ ೧ ॥

ಪದಪಾಠಃ

ಪರಾऽವತಃ । ಯೇ । ದಿಧಿಷಂತೇ । ಆಪ್ಯಂ । ಮನುऽಪ್ರೀತಾಸಃ । ಜನಿಮ । ವಿವಸ್ವತಃ ।
ಯಯಾತೇಃ । ಯೇ । ನಹುಷ್ಯಸ್ಯ । ಬರ್ಹಿಷಿ । ದೇವಾಃ । ಆಸತೇ । ತೇ । ಅಧಿ । ಬ್ರುವಂತು । ನಃ ॥

ಸಾಯಣಭಾಷ್ಯಂ

ಯೇ ದೇವಾಃ ಪರಾವತೋ ದೂರದೇಶಾದಾಗತ್ಯಾಪ್ಯಂ ಜ್ಞಾತೇಯಂ ಮನುಷ್ಯೈಃ ಸಹ ಬಂಧುತ್ವಂ ದಿಧಿಷಂತೇ ಧಾರಯಂತಿ । ಯದ್ವಾ । ಹವಿಷಾಂ ಪ್ರದಾತೃಭಿರ್ಮನುಷ್ಯೈಃ ಸಹ ಸಖ್ಯಂ ಕುರ್ಮ ಇತಿ ಪರಸ್ಪರಂ ಶಬ್ದಾಯಂತೇ ॥ ಧಿಷ ಶಬ್ದೇ । ಜೌಹೋತ್ಯಾದಿಕಃ । ಛಾಂದಸೋ ಝಸ್ಯಾಂತಾದೇಶಃ । ಧಿಷ ಧಾರಣ ಇತಿ ಕೈಶ್ಚಿದಪ್ಯುಪಗಮ್ಯತೇ ॥ ಉಕ್ತಾರ್ಥಮೇವ ವಿಶಿನಷ್ಟಿ । ಮನುಪ್ರೀತಾಸೋ ಮನುಷ್ಯೈಃ ಪ್ರೀತಾ ದೇವಾ ವಿವಸ್ವತೋ ವಿವಸ್ವತ್ಪುತ್ರಸ್ಯ ಮನೋರ್ಜನಿಮ ಜನ್ಮಾನಿ ಮನುಷ್ಯಾನ್ಧಾರಯಂತಿ । ಕಿಂಚ ಯೇ ದೇವಾ ನಹುಷ್ಯಸ್ಯ ನಹುಷಪುತ್ರಸ್ಯ ಯಯಾತೇರೇತನ್ನಾಮಕಸ್ಯ ರಾಜರ್ಷೇರ್ಬರ್ಹಿಷಿ ಯಜ್ಞ ಆಸತೇ ಉಪವಿಶಂತಿ ತೇ ದೇವಾ ನೋಽಸ್ಮಾನಧಿ ಬ್ರುವಂತು । ಧನಾದಿಪ್ರದಾನೇನಾಸ್ಮಾನಧಿಕಂ ವದಂತು । ಪೂಜಯಂತ್ವಿತ್ಯರ್ಥಃ ॥

ಪ್ರತಿಪದಾರ್ಥ

**ಮನುಪ್ರೀತಾಸಃ**—ಮಾನವರ ಪ್ರೀತಿಗೆ ಪಾತ್ರರಾದ | **ಯೇ**—ಯಾವ ದೇವತೆಗಳು | **ವಿವಸ್ವತಃ**—ವಿವಸತ್ಪುತ್ರನಾದ ಮನುವಿನ | **ಜನಿಮ**—ಜನ್ಮಗಳನ್ನು (ಸಂತತಿಗಳನ್ನು) ಭರಿಸುತ್ತ | **ಪರಾವತಃ**—ಅತ್ಯಂತ ದೂರದೇಶದಿಂಗ ಬಂದು | **ಆಪ್ಯಂ**—ಮಾನವರೊಡನಿರುವ ಬಂಧುತ್ವವನ್ನು | **ದಿಧಿಷಂತೇ**—ಪ್ರಕಟಿಸುವರೋ (ಮತ್ತು) | **ಯೇ ದೇವಾಃ**—ಯಾವ ದೇವತೆಗಳು | **ನಹುಷ್ಯಸ್ಯ**—ನಹುಷಪುತ್ರನಾದ | **ಯಯಾತೇಃ**—ಯಯಾತಿಯೆಂಬ ರಾಜರ್ಷಿಯ | **ಬರ್ಹಿಷಿ**—ಯಜ್ಞದಲ್ಲಿ | **ಆಸತೇ**—ಕುಳಿತುಕೊಳ್ಳುವರೋ | **ತೇ**—ಆ ದೇವತೆಗಳು | **ನಃ**—ನಮ್ಮನ್ನು | **ಅಧಿ ಬ್ರುವಂತು**—ಪ್ರಶಂಸಿಸಲಿ (ಅನುಗ್ರಹಿಸಲಿ).

ಭಾವಾರ್ಥ

ಮಾನವರ ಪ್ರೀತಿಗೆ ಪಾತ್ರರಾದ ಯಾವ ದೇವತೆಗಳು ವಿವಸ್ವತ್ಪುತ್ರನಾದ ಮನುವಿನ ಸಂತತಿಗಳನ್ನು ಭರಸುತ್ತ ಅತ್ಯಂತ ದೂರದೇಶದಿಂದ ಬಂದು ಮಾನವರೊಡನಿರುವ ಬಂಧುತ್ವವನ್ನು ಪ್ರಕಟಿಸುತ್ತ ನಹುಷಪುತ್ರನಾದ ಯಯಾತಿ ಯೆಂಬ ರಾಜರ್ಷಿಯ ಯಜ್ಞದಲ್ಲಿ ಕುಳಿತುಕೊಳ್ಳುವರೋ ಆ ದೇವತೆಗಳು ನಮ್ಮ ಕರ್ಮಗಳನ್ನು ಪ್ರಶಂಸಿಸಿ ನಮ್ಮನ್ನು ಅನುಗ್ರಹಿಸಲಿ.

English Translation

May the gods who, (coming) from afar proclaim their affinity (with men), and beloved by men, (support) the generations of (Manu, the son of) Vivaswat ; may they who are seated on the sacred grass of Yayati, the son of Nahusha, speak favourably unto us.

ಸಂಹಿತಾಪಾಠಃ

ವಿಶ್ವಾ ಹಿ ವೋ ನಮಸ್ಯಾನಿ ವಂದ್ಯಾ ನಾಮಾನಿ ದೇವಾ ಉತ ಯಜ್ಞಿಯಾನಿ ವಃ ।
ಯೇ ಸ್ಥ ಜಾತಾ ಅದಿತೇರದ್ಭ್ಯಸ್ಪರಿ ಯೇ ಪೃಥಿವ್ಯಾಸ್ತೇ ಮ ಇಹ ಶ್ರುತಾ ಹವಂ ॥ ೨ ॥

ಪದಪಾಠಃ

ವಿಶ್ವಾ । ಹಿ । ವಃ । ನಮಸ್ಯಾನಿ । ವಂದ್ಯಾ । ನಾಮಾನಿ । ದೇವಾಃ । ಉತ । ಯಜ್ಞಿಯಾನಿ । ವಃ ।
ಯೇ । ಸ್ಥ । ಜಾತಾಃ । ಅದಿತೇಃ । ಅತ್ಽಭ್ಯಃ । ಪರಿ । ಯೇ । ಪೃಥಿವ್ಯಾಃ । ತೇ । ಮೇ । ಇಹ । ಶ್ರುತ ।
ಹವಂ ॥ ೨ ॥

ಸಾಯಣಭಾಷ್ಯಂ

ಯೇ ದೇವಾ ಇಂದ್ರಾದಯಃ । ಹಿರವಧಾರಣೇ । ವೋ ಯುಷ್ಮಾಕನೇವ ನಾಮಾನಿ ನಮನೀ-ಯಾನಿ ವಿಶ್ವಾ ಸರ್ವಾಣಿ ಶರೀರಾಣಿ ನಮಸ್ಯಾನಿ ನಮಸ್ಕರಾರ್ಹಾಣಿ ಭವಂತಿ ವಂದ್ಯಾ ವಂದ್ಯಾನಿ ಸ್ತೋತ-ವ್ಯಾನಿ ಚ ಭವಂತಿ । ಯೇ ಯೂಯಮದಿತೇರದೀನಾದ್ದ್ಯುಲೋಕಾದದ್ಭ್ಯಃ । ಅಂತರಕ್ಷನಾವ್ಯೈತತ್ । ಅಂತರಿಕ್ಷಾತ್ । ಪರಿಃ ಪಂಚಮ್ಯರ್ಥದ್ಯೋತಕಃ । ಪೃಥಿವ್ಯಾಶ್ಚ ಜಾತಾಃ ಪ್ರಾದುರ್ಭೂತಾಃ ಸ್ಥ ಭವತ ತೇ ಯೂಯಮಿಹಾಸ್ಮಿನ್ಯಜ್ಞ ಆಗತ್ಯ ಮೇ ಮದೀಯಂ ಹವಮಾಹ್ವಾನಂ ಶ್ರುತ । ಶೃಣುತ ॥

ಪ್ರತಿಪದಾರ್ಥ

**ದೇವಾಃ**—ಎಲೈ ಇಂದ್ರಾದಿ ದೇವತೆಗಳೇ । **ವಃ**—ನಿಮ್ಮ । **ವಿಶ್ವಾ ನಾಮಾನಿ ಹಿ**—ಸಕಲವಿಧವಾದ ಸ್ವರೂಪಗಳೂ । **ನಮಸ್ಯಾನಿ**—ನಮಸ್ಕಾರಾರ್ಹವಾದವಾಗಿವೆ । **ವಂದ್ಯಾ**—ಸ್ತುತ್ಯರ್ಹವಾಗಿವೆ । **ಉತ**—ಮತ್ತು । **ವಃ**—ನಿಮ್ಮ ಸ್ವರೂಪಗಳು । **ಯಜ್ಞಿಯಾನಿ**—ಯಜ್ಞಾರ್ಹವಾಗಿವೆ । **ಯೇ**—ಯಾವ ನೀವೆಲ್ಲರೂ। **ಅದಿತೇಃ ಪರಿ**—ಅಖಂಡವಾದ ದ್ಯುಲೋಕದಿಂದಲೂ । **ಅದ್ಭ್ಯಃ**—ಅಂತರಿಕ್ಷದಿಂದಲೂ । **ಪೃಥಿವ್ಯಾಃ**—ಪೃಥ್ವಿಯಿಂದಲೂ । **ಜಾತಾಃ ಸ್ಥ**—ಉತ್ಪನ್ನರಾಗಿರುವಿರೋ । **ತೇ**—ಆ ನೀವೆಲ್ಲರೂ । **ಇಹ**—ನಮ್ಮ ಈ ಯಜ್ಞಕ್ಕೆ ಬಂದು । **ಮೇ**—ನನ್ನ । **ಹವಂ**—ಆಹ್ವಾನವನ್ನು । **ಶ್ರುತ**—ಕೇಳಿರಿ.

ಭಾವಾರ್ಥ

ಎಲೈ ಇಂದ್ರಾದಿದೇವತೆಗಳೇ, ನಿಮ್ಮ ಸಕಲವಿಧವಾದ ಸ್ವರೂಪಗಳೂ ನಮಸ್ಕಾರಾರ್ಹವೂ, ಸ್ತುತ್ಯರ್ಹವೂ ಮತ್ತು ಯಜ್ಞಾರ್ಹವೂ ಆಗಿವೆ. ಯಾವ ನೀವೆಲ್ಲರೂ ಅಖಂಡವಾದ ದ್ಯುಲೋಕದಿಂದಲೂ, ಅಂತರಿಕ್ಷದಿಂದಲೂ, ಪೃಥ್ವಿಯಿಂದಲೂ ಉತ್ಪನ್ನರಾಗಿರುವರೋ ಆ ನೀವೆಲ್ಲರೂ ನಮ್ಮ ಈ ಯಜ್ಞಕ್ಕೆ ಬಂದು ನನ್ನ ಆಹ್ವಾನವನ್ನು ಕೇಳಿರಿ.

## English Translation

All your appellations, gods, are to be revered and praised, and worshipped, and whether you are sprung from heaven, or from the firmament, or from earth, hear at this (solemnity) my invocation.

ಸಂಹಿತಾಪಾಠಃ

ಯೇಭ್ಯೋ ಮಾತಾ ಮಧುಮತ್ಪಿನ್ವತೇ ಪಯಃ ಪೀಯೂಷಂ ದ್ಯೌರದಿತಿರ-
ದ್ರಿಬರ್ಹಾಃ ।
ಉಕ್ಥಶುಷ್ಮಾನ್ವೃಷಭರಾನ್ತ್ಸ್ವಪ್ನಸಸ್ತಾಁ ಆದಿತ್ಯಾಁ ಅನು ಮದಾ ಸ್ವಸ್ತಯೇ ॥

ಪದಪಾಠಃ

ಯೇಭ್ಯಃ । ಮಾತಾ । ಮಧುಽಮತ್ । ಪಿನ್ವತೇ । ಪಯಃ । ಪೀಯೂಷಂ । ದ್ಯೌಃ । ಅದಿತಿಃ । ಅದ್ರಿಽಬರ್ಹಾಃ ।

ಉಕ್ಥ॑ಽಶುಷ್ಮಾನ್ । ವೃ॒ಷ॒ಽಭ॒ರಾನ್ । ಸು॒ಽಅಪ್ನ॑ಸಃ । ತಾನ್ । ಆ॒ದಿ॒ತ್ಯಾನ್ । ಅನು॑ । ಮ॒ದ॒ । ಸ್ವ॒ಸ್ತಯೇ॑ ॥

ಸಾಯಣಭಾಷ್ಯಂ

ಅಗ್ನಿಷ್ಟೋಮೇ ವೈಶ್ವದೇವಶಸ್ತ್ರೇ ಯೇಭ್ಯೋ ಮಾತೇತ್ಯೇಷಾ ಧಾಯ್ಯಾ। ಸೂತ್ರಿತಂ ಚ । ಅಯಂ ವೇನಶ್ಚೋದಯತ್ಪೃಶ್ನಿಗರ್ಭಾ ಯೇಭ್ಯೋ ಮಾತಾ ಮಧುಮತ್ । ಆ-೫-೧೮ । ಇತಿ ॥

ಮಾತಾ ಸರ್ವಸ್ಯ ನಿರ್ಮಾತ್ರೀ ಪೃಥಿವೀ ಯೇಭ್ಯೋ ದೇವೇಭ್ಯೋ ದೇವಾರ್ಥಂ ಮಧುಮದ್ಮಾಧುರ್ಯೋಪೇತಂ ಪಯಃ ಸಾರಭೂತಂ ಕ್ಷೀರಂ ಪಿನ್ವತೇ ಕ್ಷರತಿ । ತಥಾದಿತಿರದೀನಾದ್ರಿಬರ್ಹಾ ಮೇಘೈಃ ಪರಿವೃಢಾ ಪ್ರವೃದ್ಧಾ ಪರಿವೃದ್ಧಮೇಘಾ ವಾ ದ್ಯೌಶ್ಚ ಪೀಯೂಷಂ ಪಿನ್ವತೇ। ದ್ಯಾವಾಪೃಥಿವ್ಯೌ ಹವಿರುತ್ಪಾದಯತ ಇತ್ಯರ್ಥಃ। ಋಷಿರಾತ್ಮಾನಂ ಸಂಬೋಧ್ಯಾಹ । ಉಕ್ಥಶುಷ್ಮಾನತಿಬಲಾನ್ ವೃಷಭರಾನ್ವೃಷ್ಟೇರಾಹರ್ತ್ಯಾನ್ ॥ ಹೃಗ್ರಹೋರ್ಭ ಇತಿ ಭಃ ॥ ಸ್ವಪ್ನಸಃ ಸುಕರ್ಮಣಸ್ತಾನಾದಿತ್ಯಾನದಿತೇಃ ಪುತ್ರಾನ್ದೇವಾನ್ ಸ್ವಸ್ತಯೇಽವಿನಾಶಯಾನು ಮದ । ಅನುಸ್ತುಹಿ ॥ ಮಾದ್ಯತೇರ್ಲೋಟಿ ವ್ಯತ್ಯಯೇನ ಶಪ್ । ಮಂದತೇರ್ವಾ ಸ್ತುತ್ಯರ್ಥಸ್ಯಾನಿತ್ಯಮಾಗಮಶಾಸನಮಿತಿ ನುಮಭಾವಃ ॥

ಪ್ರತಿಪದಾರ್ಥ

**ಯೇಭ್ಯಃ**—ಯಾವ ದೇವತೆಗಳಿಗಾಗಿ | **ಮಾತಾ**—ಜಗನ್ನಿರ್ಮಾತ್ರಿಯಾದ ಪೃಥ್ವಿಯು | **ಮಧುಮತ್**—ಮಾಧುರ್ಯೋಪೇತವಾದ । **ಪಯಃ**—ಕ್ಷೀರವನ್ನು । **ಪಿನ್ವತೇ**—ಒದಗಿಸುವಳೋ (ಹಾಗೆಯೇ) । **ಅದ್ರಿಬರ್ಹಾಃ**—ಮೇಘಗಳಿಂದ ಪರಿವೃತವೂ । **ಅದಿತಿಃ**—ಅಖಂಡಾತ್ಮಕವೂ ಆದ । **ದ್ಯೌಃ**—ದ್ಯುಲೋಕವು । **ಪೀಯೂಷಂ**-ಅಮೃತವನ್ನು ಒದಗಿಸುವುದೋ ಅಂತಹ । **ವೃಷಭರಾನ್**—ವೃಷ್ಟಿಯನ್ನು ಹೊತ್ತುತರುವವರೂ । **ಉಕ್ಥಶುಷ್ಮಾನ್**-ಸ್ತುತಿಫಲವಾದ ಶಕ್ತಿಯುಳ್ಳವರೂ । **ಸ್ವಪ್ನಸಃ**—ಉತ್ತಮವಾದ ಕರ್ಮವುಳ್ಳವರೂ ಆದ । **ತಾನ್ ಆದಿತ್ಯಾನ್**-ಆ ಆದಿತ್ಯರನ್ನು । **ಸ್ವಸ್ತಯೇ**—ಕಲ್ಯಾಣಕ್ಕಾಗಿ । **ಅನು ಮದ**—ಪ್ರಶಂಸಿಸು ಮತ್ತು ತೃಪ್ತಿಗೊಳಿಸು.

ಭಾವಾರ್ಥ

ಜಗನ್ನಿರ್ಮಾತ್ರಿಯಾದ ಪೃಥ್ವಿಯು ಯಾವ ದೇವತೆಗಳಿಗೆ ಮಾಧುರ್ಯೋಪೇತವಾದ ಕ್ಷೀರವನ್ನು ಒದಗಿಸುವಳೋ, ಯಾರಿಗೆ ಮೇಘಗಳಿಂದ ಪರಿವೃತವೂ, ಅಖಂಡಾತ್ಮಕವೂ ಆದ ದ್ಯುಲೋಕವು ಅಮೃತವನ್ನು ಒದಗಿಸುವುದೋ ಅಂತಹ ವೃಷ್ಟಿವಾಹಕರೂ, ಸ್ತುತಿಫಲವಾದ ಶಕ್ತಿಯುಳ್ಳವರೂ, ಉತ್ತಮವಾದ ಕರ್ಮವುಳ್ಳವರೂ ಆದ ಆದಿತ್ಯನನ್ನು ಪ್ರಶಂಸಿಸಿ ತೃಪ್ತಿಗೊಳಿಸಿ, ಆದರಿಂದ ನಿಮಗೆ ಕಲ್ಯಾಣವುಂಟು.

## English Translation

To (these deities) to whom the maternal (earth) yields the sweet-flavoured milk, and the cloud-invested, undepressed heaven (yields) ambrosia, to those Adityas whose strength is sacred praise, who are the bringers of rain, the doers of good actions, offer for your welfare laudation.

ವಿಶೇಷವಿಷಯಗಳು

ಅಗ್ನಿಷ್ಟೋಮಯಾಗದಲ್ಲಿ ವೈಶ್ವದೇವಶಸ್ತ್ರಮಂತ್ರಗಳನ್ನು ಪಠಿಸುವಾಗ **ಯೇಭ್ಯೋ ಮಾತಾ** ಎಂಬ ಈ ಋಕ್ಕನ್ನು ಧಾಯ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಅಯಂ ವೇನಶ್ಚೋದಯತ್ಪೃಶ್ನಿಗರ್ಭಾ ಯೇಭ್ಯೋ ಮಾತಾ ಮಧುಮತ್** ಎಂಬ ಸೂತ್ರದಿಂದ (ಆ. ೫-೧೮) ವಿವೃತವಾಗಿರುವುದು.

ಸಂಹಿತಾಪಾಠಃ

ನೃಚಕ್ಷಸೋ ಅನಿಮಿಷಂತೋ ಅರ್ಹಣಾ ಬೃಹದ್ದೇವಾಸೋ ಅಮೃತತ್ವಮಾನಶುಃ ।
ಜ್ಯೋತೀರಥಾ ಅಹಿಮಾಯಾ ಅನಾಗಸೋ ದಿವೋ ವರ್ಷ್ಮಾಣಂ ವಸತೇ ಸ್ವಸ್ತಯೇ ॥ ೪ ॥

ಪದಪಾಠಃ

ನೃಽಚಕ್ಷಸಃ । ಅನಿಽಮಿಷಂತಃ । ಅರ್ಹಣಾ । ಬೃಹತ್ । ದೇವಾಸಃ । ಅಮೃತಽತ್ವಂ । ಆನಶುಃ ।
ಜ್ಯೋತಿಃಽರಥಾಃ । ಅಹಿಽಮಾಯಾಃ । ಅನಾಗಸಃ । ದಿವಃ । ವರ್ಷ್ಮಾಣಂ । ವಸತೇ । ಸ್ವಸ್ತಯೇ ॥ ೪ ॥

ಸಾಯಣಭಾಷ್ಯಂ

**ನೃಚಕ್ಷಸಃ ಕರ್ಮನೇತ್ೄಣಾಂ ಮನುಷ್ಯಾಣಾಂ ದ್ರಷ್ಟಾರಃ ಅತ ಏವಾನಿಮಿಷಂತೋ ನಿಮೇಷಮಕುರ್ವಾಣಾಃ ಸರ್ವದಾ ಜಾಗರೂಕಾ ದೇವಾಸೋ ದೇವಾ ಅರ್ಹಣಾ ಲೋಕಸ್ಯ ಪರಿಚರಣಾರ್ಥಂ ಸ್ತೋತವ್ಯತ್ವಾಯ ಬೃಹದ್ಬೃಂಹಿತಮಮೃತತ್ವಮಮರಣಧರ್ಮಮಾನಶುಃ । ಪ್ರಾಪ್ತಾಃ । ದೇವಾಃ ಖಲು ಮನುಷ್ಯೈಃ ಪೂಜ್ಯಾಃ । ತಸ್ಮಾತ್ಪೂಜಾಹೇತುಂ ದೇವತ್ವಮಾನಶಿರೇ । ಅತ ಏವ ಜ್ಯೋತೀರಥಾ ದೀಪ್ಯಮಾನರಥೋಪೇತಾ ಅಹಿಮಾಯಾಃ ಕೈಶ್ಚಿದಪ್ಯಹಂತವ್ಯಪ್ರಜ್ಞಾ ಅನಾಗಸಃ ಪಾಪರಹಿತಾ ಅದಿತ್ಯಾ ದಿವೋ ದ್ಯುಲೋಕಸ್ಯ ವರ್ಷ್ಮಾಣಂ ನಾಭಿಸ್ಥಾನಂ ಸಮುಚ್ಛ್ರಿತಂ ದೇಶಂ ಸ್ವಸ್ತಯೇಽವಿನಾಶಾಯ ಲೋಕಸ್ಯ ಕ್ಷೇಮಕರಣಾರ್ಥಂ ವಸತೇ । ಅಧಿವಸಂತಿ । ಯದ್ವಾ । ಸ್ವತೇಜಸಾಚ್ಛಾದಯಂತಿ ॥**

ಪ್ರತಿಪದಾರ್ಥ

**ಅನಿಮಿಷಂತಃ**—ಕಣ್ಣೆವೆಯಿಕ್ಕದೆ ಜಾಗರೂಕರಾಗಿರುವವರೂ । **ನೃಚಕ್ಷಸಃ**—ಮಾನವರ ವ್ಯವಹಾರವನ್ನು ನೋಡಬಲ್ಲವರೂ ಆದ । **ದೇವಾಸಃ**—ದೇವತೆಗಳು । **ಅರ್ಹಣಾ**—ಹವಿಸ್ಸಿಗೆ ಅರ್ಹತೆಯನ್ನು ಪಡೆದು । **ಬೃಹತ್**—ಅತ್ಯಧಿಕವಾದ । **ಅಮೃತತ್ವಂ**—ಮರಣರಾಹಿತ್ಯವನ್ನು । **ಆನಶುಃ**—ಸಂಪಾದಿಸಿದ್ದಾರೆ । **ಜ್ಯೋತೀರಥಾಃ**—ಪ್ರಭಾರೂಪವಾದ ರಥವುಳ್ಳವರೂ । **ಅಹಿಮಾಯಾಃ**—ಅಪ್ರತಿಹತವಾದ ಪ್ರಜ್ಞೆಯುಳ್ಳವರೂ।

**ಅನಾಗಸಃ**—ಪಾಪರಹಿತರೂ ಆದ ಆದಿತ್ಯರು । **ದಿವಃ**—ದ್ಯುಲೋಕದ । **ವರ್ಷ್ಮಾಣಂ**—ಅತ್ಯುನ್ನತವಾದ ಪ್ರದೇಶದಲ್ಲಿ । **ಸ್ವಸ್ತಯೇ**—ಲೋಕಕಲ್ಯಾಣಾರ್ಥವಾಗಿ । **ವಸತೇ**—ವಾಸಿಸುತ್ತಾರೆ.

ಭಾವಾರ್ಥ

ಕಣ್ಣೆವೆಯಿಕ್ಕದೆ ಜಾಗರೂಕರಾಗಿರುವವರೂ, ಮಾನವರ ವ್ಯವಹಾರವನ್ನು ನೋಡಬಲ್ಲವರೂ ಆದ ದೇವತೆಗಳು ಹವಿಸ್ಸಿಗೆ ಅರ್ಹತೆಯನ್ನು ಪಡೆದು ಅತ್ಯಧಿಕವಾದ ಮರಣರಾಹಿತ್ಯವನ್ನು ಹೊಂದಿದ್ದಾರೆ. ಪ್ರಭಾರೂಪವಾದ ರಥವುಳ್ಳವರೂ, ಅಪ್ರತಿಹತವಾದ ಪ್ರಜ್ಞೆಯುಳ್ಳವರೂ, ಪಾಪರಹಿತರೂ ಆದ ಆದಿತ್ಯರು ದ್ಯುಲೋಕದ ಅತ್ಯುನ್ನತವಾದ ಪ್ರದೇಶದಲ್ಲಿ ಲೋಕಕಲ್ಯಾಣಾರ್ಥವಾಗಿ ವಾಸಿಸುತ್ತಾರೆ.

## English Translation

The gods, the never-slumbering beholders of mankind, and entitled (to their adoration), have abtained great immortality : conveyed in chariots of light, possessed of unsurpassaable wisdom, devoid of sin, they inhabit the exalted station of heaven for the well-being (of the world).

ಸಂಹಿತಾಪಾಠಃ

**ಸಮ್ರಾಜೋ ಯೇ ಸುವೃಧೋ ಯಜ್ಞಮಾಯಯುರಪರಿಹ್ವೃತಾ ದಧಿರೇ ದಿವಿ ಕ್ಷಯಂ ।**
**ತಾಁ ಆ ವಿವಾಸ ನಮಸಾ ಸುವೃಕ್ತಿಭಿರ್ಮಹೋ ಆದಿತ್ಯಾ ಅದಿತಿಂ ಸ್ವಸ್ತಯೇ॥**

ಪದಪಾಠಃ

**ಸಂऽರಾಜಃ । ಯೇ । ಸುऽವೃಧಃ । ಯಜ್ಞಂ । ಆऽಯಯುಃ । ಅಪರಿऽಹ್ವೃತಾಃ । ದಧಿರೇ । ದಿವಿ । ಕ್ಷಯಂ ।**
**ತಾನ್ । ಆ । ವಿವಾಸ । ನಮಸಾ । ಸುವೃಕ್ತಿऽಭಿಃ । ಮಹಃ । ಆದಿತ್ಯಾನ್ । ಅದಿತಿಂ । ಸ್ವಸ್ತಯೇ ॥ ೫ ॥**

ಸಾಯಣಭಾಷ್ಯಂ

**ಸಮ್ರಾಜಃ ಸರ್ವೇಷಾಂ ರಾಜಾನಃ ಸ್ವತೇಜೋಭಿಃ ಸಮ್ಯಗ್ರಾಜಮಾನಾಃ ಸುವೃಧಃ ಸುವೃದ್ಧಾ ಯೇ ದೇವಾ ಯಜ್ಞಮಾಯಯುಃ ಆಯಾಂತಿ ಸೋಮಾದಿಹವಿರ್ಭಕ್ಷಣಾರ್ಥಂ । ತತೋऽಪರಿಹ್ವೃತಾಃ ಕೈಶ್ಚಿದಪ್ಯಹಿಂಸಿತಾ ಯೇ ದೇವಾ ದಿವಿ ದ್ಯುಲೋಕೇ ಕ್ಷಯಂ ನಿವಾಸಂ ದಧಿರೇ ವಿದಧತಿ ಕುರ್ವಂತಿ । ಋಷಿರಾತ್ಮಾನಮಾಹ । ಮಹೋ ಮಹತೋ ಗುಣಾಧಿಕ್ಯೇನಾದಿತ್ಯಾನದಿತೇಃ ಪುತ್ರಾಂಸ್ತಾನ್ಪ್ರಸಿದ್ಧಾ-**

ನ್ದೇವಾನದಿತಿಂ ತೇಷಾಂ ಮಾತರಮೇತನ್ನಾಮಿಕಾಂ ಚ ಸ್ವಸ್ತಯೇಽವಿನಾಶಾಯ ನಮಸಾ ಹವೀ-ರೂಪೇಣಾನ್ನೇನ ಸುವೃಕ್ತಿಭಿಃ ಶೋಭನಾಭಿಃ ಸ್ತುತಿಭಿಶ್ಚಾ ವಿವಾಸ | ಅಭಿಮುಖ್ಯೇನ ಪರಿಚರ | ವಿವಾಸತಿಃ ಪರಿಚರಣಕರ್ಮಾ ||

ಪ್ರತಿಪದಾರ್ಥ

**ಸಮ್ರಾಜಃ**—ಲೋಕಕ್ಕೆಲ್ಲ ಪ್ರಭುಗಳೂ | **ಸುವೃಧಃ**—ಅಧಿಕವಾದ ವೃದ್ಧಿಯನ್ನು ಹೊಂದಿದವರೂ | **ಅಪರಿಹ್ವೃತಾಃ** – ಯಾರ ಹಿಂಸೆಗೂ ಒಳಪಡದವರೂ ಆದ | **ಯೇ**—ಯಾವ ದೇವತೆಗಳು | **ದಿವಿ**—ದ್ಯುಲೋಕದಲ್ಲಿ | **ಕ್ಷಯಂ**—ನಿವಾಸಸ್ಥಾನವನ್ನು | **ದಧಿರೇ**—ಹೊಂದಿರುವರೋ ಅವರು | **ಯಜ್ಞಂ**—ಯಜ್ಞಕ್ಕೆ | **ಆಯಯುಃ**—ಬಂದಿದ್ದಾರೆ | **ಮಹಃ**--ಮಹದ್ಗುಣವುಳ್ಳವರೂ | **ಆದಿತ್ಯಾನ್**—ಅದಿತಿಪುತ್ರರೂ ಆದ | **ತಾನ್**—ಆ ದೇವತೆಗಳನ್ನೂ | **ಅದಿತಿಂ**—ಅದಿತಿಯನ್ನೂ | **ನಮಸಾ**—ಹವಿಸ್ಸುಗಳಿಂದಲೂ | **ಸುವೃಕ್ತಿಭಿಃ**—ಉತ್ತಮವಾದ ಸ್ತುತಿಗಳಿಂದಲೂ | **ಸ್ವಸ್ತಯೇ**—ಕಲ್ಯಾಣಕ್ಕಾಗಿ | ಆ **ವಿವಾಸ**—ಋಷಿಯು ಪೂಜಿಸುತ್ತಾನೆ.

ಭಾವಾರ್ಥ

ಲೋಕಕ್ಕೆಲ್ಲ ಪ್ರಭುಗಳೂ, ಅಧಿಕವಾದ ವೃದ್ಧಿಯನ್ನು ಹೊಂದಿದವರೂ, ಯಾರ ಹಿಂಸೆಗೂ ಒಳಪಡದವರೂ ಆದ ಯಾವ ದೇವತೆಗಳೂ ದ್ಯುಲೋಕದಲ್ಲಿ ನಿವಾಸಸ್ಥಾನವನ್ನು ಹೊಂದಿರುವರೋ ಅವರು ಯಜ್ಞಕ್ಕೆ ಬಂದಿರುತ್ತಾರೆ. ಮಹದ್ಗುಣವುಳ್ಳವರೂ, ಅದಿತಿಪುತ್ರರೂ ಆದ ಆ ದೇವತೆಗಳನ್ನೂ, ಅದಿತಿಯನ್ನೂ, ಹವಿಸ್ಸುಗಳಿಂದಲೂ, ಉತ್ತಮವಾದ ಸ್ತುತಿಗಳಿಂದಲೂ ಕಲ್ಯಾಣಕ್ಕಾಗಿ ಋಷಿಯು ಸೇವಿಸುತ್ತಾನೆ.

## English Translation

The gods, who, kings over all, and most exalted, have come to the sacrifice, who, uuassailable, abide in heaven : them, the mighty Adityas, (the sage) worships with reverence, and with praises, and also Aditi, for his well-being.

ಸಂಹಿತಾಪಾಠಃ

ಕೋ ವಃ ಸ್ತೋಮಂ ರಾಧತಿ ಯಂ ಜುಜೋಷಥ ವಿಶ್ವೇ ದೇವಾಸೋ ಮನುಷೋ ಯತಿ ಷ್ಠನ |
ಕೋ ವೋಽಧ್ವರಂ ತುವಿಜಾತಾ ಅರಂ ಕರದ್ಯೋ ನಃ ಪರ್ಷದತ್ಯಂಹಃ ಸ್ವಸ್ತಯೇ || ೬ ||

ಪದಪಾಠಃ

ಕಃ | ವಃ | ಸ್ತೋಮಂ | ರಾಧತಿ | ಯಂ | ಜುಜೋಷಥ | ವಿಶ್ವೇ | ದೇವಾಸಃ | ಮನುಷಃ | ಯತಿ | ಸ್ಥನ |

ಕಃ । ವಃ । ಅಧ್ವರಂ । ತುವಿऽಜಾತಾಃ । ಅರಂ । ಕರತ್ । ಯಃ । ನಃ । ಪರ್ಷತ್ । ಅತಿ । ಅಂಹಃ । ಸ್ವಸ್ತಯೇ ॥ ೬ ॥

ಸಾಯಣಭಾಷ್ಯಂ

ಋಷಿರ್ದೇವಾನ್ಪ್ರತಿ ಬಹುಧಾ ವಿತರ್ಕಯತಿ । ಹೇ ದೇವಾಃ ವೋ ಯುಷ್ಮಾಕಂ ಕಃ ಸ್ತೋತಾ-ಸ್ತೋಮಂ ತ್ರಿವೃತ್ಪಂಚದಶಾದಿಲಕ್ಷಣಂ ರಾಧತಿ । ಸಂಸಾಧಯತಿ । ನ ಕಶ್ಚಿದಸ್ತೀತ್ಯರ್ಥಃ । ಯದ್ವಾ । ಮದನ್ಯಃ ಕೋ ವೋ ಯುಷ್ಮಭ್ಯಂ ಸ್ತೋಮಂ ಕರೋತಿ । ಯೂಯಂ ಯಂ ಸ್ತೋತಾರಂ ಜುಜೋಷಥ ಸೇವಧ್ವೇ ॥ ಜುಷೀ ಪ್ರೀತಿಸೇವನಯೋಃ । ಲೇಟಿ ಶವಃ ಶ್ಲುಃ । ಅಡಾಗಮಃ ॥ ಕಿಂ ಚ ಹೇ ಮನುಷೋ ಮಂತಾರೋ ಜ್ಞಾತಾರೋ ಹೇ ವಿಶ್ವೇ ದೇವಾಸೋ ದೇವಾಃ ಯೂಯಂ ಯತಿ ಯತ್ಸಂಖ್ಯಾಃ ಸ್ಥನ ಭವಥ॥ ಯಚ್ಛಬ್ದಾದಪಿ ಛಾಂದಸೋ ಡತಿರ್ದ್ರಷ್ಟವ್ಯಃ ॥ ಹೇ ತುವಿಜಾತಾ ಧಾತ್ರಾದಿವಿಭಾಗೇನ ಬಹುಜನನಾ ಹೇ ದೇವಾಃ ಯುಷ್ಮದರ್ಥಂ ಕೋ ವಾ ಯಜಮಾನೋऽಧ್ವರಂ ಯಜ್ಞಮರಂ ಕರತ್ । ಅಲಂಕರೋತಿ ಸ್ತುತಿ-ಭಿರ್ಹವಿರ್ಭಿಶ್ಚ । ಮದನ್ಯೋ ನಾಸ್ತೀತ್ಯರ್ಥಃ । ಯೋ ಯಜ್ಞೋ ನೋऽಸ್ಮಾನ್ ಸ್ವಸ್ತಯೇऽವಿನಾಶಾ-ಯಾಂಹಃ ಪಾಪರೂಪಂ ಮಾರ್ಗಮನ್ಯದಿಕಮತಿ ಪರ್ಷತ್ ಅತಿಪಾರಯತಿ ತಂ ಯಜ್ಞಂ ಕೋ ವಾಲಂ-ಕರೋತೀತಿ ॥

ಪ್ರತಿಪದಾರ್ಥ

(ಎಲೈ ದೇವತೆಗಳೇ) **ಯಂ**—ಯಾವ ಸ್ತುತಿಕರ್ತನನ್ನು । **ಜುಜೋಷಥ**—ನೀವು ಸೇವಿಸುವಿರೋ ಅಂತಹ । **ಕಃ**—ಯಾವ ಸ್ತುತಿಕರ್ತನು । **ವಃ**—ನಿಮ್ಮನ್ನುದ್ದೇಶಿಸಿ । **ಸ್ತೋಮಂ**—ತ್ರಿವೃದಾದಿ ಸ್ತೋಮವನ್ನು । **ರಾಧತಿ**—ಅರ್ಪಿಸುತ್ತಾನೆ । (ನಾನಲ್ಲದೆ ಇನ್ನಾರರ್ಪಿಸಬಲ್ಲರು) **ವಿಶ್ವೇ ದೇವಾಸಃ**—ಎಲೈ ವಿಶ್ವೇದೇವತೆಗಳೇ । **ಮನುಷಃ**—ಉತ್ತಮವಾದ ಜ್ಞಾನಿಗಳಾದ ನೀವು । **ಯತಿ ಸ್ಥನ**—ಎಷ್ಟು ಜನರಿದ್ದೀರಿ । **ತುವಿಜಾತಾಃ**—ಅನೇಕ ವಿಧವಾದ ಜನ್ಮವುಳ್ಳ ಎಲೈ ದೇವತೆಗಳೇ । **ಯಃ**—ಯಾವ ಯಜ್ಞವು । **ಸ್ವಸ್ತಯೇ**—ನಮ್ಮ ಕಲ್ಯಾಣಕ್ಕಾಗಿ । **ನಃ**—ನಮ್ಮನ್ನು । **ಅಂಹಃ**—ಪಾಪದ ಎಲ್ಲೆಯನ್ನು । **ಅತಿ ಪರ್ಷತ್**—ದಾಟಿಸುವುದೋ ಅಂತಹ । **ಅಧ್ವರಂ**—ಯಜ್ಞವನ್ನು । **ವಃ**—ನಿಮಗಾಗಿ । **ಕಃ**—ಯಾವ ಯಜಮಾನನು । **ಅರಂ ಕರತ್**—ಹವಿರಾದಿಗಳಿಂದ ಅಲಂಕರಿಸುತ್ತಾನೆ.

ಭಾವಾರ್ಥ

ಎಲೈ ದೇವತೆಗಳೇ, ಯಾವ ಸ್ತುತಿಕರ್ತನನ್ನು ನೀವು ಸೇವಿಸುವರೋ ಅಂತಹವನು ಯಾರುತಾನೇ (ನಾನಲ್ಲದೆ) ನಿಮ್ಮನ್ನುದ್ದೇಶಿಸಿ ತ್ರಿವೃದಾದಿ ಸ್ತೋಮವನ್ನು ಅರ್ಪಿಸುತ್ತಾನೆ ? ಎಲೈ ವಿಶ್ವೇದೇವತೆಗಳೇ, ಉತ್ತಮವಾದ ಜ್ಞಾನಿಗಳಾದ ನೀವು ಎಷ್ಟು ಜನರಿದ್ದೀರಿ ? ಅನೇಕವಿಧವಾದ ಜನ್ಮವುಳ್ಳ ಎಲೈ ದೇವತೆಗಳೇ, ಯಾವ ಯಜ್ಞವು ನಮ್ಮ ಕಲ್ಯಾಣಕ್ಕಾಗಿ ನಮ್ಮನ್ನು ಪಾಪದ ಎಲ್ಲೆಯನ್ನು ದಾಟಿಸುವುದೋ ಅಂತಹ ಯಜ್ಞವನ್ನು ನಿಮಗಾಗಿ ಯಾವ ಯಜಮಾನನು ಹವಿರಾದಿಗಳಿಂದ ಅಲಂಕರಿಸುತ್ತಾನೆ ? (ನೆರವೇರಿಸುತ್ತಾನೆ ?)

## English Translation

Who offers you the praise which you like, you wise, universal deities, however many you may be ? Deities from whom many are born, who can

prepare for you such worship as may bear us safe beyond iniquity for our well-being ?

ಸಂಹಿತಾಪಾಠಃ

ಯೇಭ್ಯೋ ಹೋತ್ರಾಂ ಪ್ರಥಮಾಮಾಯೇಜೇ ಮನುಃ ಸಮಿದ್ಧಾಗ್ನಿರ್ಮನಸಾ ಸಪ್ತ ಹೋತೃಭಿಃ ।
ತ ಆದಿತ್ಯಾ ಅಭಯಂ ಶರ್ಮ ಯಚ್ಛತ ಸುಗಾ ನಃ ಕರ್ತ ಸುಪಥಾ ಸ್ವಸ್ತಯೇ ॥ ೭ ॥

ಪದಪಾಠಃ

ಯೇಭ್ಯಃ । ಹೋತ್ರಾಂ । ಪ್ರಥಮಾಂ । ಆಽಯೇಜೇ । ಮನುಃ । ಸಮಿದ್ಧಽಅಗ್ನಿಃ। ಮನಸಾ । ಸಪ್ತ । ಹೋತೃಽಭಿಃ ।
ತೇ । ಆದಿತ್ಯಾಃ । ಅಭಯಂ । ಶರ್ಮ । ಯಚ್ಛತ । ಸುಽಗಾ । ನಃ । ಕರ್ತ । ಸುಽಪಥಾ । ಸ್ವಸ್ತಯೇ ॥

ಸಾಯಣಭಾಷ್ಯಂ

ಸಮಿದ್ಧಾಗ್ನಿರ್ಹವಿರ್ಭಿಃ ಸಮ್ಯಗ್ದೀಪ್ತಾಗ್ನಿರ್ಮನುರ್ವೈವಸ್ವತೋ ಮನುಷ್ಯಾಣಾಂ ಪ್ರಥಮಭಾವೀ ಶ್ರದ್ದಧಾನೇನ ಮನಸಾ ಸಪ್ತ ಸಪ್ತಸಂಖ್ಯಾಕೈರ್ಹೋತೃಭಿರ್ವಷಟ್ಕರ್ತೃಭಿರ್ಋತ್ವಿಗ್ಭಿಶ್ಚ ಸಹ ಯೇಭ್ಯೋ ಯುಷ್ಮಭ್ಯಂ ಪ್ರಥಮಾಂ ಪ್ರಥಮಂ ಮುಖ್ಯಂ ಯದ್ವಾ ಸರ್ವೇಷಾಂ ಮನುಷ್ಯಾಣಾಮಗ್ರೇ ಕ್ರಿಯಮಾಣತ್ವಾದಾದ್ಯಂ ಹೋತ್ರಾಂ। ಹೂಯಂತೇ ಹವೀಂಷ್ಯತ್ರೇತಿ ಹೋತ್ರಾ ಯಜ್ಞಃ। ತಂ। ಯದ್ವಾ। ಆಹೂಯಂತೇ ದೇವಾಃ ಸ್ತುತಿಭಿರತ್ರೇತಿ। ತಂ ಯಜ್ಞಮಾಯೇಜೇ ಆಭಿಮುಖ್ಯೇನೇಷ್ಟವಾನ್ ॥ ಯಜೇರ್ಲಿಟಿ ರೂಪಂ। ಯದ್ವಾ। ಲಿಟಿ ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ। ಯಜಿವಪ್ಯೋರಲಿಟ್ಯೇತ್ವಂ ವಕ್ತವ್ಯಂ। ಕಾ. ೬-೪-೧೨೦-೪। ಇತಿ ವಚನಾದೇಕಾರಃ ॥ ಹೇ ಆದಿತ್ಯಾ ಅದಿತೇಃ ಪುತ್ರಾ ಹೇ ದೇವಾಃ ತೇ ಯೂಯಂ ನೋಽಸ್ಮಭ್ಯಮಭಯಂ ಶರ್ಮ ಚ ಸುಖಂ ಪ್ರಯಚ್ಛತ। ಕಿಂಚ ನೋಽಸ್ಮಾಕಂ ಸ್ವಸ್ತಯೇ ಕ್ಷೇಮಾಯ ಸುಪಥಾ ಸುಪಥಾನಿ ಶೋಭನಾನ್ಯೈದಿಕಮಾರ್ಗಾನ್ ಸುಗಾ ಸುಷ್ಠು ಗಂತವ್ಯಾನ್ ಕರ್ತ। ಕುರುತ ॥ ಕರೋತೇರ್ಲೋಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್। ತಬಾದೇಶಃ ॥

ಪ್ರತಿಪದಾರ್ಥ

**ಆದಿತ್ಯಾಃ**—ಅದಿತಿಪುತ್ರರಾದ ಎಲೈ ದೇವತೆಗಳೇ। **ಸಮಿದ್ಧಾಗ್ನಿಃ**—ಹವಿಸ್ಸುಗಳಿಂದ ಪ್ರಜ್ವಲಿತವಾದ ಅಗ್ನಿಯುಳ್ಳ। **ಮನುಃ**—ಮನುವು। **ಮನಸಾ**—ಧ್ಯಾನಪೂರ್ವಕವಾಗಿಯೂ। **ಸಪ್ತ**—ಸಪ್ತಸಂಖ್ಯಾಕವಾದ। **ಹೋತೃಭಿಃ**—ಹೋತೃಗಳೊಡಗೂಡಿಯೂ। **ಯೇಭ್ಯಃ**—ಯಾವ ನಿಮ್ಮನ್ನುದ್ದೇಶಿಸಿ। **ಹೋತ್ರಾಂ**—ಯಜ್ಞ

ವನ್ನು । **ಆಯೇಜೇ**—ಅರ್ಪಿಸಿದನೋ ಅಂತಹ । **ತೇ**—ನೀವು । **ನಃ**—ನಮಗೆ । **ಅಭಯಂ**—ಅಭಯ ವನ್ನೂ । **ಶರ್ಮ**—ಸುಖವನ್ನೂ । **ಯಚ್ಛತ**—ಒದಗಿಸಿರಿ । **ನಃ**—ನಮ್ಮ । **ಸ್ವಸ್ತಯೇ**—ಕಲ್ಯಾಣಕ್ಕಾಗಿ। **ಸುಪಥಾ**—ಉತ್ತಮವಾದ ವೈದಿಕಮಾರ್ಗಗಳನ್ನು । **ಸುಗಾ**—ಸುಲಭಸಂಚಾರವುಳ್ಳದ್ದನ್ನಾಗಿ । **ಕರ್ತ**—ಮಾಡಿರಿ.

ಭಾವಾರ್ಥ

ಅದಿತಿಪುತ್ರರಾದ ಎಲೈ ದೇವತೆಗಳೇ, ಹವಿಸ್ಸುಗಳಿಂದ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿದ ಮನುವು ಧ್ಯಾನಪೂರ್ವಕವಾಗಿಯೂ, ಸಪ್ತಸಂಖ್ಯಾಕವಾದ ಹೋತೃಗಳೊಡಗೂಡಿಯೂ, ಯಾವ ನಿಮ್ಮನ್ನುದ್ದೇಶಿಸಿ ಯಜ್ಞವನ್ನು ಅರ್ಪಿಸಿದನೋ ಅಂತಹ ನೀವು ನಮಗೆ ಅಭಯವನ್ನೂ, ಸುಖವನ್ನೂ ಒದಗಿಸಿರಿ. ನಮ್ಮ ಕಲ್ಯಾಣಕ್ಕಾಗಿ ಉತ್ತಮವಾದ ವೈದಿಕಮಾರ್ಗಗಳನ್ನು ಸುಲಭಸಂಚಾರವುಳ್ಳದ್ದನ್ನಾಗಿ (ಅನುಸರಿಸುವಂತೆ) ಮಾಡಿರಿ.

English Translation

Adityas, to whom Manu, having kindled the fire, offered the first sacrifice with (reverent) mind, (aided) by the seven ministrant priests, bestow upon us prosperity, free from peril; provide for us pleasant paths easy to travel for our well-being.

ವಿಶೇಷವಿಷಯಗಳು

ಸಪ್ತಹೋತೃಗಳ ವಿಷಯ—ಋ. ಸಂ. ಭಾಗ ೧೫ ರ 693 ನೇ ಪೇಜಿನಲ್ಲಿ ವಿವರಿಸಲಾಗಿದೆ.

ಸಂಹಿತಾಪಾಠಃ

ಯ ಈಶಿರೇ ಭುವನಸ್ಯ ಪ್ರಚೇತಸೋ ವಿಶ್ವಸ್ಯ ಸ್ಥಾತುರ್ಜಗತಶ್ಚ ಮಂತವಃ ।
ತೇ ನಃ ಕೃತಾದಕೃತಾದೇನಸಸ್ಪರ್ಯದ್ಯಾ ದೇವಾಸಃ ಪಿಪೃತಾ ಸ್ವಸ್ತಯೇ ॥

ಪದಪಾಠಃ

ಯೇ । ಈಶಿರೇ । ಭುವನಸ್ಯ । ಪ್ರಚೇತಸಃ । ವಿಶ್ವಸ್ಯ । ಸ್ಥಾತುಃ । ಜಗತಃ । ಚ । ಮಂತವಃ ।
ತೇ । ನಃ । ಕೃತಾತ್ । ಅಕೃತಾತ್ । ಏನಸಃ । ಪರಿ । ಅದ್ಯ । ದೇವಾಸಃ । ಪಿಪೃತ । ಸ್ವಸ್ತಯೇ ॥ ೮ ॥

ಸಾಯಣಭಾಷ್ಯಂ

**ಪ್ರಚೇತಸಃ ಪ್ರಕೃಷ್ಟಜ್ಞಾನಾ ಮಂತವಃ ಸರ್ವಸ್ಯ ವೇದಿತಾರೋ ಯೇ ದೇವಾಃ ಸ್ಥಾತುಃ ಸ್ಥಾವರಸ್ಯ ಜಗತೋ ಜಂಗಮಸ್ಯ ವಿಶ್ವಸ್ಯ ಸರ್ವಸ್ಯ ಭುವನಸ್ಯ ಲೋಕಸ್ಯೇಶಿರೇ ಈಶ್ವರಾ ಭವಂತಿ। ಅಥ ಪ್ರತ್ಯಕ್ಷಕೃತಃ । ತೇ ದೇವಾಸೋ ದೇವಾಃ ಯ ಉಕ್ತಗುಣಾಸ್ತೇ ಯೂಯಂ ನೋಽಸ್ಮಾನ್ಕೃತಾತ್ಕಾಯಿಕಾತ್ಪಾ-**

**ಪಾತ್ ಅಕೃತಾತ್ಕರಚರಣಾದಿಭಿರಕೃತಾದೇನಸಃ ಕಿಂತು ಮಾನಸಾತ್ಪಾಪಾಚ್ಚಾದ್ಯಾಸ್ಮಿನ್ದಿನೇ ಸ್ವಸ್ತಯೇಽ-ವಿನಾಶಾಯಾಯುಷೋಽಭಿವೃದ್ಧಯೇ ಪಿಪೃತ | ಪಾರಯತ ಪಾಪರಹಿತಾನ್ಕುರುತೇತ್ಯರ್ಥಃ ||**

ಪ್ರತಿಪದಾರ್ಥ

**ಪ್ರಚೇತಸಃ**—ಉತ್ತಮವಾದ ಜ್ಞಾನವುಳ್ಳವನೂ | **ಮಂತವಃ**—ಎಲ್ಲವನ್ನೂ ತಿಳಿದವರೂ ಆದ | **ದೇವಾಸಃ**—ಎಲ್ಲಾ ದೇವತೆಗಳೇ | **ಯೇ**—ಯಾವ ನೀವು | **ಸ್ಥಾತುಃ**—ಸ್ಥಾವರಾತ್ಮಕವೂ | **ಜಗತಃ**—ಜಂಗಮಾತ್ಮಕವೂ ಆದ | **ವಿಶ್ವಸ್ಯ ಭುವನಸ್ಯ**—ಸಕಲ ಲೋಕಕ್ಕೂ | **ಈಶಿರೇ**—ಪ್ರಭುಗಳಾಗಿದ್ದೀರೋ ಅಂತಹ | **ತೇ**—ನೀವು | **ನಃ**—ನಮ್ಮನ್ನು | **ಕೃತಾತ್**—ನಾವು ಮಾಡಿರುವುದೂ | **ಅಕೃತಾತ್**—ಹಸ್ತಾದಿಗಳಿಂದ ಮಾಡದಿರುವುದೂ ಆದ | **ಏನಸಃ ಪರಿ**—ಪಾಪದಿಂದ | **ಅದ್ಯ**—ಇಂದು | **ಸ್ವಸ್ತಯೇ**—ನಮಗೆ ಒಳ್ಳೆಯದಾಗಲು | **ಪಿಪೃತ**—ದಾಟಿಸಿರಿ.

ಭಾವಾರ್ಥ

ಉತ್ತಮವಾದ ಜ್ಞಾನವುಳ್ಳವರೂ, ಎಲ್ಲವನ್ನೂ ತಿಳಿದವರೂ ಆದ ಎಲ್ಲಾ ದೇವತೆಗಳೇ, ಸ್ಥಾವರಾತ್ಮಕವೂ, ಜಂಗಮಾತ್ಮಕವೂ ಆದ ಸಕಲ ಲೋಕಕ್ಕೂ ಪ್ರಭುಗಳಾಗಿರುವ ನೀವು ನಮ್ಮನ್ನು ನಮ್ಮ ಸಕಲ ಪಾಪಗಳಿಂದಲೂ ಬಿಡುಗಡೆಮಾಡಿರಿ. ನಮಗೆ ಕಲ್ಯಾಣವುಂಟಾಗುವಂತೆ ಮಾಡಿರಿ.

English Translation

May the wise and omniscient deities, who rule over the whole world both stationery aud moveable, deliver us to-day from committed and uncommitted sin, for our well-being.

ಸಂಹಿತಾಪಾಠಃ

ಭರೇಷ್ವಿಂದ್ರಂ ಸುಹವಂ ಹವಾಮಹೇಽಂಹೋಮುಚಂ ಸುಕೃತಂ ದೈವ್ಯಂ ಜನಂ |
ಅಗ್ನಿಂ ಮಿತ್ರಂ ವರುಣಂ ಸಾತಯೇ ಭಗಂ ದ್ಯಾವಾಪೃಥಿವೀ ಮರುತಃ ಸ್ವಸ್ತಯೇ || ೮ ||

ಪದಪಾಠಃ

ಭರೇಷು | ಇಂದ್ರಂ | ಸುऽಹವಂ | ಹವಾಮಹೇ | ಅಂಹಃऽಮುಚಂ | ಸುऽಕೃತಂ | ದೈವ್ಯಂ | ಜನಂ | ಅಗ್ನಿಂ | ಮಿತ್ರಂ | ವರುಣಂ | ಸಾತಯೇ | ಭಗಂ | ದ್ಯಾವಾಪೃಥಿವೀ ಇತಿ | ಮರುತಃ | ಸ್ವಸ್ತಯೇ ||

ಸಾಯಣಭಾಷ್ಯಂ

**ಅಂಹೋಮುಚಮಂಹಸಃ ಪಾಪಸ್ಯ ಮೋಚಕಂ ಸುಹವಂ ಶೋಭನಾಹ್ವಾನಮಿಂದ್ರಂ ಭರೇಷು | ಭೃಣಂತಿ ಭರ್ಜಯಂತಿ ವಿನಾಶಯಂತಿ ಶತ್ರೂನತ್ರೇತಿ ಭರಾಃ ಸಂಗ್ರಾಮಾಃ | ತೇಷು ಹವಾಮಹೇ | ರಕ್ಷ-**

ಣಾಯಾಹ್ವಯಾಮಃ । ಕಿಂಚ ಸುಕೃತಂ ಸುಕರ್ಮಾಣಂ ದೈವ್ಯಂ ದೇವಸಂಬಂಧಿನಮನ್ಯಂ ಜನಂ ಚಾಹ್ವ-ಯಾಮಹೇ । ತಂ ಜನಮುದ್ದಿಶತಿ । ಅಗ್ನಿಂ ಮಿತ್ರಂ ವರುಣಂ ಭಗಂ ಭಜನೀಯಮೇತನ್ನಾಮಾನಂ ದೇವಂ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಮರುತಶ್ಚ ಸಾತಯೇಽನ್ನಲಾಭಾಯ ಸ್ವಸ್ತಯೇಽವಿನಾ-ಶಾಯ ರಕ್ಷಣಾಯಾಹ್ವಯಾಮಹೇ ॥

ಪ್ರತಿಪದಾರ್ಥ

**ಅಂಹೋಮುಚಂ**—ಪಾಪದಿಂದ ಬಿಡುಗಡೆಮಾಡತಕ್ಕವನೂ । **ಸುಹವಂ**—ಉತ್ತಮವಾದ ಆಹ್ವಾನಕ್ಕೆ ಪಾತ್ರನೂ ಆದ । **ಇಂದ್ರಂ**—ಇಂದ್ರನನ್ನು । **ಭರೇಷು**—ಯುದ್ಧಗಳಲ್ಲಿ । **ಹವಾಮಹೇ**—ಸಹಾಯಕ್ಕೆ ಕರೆಯುತ್ತೇವೆ । **ಸುಕೃತಂ**—ಉತ್ತಮವಾದ ಕರ್ಮಕರ್ತರೂ । **ದೈವ್ಯಂ ಜನಂ**—ದೇವತೆಗಳ ಗುಂಪಿಗೆ ಸೇರಿದವರೂ ಆದ । **ಅಗ್ನಿಂ**—ಅಗ್ನಿಯನ್ನೂ । **ಮಿತ್ರಂ**—ಮಿತ್ರನನ್ನೂ । **ವರುಣಂ**—ವರುಣನನ್ನೂ । **ಭಗಂ**—ಭಗನನ್ನೂ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳನ್ನೂ । **ಮರುತಃ**—ಮರುತ್ತುಗಳನ್ನೂ । **ಸಾತಯೇ**—ಅನ್ನಲಾಭಕ್ಕಾಗಿಯೂ । **ಸ್ವಸ್ತಯೇ**—ನಮ್ಮ ಕಲ್ಯಾಣಕ್ಕಾಗಿಯೂ ಕರೆಯುತ್ತೇವೆ.

ಭಾವಾರ್ಥ

ಪಾಪದಿಂದ ಬಿಡುಗಡೆಮಾಡತಕ್ಕವನೂ, ಉತ್ತಮವಾದ ಆಹ್ವಾನಕ್ಕೆ ಪಾತ್ರನೂ ಆದ ಇಂದ್ರನನ್ನು ಯುದ್ಧಗಳಲ್ಲಿ ಸಹಾಯಕ್ಕೆ ಕರೆಯುತ್ತೇವೆ. ಉತ್ತಮವಾದ ಕರ್ಮಕರ್ತರೂ, ದೇವತೆಗಳ ಗುಂಪಿಗೆ ಸೇರಿದವರೂ ಆದ ಅಗ್ನಿಯನ್ನೂ, ಮಿತ್ರನನ್ನೂ, ವರುಣನನ್ನೂ, ಭಗನನ್ನೂ, ದ್ಯಾವಾಪೃಥಿವಿಗಳನ್ನೂ, ಮರುತ್ತುಗಳನ್ನೂ ಸಹ ಅನ್ನಲಾಭಕ್ಕಾಗಿಯೂ, ನಮ್ಮ ಕಲ್ಯಾಣಕ್ಕಾಗಿಯೂ ಪ್ರಾರ್ಥಿಸಿ ಕರೆಯುತ್ತೇವೆ.

English Translalion

We call in battles upon the well-invoked Indra, the liberator from sin, and upon the virtuous folk of heaven, Agni, Mitra, Varuna, Bhaga, Heaven and Earth, the Maruts, for the acquisition (of food), for well-being.

ಸಂಹಿತಾಪಾಠಃ

ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಂ ಸುಶರ್ಮಾಣಮದಿತಿಂ ಸುಪ್ರ-ಣೀತಿಂ ।
ದೈವೀಂ ನಾವಂ ಸ್ವರಿತ್ರಾಮನಾಗಸಮಸ್ರವಂತೀಮಾ ರುಹೇಮಾ ಸ್ವಸ್ತಯೇ ॥

ಪದಪಾಠಃ

ಸುऽತ್ರಾಮಾಣಂ । ಪೃಥಿವೀಂ । ದ್ಯಾಂ । ಅನೇಹಸಂ । ಸುऽಶರ್ಮಾಣಂ । ಅದಿತಿಂ । ಸುऽಪ್ರನೀತಿಂ । ದೈವೀಂ । ನಾವಂ । ಸುऽಅರಿತ್ರಾಂ । ಅನಾಗಸಂ । ಅಸ್ರವಂತೀಂ । ಆ । ರುಹೇಮ । ಸ್ವಸ್ತಯೇ ॥ ೧೦ ॥

ಸಾಯಣಭಾಷ್ಯಂ

**ಅದಿತಿದೇವತಾಕಸ್ಯ ಪಶೋಃ ಸುತ್ರಾಮಾಣಮಿತ್ಯೇಷಾ ವಪಾಯಾಗಸ್ಯ ಯಾಜ್ಯಾ । ಸೂತ್ರಿತಂ ಚ । ಅದಿತಿರ್ಹ್ಯಜನಿಷ್ಟ ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಂ । ಆ-೩-೮ । ಇತಿ ॥ ಪ್ರಾಯಣೀಯೇಷ್ಟಾವಾದಿತ್ಯಸ್ಯ ಹವಿಷ ಏಷೈವಾನುವಾಕ್ಯಾ ಸೈವೋದಯನೀಯಾಯಾ ಯಾಜ್ಯಾ । ಸೂತ್ರಿತಂ ಚ । ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಂ ಮಹೀಮೂ ಷು ಮಾತರಂ ಸುವ್ರತಾನಾಂ । ಆ-೪-೩ । ಇತಿ ॥ ಪ್ರಯಾಣೇಽನಯೈವ ನಾವಮಾರೋಹೇತ್ । ಸೂತ್ರಿತಂ ಚ । ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಮಿತಿ ನಾವಂ । ಆ.ಗೃ.೨-೬-೮। ಇತಿ ॥**

**ದ್ಯುಲೋಕೋ ನೌರೂಪಕತಯಾ ಸ್ತೂಯತೇ । ಸುತ್ರಾಮಾಣಂ ಸುಷ್ಠು ತ್ರಾಯಂತೀಂ ಪೃಥಿವೀಂ ವಿಸ್ತೃತಾಮನೇಹಸಂ ಪಾಪರಹಿತಾಂ ಸುಶರ್ಮಾಣಂ ಶೋಭನಸುಖಯುಕ್ತಾಮದಿತಿಮದೀನಾಂ ಸುಪ್ರಣೀತಿಂ ಸುಪ್ರಣಯನಾಂ ಸುಷ್ಠು ಪ್ರಣೇತ್ರೀ ದೈವೀಂ ದೇವಸಂಬಂಧಿನೀಂ ಸ್ವರಿತ್ರಾಂ ಶೋಭನಾರಿತ್ರಾಂ ಜಲಾಹರಣಶೀಲದಾರುಯುಕ್ತಾಮನಾಗಸಂ ಪಾಪರಹಿತಾಮಸ್ರವಂತೀಮಗಚ್ಛಂತೀಮವಿನಶ್ವರೀಂ ನಾವಂ ನಾವಮಿವ ಸ್ಥಿತಾಂ ದ್ಯಾಂ ಸ್ವಸ್ತಯೇಽವಿನಾಶಾಯ ದೇವತ್ವಪ್ರಾಪ್ತಯ ಆ ರುಹೇಮ । ವಯಮಾರೋಹೇಮ ॥ ರೋಹತೇರ್ಲಿಙಿ ಲಿಙ್ಯಾಶಿಷ್ಯಙ್ಙಿತ್ಯಙ್ಪ್ರತ್ಯಯಃ ॥**

ಪ್ರತಿಪದಾರ್ಥ

**ಸುತ್ರಾಮಾಣಂ**—ಸುಲಭವಾಗಿ ರಕ್ಷಿಸತಕ್ಕದ್ದೂ । **ಪೃಥಿವೀಂ**—ವಿಸ್ತೃತವಾದುದೂ । **ಅನೇಹಸಂ**—ಪಾಪರಹಿತವಾದುದೂ । **ಸುಶರ್ಮಾಣಂ**—ಉತ್ತಮವಾದ ಸುಖಯುಕ್ತವಾದುದೂ । **ಅನಾಗಸಂ**—ದೋಷರಹಿತವಾದುದೂ । **ಅದಿತಿಂ**—ಅಖಂಡಾತ್ಮಕವಾದುದೂ । **ಸುಪ್ರಣೀತಿಂ**—ಉತ್ತಮವಾದ ಮಾರ್ಗದರ್ಶಕವಾದುದೂ। **ದೈವೀಂ**—ದೇವಸಂಬಂಧಿಯಾದುದೂ । **ಸ್ವರಿತ್ರಾಂ**—ಶ್ರೇಷ್ಠವಾದ ಹರಿಗೋಲುಳ್ಳದ್ದೂ । **ಅಸ್ರವಂತೀಂ**—ನಾಶರಹಿತವಾದುದೂ । **ನಾವಂ**—ದೋಣಿಯಂತೆ ದಾಟಿಸುತಕ್ಕದ್ದೂ ಆದ । **ದ್ಯಾಂ**—ದ್ಯುಲೋಕವನ್ನು । **ಸ್ವಸ್ತಯೇ**—ನಮ್ಮ ಕಲ್ಯಾಣಕ್ಕಾಗಿ । **ಆ ರುಹೇಮ**—ಹತ್ತೋಣ.

ಭಾವಾರ್ಥ

ಸುಲಭವಾಗಿ ರಕ್ಷಿಸತಕ್ಕದ್ದೂ, ವಿಸ್ತೃತವಾದುದೂ, ಪಾಪರಹಿತವಾದುದೂ, ಉತ್ತಮವಾದ ಸುಖವನ್ನು ಕೊಡತಕ್ಕದೂ, ದೋಷರಹಿತವಾದುದೂ, ಅಖಂಡಾತ್ಮಕವಾದುದೂ, ಉತ್ತಮವಾದ ಮಾರ್ಗದರ್ಶಕವಾದುದೂ,ದೇವಸಂಬಂಧಿಯಾದುದೂ, ಶ್ರೇಷ್ಠವಾದ ಹರಿಗೋಲುಳ್ಳದ್ದೂ, ನಾಶರಹಿತವಾದುದೂ, ದೋಣಿಯಂತೆ ದಾಟಿಸತಕ್ಕದ್ದೂ ಆದ ದ್ಯುಲೋಕವನ್ನು ನಮ್ಮ ಕಲ್ಯಾಣಕ್ಕಾಗಿ ಹತ್ತೋಣ.

## English Translation

May we for our well-being ascend the well-oared, defectless, unyielding, divine vessel, the safe-sheltering expansive heaven, exempt from evil, replete with happieess, exalted and right-directing.

ವಿಶೇಷವಿಷಯಗಳು

ಅದಿತಿದೇವತೆಯನ್ನುದ್ದೇಶಿಸಿ ಮಾಡುವ ಪಶುಹೋಮದಲ್ಲಿ ವಪಾಹೋಮಮಾಡುವಾಗ **ಸುತ್ರಾಮಾಣಂ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಅದಿತಿರ್ಹ್ಯಜನಿಷ್ಟ**

**ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಂ** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು. ಪ್ರಾಯಣೀಯೇಷ್ಟಿಯಲ್ಲಿ ಆದಿತ್ಯನನ್ನುದ್ದೇಶಿಸಿ ಮಾಡುವ ಹವಿರ್ಹೋಮದಲ್ಲಿ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿಯೂ ಉದಯನೀಯೇಷ್ಟಿಯಲ್ಲಿ ಯಾಜ್ಯಾಮಂತ್ರವನ್ನಾಗಿಯೂ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಂ ಮಹೀಮೂ ಷು ಮಾತರಂ ಸುವ್ರತಾನಾಂ** ಎಂಬ ಸೂತ್ರದಿಂದ (ಆ. ೪-೩) ವಿವೃತವಾಗಿರುವುದು. ಪ್ರಯಾಣಕಾಲದಲ್ಲಿ ದಾರಿಯಲ್ಲಿ ಸಿಕ್ಕುವ ನದಿಯನ್ನು ದಾಟುವಸಂದರ್ಭದಲ್ಲಿ ಈ ಋಕ್ಕನ್ನು ಪಠಿಸಿ ನಾವೆ (ದೋಣಿ) ಯನ್ನು ಹತ್ತಬೇಕೆಂದು ಆಶ್ವಲಾಯನಗೃಹಸೂತ್ರದ—**ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಮಿತಿ ನಾವಂ** ಎಂಬ ಸೂತ್ರದಿಂದ (ಆ. ಗೃ. ೨-೬-೮) ವಿವೃತವಾಗಿರುವುದು.

ಸಂಹಿತಾಪಾಠಃ

ವಿಶ್ವೇ ಯಜತ್ರಾ ಅಧಿ ವೋಚತೋತಯೇ ತ್ರಾಯಧ್ವಂ ನೋ ದುರೇವಾಯಾ ಅಭಿಹ್ರುತಃ ।
ಸತ್ಯಯಾ ವೋ ದೇವಹೂತ್ಯಾ ಹುವೇಮ ಶೃಣ್ವತೋ ದೇವಾ ಅವಸೇ ಸ್ವಸ್ತಯೇ ॥ ೧೧ ॥

ಪದಪಾಠಃ

ವಿಶ್ವೇ । ಯಜತ್ರಾಃ । ಅಧಿ । ವೋಚತ । ಊತಯೇ । ತ್ರಾಯಧ್ವಂ । ನಃ । ದುಃऽಏವಾಯಾಃ । ಅಭಿऽಹ್ರುತಃ ।
ಸತ್ಯಯಾ । ವಃ । ದೇವऽಹೂತ್ಯಾ । ಹುವೇಮ । ಶೃಣ್ವತಃ । ದೇವಾಃ । ಅವಸೇ । ಸ್ವಸ್ತಯೇ ॥ ೧೧ ॥

ಸಾಯಣಭಾಷ್ಯಂ

ಹೇ ಯಜತ್ರಾ ಯಜನೀಯಾ ಹೇ ವಿಶ್ವೇ ಸರ್ವೇ ದೇವಾಃ ಯೂಯಮೂತಯೇ ರಕ್ಷಣಾರ್ಥಮಧಿ ವೋಚತ। ಅಸ್ಮಾನಧಿಬ್ರೂತ । ಅಭಾಷ್ಯ ಚಾಭಿಹ್ರುತೋऽಭಿಹಿಂಸಿತ್ರ್ಯಾ ದುರೇವಾಯಾ ದುರ್ಗತೇರ್ನೋऽಸ್ಮಾಂಸ್ತ್ರಾಯಧ್ವಂ। ಯದ್ಯೇವಂ ಕುರುಥ ತರ್ಹಿ ಹೇ ದೇವಾಃ ಶೃಣ್ವತಃ ಸ್ತೋತ್ರಾಣ್ಯಸ್ಮಾಭಿರುಕ್ತಾನಿ ತಾದೃಶಾನ್ವೋ ಯುಷ್ಮಾನ್ ಸತ್ಯಯಾ ಯಥಾರ್ಥಭೂತಯಾ ದೇವಹೂತ್ಯಾ । ದೇವಾ ಹೂಯಂತೇऽನಯೇತಿ ದೇವಹೂತಿಃ ಸ್ತುತಿಃ । ತಯಾ ವಯಂ ಹುವೇಮ । ಆಹ್ವಯೇಮ । ಕಿಮರ್ಥಂ । ಅವಸೇ ರಕ್ಷಣಾಯ ಶತ್ರುಭ್ಯಃ ಸ್ವಸ್ತಯೇ ಕ್ಷೇಮಾಯ ಜೀವನಾಭಿವೃದ್ಧಯೇ ಚ ॥

ಪ್ರತಿಪದಾರ್ಥ

**ಯಜತ್ರಾಃ**—ಪೂಜ್ಯರಾದ। **ವಿಶ್ವೇ**—ಎಲೈ ಸಮಸ್ತದೇವತೆಗಳೇ। **ಊತಯೇ**—ನಮ್ಮ ರಕ್ಷಣಾರ್ಥವಾಗಿ । **ಅಧಿ ವೋಚತ**—ನಮ್ಮ ವಿಷಯದಲ್ಲಿ ಅನುಗ್ರಹಾತ್ಮಕವಾದ ಪ್ರಶಂಸೆಯನ್ನು ಮಾಡಿರಿ । **ಅಭಿ ಹ್ರುತಃ**—ನಮ್ಮನ್ನು

ಹಿಂಸಿಸುವ । **ದುರೇವಾಯಾಃ**—ದುಷ್ಟಶಕ್ತಿಯಿಂದ । **ನಃ**—ನಮ್ಮನ್ನು । **ತ್ರಾಯಧ್ವಂ**—ರಕ್ಷಿಸಿರಿ । **ದೇವಾಃ**—ಎಲೈ ದೇವತೆಗಳೇ । **ಶೃಣ್ವತಃ**—ನಮ್ಮ ಸ್ತುತಿಗಳನ್ನು ಕೇಳತಕ್ಕ । **ವಃ**—ನಿಮ್ಮನ್ನು । **ಸತ್ಯಯಾ**—ಸತ್ಯಾತ್ಮಕವಾದುದೂ । **ದೇವಹೂತ್ಯಾ**—ದೇವತೆಗಳನ್ನು ಪ್ರಶಂಸಿಸುವುದೂ ಆದ ಸ್ತುತಿಯಿಂದ । **ಅವಸೇ**—ನಮ್ಮ ರಕ್ಷಣೆಗಾಗಿಯೂ । **ಸ್ವಸ್ತಯೇ**—ನಮ್ಮ ಕಲ್ಯಾಣಕ್ಕಾಗಿಯೂ । **ಹುವೇಮ**—ಕರೆಯುತ್ತೇವೆ.

ಭಾವಾರ್ಥ

ಪೂಜ್ಯರಾದ ಎಲೈ ದೇವತೆಗಳೇ, ನಮ್ಮ ರಕ್ಷಣಾರ್ಥವಾಗಿ ನಮ್ಮ ವಿಷಯದಲ್ಲಿ ಅನುಗ್ರಹಾತ್ಮಕವಾದ ಪ್ರಶಂಸೆಯನ್ನು ಮಾಡಿರಿ. ನಮ್ಮನ್ನು ಹಿಂಸಿಸುವ ದುಷ್ಟಶಕ್ತಿಯಿಂದ ನಮ್ಮನ್ನು ರಕ್ಷಿಸಿರಿ. ಎಲೈ ದೇವತೆಗಳೇ, ನಮ್ಮ ಸ್ತುತಿಗಳನ್ನು ಕೇಳತಕ್ಕ ನಿಮ್ಮನ್ನು ಸತ್ಯಾತ್ಮಕವೂ, ದೇವತೆಗಳನ್ನು ಪ್ರಶಂಸಿಸುವುದೂ ಆದ ಸ್ತುತಿಯಿಂದ ನಮ್ಮ ರಕ್ಷಣೆಗಾಗಿಯೂ, ನಮ್ಮ ಕಲ್ಯಾಣಕ್ಕಾಗಿಯೂ ಪ್ರಾರ್ಥಿಸಿ ಕರೆಯುತ್ತೇವೆ.

English Translation

Adorable, universal gods, advocate our cause for our protection ; preserve us from malignant adversity, may we with sincere invocation invoke you, gods, who listen (to our praise) for our protection, for our well-being.

ಸಂಹಿತಾಪಾಠಃ

ಅಪಾಮೀವಾಮಪ ವಿಶ್ವಾಮನಾಹುತಿಮಪಾರಾತಿಂ ದುರ್ವಿದತ್ರಾಮಘಾಯತಃ ।
ಆರೇ ದೇವಾ ದ್ವೇಷೋ ಅಸ್ಮದ್ಯುಯೋತನೋರು ಣಃ ಶರ್ಮ ಯಚ್ಛತಾ ಸ್ವಸ್ತಯೇ ॥ ೧೨ ॥

ಪದಪಾಠಃ

ಅಪ । ಅಮೀವಾಂ । ಅಪ । ವಿಶ್ವಾಂ । ಅನಾಹುತಿಂ । ಅಪ । ಅರಾತಿಂ । ದುಃऽವಿದತ್ರಾಂ । ಅಘऽಯತಃ ।
ಆರೇ । ದೇವಾಃ । ದ್ವೇಷಃ । ಅಸ್ಮತ್ । ಯುಯೋತನ । ಉರು । ನಃ । ಶರ್ಮ । ಯಚ್ಛತ । ಸ್ವಸ್ತಯೇ ॥

ಸಾಯಣಭಾಷ್ಯಂ

ಹೇ ದೇವಾಃ ಅಮೀವಾಂ ರೋಗಾದಿಕಂ ಯದ್ವಾ ರೋಗವದ್ಬಾಧಕಂ ಶತ್ರುಮಸ್ಮತ್ತೋ ದೂರೇऽಪ ಕುರುತ । ಪೃಥಕ್ಕುರುತ । ತಥಾ ವಿಶ್ವಾಂ ಸರ್ವಾಮನಾಹುತಿಂ ದೇವಾನಾಮನಾಹ್ವಾನಬುದ್ಧಿಂ ಯದ್ವಾ ದೇವಾನಾಂ ಮಹಾಶತ್ರುಂ ಪೃಥಕ್ಕುರುತ । ಕಿಂಚಾರಾತಿಮದಾನಂ ಲೋಭಬುದ್ಧಿಂ ಯದ್ವಾ ದೇವೇಭ್ಯೋ ಹವಿಷಾಮದಾತಾರಂ ಶತ್ರುಮಪ ಗಮಯತ । ಅಪಿ ಚಾಘಾಯತಃ ಪಾಪಮಿಚ್ಛತಃ

ಶತ್ರೋರ್ದುರ್ವಿದತ್ರಾಂ ದುರ್ವಿಜ್ಞಾನಂ ದುಷ್ಟಾಂ ಬುದ್ಧಿಂ ಇತ್ಥಂ ಚ ದ್ವೇಷೋ ದ್ವೇಷ್ಟ್ಯಾನ್ ಸರ್ವಾ-ಞ್ಛತ್ರೂನಸ್ಮದಸ್ಮತ್ತ ಆರೇ ದೂರೇ ಯುಯೋತನ | ಪೃಥಕ್ಕುರುತ | ಏವಂ ಸತಿ ಯೂಯಂ ನೋಽಸ್ಮ-ಭ್ಯಮುರು ವಿಸ್ತೀರ್ಣಂ ಶರ್ಮ ಸುಖಂ ಸ್ವಸ್ತಯೇ ಕಲ್ಯಾಣಾಯ ಪ್ರಯಚ್ಛತ ||

ಪ್ರತಿಪದಾರ್ಥ

**ದೇವಾಃ**—ಎಲೈ ದೇವತೆಗಳೇ | **ಅಮೀವಾಂ**—ರೋಗವನ್ನು | **ಅಪ**—ನಮ್ಮಿಂದ ದೂರಮಾಡಿರಿ | **ವಿಶ್ವಾಂ**—ಸಮಸ್ತವಾದ | **ಅನಾಹುತಿಂ**—ಯಜ್ಞವಿರುದ್ಧವಾದ ಭಾವನೆಯನ್ನು | **ಅಪ**—ನಾಶಮಾಡಿರಿ | **ಅರಾತಿಂ**—ಶತ್ರುವನ್ನು | **ಅಪ**—ದೂರಕ್ಕೆ ಓಡಿಸಿರಿ | **ಅಘಾಯತಃ**—ನಮಗೆ ಕೇಡನ್ನು ಬಯಸುವ ಶತ್ರುವಿನ| **ದುರ್ವಿದತ್ರಾಂ**—ದುಷ್ಟಬುದ್ಧಿಯನ್ನು ನಾಶಮಾಡಿರಿ | **ದ್ವೇಷಃ**—ನಮ್ಮ ಶತ್ರುಗಳನ್ನು | **ಅಸ್ಮತ್**—ನಮ್ಮಿಂದ | **ಆರೇ**—ದೂರಕ್ಕೆ | **ಯುಯೋತನ**—ಓಡಿಸಿರಿ | **ಸ್ವಸ್ತಯೇ**—ನಮ್ಮ ಕಲ್ಯಾಣಕ್ಕಾಗಿ | **ನಃ**—ನಮಗೆ | **ಉರು**—ವಿಸ್ತೃತವಾದ | **ಶರ್ಮ**—ಸುಖವನ್ನು | **ಯಚ್ಛತ**—ಕೊಡಿರಿ.

ಭಾವಾರ್ಥ

ಎಲೈ ದೇವತೆಗಳೇ, ನಮ್ಮ ರೋಗಗಳನ್ನು ನಾಶಮಾಡಿರಿ. ಯಜ್ಞವಿರುದ್ಧವಾದ ಯಾವ ಭಾವನೆಯೂ ನಮಗೆ ಅಂಟದಂತೆ ಮಾಡಿರಿ. ನಮಗೆ ಕೇಡನ್ನು ಬಯಸುವ ದುಷ್ಟಬುದ್ಧಿಯುಳ್ಳ ನಮ್ಮ ಶತ್ರುಗಳನ್ನು ದೂರಕ್ಕೆ ಓಡಿಸಿರಿ. ನಮ್ಮ ಕಲ್ಯಾಣಕ್ಕಾಗಿ ನಮಗೆ ವಿಸ್ತೃತವಾದ ಸುಖವನ್ನು ಕೊಡಿರಿ.

English Translation

(Remove far) from us disease, remove all neglect of oblations, remove illiberaliiy, the malevolence of those who wish to do us harm ; remove far from us, gods, those who hate us ; grant us ample happiness for our well-being.

ಸಂಹಿತಾಪಾಠಃ

ಅರಿಷ್ಟಃ ಸ ಮರ್ತೋ ವಿಶ್ವ ಏಧತೇ ಪ್ರ ಪ್ರಜಾಭಿರ್ಜಾಯತೇ ಧರ್ಮಣ-ಸ್ಪರಿ |
ಯಮಾದಿತ್ಯಾಸೋ ನಯಥಾ ಸುನೀತಿಭಿರತಿ ವಿಶ್ವಾನಿ ದುರಿತಾ ಸ್ವಸ್ತಯೇ ||

ಪದಪಾಠಃ

ಅರಿಷ್ಟಃ | ಸಃ | ಮರ್ತಃ | ವಿಶ್ವಃ | ಏಧತೇ | ಪ್ರ | ಪ್ರಽಜಾಭಿಃ | ಜಾಯತೇ | ಧರ್ಮಣಃ | ಪರಿ |
ಯಂ | ಆದಿತ್ಯಾಸಃ | ನಯಥ | ಸುನೀತಿಽಭಿಃ | ಅತಿ | ವಿಶ್ವಾನಿ | ದುಃಽಇತಾ | ಸ್ವಸ್ತಯೇ || ೧೩ ||

ಸಾಯಣಭಾಷ್ಯಂ

ಹೇ ವಿಶ್ವೇ ದೇವಾಃ ವಿಶ್ವಃ ಸರ್ವೋ ಮರ್ತಃ ಸ ಮನುಷ್ಯೋಽರಿಷ್ಟಃ ಕೈಶ್ಚಿದಪ್ಯಹಿಂಸಿತಃ ಸನ್ನೇಧತೇ ಪಶ್ವಾದಿಭಿರ್ವರ್ಧತೇ । ತಥಾ ಧರ್ಮಣಸ್ಪರಿ ಧಾರಕಾತ್ಕರ್ಮಣೋಽನಂತರಂ ಸ ಮನುಷ್ಯಃ ಪ್ರಜಾಭಿಃ ಪುತ್ರಾದಿಭಿಃ ಪ್ರ ಜಾಯತೇ । ಪ್ರಕರ್ಷೇಣಾವಿರ್ಭೂತೋ ಭವತಿ । ಹೇ ಆದಿತ್ಯಾಸ ಆದಿತ್ಯಾ ದೇವಾಃ ಯಂ ಮನುಷ್ಯಂ ಸುನೀತಿಭಿಃ ಸುನಯನೈರ್ವಿಶ್ವಾನಿ ಸರ್ವಾಣಿ ದುರಿತಾ ದುರಿತಾನಿ ಪಾಪಾನಿ ತದ್ರೂಪಾಣ್ಯಭಿಭವಾಂಸ್ತ್ರೀನ್ಸ್ವಸ್ತಯೇ ಕ್ಷೇಮಾಯಾತಿ ನಯಥ ಅತೀತ್ಯ ಸನ್ಮಾರ್ಗಂ ನಯಥ । ಸ ವರ್ಧತ ಇತಿ ಸಮನ್ವಯಃ ॥

ಪ್ರತಿಪದಾರ್ಥ

**ಆದಿತ್ಯಾಸಃ**—ಎಲೈ ಆದಿತ್ಯರೇ । **ಯಂ**—ಯಾವ ಮಾನವನನ್ನು । **ಸುನೀತಿಭಿಃ**—ಉತ್ತಮವಾದ ಮಾರ್ಗದರ್ಶಿತ್ವದಿಂದ । **ವಿಶ್ವಾನಿ ದುರಿತಾನಿ**—ಸಕಲ ದುಷ್ಟಶಕ್ತಿಗಳನ್ನೂ । **ಸ್ವಸ್ತಯೇ**—ಅವನ ಕಲ್ಯಾಣಕ್ಕಾಗಿ। **ಅತಿ ನಯಥ**—ದಾಟುವಂತೆ ಮಾಡುವಿರೋ । **ಸಃ**-ಅಂತಹ । **ವಿಶ್ವಃ ಮರ್ತಃ**-ಸಕಲ ಮಾನವನೂ । **ಅರಿಷ್ಟಃ**-ಯಾವ ಹಿಂಸೆಗೂ ಒಳಗಾಗದೆ । **ಏಧತೇ**—ವೃದ್ಧಿಯನ್ನು ಹೊಂದುತ್ತಾನೆ । **ಧರ್ಮಣಸ್ಪರಿ**—ಜಗದ್ಧಾರಕವಾದ ಯಜ್ಞಕರ್ಮಗಳನಂತರ । **ಪ್ರಜಾಭಿಃ**—ಪುತ್ರಾದಿಗಳ ರೂಪದಲ್ಲಿ । **ಪ್ರ ಜಾಯತೇ**—ಸಂತತಿಯನ್ನು ವೃದ್ಧಿಗೊಳಿಸುತ್ತಾನೆ.

ಭಾವಾರ್ಥ

ಎಲೈ ಆದಿತ್ಯರೇ, ಯಾವ ಮಾನವನನ್ನು ನೀವು ನಿಮ್ಮ ಉತ್ತಮವಾದ ಮಾರ್ಗದರ್ಶಿತ್ವದಿಂದ ಸಕಲ ದುಷ್ಟಶಕ್ತಿಗಳನ್ನೂ ಅವನ ಕಲ್ಯಾಣಕ್ಕಾಗಿ ದಾಟುವಂತೆ ಮಾಡುವಿರೋ ಅಂತಹ ಸಕಲ ಮಾನವನೂ ಯಾವ ಹಿಂಸೆಗೂ ಒಳಗಾಗದೆ ವೃದ್ಧಿಯನ್ನು ಹೊಂದುತ್ತಾನೆ. ಜಗದ್ಧಾರಕವಾದ ಯಜ್ಞಕರ್ಮಗಳನ್ನು ಮಾಡಿದ ನಂತರ ಪುತ್ರಾದಿ ರೂಪದಲ್ಲಿ ತನ್ನ ಆವಿರ್ಭಾವವನ್ನು ಹೊಂದಿ ವೃದ್ಧಿಯನ್ನು ಪಡೆಯುತ್ತಾನೆ.

## English Translation

Unharmed prospers every mortal, after performing his duties, he flourishes with posterity, whom you Adityas guide with good counsels safe over all misfortunes to well-beings,

ಸಂಹಿತಾಪಾಠಃ

ಯಂ ದೇವಾಸೋಽವಥ ವಾಜಸಾತೌ ಯಂ ಶೂರಸಾತಾ ಮರುತೋ ಹಿತೇ ಧನೇ ।
ಪ್ರಾತರ್ಯಾವಾಣಂ ರಥಮಿಂದ್ರ ಸಾನಸಿಮರಿಷ್ಯಂತಮಾ ರುಹೇಮಾ ಸ್ವಸ್ತಯೇ ॥ ೧೪ ॥

ಪದಪಾಠಃ

ಯಂ । ದೇವಾಸಃ । ಅವಥ । ವಾಜಽಸಾತೌ । ಯಂ । ಶೂರಽಸಾತಾ । ಮರುತಃ । ಹಿತೇ । ಧನೇ ।
ಪ್ರಾತಃಽಯಾವಾನಂ । ರಥಂ । ಇಂದ್ರ । ಸಾನಸಿಂ । ಅರಿಷ್ಯಂತಂ । ಆ । ರುಹೇಮ । ಸ್ವಸ್ತಯೇ ॥ ೧೪ ॥

ಸಾಯಣಭಾಷ್ಯಂ

ಹೇ ದೇವಾಸೋ ದೇವಾಃ ವಾಜಸಾತಾವನ್ನಭಜನೇಽನ್ನಲಾಭೇ ವಾ ಯಂ ರಥಮವಥ ರಕ್ಷಥ ಹೇ ಮರುತಃ ಶೂರಸಾತಾ । ಸಂಗ್ರಾಮನಾಮೈತತ್ ಶೂರಾಃ ಸ್ಯಂತಿ ಖಿದ್ಯಂತೇಽತ್ರೇತಿ ಶೂರಾಃ ಸೀಯಂತೇ ವಿನಶ್ಯಂತೇ ಯೋದ್ಧೃಭಿರತ್ರೇತಿ। ತಸ್ಮಿನ್ಯುದ್ಧೇ ಯಂ ರಥಂ ಹಿತೇ ನಿಹಿತೇ ಧನೇ ಧನಮುದ್ದಿಶ್ಯ ॥ ನಿಮಿತ್ತಾತ್ಕರ್ಮಸಂಯೋಗೇ । ಪಾ. ೨-೩-೩೬-೬ ।ಇತಿ ಸಪ್ತಮೀ ॥ ತದುದ್ದಿಶ್ಯ ರಕ್ಷಥ । ಸರ್ವೇಷಾಂ ದೇವಾನಾಂ ಮುಖ್ಯತ್ವಾದಿಂದ್ರಮೇವಾಭಿಲಕ್ಷ್ಯ ವದತ್ಯುತ್ತರಾರ್ಧೇನ । ಹೇ ಇಂದ್ರ ಸರ್ವೇಷಾಂ ಮುಖ್ಯ ಪ್ರಾತರ್ಯಾವಾಣಂ ಪ್ರಾತರೇವ ಯುದ್ಧಂ ಪ್ರತಿ ಗಂತಾರಂ ಸಾನಸಿಂ ಸಂಭಜನೀಯಮರಿಷ್ಯಂತಂ ಕೈಶ್ಚಿದಪ್ಯಹಿಂಸಿತಂ । ಯದ್ವಾ। ಇಂದ್ರಸಹಾಯಾನಾಂ ಮರುತಾಮಬಾಧಕಂ। ತಂ ರಥಂ ಸ್ವಸ್ತಯೇಽಸ್ಮಾಕಂ ರಕ್ಷಣಾಯ ವಯಮಾರುಹೇಮ । ಆರೋಹೇಮ ॥

ಪ್ರತಿಪದಾರ್ಥ

**ದೇವಾಸಃ**—ಎಲೈ ದೇವತೆಗಳೇ । **ವಾಜಸಾತೌ**—ಅನ್ನಲಾಭಾರ್ಥವಾಗಿ । **ಯಂ**—ಯಾವ ರಥವನ್ನು । **ಅವಥ**—ನೀವು ರಕ್ಷಿಸುವಿರೋ । **ಮರುತಃ**—ಎಲೈ ಮರುತ್ತುಗಳೇ । **ಶೂರಸಾತಾ**—ಶೂರರನ್ನು ಜಯಿಸುವ ಯುದ್ಧದಲ್ಲಿ । **ಯಂ**—ಯಾವ ರಥವನ್ನು । **ಹಿತೇ ಧನೇ**—ಅದರಲ್ಲಿರುವ ಧನಕ್ಕಾಗಿ ರಕ್ಷಿಸುವಿರೋ । **ಇಂದ್ರ**—ಎಲೈ ಇಂದ್ರನೇ । **ಪ್ರಾತರ್ಯಾವಾಣಂ**—ಪ್ರಾತಃಕಾಲದಲ್ಲೇ ಯುದ್ಧಕ್ಕಾಗಿ ಹೊರಡುವುದೂ । **ಸಾನಸಿಂ**—ಪೂಜ್ಯವಾದುದೂ । **ಅರಿಷ್ಯಂತಂ**—ಹಿಂಸೆಗೆ ಪಾತ್ರವಲ್ಲದ್ದೂ ಆದ । **ರಥಂ**—ಆ ರಥವನ್ನು । **ಸ್ವಸ್ತಯೇ**—ನಮ್ಮ ಕಲ್ಯಾಣಕ್ಕಾಗಿ । **ಆ ರುಹೇಮ**—ನಾವು ಹತ್ತುವಂತಾಗಲಿ.

ಭಾವಾರ್ಥ

ಎಲೈ ದೇವತೆಗಳೇ, ಅನ್ನಲಾಭಾರ್ಥವಾಗಿ ನೀವು ಯಾವ ರಥವನ್ನು ರಕ್ಷಿಸುವಿರೋ, ಎಲೈ ಮರುತ್ತುಗಳೇ, ಶೂರರನ್ನು ಜಯಿಸುವ ಯುದ್ಧದಲ್ಲಿ ಯಾವ ರಥವನ್ನು ಅದರಲ್ಲಿರುವ ಧನಕ್ಕಾಗಿ ರಕ್ಷಿಸುವಿರೋ, ಎಲೈ ಇಂದ್ರನೇ, ಪ್ರಾತಃಕಾಲದಲ್ಲೇ ಯುದ್ಧಕ್ಕಾಗಿ ಹೊರಡುವುದೂ, ಪೂಜ್ಯವಾದುದೂ, ಹಿಂಸೆಗೆ ಪಾತ್ರವಲ್ಲದುದೂ ಆದ ಆ ರಥವನ್ನು ನಮ್ಮ ಕಲ್ಯಾಣಕ್ಕಾಗಿ ನಾವು ಹತ್ತುವಂತಾಗಲಿ.

English Translation

(The chariot) which, deities, you protect for the supply of food ; that which, Maruts, (you protect) in battle for the sake of the deposited spoil ; may we mount, Indra, the early-moving desirable irresistible chariot for our weil-being.

ಸಂಹಿತಾಪಾಠಃ

ಸ್ವಸ್ತಿ ನಃ ಪಥ್ಯಾಸು ಧನ್ವಸು ಸ್ವಸ್ತ್ಯ೧ಪ್ಸು ವೃಜನೇ ಸ್ವರ್ವತಿ ।
ಸ್ವಸ್ತಿ ನಃ ಪುತ್ರಕೃಥೇಷು ಯೋನಿಷು ಸ್ವಸ್ತಿ ರಾಯೇ ಮರುತೋ ದಧಾತನ ॥

ಪದಪಾಠಃ

ಸ್ವಸ್ತಿ । ನಃ । ಪಥ್ಯಾಸು । ಧನ್ವಽಸು । ಸ್ವಸ್ತಿ । ಅಪ್ಽಸು । ವೃಜನೇ । ಸ್ವಃಽವತಿ ।
ಸ್ವಸ್ತಿ । ನಃ । ಪುತ್ರಽಕೃಥೇಷು । ಯೋನಿಷು । ಸ್ವಸ್ತಿ । ರಾಯೇ । ಮರುತಃ । ದಧಾತನ ॥ ೧೫ ॥

ಸಾಯಣಭಾಷ್ಯಂ

ಪ್ರಾಯಣೀಯೇಷ್ಟೌ ಪಥ್ಯಾಸ್ವಸ್ತೇರ್ಯಾಗಸ್ಯ ಸ್ವಸ್ತಿ ನಃ ಪಥ್ಯಾಸ್ವಿತ್ಯೇಷಾನುವಾಕ್ಯಾ। ಉತ್ತರಾ ಯಾಜ್ಯಾ। ಸೂತ್ರಿತಂ ಚ। ಸ್ವಸ್ತಿ ನಃ ಪಥ್ಯಾಸು ಧನಸ್ವಿತಿ ದ್ವೇ ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್। ಆ. ೪-೩ । ಇತಿ । ಉದಯನೀಯಾಯಾಮೇತ ಏವ ವಿಪರ್ಯಸ್ತೇ ಯಾಜ್ಯಾನುವಾಕ್ಯೇ । ಸೂತ್ರಿತಂ ಚ । ವಿಪರೀತಾಶ್ಚ ಯಾಜ್ಯಾನುವಾಕ್ಯಾ ಇತಿ ॥

ಹೇ ಮರುತೋ ಮಿತರಾವಿಣೋ ದೇವಾಃ ನೋಽಸ್ಮಾಕಂ ಪಥ್ಯಾಸು ಪಥಿಯೋಗ್ಯೇಷು ಸೋದಕೇಷು ದೇಶೇಷು ಸ್ವಸ್ತಿ ಕಲ್ಯಾಣಂ ಕುರುತ । ತಥಾ ಧನ್ವಸು ನಿರುದಕೇಷು ದೇಶೇಷು ಸ್ವಸ್ತಿ ಕಲ್ಯಾಣಮುದಕಜನನಲಕ್ಷಣಂ ಕುರುತ । ತಥಾಪ್ಸೂದಕೇಷು ಸ್ವಸ್ತಿ । ತಥಾ ಸ್ವರ್ವತಿ ಸರ್ವೈರಾಯುಧೈರ್ಯುಕ್ತೇ ಸೇನಾಲಕ್ಷಣೇ ವೃಜನೇ ಶತ್ರೂಣಾಮಾವರ್ಜಕೇ ಬಲೇ ಚ ಕಲ್ಯಾಣಂ ಕುರುತ। ನೋಽಸ್ಮಾಕಂ ಪುತ್ರಕೃಥೇಷು ಪುತ್ರಾಣಾಂ ಕರ್ತೃಷೂತ್ಪಾದಕೇಷು ಸ್ತ್ರೀಣಾಂ ಯೋನಿಷು ಸ್ವಸ್ತಿ ಕಲ್ಯಾಣಂ ಯಥಾ ಗರ್ಭಾ ನ ಪತಂತಿ ತಥಾ ಕ್ಷೇಮಂ ಕುರುತ । ಕಿಂಚ ನೋಽಸ್ಮಾಕಂ ರಾಯೇ ಧನಾಯ ಗವಾದಿಲಕ್ಷಣಾಯ ಸ್ವಸ್ತಿ ಕ್ಷೇಮಂ ದಧಾತನ। ಧತ್ತ । ಕುರುತ ॥

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ । **ನಃ**—ನಮಗೆ । **ಪಥ್ಯಾಸು**—ಉದಕಪೂರ್ಣವಾದ ಮಾರ್ಗಗಳಲ್ಲೂ । **ಸ್ವಸ್ತಿ**—ಒಳ್ಳೆಯದಾಗಲಿ । **ಧನ್ವಸು**—ಉದಕರಹಿತವಾದ ಮರಳುಗಾಡುಗಳುಳ್ಳ ಮಾರ್ಗಗಳಲ್ಲೂ । **ಸ್ವಸ್ತಿ**—ಮಂಗಳವುಂಟಾಗಲಿ । **ಅಪ್ಸು**—ಉದಕಗಳಲ್ಲೂ । **ಸ್ವರ್ವತಿ**—ಸೇನಾಪೂರ್ಣವಾದ । **ವೃಜನೇ**—ಶತ್ರುಬಲದ ನಡುವೆಯೂ ಒಳ್ಳೆಯದಾಗಲಿ । **ನಃ**—ನಮಗೆ । **ಪುತ್ರಕೃಥೇಷು**—ಪುತ್ರರನ್ನು ಹಡೆಯುವ ಸ್ತ್ರೀಯರ । **ಯೋನಿಷು**—ಗರ್ಭಗಳಲ್ಲಿ । **ಸ್ವಸ್ತಿ**—ಕ್ಷೇಮವನ್ನೊದಗಿಸಿರಿ । **ರಾಯೇ**—ನಮ್ಮ ಧನಭೋಗಕ್ಕಾಗಿ । **ಸ್ವಸ್ತಿ**—ಕ್ಷೇಮವನ್ನು । **ದಧಾತನ**—ಒದಗಿಸಿ ಕೊಡಿರಿ.

ಭಾವಾರ್ಥ

ಎಲೈ ಮರುತ್ತುಗಳೇ, ನಮಗೆ ಉದಕಪೂರ್ಣವಾದ ಮಾರ್ಗಗಳಲ್ಲೂ, ಉದಕರಹಿತವಾದ ಮರಳುಗಾಡುಗಳಲ್ಲೂ ಮಂಗಳವುಂಟಾಗಲಿ. ಉದಕಪ್ರದೇಶಗಳಲ್ಲೂ ಒಳ್ಳೆಯದಾಗಲಿ. ಸೇನೆಗಳಿಂದ ಕೂಡಿದ ಶತ್ರುಬಲಗಳ ನಡುವೆ

ನಮಗೆ ಒಳ್ಳೆಯದಾಗಲಿ. ನಮ್ಮ ಸಂತತಿಯನ್ನು ಬೆಳೆಸುವ ಸ್ತ್ರೀಯರ ಗರ್ಭಗಳಿಗೆ ರಕ್ಷಣೆಯನ್ನು ನೀಡಿರಿ. ನಮ್ಮ ಧನಭೋಗಕ್ಕಾಗಿ ನಮಗೆ ಕ್ಷೇಮವನ್ನು ಒದಗಿಸಿರಿ.

## English Translation

Maruts, secure to us well-being on roads, in deserts, well-being in waters, amidst the might of assailing hosts : well-being in the son-bearing wombs (of our wives) ; well-being for (the acquirement of) riches.

### ವಿಶೇಷವಿಷಯಗಳು

ಪ್ರಾಯಣೀಯೇಷ್ಟಿಯಲ್ಲಿ ಪಥ್ಯಾಸ್ವಸ್ತಿಯೆಂಬ ದೇವತೆಯನ್ನುದ್ದೇಶಿಸಿ ಮಾಡುವ ಹೋಮದಲ್ಲಿ **ಸ್ವಸ್ತಿ ನಃ ಪಥ್ಯಾಸು** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿಯೂ **ಸ್ವಸ್ತಿರಿದ್ಧಿ** ಎಂಬ ಮುಂದಿನ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿಯೂ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಸ್ವಸ್ತಿ ನಃ ಪಥ್ಯಾಸು ಧನ್ವಸ್ವಿತಿ ದ್ವೇ ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್** ಎಂಬ ಸೂತ್ರದಿಂದ (ಆ. ೪-೩) ವಿವೃತವಾಗಿರುವುದು. ಉದಯನೀಯೇಷ್ಟಿಯಲ್ಲಿಯೂ ಸಹ ಈ ಎರಡು ಋಕ್ಕುಗಳನ್ನು ವಿಕಲ್ಪವಾಗಿ ಯಾಜ್ಯಾನುವಾಕ್ಯಾ ಮಂತ್ರಗಳಂತೆ ಪಠಿಸಬಹುದೆಂದು ಆಶ್ವಲಾಯನಶ್ರೌತಸೂತ್ರದ—**ವಿಪರೀತಾಶ್ಚ ಯಾಜ್ಯಾನುವಾಕ್ಯಾಃ** ಎಂಬ ಸೂತ್ರದಿಂದ ವಿವೃತವಾಗಿರುವುದು.

### ಸಂಹಿತಾಪಾಠಃ

**ಸ್ವಸ್ತಿರಿದ್ಧಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತ್ಯಭಿ ಯಾ ವಾಮಮೇತಿ ।**

**ಸಾ ನೋ ಅಮಾ ಸೋ ಅರಣೇ ನಿ ಪಾತು ಸ್ವಾವೇಶಾ ಭವತು ದೇವಗೋಪಾ ॥**

### ಪದಪಾಠಃ

**ಸ್ವಸ್ತಿಃ । ಇತ್ । ಹಿ । ಪ್ರಽಪಥೇ । ಶ್ರೇಷ್ಠಾ । ರೇಕ್ಣಸ್ವತೀ । ಅಭಿ । ಯಾ । ವಾಮಂ । ಏತಿ ।**

**ಸಾ । ನಃ । ಅಮಾ । ಸೋ ಇತಿ । ಅರಣೇ । ನಿ । ಪಾತು । ಸುಽಆವೇಶಾ । ಭವತು । ದೇವಽಗೋಪಾ ॥೧೬॥**

### ಸಾಯಣಭಾಷ್ಯಂ

**ಯಾ ಪೃಥಿವೀ ಗಂತುಮುದ್ಯುಕ್ತಾನಾಂ ಪ್ರಪಥೇ ಪ್ರಕೃಷ್ಟಾಯ ಮಾರ್ಗಾಯ ಸ್ವಸ್ತಿರಿತ್ ಕ್ಷೇಮಕಾರಿಣ್ಯೇವ ಭವತಿ ಶ್ರೇಷ್ಠಾ ಪ್ರಶಸ್ಯತಮಾ ರೇಕ್ಣಸ್ವತೀ ಧನವತೀ ಯಾ ಪೃಥಿವೀ ವಾಮಂ ವನನೀಯಂ ಯಜ್ಞಮಭ್ಯೇತಿ ಉತ್ತರವೇದ್ಯಾತ್ಮನಾ ವಾಭಿಪ್ರಾಪ್ನೋತಿ ಸಾ ಪೃಥಿವೀ ನೋಽಸ್ಮಾಕಮಮಾ । ಗೃಹನಾಮೈತತ್ । ಗೃಹಂ ರಕ್ಷತು । ತಥಾ ಸೋ ಸಾ ಉ ಸೈವಾರಣೇ ಗಂತವ್ಯೇ ದೇಶೇಽರಣೇಽರಮಣೇಽರಣ್ಯಾದಿಕೇ ದೇಶೇ ವಾ ನೋಽಸ್ಮಾನ್ನಿ ಪಾತು । ನಿತರಾಂ ರಕ್ಷತು । ತಥಾ ದೇವಗೋಪಾ ದೇವಾ ಗೋಪಾಯಿತಾರೋ ಯಸ್ಯಾಃ ಸಂತಿ ಸಾ ಪೃಥಿವ್ಯಸ್ಮಾಕಂ ಸ್ವಾವೇಶಾ ಶೋಭನನಿವಾಸಾ ಭವತು ॥**

ಪ್ರತಿಪದಾರ್ಥ

**ಪ್ರಪಥೇ**—ಉತ್ತಮವಾದ ಮಾರ್ಗಕ್ಕೆ | **ಸ್ವಸ್ತಿರಿತ್**—ಕಲ್ಯಾಣಕಾರಕಳಾಗಿಯೂ | **ಶ್ರೇಷ್ಠಾ**—ಉತ್ತಮಳಾಗಿಯೂ | **ರೇಕ್ಣಸ್ವತೀ**—ಧನವಂತಳಾಗಿಯೂ ಇರುವ | **ಯಾ**—ಯಾವ ಪೃಥ್ವಿಯು | **ವಾಮಂ**—ಆಕರ್ಷಕವಾದ ಯಜ್ಞಕ್ಕೆ | **ಅಭ್ಯೇತಿ**—ಬರುವಳೋ | **ಸಾ**—ಆ ಪೃಥ್ವಿಯು | **ನಃ**—ನಮ್ಮನ್ನು | **ಅಮಾ**-ಗೃಹದಲ್ಲಿ ರಕ್ಷಿಸಲಿ | **ಸೋ**—ಅವಳೇ | **ಅರಣೇ**—ಅರಣ್ಯಾದಿ ಮಾರ್ಗಪ್ರದೇಶಗಳಲ್ಲಿಯೂ | **ನಿ ಪಾತು**—ನಮ್ಮನ್ನು ಪೂರ್ಣವಾಗಿ ರಕ್ಷಿಸಲಿ | **ದೇವಗೋಪಾ**—ದೇವತೆಗಳನ್ನು ರಕ್ಷಿಸುವ ಅದೇ ಪೃಥ್ವಿಯು | **ಸ್ವಾವೇಶಾ**-ನಮಗೆ ಉತ್ತಮವಾದ ಗೃಹದಾಯಕಳಾಗಿ | **ಭವತು**—ಆಗಿರಲಿ.

ಭಾವಾರ್ಥ

ಉತ್ತಮವಾದ ಮಾರ್ಗಕ್ಕೆ ಕಲ್ಯಾಣಕಾರಕಳಾಗಿಯೂ, ಉತ್ತಮಳಾಗಿಯೂ, ಧನವಂತಳಾಗಿಯೂ ಇರುವ ಯಾವ ಪೃಥ್ವಿಯು ಆಕರ್ಷಕವಾದ ಯಜ್ಞಕ್ಕೆ ಬರುವಳೋ ಆ ಪೃಥ್ವಿಯು ನಮ್ಮನ್ನು ಗೃಹದಲ್ಲಿ ರಕ್ಷಿಸಲಿ. ಅವಳೇ ಅರಣ್ಯಾದಿ ಮಾರ್ಗಪ್ರದೇಶಗಳಲ್ಲಿಯೂ ನಮ್ಮನ್ನು ಪೂರ್ಣವಾಗಿ ರಕ್ಷಿಸಲಿ. ದೇವತೆಗಳನ್ನೂ ರಕ್ಷಿಸುವ ಅದೇ ಪೃಥ್ವಿಯು ನಮಗೆ ಉತ್ತಮವಾದ ಗೃಹದಾಯಕಿಯಾಗಲಿ.

## English Translation

May (Prithivi), who secures well-being to the excellent path, who, abounding with wealth, goes to the desirable (place of sacrifice), preserve our home, may she protect us on the path we have to travel ; cherished by the gods, may she be to us a pleasant abode.

ವಿಶೇಷವಿಷಯಗಳು

ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

**ಸ್ವಸ್ತಿರೇವ ಹಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತೀ ಧನವತ್ಯಭ್ಯೇತಿ ಯಾ ವಸೂನಿ ವನನೀಯಾನಿ ಸಾ ನೋಽಮಾ ಗೃಹೇ ಸಾ ನಿರಮಣೇ ಸಾ ನಿರ್ಗಮನೇ ಪಾತು ಸ್ವಾವೇಶಾ ಭವತು ದೇವೀ ಗೋಪ್ತ್ರೀ ದೇವಾನ್ ಗೋಪಾಯತ್ವಿತಿ ದೇವಾ ಏನಾಂ ಗೋಪಾಯಂತ್ವಿತಿ ವಾ ||**

(ನಿ. ೧೧-೪೬)

ಸ್ವಸ್ತಿಯೆಂಬ ಹೆಸರಿನ ಈ ದೇವತೆಯು ಅಂತರಿಕ್ಷಸ್ಥರಾದ ದೇವತೆಗಳಲ್ಲೆಲ್ಲಾ ಶ್ರೇಷ್ಠದೇವತೆಯಾಗಿರುವಳು. ಈ ದೇವತೆಯು ಧನವುಳ್ಳವಳಾಗಿಯೂ ಎಲ್ಲರಿಗೂ ಬೇಕಾದ ಉಪಕವನ್ನು ವರ್ಷಿಸುವವಳಾಗಿಯೂ ನಮ್ಮ ಸಮೀಪಕ್ಕೆ ಬರುತ್ತಾಳೆ. ಈ ದೇವತೆಯು ನಮ್ಮನ್ನು ನಾವು ಗೃಹದಲ್ಲಿರುವಾಗಲೂ ಅಥವಾ ಹೊರಗಡೆ ಸಂಚರಿಸುತ್ತಿರುವಾಗಲೂ ರಕ್ಷಿಸಲಿ. ಇವಳ ಪ್ರವೇಶದಿಂದ ನಮಗೆ ಒಳ್ಳೆಯದಾಗುವುದು. ಈ ದೇವಿಯು ದೇವಗೋಪಾ ಎಂದು ಕರೆಯಲ್ಪಡುವಳು. ಏಕೆಂದರೆ, ಈ ದೇವತೆಯು ದೇವತೆಗಳನ್ನು (ಅಥವಾ ಹವಿರ್ದಾತೃಗಳಾದ ನಮ್ಮನ್ನು) ರಕ್ಷಿಸುವವಳಾದ್ದರಿಂದ ಅಥವಾ ದೇವತೆಗಳು ಈ ದೇವತೆಯನ್ನು ರಕ್ಷಿಸುವವರಾದ್ದರಿಂದ ಈ ದೇವತೆಗೆ ದೇವಗೋಪಾ ಎಂಬ ಅಭಿಧಾನವಿರುವುದು ಎಂದು ನಿರುಕ್ತವಚನದ ಮುಖ್ಯಾಭಿಪ್ರಾಯವು.

ಸಂಹಿತಾಪಾಠಃ

ಏವಾ ಪ್ಲತೇಃ ಸೂನುರವೀವೃಧದ್ವೋ ವಿಶ್ವ ಆದಿತ್ಯಾ ಅದಿತೇ ಮನೀಷೀ ।
ಈಶಾನಾಸೋ ನರೋ ಅಮರ್ತ್ಯೇನಾಸ್ತಾವಿ ಜನೋ ದಿವ್ಯೋ ಗಯೇನ ॥೧೭॥

ಪದಪಾಠಃ

ಏವ । ಪ್ಲತೇಃ । ಸೂನುಃ । ಅವೀವೃಧತ್ । ವಃ । ವಿಶ್ವೇ । ಆದಿತ್ಯಾಃ । ಅದಿತೇ । ಮನೀಷೀ ।
ಈಶಾನಾಸಃ । ನರಃ । ಅಮರ್ತ್ಯೇನ । ಅಸ್ತಾವಿ । ಜನಃ । ದಿವ್ಯಃ । ಗಯೇನ ॥ ೧೭ ॥

ಸಾಯಣಭಾಷ್ಯಂ

ಹೇ ವಿಶ್ವ ಆದಿತ್ಯಾಃ ಸರ್ವೇ ದೇವಾ ಹೇ ಅದಿತೇ ದೇವಾನಾಂ ಮಾತರೇನ್ನಾಮಿಕೇ ದೇವಿ ವೋ ಯುಷ್ಮಾನ್ಮನೀಷೀ ಪ್ರಾಜ್ಞಃ ಸ್ತೋತಾ ಪ್ಲತೇರೇತನ್ನಾಮಕಸ್ಯರ್ಷೇಃ ಸೂನುಃ ಪುತ್ರೋ ಗಯೋ ನಾಮ್ಯೈವಮುಕ್ತರೀತ್ಯಾವೀವೃಧತ್ । ಸ್ತುತಿಭಿರವರ್ಧಯತ್ ॥ ವರ್ಧತೇರ್ಣ್ಯಂತಸ್ಯ ಲುಙಿ ರೂಪಂ ॥ ಅಮರ್ತ್ಯೇನ ಮನುಷ್ಯಧರ್ಮರಹಿತೇನ ಸ್ತುತೇನ ಯೇನ ದೇವಜನೇನ ನರೋ ಮನುಷ್ಯಾ ಈಶಾನಾಸೋ ಧನಸ್ಯೇಶ್ವರಾಃ ಸ್ವಾಮಿನೋ ಭವಂತಿ ಸ ದಿವ್ಯೋ ದಿವಿ ಭವೋ ಜನೋ ದೇವಗಣೋ ಗಯೇನೈತನ್ನಾಮಕೇನ ಮಯಾಸ್ತಾವಿ । ಅಭಿಷ್ಟುತೋಽಭೂತ್ ॥ ಸ್ತೌತೇಃ ಕರ್ಮಣಿ ಲುಙಿ ಚಿಣಿ ರೂಪಂ ॥

ಪ್ರತಿಪದಾರ್ಥ

**ವಿಶ್ವೇ ಆದಿತ್ಯಾಃ**—ಅದಿತಿಪುತ್ರರಾದ ಎಲೈ ಸಕಲ ದೇವತೆಗಳೇ । **ಅದಿತೇ**—ಎಲೈ ದೇವಮಾತೆಯೇ । **ವಃ**—ನಿಮ್ಮನ್ನು । **ಮನೀಷೀ**—ಪ್ರಾಜ್ಞನಾದ । **ಪ್ಲತೇಃ ಸೂನುಃ**—ಪ್ಲತಿಋಷಿಯ ಪುತ್ರನು । **ಏವ**—ಈರೀತಿಯಲ್ಲಿ । **ಅವೀವೃಧತ್**—ಸ್ತುತಿಗಳಿಂದ ಪುಷ್ಟಿಗೊಳಿಸಿದ್ದಾನೆ । **ಅಮರ್ತ್ಯೇನ**—ಮರಣಧರ್ಮರಹಿತರಾದ ಯಾವ ದೇವತೆಗಳ ಸಂಘದಿಂದ । **ನರಃ**—ಮಾನವರು । **ಈಶಾನಾಸಃ**—ಧನಕ್ಕೆ ಪ್ರಭುಗಳಾಗುವರೋ । **ದಿವ್ಯಃ ಜನಃ**—ಅದೇ ದೇವಸಂಘವು । **ಗಯೇನ**—ಗಯಋಷಿಯಿಂದ । **ಅಸ್ತಾವಿ**—ಸ್ತುತಿಸಲ್ಪಟ್ಟಿದೆ.

ಭಾವಾರ್ಥ

ಅದಿತಿಪುತ್ರರಾದ ಎಲೈ ಸಕಲ ದೇವತೆಗಳೇ, ಎಲೈ ದೇವಮಾತೆಯೇ, ನಿಮ್ಮನ್ನು ಪ್ರಾಜ್ಞನಾದ ಪ್ಲತಿಋಷಿಯ ಪುತ್ರನು (ಗಯನು) ಈ ರೀತಿ ಸ್ತುತಿಗಳಿಂದ ಪುಷ್ಟಿಗೊಳಿಸಿದ್ದಾನೆ. ಮರಣಧರ್ಮರಹಿತರಾದ ಯಾವ ದೇವತೆಗಳ ಸಂಘದಿಂದ ಮಾನವರು ಧನಕ್ಕೆ ಪ್ರಭುಗಳಾಗುವರೋ ಅದೇ ದೇವಸಂಘವು ಗಯಋಷಿಯಿಂದ ಸ್ತುತಿಸಲ್ಪಟ್ಟಿದೆ.

## English Translation

Universal deities and Aditi, thus has the prudent son of Plati magnified you ; the celestial people, the immortal (company of the gods) through

whom (when praised) men become the lords (of wealth) have been glorified by Gaya.

# ಅರವತ್ತನಾಲ್ಕನೆಯ ಸೂಕ್ತ

ಸಾಯಣಭಾಷ್ಯಂ

**ಕಥೇತಿ ಸಪ್ತದಶರ್ಚಂ ಚತುರ್ಥಂ ಸೂಕ್ತಂ ಪ್ಲಾತಸ್ಯ ಗಯಸ್ಯಾರ್ಷಂ ವೈಶ್ವದೇವಂ । ಯಾಂ ಮೇ ಧಿಯಮಿತ್ಯೇಷಾ ದ್ವಾದಶೀ ಷೋಡಶೀಸಪ್ತದಶ್ಯೌ ಚ ತ್ರಿಷ್ಟುಭಃ ಶೇಷಾ ಜಗತ್ಯಃ । ತಥಾ ಚಾನುಕ್ರಾಂತಂ । ಕಥಾ ಯಾಂ ಮೇ ತ್ರಿಷ್ಟುಬಿತಿ ॥ ಗತೋ ವಿನಿಯೋಗಃ ॥**

**ಅನುವಾದವು**—**ಕಥಾ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹದಿನೇಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪ್ಲತ ಎಂಬುವನ ಪುತ್ರನಾದ ಗಯನು ಋಷಿಯು ; ವಿಶ್ವೇದೇವತೆಗಳು ದೇವತೆಯು ; **ಯಾಂ ಮೇ ಧಿಯಂ** ಎಂಬ ೧೨ ನೇ ಋಕ್ಕು, ೧೬-೧೭ ನೇ ಋಕ್ಕುಗಳೂ ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳೂ ಜಗತೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಕಥಾ ಯಾಂ ಮೇ ತ್ರಿಷ್ಟುಪ್** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೬೪

ಮಂಡಲ—೧೦ ॥ ಅನುವಾಕ—೫ ॥ ಸೂಕ್ತ—೬೪ ॥
ಅಷ್ಟಕ—೮ ॥ ಅಧ್ಯಾಯ—೨ ॥ ವರ್ಗ—೬, ೭, ೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೭ ॥
ಋಷಿಃ—ಗಯಃ ಪ್ಲಾತಃ ॥
ದೇವತಾ—ವಿಶ್ವೇದೇವಾಃ ॥
ಛಂದಃ—೧-೧೧, ೧೩-೧೫. ಜಗತೀ । ೧೨, ೧೬, ೧೭. ತ್ರಿಷ್ಟುಪ್ ॥

ಸಂಹಿತಾಪಾಠಃ

ಕಥಾ ದೇವಾನಾಂ ಕತಮಸ್ಯ ಯಾಮನಿ ಸುಮಂತು ನಾಮ ಶೃಣ್ವತಾಂ ಮನಾಮಹೇ ।
ಕೋ ಮೃಳಾತಿ ಕತಮೋ ನೋ ಮಯಸ್ಕರತ್ಕತಮ ಊತೀ ಅಭ್ಯಾ ವವರ್ತತಿ ॥ ೧ ॥

ಪದಪಾಠಃ

ಕಥಾ । ದೇವಾನಾಂ । ಕತಮಸ್ಯ । ಯಾಮನಿ । ಸುऽಮಂತು । ನಾಮ । ಶೃಣ್ವತಾಂ । ಮನಾಮಹೇ ।
ಕಃ । ಮೃಳಾತಿ । ಕತಮಃ । ನಃ । ಮಯಃ । ಕರತ್ । ಕತಮಃ । ಊತೀ । ಅಭಿ । ಆ । ವವರ್ತತಿ ॥೧॥

ಸಾಯಣಭಾಷ್ಯಂ

ಋಷಿರ್ಬಹುಧಾತ್ಮಾನಂ ವಿತರ್ಕಯತಿ। ಯಾಮನಿ। ಯಾಂತಿ ಗಚ್ಛಂತ್ಯತ್ರೇತಿ ಯಾಮಾ ಯಜ್ಞಃ। ತಸ್ಮಿಞ್ಛೃಣ್ವತಾಮಸ್ಮಾಭಿರುಕ್ತಾನಿ ಸ್ತೋತ್ರಾಣಿ ದೇವಾನಾಂ ಮಧ್ಯೇ ಕತಮಸ್ಯ ದೇವಸ್ಯ ಸುಮಂತು ಸುಷ್ಠು ಮನನೀಯಂ ಸ್ತೋತವ್ಯಂ ನಾಮ ಕಥಾ ಕಥಂ ಮನಾಮಹೇ । ಉಚ್ಚಾರಯಾಮಃ। ಅಸ್ಮಾನ್ಕೋ ವಾ ಮೃಳಾತಿ । ಮೃಳತಿರುಪದಯಾಕರ್ಮೇತಿ ಯಾಸ್ಕಃ। ನಿ. ೧೦-೧೫ । ಕೃಪಾಂ ಕರೋತಿ । ಕತಮೋ ವಾ ಸೋಽಸ್ಮಾಕಂ ಮಯಃ ಸುಖಂ ಕರತ್। ಕರೋತಿ । ಕತಮೋ ವೋತೀ ॥ ಚತುರ್ಥ್ಯಾಃ ಪೂರ್ವಸವರ್ಣ- ದೀರ್ಘಃ ॥ ಊತ್ಯಾ ಅಸ್ಮಾಕಂ ರಕ್ಷಣಾಯಾಭ್ಯಾ ವವರ್ತತಿ । ಅಭ್ಯಾಗಚ್ಛತೀತ್ಯರ್ಥಃ ॥

ಪ್ರತಿಪದಾರ್ಥ

**ಯಾಮನಿ**—ಯಜ್ಞದಲ್ಲಿ । **ಶೃಣ್ವತಾಂ**—ನಮ್ಮ ಸ್ತುತಿಗಳನ್ನು ಆಲಿಸಿ ಕೇಳುವ । **ದೇವಾನಾಂ**—ದೇವತೆಗಳ ನಡುವೆ । **ಕತಮಸ್ಯ**—ಯಾವ ದೇವತೆಯು । **ಸುಮಂತು**—ಉತ್ತಮವಾದ ಧ್ಯಾನಕ್ಕೆ ಯೋಗ್ಯವಾದ । **ನಾಮ**—ಹೆಸರನ್ನು । **ಕಥಾ**—ಯಾವ ಪ್ರಕಾರವಾಗಿ । **ಮನಾಮಹೇ**—ಧ್ಯಾನಿಸಿ ಪಠಿಸೋಣ । **ಕಃ**—ಯಾವ ದೇವತೆಯು । **ಮೃಳಾತಿ**—ನಮ್ಮಲ್ಲಿ ದಯೆಯುಳ್ಳವನಾಗಿದ್ದಾನೆ । **ಕತಮಃ**—ಅವರಲ್ಲಿ ಯಾರು । **ನಃ**—ನಮಗೆ । **ಮಯಃ**—ಸುಖವನ್ನು । **ಕರತ್**—ಒದಗಿಸುತ್ತಾನೆ । **ಕತಮಃ**—ಅವರಲ್ಲಿ ಯಾರು । **ಊತೀ**—ನಮ್ಮ ರಕ್ಷಣೆಗಾಗಿ । **ಅಭ್ಯಾವವರ್ತತಿ**—ನಮ್ಮ ಕಡೆಗೆ ದಯಮಾಡುತ್ತಾನೆ.

ಭಾವಾರ್ಥ

ಯಜ್ಞದಲ್ಲಿ ನಮ್ಮ ಸ್ತುತಿಗಳನ್ನು ಆಲಿಸಿ ಕೇಳುವ ದೇವತೆಗಳ ನಡುವೆ ಯಾವ ದೇವತೆಯ ಹೆಸರು ಉತ್ತಮವಾದ ಧ್ಯಾನಕ್ಕೆ ಯೋಗ್ಯವಾಗಿದೆ ? ಅದನ್ನು ನಾವು ಯಾವ ರೀತಿ ಧ್ಯಾನಿಸಿ ಪಠಿಸೋಣ ? (ಉತ್ತಮವಾದ ಧ್ಯಾನಕ್ಕೆ ಯೋಗ್ಯವಾದ ಯಾವ ಹೆಸರನ್ನು ಉಚ್ಚರಿಸಿ ಪ್ರಶಂಸಿಸೋಣ ?) ಯಾವ ದೇವತೆಯು ನಮ್ಮಲ್ಲಿ ದಯೆಯುಳ್ಳವನಾಗಿದ್ದಾನೆ ? ಅವರಲ್ಲಿ ನಮಗೆ ಸುಖವನ್ನು ಒದಗಿಸುವವರಾರು ? ನಮ್ಮ ರಕ್ಷಣೆಗಾಗಿ ನಮ್ಮಕಡೆ ಬರುವವರಾರು ?

## English Translation

In what manner, and of which of the gods, who hear (our praises) at the saerifice, my we enunciate the venerable name ? who will show us compassion ? which of them will grant us happiness ? which of them comes for our protection ?

ಸಂಹಿತಾಪಾಠಃ

ಕ್ರತೂಯಂತಿ ಕ್ರತವೋ ಹೃತ್ಸು ಧೀತಯೋ ವೇನಂತಿ ವೇನಾಃ ಪತಯಂತ್ಯಾ-
ದಿಶಃ ।
ನ ಮರ್ಡಿತಾ ವಿದ್ಯತೇ ಅನ್ಯ ಏಭ್ಯೋ ದೇವೇಷು ಮೇ ಅಧಿ ಕಾಮಾ
ಅಯಂಸತ ॥ ೨ ॥

ಪದಪಾಠಃ

ಕ್ರತುಽಯಂತಿ । ಕ್ರತವಃ । ಹೃತ್ಽಸು । ಧೀತಯಃ । ವೇನಂತಿ । ವೇನಾಃ । ಪತಯಂತಿ । ಆ । ದಿಶಃ ।
ನ । ಮರ್ಡಿತಾ । ವಿದ್ಯತೇ । ಅನ್ಯಃ । ಏಭ್ಯಃ । ದೇವೇಷು । ಮೇ । ಅಧಿ । ಕಾಮಾಃ । ಅಯಂಸತ ॥೨॥

ಸಾಯಣಭಾಷ್ಯಂ

ಹೃತ್ಸು ಹೃದಯೇಷು ಧೀತಯೋ ನಿಧಾತವ್ಯಾ ನಿಹಿತಾಃ ಕ್ರತವಃ ಪ್ರಜ್ಞಾಃ ಕ್ರತೂಯಂತಿ । ಅಗ್ನಿಹೋತ್ರಾದಿಕರ್ಮ ಕರ್ತುಮಿಚ್ಛಂತಿ । ತದೇವಾಹ । ವೇನಾಃ ಕಾಂತಾಃ ಪ್ರಜ್ಞಾ ವೇನಂತಿ । ದೇವಾನ್ಕಾಮಯಂತೇ। ವೇನೋ ವೇನತೇಃಕಾಂತಿಕರ್ಮಣ ಇತಿ ಯಾಸ್ಕಃ । ನಿ. ೧೦-೩೮ । ತಥಾ ದಿಶೋಽಸ್ಮಾಭಿರ್ನಿರ್ದಿಶ್ಯಮಾನಾಃ ಪ್ರೇರ್ಯಮಾಣಾಃ ಕಾಮಾ ಆ ಪತಯಂತಿ। ದೇವಾನ್ಫಲಾವಾಪ್ತ್ಯೆ ಆಗಚ್ಛಂತಿ। ಯತ ಏಭ್ಯೋ ದೇವೇಭ್ಯೋಽನ್ಯೋ ದೇವ ಏಷಾಂ ಕಾಮಾನಾಂ ಮರ್ಡಿತಾ ಸುಖಯಿತಾ ನ ವಿದ್ಯತೇ । ಕಿಂ ಬಹುನಾ । ದೇವೇಷ್ವಧಿ । ಅಧಿಶಬ್ದಃ ಸಪ್ತಮ್ಯರ್ಥದ್ಯೋತಕಃ । ಇಂದ್ರಾದಿಷು ದೇವೇಷು ಮೇ ಮದೀಯಾಃ ಕಾಮಾ ಅಯಂಸತ । ನಿಯಮ್ಯಂತೇ॥ ಯಚ್ಛತೇಃ ಕರ್ಮಣಿ ಲುಙಿ ರೂಪಂ ॥

ಪ್ರತಿಪದಾರ್ಥ

**ಹೃತ್ಸು**—ನಮ್ಮ ಹೃದಯಗಳಲ್ಲಿ । **ಧೀತಯಃ**—ಭಕ್ತಿಯುತವಾಗಿ ಬೆಳೆದ । **ಕ್ರತವಃ**—ಕರ್ಮವಿಷಯಕವಾದ ಪ್ರಜ್ಞೆಗಳು । **ಕ್ರತೂಯಂತಿ**—ಕರ್ಮಮಾಡುವ ಪ್ರೇರಣೆಯುಳ್ಳವಾಗಿರುತ್ತವೆ । **ವೇನಾಃ**—ಆಕರ್ಷಕವಾದ ನಮ್ಮ ಪ್ರಜ್ಞೆಗಳು । **ವೇನಂತಿ**—ದೇವಪೂಜೆಯನ್ನಪೇಕ್ಷಿಸುತ್ತವೆ । **ದಿಶಃ**—ನಮ್ಮಿಂದ ಪ್ರೇರಿತವಾದ ಆ ಇಚ್ಛೆಗಳು । **ಆ ಪತಯಂತಿ**—ತಮ್ಮ ಇಷ್ಟಾರ್ಥಸಾಧನೆಗಾಗಿ ದೇವತೆಗಳನ್ನು ಸಮೀಪಿಸುತ್ತವೆ । **ಏಭ್ಯಃ**—ಈ ದೇವತೆಗಳಿಗಿಂತ । **ಅನ್ಯಃ**—ಬೇರೆಯಾದ ಯಾರೂ । **ಮರ್ಡಿತಾ**—ನಮಗೆ ಸುಖದಾತರಾಗಿ । **ನ ವಿದ್ಯತೇ**—ಇರುವುದಿಲ್ಲ । **ದೇವೇಷು ಅಧಿ**—ದೇವತೆಗಳಲ್ಲಿಯೇ । **ಮೇ**—ನನ್ನ । **ಕಾಮಾಃ**—ಇಚ್ಛೆಗಳು । **ಅಯಂಸತ**—ಕೇಂದ್ರೀಕೃತವಾಗಿವೆ.

ಭಾವಾರ್ಥ

ನಮ್ಮ ಹೃದಯದಲ್ಲಿ ಭಕ್ತಿಯುತವಾಗಿ ಬೆಳೆದ ಕರ್ಮವಿಷಯಕವಾದ ಪ್ರಜ್ಞೆಗಳು ಕರ್ಮಮಾಡುವ ಪ್ರೇರಣೆಯುಳ್ಳವಾಗಿರುತ್ತವೆ. ಆಕರ್ಷಕವಾದ ನಮ್ಮ ಪ್ರಜ್ಞೆಗಳು ದೇವಪೂಜೆಯನ್ನಪೇಕ್ಷಿಸುತ್ತವೆ. ನಮ್ಮಿಂದ ಪ್ರೇರಿತವಾದ ಆ ಇಚ್ಛೆಗಳು ತಮ್ಮ ಇಷ್ಟಾರ್ಥಸಾಧನೆಗಾಗಿ ದೇವತೆಗಳನ್ನು ಸಮೀಪಿಸುತ್ತವೆ. ದೇವತೆಗಳನ್ನು ಬಿಟ್ಟರೆ ನಮಗೆ ಸುಖದಾತರು ಇನ್ನಾರೂ ಇರುವುದಿಲ್ಲ. ನನ್ನ ಇಚ್ಛೆಗಳೆಲ್ಲವೂ ದೇವತೆಗಳಲ್ಲಿಯೇ ಕೇಂದ್ರೀಕೃತವಾಗಿವೆ.

## English Translation

The desires cherished in my heart strive to offer worship : (our) wishes long for (the gods) and expressed (by us) go forth to (the gods) : no other bestower of happiness exists except them ; upon the gods are my desires concentrated.

ಸಂಹಿತಾಪಾಠಃ

ನರಾ॒ಶಂಸಂ॒ ಪೂ॒ಷಣ॒ಮಗೋ॑ಹ್ಯಮ॒ಗ್ನಿಂ ದೇ॒ವೇದ್ಧ॒ಮ॒ಭ್ಯ॑ರ್ಚಸೇ ಗಿ॒ರಾ ।
ಸೂರ್ಯಾ॒ಮಾಸಾ॑ ಚಂ॒ದ್ರಮ॑ಸಾ ಯ॒ಮಂ ದಿ॒ವಿ ತ್ರಿ॒ತಂ ವಾತ॑ಮು॒ಷಸ॑ಮ॒ಕ್ತು-
ಮ॒ಶ್ವಿನಾ॑ ॥ ೩ ॥

ಪದಪಾಠಃ

ನ॒ರಾ॒ಶಂಸ॑ಂ । ವಾ॒ । ಪೂ॒ಷಣ॑ಂ । ಅಗೋ॑ಹ್ಯಂ । ಅ॒ಗ್ನಿಂ । ದೇ॒ವಽಇ॑ದ್ಧಂ । ಅ॒ಭಿ । ಅ॒ರ್ಚ॒ಸೇ॒ । ಗಿ॒ರಾ ।
ಸೂರ್ಯಾ॒ಮಾಸಾ॑ । ಚಂ॒ದ್ರಮ॑ಸಾ । ಯ॒ಮಂ । ದಿ॒ವಿ । ತ್ರಿ॒ತಂ । ವಾತ॑ಂ । ಉ॒ಷಸ॑ಂ । ಅ॒ಕ್ತುಂ । ಅ॒ಶ್ವಿನಾ॑ ॥

ಸಾಯಣಭಾಷ್ಯಂ

**ಋಷಿಃ ಸ್ವಾತ್ಮಾನಂ ಸಂಬೋಧ್ಯಾಹ । ನರಾಶಂಸಂ ॥ ಉಭೇ ವನಸ್ಪತ್ಯಾದಿಷು ಯುಗಪದಿತ್ಯುಭಯಪದಪ್ರಕೃತಿಸ್ವರತ್ವಂ । ಸಂಹಿತಾಯಾಂ ವಿಪ್ರಕರ್ಷಶ್ಛಾಂದಸಃ॥ ನರೈಃ ಶಂಸನೀಯಮೇತನ್ನಾಮಾನಂ ಪೂಷಣಂ ಸ್ತೋತೄಣಾಂ ಧನದಾನೇನ ಪೋಷಕಮೇತನ್ನಾಮಾನಂ ತಥಾಗೋಹ್ಯಮಗೂಹಿತಮನ್ಯೈರ್ಗಂತುಮಶಕ್ಯಂ ದೇವೇದ್ಧಂ ವಾಮದೇವಾದಿಭಿರ್ಋಷಿಭಿರ್ದೀಪಿತಮಗ್ನಿಂ ಚ ಗಿರಾ ಸ್ತುತ್ಯಾಭ್ಯರ್ಚಸೇ । ಅಭಿಷ್ಟುಹಿ । ತಥಾ ಸೂರ್ಯಮಾಸಾ ಚಂದ್ರಮಸಾ । ಮಾ ಇತಿ ಚಂದ್ರಮಸೋ ವಿಶೇಷಣಂ । ಮಾತಿ ಪಕ್ಷಮಿತಿ ಮಾಶ್ಚಂದ್ರಮಾಃ । ತೌ ಸೂರ್ಯಾಚಂದ್ರಮಸೌ ದಿವಿ ದ್ಯುಲೋಕೇ ಸ್ಥಿತಂ ಯಮಂ ಚ ತ್ರಿತಂ ತ್ರಿಷು ಲೋಕೇಷು ತತಂ ಸ್ವಮಹಿಮ್ನಾ ವಿಸ್ತೃತಂ ತ್ರಿಸ್ಥಾನಂ ವಾ ತಮಿಂದ್ರಂ ವಾತಂ ವಾಯುಮುಷಸಮುಷಃಕಾಲಮಕ್ತುಂ ರಾತ್ರಿಮಶ್ವಿನಾಶ್ವಿನೌ ಚೈತಾನ್ದೇವಾಂಸ್ತತ್ತಲ್ಲಿಂಗೈಃ ಸ್ತೋತ್ರೈರಭಿಷ್ಟುಹಿ ॥**

ಪ್ರತಿಪದಾರ್ಥ

**ನರಾಶಂಸಂ**—ನರಾಶಂಸದೇವನನ್ನೂ । **ಪೂಷಣಂ**—ಪೂಷದೇವನನ್ನೂ । **ಅಗೋಹ್ಯಂ**— ಇತರರಿಂದ ಸಮೀಪಿಸಲು ಸಾಧ್ಯವಿಲ್ಲದವನೂ । **ದೇವೇದ್ಧಂ**—ವಾಮದೇವಾದಿ ಋಷಿಗಳಿಂದ ಪ್ರಜ್ವಲಿತನೂ ಆದ । **ಅಗ್ನಿಂ**—ಅಗ್ನಿಯನ್ನೂ । **ಗಿರಾ**—ಸ್ತುತಿಯಿಂದ । **ಅಭ್ಯರ್ಚಸೇ**—ಪ್ರಶಂಸಿಸಿ ಪೂಜಿಸು । **ಸೂರ್ಯಾಮಾಸಾ-ಚಂದ್ರಮಸಾ**—ಸೂರ್ಯಾ-ಚಂದ್ರಮಸರಿಬ್ಬರನ್ನೂ । **ದಿವಿ**—ದ್ಯುಲೋಕಸ್ಥನಾದ । **ಯಮಂ**—ಯಮನನ್ನೂ । **ತ್ರಿತಂ**—ಮೂರು ಲೋಕಗಳಲ್ಲೂ ವ್ಯಾಪಿಸಿರುವ ಇಂದ್ರನನ್ನೂ । **ವಾತಂ**—ವಾಯುವನ್ನೂ । **ಉಷಸಂ**—ಉಷೋದೇವಿಯನ್ನೂ । **ಅಕ್ತುಂ**—ರಾತ್ರಿಯನ್ನೂ । **ಅಶ್ವಿನಾ** —ಅಶ್ವಿನೀದೇವತೆಗಳನ್ನೂ ಸ್ತುತಿಸು.

ಭಾವಾರ್ಥ

ಎಲೈ ಋಷಿಯೇ, ನರಾಶಂಸದೇವನನ್ನೂ, ಪೂಷದೇವನನ್ನೂ, ಇತರರಿಂದ ಸಮೀಪಿಸಲು ಸಾಧ್ಯವಿಲ್ಲದವನೂ, ವಾಮದೇವಾದಿ ಋಷಿಗಳಿಂದ ಪ್ರಜ್ವಲಿತನೂ ಆದ ಅಗ್ನಿಯನ್ನೂ, ಸೂರ್ಯ ಮತ್ತು ಚಂದ್ರರನ್ನೂ, ದ್ಯುಲೋಕಸ್ಥನಾದ

ಯಮನನ್ನೂ, ಮೂರು ಲೋಕಗಳಲ್ಲೂ ವ್ಯಾಪಿಸಿರುವ ಇಂದ್ರನನ್ನೂ, ವಾಯುವನ್ನೂ, ಉಷೋದೇವಿಯನ್ನೂ, ರಾತ್ರಿಯನ್ನೂ ಮತ್ತು ಅಶ್ವಿನೀದೇವತೆಗಳನ್ನೂ ಸ್ತುತಿಸು.

## English Translation

Adore with praises Narashamsa and Pushan, and the unapproachable Agni kindled by the devout (Rishis) ; and the sun and the moon, the two moons, Yama in heaven, Trita, Vata, the dawn, the night, and the Ashwins.

### ವಿಶೇಷವಿಷಯಗಳು

**ನರಾಶಂಸಂ**—ಪ್ರಕೃತ ಋಕ್ಕಿನ ಸಂಹಿತಾಪಾಠದಲ್ಲಿ **ನರಾಶಂಸಂ** ಎಂಬ ಶಬ್ದದ ಮಧ್ಯದಲ್ಲಿ ವಾ ಎಂಬ ಶಬ್ದದ ಪ್ರಯೋಗವಿದೆ ಎಂದರೆ ಸಂಹಿತಾಪಾಠದಲ್ಲಿ **ನರಾ ವಾ ಶಂಸಂ** ಎಂದು ಇರುವುದು ಪದಪಾಠದಲ್ಲಿ **ನರಾಶಂಸಂ। ವಾ** ಎಂದಾಗಿರುವುದು. ಛಂದಸ್ಸಿನ ಅನುಕೂಲಕ್ಕಾಗಿ ಈ ವಿಧವಾದ ಪ್ರಯೋಗವಿರುವುದೆಂದು ಕಂಡುಬರುವುದು. ಇದೇ ವಿಧವಾದ ಪ್ರಯೋಗವು—

**ದ್ವಾ ಜನಾ ಯಾತಯನ್ನಂತರೀಯತೇ ನರಾ ಚ ಶಂಸಂ ದೈವ್ಯಂ ಚ ಧರ್ತರಿ ।**

(ಋ. ಸಂ. ೯-೮೬-೪೨)

ಎಂಬ ಋಕ್ಕಿನಲ್ಲಿಯೂ ಕಂಡುಬರುವುದು. ಇಲ್ಲಿ ವಾಶಬ್ದಕ್ಕೆ ಬದಲಾಗಿ ಚಶಬ್ದದ ಪ್ರಯೋಗವಿರುವುದು. ಇಲ್ಲಿ ನರಾಶಂಸದೇವತೆಯ ವಿಷಯವನ್ನು ಸೂಕ್ಷ್ಮವಾಗಿ ವಿಮರ್ಶಿಸುವುದು ಅವಶ್ಯಕವಾಗಿದೆ.

**ನರಾಶಂಸಃ। ನರೈಃ ಶಂಸನೀಯಃ** (ಅಗ್ನಿಃ) ನರರಿಂದ ಸ್ತುತಿಸಲ್ಪಡುವ ಅಗ್ನಿಯೆಂದು ಇದು ಅಗ್ನಿಯ ಅನ್ವರ್ಥನಾಮವಾಗಿದೆ ಅಥವಾ **ನರಾಶಂಸೋಽಗ್ನಿರ್ಯಜ್ಞೋ ವಾ** ನರಾಶಂಸನೆಂದರೆ ಅಗ್ನಿಯೆಂದಾಗಲೀ ಅಥವಾ ಯಜ್ಞವೆಂದಾಗಲೀ ಅರ್ಥವಾಗುವುದೆಂದು ಇನ್ನೊಂದು ಮತ. ಈ ಎರಡು ಅಭಿಪ್ರಾಯಗಳನ್ನೂ ನಿರುಕ್ತವಾಕ್ಯವು ಸಮರ್ಥಿಸುತ್ತದೆ.

**ನರಾಶಂಸೋ ಯಜ್ಞ ಇತಿ ಕಾತ್ಥಕ್ಯಃ । ನರಾ ಅಸ್ಮಿನ್ನಾಸೀನಾಃ ಶಂಸಂತಿ । ಅಗ್ನಿರಿತಿ ಶಾಕಪೂಣಿಃ । ನರೈಃ ಪ್ರಶಸ್ಯೋ ಭವತಿ ॥**

(ನಿ. ೮-೭)

ಎಂದರೆ, ನರರು (ಮನುಷ್ಯರು) ಯಜ್ಞದಲ್ಲಿ ಕುಳಿತುಕೊಂಡು (ದೇವತೆಗಳನ್ನು) ಪ್ರಶಂಸೆಮಾಡುವುದರಿಂದ ಯಜ್ಞಕ್ಕೆ ನರಾಶಂಸನೆಂಬ ಹೆಸರೆಂದು ಕಾತ್ಥಕ್ಯರೂ, ನರರಿಂದ ಪ್ರಶಸ್ಯನಾದುದರಿಂದ ಅಗ್ನಿಗೆ ಈ ಹೆಸರು ಅನ್ವಯಿಸುವುದೆಂದು ಶಾಕಪೂಣಿಯೂ ಹೇಳಿರುವುದಾಗಿ ನಿರುಕ್ತಕಾರರು ಈ ಎರಡು ಅಭಿಪ್ರಾಯಗಳನ್ನು ಸೂಚಿಸಿ, ಅನಂತರ—

**ನರಾಶಂಸಸ್ಯ ಮಹಿಮಾನಮೇಷಾಮುಪ ಸ್ತೋಷಾಮ ಯಜತಸ್ಯ ಯಜ್ಞೈಃ ।**
**ಯೇ ಸುಕ್ರತವಃ ಶುಚಯೋ ಧಿಯಂಧಾಃ ಸ್ವದಂತಿ ದೇವಾ ಉಭಯಾನಿ ಹವ್ಯಾ ॥**

(ಋ. ಸಂ. ೭-೨-೨)

ಎಂಬ ಋಕ್ಕನ್ನು ಉದಹರಿಸಿದ್ದಾರೆ. ಈ ಋಕ್ಕಿನಲ್ಲಿ ಅಗ್ನಿಯೆಂಬ ಅರ್ಥವೇ ಸಮಂಜಸವಾಗಿದೆ. ನಿಘಂಟುವಿನಲ್ಲಿ ಪಠಿತವಾಗಿರುವ ದೇವತೆಗಳ ಮಧ್ಯದಲ್ಲಿ ನರಾಶಂಸದೇವತೆಯು ಅಗ್ನಿಯ ರೂಪಾಂತರಗಳಲ್ಲೊಂದು ಎಂದು ಉಕ್ತವಾಗಿದೆ. ಇದನ್ನೇ ಬೃಹದ್ದೇವತಾಕಾರರು—

**ನರಾಂಶಂಸಸ್ತ್ರಿತಶ್ಚೈನಮೇನಮೇವಾಶ್ರಿತಸ್ತ್ರಿಳಃ ।**
**ಬಹಿರ್ದ್ವಾರಶ್ಚ ದೇವ್ಯೋಽಗ್ನಿಮೇನಮೇವ ತು ಸಂಶ್ರಿತಾಃ**

(ಬೃ. ದೇ. ೧-೧೦೭)

ಎಂಬ ಶ್ಲೋಕದಲ್ಲಿ ನರಾಶಂಸನನು ಇಲ್ಲಿ ಹೇಳಿರುವ ಇತರ ದೇವತೆಗಳಂತೆಯೇ ಅಗ್ನಿಯಲ್ಲಿ ಅಂತರ್ಗತನಾಗಿರುವನೆಂದು ಹೇಳಿದ್ದಾರೆ ಮತ್ತು

**ಪೃಥಕ್ತ್ವೇನ ಸಮುಸ್ತೈಸ್ತು ಯಜ್ಞೇ ಯಚ್ಛಸ್ಯತೇ ನೃಭಿಃ ।**
**ಸ್ತುವಂತ್ಯಾಪ್ರೀಷು ತೇನೇಷುಂ ನರಾಶಂಸಂ ತು ಕಾರವಃ ॥**

(ಬೃ. ದೇ. ೨-೨೮)

ಯಜ್ಞದಲ್ಲಿ ಸೇರಿರತಕ್ಕ ಸಕಲ ನರರಿಂದಲೂ ಸಹ ಪ್ರತ್ಯೇಕವಾಗಿ ಪ್ರಶಂಸಿಸಲ್ಪಡುವುದರಿಂದ ಕೃತಿಕಾರರು ಇವನನ್ನು (ಅಗ್ನಿಯನ್ನು) ನರಾಶಂಸನೆಂಬ ಹೆಸರಿನಿಂದ ಆಪ್ರೀಸೂಕ್ತಗಳಲ್ಲಿ ಸ್ತುತಿಸಿದ್ದಾರೆ ಎಂದು ಹೇಳಿ, ನಿರುಕ್ತಕಾರರು ಹೇಳುವ ಅಭಿಪ್ರಾಯವನ್ನು ಇವರೂ ಅನುಮೋದಿಸಿದ್ದಾರೆ.

**ನರಾಶಂಸಮಿಹೈಕೇ ತು ಅಗ್ನಿಮಾಹುರಥೇತರೇ ।**
**ನರಾಃ ಶಂಸಂತಿ ಸರ್ವೇಽಸ್ಮಿನ್ನಾಸೀನಾ ಇತಿ ಚಾಧ್ವರೇ ॥**
**ಏತಮೇವಾಹುರನ್ಯೇಽಗ್ನಿಂ ನರಾಶಂಸೋಽಧ್ವರೇ ಹ್ಯಯಂ ।**
**ನರೈಃ ಪ್ರಶಸ್ಯ ಆಸೀನೈರಾಹುಶ್ಚೈವರ್ತ್ವಿಜೋ ನರಃ ॥**

(ಬೃ. ದೇ. ೩-೨, ೩)

ಕೆಲವರು ನರಾಶಂಸನನ್ನು ಅಗ್ನಿಯೆಂದೇ ಹೇಳುತ್ತಾರೆ. ಯಜ್ಞದಲ್ಲಿ ನರರು ಸೇರಿ ಪ್ರಶಂಸಿಸುವುದರಿಂದ ಯಜ್ಞವೆಂದೇ ಮತ್ತೆ ಕೆಲವರು ಹೇಳುತ್ತಾರೆ. ಯಜ್ಞದಲ್ಲಿ ಸೇರಿರತಕ್ಕ ನರರಿಂದ ಪ್ರಶಂಸಿಸಲ್ಪಡುವುದರಿಂದ ನರಾಶಂಸನೆಂದರೆ ಅಗ್ನಿಯೇ ಎಂದು ಇನ್ನೂ ಕೆಲವರ ಮತ. ಮೂರನೆಯದು, ಮೊದಲನೆಯ ಮತ್ತು ಎರಡನೆಯ ಮತಗಳ ಸಮನ್ವಯವಾಗಿದೆ. ಈ ಎರಡು ಅರ್ಥಗಳ ಜತೆಗೆ ಸಾಯಣರು ಮೂರನೆಯ ಅರ್ಥವನ್ನೂ ಹೇಳಿರುತ್ತಾರೆ. ಋ. ಸಂ. ೧-೮೯-೯ನೆ ಋಕ್ಕಿನ ಭಾಷ್ಯದಲ್ಲಿ—

**ನರಾಶಂಸಮೇತನ್ನಾಮಕಂ ದೇವವಿಶೇಷಂ । ಯದ್ವಾ ಅವಯವಾರ್ಥವ್ಯುತ್ಪತ್ತ್ಯಾ ಸದಸಸ್ಪತಿ-ದೇವತಾಪರೋಽಯಂ ಶಬ್ದಃ । ಅತ್ರ ಅಗ್ನಿವತ್ ಸದಸಸ್ಪತೇರಪಿ ನರೈಃ ಶಸ್ಯಮಾನತ್ವಾತ್ ನರಾಶಂಸತ್ವಂ । ಏತಮೇವಾಭಿಪ್ರಾಯಂ ಹೃದಿ ನಿಧಾಯ ಬ್ರಾಹ್ಮಣಮೇವಮಾಮ್ನಾಯತೇ ಪ್ರಜಾ ವೈ ನರೋ ವಾಕ್ ಶಂಸಃ ॥**

(ಐ. ಬ್ರಾ. ೬-೨೭)

ಎಂಬ ವಿವರಣೆ ಇದೆ. ನರಾಶಂಸನೆಂದರೆ ಈ ಹೆಸರಿನ ದೇವತಾವಿಶೇಷನೆಂದಾಗಲಿ ಅರ್ಥವಾಗಬಹುದು. ಸದಸಸ್ಪತಿಯೂ ನರರಿಂದ ಸ್ತುತಿಸಲ್ಪಡುವುದರಿಂದಲೂ, ಈ ಭಾವವು ಐತರೇಯಬ್ರಾಹ್ಮಣದಿಂದ ಉದಾಹೃತವಾಗಿರುವ ವಾಕ್ಯವು ಸೂಚಿಸುವುದರಿಂದಲೂ ಸಹ ಈ ಅರ್ಥವಾಗಬಹುದು ಎಂದು ಮೂರನೆಯ ಅರ್ಥವನ್ನು ತೋರಿಸಿದ್ದಾರೆ. ಆದರೆ ಈ ಶಬ್ದವು ಋಕ್ಸಂಹಿತೆಯಲ್ಲೆಲ್ಲಾ ಅಗ್ನಿಪರವಾಗಿಯೇ ಇದೆಯೆಂದು ಹೇಳಬಹುದು.

ನರಾಶಂಸಃ ಪ್ರತಿ ಧಾಮಾನ್ಯಂಜನ್ ತಿಸ್ರೋ ದಿವಃ ಪ್ರತಿ ಮಹ್ನಾ ಸ್ವರ್ಚಿಃ ।
ಘೃತಪ್ರುಷಾ ಮನಸಾ ಹವ್ಯಮುಂದನ್ಮೂರ್ಧನ್ಯಜ್ಞಸ್ಯ ಸಮನಕ್ತು ದೇವಾನ್ ॥

(ಋ. ಸಂ. ೨-೩-೨)

ಇತ್ಯಾದಿ ಋಕ್ಕುಗಳಲ್ಲಿ ಶರಾಶಂಸಶಬ್ದಕ್ಕೆ ಅಗ್ನಿಯೆಂದೇ ಅರ್ಥವಾಗುತ್ತದೆ.

ಸಂಹಿತಾಪಾಠಃ

ಕಥಾ ಕವಿಸ್ತುವೀರವಾನ್ಕಯಾ ಗಿರಾ ಬೃಹಸ್ಪತಿರ್ವಾವೃಧತೇ ಸುವೃಕ್ತಿಭಿಃ ।
ಅಜ ಏಕಪಾತ್ಸುಹವೇಭಿರ್ಋಕ್ವಭಿರಹಿಃ ಶೃಣೋತು ಬುಧ್ನ್ಯೋ೩ ಹವೀಮನಿ॥

ಪದಪಾಠಃ

ಕಥಾ । ಕವಿಃ । ತುವಿಽರವಾನ್ । ಕಯಾ । ಗಿರಾ । ಬೃಹಸ್ಪತಿಃ । ವವೃಧತೇ । ಸುವೃಕ್ತಿಽಭಿಃ ।
ಅಜಃ । ಏಕಽಪಾತ್ । ಸುಽಹವೇಭಿಃ । ಋಕ್ವಽಭಿಃ । ಅಹಿಃ । ಶೃಣೋತು । ಬುಧ್ನ್ಯಃ । ಹವೀಮನಿ ॥೮॥

ಸಾಯಣಭಾಷ್ಯಂ

ಕವಿಃ ಕಾಂತಪ್ರಜ್ಞೋಽಗ್ನಿಃ ಕಥಾ ಕಥಂ ಕೇನ ಪ್ರಕಾರೇಣ ತುವೀರವಾನ್ಬಹುಸ್ತೋತ್ರ-ಯುಕ್ತೋ ಭವತಿ ॥ ಮತ್ವರ್ಥೀಯಪ್ರತ್ಯಯೋವೃತ್ತಿಃ । ಯದ್ವಾ । ತುವಿಶಬ್ದಸ್ಯ ರೋ ಮತ್ವರ್ಥೀಯಃ । ಬಾಹುಲ್ಯಯುಕ್ತದೇವೈಃ ಸಹಿತೋ ಭವತಿ ॥ ಕಯಾ ವಾ ಗಿರಾ ಸ್ತುತ್ಯಾ ಬಹುಮಾನ್ಭವತಿ । ಬೃಹಸ್ಪತಿ-ರೇತನ್ನಾಮಕೋ ದೇವಃ ಸುವೃಕ್ತಿಭಿಃ ಶೋಭನಾಭಿಃ ಸ್ತುತಿಭಿಸ್ತಥಾ ವಾವೃಧತೇ। ತಥೈಕಪಾತ್। ಏಕೋಽ-ಸಹಾಯ ಏವ ಪತತಿ ಗಚ್ಛತೀತ್ಯೇಕಪಾತ್ ತಾದೃಶೋ ದಿವೋ ಧಾರಯಿತಾಜ ಏತನ್ನಾಮಕೋ ದೇವಶ್ಚ ಸುಹವೇಭಿಃ ಶೋಭನಾಹ್ವಾನೈರ್ಋಕ್ವಭಿರ್ಮಂತ್ರವದ್ಭಿಃ ಸ್ತೋತ್ರೈರ್ವಾವೃಧತೇ । ಏತೇ ತ್ರಯೋ ದೇವಾ ವರ್ಧಂತೇ ॥ ತ್ರಿತ್ವಾಪೇಕ್ಷಯಾ ಬಹುವಚನಂ । ವೃಧು ವೃದ್ಧೌ । ವ್ಯತ್ಯಯೇನ ಶಪಃ ಶ್ಲುಃ ॥ ಅಹಿ-ರ್ಬುಧ್ನ್ಯಶ್ಚೈತನ್ನಾಮಕೋ ದೇವಶ್ಚ ಹವೀಮನ್ಯಾಹ್ವಾನೇಽಸ್ಮಾಞ್ಛೃಣೋತು ॥

ಪ್ರತಿಪದಾರ್ಥ

**ಕವಿಃ**—ಮೇಧಾವಿಯಾದ ಅಗ್ನಿಯು । **ಕಥಾ**—ಯಾವ ಪ್ರಕಾರವಾಗಿ (ಪ್ರಶಂಸಿಸಲ್ಪಡುತ್ತಾನೆ) । **ಕಯಾ ಗಿರಾ**—ಯಾವ ಸ್ತುತಿಯಿಂದ (ಕೂಡಿದ) । **ತುವೀರವಾನ್**—ಅಧಿಕವಾದ ಸ್ತುತಿಕರ್ತರಿಂದ ಕೂಡಿರುತ್ತಾನೆ। **ಬೃಹಸ್ಪತಿಃ**—ಬೃಹಸ್ಪತಿಯು । **ಸುವೃಕ್ತಿಭಿಃ**—ಉತ್ತಮವಾದ ಸ್ತುತಿಗಳಿಂದ । **ವಾವೃಧತೇ**—ವೃದ್ಧಿಯನ್ನು ಹೊಂದುತ್ತಾನೆ । (Explained) **ಅಜ ಏಕಪಾತ್**—ಅಜ ಏಕಪಾತ್ ಎಂಬ ದೇವನು । **ಸುಹವೇಭಿಃ**—ಉತ್ತಮವಾದ ಆಹ್ವಾನಗಳಿಂದಲೂ । **ಋಕ್ವಭಿಃ**—ಮಂತ್ರರೂಪವಾದ ಸ್ತುತಿಗಳಿಂದಲೂ । **ವಾವೃಧತೇ**—ವೃದ್ಧಿಯನ್ನು ಹೊಂದುತ್ತಾನೆ । **ಅಹಿರ್ಬುಧ್ನ್ಯಃ**—ಅಹಿರ್ಬುಧ್ನ್ಯಸಂಜ್ಞಕನಾದ ದೇವನು । **ಹವೀಮನಿ**—ಆಹ್ವಾನಕಾಲಗಳಲ್ಲಿ । **ಶೃಣೋತು**—ನಮ್ಮ ಆಹ್ವಾನಗಳನ್ನು ಕೇಳಲಿ.

ಭಾವಾರ್ಥ

ಮೇಧಾವಿಯಾದ ಅಗ್ನಿಯು ಯಾವ ಪ್ರಕಾರವಾಗಿ ಪ್ರಶಂಸಿಸಲ್ಪಡುತ್ತಾನೆ ? ಸ್ತುತಿಯುಕ್ತರಾದ ಎಷ್ಟು ಜನ ಸ್ತುತಿಕರ್ತರಿಂದ ಕೂಡಿರುತ್ತಾನೆ ? ಬೃಹಸ್ಪತಿಯು ಉತ್ತಮವಾದ ಸ್ತುತಿಗಳಿಂದ ವೃದ್ಧಿಯನ್ನು ಹೊಂದುತ್ತಾನೆ. ಅಜ ಏಕಪಾತ್ ಸಂಜ್ಞಕನಾದ ದೇವನು ಉತ್ತಮವಾದ ಆಹ್ವಾನಗಳಿಂದಲೂ, ಮಂತ್ರರೂಪವಾದ ಸ್ತುತಿಗಳಿಂದಲೂ ವೃದ್ಧಿಯನ್ನು ಹೊಂದುತ್ತಾನೆ. ಅಹಿರ್ಬುಧ್ನ್ಯಸಂಜ್ಞಕನಾದ ದೇವನು ಆಹ್ವಾನಕಾಲಗಳಲ್ಲಿ ನಮ್ಮ ಆಹ್ವಾನಗಳನ್ನು ಕೇಳಲಿ.

English Translation

How is the sage (Agni) adored by multitudes, and by what praises ? Brihaspati is magnified with sacred hymns ; Aja, walking alone, is magnified with solemn invocations and prayers : may Ahirbudhnya hear us at the season of invocation.

ಸಂಹಿತಾಪಾಠಃ

ದಕ್ಷಸ್ಯ ವಾದಿತೇ ಜನ್ಮನಿ ವ್ರತೇ ರಾಜಾನಾ ಮಿತ್ರಾವರುಣಾ ವಿವಾಸಸಿ ।
ಅತೂರ್ತಪಂಥಾಃ ಪುರುರಥೋ ಅರ್ಯಮಾ ಸಪ್ತಹೋತಾ ವಿಷುರೂಪೇಷು ಜನ್ಮಸು ॥ ೫ ॥

ಪದಪಾಠಃ

ದಕ್ಷಸ್ಯ । ವಾ । ಅದಿತೇ । ಜನ್ಮನಿ । ವ್ರತೇ । ರಾಜಾನಾ । ಮಿತ್ರಾವರುಣಾ । ಆ । ವಿವಾಸಸಿ ।
ಅತೂರ್ತಽಪಂಥಾಃ । ಪುರುಽರಥಃ । ಅರ್ಯಮಾ । ಸಪ್ತಽಹೋತಾ । ವಿಷುಽರೂಪೇಷು । ಜನ್ಮಸು ॥

ಸಾಯಣಭಾಷ್ಯಂ

ಹೇ ಅದಿತೇ ಪೃಥಿವಿ ದಕ್ಷಸ್ಯ ಸೂರ್ಯಸ್ಯ ಜನ್ಮನಿ ತಸ್ಮಿನ್ನಿಷ್ಪನ್ನೇ ವ್ರತೇ ತಸ್ಯ ಯಜ್ಞಕರ್ಮಣಿ ರಾಜಾನಾ ರಾಜಂತೌ ಮಿತ್ರಾವರುಣೌ ವಿವಾಸಸಿ । ವಾಶಬ್ದ ಉಪಮಾರ್ಥಃ । ಯಥಾ ತ್ವಂ ವೇದಿಭೂತಾ ಸತೀ ತೌ ಪರ್ಯಚರಃ ಏವಮಿದಾನೀಮಪ್ಯಸ್ಮದ್ಯಜ್ಞೇ ಕುರ್ವಿತಿ ಪೃಥಿವೀಮಾಶಾಸ್ತೇ । ಸೋಽಯರ್ಮಾರೀಣಾಂ ತಮಸಾಂ ಯಂತಾ ನಿಯಂತಾ ಸೂರ್ಯೋ ವಿಷುರೂಪೇಷು ನಾನಾರೂಪೇಷು ಜನ್ಮಸು ಕರ್ಮಸ್ವನ್ನಹಮುದ್ಯನ್ ಸಪ್ತಹೋತಾ । ಸಪ್ತ ರಶ್ಮಯೋ ಯಸ್ಮಿನ್ರಸಾ ಇಷ್ಟ್ವಾಹ್ವತಿ ಪ್ರಕ್ಷಿಪಂತಿ ಸ ಏತಾದೃಶೋ ಭವತಿ । ಅತೂರ್ತಪಂಥಾಃ । ಅತೂರ್ತಸ್ತ್ವರಾರಹಿತಃ ಪಂಥಾ ಯಸ್ಯ ಸಃ । ನಿಯತಗತಿತ್ವಾತ್ತ್ವರಮಾಣೋ ಹ್ಯನಿಯತಗತಿರ್ಭವತಿ । ಪುರುರಥಃ । ರಥೋ ರಂಹತೇಃ । ಪ್ರತ್ಯಹಂ ಭುಕ್ತಿಭೇದಾದ್ಬಹುರಂಹಣೋ ಭವತಿ ॥ ಯದ್ವಾ। ಹೇ ಅದಿತೇ ಪ್ರಾತಸ್ತನಿ ಸಂಧ್ಯೇ ದಕ್ಷಸ್ಯಾದಿತ್ಯಸ್ಯ ಜನ್ಮನ್ಯುದಯಾಖ್ಯೇ ಜನ್ಮನಿ ಕರ್ಮಣಿ । ಉದ್ಯತ್ಯಾದಿತ್ಯ ಇತ್ಯರ್ಥಃ । ವಾ ಶಬ್ದಃ ಶ್ರುತಿಸಾಮರ್ಥ್ಯಾದ್ದಕ್ಷಸ್ಯ ವಾ ಜನ್ಮನಿ ತ್ವತ್ತ್-

**ಸ್ತವ ವಾ ಜನ್ಮನಿ ದಕ್ಷಾದಿತಿ । ರಾಜಾನಾ ದೀಪ್ಯಮಾನೌ ಮಿತ್ರಾವರುಣಾ । ಅಹರ್ವೈ ಮಿತ್ರೋ ರಾತ್ರಿ-ರ್ವರುಣಃ । ಐ. ಬ್ರಾ. ೪-೧೦ । ಇತಿ ಶ್ರುತೇರಹೋರಾತ್ರೌ ಮಿತ್ರಾವರುಣಾವುಚ್ಯೇತೇ । ತೌ ವಿವಾಸಸಿ । ಪರಿಚರಸಿ । ಕಥಂ । ತೆದನುಪ್ರವೇಶೇನ । ಅರ್ಧಂ ಹಿ ಸಂಧ್ಯಾಯಾ ರಾತ್ರಿಮನುಪ್ರವಿಶತ್ಯರ್ಧಮ-ಹರಿತಿ । ಉತ್ತರಾರ್ಧಃ ಪೂರ್ವವತ್ । ಸಪ್ತಹೋತಾ । ಹ್ವಯತೇರರ್ಚತಿಕರ್ಮಣ ಇದಂ ರೂಪಂ । ಸಪ್ತರ್ಷಯೋ ಭರದ್ವಾಜಾದಯೋ ಹೋತಾರಃ ಸ್ತೋತಾರಃ ಸಂತೀತಿ । ಅಥವಾ ಸಪ್ತಹೋತಾ । ಮಲ್ಲಿಮ್ಲುಚಾಂಹಸಸ್ಪತಿಸಹಿತಾಃ ಸಪ್ತರ್ತವೋ ಯಸ್ಯ ಹೋತಾರೋ ಭವಂತಿ ತಾದೃಶಃ। ಅತ್ರ ನಿರುಕ್ತಂ। ದಕ್ಷಸ್ಯ ವಾದಿತೇ ಜನ್ಮನಿ ಕರ್ಮಣಿ ವ್ರತೇ ರಾಜಾನೌ । ನಿ.೧೧-೨೩ । ಇತ್ಯಾದಿ ।।**

ಪ್ರತಿಪದಾರ್ಥ

**ಅದಿತೇ**—ಎಲೈ ಪೃಥ್ವಿಯೇ (ಅದಿತಿಯೇ) । **ದಕ್ಷಸ್ಯ**—ಸೂರ್ಯನ । **ಜನ್ಮನಿ**—ಉತ್ಪತ್ತಿಕಾಲದಲ್ಲಿ । **ವ್ರತೇ**—ಅವನ ಪೂಜಾಕರ್ಮಕ್ಕಾಗಿ । **ರಾಜಾನಾ**—ಪ್ರಕಾಶಮಾನರಾದ । **ಮಿತ್ರಾವರುಣಾ**—ಮಿತ್ರಾವರುಣರನ್ನು । **ಆ ವಿವಾಸಸಿ**—ಪೂಜಿಸುತ್ತೀಯೆ । **ಅರ್ಯಮಾ**—ಕತ್ತಲೆಯನ್ನು ನಿರೋಧಿಸುವ ಸೂರ್ಯನು । **ವಿಷು-ರೂಪೇಷು**—ವ್ಯತ್ಯಸ್ತವಾದ ಕರ್ಮಗಳಿಗೆ ಅನುಸಾರವಾದ ಅನೇಕ ರೂಪಗಳುಳ್ಳ । **ಜನ್ಮಸು**—ತನ್ನ ಉದಯಾಸ್ತಮಯಕಾಲಗಳಲ್ಲಿ । **ಸಪ್ತಹೋತಾ**—ಏಳುವಿಧವಾದ ರಶ್ಮಿಗಳುಳ್ಳವನಾಗಿಯೂ । **ಅತೂರ್ತಪಂಥಾಃ**—ವೇಗವಿಲ್ಲದ ಗಮನಮಾರ್ಗಗಳುಳ್ಳವನಾಗಿಯೂ । **ಪುರುರಥಃ**—ಅನೇಕ ರಥಗಳುಳ್ಳವನಾಗಿಯೂ ಇರುತ್ತಾನೆ.

ಭಾವಾರ್ಥ

ಎಲೈ ಪೃಥ್ವಿಯೇ, (ಅದಿತಿಯೇ) ನೀನು ಸೂರ್ಯನ ಉತ್ಪನ್ನಕಾಲದಲ್ಲಿ ಅವನ ಪೂಜಾಕರ್ಮಕ್ಕಾಗಿ ಪ್ರಕಾಶಮಾನರಾದ ಮಿತ್ರಾವರುಣರನ್ನು ಪೂಜಿಸುತ್ತೀಯೆ. ಕತ್ತಲೆಯನ್ನು ನಿರೋಧಿಸುವ ಸೂರ್ಯನು ಕರ್ಮಾನುಗುಣವಾದ ಅನೇಕ ರೂಪಗಳುಳ್ಳ ತನ್ನ ಉದಯಾಸ್ತಮಯಕಾಲಗಳಲ್ಲಿ ಏಳುವಿಧವಾದ ರಶ್ಮಿಗಳುಳ್ಳವನಾಗಿಯೂ, ವೇಗವಿಲ್ಲದ ಗಮನಮಾರ್ಗಗಳುಳ್ಳವನಾಗಿಯೂ ಅಥವಾ ಒಂದೇಸಮನಾದ ಗಮನವುಳ್ಳವನಾಗಿಯೂ, ಅನೇಕ ರಥಗಳುಳ್ಳವನಾಗಿಯೂ ಎಂದರೆ ಬಹುವೇಗವುಳ್ಳವನಾಗಿಯೂ ಇರುತ್ತಾನೆ.

## English Translation

At the birth of Daksha, at his sacred rite, you, Aditi, worship the royal Mitra and Varuna at the sacred rite· Aryaman: whose course is not hurried, the giver of delight to many, haviag seven ministering (rays), (proceeds) in his multiform births·

ವಿಶೇಷವಿಷಯಗಳು

ಅದಿತಿಶಬ್ದದ ನಿರ್ವಚನವನ್ನು ಹೇಳುವಾಗ ಯಾಸ್ಕರು ಈ ಋಕ್ಕಿಗೆ ನಿರುಕ್ತವನ್ನು ಹೇಳಿದಾರೆ—

**ಅದಿತಿಃ । ಅದಿತಿರದೀನಾ ದೇವಮಾತಾ** (ನಿ. ೪-೨೨)

ಅದಿತಿಯು ದೇವತೆಗಳಿಗೆ ಮಾತೆಯು. ಇವಳು ದೀನಳಲ್ಲವಾದುದರಿಂದ ಇವಳಿಗೆ ಅದಿತಿಯೆಂಬ ಹೆಸರು ಬಂದಿದೆ. ಅದಿತಿಯ ಮಕ್ಕಳು ಎಂದರೆ,

> **ಅಷ್ಟೌ ಪುತ್ರಾಸೋ ಅದಿತೇಃ ।..........ತಾನನುಕ್ರಮಿಷ್ಯಾಮಃ । ಮಿತ್ರಶ್ಚ ವರುಣಶ್ಚ । ಧಾತಾ ಚಾರ್ಯಮಾ ಚ । ಅಗ್ಂಶಶ್ಚ ಭಗಶ್ಚ । ಇಂದ್ರಶ್ಚ ವಿವಸ್ವಾಗ್‌ಶ್ಚೇತ್ಯೇತೇ ॥**
> (ತೈ. ಆ.೧-೧೩.೩)

ಅದಿತಿಗೆ ಮಿತ್ರ, ವರುಣ, ಧಾತಾ, ಅರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನ್ ಎಂಬ ಎಂಟುಮಂದಿ ಪುತ್ರರೆಂದು ಹೇಳಿದೆ. ಈ ಅದಿತಿಶಬ್ದವಿರುವ ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅದಕ್ಕೆ ನಿರ್ವಚನವನ್ನು ಈರೀತಿ ಹೇಳಿದಾರೆ—

> **ದಕ್ಷಸ್ಯ ವಾದಿತೇ ಜನ್ಮನಿ ವ್ರತೇ ಕರ್ಮಣಿ ರಾಜಾನೌ ಮಿತ್ರಾವರುಣೌ ಪರಿಚರಸಿ । ವಿವಾಸತಿಃ ಪರಿಚರ್ಯಾಯಾಂ। ಹವಿಷ್ಮಾನ್ ಆವಿವಾಸತಿ। ಇತ್ಯಾಶಾಸ್ತೇರ್ವಾ। ಅತೂರ್ತಪಂಥಾ ಅತ್ವರಮಾಣಪಂಥಾ ಬಹುರಥೋ ಅರ್ಯಮಾದಿತ್ಯೋಽರೀನ್ನಿಯಚ್ಛತಿ ಸಪ್ತಹೋತಾ ಸಪ್ತಾಸ್ಮೈ ರಶ್ಮಯೋ ರಸಾನಭಿಸನ್ನಾಮಯಂತಿ ಸಪ್ತೈನಮೃಷಯಃ ಸ್ತುವಂತೀತಿ ವಾ ವಿಷಮರೂಪೇಷು ಜನ್ಮಸು ಕರ್ಮಸೂದಯೇಷು ॥**
> (ನಿ. ೧೧-೨೩)

ಎಲೈ ಅದಿತಿಯೇ, ದಕ್ಷನ ಜನನಸಮಯದಲ್ಲಿ ನೀನು ರಾಜರಾದ (ರಾಜರಂತೆ ಪ್ರಕಾಶಿಸುವ) ಮಿತ್ರಾವರುಣರನ್ನು ಸೇವಿಸುತ್ತೀಯೆ. **ವಿವಾಸತಿ** ಧಾತುವಿಗೆ **ಪರಿಚರ್ಯಾ** ಎಂದರೆ ಸೇವಿಸುವುದು ಎಂದರ್ಥವು. ಈ ಅರ್ಥವನ್ನು **ಹವಿಷ್ಮಾನ್ ಆವಿವಾಸತಿ** ಎಂಬ ಶ್ರುತಿವಾಕ್ಯವು ಸಮರ್ಥಿಸುವುದು ಅಥವಾ ಈ ಧಾತುವಿಗೆ ಪ್ರಾರ್ಥಿಸುವುದು, ಬಯಸುವುದು ಎಂಬ ಅರ್ಥವೂ ಇರುವುದು. ಇಲ್ಲಿರುವ ಅರ್ಯಮಾ ಶಬ್ದಕ್ಕೆ ಆದಿತ್ಯನೆಂದು ಅರ್ಥವು. ಈ ಆದಿತ್ಯನು ಸಂಚರಿಸುವ ಮಾರ್ಗವು ನಿರ್ಬಾಧಿತವಾಗಿರುವುದು ಎಂದರೆ ಅವನನ್ನು ಯಾರೂ ತಡೆದು ನಿಲ್ಲಿಸುವಂತಿಲ್ಲ ಮತ್ತು ಇವನ ಸಂಚಾರವು ಅತಿವೇಗವಿಲ್ಲದೆ ಒಂದೇ ಸಮನಾಗಿರುವುದು ಅಥವಾ ಇವನ ರಥವು ಬಹುವೇಗವಾಗಿ ಸಂಚರಿಸುವ ಶಕ್ತಿಯುಳ್ಳದ್ದಾಗಿರುವುದು. **ಸಪ್ತಹೋತಾ** ಎಂಬ ಶಬ್ದಕ್ಕೆ ಏಳು ರಶ್ಮಿಗಳು ಎಂದರ್ಥವು. ಸೂರ್ಯನ ಏಳುವಿಧವಾದ ರಶ್ಮಿಗಳು ಸೂರ್ಯನ ಕಾರ್ಯವಾದ ರಸಾದಿಗಳನ್ನು ಹೀರುವುದರಲ್ಲಿ ಸಮರ್ಥವಾಗಿರುವವು ಅಥವಾ **ಸಪ್ತಹೋತಾ** ಎಂಬ ಶಬ್ದಕ್ಕೆ ಸಪ್ತಋಷಿಗಳು ಎಂದೂ ಅರ್ಥಮಾಡಬಹುದು. ಈ ಸಪ್ತರ್ಷಿಗಳು ಈ ಸೂರ್ಯನನ್ನು ಸ್ತುತಿಸುವರು- **ವಿಷುರೂಪೇಷು ಜನ್ಮಸು** ಎಂಬ ಶಬ್ದಗಳಿಗೆ ವ್ಯತ್ಯಸ್ತವಾದ ಜನ್ಮಕಾಲಗಳಲ್ಲಿ ಎಂದರೆ ಸೂರ್ಯೋದಯ ಮತ್ತು ಸೂರ್ಯಾಸ್ತಮಯ ಎಂದರ್ಥವು.

ಸಂಹಿತಾಪಾಠಃ

**ತೇ ನೋ ಅರ್ವಂತೋ ಹವನಶ್ರುತೋ ಹವಂ ವಿಶ್ವೇ ಶೃಣ್ವಂತು ವಾಜಿನೋ ಮಿತದ್ರವಃ ।**
**ಸಹಸ್ರಸಾ ಮೇಧಸಾತಾವಿವ ತ್ಮನಾ ಮಹೋ ಯೇ ಧನಂ ಸಮಿಥೇಷು ಜಭ್ರಿರೇ ॥ ೬ ॥**

ಪದಪಾಠಃ

ತೇ । ನಃ । ಅರ್ವಂತಃ । ಹವನಽಶ್ರುತಃ । ಹವಂ । ವಿಶ್ವೇ । ಶೃಣ್ವಂತು । ವಾಜಿನಃ । ಮಿತಽದ್ರವಃ ।
ಸಹಸ್ರಽಸಾಃ । ಮೇಧಸಾತಾಽಇವ । ತ್ಮನಾ । ಮಹಃ । ಯೇ । ಧನಂ । ಸಂಽಇಥೇಷು । ಜಭ್ರಿರೇ ॥ ೭ ॥

ಸಾಯಣಭಾಷ್ಯಂ

ಹವನಶ್ರುತ ಆಹ್ವಾನಂ ಶೃಣ್ವಂತೋ ವಾಜಿನೋ ಬಲವಂತೋ ಮಿತದ್ರವೋಃ ಮಿತಮಾರ್ಗಾ ಅಧ್ವಾನಂ ಪರಿಚ್ಛಿಂದಂತೋ ವಿಶ್ವೇ ಸರ್ವೇ ಪ್ರಸಿದ್ಧಾ ಅರ್ವಂತೋಽಶ್ವಾ ಇಂದ್ರಾದೀನಾಂ ವಾಹನಭೂತಾ ಹರ್ಯಾದಯೋ ನೋಽಸ್ಮಾಕಂ ಹವಮಾಹ್ವಾನಂ ಶೃಣ್ವಂತು । ಕೀದೃಶಾಃ । ಮೇಧಸಾತಾವಿವ। ಮೇಧಾಃ ಸ್ತುತಯಃ ಸಾಯಂತೇ ಸಂಭಜ್ಯಂತೇಽತ್ರೇತಿ ಮೇಧಸಾತಿರ್ಯಜ್ಞಃ। ತಸ್ಮಿನ್ನಿವ ತ್ಮನಾತ್ಮನೈವ ಸಹಸ್ರಸಾಃ ಸಹಸ್ರಸಂಖ್ಯಾಕಧನಸ್ಯ ದಾತಾರಃ । ತೇ ಶೃಣ್ವಂತು ಯೇಽಶ್ವಾಃ ಸಮಿಥೇಷು । ಸಂಗ್ರಾಮನಾಮೈತತ್ । ಸಂಪ್ರಾಪ್ಯತೇ ಯೋದ್ಧೃಭಿರತ್ರೇತಿ । ತೇಷು ಸಂಗ್ರಾಮೇಷು ಮಹೋ ಮಹದ್ಧನಂ ಜಭ್ರಿರೇ । ಶತ್ರುಭ್ಯ ಆಹರಂತಿ ॥ ಹೃಗ್ರಹೋಽರ್ಥಃ ॥

ಪ್ರತಿಪದಾರ್ಥ

**ಮೇಧಸಾತಾವಿವಾ**—ಯಜ್ಞಗಳಲ್ಲಿ ಉದಾರವಾಗಿ ಧನವನ್ನು ಕೊಡುವಂತೆ। **ತ್ಮನಾ**—ಸ್ವಪ್ರೇರಣೆಯಿಂದಲೇ । **ಸಹಸ್ರಸಾಃ**—ಅನೇಕ ವಿಧಗಳಲ್ಲಿ ಧನವನ್ನು ಒದಗಿಸುವುವೂ । **ಯೇ**—ಯಾವ ಅಶ್ವಗಳು । **ಸಮಿಥೇಷು**—ಯುದ್ಧಗಳಲ್ಲಿ । **ಮಹಃ ಧನಂ**—ಅಧಿಕವಾದ ಧನವನ್ನು । **ಜಭ್ರಿರೇ**—ಶತ್ರುಗಳಿಂದ ಅಪಹರಿಸುವುವೋ ಅಂತಹ । **ಹವನಶ್ರುತಃ** – ನಮ್ಮ ಆಹ್ವಾನಗಳನ್ನು ಕೇಳುವುವೂ । **ವಾಜಿನಃ**—ಶಕ್ತಿಯುತವೂ । **ಮಿತದ್ರವಃ**—ವೇಗವಾದ ಮಾರ್ಗಗಮನವುಳ್ಳವೂ ಆದ । **ತೇ ವಿಶ್ವೇ ಅರ್ವಂತಃ**—ಹರ್ಯಾದಿ ಸಕಲವಾದ ದೇವಾಶ್ವಗಳೂ । **ನಃ**—ನಮ್ಮ । **ಹವಂ**—ಆಹ್ವಾನವನ್ನು । **ಶೃಣ್ವಂತು**—ಕೇಳಲಿ.

ಭಾವಾರ್ಥ

ಯಜ್ಞಗಳಲ್ಲಿ ಉದಾರವಾಗಿ ಧನವನ್ನು ಕೊಡುವಂತೆ ಸ್ವಪ್ರೇರಣೆಯಿಂದಲೇ ಅನೇಕವಿಧಗಳಲ್ಲಿ ಧನವನ್ನು ಒದಗಿಸುವುವೂ, ಯುದ್ಧಗಳಲ್ಲಿ ಶತ್ರುಗಳಿಂದ ಅಪಾರವಾದ ಧನವನ್ನು ಅಪಹರಿಸುವುವೂ, ನಮ್ಮ ಆಹ್ವಾನಗಳನ್ನು ಕೇಳುವುವೂ, ಶಕ್ತಿಯುತವೂ, ವೇಗವಾದ ಮಾರ್ಗಗಮನಗಳುಳ್ಳವೂ ಆದ ಹರ್ಯಾದಿ ಸಕಲವಾದ ದೇವಾಶ್ವಗಳೂ (ಇಂದ್ರಾದಿಗಳ ವಾಹನಗಳಾದ ಅಶ್ವಗಳು) ನಮ್ಮ ಆಹ್ವಾನವನ್ನು ಕೇಳಲಿ.

## English Translation

May those universal horses (of the deities), who iisten to invocations, who are vigorous, swift roadsters, hear our summons : they who spontaneously are the givers of thousands, as if at a sacrifice ; they who have won great wealth in battles.

ಸಂಹಿತಾಪಾಠಃ

ಪ್ರ ವೋ ವಾಯುಂ ರಥಯುಜಂ ಪುರಂಧಿಂ ಸ್ತೋಮೈಃ ಕೃಣುಧ್ವಂ ಸಖ್ಯಾಯ ಪೂಷಣಂ ।

ತೇ ಹಿ ದೇವಸ್ಯ ಸವಿತುಃ ಸವೀಮನಿ ಕ್ರತುಂ ಸಚಂತೇ ಸಚಿತಃ ಸಚೇತಸಃ ॥

ಪದಪಾಠಃ

ಪ್ರ । ವಃ । ವಾಯುಂ । ರಥಽಯುಜಂ । ಪುರಂಽಧಿಂ । ಸ್ತೋಮೈಃ । ಕೃಣುಧ್ವಂ । ಸಖ್ಯಾಯ । ಪೂಷಣಂ ।

ತೇ । ಹಿ । ದೇವಸ್ಯ । ಸವಿತುಃ । ಸವೀಮನಿ । ಕ್ರತುಂ । ಸಚಂತೇ । ಸಽಚಿತಃ । ಸಽಚೇತಸಃ ॥

ಸಾಯಣಭಾಷ್ಯಂ

ಹೇ ಸ್ತೋತಾರಃ ವೋ ಯೂಯಂ ವಾಯುಂ ರಥಯುಜಂ ರಥಸ್ಯ ಯೋಕ್ತಾರಂ ಪುರಂಧಿಂ ಬಹುಕರ್ಮಾಣಮಿಂದ್ರಂ ಪೂಷಣಮೇತನ್ನಾಮಾನಂ ಚ ಸ್ತೋಮೈಸ್ತ್ರಿವೃತ್ಪಂಚದಶಾದಿಲಕ್ಷಣೈಃ ಸಖ್ಯಾಯ ಸಖಿಕರ್ಮಣೇ ಪ್ರ ಕೃಣುಧ್ವಂ । ಪ್ರಕುರುಧ್ವಂ । ಯಥಾ ತೇಽಸ್ಮಾಕಂ ಧನಾದಿಪ್ರದಾನೇನ ಸಖಾಯೋ ಭವಂತಿ ತಥಾ ಕುರುತ । ಹಿ ಯಸ್ಮಾತ್ಸಚಿತೋ ಜ್ಞಾನಯುಕ್ತಾಸ್ತೇ ದೇವಾಃ ಸಚೇತಸಃ ಪರಸ್ಪರಂ ಸಮಾನಬುದ್ಧಯಃ ಸಂತಃ ಸವಿತುಃ ಸರ್ವಪ್ರೇರಕಸ್ಯ ದೇವಸ್ಯಾದಿತ್ಯಸ್ಯ ಸವೀಮನಿ ಪ್ರಸವೇಽಹ್ನಿ ಕ್ರತುಂ ಯಜ್ಞಂ ಸಚಂತೇ ಸೇವಂತೇ ತಸ್ಮಾತ್ಪ್ರಕುರುಧ್ವಂ ॥

ಪ್ರತಿಪದಾರ್ಥ

(ಎಲೈ ಸ್ತುತಿಕರ್ತರೇ) **ಹಿ**—ಯಾವ ಮಾಹಾತ್ಮ್ಯದಿಂದ ಕೂಡಿ । **ಸಚಿತಃ**—ಪ್ರಜ್ಞಾಯುತರಾದ । **ತೇ**-ಆ ದೇವತೆಗಳು । **ಸಚೇತಸಃ**—ಪರಸ್ಪರಜ್ಞಾನವುಳ್ಳವರಾಗಿ । **ದೇವಸ್ಯ**—ದೇವತಾತ್ಮನಾದ । **ಸವಿತುಃ**—ಆದಿತ್ಯನ । **ಸವೀಮನಿ**—ಯಜ್ಞದಿವಸದಲ್ಲಿ । **ಕ್ರತುಂ**—ಯಜ್ಞವನ್ನು । **ಸಚಂತೇ**—ಸೇವಿಸುವರೋ ಆದುದರಿಂದಲೇ । **ವಃ**—ನೀವು । **ರಥಯುಜಂ**—ರಥಕ್ಕೆ ಸಂಬದ್ಧನಾದ । **ವಾಯುಂ**—ವಾಯುವನ್ನೂ । **ಪುರಂಧಿಂ**—ಅನೇಕ ಕರ್ಮಯುಕ್ತನಾದ ಇಂದ್ರನನ್ನೂ । **ಪೂಷಣಂ**—ಪೂಷದೇವನನ್ನೂ । **ಸಖ್ಯಾಯ**—ಅವರ ಸ್ನೇಹವನ್ನು ಸಂಪಾದಿಸಲು । **ಸ್ತೋಮೈಃ**—ಸ್ತುತಿಗಳಿಂದ । **ಪ್ರಕೃಣುಧ್ವಂ**—ಪ್ರಶಂಸಿಸಿ ಪೂಜಿಸಿರಿ.

ಭಾವಾರ್ಥ

ಎಲೈ ಸ್ತುತಿಕರ್ತರೇ, ಪ್ರಜ್ಞಾಯುತರಾದ ದೇವತೆಗಳು ಪರಸ್ಪರಸ್ವರೂಪಜ್ಞಾನವುಳ್ಳವರಾಗಿ, ದೇವತಾತ್ಮನಾದ ಆದಿತ್ಯನ ಯಜ್ಞದಿವಸದಲ್ಲಿ ಯಾವ ತಮ್ಮ ಮಾಹಾತ್ಮ್ಯದಿಂದ ಯಜ್ಞದಲ್ಲಿ ಭಾಗವನ್ನು ವಹಿಸಿ ಯಜ್ಞವನ್ನು ಸೇವಿಸುವರೋ, ಅಂತಹ ದೇವತೆಗಳಾದ ನೀವು ರಥಕ್ಕೆ ಸಂಬದ್ಧನಾದ ವಾಯುವನ್ನೂ, ಅನೇಕ ಕರ್ಮಯುಕ್ತನಾದ ಇಂದ್ರನನ್ನೂ, ಪೂಷದೇವನನ್ನೂ, ಅವರ ಸಖಿತ್ವವನ್ನು ಸಂಪಾದಿಸಲು ಸ್ತುತಿಗಳಿಂದ ಪ್ರಶಂಸಿಸಿ ಪೂಜಿಸಿರಿ.

## English Translation

Importune, (worshippers) with praises, Vayu, harnessing his chariot, and Purandhi, and Pnshan for their friendship, for these considerate and consentient deities, attend the sacrifice upon the birth of Savitri.

ಸಂಹಿತಾಪಾಠಃ

ತ್ರಿಃ ಸಪ್ತ ಸಸ್ರಾ ನದ್ಯೋ ಮಹೀರಪೋ ವನಸ್ಪತೀನ್ಪರ್ವತಾ಼ಁ ಅಗ್ನಿಮೂತಯೇ ।
ಕೃಶಾನುಮಸ್ತೄನ್ತಿಷ್ಯಂ ಸಧಸ್ಥ ಆ ರುದ್ರಂ ರುದ್ರೇಷು ರುದ್ರಿಯಂ ಹವಾಮಹೇ ॥ ೮ ॥

ಪದಪಾಠಃ

ತ್ರಿಃ । ಸಪ್ತ । ಸಸ್ರಾಃ । ನದ್ಯಃ । ಮಹೀಃ । ಅಪಃ । ವನಸ್ಪತೀನ್ । ಪರ್ವತಾನ್ । ಅಗ್ನಿಂ । ಊತಯೇ ।
ಕೃಶಾನುಂ । ಅಸ್ತೄನ್ । ತಿಷ್ಯಂ । ಸಧಸ್ಥೇ । ಆ । ರುದ್ರಂ । ರುದ್ರೇಷು । ರುದ್ರಿಯಂ । ಹವಾಮಹೇ ॥

ಸಾಯಣಭಾಷ್ಯಂ

ತ್ರಿಃ ಸಪ್ತೈಕವಿಂಶತಿಸಂಖ್ಯಾಕಾಃ ಸಸ್ರಾಃ ಸರಂತೀರ್ನದ್ಯೋ ನದೀಃ । ಸರಸ್ವತೀ ಸರಯುಃ ಸಿಂಧುರಿತಿ ತ್ರಯಾಣಾಂ ಗಣಾನಾಂ ಪ್ರಧಾನಭೂತಾಃ । ತದಾದ್ಯಾ ನದೀರ್ಮಹೀರ್ಮಹಾಂತ್ಯಪಸ್ತಾಸಾಮುದಕಾನಿ ಸೋಮಾಭಿಷವಾರ್ಥಂ ವನಸ್ಪತೀನ್ದಾರುಮಯಾಂಶ್ಚಮಸಾದೀನ್ಪರ್ವತಾನ್ಸೋಮಾಭಿಷವಾರ್ಥಂ ಗ್ರಾವ್ಣೋಽಗ್ನಿಂ ಹೋಮನಿಷ್ಪಾದಕಂ ಕೃಶಾನುಂ ಸೋಮಪಾಲಮೇತನ್ನಾಮಾನಂ ಗಂಧರ್ವಮಸ್ತೄನಿಷೂಣಾಂ ಕ್ಷೇಪ್ತ್ರ್ಯಂಸ್ತದನುಚರಾನ್ಗಂಧರ್ವಾನೂತಯೇ ಸೋಮರಕ್ಷಣಾಯ ತಿಷ್ಯಂ ನಕ್ಷತ್ರಂ ಚ ರುದ್ರಿಯಂ ರುದ್ರಸ್ತೋಮಾರ್ಹಂ ರುದ್ರಂ ಹವಿರ್ಭಾಗಿನಂ ರುದ್ರಮೇತನ್ನಾಮಾನಂ ಯದ್ವಾ ಪರಿಶಿಷ್ಟಸ್ವಾಮಿನಂ ರುದ್ರಂ ಚ ಏತಾನ್ಸರ್ವಾನ್ಸಧಸ್ಥೇ । ಸಹ ತಿಷ್ಠಂತ್ಯತ್ರೇತಿ ಸಧಸ್ಥೋ ಯಜ್ಞಃ । ತಸ್ಮಿನ್ ರುದ್ರೇಷು ಸ್ತೋತೃಕಾರಿಷು ತದರ್ಥಂ ಹವಾಮಹೇ । ಸ್ತುತ್ಯತ್ವೇನಾಹ್ವಯಾಮಹೇ ॥

ಪ್ರತಿಪದಾರ್ಥ

ತ್ರಿಃ **ಸಪ್ತ**—ಇಪ್ಪತ್ತೊಂದು ಸಂಖ್ಯೆಯುಳ್ಳವೂ । **ಸಸ್ರಾಃ**—ಪ್ರವಹಿಸುವುವೂ ಆದ । **ನದ್ಯಃ**—ಸರಸ್ವತ್ಯಾದಿ ನದಿಗಳನ್ನೂ । **ಮಹೀಃ**—ಮಹತ್ತ್ವದಿಂದ ಕೂಡಿದ । **ಅಪಃ**—ಅವುಗಳ ಉದಕಗಳನ್ನೂ । **ವನಸ್ಪತೀನ್**—ವೃಕ್ಷಗಳನ್ನೂ (ಅಥವಾ ಅವುಗಳಿಂದ ನಿರ್ಮಿತವಾದ ಚಮಸಾದಿ ಪಾತ್ರೆಗಳನ್ನೂ) । **ಪರ್ವತಾನ್**—ಪರ್ವತಗಳನ್ನೂ । **ಅಗ್ನಿಂ**—ಅಗ್ನಿಯನ್ನೂ । **ಕೃಶಾನುಂ**—ಕೃಶಾನುವೆಂಬ ಗಂಧರ್ವನನ್ನೂ । **ಅಸ್ತೄನ್**—ಧನುರ್ಧಾರಿಗಳಾದ

ಅವನ ಇತರರ ಅನುಚರರನ್ನೂ । **ಊತಯೇ**—ಸೋಮರಕ್ಷಣಾರ್ಥವಾಗಿ । **ತಿಷ್ಯಂ**—ತಿಷ್ಯಸಂಜ್ಞಕವಾದ ನಕ್ಷತ್ರವನ್ನೂ । **ರುದ್ರಿಯಂ**—ರುದ್ರಪ್ರಶಂಸಕವಾದ ಸ್ತುತಿಗೆ ಯೋಗ್ಯನಾದ । **ರುದ್ರಂ**—ರುದ್ರನನ್ನೂ । **ಸಧಸ್ಥೇ**—ಯಜ್ಞದಲ್ಲಿ । **ರುದ್ರೇಷು**—ಸ್ತುತಿಕರ್ತರ ಪರವಾಗಿ । **ಹವಾಮಹೇ**—ಕರೆಯುತ್ತೇವೆ.

ಭಾವಾರ್ಥ

ಇಪ್ಪತ್ತೊಂದು ಸಂಖ್ಯೆಯುಳ್ಳವೂ, ಪ್ರವಹಿಸುವುವೂ ಆದ ಸರಸ್ವತ್ಯಾದಿನದಿ ಗಳನ್ನೂ, ಮಹತ್ತ್ವದಿಂದ ಕೂಡಿದ ಅವುಗಳ ಉದಕಗಳನ್ನೂ, ವೃಕ್ಷಗಳನ್ನೂ, ಪರ್ವತಗಳನ್ನೂ, ಅಗ್ನಿಯನ್ನೂ, ಕೃಶಾನುವೆಂಬ ಗಂಧರ್ವನನ್ನೂ, ಧನುರ್ಧಾರಿಗಳಾದ ಅವನ ಇತರ ಅನುಚರರನ್ನೂ, ಸೋಮರಕ್ಷಣಾರ್ಥವಾಗಿ ತಿಷ್ಯಸಂಜ್ಞಕವಾದ ನಕ್ಷತ್ರವನ್ನೂ, ರುದ್ರಪ್ರಶಂಸಕವಾದ ಸ್ತುತಿಗೆ ಯೋಗ್ಯನಾದ ರುದ್ರನನ್ನೂ, ಯಜ್ಞದಲ್ಲಿ ಸ್ತುತಿಕರ್ತರ ಪರವಾಗಿ ಕರೆಯುತ್ತೇವೆ.

## English Translation

Ve invoke for protection the thrice seven flowing rivers, (their) great waters, the trees, the mountains, Agui, Krishanu, the archers, and Tishya, to the assembly : (we invoke) Rudra, worthy of the praise fo the Rudras, for the good of the praisers.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ **ತ್ರಿಃ ಸಪ್ತ ನದ್ಯಃ** ಇಪ್ಪತ್ತೊಂದು ನದಿಗಳು ಎಂದು ಹೇಳಿದೆ. ನದಿಗಳು ಅನೇಕವಾಗಿದ್ದರೂ ಮುಖ್ಯವಾದ ನದಿಗಳು ಇಪ್ಪತ್ತೊಂದು ಎಂಬ ಅರ್ಥದಲ್ಲಿ ಇಲ್ಲಿ **ತ್ರಿಃಸಪ್ತ ನದ್ಯಃ** ಎಂದು ಹೇಳಲಾಗಿದೆ. ಇ ಇಪ್ಪತ್ತೊಂದು ನದಿಗಳು ಯಾವವು ಎಂಬುದು ಸ್ಪಷ್ಟವಾಗಿಲ್ಲ. ಇದೇ ಮಂಡಲದ ೭೫ ನೇ ಸೂಕ್ತದಲ್ಲಿ ಕೆಲವು ನದಿಗಳ ಹೆಸರುಗಳು ಉಕ್ತವಾಗಿವೆ—ಗಂಗಾ, ಯಮುನಾ, ಸರಸ್ವತೀ, ಶುತುದ್ರೀ, ಪರುಷ್ಣೀ, ಅಸಿಕ್ನೀ, ಮರುದ್ವೃಧೇ, ವಿತಸ್ತಾ, ಆರ್ಜೀಕೀಯಾ, ವಿಪಾಟ್, ಸುಷೋಮಾ, ಸಿಂಧು, ರಸಾ ಎಂಬ ನದಿಗಳ ಜತೆಗೆ ಇನ್ನೂ ಇತರ ನದಿಗಳೂ ಸೇರಿ ಇಪ್ಪತ್ತೊಂದು ನದಿಗಳಾಗಿರಬಹುದು.

ಕೃಶಾನು—ಇವನು ಸ್ವರ್ಗದಲ್ಲಿರುವ ಸೋಮವನ್ನು ರಕ್ಷಿಸುವ ಕಾರ್ಯದಲ್ಲಿ ನಿರತನಾದ ಒಬ್ಬ ಗಂಧರ್ವನು. ಸ್ವಾನ, ಭ್ರಾಜ, ಅಂಘಾರಿ, ಬಂಭಾರಿ, ಹಸ್ತ, ಸುಹಸ್ತ, ಕೃಶಾನು ಎಂಬ ಏಳುಮಂದಿ ಸೋಮಪಾಲಕರಲ್ಲಿ ಕೃಶಾನುವೂ ಒಬ್ಬನು. ಇವನ ವಿಷಯವನ್ನು ನಾವು ೯ ನೇ ಮಂಡಲದ ಪೀಠಿಕೆಯಲ್ಲಿ ವಿವರಿಸಿದೇವೆ.

ಸಂಹಿತಾಪಾಠಃ

ಸರಸ್ವತೀ ಸರಯುಃ ಸಿಂಧುರೂರ್ಮಿಭಿರ್ಮಹೋ ಮಹೀರವಸಾ ಯಂತು ವಕ್ಷಣೀಃ ।
ದೇವೀರಾಪೋ ಮಾತರಃ ಸೂದಯಿತ್ನ್ವೋ ಘೃತವತ್ಪಯೋ ಮಧುಮನ್ನೋ ಅರ್ಚತ ॥ ೯ ॥

ಪದಪಾಠಃ

ಸರಸ್ವತೀ । ಸರಯುಃ । ಸಿಂಧುಃ । ಊರ್ಮಿಽಭಿಃ । ಮಹಃ । ಮಹೀಃ । ಅವಸಾ । ಯಂತು । ವಕ್ಷಣೀಃ ।

ದೇವೀಃ । ಆಪಃ । ಮಾತರಃ । ಸೂದಯಿತ್ನ್ವಃ । ಘೃತಽವತ್ । ಪಯಃ । ಮಧುಽಮತ್ । ನಃ । ಅರ್ಚತ ॥

ಸಾಯಣಭಾಷ್ಯಂ

ಮಹೋ ಮಹತೋಽಪಿ ಮಹೀರ್ಮಹತ್ಯೋಽತ್ಯಂತಂ ಮಹತ್ಯ ಊರ್ಮಿಭಿಃ ಸಹಿತಾಃ ಸರಸ್ವತೀ ಸರಯುಃ ಸಿಂಧುರೇತದಾದ್ಯಾ ಏಕವಿಂಶತಿಸಂಖ್ಯಾಕಾ ವಕ್ಷಣೀರಿಮಾ ನದ್ಯೋಽವಸಾ ರಕ್ಷಣೇನ ಹೇತುನಾ ಯಂತು । ಅಸ್ಮದೀಯಂ ಯಜ್ಞಂ ಪ್ರತ್ಯಾಗಚ್ಛಂತು । ತತೋ ದೇವೀರ್ದೇವನಶೀಲಾ ಮಾತರೋ ಮಾತೃಭೂತಾಃ ಸೂದಯಿತ್ನ್ವಃ ಪ್ರೇರಯಿತ್ರ್ಯಸ್ತಾ ಆಪೋ ಘೃತವದ್ಘೃತಯುಕ್ತಂ ಮಧುಮನ್ಮಧುಸಹಿತಮಾತ್ಮೀಯಂ ಪಯೋ ನೋಽಸ್ಮಭ್ಯಮರ್ಚತ । ಪ್ರಯಚ್ಛತ ॥

ಪ್ರತಿಪದಾರ್ಥ

**ಮಹಃ**—ಮಹಾತ್ಮ್ಯವುಳ್ಳ ಇತರ ನದಿಗಳಿಗಿಂತಲೂ । **ಮಹೀಃ**—ಅಧಿಕವಾದ ಮಹತ್ತ್ವವುಳ್ಳವೂ । **ಊರ್ಮಿಭಿಃ**—ಅಲೆಗಳಿಂದ ಕೂಡಿದವೂ ಆದ । **ಸರಸ್ವತೀ**—ಸರಸ್ವತಿಯೂ । **ಸರಯುಃ**—ಸರಯೂ ನದಿಯೂ । **ಸಿಂಧುಃ**—ಸಿಂಧುವೆಂಬ ಹೆಸರುಳ್ಳದ್ದೂ ಆದ । **ವಕ್ಷಣೀಃ**—ಈ ಎಲ್ಲ ನದಿಗಳೂ । **ಅವಸಾ**—ರಕ್ಷಣೆಯ ನಿಮಿತ್ತವಾಗಿ । **ಆ ಯಂತು**—ಬರಲಿ । **ದೇವೀಃ**—ದೇವತಾತ್ಮವೂ । **ಮಾತರಃ**—ಜಗತ್ತಿಗೆ ಮಾತೃರೂಪವೂ । **ಸೂದಯಿತ್ನ್ವಃ**—ಜಗತ್ತಿಗೆ ಚೈತನ್ಯದಾಯಕವೂ ಆದ । **ಆಪಃ**—ಉದಕಯುಕ್ತವಾದ ನದಿಗಳು । **ಘೃತವತ್**—ಘೃತದಿಂದ ಕೂಡಿದುದೂ । **ಮಧುಮತ್**—ಮಧುರಯುಕ್ತವಾದುದೂ ಆದ । **ಪಯಃ**—ತಮ್ಮ ಉದಕಗಳನ್ನು **ನಃ**—ನಮಗೆ । **ಅರ್ಚತ**—ಒದಗಿಸಿಕೊಡಲಿ.

ಭಾವಾರ್ಥ

ಮಾಹಾತ್ಮ್ಯವುಳ್ಳ ಇತರ ನದಿಗಳಿಗಿಂತಲೂ ಅಧಿಕವಾದ ಮಹತ್ತ್ವವುಳ್ಳವೂ, ಅಲೆಗಳಿಂದ ಕೂಡಿದವೂ ಆದ ಸರಸ್ವತಿಯೂ, ಸರಯೂ ನದಿಯೂ, ಸಿಂಧುವೆಂಬ ಹೆಸರುಳ್ಳದ್ದೂ ಆದ ಎಲ್ಲ ನದಿಗಳೂ ರಕ್ಷಣೆಯ ನಿಮಿತ್ತವಾಗಿ ಬರಲಿ. ದೇವತಾತ್ಮವೂ, ಜಗತ್ತಿಗೆ ಮಾತೃರೂಪವೂ, ಜಗತ್ತಿಗೆ ಚೈತನ್ಯದಾಯಕವೂ ಆದ ಉದಕಯುಕ್ತವಾದ ನದಿಗಳು ಘೃತದಿಂದ ಕೂಡಿದುದೂ, ಮಧುರಯುಕ್ತವಾದುದೂ ಆದ ತಮ್ಮ ಉದಕಗಳನ್ನು ನಮಗೆ ಒದಗಿಸಿಕೊಡಲಿ.

English Translation

May the very great rivers, Saraswati, Sarayu, Sindhu, come with their waves for (our) protection : may the divine maternal animating waters grant us their water mixed with butter and honey.

ಸಂಹಿತಾಪಾಠಃ

ಉತ ಮಾತಾ ಬೃಹದ್ದಿವಾ ಶೃಣೋತು ನಸ್ತ್ವಷ್ಟಾ ದೇವೇಭಿರ್ಜನಿಭಿಃ ಪಿತಾ ವಚಃ ।

ಋುಭುಕ್ಷಾ ವಾಜೋ ರಥಸ್ಪತಿರ್ಭಗೋ ರಣ್ವಃ ಶಂಸಃ ಶಶಮಾನಸ್ಯ ಪಾತು ನಃ ॥ ೧೦ ॥

ಪದಪಾಠಃ

ಉತ । ಮಾತಾ । ಬೃಹತ್ಽದಿವಾ । ಶೃಣೋತು । ನಃ । ತ್ವಷ್ಟಾ । ದೇವೇಭಿಃ । ಜನಿಽಭಿಃ । ಪಿತಾ । ವಚಃ ।

ಋುಭುಕ್ಷಾಃ । ವಾಜಃ । ರಥಃಪತಿಃ । ಭಗಃ । ರಣ್ವಃ । ಶಂಸಃ । ಶಶಮಾನಸ್ಯ । ಪಾತು । ನಃ ॥ ೧೦ ॥

ಸಾಯಣಭಾಷ್ಯಂ

ಉತಾಪಿ ಚ ಬೃಹದ್ದಿವಾ । ಮಹದ್ದಿವೇತಿ ಯಾಸ್ಕಃ । ನಿ. ೧೧-೪೯ । ಮಹತೀ ದಿವಾ ದೀಪ್ತಿರ್ಯಸ್ಯಾಃ ಸಾ ಮಾತಾ ದೇವಮಾತಾ ನೋಽಸ್ಮಾಕಮಾಹ್ವಾನಂ ಶೃಣೋತು । ತಥಾ ದೇವೇಭಿರ್ದೇವೈರಿಂದ್ರಾದಿಭಿರ್ಜನಿಭಿರ್ದೇವಪತ್ನೀಭಿಶ್ಚ ಪಿತಾ ಸರ್ವೇಷಾಂ ತ್ವಷ್ಟೈತನ್ನಾಮಕೋಽಸ್ಮದೀಯಂ ವಚಃ ಶೃಣೋತು । ತಥರ್ಭುಕ್ಷಾ ಇಂದ್ರೋ ವಾಜಸ್ತತ್ಸಹಾಯೋ ವಾಜೋ ನಾಮ ಸೌಧನ್ವನಃ ಕನೀಯಾನ್ ರಥಸ್ಪತೀ ರಥಸ್ಯ ಪತಿರ್ಭಗಶ್ಚ ತಥಾ ರಣ್ವೋ ರಮಣೀಯಃ ಶಂಸಃ ಸ್ತುತ್ಯೋ ಮರುದ್ಗಣಶ್ಚ ತತಃ ಶಶಮಾನಸ್ಯ ಶಂಸಮಾನಂ ಸ್ತೋತ್ಯಾನ್ನೋಽಸ್ಮಾನ್ಪಾತು । ರಕ್ಷತು ॥

ಪ್ರತಿಪದಾರ್ಥ

**ಬೃಹದ್ದಿವಾ**—ಅತ್ಯಧಿಕವಾದ ಕಾಂತಿಯುಳ್ಳ । **ಮಾತಾ**—ದೇವಮಾತೆಯು । **ನಃ**—ನಮ್ಮ ಆಹ್ವಾನವನ್ನು । **ಶೃಣೋತು**—ಕೇಳಲಿ । **ದೇವೇಭಿಃ**—ಇಂದ್ರಾದಿ ದೇವತೆಗಳೊಡನೆಯೂ । **ಜನಿಭಿಃ**—ದೇವಪತ್ನಿಯರೊಡನೆಯೂ ಕೂಡಿದವನೂ । **ಪಿತಾ**—ಜಗತ್ತಿಗೆಲ್ಲ ಜನಕನೂ ಆದ । **ತ್ವಷ್ಟಾ**—ತ್ವಷ್ಟೃದೇವನು । **ವಚಃ**—ನಮ್ಮ ಸ್ತುತಿಯನ್ನು ಕೇಳಲಿ । **ಋುಭುಕ್ಷಾಃ**—ಋುಭುಕ್ಷನೂ (ಇಂದ್ರನೂ) । **ವಾಜಃ**—ವಾಜನೂ । **ರಥಸ್ಪತಿಃ**—ರಥಕ್ಕೆ ಒಡೆಯನಾದ ದೇವನೂ । **ಭಗಃ**—ಭಗನೂ । **ರಣ್ವಃ**—ಆಕರ್ಷಕವೂ । **ಶಂಸಃ**—ಸ್ತುತಿಗೆ ಅರ್ಹವೂ ಆದ ಮರುದ್ಗಣವೂ । **ಶಶಮಾನಸ್ಯ**—ಸ್ತುತಿಕರ್ತರಾದ । **ನಃ**—ನಮ್ಮನ್ನು । **ಪಾತು**—ರಕ್ಷಿಸಲಿ.

ಭಾವಾರ್ಥ

ಅತ್ಯಧಿಕವಾದ ಕಾಂತಿಯುಳ್ಳ ದೇವಮಾತೆಯು ನಮ್ಮ ಆಹ್ವಾನವನ್ನು ಕೇಳಲಿ. ಇಂದ್ರಾದಿ ದೇವತೆಗಳೊಡನೆಯೂ, ದೇವಪತ್ನಿಯರೊಡನೆಯೂ ಕೂಡಿದವನೂ, ಜಗತ್ತಿಗೆಲ್ಲ ಜನಕನೂ ಆದ ತ್ವಷ್ಟೃದೇವನು ನಮ್ಮ ಸ್ತುತಿಯನ್ನು ಕೇಳಲಿ. ಋುಭುಕ್ಷನೂ, ವಾಜನೂ, ರಥಸ್ಪತಿಯೂ, ಭಗನೂ, ಆಕರ್ಷಕವೂ, ಸ್ತುತಿಗೆ ಯೋಗ್ಯವೂ ಆದ ಮರುದ್ಗಣವೂ ಸ್ತುತಿಕರ್ತರಾದ ನಮ್ಮನ್ನು ರಕ್ಷಿಸಲಿ.

English Translation

May the bright-shining mother (of the gods) hear us : may father Twashtri, with the gods, and their wives, (hear our) words : may Ribhukshan , Vaja, Rathaspati, Bhaga, may the joyous adorable (company of the Maruts) protect us their praisers.

ಸಂಹಿತಾಪಾಠಃ

ರಣ್ವಃ ಸಂದೃಷ್ಟೌ ಪಿತುಮಾँ ಇವ ಕ್ಷಯೋ ಭದ್ರಾ ರುದ್ರಾಣಾಂ ಮರುತಾ-
ಮುಪಸ್ತುತಿಃ ।
ಗೋಭಿಃ ಷ್ಯಾಮ ಯಶಸೋ ಜನೇಷ್ವಾ ಸದಾ ದೇವಾಸ ಇಳಯಾ ಸಚೇಮಹಿ ॥

ಪದಪಾಠಃ

ರಣ್ವಃ । ಸಂऽದೃಷ್ಟೌ । ಪಿತುಮಾನ್ऽಇವ । ಕ್ಷಯಃ । ಭದ್ರಾ । ರುದ್ರಾಣಾಂ । ಮರುತಾಂ । ಉಪऽಸ್ತುತಿಃ ।

ಗೋಭಿಃ । ಸ್ಯಾಮ । ಯಶಸಃ । ಜನೇಷು । ಆ । ಸದಾ । ದೇವಾಸಃ । ಇಳಯಾ । ಸಚೇಮಹಿ ॥ ೧೧ ॥

ಸಾಯಣಭಾಷ್ಯಂ

ಸಂದೃಷ್ಟೌ ಸಂದರ್ಶನೇ ರಣ್ವೋ ರಮಣೀಯೋ ಮರುದ್ಗಣಃ ಪಿತುಮಾನಿವಾನ್ನವಾನಿವ ಕ್ಷಯೋ ನಿವಾಸಃ ಸ್ತೋತೄಣಾಂ ಭವತಿ । ರುದ್ರಾಣಾಂ ರುದ್ರಪುತ್ರಾಣಾಂ ತೇಷಾಂ ಮರುತಾಮುಪಸ್ತುತಿರನುಗ್ರಹ-ಬುದ್ಧಿರ್ಭದ್ರಾ ಕಲ್ಯಾಣೀ ಭವತಿ । ತಸ್ಮಾಜ್ಜನೇಷು ಜನಾನಾಂ ಮಧ್ಯೇ ವಯಂ ಗೋಭಿರ್ಗವಾದಿಭಿ-ರ್ಯಶಸೋ ಯಶಸ್ವಿನಃ ಸ್ಯಾಮ । ಭವೇಮ । ಆನಂತರಂ ಹೇ ದೇವಾಸೋ ದೇವಾಃ ಯುಷ್ಮಾನ್ಸದಾ ಸರ್ವದೇಳಯಾನ್ನೇನ ಹವಿರ್ಲಕ್ಷಣೇನ ಸಚೇಮಹಿ । ಸಚೇಮ । ಸಂಗಚ್ಛೇಮ ॥

ಪ್ರತಿಪದಾರ್ಥ

**ಸಂದೃಷ್ಟೌ**—ನೋಡುವುದಕ್ಕೆ । **ರಣ್ವಃ**—ರಮಣೀಯವಾದ ಮರುದ್ಗಣವು । **ಪಿತುಮಾನಿವ**—ಅನ್ನ (ಆಹಾರ) ಸಂಪತ್ತಿನಿಂದ ಕೂಡಿದ । **ಕ್ಷಯಃ**—ನಿವಾಸಸ್ಥಾನದಂತೆ ಆಹ್ಲಾದಕರವಾಗಿರುತ್ತದೆ। **ರುದ್ರಾಣಾಂ**—ರುದ್ರ ಪುತ್ರರಾದ । **ಮರುತಾಂ**—ಮರುತ್ತುಗಳ । **ಉಪಸ್ತುತಿಃ**—ಅನುಗ್ರಹಬುದ್ಧಿಯು । **ಭದ್ರಾ**—ಕಲ್ಯಾಣಾತ್ಮಕವಾಗಿರುತ್ತದೆ (ಆದುದರಿಂದ) । **ಜನೇಷು**—ಜನರ ನಡುವೆ । **ಗೋಭಿಃ**—ಗೋಯುಕ್ತರಾಗಿಯೂ । **ಯಶಸಃ**—ಯಶಸ್ಸಿಗೆ ಪಾತ್ರರಾಗಿಯೂ । **ಸ್ಯಾಮ**—ನಾವು ಇರುವಂತಾಗಲಿ । **ಆ**—ಅನಂತರ । **ದೇವಾಸಃ**—ಎಲೈ ದೇವತೆಗಳೇ । **ಸದಾ**—ಯಾವಾಗಲೂ । **ಇಳಯಾ**—ಹವೀರೂಪವಾದ ಅನ್ನದೊಡನೆ । **ಸಚೇಮಹಿ**—ನಾವು ಕೂಡಿಕೊಂಡಿರುವಂತಾಗಲಿ.

ಭಾವಾರ್ಥ

ಅನ್ನಸಂಪತ್ತಿನಿಂದ ಕೂಡಿದ ನಿವಾಸದಂತೆ ಆಕರ್ಷಕವಾದ ಮರುದ್ಗಣವು ನೋಡಲು ಸಂತೋಷದಾಯಕವಾಗಿರುತ್ತದೆ. ರುದ್ರಪುತ್ರರಾದ ಮರುತ್ತುಗಳ ಅನುಗ್ರಹಬುದ್ಧಿಯು ಕಲ್ಯಾಣಾತ್ಮಕವಾಗಿರುತ್ತದೆ. ಆದುದರಿಂದ, ಜನರ ನಡುವೆ ನಾವು ಗೋಯುಕ್ತರಾಗಿಯೂ, ಯಶಸ್ಸಿಗೆ ಪಾತ್ರರಾಗಿಯೂ ಇರುವಂತಾಗಲಿ. ಎಲೈ ದೇವತೆಗಳೇ, ನಾವು ಯಾವಾಗಲೂ ಹವೀರೂಪವಾದ ಅನ್ನದೊಡನೆ ಕೂಡಿಕೊಂಡಿರುವಂತಾಗಲಿ.

English Translation

Pleasant of aspect (is the troop of Maruts), like a house well stored with provisions : fortunate is the favour of the Maruts, the sons of Rudra :

may we (thereby) be famed among men for cattle, and so, gods, ever approach (you) with sacrificial food.

ಸಂಹಿತಾಪಾಠಃ

ಯಾಂ ಮೇ ಧಿಯಂ ಮರುತ ಇಂದ್ರ ದೇವಾ ಅದದಾತ ವರುಣ ಮಿತ್ರ ಯೂಯಂ ।
ತಾಂ ಪೀಪಯತ ಪಯಸೇವ ಧೇನುಂ ಕುವಿದ್ಗಿರೋ ಅಧಿ ರಥೇ ವಹಾಥ ॥೧೨॥

ಪದಪಾಠಃ

ಯಾಂ । ಮೇ । ಧಿಯಂ । ಮರುತಃ । ಇಂದ್ರ । ದೇವಾಃ । ಅದದಾತ । ವರುಣ । ಮಿತ್ರ । ಯೂಯಂ ।
ತಾಂ । ಪೀಪಯತ । ಪಯಸಾಽಇವ । ಧೇನುಂ । ಕುವಿತ್ । ಗಿರಃ । ಅಧಿ । ರಥೇ । ವಹಾಥ ॥ ೧೨ ॥

ಸಾಯಣಭಾಷ್ಯಂ

ಹೇ ಮರುತೋ ಹೇ ಇಂದ್ರ ದೇವಾ ಹೇ ವರುಣ ಹೇ ಮಿತ್ರ ಯೂಯಂ ಯಾಂ ಧಿಯಂ ಯತ್ಕರ್ಮ ಮೇ ಮಹ್ಯಮದದಾತ ದತ್ತವಂತಃ ಸ್ಥ ॥ ಮರುತ ಇತ್ಯತ್ರ ವಾಕ್ಯಭೇದಾದನಿಘಾತಃ। ಪೂರ್ವ-ಪೂರ್ವಸ್ಯಾವಿದ್ಯಮಾನತ್ವೇನಾದ್ಯುದಾತ್ತತ್ವಂ ॥ ತಾಂ ಧಿಯಂ ಪೀಪಯತ । ಫಲೇನಾಪ್ಯಾಯಯತ । ತತ್ರ ದೃಷ್ಟಾಂತಃ । ಪಯಸೇವ ಧೇನುಂ ನವಪ್ರಸೂತಿಕಾಂ ಗಾಂ ಕ್ಷೀರೇಣ ಯಥಾಪ್ಯಾಯಯಂತಿ ತದ್ವತ್ ಕಿಂಚ । ಗಿರೋಽಸ್ಮದೀಯಾಃ ಸ್ತುತೀರಧಿ ರಥ ಆತ್ಮೀಯೇ ರಥೇ ಕುವಿದ್ಬಹುವಾರಂ ವಹಾಥ । ಪ್ರಾಪ್ತಾಃ ಸ್ಥ । ಸ್ತುತೇಷು ಸತ್ಸು ಯಜ್ಞಂ ಪ್ರತ್ಯಾಗಮನಾಯ ರಥಾರೂಢಾ ಭವಥ ॥

ಪ್ರತಿಪದಾರ್ಥ

**ಮರುತಃ**—ಎಲೈ ಮರುತ್ತುಗಳೇ । **ಇಂದ್ರ**—ಎಲೈ ಇಂದ್ರನೇ । **ದೇವಾಃ**—ಎಲೈ ದೇವತೆಗಳೇ । **ವರುಣ**—ಎಲೈ ವರುಣನೇ । **ಮಿತ್ರ**—ಎಲೈ ಮಿತ್ರನೇ । **ಯೂಯಂ**—ನೀವು । **ಯಾಂ ಧಿಯಾಂ**—ಯಾವ ಕರ್ಮವನ್ನು । **ಮೇ**—ನನಗೆ । **ಅದದಾತ**—ಅನುಗ್ರಹಿಸಿರುವಿರೋ । **ತಾಂ**—ಆ ಕರ್ಮವನ್ನು । **ಪಯಸೇವ ಧೇನುಂ**—ಗೋವನ್ನು ಕ್ಷೀರದಿಂದ ತುಂಬುವಂತೆ । **ಪೀಪಯತ**—ಫಲದಿಂದ ತುಂಬಿರಿ । **ಗಿರಃ**—ನಮ್ಮ ಸ್ತುತಿಗಳನ್ನು । **ಅಧಿ ರಥೇ**—ನಿಮ್ಮ ರಥಗಳಲ್ಲಿ । **ಕುವಿತ್**—ಅನೇಕವೇಳೆ । **ವಹಾಥ**—ನೀವು ತುಂಬಿಕೊಳ್ಳುತ್ತೀರಿ.

ಭಾವಾರ್ಥ

ಎಲೈ ಮರುತ್ತುಗಳೇ, ಎಲೈ ಇಂದ್ರನೇ, ಎಲೈ ದೇವತೆಗಳೇ, ಎಲೈ ವರುಣನೇ, ಎಲೈ ಮಿತ್ರನೇ, ನೀವು ಯಾವ ಕರ್ಮವನ್ನು ನನಗೆ ಅನುಗ್ರಹಿಸಿರುವಿರೋ ಆ ಕರ್ಮವನ್ನು ಗೋವನ್ನು ಕ್ಷೀರದಿಂದ ತುಂಬುವಂತೆ, ಫಲದಿಂದ ತುಂಬಿರಿ. ನಮ್ಮ ಸ್ತುತಿಗಳನ್ನು ನಿಮ್ಮ ರಥಗಳಲ್ಲಿ ಅನೇಕವೇಳೆ ತುಂಬಿಕೊಳ್ಳುತ್ತೀರಿ. ಎಂದರೆ ನಮ್ಮ ಸ್ತುತಿಗಳನ್ನು ಕೇಳುತ್ತೀರಿ.

## English Translation

Maruts, Indra, gods, Varuna and Mitra, reward the worship, which you have given as (men fatten) the (newly-delivered) cow with milk, you have repeatedly put my praises on your car.

ಸಂಹಿತಾಪಾಠಃ

ಕುವಿದಂಗ ಪ್ರತಿ ಯಥಾ ಚಿದಸ್ಯ ನಃ ಸಜಾತ್ಯಸ್ಯ ಮರುತೋ ಬುಬೋಧಥ।
ನಾಭಾ ಯತ್ರ ಪ್ರಥಮಂ ಸಂನಸಾಮಹೇ ತತ್ರ ಜಾಮಿತ್ವಮದಿತಿರ್ದಧಾತು ನಃ ॥ ೧೩ ॥

ಪದಪಾಠಃ

ಕುವಿತ್ । ಅಂಗ । ಪ್ರತಿ । ಯಥಾ । ಚಿತ್ । ಅಸ್ಯ । ನಃ । ಸಽಜಾತ್ಯಸ್ಯ । ಮರುತಃ । ಬುಬೋಧಥ । ನಾಭಾ । ಯತ್ರ । ಪ್ರಥಮಂ । ಸಂಽನಸಾಮಹೇ । ತತ್ರ । ಜಾಮಿಽತ್ವಂ । ಅದಿತಿಃ । ದಧಾತು । ನಃ ॥೧೩॥

ಸಾಯಣಭಾಷ್ಯಂ

ಅಂಗೇತಿ ಸಂಬುದ್ಧೌ। ಹೇ ಮರುತಃ ಯೂಯಂ ನೋಽಸ್ಮಾನ್ಕುವಿದ್ಬಹುವಾರಂ ಪ್ರತಿ ಬುಬೋಧಥ।ತಥಾ ಪ್ರತಿಬುಧ್ಯಧ್ವಂ ॥ ಕುವಿಚ್ಛಬ್ದಯೋಗಾದನಿಘಾತಃ ॥ ಯಥಾ ನೋಽಸ್ಮಾನ್ಸಜಾತ್ಯಸ್ಯಾಸ್ಯ ಬಾಂಧವಸ್ಯ ವಿಷಯಭೂತಾನ್ಕುರುಥ ತಥಾ ಜಾನೀಥ । ತತೋ ನಾಭಾ ಪೃಥಿವ್ಯಾ ನಾಭಿಸ್ಥಾನೇ ಯತ್ರ ಯಸ್ಮಿನ್ನುತ್ತರವೇದಿಲಕ್ಷಣೇ ದೇಶೇ ಪ್ರಥಮಮೇವ ಸಂನಸಾಮಹೇ ಹವಿಷಾ ಯತ್ರ ಸಂಗಚ್ಛೇಮಹಿ ತತ್ರೈವ ದೇಶೇಽದಿತಿರ್ದೇವಾನಾಂ ಮಾತಾ ನೋಽಸ್ಮಾಕಂ ಜಾಮಿತ್ವಂ ಮನುಷ್ಯೈಃ ಸಹ ಬಾಂಧವಂ ದಧಾತು । ವಿದಧಾತು ॥

ಪ್ರತಿಪದಾರ್ಥ

**ಅಂಗ ಮರುತಃ**—ಎಲೈ ಮರುತ್ತುಗಳೇ । **ಯಥಾ**—ಯಾವ ರೀತಿ । **ನಃ**—ನಮ್ಮನ್ನು । **ಅಸ್ಯ ಸಜಾತ್ಯಸ್ಯ**—ನಿಮ್ಮ ಬಂಧುತ್ವವನ್ನು ಹೊಂದಲು ಯೋಗ್ಯರನ್ನಾಗಿ ಮಾಡುವಿರೋ ಹಾಗೆ । **ಕುವಿತ್**—ಅನೇಕ ವೇಳೆ । **ಪ್ರತಿ ಬುಬೋಧಥ**—ಅನುಗ್ರಹಿಸಿ ತಿಳಿಯಿರಿ । **ನಾಭಾ**—ಪೃಥ್ವಿಗೆ ನಾಭಿಭೂತವಾದ । **ಯತ್ರ**—ಯಾವ ಯಜ್ಞಪ್ರದೇಶದಲ್ಲಿ । **ಪ್ರಥಮಂ**—ಮೊದಲೇ । **ಸಂನಸಾಮಹೇ**—ನಾವು ಹವಿರಾದಿಗಳೊಂದಿಗೆ ಕೂಡಿ ಸಿದ್ಧವಾಗಿರುವೆವೋ । **ತತ್ರ**—ಆ ಸ್ಥಾನದಲ್ಲಿ । **ಅದಿತಿಃ**—ದೇವಮಾತೆಯಾದ ಅದಿತಿಯು । **ನಃ**—ನಮಗೆ । **ಜಾಮಿತ್ವಂ**—ಮಾನವರೊಂದಿಗೆ ಬಂಧುತ್ವವನ್ನು । **ದಧಾತು**—ಅನುಗ್ರಹಿಸಲಿ.

ಭಾವಾರ್ಥ

ಎಲೈ ಮರುತ್ತುಗಳೇ, ಯಾವ ರೀತಿ ನಮ್ಮನ್ನು ನಿಮ್ಮ ಬಂಧುತ್ವಕ್ಕೆ ಯೋಗ್ಯವಿಷಯರನ್ನಾಗಿ ಮಾಡುವಿರೋ ಹಾಗೆ ನಮ್ಮನ್ನು ಅನೇಕವೇಳೆ ಅನುಗ್ರಹಿಸಿರಿ. ಪೃಥ್ವಿಗೆ ನಾಭಿಭೂತವಾದ ಯಾವ ಯಜ್ಞಪ್ರದೇಶದಲ್ಲಿ ನಾವು ಪೂರ್ವ

ಭಾವಿಯಾಗಿಯೇ ಹವಿರಾದಿಗಳೊಂದಿಗೆ ಕೂಡಿ ಸಿದ್ಧವಾಗಿರುವೆವೋ ಆ ಸ್ಥಾನದಲ್ಲಿ ದೇವಮಾತೆಯಾದ ಅದಿತಿಯು ನಮಗೆ ಮಾನವರೊಂದಿಗೆ ಬಂಧುತ್ವವನ್ನು ಅನುಗ್ರಹಿಸಲಿ.

English Translation

Maruts, repeatedly acknowledge us, so that (you may make us the objects) of this relationship ; and may Aditi grant us affinity (with men) on the navel of the earth, where we first assemble (to offer oblations).

ಸಂಹಿತಾಪಾಠಃ

ತೇ ಹಿ ದ್ಯಾವಾಪೃಥಿವೀ ಮಾತರಾ ಮಹೀ ದೇವೀ ದೇವಾಞ್ಜನ್ಮನಾ ಯಜ್ಞಿ-
ಯೇ ಇತಃ ।
ಉಭೇ ಬಿಭೃತ ಉಭಯಂ ಭರೀಮಭಿಃ ಪುರೂ ರೇತಾಂಸಿ ಪಿತೃಭಿಶ್ಚ
ಸಿಂಚತಃ ॥ ೧೪ ॥

ಪದಪಾಠಃ

ತೇ ಇತಿ । ಹಿ । ದ್ಯಾವಾಪೃಥಿವೀ ಇತಿ । ಮಾತರಾ । ಮಹೀ ಇತಿ । ದೇವೀ ಇತಿ । ದೇವಾನ್ । ಜನ್ಮನಾ ।
ಯಜ್ಞಿಯೇ ಇತಿ । ಇತಃ ।
ಉಭೇ ಇತಿ । ಬಿಭೃತಃ । ಉಭಯಂ । ಭರೀಮಽಭಿಃ । ಪುರು । ರೇತಾಂಸಿ । ಪಿತೃಽಭಿಃ । ಚ । ಸಿಂಚತಃ ॥

ಸಾಯಣಭಾಷ್ಯಂ

ಮಾತರಾ ಸರ್ವಸ್ಯ ಜಗತೋ ನಿರ್ಮಾತ್ರ್ಯೌ ಅತ ಏವ ಮಹೀ ಮಹತ್ಯೌ ದೇವೀ ದೇವನಶೀಲೇ ಯಜ್ಞಿಯೇ ಯಜ್ಞಾರ್ಹೇ ತೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ದೇವಾನಿಂದ್ರಾದೀಞ್ಜನ್ಮನೈವೇತೋ ಹಿ । ಪ್ರಾಪ್ನುತಃ ಖಲು ॥ ಇಣ್ ಗತೌ । ಲಿಟಿ ರೂಪಂ ॥ ಕಿಂಚೋಭೇ ದ್ಯಾವಾಪೃಥಿವ್ಯೌ ಭರೀಮಭಿರ್ಭರಣೈರ್ನಾನಾವಿಧೈರುಭಯಂ ಜನಂ ದೇವಾನ್ಮನುಷ್ಯಾಂಶ್ಚ ಬಿಭೃತಃ । ಧಾರಯತಃ । ಪೋಷಯತಃ । ತಥಾ ಪಿತೃಭಿಃ ಪಾಲಕೈರ್ದೇವೈಃ ಸಂಗತೇ ತೇ ಪುರು ಪುರೂಣ್ಯಾತ್ಮೀಯಾನಿ ರೇತಾಂಸ್ಯುದಕಾನಿ ಸಿಂಚತಃ । ಕ್ಷರತಃ । ಪ್ರತ್ಯಕ್ಷೇಣ ಧಾರಯತಃ ॥

ಪ್ರತಿಪದಾರ್ಥ

**ಮಾತರಾ**—ಜಗನ್ನಿರ್ಮಾತ್ರಿಯರೂ । **ಮಹೀ**—ಮಹತ್ಸ್ವರೂಪವುಳ್ಳವರೂ । **ದೇವೀ**—ದೇವತಾತ್ಮರೂ । **ಯಜ್ಞಿಯೇ**—ಯಜ್ಞಾರ್ಹರೂ ಆದ । **ತೇ ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳು । **ದೇವಾನ್**—ಇಂದ್ರಾದಿ ದೇವತೆಗಳನ್ನು । **ಜನ್ಮನಾ**—ಉತ್ಪನ್ನವಾಗುವಾಗಲೇ । **ಇತಃ ಹಿ**—ಸೇರಿಕೊಳ್ಳುತ್ತಾರೆ । **ಉಭೇ**—ದ್ಯಾವಾ

ಪೃಥಿವಿಗಳಿಬ್ಬರೂ | **ಭರೀಮಭಿಃ**—ಜಗತ್ತನ್ನು ಭರಿಸುವ ಅನೇಕ ಸಾಮುಗ್ರಿಗಳಿಂದ | **ಉಭಯಂ**—ದೇವತೆಗಳನ್ನೂ, ಮಾನವರನ್ನೂ | **ಬಿಭೃತಃ**—ಪೋಷಿಸುತ್ತಾರೆ | **ಪಿತೃಭಿಃ**—ಪಾಲಕರಾದ ದೇವತೆಗಳೊಡಗೂಡಿದ ಅವರು | **ಪುರು**—ಅತ್ಯಧಿಕವಾದ | **ರೇತಾಂಸಿ**—ಉದಕಗಳನ್ನು | **ಸಿಂಚತಃ**—ಪ್ರವಹಿಸುವಂತೆ ಮಾಡುತ್ತಾರೆ.

ಭಾವಾರ್ಥ

ಜಗನ್ನಿರ್ಮಾತೃಯರೂ, ಮಹತ್ಸ್ವರೂಪವುಳ್ಳವರೂ, ದೇವತಾತ್ಮರೂ, ಯಜ್ಞಾರ್ಹರೂ ಆದ ದ್ಯಾವಾಪೃಥಿವಿಗಳು ಉತ್ಪನ್ನರಾಗುವಾಗಲೇ ಇಂದ್ರಾದಿದೇವತೆಗಳನ್ನು ಸೇರಿಸಿಕೊಳ್ಳುತ್ತಾರೆ. ದ್ಯಾವಾಪೃಥಿವಿಗಳಿಬ್ಬರೂ ಜಗತ್ತನ್ನು ಭರಿಸುವ ಅನೇಕ ಸಾಮುಗ್ರಿಗಳಿಂದ ದೇವತೆಗಳನ್ನೂ, ಮಾನವರನ್ನೂ ಪೋಷಿಸುತ್ತಾರೆ. ಜಗತ್ಪಾಲಕರಾದ ದೇವತೆಗಳೊಡಗೂಡಿದ ಅವರು ಅತ್ಯಧಿಕವಾದ ಉದಕಗಳನ್ನು ಪ್ರವಹಿಸುವಂತೆ ಮಾಡುತ್ತಾರೆ.

English Translation

They two, the maternal heaven and earth, mighty, divine, adorable, attain to the gods upon their birth ; they both cherish tho two (races, human and divine) with various nutriments : (associated) with the paternal (gods), they shed abundant moisture.

ಸಂಹಿತಾಪಾಠಃ

ವಿ ಷಾ ಹೋತ್ರಾ ವಿಶ್ವಮಶ್ನೋತಿ ವಾರ್ಯಂ ಬೃಹಸ್ಪತಿರರಮತಿಃ ಪನೀಯಸೀ ।
ಗ್ರಾವಾ ಯತ್ರ ಮಧುಷುದುಚ್ಯತೇ ಬೃಹದವೀವಶಂತ ಮತಿಭಿರ್ಮನೀಷಿಣಃ ||

ಪದಪಾಠಃ

ವಿ | ಸಾ | ಹೋತ್ರಾ | ವಿಶ್ವಂ | ಅಶ್ನೋತಿ | ವಾರ್ಯಂ | ಬೃಹಸ್ಪತಿಃ | ಅರಮತಿಃ | ಪನೀಯಸೀ |
ಗ್ರಾವಾ | ಯತ್ರ | ಮಧುऽಸುತ್ | ಉಚ್ಯತೇ | ಬೃಹತ್ | ಅವೀವಶಂತ | ಮತಿऽಭಿಃ | ಮನೀಷಿಣಃ ||

ಸಾಯಣಭಾಷ್ಯಂ

ಹೋತ್ರಾ | ವಾಙ್ನಾಮೈತತ್ ಆಹೂಯಂತೇऽನಯಾ ದೇವಾ ಇತಿ | ಸಾ ವಾಗ್ವಾರ್ಯಂ ವರಣೀಯಂ ವಿಶ್ವಂ ಸರ್ವಂ ಪಶ್ವಾದಿಸಹಿತಂ ಧನಂ ವ್ಯಶ್ನೋತಿ | ವಿವಿಧಂ ವ್ಯಾಪ್ನುತೇ | ಕೀದೃಶೀ | ಬೃಹಸ್ಪತಿರ್ಬೃಹತಾಂ ಮಹತಾಂ ಪಾಲಯಿತ್ರೀ ಅರಮತಿಃ ಪರ್ಯಾಪ್ತಸ್ತುತಿಃ ಯದ್ವಾ ಕುತ್ರಾಪ್ಯನುಪರತಾ ಪನೀಯಸ್ಯತ್ಯಂತಂ ದೇವಾನಾಂ ಸ್ತೋತ್ರಕಾರಿಣೀ | ಯತ್ರ ಯಸ್ಯಾಂ ಹೋತ್ರಾಯಾಂ ಮಧುಷುತ್ ಸೋಮಮಭಿಷುಣ್ವನ್ಬೃಹದ್ಮಹಾನ್ಗ್ರಾವೋಚ್ಯತೇ ಅಭಿಧೀಯತೇ| ಸ್ತೂಯತ ಇತ್ಯರ್ಥಃ |

**ತಂ ಸ್ತುತಿಮುಂತಂ ಯಜ್ಞಂ ಮನೀಷಿಣೋ ದೇವಾ ಮತಿಭಿಃ ಸ್ತುತಿಭಿಃ ಸಹಾವೀವಶಂತೆ । ಕಾಮಯಂತೇ॥ ವಷ್ಟೇರ್ಣ್ಯಂತಸ್ಯ ಲುಙಿ ರೂಪಂ ಯದ್ವಾ। ಮನೀಷಿಣಃ ಸ್ತೋತಾರಃ ಸ್ತುತಿಭಿರ್ದೇವಾನ್ಯಜ್ಞಂ ಕಾಮಯಮಾನಾನ್ಕುರ್ವಂತಿ ॥**

ಪ್ರತಿಪದಾರ್ಥ

**ಬೃಹಸ್ಪತಿಃ**—ಮಹತ್ಸ್ವರೂಪವುಳ್ಳ ದೇವತೆಗಳನ್ನು ಪಾಲಿಸುವುದೂ । **ಅರಮತಿಃ**—ಅನುಸ್ಯೂತವಾಗಿರುವುದೂ । **ಪನೀಯಸೀ**—ದೇವತೆಗಳನ್ನು ಪ್ರಶಂಸಿಸುವುದೂ । **ಹೋತ್ರಾ**—ದೇವತೆಗಳನ್ನು ಸ್ತುತಿಸಿ ಯಜ್ಞಕ್ಕೆ ಕರೆಯುವುದೂ ಆದ । **ಸಾ**—ಆ ಸ್ತುತಿಯು । **ವಾರ್ಯಂ**—ಅಪೇಕ್ಷಿತವಾದ । **ವಿಶ್ವಂ**—ಸಕಲ ಧನವನ್ನೂ । **ವ್ಯಶ್ನೋತಿ**—ಪಡೆಯುತ್ತದೆ । **ಯತ್ರ**—ಯಾವ ಸ್ತುತಿಕಾಲದಲ್ಲಿ । **ಮಧುಷುತ್**—ಸೋಮವನ್ನು ಹಿಂಡುವುದೂ । **ಬೃಹತ್**—ಮಹತ್ತಾದುದೂ ಆದ । **ಗ್ರಾವಾ**—ಹಿಂಡುವ ಕಲ್ಲು । **ಉಚ್ಯತೇ**—ಪ್ರಶಂಸಿಸಲ್ಪಡುವುದೋ ಆ ಸ್ತುತಿಯುಕ್ತವಾದ ಯಜ್ಞವನ್ನು । **ಮನೀಷಿಣಃ**—ಪ್ರಾಜ್ಞರಾದ ದೇವತೆಗಳು । **ಮತಿಭಿಃ**—ಸ್ತುತಿಗಳೊಡನೆ । **ಅವೀವಶಂತ**—ಅಪೇಕ್ಷಿಸುತ್ತಾರೆ.

ಭಾವಾರ್ಥ

ಮಹತ್ಸ್ವರೂಪವುಳ್ಳ ದೇವತೆಗಳನ್ನು ಪಾಲಿಸುವುದೂ, ಅನುಸ್ಯೂತವಾಗಿರುವುದೂ, ದೇವತೆಗಳನ್ನು ಪ್ರಶಂಸಿಸುವುದೂ, ದೇವತೆಗಳನ್ನು ಸ್ತುತಿಸಿ ಯಜ್ಞಕ್ಕೆ ಕರೆಯುವುದೂ ಆದ ಸ್ತುತಿಯು ಅಪೇಕ್ಷಿತವಾದ ಸಕಲ ಧನವನ್ನೂ ಪಡೆಯುನಂತೆ ಮಾಡುತ್ತದೆ. ಯಾವ ಸ್ತುತಿಕಾಲದಲ್ಲಿ ಸೋಮವನ್ನು ಹಿಂಡುವುದೂ, ಮಹತ್ತಾದುದೂ ಆದ ಹಿಂಡುವಕಲ್ಲು ಪ್ರಶಂಸಿಸಲ್ಪಡುವುದೋ ಆ ಸ್ತುತಿಯುಕ್ತವಾದ ಯಜ್ಞವನ್ನು ಪ್ರಾಜ್ಞರಾದ ದೇವತೆಗಳು ಸ್ತುತಿಗಳೊಡನೆ ಅಪೇಕ್ಷಿಸುತ್ತಾರೆ.

## English Translalion

That voice of invocation, the protectress of the mighty, never ceasing, the panegyrist (of the gods), obtains all desirable wealth : on uttering which, the great grinding-stone expressing the sweet Soma is eulogized ; the pious, by their praises, make the god desirous (of the sacrifice).

ಸಂಹಿತಾಪಾಠಃ

ಏವಾ ಕವಿಸ್ತುವೀರವಾ ಋತಜ್ಞಾ ದ್ರವಿಣಸ್ಯುರ್ದ್ರವಿಣಸಶ್ಚಕಾನಃ ।
ಉಕ್ಥೇಭಿರತ್ರ ಮತಿಭಿಶ್ಚ ವಿಪ್ರೋಽಪೀಪಯದ್ಗಯೋ ದಿವ್ಯಾನಿ ಜನ್ಮ ॥ ೧೬ ॥

ಪದಪಾಠಃ

ಏವ । ಕವಿಃ । ತುವಿಽರವಾನ್ । ಋತಽಜ್ಞಾಃ । ದ್ರವಿಣಸ್ಯುಃ । ದ್ರವಿಣಸಃ । ಚಕಾನಃ ।
ಉಕ್ಥೇಭಿಃ । ಅತ್ರ । ಮತಿಽಭಿಃ । ಚ । ವಿಪ್ರಃ । ಅಪೀಪಯತ್ । ಗಯಃ । ದಿವ್ಯಾನಿ । ಜನ್ಮ ॥ ೧೬ ॥

ಸಾಯಣಭಾಷ್ಯಂ

ಕವಿಃ ಕ್ರಾಂತಪ್ರಜ್ಞಸ್ತುವೀರವಾನ್ ॥ ಮತ್ವರ್ಥೀಯಪ್ರತ್ಯಯೋವೃತ್ತಿಃ ॥ ಬಹುಸ್ತುತಿಯುಕ್ತ-ಋತಜ್ಞಾ ಯಜ್ಞಸ್ಯ ವೇದಿತಾ ದ್ರವಿಣಸ್ಯುರ್ಧನಕಾಮಃ ॥ ಸರ್ವಪ್ರಾತಿಪದಿಕೇಭ್ಯೋ ಲಾಲಸಾಯಾಮಿತಿ ಸುಗಾಗಮಃ ॥ ತಸ್ಯೈವ ವಿಶದವಚನಂ । ದ್ರವಿಣಸಶ್ಚಕಾನ ಇತಿ। ಪಶ್ವಾದಿಧನಂ ಕಾಮಯಮಾನ ಇತ್ಯರ್ಥಃ। ವಿಪ್ರೋ ಮೇಧಾವೀ ಗಯೋ ನಾಮರ್ಷಿರೇವಮುಕ್ತಪ್ರಕಾರೇಣಾತ್ರ ಸೂಕ್ತ ಉಕ್ಥೇಭಿಃ ಶಸ್ತ್ರೈರ್ಮತಿಭಿಃ ಸ್ತುತಿಭಿಶ್ಚ ದಿವ್ಯಾನಿ ದಿವಿ ಜಾತಾನಿ ಜನ್ಮ ಜನನಾನಿ ದೇವಾನಪೀಪಯತ್ । ಅವರ್ಧಯತ್ । ಅಸ್ತಾವೀದಿತ್ಯರ್ಥಃ ॥

ಪ್ರತಿಪದಾರ್ಥ

**ಕವಿಃ**—ಮೇಧಾವಿಯೂ । **ತುವೀರವಾನ್**—ಅನೇಕ ಸ್ತುತಿಗಳಿಂದ ಕೂಡಿದವನೂ । **ಋತಜ್ಞಾಃ**—ಯಜ್ಞತತ್ತ್ವವನ್ನರಿತವನೂ । **ದ್ರವಿಣಸ್ಯುಃ**—ಧನವನ್ನು ಅಪೇಕ್ಷಿಸುವವನೂ । **ದ್ರವಿಣಸಶ್ಚಕಾನಃ**—ಪಶ್ವಾದಿಗಳನ್ನು ಇಚ್ಛಿಸುವವನೂ । **ವಿಪ್ರಃ**—ಪ್ರಾಜ್ಞನೂ ಆದ । **ಗಯಃ**—ಗಯಋಷಿಯು । **ಅತ್ರ**—ಈ ಸೂಕ್ತದಲ್ಲಿ । **ಉಕ್ಥೇಭಿಃ**—ಶಸ್ತ್ರಮಂತ್ರಗಳಿಂದಲೂ । **ಮತಿಭಿಃ**—ಸ್ತುತಿಗಳಿಂದಲೂ । **ಏವ**—ಈ ಪ್ರಕಾರವಾಗಿ । **ದಿವ್ಯಾನಿ ಜನ್ಮ**-ಉತ್ತಮವಾದ ಜನ್ಮವನ್ನು ಹೊಂದಿದ ದೇವತೆಗಳನ್ನು । **ಅಪೀಪಯತ್**—ಪುಷ್ಟರಾಗುವಂತೆ ಮಾಡಿದ್ದಾನೆ.

ಭಾವಾರ್ಥ

ಮೇಧಾವಿಯೂ, ಅನೇಕ ಸ್ತುತಿಗಳಿಂದ ಕೂಡಿದವನೂ, ಯಜ್ಞತತ್ತ್ವವನ್ನರಿತವನೂ, ಧನವನ್ನು ಅಪೇಕ್ಷಿಸುವವನೂ, ಪಶ್ವಾದಿಗಳನ್ನು ಇಚ್ಛಿಸುವವನೂ, ಪ್ರಾಜ್ಞನೂ ಆದ ಗಯಋಷಿಯು ಈ ಸೂಕ್ತದಲ್ಲಿ ಶಸ್ತ್ರಮಂತ್ರಗಳಿಂದಲೂ, ಸ್ತುತಿಗಳಿಂದಲೂ ಈ ಪ್ರಕಾರವಾಗಿ ಉತ್ತಮವಾದ ಜನ್ಮವನ್ನು ಹೊಂದಿದ ದೇವತೆಗಳನ್ನು ಪುಷ್ಟರಾಗುವಂತೆ ಮಾಡಿದ್ದಾನೆ.

## English Translation

The pious sage, Gaya, eloquent in laudation, conversant with sacred rites, wishing for wealth, eager for wealth, propitiates the celestial people with prayers and praises.

ಸಂಹಿತಾಪಾಠಃ

ಏವಾ ಪ್ಲತೇಃ ಸೂನುರವೀವೃಧದ್ವೋ ವಿಶ್ವ ಆದಿತ್ಯಾ ಅದಿತೇ ಮನೀಷೀ ।
ಈಶಾನಾಸೋ ನರೋ ಅಮರ್ತ್ಯೇನಾಸ್ತಾವಿ ಜನೋ ದಿವ್ಯೋ ಗಯೇನ ॥

ಪದಪಾಠಃ

ಏವ । ಪ್ಲತೇಃ । ಸೂನುಃ । ಅವೀವೃಧತ್ । ವಃ । ವಿಶ್ವೇ । ಆದಿತ್ಯಾಃ । ಅದಿತೇ । ಮನೀಷೀ ।
ಈಶಾನಾಸಃ । ನರಃ । ಅಮರ್ತ್ಯೇನ । ಅಸ್ತಾವಿ । ಜನಃ । ದಿವ್ಯಃ । ಗಯೇನ ॥ ೧೭ ॥

ಸಾಯಣಭಾಷ್ಯಂ

**ಇಯಮಂ ವ್ಯಾಖ್ಯಾತಾ** ॥ 482ನೇ ಪೇಜನ್ನು ನೋಡಿ

ಪ್ರತಿಪದಾರ್ಥ

**ವಿಶ್ವೇ ಆದಿತ್ಯಾಃ**—ಅದಿತಿಪುತ್ರರಾದ ಎಲೈ ಸಕಲ ದೇವತೆಗಳೇ | **ಅದಿತೇ**—ಎಲೈ ದೇವಮಾತೆಯಾದ ಅದಿತಿಯೇ | **ವಃ**—ನಿಮ್ಮನ್ನು | **ಮನೀಷೀ**—ಪ್ರಾಜ್ಞನಾದ ಸ್ತುತಿಕರ್ತನೂ | **ಪ್ಲತೇಃ ಸೂನುಃ**—ಪ್ಲತಿಯ ಪುತ್ರನೂ ಆದ ಗಯನು | **ಏವ**—ಈರೀತಿ | **ಅವೀವೃಧತ್**—ಸ್ತುತಿಗಳಿಂದ ಪುಷ್ಟರಾಗುವಂತೆ ಮಾಡಿದ್ದಾನೆ | **ಅಮರ್ತ್ಯೇನ**—ಮರಣರಹಿತರಾದ ಯಾವ ದೇವಜನರ ಅನುಗ್ರಹದಿಂದ | **ನರಃ**—ಮಾನವರು | **ಈಶಾನಾಸಃ**—ಧನಗಳಿಗೆ ಒಡೆಯರಾಗಿ ಆಗುವರೋ | **ದಿವ್ಯಃ ಜನಃ**—ಅಂತಹ ದೇವತೆಗಳ ಸಂಘವು | **ಗಯೇನ**—ಗಯನಿಂದ | **ಅಸ್ತಾವಿ**—ಪ್ರಶಂಸಿಸಲ್ಪಟ್ಟಿದೆ.

ಭಾವಾರ್ಥ

ಅದಿತಿಪುತ್ರರಾದ ಎಲೈ ಸಕಲ ದೇವತೆಗಳೇ, ದೇವಮಾತೆಯಾದ ಎಲೈ ಅದಿತಿಯೇ, ಪ್ರಾಜ್ಞನಾದ ಸ್ತುತಿಕರ್ತನೂ, ಪ್ಲತಿಯ ಪುತ್ರನೂ ಆದ ಗಯನು ಈರೀತಿ ಸ್ತುತಿಗಳಿಂದ ನಿಮ್ಮನ್ನು ಪುಷ್ಟರಾಗುವಂತೆ ಮಾಡಿದ್ದಾನೆ. ಮರಣರಹಿತರಾದ ಯಾವ ದೇವಜನರ ಅನುಗ್ರಹದಿಂದ ಮಾನವರು ಧನಗಳಿಗೆ ಒಡೆಯರಾಗುವರೋ ಅಂತಹ ದೇವತೆಗಳ ಸಂಘವು ಗಯನಿಂದ ಪ್ರಶಂಸಿಸಲ್ಪಟ್ಟಿದೆ.

English Translation

Universal deities and Aditi, thus has the prudent son of Plati magnified you ; the celestial people, the immortal (company of the gods)through whom (when praised) men become the bonds (of wealth), have been glorified by Gaya.

# ಅರವತ್ತೈದನೆಯ ಸೂಕ್ತ

## ಪೀಠಿಕೆ

ಈ ಸೂಕ್ತಕ್ಕೆ ವಿಶ್ವೇದೇವತೆಗಳು ದೇವತೆಯು. ವಿಶ್ವೇದೇವತೆಗಳ ವಿಷಯವನ್ನು ನಾವು ಹಿಂದೆ ವಿಸ್ತಾರವಾಗಿ ವಿವರಿಸಿದೇವೆ. ಆದರೆ ಪ್ರತ್ಯೇಕವಾಗಿ ವಿವರಿಸಿಲ್ಲ. ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿರುವ ಕೆಲವು ದೇವತೆಗಳ ವಿಷಯವನ್ನು ನಾವು ಅಲ್ಲಲ್ಲಿ ವಿವರಿಸಿದೇವೆ ಎಂದರೆ ಅಗ್ನಿ- ೧ ನೇ ಭಾಗದ 612 ನೇ ಪೇಜುಗಳಲ್ಲಿಯೂ, ಇಂದ್ರ (11-665) ವಾಯು (5-598) ಪೂಷಾ (15-394) ಸರಸ್ವತೀ (15-444 ಮತ್ತು 447) ಪೇಜುಗಳಲ್ಲಿಯೂ ವಿವರಿಸಿದೇವೆ. ಈಗ ಮಿತ್ರ, ವರುಣ, ಅರ್ಯಮಾ ಎಂಬ ದೇವತೆಗಳ ವಿಷಯವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುತ್ತೇವೆ.

**ಮಿತ್ರಃ, ವರುಣಃ, ಅರ್ಯಮಾ**—ಈ ಮೂರು ದೇವತೆಗಳೂ ಪ್ರತ್ಯೇಕ ದೇವತೆಗಳೆಂದು ಭಾವಿಸಲ್ಪಟ್ಟಿದ್ದರೂ ಇವರು ಸೂರ್ಯನ ಅನೇಕ ರೂಪಗಳಾದ ಎಂದರೆ ದ್ವಾದಶಾದಿತ್ಯರಲ್ಲಿ ಈ ಹೆಸರಿನ ಅಂಶದೇವತೆಗಳೆಂದು ಇಲ್ಲಿ ವಿವರಿಸಲ್ಪಟ್ಟಿರುವಂತೆ ತೋರುತ್ತದೆ. ಇದಲ್ಲದೆ ಈ ಮೂರು ದೇವತೆಗಳೂ ಅಗ್ನಿಯ ಬೇರೆ ರೂಪಗಳೆಂದು ಕೆಲವು ಕಡೆ ಹೇಳಿದೆ.

**ತ್ವಮಗ್ನೇ ವರುಣೋ ಜಾಯಸೇ ಯತ್ತ್ವಂ ಮಿತ್ರೋ ಭವಸಿ ಯತ್ಸಮಿದ್ಧಃ ।**

(ಋ. ಸಂ. ೫-೩-೧)

**ತ್ವಮರ್ಯಮಾ ಭವಸಿ ಯತ್ಕನೀನಾಂ ನಾಮ ಸ್ವಧಾವನ್ ಗುಹ್ಯಂ ಬಿಭರ್ಷಿ ।**

(ಋ. ಸಂ. ೫-೩-೨)

ಎಂಬ ಋಕ್ಕುಗಳಲ್ಲಿ ಅಗ್ನಿಯು ಉತ್ಪನ್ನನಾದಾಗ ಅವನಿಗೆ ವರುಣನೆಂದೂ, ಚೆನ್ನಾಗಿ ಹೊತ್ತಿಸಲ್ಪಟ್ಟು ಧಗಧಗನೆ ಉರಿಯುತ್ತಿರುವಾಗ ಅಗ್ನಿಗೆ ಮಿತ್ರನೆಂದೂ, ಕನ್ಯಾಸಂಬಂಧವಾದ ಹೋಮಾದಿಗಳಲ್ಲಿ ಅರ್ಯಮಾ ಎಂದೂ ಅಗ್ನಿಗೆ ಈ ಮೂರು ಹೆಸರುಗಳಿವೆಯೆಂದು ಹೇಳಿದೆ. ಇದಲ್ಲದೆ ತೈತ್ತಿರೀಯಬ್ರಾಹ್ಮಣದಲ್ಲಿ—

**ಮಿತ್ರೋಽಸಿ ವರುಣೋಸೀತ್ಯಾಹ । ಮೈತ್ರಂ ವಾ ಅಹಃ । ವಾರುಣೀ ರಾತ್ರಿಃ । ಅಹೋ-ರಾತ್ರಾಭ್ಯಾಮೇವೈನಮುಪಾವಹರತಿ ॥**

(ತೈ. ಬ್ರಾ. ೧-೭-೧೦-೧)

ಮಿತ್ರನು ಹಗಲಿಗೆ ಅಧಿಪತಿಯೆಂದೂ, ವರುಣನು ರಾತ್ರಿಗೆ ಅಧಿಪತಿಯೆಂದೂ ಹೇಳಿದೆ. ಆದುದರಿಂದ ಈ ಮೂರು ದೇವತೆಗಳೂ ಕೆಲವುಕಡೆ ಸೂರ್ಯನ ಅಂಶದೇವತೆಗಳೆಂದೂ, ಕೆಲವುಕಡೆ ಅಗ್ನಿಯ ಬೇರೆಬೇರೆ ಹೆಸರುಗಳೆಂದೂ ಹೇಳಿರುವುದನ್ನು ಗಮನಿಸಬೇಕು.

ಪುರಾಣಾದಿಗಳಲ್ಲಿ ಮಿತ್ರನು ದ್ವಾದಶಾದಿತ್ಯರಲ್ಲಿ ಒಬ್ಬನು. ಋಗ್ವೇದದಲ್ಲಿ ಮಿತ್ರನು ಸೂರ್ಯನ ಬೇರೊಂದು ಹೆಸರಾದರೂ ಮಿತ್ರನಿಗೇ ಸ್ಪಷ್ಟವಾದ ವೈಶಿಷ್ಟ್ಯವಿದೆ. ಎಂದರೆ ವೈಯಕ್ತಿಕ ಪ್ರಾಧಾನ್ಯವಿದೆ. ಋಗ್ವೇದದಲ್ಲಿ ಮಿತ್ರ, ವರುಣ, ಅರ್ಯಮಾ ಎಂಬುವರು ಅದಿತಿಯ ಪುತ್ರರೆಂದೂ ಹೇಳಿದೆ. ಆದ್ದರಿಂದ ಇವರನ್ನು ಆದಿತ್ಯರೆಂದೂ ಅನೇಕ ಕಡೆಗಳಲ್ಲಿ ಕರೆದಿದೆ. ಈ ಆದಿತ್ಯರು ಎಂದರೆ ಅದಿತಿಪುತ್ರರು ಆರು ಜನರೆಂದು—

**ಇಮಾ ಗಿರ ಆದಿತ್ಯೇಭ್ಯೋ ಘೃತಸ್ನೂಃ ಸನಾದ್ರಾಜಭ್ಯೋ ಜುಹ್ವಾ ಜುಹೋಮಿ ।**
**ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ ವರುಣೋ ದಕ್ಷೋ ಅಂಶಃ ॥**

(ಋ. ಸಂ. ೨-೨೭-೧)

ಎಂಬ ಋಕ್ಕಿನಲ್ಲಿ ಮಿತ್ರ, ಅರ್ಯಮಾ, ಭಗ, ವರುಣ, ದಕ್ಷ, ಅಂಶ ಎಂದು ಆರುಜನರ ಹೆಸರನ್ನು ಮಾತ್ರ ಹೇಳಿದೆ.

**ದೇವಾ ಆದಿತ್ಯಾ ಯೇ ಸಪ್ತ ತೇಭಿಃ ಸೋಮಾಭಿ ರಕ್ಷ ನ ಇಂದ್ರಾಯೇಂದೋ ಪರಿ ಸ್ರವ ।**

(ಋ. ಸಂ. ೯-೧೧೪-೩)

ಎಂಬ ಋಕ್ಕಿನಲ್ಲಿ ಅದಿತಿಪುತ್ರರು ಏಳು ಜನರೆಂದಿದೆ.

**ಅಷ್ಟೌ ಪುತ್ರಾಸೋ ಅದಿತೇರ್ಯೇ ಜಾತಾಸ್ತನ್ವ೧ಸ್ಪರಿ ।**
**ದೇವಾಁ ಉಪ ಪ್ರೈತ್ಸಪ್ತಭಿಃ ಪರಾ ಮಾರ್ತಾಂಡಮಾಸ್ಯತ್ ॥**
**ಸಪ್ತಭಿಃ ಪುತ್ರೈರದಿತಿರುಪ ಪ್ರೈತ್ಪೂರ್ವ್ಯಂ ಯುಗಂ ।**
**ಪ್ರಜಾಯೈ ಮೃತ್ಯವೇ ತ್ವತ್ಪುನರ್ಮಾರ್ತಾಂಡಮಾಭರತ್ ॥**

(ಋ. ಸಂ. ೧೦-೭೨-೮, ೯)

ಎಂಬ ಋಕ್ಕುಗಳಲ್ಲಿ ಅದಿತಿಗೆ ಮೊದಲು ಏಳು ಅನಂತರ ಮಾರ್ತಂಡನೆಂದು ಒಟ್ಟು ಎಂಟುಮಂದಿ ಪುತ್ರರಿದ್ದರೆಂದು ಹೇಳಿದೆ. ಇದಲ್ಲದೇ ತೈತ್ತಿರೀಯ ಆರಣ್ಯಕದಲ್ಲಿ—

**ಅಷ್ಟೌ ಪುತ್ರಾಸೋ ಅದಿತೇಃ। ಯೇ ಜಾತಾಸ್ತನ್ವಃ ಪರಿ। ದೇವಾ ಉಪಪ್ರೈತ್ಸಪ್ತಭಿಃ। ಪರಾ-ಮಾರ್ತಾಂಡಮಾಸ್ಯತ್। ಸಪ್ತಭಿಃ ಪುತ್ರೈರದಿತಿಃ। ಉಪಪ್ರೈತ್ಪೂರ್ವ್ಯಂ ಯುಗಂ। ಪ್ರಜಾಯೈ ಮೃತ್ಯವೇ ತತ್। ಪರಾ ಮಾರ್ತಾಂಡಮಾಭರದಿತಿ। ತಾನನುಕ್ರಮಿಷ್ಯಾಮಃ। ಮಿತ್ರಶ್ಚ ವರುಣಶ್ಚ। ಧಾತಾ ಚಾರ್ಯಮಾ ಚ। ಅಗ್ಂಶಶ್ಚ ಭಗಶ್ಚ। ಇಂದ್ರಶ್ಚ ವಿವಸ್ವಾಗ್-ಶ್ಚೇತ್ಯೇತೇ॥**

(ತೈ. ಆ. ೧-೧೩-೩)

ಅದಿತಿಗೆ ಇದ್ದ ಎಂಟು ಮಂದಿ ಪುತ್ರರ ಹೆಸರನ್ನು ಹೇಳಿದೆ. ಮಿತ್ರ, ವರುಣ, ಧಾತಾ, ಅರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನ್ ಎಂಬುವರೇ ಆ ಎಂಟು ಜನರು ಎಂದಿದೆ. ಇದೇ ವಿಷಯವು ತೈತ್ತಿರೀಯ ಬ್ರಾಹ್ಮಣದಲ್ಲಿ—

**ಅದಿತಿಃ ಪುತ್ರಕಾಮಾ। ಸಾಧ್ಯೇಭ್ಯೋ ದೇವೇಭ್ಯೋ ಬ್ರಹ್ಮೌದನಮಪಚತ್। ತಸ್ಯಾ ಉಚ್ಛೇ-ಷಣಮದದುಃ। ತತ್ಪ್ರಾಶ್ನಾತ್। ಸಾ ರೇತೋಽಧತ್ತ। ತಸ್ಯೈ ಧಾತಾ ಚಾರ್ಯಮಾ ಚಾಜಾ-ಯೇತಾಂ। ಸಾ ದ್ವಿತೀಯಮಪಚತ್। ತಸ್ಯಾ ಉಚ್ಛೇಷಣಮದದುಃ। ತತ್ಪ್ರಾಶ್ನಾತ್। ಸಾ ರೇತೋಽಧತ್ತ। ತಸ್ಯೈ ಮಿತ್ರಶ್ಚ ವರುಣಶ್ಚಾಜಾಯೇತಾಂ। ಸಾ ತೃತೀಯಮಪಚತ್। ತಸ್ಯಾ ಉಚ್ಛೇಷಣಮದದುಃ। ತತ್ಪ್ರಾಶ್ನಾತ್। ಸಾ ರೇತೋಽಧತ್ತ। ತಸ್ಯಾ ಅಗ್ಂಶಶ್ಚ ಭಗಶ್ಚಾಜಾಯೇತಾಂ। ಸಾ ಚತುರ್ಥಮಪಚತ್। ತಸ್ಯಾ ಉಚ್ಛೇಷಣಮದದುಃ। ತತ್ಪ್ರಾ-ಶ್ನಾತ್। ಸಾ ರೇತೋಽಧತ್ತ। ತಸ್ಯಾ ಇಂದ್ರಶ್ಚ ವಿವಸ್ವಾಗ್ಂಶ್ಚಾಜಾಯೇತಾಂ॥**

(ತೈ. ಬ್ರಾ. ೧-೧-೯-೧,೨,೩)

ಎಂದು ಉಕ್ತವಾಗಿದೆ. ಅದಿತಿಯು ಎಂಟುಮಂದಿ ಪುತ್ರರನ್ನು ಪಡೆದ ವಿಷಯವು ಇಲ್ಲಿ ಸ್ಪಷ್ಟವಾಗಿ ವಿವರಿಸಿದೆ. ಈ ಎಂಟು ಮಂದಿಯಲ್ಲಿ ಮಿತ್ರ, ವರುಣ, ಆರ್ಯಮಾ ಎಂಬ ಮೂರು ಮಂದಿಯೇ ಋಗ್ವೇದದಲ್ಲಿ ವಿಶೇಷವಾಗಿ ಪ್ರಸಿದ್ಧರಾದವರು. ಋ. ಸಂ. ೨-೭ ನೇ ಸೂಕ್ತದಲ್ಲಿ ಮಿತ್ರ, ವರುಣ, ಆರ್ಯಮಾ ಎಂಬುವರ ಲೋಕೋಪಕಾರಕವಾದ ಸಾಹಸಕೃತ್ಯಗಳ ವಿಸ್ತಾರವಾದ ವರ್ಣನೆ ಇದೆ.

**ಮಿತ್ರಃ**—ಮಿತ್ರಶಬ್ದದ ನಿರ್ವಚನವನ್ನು ಯಾಸ್ಕರು ತಮ್ಮ ನಿರುಕ್ತದಲ್ಲಿ ಈ ರೀತಿ ತಿಳಿಸಿದ್ದಾರೆ—

**ಮಿತ್ರಃ ಪ್ರಮೀತೇಸ್ತ್ರಾಯತೇ। ಸಂಮಿನ್ವಾನೋ ದ್ರವತೀತಿ ವಾ। ಮೇದಯತೇರ್ವಾ।**

(ನಿ. ೧೦-೨೧)

ಮಿತ್ರ ಶಬ್ದಕ್ಕೆ ಅರ್ಥವೇನು ಎಂದರೆ—**ಮಿತ್ರಃ ಕಸ್ಮಾತ್। ಸ ಹಿ ಪ್ರಮೀತೇಃ ತ್ರಾಯತೇ। ಪ್ರಮೀತಿಃ ಮರಣಂ। ತತಃ ಸರ್ವಲೋಕಂ ತ್ರಾಯತೇ ವರ್ಷದ್ವಾರೇಣ।** ಪ್ರಮೀತಿ ಎಂದರೆ ಮರಣವು. ಲೋಕದಲ್ಲಿ ಜನರಿಗೆ ವೃಷ್ಟಿಯನ್ನುಂಟುಮಾಡಿ ಆ ಮೂಲಕ ಅನ್ನಾದ್ಯಾಹಾರಗಳನ್ನು ಒದಗಿಸಿ ಹಸಿವಿನಿಂದ ಉಂಟಾಗಬಹುದಾದ ಮರಣಭಯವನ್ನು ತಪ್ಪಿಸಿ ರಕ್ಷಿಸುತ್ತಾನಾದ್ದರಿಂದ ಈ ದೇವತೆಗೆ ಮಿತ್ರನೆಂದು ಹೆಸರು.

**ಸಮಂತತೋ ಮಿನ್ವಾನಃ ಉದಕೇನ ದ್ರವತಿ ಅಂತರಿಕ್ಷಲೋಕೇ।** ಈ ದೇವತೆಯು ಉದಕಕ್ಕೆ ಅಧಿಪತಿಯಾಗಿ ಅಂತರಿಕ್ಷದಲ್ಲಿ ಇದ್ದುಕೊಂಡು ಮೇಘಗಳ ಮೂಲಕ ಸುತ್ತಲೂ ಎಂದರೆ ಸಮಸ್ತ ಪ್ರದೇಶವನ್ನು ತೊಯ್ದುಹೋಗುವಂತೆ ಎಂದರೆ ನೀರಿನಿಂದ ನೆನೆಯುವಂತೆ ಮಾಡುವುದರಿಂದ ಈ ದೇವತೆಗೆ ಮಿತ್ರನೆಂದು ಹೆಸರು.

**ಅಥವಾ—ಸ್ನೇಹನಾರ್ಥಸ್ಯ ಸರ್ವಂ ಹ್ಯಸಾವುದಕೇನ ಸ್ನೇಹಯತಿ ।** ಈ ದೇವತೆಯು ಉದಕದಿಂದ ಸಮಸ್ತವನ್ನೂ ಅಂಟಿಕೊಳ್ಳುವಂತೆ ಎಂದರೆ ಒಂದಾಗಿ ಸೇರಿಕೊಳ್ಳುವಂತೆ ಮಾಡುತ್ತಾನಾದ್ದರಿಂದ ಈ ದೇವತೆಗೆ ಮಿತ್ರನೆಂದು ಹೆಸರು ಎಂದು ಮೂರು ವಿಧವಾದ ನಿಷ್ಪತ್ತಿಯನ್ನು ಹೇಳಿ ಅದನ್ನು ಸಮರ್ಥಿಸುವುದಕ್ಕಾಗಿ—

**ಮಿತ್ರೋ ಜನಾನ್ ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ ।**
**ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ ॥**

(ಋ. ಸಂ. ೩-೫೯-೧)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು. ಈ ಋಕ್ಕಿನಲ್ಲಿ ಮಿತ್ರನು ಕೃಷ್ಯಾದಿ ಕರ್ಮಗಳಿಗೆ ಸಹಾಯಕನಾಗಿ ವೃಷ್ಟ್ಯಾದಿಗಳನ್ನು ಸುರಿಸಿ ಜನರಿಗೆ ಅನ್ನಾದ್ಯಾಹಾರಗಳನ್ನು ಒದಗಿಸುತ್ತಾ ಭೂಲೋಕದ ಜನರನ್ನೂ ಸ್ವರ್ಗನಿವಾಸಿಗಳನ್ನೂ ಧರಿಸುವನು ಎಂದರೆ ಪೋಷಿಸುವನು. ಎಲೈ ಮನುಷ್ಯರೇ, ಇಂತಹ ಮಿತ್ರದೇವನಿಗೆ ಘೃತಮಿಶ್ರಿತವಾದ ಹವಿರಾದಿಗಳನ್ನು ಅರ್ಪಿಸಿ ಎಂದು ಮಿತ್ರನ ಅಸಾಧಾರಣ ಗುಣಗಳನ್ನೂ, ಲೋಕೋಪಕಾರವನ್ನೂ ಬಹು ಚೆನ್ನಾಗಿ ವರ್ಣಿಸಿದೆ. ಋಗ್ವೇದದಲ್ಲಿ ಮಿತ್ರನ ಪರವಾಗಿ ಇರುವ ಸೂಕ್ತವೆಂದರೆ ೯ ಋಕ್ಕುಗಳುಳ್ಳ ಈ ಸೂಕ್ತ ಮಾತ್ರ (ಋ. ಸಂ. ೩-೫೯) ಇತರ ಕಡೆ ಮಿತ್ರನು, ವರುಣ ಮೊದಲಾದ ಇತರ ದೇವತೆಗಳ ಜೊತೆಯಲ್ಲಿ ಸ್ತುತನಾಗಿದ್ದಾನೆ.

ಮಿತ್ರ ಮತ್ತು ವರುಣರ ಸಾಹಚರ್ಯವು ಬಹಳ ಹೆಚ್ಚಾಗಿರುವುದರಿಂದ ಮಿತ್ರನೊಬ್ಬನೇ ದೇವತೆಯಾಗಿವುಳ್ಳ ಸೂಕ್ತವು ಋಗ್ವೇದದಲ್ಲಿ ಹಿಂದೆ ಹೇಳಿದಂತೆ ಒಂದು ಮಾತ್ರವಿರುವುದು (ಋ. ಸಂ. ೩-೫೯) ಅಲ್ಲಿಯೂ ಆ ದೇವತೆಯ ಸ್ತುತಿಭಾಗವು ಅಸ್ಪಷ್ಟ. ಆದರೆ ಮೊದಲನೆಯ ಋಕ್ಕಿನಲ್ಲಿ ಮಾತ್ರ ಮಿತ್ರನ ವೈಶಿಷ್ಟ್ಯವು ಚೆನ್ನಾಗಿ ಹೇಳಲ್ಪಟ್ಟಿದೆ. ಅದೇ ಸೂಕ್ತದ ಐದನೆಯ ಋಕ್ಕಿನಲ್ಲಿ—

**ಮಹಾ ಆದಿತ್ಯೋ ನಮಸೋಪಸದ್ಯೋ ಯಾತಯಜ್ಜನೋ ಗೃಣತೇ ಸುಶೇವಃ ।**

(ಋ. ಸಂ. ೩-೫೯-೫

ಈ ಮಿತ್ರನನ್ನು ಮನುಷ್ಯರನ್ನೆಲ್ಲಾ ಒಟ್ಟಾಗಿ ಸೇರಿಸುವ ಮಹನೀಯನಾದ ಆದಿತ್ಯನೆಂದು ಕರೆದಿದೆ, ಈ ಅರ್ಥವನ್ನು ಕೊಡುವ **ಯಾತಯಜ್ಜನ** ಎಂಬ ಶಬ್ದವು—

**ವ್ರತೇನ ಸ್ಥೋ ಧ್ರುವಕ್ಷೇಮಾ ಧರ್ಮಣಾ ಯಾತಯಜ್ಜನಾ ।**

(ಋ. ಸಂ. ೫-೭೨-೨)

ಎಂಬ ಋಕ್ಕಿನಲ್ಲಿ ಮಿತ್ರಾವರುಣರ ಪರವಾಗಿಯೂ—

**ಮಿತ್ರಸ್ತಯೋರ್ವರುಣೋ ಯಾತಯಜ್ಜನೋಽರ್ಯಮಾ ಯಾತಯಜ್ಜನಃ ।**

(ಋ. ಸಂ. ೧-೧೩೬-೩)

ಎಂಬ ಋಕ್ಕಿನಲ್ಲಿ ಮಿತ್ರ, ವರುಣ, ಆರ್ಯಮಾ ಎಂದು ಮೂರುಮಂದಿಯ ಪರವಾಗಿಯೂ ಪ್ರಯುಕ್ತವಾಗಿದೆ. ಮೇಲೆ ಹೇಳಿದ ಋ. ಸಂ. ೩-೫೯ ನೇ ಸೂಕ್ತದ ಪ್ರಕಾರ ಮಿತ್ರನು ಸ್ವರ್ಗ ಮತ್ತು ಭೂಮಿಗಳಿಗೆ ಆಧಾರನಾಗಿದಾನೆ. ಮನುಷ್ಯರ ಐದು ಪಂಗಡಗಳು (ಪಂಚಜನಾಃ) ಅವನಿಗೆ ವಿಧೇಯರಾಗಿದಾರೆ, ಇತರ ದೇವತೆಗಳಿಗೆಲ್ಲಾ ಅವನು ಜೀವನಾಧಾರವಾಗಿದಾನೆ ಎಂದು ಮಿತ್ರನ ಗುಣವರ್ಣನೆ ಇದೆ. ಋ. ಸಂ. ೫-೮೧-೪ ರಲ್ಲಿ ಸವಿತೃ ಮತ್ತು ಮಿತ್ರರು ಒಂದೇ ಎಂದೂ, ವಾಜಸನೇಯಸಂಹಿತೆಯಲ್ಲಿ (ವಾ. ಸಂ. ೪-೩) ಮಿತ್ರನ ನಿಯಮಗಳನ್ನನುಸರಿಸಿಯೇ ವಿಷ್ಣುವು ಮೂರು ಹೆಜ್ಜೆಗಳನ್ನಿಟ್ಟನೆಂದೂ, ಋ ಸಂ. ೧೦-೮.೪ ರಲ್ಲಿ ಉಷಃಕಾಲಕ್ಕೆ ಮುಂಚೆ ಸ್ಥಾಪಿತನಾದ ಅಗ್ನಿಯು ಮಿತ್ರನನ್ನು ತಾನೇ

ತನಗೋಸ್ಕರ ಉತ್ಪತ್ತಿಮಾಡುತ್ತಾನೆಂದೂ, ಋ. ಸಂ. ೩-೫-೪ ರಲ್ಲಿ ದೀಪ್ತನಾದ ಅಗ್ನಿಯು ಜನಿತನಾದಾಗ ಮಿತ್ರನು ಎಂದೂ,

**ಮಿತ್ರೋ ಅಗ್ನಿರ್ಭವತಿ ಯತ್ಸಮಿದ್ಧೋ ಮಿತ್ರೋ ಹೋತಾ ವರುಣೋ ಜಾತವೇದಾಃ ।**
**ಮಿತ್ರೋ ಅಧ್ವರ್ಯುರಿಷಿರೋ ದಮೂನಾ ಮಿತ್ರಃ ಸಿಂಧೂನಾಮುತ ಪರ್ವತಾನಾಂ ॥**
(ಋ. ಸಂ. ೩-೫-೪)

ಎಂಬಲ್ಲಿ ಚೆನ್ನಾಗಿ ಪ್ರಜ್ವಲಿತನಾದ ಅಗ್ನಿಯೇ ಮಿತ್ರನೆಂದೂ, ಈ ಮಿತ್ರನೇ ಯಜ್ಞದಲ್ಲಿ ಹೋತೃವೂ, ಅಧ್ವರ್ಯುವೂ, ವರುಣನೂ, ಜಾತವೇದಸ್ಸೆಂಬ ಅಗ್ನಿಯೂ ಆಗಿರುವನೆಂದೂ, ಇವನು ನದಿಗಳಿಗೂ, ಪರ್ವತಗಳಿಗೂ ಮಿತ್ರ (ಸ್ನೇಹಿತ, ಹಿತಕಾರಿ) ನೆಂದೂ ಮಿತ್ರನ ಗುಣಗಳ ವರ್ಣನೆ ಇದೆ.

**ವರುಣಃ—ವರುಣೋ ವೃಣೋತೀತಿ ಸತಃ** (ನಿ. ೧೦-೨) ಮೇಘಸಮೂಹದಿಂದ ಆವೃತನಾದ್ದರಿಂದ ಈ ದೇವತೆಗೆ ವರುಣನೆಂದು ಹೆಸರು ಎಂದು ಯಾಸ್ಕರ ನಿರ್ವಚನವಿದೆ.

ವರುಣನು ಅತಿಶ್ರೇಷ್ಠನಾದ ದೇವತೆ, ಸಾಮರ್ಥ್ಯಾದಿಗಳಲ್ಲಿ ಇಂದ್ರನಿಗೆ ಸಮಾನನು. ವರುಣದೇವತಾಕವಾದ ಸೂಕ್ತಗಳು ಋಗ್ವೇದದಲ್ಲಿ ಹನ್ನೆರಡಿವೆ. ಆದರೆ ಮಿತ್ರಾವರುಣರನ್ನು ಒಟ್ಟಾಗಿ ಸ್ತುತಿಸುವ ಸೂಕ್ತಗಳು ಇಪ್ಪತ್ತುನಾಲ್ಕು ಇವೆ.

ವರುಣನಿಗೆ ಮಾನುಷದೇಹ, ಮಾನುಷವ್ಯಾಪಾರಗಳುಂಟು. ಆದರೆ ಭೌತಿಕಶರೀರ ಮತ್ತು ವ್ಯಾಪಾರಗಳಿಗಿಂತ ಹೆಚ್ಚಾಗಿ ಅವನ ನೈತಿಕವ್ಯಾಪಾರಾದಿಗಳ ಮತ್ತು ಕಾರ್ಯಗಳ ವರ್ಣನೆಯೇ ಹೆಚ್ಚಾಗಿ ಸೂಚಿತವಾಗಿದೆ. ಅವನಿಗೆ ಮುಖ, ಕಣ್ಣು, ತೋಳುಗಳು, ಕೈಗಳು ಮತ್ತು ಪಾದಗಳಿವೆ. ರಥ ನಡೆಯಿಸುತ್ತಾನೆ, ಕುಳಿತುಕೊಳ್ಳುತ್ತಾನೆ, ತಿನ್ನುತ್ತಾನೆ, ಪಾನಮಾಡುತ್ತಾನೆ ಇತ್ಯಾದಿ ಅವನ ಶರೀರವ್ಯಾಪಾರಗಳ ವಿವರಣೆ ಇದೆ. ಅಗ್ನಿ, ಮಿತ್ರ ಮತ್ತು ವರುಣರಿಗೆ ಸೂರ್ಯನೇ ನೇತ್ರನೆಂದು,

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।**
(ಋ. ಸಂ. ೧-೧೧೫-೧)

**ಉದುತ್ಯಚ್ಚಕ್ಷುರ್ಮಹಿ ಮಿತ್ರಯೋರಾँ ಏತಿ ಪ್ರಿಯಂ ವರುಣಯೋರದಬ್ಧಂ ।**
(ಋ. ಸಂ. ೬-೫೧-೧)

**ಉದ್ವಾಂ ಚಕ್ಷುರ್ವರುಣ ಸುಪ್ರತೀಕಂ ದೇವಯೋರೇತಿ ಸೂರ್ಯಸ್ತತನ್ವಾನ್ ।**
(ಋ. ಸಂ. ೭-೬೧-೧)

**ಚಕ್ಷುರ್ಮಿತ್ರಸ್ಯ ವರುಣಸ್ಯ ದೇವಶ್ಚರ್ಮೇವ ಯಃ ಸಮವಿವ್ಯಕ್ ತಮಾಂಸಿ ।**
(ಋ. ಸಂ. ೭-೬೩-೧)

**ನಮೋ ಮಿತ್ರಸ್ಯ ವರುಣಸ್ಯ ಚಕ್ಷಸೇ ಮಹೋ ದೇವಾಯ ತದೃತಂ ಸಪರ್ಯತ ।**
(ಋ. ಸಂ. ೧೦-೩೭-೧)

ಎಂಬ ಋಕ್ಕುಗಳಲ್ಲಿ ಸ್ಪಷ್ಟವಾಗಿ ಹೇಳಿದೆ. ಸೂರ್ಯನು ಇವನಿಗೆ ನೇತ್ರಪ್ರಾಯನೆಂಬ ವಿಷಯವು ಮಿತ್ರಾವರುಣ ದೇವತಾಕವಾದ ಸೂಕ್ತಗಳ ಮೊದಲನೆಯ ಋಕ್ಕಿನಲ್ಲಿಯೇ ಇರುವುದರಿಂದ ಮಿತ್ರಾವರುಣರ ಪ್ರಸ್ತಾಪ ಬಂದಾಗಲೆಲ್ಲಾ ಮೊದಲು ಗೋಚರವಾಗುವುದೇ ಈ ಅಂಶವೆಂದು ತೋರುತ್ತದೆ ಮತ್ತು ಋ. ಸಂ. ೭-೬೬-೧೦ ನೆಯ ಋಕ್ಕಿನಲ್ಲಿ

ಅರ್ಯಮಾ, ಮಿತ್ರ, ವರುಣರು ಸೂರ್ಯನೇತ್ರರೆಂದು ಹೇಳಿದೆ. ವರುಣನು ದೂರದೃಷ್ಟಿಯುಳ್ಳವನು (ಉರುಚಕ್ಷಸಂ) ಎಂದು ಋ. ಸಂ. ೧-೨೫-೫ ; ೧-೨೫-೧೬ ; ಮೊದಲಾದ ಋಕ್ಕುಗಳಲ್ಲಿ ಹೇಳಿದೆ.

**ಆ ನೋ ಬರ್ಹೀ ರಿಶಾದಸೋ ವರುಣೋ ಮಿತ್ರೋ ಅರ್ಯಮಾ ।**
**ಸೀದಂತು ಮನುಷೋ ಯಥಾ ॥**

(ಋ. ಸಂ. ೧-೨೬-೪)

**ವ್ರತೇನ ಸ್ಥೋ ಧ್ರುವಕ್ಷೇಮಾ ಧರ್ಮಣಾ ಯಾತಯಜ್ಜನಾ ।**
**ನಿ ಬರ್ಹಿಷಿ ಸದತಂ ಸೋಮಪೀತಯೇ ॥**

(ಋ. ಸಂ. ೫-೭೨-೨)

ಇತ್ಯಾದಿ ಋಕ್ಕುಗಳಲ್ಲಿ ಸೋಮಪಾನಕ್ಕಾಗಿ ಮಿತ್ರ, ವರುಣ, ಅರ್ಯಮರನ್ನು ಯಜ್ಞವೇದಿಯಲ್ಲಿ ಹಾಸಿರುವ ದರ್ಭೆಯ ಮೇಲೆ ಬಂದು ಕುಳಿತುಕೊಳ್ಳಬೇಕೆಂದು ಪ್ರಾರ್ಥಿಸಲಾಗಿದೆ.

**ಯದೀ ಸಖಾಯಾ ಸಖ್ಯಾಯ ಸೋಮೈಃ ಸುತೇಭಿಃ ಸುಪ್ರಯಸಾ ಮಾದಯೈತೇ ॥**

(ಋ. ಸಂ. ೪-೪೧-೩)

ಇತ್ಯಾದಿ ಋಕ್ಕುಗಳಲ್ಲಿ ವರುಣನು ಇಂದ್ರಾದಿ ದೇವತೆಗಳೊಡನೆ ಸೋಮಪಾನಮಾಡುತ್ತಾನೆಂದು ಹೇಳಿದೆ.

**ಬಿಭ್ರದ್ದ್ರಾಪಿಂ ಹಿರಣ್ಯಯಂ ವರುಣೋ ವಸ್ತ ನಿರ್ಣಿಜಂ ।**
**ಪರಿಸ್ಪಶೋ ನಿಷೇದಿರೇ ॥**

(ಋ. ಸಂ. ೧-೨೫-೧೩)

ಎಂಬ ಋಕ್ಕಿನಲ್ಲಿ ವರುಣನು ಸುವರ್ಣಮಯವಾದ ಮೇಲುಹೊದಿಕೆ ಅಥವಾ ನಿಲುವಂಗಿಯನ್ನೂ ಮತ್ತು ಹೊಳೆಯುವ ಉಡುಪನ್ನೂ ಧರಿಸುತ್ತಾನೆಂಬ ವರ್ಣನೆ ಇದೆ. ವರುಣನ ರಥವು ಸುವರ್ಣಮಯವಾದುದು ಮತ್ತು ಸೂರ್ಯನಂತೆ ಕಾಂತಿಯುಕ್ತವಾದುದು ಮತ್ತು ಅದರಲ್ಲಿ ಅಶ್ವಪ್ರಚೋದಕವಾದ ಚಾವಟಿಗಳಿವೆ. ಮಿತ್ರಾವರುಣರು ಆಕಾಶದಲ್ಲಿ ಬಹಳ ಎತ್ತರವಾದ ಪ್ರದೇಶದಲ್ಲಿ ರಥಾರೋಹಣ ಮಾಡುತ್ತಾರೆ. (ಋ. ಸಂ. ೫-೬೩-೧) ಇತ್ಯಾದಿ ವರ್ಣನೆಗಳಿವೆ.

ಮಿತ್ರಾವರುಣರ ವಾಸಗೃಹವು ಸುವರ್ಣಮಯವಾದುದು ಮತ್ತು ಅದು ಮೇಲುಲೋಕದಲ್ಲಿದೆ ಮತ್ತು ವರುಣನು ತನ್ನ ಪ್ರಾಸಾದದಲ್ಲಿ ಕುಳಿತು—

**ನಿ ಷಸಾದ ಧೃತವ್ರತೋ ವರುಣಃ ಪಸ್ತ್ಯಾಸ್ವಾ । ಸಾಮ್ರಾಜ್ಯಾಯ ಸುಕ್ರತುಃ ।**

**ಅತೋ ವಿಶ್ವಾನ್ಯದ್ಭುತಾ ಚಿಕಿತ್ವಾँ ಅಭಿ ಪಶ್ಯತಿ । ಕೃತಾನಿ ಯಾ ಚ ಕರ್ತ್ವಾ ॥**

(ಋ. ಸಂ. ೧-೨೫-೧೦, ೧೧)

ಪ್ರಪಂಚದಲ್ಲಿ ನಡೆಯುವುದನ್ನೆಲ್ಲಾ ನೋಡುತ್ತಾನೆ. ಮಿತ್ರಾವರುಣರ ವಾಸಸ್ಥಾನವು ಬಹಳ ದೊಡ್ಡದು, ಬಹಳ ಎತ್ತರವಾದುದು, ಸಹಸ್ರಸ್ತಂಭಗಳನ್ನಾಶ್ರಯಿಸಿ ದೃಢವಾಗಿದೆ ಮತ್ತು ಅವರ ಮನೆಗೆ ಸಹಸ್ರದ್ವಾರಗಳಿವೆ (ಋ.ಸಂ. ೭-೮೮-೫) ಸರ್ವದರ್ಶಿಯಾದ ಸೂರ್ಯನು ತನ್ನ ವಾಸಸ್ಥಾನದಿಂದ ಹೊರಟು ಮಿತ್ರಾವರುಣರ ಮನೆಗೆ ಮನುಷ್ಯರ ಕೆಲಸಗಳನ್ನು ತಿಳಿಸಲು ಹೋಗುತ್ತಾನೆ ಮತ್ತು ಅವರ ಪ್ರಿಯವಾದ ಮನೆಯನ್ನು ಪ್ರವೇಶಿಸುತ್ತಾನೆ ಇತ್ಯಾದಿ ವರ್ಣನೆಗಳೂ ಇವೆ.

ವರುಣನು ಒಂಟಿಯಾಗಿ ಅಥವಾ ಮಿತ್ರಸಹಿತನಾಗಿ ಇತರ ದೇವತೆಗಳಂತೆ ಅನೇಕಕಡೆ ರಾಜನೆಂದು ಕರೆಯಲ್ಪಟ್ಟಿದ್ದಾನೆ.

**ಅಬುಧ್ನೇ ರಾಜಾ ವರುಣೋ ವನಸ್ಯೋರ್ಧ್ವಂ ಸ್ತೂಪಂ ದದತೇ ಪೂತದಕ್ಷಃ ।**

(ಋ. ಸಂ. ೧-೨೪-೭)

**ತ್ವಂ ವಿಶ್ವೇಷಾಂ ವರುಣಾಸಿ ರಾಜಾ ಯೇ ಚ ದೇವಾ ಅಸುರ ಯೇ ಚ ಮರ್ತಾಃ ।**

(ಋ. ಸಂ. ೨-೨೭.೧೦)

**ತೇನ ವಿಶ್ವಸ್ಯ ಭುವನಸ್ಯ ರಾಜಾ ಯವಂ ನ ವೃಷ್ಟಿರ್ವ್ಯುನತ್ತಿ ಭೂಮ ।**

(ಋ. ಸಂ. ೫-೮೫-೩)

ಇತ್ಯಾದಿ ಋಕ್ಕುಗಳಲ್ಲಿ ವರುಣನು ಮನುಷ್ಯರಿಗೆ ಮಾತ್ರವೇ ಅಲ್ಲ. ದೇವತೆಗಳಿಗೂ, ಸಕಲ ಲೋಕಗಳಿಗೂ ರಾಜನೆಂದು ಹೇಳಿದೆ. ವರುಣನಲ್ಲದೆ ಇಂದ್ರ, ಯಮ, ಸೋಮ ಮೊದಲಾದ ದೇವತೆಗಳಿಗೂ ರಾಜನೆಂಬ ಗೌರವಸೂಚಕವಾದ ಹೆಸರಿದೆ.

ಇಂದ್ರನ ಸಂಬಂಧವಾದ ಕಥೆಗಳು ಅನೇಕವಿವೆ. ಆದರೆ ವರುಣನ ವಿಷಯದಲ್ಲಿ ಇದಕ್ಕೆ ತೀರಾ ವಿರುದ್ಧವಾಗಿದೆ. ಒಂದಾದರೂ ಕಥೆಗಳಿಲ್ಲ. ವರುಣನು ಭೌತಿಕ ಮತ್ತು ನೈತಿಕವಿಧಿಗಳ(**ವರುಣಸ್ಯ ವ್ರತಾನಿ**) ನಿಯಾಮಕನೆಂದು ಬಹಳ ವಾಗಿ ಹೊಗಳಿದೆ. ಮಿತ್ರಾವರುಣರ ದೈವಶಕ್ತಿಯನ್ನು **ಮಾಯಾ** ಎಂಬ ಪದದಿಂದ ವರ್ಣಿಸಿದೆ. ಇದು ದೇವತೆಗಳಿಗೆ ಅನ್ವಯಿಸಿದರೆ ಒಳ್ಳೆಯದನ್ನು ಮಾಡಲು ಅವರಿಗಿರುವ ಗೂಢವಾದ ಶಕ್ತಿಯೆಂತಲೂ, ರಾಕ್ಷಸರಿಗೆ ಅನ್ವಯಿಸುವ ಸಂದರ್ಭ ದಲ್ಲಿ ಅದೇ ಪದಕ್ಕೆ ಕೆಟ್ಟದ್ದನ್ನು ಮಾಡಲು ಅವರಿಗಿರುವ ಕಟುವಾದ ಶಕ್ತಿ ಎಂತಲೂ ಅರ್ಥ. ಒಳ್ಳೆಯ ಅರ್ಥದಲ್ಲಿ ಮಿತ್ರಾವರುಣರಿಗೆ ಈ ಪದವು ಸಲ್ಲುತ್ತದೆ. ಕೆಟ್ಟ ಅರ್ಥದಲ್ಲಿ ರಾಕ್ಷಸರಿಗೆ ಅನ್ವಯಿಸುತ್ತದೆ- ಅಸುರಶಬ್ದಾರ್ಥದಂತೆ ಮಾಯಾಶಬ್ದಕ್ಕೂ ಎರಡರ್ಥಗಳಲ್ಲಿಯೂ ಪ್ರಯೋಗಪಿದೆ. ತನ್ನಲ್ಲಿ ನಿಗೂಢವಾದ ಈ ಮಾಯಾಶಕ್ತಿಯಿಂದ ವರುಣನು ವಾಯುಮಂಡಲದಲ್ಲಿ ನಿಂತು ಅಳತೆಕಡ್ಡಿಯಿಂದ ಅಳೆಯುವಂತೆ ಸೂರ್ಯನಿಂದ ಭೂಮಿಯನ್ನು ಅಳೆಯುತ್ತಾನೆ. ಸೂರ್ಯನು ಅಂತರಿಕ್ಷವನ್ನು ದಾಟುವಂತೆ ಮಾಡಿ ಅವನನ್ನು ಮಳೆಮೋಡಗಳಿಂದ ಮುಸಕಾಗುವಂತೆ ಮಾಡುತ್ತಾನೆ. ಆಗ ಮಧುಮಿಶ್ರಿತವಾದ (ಸಿಹಿಯಾದ) ಹನಿಗಳು ಉದುರುತ್ತವೆ (ಋ. ಸಂ. ೫-೬೩-೪). ಆಕಾಶವು ಮಳೆಗರೆಯುವಂತೆ ಮಾಡುತ್ತಾನೆ. ಆದ್ದರಿಂದ ಈ **ಮಾಯಾ** ಎಂಬ ಪದವು (ಋ. ಸಂ. ೬-೪೮-೧೪; ೭-೨೮-೪; ೧೦-೯೯-೧೦; ೧೦-೧೪೭-೫ ಮೊದಲಾದ ಋಕ್ಕುಗಳಲ್ಲೆಲ್ಲಾ ದೇವತೆಗಳಲ್ಲಿ ಮುಖ್ಯವಾಗಿ ವರುಣನಿಗೇ ಹೇಳಿದೆ.

ಪ್ರಕೃತಿನಿಯಮಗಳನ್ನು ವಿಧಿಸುವವನು ವರುಣನು. ಅವನೇ ಭೂಮಿ ಮತ್ತು ಸ್ವರ್ಗವನ್ನು ಸ್ಥಾಪಿಸಿದನು ಮತ್ತು

**ಆಸೀದದ್ವಿಶ್ವಾ ಭುವನಾನಿ ಸಂರಾಡ್ವಿಶ್ವೇತ್ತಾನಿ ವರುಣಸ್ಯ ವ್ರತಾನಿ ।**

(ಋ. ಸಂ. ೮-೪೨-೧)

ಎಂಬ ಋಕ್ಕಿನಲ್ಲಿ ವರುಣನು ಸಮಸ್ತ ಲೋಕಗಳಲ್ಲಿಯೂ ವಾಸಮಾಡುವನೆಂದೂ, ಅವನ ನಿಯಮಾದಿಗಳು ಅಲ್ಲೆಲ್ಲಾ ಆಚರಿಸಲ್ಪಡುವುವೆಂದೂ,

**ತಿಸ್ರೋ ದ್ಯಾವೋ ನಿಹಿತಾ ಅಂತರಸ್ಮಿನ್ ತಿಸ್ರೋ ಭೂಮೀರುಪರಾಃ ಷಡ್ವಿಧಾನಾಃ ।**

(ಋ. ಸಂ. ೭-೮೭-೫)

ಎಂಬಲ್ಲಿ ಮೂರು ಊರ್ಧ್ವಲೋಕಗಳೂ, ಮೂರು ಭೂಲೋಕಗಳೂ (ಅಧೋಲೋಕಗಳು) ಅವನ ವಶದಲ್ಲಿವೆಯೆಂದೂ ಹೇಳಿದೆ. ವರುಣ ಮತ್ತು ಮಿತ್ರರು ಪ್ರಪಂಚವೆಲ್ಲವನ್ನೂ ಆಳುತ್ತಾರೆ (ಋ. ಸಂ. ೫-೬೩-೭). ಅವರೇ ಸಮಸ್ತ ಜಗತ್ತಿಗೂ ರಕ್ಷಕರು (ಋ. ಸಂ. ೨-೨೭-೪). ವರುಣನು ಸ್ವರ್ಗ, ಭೂಮಿ, ಆಕಾಶಗಳಿಗೆ ಆಧಾರಭೂತನಾಗಿದ್ದಾನೆ

(ಋ. ಸಂ. ೫-೬೯-೧, ೪) ಆವನು ಉದಕದಲ್ಲಿ ಅಗ್ನಿಯನ್ನೂ, ಆಕಾಶದಲ್ಲಿ ಸೂರ್ಯನನ್ನೂ, ಕಲ್ಲಿನಮೇಲೆ ಸೋಮವನ್ನೂ ಇಟ್ಟಿದ್ದಾನೆ. ಸೂರ್ಯನಿಗೋಸ್ಕರ ಅಗಲವಾದ ದಾರಿಯನ್ನು ಮಾಡಿದ್ದಾನೆ. ವರುಣ, ಮಿತ್ರ ಮತ್ತು ಅರ್ಯಮರು ಸೂರ್ಯನಿಗೋಸ್ಕರ ದಾರಿಯನ್ನು ಬಿಡಿಸುತ್ತಾರೆ (ಋ. ಸಂ. ೭-೬೦-೪) ಇತ್ಯಾದ್ಯನೇಕ ಋಕ್ಕುಗಳಲ್ಲಿ ವರುಣನ ಅಧಿಕಾರವರ್ಣನೆ ಇದೆ.

ತೈತ್ತಿರೀಯ ಸಂಹಿತೆಯಲ್ಲಿ (ತೈ. ಸಂ. ೬-೪-೮-೪) **ಮಿತ್ರೋಽಹರಜನಯದ್ವರುಣೋ ರಾತ್ರಿಂ** ಎಂದರೆ ಮಿತ್ರನು ಹಗಲನ್ನೂ, ವರುಣನು ರಾತ್ರಿಯನ್ನೂ ಸೃಷ್ಟಿಮಾಡಿದರೆಂದಿದೆ. ಆದ್ದರಿಂದ **ಮೈತ್ರಂ ವಾ ಅಹಃ। ವಾರುಣೀ ರಾತ್ರಿಃ**— ಎಂದರೆ ಮಿತ್ರನು ಹಗಲಿಗೆ ಅಧಿಪತಿಯೆಂದೂ, ವರುಣನು ರಾತ್ರಿಗೆ ಅಧಿಪತಿಯೆಂದೂ ಅನೇಕ ಕಡೆಗಳಲ್ಲಿ ಹೇಳಿದೆ. (ತೈ. ಸಂ. ೨-೧-೭-೪) ಒಂದು ಸ್ಥಳದಲ್ಲಿ ವರುಣನು ಋತುಗಳನ್ನು ವಿಭಜಿಸಿದನೆಂದು ಹೇಳಿದೆ.

**ವೇದ ಮಾಸೋ ಧೃತವ್ರತೋ ದ್ವಾದಶ ಪ್ರಜಾವತಃ। ವೇದಾ ಯ ಉಪಜಾಯತೇ।**

(ಋ. ಸಂ. ೧-೨೫-೮)

ಎಂಬಲ್ಲಿ ವರುಣನಿಗೆ ಹನ್ನೆರಡು ತಿಂಗಳೂ ತಿಳಿದಿವೆಯೆಂದೂ,

**ವಿ ಯೇ ದಧುಃ ಶರದಂ ಮಾಸಮಾದಹರ್ಯಜ್ಞಮಕ್ತುಂ ಚಾದೃಚಂ।**
**ಅನಾಪ್ಯಂ ವರುಣೋ ಮಿತ್ರೋ ಅರ್ಯಮಾ ಕ್ಷತ್ರಂ ರಾಜಾನ ಆಶತ॥**

(ಋ. ಸಂ. ೭-೬೬-೧೧)

ಎಂಬ ಋಕ್ಕಿನಲ್ಲಿ ಮಿತ್ರ, ವರುಣ, ಅರ್ಯಮರು, ಶರತ್ಕಾಲ, ತಿಂಗಳು, ಹಗಲು ಮತ್ತು ರಾತ್ರಿಗಳನ್ನು ವಿಂಗಡಿಸಿದರು ಎಂದು ಹೇಳಿದೆ.

ಉದಕವನ್ನು ಕ್ರಮಪಡಿಸುವವನೂ ಅವನೇ ಎಂದು ಅನೇಕ ಕಡೆಗಳಲ್ಲಿ ಹೇಳಿದೆ. ನದಿಗಳು ಹರಿಯುವಂತೆ ಮಾಡಿದವನೂ ಅವನೇ. ಅವನ ಅಪ್ಪಣೆಯ ಮೇರೆಯೇ ಅವು ಸತತವಾಗಿ ಪ್ರವಹಿಸುತ್ತವೆ. (ಋ. ಸಂ. ೨-೨೮-೪) ನದಿಗಳು ವೇಗವಾಗಿ ಸಮುದ್ರದೊಳಕ್ಕೆ ನೀರು ತಂದು ಸುರಿಯುತ್ತಿದ್ದರೂ ಅದನ್ನು ತುಂಬದಿರುವುದು ಅವನ ಹುದುಗಿದ ಶಕ್ತಿಯಿಂದಲೇ. (ಋ. ಸಂ. ೫-೮೫-೬) ವರುಣ ಮತ್ತು ಮಿತ್ರರು ನದಿಗಳಿಗೆ ಒಡೆಯರು. ವರುಣನು ಸಾಗರಗಳಿಗೆ ಒಡೆಯನೆಂಬುದು ಪ್ರಸಿದ್ಧವಾದ ಅಂಶವಾದರೂ ಋಗ್ವೇದದಲ್ಲಿ ಬರುವುದು ಬಹಳ ಅಪರೂಪ. ಪ್ರಾಯಶಃ ಇದು ಅಮುಖ್ಯವೆಂಬುದೇ ಇದಕ್ಕೆ ಕಾರಣವಿರಬಹುದು. ಪುರಾಣಾದಿಗಳಲ್ಲಿ ವರುಣನು ಜಲಾಧಿಪತಿಯೆಂದು ಪ್ರಸಿದ್ಧನಾಗಿದ್ದಾನೆ. ಮತ್ತು ವರುಣನು ಅಷ್ಟದಿಕ್ಪಾಲಕರಲ್ಲಿ ಒಬ್ಬನಾಗಿ ಪಶ್ಚಿಮದಿಕ್ಕಿಗೆ ಅಧಿಪತಿಯೆಂಬುದು ಪುರಾಣಾದಿಗಳಲ್ಲಿ ಹೇಳಿರುವ ವಿಷಯ. ಋಗ್ವೇದದಲ್ಲಿ ಅದಕ್ಕೆ ಯಾವ ಸಮರ್ಥನೆಯೂ ಇಲ್ಲ. ಸಾಧಾರಣವಾಗಿ ವರುಣನಿಗೆ ಸಂಬಂಧವಿರುವುದೆಲ್ಲಾ ವಾಯುಮಂಡಲದೊಡನೆ ಇರುವ ನೀರಿನೊಡನೆಯೇ. ವೃಷ್ಟಿಗಾಗಿ ಪ್ರಾರ್ಥಿಸಲ್ಪಡುವ ದೇವತೆಗಳಲ್ಲಿ ವರುಣ ಮತ್ತು ಮಿತ್ರರೇ ಪ್ರಮುಖರು. ಪರ್ವತಗಳೆಲ್ಲಾ ಮೋಡಗಳಿಂದ ಆವೃತವಾಗಿರುವಾಗ ಬುಡಮೇಲಾದ ಬಾನಿಯಿಂದ (ಮೋಡದಿಂದ) ಸ್ವರ್ಗ, ಭೂಮಿ ಮತ್ತು ಆಕಾಶಗಳಿಗೆ ನೀರ್ಗರೆದು ಭೂಮಿಯನ್ನೆಲ್ಲಾ ವರುಣನು ತೇವವನ್ನಾಗಿ ಮಾಡುವನು ಎಂದು ಋ ಸಂ. ೫-೮೫-೩,೪ ನೆಯ ಋಕ್ಕುಗಳಲ್ಲಿ ಹೇಳಿದೆ. ಒಂದು ಇಡೀ ಸೂಕ್ತವೇ (ಎಂದರೆ ಋ. ಸಂ. ೫-೬೩ ನೆಯ ಸೂಕ್ತವು) ಅವರ ಮಳೆಗರೆಯುವ ಶಕ್ತಿಯನ್ನು ಸೂಚಿಸುತ್ತದೆ. ಯಜುರ್ವೇದ ಸಂಹಿತೆಯಲ್ಲಿ (ತೈ. ಸಂ. ೫-೫-೪-೧) **ಆಪೋ ವರುಣಸ್ಯ ಪತ್ನ ಯ ಆಸನ್**—

ನೀರುಗಳು ವರುಣನ ಪತ್ನಿಯರೆಂದೂ (ತೈ. ಸಂ. ೬-೪-೩-೨) **ಮಿತ್ರಾ ವರುಣೌ ವಾ ಅಪಾಂ ನೇತಾರೌ**—ಮಿತ್ರಾ ವರುಣರು ನೀರಿಗೆ ನಾಯಕರು ಎಂದೂ ಹೇಳಿದೆ.

ವರುಣನ ಶಾಸನಗಳು ಚೆನ್ನಾಗಿ ಸ್ಥಾಪಿತವಾಗಿವೆಯೆಂದು ಪದೇಪದೇ ಹೇಳಲ್ಪಟ್ಟಿವೆ. ಈ ಕಾರಣದಿಂದಲೇ ಅವನಿಗೆ **ಧೃತವ್ರತ** ಎಂದು ಹೆಸರು. ಮಿತ್ರಾವರುಣರಿಬ್ಬರಿಗೂ ಈ ವಿಶೇಷಣವು ಸಂದಿದೆ.

**ಪರಿ ಧಾಮಾನಿ ಮರ್ಮೃಶದ್ವರುಣಸ್ಯ ಪುರೋ ಗಯೇ ವಿಶ್ವೇ ದೇವಾ ಅನು ವ್ರತಂ ನಭಂತಾಮ-ನ್ಯಕೇ ಸಮೇ ||**

(ಋ. ಸಂ. ೮-೪೧-೭)

**ನ ವಾಂ ದೇವಾ ಅಮೃತಾ ಆ ಮಿನಂತಿ ವ್ರತಾನಿ ಮಿತ್ರಾವರುಣಾ ಧ್ರುವಾಣಿ ||**

(ಋ. ಸಂ. ೫-೬೯-೪)

ಇತ್ಯಾದಿ ಋಕ್ಕುಗಳಲ್ಲಿ ದೇವತೆಗಳೇ ಮಿತ್ರಾವರುಣಾರ್ಯಮರ ಅಪ್ಪಣೆಗಳನ್ನು ಪಾಲಿಸುತ್ತಾರೆಂದೂ ಅನಾದಿ ದೇವತೆಗಳೂ ಕೂಡ ಅವರ ಧೃತವ್ರತಗಳನ್ನು ಮೀರಲಾರರೆಂದೂ ಹೇಳಿದೆ. ಮಿತ್ರಾವರುಣರ ನಿಯಮ (ಋತ) ಮತ್ತು ಬೆಳಕಿಗೆ ನಿಯಾಮಕರು. ಈ ಶಾಸನಗಳ ಬಲದಿಂದಲೇ ಅವರು ನಿಯಮಗಳಿಗೆ ಬೆಂಬಲ ಕೊಡಲು ಸಾಧ್ಯವಾಗಿದೆ. ಈ ಗುಣವು ವಿಶೇಷವಾಗಿ ಇವರಿಬ್ಬರಲ್ಲಿ, ಒಂದೊಂದುವೇಳೆ ಆದಿತ್ಯರಲ್ಲಿ ಅಥವಾ ಇತರ ಸಾಧಾರಣ ದೇವತೆಗಳಲ್ಲಿಯೂ ಕಂಡುಬರುತ್ತದೆ. ಅವರು ಸತ್ಯ (ಋತ) ಮತ್ತು ನ್ಯಾಯವನ್ನು ಅಭಿವೃದ್ಧಿಗೊಳಿಸುವವರು. **ಋತಸ್ಯ ಗೋಪಾಃ** ಎಂದರೆ ನಿಯಮಗಳನ್ನು ಪಾಲಿಸುವವರು (ಅಥವಾ ಪಾಲಿಸುವಂತೆ ಮಾಡುವವರು) ಎಂಬ ವಿಶೇಷಣವು ಮಿತ್ರಾವರುಣರಿಗೆ ಅನೇಕವೇಳೆ ಪ್ರಯೋಗಿಸಿರುವುದು ಕಂಡುಬರುತ್ತದೆ.

ವರುಣನ ಶಕ್ತಿಯು ಅಗಾಧವಾದುದು. ಹಾರುವ ಪಕ್ಷಿಗಳಾಗಲೀ, ಹರಿಯುವ ನದಿಗಳಾಗಲೀ ಅವನ ರಾಜ್ಯದ ಗಡಿಯ ಮೇರೆಯನ್ನು ಸೇರಲಾರವು; ಅವನ ಶಕ್ತಿಯನ್ನು ಮೀರಲಾರವು; ಅವನ ಕೋಪವನ್ನು ತಡೆಯಲಾರವು. ಮಿತ್ರಾವರುಣರ ಸೀಮೆಯ ಎಲ್ಲೆಕಟ್ಟನ್ನು ಆಕಾಶ ಮತ್ತು ನದಿಗಳು ಕೂಡ ತಲಪಿಲ್ಲ. ಸಮಸ್ತವೂ ವರುಣನಲ್ಲಿಯೇ ಅಡಗಿವೆ. ಎಲ್ಲಾ ಪ್ರಾಣಿಗಳ ವಸತಿಗಳೂ, ಮೂರು ಸ್ವರ್ಗಲೋಕಗಳೂ, ಮೂರು ಭೂಲೋಕಗಳೂ ಅವನಲ್ಲಿಯೇ ನಿಹಿತವಾಗಿವೆ. ವರುಣನು ಸರ್ವಜ್ಞನು. ಆಕಾಶದಲ್ಲಿ ಪಕ್ಷಿಗಳ ಹಾರಾಟ, ಸಮುದ್ರದಲ್ಲಿ ನಾವೆಗಳ ಸಂಚಾರ, ದೂರಗಾಮಿಯಾದ ವಾಯುವಿನ ಗತಿ, ಇವೆಲ್ಲವೂ ಅವನಿಗೆ ತಿಳಿದಿದೆ. ಹಿಂದೆ ಕಳೆದುಹೋದ ಅಥವಾ ಮುಂದೆ ಬರುವ ಎಲ್ಲಾ ಪದಾರ್ಥಗಳನ್ನೂ ಅವನು ನೋಡುತ್ತಾನೆ. ಮನುಷ್ಯರ ಸತ್ಯಾಸತ್ಯಕರ್ಮಗಳ ಸಾಕ್ಷಿಯಾಗಿದ್ದಾನೆ. ಪ್ರತಿಯೊಬ್ಬ ಮನುಷ್ಯನು ಮಾಡುವ ಕಾರ್ಯಗಳೂ, ಯೋಚನೆಗಳೂ, ಉಪಾಯಗಳೂ ಎಲ್ಲವೂ ವರುಣನಿಗೆ ತಿಳಿಯುತ್ತವೆ. ಸ್ವರ್ಗ ಮತ್ತು ಭೂಲೋಕಗಳಲ್ಲಿ ಮತ್ತು ಅವುಗಳಿಂದಾಚೆ ಇರುವದೆಲ್ಲವನ್ನೂ ಅವನು ಗ್ರಹಿಸಬಲ್ಲನು. ಆಕಾಶದಾಚೆ ಎಷ್ಟೋ ದೂರ ಓಡಿಹೋದರೂ ಯಾರೂ ವರುಣನ ದೃಷ್ಟಿಪಥವನ್ನು ಬಿಟ್ಟುಹೋಗಲಾಗುವುದಿಲ್ಲ.

ನೀತಿನಿಯಾಮಕನಾದುದರಿಂದ ವರುಣನಿಗೆ ಪಾಪವೆಂದರೆ ಬಹಳ ಕೋಪಬರುತ್ತದೆ, ಅವನ ನಿಯಮಗಳನ್ನುಲ್ಲಂಘಿಸಿದರೂ ಕೋಪ, ಇವೆರಡಕ್ಕೂ ಅವನ್ನು ಬಹಳ ಕ್ರೂರಶಿಕ್ಷೆಯನ್ನು ವಿಧಿಸುತ್ತಾನೆ. ಪಾಪಿಗಳನ್ನು ಬಂಧಿಸುವ ವರುಣನ ಪಾಶವು ಋ. ಸಂ. ೧-೨೪-೧೫; ೧-೨೫-೧೧, ೬-೭೪ ೪; ೧೦-೮೫-೨೪ ಮೊದಲಾದ ಋಕ್ಕುಗಳಲ್ಲಿ ಉಕ್ತವಾಗಿದೆ. ಆ ಪಾಶವು ಅನೃತವಾದಿಯನ್ನು ಬಂಧಿಸುತ್ತದೆ. ಸತ್ಯವಾದಿಯನ್ನು ಬಿಟ್ಟುಬಿಡುತ್ತದೆ.

**ಯುವೋ ರಾಷ್ಟ್ರಂ ಬೃಹದಿನ್ವತಿ ದ್ಯೌರ್ಯೌ ಸೇತೃಭಿರರಜ್ಜುಭಿಃ ಸಿನೀಥಃ |**
**ಪರಿ ನೋ ಹೇಳೋ ವರುಣಸ್ಯ ವೃಜ್ಯಾ ಉರುಂ ನ ಇಂದ್ರಃ ಕೃಣವದು ಲೋಕಂ ||**

(ಋ. ಸಂ. ೭-೮೪-೨)

ಎಂಬ ಋಕ್ಕಿನಲ್ಲಿ ಇಂದ್ರಸಹಚರಿತನಾದ ವರುಣನು ಹಗ್ಗವಲ್ಲದ ಬಂಧನಗಳಿಂದ ಕಟ್ಟುತ್ತಾನೆ ಎಂದು ಹೇಳಿದೆ. ಈ ಪಾಶವೆಂಬ ಶಬ್ದವು ಇಡೀ ಋಗ್ವೇದದಲ್ಲಿ ಒಂದುಕಡೆ ಮಾತ್ರ ಅಗ್ನಿದೇವತಾಕವಾದ ಮಂತ್ರದಲ್ಲಿ ಬಂದಿದೆ. ಅದೂ ಅವನ ಭಕ್ತರನ್ನು ಬಂಧಿಸಿರುವ ಪಾಶವನ್ನು ಬಿಡಿಸು ಎಂದು ಪ್ರಾರ್ಥಿಸುವ ಸಂದರ್ಭದಲ್ಲಿ. ಆದ್ದರಿಂದ ಈ ಪಾಶಬಂಧನ ಮತ್ತು ಮೋಚನ (ಪಾಶಬಿಡಿಸುವ) ಕಾರ್ಯಗಳು ವರುಣನಿಗೆ ಮಾತ್ರ ಸಂಬಂಧಿಸಿದೆಯೆಂದು ಹೇಳಬಹುದ ಮಿತ್ರನಿಂದ ಕೂಡಿದ ವರುಣನು ಅನೃತವನ್ನು ಓಡಿಸುವವನು, ದ್ವೇಷಿಸುವವನು ಮತ್ತು ಶಿಕ್ಷಿಸುವವನು. ಮಿತ್ರಾವರುಣರು ತಮ್ಮ ಪೂಜೆಯ ವಿಷಯದಲ್ಲಿ ತಾತ್ಸಾರದಿಂದಿರುವವರನ್ನು ಶಿಕ್ಷಿಸುತ್ತಾರೆ. ಆದರೆ ವರುಣನು ಪಶ್ಚಾತ್ತಾಪಪಡುವವರನ್ನು ಉಳಿಸಿಕೊಡುತ್ತಾನೆ ಮತ್ತು ತನ್ನ ಆಜ್ಞೆಗಳನ್ನು ವಿಸ್ಮೃತಿಯಿಂದ ಉಲ್ಲಂಘಿಸಿದವರಲ್ಲಿ ಕನಿಕರ ತೋರಿಸುತ್ತಾನೆ. ವರುಣನಲ್ಲಿ ನೂರುಗಟ್ಟಲೆ, ಸಾವಿರಗಟ್ಟಲೆ ಓಷಧಿಗಳಿವೆ. ಅವನು ಮೃತ್ಯುವನ್ನು ದೂರಮಾಡುತ್ತಾನೆ; ಮತ್ತು ಪಾಪವನ್ನು ಪರಿಹಾರಮಾಡುತ್ತಾನೆ ಅವನು ಪ್ರಾಣಾಪಹಾರ ಮಾಡಬಲ್ಲನು; ಜೀವದಾನವನ್ನೂ ಮಾಡಬಲ್ಲನು; ನಿತ್ಯತ್ವವನ್ನು ರಕ್ಷಣೆಮಾಡುವುದರಲ್ಲಿ ಬಹಳ ಕುಶಲನು ಇತ್ಯಾದಿಯಾಗಿ ವರುಣನ ಗುಣವರ್ಣನೆಯ ಅನೇಕ ಋಕ್ಕುಗಳಲ್ಲಿವೆ. ಇಲ್ಲಿ ನಾವು ಅದನ್ನು ಅತಿಸೂಕ್ಷ್ಮವಾಗಿ ವಿವರಿಸಿದ್ದೇವೆ. ಉಚಿತ ಸಂದರ್ಭದಲ್ಲಿ ಅದನ್ನು ವಿವರಿಸುತ್ತೇವೆ.

ತೈತ್ತಿರೀಯಸಂಹಿತೆಯಲ್ಲಿ—**ಫಲ್ಗುನೀನಕ್ಷತ್ರಮರ್ಯಮಾ ದೇವತಾ............ಅನೂರಾಧಾನಕ್ಷತ್ರಂ ಮಿತ್ರೋ ದೇವತಾ............ |** (ತೈ. ಸಂ. ೪-೪.೯-೨) ಎಂದರೆ, ಅರ್ಯಮನು ಪೂರ್ವಫಲ್ಗುನೀ ನಕ್ಷತ್ರಕ್ಕೂ ಮಿತ್ರನು ಅನೂರಾಧಾ ನಕ್ಷತ್ರಕ್ಕೂ ಅಧಿಪತಿಗಳೆಂದು ಹೇಳಿದೆ.

**ಅರ್ಯಮಾ**—ಆದಿತ್ಯರ ಪರವಾದ ಸೂಕ್ತಗಳಲ್ಲಿ ಸಾಧಾರಣವಾಗಿ ಆದಿತ್ಯರೆಂದರೆ ಮಿತ್ರ, ವರುಣ ಮತ್ತು ಅರ್ಯಮರೇ ಉದ್ದಿಷ್ಟರು. **ನಾವು** ಹಿಂದೆ ತಿಳಿಸಿದಂತೆ ಋಗ್ವೇದದಲ್ಲಿ (ಋ. ಸಂ. ೨-೨೭-೧) ಮಿತ್ರ, ಅರ್ಯಮಾ, ಭಗ, ವರುಣ, ದಕ್ಷ, ಅಂಶ ಎಂಬ ಆರುಜನರ ಹೆಸರು ಮಾತ್ರವಿದೆ. ಋ. ಸಂ. ೯-೧೧೪ ೩ ನೆಯ ಋಕ್ಕಿನಲ್ಲಿ ಆದಿತ್ಯರ ಸಂಖ್ಯೆ ಏಳೆಂದೂ, ಋ. ಸಂ. ೧೦-೭೨-೮ ರಲ್ಲಿ ಅದಿತಿಯು ಮೊದಲು ಏಳುಜನ ಪುತ್ರರನ್ನು ದೇವತೆಗಳಿಗೆ ಒಪ್ಪಿಸಿ, ಎಂಟನೆಯ ಮಾರ್ತಾಂಡನನ್ನು ಅನಂತರ ಪಡೆದಳೆಂದೂ ಇದೆ. ಅ. ವೇ. ೮-೯-೨೧ ರಲ್ಲಿಯೂ, ತೈ. ಆ. ೧-೧೩-೩ ರಲ್ಲಿಯೂ, ಅದಿತಿಗೆ ಮಿತ್ರ, ಅರ್ಯಮಾ, ವರುಣ, ಅಂಶ, ಭಗ, ಧಾತೃ, ಇಂದ್ರ, ವಿವಸ್ವಾನ್ ಎಂಬ ಎಂಟುಮಂದಿ ಪುತ್ರರೆಂದು ಹೇಳಿದೆ. ಶತಪಥಬ್ರಾಹ್ಮಣದಲ್ಲಿ (ಶ. ಬ್ರಾ. ೬-೧-೨-೮ ಮತ್ತು ಶ. ಬ್ರಾ. ೧೧-೬-೩-೮) ಆದಿತ್ಯರು ತಿಂಗಳಿಗೊಬ್ಬರಂತೆ ಹನ್ನೆರಡು ಜನರೆಂದು ಹೇಳಿದೆ. ಪುರಾಣಾದಿಗಳಲ್ಲಿಯೂ ಆದಿತ್ಯರು ಹನ್ನೆರಡುಮಂದಿಯೆಂದೇ ಇದೆ.

**ಅರ್ಯಮಾ** ಎಂಬ ದೇವತೆಯ ಹೆಸರು ಋಗ್ವೇದದಲ್ಲಿ ಸುಮಾರು ನೂರುಕಡೆ ಬಂದಿದ್ದರೂ, ಸಂಪೂರ್ಣವಾಗಿ ವ್ಯಕ್ತಿತ್ವವಿಲ್ಲದಿರುವುದರಿಂದ ಯಾಸ್ಕರು ತಮ್ಮ ನಿರುಕ್ತದಲ್ಲಿ (ನಿಘಂಟುವಿನಲ್ಲಿ) ದೇವತೆಗಳ ಹೆಸರುಗಳ ರೂಪನಿಷ್ಪತ್ತಿಯನ್ನು ವಿವರಿಸುವಾಗ ಆ ಅರ್ಯಮಾ ದೇವತೆಯ ಹೆಸರನ್ನು ಬಿಟ್ಟಿದಾರೆ. ಮಂತ್ರಗಳಲ್ಲಿ ಹೊರತಾಗಿ ಬಾಕಿ ಕಡೆಗಳಲ್ಲೆಲ್ಲಾ ಬೇರೆ ದೇವತೆಗಳ ಜೊತೆಯಲ್ಲಿಯೇ ಅರ್ಯಮನ ಪ್ರಸ್ತಾಪ; ಅದೂ ಹೆಚ್ಚಾಗಿ ಮಿತ್ರ ಮತ್ತು ವರುಣರ ಜೊತೆಯಲ್ಲಿಯೇ. ಅಗ್ನಿಯನ್ನುದ್ದೇಶಿಸಿ ಕನ್ಯೆಯರನ್ನು ಒಲಿಸಿಕೊಳ್ಳುವಾಗ,

**ತ್ವಮರ್ಯಮಾ ಭವಸಿ ಯತ್ಕನೀನಾಂ ನಾಮ ಸ್ವಧಾವನ್‌ಗುಹ್ಯಂ ಬಿಭರ್ಷಿ ।**

(ಋ. ಸಂ. ೫-೩-೨)

ನೀನೇ ಅರ್ಯಮಾ ಎಂದು ಹೇಳಿದೆ.

**ಭಗೋ ಅರ್ಯಮಾ ಸವಿತಾ ಪುರಂಧಿರ್ಮಹ್ಯಂ ತ್ವಾದುರ್ಗಾರ್ಹಪತ್ಯಾಯ ದೇವಾಃ ।**

(ಋ. ಸಂ. ೧೦-೮೫-೩೬)

ಎಂಬ ಋಕ್ಕಿನಲ್ಲಿ—ಎಲೈ ದೇವತೆಗಳೇ, ಭಗ, ಅರ್ಯಮಾ, ಸವಿತೃ, ಪುರಂಧಿ ಇವರುಗಳು ಈ ವಧುವನ್ನು ನನ್ನ ಗೃಹಸ್ಥಾಶ್ರಮಕ್ಕೆ ನೆರವಾಗುವುದಕ್ಕಾಗಿ ನನಗೆ ಕೊಟ್ಟರು ಎಂದು ವರನು ಹೇಳುತ್ತಾನೆ.

**ನ ತಮಂಹೋ ನ ದುರಿತಂ ದೇವಾಸೋ ಅಷ್ಟ ಮರ್ತ್ಯಂ ।**
**ಸಜೋಷಸೋ ಯಮರ್ಯಮಾ ಮಿತ್ರೋ ನಯಂತಿ ವರುಣೋ ಅತಿ ದ್ವಿಷಃ ॥**

(ಋ. ಸಂ. ೧೦-೧೨೬-೧)

**ಶುನಮಸ್ಮಭ್ಯಮೂತಯೇ ವರುಣೋ ಮಿತ್ರೋ ಅರ್ಯಮಾ ।**
**ಶರ್ಮ ಯಚ್ಛಂತು ಸಪ್ರಥ ಆದಿತ್ಯಾಸೋ ಯದೀಮಹೇ ಅತಿ ದ್ವಿಷಃ ॥**

(ಋ. ಸಂ. ೧೦-೧೨೬-೭)

ಋ. ಸಂ. ೧೦-೧೨೬ ನೆಯ ಸೂಕ್ತದಲ್ಲಿ ದೇವತೆಗಳನ್ನು ವಿಶ್ವೇದೇವತೆಗಳೆಂದು ಹೇಳಿದ್ದರೂ ಮೇಲೆ ಉದಹರಿಸಿರುವ ಋಕ್ಕುಗಳಿಂದ ಮುಖ್ಯವಾಗಿ ಆದಿತ್ಯರನ್ನೇ ಇಲ್ಲಿ ಸ್ತುತಿಸಲಾಗಿದೆ. ಇದಲ್ಲದೆ **ದೇವಾಸಃ ಅಷ್ಟ** ಎಂದು ಮೊದಲನೆಯ ಋಕ್ಕಿನಲ್ಲಿ ಹೇಳಿರುವುದು ಎಂಟುಮಂದಿ ಆದಿತ್ಯರನ್ನೇ (ವೇದದ ಆದಿತ್ಯರ ಸಂಖ್ಯೆ ಎಂಟುಮಂದಿಗಿಂತ ಹೆಚ್ಚಾಗಿ ಎಲ್ಲಿಯೂ ಹೇಳಿಲ್ಲ) ಉದ್ದೇಶಿಸಿದೆ. ಇದಲ್ಲದೇ ೭ ನೇ ಋಕ್ಕಿನಲ್ಲಿ **ಆದಿತ್ಯಾಸಃ** ಎಂಬ ಶಬ್ದವೂ ಅದನ್ನೇ ಸ್ಪಷ್ಟವಾಗಿ ತಿಳಿಸುತ್ತದೆ. ಈ ಸೂಕ್ತದ ಪ್ರತಿ ಋಕ್ಕಿನಲ್ಲಿಯೂ (ಕೊನೆಯ ಋಕ್ಕು ಹೊರತು) ವರುಣೋ, ಮಿತ್ರೋ, ಅರ್ಯಮಾ ಎಂದು ಮಿತ್ರಾವರುಣಾರ್ಯಮರ ಹೆಸರು ಪಲ್ಲವಿಯಂತೆ ಪುನಃಪುನಃ ಪಠಿತವಾಗಿರುವುದು ಆದಿತ್ಯರಲ್ಲಿ ಈ ಮಿತ್ರಾ ವರುಣಾರ್ಯಮರು ಪ್ರಧಾನಸ್ಥಾನವನ್ನು ಪಡೆದಿರುವುದನ್ನು ಸೂಚಿಸುವುದಾಗಿದೆ. ಅರ್ಯಮನ ವಿಷಯವು ಋಗ್ವೇದ ದಲ್ಲಿ ಹೆಚ್ಚಾಗಿ ವಿವರಿಸಲ್ಪಟ್ಟಿಲ್ಲವಾದ್ದರಿಂದ ವಿಶೇಷ ವಿವರಣೆಯು ಸಾಧ್ಯವಿಲ್ಲ.

ಸಾಯಣಭಾಷ್ಯಂ

**ಅಗ್ನಿರಿಂದ್ರ ಇತಿ ಪಂಚದಶರ್ಚಂ ಪಂಚಮಂ ಸೂಕ್ತಂ । ವಸುಕ್ರಪುತ್ರಸ್ಯ ವಸುಕರ್ಣಸ್ಯಾರ್ಷಂ ವೈಶ್ವದೇವಂ। ಪಂಚದಶೀ ತ್ರಿಷ್ಟುಪ್ ಶಿಷ್ಟಾ ಜಗತ್ಯಃ। ತಥಾ ಚಾನುಕ್ರಮ್ಯತೇ। ಅಗ್ನಿರಿಂದ್ರಃ ಪಂಚೋನಾ ವಾಸುಕ್ರೋ ವಸುಕರ್ಣಸ್ತ್ರಿಷ್ಟುಬಂತಂ ತ್ವಿತಿ ॥**

**ಅನುವಾದವು—ಅಗ್ನಿರಿಂದ್ರಃ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸುಕ್ರಪುತ್ರನಾದ ವಸುಕರ್ಣನೆಂಬುವನು ಋಷಿಯು ; ವಿಶ್ವೇ ದೇವತೆಗಳು ದೇವತೆಯು ; ಈ ಸೂಕ್ತದ ಹದಿನೈದನೆಯ ಋಕ್ಕು ತ್ರಿಷ್ಟುಪ್ ಛಂದಸ್ಸುವು. ಉಳಿದ ಋಕ್ಕುಗಳು ಜಗತೀ ಛಂದಸ್ಸುವು. ಅನುಕ್ರಮಣಿಕೆಯಲ್ಲಿ—**ಅಗ್ನಿರಿಂದ್ರಃ ಪಂಚೋನಾ ವಾಸುಕ್ರೋ ವಸುಕರ್ಣಸ್ತ್ರಿಷ್ಟುಬಂತಂ ತು** ಎಂದು ಹೇಳಿರುವುದು.

## ಸೂಕ್ತ—೬೫

ಮಂಡಲ—೧೦ || ಅನುವಾಕ—೫ || ಸೂಕ್ತ—೬೫ ||
ಅಷ್ಟಕ—೮ || ಅಧ್ಯಾಯ—೨ || ವರ್ಗ—೯, ೧೦, ೧೧||
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ||
ಋಷಿಃ—ವಸುಕರ್ಣೋ ವಾಸುಕ್ರಃ ||
ವಿಶ್ವೇದೇವಾಃ ||
ಛಂದಃ—೧–೧೪. ಜಗತೀ | ೧೫. ತ್ರಿಷ್ಟುಪ್ ||

ಸಂಹಿತಾಪಾಠಃ

ಅಗ್ನಿರಿಂದ್ರೋ ವರುಣೋ ಮಿತ್ರೋ ಅರ್ಯಮಾ ವಾಯುಃ ಪೂಷಾ ಸರ-
ಸ್ವತೀ ಸಜೋಷಸಃ ।
ಆದಿತ್ಯಾ ವಿಷ್ಣುರ್ಮರುತಃ ಸ್ವರ್ಬೃಹತ್ಸೋಮೋ ರುದ್ರೋ ಅದಿತಿರ್ಬ್ರಹ್ಮಣ-
ಸ್ಪತಿಃ || ೧ ||

ಪದಪಾಠಃ

ಅಗ್ನಿಃ । ಇಂದ್ರಃ । ವರುಣಃ । ಮಿತ್ರಃ । ಅರ್ಯಮಾ । ವಾಯುಃ । ಪೂಷಾ । ಸರಸ್ವತೀ। ಸ್ಽಜೋಷಸಃ।
ಆದಿತ್ಯಾಃ। ವಿಷ್ಣುಃ । ಮರುತಃ । ಸ್ವಃ । ಬೃಹತ್ । ಸೋಮಃ । ರುದ್ರಃ । ಅದಿತಿಃ । ಬ್ರಹ್ಮಣಃ । ಪತಿಃ ||

ಸಾಯಣಭಾಷ್ಯಂ

ಅಗ್ನ್ಯಾದಯ ಆದಿತ್ಯಾದಯೋ ಬೃಹದ್ಬೃಹತೀ ಸ್ವರ್ದ್ಯೌಶ್ಚ ಸೋಮಾದಯ ಏತೇ ದೇವಾಃ ಸಜೋಷಸಃ ಸಂಹತ್ಯ ||

ಪ್ರತಿಪದಾರ್ಥ

**ಅಗ್ನಿಃ**—ಅಗ್ನಿಯೂ | **ಇಂದ್ರಃ**—ಇಂದ್ರನೂ | **ವರುಣಃ**—ವರುಣನೂ | **ಮಿತ್ರಃ**—ಮಿತ್ರನೂ | **ಅರ್ಯಮಾ**—ಅರ್ಯಮನೂ | **ವಾಯುಃ**—ವಾಯುವೂ | **ಪೂಷಾ**—ಪೂಷದೇವನೂ | **ಸರಸ್ವತೀ**—ಸರಸ್ವತಿಯೂ | **ಆದಿತ್ಯಾಃ**—ಆದಿತ್ಯರೂ | **ವಿಷ್ಣುಃ**—ವಿಷ್ಣುವೂ | **ಮರುತಃ**—ಮರುತ್ತುಗಳೂ | **ಬೃಹತ್**—ಮಹತ್ತಾದ | **ಸ್ವಃ**—ದ್ಯುಲೋಕವೂ | **ಸೋಮಃ**—ಸೋಮನೂ | **ರುದ್ರಃ**—ರುದ್ರನೂ | **ಅದಿತಿಃ**—ಅದಿತಿಯೂ | **ಬ್ರಹ್ಮಣಸ್ಪತಿಃ**—ಬ್ರಹ್ಮಣಸ್ಪತಿಯೂ | **ಸಜೋಷಸಃ**—ಒಟ್ಟುಗೂಡಿದವರಾಗಿ (ಅಂತರಿಕ್ಷವನ್ನು ವ್ಯಾಪಿಸಿ ಬೆಳಗುತ್ತಿದ್ದಾರೆ).

ಭಾವಾರ್ಥ

ಅಗ್ನಿಯೂ, ಇಂದ್ರನೂ, ವರುಣನೂ, ಮಿತ್ರನೂ, ಅರ್ಯಮನೂ. ವಾಯುವೂ, ಪೂಷದೇವನೂ, ಸರಸ್ವತಿಯೂ, ಆದಿತ್ಯರೂ, ವಿಷ್ಣುವೂ, ಮರುತ್ತುಗಳೂ, ಮಹತ್ತಾದ ದ್ಯುಲೋಕವೂ, ಸೋಮನೂ, ರುದ್ರನೂ, ಅದಿತಿಯೂ, ಬ್ರಹ್ಮಣಸ್ಪತಿಯೂ ಒಟ್ಟುಗೂಡಿದವರಾಗಿ ಅಂತರಿಕ್ಷವನ್ನು ವ್ಯಾಪಿಸಿ ಬೆಳಗುತ್ತಿದ್ದಾರೆ.

## English Translation

Agni, Indra, Varuna, Mitra, Aryman, Vayu, Pushan, Saraswati, the Adityas, Vishnu, the Maruts, the mighty heaven, Soma, Rudra, Aditi, Brahmanaspati with one consent,

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಪ್ರತಿಪಾದಿತರಾಗಿರುವ ದೇವತೆಗಳ ವಿಷಯವನ್ನು ಈ ಸೂಕ್ತದ ಪೀಠಿಕೆಯಲ್ಲಿ ನೋಡಿ

### ಸಂಹಿತಾಪಾಠಃ

ಇಂದ್ರಾಗ್ನೀ ವೃತ್ರಹತ್ಯೇಷು ಸತ್ಪತೀ ಮಿಥೋ ಹಿನ್ವಾನಾ ತನ್ವಾ೩ ಸಮೋಕಸಾ।
ಅಂತರಿಕ್ಷಂ ಮಹ್ಯಾ ಪಪ್ರುರೋಜಸಾ ಸೋಮೋ ಘೃತಶ್ರೀರ್ಮಹಿಮಾನಮೀರಯನ್ ॥ ೨ ॥

### ಪದಪಾಠಃ

ಇಂದ್ರಾಗ್ನೀ ಇತಿ । ವೃತ್ರಽಹತ್ಯೇಷು । ಸತ್ಪತೀ ಇತಿ ಸತ್ಽಪತೀ । ಮಿಥಃ । ಹಿನ್ವಾನಾ । ತನ್ವಾ । ಸಂಽಓಕಸಾ ।
ಅಂತರಿಕ್ಷಂ । ಮಹಿ । ಆ । ಪಪ್ರುಃ । ಓಜಸಾ । ಸೋಮಃ । ಘೃತಽಶ್ರೀಃ । ಮಹಿಮಾನಂ । ಈರಯನ್ ॥

### ಸಾಯಣಭಾಷ್ಯಂ

ವೃತ್ರಹತ್ಯಾ ಯುದ್ಧಾನಿ । ತೇಷು ಮಿಥಃ ಪರಸ್ಪರಂ ತನ್ವಾ ಶರೀರೇಣ ತತ್ರಸ್ಥೇನ ಬಲೇನ ಶತ್ರೂನ್ಹಿನ್ವಾನಾ ಪ್ರೇರಯಂತೌ ಸತ್ಪತೀ ಸತಾಂ ಪತೀ ಸಮೋಕಸಾ ಸಮಾನಸ್ಥಾನವಿಂದ್ರಾಗ್ನೀ । ಘೃತಶ್ರೀರುದಕಂ ವಸತೀವರ್ಯಾಖ್ಯಂ ಶ್ರಯಮಾಣೋ ಮಹಿಮಾನಮಾತ್ಮೀಯಮೀರಯನ್ ಸರ್ವತ್ರೋದೀರಯನ್ನುದ್ಗಮಯನ್ ಸೋಮಶ್ಚ । ಏತೇ ಸರ್ವೇ ಚ ಮಹಿ ಮಹದಂತರಿಕ್ಷಮೋಜಸಾ ಸ್ವಬಲೇನಾ ಪಪ್ರುಃ । ಆಪೂರಯಂತಿ । ಪ್ರಾ ಪೂರಣೇ ॥

### ಪ್ರತಿಪದಾರ್ಥ

**ವೃತ್ರಹತ್ಯೇಷು**—ವೃತ್ರಹನನಕಾಲದಲ್ಲಿ । **ಮಿಥಃ**—ಒಬ್ಬರಿಗೊಬ್ಬರು । **ತನ್ವಾ**—ಶಕ್ತಿಯುತವಾದ ದೇಹದೊಡನೆ ಸೇರಿದವರಾಗಿ । **ಹಿನ್ವಾನಾ**—ಶತ್ರುಗಳನ್ನು ಹಿಂಸಿಸುವವರೂ (ಶತ್ರುನಾಶಕ್ಕಾಗಿ ಪರಸ್ಪರ ಪ್ರೇರಿಸುವವರೂ) । **ಸತ್ಪತೀ**—ಸಜ್ಜನರ ಪಾಲಕರೂ । **ಸಮೋಕಸಾ**—ಸಮಾನವಾದ ಸ್ಥಾನವುಳ್ಳವರೂ ಆದ । **ಇಂದ್ರಾಗ್ನೀ**—ಇಂದ್ರ ಮತ್ತು ಅಗ್ನಿಗಳೂ । **ಘೃತಶ್ರೀಃ**—ವಸತೀವರ್ಯಾದ್ಯುದಕವನ್ನು ಧರಿಸಿರುವವನೂ । **ಮಹಿಮಾನಂ**—ತನ್ನ ಮಹತ್ತ್ವವನ್ನು । **ಈರಯನ್**—ಪ್ರೇರಿಸಿ ಪ್ರಕಟಿಸುವವನೂ ಆದ । **ಸೋಮಃ**—ಸೋಮ

ದೇವನೂ | **ಮಹಿ**—ಮಹತ್ತಾದ | **ಅಂತರಿಕ್ಷಂ**—ಅಂತರಿಕ್ಷವನ್ನು | **ಓಜಸಾ**—ಸ್ವಬಲದಿಂದ | **ಆ ಪಪ್ರುಃ**—ವ್ಯಾಪಿಸಿ ಪ್ರಕಾಶಿಸುತ್ತಿದ್ದಾರೆ.

ಭಾವಾರ್ಥ

ವೃತ್ರಹನನಕಾಲದಲ್ಲಿ ಒಬ್ಬರಿಗೊಬ್ಬರು ಶಕ್ತಿಯುತವಾದ ದೇಹದೊಡಗೂಡಿ ಶತ್ರುನಾಶಕ್ಕಾಗಿ ಪ್ರೇರಿಸುವವರೂ, ಸಜ್ಜನರ ಪಾಲಕರೂ, ಸಮಾನವಾದ ಸ್ಥಾನವುಳ್ಳವರೂ ಆದ ಇಂದ್ರಾಗ್ನಿಗಳೂ, ವಸತೀವರ್ಯಾದ್ಯುದಕವನ್ನು ಧರಿಸುವವನೂ, ತನ್ನ ಮಹತ್ತ್ವವನ್ನು ಪ್ರೇರಿಸಿ ಪ್ರಕಟಿಸುವವನೂ ಆದ ಸೋಮದೇವನೂ, ಮಹತ್ತಾದ ಅಂತರಿಕ್ಷವನ್ನು ಸ್ವಬಲದಿಂದ ವ್ಯಾಪಿಸಿ ಪ್ರಕಾಶಿಸುತ್ತಿದ್ದಾರೆ.

## English Translation

Indra and Agni, the lords of the virtuous, standing in the same place, mutually invigorating each other with might in the Vritra-slaying battles, and the ghi-glorified Soma putting forth his greatness have filled the vast firmament with their strength.

ಸಂಹಿತಾಪಾಠಃ

ತೇಷಾಂ ಹಿ ಮಹ್ನಾ ಮಹತಾಮನರ್ವಣಾಂ ಸ್ತೋಮಾಁ ಇಯರ್ಮ್ಯೃತಜ್ಞಾ ಋತಾವೃಧಾಂ |
ಯೇ ಅಪ್ಸವಮರ್ಣವಂ ಚಿತ್ರರಾಧಸಸ್ತೇ ನೋ ರಾಸಂತಾಂ ಮಹಯೇ ಸುಮಿತ್ರ್ಯಾಃ || ೩ ||

ಪದಪಾಠಃ

ತೇಷಾಂ | ಹಿ | ಮಹ್ನಾ | ಮಹತಾಂ | ಅನರ್ವಣಾಂ | ಸ್ತೋಮಾನ್ | ಇಯರ್ಮಿ | ಋತಽಜ್ಞಾಃ | ಋತಽವೃಧಾಂ |
ಯೇ | ಅಪ್ಸವಂ | ಅರ್ಣವಂ | ಚಿತ್ರಽರಾಧಸಃ | ತೇ | ನಃ | ರಾಸಂತಾಂ | ಮಹಯೇ | ಸುಽಮಿತ್ರ್ಯಾಃ ||

ಸಾಯಣಭಾಷ್ಯಂ

ಮಹ್ನಾ ಸ್ವಮಹತ್ತ್ವೇನ ಮಹತಾಮನರ್ವಣಾಮನ್ಯಸ್ಮಿನ್ನಪ್ರತ್ಯೃತಾನಾಂ ಶತ್ರುಭಿರನಭಿಗಂತವ್ಯಾನಾಮೃತಾವೃಧಾಂ ಸತ್ಯಭೂತೇನ ಯಜ್ಞೇನ ವೃದ್ಧಾನಾಂ ತೇಷಾಮಗ್ನ್ಯಾದೀನಾಂ ದೇವಾನಾಮೇವಾರ್ತಜ್ಞಾ ಯಜ್ಞಸ್ಯ ಜ್ಞಾತಾಹಂ ಸ್ತೋಮಾನಿಯರ್ಮಿ | ಪ್ರೇರಯಾಮಿ || ಋ ಗತಿಪ್ರಾಪಣಯೋಃ | ಜೌಹೋತ್ಯಾದಿಕಃ || ಚಿತ್ರರಾಧಸಶ್ಚಾಯನೀಯಧನೋಪೇತಾ ಯದ್ವಾ ಪಶ್ವಾದಿಲಕ್ಷಣಬಹುಧನಾ

**ಯೇ ದೇವಾ ಅಪ್ನವಂ । ಅಪ್ನ ಇತಿ ರೂಪನಾಮ । ರೂಪವಂತಮರ್ಣವಂ ।। ಅರ್ಣಸ್ತ ಸಲೋಪಶ್ಚ । ಕಾ. ೫-೨-೧೦೯-೩ । ಇತಿ ಮತ್ವರ್ಥೀಯೋ ವಪ್ರತ್ಯಯಃ ।। ಉದಕವಂತಂ ಮೇಘಂ ವರ್ಷಂತಿ ತೇ ಸುಮಿತ್ರ್ಯಾಃ ಶೋಭನಸಖಿಕರ್ಮಾಣಸ್ತೇ ದೇವಾ ನೋऽಸ್ಮಭ್ಯಂ ಮಹಯೇ ಜನೇಷು ಮಧ್ಯೇ ಪೂಜಾರ್ಥಂ ಧನಂ ರಾಸಂತಾಂ । ಪ್ರಯಚ್ಛಂತು । ರಾಸೃ ದಾನೇ ।।**

ಪ್ರತಿಪದಾರ್ಥ

**ಋತಾವೃಧಾಂ**—ಯಜ್ಞದಿಂದ ಪುಷ್ಟಿಯನ್ನು ಹೊಂದಿದವರೂ । **ಮಹ್ನಾ**—ಸ್ವಮಾಹಾತ್ಮ್ಯದಿಂದ । **ಮಹತಾಂ**—ಪ್ರಭಾವವನ್ನು ಹೊಂದಿದವರೂ । **ಅನರ್ವಣಾಂ**—ಶತ್ರುಗಳ ಹಿಂಸೆಗೆ ಒಳಗಾಗದವರೂ ಆದ । **ತೇಷಾಂ**—ಅಗ್ನ್ಯಾದಿ ದೇವತೆಗಳ । **ಋತಜ್ಞಾಃ**—ಯಜ್ಞತತ್ತ್ವವನ್ನು ತಿಳಿದ ನಾನು । **ಸ್ತೋಮಾನ್**—ಸ್ತುತಿಗಳನ್ನು । **ಇಯರ್ಮಿ**—ಅರ್ಪಿಸುತ್ತೇನೆ । **ಚಿತ್ರರಾಧಸಃ**—ಆಕರ್ಷಕವಾದ ಧನದಿಂದ ಕೂಡಿದ । **ಯೇ**-ಯಾವ ದೇವತೆಗಳು । **ಅಪ್ನವಂ**-ಉದಕಭರಿತವಾದ (ಆಕರ್ಷಕವಾದ ರೂಪದಿಂದ ಕೂಡಿದ) । **ಅರ್ಣವಂ**-ಮೇಘವನ್ನು ಹಿಂಡಿ ವೃಷ್ಟಿಯನ್ನು ಸುರಿಸುವರೋ । **ತೇ**—ಅಂತಹ । **ಸುಮಿತ್ರ್ಯಾಃ**—ಉತ್ತಮವಾದ ಮಿತ್ರರಾದ ದೇವತೆಗಳು । **ನಃ ಮಹಯೇ**—ಜನರ ನಡವೆ ಪೂಜಾರ್ಥವಾಗಿ । **ರಾಸಂತಾಂ**—ನಮಗೆ ಧನವನ್ನು ಕೊಡಲಿ.

ಭಾವಾರ್ಥ

ಯಜ್ಞದಿಂದ ಪುಷ್ಟಿಯನ್ನು ಹೊಂದಿದವರೂ. ಸ್ವಮಾಹಾತ್ಮ್ಯದಿಂದ ಅಧಿಕವಾದ ಪ್ರಭಾವವನ್ನು ಹೊಂದಿದವರೂ, ಶತ್ರುಗಳ ಹಿಂಸೆಗೆ ಒಳಗಾಗದವರೂ ಆದ ಅಗ್ನ್ಯಾದಿದೇವತೆಗಳ ಯಜ್ಞತತ್ತ್ವವನ್ನು ತಿಳಿದ ನಾನು ಅವರಿಗೆ ಸ್ತುತಿಗಳನ್ನರ್ಪಿಸುತ್ತೇನೆ. ಆಕರ್ಷಕವಾದ ಧನದಿಂದ ಕೂಡಿದ ಯಾವ ದೇವತೆಗಳು ಆಕರ್ಷಕವಾದ ರೂಪವುಳ್ಳ ಉದಕದಿಂದ ಕೂಡಿದ ಮೇಘವನ್ನು ಹಿಂಡಿ ವೃಷ್ಟಿಯನ್ನು ಸುರಿಸುವರೋ ಅಂತಹ ಉತ್ತಮವಾದ ಮಿತ್ರರಾದ ದೇವತೆಗಳು ಜನರ ನಡುವೆ ಪೂಜಾರ್ಥವಾಗಿ ನಮಗೆ ಧನವನ್ನು ಕೊಡಲಿ.

English Translation

Skilled in pious rites, I recite the praises of these (deities), mighty through (their own) might, unassailable, exalted by sacrifice ; may those (gods) who, possessed of various wealth, (rain down) the beautiful water-cloud, acting in friendly wise, grant us (wealth) for our honour (among men).

ಸಂಹಿತಾಪಾಠಃ

ಸ್ವರ್ಣರಮಂತರಿಕ್ಷಾಣಿ ರೋಚನಾ ದ್ಯಾವಾಭೂಮೀ ಪೃಥಿವೀಂ ಸ್ಕಂಭುರೋ-
ಜಸಾ ।
ಪೃಕ್ಷಾ ಇವ ಮಹಯಂತಃ ಸುರಾತಯೋ ದೇವಾಃ ಸ್ತವಂತೇ ಮನುಷಾಯ
ಸೂರಯಃ ।। ೪ ।।

ಪದಪಾಠಃ

ಸ್ವಃऽನರಂ । ಅಂತರಿಕ್ಷಾಣಿ । ರೋಚನಾ । ದ್ಯಾವಾಭೂಮೀ ಇತಿ । ಪೃಥಿವೀಂ । ಸ್ಕಂಭುಃ । ಓಜಸಾ । ಪೃಕ್ಷಾಃऽಇವ । ಮಹಯಂತಃ । ಸುऽರಾತಯಃ । ದೇವಾಃ । ಸ್ತವಂತೇ । ಮನುಷಾಯ । ಸೂರಯಃ ॥

ಸಾಯಣಭಾಷ್ಯಂ

ಸ್ವರ್ಣರಂ ಸರ್ವಸ್ಯ ಸ್ವಸ್ವಕರ್ಮಣಿ ನೇತಾರಮಾದಿತ್ಯಮಂತರಿಕ್ಷಾಣಿ । ದ್ಯಾವಾಪೃಥಿವ್ಯೋರಂತರಾ ಮಧ್ಯೇ ಕ್ಷಿಯಂತಿ ನಿವಸಂತೀತ್ಯಂತರಿಕ್ಷಾಣಿ । ಮಧ್ಯಸ್ಥಿತಾನಿ ರೋಚನಾ ರೋಚಮಾನಾನಿ ತೇಜಾಂಸಿ ದ್ಯಾವಾಭೂಮೀ ದ್ಯಾವಾಪೃಥಿವ್ಯೌ ಪೃಥಿವೀಂ ವಿಸ್ತೀರ್ಣಮಂತರಿಕ್ಷಂ ಚ ಏತಾನಾದಿತ್ಯಾದೀನೋಜಸಾ ಸ್ವಬಲೇನೈವ ದೇವಾಃ ಸ್ಕಂಭುಃ । ಧಾರಯಂತಿ ॥ ಸ್ಕಂಭ ಇತಿ ಸೌತ್ರೋ ಧಾತುಃ । ಲಿಟಿ ರೂಪಂ ॥ ಕಿಂಚ ಪೃಕ್ಷಾ ಇವ ದರಿದ್ರೇಷು ಧನಾನಿ ಸಂಪರ್ಚಯಂತ ಇವ ಅತ ಏವ ಮಹಯಂತಃ ಸ್ತೋತೄನ್ಧನಾದಿಭಿಃ ಪೂಜಯಂತಃ ಸುರಾತಯಃ ಸುದಾನಾ ಮನುಷಾಯ ಮನುಷ್ಯಾಯ ಸೂರಯೋ ಧನಾನಾಂ ಪ್ರೇರಕಾ ಏತೇ ದೇವಾಃ ಸ್ತವಂತೇ । ಅಸ್ಮಿನ್ಯಜ್ಞೇ ಸ್ತೂಯಂತೇ ॥

ಪ್ರತಿಪದಾರ್ಥ

**ಸ್ವರ್ಣರಂ**—ಸಕಲ ಕರ್ಮಗಳಿಗೂ ಮಾರ್ಗದರ್ಶಕನಾದ ಆದಿತ್ಯನನ್ನೂ । **ಅಂತರಿಕ್ಷಾಣಿ**—ದ್ಯಾವಾಪೃಥಿವಿಗಳ ನಡುವೆ ಇರುವ । **ರೋಚನಾ**—ಸಕಲ ತೇಜಸ್ಸುಗಳನ್ನೂ । **ದ್ಯಾವಾಭೂಮೀ**—ದ್ಯಾವಾಪೃಥಿವಿಗಳನ್ನೂ । **ಪೃಥಿವೀಂ**—ವಿಸ್ತೃತವಾದ ಅಂತರಿಕ್ಷವನ್ನೂ । **ಓಜಸಾ**—ತಮ್ಮ ಶಕ್ತಿಯಿಂದ । **ಸ್ಕಂಭುಃ**—ದೇವತೆಗಳು ಧರಿಸಿದ್ದಾರೆ । **ಪೃಕ್ಷಾ ಇವ**—ದರಿದ್ರರಿಗೆ ಅನ್ನವನ್ನು ಕೊಡುವಂತೆ । **ಮಹಯಂತಃ**—ಸ್ತುತಿಕರ್ತರಿಗೆ ಧನಾದಿಗಳನ್ನು ಕೊಡುವವರೂ । **ಸುರಾತಯಃ**—ಉದಾರವಾದ ದಾನಿಗಳೂ । **ಮನುಷಾಯ**—ಮಾನವನಿಗೆ । **ಸೂರಯಃ**—ಪ್ರೇರಕರೂ ಆದ । **ದೇವಾಃ**—ದೇವತೆಗಳು । **ಸ್ತುವಂತೇ**—ಪ್ರಶಂಶಿಸಲ್ಪಡುತ್ತಾರೆ.

ಭಾವಾರ್ಥ

ಸರ್ವಕರ್ಮಗಳಿಗೂ ಮಾರ್ಗದರ್ಶಕನಾದ ಆದಿತ್ಯನನ್ನೂ, ದ್ಯಾವಾಪೃಥಿವಿಗಳ ನಡುವೆ ಇರುವ ಸಕಲ ತೇಜಸ್ಸುಗಳನ್ನೂ, ದ್ಯಾವಾಪೃಥಿವಿಗಳನ್ನೂ, ವಿಸ್ತೃತವಾದ ಅಂತರಿಕ್ಷವನ್ನೂ ತಮ್ಮ ಶಕ್ತಿಯಿಂದ ದೇವತೆಗಳು ಧರಿಸಿದ್ದಾರೆ. ದರಿದ್ರರಿಗೆ ಅನ್ನವನ್ನು ಕೊಡುವಂತೆ ಸ್ತುತಿಕರ್ತರಿಗೆ ಧನಾದಿಗಳನ್ನು ಕೊಡುವವರೂ, ಉದಾರವಾದ ದಾನಿಗಳೂ, ಮಾನವನಿಗೆ ಪ್ರೇರಕರೂ ಆದ ದೇವತೆಗಳು ಪ್ರಶಂಸಿಸಲ್ಪಡುತ್ತಾರೆ.

## English Translation

They have sustained by their strength the leader of all (the sun), the luminaries of the firmament, heaven and earth, the outstretched (firmament); honouring (their worshippers) like those who give food (to the poor), the generous gods bestowing wealth on man are glorified (at this sacrifice).

ಸಂಹಿತಾಪಾಠಃ

ಮಿತ್ರಾಯ ಶಿಕ್ಷ ವರುಣಾಯ ದಾಶುಷೇ ಯಾ ಸಮ್ರಾಜಾ ಮನಸಾ ನ ಪ್ರ-
ಯುಚ್ಛತಃ ।
ಯಯೋರ್ಧಾಮ ಧರ್ಮಣಾ ರೋಚತೇ ಬೃಹದ್ಯಯೋರುಭೇ ರೋದಸೀ
ನಾಧಸೀ ವೃತೌ ॥ ೫ ॥

ಪದಪಾಠಃ

ಮಿತ್ರಾಯ । ಶಿಕ್ಷ । ವರುಣಾಯ । ದಾಶುಷೇ । ಯಾ । ಸಂಽರಾಜಾ । ಮನಸಾ । ನ । ಪ್ರಽಯುಚ್ಛತಃ ।
ಯಯೋಃ । ಧಾಮ । ಧರ್ಮಣಾ । ರೋಚತೇ । ಬೃಹತ್ । ಯಯೋಃ । ಉಭೇ ಇತಿ । ರೋದಸೀ
ಇತಿ । ನಾಧಸೀ ಇತಿ । ವೃತೌ ॥ ೫ ॥

ಸಾಯಣಭಾಷ್ಯಂ

ದಾಶುಷೇ ಧನಾನಿ ಸ್ತೋತೃಭ್ಯಃ ಪ್ರಯಚ್ಛತೇ ಮಿತ್ರಾಯ ವರುಣಾಯ ಚ ಶಿಕ್ಷ । ಹವೀಂಷಿ ಪ್ರಯಚ್ಛ । ಶಿಕ್ಷತಿರ್ದಾನಕರ್ಮಾ । ಸಮ್ರಾಜಾ ಸಮ್ರಾಜೌ ಸರ್ವಸ್ಯ ಯಾ ಯೌ ಮಿತ್ರಾವರುಣೌ ಮನಸಾಂತಃಕರಣೇನಾಪಿ ನ ಪ್ರಯುಚ್ಛತಃ ನ ಪ್ರಮಾದ್ಯತಃ ಕಿಮುತ ವಾಹ್ಯೇನ ವ್ಯಾಪಾರೇಣ ॥ ಯುಚ್ಛ ಪ್ರಮಾದೇ । ಭೌವಾದಿಕಃ ॥ ಯಯೋರ್ಮಿತ್ರಾವರುಣಯೋರ್ಬೃಹದ್ಮಹದ್ಧಾಮ ಶರೀರಂ ಧರ್ಮಣಾತ್ಮೀಯೇನ ಲೋಕಪ್ರಕಾಶನಾದಿಲಕ್ಷಣೇನ ಕರ್ಮಣಾ ರೋಚತೇ ಸಮ್ಯಗ್ದೀಪ್ಯತೇ । ಯಯೋಶ್ಚ ನಾಧಸೀ ॥ ಣಾಧೃ ಯಾಚ್ಞೋಪತಾಪೈಶ್ವರ್ಯಾಶೀಃಷು ॥ ಯಾಚಮಾನೇ ಉಭೇ ರೋದಸೀ ದ್ಯಾವಾಪೃಥಿವ್ಯೌ ವೃತೌ ವರ್ತಮಾನೇ ಭವತಃ । ಯದ್ವಾ । ನಾಧಸೀ ದೇವಮನುಷ್ಯೈಃ ಸಮೃದ್ಧೇ ದ್ಯಾವಾಪೃಥಿವ್ಯೌ । ತಯೋರ್ವೃತೌ ವರ್ತಮಾನೇ ಭವತಃ । ತದಧೀನೇ ಭವತ ಇತ್ಯರ್ಥಃ ॥

ಪ್ರತಿಪದಾರ್ಥ

**ಸಮ್ರಾಜಾ**—ಲೋಕಕ್ಕೆಲ್ಲ ಪ್ರಭುಗಳಾದ । **ಯಾ**—ಯಾವ ಮಿತ್ರಾವರುಣರು । **ಮನಸಾ**—ಮನಸ್ಸಿನಲ್ಲಿಯೂ । **ನ ಪ್ರಯುಚ್ಛತಃ**—ತಮ್ಮ ಕರ್ತವ್ಯವನ್ನು ಮರೆಯುವುದಿಲ್ಲವೋ । **ಯಯೋಃ**—ಯಾವ ಮಿತ್ರಾವರುಣರ । **ಬೃಹತ್**—ಮಹತ್ತಾದ । **ಧಾಮ**—ಶರೀರವು । **ಧರ್ಮಣಾ**—ಉತ್ತಮವಾದ ಕರ್ಮದಿಂದ । **ರೋಚತೇ**—ಪ್ರಕಾಶಿಸುವುದೋ । **ಯಯೋಃ**—ಯಾರಲ್ಲಿ । **ನಾಧಸೀ**—ಭಕ್ತಿಯುತವಾದ । **ಉಭೇ ರೋದಸೀ**—ದ್ಯಾವಾಪೃಥಿವಿಗಳೆರಡೂ । **ವೃತೌ**—ಸ್ಥಾಪಿತವಾಗಿವೆಯೋ ಅಂತಹವರೂ । **ದಾಶುಷೇ**—ಯಜಮಾನನಿಗೆ ಧನವನ್ನು ಕೊಡುವವರೂ ಆದ । **ಮಿತ್ರಾಯ**—ಮಿತ್ರನಿಗೂ । **ವರುಣಾಯ**—ವರುಣನಿಗೂ । **ಶಿಕ್ಷ**—ಹವಿಸ್ಸನ್ನರ್ಪಿಸು.

ಭಾವಾರ್ಥ

ಲೋಕಕ್ಕೆಲ್ಲ ಪ್ರಭುಗಳಾದ ಯಾವ ಮಿತ್ರಾವರುಣರು ಮನಸ್ಸಿನಲ್ಲಿಯೂ ತಮ್ಮ ಕರ್ತವ್ಯವನ್ನು ಮರೆಯುವುದಿಲ್ಲವೋ, ಯಾವ ಮಿತ್ರಾವರುಣರ ಮಹತ್ತಾದ ಶರೀರವು ಉತ್ತಮವಾದ ಕರ್ಮದಿಂದ ಪ್ರಕಾಶಿಸುವುದೋ, ಯಾರಲ್ಲಿ ಭಕ್ತಿಯುತವಾದ ದ್ಯಾವಾಪೃಥಿವಿಗಳೆರಡೂ ಸ್ಥಾಪಿತವಾಗಿವೆಯೋ ಅಂತಹವರೂ, ಯಜಮಾನನಿಗೆ ಧನವನ್ನು ಕೊಡುವವರೂ ಆದ ಮಿತ್ರನನ್ನೂ, ವರುಣನನ್ನೂ ಉದ್ದೇಶಿಸಿ ಹವಿಸ್ಸನ್ನರ್ಪಿಸು.

## English Translation

Worship the liberal Mitra and Varuna, the two royal deities who are never negligent in their thoughts, whose vast body is resplendent through their functions, upon whom the two solicitous worlds (heaven and earth) remain (dependent)

ಸಂಹಿತಾಪಾಠಃ

ಯಾ ಗೌರ್ವರ್ತನಿಂ ಪರ್ಯೇತಿ ನಿಷ್ಕೃತಂ ಪಯೋ ದುಹಾನಾ ವ್ರತನೀರವಾರತಃ ।
ಸಾ ಪ್ರಬ್ರುವಾಣಾ ವರುಣಾಯ ದಾಶುಷೇ ದೇವೇಭ್ಯೋ ದಾಶದ್ಧವಿಷಾ ವಿವಸ್ವತೇ ॥ ೬ ॥

ಪದಪಾಠಃ

ಯಾ । ಗೌಃ । ವರ್ತನಿಂ । ಪರಿಽಏತಿ । ನಿಃಽಕೃತಂ । ಪಯಃ । ದುಹಾನಾ । ವ್ರತಽನೀಃ । ಅವಾರತಃ ॥
ಸಾ । ಪ್ರಽಬ್ರುವಾಣಾ । ವರುಣಾಯ । ದಾಶುಷೇ । ದೇವೇಭ್ಯಃ । ದಾಶತ್ । ಹವಿಷಾ । ವಿವಸ್ವತೇ ॥ ೬ ॥

ಸಾಯಣಭಾಷ್ಯಂ

ಯೇಯಂ ಮದೀಯಾ ಪಯಃ ಕ್ಷೀರಾದಿಕಂ ದುಹಾನಾ ವ್ರತನೀರಾಶ್ರಯಣಪಯಃಪ್ರದಾನೇನ ಕರ್ಮಣೋ ನೇತ್ರೀ ಗೌರ್ನಿಷ್ಕೃತಂ ಸಂಸ್ಕೃತಂ ವರ್ತನಿಮಾವಾಸಸ್ಥಾನಂ ಯಜ್ಞಮವಾರತೋಽವರಣೇನಾಪ್ರಾರ್ಥನೇನೈವ ಪರ್ಯೇತಿ ಪರಿಗಚ್ಛತಿ ಸ್ವಯಮೇವಾಗಚ್ಛತಿ ಪ್ರಬ್ರುವಾಣಾ ಮಯಾ ಪ್ರಸ್ತೂಯಮಾನಾ ಸಾ ಗೌರ್ದಾಶುಷೇ ಹವಿರ್ದತ್ತವತೇ ವರುಣಾಯ ದೇವೇಭ್ಯೋಽನ್ಯೇಭ್ಯ ಇಂದ್ರಾದಿಭ್ಯಶ್ಚ ಹವಿಷಾನ್ನೇನ ವಿವಸ್ವತೇ ದೇವಾನ್ಪರಿಚರತೇ ಮಹ್ಯಂ ಮಾಂ ರಕ್ಷಿತುಂ ದಾಶತ್ । ಪಯಃ ಪ್ರಯಚ್ಛತು ॥ ದಾಶೃ ದಾನೇ । ಲೇಟ್ಯಡಾಗಮಃ॥ ಯದ್ವಾ ಗೌರಿತಿ ಮಾಧ್ಯಮಿಕಾ ವಾಕ್ ಯಾ ಪಯ ಊರ್ಜಂ ದುಹಾನಾ ಸಾ ನೋ ಮಂದ್ರೇಷಮೂರ್ಜಂ ದುಹಾನಾ । ಋ. ೮-೧೦೦-೧೧ । ಇತ್ಯಾದಿಷು ದೃಷ್ಟತ್ವಾತ್ । ತತ್ಪರತಯಾ ಪೂರ್ವವದ್ಯೋಜ್ಯಂ ॥

ಪ್ರತಿಪದಾರ್ಥ

**ಪಯಃ**—ಕ್ಷೀರವನ್ನು । **ದುಹಾನಾ**—ಕರೆಯುವುದೂ । **ವ್ರತನೀಃ**—ಆದುದರಿಂದಲೇ ಕರ್ಮಕ್ಕೆ ಸಾಧಕವಾಗಿರುವುದೂ ಆದ । **ಯಾ ಗೌಃ**—ಯಾವ ಧೇನುವು । **ನಿಷ್ಕೃತಂ**—ಉಪಕರಣಗಳಿಂದ ಸಂಸ್ಕೃತವಾದ । **ವರ್ತನಿಂ**—ಯಜ್ಞವನ್ನು । **ಅವಾರತಃ**—ಸ್ವಪ್ರೇರಣೆಯಿಂದಲೇ (ಯಾರಿಂದಲೂ ಪ್ರಾರ್ಥಿಸಲ್ಪಡದೆ) । **ಪರ್ಯೇತಿ**—ಬಂದು ಸೇರುವುದೋ । **ಸಾ**—ಅಂತಹ । **ಪ್ರಬ್ರುವಾಣಾ**—ನನ್ನಿಂದ ಸ್ತುತಿಸಲ್ಪಡುವ ಧೇನುವು । **ದಾಶುಷೇ**—ದಾನಮಾಡುವ । **ವರುಣಾಯ**—ವರುಣನಿಗೂ । **ದೇವೇಭ್ಯಃ**—ಇಂದ್ರಾದಿ ದೇವತೆಗಳಿಗೂ । **ಹವಿಷಾ**—ಹವಿಸ್ಸಿನಿಂದ । **ವಿವಸ್ವತೇ**—ದೇವತೆಗಳನ್ನು ಪೂಜಿಸುವ ನನಗೂ । **ದಾಶತ್**—ಕ್ಷೀರವನ್ನು ಕೊಡಲಿ.

ಭಾವಾರ್ಥ

ಕ್ಷೀರವನ್ನು ಕರೆಯುವುದೂ, ಆದುದರಿಂದಲೇ ಕರ್ಮಕ್ಕೆ ಸಾಧಕವಾಗಿರುವುದೂ ಆದ ಯಾವ ಧೇನುವು ಉಪಕರಣಗಳಿಂದ ಸಂಸ್ಕೃತವಾದ ಯಜ್ಞವನ್ನು ಸ್ವಪ್ರೇರಣೆಯಿಂದಲೇ ಬಂದು ಸೇರುವುದೋ ಅಂತಹ ನನ್ನಿಂದ ಸ್ತುತಿಸಲ್ಪಡುವ ಧೇನುವು ದಾನಮಾಡುವ ವರುಣನಿಗೂ, ಇಂದ್ರಾದಿ ದೇವತೆಗಳಿಗೂ, ಹವಿಸ್ಸಿನಿಂದ ದೇವತೆಗಳನ್ನು ಪೂಜಿಸುವ ನನಗೂ ಕ್ಷೀರವನ್ನು ಕೊಡಲಿ.

English Translation

May that cow, the leader of the rite, which yielding her milk proceeds uncalled to the consecrated place(of sacrifice), may she, propitiated by me, yield her milk to (me), the offerer of oblations to liberal Varuna and the (other) gods.

ಸಂಹಿತಾಪಾಠಃ

**ದಿವಕ್ಷಸೋ ಅಗ್ನಿಜಿಹ್ವಾ ಋತಾವೃಧ ಋತಸ್ಯ ಯೋನಿಂ ವಿಮೃಶಂತ ಆಸತೇ ।**
**ದ್ಯಾಂ ಸ್ಕಭಿತ್ವ್ಯ೧ಪ ಆ ಚಕ್ರುರೋಜಸಾ ಯಜ್ಞಂ ಜನಿತ್ವೀ ತನ್ವೀ೩ನಿ**
**ಮಾಮೃಜುಃ ॥ ೭ ॥**

ಪದಪಾಠಃ

**ದಿವಕ್ಷಸಃ । ಅಗ್ನಿಽಜಿಹ್ವಾಃ । ಋತಽವೃಧಃ । ಋತಸ್ಯ । ಯೋನಿಂ । ವಿಽಮೃಶಂತಃ । ಆಸತೇ ॥**
**ದ್ಯಾಂ । ಸ್ಕಭಿತ್ವೀ । ಅಪಃ । ಆ । ಚಕ್ರುಃ । ಓಜಸಾ । ಯಜ್ಞಂ । ಜನಿತ್ವೀ । ತನ್ವಿ । ನಿ । ಮಮೃಜುಃ ॥**

ಸಾಯಣಭಾಷ್ಯಂ

**ದಿವಕ್ಷಸಃ ಸ್ವತೇಜಸಾ ದಿವಂ ವ್ಯಾಪ್ನುವಂತಃ ॥ ಅಕ್ಷೂ ವ್ಯಾಪ್ತೌ । ಅಸುನಿ ರೂಪಂ ॥ ಯದ್ವಾ । ದಿವೋ ವೋಢಾರಃ ಅಗ್ನಿಜಿಹ್ವಾ ಅಗ್ನ್ಯಾಸ್ಯಾಃ । ಅಗ್ನಿನಾ ಹವೀಂಷಿ ಲಿಹಂತ್ಯಾಸ್ವಾದಯಂತೀತಿ**

ತನ್ಮುಖಾಃ । ಋತಾವೃಧೋ ಯಜ್ಞವೃದ್ಧಾ ಯಜ್ಞಸ್ಯ ವರ್ಧಯಿತಾರೋ ದೇವಾ ಋತಸ್ಯ ಸತ್ಯಭೂತಸ್ಯ ಯಜ್ಞಸ್ಯ ಯೋನಿಂ ಸ್ಥಾನಂ ನಿಮೃಶಂತೋ ವಿಚಾರಯಂತಃ ಪ್ರತೀಕ್ಷಮಾಣಾಃ ಸಂತ ಆಸತೇ । ಸರ್ವತ್ರ ತಿಷ್ಠಂತಿ । ತ ಇಮೇ ದ್ಯಾಂ ದ್ಯುಲೋಕಂ ಸ್ಕಭಿತ್ವೀ ಸ್ಕಭಿತ್ವಾ ತಾಂ ಧಾರಯಿತ್ವೌಜಸಾ ಸ್ವಬಲೇನಾ-ಪೋಽಪೇಕ್ಷಿತಾನ್ಯುದಕಾನ್ಯಾ ಚಕ್ರುಃ । ಆಕುರ್ವಂತಿ । ತತೋ ಯಜ್ಞಂ ಯಜನೀಯಂ ಹವಿಶ್ಚ ಜನಿತ್ವೀ ಜನಯಿತ್ವಾ ತನ್ವಿ ಸ್ವಶರೀರೇ ನಿ ಮಾಮೃಜುಃ । ನಿಮೃಜಂತಿ । ನಿತರಾಮಲಂಕುರ್ವಂತಿ । ಹವಿರ್ಭಕ್ಷ-ಯಂತೀತ್ಯರ್ಥಃ ॥

ಪ್ರತಿಪದಾರ್ಥ

**ದಿವಕ್ಷಸಃ**—ತಮ್ಮ ತೇಜಸ್ಸಿನಿಂದ ದ್ಯುಲೋಕವನ್ನು ವ್ಯಾಪಿಸುವವರೂ । **ಅಗ್ನಿಜಿಹ್ವಾಃ**—ಅಗ್ನಿರೂಪವಾದ ನಾಲಗೆಯನ್ನು ಹೊಂದಿರುವವರೂ । **ಋತಾವೃಧಃ**—ಯಜ್ಞವರ್ಧಕರೂ ಆದ ದೇವತೆಗಳು । **ಋತಸ್ಯ**—ಸತ್ಯಾತ್ಮಕವಾದ ಯಜ್ಞದ । **ಯೋನಿಂ**—ಸ್ಥಾನವನ್ನು । **ನಿಮೃಶಂತಃ**—ಧ್ಯಾನದೃಷ್ಟಿಯಿಂದ ನೋಡುತ್ತ । **ಆಸತೇ**—ಕುಳಿತಿರುತ್ತಾರೆ । **ದ್ಯಾಂ**—ದ್ಯುಲೋಕವನ್ನು । **ಸ್ಕಭಿತ್ವೀ**—ಧರಿಸಿದವರಾಗಿ । **ಓಜಸಾ**—ತಮ್ಮ ಶಕ್ತಿಯಿಂದ । **ಅಪಃ**—ಉದಕಗಳನ್ನು । **ಆ ಚಕ್ರುಃ**—ಉತ್ಪನ್ನಮಾಡುತ್ತಾರೆ । **ಯಜ್ಞಂ**—ಯಜ್ಞವನ್ನು (ಹವಿಸ್ಸನ್ನು) । **ಜನಿತ್ವೀ**—ಉತ್ಪನ್ನಮಾಡಿ । **ತನ್ವಿ**—ತಮ್ಮ ಶರೀರವನ್ನು । **ನಿ ಮಾಮೃಜುಃ**—ಅದರಿಂದ ಅಲಂಕರಿಸಿಕೊಳ್ಳುತ್ತಾರೆ.

ಭಾವಾರ್ಥ

ತಮ್ಮ ತೇಜಸ್ಸಿನಿಂದ ದ್ಯುಲೋಕವನ್ನು ವ್ಯಾಪಿಸುವವರೂ, ಅಗ್ನಿರೂಪವಾದ ನಾಲಿಗೆಯನ್ನು ಹೊಂದಿರುವವರೂ, ಯಜ್ಞವರ್ಧಕರೂ ಆದ ದೇವತೆಗಳು ಸತ್ಯಾತ್ಮಕವಾದ ಯಜ್ಞದ ಸ್ಥಾನವನ್ನು ಧ್ಯಾನದೃಷ್ಟಿಯಿಂದ ನೋಡುತ್ತ ಕುಳಿತಿರುತ್ತಾರೆ. ದ್ಯುಲೋಕವನ್ನು ಧರಿಸಿದವರಾಗಿ, ತಮ್ಮ ಶಕ್ತಿಯಿಂದ ಉದಕಗಳನ್ನು ಉತ್ಪನ್ನಮಾಡುತ್ತಾರೆ. ಯಜ್ಞವನ್ನು ಉತ್ಪನ್ನಮಾಡಿ ತಮ್ಮ ಶರೀರವನ್ನು ಅದರಿಂದ ಅಲಂಕರಿಸಿಕೊಳ್ಳುತ್ತಾರೆ.

English Translation

Pervading heaven (with their radiance), having Agni as their tongue, the augmenters of sacrifice, (these deities) sit contemplating the place of sacrifice ; sustaining heaven they have produced the waters by their power ; having generated sacrifice, they have decorated their persons (with it).

ಸಂಹಿತಾಪಾಠಃ

ಪರಿಕ್ಷಿತಾ ಪಿತರಾ ಪೂರ್ವಜಾವರೀ ಋತಸ್ಯ ಯೋನಾ ಕ್ಷಯತಃ ಸಮೋಕಸಾ ।
ದ್ಯಾವಾಪೃಥಿವೀ ವರುಣಾಯ ಸವ್ರತೇ ಘೃತವತ್ಪಯೋ ಮಹಿಷಾಯ ಪಿನ್ವತಃ ॥

ಪದಪಾಠಃ

ಪರಿಽಕ್ಷಿತಾ । ಪಿತರಾ । ಪೂರ್ವಜಾವರೀ ಇತಿ ಪೂರ್ವಽಜಾವರೀ । ಋತಸ್ಯ । ಯೋನಾ । ಕ್ಷಯತಃ । ಸಂಽಓಕಸಾ ।

ದ್ಯಾವಾಪೃಥಿವೀ ಇತಿ । ವರುಣಾಯ । ಸವ್ರತೇ ಇತಿ ಸऽವ್ರತೇ । ಘೃತऽವತ್ । ಪಯಃ । ಮಹಿ-

ಷಾಯ । ಪಿನ್ವತಃ ॥ ೮ ॥

ಸಾಯಣಭಾಷ್ಯಂ

ಪರಿಕ್ಷಿತಾ ಪರಿತೋ ನಿವಸಂತ್ಯೌ ಸರ್ವತ್ರ ವ್ಯಾಪಿನ್ಯೌ ಪಿತರಾ ಸರ್ವೇಷಾಂ ಮಾತಾಪಿತೃಭೂತೇ ಅತ ಏವ ಪೂರ್ವಜಾವರೀ ಪೂರ್ವಂ ಜಾತೇ ಸಮೋಕಸಾ ಸಮಾನನಿವಾಸಸ್ಥಾನೇ ಏತೇ ದ್ಯಾವಾಪೃಥಿವ್ಯಾವೃತಸ್ಯ ಯಜ್ಞಸ್ಯ ಯೋನಾ ಯೋನೌ ಸ್ಥಾನೇ ಕ್ಷಯತಃ। ಆಹುತ್ಯಧಿಕರಣತ್ವೇನ ನಿವಸತಃ। ಹವಿರ್ಧಾನರೂಪೇ ವಾ ಕ್ಷಯತಃ। ಕಿಂಚ ಸವ್ರತೇ ಸಮಾನಕರ್ಮಾಣೇ ತೇ ಮಹಿಷಾಯ ಮಹತೇ ಪೂಜ್ಯಾಯ ವಾ ವರುಣಾಯ । ತಂ ಯಷ್ಟುಂ । ಉಪಲಕ್ಷಣಮೇತತ್ । ಅನ್ಯಾನ್ಯೇವಾನಪಿ । ಘೃತವತ್ಕ್ಷರಣವತ್ ಪಯ ಉದಕಂ ಪಿನ್ವತಃ । ಸಿಂಚತಃ । ಉದಕೇನ ಹ್ಯನ್ನಂ ಜಾಯತೇ ॥

ಪ್ರತಿಪದಾರ್ಥ

**ಪರಿಕ್ಷಿತಾ**—ಸರ್ವತ್ರ ವ್ಯಾಪಿಸಿರುವವರೂ । **ಪಿತರಾ**-ಜಗತ್ತಿಗೆ ಮಾತಾಪಿತೃರೂಪರೂ । **ಪೂರ್ವಜಾವರೀ**-ಎಲ್ಲಕ್ಕಿಂತಲೂ ಮೊದಲು ಉತ್ಪನ್ನರಾದವರೂ । **ಸಮೋಕಸಾ**—ಸಮಾನವಾದ ಸ್ಥಾನವುಳ್ಳವರೂ ಆದ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳು । **ಋತಸ್ಯ**—ಯಜ್ಞದ । **ಯೋನಾ**—ಸ್ಥಾನದಲ್ಲಿ । **ಕ್ಷಯತಃ**—ವಾಸಮಾಡುತ್ತಾರೆ । **ಸವ್ರತೇ**-ಸಮಾನವಾದ ಕರ್ಮವುಳ್ಳ ಅವರು । **ಮಹಿಷಾಯ**-ಪೂಜ್ಯನಾದ । **ವರುಣಾಯ**-ವರುಣನನ್ನು ಪೂಜಿಸಲು । **ಘೃತವತ್**—ಪ್ರವಹಿಸುವ । **ಪಯಃ**—ಉದಕವನ್ನು । **ಪಿನ್ವತಃ**—ಸುರಿಸುತ್ತಾರೆ.

ಭಾವಾರ್ಥ

ಸರ್ವತ್ರ ವ್ಯಾಪಿಸಿರುವವರೂ, ಜಗತ್ತಿಗೆ ಮಾತಾಪಿತೃರೂಪರೂ, ಎಲ್ಲಕ್ಕಿಂತಲೂ ಮೊದಲು ಉತ್ಪನ್ನರಾದವರೂ, ಸಮಾನವಾದ ಸ್ಥಾನವುಳ್ಳವರೂ ಆದ ದ್ಯಾವಾಪೃಥಿವಿಗಳು ಯಜ್ಞದ ಸ್ಥಾನದಲ್ಲಿ ವಾಸಮಾಡುತ್ತಾರೆ. ಸಮಾನವಾದ ಕರ್ಮವುಳ್ಳ ಅವರು ಪೂಜ್ಯನಾದ ವರುಣನನ್ನು ಪೂಜಿಸಲು ಪ್ರವಹಿಸುವ ಉದಕವನ್ನು ಸುರಿಸುತ್ತಾರೆ.

## English Translation

The encompassing parents (heaven and earth), born of old, having a common dwelling, sit down upon the place of sacrifice ; engaged in a common observance they sprinkle upon the adorable Varuna water mixed with butter.

ಸಂಹಿತಾಪಾಠಃ

ಪರ್ಜನ್ಯಾವಾತಾ ವೃಷಭಾ ಪುರೀಷಿಣೇಂದ್ರವಾಯೂ ವರುಣೋ ಮಿತ್ರೋ

ಅರ್ಯಮಾ ॥

ದೇವಾँ ಆದಿತ್ಯಾँ ಅದಿತಿಂ ಹವಾಮಹೇ ಯೇ ಪಾರ್ಥಿವಾಸೋ ದಿವ್ಯಾಸೋ ಅಪ್ಸು ಯೇ ॥ ೯ ॥

ಪದಪಾಠಃ

ಪರ್ಜನ್ಯಾವಾತಾ । ವೃಷಭಾ । ಪುರೀಷಿಣಾ । ಇಂದ್ರವಾಯೂ ಇತಿ । ವರುಣಃ । ಮಿತ್ರಃ । ಅರ್ಯಮಾ ॥
ದೇವಾನ್ । ಆದಿತ್ಯಾನ್ । ಅದಿತಿಂ । ಹವಾಮಹೇ । ಯೇ । ಪಾರ್ಥಿವಾಸಃ । ದಿವ್ಯಾಸಃ । ಅಪ್ಽಸು । ಯೇ ॥

ಸಾಯಣಭಾಷ್ಯಂ

ಪರ್ಜನ್ಯಾವಾತಾ ಪರ್ಜನ್ಯಾವಾತೌ ಪರ್ಜನ್ಯಾವಾಯೂ ವೃಷಭಾ ವೃಷಭೌ ಕಾಮಾನಾಂ ಸೇಕ್ತಾರೌ ಪುರೀಷಿಣಾ ಪುರೀಷಿಣೌ । ಪುರೀಷಮುದಕಂ । ಕರ್ತೃತ್ವೇನ ತದ್ವಂತೌ ತಾವಿಂದ್ರವಾಯೂ ವರುಣಾದಯಶ್ಚ ಏತೇ ಸ್ವಮಹಿಮ್ನಾ ಸರ್ವತ್ರ ವರ್ತಂತೇ । ವಾಯೋಃ ಪರ್ಜನ್ಯೇನೇಂದ್ರೇಣ ಚ ತತ್ಕಾರ್ಯಾಪೇಕ್ಷಯಾ ಸಹೋಪಾದಾನಂ । ಏತಾನಾದಿತ್ಯಾನ್ದೇವಾನದಿತಿಂ ತೇಷಾಂ ಮಾತರಂ ಚ ಹವಾಮಹೇ । ಅಸ್ಮಿನ್ಯಜ್ಞೇ ವಯಮಾಹ್ವಯಾಮಃ । ಕಿಂಚ ಯೇ ದೇವಾಃ ಪಾರ್ಥಿವಾಸಃ ಪಾರ್ಥಿವಾಃ ಪೃಥಿವ್ಯಾಂ ಭವಾ ಯೇ ಚ ದಿವ್ಯಾ ದಿವಿ ಜಾತಾ ಯೇ ಚಾಪ್ಸ್ವಂತರಿಕ್ಷೇ ಸಮುತ್ಪನ್ನಾಃ ತಾನಾಹ್ವಯಾಮಹೇ ॥

ಪ್ರತಿಪದಾರ್ಥ

**ವೃಷಭಾ**—ಇಷ್ಟಾರ್ಥಪ್ರದರಾದ । **ಪರ್ಜನ್ಯಾವಾತಾ**—ಪರ್ಜನ್ಯ ಮತ್ತು ವಾಯುಗಳೂ । **ಪುರೀಷಿಣಾ**—ಉದಕವಂತರಾದ । **ಇಂದ್ರವಾಯೂ**—ಇಂದ್ರ ಮತ್ತು ವಾಯುದೇವತೆಗಳೂ । **ವರುಣಃ**—ವರುಣನೂ । **ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೂ ಸರ್ವತ್ರ ವ್ಯಾಪಿಸಿದ್ದಾರೆ । **ಯೇ**—ಯಾರು । **ಪಾರ್ಥಿವಾಸಃ**—ಪೃಥ್ವಿಯಲ್ಲಿರುವವರೋ । **ಯೇ**—ಯಾರು । **ದಿವ್ಯಾಸಃ**—ದ್ಯುಲೋಕದಲ್ಲಿರುವವರೋ । **ಅಪ್ಸು**—ಯಾರು ಅಂತರಿಕ್ಷದಲ್ಲಿರುವವರೋ । **ದೇವಾನ್**—ಆ ದೇವತೆಗಳನ್ನೂ । **ಆದಿತ್ಯಾನ್**—ಆದಿತ್ಯರನ್ನೂ । **ಅದಿತಿಂ**—ದೇವಮಾತೆಯಾದ ಅದಿತಿಯನ್ನೂ । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ.

ಭಾವಾರ್ಥ

ಇಷ್ಟಾರ್ಥಪ್ರದರಾದ ಪರ್ಜನ್ಯ ಮತ್ತು ವಾಯುಗಳೂ, ಉದಕವಂತರಾದ ಇಂದ್ರ ಮತ್ತು ವಾಯುದೇವತೆಗಳೂ, ವರುಣನೂ, ಮಿತ್ರನೂ, ಅರ್ಯಮನೂ, ಸರ್ವತ್ರ ವ್ಯಾಪಿಸಿದ್ದಾರೆ. ಪೃಥ್ವಿಯಲ್ಲಿರುವವರೂ, ದ್ಯುಲೋಕದಲ್ಲಿರುವವರೂ, ಅಂತರಿಕ್ಷಸ್ಥರೂ ಆದ ಸಕಲ ದೇವತೆಗಳನ್ನೂ, ಆದಿತ್ಯರನ್ನೂ, ದೇವಮಾತೆಯಾದ ಅದಿತಿಯನ್ನೂ ಪ್ರಾರ್ಥಿಸಿ ಕರೆಯುತ್ತೇವೆ.

## English Translation

The two showerers (of desires), Parjanya and Vata, the two senders of water, Indra and Vayu, Varuna, Mitra, Aryaman; we invoke the divine Adityas, Aditi and the gods, who dwell on the earth, or in heaven, or in he waters.

ಸಂಹಿತಾಪಾಠಃ

ತ್ವಷ್ಟಾ॑ರಂ ವಾ॒ಯುಮೃ॑ಭವೋ॒ ಯ ಓಹ॑ತೇ॒ ದೈವ್ಯಾ॒ ಹೋತಾ॑ರಾ ಉ॒ಷಸಂ॑ ಸ್ವ॒ಸ್ತಯೇ॑ ।
ಬೃ॒ಹಸ್ಪತಿಂ॑ ವೃತ್ರಖಾ॒ದಂ ಸು॒ಮೇಧ॑ಸಮಿಂದ್ರಿ॒ಯಂ ಸೋಮಂ॑ ಧನ॒ಸಾ ಉ॑ ಈಮಹೇ ॥ ೧೦ ॥

ಪದಪಾಠಃ

ತ್ವಷ್ಟಾ॑ರಂ । ವಾ॒ಯುಂ । ಋ॒ಭ॒ವಃ॒ । ಯಃ । ಓಹ॑ತೇ । ದೈವ್ಯಾ॒ । ಹೋತಾ॑ರಾ । ಉ॒ಷಸಂ॑ । ಸ್ವ॒ಸ್ತಯೇ॑ ॥
ಬೃ॒ಹಸ್ಪತಿಂ॑ । ವೃ॒ತ್ರ॒ಽಖಾ॒ದಂ । ಸು॒ಽಮೇ॒ಧಸಂ॑ । ಇ॒ಂದ್ರಿ॒ಯಂ । ಸೋಮಂ॑ । ಧ॒ನ॒ಸಾಃ । ಊಂ ಇತಿ । ಈ॒ಮ॒ಹೇ॒ ॥ ೧೦ ॥

ಸಾಯಣಭಾಷ್ಯಂ

ಹೇ ಋಭವಃ । ಋತೇನ ಸತ್ಯೇನ ಭಾಂತೀತ್ಯೃಭವಃ । ಉರು ಪ್ರಭೂತಂ ಸ್ವತೇಜಸಾ ಭಾಂತೀತಿ ವಾ । ಹೇ ಮೇಧಾವಿನಃ ಯಃ ಸೋಮಃ ಸ್ವಸ್ತಯೇ ಕಲ್ಯಾಣಾಯ ಯುಷ್ಮಾಕಂ ಮದಾಯ ತ್ವಷ್ಟೃಪ್ರಭೃತೀನೋಹತೇ ॥ ಓಹಿರ್ಗತ್ಯರ್ಥಃ । ಭೌವಾದಿಕಃ ॥ ಆವಹತಿ ಪ್ರಾಪ್ನೋತಿ । ತಥಾ ಬೃಹಸ್ಪತಿಂ ಸುಮೇಧಸಂ ಸುಪ್ರಜ್ಞಂ ವೃತ್ರಖಾದಂ ವೃತ್ರಸ್ಯಾಸುರಸ್ಯ ಖಾದಿತಾರಮಿಂದ್ರಂ ಚ ಪ್ರಾಪ್ನೋತಿ ಧನಸಾ ಧನಂ ಸಂಭಜಮಾನಾ ವಯಮಿಂದ್ರಿಯಮಿಂದ್ರಜುಷ್ಟಂ ತಂ ಸೋಮಮೀಮಹೇ। ಧನಂ ಯಾಚಾಮಹೇ। ಈಮಹ ಇತಿ ಯಾಚ್ಞಾಕರ್ಮಾ ॥ ಈಙ್ ಗತೌ ದೈವಾದಿಕಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್॥

ಪ್ರತಿಪದಾರ್ಥ

**ಋಭವಃ**—ಎಲೈ ಋಭುಗಳೇ । **ಯಃ**—ಯಾವ ಸೋಮನು । **ಸ್ವಸ್ತಯೇ**—ನಿಮ್ಮ ಕಲ್ಯಾಣಕ್ಕಾಗಿ। **ತ್ವಷ್ಟಾರಂ**—ತ್ವಷ್ಟೃವನ್ನೂ । **ವಾಯುಂ**—ವಾಯುವನ್ನೂ । **ದೇವ್ಯಾ ಹೋತಾರೌ**—ದೇವಹೋತೃಗಳಾದ ಅಶ್ವಿನೀದೇವತೆಗಳನ್ನೂ । **ಉಷಸಂ**—ಉಷೋದೇವಿಯನ್ನೂ । **ಬೃಹಸ್ಪತಿಂ**-ಬೃಹಸ್ಪತಿಯನ್ನೂ । **ವೃತ್ರಖಾದಂ**-ವೃತ್ರಸಂಹಾರಕನೂ । **ಸುಮೇಧಸಂ**—ಉತ್ತಮವಾದ ಪ್ರಜ್ಞಾಯುತನೂ ಆದ ಇಂದ್ರನನ್ನೂ । **ಓಹತೇ**—ಯಜ್ಞಕ್ಕೆ ಕರೆತರುವನೋ ಅಂತಹ । **ಇಂದ್ರಿಯಂ**—ಇಂದ್ರನಿಗೆ ಮಿತ್ರನಾದ । **ಸೋಮಂ**—ಸೋಮನನ್ನು । **ಧನಸಾಃ**—ಧನವನ್ನು ಅಪೇಕ್ಷಿಸುವ ನಾವು । **ಈಮಹೇ**—ಧನಕ್ಕಾಗಿ ಯಾಚಿಸುತ್ತೇವೆ.

ಭಾವಾರ್ಥ

ಎಲೈ ಋಭುಗಳೇ, ಯಾವ ಸೋಮನು ನಿಮ್ಮ ಕಲ್ಯಾಣಕ್ಕಾಗಿ ತ್ವಷ್ಟೃವನ್ನೂ, ವಾಯುವನ್ನೂ, ದೇವಹೋತೃಗಳಾದ ಅಶ್ವಿನೀದೇವತೆಗಳನ್ನೂ, ಉಷೋದೇವಿಯನ್ನೂ, ಬೃಹಸ್ಪತಿಯನ್ನೂ, ವೃತ್ರಸಂಹಾರಕನೂ, ಉತ್ತಮವಾದ

ಪ್ರಜ್ಞಾಯುತನೂ ಆದ ಇಂದ್ರನನ್ನೂ ಯಜ್ಞಕ್ಕೆ ಕರೆತರುವನೋ ಅಂತಹ ಇಂದ್ರನಿಗೆ ಮಿತ್ರನಾದ ಸೋಮನನ್ನು ಧನಾಪೇಕ್ಷಿಗಳಾದ ನಾವು ಧನಕ್ಕಾಗಿ ಯಾಚಿಸುತ್ತೇವೆ.

English Translalion

Desirous of wealth, we solicit that Soma, the friend of Indra, who for your welfare, Ribhus, brings (hither) Twashtri, Vayu, the two divine sacrificers (the Ashwins), Dawn, Brihaspati, and the wise slayer of the Vritra.

ಸಂಹಿತಾಪಾಠಃ

ಬ್ರಹ್ಮ ಗಾಮಶ್ವಂ ಜನಯಂತ ಓಷಧೀರ್ವನಸ್ಪತೀನ್ಪೃಥಿವೀಂ ಪರ್ವತಾಁ ಅಪಃ ।

ಸೂರ್ಯಂ ದಿವಿ ರೋಹಯಂತಃ ಸುದಾನವ ಆರ್ಯಾ ವ್ರತಾ ವಿಸೃಜಂತೋ ಅಧಿ ಕ್ಷಮಿ ॥ ೧೧ ॥

ಪದಪಾಠಃ

ಬ್ರಹ್ಮ । ಗಾಂ । ಅಶ್ವಂ । ಜನಯಂತಃ । ಓಷಧೀಃ । ವನಸ್ಪತೀನ್ । ಪೃಥಿವೀಂ । ಪರ್ವತಾನ್ । ಅಪಃ ॥

ಸೂರ್ಯಂ । ದಿವಿ । ರೋಹಯಂತಃ । ಸುऽದಾನವಃ । ಆರ್ಯಾ । ವ್ರತಾ । ವಿऽಸೃಜಂತಃ । ಅಧಿ । ಕ್ಷಮಿ ॥

ಸಾಯಣಭಾಷ್ಯಂ

ಬ್ರಹ್ಮ ವರ್ಧನಸಾಧನಮನ್ನಂ । ಅನ್ನೇನ ಹಿ ಸರ್ವಾಃ ಪ್ರಜಾಃ ವರ್ಧಂತೇ । ಗಾಮಶ್ವಮೇತತ್ಪ್ರಭೃತೀನ್ಪಶೂನ್ ತಥೌಷಧೀರ್ವನಸ್ಪತೀಂಶ್ಚ ತಥಾ ಪೃಥಿವೀಂ ವಿಸ್ತೀರ್ಣಾಂ ಭೂಮಿಂ ಪರ್ವತಾಞ್ಶೈಲೋಚ್ಛ್ರಯಾನ್ ವೃಷ್ಟ್ಯಾ ಜಗದಾಪೂರಕಾನ್ಮೇಘಾನ್ವಾ ಅಪ ಉದಕಾನ್ಯಂತರಿಕ್ಷಂ ವಾ ಏತಾಞ್ಜನಯಂತ ಉತ್ಪಾದಯಂತಃ ಕಿಂಚ ದಿವಿ ದ್ಯುಲೋಕೇ ಸೂರ್ಯಮಾದಿತ್ಯಂ ರೋಹಯಂತಃ ಸುದಾನವಃ ಶೋಭನದಾನಾಸ್ತೇಽಮೀ ದೇವಾ ಅಧಿ ಕ್ಷಮಿ ॥ ಆತ ಇತಿ ಯೋಗವಿಭಾಗಾತ್ । ಪಾ-೬-೪-೧೪೦ । ಅಕಾರ ಲೋಪಃ ॥ ಕ್ಷಮಾಯಾಂ ಪೃಥಿವ್ಯಾಮಾರ್ಯಾ ಶ್ರೇಷ್ಠಾನಿ ಕಲ್ಯಾಣಾನಿ ವ್ರತಾನಿ ಕರ್ಮಾಣಿ ಯಾಗಾದೀನಿ ವಿಸೃಜಂತಃ ಪ್ರಸಾರಯಂತಃ ಸರ್ವತ್ರ ವರ್ತಂತೇ । ತಾನ್ವಯಂ ಧನಂ ಯಾಚಾಮಹ ಇತಿ ಶೇಷಃ ॥

ಪ್ರತಿಪದಾರ್ಥ

ಬ್ರಹ್ಮ—ಪೋಷಕವಾದ ಅನ್ನವನ್ನೂ । **ಗಾಂ**—ಗೋವನ್ನೂ । **ಅಶ್ವಂ**—ಅಶ್ವವನ್ನೂ । **ಓಷಧೀಃ**—ಓಷಧಿಗಳನ್ನೂ । **ವನಸ್ಪತೀನ್**—ವೃಕ್ಷಗಳನ್ನೂ । **ಪೃಥಿವೀಂ**—ಪೃಥ್ವಿಯನ್ನೂ । **ಪರ್ವತಾನ್**—ಪರ್ವತ

ಗಳನ್ನೂ । **ಅಪಃ**—ಉದಕಗಳನ್ನೂ । **ಜನಯಂತಃ**—ಉತ್ಪನ್ನಮಾಡುತ್ತಲೂ । **ದಿವಿ**—ದ್ಯುಲೋಕದಲ್ಲಿ । **ಸೂರ್ಯಂ**—ಸೂರ್ಯನನ್ನು । **ರೋಹಯಂತಃ**—ಉನ್ನತವಾಗಿ ಸ್ಥಾಪಿಸುತ್ತಲೂ ಇರುವ । **ಸುದಾನವಃ**—ಉದಾರವಾದ ದಾನಿಗಳಾದ ದೇವತೆಗಳು । **ಅಧಿ ಕ್ಷಮಿ**—ಪೃಥ್ವಿಯಮೇಲೆ । **ಆರ್ಯಾ ವ್ರತಾ**—ಕಲ್ಯಾಣಕಾರಗಳಾದ ಯಾಗಾದಿ ಕರ್ಮಗಳನ್ನು । **ವಿಸೃಜಂತಃ**—ವಿಸ್ತೃತವಾಗಿ ನೆರವೇರಿಸುತ್ತಾರೆ.

ಭಾವಾರ್ಥ

ಪೋಷಕವಾದ ಅನ್ನವನ್ನೂ, ಅಶ್ವವನ್ನೂ, ಓಷಧಿಗಳನ್ನೂ, ವೃಕ್ಷಗಳನ್ನೂ, ಪೃಥ್ವಿಯನ್ನೂ, ಪರ್ವತಗಳನ್ನೂ, ಉದಕಗಳನ್ನೂ ಉತ್ಪನ್ನಮಾಡುತ್ತಲೂ, ದ್ಯುಲೋಕದಲ್ಲಿ ಸೂರ್ಯನನ್ನು ಉನ್ನತವಾಗಿ ಸ್ಥಾಪಿಸುತ್ತಲೂ ಇರುವ ಉದಾರವಾದ ದಾನಿಗಳಾದ ದೇವತೆಗಳು ಪೃಥ್ವಿಯಮೇಲೆ ಕಲ್ಯಾಣಕಾರಕಗಳಾದ ಯಾಗಾದಿಕರ್ಮಗಳನ್ನು ವಿಸ್ತೃತವಾಗಿ ನೆರವೇರಿಸುತ್ತಾರೆ.

English Translation

Generating food, cows, horses, plants, trees, the earth mountains and waters, elevating the sun in heaven, munificent, promoting sacred observances upon the earth, (they abide everywhere).

ಸಂಹಿತಾಪಾಠಃ

**ಭುಜ್ಯುಮಂಹಸಃ ಪಿಪೃಥೋ ನಿರಶ್ವಿನಾ ಶ್ಯಾವಂ ಪುತ್ರಂ ವಧ್ರಿಮತ್ಯಾ ಅಜಿ-ನ್ವತಂ ।**
**ಕಮದ್ಯುವಂ ವಿಮದಾಯೋಹಥುರ್ಯುವಂ ವಿಷ್ಣಾಪ್ವಂ೧ವಿಶ್ವಕಾಯಾವ ಸೃಜಥಃ ॥ ೧೨ ॥**

ಪದಪಾಠಃ

**ಭುಜ್ಯುಂ । ಅಂಹಸಃ । ಪಿಪೃಥಃ । ನಿಃ । ಅಶ್ವಿನಾ । ಶ್ಯಾವಂ । ಪುತ್ರಂ । ವಧ್ರಿಽಮತ್ಯಾಃ । ಅಜಿನ್ವತಂ । ಕಮಽದ್ಯುವಂ । ವಿಽಮದಾಯ । ಊಹಥುಃ । ಯುವಂ । ವಿಷ್ಣಾಪ್ವಂ । ವಿಶ್ವಕಾಯ । ಅವ । ಸೃಜಥಃ ॥**

ಸಾಯಣಭಾಷ್ಯಂ

**ಹೇ ಅಶ್ವಿನಾಶ್ವವಂತೌ ಸರ್ವಂ ವ್ಯಾಪ್ನುವಂತೌ ವೈತನ್ನಾಮಕೌ ಹೇ ದೇವೌ ಅಂಹಸ ಉಪದ್ರವ-ಕಾರಿಣಃ ಸಮುದ್ರಾದ್ಭುಜ್ಯಂ ತುಗ್ರಪುತ್ರಮೇತನ್ನಾಮಾನಂ ನಿಃ ಪಿಪೃಥಃ । ನಿಷ್ಪಾರಯಥಃ । ನಿತರಾಂ ರಕ್ಷಥಃ ॥ ಪೄ ಪಾಲನಪೂರಣಯೋಃ । ಜೌಹೋತ್ಯಾದಿಕಃ ॥ ನಿಷ್ಪಾಗ್ರ್ಯಂ ಪಾರಯಥಃ ಸಮುದ್ರಾತ್ । ಋ. ೧-೧೧೮-೬ । ಇತಿ ನಿಗಮಃ । ತಥಾ ಶ್ಯಾವಂ ಹಿರಣ್ಯಹಸ್ತನಾಮಾನಂ ಪುತ್ರಂ ವಧ್ರಿಮತ್ಯಾ ಏತನ್ನಾಮಿಕಾಯಾ ಅಜಿನ್ವತಂ । ಅಪ್ರೀಣಯತಂ । ಅದತ್ತಂ। ಹಿರಣ್ಯಹಸ್ತಮಶ್ವಿನಾ ರರಾಣಾ। ಋ. ೧-೧೧೭-೨೪।**

**ಇತ್ಯಾದಿ ನಿಗಮಃ। ತಥಾ ಕಮದ್ಯುವಂ ಕಾಮಸ್ಯ ದೀಪನೀಂ ವೇನಪುತ್ರೀಂ ಜಾಯಾಂ ವಿಮದಾ- ಯರ್ಷಯೇ ಯುವಮೂಹಥುಃ। ಪ್ರಾಪಯಥಃ। ಯುವಂ ರಥೇನ ವಿಮದಾಯ । ಋ. ೧೦-೩೯-೭। ಇತಿ ನಿಗಮಃ। ತಥಾ ವಿಷ್ಣಾಪ್ವನಾಮಾನಂ ವಿನಷ್ಟಂ ಪುತ್ರಂ ವಿಶ್ವಕಾಯರ್ಷಯೆ ಆನೀಯಾವ ಸೃಜಥಃ। ಅದತ್ತಂ। ಪಶುಂ ನ ನಷ್ಟಮಿವ ದರ್ಶನಾಯ । ಋ. ೧-೧೧೬-೨೩ । ಇತಿ ನಿಗಮಃ ।।**

ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಅಂಹಸಃ**—ಹಿಂಸೆಗೆ ಸ್ಥಾನವಾದ ಸಮುದ್ರದಿಂದ । **ಭುಜ್ಯುಂ**—ಭುಜ್ಯುವನ್ನು । **ನಿ ಪಿಪೃಥಃ**—ರಕ್ಷಿಸಿದಿರಿ । **ವಧ್ರಿಮತ್ಯಾಃ**—ವಧ್ರಿಮತಿಗೆ । **ಶ್ಯಾವಂ ಪುತ್ರಂ**—ಶ್ಯಾವನೆಂಬ ಪುತ್ರನನ್ನು । **ಅಜಿನ್ವತಂ**—ಅನುಗ್ರಹಿಸಿ ಕೊಟ್ಟಿರಿ । **ವಿಮದಾಯ**—ವಿಮದನೆಂಬ ಋಷಿಗೆ । **ಕಮದ್ಯುವಂ**-ಕಮದ್ಯುವೆಂಬ ಪತ್ನಿಯನ್ನು । **ಯುವಂ**—ನೀವು । **ಊಹಥುಃ**—ಒದಗಿಸಿಕೊಟ್ಟಿರಿ । **ವಿಶ್ವಕಾಯ**—ವಿಶ್ವಕನೆಂಬ ಋಷಿಗೆ । **ವಿಷ್ಣಾಪ್ವಂ**—ವಿಷ್ಣಾಪ್ವನೆಂಬ ಪುತ್ರನನ್ನು । **ಅವ ಸೃಜಥಃ**—ಹುಡುಕಿಕೊಟ್ಟಿರಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಹಿಂಸೆಗೆ ಸ್ಥಾನವಾದ ಸಮುದ್ರದಿಂದ ನೀವು ಭುಜ್ಯುವನ್ನು ರಕ್ಷಿಸಿದಿರಿ. ವಧ್ರಿಮತಿಗೆ ಶ್ಯಾವನೆಂಬ ಪುತ್ರನನ್ನು ಅನುಗ್ರಹಿಸಿಕೊಟ್ಟಿರಿ. ವಿಮದನೆಂಬ ಋಷಿಗೆ ಕಮದ್ಯುವೆಂಬ ಪತ್ನಿಯನ್ನು ಒದಗಿಸಿದಿರಿ. ವಿಶ್ವಕನೆಂಬ ಋಷಿಗೆ ವಿಷ್ಣಾಪ್ವನೆಂಬ ಪುತ್ರನನ್ನು ಹುಡುಕಿಕೊಟ್ಟಿರಿ.

English Translation

You, Ashwins, extricated Bhujyu from calamity, you gave to Vadhrimati her son Shyava ; you gave Kamadyu (as a wife) to Vimada : you restored (the lost) Vishnapu to Vishwaka.

ವಿಶೇಷವಿಷಯಗಳು

ಭುಜ್ಯುವಿನ ವಿಷಯವನ್ನು ನಿಷ್ಟಾಗ್ರ್ಯಂ ಪಾರಯಥಃ ಸಮುದ್ರಾತ್ (ಋ. ಸಂ. ೧-೧೧೮-೬) ಇತ್ಯಾದಿ ಋಕ್ಕುಗಳಲ್ಲಿಯೂ, ವಧ್ರಿಮತಿಯ ವಿಷಯವನ್ನು ಭಾಗ 9-408 ಮತ್ತು 27-954 ಪೇಜುಗಳಲ್ಲಿಯೂ, ವಿಶ್ವಕ ಮತ್ತು ವಿಷ್ಣಾಪುವಿನ ವಿಷಯವನ್ನು 9-298 ಪೇಜಿನಲ್ಲಿಯೂ, ವಿಮದನ ವಿಷಯವನ್ನು ಋ.ಸಂ. ೧೦-೩೯-೭ ಇತ್ಯಾದಿ ಋಕ್ಕುಗಳಲ್ಲಿಯೂ ಬರೆದಿರುವುದನ್ನು ನೋಡಿ.

ಸಂಹಿತಾಪಾಠಃ

**ಪಾವೀರವೀ ತನ್ಯತುರೇಕಪಾದಜೋ ದಿವೋ ಧರ್ತಾ ಸಿಂಧುರಾಪಃ ಸಮು- ದ್ರಿಯಃ ।**

**ವಿಶ್ವೇ ದೇವಾಸಃ ಶೃಣವನ್ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ ॥**

ಪದಪಾಠಃ

ಪಾವೀರವೀ । ತನ್ಯತುಃ । ಏಕಽಪಾತ್ । ಅಜಃ । ದಿವಃ । ಧರ್ತಾ । ಸಿಂಧುಃ । ಆಪಃ । ಸಮುದ್ರಿಯಃ । ವಿಶ್ವೇ । ದೇವಾಸಃ । ಶೃಣವನ್ । ವಚಾಂಸಿ । ಮೇ । ಸರಸ್ವತೀ । ಸಹ । ಧೀಭಿಃ । ಪುರಂಽಧ್ಯಾ ॥ ೧೩ ॥

ಸಾಯಣಭಾಷ್ಯಂ

ಪಾವೀರವ್ಯಾಯುಧವತೀ ತನ್ಯತುಃ ಸ್ತನಯಿತ್ರೀ ವಾಗ್ಮಾಧ್ಯಮಿಕಾ ತಥಾ ದಿವೋ ದ್ಯುಲೋಕಸ್ಯ ಧರ್ತಾ ಧಾರಯಿತಾಜ ಏಕಪಾತ್ ಏಕ ಏವ ಪದ್ಯತೇ ಗಚ್ಛತೀತಿ ನ ಜಾಯತ ಇತ್ಯೇತತ್ಸಂಜ್ಞಕೋ ದೇವಃ ಸಿಂಧುಶ್ಚ ಸಮುದ್ರಿಯಃ । ಸಮುದ್ರಮಂತರಿಕ್ಷಂ । ತತ್ರ ಭವಾ ಆಪಶ್ಚ ॥ ಸಮುದ್ರಾಭ್ರಾದ್ಘ ಇತಿ ಭಾವಾರ್ಥೇ ಘಪ್ರತ್ಯಯಃ ॥ ವಿಶ್ವೇ ದೇವಾಶ್ಚ ಧೀಭಿಃ ಕರ್ಮಭಿರ್ಯುಕ್ತಾಃ ಪುರಂಧ್ಯಾ ಬಹುವಿಧಯಾ ಪ್ರಜ್ಞಯಾ ಸಹಿತಾ ಸರಸ್ವತೀ ಚ ಮೇ ಮದೀಯಾನಿ ವಚಾಂಸಿ ವಕ್ತವ್ಯಾನಿ ಸ್ತೋತ್ರಾಣಿ ಶೃಣವನ್ । ಶೃಣ್ವಂತು । ಪವಿಃ ಶಲ್ಯೋ ಭವತಿ ಯದ್ವಿಪುನಾತಿ ಕಾಯಮಿತ್ಯಾದಿ ನಿರುಕ್ತಮನುಸಂಧೇಯಂ । ನಿ- ೧೨-೩೦ ॥

ಪ್ರತಿಪದಾರ್ಥ

ಪಾವೀರವೀ—ಆಯುಧಧಾರಿಣಿಯೂ । ತನ್ಯತುಃ—ಶಬ್ದಕಾರಿಯೂ ಆದ ಮಾಧ್ಯಮಿಕಾ ವಾಗ್ದೇವಿಯೂ । ದಿವಃ—ದ್ಯುಲೋಕದ । ಧರ್ತಾ—ಧಾರಕನಾದ । ಅಜ ಏಕಪಾತ್—ಅಜ ಏಕಪಾತ್ಸಂಜಕನಾದ ದೇವನೂ । ಸಿಂಧುಃ—ಸಮುದ್ರದೇವತೆಯೂ । ಸಮುದ್ರಿಯಃ—ಅಂತರಿಕ್ಷದಿಂದ ಉತ್ಪನ್ನಗಳಾದ । ಆಪಃ—ಉದಕಗಳೂ । ವಿಶ್ವೇ ದೇವಾಸಃ—ವಿಶ್ವೇದೇವತೆಗಳೂ । ಸರಸ್ವತೀ—ಸರಸ್ವತಿಯೂ । ಧೀಭಿಃ—ಕರ್ಮಯುಕ್ತರಾಗಿಯೂ । ಪುರಂಧ್ಯಾ ಸಹ—ಉತ್ತಮವಾದ ಜ್ಞಾನಯುಕ್ತರಾಗಿಯೂ । ಮೇ—ನನ್ನ । ವಚಾಂಸಿ—ಸ್ತುತಿವಾಕ್ಯಗಳನ್ನು । ಶೃಣ್ವನ್—ಕೇಳಲಿ.

ಭಾವಾರ್ಥ

ಆಯುಧಧಾರಿಣಿಯೂ, ಶಬ್ದಕಾರಕಳೂ ಆದ ಮಾಧ್ಯಮಿಕಾ ವಾಗ್ದೇವಿಯೂ, ದ್ಯುಲೋಕದ ಧಾರಕನಾದ ಅಜ ಏಕಪಾತ್ಸಂಜಕನಾದ ದೇವನೂ, ಸಮುದ್ರದೇವತೆಯೂ, ಅಂತರಿಕ್ಷದಿಂದ ಉತ್ಪನ್ನಗಳಾದ ಉದಕಗಳೂ, ವಿಶ್ವೇ ದೇವತೆಗಳೂ, ಸರಸ್ವತಿಯೂ, ಈ ಎಲ್ಲ ದೇವತೆಗಳೂ ಕರ್ಮಯುಕ್ತರಾಗಿಯೂ, ಉತ್ತಮವಾದ ಜ್ಞಾನಯುಕ್ತ ರಾಗಿಯೂ ನನ್ನ ಸ್ತುತಿವಾಕ್ಯಗಳನ್ನು ಕೇಳಲಿ.

English Translation

May the armed and thundering (voice of mid-heaven); the upholder of heaven, Aja Ekapad, the ocean, the waters of the firmament, the universal gods and Saraswati, accompanied by sacred rites and abundant wisdom, hear my words.

ಸಂಹಿತಾಪಾಠಃ

ವಿಶ್ವೇ ದೇವಾಃ ಸಹ ಧೀಭಿಃ ಪುರಂಧ್ಯಾ ಮನೋರ್ಯಜತ್ರಾ ಅಮೃತಾ ಋತಜ್ಞಾಃ ।

ರಾತಿಷಾಚೋ ಅಭಿಷಾಚಃ ಸ್ವರ್ವಿದಃ ಸ್ವರ್ಗಿರೋ ಬ್ರಹ್ಮ ಸೂಕ್ತಂ ಜುಷೇ-
ರತ ॥ ೧೪ ॥

ಪದಪಾಠಃ

ವಿಶ್ವೇ । ದೇವಾಃ । ಸಹ । ಧೀಭಿಃ । ಪುರಂऽಧ್ಯಾ । ಮನೋಃ । ಯಜತ್ರಾಃ । ಅಮೃತಾಃ । ಋತಜ್ಞಾಃ ।
ರಾತಿऽಸಾಚಃ । ಅಭಿऽಸಾಚಃ । ಸ್ವಃऽವಿದಃ । ಸ್ವಃ । ಗಿರಃ । ಬ್ರಹ್ಮ । ಸುऽಉಕ್ತಂ । ಜುಷೇರತ ॥ ೧೪ ॥

ಸಾಯಣಭಾಷ್ಯಂ

ಧೀಭಿಃ ಕರ್ಮಭಿಃ ಸಹಿತಾಃ ಪುರಂಧ್ಯಾ ಪ್ರಜ್ಞಾನೇನ ಯುಕ್ತಾ ಮನೋರ್ಮನುಷ್ಯಸ್ಯ ಯಜ್ಞೇ ಯಜತ್ರಾ ಯಷ್ಟವ್ಯಾ ಅಮೃತಾ ಮರಣಧರ್ಮರಹಿತಾ ಋತಜ್ಞಾಃ ಸತ್ಯವಿದೋ ರಾತಿಷಾಚೋ ದೀಯಮಾನಂ ಹವಿಃ ಸೇವಮಾನಾ ಅಭಿಷಾಚ ಆಭಿಮುಖ್ಯೇನ ಯಜ್ಞಂ ಸಮವಯಂತಃ ಸಂಗತವಂತಃ ಸ್ವರ್ವಿದಃ ಸರ್ವಸ್ಯ ಲಂಭಕಾ ವಿಶ್ವೇ ಸರ್ವ ಇಂದ್ರಾದಯೋ ದೇವಾಃ ಸ್ವಃ ಸರ್ವಾ ಗಿರೋऽಸ್ಮದೀಯಾಃ ಸ್ತುತೀರ್ಬ್ರಹ್ಮ ಮಹಚ್ಚಾನ್ನಂ ಸೂಕ್ತಂ ಸುಷ್ಠು ವಕ್ತವ್ಯಂ ಸ್ತೋಮಂ ಯದ್ವಾ ಸುಷ್ಠು ಮಂತ್ರೇಣ ಸಹ ದತ್ತಮನ್ನಂ ಜುಷೇರತ । ಸೇವಂತಾಂ ॥ ಜುಷೀ ಪ್ರೀತಿಸೇವನಯೋಃ । ತೌದಾದಿಕಃ । ಅನುದಾತ್ತೇತ್ । ಲಿಙಿ ಝಸ್ಯ ರನಾದೇಶಾಭಾವಶ್ಛಾಂದಸಃ । ಬಹುಲಂ ಛಂದಸೀತಿ ರುಡಾಗಮಃ ॥

ಪ್ರತಿಪದಾರ್ಥ

**ಮನೋಃ**—ಮಾನವನ ಯಜ್ಞದಲ್ಲಿ । **ಯಜತ್ರಾಃ**—ಪೂಜಾರ್ಹರೂ । **ಅಮೃತಾಃ**—ಮರಣಧರ್ಮರಹಿತರೂ । **ಋತಜ್ಞಾಃ**—ಸತ್ಯವೇತ್ತರೂ । **ರಾತಿಷಾಚಃ**—ಹವಿಸ್ಸನ್ನು ಸೇವಿಸುವವರೂ । **ಅಭಿಷಾಚಃ**—ಯಜ್ಞಕ್ಕೆ ಒಟ್ಟಿಗೆ ಬರತಕ್ಕವರೂ । **ಸ್ವರ್ವಿದಃ**—ಸರ್ವಜ್ಞರೂ ಆದ । **ವಿಶ್ವೇ ದೇವಾಃ**—ಸಕಲ ದೇವತೆಗಳೂ । **ಧೀಭಿಃ**—ಕರ್ಮಯುಕ್ತರಾಗಿಯೂ । **ಪುರಂಧ್ಯಾ ಸಹ**—ಉತ್ತಮವಾದ ಜ್ಞಾನಯುಕ್ತರಾಗಿಯೂ । **ಸೂಕ್ತಂ**-ಉತ್ತಮವಾಗಿ ಪಠಿತವಾದ । **ಸ್ವಃ ಗಿರಃ**—ನಮ್ಮ ಸಕಲ ಸ್ತುತಿಗಳನ್ನೂ । **ಬ್ರಹ್ಮ**—ಹವಿಸ್ಸನ್ನೂ । **ಜುಷೇರತ**-ಸೇವಿಸಲಿ.

ಭಾವಾರ್ಥ

ಮಾನವನ ಯಜ್ಞದಲ್ಲಿ ಪೂಜಾರ್ಹರೂ, ಮರಣಧರ್ಮರಹಿತರೂ, ಸತ್ಯವನ್ನರಿತವರೂ, ಹವಿಸ್ಸನ್ನು ಸೇವಿಸುವವರೂ, ಯಜ್ಞಕ್ಕೆ ಒಟ್ಟಿಗೆ ಬರತಕ್ಕವರೂ, ಸರ್ವಜ್ಞರೂ ಆದ ಸಕಲ ದೇವತೆಗಳೂ, ಕರ್ಮಯುಕ್ತರಾಗಿಯೂ, ಉತ್ತಮವಾದ ಜ್ಞಾನಯುಕ್ತರಾಗಿಯೂ ಸಹ ನಮ್ಮಿಂದ ಉತ್ತಮವಾಗಿ ಪಠಿತವಾದ ನಮ್ಮ ಸಕಲ ಸ್ತುತಿಗಳನ್ನೂ ಮತ್ತು ಹವಿಸ್ಸುಗಳನ್ನೂ ಸೇವಿಸಲಿ.

English Translation

May the universal gods, accompanied by sacred rites and abundant wisdom, adorable (at the sacrifice) of men, immortal, the knowers of truth,

waiting on the oblation to be given, arriving together (at the sacrifice) omniscient, graciously accept all our praises and abuudant food with well-suug hymns.

ಸಂಹಿತಾಪಾಠಃ

ದೇವಾನ್ವಸಿಷ್ಠೋ ಅಮೃತಾನ್ವವಂದೇ ಯೇ ವಿಶ್ವಾ ಭುವನಾಭಿ ಪ್ರತಸ್ಥುಃ ||
ತೇ ನೋ ರಾಸಂತಾಮುರುಗಾಯಮದ್ಯ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ || ೧೫ ||

ಪದಪಾಠಃ

ದೇವಾನ್ | ವಸಿಷ್ಠಃ | ಅಮೃತಾನ್ | ವವಂದೇ | ಯೇ | ವಿಶ್ವಾ | ಭುವನಾ | ಅಭಿ | ಪ್ರಽತಸ್ಥುಃ |
ತೇ | ನಃ | ರಾಸಂತಾಂ | ಉರುಽಗಾಯಂ | ಅದ್ಯ | ಯೂಯಂ | ಪಾತ | ಸ್ವಸ್ತಿಽಭಿಃ | ಸದಾ | ನಃ ||

ಸಾಯಣಭಾಷ್ಯಂ

ವಸಿಷ್ಠೋ ವಸಿಷ್ಠಕುಲಜೋಽಯಮೃಷಿರಮೃತಾನ್ಮರಣರಹಿತಾನ್ದೇವಾನ್ವವಂದೇ | ಏವಮುಸ್ತಾವೀತ್ | ಯೇ ದೇವಾ ವಿಶ್ವಾ ವಿಶ್ವಾನಿ ಭುವನಾನಿ ಲೋಕಾನಭಿ ಪ್ರತಸ್ಥುಃ ಸ್ವತೇಜಸಾಭಿಭವಂತಿ | ಅಭಿತಃ ಪ್ರತಿಷ್ಠಂತೀತಿ ವಾ || ಪ್ರಪೂರ್ವಾತ್ತಿಷ್ಠತೇರ್ಲಿಟಿ ರೂಪಂ | ಸಮಾಸಸ್ವರಃ || ತೇ ದೇವಾ ಅದ್ಯಾಸ್ಮಿನ್ದಿನೇ ನೋಽಸ್ಮಭ್ಯಮುರುಗಾಯಂ ಪ್ರಭೂತಯಶಸ್ಕಮನ್ನಂ ರಾಸಂತಾಂ | ಪ್ರಯಚ್ಛಂತು | ಹೇ ದೇವಾಃ ಯೂಯಂ ಸ್ವಸ್ತಿಭಿಃ ಕಲ್ಯಾಣೀಭಿರೂತಿಭಿರ್ನೋಽಸ್ಮಾನ್ಸದಾ ಸರ್ವದಾ ಪಾತ | ರಕ್ಷತ ||

ಪ್ರತಿಪದಾರ್ಥ

**ಯೇ**—ಯಾವ ದೇವತೆಗಳು | **ವಿಶ್ವಾ ಭುವನಾ**—ಸಕಲ ಲೋಕಗಳನ್ನೂ | **ಅಭಿ ಪ್ರತಸ್ಥುಃ**—ತಮ್ಮ ತೇಜಸ್ಸುಗಳಿಂದ ವ್ಯಾಪಿಸಿರುವರೋ ಅಂತಹ | **ಅಮೃತಾನ್**—ಅಮರ್ತ್ಯರಾದ | **ದೇವಾನ್**—ದೇವತೆಗಳನ್ನು | **ವಸಿಷ್ಠಃ**—ವಸಿಷ್ಠವಂಶೋತ್ಪನ್ನನಾದ ಈ ಋಷಿಯು | **ವವಂದೇ**—ಸ್ತುತಿಪೂರ್ವಕವಾಗಿ ನಮಸ್ಕರಿಸಿದ್ದಾನೆ | **ತೇ**—ಅದೇ ದೇವತೆಗಳು | **ಅದ್ಯ**—ಇಂದು | **ನಃ**—ನಮಗೆ | **ಉರುಗಾಯಂ**—ಬಹಳ ಪ್ರಸಿದ್ಧಿಯನ್ನು ಹೊಂದಿದ ಪ್ರಶಸ್ಯವಾದ ಅನ್ನವನ್ನು | **ರಾಸಂತಾಂ**—ಕೊಡಲಿ | (ಎಲೈ ದೇವತೆಗಳೇ) **ಯೂಯಂ**—ನೀವು | **ಸ್ವಸ್ತಿಭಿಃ**—ಕಲ್ಯಾಣಾತ್ಮಕವಾದ ರಕ್ಷಣೆಗಳಿಂದ | **ನಃ**—ನಮ್ಮನ್ನು | **ಸದಾ**—ಯಾವಾಗಲೂ | **ಪಾತ**—ರಕ್ಷಿಸಿರಿ.

ಭಾವಾರ್ಥ

ಯಾವ ದೇವತೆಗಳು ಸಕಲ ಲೋಕಗಳನ್ನೂ ತಮ್ಮ ತೇಜಸ್ಸುಗಳಿಂದ ವ್ಯಾಪಿಸಿರುವಿರೋ ಅಂತಹ ಅಮರ್ತ್ಯರಾದ ದೇವತೆಗಳನ್ನು ವಸಿಷ್ಠವಂಶೋತ್ಪನ್ನನಾದ ಈ ಋಷಿಯು ಸ್ತುತಿಪೂರ್ವಕವಾಗಿ ನಮಸ್ಕರಿಸಿದ್ದಾನೆ. ಅದೇ ದೇವತೆಗಳು ಇಂದು ನಮಗೆ ಅತ್ಯಂತ ಪ್ರಶಸ್ಯವೂ, ಪ್ರಸಿದ್ಧವೂ ಆದ ಅನ್ನವನ್ನು ಕೊಡಲಿ. ಎಲೈ ದೇವತೆಗಳೇ, ನಿಮ್ಮ ಕಲ್ಯಾಣಾತ್ಮಕಗಳಾದ ರಕ್ಷಣೆಗಳಿಂದ ನಮ್ಮನ್ನು ಯಾವಾಗಲೂ ರಕ್ಷಿಸಿರಿ.

## English Translation

(Descendant of ) Vasishtha, I have glorified the immortal gods who preside over all worlds : may they this day bestow upon us widely-famed food ; do you always cherish us with blessings.

# ಅರವತ್ತಾರನೆಯ ಸೂಕ್ತ

ಸಾಯಣಭಾಷ್ಯಂ

**ದೇವಾನ್ಹುವ ಇತಿ ಪಂಚದಶರ್ಚಂ ಷಷ್ಠಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ದೇವಾನ್ಹುವ ಇತ್ಯನುಕ್ರಾಂತಂ ॥ ಪೃಷ್ಠ್ಯಾಭಿಪ್ಲವಷಡಹಯೋಃ ಪಂಚಮೇಽಹನೀದಂ ವೈಶ್ವದೇವನಿವಿದ್ಧಾನಂ । ಸೂತ್ರಿತಂ ಚ । ಇಹೇಹ ವ ಇತಿ ಚತಸ್ರೋ ದೇವಾನ್ಹುವ ಇತಿ ವೈಶ್ವದೇವಂ । ಆ-೭-೫ । ಇತಿ ॥**

ಅನುವಾದವು—**ದೇವಾನ್** ಹುವೇ-ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಅನುಕ್ರಮಣಿಕೆಯಲ್ಲಿ—**ದೇವಾನ್ ಹುವೇ** ಎಂದು ಹೇಳಿರುವುದು. ಪೃಷ್ಠ್ಯ ಮತ್ತು ಅಭಿಪ್ಲವಷಡಹವೆಂಬ ಯಾಗಗಳ ಐದನೆಯ ದಿವಸ ಈ ಸೂಕ್ತವನ್ನು ವೈಶ್ವದೇವನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಇಹೇಹ ವ ಇತಿ ಚತಸ್ರೋ ದೇವಾನ್ ಹುವ ಇತಿ ವೈಶ್ವದೇವಂ** ಎಂಬ ಸೂತ್ರದಿಂದ (ಆ. ೭-೫) ವಿವೃತವಾಗಿರುವುದು.

## ಸೂಕ್ತ—೬೬

ಮಂಡಲ—೧೦ ॥ ಅನುವಾಕ—೫ ॥ ಸೂಕ್ತ—೬೬ ॥
ಅಷ್ಟಕ—೮ ॥ ಅಧ್ಯಾಯ—೨ ॥ ವರ್ಗ—೧೨, ೧೩, ೧೪॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥
ಋಷಿಃ—ವಸುಕರ್ಣೋ ವಾಸುಕ್ರಃ ॥
ದೇವತಾ—ವಿಶ್ವೇದೇವಾಃ ॥
ಛಂದಃ—೧-೧೪. ಜಗತೀ । ೧೫. ತ್ರಿಷ್ಟುಪ್ ॥

ಸಂಹಿತಾಪಾಠಃ

ದೇವಾನ್ಹುವೇ ಬೃಹಚ್ಛ್ರವಸಃ ಸ್ವಸ್ತಯೇ ಜ್ಯೋತಿಷ್ಕೃತೋ ಅಧ್ವರಸ್ಯ ಪ್ರಚೇತಸಃ ।
ಯೇ ವಾವೃಧುಃ ಪ್ರತರಂ ವಿಶ್ವವೇದಸ ಇಂದ್ರಜ್ಯೇಷ್ಠಾಸೋ ಅಮೃತಾ ಋತಾವೃಧಃ ॥ ೧ ॥

ಪದಪಾಠಃ

ದೇವಾನ್ । ಹುವೇ । ಬೃಹತ್ಽಶ್ರವಸಃ । ಸ್ವಸ್ತಯೇ । ಜ್ಯೋತಿಃಽಕೃತಃ । ಅಧ್ವರಸ್ಯ । ಪ್ರಽಚೇತಸಃ ।
ಯೇ । ವವೃಧುಃ । ಪ್ರಽತರಂ । ವಿಶ್ವಽವೇದಸಃ । ಇಂದ್ರಽಜ್ಯೇಷ್ಠಾಸಃ । ಅಮೃತಾಃ । ಋತಽವೃಧಃ ॥ ೧ ॥

ಸಾಯಣಭಾಷ್ಯಂ

ಬೃಹಚ್ಛ್ರವಸಃ ಪ್ರಭೂತಾನ್ನಾ ಜ್ಯೋತಿಷ್ಕೃತ ಆದಿತ್ಯಾಖ್ಯಸ್ಯ ತೇಜಸಃ ಕರ್ತ್ರೄನ್ಪ್ರಚೇತಸಃ ಪ್ರಕೃಷ್ಟಜ್ಞಾನಾಂಸ್ತಾನ್ದೇವಾನಧ್ವರಸ್ಯಾಸ್ಯ ಯಜ್ಞಸ್ಯ ಸ್ವಸ್ತಯೇಽವಿನಾಶಾಯ ನಿರ್ವಿಘ್ನೇನ ಯಜ್ಞಪರಿಸಮಾಪ್ತಯೇ ಹುವೇ । ಆಹ್ವಯಾಮಿ । ವಿಶ್ವವೇದಸಃ ಸರ್ವಧನಾ ಇಂದ್ರಜ್ಯೇಷ್ಠಾಸಃ । ಇಂದ್ರೋ ಜ್ಯೇಷ್ಠಃ ಪ್ರಧಾನೋ ಯೇಷಾಂ । ಇಂದ್ರನೇತೃಕಾ ಇತ್ಯರ್ಥಃ । ಅಮೃತಾ ಮರಣಧರ್ಮರಹಿತಾ ಋತಾವೃಧೋ ಯಜ್ಞೇನ ಪ್ರವೃದ್ಧಾ ಯೇ ದೇವಾಃ ಪ್ರತರಮತ್ಯಂತಂ ವವೃಧುಃ ವರ್ಧಂತೇ ॥

ಪ್ರತಿಪದಾರ್ಥ

**ವಿಶ್ವವೇದಸಃ**—ಸಕಲ ಧನವನ್ನೂ ಹೊಂದಿರುವವರೂ । **ಇಂದ್ರಜ್ಯೇಷ್ಠಾಸಃ**—ಇಂದ್ರನನ್ನೇ ನಾಯಕನನ್ನಾಗಿ ಹೊಂದಿರುವವರೂ । **ಅಮೃತಾಃ**—ಮರಣಧರ್ಮರಹಿತರೂ । **ಋತಾವೃಧಃ**—ಯಜ್ಞದಿಂದ ವೃದ್ಧಿಯನ್ನು ಹೊಂದುವವರೂ ಆದ । **ಯೇ**—ಯಾವ ದೇವತೆಗಳು । **ಪ್ರತರಂ**—ಅತ್ಯಧಿಕವಾಗಿ । **ವವೃಧುಃ**—ಪುಷ್ಟಿಯನ್ನು ಹೊಂದಿರುವರೋ ಅಂತಹ । **ಬೃಹಚ್ಛ್ರವಸಃ**—ಅಧಿಕವಾದ ಅನ್ನವಂತರೂ । **ಜ್ಯೋತಿಷ್ಕೃತಃ**—ತೇಜಸ್ಸನ್ನು ಸೃಜಿಸಿ ಪ್ರಸರಿಸುವವರೂ । **ಪ್ರಚೇತಸಃ**—ಉತ್ಕೃಷ್ಟವಾದ ಜ್ಞಾನಿಗಳೂ ಆದ । **ದೇವಾನ್**—ದೇವತೆಗಳನ್ನು । **ಅಧ್ವರಸ್ಯ**—ಯಜ್ಞದ । **ಸ್ವಸ್ತಯೇ**—ದೋಷರಹಿತವಾದ ಸಮಾಪ್ತಿಗಾಗಿ । **ಹುವೇ**—ಪ್ರಾರ್ಥಿಸಿ ಕರೆಯುತ್ತೇನೆ.

ಭಾವಾರ್ಥ

ಸಕಲ ಧನವನ್ನು ಹೊಂದಿರುವವರೂ, ಇಂದ್ರನನ್ನೇ ನಾಯಕನನ್ನಾಗಿ ಉಳ್ಳವರೂ, ಮರಣಧರ್ಮರಹಿತರೂ, ಯಜ್ಞದಿಂದ ವೃದ್ಧಿಯನ್ನು ಹೊಂದುವವರೂ ಆದ ಯಾವ ದೇವತೆಗಳು ಅತ್ಯಧಿಕವಾಗಿ ಪುಷ್ಟಿಯನ್ನು ಹೊಂದಿರುವರೋ ಅಂತಹ ಅಧಿಕವಾದ ಅನ್ನವಂತರೂ, ತೇಜಸ್ಸನ್ನು ಸೃಜಿಸಿ ಪ್ರಸರಿಸುವವರೂ, ಉತ್ಕೃಷ್ಟವಾದ ಜ್ಞಾನಿಗಳೂ ಆದ ದೇವತೆಗಳನ್ನು ಯಜ್ಞವು ನಿರ್ವಿಘ್ನವಾಗಿ ಮುಗಿಯಲು ಪ್ರಾರ್ಥಿಸಿ ಕರೆಯುತ್ತೇನೆ.

## English Translation

I invoke for the success of the sacrifice the gods who bestow abundant food, the diffusers of light, the extremely wise who flourish mightily, abounding in all riches, having Indra as their chief, immortal, augmented by sacrifice.

ಸಂಹಿತಾಪಾಠಃ

ಇಂದ್ರಪ್ರಸೂತಾ ವರುಣಪ್ರಶಿಷ್ಟಾ ಯೇ ಸೂರ್ಯಸ್ಯ ಜ್ಯೋತಿಷೋ ಭಾಗಮಾನಶುಃ ।
ಮರುದ್ಗಣೇ ವೃಜನೇ ಮನ್ಮ ಧೀಮಹಿ ಮಾಘೋನೇ ಯಜ್ಞಂ ಜನಯಂತ ಸೂರಯಃ ॥ ೨ ॥

ಪದಪಾಠಃ

ಇಂದ್ರಽಪ್ರಸೂತಾಃ । ವರುಣಽಪ್ರಶಿಷ್ಟಾಃ । ಯೇ । ಸೂರ್ಯಸ್ಯ । ಜ್ಯೋತಿಷಃ । ಭಾಗಂ । ಆನಶುಃ । ಮರುತ್ಽಗಣೇ । ವೃಜನೇ । ಮನ್ಮ । ಧೀಮಹಿ । ಮಾಘೋನೇ । ಯಜ್ಞಂ । ಜನಯಂತ । ಸೂರಯಃ ॥

ಸಾಯಣಭಾಷ್ಯಂ

ಇಂದ್ರಪ್ರಸೂತಾ ಇಂದ್ರೇಣ ತತ್ಕಾರ್ಯೇಷು ಪ್ರೇರಿತಾ ವರುಣಪ್ರಶಿಷ್ಟಾ ವರುಣೇನಾನುಶಿಷ್ಟಾ ಅನುಮೋದಿತಾ ಯೇ ಮರುತೋ ಜ್ಯೋತಿಷೋ ದ್ಯೋತಮಾನಸ್ಯ ಸೂರ್ಯಸ್ಯ ಸ್ವಸ್ವಕರ್ಮಣಿ ಸರ್ವಸ್ಯ ಪ್ರೇರಕಸ್ಯಾಮುಷ್ಯಾದಿತ್ಯಸ್ಯ ಭಾಗಂ ಭಜನೀಯಂ ಲೋಕಮಾನಶುಃ ಆನಶಿರೇ ವ್ಯಾಪ್ತವಂತಃ। ಸೂರ್ಯಮಧಿಷ್ಠಾಯ ವರ್ತಂತೆ ಇತ್ಯರ್ಥಃ । ವೃಜನೇ ಶತ್ರೂಣಾಂ ಛೇದಕೇ ಮಾಘೋನೇ ಮಘವತ ಇಂದ್ರಸ್ಯ ಸಂಬಂಧಿನಿ ಮರುದ್ಗಣೇ। ತೇಷಾಂ ಮರುತಾಂ ಗಣೇ ಮನ್ಮ ಮನನೀಯಂ ಸ್ತೋತ್ರಂ ಧೀಮಹಿ। ದಧ್ಮಃ। ಕುರ್ಮಃ । ಕಿಂಚ । ಸೂರಯಃ ಪ್ರಾಜ್ಞಾ ಯಜಮಾನಾಸ್ತನ್ನಿಮಿತ್ತಮೇವ ಯಜ್ಞಂ ಜನಯಂತ । ಜನಯಂತಿ । ತೇಷಾಂ ಹವಿಷ್ಪ್ರದಾನಾಯ ಕುರ್ವಂತಿ ॥

ಪ್ರತಿಪದಾರ್ಥ

**ಇಂದ್ರಪ್ರಸೂತಾಃ**— ಇಂದ್ರನಿಂದ ಪ್ರೇರಿತರಾದವರೂ । **ವರುಣಪ್ರಶಿಷ್ಟಾಃ**—ವರುಣನ ಅನುಜ್ಞೆಯನ್ನು ಪಡೆದಿರುವವರೂ ಆದ । **ಯೇ**—ಯಾವ ಮರುತ್ತುಗಳು । **ಜ್ಯೋತಿಷಃ**—ಪ್ರಕಾಶಮಾನನಾದ । **ಸೂರ್ಯಸ್ಯ**—ಆದಿತ್ಯನ । **ಭಾಗಂ**—ಪೂಜ್ಯವಾದ ತೇಜೋಭಾಗವನ್ನು । **ಆನಶುಃ**—ಹೊಂದುವರೋ ಅಂತಹ । **ವೃಜನೇ**—ಶತ್ರುಚ್ಛೇದಕರಾದವರೂ । **ಮಾಘೋನೇ**—ಇಂದ್ರನ ಬಂಧುಗಳಾದವರೂ ಆದ । **ಮರುದ್ಗಣೇ**—ಮರುತ್ತುಗಳನ್ನುದ್ದೇಶಿಸಿ । **ಮನ್ಮ**—ಧ್ಯಾನಾತ್ಮಕವಾದ ಸ್ತೋತ್ರವನ್ನು । **ಧೀಮಹಿ**—ಅರ್ಪಿಸುತ್ತೇವೆ । **ಸೂರಯಃ**—ಪ್ರಾಜ್ಞರಾದ ಯಜಮಾನರು । **ಯಜ್ಞಂ**—ಯಜ್ಞವನ್ನು । **ಜನಯಂತ**—ಸಂಪಾದಿಸುತ್ತಾರೆ (ನೆರವೇರಿಸುತ್ತಾರೆ).

ಭಾವಾರ್ಥ

ಇಂದ್ರನಿಂದ ಪ್ರೇರಿತರಾದವರೂ, ವರುಣನ ಅನುಜ್ಞೆಯನ್ನು ಪಡೆದಿರುವವರೂ ಆದ ಯಾವ ಮರುತ್ತುಗಳು ಪ್ರಕಾಶಮಾನನಾದ ಆದಿತ್ಯನ ಪೂಜ್ಯವಾದ ತೇಜೋಭಾಗವನ್ನು ಪಡೆಯುವರೋ ಅಂತಹ ಶತ್ರುಚ್ಛೇದಕರಾದವರೂ

ಇಂದ್ರನ ಬಂಧುಗಳೂ ಆದ ಮರುತ್ತುಗಳನ್ನುದ್ದೇಶಿಸಿ ಧ್ಯಾನಾತ್ಮಕವಾದ ಸ್ತೋತ್ರವನ್ನು ಅರ್ಪಿಸುತ್ತೇವೆ. ಪ್ರಾಜ್ಞರಾದ ಯಜಮಾನರು ಈ ನಿಮಿತ್ತವಾಗಿಯೇ ಯಜ್ಞವನ್ನು ಅರ್ಪಿಸುತ್ತಾರೆ (ನೆರವೇರಿಸುತ್ತಾರೆ).

English Translation

We offer praise to the company of the Maruts, the attendants upon Maghavan, who, encouraged by Indra, and instructed by Varuna, have acquired a portion of the light of the sun ; the wise worshippers beget the sacrifice.

ಸಂಹಿತಾಪಾಠಃ

ಇಂದ್ರೋ ವಸುಭಿಃ ಪರಿ ಪಾತು ನೋ ಗಯಮಾದಿತ್ಯೈರ್ನೋ ಅದಿತಿಃ ಶರ್ಮ ಯಚ್ಛತು ।
ರುದ್ರೋ ರುದ್ರೇಭಿರ್ದೇವೋ ಮೃಳಯಾತಿ ನಸ್ತ್ವಷ್ಟಾ ನೋ ಗ್ನಾಭಿಃ ಸುವಿ-ತಾಯ ಜಿನ್ವತು ॥ ೩ ॥

ಪದಪಾಠಃ

ಇಂದ್ರಃ । ವಸುಽಭಿಃ । ಪರಿ । ಪಾತು । ನಃ । ಗಯಂ । ಆದಿತ್ಯೈಃ । ನಃ । ಅದಿತಿಃ । ಶರ್ಮ । ಯಚ್ಛತು ।
ರುದ್ರಃ । ರುದ್ರೇಭಿಃ । ದೇವಃ । ಮೃಳಯಾತಿ । ನಃ । ತ್ವಷ್ಟಾ । ನಃ । ಗ್ನಾಭಿಃ । ಸುವಿತಾಯ । ಜಿನ್ವತು ॥

ಸಾಯಣಭಾಷ್ಯಂ

ವಸುಭಿರೇತನ್ನಾಮಕೈರಷ್ಟಭಿರ್ದೇವೈಃ ಸಹಿತ ಇಂದ್ರೋ ನೋಽಸ್ಮದೀಯಂ ಗಯಂ । ಗೃಹ-ನಾಮೈತತ್ ಪ್ರಾಪ್ತವ್ಯಂ ಗಾಯತೇ ಶಬ್ದ್ಯತೇಽತ್ರೇತಿ ವಾ ಗೃಹಂ ಗಯಂ । ಪರಿ ಪಾತು । ಪರಿರಕ್ಷತು । ತಥಾದಿತಿರ್ದೇವಮಾತಾದಿತ್ಯೈರ್ದೇವೈಃ ಸಹ ನೋಽಸ್ಮಭ್ಯಂ ಶರ್ಮ ಸುಖಂ ಪ್ರಯಚ್ಛತು । ಕಿಂಚ ದೇವೋ ದೀಪ್ಯಮಾನೋ ರುದ್ರೋ ರುದ್ರೇಭಿಃ ಸ್ವಪುತ್ರೈರ್ಮರುದ್ಭಿಃ ಸಹ ನೋಽಸ್ಮಾನ್ಮೃಳಯಾತಿ । ಸುಖಯತು ॥ ಮೃಡ ಸುಖನೇ । ಲೇಟ್ಯಡಾಗಮಃ । ಅಪಿ ಚ ತ್ವಷ್ಟಾ ಪ್ರಜಾಪತಿರ್ಗ್ನಾಭಿರ್ದೇವಪತ್ನೀಭಿ-ಶ್ಛಂದೋಭಿಃ ಸುವಿತಾಯ ಸುಷ್ಠು ಪ್ರಾಪ್ತವ್ಯಾಯಾಭ್ಯುದಯಾಯ ನೋಽಸ್ಮಾಞ್ಜಿನ್ವತು । ಪ್ರೀಣಯತು॥

ಪ್ರತಿಪದಾರ್ಥ

**ವಸುಭಿಃ**—ವಸುಸಂಜ್ಞಕರಾದ ದೇವತೆಗಳೊಡಗೂಡಿದ । **ಇಂದ್ರಃ**—ಇಂದ್ರನು । **ನಃ**—ನಮ್ಮ । **ಗಯಂ**—ಗೃಹವನ್ನು । **ಪರಿ ಪಾತು**—ರಕ್ಷಿಸಲಿ । **ಅದಿತಿಃ**—ಅದಿತಿಯು । **ಆದಿತ್ಯೈಃ**—ಆದಿತ್ಯರೊಡಗೂಡಿ । **ನಃ**—ನಮಗೆ । **ಶರ್ಮ**—ಸುಖವನ್ನು । **ಯಚ್ಛತು**—ಕೊಡಲಿ । **ದೇವಃ**—ಪ್ರಕಾಶಮಾನನಾದ । **ರುದ್ರಃ**—

ರುದ್ರನು । **ರುದ್ರೇಭಿಃ**—ಮರುತ್ತುಗಳೊಡಗೂಡಿ । **ನಃ**—ನಮ್ಮನ್ನು । **ಮೃಳಯಾತಿ**—ಸುಖಪಡಿಸಲಿ । **ತ್ವಷ್ಟಾ**—ತ್ವಷ್ಟೃವು (ಪ್ರಜಾಪತಿಯು) । **ಗ್ನಾಭಿಃ**—ದೇವಪತ್ನಿಯರೊಡಗೂಡಿ । **ಸುವಿತಾಯ**—ನಮಗೆ ಮಂಗಳವುಂಟಾಗುವುದಕ್ಕಾಗಿ । **ನಃ**—ನಮ್ಮನ್ನು । **ಜಿನ್ವತು**—ಹರ್ಷಗೊಳಿಸಲಿ.

ಭಾವಾರ್ಥ

ವಸುಸಂಜ್ಞಕರಾದ ದೇವತೆಗಳೊಡಗೂಡಿದ ಇಂದ್ರನು ನಮ್ಮ ಗೃಹವನ್ನು ರಕ್ಷಿಸಲಿ. ಆದಿತ್ಯರೊಡಗೂಡಿದ ಅದಿತಿಯು ನಮಗೆ ಸುಖವನ್ನು ಕೊಡಲಿ. ಪ್ರಕಾಶಮಾನನಾದ ರುದ್ರನು ಮರುತ್ತುಗಳೊಡಗೂಡಿ ನಮ್ಮನ್ನು ಸುಖಪಡಿಸಲಿ. ಪ್ರಜಾಪತಿಯು ದೇವಪತ್ನಿಯರೊಡಗೂಡಿ ನಮಗೆ ಮಂಗಳವನ್ನುಂಟುಮಾಡುವುದಕ್ಕಾಗಿ ನಮ್ಮನ್ನು ಹರ್ಷಗೊಳಿಸಲಿ.

## English Translation

May Indra with the Vasus guard our dwelling ; may Aditi with the Adityas grant us felicity ; may the divine Rudra with the Rudras make us happy : may Twashtri with the wives of the gods be favourable to us for our prosperity.

ಸಂಹಿತಾಪಾಠಃ

**ಅದಿತಿರ್ದ್ಯಾವಾಪೃಥಿವೀ ಋತಂ ಮಹದಿಂದ್ರಾವಿಷ್ಣೂ ಮರುತಃ ಸ್ವರ್ಬೃಹತ್ ।**
**ದೇವಾँ ಆದಿತ್ಯಾँ ಅವಸೇ ಹವಾಮಹೇ ವಸೂನ್ರುದ್ರಾನ್ತ್ಸವಿತಾರಂ ಸುದಂಸಸಂ ॥ ೪ ॥**

ಪದಪಾಠಃ

**ಅದಿತಿಃ । ದ್ಯಾವಾಪೃಥಿವೀ ಇತಿ । ಋತಂ । ಮಹತ್ । ಇಂದ್ರಾವಿಷ್ಣೂ ಇತಿ । ಮರುತಃ । ಸ್ವಃ । ಬೃಹತ್ । ದೇವಾನ್ । ಆದಿತ್ಯಾನ್ । ಅವಸೇ । ಹವಾಮಹೇ । ವಸೂನ್ । ರುದ್ರಾನ್ । ಸವಿತಾರಂ । ಸುऽದಂಸಸಂ ॥**

ಸಾಯಣಭಾಷ್ಯಂ

**ಅದಿತಿರ್ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಮಹನ್ಮಹಾನೃತಂ ಸತ್ಯಭೂತೋऽಗ್ನಿರಿಂದ್ರಾವಿಷ್ಣೂ ಮರುತಶ್ಚ ಬೃಹತ್ಪರಿವೃಢಃ ಸ್ವರಾದಿತ್ಯಃ ಏತೇ ದೇವಾಃ ಸರ್ವತ್ರ ಸ್ವಮಹಿಮ್ನಾ ವರ್ತಂತೇ। ಏತಾನ್ದೇವಾನಾದಿತ್ಯಾದೀನ್ಸುದಂಸಸಂ ಸುಕರ್ಮಾಣಂ ಸವಿತಾರಮೇತನ್ನಾಮಾನಂ ಚಾವಸೇ ರಕ್ಷಣಾಯ ಹವಾಮಹೇ। ವಯಮಾಹ್ವಯಾಮಹೇ ॥**

ಪ್ರತಿಪದಾರ್ಥ

**ಅದಿತಿಃ**—ಅದಿತಿಯೂ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳೂ । **ಮಹತ್**—ಮಹಾತ್ಮನೂ । **ಋತಂ**—ಸತ್ಯಾತ್ಮಕನೂ ಆದ ಅಗ್ನಿಯೂ । **ಇಂದ್ರಾವಿಷ್ಣೂ**—ಇಂದ್ರ ಮತ್ತು ವಿಷ್ಣುವೂ । **ಮರುತಃ**—

ಮರುತ್ತುಗಳೂ | **ಬೃಹತ್**—ಮಹತ್ಸ್ವರೂಪವುಳ್ಳ | **ಸ್ವಃ**—ಆದಿತ್ಯನೂ ಒಟ್ಟಿಗೆ ವ್ಯಾಪಿಸಿ ಪ್ರಕಾಶಿಸುತ್ತಿದ್ದಾರೆ | **ದೇವಾನ್**— ಈ ದೇವತೆಗಳನ್ನೂ | **ವಸೂನ್**—ವಸುದೇವತೆಗಳನ್ನೂ | **ರುದ್ರಾನ್**—ರುದ್ರರನ್ನೂ | **ಆದಿತ್ಯಾನ್**-ಆದಿತ್ಯರನ್ನೂ | **ಸುದಂಸಸಂ**— ಉತ್ತಮವಾದ ಕರ್ಮಕರ್ತನಾದ | **ಸವಿತಾರಂ**—ಸವಿತೃವನ್ನೂ | **ಅವಸೇ**—ರಕ್ಷಣಾರ್ಥವಾಗಿ | **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ.

ಭಾವಾರ್ಥ

ಅದಿತಿಯೂ, ದ್ಯಾವಾಪೃಥಿವಿಗಳೂ, ಮಹಾತ್ಮನೂ ಸತ್ಯಾತ್ಮಕನೂ ಆದ ಅಗ್ನಿಯೂ, ಇಂದ್ರ ಮತ್ತು ವಿಷ್ಣುವೂ, ಮರುತ್ತುಗಳೂ, ಮಹತ್ಸ್ವರೂಪವುಳ್ಳ ಆದಿತ್ಯನೂ ಒಟ್ಟಿಗೆ ವ್ಯಾಪಿಸಿ ಪ್ರಕಾಶಿಸುತ್ತಿದ್ದಾರೆ. ಈ ದೇವತೆಗಳನ್ನೂ, ವಸು, ರುದ್ರ ಮತ್ತು ಆದಿತ್ಯರನ್ನೂ, ಉತ್ತಮವಾದ ಕರ್ಮಕರ್ತನಾದ ಸವಿತೃವನ್ನೂ ರಕ್ಷಣಾರ್ಥವಾಗಿ ಪ್ರಾರ್ಥಿಸಿ ಕರೆಯುತ್ತೇವೆ.

English Translation

Aditi, heaven and earth, the mighty truth (Agni), Indra, Vishnu, the Maruts, the great sun—(these) we invoke for our protection, as well as the divine Adityas, the Vasus, the Rudras and Savitri, the accomplisher of good works.

ಸಂಹಿತಾಪಾಠಃ

**ಸರಸ್ವಾನ್ಧೀಭಿರ್ವರುಣೋ ಧೃತವ್ರತಃ ಪೂಷಾ ವಿಷ್ಣುರ್ಮಹಿಮಾ ವಾಯುರಶ್ವಿನಾ |**
**ಬ್ರಹ್ಮಕೃತೋ ಅಮೃತಾ ವಿಶ್ವವೇದಸಃ ಶರ್ಮ ನೋ ಯಂಸನ್ ತ್ರಿವರೂಥಮಂಹಸಃ || ೫ ||**

ಪದಪಾಠಃ

**ಸರಸ್ವಾನ್ | ಧೀಭಿಃ | ವರುಣಃ | ಧೃತಽವ್ರತಃ | ಪೂಷಾ | ವಿಷ್ಣುಃ | ಮಹಿಮಾ | ವಾಯುಃ | ಅಶ್ವಿನಾ | ಬ್ರಹ್ಮಽಕೃತಃ | ಅಮೃತಾಃ | ವಿಶ್ವಽವೇದಸಃ | ಶರ್ಮ | ನಃ | ಯಂಸನ್ | ತ್ರಿಽವರೂಥಂ | ಅಂಹಸಃ ||**

ಸಾಯಣಭಾಷ್ಯಂ

**ಧೀಭಿಃ ಪ್ರಜ್ಞಾಭಿರ್ಯುಕ್ತಃ ಸರಸ್ವಾನೇತನ್ನಾಮಾ ಧೃತವ್ರತೋ ಧೃತಕರ್ಮಾ ವರುಣಶ್ಚ ಪೂಷಾ ಮಹಿಮಾ ಮಹತ್ತ್ವೇನ ಯುಕ್ತೋ ವಿಷ್ಣುಶ್ಚ ವಾಯುರಶ್ವಿನಾಶ್ವಿನೌ ಬ್ರಹ್ಮಕೃತಃ ಕರ್ಮಕೃತಃ ಸ್ತೋತೄಣಾಮನ್ನದಾತಾರೋ ವಾ ವಿಶ್ವವೇದಸಃ ಸರ್ವಧನಾ ವ್ಯಾಪ್ತಜ್ಞಾನಾ ವಾಂಹಸಃ ಪಾಪರೂಪಾಣಾಂ ಶತ್ರೂಣಾಂ ಹಂತಾರೋಽಮೃತಾ ಏತೇ ದೇವಾ ನೋಽಸ್ಮಭ್ಯಂ ತ್ರಿವರೂಥಂ ತ್ರಿಷ್ಕಂಭಂ ತ್ರಿಕಕ್ಷ್ಯಂ ಶರ್ಮ**

ಗೃಹಂ । ಯದ್ವಾ । ತ್ರಿವರೂಥಂ । ದ್ರೋಣಾಧವನೀಯಪೂತಭೃತ್ಸಂಜ್ಞಕಾನಿ ತ್ರೀಣಿ ಪಾತ್ರಾಣಿ ಯತ್ರ ವ್ರಿಯಂತೇ ಸಂಭಜ್ಯಂತೇ ತದ್ಯಜ್ಞಸಾಧನಂ ಗೃಹಂ । ಯಂಸನ್ । ಪ್ರಯಚ್ಛಂತು ॥ ಯಚ್ಛತೇರ್ಲೇಟಿ ಸಿಪ್ಯಡಾಗಮಃ ॥

ಪ್ರತಿಪದಾರ್ಥ

**ಧೀಭಿಃ**—ಪ್ರಜ್ಞಾಯುತನಾದ । **ಸರಸ್ವಾನ್**—ಸರಸ್ವಂತನೂ । **ಧೃತವ್ರತಃ**—ವ್ರತಧಾರಿಯಾದ । **ವರುಣಃ**—ವರುಣನೂ । **ಪೂಷಾ**—ಪೂಷದೇವನೂ । **ಮಹಿಮಾ**—ಮಹಿಮಾಯುತನಾದ । **ವಿಷ್ಣುಃ**—ವಿಷ್ಣುವೂ । **ವಾಯುಃ**—ವಾಯುವೂ । **ಅಶ್ವಿನಾ**—ಅಶ್ವಿನೀದೇವತೆಗಳೂ । **ಬ್ರಹ್ಮಕೃತಃ**—ಅನ್ನದಾತರೂ । **ವಿಶ್ವವೇದಸಃ**—ಸರ್ವಜ್ಞರೂ । **ಅಂಹಸಃ**—ಪಾಪನಾಶಕರೂ । **ಅಮೃತಾಃ**—ಮರಣರಹಿತರೂ ಆದ ಸಕಲ ದೇವತೆಗಳೂ । **ನಃ**—ನಮಗೆ । **ತ್ರಿವರೂಥಂ**—ಮೂರು ವಿಧವಾದ ಆಧಾರಸ್ತಂಭ (ರಕ್ಷಣೆ) ಗಳಿಂದ ಕೂಡಿದ । **ಶರ್ಮ**—ಗೃಹವನ್ನು (ಅಥವಾ ದ್ರೋಣಕಲಶಾದಿ ಪಾತ್ರತ್ರಯವುಳ್ಳ ಯಜ್ಞಗೃಹವನ್ನು) । **ಯಂಸನ್**—ಅನುಗ್ರಹಿಸಿ ಕೊಡಲಿ.

ಭಾವಾರ್ಥ

ಪ್ರಜ್ಞಾಯುತನಾದ ಸರಸ್ವಂತನೂ, ವ್ರತಧಾರಿಯಾದ ವರುಣನೂ, ಪೂಷದೇವನೂ, ಮಹಿಮಾಯುತನಾದ ವಿಷ್ಣುವೂ, ವಾಯುವೂ, ಅಶ್ವಿನೀದೇವತೆಗಳೂ, ಅನ್ನದಾತರೂ, ಸರ್ವಜ್ಞರೂ, ಪಾಪನಾಶಕರೂ, ಮರಣರಹಿತರೂ ಆದ ಸಕಲ ದೇವತೆಗಳೂ ನಮಗೆ ಮೂರುವಿಧವಾದ ರಕ್ಷಣೆಗಳಿಂದ ಕೂಡಿದ ಗೃಹವನ್ನು ದಯಪಾಲಿಸಲಿ.

English Translation

May Saraswat, (endowed) with intelligences, Varuna the observer of oblations, Pushan, Vishnu, the mighty Vayu, the Ashwins (may these) the bestowers of food upon worshippers, immortal, the possessors of all wealth, grant us a habitation triply-guarded from evil.

ಸಂಹಿತಾಪಾಠಃ

ವೃಷಾ ಯಜ್ಞೋ ವೃಷಣಃ ಸಂತು ಯಜ್ಞಿಯಾ ವೃಷಣೋ ದೇವಾ ವೃಷಣೋ ಹವಿಷ್ಕೃತಃ ।

ವೃಷಣಾ ದ್ಯಾವಾಪೃಥಿವೀ ಋತಾವರೀ ವೃಷಾ ಪರ್ಜನ್ಯೋ ವೃಷಣೋ ವೃಷಸ್ತುಭಃ ॥ ೬ ॥

ಪದಪಾಠಃ

ವೃಷಾ । ಯಜ್ಞಃ । ವೃಷಣಃ । ಸಂತು । ಯಜ್ಞಿಯಾಃ । ವೃಷಣಃ । ದೇವಾಃ । ವೃಷಣಃ । ಹವಿಃಽಕೃತಃ ।

ವೃಷಣಾ । ದ್ಯಾವಾಪೃಥಿವೀ ಇತಿ । ಋತವರೀ ಇತ್ಯೃತಽವರೀ । ವೃಷಾ । ಪರ್ಜನ್ಯಃ । ವೃಷಣಃ । ವೃಷಽಸ್ತುಭಃ ॥ ೬ ॥

ಸಾಯಣಭಾಷ್ಯಂ

ಯಜ್ಞ ಏಷೋಽಸ್ಮದೀಯೋ ವೃಷಾ ಕಾಮಾನಾಂ ವರ್ಷಿತಾಸ್ತು । ತಥಾ ಯಜ್ಞಿಯಾ ಯಜ್ಞಾರ್ಹಾ ದೇವಾಶ್ಚ ವೃಷಣಃ ಸಂತು । ಕಿಂಚ ದೇವಾಃ ಸ್ತುತಿಕಾರಿಣ ಋತ್ವಿಜೋ ವೃಷಣೋ ಧನವರ್ಷಣೇ ಕಾರಣಾನಿ ಸಂತು ಸಾಧುಸ್ತುತಿಕರಣೇನ । ತಥಾ ಹವಿಷ್ಕೃತೋ ಹವಿಷಾಂ ಕರ್ತಾರೋಽಧ್ವರ್ಯ್ವಾದಯೋ ವೃಷಣೋಽವ್ಯಗ್ರತಯಾ ಮಂತ್ರಸಾಹಿತ್ಯೇನ ಚ ಹವಿಷ್ಪ್ರದಾನೇನ । ಅಪಿ ಚರ್ತಾವರೀ ಯಜ್ಞವತ್ಯೌ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ವೃಷಣಾ ಹವಿರುತ್ಪಾದನೇನ ಕಾಮಾನಾಂ ವರ್ಷಯಿತ್ರ್ಯೌ ಭವತಾಂ । ತಥಾ ಪರ್ಜನ್ಯ ಇಂದ್ರೋ ವೃಷಾಪಾಂ ವರ್ಷಿತಾ ಭವತು । ವೃಷಸ್ತುಭೋ ವರ್ಷಣಶೀಲಸ್ತುತಿಭಿರ್ದೇವಾನ್ಸ್ತುವಂತಃ ಸರ್ವ ಋತ್ವಿಜೋ ವೃಷಣೋ ಭವಂತು ॥

ಪ್ರತಿಪದಾರ್ಥ

**ಯಜ್ಞಃ**—ನಮ್ಮ ಯಜ್ಞವು । **ವೃಷಾ**—ಇಷ್ಟಾರ್ಥಪ್ರದವುಳ್ಳದ್ದಾಗಲಿ । **ಯಜ್ಞಿಯಾಃ**—ಪೂಜಾರ್ಹರಾದ ದೇವತೆಗಳು । **ವೃಷಣಃ ಸಂತು**—ನಮ್ಮ ಕಾಮವನ್ನು ಸುರಿಸುವವರಾಗಲಿ । **ದೇವಾಃ**—ಸ್ತುತಿಕರ್ತರಾದ ಋತ್ವಿಕ್ಕುಗಳು । **ವೃಷಣಃ**—ಇಷ್ಟಾರ್ಥಪ್ರದರಾಗಲಿ । **ಹವಿಷ್ಕೃತಃ**—ಹವಿಸ್ಸನ್ನು ಅರ್ಪಿಸುವ ಋತ್ವಿಕ್ಕುಗಳು । **ವೃಷಣಃ**—ಕಾಮಸಂಪಾದಕರಾಗಲಿ । **ಋತಾವರೀ**—ಯಜ್ಞವಂತರಾದ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳು । **ವೃಷಣಾ**—ಇಷ್ಟಾರ್ಥಪ್ರದರಾಗಲಿ । **ಪರ್ಜನ್ಯಃ**—ಪರ್ಜನ್ಯನು (ಇಂದ್ರನು) । **ವೃಷಾ**—ಕಾಮಪ್ರದನಾಗಲಿ (ವೃಷ್ಟಿಯನ್ನು ಸುರಿಸಲಿ) । **ವೃಷಸ್ತುಭಃ**—ಇಷ್ಟಾರ್ಥವನ್ನು ಸಂಪಾದಿಸುವ ಸ್ತುತಿಗಳನ್ನರ್ಪಿಸುವ ಋತ್ವಿಕ್ಕುಗಳು । **ವೃಷಣಃ**—ಅಪೇಕ್ಷಿತ ವಸ್ತುಗಳನ್ನು ಸುರಿಸುವವರಾಗಲಿ.

ಭಾವಾರ್ಥ

ನಮ್ಮ ಯಜ್ಞವು ಇಷ್ಟಾರ್ಥಪ್ರದವಾಗಲಿ. ಪೂಜಾರ್ಹರಾದ ನಮ್ಮ ದೇವತೆಗಳು ನಮ್ಮ ಇಚ್ಛೆಯನ್ನು ನೆರವೇರಿಸಲಿ, ಸ್ತುತಿಕರ್ತರಾದ ಋತ್ವಿಕ್ಕುಗಳು ಇಷ್ಟಾರ್ಥಪ್ರದರಾಗಲಿ. ಯಜ್ಞವಂತರಾದ ದ್ಯಾವಾಪೃಥಿವಿಗಳೂ, ಪರ್ಜನ್ಯನೂ ಅವರವರ ಸ್ವರೂಪಕ್ಕನುಗುಣವಾಗಿ ನಮ್ಮ ಇಷ್ಟಾರ್ಥಗಳನ್ನು ಒದಗಿಸಿಕೊಡಲಿ. ಸ್ತುತಿಕರ್ತರಾದ ಋತ್ವಿಕ್ಕುಗಳೂ ಇವಕ್ಕೆ ಸಹಾಯಮಾಡಲಿ.

## English Translation

May (our) sacrifice be the showerer (of benefits); may the gods who are worthy of sacrifice be the showerers (of beeefits); may the priests, may the presenters of the oblation, be the showerers (of benefits); may heaven and earth receiving adoration be the showerer (of benefits); may Parjanya be the showerer (of rain), may those who praise (the gods) with showers be showerers.

ಸಂಹಿತಾಪಾಠಃ

ಅಗ್ನೀಷೋಮಾ ವೃಷಣಾ ವಾಜಸಾತಯೇ ಪುರುಪ್ರಶಸ್ತಾ ವೃಷಣಾ ಉಪ ಬ್ರುವೇ ।
ಯಾವೀಜಿರೇ ವೃಷಣೋ ದೇವಯಜ್ಯಯಾ ತಾ ನಃ ಶರ್ಮ ತ್ರಿವರೂಥಂ ವಿ ಯಂಸತಃ ॥ ೭ ॥

ಪದಪಾಠಃ

ಅಗ್ನೀಷೋಮಾ । ವೃಷಣಾ । ವಾಜಽಸಾತಯೇ । ಪುರುಽಪ್ರಶಸ್ತಾ । ವೃಷಣೌ । ಉಪ । ಬ್ರುವೇ ।
ಯೌ । ಈಜಿರೇ । ವೃಷಣಃ । ದೇವಽಯಜ್ಯಯಾ । ತಾ । ನಃ । ಶರ್ಮ । ತ್ರಿಽವರೂಥಂ । ವಿ । ಯಂಸತಃ ॥

ಸಾಯಣಭಾಷ್ಯಂ

ವೃಷಣಾ ವರ್ಷಣಶೀಲೌ ಪುರುಪ್ರಶಸ್ತಾ ಬಹುಭಿಃ ಪ್ರಶಸ್ತಾವಗ್ನೀಷೋಮೌ ವಾಜಸಾತಯೇಽನ್ನಲಾಭಾಯೋಪ ಬ್ರುವೇ । ಅಹಮುಪಸ್ತೌಮಿ । ಪುನರ್ವೃಷಣಾವಿತ್ಯಾದರಾರ್ಥಂ । ಯೌ ದೇವೌ ವೃಷಣ ಋತ್ವಿಜೋ ದೇವಯಜ್ಯಯಾ । ದೇವಾ ಇಜ್ಯಂತೇಽತ್ರೇತಿ ದೇವಯಜ್ಯಾ ಯಜ್ಞಃ ॥ ಛಂದಸಿ ನಿಷ್ಟರ್ಕ್ಯೇತಿ ನಿಪಾತಿತಃ ॥ ತೇನೇಜಿರೇ ಯಜಂತೇ ಹವಿರ್ಭಿಃ ಪೂಜಯಂತಿ ತಾ ತೌ ಪ್ರಸಿದ್ಧೌ ನೋಽಸ್ಮಭ್ಯಂ ತ್ರಿವರೂಥಂ ತ್ರಿಷ್ಕಂಭಂ ಶರ್ಮ ಗೃಹಂ ವಿ ಯಂಸತಃ । ವಿಶೇಷೇಣ ಪ್ರಯಚ್ಛತಾಂ ॥

ಪ್ರತಿಪದಾರ್ಥ

**ವೃಷಣಾ**—ಇಷ್ಟಾರ್ಥಪ್ರದರೂ । **ಪುರುಪ್ರಶಸ್ತಾ**—ಅಧಿಕವಾಗಿ ಪ್ರಶಂಸಿಸಲ್ಪಡುವವರೂ ಆದ । **ಅಗ್ನೀಷೋಮಾ**—ಅಗ್ನಿ ಮತ್ತು ಸೋಮದೇವತೆಗಳನ್ನು । **ವಾಜಸಾತಯೇ**—ಅನ್ನಲಾಭಾರ್ಥವಾಗಿ । **ಉಪ ಬ್ರುವೇ**—ಪ್ರಶಂಸಿಸುತ್ತೇನೆ । **ಯೌ**—ಯಾವ ಅಗ್ನಿ ಮತ್ತು ಸೋಮದೇವರನ್ನು । **ವೃಷಣಃ**—ಋತ್ವಿಕ್ಕುಗಳು। **ದೇವಯಜ್ಯಯಾ**—ದೇವಪೂಜಕವಾದ ಯಜ್ಞದಿಂದ । **ಈಜಿರೇ**—ಪೂಜಿಸುವರೋ । **ತಾ**—ಆದೇ ದೇವತೆಗಳು। **ನಃ**—ನಮಗೆ । **ತ್ರಿವರೂಥಂ**—ಮೂರುಬಗೆಯಲ್ಲಿಯೂ ರಕ್ಷಣೆಯುಳ್ಳ । **ಶರ್ಮ**—ಗೃಹವನ್ನು । **ವಿ ಯಂಸತಃ**—ಒದಗಿಸಿಕೊಡಲಿ.

ಭಾವಾರ್ಥ

ಇಷ್ಟಾರ್ಥಪ್ರದರೂ, ಅಧಿಕವಾಗಿ ಪ್ರಶಂಸಿಸಲ್ಪಡುವವರೂ ಆದ ಅಗ್ನಿ ಮತ್ತು ಸೋಮದೇವತೆಗಳನ್ನು ಅನ್ನಲಾಭಾರ್ಥವಾಗಿ ಪ್ರಶಂಸಿಸುತ್ತೇನೆ. ಯಾವ ಅಗ್ನಿ ಮತ್ತು ಸೋಮದೇವರನ್ನು ಋತ್ವಿಕ್ಕುಗಳು ದೇವಪೂಜಕವಾದ ಯಜ್ಞದಿಂದ ಪೂಜಿಸುವರೋ, ಪ್ರಸಿದ್ಧರಾದ ಅದೇ ದೇವತೆಗಳು ನಮಗೆ ಮೂರು ಬಗೆಯ ರಕ್ಷಣೆಗಳಿಂದ ಕೂಡಿದ ಗೃಹವನ್ನು ಒದಗಿಸಿಕೊಡಲಿ.

## English Translation

I glorify for the obtaining of food the two showerers (of benefits), Agni and Soma, the many-lauded showerers (of beuefits), may these two whom the priests have worshipped with divine worship bestow upon us a triply-guarded dwelling.

ಸಂಹಿತಾಪಾಠಃ

ಧೃತವ್ರತಾಃ ಕ್ಷತ್ರಿಯಾ ಯಜ್ಞನಿಷ್ಕೃತೋ ಬೃಹದ್ದಿವಾ ಅಧ್ವರಾಣಾಮಭಿ-
ಶ್ರಿಯಃ ।
ಅಗ್ನಿಹೋತಾರ ಋತಸಾಪೋ ಅದ್ರುಹೋಽಪೋ ಅಸೃಜನ್ನನು ವೃತ್ರ-
ತೂರ್ಯೇ ॥ ೮ ॥

ಪದಪಾಠಃ

ಧೃತಽವ್ರತಾಃ । ಕ್ಷತ್ರಿಯಾಃ । ಯಜ್ಞನಿಃಽಕೃತಃ । ಬೃಹತ್ಽದಿವಾಃ । ಅಧ್ವರಾಣಾಂ । ಅಭಿಽಶ್ರಿಯಃ ।
ಅಗ್ನಿಽಹೋತಾರಃ । ಋತಽಸಾಪಃ । ಅದ್ರುಹಃ । ಅಪಃ । ಅಸೃಜನ್ । ಅನು । ವೃತ್ರಽತೂರ್ಯೇ ॥ ೮ ॥

ಸಾಯಣಭಾಷ್ಯಂ

ಧೃತವ್ರತಾ ಧೃತಕರ್ಮಾಣೋ ಜಾತ್ಯಾ ಕ್ಷತ್ರಿಯಾಃ। ಯದ್ವಾ। ಕ್ಷತ್ರಂ ಬಲಂ। ತದರ್ಹಾಃ। ಯಜ್ಞನಿಷ್ಕೃತಃ। ಯಜ್ಞಂ ಪ್ರತಿ ನಿರ್ಗಮನಂ ಯಜ್ಞನಿಃ। ತಸ್ಯ ಕರ್ತಾರೋ ಬೃಹದ್ದಿವಾ ಮಹಾತೇಜಸ್ಕಾ ಅಧ್ವರಾಣಾಂ ರಕ್ಷೋಭಿರಹಿಂಸಿತಾನಾಂ ಯಜ್ಞಾನಾಮಭಿಶ್ರಿಯೋಽಭಿಸೇವಕಾ ಅಗ್ನಿಹೋತಾರೋಽಗ್ನಿರ್ಹೋತಾಹ್ವಾತಾ ಯೇಷಾಂ ತಾದೃಶಾ ಋತಸಾಪಃ ॥ ಷಪ ಸಮವಾಯೇ ॥ ಸತ್ಯಭಾಜಃ ಅತ ಏವಾದ್ರುಹಃ ಕೇಷಾಂಚಿದಪ್ಯದ್ರೋಗ್ಧಾರಃ । ಯದ್ವಾ ॥ ದ್ರುಹೇಃ ಕರ್ಮಣ್ಯೌಣಾದಿಕಃ ಕ್ವಿಪ್ ॥ ಕೈಶ್ಚಿದಪ್ಯಹಿಂಸ್ಯಾಃ। ಏವಂಪ್ರಭಾವಾ ದೇವಾ ವೃತ್ರತೂರ್ಯೇ। ವೃತ್ರಸ್ತೂರ್ಯತೇ ಹಿಂಸ್ಯತೇಽತ್ರೇತಿ ವೃತ್ರತೂರ್ಯಃ ಸಂಗ್ರಾಮಃ । ತಸ್ಮಿನ್ನಪಾಮಾವರಕಶತ್ರುವಧೇಽಪ ಉದಕಾನ್ಯನ್ವಸೃಜನ್ । ಅನ್ವಸಾರಯನ್ ॥

ಪ್ರತಿಪದಾರ್ಥ

**ಧೃತವ್ರತಾಃ**—ತಮ್ಮ ನಿಯಮಿತವಾದ ಕರ್ಮಗಳನ್ನು ದೃಢವಾಗಿ ನೆರವೇರಿಸುವವರೂ । **ಕ್ಷತ್ರಿಯಾಃ**—ಶಕ್ತಿಯುತರೂ । **ಯಜ್ಞನಿಷ್ಕೃತಃ**—ಯಜ್ಞಕ್ಕಾಗಿ ಒಟ್ಟಿಗೆ ಹೋಗುವವರೂ । **ಬೃಹದ್ದಿವಾಃ**—ಅತ್ಯಧಿಕವಾದ ತೇಜಸ್ಸುಳ್ಳವರೂ । **ಅಧ್ವರಾಣಾಂ**—ಯಜ್ಞಗಳಿಗೆ । **ಅಭಿಶ್ರಿಯಃ**—ಕಾಂತಿಯುತವಾದ ರಕ್ಷಣೆಯನ್ನೀಯುವವರೂ । **ಅಗ್ನಿಹೋತಾರಃ**—ಅಗ್ನಿಯೇ ಹೋತೃವಾಗಿ ಉಳ್ಳವರೂ । **ಋತಸಾಪಃ**—ಸತ್ಯಪಾಲಕರೂ । **ಅದ್ರುಹಃ**—ಯಾರಿಗೂ ಕೇಡನ್ನು ಬಯಸದಿರುವವರೂ ಆದ ದೇವತೆಗಳು । **ವೃತ್ರತೂರ್ಯೇ**—ವೃತ್ರಸಂಹಾರಕವಾದ ಯುದ್ಧದಲ್ಲಿ। **ಅಪಃ**—ಉದಕಗಳನ್ನು । **ಅನು ಅಸೃಜನ್**—ಉತ್ಪನ್ನಮಾಡಿ ಸುರಿಸಲಿ.

### ಭಾವಾರ್ಥ

ತಮ್ಮ ನಿಯಮಿತವಾದ ಕರ್ಮಗಳನ್ನು ದೃಢವಾಗಿ ನೆರವೇರಿಸುವವರೂ, ಶಕ್ತಿಯುತರೂ, ಯಜ್ಞಕ್ಕಾಗಿ ಒಟ್ಟಿಗೆ ಹೋಗುವವರೂ, ಅತ್ಯಧಿಕವಾದ ತೇಜಸ್ಸುಳ್ಳವರೂ, ಯಜ್ಞಗಳಿಗೆ ಕಾಂತಿಯುತವಾದ ರಕ್ಷಣೆಯನ್ನೀಯುವವರೂ, ಅಗ್ನಿಯೇ ಹೋತೃವಾಗಿ ಉಳ್ಳವರೂ, ಸತ್ಯಪಾಲಕರೂ, ಯಾರಿಗೂ ಕೇಡನ್ನು ಬಯಸದಿರುವವರೂ ಆದ ದೇವತೆಗಳು ವೃತ್ರಸಂಹಾರಕವಾದ ಯುದ್ಧದಲ್ಲಿ ಉದಕಗಳನ್ನು ಸುರಿಸಿ ಪ್ರವಹಿಸುವಂತೆ ಮಾಡಲಿ.

### English Translation

The (gods) observing obligations endowed with vigour, developers of sacrifice, possessed of abundant brightness, the defenders of sacrifices, having Agni for their priest, enjoying truth, unassailable, set free the waters at the combat with the Vritra.

### ಸಂಹಿತಾಪಾಠಃ

ದ್ಯಾವಾಪೃಥಿವೀ ಜನಯನ್ನಭಿ ವ್ರತಾಪ ಓಷಧೀರ್ವನಿನಾನಿ ಯಜ್ಞಿಯಾ ।
ಅಂತರಿಕ್ಷಂ ಸ್ವ೧ರಾ ಪಪ್ರುರೂತಯೇ ವಶಂ ದೇವಾಸಸ್ತನ್ವೀ೩ ನಿ ಮಾಮೃಜುಃ ॥

### ಪದಪಾಠಃ

ದ್ಯಾವಾಪೃಥಿವೀ ಇತಿ । ಜನಯನ್ । ಅಭಿ । ವ್ರತಾ । ಆಪಃ । ಓಷಧೀಃ । ವನಿನಾನಿ । ಯಜ್ಞಿಯಾ ।
ಅಂತರಿಕ್ಷಂ । ಸ್ವಃ । ಆ । ಪಪ್ರುಃ । ಊತಯೇ । ವಶಂ । ದೇವಾಸಃ । ತನ್ವಿ । ನಿ । ಮಮೃಜುಃ ॥

### ಸಾಯಣಭಾಷ್ಯಂ

ದೇವಾಸೋ ದೇವಾ ಇಂದ್ರಾದಯೋ ದ್ಯಾವಾಪೃಥಿವೀ ದ್ಯಾವಾಪೃಥಿವ್ಯಾವಭ್ಯಭಿಲಕ್ಷ್ಯ ವ್ರತಾ ವ್ರತೇನ ಸ್ವೇನ ಕರ್ಮಣಾಪಃ ॥ ಸುಬ್ವ್ಯತ್ಯಯಃ ॥ ಅಪ ಉದಕಾನ್ಯೋಷಧೀಶ್ಚ ತಥಾ ಯಜ್ಞಿಯಾ ಯಜ್ಞಾರ್ಹಾನ್ವನಿನಾನಿ ವನೇ ಭವಾನ್ಪಲಾಶಾದೀನ್ವೃಕ್ಷಾಞ್ಜನಯನ್ । ಉದಪಾದಯನ್ । ಕಿಂಚ ತೇ ದೇವಾಃ ಸ್ವಃ ಸರ್ವಮಂತರಿಕ್ಷಮಾ ಪಪ್ರುಃ । ತೇಜಸಾಪೂರಯಂತಿ । ಕಿಮರ್ಥಂ । ಊತಯೇ ರಕ್ಷಣಾಯ ಶತ್ರುಭ್ಯೋ ಬಾಧಾಭಾವಾಯ । ಅಪಿ ಚ ವಶಂ ಕಾಮ್ಯಮಾನಂ ॥ ವಶಿರಣ್ಯೋರುಪಸಂಖ್ಯಾನಂ । ಪಾ-೩-೩-೫೮-೩ । ಇತ್ಯಕರ್ತರಿ ಕಾರಕೇಽಪ್ ॥ ತಂ ಯಜ್ಞಂ ತನ್ವಿ ಸ್ವಶರೀರೇ ನಿ ಮಮೃಜುಃ । ನಿತರಾಂ ಶುದ್ಧಮಲಂಕೃತಂ ಚಕ್ರುಃ ॥

### ಪ್ರತಿಪದಾರ್ಥ

**ದೇವಾಸಃ**—ಇಂದ್ರಾದಿ ದೇವತೆಗಳು । **ಅಭಿ ವ್ರತಾ**—ತಮ್ಮತಮ್ಮ ವೈಯಕ್ತಿಕವಾದ ಕರ್ಮಗಳಿಂದ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳನ್ನೂ । **ಆಪಃ**—ಉದಕಗಳನ್ನೂ । **ಓಷಧೀಃ**—ಲತಾದಿಗಳನ್ನೂ ।

**ಯಜ್ಞಿಯಾ**—ಯಜ್ಞಾರ್ಹವಾದ | **ವನಿನಾನಿ**—ವೃಕ್ಷಗಳನ್ನೂ | **ಜನಯಂತ್**—ಉತ್ಪನ್ನಮಾಡಿದರು | **ಸ್ವಃ ಅಂತರಿಕ್ಷಂ**—ಸಕಲವಾದ ಅಂತರಿಕ್ಷವನ್ನೂ | **ಊತಯೇ**—ರಕ್ಷಣಾರ್ಥವಾಗಿ | **ಆ ಪಪ್ರುಃ**—ತಮ್ಮ ತೇಜಸ್ಸಿನಿಂದ ತುಂಬಿದ್ದಾರೆ | **ವಶಂ**—ಆಕರ್ಷಕವಾದ ಯಜ್ಞವನ್ನು | **ತನ್ವಿ**—ತಮ್ಮ ಶರೀರದಲ್ಲಿ | **ನಿ ಮಮೃಜುಃ**—ಅಂತರ್ಗತಮಾಡಿಕೊಂಡು ಅಲಂಕರಿಸಿಕೊಳ್ಳುತ್ತಾರೆ.

ಭಾವಾರ್ಥ

ಇಂದ್ರಾದಿ ದೇವತೆಗಳು ತಮ್ಮತಮ್ಮ ವೈಯಕ್ತಿಕವಾದ ಕರ್ಮಗಳಿಂದ ದ್ಯಾವಾಪೃಥಿವಿಗಳನ್ನೂ, ಉದಕಗಳನ್ನೂ, ಲತಾದಿಗಳನ್ನೂ, ಯಜ್ಞಾರ್ಹವಾದ ವೃಕ್ಷಗಳನ್ನೂ ಉತ್ಪನ್ನಮಾಡಿದರು. ಸಕಲವಾದ ಅಂತರಿಕ್ಷವನ್ನೂ ರಕ್ಷಣಾರ್ಥವಾಗಿ ತಮ್ಮ ತೇಜಸ್ಸಿನಿಂದ ತುಂಬಿದ್ದಾರೆ. ಆಕರ್ಷಕವಾದ ಯಜ್ಞವನ್ನು ತಮ್ಮ ಶರೀರದಲ್ಲಿ ಅಂತರ್ಗತವಮಾಡಿಕೊಂಡು ಅಲಂಕರಿಸಿಕೊಳ್ಳುತ್ತಾರೆ.

## English Translation

The gods engendered the heaven and earth with their respective functions, the waters, the plants, the sacred trees; they filled the whole firmament (with lustre) for its protection; they graced the desirable (sacrifice) in their own persons.

ಸಂಹಿತಾಪಾಠಃ

**ಧರ್ತಾರೋ ದಿವ ಋಭವಃ ಸುಹಸ್ತಾ ವಾತಾಪರ್ಜನ್ಯಾ ಮಹಿಷಸ್ಯ ತನ್ಯತೋಃ |**
**ಆಪ ಓಷಧೀಃ ಪ್ರ ತಿರಂತು ನೋ ಗಿರೋ ಭಗೋ ರಾತಿರ್ವಾಜಿನೋ ಯಂತು ಮೇ ಹವಂ || ೧೦ ||**

ಪದಪಾಠಃ

**ಧರ್ತಾರಃ | ದಿವಃ | ಋಭವಃ | ಸುऽಹಸ್ತಾಃ | ವಾತಾಪರ್ಜನ್ಯಾ | ಮಹಿಷಸ್ಯ | ತನ್ಯತೋಃ |**
**ಆಪಃ | ಓಷಧೀಃ | ಪ್ರ | ತಿರಂತು | ನಃ | ಗಿರಃ | ಭಗಃ | ರಾತಿಃ | ವಾಜಿನಃ | ಯಂತು | ಮೇ | ಹವಂ||**

ಸಾಯಣಭಾಷ್ಯಂ

**ದಿವೋ ದ್ಯುಲೋಕಸ್ಯ ಧರ್ತಾರೋ ಧಾರಯಿತಾರ ಋಭವಃ ಸತ್ಯೇನ ಭಾಸಮಾನಾಃ ಸುಹಸ್ತಾಃ ಶೋಭನವಜ್ರಾದ್ಯಾಯುಧಯುಕ್ತಹಸ್ತಾ ದೇವಾಸ್ತಥಾ ಮಹಿಷಸ್ಯ ಮಹತಸ್ತನ್ಯತೋಃ ಶಬ್ದಸ್ಯ || ತನು ವಿಸ್ತಾರೇ | ಋತನ್ಯಂಜೀತಿ ಯತುಚ್ಪ್ರತ್ಯಯಃ || ಶಬ್ದಸ್ಯ ಕರ್ತಾರೌ ವಾತಾಪರ್ಜನ್ಯಾ ವಾತಶ್ಚ ಪರ್ಜನ್ಯಶ್ಚ ತೆತ್ಕಾರ್ಯೌ ಆಪ ಓಷಧೀರೋಷಧಯಶ್ಚ ನೋऽಸ್ಮಾಕಂ ಗಿರಃ ಸ್ತುತೀಃ ಪ್ರ ತಿರಂತು | ಪ್ರವರ್ಧ-**

ಯಂತು । ಪ್ರಪೂರ್ವಸ್ತಿರತಿರ್ವೃದ್ಧ್ಯರ್ಥಃ । ತಥಾ ರಾತಿರ್ದಾತಾ ಭಗೋ ಭಜನೀಯೋऽರ್ಯಮಾ ಚ ವಾಜಿನಃ । ಅಗ್ನಿರ್ವಾಯುಃ ಸೂರ್ಯಸ್ತೇ ವೈ ವಾಜಿನ ಇತಿ ತೈತ್ತಿರೀಯಬ್ರಾಹ್ಮಣಂ । ೧-೬-೩-೯ । ಏತೇ ದೇವಾಶ್ಚ ಮೇ ಮದೀಯಂ ಹವಮಾಹ್ವಾನಂ ಯಂತು । ಅಭಿಗಚ್ಛಂತು ॥

ಪ್ರತಿಪದಾರ್ಥ

**ದಿವಃ**—ದ್ಯುಲೋಕಕ್ಕೆ । **ಧರ್ತಾರಃ**—ಧಾರಕರೂ । **ಋಭ್ವಃ**—ತಮ್ಮ ಸತ್ಯಸ್ವರೂಪದಿಂದ ಪ್ರಕಾಶಿಸುವವರೂ । **ಸುಹಸ್ತಾಃ**—ಉತ್ತಮವಾದ ಹಸ್ತಗಳುಳ್ಳವರೂ । **ಮಹಿಷಸ್ಯ**—ಮಹತ್ತಾದ । **ತನ್ಯತೋಃ**—ಶಬ್ದಕ್ಕೆ ನಿರ್ಮಾಪಕರೂ ಆದ । **ವಾತಾಪರ್ಜನ್ಯಾ**—ವಾಯು ಮತ್ತು ಪರ್ಜನ್ಯರುಗಳು । **ಅಪಃ**—ಉದಕಗಳನ್ನೂ । **ಓಷಧೀಃ**—ಓಷಧಿಗಳನ್ನೂ । **ನಃ**—ನಮ್ಮ । **ಗಿರಃ**—ಸ್ತುತಿಗಳನ್ನೂ । **ಪ್ರ ತಿರಂತು**—ವೃದ್ಧಿಯಾಗುವಂತೆ ಮಾಡಲಿ । **ರಾತಿಃ**—ಉದಾರಿಯಾದ । **ಭಗಃ**—ಭಗದೇವನೂ । **ವಾಜಿನಃ**—ಅಗ್ನಿ, ವಾಯು ಮತ್ತು ಸೂರ್ಯರೂ । **ಮೇ**—ನನ್ನ । **ಹವಂ**—ಆಹ್ವಾನವನ್ನು ಲಕ್ಷಿಸಿ । **ಯಂತು**—ಬರಲಿ.

ಭಾವಾರ್ಥ

ದ್ಯುಲೋಕಕ್ಕೆ ಧಾರಕರೂ, ತಮ್ಮ ಸತ್ಯಸ್ವರೂಪದಿಂದ ಪ್ರಕಾಶಿಸುವವರೂ, ಉತ್ತಮವಾದ ಹಸ್ತಗಳುಳ್ಳವರೂ, ಮಹತ್ತಾದ ಶಬ್ದಕ್ಕೆ ನಿರ್ಮಾಪಕರೂ ಆದ ವಾಯು ಮತ್ತು ಪರ್ಜನ್ಯರುಗಳು ಉದಕಗಳನ್ನೂ, ಓಷಧಿಗಳನ್ನೂ ನಮ್ಮ ಸ್ತುತಿಗಳನ್ನು ವೃದ್ಧಿಯಾಗುವಂತೆ ಮಾಡಲಿ. ಉದಾರಿಯಾದ ಭಗದೇವನೂ, ಅಗ್ನಿ, ವಾಯು ಮತ್ತು ಸೂರ್ಯರೂ ನನ್ನ ಆಹ್ವಾನವನ್ನು ಲಕ್ಷಿಸಿ ಬರಲಿ.

English Translalion

May the upholders of the sky, the radiant with truth, the well-armed deities, Vata and Parjanya, (the utterers) of the mighty thunder, the waters, the plants, amplify our praises ; may the liberal Bhaga and the Vajins come to my invocation.

ಸಂಹಿತಾಪಾಠಃ

ಸಮುದ್ರಃ ಸಿಂಧೂ ರಜೋ ಅಂತರಿಕ್ಷಮಜ ಏಕಪಾತ್ತನಯಿತ್ನುರರ್ಣವಃ ।
ಅಹಿರ್ಬುಧ್ನ್ಯಃ ಶೃಣವದ್ವಚಾಂಸಿ ಮೇ ವಿಶ್ವೇ ದೇವಾಸ ಉತ ಸೂರಯೋ
ಮಮ ।

ಪದಪಾಠಃ

ಸಮುದ್ರಃ । ಸಿಂಧುಃ । ರಜಃ । ಅಂತರಿಕ್ಷಂ । ಅಜಃ । ಏಕಽಪಾತ್ । ತನಯಿತ್ನುಃ । ಅರ್ಣವಃ ।
ಅಹಿಃ । ಬುಧ್ನ್ಯಃ । ಶೃಣವತ್ । ವಚಾಂಸಿ । ಮೇ । ವಿಶ್ವೇ । ದೇವಾಸಃ । ಉತ । ಸೂರಯಃ । ಮಮ ॥

ಸಾಯಣಭಾಷ್ಯಂ

**ಸಮುದ್ರಃ ಸಮುಂದನಶೀಲಃ ಸ್ಯಂದಮಾನೋದಕಃ ಸಿಂಧುರೇತನ್ನಾಮಕೋಽಂತರಿಕ್ಷಂ ದ್ಯಾವಾಪೃಥಿವ್ಯೋರಂತರಾ ಮಧ್ಯೇ ಕ್ಷಿತಮುಷಿತಂ ರಜೋ ಮಧ್ಯಮಲೋಕಮಜ ಏಕಪಾತ್ ಅಜಾಯಮಾನ ಏಕ ಏವ ಪದ್ಯತೇ । ಏತತ್ಸಂಜ್ಞಕೋ ದೇವೋಽರ್ಣವ ಉದಕವಾಂಸ್ತನಯಿತ್ನುಃ ಸ್ತನಯಿತ್ನುರ್ಮೇಘೋ ಬುಧ್ನ್ಯೋಽಂತರಿಕ್ಷೇ ಭವೋಽಹಿರೇತತ್ಸಂಜ್ಞಕಃ ಏತೇ ದೇವಾ ಮೇ ಮಮ ವಚಾಂಸಿ ವಕ್ತವ್ಯಾನಿ ಸ್ತೋತ್ರಾಣಿ ಶೃಣವತ್ । ಪ್ರತ್ಯೇಕಂ ಶೃಣೋತು ಉತಾಪಿ ಚ ಸೂರಯಃ ಪ್ರಾಜ್ಞಾ ವಿಶ್ವೇ ದೇವಾಸೋ ದೇವಾ ಮಮ ಸ್ತೋತ್ರಾಣಿ ಶೃಣ್ವಂತು ॥**

ಪ್ರತಿಪದಾರ್ಥ

**ಸಮುದ್ರಃ**—ಪ್ರವಹಿಸುವ ಉದಕವುಳ್ಳ । **ಸಿಂಧುಃ**—ಸಿಂಧುವೂ । **ಅಂತರಿಕ್ಷಂ**—ದ್ಯಾವಾಪೃಥಿವಿಗಳ ನಡುವೆ ಇರುವ । **ರಜಃ**—ಮಧ್ಯಮಲೋಕವೂ । **ಅಜ ಏಕಪಾತ್**—ಅಜ ಏಕಪಾತ್ಸಂಜ್ಞಕನಾದ ದೇವನೂ । **ಅರ್ಣವಃ**—ಉದಕವಂತನೂ । **ತನಯಿತ್ನುಃ**—ಶಬ್ದಕಾರಕನೂ ಆದ । **ಅಹಿರ್ಬುಧ್ನ್ಯಃ**—ಅಹಿರ್ಬುಧ್ನ್ಯದೇವನೂ । **ಮೇ**—ನನ್ನ । **ವಚಾಂಸಿ**—ಸ್ತುತಿವಾಕ್ಯಗಳನ್ನು । **ಶೃಣವತ್**—ಕೇಳಲಿ । **ಉತ**—ಮತ್ತು । **ಸೂರಯಃ**—ಪ್ರಾಜ್ಞರಾದ । **ವಿಶ್ವೇ ದೇವಾಸಃ**—ಸಮಸ್ತ ದೇವತೆಗಳು । **ಮಮ**—ನನ್ನ ಸ್ತುತಿಗಳನ್ನು ಕೇಳಲಿ.

ಭಾವಾರ್ಥ

ಪ್ರವಹಿಸುವ ಉದಕವುಳ್ಳ ಸಿಂಧುವೂ, ದ್ಯಾವಾಪೃಥಿವಿಗಳ ನಡುವೆ ಇರುವ ಮಧ್ಯಮಲೋಕವೂ, ಅಜ ಏಕಪಾತ್ಸಂಜ್ಞಕನಾದ ದೇವನೂ, ಉದಕವಂತನೂ, ಶಬ್ದಕಾರಕನೂ ಆದ ಅಹಿರ್ಬುಧ್ನ್ಯದೇವನೂ ನನ್ನ ಸ್ತುತಿವಾಕ್ಯಗಳನ್ನು ಕೇಳಲಿ ಮತ್ತು ಪ್ರಾಜ್ಞರಾದ ವಿಶ್ವೇದೇವತೆಗಳು ನನ್ನ ಸ್ತುತಿಗಳನ್ನು ಕೇಳಲಿ.

English Translation

May the flowing Sindhu, the atmosphere, the firmament, Aja Ekapad, the rain-bearing thunder-cloud, and Ahirbudhnya hear my words; may the wise universal gods (listen to) my (praises).

ಸಂಹಿತಾಪಾಠಃ

**ಸ್ಯಾಮ ವೋ ಮನವೋ ದೇವವೀತಯೇ ಪ್ರಾಂಚಂ ನೋ ಯಜ್ಞಂ ಪ್ರ ಣಯತ ಸಾಧುಯಾ ।**

**ಆದಿತ್ಯಾ ರುದ್ರಾ ವಸವಃ ಸುದಾನವ ಇಮಾ ಬ್ರಹ್ಮ ಶಸ್ಯಮಾನಾನಿ ಜಿನ್ವತ ॥**

ಪದಪಾಠಃ

**ಸ್ಯಾಮ । ವಃ । ಮನವಃ । ದೇವಽವೀತಯೇ । ಪ್ರಾಂಚಂ । ನಃ । ಯಜ್ಞಂ । ಪ್ರ । ನಯತ । ಸಾಧುಽಯಾ ।**

ಆದಿತ್ಯಾಃ । ರುದ್ರಾಃ । ವಸವಃ । ಸುऽದಾನವಃ । ಇಮಾ । ಬ್ರಹ್ಮ । ಶಸ್ಯಮಾನಾನಿ । ಜಿನ್ವತ ॥ ೧೨ ॥

ಸಾಯಣಭಾಷ್ಯಂ

ಹೇ ದೇವಾಃ ಮನವೋ ಮನುಷ್ಯಾ ವಯಂ ವೋ ಯುಷ್ಮದೀಯಾಯ ದೇವವೀತಯೇ । ದೇವಾನಾಂ ವೀತಿರ್ಭಕ್ಷಣಂ ಯಸ್ಮಿನ್ ಸ ಯಜ್ಞಃ । ತಸ್ಮೈ ಯಜ್ಞಾಯ ಸ್ಯಾಮ । ಯಜ್ಞಕರ್ತಾರೋ ಭವೇಮ । ತತೋ ನೋऽಸ್ಮದೀಯಂ ಯಜ್ಞಂ ಸಾಧುಯಾ ॥ ಸುಪ್ಪೋ ಯಾಜಾದೇಶಃ ॥ ಸಾಧು ಕಲ್ಯಾಣಂ ಪ್ರಾಂಚಂ ಪ್ರಾಚೀನಂ ಪ್ರ ಣಯತ । ಪ್ರಕೃಷ್ಟಾಂಚನಂ ಕುರುತ । ಹೇ ಆದಿತ್ಯಾಃ ಹೇ ರುದ್ರಾಃ ರುದ್ರಪುತ್ರಾ ಮರುತೋ ಹೇ ಸುದಾನವಃ ಶೋಭನದಾನಾ ಹೇ ವಸವಃ ಇಮೇಮಾನಿ ಶಸ್ಯಮಾನಾನಿ ಬ್ರಹ್ಮ ಬ್ರಹ್ಮಾಣಿ ಸ್ತೋತ್ರಾಣಿ ಜಿನ್ವತ । ಪ್ರೀಣಯತ ॥

ಪ್ರತಿಪದಾರ್ಥ

(ಎಲೈ ದೇವತೆಗಳೇ) **ಮನವಃ**—ಮಾನವರಾದ ನಾವು । **ವಃ**-ನಿಮ್ಮನ್ನು ಪೂಜಿಸುವ । **ದೇವವೀತಯೇ**—ಯಜ್ಞಸಂಪಾದನೆಗಾಗಿ । **ಸ್ಯಾಮ**—ನಿರತರಾಗಿದ್ದೇವೆ । **ನಃ**—ನಮ್ಮ । **ಪ್ರಾಂಚಂ**—ಪ್ರಾಚೀನವಾದ । **ಯಜ್ಞಂ**—ಯಜ್ಞವನ್ನು । **ಸಾಧುಯಾ**—ಕಲ್ಯಾಣಫಲಪ್ರದವಾಗುವಂತೆ । **ಪ್ರಣಯತ**—ಸಹಾಯಮಾಡಿರಿ **ಆದಿತ್ಯಾಃ**—ಎಲೈ ಆದಿತ್ಯರೇ । **ರುದ್ರಾಃ**—ಎಲೈ ರುದ್ರರೇ । **ಸುದಾನವಃ**—ಉದಾರಿಗಳಾದ । **ವಸವಃ**—ಎಲೈ ವಸುಗಳೇ । **ಇಮಾ ಶಸ್ಯಮಾನಾನಿ**—ಇಲ್ಲಿ ಪಠಿತವಾಗುವ । **ಬ್ರಹ್ಮ**—ಸ್ತುತಿಗಳನ್ನು । **ಜಿನ್ವತ**—ಆದರದಿಂದ ಸ್ವೀಕರಿಸಿರಿ.

ಭಾವಾರ್ಥ

ಎಲೈ ದೇವತೆಗಳೇ, ಮಾನವರಾದ ನಾವು ನಿಮ್ಮನ್ನು ಪೂಜಿಸುವ ಯಜ್ಞಸಂಪಾದನೆಗಾಗಿ ನಿರತರಾಗಿದ್ದೇವೆ. ನಮ್ಮ ಪ್ರಾಚೀನವಾದ ಯಜ್ಞವನ್ನು ಕಲ್ಯಾಣಫಲಪ್ರದವಾಗುವಂತೆ ಸಹಾಯಮಾಡಿರಿ. ಎಲೈ ಆದಿತ್ಯರೇ, ಎಲೈ ರುದ್ರರೇ ಮತ್ತು ಉದಾರಿಗಳಾದ ಎಲೈ ವಸುಗಳೇ, ಇಲ್ಲಿ ಪಠಿತವಾಗುವ ಸ್ತುತಿಗಳನ್ನು ಆದರದಿಂದ ಸ್ವೀಕರಿಸಿರಿ.

English Translation

May we men be (deligent in providing) for your food, (O gods); conduct our ancient sacrifice to a successful end, Adityas, Rudras, and generous Vasus, graciously accept these hymns whieh are being recited.

ಸಂಹಿತಾಪಾಠಃ

ದೈವ್ಯಾ ಹೋತಾರಾ ಪ್ರಥಮಾ ಪುರೋಹಿತ ಋತಸ್ಯ ಪಂಥಾಮನ್ವೇಮಿ ಸಾಧುಯಾ ।

ಕ್ಷೇತ್ರಸ್ಯ ಪತಿಂ ಪ್ರತಿವೇಶಮೀಮಹೇ ವಿಶ್ವಾನ್ದೇವಾ ಅಮೃತಾ ಅಪ್ರಯುಚ್ಛತಃ

ಪದಪಾಠಃ

ದೈವ್ಯಾ । ಹೋತಾರಾ । ಪ್ರಥಮಾ । ಪುರಃಽಹಿತಾ । ಋತಸ್ಯ । ಪಂಥಾಂ । ಅನು । ಏಮಿ । ಸಾಧುಽಯಾ ।
ಕ್ಷೇತ್ರಸ್ಯ । ಪತಿಂ । ಪ್ರತಿಽವೇಶಂ । ಈಮಹೇ । ವಿಶ್ವಾನ್ । ದೇವಾನ್ । ಅಮೃತಾನ್ । ಅಪ್ರಽಯುಚ್ಛತಃ ॥

ಸಾಯಣಭಾಷ್ಯಂ

ಅಪ್ತೋರ್ಯಾಮೇಽಚ್ಛಾವಾಕಾತಿರಿಕ್ತೋಕ್ಥಸ್ಯ ದೈವ್ಯಾ ಹೋತಾರೇತ್ಯೇಷಾ ಪರಿಧಾನೀಯಾ । ಸೂತ್ರಿತಂ ಚ । ಉಭಾ ಉ ನೂನಂ ದೈವ್ಯಾ ಹೋತಾರಾ ಪ್ರಥಮಾ ಪುರೋಹಿತೇತಿ ಪರಿಧಾನೀಯಾ । ಆ.೯-೧೧ । ಇತಿ ॥

ಪ್ರಥಮಾ ಮುಖ್ಯೌ ಪುರೋಹಿತಾ ಪುರೋಹಿತೌ ಪುರತೋ ನಿಹಿತೌ ದೈವ್ಯಾ ದೇವಸಂಬಂಧಿನೌ ಹೋತಾರಾ ಹೋತಾರಾವೇತನ್ನಾಮಾನಾವಗ್ನ್ಯಾದಿತ್ಯಾವನ್ವೇಮಿ । ಹವಿರ್ಭಿರನುಗಚ್ಛಾಮಿ। ತತ ಋತಸ್ಯ ಯಜ್ಞಸ್ಯ ಪಂಥಾಂ ಪಂಥಾನಂ ಸಾಧುಯಾ ಕಲ್ಯಾಣಂ ವಿಘ್ನರಾಹಿತ್ಯೇನಾನ್ವೇಮಿ । ಅನುಗಚ್ಛಾಮಿ । ಅನಂತರಂ ಪ್ರತಿವೇಶಂ ಸಮೀಪೇ ವರ್ತಮಾನಂ ಕ್ಷೇತ್ರಸ್ಯ ಪತಿಂ ಪಾಲಯಿತಾರಮೇತನ್ನಾಮಾನಮಮೃತಾನ್ಮರಣಧರ್ಮರಹಿತಾನಪ್ರಯುಚ್ಛತೋಽಪ್ರಮಾದ್ಯತೋ ವಿಶ್ವಾನ್ಸರ್ವಾನ್ದೇವಾಂಶ್ಚೇಮಹೇ । ಧನಂ ಯಾಚಾಮಹೇ ॥

ಪ್ರತಿಪದಾರ್ಥ

**ಪ್ರಥಮಾ**—ಪ್ರಧಾನರೂ । **ಪುರೋಹಿತಾ**—ಎಲ್ಲರಿಗಿಂತಲೂ ಮುಂದಾಗಿ ಸ್ಥಾಪಿತರಾದವರೂ । **ದೈವ್ಯಾ ಹೋತಾರಾ**—ದೇವಪೂಜಕರೂ ಆದ ಅಗ್ನಿ ಮತ್ತು ಆದಿತ್ಯರನ್ನು । **ಅನ್ವೇಮಿ**—ನಾನು ಅನುಸರಿಸುತ್ತೇನೆ । **ಋತಸ್ಯ**—ಯಜ್ಞದ । **ಪಂಥಾಂ**—ಮಾರ್ಗವನ್ನು । **ಸಾಧುಯಾ**—ಉತ್ತಮವಾಗಿ । **ಅನ್ವೇಮಿ**—ಅನುಸರಿಸುತ್ತೇನೆ । **ಪ್ರತಿವೇಶಂ**—ನಮ್ಮ ಸಮೀಪದಲ್ಲಿರುವ । **ಕ್ಷೇತ್ರಸ್ಯ ಪತಿಂ**—ಕ್ಷೇತ್ರಪತಿಯೆಂಬ ದೇವನನ್ನೂ । **ಅಮೃತಾನ್**—ಮರಣರಹಿತರೂ । **ಅಪ್ರಯುಚ್ಛತಃ**—ಆಲಸ್ಯರಹಿತರೂ ಆದ । **ವಿಶ್ವಾನ್ ದೇವಾನ್**—ಸಮಸ್ತ ದೇವತೆಗಳನ್ನು । **ಈಮಹೇ**—ಧನಕ್ಕಾಗಿ ಯಾಚಿಸುತ್ತೇವೆ.

ಭಾವಾರ್ಥ

ಪ್ರಧಾನರೂ, ಎಲ್ಲರಿಗಿಂತಲೂ ಮುಂದಾಗಿ ಸ್ಥಾಪಿತರಾದವರೂ, ದೇವಪೂಜಕರೂ ಆವ ಅಗ್ನಿ ಮತ್ತು ಆದಿತ್ಯರನ್ನು ನಾನು ಅನುಸರಿಸುತ್ತೇನೆ- ಯಜ್ಞಮಾರ್ಗವನ್ನು ನಾನು ಉತ್ತಮವಾಗಿ ಅನುಸರಿಸುತ್ತೇನೆ. ನಮ್ಮ ಸಮೀಪದಲ್ಲೇ ಇರುವ ಕ್ಷೇತ್ರಪತಿಯೆಂಬ ದೇವನನ್ನೂ, ಮರಣರಹಿತರೂ, ಆಲಸ್ಯರಹಿತರೂ ಆದ ವಿಶ್ವೇದೇವತೆಗಳನ್ನೂ (ಸಕಲ ದೇವತೆಗಳನ್ನೂ) ಧನಕ್ಕಾಗಿ ಯಾಚಿಸುತ್ತೇವೆ,

## English Translation

I follow the two chief priests, the divine offerers of burnt sacrifices; (I follow) successfully the path of sacrifice; we solicit (wealth of) the contiguous lord of the field, and the immortal and not unheeding universal deities.

ವಿಶೇಷವಿಷಯಗಳು

ಅಗ್ನಿಷ್ಟೋಮವೆಂಬ ಯಾಗದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಅತಿರಿಕ್ತವೆಂಬ ಉಕ್ಥಮಂತ್ರಗಳನ್ನು ಪಠಿಸುವಾಗ ದೈವ್ಯಾ ಹೋತಾರಾ ಎಂಬ ಈ ಋಕ್ಕನ್ನು ಕೊನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಉಭಾ ಉ ನೂನಂ ದೈವ್ಯಾ ಹೋತಾರಾ ಪುರೋಹಿತೇತಿ ಪರಿಧಾನೀಯಾ** ಎಂಬ ಸೂತ್ರದಿಂದ (ಆ. ೯-೧೧) ವಿವೃತವಾಗಿರುವುದು.

ಸಂಹಿತಾಪಾಠಃ

ವಸಿಷ್ಠಾಸಃ ಪಿತೃವದ್ವಾಚಮಕ್ರತ ದೇವಾ ಈಳಾನಾ ಋಷಿವತ್ಸ್ವಸ್ತಯೇ ।
ಪ್ರೀತಾ ಇವ ಜ್ಞಾತಯಃ ಕಾಮಮೇತ್ಯಾಸ್ಮೇ ದೇವಾಸೋಽವ ಧೂನುತಾ ವಸು ॥ ೧೪ ॥

ಪದಪಾಠಃ

ವಸಿಷ್ಠಾಸಃ । ಪಿತೃಽವತ್ । ವಾಚಂ । ಅಕ್ರತ । ದೇವಾನ್ । ಈಳಾನಾಃ । ಋಷಿಽವತ್ । ಸ್ವಸ್ತಯೇ । ಪ್ರೀತಾಃಽಇವ । ಜ್ಞಾತಯಃ । ಕಾಮಂ । ಆಽಇತ್ಯ । ಅಸ್ಮೇ ಇತಿ । ದೇವಾಸಃ । ಅವ । ಧೂನುತ । ವಸು ॥ ೧೪ ॥

ಸಾಯಣಭಾಷ್ಯಂ

**ಋಷಿವತ್ ಪೂರ್ವ ಋಷಯ ಇವ ದೇವಾನೀಳಾನಾಃ ಸ್ತುವಂತೋ ವಸಿಷ್ಠಾಸೋ ವಸಿಷ್ಠಕುಲಜಾತಾ ಋಷಯಃ ಪಿತೃವದ್ವಸಿಷ್ಠವತ್ಸ್ವಸ್ತಯೇಽವಿನಾಶಾಯ ವಾಚಂ ಸ್ತೋತ್ರಮಕ್ರತ । ಕುರ್ವಂತಿ ॥ ಕರೋತೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ ॥ ಹೇ ದೇವವಾಸೋ ದೇವಾಃ ಯೂಯಂ ಕಾಮಮಸ್ಮದಭಿಲಾಷಮೇತ್ಯಾಗತ್ಯಾಸ್ಮೇ ಅಸ್ಮಾಸು ವಸು ಗವಾದಿಲಕ್ಷಣಂ ಧನಮವ ಧೂನುತ । ಅಭಿಮುಖಂ ಪ್ರೇರಯತ । ತತ್ರ ದೃಷ್ಟಾಂತಃ । ಪ್ರೀತಾ ಇವ । ಯಥಾ ಪ್ರೀತಾಃ ಸಂಹೃಷ್ಟಾ ಜ್ಞಾತಯೋ ಬಂಧವಃ ಸ್ವಜನಸ್ಯ ಧನಂ ಪ್ರೇರಯಂತಿ ತದ್ವದ್ಭವಿದ್ಭಿರ್ದಾನೇನ ಸ್ತುತಿಕರಣೇನ ಚ ಬಂಧುಷ್ವಸ್ಮಾಸು ಧನಂ ಪ್ರೇರಯತೇತಿ ಭಾವಃ ॥**

ಪ್ರತಿಪದಾರ್ಥ

**ಋಷಿವತ್**—ಹಿಂದಿನಕಾಲದ ಋಷಿಗಳಂತೆಯೂ । **ಪಿತೃವತ್**—ತಮ್ಮ ಪಿತೃವಾದ ವಸಿಷ್ಠನಂತೆಯೂ । **ದೇವಾನ್**—ದೇವತೆಗಳನ್ನು । **ಈಳಾನಾಃ**—ಪ್ರಶಂಸಿಸುವ । **ವಸಿಷ್ಠಾಸಃ**—ವಸಿಷ್ಠವಂಶೋತ್ಪನ್ನರಾದ ಋಷಿಗಳು । **ಸ್ವಸ್ತಯೇ**—ತಮ್ಮ ಕಲ್ಯಾಣಕ್ಕಾಗಿ । **ವಾಚಂ**—ಸ್ತುತಿಯನ್ನು । **ಅಕ್ರತ**—ನಿರ್ಮಿಸುತ್ತಾರೆ. **ದೇವಾಸಃ**—ಎಲೈ ದೇವತೆಗಳೇ । **ಪ್ರೀತಾ ಇವ**—ನಮ್ಮಲ್ಲಿ ಪ್ರೇಮವನ್ನಿಟ್ಟಿರುವ । **ಜ್ಞಾತಯಃ**—ನಮ್ಮ ಬಂಧುಗಳಂತೆ । **ಕಾಮ್ಯಂ**—ನಮ್ಮ ಇಷ್ಟಾರ್ಥವನ್ನು । **ಏತ್ಯ**—ನೆರವೇರಿಸಲು ಬಂದು । **ಅಸ್ಮೇ**—ನಮ್ಮಲ್ಲಿ । **ವಸು**—ಧನವನ್ನು । **ಅವ ಧೂನುತ**—ಸ್ಥಾಪಿಸಿರಿ.

ಭಾವಾರ್ಥ

ಹಿಂದಿನ ಕಾಲದ ಋಷಿಗಳಂತೆಯೂ, ತಮ್ಮ ಪಿತೃವಾದ ವಸಿಷ್ಠನಂತೆಯೂ, ದೇವತೆಗಳನ್ನು ಪ್ರಶಂಸಿಸುವ ವಸಿಷ್ಠವಂಶೋತ್ಪನ್ನರಾದ ಋಷಿಗಳು ತಮ್ಮ ಕಲ್ಯಾಣಕ್ಕಾಗಿ ಸ್ತುತಿಯನ್ನು ನಿರ್ಮಿಸುತ್ತಾರೆ. ಎಲೈ ದೇವತೆಗಳೇ, ನೀವು ನಮ್ಮಲ್ಲಿ ಪ್ರೇಮವನ್ನಿಟ್ಟಿರುವ ನಮ್ಮ ಬಂಧುಗಳಂತೆ ನಮ್ಮ ಇಷ್ಟಾರ್ಥವನ್ನು ನೆರವೇರಿಸಲು ಬಂದು ನಮ್ಮಲ್ಲಿ ಧನವನ್ನು ಸ್ಥಾಪಿಸಿರಿ.(ನಮಗೆ ಧನವನ್ನು ಕೊಡಿ)

English Translation

The Vasishthas like their progenitor have uttered praise glorifying the gods like (former) Rishis for their well-being ; having come to us, gods, at our desire, bestow wealth upon us like affectionate relations·

ಸಂಹಿತಾಪಾಠಃ

ದೇವಾನ್ವಸಿಷ್ಠೋ ಅಮೃತಾನ್ವವಂದೇ ಯೇ ವಿಶ್ವಾ ಭುವನಾಭಿ ಪ್ರತಸ್ಥುಃ ।
ತೇ ನೋ ರಾಸಂತಾಮುರುಗಾಯಮದ್ಯ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೧೫ ॥

ಪದಪಾಠಃ

ದೇವಾನ್ । ವಸಿಷ್ಠಃ । ಅಮೃತಾನ್ । ವವಂದೇ । ಯೇ । ವಿಶ್ವಾ । ಭುವನಾ । ಅಭಿ । ಪ್ರऽತಸ್ಥುಃ ।
ತೇ । ನಃ । ರಾಸಂತಾಂ । ಉರುऽಗಾಯಂ । ಅದ್ಯ । ಯೂಯಂ । ಪಾತ । ಸ್ವಸ್ತಿऽಭಿಃ । ಸದಾ । ನಃ ॥೧೫॥

ಸಾಯಣಭಾಷ್ಯಂ

ವಿಷರ್ಕ್ ಪೂರ್ವಮೇವ ವ್ಯಾಖ್ಯಾಯಿ ॥ 534 ನೇ ಪುಟವನ್ನು ನೋಡಿ.

ಪ್ರತಿಪದಾರ್ಥ

**ಯೇ**—ಯಾವ ದೇವತೆಗಳು । **ವಿಶ್ವಾ ಭುವನಾ**—ಸಕಲ ಲೋಕಗಳನ್ನೂ । **ಅಭಿ ಪ್ರತಸ್ಥುಃ**—ತಮ್ಮ ತೇಜಸ್ಸುಗಳಿಂದ ವ್ಯಾಪಿಸಿರುವರೋ ಅಂತಹ । **ಅಮೃತಾನ್**—ಅಮರ್ತ್ಯರಾದ। **ದೇವಾನ್**—ದೇವತೆಗಳನ್ನು। **ವಸಿಷ್ಠಃ**—ವಸಿಷ್ಠವಂಶೋತ್ಪನ್ನನಾದ ಈ ಋಷಿಯು । **ವವಂದೇ**—ಸ್ತುತಿಪೂರ್ವಕವಾಗಿ ನಮಸ್ಕರಿಸುತ್ತಾನೆ । **ತೇ**—ಅದೇ ದೇವತೆಗಳು । **ಅದ್ಯ**—ಇಂದು । **ನಃ**—ನಮಗೆ । **ಉರುಗಾಯಂ**—ಅತ್ಯಂತ ಪ್ರಶಸ್ಯವಾದ ಅನ್ನವನ್ನು। **ರಾಸಂತಾಂ**—ಕೊಡಲಿ । (ಎಲೈ ದೇವತೆಗಳೇ) **ಯೂಯಂ**--ನೀವು । **ಸ್ವಸ್ತಿಭಿಃ**—ಕಲ್ಯಾಣಾತ್ಮಕವಾದ ರಕ್ಷಣೆಗಳಿಂದ । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಪಾತ**—ರಕ್ಷಿಸಿರಿ.

ಭಾವಾರ್ಥ

ಸಕಲ ಲೋಕಗಳನ್ನೂ ತಮ್ಮ ತೇಜಸ್ಸುಗಳಿಂದ ವ್ಯಾಪಿಸಿರುವವರೂ, ಅಮರ್ತ್ಯರೂ ಆದ ದೇವತೆಗಳನ್ನು ವಸಿಷ್ಠವಂಶೋತ್ಪನ್ನನಾದ ಈ ಋಷಿಯು ಸ್ತುತಿಪೂರ್ವಕವಾಗಿ ನಮಸ್ಕರಿಸಿದ್ದಾನೆ. ಅದೇ ದೇವತೆಗಳು ಇಂದು ನಮಗೆ

ಅತ್ಯಂತ ಪ್ರಶಸ್ಯವಾದ ಅನ್ನವನ್ನು ಕೊಡಲಿ. ಎಲೈ ದೇವತೆಗಳೇ, ನೀವು ಕಲ್ಯಾಣಾತ್ಮಕವಾದ ರಕ್ಷಣೆಗಳಿಂದ ನಮ್ಮನ್ನು ಯಾವಾಗಲೂ ರಕ್ಷಿಸಿರಿ.

English Translation

(Descendant of ) Vasistha, I have glorified the immortal gods who preside over all the worlds ; may they this day bestow upon us widely-famed food ; do you always cherish us with blessings.

# ಅರವತ್ತೇಳನೆಯ ಸೂಕ್ತ

**ಪೀಠಿಕೆ**

ಈ ಸೂಕ್ತಕ್ಕೂ ಮುಂದಿನ ಸೂಕ್ತಕ್ಕೂ ಬೃಹಸ್ಪತಿಯು ದೇವತೆಯು. ಯಾಸ್ಕರು ತಮ್ಮ ನಿರುಕ್ತದಲ್ಲಿ ಬೃಹಸ್ಪತಿ ಶಬ್ದದ ನಿರ್ವಚನವನ್ನು ವಿವರಿಸುತ್ತಾ—

**ಬೃಹಸ್ಪತಿಃ ಬೃಹತಃ ಪಾತಾ ವಾ ಪಾಲಯಿತಾ ವಾ |**

(ನಿ. ೧೦-೧೧)

ಎಂದು ಹೇಳಿದ್ದಾರೆ. ಇದಕ್ಕೆ ವಾಖ್ಯಾನಕಾರರಾದ ದುರ್ಗಾಚಾರ್ಯರು—ಬೃಹಸ್ಪತಿಃ ಕಸ್ಮಾತ್ ? **ಬೃಹತಃ ಪಾತಾ ವಾ ಪಾಲಯಿತಾ ವಾ | ಬೃಹತಃ ಮಹತೋಽಸ್ಯ ಜಗತಃ ಉದಕಸ್ಯ ವಾ ಪಾತಾ ರಕ್ಷಿತಾ ಪಾಲಯಿತಾ ಅಪಿ ರಕ್ಷಿತೈವ ಧಾತ್ವನ್ಯತ್ವಮರ್ಥೈಕತ್ವಂ ||** ಎಂದರೆ ದೊಡ್ಡದಾದ ಜಗತ್ತಿನ ಅಥವಾ ಉದಕದ ಸಂರಕ್ಷಕನು, ಕಾಪಾಡುವವನು. ಪತಿಶಬ್ದದ ಅರ್ಥವನ್ನು ಸೂಚಿಸುವುದಕ್ಕೆ ಪಾತಾ, ಪಾಲಯಿತಾ ಎಂಬ ಬೇರೆಬೇರೆ ಧಾತುಗಳಿಂದ ನಿಷ್ಪನ್ನವಾದ ಶಬ್ದಗಳಿದ್ದರೂ ಅರ್ಥವು ಮಾತ್ರ ಒಂದೇ ಆಗಿರುವುದೆಂದು ಹೇಳಿರುವರು. ಸಾಯಣರು ಅನೇಕ ಸಂದರ್ಭಗಳಲ್ಲಿ ಬೃಹತಃ ಪಾತಾ ಎಂಬುವುದನ್ನು ವಿವರಿಸುವಾಗ ಬೃಹತಃ ಎಂಬ ಶಬ್ದಕ್ಕೆ ಬೃಹತಃ ಯಜ್ಞಕರ್ಮಣಃ ಅಥವಾ ವೃಷ್ಟ್ಯಾಖ್ಯಕರ್ಮಣಃ ಎಂದರೆ ಯಜ್ಞರೂಪವಾದ ಕರ್ಮದ ಅಥವಾ ವೃಷ್ಟಿಪ್ರದಾನರೂಪವಾದ ಕರ್ಮದ ಎಂದು ಅರ್ಥವನ್ನು ಹೇಳಿರುವರು. ಬೃಹಸ್ಪತಿಯು ದೇವತೆಗಳಿಗೆ ಪುರೋಹಿತನಾಗಿ ಯಜ್ಞಕರ್ಮವನ್ನು ನೆರವೇರಿಸುವುದರಿಂದಲೂ, ಮನುಷ್ಯರಿಗೆ ಅವಶ್ಯಕವಾದ ವೃಷ್ಟಿಯನ್ನುಂಟುಮಾಡುವುದರಿಂದಲೂ ಈ ಎರಡು ವಿಧವಾದ ವಿಶೇಷಣಗಳೂ ಸಹಜವಾಗಿರುವುವು. ಬೃಹಸ್ಪತಿಯ ಪುರೋಹಿತತ್ತ್ವವನ್ನೂ ವೃಷ್ಟಿಪ್ರದಾನವನ್ನು ವರ್ಣಿಸುವ—

**ಯದ್ದೇವಾಪಿಃ ಶಂತನವೇ ಪುರೋಹಿತೋ ಹೋತ್ರಾಯ ವೃತಃ ಕೃಪಯನ್ನದೀಧೇತ್ |**
**ದೇವಶ್ರುತಂ ವೃಷ್ಟಿವನಿಂ ರರಾಣೋ ಬೃಹಸ್ಪತಿರ್ವಾಚಮಸ್ಮಾ ಅಯಚ್ಛತ್ ||**

(ಋ. ಸಂ. ೧೦-೯೮-೭)

ಎಂಬ ಋಕ್ಕನ್ನು ಯಾಸ್ಕರು ಉದಾಹರಣೆಗಾಗಿ ಕೊಟ್ಟಿರುವರು. ಈ ಋಕ್ಕಿನ ನಿರ್ವಚನದಲ್ಲಿ **ಬೃಹಸ್ಪತಿರ್ಬ್ರಹ್ಮಾಸೀತ್ ಸೋಽಸ್ಮೈ ವಾಚಮಯಚ್ಛತ್** ಎಂದರೆ ಬೃಹಸ್ಪತಿಯು ಶಂತನುವೆಂಬ ರಾಜನು ಮಾಡಿದ ಯಜ್ಞದಲ್ಲಿ ಬ್ರಹ್ಮನೆಂಬ ಪುರೋಹಿತನಾಗಿ ವಾಕ್ಯರೂಪವಾದ ಮಂತ್ರವನ್ನು ಉಪದೇಶಿಸಿದನೆಂದೂ ಆ ಮಂತ್ರದಿಂದ ಯಜಮಾನನು ಸ್ತುತಿಸಲಾಗಿ ವೃಷ್ಟಿಯುಂಟಾಯಿತೆಂದೂ ವರ್ಣಿತವಾಗಿದೆ. ಇದಲ್ಲದೆ ಯಜುರ್ವೇದಾದಿಗಳಲ್ಲಿ—

**ಬೃಹಸ್ಪತಿರ್ದೇವಾನಾಂ ಪುರೋಹಿತ ಆಸೀಚ್ಛಂಡಾಮರ್ಕಾವಸುರಾಣಾಂ |**

(ತೈ. ಸಂ. ೬-೪-೧೦-೧)

ಬೃಹಸ್ಪತಿಯು ದೇವತೆಗಳಿಗೆ ಪುರೋಹಿತನಾಗಿದ್ದನು. ಶಂಡಾಮರ್ಕರೆಂಬುವರು ಅಸುರರಿಗೆ ಪುರೋಹಿತರಾಗಿದ್ದರು ಎಂದು ಹೇಳಿದೆ.

**ಬ್ರಹ್ಮ ವೈ ದೇವಾನಾಂ ಬೃಹಸ್ಪತಿರ್ಬ್ರಹ್ಮಣೈವೈನಮಭಿಚರತಿ |**

(ತೈ. ಸಂ. ೨-೨-೯-೧)

ಬೃಹಸ್ಪತಿಯು ದೇವತೆಗಳು ಮಾಡಿದ ಯಜ್ಞದಲ್ಲಿ ಬ್ರಹ್ಮನೆಂಬ ಋತ್ವಿಜನಾಗಿ ಯಜ್ಞವನ್ನು ನೆರವೇರಿಸಿದನು ಎಂದು ಹೇಳಿದೆ.

**ತಸ್ಮೈ ವಿಶಃ ಸ್ವಯಮೇವಾ ನಮಂತೇ ಯಸ್ಮಿನ್ ಬ್ರಹ್ಮಾ ರಾಜನಿ ಪೂರ್ವ ಏತಿ |**

(ಋ. ಸಂ. ೪-೫೦-೮)

**ಅವಸ್ಯವೇ ಯೋ ವರಿವಃ ಕೃಣೋತಿ ಬ್ರಹ್ಮಣೇ ರಾಜಾ ತಮವಂತಿ ದೇವಾಃ |**

(ಋ. ಸಂ. ೪-೫೦-೯)

**ಸೋಮಂ ರಾಜಾನಮವಸೇಽಗ್ನಿಂ ಗೀರ್ಭಿರ್ಹವಾಮಹೇ |**
**ಆದಿತ್ಯಾನ್ವಿಷ್ಣುಂ ಸೂರ್ಯಂ ಬ್ರಹ್ಮಾಣಂ ಚ ಬೃಹಸ್ಪತಿಂ ||**

(ಋ. ಸಂ. ೧೦-೧೪೧-೩)

ಇತ್ಯಾದಿ ಋಕ್ಕುಗಳಲ್ಲಿ ಬೃಹಸ್ಪತಿಯು ಬ್ರಹ್ಮನೆಂಬ ಋತ್ವಿಜನು ಎಂದು ವರ್ಣನೆ ಇದೆ.

ಋಗ್ವೇದದಲ್ಲಿ ಬೃಹಸ್ಪತಿಗೆ ಪ್ರಾಮುಖ್ಯವಾದ ಸ್ಥಾನವೇ ಇದೆ. ಹನ್ನೊಂದು ಸೂಕ್ತಗಳಲ್ಲಿ ಸ್ತುತನಾಗಿರುವುದಲ್ಲದೇ ಎರಡು ಸೂಕ್ತಗಳಲ್ಲಿ (ಋ. ಸಂ. ೪-೪೯; ೭-೯೭) ಇಂದ್ರನ ಜತೆಯಲ್ಲಿ ದ್ವಂದ್ವದೇವತೆಯಾಗಿಯೂ ಸ್ತುತನಾಗಿದ್ದಾನೆ. ಬೃಹಸ್ಪತಿ ಶಬ್ದವು ಋಗ್ವೇದದಲ್ಲಿ ಸುಮಾರು ೧೨೦ ಸಲ ಪಠಿತವಾಗಿದೆ. ಅನೇಕ ಸಂದರ್ಭಗಳಲ್ಲಿ ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿ ದೇವತೆಗಳು ಒಂದೇ ಮಂತ್ರದಲ್ಲಿ ಪರಸ್ಪರ ವಿನಿಮಯವಾಗಿ ಸ್ತುತರಾಗಿದಾರೆ. ಆದರೂ ಬೃಹಸ್ಪತಿಯೇ ಬೇರೆ, ಬ್ರಹ್ಮಣಸ್ಪತಿಯೇ ಬೇರೆ ದೇವತೆಗಳು.

ಕೆಲವು ಪಾಶ್ಚಾತ್ಯಪಂಡಿತರು, ಅಧುನಿಕ ವಿದ್ವಾಂಸರಲ್ಲಿ ಕೆಲವರೂ ಸಹ ಋ. ಸಂ. ೨-೨೩ ನೆಯ ಸೂಕ್ತದಲ್ಲಿ ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿಗಳು ಪರಸ್ಪರ ವಿನಿಮಯವಾಗಿ ಸ್ತುತಿಸಲ್ಪಟ್ಟಿರುವುದರಿಂದ ಇಬ್ಬರೂ ಒಂದೇ ದೇವತೆಯೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು. ಆದರೆ ಯಾಸ್ಕರು, ಶೌನಕರು, ಸಾಯಣರು ಮೊದಲಾದ ಪುರಾತನ ವೇದಭಾಷ್ಯಕಾರರು ಬೃಹಸ್ಪತಿಯೇ ಬೇರೆ, ಬ್ರಹ್ಮಣಸ್ಪತಿಯೇ ಬೇರೆ ಎಂದು ಸ್ಪಷ್ಟವಾಗಿ ಹೇಳಿರುವರು. ಮೇಲೆ ಹೇಳಿದ ಋ. ಸಂ. ೨-೨೩ ನೆಯ ಸೂಕ್ತದಲ್ಲಿರುವ ೧೯ ಋಕ್ಕುಗಳಲ್ಲಿ ೧, ೫, ೯, ೧೧, ೧೭, ೧೯ ಎಂಬ ೬ ಋಕ್ಕುಗಳು ಮಾತ್ರ ಬೃಹಸ್ಪತಿಯನ್ನು ಸ್ತುತಿಸುತ್ತವೆ. ಉಳಿದ ೧೩ ಋಕ್ಕುಗಳು ಬ್ರಹ್ಮಣಸ್ಪತಿಯ ಪರವಾಗಿವೆ. ಯಾಸ್ಕರೂ ಸಹ ಬೃಹಸ್ಪತಿ ಶಬ್ದಕ್ಕೂ ಬ್ರಹ್ಮಣಸ್ಪತಿ ಶಬ್ದಕ್ಕೂ ಬೇರೆ ಬೇರೆ ನಿರ್ವಚನವನ್ನು ಹೇಳಿದಾರೆ. ಆದುದರಿಂದ ಬೃಹಸ್ಪತಿಯೇ ಬೇರೆ ಬ್ರಹ್ಮಣಸ್ಪತಿಯೇ ಬೇರೆ.

ಇತರ ದೇವತೆಗಳಿಗಿಂತ ತೀರಾ ಭಿನ್ನವಾದ ವೈಶಿಷ್ಟ್ಯವು ಬೃಹಸ್ಪತಿಗೆ ಇದೆ. ಇತರ ದೇವತೆಗಳೆಲ್ಲಾ ಪ್ರಕೃತಿ ಅಥವಾ ಪ್ರಕೃತಿಶಕ್ತಿಯ ರೂಪವಿಶೇಷಗಳಾದರೆ ಬೃಹಸ್ಪತಿಯು ಮಾನವನ ನೈತಿಕ ಮತ್ತು ಧಾರ್ಮಿಕ ಜೀವನಕ್ಷೇತ್ರಕ್ಕೆ ಸಂಬಂಧಿಸಿದಂತಿದೆ. ಸ್ತುತಿಸ್ತೋತ್ರ ಅಥವಾ ಪ್ರಾರ್ಥನೆಗೆ ರಕ್ಷಕನಾದ ಈ ದೇವತೆಯು ದೇವತೆಗಳ ಮನಸ್ಸಿನ ನಿರ್ಧಾರ, ಸಂಕಲ್ಪ ಅಥವಾ ಶಕ್ತಿಯಮೇಲೆ ತನ್ನ ಪ್ರಭಾವವನ್ನು ಬೀರುವನೆಂಬುವುದಕ್ಕೆ ಋಗ್ವೇದದಲ್ಲಿ ಅನೇಕ ಉದಾಹರಣೆಗಳಿವೆ. ಋಗ್ವೇದ ೧೦ ನೆಯ ಮಂಡಲದ ೯೮ ನೆಯ ಸೂಕ್ತದಲ್ಲಿ ದೇವಾಪಿ ಮತ್ತು ಶಂತನು ಎಂಬ ಕುರುವಂಶದ

ರಾಜಪುತ್ರರ ವಿಷಯಕವಾದ ಒಂದು ಇತಿಹಾಸವರ್ಣನೆ ಇದೆ. ಅದರಲ್ಲಿ ಬೃಹಸ್ಪತಿಯ ಪಾತ್ರವು ಬಹುಮುಖ್ಯವಾದುದೆಂಬುದನ್ನು ನಿರುಕ್ತಕಾರರು ಈರೀತಿ ವರ್ಣಿಸಿದ್ದಾರೆ—

**ಅತ್ರೇತಿಹಾಸಮಾಚಕ್ಷತೇ । ದೇವಾಪಿಶ್ಚಾರ್ಷ್ಟಿಷೇಣಃ ಶಂತನುಶ್ಚ ಕೌರವ್ಯೌ ಭ್ರಾತರೌ ಬಭೂವತುಃ । ಸ ಶಂತನುಃ ಕನೀಯಾನಭಿಷೇಚಯಾಂಚಕ್ರೇ । ದೇವಾಪಿಸ್ತಪಃ ಪ್ರತಿಪೇದೇ । ತತಃ ಶಂತನೋಃ ರಾಜ್ಯೇ ದ್ವಾದಶವರ್ಷಾಣಿ ದೇವೋ ನ ವವರ್ಷ । ತಮೂಚುರ್ಬ್ರಾಹ್ಮಣಾ ಅಧರ್ಮಸ್ತ್ವಯಾಚರಿತೋ ಜ್ಯೇಷ್ಠಂ ಭ್ರಾತರಮಂತರಿತ್ಯಾಭಿಷೇಚಿತಂ ತಸ್ಮಾತ್ತೇ ದೇವೋ ನ ವರ್ಷತೀತಿ । ಸ ಶಂತನುರ್ದೇವಾಪಿಂ ಶಿಶಿಕ್ಷ ರಾಜ್ಯೇನ । ತಮುವಾಚ ದೇವಾಪಿಃ ಪುರೋಹಿತಸ್ತೇಽಸಾನಿ ಯಾಜಯಾನಿ ಚ ತ್ವೇತಿ ॥**

(ನಿ. ೨-೧೧)

ಪೂರ್ವಕಾಲದಲ್ಲಿ ಕುರುವಂಶದಲ್ಲಿ ಋಷ್ಟಿಷೇಣನೆಂಬ ರಾಜನಿಗೆ ದೇವಾಪಿ, ಶಂತನು ಎಂಬ ಈರ್ವರು ಪುತ್ರರಿದ್ದರು. ಅದರಲ್ಲಿ ದೇವಾಪಿಯೆಂಬುವನು ಹಿರಿಯುವನು, ಶಂತನು ಕಿರಿಯುವನು. ಇವರ ತಂದೆಯಾದ ಋಷ್ಟಿಷೇಣನು ಮೃತನಾದ ಬಳಿಕ ಅವನ ಹಿರಿಯಮಗನಾದ ದೇವಾಪಿ ಎಂಬುವನು ರಾಜನಾಗಬೇಕೆಂದು ಇಚ್ಛಿಸಿದನು. ಆದರೆ ಇವನ ತಮ್ಮನಾದ ಶಂತನುವು ಅದಕ್ಕೆ ಅವಕಾಶಕೊಡದೆ ತಾನೇ ರಾಜ್ಯಕ್ಕೆ ದೊರೆಯಾಗಬೇಕೆಂದು ಬಯಸಿ ಅಣ್ಣನಾದ ದೇವಾಪಿಯನ್ನು ಓಡಿಸಿ ತಾನೇ ರಾಜ್ಯವಾಳಲು ಮೊದಲುಮಾಡಿದನು. ಅಣ್ಣನಾದ ದೇವಾಪಿಯು ವ್ಯಾಕುಲವುಳ್ಳವನಾಗಿ ಕಾಡಿಗೆ ಹೋಗಿ ತಪಸ್ಸನ್ನು ಮಾಡುತ್ತಾ ಕಾಲಕಳೆಯುತ್ತಿದ್ದನು. ಹೀಗಿರಲು ಇವನ ದೇಶದಲ್ಲಿ ೧೨ ವರ್ಷಗಳವರಿಗೆ ಮಳೆಯೇ ಬರದೆ ಮಹಾಕ್ಷಾಮವು ಪ್ರಾಪ್ತವಾಯಿತು. ಆಗ ರಾಜನಾದ ಶಂತನುವು ಇದಕ್ಕೆ ಏನುಮಾಡಬೇಕೆಂದು ಆಲೋಚಿಸಿ ಬ್ರಾಹ್ಮಣರ ಸಲಹೆಯನ್ನು ಕೇಳಿದನು. ಅದಕ್ಕೆ ಬ್ರಾಹ್ಮಣರು ರಾಜನನ್ನು ಕುರಿತು—ಧರ್ಮಶಾಸ್ತ್ರಪ್ರಕಾರ ರಾಜನ ಹಿರಿಯಮಗನೇ ರಾಜ್ಯಕ್ಕೆ ಅಧಿಕಾರಿಯು. ಆದುದರಿಂದ ರಾಜ್ಯಭಾರವನ್ನು ನಿನ್ನ ಅಣ್ಣನಾದ ದೇವಾಪಿಯೇ ಮಾಡಬೇಕಾಗಿದ್ದಿತು. ಆದರೆ ನೀನು ಅದಕ್ಕವಕಾಶಕೊಡದೆ ಅವನನ್ನು ಓಡಿಸಿ ರಾಜ್ಯವನ್ನು ಆಕ್ರಮಿಸಿರುವೆ. ಹೀಗೆ ನೀನು ಅಧರ್ಮವನ್ನು ಆಚರಿಸುತ್ತಿರುವುದರಿಂದ ವೃಷ್ಟಿದೇವನು ನಿನ್ನ ರಾಜ್ಯದಲ್ಲಿ ಮಳೆಗರೆಯುವುದಿಲ್ಲ ಎಂದು ಹೇಳಿದರು ಶಂತನುರಾಜನು ತಾನು ಮಾಡಿದ ಅನ್ಯಾಯಕ್ಕೆ ಪಶ್ಚಾತ್ತಾಪಪಟ್ಟು ವನದಲ್ಲಿ ತಪಸ್ಸುಮಾಡುತ್ತಿದ್ದ ತನ್ನ ಅಣ್ಣನಾದ ದೇವಾಪಿಯನ್ನು ಕರೆಸಿ ಅವನಿಗೆ ರಾಜ್ಯವನ್ನು ಒಪ್ಪಿಸಿದನು. ಆದರೆ ದೇವಾಪಿಯು ರಾಜ್ಯವು ತನಗೆ ಬೇಡವೆಂದೂ ತಾನು ವನದಲ್ಲಿ ತಪಸ್ಸುಮಾಡುತ್ತಾ ನಿವೃತ್ತಿಮಾರ್ಗವನ್ನು ಆಶ್ರಯಿಸುವೆನೆಂದೂ ಹೇಳಿ, ರಾಜ್ಯದಲ್ಲಿ ಉಂಟಾಗಿರುವ ಅನಾವೃಷ್ಟಿಪರಿಹಾರಾರ್ಥವಾಗಿ ಶಂತನುವು ಯಜ್ಞಮಾಡಬೇಕೆಂದೂ ಅದರಲ್ಲಿ ತಾನು ಪೌರೋಹಿತ್ಯವನ್ನು ವಹಿಸಿ ವೃಷ್ಟಿಯಾಗಲು ಸಹಾಯಮಾಡುವೆನೆಂದೂ ಹೇಳಿದನು. ಆದಕ್ಕೆ ರಾಜನು ಒಪ್ಪಲು ದೇವಾಪಿಯು ಅವನ ಯಜ್ಞದಲ್ಲಿ ಹೋತೃವೆಂಬ ಋತ್ವಿಜನ ಪಾತ್ರವನ್ನು ವಹಿಸಿದನು. ಬೃಹಸ್ಪತಿಯು ಬ್ರಹ್ಮನೆಂಬ ಋತ್ವಿಜನಾದನು. ವೃಷ್ಟಿವರ್ಷಣಕ್ಕಾಗಿ ಮಾಡುತ್ತಿರುವ ಆ ಯಜ್ಞದಲ್ಲಿ ಹೋತೃವಾದ ದೇವಾಪಿಯು ಬ್ರಹ್ಮನಾದ ಬೃಹಸ್ಪತಿಯನ್ನು ಕುರಿತು ಎಲೈ ಬೃಹಸ್ಪತಿಯೇ, ನಿನಗೆ ದೇವತೆಗಳ ಮನಸ್ಸಿನ ಮೇಲೆ ಬಹಳವಾದ ಪ್ರಭಾವವಿರುವುದು. ಆದುದರಿಂದ ಅವರನ್ನು ಒಲಿಸಿಕೊಳ್ಳುವ ಮಂತ್ರಗಳನ್ನು ನನಗೆ ತಿಳಿಸಬೇಕು ಎಂದು ಪ್ರಾರ್ಥಿಸಲಾಗಿ ಬೃಹಸ್ಪತಿಯು ಹಾಗೇ ಆಗಲೆಂದು ವೃಷ್ಟಿವರ್ಷಣಕ್ಕೆ ಬೇಕಾದ ದೇವತೆಗಳ ಪ್ರಾರ್ಥನೆಗಳನ್ನೊಳಗೊಂಡ ಮಂತ್ರಗಳನ್ನು ಹೋತೃವಾದ ದೇವಾಪಿಗೆ ಹೇಳಿಕೊಟ್ಟನು. ಆ ಮಂತ್ರಗಳಿಂದ ದೇವತೆಗಳನ್ನುದ್ದೇಶಿಸಿ ಹೋಮಮಾಡಲು ಯಥೇಚ್ಛವಾಗಿ ವೃಷ್ಟಿಯಾಯಿತು

ಎಂದು ಹೇಳಿದೆ. ಆದುದರಿಂದ ಈ ಸೂಕ್ತಕ್ಕೆ ವೃಷ್ಟಿಕಾಮಸೂಕ್ತವೆಂದೂ ಹೆಸರು. ಈ ವಿಷಯವು ಕೆಲವು ವ್ಯತ್ಯಾಸಗಳೊಡನೆ ವಿಷ್ಣುಪುರಾಣ ೪-೨೦-೭ ; ಮಹಾಭಾರತ ಆದಿಪರ್ವ; ಭಾಗವತಪುರಾಣ ೯-೨೨-೧೪ ರಿಂದ ೧೭; ಇತ್ಯಾದಿ ಪುರಾಣಗ್ರಂಥಗಳಲ್ಲಿಯೂ ಉಕ್ತವಾಗಿದೆ.

ಋ. ಸಂ. ೧೦ ನೆಯ ಮಂಡಲದಲ್ಲಿ ೧೦೮ ನೆಯ ಸೂಕ್ತದ ಮತ್ತೊಂದು ಉಪಾಖ್ಯಾನವಿರುವುದು. ಪಣಿಗಳೆಂಬ ಅಸುರರು ದೇವತೆಗಳ ಗೋವುಗಳನ್ನು (ಉದಕವಿಶಿಷ್ಟಗಳಾದ ಮೇಘಗಳನ್ನು) ಅಪಹರಿಸಿ ಅಭೇದ್ಯವಾದ ಒಂದು ದುರ್ಗದಲ್ಲಿ ಬಚ್ಚಿಟ್ಟಿದ್ದರು. ಅದನ್ನು ಹುಡುಕುವಂತೆ ಇಂದ್ರನು ದೇವಶುನಿಯಾದ ಸರಮೆಯನ್ನು ಕಳುಹಿಸಿದನು. ಆ ಸರಮೆಯು ಪಣಿಗಳಲ್ಲಿಗೆ ಬಂದು ಅವರೊಡನೆ ವಾಗ್ವಾದದನ್ನು ಬೆಳೆಸಿ ಅಪಹರಿಸಿದ್ದ ಗೋವುಗಳನ್ನು ಹಿಂದಕ್ಕೆ ಕೊಡುವಂತೆ ಕೇಳಲು ಆ ಪಣಿಗಳು ಇಂದ್ರನ ಶಕ್ತಿಯೆಷ್ಟರದು ? ತಾವು ಮಹಾವೀರರು ಮತ್ತು ತಮ್ಮ ಆಯುಧಗಳು ತುಂಬಾ ಹರಿತವಾದವು. ಆದ್ದರಿಂದ ತಮ್ಮನ್ನು ಗೆಲ್ಲಲು ದೇವತೆಗಳಿಂದ ಸಾಧ್ಯವಿಲ್ಲವೆಂದೂ, ಗೋವುಗಳನ್ನು ಇಟ್ಟಿರುವ ಸ್ಥಳವನ್ನು ತಿಳಿಯಲು ದೇವತೆಗಳಿಗೂ ಸಾಧ್ಯವಿಲ್ಲವೆಂದೂ, ಆದುದರಿಂದ ಸರಮೆಯು ದೇವತೆಗಳ ಪಕ್ಷವನ್ನು ಬಿಟ್ಟು ತಮ್ಮ ಗುಂಪಿಗೇ ಸೇರಿದಲ್ಲಿ ಬೇಕಾದ ಐಶ್ವರ್ಯಾದಿಗಳನ್ನು ಕೊಡುವುವೆಂದೂ, ನಾನಾಪಿಧವಾಗಿ ಪ್ರೇರಿಸಿದರೂ ಸರಮೆಯು ಅದಕ್ಕೊಪ್ಪದೆ ಅಲ್ಲಿಂದ ಹಿಂತಿರುಗಿ ಆ ವಿಷಯವನ್ನೆಲ್ಲಾ ದೇವತೆಗಳಿಗೆ ತಿಳಿಸಿದಳು. ಆಗ ಬೃಹಸ್ಪತಿಯು ತನ್ನ ಸಾಮರ್ಥ್ಯದಿಂದ ಆ ಗೋವುಗಳನ್ನು ಬಚ್ಚಿಟ್ಟಿದ್ದ ಸ್ಥಳವನ್ನು ಪತ್ತೆಮಾಡಿದನು. ಬಳಿಕ ದೇವತೆಗಳು ಅವರನ್ನು ನಿಗ್ರಹಿಸಿ ಗೋವುಗಳನ್ನು ಹಿಂದಕ್ಕೆ ತಂದರು ಎಂಬ ಉಪಾಖ್ಯಾನವಿದೆ.

ಇಂತಹ ಅನೇಕ ಸಾಹಸಕಾರ್ಯಗಳಲ್ಲಿ ಬೃಹಸ್ಪತಿಯ ಪಾತ್ರವು ಬಹಳ ಮುಖ್ಯವಾಗಿದೆ. ಅದರಲ್ಲಿಯೂ ಮಾನವರಿಗೆ ವೃಷ್ಟಿ ಬೇಕಾದಾಗ ಸಹಾಯವಾಡಲು ಬೃಹಸ್ಪತಿಯ ಸಹಾಯವು ಅತ್ಯವಶ್ಯಕವಾಗಿದೆ. ಈ ವಿಧವಾದ ಪ್ರಾರ್ಥನೆಯೇ ಬೃಹಸ್ಪತಿದೇವತಾಕವಾದ ಸೂಕ್ತಗಳಲ್ಲಿ ವಿಶೇಷವಾಗಿ ಕಂಡುಬರುವುದು.

ಋಗ್ವೇದದಲ್ಲಿ ವರ್ಣಿಸಿರುವಂತೆ ಬೃಹಸ್ಪತಿಯ ಗುಣಗಳು, ಕಾರ್ಯಸಾಧನೆಗಳು ಯಾವರೀತಿ ಇವೆಯೆಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸೋಣ. ಬೃಹಸ್ಪತಿಯು ದ್ಯಾವಾಪೃಥಿವಿಗಳಿಂದ ಜನಿಸಿದವನು ಮತ್ತು ಅವರ ಮಹತ್ತ್ವದಿಂದಲೇ ಅವನ ಪೋಷಣೆಯಾಗಿದೆ (ಋ. ಸಂ. ೭-೯೭-೮). ಆದರೆ ಅವನನ್ನು ತ್ವಷ್ಟೃವು ಉತ್ಪತ್ತಿಮಾಡಿದನೆಂದು ಒಂದುಕಡೆ (೨-೨೩-೧೭) ಹೇಳಿದೆ. ಅವನಿಗೆ ದೇವತೆಗಳ ಜನಕನೆಂದು ಹೆಸರಿದೆ (೨-೨೬-೩) ; ಕಮ್ಮಾರನ ಸುತ್ತಿಗೆಯ ಏಟಿನಿಂದ ಅಗ್ನಿಕಣಗಳು ಹಾರುವಂತೆ ದೇವತೆಗಳು ಇವನಿಂದ ಉತ್ಪನ್ನರಾದರು (೧೦-೭೨-೮) ಎಂದೂ ಹೇಳಿದೆ.

ಅವನಿಗೆ ಬ್ರಹ್ಮ (ಬ್ರಹ್ಮ ಎಂಬ ಋತ್ವಿಜ) ನೆಂದು ಹೆಸರಿದೆ (೧೦-೧೪೧-೩). ಋತ್ವಿಜರೊಡನೆ ಅವನಿಗೆ ಸಂಬಂಧವಿದೆ (೭-೧೦-೪; ೧೦-೧೪-೩) ಅಂಗಿರಸನೆಂತಲೂ ಹೆಸರಿದೆ (೪-೪೦-೧; ೪-೭೩-೧; ೧೦-೪೭-೬) ಸ್ತುತಿವಾಕ್ಯಗಳನ್ನು ರಚಿಸುವವನು, ಉಚ್ಚರಿಸುವವನು, ಅವುಗಳಿಗೆ ಅಧಿಪತಿ, ಪ್ರೇರಕ (೨-೨೩-೧, ೨; ೧-೪೦-೫, ೧೦-೯೮-೭), ಮಂತ್ರದಿಂದಲೇ ತನ್ನ ಉದ್ದೇಶಗಳನ್ನೆಲ್ಲಾ ಸಾಧಿಸುತ್ತಾನೆ (೨-೨೪-೩); ಯಜ್ಞವೆಂಬ ದೇದೀಪ್ಯಮಾನವಾದ ರಥವನ್ನೇರಿಕೊಂಡು ದೇವತೆಗಳ ಮತ್ತು ಸ್ತೋತೃಗಳ ಶತ್ರುಗಳನ್ನು ಜಯಿಸಲು ಹೊರಡುತ್ತಾನೆ (೨-೨೩-೩); ಇವನು ಶ್ರದ್ಧಾಳುಗಳ ಪೋಷಕ ಮತ್ತು ರಕ್ಷಕನು. ಅವರಿಗೆ ಮಾರ್ಗದರ್ಶಕನಾಗಿದಾನೆ; ಅವರನ್ನು ವಿಪತ್ತುಗಳಿಂದ ಪಾರುಮಾಡುತ್ತಾನೆ (೨-೨೩-೪) ಅವರಿಗೆ ಸಂಪದಾದಿಗಳನ್ನು ಅನುಗ್ರಹಿಸುತ್ತಾನೆ (೨-೨೩-೯) ದೇವತೆಗಳಿಗೆಲ್ಲಾ ಪಿತೃವೆನಿಸಿಕೊಂಡಿದಾನೆ, ದಿವ್ಯವಾದ ಸಮಸ್ತ ಗುಣಗಳಿಂದ ಕೂಡಿದಾನೆ (೩-೬೨-೪; ೪-೫೦-೬) ವಿಶ್ವರೂಪನು; ಎಲ್ಲರೂ

ಅಪೇಕ್ಷಿಸುವ ವಸ್ತುಗಳೆಲ್ಲವೂ ಇವನಲ್ಲಿವೆ (೭-೧೦-೪, ೭-೯೭-೪) ಸುವರ್ಣಮಯವಾದ ಈಟಿಯನ್ನು ಧರಿಸಿದಾನೆ (೭-೯೭-೭) ಇಂದ್ರನೊಡನೆ ಸೇರಿ ಇವನೂ ಸೈನ್ಯಗಳಿಗೆ ನಾಯಕನಾಗಿದಾನೆ (೧೦-೧೦೩-೮) ಆಯುಸ್ಸನ್ನು ವೃದ್ಧಿ ಮಾಡುವವನು (೧೦-೧೦೦-೫); ಸಸ್ಯಗಳು ಇವನಿಂದ ಉದ್ಭೂತವಾದವು (೧೦-೯೭-೧೫ ಮತ್ತು ೧೯); ಕಪಿಲವರ್ಣದ ಅಶ್ವಗಳೇ ಅವನ ವಾಹನವು. (ನಿ- ೨-೨೮). ಇತ್ಯಾದಿ ವರ್ಣನೆಗಳಿವೆ.

ರಾಕ್ಷಸರಿಂದ ಭಾವಿಯಲ್ಲಿ ಎಸೆಯಲ್ಪಟ್ಟು, ಸಹಾಯಕ್ಕಾಗಿ ದೇವತೆಗಳನ್ನು ಕರೆಯುತ್ತಿದ್ದ ತ್ರಿತನ ಆರ್ತನಾದವನ್ನು ಕೇಳಿ, ಆ ಅಪಾಯಕರವಾದ ಅವಸ್ಥೆಯಿಂದ ಬೃಹಸ್ಪತಿಯು ಅವನನ್ನು ಬಿಡುಗಡೆಮಾಡಿದನೆಂದೂ(೧೦-೧೦೫-೧೭) ಇಂದ್ರನೊಡನೆ ಸೇರಿ ಬೃಹಸ್ಪತಿಯು ಅಂಧಕಾರಾವೃತವಾಗಿದ್ದ ಉದಕವನ್ನು ಪುನಃ ಪ್ರವಹಿಸುವಂತೆ ಮಾಡಿದನೆಂದೂ (೨-೨೩-೧೮; ೧-೫೬-೫) ಹೇಳಿದೆ.

ಮಧುಭರಿತವಾದ ಕೂಪದ ಶಿಲಾದ್ವಾರವನ್ನು ಬೃಹಸ್ಪತಿಯು ತನ್ನ ಸಾಮರ್ಥ್ಯದಿಂದ ಒಡೆದನು. ದೇವತೆಗಳು ಆ ಮಧುವನ್ನು ಪಾನಮಾಡಿ ಯಥೇಚ್ಛವಾಗಿ ಮಳೆಗರೆದರು (೨-೨೪-೩, ೪) ಬೃಹಸ್ಪತಿಯು ಬೆಂಕಿ ಕಾರುತ್ತಿರುವ ಕಿರಣಗಳಿಂದ ವಲನ ದುರ್ಗಗಳನ್ನು ಭೇದಿಸಿದಾಗ ಗೋಸಮೂಹಗಳು ಗೋಚರವಾದವು; ಮೊಟ್ಟೆಯನ್ನು ಒಡೆಯುವಂತೆ ಗೋವುಗಳನ್ನು ಹೊರಕ್ಕೆ ಅಟ್ಟಿದನು; ಶಿಲೆಯಿಂದ ಆವೃತವಾದ (ನೀರು) ಮಡುವನ್ನು ಕಂಡು ತನ್ನ ಸಿಂಹನಾದದಿಂದಲೇ ಸೀಳಿ ಅದನ್ನು ಹೊರಕ್ಕೆ ಬರಮಾಡಿದನು (೧೦.೬೮-೪ ರಿಂದ ೯) ಬೃಹಸ್ಪತಿಯು ಹಸುಗಳನ್ನು ಬಂಡೆಗಳಿಂದ ಮುಚ್ಚಿದ್ದ ಸ್ಥಳದಿಂದ ಹೊರಕ್ಕೆ ತಂದನು; ವಲನ ಗೋವುಗಳನ್ನು ಹಿಡಿದು ತನ್ನ ವಶಪಡಿಸಿಕೊಂಡನು (೧೦-೬೮-೫).

ಬೃಹಸ್ಪತಿಯು ದೇವತ್ವವಿಶಿಷ್ಟನು (೨-೨೩-೨); ಎಲ್ಲಾ ದೇವತೆಗಳಿಗೂ ಸ್ವಕೀಯನು (೩-೬೨-೪; ೪-೫೦-೬) ಮತ್ತು ದೇವತೆಗಳೆಲ್ಲೆಲ್ಲಾ ಹೆಚ್ಚು ದೇವತ್ವವುಳ್ಳವನು. ದೇವತೆಯ ರೂಪದಿಂದ ಎಲ್ಲಾ ದೇವತೆಗಳನ್ನೂ ಎಲ್ಲಾ ಪದಾರ್ಥಗಳನ್ನೂ ತನ್ನಲ್ಲಿ ಸೇರಿಸಿಕೊಳ್ಳುತ್ತಾನೆ (೨-೨೪-೧೧; ೮-೬೧-೮) ಭೂಮಿಯ ಎರಡು ಕೊನೆಗಳನ್ನು ಸಮರ್ಥನಾದ ಇವನು ದೂರವಾಗಿ ಇಟ್ಟಿರುತ್ತಾನೆ (೪.೫೦-೧) ಸೂರ್ಯಚಂದ್ರರು ಒಬ್ಬರಾದ ಮೇಲೊಬ್ಬರೂ ಉದಯಿಸುವುದು ಅವನ ಅನುಕರಣೀಯವಾದ ಕೃತ್ಯವೇ ಆಗಿದೆ (೧೦-೬೮-೧೦) ತೈತ್ತಿರೀಯಸಂಹಿತೆಯಲ್ಲಿ (ಯಜುರ್ವೇದದಲ್ಲಿ) ಬೃಹಸ್ಪತಿಗೂ ಕೆಲವು ನಕ್ಷತ್ರಗಳಿಗೂ ಸಂಬಂಧವು ಉಕ್ತವಾಗಿದೆ. ಬೃಹಸ್ಪತಿಯು ಪುಷ್ಯನಕ್ಷತ್ರದ ದೇವತೆ (ತೈ. ಸಂ. ೪-೪-೧೦-೧) ಪುರಾಣಾದಿಗಳಲ್ಲಿ ಬೃಹಸ್ಪತಿಯನ್ನು ವಾಚಸ್ಪತಿಯೆಂದೂ, ಬೃಹಸ್ಪತಿಗ್ರಹಾಭಿಮಾನಿದೇವತೆಯೆಂದೂ ವರ್ಣಿಸಿದೆ.

ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿ ಎಂಬ ದೇವತೆಗಳು ಅಗ್ನಿಯ ರೂಪಾಂತರಗಳೆಂದು ಕೆಲವು ಪಂಡಿತರು ಅಭಿಪ್ರಾಯಪಟ್ಟಿದ್ದಾರೆ. M. Longlois ಎಂಬ ಪಂಡಿತನು ತನ್ನ ಋಗ್ವೇದ ಭಾಷಾಂತರವೆಂಬ ಗ್ರಂಥದ ಭಾಗ I p. 249, 254, 578 ಗಳಲ್ಲಿ ಈ ಎರಡು ದೇವತೆಗಳೂ ಅಗ್ನಿಯ ರೂಪಾಂತರಗಳೆಂದು ಅನೇಕ ಉದಾಹರಣೆಗಳಿಂದ ಸಮರ್ಥಿಸಿದ್ದಾನೆ Wilson ಎಂಬ ಪಂಡಿತನೂ ತನ್ನ ಋಗ್ವೇದ ಭಾಷಾಂತರದ ಮೊದಲನೆಯ ಭಾಗದ ಪೀಠಿಕೆಯಲ್ಲಿ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. Max Muller ಎಂಬ ಪಂಡಿತನೂ ಸಹ—Brihaspati and Brahmanaspati are both varieties of Agni, the priest and the purohit of the Gods and men and as such he is invoked together with the Maruts ಎಂದರೆ ಬೃಹಸ್ಪತಿ ಮತ್ತು ಬೃಹಣಸ್ಪತಿ ಎಂಬೆರಡೂ ಅಗ್ನಿಯ ರೂಪಾಂತರಗಳು, ದೇವತೆಗಳಿಗೂ ಮನುಷ್ಯರಿಗೂ ಋತ್ವಿಜ ಮತ್ತು ಪುರೋಹಿತಸ್ಥಾನದಲ್ಲಿರುವವರು. ಈ ದೃಷ್ಟಿಯಿಂದಲೇ ಮರುದ್ದೇವತೆಗಳೊಡನೆ ಅವರಿಗೆ ಆಹ್ವಾನವಿತ್ತಿರುವುದು

ಅನೇಕಕಡೆ ಇದೆ ಎಂದು ಹೇಳಿದ್ದಾನೆ. ಈರೀತಿ ಅಗ್ನಿಗೂ ಬೃಹಸ್ಪತಿ ಬ್ರಹ್ಮಣಸ್ಪತಿಗಳಿಗೂ ಇರುವ ತಾದಾತ್ಮ್ಯವನ್ನು ಹೇಳುವ ಒಂದೆರಡು ಉದಾಹರಣೆಗಳನ್ನು ಕೊಡುತ್ತೇವೆ.

**ತ್ವಮಗ್ನ ಇಂದ್ರೋ ವೃಷಭಃ ಸತಾಮಸಿ ತ್ವಂ ವಿಷ್ಣುರುರುಗಾಯೋ ನಮಸ್ಯಃ ।**
**ತ್ವಂ ಬ್ರಹ್ಮಾ ರಯಿವಿದ್ಬ್ರಹ್ಮಣಸ್ಪತೇ ತ್ವಂ ವಿಧರ್ತಃ ಸಚಸೇ ಪುರಂಧ್ಯಾ ॥**

(ಋ. ಸಂ. ೨-೧-೩)

ಎಲೈ ಅಗ್ನಿಯೇ, ಸಜ್ಜನರಲ್ಲಿ ಅತಿಶ್ರೇಷ್ಠನಾದ ಇಂದ್ರನೇ ನೀನು ; ಪೂಜ್ಯನೂ ಅತಿ ದೊಡ್ಡ ದೇಹವುಳ್ಳವನೂ ಆದ ವಿಷ್ಣುವೂ ನೀನೇ; ಎಲೈ ಬ್ರಹ್ಮಣಸ್ಪತಿಯೇ, ಧನಾಢ್ಯನಾದ ಬ್ರಹ್ಮನಾಮಕ ಋತ್ವಿಜನೂ ನೀನೇ ಎಂದು ಅಗ್ನಿಯನ್ನು ನಾನಾ ದೇವತೆಗಳ ಸ್ವರೂಪವೆಂದು ವರ್ಣಿಸಿದೆ.

**ತಂ ಶುಭ್ರಮಗ್ನಿಮವಸೇ ಹವಾಮಹೇ ವೈಶ್ವಾನರಂ ಮಾತರಿಶ್ವಾನಮುಕ್ಥ್ಯಂ ।**
**ಬೃಹಸ್ಪತಿಂ ಮನುಷೋ ದೇವತಾತಯೇ ವಿಪ್ರಂ ಶ್ರೋತಾರಮತಿಥಿಂ ರಘುಷ್ಯದಂ ॥**

(ಋ. ಸಂ. ೩-೨೬-೨)

ಶುಭ್ರನೂ, ಮಾನವವರ್ಗಕ್ಕೇ ಮಿತ್ರಭೂತನೂ ಆದ ಅಗ್ನಿಯನ್ನು ನಮ್ಮ ರಕ್ಷಣೆಗೋಸ್ಕರ ಆಹ್ವಾನಿಸುತ್ತೇವೆ. ಮಂತ್ರ ವಾಚ್ಯನಾಗಲು ಯೋಗ್ಯನಾದ ಮಾತರಿಶ್ವನನ್ನೂ, ಜ್ಞಾನಿಯೂ ದೇವತೆಗಳನ್ನುದ್ದೇಶಿಸಿ ಸ್ತುತಿಸುವವನೂ, ಅತಿಥಿ ಸ್ಥಾನೀಯನೂ, ಶೀಘ್ರಗಾಮಿಯೂ ಆದ ಬೃಹಸ್ಪತಿಯನ್ನೂ ಮಾನುಷಸಂಬಂಧವಾದ ಯಜ್ಞಾದಿಕರ್ಮಗಳಿಗೆ ಬರುವಂತೆ ಆಹ್ವಾನಿಸುತ್ತೇವೆ.

ಸಾಯಣಾಚಾರ್ಯರು ೫-೪೩-೧೨ ನೆಯ ಋಕ್ಕಿಗೆ ವ್ಯಾಖ್ಯಾನ ಬರೆಯುವಾಗ ಬೃಹಸ್ಪತಿ ಶಬ್ದಕ್ಕೆ—

**ಅಥವಾ ಇಯಮಾಗ್ನೇಯೀ । ಬೃಹತಃ ಪರಿವೃಢಸ್ಯ ಕರ್ಮಣಃ ಸ್ವಾಮೀತಿ ಬೃಹಸ್ಪತಿರಗ್ನಿರುಚ್ಯತೇ । ತಥಾ ನೀಲವರ್ಣಧೂಮಪೃಷ್ಠತ್ವಸದನಸಾದನಹಿರಣ್ಯವರ್ಣತ್ವಾದಿಲಿಂಗೈರಪ್ಯಗ್ನಿರೇವ ಬೃಹಸ್ಪತಿಃ ॥**

ಎಂದರೆ ಅಥವಾ ಈ ಮಂತ್ರವು ಅಗ್ನಿದೇವತಾಪ್ರತಿಪಾದಕವಾದುದು ಎನ್ನಬಹುದು. ಪ್ರಸ್ತುತವಾದ ಯಜ್ಞರೂಪ ಮಹಾಕಾರ್ಯಕ್ಕೆ ಸ್ವಾಮಿಯಾದುದರಿಂದ ಅಗ್ನಿಗೆ ಬೃಹಸ್ಪತಿಯೆಂದು ಹೆಸರು. ಅದರಂತೆ ಕಪ್ಪಾದ ಧೂಮವೇ ಪೃಷ್ಠ ಭಾಗ, ಯಜ್ಞವೇದಿಯೇ ಸ್ಥಾನ, ಹಿರಣ್ಯವರ್ಣ ಮೊದಲಾದ ಲಕ್ಷಣಗಳಿಂದಲೂ ಬೃಹಸ್ಪತಿಯನ್ನೂ ಅಗ್ನಿಯೆಂದೇ ಹೇಳ ಬೇಕು ಎಂದು ಹೇಳಿದಾರೆ.

ಇನ್ನು ಅಗ್ನಿಗೂ ಬೃಹಸ್ಪತಿಬ್ರಹ್ಮಣಸ್ಪತಿಗಳಿಗೂ ಭೇದವನ್ನು ಹೇಳಿರುವ ಉದಾಹರಣೆಗಳನ್ನು ವಿಮರ್ಶೆ ಮಾಡೋಣ.

**ಸೋಷಾಮವಿಂದತ್ಸ ಸ್ವಃ ಸೋ ಅಗ್ನಿಂ ಸೋ ಅರ್ಕೇಣ ವಿ ಬಬಾಧೇ ತಮಾಂಸಿ ।**
**ಬೃಹಸ್ಪತಿರ್ಗೋವಪುಷೋ ವಲಸ್ಯ ನಿರ್ಮಜ್ಜಾನಂ ನ ಪರ್ವಣೋ ಜಭಾರ ॥**

(ಋ. ಸಂ. ೧೦-೬೮-೯)

ಎಂಬ ಋಕ್ಕಿನಲ್ಲಿ ಬೃಹಸ್ಪತಿಯು ಉಷಸ್ಸು, ಸ್ವರ್ಗ ಮತ್ತು ಅಗ್ನಿಗಳನ್ನು ಸಂಪಾದಿಸಿದನು ಮತ್ತು ಒಂದು ಮಂತ್ರದಿಂದ ಅಂಧಕಾರವನ್ನು ಪರಿಹರಿಸಿದನು ಎಂದು ಬೃಹಸ್ಪತಿ ಮತ್ತು ಅಗ್ನಿಯು ಬೇರೆಬೇರೆ ಎಂದು ಹೇಳಿದೆ.

**ಇಂದ್ರಂ ನೋ ಅಗ್ನೇ ವಸುಭಿಃ ಸಜೋಷಾ ರುದ್ರಂ ರುದ್ರೇಭಿರಾ ವಹಾ ಬೃಹಂತಂ |**
**ಆದಿತ್ಯೇಭಿರದಿತಿಂ ವಿಶ್ವಜನ್ಯಾಂ ಬೃಹಸ್ಪತಿಮೃಕ್ವಭಿರ್ವಿಶ್ವವಾರಂ ||**

**(ಋ. ಸಂ. ೭-೧೦-೪)**

ಎಂಬ ಋಕ್ಕಿನಲ್ಲಿ ವಸುಗಳಿಂದ ಸಹಿತನಾದ ಇಂದ್ರನನ್ನೂ, ಮರುದ್ದೇವತೆಗಳಿಂದ ಸಹಿತನಾದ ರುದ್ರನನ್ನೂ ಆದಿತ್ಯರು (ದೇವತೆ) ಗಳಿಂದ ಸಹಿತಳಾದ ವಿಶ್ವಜನನಿಯಾದ ಅದಿತಿಯನ್ನೂ, ಸ್ತೋತ್ರಮಾಡುತ್ತಿರುವ ಅಂಗಿರಾಋಷಿಗಳಿಂದ ಸಹಿತನಾದ ಬೃಹಸ್ಪತಿಯನ್ನೂ ಕರೆತರಬೇಕೆಂದು ಅಗ್ನಿಯನ್ನು ಪ್ರಾರ್ಥಿಸಿದೆ. ಇದಲ್ಲದೆ ಬೃಹಸ್ಪತಿ ಅಥವಾ ಬ್ರಹ್ಮಣಸ್ಪತಿಯೇ ಬೇರೆ, ಅಗ್ನಿಯೇ ಬೇರೆ ಎಂಬ ಅರ್ಥವನ್ನು ಸೂಚಿಸುವ ಋಕ್ಕುಗಳು—೩-೨೦-೫; ೪-೪೦-೧, ೫-೫೭-೧೨, ೭-೪೧-೧, ೭-೪೪.೧, ೯-೫-೧೧, ೧೦-೩೫-೧೧, ೧೦-೬೫-೧, ೧೦-೧೩೦-೪, ೧೦-೧೪೧-೩ ಮೊದಲಾದ ಮಂತ್ರಗಳು ಋಗ್ವೇದದಲ್ಲಿ ಬಹಳವಾಗಿವೆ. ಆದುದರಿಂದ ಅಗ್ನಿಯೇ ಬೇರೆ, ಬೃಹಸ್ಪತಿಬ್ರಹ್ಮಣಸ್ಪತಿಗಳೇ ಬೇರೆ ಎಂಬ ಸಿದ್ಧಾಂತವೇ ಋಗ್ವೇದದಲ್ಲಿ ಸಮರ್ಥಿತವಾಗಿದೆ.

ಸಾಯಣಭಾಷ್ಯಂ

**ಇಮಾಂ ಧಿಯಮಿತಿ ದ್ವಾದಶರ್ಚಂ ಸಪ್ತಮಂ ಸೂಕ್ತಮಾಂಗಿರಸಸ್ಯಾಯಾಸ್ಯಸ್ಯಾರ್ಷಂ ತ್ರೈಷ್ಟುಭಂ| ಇದಮುತ್ತರಂ ಚ ಬೃಹಸ್ಪತಿದೇವತಾಕಂ | ತಥಾ ಚಾನುಕ್ರಾಂತಂ | ಇಮಾಂ ಧಿಯಂ ದ್ವಾದಶಾಯಾಸ್ಯೋ ಬಾರ್ಹಸ್ಪತ್ಯಂ ತ್ವಿತಿ || ಅಭಿಪ್ಲವಿಕೇಷೂಕ್ಥ್ಯೇಷು ಸ್ತೋಮವೃದ್ಧೌ ಬ್ರಾಹ್ಮಣಾಚ್ಛಂಸಿನ ಇದಂ ಸೂಕ್ತಮಾವಾಪಾರ್ಥಂ | ಸೂತ್ರಿತಂ ಚ| ಇಮಾಂ ಧಿಯಮಿತಿ ಬ್ರಾಹ್ಮಣಾಚ್ಛಂಸೀ ವಿಷ್ಣೋರ್ನು ಕಮಿತಿ ಸೂಕ್ತೇ | ಆ-೭-೯ | ಇತಿ ||**

**ಅನುವಾದವು**— **ಇಮಾಂ ಧಿಯಂ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಂಗಿರಸಗೋತ್ರದ ಅಯಾಸ್ಯನೆಂಬುವನು ಋಷಿಯು; ತ್ರಿಷ್ಟುಪ್‌ಛಂದಸ್ಸು. ಈ ಸೂಕ್ತಕ್ಕೂ ಮುಂದಿನ ಸೂಕ್ತಕ್ಕೂ ಬೃಹಸ್ಪತಿಯು ದೇವತೆಯು. ಅನುಕ್ರಮಣಿಕೆಯಲ್ಲಿ— **ಇಮಾಂ ಧಿಯಂ ದ್ವಾದಶಾಯಾಸ್ಯೋ ಬಾರ್ಹಸ್ಪತ್ಯಂ ತು** ಎಂದು ಹೇಳಿರುವುದು. ಅಭಿಪ್ಲವಸಂಬಂಧವಾದ ಉಕ್ಥ್ಯಯಾಗಗಳಲ್ಲಿ ಸ್ತೋಮವೃದ್ಧಿಗಾಗಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಈ ಸೂಕ್ತವನ್ನು ಆವಾಪಾರ್ಥವಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಇಮಾಂ ಧಿಯಮಿತಿ ಬ್ರಾಹ್ಮಣಾಚ್ಛಂಸೀ ವಿಷ್ಣೋರ್ನು ಕಮಿತಿ ಸೂಕ್ತೇ** ಎಂಬ ಸೂತ್ರದಿಂದ (ಆ. ೭-೯) ವಿವೃತವಾಗಿರುವುದು.

## ಸೂಕ್ತ—೬೭

ಮಂಡಲ—೧೦ || ಅನುವಾಕ—೫ || ಸೂಕ್ತ—೬೭ ||
ಅಷ್ಟಕ—೮ || ಅಧ್ಯಾಯ—೨ || ವರ್ಗ—೧೫, ೧೬ ||

**ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ||**
**ಋಷಿಃ—ಅಯಾಸ್ಯಃ ||**
**ದೇವತಾ—ಬೃಹಸ್ಪತಿಃ ||**
**ಛಂದಃ—ತ್ರಿಷ್ಟುಪ್ ||**

ಸಂಹಿತಾಪಾಠಃ

ಇಮಾಂ ಧಿಯಂ ಸಪ್ತಶೀರ್ಷ್ಣೀಂ ಪಿತಾ ನ ಋತಪ್ರಜಾತಾಂ ಬೃಹತೀಮ-
ವಿಂದತ್ ।
ತುರೀಯಂ ಸ್ವಿಜ್ಜನಯದ್ವಿಶ್ವಜನ್ಯೋಽಯಾಸ್ಯ ಉಕ್ಥಮಿಂದ್ರಾಯ ಶಂಸನ್॥

ಪದಪಾಠಃ

ಇಮಾಂ । ಧಿಯಂ । ಸಪ್ತಽಶೀರ್ಷ್ಣೀಂ । ಪಿತಾ । ನಃ । ಋತಽಪ್ರಜಾತಾಂ । ಬೃಹತೀಂ । ಅವಿಂದತ್ ।
ತುರೀಯಂ । ಸ್ವಿತ್ । ಜನಯತ್ । ವಿಶ್ವಽಜನ್ಯಃ । ಅಯಾಸ್ಯಃ । ಉಕ್ಥಂ । ಇಂದ್ರಾಯ । ಶಂಸನ್॥ ೦ ॥

ಸಾಯಣಭಾಷ್ಯಂ

ಅತ್ರೇತಿಹಾಸಮಾಚಕ್ಷತೇ । ಪುರಾ ಕಿಲಾಂಗಿರಾ ನಾಮರ್ಷಿರ್ಬೃಹಸ್ಪತಿಂ ಪುತ್ರಮಲಭತ । ಸ ತು ದೇವಾನಾಂ ಹಿತೋಪದೇಶನಾಯೇಂದ್ರಸ್ಯ ಪುರೋಹಿತೋಽಭವತ್ । ಕದಾಚಿತ್ತಸ್ಯ ಗಾವಃ ಪಣಿನಾಮ-ಕೈರಸುರೈರಪಹೃತ್ಯ ವಲಪುರಂ ಪ್ರಾಪಯ್ಯ ತ್ರಿಷು ಸ್ಥಾನೇಷು ತಮಸಾವೃತೇಷು ಸ್ಥಾಪಿತಾ ಆಸನ್ । ಅಥ ತಾಸಾಮನ್ವೇಷಣಾಯೇಂದ್ರೇಣ ಪ್ರೇರಿತೋ ಬೃಹಸ್ಪತಿರ್ಮರುದ್ಭಿಃ ಸಹ ತತ್ರಾಗತ್ಯ ಗವಾಂ ಗುಹಾ ಸ್ಥಿತಾನಾಂ ದರ್ಶನಾಯ ಸೂರ್ಯಂ ಜನಯಿತ್ವಾ ವಲನಾಮಾನಮಸುರಂ ತದನುಚರಾನ್ಪಣೀಂಶ್ಚ ಹತ್ವಾ ಗಾ ಆಜಹಾರೇತಿ । ತದತ್ರ ದರ್ಶಯಿಷ್ಯತೇ । ತಥಾ ಚಾಸ್ಯಾ ಋಚೋಽಯಮರ್ಥಃ। ಧಿಯಂ ಕರ್ಮಣಾಂ ಧಾತ್ರೀಂ ಸಪ್ತಶೀರ್ಷ್ಣೀಂ ಸಪ್ತಶಿರಸ್ಕಾಂ ಸಪ್ತಭಿಃ ಶಿರಃಸ್ಥಾನೀಯೈಸ್ತದ್ವತ್ಪ್ರಧಾನಭೂತೈರ್ಮರುದ್ಗಣೈ-ರುಪೇತಾಂ । ಯದ್ವಾ । ಸಪ್ತಚ್ಛಂದೋಮಯಶಿರಸ್ಕಾಂ । ಋತಪ್ರಜಾತಾಂ ಯಜ್ಞಾರ್ಥಮುತ್ಪನ್ನಾಂ ಬೃಹತೀಂ ಮಹತೀಮಿಮಾಂ ತನುಂ ನೋಽಸ್ಮಾಕಂ ಪಿತಾಂಗಿರಾ ಅವಿಂದತ್ । ಲಬ್ಧವಾನ್ । ಕರ್ಮಣಾಂ ಧ್ಯಾತಾರಂ ಬೃಹಸ್ಪತಿಂ ಪುತ್ರಮಲಭತೇತ್ಯರ್ಥಃ। ಯೇಂಽಗಾರಾ ಆಸಂಸ್ತೇಂಽಗಿರಸೋಽಭವನ್ ಯದಂ-ಗಾರಾಃ ಪುನರವಶಾಂತಾ ಉದದೀಪ್ಯಂತ ತದ್ಬೃಹಸ್ಪತಿರಭವದಿತಿ ಬ್ರಾಹ್ಮಣಂ । ಐ. ಬ್ರಾ. ೩-೩೪ । ತಥಾ ತುರೀಯಂ ಸ್ವಿನ್ನಸ್ತ್ರಾರಮಪಿ ಜನಯತ್ ಅಜನಯತ್ ವಿಶ್ವಜನ್ಯಃ ಸರ್ವಜನಹಿತ ಇಂದ್ರಾಯೇಶ್ವರಾಯ ಬೃಹಸ್ಪತಯ ಇಂದ್ರಾಯ ವೋಕ್ಥಂ ಸ್ತೋತ್ರಂ ಶಂಸನ್ನಯಮಯಾಸ್ಯೋ ನಾಮರ್ಷಿಃ । ಪೂರ್ವಮೇವ ನೋಽಸ್ಮಾಕಂ ಪಿತಾಕಾರ್ಷೀದಿತ್ಯಾಹ ॥

ಪ್ರತಿಪದಾರ್ಥ

**ಧಿಯಂ**—ಕರ್ಮಧಾರಕವೂ । **ಸಪ್ತಶೀರ್ಷ್ಣೀಂ**—ಸಪ್ತಶಿರಸ್ಸುಳ್ಳದ್ದೂ । **ಋತಪ್ರಜಾತಾಂ**—ಯಜ್ಞಾರ್ಥವಾಗಿ ಉತ್ಪನ್ನವಾದುದೂ । **ಬೃಹತೀಂ**—ಮಹತ್ಸ್ವರೂಪವುಳ್ಳದ್ದೂ ಆದ । **ಇಮಾಂ**—ಈ (ಬೃಹಸ್ಪತಿರೂಪವಾದ) ಶರೀರವನ್ನು । **ನಃ**—ನಮ್ಮ । **ಪಿತಾ**—ಪಿತೃವಾದ ಅಂಗಿರಸ್ಸು । **ಅವಿಂದತ್**—ಪಡೆದನು । **ತುರೀಯಂ ಸ್ವಿತ್**—ಮೊಮ್ಮಗನನ್ನೂ । **ಜನಯತ್**—ಪಡೆದನು । **ವಿಶ್ವಜನ್ಯಃ**—ಸಕಲರಿಗೂ

ಹಿತಕರನಾದ | **ಅಯಾಸ್ಯಃ**—ಅಯಾಸ್ಯನೆಂಬ ಋಷಿಯು | **ಇಂದ್ರಾಯ**—ಇಂದ್ರನನ್ನುದ್ದೇಶಿಸಿ | **ಉಕ್ಥಂ**—ಸ್ತೋತ್ರವನ್ನು | **ಶಂಸನ್**—ಅರ್ಪಿಸಿದನು.

ಭಾವಾರ್ಥ

ಕರ್ಮಧಾರಕವೂ, ಸಪ್ತಶಿರಸ್ಸುಳ್ಳದ್ದೂ, ಯಜ್ಞಾರ್ಥವಾಗಿ ಉತ್ಪನ್ನವಾದುದೂ, ಮಹತ್ಸ್ವರೂಪವುಳ್ಳದ್ದೂ ಆದ (ಬೃಹಸ್ಪತಿರೂಪವಾದ) ಈ ಶರೀರವನ್ನು ನಮ್ಮ ಪಿತೃವಾದ ಅಂಗಿರಸ್ಸು ಪಡೆದನು. ಮೊಮ್ಮಗನನ್ನೂ ಪಡೆದನು. ಸಕಲರಿಗೂ ಹಿತಕರನಾದ ಅಯಾಸ್ಯಋಷಿಯು ಇಂದ್ರನನ್ನುದ್ದೇಶಿಸಿ ಸ್ತೋತ್ರವನ್ನರ್ಪಿಸಿದನು.

## English Translation

This great seven-headed ceremony, born of truth, our father (Angiras) discovered ; Ayasya, the friend of all races, engendered the fourth (generation), reciting a hymn to Indra.

ವಿಶೇಷವಿಷಯಗಳು

ಈ ಋಕ್ಕಿನ ಭಾಷ್ಯದಲ್ಲಿ ಸಾಯಣರು ಒಂದು ಇತಿಹಾಸವನ್ನು ಹೇಳಿರುವರು—

> **ಅತ್ರೇತಿಹಾಸಮಾಚಕ್ಷತೇ | ಪುರಾ ಕಿಲಾಂಗಿರಾ ನಾಮರ್ಷಿರ್ಬೃಹಸ್ಪತಿಂ ಪುತ್ರಮಲಭತ | ಸ ತು ದೇವಾನಾಂ ಹಿತೋಪದೇಶನಾಯೇಂದ್ರಸ್ಯ ಪುರೋಹಿತೋಽಭವತ್ | ಕದಾಚಿತ್ತಸ್ಯ ಗಾವಃ ಪಣಿನಾಮಕೈರಸುರೈರಪಹೃತ್ಯ ವಲಪುರಂ ಪ್ರಾಪಯ್ಯ ತ್ರಿಷು ಸ್ಥಾನೇಷು ತಮಸಾವೃತೇಷು ಸ್ಥಾಪಿತಾ ಆಸನ್ | ಅಥ ತಾಸಾಮನ್ವೇಷಣಾಯೇಂದ್ರೇಣ ಪ್ರೇರಿತೋ ಬೃಹಸ್ಪತಿರ್ಮರುದ್ಭಿಃ ಸಹ ತತ್ರಾಗತ್ಯ ಗವಾಂ ಗುಹಸ್ಥಿತಾನಾಂ ದರ್ಶನಾಯ ಸೂರ್ಯಂ ಜನಯಿತ್ವಾ ಬಲನಾಮಾನಮಸುರಂ ತದನುಚರಾನ್ ಪಣೀಂಶ್ಚ ಹತ್ವಾ ಗಾ ಆಜಹಾರೇತಿ | ತದತ್ರ ದರ್ಶಯಿಷ್ಯತೇ ||**

ಪೂರ್ವದಲ್ಲಿ ಅಂಗಿರಾಋಷಿಗಳಿಗೆ ಬೃಹಸ್ಪತಿಯೆಂಬ ಪುತ್ರನಿದ್ದನು. ಆ ಬೃಹಸ್ಪತಿಯು ದೇವತೆಗಳಿಗೆ ಹಿತಚಿಂತಕನಾಗಿ ಅವರಿಗೆ ಹಿತೋಪದೇಶವನ್ನು ಮಾಡುತ್ತಿದ್ದುದರಿಂದ ಇಂದ್ರನಿಗೆ ಪುರೋಹಿತನಾಗಿದ್ದನು. ಒಂದು ಸಮಯದಲ್ಲಿ ಆ ಬೃಹಸ್ಪತಿಯ ಗೋವುಗಳನ್ನು ಪಣಿಗಳೆಂಬ ಅಸುರರು ಅಪಹರಿಸಿ ತಮ್ಮ ಮುಖಂಡನಾದ ವಲನೆಂಬ ಅಸುರನ ಪಟ್ಟಣಕ್ಕೆ ತೆಗೆದುಕೊಂಡುಹೋಗಿ ಮೂರುಕಡೆಯೂ ಆಚ್ಛಾದಿತವಾಗಿ ಕಗ್ಗತ್ತಲೆಯಿಂದ ಆವೃತವಾಗಿದ್ದ ಪರ್ವತದ ಗುಹೆಯಲ್ಲಿ ಬಚ್ಚಿಟ್ಟರು. ಆ ಗೋವುಗಳನ್ನು ಹುಡುಕಿತರಬೇಕೆಂಬ ಉದ್ದೇಶದಿಂದ ಇಂದ್ರನಿಂದ ಪ್ರೇರಿತನಾದ ಬೃಹಸ್ಪತಿಯು ಮರುದ್ದೇವತೆಗಳೊಡನೆ ವಲನ ಪಟ್ಟಣದ ಸಮೀಪಕ್ಕೆ ಬಂದು ಗೋವುಗಳನ್ನು ಹುಡುಕುತ್ತಿರುವಾಗ ಪರ್ವತಗುಹೆಯಲ್ಲಿ ಕತ್ತಲೆ ಕವಿದು ಯಾವುದೂ ಕಣ್ಣಿಗೆ ಕಾಣಿಸದಿದ್ದುದ್ದರಿಂದ ಆ ಸ್ಥಳದಲ್ಲಿ ಬೆಳಕಾಗುವುದಕ್ಕಾಗಿ ಸೂರ್ಯನನ್ನು ಸ್ಥಾಪಿಸಿ ಎಲ್ಲವೂ ಕಾಣುವಂತೆ ಮಾಡಿದನು. ಅನಂತರ ಗೋವುಗಳನ್ನಪಹರಿಸಿದ್ದ ವಲನೆಂಬ ಅಸುರನನ್ನೂ ಅವನ ಅನುಚರರಾದ ಪಣಿಗಳನ್ನೂ ಕೊಂದು ತನ್ನ ಗೋವುಗಳನ್ನು ಬಿಡಿಸಿ ತಂದನು. ಈ ವಿಷಯವನ್ನೇ ಈ ಸೂಕ್ತದಲ್ಲಿ ಹೇಳಲಾಗಿದೆ.

ಪಣಿಗಳು ದೇವತೆಗಳ (ಬೃಹಸ್ಪತಿಯ) ಗೋವುಗಳನ್ನು ಅಪಹರಿಸಿ ಪರ್ವತಗುಹೆಯಲ್ಲಿ ಬಚ್ಚಿಟ್ಟಿದ್ದುದನ್ನೂ ಅದನ್ನು ಬೃಹಸ್ಪತಿಯೇ ಮೊದಲಾದ ದೇವತೆಗಳು ಇಂದ್ರನ ಸಹಾಯದಿಂದ ಪಡೆದುದನ್ನೂ ಅನೇಕ ಕಡೆಗಳಲ್ಲಿ ಸೂಕ್ಷ್ಮ

ವಾಗಿ ವಿವರಿಸಲಾಗಿದೆ. ಇದೇ ಮಂಡಲದ ೧೦೮ ನೇ ಸೂಕ್ತದಲ್ಲಿ ಈ ಗೋವುಗಳನ್ನು ಅಪಹರಿಸಿದವರು ಯಾರು ? ಆ ಗೋವುಗಳು ಇರುವ ಸ್ಥಳವು ಯಾವುದು ಇತ್ಯಾದಿ ವಿಷಯಗಳನ್ನು ತಿಳಿದುಬರುವುದಕ್ಕಾಗಿ ಇಂದ್ರನು ಮೊದಲು ದೇವಶುನಿಯಾದ ಸರಮಾ ಎಂಬ ನಾಯಿಯನ್ನು ಕಳುಹಿಸಿದನೆಂದೂ ಅದು ಅನೇಕ ನದೀಪರ್ವತಗಳನ್ನೂ, ಬೆಟ್ಟಗುಡ್ಡಗಳನ್ನೂ ದಾಟಿ ಬಹುದೂರ ಹೋಗಿ ಪಣಿಗಳು ಗೋವುಗಳನ್ನು ಬಚ್ಚಿಟ್ಟಿದ್ದ ರಹಸ್ಯಪ್ರದೇಶವನ್ನು ಕಂಡುಹಿಡಿದು ಆ ಪಣಿಗಳೊಡನೆ ಸಂಭಾಷಣೆಯನ್ನು ನಡೆಸಿ ಅಲ್ಲಿ ನಡೆದ ವಿಷಯವನ್ನು ಇಂದ್ರನಿಗೆ ತಿಳಿಸಿತೆಂದೂ ಇಂದ್ರಾದದೇವತೆಗಳು ಅಲ್ಲಿಗೆ ಹೋಗಿ ಅಸುರರನ್ನು ಜಯಿಸಿ ಗೋವುಗಳನ್ನು ಹಿಂದಕ್ಕೆ ತಂದರೆಂದೂ ಹೇಳಿರುವ ಸಂಗತಿಯು ಉಕ್ತವಾಗಿದೆ. ಈ ವಿಷಯದಲ್ಲಿ ವಿಸ್ತಾರವಾಗಿ ಬರೆದಿರುವ ವಿವರಣೆಯನ್ನು ಅಲ್ಲಿ ನೋಡಿ ತಿಳಿಯಬಹುದು.

ಬೃಹಸ್ಪತಿಯವಿಷಯದಲ್ಲಿ—**ಯೇಽಙ್ಗಾರಾ ಆಸಂಸ್ತೇಽಙ್ಗಿರಸೋಽಭವನ್ ಯದಾಂಗಾರಾಃ ಪುನರವಶಾಂತಾ ಉದದೀಪ್ಯಂತ ತದ್ಬೃಹಸ್ಪತಿರಭವತ್** (ಐ. ಬ್ರಾ. ೩-೩೪) ಇತ್ಯಾದಿ ಐತರೇಯಬ್ರಾಹ್ಮಣವಾಕ್ಯಗಳನ್ನು ನಾವು ಈ ಸೂಕ್ತದ ಪೀಠಿಕೆಯಲ್ಲಿ ವಿಸ್ತಾರವಾಗಿ ವಿವರಿಸಿದೇವೆ. (ಭಾಗ ೨೦, **ಪುಟ** 680)

ಸಂಹಿತಾಪಾಠಃ

ಋತಂ ಶಂಸಂತ ಋಜು ದೀಧ್ಯಾನಾ ದಿವಸ್ಪುತ್ರಾಸೋ ಅಸುರಸ್ಯ ವೀರಾಃ ।
ವಿಪ್ರಂ ಪದಮಂಗಿರಸೋ ದಧಾನಾ ಯಜ್ಞಸ್ಯ ಧಾಮ ಪ್ರಥಮಂ ಮನಂತ ॥

ಪದಪಾಠಃ

**ಋತಂ । ಶಂಸಂತಃ । ಋಜು । ದೀಧ್ಯಾನಾಃ । ದಿವಃ । ಪುತ್ರಾಸಃ । ಅಸುರಸ್ಯ । ವೀರಾಃ ।**
**ವಿಪ್ರಂ । ಪದಂ । ಅಂಗಿರಸಃ । ದಧಾನಾಃ । ಯಜ್ಞಸ್ಯ । ಧಾಮ । ಪ್ರಥಮಂ । ಮನಂತ** ॥ ೨ ॥

ಸಾಯಣಭಾಷ್ಯಂ

**ಋತಂ ಸತ್ಯಭೂತಂ ಸ್ತೋತ್ರಂ ಶಂಸಂತಃ ಸ್ತುವಂತ ಋಜು ಕಲ್ಯಾಣಂ ದೀಧ್ಯಾನಾಃ ಕರ್ಮಾಣಿ ಧ್ಯಾಯಂತೋ ದಿವೋ ದೀಪ್ತಸ್ಯಾಸುರಸ್ಯ ಪ್ರಜ್ಞಾನವತೋಽಗ್ನೇರಂಗಿರಸಃ ಪುತ್ರಾಃ । ಅಂಗಿರಸೋ ಹ್ಯಂಽಗಾರೇಭ್ಯೋ ಜಾತಾ ಇತ್ಯುಕ್ತಂ। ಅಂಗಾರೇಷ್ವಂಗಿರಾಃ। ನಿ. ೩-೧೭-೧ ಇತಿ। ವೀರಾ ವಿಕ್ರಾಂತಪ್ರಜ್ಞಾ ಏತೇಽಂಗಿರಸೋ ವಿಪ್ರಂ ಪ್ರಜ್ಞಾಪಕಂ ಯಜ್ಞಸ್ಯ ಧಾಮ ಧಾರಕಂ ಪದಂ ಬೃಹಸ್ಪತ್ಯಾಖ್ಯಂ ದಧಾನಾಃ ಕರ್ಮಣಾ ಧಾರಯಂತಃ ಸಂತಃ ಪ್ರಥಮಮಾದಿತ ಏವ ಮನಂತ । ಸ್ತುವಂತಿ । ಪ್ರಜ್ಞಾಪಕಂ ಹ್ಯೇತತ್ಸ್ಥಾನಂ ಯದ್ಬೃಹಸ್ಪತಿರಿತಿ ॥**

ಪ್ರತಿಪದಾರ್ಥ

**ಋತಂ**—ಸತ್ಯಾತ್ಮಕವಾದ ಸ್ತುತಿಯನ್ನು । **ಶಂಸತಃ**—ಪಠಿಸುವವರೂ । **ಋಜು**—ಲೋಕಕಲ್ಯಾಣವನ್ನು । **ದೀಧ್ಯಾನಾಃ**—ಧ್ಯಾನಿಸುವವರೂ । **ದಿವಃ**—ಪ್ರಕಾಶಮಾನನಾದವನೂ । **ಅಸುರಸ್ಯ**—ಪ್ರಾಜ್ಞನೂ ಆದ ಅಗ್ನಿಯ । **ಪುತ್ರಾಸಃ**—ಪುತ್ರರೂ ಆದ । **ಅಂಗಿರಸಃ**—ಅಂಗಿರಸ್ಸಗಳು । **ವೀರಾಃ**—ಪರಾಕ್ರಮವುಳ್ಳ

ವರಾಗಿ | **ವಿಪ್ರಂ**—ಜಗತ್ತಿಗೆ ಪ್ರಜ್ಞಾಪಕವಾದುದೂ | **ಯಜ್ಞಸ್ಯ ಧಾಮ**—ಯಜ್ಞಧಾರಕವಾದುದೂ ಆದ | **ಪದಂ**—ಬೃಹಸ್ಪತಿಸಂಜ್ಞಕವಾದ ಸ್ಥಾನವನ್ನು | **ದಧಾನಾಃ**—ತಮ್ಮ ಕರ್ಮದಿಂದ ಧರಿಸಿದವರಾಗಿ | **ಪ್ರಥಮಂ**—ಆರಂಭದಿಂದಲೇ | **ಮನಂತ**—ಸ್ತುತಿಸುತ್ತಾರೆ.

ಭಾವಾರ್ಥ

ಸತ್ಯಾತ್ಮಕವಾದ ಸ್ತುತಿಯನ್ನು ಪಠಿಸುವವರೂ, ಲೋಕಕಲ್ಯಾಣಕ್ಕಾಗಿ ಧ್ಯಾನಿಸುವವರೂ, ಪ್ರಕಾಶಮಾನನೂ ಪ್ರಾಜ್ಞನೂ ಆದ ಅಗ್ನಿಯ ಪುತ್ರರೂ ಆದ ಅಂಗಿರಸ್ಸುಗಳು ಪರಾಕ್ರಮವುಳ್ಳವರಾಗಿ ಜಗತ್ತಿಗೆ ಪ್ರಜ್ಞಾಪಕವಾದುದೂ, ಯಜ್ಞಧಾರಕವಾದುದೂ ಆದ ಬೃಹಸ್ಪತಿಸಂಜ್ಞಕವಾದ ಸ್ಥಾನವನ್ನು ತಮ್ಮ ಕರ್ಮದಿಂದ ಧರಿಸಿದವರಾಗಿ ಆರಂಭದಿಂದಲೇ ಸ್ತುತಿಸುತ್ತಾರೆ.

## English Translation

Reciting sincere praise, reflecting correctly, the Agirasas, the pious sons of the brilliant and powerful (Agni), upholding the intelligent base, the supporter of the sacrifice, praise from the beginning.

ಸಂಹಿತಾಪಾಠಃ

ಹಂಸೈರಿವ ಸಖಿಭಿರ್ವಾವದದ್ಭಿರಶ್ಮನ್ಮಯಾನಿ ನಹನಾ ವ್ಯಸ್ಯನ್ ।
ಬೃಹಸ್ಪತಿರಭಿಕನಿಕ್ರದದ್ಗಾ ಉತ ಪ್ರಾಸ್ತೌದುಚ್ಚ ವಿದ್ವಾಁ ಅಗಾಯತ್ ॥ ೩ ॥

ಪದಪಾಠಃ

ಹಂಸೈಃऽಇವ । ಸಖಿऽಭಿಃ । ವಾವದತ್ऽಭಿಃ । ಅಶ್ಮನ್ऽಮಯಾನಿ । ನಹನಾ । ವಿऽಅಸ್ಯನ್ ।
ಬೃಹಸ್ಪತಿಃ । ಅಭಿऽಕನಿಕ್ರದತ್ । ಗಾಃ । ಉತ । ಪ್ರ । ಅಸ್ತೌತ್ । ಉತ್ । ಚ । ವಿದ್ವಾನ್ । ಅಗಾಯತ್ ॥

ಸಾಯಣಭಾಷ್ಯಂ

ದೇವಸುವಾಂ ಹವಿಃಷು ಬೃಹಸ್ಪತಯೇ ವಾಚಸ್ಪತಯ ಇತ್ಯಸ್ಯ ಯಾಜ್ಯಾ ಹಂಸೈರಿವೇತ್ಯೇಷಾ। ಸೂತ್ರಿತಂ ಚ । ಬೃಹಸ್ಪತೇ ಪ್ರಥಮಂ ವಾಚೋ ಅಗ್ರಂ ಹಂಸೈರಿವ ಸಖಿಭಿರ್ವಾವದದ್ಭಿಃ । ಆ. ೪-೧೧ । ಇತಿ ॥

ಹಂಸೈರಿವ ಮಧುರವಾಗ್ಭಿಃ ಸಖಿಭಿಃ ಸಖಿಭೂತೈರ್ವಾವದದ್ಭಿರತ್ಯಂತಂ ಶಬ್ದಾಯಮಾನೈರ್ಮರುದ್ಭಿರಶ್ಮನ್ಮಯಾನ್ಯಶ್ಮಮಯಾನಿ ನಹನಾ ಗವಾಂ ಬಂಧಕಾನ್ಯಾವರಕಾಣ್ಯಸುರಾಣಾಂ ಸ್ಥಾನಾನಿ ವ್ಯಸ್ಯನ್ ವಿಕ್ಷಿಪಞ್ಛಿಥಿಲಯನ್ನಭಿಕನಿಕ್ರದದಾಭಿಮುಖ್ಯೇನ ಶಬ್ದಯನ್ ಗಾಃ ಪಣಿಭಿರಪಹೃತಾನ್ಪಶೂನಾಜಿಹೀರ್ಷುಃ ಸ ಬೃಹಸ್ಪತಿರ್ವರ್ತತೇ । ಯದ್ವಾ । ವಾವದದ್ಭಿರತ್ಯಂತಂ ಸ್ತುವದ್ಭಿಃ ಸ್ತೋತೃಭಿಃ ಸಹ

**ಗಾಃ ಸ್ತೋತ್ರಲಕ್ಷಣಾ ವಾಚೋಽಭಿಕನಿಕ್ರದದಾಭಿಮುಖ್ಯೇನೋಚ್ಚಾರಯನ್ । ಉತಾಪಿ ಚ ಪ್ರಾಸ್ತೌತ್ । ಕರ್ಮಣಿ ಪ್ರವೃತ್ತೌ ಯಜ್ಞಸ್ಯ ಸಖಿಭಿಃ ಸಹಾಸೀನಃ ಸಾಮ ಗಾತುಂ ಪ್ರಸ್ತೌತಿ । ವಿದ್ವಾನ್ ಸರ್ವಂ ಜಾನಾನಃ ಸ ಉದ್ಗಾತಾ ಭೂತ್ವೋದಗಾಯತ್ । ದೇವಾನುದ್ಗಾಯತಿ । ಅಭಿಷ್ಟೌತಿ ॥**

###### ಪ್ರತಿಪದಾರ್ಥ

**ಹಂಸೈಃ ಇವ**—ಹಂಸಪಕ್ಷಿಗಳಂತೆ । **ವಾವದದ್ಭಿಃ**—ಮಧುರವಾಗಿ ಶಬ್ದಮಾಡುವವರೂ । **ಸಖಿಭಿಃ**—ಮಿತ್ರರೂಪರೂ ಆದ ಮರುತ್ತುಗಳೊಡಗೂಡಿ । **ಬೃಹಸ್ಪತಿಃ**—ಬೃಹಸ್ಪತಿಯು । **ಅಶ್ಮನ್ಮಯಾನಿ**—ಶಿಲೆಯಿಂದ ನಿರ್ಮಿತವೂ । **ನಹನಾ**—ಗೋಬಂಧಕವೂ ಆದ ಅಸುರರ ಸ್ಥಾನಗಳನ್ನು । **ವ್ಯಸ್ಯನ್**—ಸಡಿಲಗೊಳಿಸುತ್ತಲೂ । **ಅಭಿಕನಿಕ್ರದತ್**—ಶಬ್ದಮಾಡುತ್ತಲೂ । **ಗಾಃ**—ಗೋವುಗಳನ್ನು ಬಿಡಿಸಲಿಚ್ಛಿಸಿದನು । **ಉತ**—ಮತ್ತು । **ಪ್ರಾಸ್ತೌತ್**—ದೇವತೆಗಳನ್ನು ಪ್ರಶಂಸಿಸಿದನು । **ವಿದ್ವಾನ್**—ಸಕಲವನ್ನೂ ತಿಳಿದ ಅವನು । **ಉದ ಗಾಯತ್**-ಗಾನರೂಪದಲ್ಲಿ ಸ್ತುತಿಸಿದನು.

###### ಭಾವಾರ್ಥ

ಹಂಸಪಕ್ಷಿಗಳಂತೆ ಮಧುರವಾಗಿ ಶಬ್ದಮಾಡುವವರೂ, ಮಿತ್ರರೂಪರೂ ಆದ ಮರುತ್ತುಗಳೊಡಗೂಡಿ ಬೃಹಸ್ಪತಿಯು ಶಿಲೆಯಿಂದ ನಿರ್ಮಿತವೂ, ಗೋಬಂಧಕವೂ ಆದ ಅಸುರರ ಸ್ಥಾನಗಳನ್ನು ಸಡಿಲಗೊಳಿಸುತ್ತಲೂ, ಶಬ್ದಮಾಡುತ್ತಲೂ ಗೋವುಗಳನ್ನು ಬಿಡಿಸಲಿಚ್ಛಿಸಿದನು. ಸಕಲವನ್ನೂ ತಿಳಿದ ಅವನು ದೇವತೆಗಳನ್ನು ಗಾನರೂಪದಲ್ಲಿ ಪ್ರಶಂಸಿಸಿದನು.

## English Translation

With his friends (the Maruts) clamouring like geese, throwing open the (Asuras') cattle-folds made of stone, Brihaspati calling aloud (desires to carry off) the cows; knowing all things he praises (the gods), and chants (their laudation).

###### ವಿಶೇಷವಿಷಯಗಳು

**ದೇವಸುವ** ಎಂಬ ಎಂಟುಮಂದಿ ದೇವತೆಗಳನ್ನುದ್ದೇಶಿಸಿ ಮಾಡುವ ಹೋಮದಲ್ಲಿ ಬೃಹಸ್ಪತಯೇ ವಾಚಸ್ಪತಯೇ ಎಂಬ ದೇವತೆಗೆ ಅರ್ಪಿಸುವ ಹವಿಸ್ಸನ್ನು ಹೋಮಮಾಡುವಾಗ **ಹಂಸೈರಿವ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಬೃಹಸ್ಪತೇ ಪ್ರಥಮಂ ವಾಚೋ ಅಗ್ರಂ ಹಂಸೈರಿವ ಸಖಿಭಿರ್ವಾವದದ್ಭಿಃ** ಎಂಬ ಸೂತ್ರದಿಂದ (ಆ. ೪-೧೧) ವಿವೃತವಾಗಿರುವುದು.

###### ಸಂಹಿತಾಪಾಠಃ

ಅವೋ ದ್ವಾಭ್ಯಾಂ ಪರ ಏಕಯಾ ಗಾ ಗುಹಾ ತಿಷ್ಠಂತೀರನೃತಸ್ಯ ಸೇತೌ ।
ಬೃಹಸ್ಪತಿಸ್ತಮಸಿ ಜ್ಯೋತಿರಿಚ್ಛನ್ನುದುಸ್ರಾ ಆಕರ್ವಿ ಹಿ ತಿಸ್ರ ಆವಃ ॥ ೪ ॥

ಪದಪಾಠಃ

ಅವಃ । ದ್ವಾಭ್ಯಾಂ । ಪರಃ । ಏಕಯಾ । ಗಾಃ । ಗುಹಾ । ತಿಷ್ಠಂತೀಃ । ಅನೃತಸ್ಯ । ಸೇತೌ ।
ಬೃಹಸ್ಪತಿಃ । ತಮಸಿ । ಜ್ಯೋತಿಃ । ಇಚ್ಛನ್ । ಉತ್ । ಉಸ್ರಾಃ । ಆ । ಅಕಃ । ವಿ । ಹಿ । ತಿಸ್ರಃ ।
ಅವರಿತ್ಯಾವಃ ॥ ೪ ॥

ಸಾಯಣಭಾಷ್ಯಂ

ಪಣಯೋ ಗಾ ಆಹೃತ್ಯ ತ್ರಿಷು ಸ್ಥಾನೇಷು ನಿದಧುಃ । ಅವೋಽವಸ್ತಾತ್ಸ್ಥಿತಾ ಅನೃತಸ್ಯ ತಮಸಃ ಸೇತೌ ಸ್ಥಾನೇ ಗುಹಾ ಗುಹಾಯಾಂ ತಿಷ್ಠಂತೀರ್ಗಾ ದ್ವಾಭ್ಯಾಂ ಸ್ಥಾನಾಭ್ಯಾಮುದಾಜತ್ । ತತಃ ಪರಃ ಪರಸ್ತಾದವಸ್ಥಿತಾ ಗಾ ಏಕಯೈಕೇನ ಸ್ಥಾನೇನೋದಗಮಯತ್ । ತದೇವಾಹ । ಬೃಹಸ್ಪತಿಸ್ತಸ್ಮಿಂಸ್ತಮಸಿ ಜ್ಯೋತಿಃ ಕರ್ತುಮಿಚ್ಛಂಸ್ತತ್ರ ಸ್ಥಿತಾ ಉಸ್ರಾ ಗಾ ಉದಾಕಃ । ಉದಕಾರ್ಷೀತ್ । ಪ್ರಾದುರ್ಭೂತಾ ಅಕಾರ್ಷೀತ್ । ಇತ್ಥಮಯಂ ತಿಸ್ರೋಽಸುರಾಣಾಂ ದ್ವಾರೋ ವ್ಯಾವಃ । ವಿವೃತವಾನ್ಖಲು ॥ ವೃಣೋತೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ । ಬಹುಲಂ ಛಂದಸೀತ್ಯಡಾಗಮಃ ॥

ಪ್ರತಿಪದಾರ್ಥ

**ಅನೃತಸ್ಯ**—ಕತ್ತಲುಕವಿದ । **ಸೇತೌ**—ಸ್ಥಾನದಲ್ಲಿ । **ಗುಹಾ**—ಗುಹೆಯಲ್ಲಿ । **ಅವಃ**—ಅಧಃ ಪ್ರದೇಶದಲ್ಲಿದ್ದ । **ಗಾಃ**—ಗೋವುಗಳನ್ನು । **ದ್ವಾಭ್ಯಾಂ**—ಎರಡು ಸ್ಥಾನಗಳಿಂದ(ಮಾರ್ಗಗಳಿಂದ)ಹೊರಡಿಸಿದನು । **ಪರಃ**—ಊರ್ಧ್ವಸ್ಥಾನದಲ್ಲಿದ್ದ ಗೋವುಗಳನ್ನು । **ಏಕಯಾ**—ಒಂದು ಮಾರ್ಗದಿಂದ ಹೊರಡಿಸಿದನು । **ಬೃಹಸ್ಪತಿಃ**—ಬೃಹಸ್ಪತಿಯು । **ತಮಸಿ**—ಕತ್ತಲಿನಲ್ಲಿ । **ಜ್ಯೋತಿಃ**—ತೇಜಸ್ಸನ್ನುಂಟುಮಾಡುತ್ತ । **ಇಚ್ಛನ್**—ಗೋವುಗಳನ್ನು ಬಿಡಿಸಲಿಚ್ಛಿಸಿ । **ಉಸ್ರಾಃ**—ಗೋವುಗಳನ್ನು । **ಉದಾಕಃ**—ಹೊರಕ್ಕೆ ಬರಮಾಡಿದನು । **ತಿಸ್ರಃ**—ಅಸುರರ ಮೂರು ಬಾಗಿಲನ್ನೂ । **ವ್ಯಾವಃ**—ಸೀಳಿದನು.

ಭಾವಾರ್ಥ

ಕತ್ತಲುಕವಿದ ಸ್ಥಾನದಲ್ಲಿ ಗುಹೆಯಲ್ಲಿ ಅಧಃಪ್ರದೇಶದಲ್ಲಿದ್ದ ಗೋವುಗಳನ್ನು ಎರಡು ಮಾರ್ಗಗಳಿಂದ ಹೊರಡಿಸಿದನು. ಊರ್ಧ್ವಸ್ಥಾನದಲ್ಲಿದ್ದ ಗೋವುಗಳನ್ನು ಒಂದು ಮಾರ್ಗದಿಂದ ಹೊರಡಿಸಿದನು. ಬೃಹಸ್ಪತಿಯು ಕತ್ತಲಿನಲ್ಲಿ ತೇಜಸ್ಸನ್ನುಂಟುಮಾಡುತ್ತ ಗೋವುಗಳನ್ನು ಬಿಡಿಸಲಿಚ್ಛಿಸಿ ಗೋವುಗಳನ್ನು ಹೊರಕ್ಕೆ ಬರಮಾಡಿದನು. ಅಸುರರ ಕೊಟ್ಟಿಗೆಯ ಮೂರು ಬಾಗಿಲುಗಳನ್ನೂ ಸೀಳಿದನು.

## English Translation

Brihaspati purposing to bring light into the darkness drove out the cows standing in the cave in the place of darkness below by two (ways), and those above by one (way) ; he opened the three (doors of the Asuras).

ಸಂಹಿತಾಪಾಠಃ

ವಿಭಿದ್ಯಾ ಪುರಂ ಶಯಥೇಮಪಾಚೀಂ ನಿಸ್ತ್ರೀಣಿ ಸಾಕಮುದಧೇರಕೃಂತತ್ ।
ಬೃಹಸ್ಪತಿರುಷಸಂ ಸೂರ್ಯಂ ಗಾಮರ್ಕಂ ವಿವೇದ ಸ್ತನಯನ್ನಿವ ದ್ಯೌಃ ॥

ಪದಪಾಠಃ

ವಿಽಭಿದ್ಯ । ಪುರಂ । ಶಯಥಾ । ಈಂ । ಅಪಾಚೀಂ । ನಿಃ । ತ್ರೀಣಿ । ಸಾಕಂ । ಉದಽಧೇಃ । ಅಕೃಂತತ್ ।
ಬೃಹಸ್ಪತಿಃ । ಉಷಸಂ । ಸೂರ್ಯಂ । ಗಾಂ । ಅರ್ಕಂ । ವಿವೇದ । ಸ್ತನಯನ್ಽಇವ । ದ್ಯೌಃ ॥ ೫ ॥

ಸಾಯಣಭಾಷ್ಯಂ

ಸ ಬೃಹಸ್ಪತಿಃ ಶಯಥೋಽಪಶಯೋಽನ ಸ್ಥಿತ್ವಾಪಾಚೀಂ ಪರಾಙ್ಮುಖೀಮೀಮಿಮಾಮಸುರಪುರೀಂ ವಿಭಿದ್ಯ ವಿದಾರ್ಯೋದಧೇರ್ವಲಾದ್ಮೇಘರೂಪಾದಸುರಾತ್ಸಾಕಂ ಸಹ ಯುಗಪತ್ ತ್ರೀಣ್ಯುಷಸಂ ಸೂರ್ಯಂ ಗಾಮೇತಾನಿ ತ್ರೀಣಿ ನಿರಕೃಂತತ್। ನಿರ್ಗತಮಕಾರ್ಷೀತ್। ತಮುಸಾವೃತೇಷು ಸ್ಥಾನೇಷೂಷಃ-ಕಾಲತಃ ಪಶ್ಚಾದ್ದಾವಿನಂ ಸೂರ್ಯಂ ಚ ಜನಯಿತ್ವಾ ಪಶೂನ್ನಿರಗಮಯದಿತ್ಯರ್ಥಃ । ಸೋಽಯ-ಮರ್ಕಮರ್ಚನೀಯಂ ಮಂತ್ರಂ ಸೂರ್ಯಂ ವಿವೇದ। ಪ್ರಜ್ಞಾಪಯತಿ । ಕಥಮಿವ । ಯಥಾ ಸ್ತನಯನ್ ಶಬ್ದಂ ಕುರ್ವನ್ ದ್ಯೌರಿವ ಸ್ಥಿತಃ ॥

ಪ್ರತಿಪದಾರ್ಥ

**ಬೃಹಸ್ಪತಿಃ**—ಬೃಹಸ್ಪತಿಯು । **ಶಯಥಾ**—ಪಕ್ಕದಲ್ಲಿಯೇ ಒರಗಿ ನಿಂತವನಾಗಿ । **ಅಪಾಚೀಂ**—ಪಶ್ಚಿಮಾಭಿಮುಖವಾದ । **ಈಂ ಪುರಂ**—ಅಸುರನ ಪಟ್ಟಣವನ್ನು । **ವಿಭಿದ್ಯ**—ನಾಶಮಾಡಿ । **ತ್ರೀಣಿ**—ಮೂರು ಪ್ರಕಾಶಸಾಧನಗಳಾದ । **ಉಷಸಂ**—ಉಷಸ್ಸನ್ನೂ । **ಸೂರ್ಯಂ**—ಸೂರ್ಯನನ್ನೂ । **ಗಾಂ**—ಗೋವನ್ನೂ । **ಉದಧೇಃ**—ಮೇಘರೂಪವಾದ ವಲನೆಂಬ ಅಸುರನಿಂದ । **ಸಾಕಂ**—ಒಟ್ಟಿಗೆ । **ನಿ ಅಕೃಂತತ್**—ಹೊರಕ್ಕೆ ಬರುವಂತೆ ಮಾಡಿದನು । **ದ್ಯೌಃ**—ದ್ಯುಲೋಕದಂತೆ । **ಸ್ತನಯನ್ನಿವ**—ಶಬ್ದಮಾಡುತ್ತ । **ಅರ್ಕಂ**—ಪೂಜ್ಯನಾದ ಸೂರ್ಯನನ್ನು । **ವಿವೇದ**—ಪ್ರಕಾಶಪಡಿಸಿದನು.

ಭಾವಾರ್ಥ

ಬೃಹಸ್ಪತಿಯು ಪಕ್ಕದಲ್ಲಿಯೇ ಒರಗಿ ನಿಂತವನಾಗಿ ಪಶ್ಚಿಮಾಭಿಮುಖವಾದ ಅಸುರನ ಪಟ್ಟಣವನ್ನು ನಾಶ ಮಾಡಿ ಮೂರುವಿಧವಾದ ಪ್ರಕಾಶಸಾಧನಗಳಾದ ಉಷಸ್ಸು, ಸೂರ್ಯ ಮತ್ತು ಗೋವನ್ನು ಮೇಘರೂಪವಾದ ವಲನೆಂಬ ಅಸುರನಿಂದ ಒಟ್ಟಿಗೆ ಹೊರಕ್ಕೆಬರುವಂತೆ ಮಾಡಿದನು. ದ್ಯುಲೋಕದಂತೆ ಶಬ್ದಮಾಡುತ್ತ ಪೂಜ್ಯನಾದ ಸೂರ್ಯನನ್ನು ಪ್ರಕಾಶಿಸುವಂತೆ ಮಾಡಿದನು.

## English Translation

Resting near it, demolishing the western city, Brihaspati wrested at once from Vala the three, the dawn, the sun, the cow; thundering like the heaven, he proclaimed the adorable (sun).

### ಸಂಹಿತಾಪಾಠಃ

ಇಂದ್ರೋ ವಲಂ ರಕ್ಷಿತಾರಂ ದುಘಾನಾಂ ಕರೇಣೇವ ವಿ ಚಕರ್ತಾ ರವೇಣ ।
ಸ್ವೇದಾಂಜಿಭಿರಾಶಿರಮಿಚ್ಛಮಾನೋಽರೋದಯತ್ಪಣಿಮಾ ಗಾ ಅಮುಷ್ಣಾತ್॥

### ಪದಪಾಠಃ

ಇಂದ್ರಃ । ವಲಂ । ರಕ್ಷಿತಾರಂ । ದುಘಾನಾಂ । ಕರೇಣಇವ । ವಿ । ಚಕರ್ತ । ರವೇಣ ।
ಸ್ವೇದಾಂಜಿಭಿಃ । ಆಶಿರಂ । ಇಚ್ಛಮಾನಃ । ಅರೋದಯತ್ । ಪಣಿಂ । ಆ । ಗಾಃ । ಅಮುಷ್ಣಾತ್ ॥

### ಸಾಯಣಭಾಷ್ಯಂ

ಇಂದ್ರ ಈಶ್ವರೋ ಬೃಹಸ್ಪತಿರ್ದುಘಾನಾಂ ಕ್ಷೀರಸ್ಯ ದೋಗ್ಧ್ರೀಣಾಂ ಗವಾಂ ರಕ್ಷಿತಾರಂ ವಲಮಸುರಂ ಕರೇಣೇವ ಸಾಯುಧಕರ ಇವ ಸ್ಥಿತೇನ ರವೇಣ ಶಬ್ದೇನ ವಲಂ ವಿ ಚಕರ್ತ। ವಿಚಿಚ್ಛೇದ। ಕಿಂಚ ಸ್ವೇದಾಂಜಿಭಿಃ। ಸ್ವೇದಾಂಜಯೋ ಮರುತಃ ಕ್ಷರದಾಭರಣಾಃ। ತೈಃ ಸಹಾಶಿರಮಾಶ್ರಯಣಂ ಸಂಯೋಗಮಿಚ್ಛಮಾನಃ ಕಾಮಯಮಾನಃ ಪಣಿಂ ವಲಸ್ಯಾನುಚರಮೇತನ್ನಾಮಾನಮಸುರಮರೋದಯತ್ । ವ್ಯನಾಶಯತ್ । ತತಸ್ತೇನಾಪಹೃತಾ ಗಾ ಅಮುಷ್ಣಾತ್ । ಆಜಹಾರ ॥

### ಪ್ರತಿಪದಾರ್ಥ

**ಇಂದ್ರಃ**—ಇಂದ್ರನು (ಪ್ರಭುವಾದ ಬೃಹಸ್ಪತಿಯು) । **ದುಘಾನಾಂ**—ಕ್ಷೀರವನ್ನು ಕರೆಯತಕ್ಕ ಗೋವುಗಳನ್ನು । **ರಕ್ಷಿತಾರಂ**—ಬಚ್ಚಿಟ್ಟಿದ್ದ । **ವಲಂ**—ವಲನೆಂಬ ಅಸುರನನ್ನು । **ಕರೇಣೇವ**—ಆಯುಧಸಹಿತವಾದ ಹಸ್ತದಂತಿದ್ದ । **ರವೇಣ**—ಶಬ್ದದಿಂದಲೇ । **ವಿ ಚಕರ್ತ**—ಸೀಳಿಹಾಕಿದನು । **ಸ್ವೇದಾಂಜಿಭಿಃ**—ಬೆವರನ್ನೇ ಅಲಂಕಾರವಾಗಿ ಹೊಂದಿದ್ದ ಮರುತ್ತುಗಳೊಡನೆ । **ಆಶಿರಂ**—ದಧ್ಯಾದಿಗಳೊಡನೆ ಮಿಶ್ರಿತವಾದ ಸೋಮವನ್ನು । **ಇಚ್ಛಮಾನಃ**—ಅಪೇಕ್ಷಿಸಿದ ಇಂದ್ರನು (ಬೃಹಸ್ಪತಿಯು) । **ಪಣಿಂ**—ಪಣಿಯೆಂಬ ಅಸುರನನ್ನು । **ಅರೋದಯತ್**—ನಾಶಮಾಡಿದನು । **ಗಾಃ**—ಗೋವುಗಳನ್ನು । **ಅಮುಷ್ಣಾತ್**—ಅಪಹರಿಸಿದನು.

### ಭಾವಾರ್ಥ

ಕ್ಷೀರವನ್ನು ಕರೆಯತಕ್ಕ ಗೋವುಗಳನ್ನು ಬಚ್ಚಿಟ್ಟಿದ್ದ ವಲನೆಂಬ ಅಸುರನನ್ನು ಆಯುಧಸಹಿತವಾದ ಹಸ್ತದಂತಿದ್ದ ಶಬ್ದದಿಂದಲೇ ಇಂದ್ರನು (ಬೃಹಸ್ಪತಿಯು) ಸೀಳಿಹಾಕಿದನು. ಬೆವರನ್ನೇ ಅಲಂಕಾರವಾಗಿ ಹೊಂದಿದ್ದ ಮರುತ್ತು

ಗಳೊಡನೆ ದಧ್ಯಾದಿಗಳೊಡನೆ ಮಿಶ್ರಿತವಾದ ಸೋಮವನ್ನು ಅಪೇಕ್ಷಿಸಿದ ಇಂದ್ರನು ಪಣಿಯೆಂಬ ಅಸುರನನ್ನು ನಾಶ ಮಾಡಿದನು. ಗೋವುಗಳನ್ನು ಅಪಹರಿಸಿದನು.

### English Translation

Indra with his voice as with an (armed) hand clove Valva the defender of the milch cows; desirous of the mixture (of milk and Soma) he with (the Maruts), who were shining with perspiration, destroyed Pani and liberated the cows.

ಸಂಹಿತಾಪಾಠಃ

**ಸ ಈಂ ಸತ್ಯೇಭಿಃ ಸಖಿಭಿಃ ಶುಚದ್ಭಿರ್ಗೋಧಾಯಸಂ ವಿ ಧನಸೈರದರ್ದಃ ।**
**ಬ್ರಹ್ಮಣಸ್ಪತಿರ್ವೃಷಭಿರ್ವರಾಹೈರ್ಘರ್ಮಸ್ವೇದೇಭಿರ್ದ್ರವಿಣಂ ವ್ಯಾನಟ್ ॥೭॥**

ಪದಪಾಠಃ

**ಸಃ । ಈಂ । ಸತ್ಯೇಭಿಃ । ಸಖಿऽಭಿಃ । ಶುಚತ್ऽಭಿಃ । ಗೋऽಧಾಯಸಂ । ವಿ । ಧನऽಸೈಃ । ಅದರ್ದರಿತ್ಯದರ್ದಃ । ಬ್ರಹ್ಮಣಃ । ಪತಿಃ । ವೃಷऽಭಿಃ । ವರಾಹೈಃ । ಘರ್ಮऽಸ್ವೇದೇಭಿಃ । ದ್ರವಿಣಂ । ವಿ । ಆನಟ್ ॥ ೭ ॥**

ಸಾಯಣಭಾಷ್ಯಂ

**ಸ ಬೃಹಸ್ಪತಿಃ ಸತ್ಯೇಭಿರ್ಯಥಾರ್ಥಬಲೈಃ ಸಖಿಭಿಃ । ಸಖಿಭೂತೈಃ ಶುಚದ್ಭಿರ್ದೀಪ್ಯಮಾನೈರ್ಧನಸೈರ್ಧನಸ್ಯ ಸಂಭಕ್ತೃಭಿರ್ಮರುದ್ಭಿಃ ಸಹ ಗೋಧಾಯಸಂ ಗವಾಂ ಧಾರಕಮೀಮೇನಂ ವಲಂ ವ್ಯದರ್ದಃ । ವ್ಯದಾರಯತ್ । ತತೋ ಬ್ರಹ್ಮಣ ಋಗ್ಯಜುಃಸಾಮಲಕ್ಷಣಸ್ಯ ಸ್ತೋತ್ರಸ್ಯ ಪತಿರಧಿಪತಿಃ ಸ ವೃಷಭಿರ್ವರ್ಷಿತೃಭಿರ್ವರಾಹೈರ್ವರಾಹಾರೈರ್ವರಸ್ಯ ವರಣೀಯಸ್ಯೋದಕಸ್ಯಾಹರ್ತೃಭಿರ್ಘರ್ಮಸ್ವೇದೇಭಿರ್ದೀಪ್ತಾಗಮನೈಃ ಯದ್ವಾ ಕ್ಷರದುದಕೈಃ । ಅಥವಾ । ಘರ್ಮೋ ಯಜ್ಞಃ । ತಂ ಪ್ರತಿ ಗಂತೃಭಿರ್ಮರುದ್ಭಿರ್ದ್ರವಿಣಂ ಗೋಲಕ್ಷಣಂ ಧನಂ ವ್ಯಾನಟ್ । ವ್ಯಾಪ್ನೋತ್ ॥**

ಪ್ರತಿಪದಾರ್ಥ

**ಸಃ**—ಬೃಹಸ್ಪತಿಯು । **ಸತ್ಯೇಭಿಃ**—ಸತ್ಯಾತ್ಮಕವಾದ ಶಕ್ತಿಯುಳ್ಳವರೂ । **ಸಖಿಭಿಃ**—ಮಿತ್ರಭೂತರೂ । **ಶುಚದ್ಭಿಃ**—ಪ್ರಕಾಶಮಾನರೂ । **ಧನಸೈಃ**—ಧನವನ್ನು ಹೊಂದಿರತಕ್ಕವರೂ ಆದ ಮರುತ್ತುಗಳೊಡಗೂಡಿ । **ಗೋಧಾಯಸಂ**—ಗೋವುಗಳನ್ನು ಬಚ್ಚಿಟ್ಟಿದ್ದ । **ಈಂ**—ವಲನನ್ನು । **ವ್ಯದರ್ದಃ**—ಸೀಳಿಹಾಕಿದನು । **ಬ್ರಹ್ಮಣಸ್ಪತಿಃ**—ಸ್ತುತಿಗಳಿಗೆ ಪ್ರಭುವಾದ ಬೃಹಸ್ಪತಿಯು । **ವೃಷಭಿಃ**—ಇಷ್ಟಾರ್ಥಪ್ರದರೂ । **ವರಾಹೈಃ**—ಅಪೇಕ್ಷಿತವಾದ ಉದಕವನ್ನು ಸುರಿಸುವವರೂ । **ಘರ್ಮಸ್ವೇದೇಭಿಃ**—ಯಜ್ಞಗಾಮಿಗಳೂ ಆದ ಮರುತ್ತುಗಳೊಡನೆ । **ದ್ರವಿಣಂ**—ಗೋರೂಪವಾದ ಧನವನ್ನು । **ವ್ಯಾನಟ್**—ಹೊಂದಿದನು.

ಭಾವಾರ್ಥ

ಸತ್ಯಾತ್ಮಕವಾದ ಶಕ್ತಿಯುಳ್ಳವರೂ, ಮಿತ್ರಭೂತರೂ, ಪ್ರಕಾಶಮಾನರೂ, ಧನವನ್ನು ಹೊಂದಿರುವವರೂ ಆದ ಮರುತ್ತುಗಳೊಡಗೂಡಿ ಬೃಹಸ್ಪತಿಯು ಗೋವುಗಳನ್ನು ಬಚ್ಚಿಟ್ಟಿದ್ದ ವಲನನ್ನು ಸೀಳಿಹಾಕಿದನು. ಸ್ತುತಿಗಳಿಗೆ ಪ್ರಭುವಾದ ಬೃಹಸ್ಪತಿಯು ಇಷ್ಟಾರ್ಥಪ್ರದರೂ, ಅಪೇಕ್ಷಿತವಾದ ಉದಕವನ್ನು ಸುರಿಸುವವರೂ, ಯಜ್ಞಗಾಮಿಗಳೂ ಆದ ಮರುತ್ತುಗಳೊಡಗೂಡಿ ಗೋರೂಪವಾದ ಧನವನ್ನು ಹೊಂದಿದನು.

## English Translation

Together with his true brilliant wealth-winning friendly (Maruts) he destroyed the detainer of the cows; Brahmanaspati, with the showerers (of benefits), the conveyers of desirable (water). the frequenters of sacrifice, acquired wealth.

ವಿಶೇಷವಿಷಯಗಳು

**ವರಾಹ್ಯೈಃ**—ವರಾಹ ಶಬ್ದವನ್ನು ವಿವರಿಸುವಾಗ ಯಾಸ್ಕರು—

**ಅಂಗಿರಸೋಽಪಿ ವರಾಹಾ ಉಚ್ಯಂತೇ । ಬ್ರಹ್ಮಣಸ್ಪತಿರ್ವೃಷಭಿರ್ವರಾಹ್ಯೈಃ ।**

(ನಿ. ೫-೪)

ಎಂದು ಹೇಳಿದಾರೆ. ಅಂಗಿರಾಋಷಿಗಳಿಗೆ ವರಾಹರೆಂದೂ ಹೆಸರು. ಏಕೆಂದರೆ, **ವರಾಹೈರ್ವರಾಹಾರ್ಯೈಃ**—ಉತ್ತಮವಾದ ಸತ್ತ್ವಾಹಾರವನ್ನು ಮಾತ್ರ ಭುಜಿಸುವವರಾದ್ದರಿಂದ ಇವರಿಗೆ ವರಾಹರೆಂಬ ಹೆಸರು ಅಥವಾ **ವರಸ್ಯ ವರಣೀಯಸ್ಯೋದಕಸ್ಯಾಹರ್ತೃಭಿಃ**—ಸರ್ವರಿಂದಲೂ ಅಪೇಕ್ಷಿಸಲ್ಪಡುವ ವೃಷ್ಟ್ಯುದಕವನ್ನು (ಯಜ್ಞಾದಿಕರ್ಮಾನುಷ್ಠಾನಗಳಿಂದ) ಸುರಿಸುವಂತೆ ಮಾಡುವವರಾದ್ದರಿಂದ ಅಂಗಿರಸರಿಗೆ ವರಾಹರೆಂದು ಹೆಸರು ಎಂದು ಅರ್ಥವಿವರಣೆಮಾಡಿದಾರೆ.

ವರಾಹಶಬ್ದದ ನಾನಾರ್ಥಗಳನ್ನು (ಯಾಸ್ಕರು ನಿರುಕ್ತದಲ್ಲಿ ವಿವರಿಸಿರುವಂತೆ) ನಾವು ಋ. ಸಂ. ಭಾಗ 25, ಪುಟ 175 ರಲ್ಲಿಯೂ, ಭಾಗ 26, ಪುಟ 762 ರಲ್ಲಿಯೂ ವಿಸ್ತಾರವಾಗಿ ವಿವರಿಸಿದೇವೆ.

ಸಂಹಿತಾಪಾಠಃ

**ತೇ ಸತ್ಯೇನ ಮನಸಾ ಗೋಪತಿಂ ಗಾ ಇಯಾನಾಸ ಇಷಣಯಂತ ಧೀಭಿಃ ।**
**ಬೃಹಸ್ಪತಿರ್ಮಿಥೋಅವದ್ಯಪೇಭಿರುದುಸ್ರಿಯಾ ಅಸೃಜತ ಸ್ವಯುಗ್ಭಿಃ ॥ ೮ ॥**

ಪದಪಾಠಃ

ತೇ । ಸತ್ಯೇನ । ಮನಸಾ । ಗೋಽಪತಿಂ । ಗಾಃ । ಇಯಾನಾಸಃ । ಇಷಣಯಂತ । ಧೀಭಿಃ ।
ಬೃಹಸ್ಪತಿಃ । ಮಿಥಃಽಅವದ್ಯಪೇಭಿಃ । ಉತ್ । ಉಸ್ರಿಯಾಃ । ಅಸೃಜತ । ಸ್ವಯುಕ್ಽಭಿಃ ॥ ೮ ॥

ಸಾಯಣಭಾಷ್ಯಂ

ಗಾಃ ಪಣಿಭಿರಪಹೃತಾನ್ಪಶೂನಿಯಾನಾಸೋಽಭಿಗಚ್ಛಂತಃ ಸತ್ಯೇನ ಯಥಾರ್ಥಭೂತೇನ ಮನಸಾ ಯುಕ್ತಾಸ್ತೇ ಮರುತೋ ಧೀಭಿರಾತ್ಮೀಯೈಃ ಕರ್ಮಭಿರೇತಂ ಬೃಹಸ್ಪತಿಂ ಗೋಪತಿಂ ತದಾಹರಣೇನ ಗವಾಂ ಸ್ವಾಮಿನಂ ಕುರ್ಮ ಇತೀಷಣಯಂತ। ಐಚ್ಛನ್। ಬೃಹಸ್ಪತಿಶ್ಚ ಮಿಥೋಅವದ್ಯಪೇಭಿಃ॥ ಪಾತೇಃ ಕರ್ಮಣ್ಯೌಣಾದಿಕಃ ಪ್ರತ್ಯಯಃ॥ ಅವದ್ಯರೂಪಾದಸುರಾದ್ರಕ್ಷಿತವ್ಯಾ ಗಾವೋ ಯೇಷು ಮರುತ್ಸು ಪರಸ್ಪರಂ ಸಂಗಚ್ಛಂತ ಇತಿ ತೇ ತಥೋಕ್ತಾಃ। ತೈಃ ಸ್ವಯುಗ್ಭಿಃ ಸ್ವಯಮೇವ ಯುಕ್ತೈರ್ಮರುದ್ಭಿರುಸ್ರಿಯಾ ಗಾ ಉದಸೃಜತ। ಪರ್ವತಾನ್ನಿರಗಮಯತ್॥

ಪ್ರತಿಪದಾರ್ಥ

**ಸತ್ಯೇನ**—ಪ್ರಾಮಾಣಿಕವಾದ। **ಮನಸಾ**—ಮನಸ್ಸಿನಿಂದ ಕೂಡಿದ। **ತೇ**—ಮರುತ್ತುಗಳು। **ಗಾಃ**—ಗೋವುಗಳನ್ನು। **ಇಯಾನಾಸಃ**—ಹುಡುಕುತ್ತ। **ಧೀಭಿಃ**—ತಮ್ಮ ಕರ್ಮಗಳಿಂದ। (**ಬಹಸ್ಪತಿಃ**—ಬೃಹಸ್ಪತಿಯನ್ನು)। **ಗೋಪತಿಂ**—ಗೋವುಗಳಿಗೆ ಒಡೆಯನನ್ನಾಗಿ ಮಾಡಲು। **ಇಷಣಯಂತ**—ಅಪೇಕ್ಷಿಸಿದರು। **ಬೃಹಸ್ಪತಿಃ**—ಬೃಹಸ್ಪತಿಯು। **ಮಿಥೋಅವದ್ಯಪೇಭಿಃ**—ಅಸುರನಿಂದ ಪರಸ್ಪರ ರಕ್ಷಣೆಯನ್ನು ಕೊಡತಕ್ಕವರೂ। **ಸ್ವಯುಗ್ಭಿಃ**—ಸ್ವಯಂಪ್ರೇರಿತರಾಗಿ ಬಂದು ಸೇರುವವರೂ ಆದ ಮರುತ್ತುಗಳೊಡನೆ ಕೂಡಿ। **ಉಸ್ರಿಯಾಃ**—ಗೋವುಗಳನ್ನು। **ಉದಸೃಜತ**—ಹೊರಕ್ಕೆ ಬರುವಂತೆ ಮಾಡಿದನು.

ಭಾವಾರ್ಥ

ಪ್ರಾಮಾಣಿಕವಾದ ಮನಸ್ಸಿನಿಂದ ಕೂಡಿದ ಮರುತ್ತುಗಳು ಗೋವುಗಳನ್ನು ಹುಡುಕುತ್ತ ತಮ್ಮ ಕರ್ಮಗಳಿಂದ ಬೃಹಸ್ಪತಿಯನ್ನು ಗೋವುಗಳಿಗೆ ಒಡೆಯನನ್ನಾಗಿ ಮಾಡಲು ಅಪೇಕ್ಷಿಸಿದರು. ಅಸುರನಿಂದ ಪರಸ್ಪರ ರಕ್ಷಣೆಯನ್ನು ಕೊಡತಕ್ಕವರೂ, ಸ್ವಯಂಪ್ರೇರಿತರಾಗಿ ಬಂದು ಸೇರುವವರೂ ಆದ ಮರುತ್ತುಗಳೊಡಗೂಡಿದ ಬೃಹಸ್ಪತಿಯು ಗೋವುಗಳನ್ನು ಹೊರಕ್ಕೆ ಬರುವಂತೆ ಮಾಡಿದನು.

English Translation

They with truthful mind searching for the cows resolved by their exploits to make him the lord of cattle; Brihaspati with his self-yoked (allies) mutually defending each other from reproach, set free the cows.

ಸಂಹಿತಾಪಾಠಃ

ತಂ ವರ್ಧಯಂತೋ ಮತಿಭಿಃ ಶಿವಾಭಿಃ ಸಿಂಹಮಿವ ನಾನದತಂ ಸಧಸ್ಥೇ।
ಬೃಹಸ್ಪತಿಂ ವೃಷಣಂ ಶೂರಸಾತೌ ಭರೇಭರೇ ಅನು ಮದೇಮ ಜಿಷ್ಣುಂ ॥೯॥

ಪದಪಾಠಃ

ತಂ। ವರ್ಧಯಂತಃ। ಮತಿಽಭಿಃ। ಶಿವಾಭಿಃ। ಸಿಂಹಂಽಇವ। ನಾನದತಂ। ಸಧಽಸ್ಥೇ।

ಬೃಹಸ್ಪತಿಂ । ವೃಷಣಂ । ಶೂರಽಸಾತೌ । ಭರೇಽಭರೇ । ಅನು । ಮದೇಮ । ಜಿಷ್ಣುಂ ॥ ೯ ॥

ಸಾಯಣಭಾಷ್ಯಂ

ಸಧಸ್ಥೇ । ಸಹ ತಿಷ್ಠಂತ್ಯತ್ರ ದೇವಾ ಇತಿ ಸಧಸ್ಥಮಂತರಿಕ್ಷಂ । ತಸ್ಮಿನ್ ಸಿಂಹಮಿವ ನಾನದತಂ ಪುನಃಪುನಃ ಶಬ್ದಾಯಮಾನಂ ವೃಷಣಂ ಕಾಮಾನಾಂ ವರ್ಷಿತಾರಂ ಜಿಷ್ಣುಂ ಜಯಶೀಲಂ ತಂ ಬೃಹಸ್ಪತಿಂ ವರ್ಧಯಂತೋ ಮರುತೋ ವಯಂ ಶೂರಸಾತೌ ಶೂರೈಃ ಸಂಭಜನೀಯೇ ಭರೇ ಭರೇ ಸಂಗ್ರಾಮೇ ಶಿವಾಭಿಃ ಕಲ್ಯಾಣೀಭಿಃ ಸ್ತುತಿಭಿರನು ಮದೇಮ। ಅನುಷ್ಟುಮಃ। ಸ್ತೋತ್ರೈಪರತ್ವೇನ ವಾ ಯೋಜನೀಯಂ॥

ಪ್ರತಿಪದಾರ್ಥ

ಸಧಸ್ಥೇ—ಅಂತರಿಕ್ಷದಲ್ಲಿ । ಸಿಂಹಮಿವ—ಸಿಂಹದಂತೆ । ನಾನದತಂ—ಪದೇಪದೇ ಶಬ್ದಮಾಡುತ್ತಿರುವವನನ್ನೂ । ವೃಷಣಂ—ಇಷ್ಟಾರ್ಥಪ್ರದನೂ । ಜಿಷ್ಣುಂ—ಜಯಶೀಲನೂ ಆದ । ತಂ ಬೃಹಸ್ಪತಿಂ—ಆ ಬೃಹಸ್ಪತಿಯನ್ನು । ವರ್ಧಯಂತಃ—ಪುಷ್ಟಿಗೊಳಿಸುವ ನಾವು । ಶೂರಸಾತೌ—ಶೂರರು ಜಯವನ್ನು ಪಡೆಯುವ । ಭರೇಭರೇ—ಯುದ್ಧದಲ್ಲಿ । ಶಿವಾಭಿಃ—ಕಲ್ಯಾಣಾತ್ಮಕವಾದ । ಮತಿಭಿಃ—ಸ್ತುತಿಗಳಿಂದ । ಅನು ಮದೇಮ—ಹರ್ಷಗೊಳಿಸುತ್ತೇವೆ.

ಭಾವಾರ್ಥ

ಅಂತರಿಕ್ಷದಲ್ಲಿ ಸಿಂಹದಂತೆ ಪದೇಪದೇ ಶಬ್ದಮಾಡುತ್ತಿರುವವನೂ, ಇಷ್ಟಾರ್ಥಪ್ರದನೂ, ಜಯಶೀಲನೂ ಆದ ಬೃಹಸ್ಪತಿಯನ್ನು ಪುಷ್ಟಿಗೊಳಿಸುವ ನಾವು, ಶೂರರು ಜಯವನ್ನು ಪಡೆಯುವ ಯುದ್ಧದಲ್ಲಿ ಕಲ್ಯಾಣಾತ್ಮಕವಾದ ಸ್ತುತಿಗಳಿಂದ ಹರ್ಷಗೊಳಿಸುತ್ತೇವೆ.

English Translation

Magnifying the victorious Brihaspati, the showerer (of benefits), roaring in mid-heaven like a lion, let us praise him in the conflicts where heroes win. with auspicious praises.

ಸಂಹಿತಾಪಾಠಃ

ಯದಾ ವಾಜಮಸನದ್ವಿಶ್ವರೂಪಮಾ ದ್ಯಾಮರುಕ್ಷದುತ್ತರಾಣಿ ಸದ್ಮ ।
ಬೃಹಸ್ಪತಿಂ ವೃಷಣಂ ವರ್ಧಯಂತೋ ನಾನಾ ಸಂತೋ ಬಿಭ್ರತೋ ಜ್ಯೋತಿರಾಸಾ ॥ ೧೦ ॥

ಪದಪಾಠಃ

ಯದಾ । ವಾಜಂ । ಅಸನತ್ । ವಿಶ್ವಽರೂಪಂ । ಆ । ದ್ಯಾಂ । ಅರುಕ್ಷತ್ । ಉತ್ಽತರಾಣಿ । ಸದ್ಮ । ಬೃಹಸ್ಪತಿಂ । ವೃಷಣಂ । ವರ್ಧಯಂತಃ । ನಾನಾ । ಸಂತಃ । ಬಿಭ್ರತಃ । ಜ್ಯೋತಿಃ । ಆಸಾ ॥ ೧೦ ॥

ಸಾಯಣಭಾಷ್ಯಂ

ಸ ಬೃಹಸ್ಪತಿರ್ಯದಾ ಯಸ್ಮಿನ್ಕಾಲೇ ವಿಶ್ವರೂಪಂ ನಾನಾರೂಪಂ ವಾಜಂ ಗೋಲಕ್ಷಣಮನ್ನಮ-ಸನತ್ ಭಜತೇ ಯದಾ ವಾಹೃತಪಶುಕಃ ಸನ್ ದ್ಯಾಂ ದ್ಯುಲೋಕಮರುಕ್ಷತ್ ಆರೋಹತಿ। ಅಥವೋತ್ತ-ರಾಣಿ ವಾ ಸದ್ಮ ಸ್ಥಾನಾನ್ಯಾರೋಹತಿ॥ ರುಹೇರ್ಲುಙಿ ಚ್ಲೇಃ ಶಲ ಇಗುಪಧಾದನಿಟಃ ಕ್ಸಃ ಪಾ. ೩-೧-೪೫॥ ತದಾನೀಂ ವೃಷಣಂ ವರ್ಷಿತಾರಂ ಬೃಹಸ್ಪತಿಮಾಸಾಸ್ಯೇನ ದೇವಾ ವರ್ಧಯಂತೋ ಭವಂತಿ। ತಥಾ ನಾನಾ ದಿಕ್ಷು ಸಂತೋ ಭವಂತೋ ಜ್ಯೋತಿರ್ಬಿಭ್ರತೋ ಧಾರಯಂತೋ ದೇವಾಶ್ಚ ಸ್ತುವಂತಿ॥

ಪ್ರತಿಪದಾರ್ಥ

**ಯದಾ**—ಯಾವಾಗ। **ವಿಶ್ವರೂಪಂ**—ನಾನಾವಿಧವಾದ ರೂಪವುಳ್ಳ। **ವಾಜಂ**—ಅನ್ನವನ್ನು। **ಅಸನತ್**—ಬೃಹಸ್ಪತಿಯು ಹೊಂದುವನೋ। **ದ್ಯಾಂ**—ದ್ಯುಲೋಕವನ್ನು। **ಅರುಕ್ಷತ್**—ಯಾವಾಗ ಹತ್ತುವನೋ। **ಉತ್ತರಾಣಿ ವಾ ಸದ್ಮ**—ಉತ್ತರದಿಕ್ಕಿನ ಪ್ರದೇಶಗಳನ್ನು ಯಾವಾಗ ಸೇರುವನೋ ಆಗ। **ನಾನಾ ಸಂತಃ**—ಅನೇಕ ದಿಕ್ಕುಗಳಲ್ಲಿರುವವರೂ। **ಜ್ಯೋತಿಃ**—ತೇಜಸ್ಸನ್ನು। **ಬಿಭ್ರತಃ**—ಧರಿಸಿರುವವರೂ ಆದ ದೇವತೆಗಳು। **ವೃಷಣಂ**—ಇಷ್ಟಾರ್ಥಪ್ರದನಾದ। **ಬೃಹಸ್ಪತಿಂ**—ಬೃಹಸ್ಪತಿಯನ್ನು। **ಆಸಾ**—ಮುಖಗಳಿಂದ। **ವರ್ಧಯಂತಃ**—ಸ್ತುತಿಸಿ ಪುಷ್ಟಿಗೊಳಿಸುತ್ತಾರೆ.

ಭಾವಾರ್ಥ

ಬೃಹಸ್ಪತಿಯು ಯಾವಾಗ ನಾನಾವಿಧವಾದ ರೂಪಗಳುಳ್ಳ ಅನ್ನವನ್ನು (ಗೋವುಗಳನ್ನು) ಹೊಂದುವನೋ, ಯಾವಾಗ ದ್ಯುಲೋಕದ ಪ್ರದೇಶಗಳನ್ನಾಗಲೀ ಅಥವಾ ಉತ್ತರದಿಕ್ಕಿನ ಪ್ರದೇಶವನ್ನಾಗಲೀ ಹತ್ತುವನೋ ಆಗ ಅನೇಕ ದಿಕ್ಕುಗಳಲ್ಲಿರುವವರೂ, ತೇಜಸ್ಸನ್ನು ಧರಿಸಿರುವವರೂ ಆದ ದೇವತೆಗಳು ಇಷ್ಟಾರ್ಥಪ್ರದನಾದ ಬೃಹಸ್ಪತಿಯನ್ನು ತಮ್ಮ ಮುಖಗಳಿಂದ ಸ್ತುತಿಸಿ ಪುಷ್ಟಿಗೊಳಿಸುತ್ತಾರೆ.

English Translation

When he acquires food of various kinds, when he ascends the sky or the northern stations, (the gods are) extolling Brihaspati, the showerer (of benefits), with their mouth, being in various (quarters), bearing light.

ಸಂಹಿತಾಪಾಠಃ

ಸತ್ಯಾಮಾಶಿಷಂ ಕೃಣುತಾ ವಯೋಧೈ ಕೀರಿಂ ಚಿದ್ಧ್ಯವಥ ಸ್ವೇಭಿರೇವೈಃ।
ಪಶ್ಚಾ ಮೃಧೋ ಅಪ ಭವಂತು ವಿಶ್ವಾಸ್ತದ್ರೋದಸೀ ಶೃಣುತಂ ವಿಶ್ವಮಿನ್ವೇ॥

ಪದಪಾಠಃ

ಸತ್ಯಾಂ। ಆಽಶಿಷಂ। ಕೃಣುತ। ವಯಃಽಧೈ। ಕೀರಿಂ। ಚಿತ್। ಹಿ। ಅವಥ। ಸ್ವೇಭಿಃ। ಏವೈಃ।

ಪಶ್ಚಾ । ಮೃಧಃ । ಅಪ । ಭವಂತು । ವಿಶ್ವಾಃ । ತತ್ । ರೋದಸೀ ಇತಿ । ಶೃಣುತಂ । ವಿಶ್ವಮಿನ್ವೇ ಇತಿ
ವಿಶ್ವಂऽಇನ್ವೇ ॥ ೧೧ ॥

ಸಾಯಣಭಾಷ್ಯಂ

ಹೇ ಬೃಹಸ್ಪತಿಪ್ರಭೃತಯೋ ದೇವಾ ವಯೋಧಾ ಅನ್ನಸ್ಯ ಧಾನಾಯಾಸ್ಮದೀಯಾಮಾಶಿಷಂ ಸ್ತುತಿಂ ಸತ್ಯಾಂ ಯಥಾರ್ಥಾಂ ಕೃಣುತ । ಕುರುತ । ತಥಾ ಯೂಯಂ ಸ್ವೇಭಿರಾತ್ಮೀಯೈರೇವೈರ್ಗಮನೈಃ ಕೀರಿಂ ಸ್ತೋತಾರಂ ಮಾಮವಥ । ರಕ್ಷಥ । ಹಿರವಧಾರಣೇ । ಪಶ್ಚಾ ॥ ಪಶ್ಚಾ ಚ ಛಂದಸಿ । ಪಾ. ೫ ೩-೩೩ । ಇತಿ ನಿಪಾತಿತಃ ॥ ಪಶ್ಚಾದಿಶ್ವಾಃ ಸರ್ವಾ ಮೃಧೋ ಹಿಂಸಿತ್ರ್ಯೋಽಪ ಭವಂತು । ನಶ್ಯಂತು । ತದಿದಮಸ್ಮಾಭಿರುಕ್ತಂ ವಚನಂ ಹೇ ವಿಶ್ವಮಿನ್ವೇ ವಿಶ್ವಸ್ಯ ಪ್ರೀಣಯಿತ್ರ್ಯೌ ಹೇ ರೋದಸೀ ದ್ಯಾವಾಪೃಥಿವ್ಯೌ ಶೃಣುತಂ ॥

ಪ್ರತಿಪದಾರ್ಥ

(ಬೃಹಸ್ಪತಿಯೇ ಮೊದಲಾದ ಎಲೈ ದೇವತೆಗಳೇ) **ವಯೋಧೈ**—ಅನ್ನವನ್ನು ಅರ್ಪಿಸಲು । **ಆಶಿಷಂ**—ನಮ್ಮ ಸ್ತುತಿಯನ್ನು । **ಸತ್ಯಾಂ**—ಸತ್ಯಾತ್ಮಕವನ್ನಾಗಿ । **ಕೃಣುತ**—ಮಾಡಿರಿ । **ಸ್ವೇಭಿಃ**—ನಿಮ್ಮ । **ಏವೈಃ**—ಗಮನಗಳಿಂದ । **ಕೀರಿಂ**—ಸ್ತುತಿಕರ್ತನಾದ ನನ್ನನ್ನು । **ಅವಥ**—ರಕ್ಷಿಸಿರಿ । **ವಿಶ್ವಾಃ ಮೃಧಃ**—ನಮ್ಮ ಹಿಂಸಕರಾದ ಸಕಲ ಶತ್ರುಗಳೂ । **ಪಶ್ಚಾ**—ಕೊನೆಯಲ್ಲಿ । **ಅಪ ಭವಂತು**—ನಾಶವಾಗಲಿ । **ವಿಶ್ವಮಿನ್ವೇ**—ಜಗತ್ತನ್ನೆಲ್ಲ ಹರ್ಷಗೊಳಿಸುವ । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ । **ತತ್**—ನಮ್ಮ ಸ್ತುತಿಯನ್ನು । **ಶೃಣುತಂ**—ಕೇಳಿರಿ.

ಭಾವಾರ್ಥ

ಬೃಹಸ್ಪತಿಯೇ ಮೊದಲಾದ ಎಲೈ ದೇವತೆಗಳೇ, ಹವಿಸ್ಸಿನ ರೂಪವಾದ ಅನ್ನವನ್ನು ಅರ್ಪಿಸಲು ನಮ್ಮ ಸ್ತುತಿಯನ್ನು ಸತ್ಯಾತ್ಮಕವನ್ನಾಗಿ ಮಾಡಿರಿ. ನಿಮ್ಮ ಗಮನಗಳಿಂದ ಸ್ತುತಿಕರ್ತನಾದ ನನ್ನನ್ನು ರಕ್ಷಿಸಿರಿ. ನಮ್ಮ ಹಿಂಸಕರಾದ ಸಕಲ ಶತ್ರುಗಳೂ ನಾಶವಾಗಲಿ. ಜಗತ್ತನ್ನೆಲ್ಲ ಹರ್ಷಗೊಳಿಸುವ ಎಲೈ ದ್ಯಾವಾಪೃಥಿವಿಗಳೇ, ನಮ್ಮ ಸ್ತುತಿಯನ್ನು ಕೇಳಿರಿ.

English Translation

Make good our prayer for the bestowal of food; you protect through your movements even (me) your worshipper; may all our enemies he driven back again; heaven and earth, the delighters of all, hear this (our prayer).

ಸಂಹಿತಾಪಾಠಃ

ಇಂದ್ರೋ ಮಹ್ನಾ ಮಹತೋ ಅರ್ಣವಸ್ಯ ವಿ ಮೂರ್ಧಾನಮಭಿನದರ್ಬುದಸ್ಯ ।
ಅಹನ್ನಹಿಮರಿಣಾತ್ಸಪ್ತ ಸಿಂಧೂನ್ದೇವೈರ್ದ್ಯಾವಾಪೃಥಿವೀ ಪ್ರಾವತಂ ನಃ ॥

ಪದಪಾಠಃ

ಇಂದ್ರಃ । ಮಹ್ನಾ । ಮಹತಃ । ಅರ್ಣವಸ್ಯ । ವಿ । ಮೂರ್ಧಾನಂ । ಅಭಿನತ್ । ಅರ್ಬುದಸ್ಯ । ಅಹನ್ । ಅಹಿಂ । ಅರಿಣಾತ್ । ಸಪ್ತ । ಸಿಂಧೂನ್ । ದೇವೈಃ । ದ್ಯಾವಾಪೃಥಿವೀ ಇತಿ । ಪ್ರ । ಅವತಂ ॥ ನಃ ॥ ೧೨ ॥

ಸಾಯಣಭಾಷ್ಯಂ

ಇಂದ್ರ ಈಶ್ವರೋ ಮಹ್ನಾ ಮಹತ್ತ್ವೇನ ಯುಕ್ತೋ ಬೃಹಸ್ಪತಿರ್ಮಹತೋ ಅರ್ಣವಸ್ಯೋದಕವತೋಽರ್ಬುದಸ್ಯಾಂಬುದಸ್ಯ ಮೇಘಸ್ಯ ಮೂರ್ಧಾನಂ ಶಿರೋ ವ್ಯಭಿನತ್ । ವ್ಯಚ್ಛಿನತ್ । ತದುಚ್ಯತೇ । ಅಹಿಮಹಂತೆವ್ಯಮಪಾಮಾವರಕಂ ಶತ್ರುಮಹನ್ । ಅವಧೀತ್ । ಅತಃ ಸಪ್ತ ಸರ್ಪಣಶೀಲಾಃ ಸಿಂಧೂನ್ ಸ್ಯಂದಮಾನಾ ಅಪಃ । ಯದ್ವಾ । ಸಪ್ತಸಂಖ್ಯಾಕಾ ಗಂಗಾದ್ಯಾ ನದೀಃ । ಅರಿಣಾತ್ । ಸಮುದ್ರಂ ಪ್ರತ್ಯಗಮಯತ್ । ಅಥ ಪ್ರತ್ಯಕ್ಷಕೃತಃ । ಹೇ ದ್ಯಾವಾಪೃಥಿವ್ಯೌ ದೇವೈಃ ಸಹ ನೋಽಸ್ಮಾನ್ಪ್ರಾವತಂ । ಪ್ರರಕ್ಷತಂ ॥

ಪ್ರತಿಪದಾರ್ಥ

**ಮಹ್ನಾ**—ಮಹತ್ತ್ವಪೂರಿತನಾದವನೂ । **ಇಂದ್ರಃ**—ಪ್ರಭುವೂ ಆದ ಬೃಹಸ್ಪತಿಯು । **ಮಹತಃ**—ಮಾಹಾತ್ಮ್ಯದಿಂದ ಕೂಡಿದುದೂ । **ಅರ್ಣವಸ್ಯ**—ಉದಕಯುಕ್ತವೂ ಆದ । **ಅರ್ಬುದಸ್ಯ**—ಮೇಘದ । **ಮೂರ್ಧಾನಂ**—ಶಿರಸ್ಸನ್ನು । **ವ್ಯಭಿನತ್**—ಸೀಳಿಹಾಕಿದನು । **ಅಹಿಂ**—ಶತ್ರುವನ್ನು । **ಅಹನ್**—ನಾಶ ಮಾಡಿದನು । **ಸಪ್ತ ಸಿಂಧೂನ್**—ಗಂಗಾದಿ ಸಪ್ತನದಿಗಳನ್ನೂ । **ಅರಿಣಾತ್**—ಸಮುದ್ರದ ಕಡೆಗೆ ಹರಿಸಿದನು । **ದ್ಯಾವಾಪೃಥಿವೀ**—ಎಲೈ ದ್ಯಾವಾಪೃಥಿವಿಗಳೇ ನೀವು । **ದೇವೈಃ**—ದೇವತೆಗಳೊಡಗೂಡಿ । **ನಃ**—ನಮ್ಮನ್ನು । **ಪ್ರಾವತಂ**—ರಕ್ಷಿಸಿರಿ.

ಭಾವಾರ್ಥ

ಮಹತ್ತ್ವಪೂರಿತನೂ, ಪ್ರಭುವೂ ಆದ ಬೃಹಸ್ಪತಿಯು ಮಾಹಾತ್ಮ್ಯದಿಂದ ಕೂಡಿದುದೂ, ಉದಕಯುಕ್ತವೂ ಆದ ಮೇಘದ ಶಿರಸ್ಸನ್ನು ಸೀಳಿಹಾಕಿದನು. ಶತ್ರುವನ್ನು ನಾಶಮಾಡಿದನು- ಗಂಗಾದಿ ಸಪ್ತನದಿಗಳನ್ನೂ ಸಮುದ್ರದ ಕಡೆಗೆ ಹರಿಸಿದನು. ಎಲೈ ದ್ಯಾವಾಪೃಥಿವಿಗಳೇ, ನೀವು ದೇವತೆಗಳೊಡಗೂಡಿ ನಮ್ಮನ್ನು ರಕ್ಷಿಸರಿ.

English Translation

Indra by his might has cleft the brow of the vast watery cloud, he has has slain Ahi; he has made the seven rivers flow; do you, heaven and earth, along with the gods, protect us.

## ಅರವತ್ತೆಂಟನೆಯ ಸೂಕ್ತ

ಪೀಠಿಕೆ

**ಉದಪ್ರುತ ಇತಿ ದ್ವಾದಶರ್ಚಮಷ್ಟಮಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ಉದಪ್ರುತ ಇತ್ಯನುಕ್ರಾಂತಂ ॥ ಉಕ್ಥೇ ಬ್ರಾಹ್ಮಣಾಚ್ಛಂಸಿನ ಏತತ್ಸೂಕ್ತಂ । ಸೂತ್ರಿತಂ ಚ । ಪ್ರ ಮಂಹಿಷ್ಠಾಯೋದಪ್ರುತೋಽಚ್ಛಾ ಮ ಇಂದ್ರಂ । ಆ. ೬-೧ । ಇತಿ ॥**

**ಅನುವಾದವು—ಉದಪ್ರುತಃ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆ. ಅನುಕ್ರಮಣಿಕೆಯಲ್ಲಿ—**ಉದಪ್ರುತಃ** ಇತ್ಯಾದಿಯಾಗಿ ಹೇಳಿರುವುದು. ಉಕ್ಥಮಂತ್ರಪಠನದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಈ ಸೂಕ್ತನನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪ್ರ ಮಂಹಿಷ್ಠಾಯೋದಪ್ರುತೋಽಚ್ಛಾವ ಇಂದ್ರಂ** ಎಂಬ ಸೂತ್ರದಿಂದ (ಆ. ೬-೧) ವಿವೃತವಾಗುವುದು.

## ಸೂಕ್ತ—೬೮

ಮಂಡಲ—೧೦ ॥ ಅನುವಾಕ—೫ ॥ ಸೂಕ್ತ—೬೮ ॥
ಅಷ್ಟಕ—೮ ॥ ಅಧ್ಯಾಯ—೨ ॥ ವರ್ಗ—೧೭, ೧೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥
ಋಷಿಃ—ಅಯಾಸ್ಯಃ ॥
ದೇವತಾ—ಬೃಹಸ್ಪತಿಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಉದಪ್ರುತೋ ನ ವಯೋ ರಕ್ಷಮಾಣಾ ವಾವದತೋ ಅಭ್ರಿಯಸ್ಯೇವ ಘೋಷಾಃ ।
ಗಿರಿಭ್ರಜೋ ನೋರ್ಮಯೋ ಮದಂತೋ ಬೃಹಸ್ಪತಿಮಭ್ಯ೧ರ್ಕಾ ಅನಾವನ್ ॥

ಪದಪಾಠಃ

ಉದಽಪ್ರುತಃ । ನ । ವಯಃ । ರಕ್ಷಮಾಣಾಃ । ವಾವದತಃ । ಅಭ್ರಿಯಸ್ಯಽಇವ । ಘೋಷಾಃ ।
ಗಿರಿಽಭ್ರಜಃ । ನ । ಊರ್ಮಯಃ । ಮದಂತಃ । ಬೃಹಸ್ಪತಿಂ । ಅಭಿ । ಅರ್ಕಾಃ । ಅನಾವನ್ ॥ ೧ ॥

ಸಾಯಣಭಾಷ್ಯಂ

ಉದಪ್ರುತ ಉದಕಸ್ಯೋದ್ಗಮಯಿತಾರೋ ವಯಃ ಪಕ್ಷಿಣಃ ಪಕ್ವಾತ್ಸಸ್ಯಾದ್ರಕ್ಷಮಾಣಾಃ ಕೃಷೀವಲಾಃ । ನ ಉಪಮಾರ್ಥೇ । ಯಥಾ ಶಬ್ದಾಯಂತೇ । ಯಥಾ ಚ ವಾವದತಃ ಪುನಃಪುನಃ ಶಬ್ದಾಯಮಾನಸ್ಯಾಭ್ರಿಯಸ್ಯೇವಾಭ್ರಸಮೂಹಸ್ಯ ಘೋಷಾಃ ಶಬ್ದಾ ಯಥಾ ಭವಂತಿ । ಕಿಂಚ ಗಿರಿಭ್ರಜೋ ಗಿರಿಭ್ಯೋ ಮೇಘೇಭ್ಯೋ ಭ್ರಷ್ಟಾ ನಿರ್ಗತಾ ಊರ್ಮಯೋಽಪ್ಸಮೂಹಾ ಯಥಾ ಮದಂತಃ ಶಬ್ದಾಯಮಾನಾ ಭವಂತಿ । ತಥಾರ್ಕಾ ಅರ್ಚಕಾಃ ಸ್ತೋತಾರೋ ಬೃಹಸ್ಪತಿಮಭ್ಯನಾವನ್ । ಅಭಿಷ್ಟುವಂತಿ ॥ ನು ಸ್ತವನೇ ॥

ಪ್ರತಿಪದಾರ್ಥ

**ಉದಪ್ರುತಃ**—ನೀರನ್ನು ಎರಚುತ್ತ । **ವಯಃ**—ಪಕ್ಷಿಗಳನ್ನು ಓಡಿಸುತ್ತಲೂ । **ರಕ್ಷಮಾಣಾಃ ನ**—ಪೈರುಗಳನ್ನು ಪಕ್ಷಿಗಳಿಂದ ರಕ್ಷಿಸುತ್ತಲೂ ಇರುವ ರೈತರು ಪಕ್ಷಿಗಳನ್ನು ಓಡಿಸುವಾಗ ಶಬ್ದಮಾಡುವಂತೆಯೂ । **ವಾವದತಃ**—

ವದೇಪದೇ ಗುಡುಗುವ | **ಅಭ್ರಿಯಸ್ಯ**—ಮೋಡದ | **ಘೋಷಾ ಇವ**—ಶಬ್ದದಂತೆಯೂ | **ಗಿರಿಭ್ರಜಃ**—ಮೇಘದಿಂದ ಬೀಳುವ | **ಊರ್ಮಯಃ**—ಮಳೆಯ ನೀರಿನ ಪ್ರವಾಹವು | **ಮದಂತಃ ನ**—ಶಬ್ದಮಾಡುವಂತೆಯೂ | **ಅರ್ಕಾಃ**—ಪೂಜಕರಾದ ಸ್ತುತಿಕರ್ತರು | **ಬೃಹಸ್ಪತಿಂ**—ಬೃಹಸ್ಪತಿಯನ್ನು | **ಅಭ್ಯನಾವನ್**—ಸ್ತುತಿಸುತ್ತಾರೆ.

ಭಾವಾರ್ಥ

ನೀರನ್ನು ಎರಚಿ ಪಕ್ಷಿಗಳನ್ನು ಓಡಿಸುವಾಗ ಸಸ್ಯರಕ್ಷಕರಾದ ರೈತರು ಶಬ್ದಮಾಡುವಂತೆಯೂ, ಪದೇಪದೇ ಗುಡುಗುವ ಮೋಡದ ಶಬ್ದದಂತೆಯೂ, ಮೇಘದಿಂದ ಬೀಳುವ ಮಳೆಯ ನೀರಿನ ಪ್ರವಾಹವು ಶಬ್ದಮಾಡುವಂತೆಯೂ ಪೂಜಕರಾದ ಸ್ತುತಿಕರ್ತರು ಬೃಹಸ್ಪತಿಯನ್ನು ಸ್ತುತಿಸುತ್ತಾರೆ.

## English Translation

Like birds swimming in water when keeping watch, like the sound of the roaring thunder-cloud, like sounding torrents falling from the clouds, the worshippers glorify Brihaspati·

ಸಂಹಿತಾಪಾಠಃ

ಸಂ ಗೋಭಿರಾಂಗಿರಸೋ ನಕ್ಷಮಾಣೋ ಭಗ ಇವೇದರ್ಯಮಣಂ ನಿನಾಯ |
ಜನೇ ಮಿತ್ರೋ ನ ದಂಪತೀ ಅನಕ್ತಿ ಬೃಹಸ್ಪತೇ ವಾಜಯಾಶೂಁರಿವಾಜೌ ||೨||

ಪದಪಾಠಃ

**ಸಂ | ಗೋಭಿಃ | ಆಂಗಿರಸಃ | ನಕ್ಷಮಾಣಃ | ಭಗಃಽಇವ | ಇತ್ | ಅರ್ಯಮಣಂ | ನಿನಾಯ |**
**ಜನೇ | ಮಿತ್ರಃ | ನ | ದಂಪತೀ ಇತಿ ದಂಽಪತೀ | ಅನಕ್ತಿ | ಬೃಹಸ್ಪತೇ | ವಾಜಯ | ಆಶೂನ್ಽಇವ ಆಜೌ || ೨ ||**

ಸಾಯಣಭಾಷ್ಯಂ

**ಆಂಗಿರಸೋಽಂಗಿರಸಃ ಪುತ್ರೋ ನಕ್ಷಮಾಣಃ ಸ್ವತೇಜಸಾ ವ್ಯಾಪ್ನುವನ್ ಭಗ ಇವೇದ್ಭಗೋ ದೇವ ಇವ ಸ್ಥಿತೋ ಬೃಹಸ್ಪತಿರೇವಾರ್ಯಮಣಂ ಸ್ತುತೇಃ ಪ್ರೇರಕಂ ಸ್ತೋತಾರಂ ಗೋಭಿಃ ಸಹ ಸಂ ನಿನಾಯ | ನಯತಿ | ಸಂಯೋಜಯತಿ | ಮಿತ್ರೋ ನ ಮಿತ್ರೋ ಯಥಾ ಜನೇ ಜನಪದೇ ಸ್ವರಶ್ಮೀನ್ಸಂಯೋಜಯತಿ ತದ್ವದ್ದಂಪತೀ ಜಾಯಾಪತೀ ಅನಕ್ತಿ | ಸಂಗಮಯತಿ | ಸ್ವಸಾಮರ್ಥ್ಯಂ ತತ್ರ ಸ್ಥಾಪಯತೀತ್ಯರ್ಥಃ | ಹೇ ಬೃಹಸ್ಪತೇ ಆಶೂನ್ವ್ಯಾಪ್ತಾನ್ಸ್ವರಶ್ಮೀನ್ವಾಜಯ | ತವ ಸ್ತೋತೃಷು ಗಮಯ | ಸ್ಥಾಪಯ | ಆಶೂನಿವ ವ್ಯಾಪ್ತಾನಶ್ವಾನಾಜೌ ಸಂಗ್ರಾಮೇ ಯೋದ್ಧಾರೋ ಯಥಾ ಸಂಗಮಯಂತಿ ತದ್ವತ್ ||**

ಪ್ರತಿಪದಾರ್ಥ

**ನಕ್ಷಮಾಣಃ**—ತನ್ನ ತೇಜಸ್ಸಿನಿಂದ ವ್ಯಾಪಿಸುವವನೂ । **ಭಗ ಇವೇತ್**—ಭಗದೇವನಂತೆ ಪ್ರಕಾಶಿಸುವವನೂ । **ಆಂಗಿರಸಃ**—ಅಂಗಿರಸ್ಸಿನ ಪುತ್ರನೂ ಆದ ಬೃಹಸ್ಪತಿಯು । **ಅರ್ಯಮಣಂ**—ಸ್ತುತಿಪ್ರೇರಕನಾದ ಸ್ತುತಿಕರ್ತನನ್ನು । **ಗೋಭಿಃ (ಸಹ)**—ಗೋವುಗಳೊಡನೆ । **ಸಂ ನಿನಾಯ**—ಸೇರಿಸುತ್ತಾನೆ । **ಜನೇ**—ಸಕಲರಲ್ಲಿಯೂ । **ಮಿತ್ರೋ ನ**—ಸೂರ್ಯದೇವನು ತನ್ನ ರಶ್ಮಿಗಳನ್ನು ಸೇರಿಸುವಂತೆ । **ದಂಪತೀ**—ದಂಪತಿಗಳನ್ನು । **ಅನಕ್ತಿ**—ಒಟ್ಟಿಗೆ ಸೇರಿಸುತ್ತಾನೆ । **ಬೃಹಸ್ಪತೇ**—ಎಲೈ ಬೃಹಸ್ಪತಿಯೇ । **ಆಜೌ**—ಯುದ್ಧದಲ್ಲಿ । **ಆಶೂನಿವ**—ಅಶ್ವಗಳನ್ನು ಸೇರಿಸುವಂತೆ । **ವಾಜಯ**—ನಿನ್ನ ರಶ್ಮಿಗಳನ್ನು ಸ್ತುತಿಕರ್ತರಿಗೆ ಪ್ರೇರಿಸಿ ಅವರಲ್ಲಿ ಸೇರಿಸು.

ಭಾವಾರ್ಥ

ತನ್ನ ತೇಜಸ್ಸಿನ ದ್ವಾರಾ ಸರ್ವತ್ರ ವ್ಯಾಪಿಸುವವನೂ, ಭಗನಂತೆ ಪ್ರಕಾಶಿಸುವವನೂ, ಅಂಗಿರಸ್ಸಿನ ಪುತ್ರನೂ ಆದ ಬೃಹಸ್ಪತಿಯು ಸ್ತುತಿಪ್ರೇರಕನಾದ ಸ್ತುತಿಕರ್ತನನ್ನು ಗೋವುಗಳೊಡನೆ ಸೇರಿಸುತ್ತಾನೆ. ಸೂರ್ಯದೇವನು ಸಕಲರಲ್ಲಿಯೂ ತನ್ನ ರಶ್ಮಿಗಳನ್ನು ಸೇರಿಸುವಂತೆ ದಂಪತಿಗಳನ್ನು ಒಟ್ಟಿಗೆ ಸೇರಿಸುತ್ತಾನೆ. ಎಲೈ ಬೃಹಸ್ಪತಿಯೇ, ಯುದ್ಧದಲ್ಲಿ ಅಶ್ವಗಳನ್ನು ಸೇರಿಸುವಂತೆ ನಿನ್ನ ರಶ್ಮಿಗಳನ್ನು ಸ್ತುತಿಕರ್ತರಲ್ಲಿ ಸೇರಿಸು.

English Translation

The son of Angiras pervading him with his brightness, has, like Bhaga, brought Aryaman to the cows; as Mitra (unites his radiance) with the people, so has he united husband and wife, Brihaspati, send (your wide-spread rays to your worshippers) ar (a warrior sends his) his horses to battle.

ಸಂಹಿತಾಪಾಠಃ

ಸಾಧ್ವರ್ಯಾ ಅತಿಥಿನೀರಿಷಿರಾಃ ಸ್ಪಾರ್ಹಾಃ ಸುವರ್ಣಾ ಅನವದ್ಯರೂಪಾಃ ।
ಬೃಹಸ್ಪತಿಃ ಪರ್ವತೇಭ್ಯೋ ವಿತೂರ್ಯಾ ನಿರ್ಗಾ ಊಪೇ ಯವಮಿವ
ಸ್ಥಿವಿಭ್ಯಃ ॥ ೩ ॥

ಪದಪಾಠಃ

ಸಾಧುऽಅರ್ಯಾಃ । ಅತಿಥಿನೀಃ । ಇಷಿರಾಃ । ಸ್ಪಾರ್ಹಾಃ । ಸುऽವರ್ಣಾಃ । ಅನವದ್ಯऽರೂಪಾಃ ।
ಬೃಹಸ್ಪತಿಃ । ಪರ್ವತೇಭ್ಯಃ । ವಿऽತೂರ್ಯ । ನಿಃ । ಗಾಃ । ಊಪೇ । ಯವಂऽಇವ । ಸ್ಥಿವಿऽಭ್ಯಃ ॥ ೩ ॥

ಸಾಯಣಭಾಷ್ಯಂ

ಸಾಧ್ವರ್ಯಾಃ ಸಾಧೂನಾಂ ಕಲ್ಯಾಣಾನಾಂ ಪಯಸಾಂ ನೇತ್ರೀರತಿಥಿನೀಃ ಸತತಂ ಗಚ್ಛಂತೀರಿಷಿರಾ ಏಷಣೀಯಾಃ ಸ್ಪಾರ್ಹಾಃ ಸ್ಪೃಹಣೀಯಾಃ ಸುವರ್ಣಾಃ ಶೋಭನಶುಕ್ಲಾದಿವರ್ಣೋಪೇತಾ ಅನವದ್ಯ-

**ರೂಪಾಃ ಪ್ರಶಸ್ಯರೂಪಾ ಏತಾ ಗಾಃ ಪರ್ವತೇಭ್ಯೋ ವಲಸಂಬಂಧಿಭ್ಯೋ ವಿತೂರ್ಯ ನಿರ್ಗಮಯ್ಯೋಪೇ| ದೇವಸಮೀಪೇ ನಿರ್ವಪತಿ | ಪ್ರಾಪಯತಿ | ತತ್ರ ದೃಷ್ಟಾಂತಃ | ಯವಮಿವ ಯಥಾ ಯವಂ ಸ್ಥಿವಿಭ್ಯಃ ಕುಸಿದೇಭ್ಯ ಆದಾಯ ನಿರ್ವಪತಿ|| ಡುವಪ್ ಬೀಜಸಂತಾನೇ | ಲಿಟಿ ರೂಪಂ || ಯದ್ವಾ| ಸಾಧುನಯನಾದಿ ಗುಣಯುಕ್ತಾ ಗಾ ಅಪಃ ಪರ್ವತೇಭ್ಯೋ ಮೇಘೇಭ್ಯ ಆಹೃತ್ಯ ಸರ್ವತ್ರ ವರ್ಷತಿ ||**

ಪ್ರತಿಪದಾರ್ಥ

**ಸ್ಥಿವಿಭ್ಯಃ**—ಕಣಜಗಳಿಂದ | **ಯವಮಿವ**—ಯವಧಾನ್ಯವನ್ನು ತುಂಬಿಕೊಂಡುಬರುವಂತೆ | **ಬೃಹಸ್ಪತಿಃ**–ಬೃಹಸ್ಪತಿಯು | **ಸಾಧ್ವರ್ಯಾಃ**—ಕಲ್ಯಾಣಕರವಾದ ಕ್ಷೀರವನ್ನು ಕೊಡತಕ್ಕವೂ | **ಅತಿಥಿನೀಃ**—ಅನುಸ್ಯೂತವಾದ | ಗಮನವುಳ್ಳವೂ| **ಇಷಿರಾಃ**—ಹುಡುಕಲ್ಪಡತಕ್ಕವೂ| **ಸ್ಪಾರ್ಹಾಃ**—ಅಪೇಕ್ಷಿತವಾದವೂ| **ಸುವರ್ಣಾಃ**—ಉತ್ತಮವಾದ ವರ್ಣವುಳ್ಳವೂ | **ಅನವದ್ಯರೂಪಾಃ**—ಪ್ರಶಂಸಿತವಾದ ರೂಪವುಳ್ಳವೂ ಆದ | **ಗಾಃ**—ಗೋವುಗಳನ್ನು | **ಪರ್ವತೇಭ್ಯಃ**—ವಲನು ಬಚ್ಚಿಟ್ಟಿದ್ದ ಪರ್ವತಗಳಿಂದ | **ವಿತೂರ್ಯ**—ಹೊರಕ್ಕೆ ಬರಮಾಡಿ | **ನಿಃ ಊಪೇ**—ದೇವತೆಗಳ ಸಮೀಪಕ್ಕೆ ಕರೆದೊಯ್ಯುತ್ತಾನೆ.

ಭಾವಾರ್ಥ

ಕಣಜಗಳಿಂದ ಯವಧಾನ್ಯವನ್ನು ತುಂಬಿಕೊಂಡು ಈಚೆಗೆ ಬರುವಂತೆ ಬೃಹಸ್ಪತಿಯು ಕಲ್ಯಾಣಕರವಾದ ಕ್ಷೀರವನ್ನು ಕೊಡತಕ್ಕವೂ, ಅನುಸ್ಯೂತವಾದ ಗಮನವುಳ್ಳವೂ, ಹುಡುಕಲ್ಪಡತಕ್ಕವೂ, ಅಪೇಕ್ಷಿತವಾದವೂ, ಉತ್ತಮವಾದ ವರ್ಣವುಳ್ಳವೂ, ಪ್ರಶಂಸಿತವಾದ ರೂಪವುಳ್ಳವೂ ಆದ ಗೋವುಗಳನ್ನು ವಲನು ಅಡಗಿರುವ ಪರ್ವತಗಳಿಂದ ಹೊರಕ್ಕೆ ಬರಮಾಡಿ ಅವನ್ನು ದೇವತೆಗಳ ಸಮೀಪಕ್ಕೆ ಕರೆದೊಯ್ಯುತ್ತಾನೆ.

## English Translation

Brihaspati brings to (the gods), after extricating them from the mountains, the cows that are the yielders of pure (milk), ever in motion, the objects of search and of desire, well-coloured and of unexceptionable form, (as men bring) barley from the granaries.

ಸಂಹಿತಾಪಾಠಃ

**ಆಪ್ರುಷಾಯನ್ಮಧುನ ಋತಸ್ಯ ಯೋನಿಮವಕ್ಷಿಪನ್ನರ್ಕ ಉಲ್ಕಾಮಿವ ದ್ಯೋಃ |**
**ಬೃಹಸ್ಪತಿರುದ್ಧರನ್ನಶ್ಮನೋ ಗಾ ಭೂಮ್ಯಾ ಉದ್ನೇವ ವಿ ತ್ವಚಂ ಬಿಭೇದ ||೪||**

ಪದಪಾಠಃ

**ಆऽಪ್ರುಷಾಯನ್| ಮಧುನಾ | ಋತಸ್ಯ| ಯೋನಿಂ | ಅವऽಕ್ಷಿಪನ್| ಅರ್ಕಃ | ಉಲ್ಕಾಂऽಇವ| ದ್ಯೋಃ|**
**ಬೃಹಸ್ಪತಿಃ | ಉತ್ಽಹರನ್ | ಅಶ್ಮನಃ | ಗಾಃ | ಭೂಮ್ಯಾಃ | ಉದ್ನಾऽಇವ | ವಿ | ತ್ವಚಂ | ಬಿಭೇದ || ೪ ||**

ಸಾಯಣಭಾಷ್ಯಂ

**ಮಧುನೋದಕೇನಾಪ್ರುಷಾಯನ್ ಪೃಥಿವೀಮಾಭಿಮುಖ್ಯೇನ ಸಿಂಚನ್॥ ಪ್ರುಷ ಪ್ಲುಷ ಸ್ನೇಹನಸೇಚನಪೂರಣೇಷು। ವ್ಯತ್ಯಯೇನ ವಿಕರಣಸ್ಯ ಶಾಯಜಾದೇಶಃ॥ ಋತಸ್ಯೋದಕಸ್ಯ ಯೋನಿಂ ಮೇಘಮವಕ್ಷಿಪನ್ ವೃಷ್ಟ್ಯರ್ಥಮವಕಿರನ್ನರ್ಕೋಽರ್ಚನೀಯೋ ಬೃಹಸ್ಪತಿರ್ದ್ಯೋರ್ದ್ಯುಲೋಕಾದುಲ್ಕಾಮಿಮಿವೋಲ್ಕಾಂ ಯಥೋದ್ಧರತಿ ತದ್ವದಶ್ಮನಃ ಶಿಲೋಚ್ಚಯಾದ್ವಲೇನಾಧಿಷ್ಠಿತಾದ್ಗಾಃ ಪಣಿಭಿರಪಹೃತಾನ್ಪಶೂನುದ್ಧರನ್ನೂರ್ಧ್ವಂ ಗಮಯನ್ಭೂಮ್ಯಾಸ್ತ್ವಚಂ ತೇಷಾಂ ಶಫೈರ್ವಿ ಬಿಭೇದ। ವಿಭಿನ್ನಾಮಕಾರ್ಷೀತ್। ಸರ್ವತ್ರ ಗಾ ವಿತತಾ ಅಕಾರ್ಷೀದಿತ್ಯರ್ಥಃ। ತತ್ರ ದೃಷ್ಟಾಂತಃ। ಉದ್ನೇವ ಯಥಾ ವೃಷ್ಟ್ಯುದಕೇನ ಪರ್ಜನ್ಯೋ ಭೂಮಿತ್ವಚಂ ವಿಭಿನತ್ತಿ ತದ್ವತ್॥**

ಪ್ರತಿಪದಾರ್ಥ

**ಮಧುನಾ**—ಉದಕದಿಂದ। **ಆ ಪ್ರುಷಾಯನ್**—ಪೃಥ್ವಿಯನ್ನು ತೊಯ್ಯುವಂತೆ ಮಾಡುತ್ತಲೂ। **ಋತಸ್ಯ**—ಉದಕಕ್ಕೆ। **ಯೋನಿಂ**—ಮೂಲವಾದ ಮೇಘವನ್ನು। **ಅವಕ್ಷಿಪನ್**—ವೃಷ್ಟಿಗಾಗಿ ಚದುರಿಸುತ್ತಲೂ। **ಅರ್ಕಃ**—ಪೂಜ್ಯನಾದ। **ಬೃಹಸ್ಪತಿಃ**—ಬೃಹಸ್ಪತಿಯು। **ದ್ಯೋಃ**—ದ್ಯುಲೋಕದಿಂದ। **ಉಲ್ಕಾಮಿವ**—ಉಲ್ಕಾಪಾತವನ್ನು ಹೊರಕ್ಕೆ ಬರಮಾಡುವಂತೆ। **ಅಶ್ಮನಃ**-ಪರ್ವತದಿಂದ। **ಗಾಃ**-ಗೋವುಗಳನ್ನು। **ಉದ್ಧರನ್**-ಹೊರಕ್ಕೆ ಬರಮಾಡುತ್ತ। **ಉದ್ನೇವ**—ಪರ್ಜನ್ಯನು ವೃಷ್ಟಿಯಿಂದ ಭೂಮಿಯ ಪ್ರದೇಶವನ್ನು ಹಳ್ಳಕೊಳ್ಳಗಳಾಗಿ ಮಾಡುವಂತೆ। **ಭೂಮ್ಯಾಃ**—ಭೂಮಿಯ। **ತ್ವಚಂ**—ಮೇಲ್ಭಾಗವನ್ನು। **ವಿ ಬಿಭೇದ**—ಗೊರಸುಗಳಿಂದ ಸೀಳುವಂತೆ ಮಾಡುತ್ತಾನೆ.

ಭಾವಾರ್ಥ

ಪೂಜ್ಯನಾದ ಬೃಹಸ್ಪತಿಯು ಉದಕದಿಂದ ಪೃಥ್ವಿಯನ್ನು ತೊಯ್ಯುವಂತೆ ಮಾಡುತ್ತಲೂ, ಉದಕಕ್ಕೆ ಮೂಲವಾದ ಮೇಘವನ್ನು ವೃಷ್ಟಿಗಾಗಿ ಚದುರಿಸುತ್ತಲೂ ದ್ಯುಲೋಕದಿಂದ ಉಲ್ಕಾಪಾತವನ್ನು ಹೊರಕ್ಕೆ ಬರಮಾಡುವಂತೆ ಪರ್ವತದಿಂದ ಗೋವುಗಳನ್ನು ಹೊರಕ್ಕೆ ಬರಮಾಡುತ್ತ ಪರ್ಜನ್ಯನು ವೃಷ್ಟಿಯನ್ನು ಸುರಿಸಿ ಭೂಮಿಯ ಪ್ರದೇಶಗಳನ್ನು ಸೀಳುವಂತೆ, ಇವನೂ ಸಹ ಗೋವುಗಳ ಗೊರಸುಗಳಿಂದ ಭೂಮಿಯ ಮೇಲ್ಭಾಗವನ್ನು ಸೀಳುವಂತೆ ಮಾಡುತ್ತಾನೆ.

## English Translation

Saturating (the earth) with water, scattering the receptacle of rain, the adorable Brihaspati, raising up the cattle from the rock as (he raises) a meteor from the sky, rent the skin of the earth (with the hoofs of the cattle) as (Parjanya rends it) with rain.

ಸಂಹಿತಾಪಾಠಃ

**ಅಪ ಜ್ಯೋತಿಷಾ ತಮೋ ಅಂತರಿಕ್ಷಾದುದ್ನಃ ಶೀಪಾಲಮಿವ ವಾತ ಆಜತ್।**
**ಬೃಹಸ್ಪತಿರನುಮೃಶ್ಯಾ ವಲಸ್ಯಾಭ್ರಮಿವ ವಾತ ಆ ಚಕ್ರ ಆ ಗಾಃ॥ ೫॥**

ಪದಪಾಠಃ

**ಅಪ | ಜ್ಯೋತಿಷಾ | ತಮಃ | ಅಂತರಿಕ್ಷಾತ್ | ಉದ್ನಃ | ಶೀಪಾಲಂಽಇವ | ವಾತಃ | ಆಜತ್ |**
**ಬೃಹಸ್ಪತಿಃ | ಅನುಽವೃಶ್ಯ | ವಲಸ್ಯ | ಅಭ್ರಂಽಇವ | ವಾತಃ | ಆ | ಚಕ್ರೇ | ಆ | ಗಾಃ || ೫ ||**

ಸಾಯಣಭಾಷ್ಯಂ

**ಸ ಬೃಹಸ್ಪತಿರ್ಜ್ಯೋತಿಷಾ ತಮಸಾವೃತೇ ಪರ್ವತವಿವರೇ ಕೃತೇನ ಸೂರ್ಯೇಣಾಂತರಿಕ್ಷಾತ್ತ್ರತ್ರೈನೋಽಪಾಜತ್ | ಅಪಾಗಮಯತ್ | ತತ್ರ ದೃಷ್ಟಾಂತಃ | ಉದ್ನಃ ಶೀಪಾಲಮಿವ | ಯಥೋದಕಾದ್ವಾತೋ ವಾಯುಃ ಶೀಪಾಲಂ ಶೈವಾಲಮಪಗಮಯತಿ ತದ್ವತ್ | ತತಃ ಸೋಽಯಮನುವೃಶ್ಯಾಽತ್ರ ಗಾವಸ್ತಿಷ್ಠಂತೀತಿ ವಿಚಾರ್ಯ ನಿಶ್ಚಿತ್ಯ ವಲಸ್ಯ ಸ್ವಭೂತಸ್ಯ ಪರ್ವತಸ್ಯಾಂತರ್ಗತಾ ಗಾ ಆ ಚಕ್ರೇ | ಆ ಸಮಂತಾದಕಾರ್ಷೀತ್ | ಕಥಮಿವ | ಅಭ್ರಮಿವ ಯಥಾ ವಾಯುರಂತರಿಕ್ಷಸ್ಥಿತಮಭ್ರಂ ಮೇಘಮಾಕಿರತಿ ತದ್ವತ್ ||**

ಪ್ರತಿಪದಾರ್ಥ

**ವಾತಃ**—ವಾಯುವು | **ಉದ್ನಃ**—ಉದಕದಿಂದ | **ಶೀಪಾಲಮಿವ**—ಪಾಚಿಯನ್ನು ಬೇರೆ ಮಾಡುವಂತೆ | **ಬೃಹಸ್ಪತಿಃ**—ಬೃಹಸ್ಪತಿಯು | **ಜ್ಯೋತಿಷಾ**—ತನ ಪ್ರಭೆಯಿಂದ | **ಅಂತರಿಕ್ಷಾತ್**—ಅಂತರಿಕ್ಷದಿಂದ | **ತಮಃ**—ಕತ್ತಲೆಯನ್ನು | **ಅಪಾಜತ್**—ಚದುರಿಸಿದನು | **ವಾತಃ**—ವಾಯುವು | **ಅಭ್ರಮಿವ**—ಮೇಘವನ್ನು ಚದುರಿಸುವಂತೆ | (**ಅಯಂ**—ಬೃಹಸ್ಪತಿಯು) | **ಅನುವೃಶ್ಯ**—ಗೋವುಗಳಿದ್ದೇ ಇರಬೇಕೆಂದು ಊಹಿಸಿ | **ವಲಸ್ಯ**—ವಲನ ಪರ್ವತದಲ್ಲಿ ಅಡಗಿದ್ದ | **ಗಾಃ**—ಗೋವುಗಳನ್ನು | **ಆ ಚಕ್ರೇ**—ಹೊರಕ್ಕೆ ಬರಮಾಡಿದನು.

ಭಾವಾರ್ಥ

ಉದಕದಿಂದ ವಾಯುವು ಪಾಚಿಯನ್ನು ಚದುರಿಸುವಂತೆ ಬೃಹಸ್ಪತಿಯು ತನ್ನ ಪ್ರಭೆಯಿಂದ ಅಂತರಿಕ್ಷದಿಂದ ಕತ್ತಲೆಯನ್ನು ಚದುರಿಸಿದನು. ವಲನ ಪರ್ವತದಲ್ಲಿ ಗೋವುಗಳಿದ್ದೇಯಿರಬೇಕೆಂದೂಹಿಸಿ ಅಲ್ಲಿ ಅಡಗಿದ್ದ ಗೋವುಗಳನ್ನು ವಾಯುವು ಮೇಘವನ್ನು ಚದುರಿಸುವಂತೆ ಹೊರಕ್ಕೆ ಬರಮಾಡಿದನು.

## English Translation

Brihaspati drove away the darkness from the firmament with light as the wind (blows) the shipala from the water, guessing (them to be there) he swept the Vala's cows together to himself as the wind(sweeps) the clouds.

ಸಂಹಿತಾಪಾಠಃ

**ಯದಾ ವಲಸ್ಯ ಪೀಯತೋ ಜಸುಂ ಭೇದ್ಬೃಹಸ್ಪತಿರಗ್ನಿತಪೋಭಿರರ್ಕೈಃ |**
**ದದ್ಭಿರ್ನ ಜಿಹ್ವಾ ಪರಿವಿಷ್ಟಮಾದದಾವಿರ್ನಿಧೀರಕೃಣೋದುಸ್ರಿಯಾಣಾಂ || ೬ ||**

ಪದಪಾಠಃ

ಯದಾ । ವಲಸ್ಯ । ಪೀಯತಃ । ಜಸುಂ । ಭೇತ್ । ಬೃಹಸ್ಪತಿಃ । ಅಗ್ನಿತಪಃऽಭಿಃ । ಅರ್ಕೈಃ ।
ದತ್ऽಭಿಃ । ನ । ಜಿಹ್ವಾ । ಪರಿऽವಿಷ್ಟಂ । ಆದತ್ । ಆವಿಃ । ನಿऽಧೀನ್ । ಅಕೃಣೋತ್ । ಉಸ್ರಿಯಾಣಾಂ॥

ಸಾಯಣಭಾಷ್ಯಂ

ಪೀಯತಃ । ಪೀಯತಿರ್ಹಿಂಸಾಕರ್ಮಾ। ಹಿಂಸಕಸ್ಯ ವಲಸ್ಯ ಜಸುಮಾಯುಧಂ ಯದಾ ಯಸ್ಮಿನ್ಕಾಲೇ ಭೇತ್ ಭಿನತ್ತಿ। ಕೇನ ಸಾಧನೇನ । ಅಗ್ನಿತಪೋಭಿರಗ್ನಿವತ್ತಪನಶೀಲೈರರ್ಕೈರರ್ಚನೀಯೈ ರಶ್ಮಿಭಿಃ ಅಪಿ ವಾ ಮಂತ್ರೈರ್ಭಿನತ್ತಿ । ಕಿಂಚ ದದ್ಭಿಃ ॥ ಪದ್ದನ್ನೋಮಾಸಿತ್ಯಾದಿನಾ ದಂತಶಬ್ದಸ್ಯ ದದ್ಭಾವಃ ॥ ಯಥಾ ದಂತೈಃ ಪರಿವಿಷ್ಟಂ ಭಕ್ಷ್ಯಂ ಜಿಹ್ವಾ ಭಕ್ಷಯತಿ ತದ್ವತ್ಸ ಪರಿವಿಷ್ಟಂ ಪರ್ವತೇ ಪಣಿಭಿಃ ಪರಿವೃತಂ ವಲನಾಮಾನಂ ಯದಾದತ್ ಅಭಕ್ಷಯತ್ ಅವಧೀತ್ ತದಾನೀಂ ತೈರಪಹೃತಾನಾಮುಸ್ರಿಯಾಣಾಂ ಗವಾಂ ನಿಧೀನಾವಿರಕೃಣೋತ್ । ಆವಿರ್ಭೂತಮಕರೋತ್ ॥

ಪ್ರತಿಪದಾರ್ಥ

**ದದ್ಭಿಃ**—ಹಲ್ಲುಗಳ ಮಧ್ಯದಲ್ಲಿರುವ ಭಕ್ಷ್ಯವನ್ನು । **ಜಿಹ್ವಾ ಆದತ್ ನ**—ನಾಲಿಗೆಯು ಸವಿಯುವಂತೆ । **ಪೀಯತಃ**—ಹಿಂಸಕನಾದ । **ವಲಸ್ಯ**—ವಲನೆಂಬ ಅಸುರನ । **ಪರಿವಿಷ್ಟಂ**—ಇತರ ಅಸುರರ ಆಯುಧಗಳಿಂದ ಆವೃತವಾದ । **ಜಸುಂ**—(ವಲನ)ಆಯುಧವನ್ನು । **ಯದಾ**—ಯಾವಾಗ । **ಅಗ್ನಿತಪೋಭಿಃ**—ಅಗ್ನಿಯಂತೆ ದಹಿಸತಕ್ಕವೂ । **ಅರ್ಕೈಃ**—ಪೂಜ್ಯವೂ ಆದ ರಶ್ಮಿಗಳಿಂದ । **ಬೃಹಸ್ಪತಿಃ ಭೇತ್**—ಬೃಹಸ್ಪತಿಯು ನಾಶಮಾಡಿದನೋ ಆಗ । **ಉಸ್ರಿಯಾಣಾಂ**—ಗೋವುಗಳ । **ನಿಧೀನ್**—ಗುಂಪುಗಳನ್ನು । **ಆವಿರಕೃಣೋತ್**—ಗೋಚರವಾಗುವಂತೆ ಮಾಡಿದನು.

ಭಾವಾರ್ಥ

ದಂತಗಳಿಂದ ಆವೃತವಾದ ಭಕ್ಷ್ಯವನ್ನು ನಾಲಿಗೆಯು ಸವಿಯುವಂತೆ ಹಿಂಸಕರಾದ ವಲನೆಂಬ ಅಸುರನ, ಇತರ ಅಸುರರ ಆಯುಧಗಳಿಂದ ಆವೃತವಾದ ಆಯುಧವನ್ನು ಯಾವಾಗ ಅಗ್ನಿಯಂತೆ ದಹಿಸತಕ್ಕವೂ ಪೂಜ್ಯವೂ ಆದ ರಶ್ಮಿಗಳಿಂದ ಬೃಹಸ್ಪತಿಯು ನಾಶಮಾಡಿದನೋ ಆಗ ಗೋವುಗಳ ಗುಂಪುಗಳನ್ನು ಗೋಚರವಾಗುವಂತೆ ಮಾಡಿದನು.

## English Translation

Wheu Brihaspati demolished with rays burning like fire the weapon of the malignant Vala, he devoured him (encompassed hy his followers) as the tongue (consumes) that whieh is encompassed by the teeth; he made manifest the hiding-place of the cows.

ಸಂಹಿತಾಪಾಠಃ

ಬೃಹಸ್ಪತಿರಮತ ಹಿ ತ್ಯದಾಸಾಂ ನಾಮ ಸ್ವರೀಣಾಂ ಸದನೇ ಗುಹಾ ಯತ್ ।

ಆಂಡೇವ ಭಿತ್ವಾ ಶಕುನಸ್ಯ ಗರ್ಭಮುದುಸ್ರಿಯಾಃ ಪರ್ವತಸ್ಯ ತ್ಮನಾಜತ್ ॥

ಪದಪಾಠಃ

ಬೃಹಸ್ಪತಿಃ । ಅಮತ । ಹಿ । ತ್ಯತ್ । ಆಸಾಂ । ನಾಮ । ಸ್ವರೀಣಾಂ । ಸದನೇ । ಗುಹಾ । ಯತ್ ।

ಆಂಡಾಽಇವ । ಭಿತ್ವಾ । ಶಕುನಸ್ಯ । ಗರ್ಭಂ । ಉತ್ । ಉಸ್ರಿಯಾಃ । ಪರ್ವತಸ್ಯ । ತ್ಮನಾ । ಆಜತ್ ॥

ಸಾಯಣಭಾಷ್ಯಂ

ಬೃಹಸ್ಪತಿರ್ಗುಹಾ ಗುಹಾಯಾಂ ಸದನೇ ಸ್ಥಾನೇ ಸ್ವರೀಣಾಂ ಶಬ್ದಾಯಮಾನಾನಾಮಾಸಾಂ ಗವಾಂ ತ್ಯತ್ತತ್ಪ್ರಸಿದ್ಧಂ ನಾಮ ನಾಮಧೇಯಂ ಯದ್ಯದಾಮತ ಹಿ ಜ್ಞಾತವಾನ್ಖಲು ॥ ಮನು ಅವಬೋಧನೇ। ಲುಙಿ ತನಾದಿಭ್ಯಸ್ತಥಾಸೋಃ । ಪಾ. ೨-೪-೭೯ । ಇತಿ ಸಿಚೋ ಲುಕ್ ॥ ತದಾನೀಂ ಪರ್ವತಸ್ಯಾಂತಃಸ್ಥಿತಾ ಉಸ್ರಿಯಾ ಗಾಸ್ತ್ಮನಾತ್ಮನೈವಾಸಹಾಯೇನ ಪರ್ವತಂ ಭಿತ್ವೋದಾಜತ್ । ಉದಗಮಯತ್ । ತತ್ರ ದೃಷ್ಟಾಂತಃ । ಆಂಡೇವ ಯಥಾ ಶಕುನಸ್ಯ ಪಕ್ಷಿಣ ಆಂಡಾನಿ ಭಿತ್ವಾ ತತ್ರ ಸ್ಥಿತಂ ಗರ್ಭಮುದ್ಗಮಯತಿ ತದ್ವತ್ ॥

ಪ್ರತಿಪದಾರ್ಥ

**ಗುಹಾ**—ಪರ್ವತದ ಗುಹೆಯ । **ಸದನೇ**—ಸ್ಥಾನದಲ್ಲಿ । **ಸ್ವರೀಣಾಂ**—ಶಬ್ದಮಾಡತಕ್ಕ । **ಆಸಾಂ**—ಗೋವುಗಳ । **ತ್ಯತ್**—ಪ್ರಸಿದ್ಧವಾದ । **ನಾಮ**—ಹೆಸರನ್ನು । **ಯತ್**—ಯಾವಾಗ । **ಬೃಹಸ್ಪತಿಃ**—ಬೃಹಸ್ಪತಿಯು **ಅಮತ ಹಿ**—ತಿಳಿದನೋ ಆಗ । **ಶಕುನಸ್ಯ**—ಪಕ್ಷಿಯ । **ಆಂಡೇವ ಗರ್ಭಂ**—ಮೊಟ್ಟೆಯನ್ನು ಒಡೆದು ಒಳಗಿನ ಸತ್ವವನ್ನು ಹೊರಕ್ಕೆ ಬರಮಾಡುವಂತೆ। **ಪರ್ವತಸ್ಯ**—ಪರ್ವತದ ಒಳಗಿದ್ದ । **ಉಸ್ರಿಯಾಃ**—ಗೋವುಗಳನ್ನು । **ತ್ಮನಾ**—ಇತರರ ಸಹಾಯವಿಲ್ಲದೆ । **ಭಿತ್ವಾ**—(ಶಿಲೆಗಳನ್ನು) ಒಡೆದು । **ಉದಾಜತ್**—ಹೊರಕ್ಕೆ ಬರಮಾಡಿದನು.

ಭಾವಾರ್ಥ

ಪರ್ವತದಗುಹೆಯಲ್ಲಿ ಅಡಗಿ ಶಬ್ದಮಾಡುತ್ತಿದ್ದ ಗೋವುಗಳ ಪ್ರಸಿದ್ಧವಾದಹೆಸರನ್ನು ಬೃಹಸ್ಪತಿಯು ಯಾವಾಗ ತಿಳಿದನೋ ಆಗ ಪಕ್ಷಿಯ ಮೊಟ್ಟೆಯನ್ನು ಒಡೆದು ಒಳಗಿನ ಸತ್ವವನ್ನು ಹೊರಕ್ಕೆ ಬರಮಾಡುವಂತೆ ಪರ್ವತದ ಶಿಲೆಗಳನ್ನು ಒಡೆದು ಒಳಗಿದ್ದ ಗೋವುಗಳನ್ನು ಇತರರ ಸಹಾಯವಿಲ್ಲದೆ ತಾನೇ ಹೊರಕ್ಕೆ ಬರಮಾಡಿದನು.

English Translalion

When Brihaspati had discovered that name of the lowing cows in their place in the cave; by his own strength he extricated the cattle from the rock as (breaking) the eggs of a bird (one extricates) the embryo.

ಸಂಹಿತಾಪಾಠಃ

ಅಶ್ನಾಪಿನದ್ಧಂ ಮಧು ಪರ್ಯಪಶ್ಯನ್ಮತ್ಸ್ಯಂ ನ ದೀನ ಉದನಿ ಕ್ಷಿಯಂತಂ ।

ನಿಷ್ಟಜ್ಜಭಾರ ಚಮಸಂ ನ ವೃಕ್ಷಾದ್ಬೃಹಸ್ಪತಿರ್ವಿರವೇಣಾ ವಿಕೃತ್ಯ ॥ ೮ ॥

ಪದಪಾಠಃ

ಅಶ್ನಾ । ಅಪಿऽನದ್ಧಂ । ಮಧು । ಪರಿ । ಅಪಶ್ಯತ್ । ಮತ್ಸ್ಯಂ । ನ ದೀನೇ । ಉದನಿ । ಕ್ಷಿಯಂತಂ ।
ನಿಃ । ತತ್ । ಜಭಾರ । ಚಮಸಂ । ನ । ವೃಕ್ಷಾತ್ । ಬೃಹಸ್ಪತಿಃ । ವಿऽರವೇಣ । ವಿऽಕೃತ್ಯ ॥ ೮ ॥

ಸಾಯಣಭಾಷ್ಯಂ

ಬೃಹಸ್ಪತಿರಶ್ನಾಶ್ಮನಾ ವ್ಯಾಪ್ತಯಾ ಶಿಲಯಾಪಿನದ್ಧಂ ಪಿಹಿತಂ ಮಧು ಗೋಲಕ್ಷಣಂ ಪರ್ಯಪಶ್ಯತ್ । ಪರಿತೋಽದ್ರಾಕ್ಷೀತ್ । ತತ್ರ ದೃಷ್ಟಾಂತಃ । ಮತ್ಸ್ಯಂ ನ ಯಥಾ ದೀನೇ ಶುಷ್ಕ ಉದನಿ ॥ ಉದಕಶಬ್ದಸ್ಯೋದನ್ನಾದೇಶಃ । ಉದಕೇ ಕ್ಷಿಯಂತಂ ನಿವಸಂತಂ ಮತ್ಸ್ಯಂ ಯಥಾ ಪಶ್ಯತಿ ತದ್ವತ್ ॥ ದೃಷ್ಟ್ವಾ ಚ ತದ್ಗೋಲಕ್ಷಣಂ ಮಧು ವಿರವೇಣ ವಿವಿಧೇನ ಶಬ್ದೇನ ವಿಕೃತ್ಯ ವಲಂ ಭಿತ್ವಾ ನಿರ್ಜಭಾರ । ಕಥಮಿವ । ಚಮಸಂ ನ । ಚಮಂತಿ ಭಕ್ಷಯಂತ್ಯತ್ರೇತಿ ಚಮಸಃ ಸೋಮಪಾತ್ರಂ । ತಂ ಯಥಾ ವೃಕ್ಷಾನ್ನಿರ್ಹರತಿ ತದ್ವತ್ ॥ ಹರತೇರ್ಲಿಟಿ ರೂಪಂ । ಹೃಗ್ರಹೋರ್ಭಃ ॥

ಪ್ರತಿಪದಾರ್ಥ

**ದೀನೇ ಉದನಿ**—ಶುಷ್ಕವಾದ ನೀರುಳ್ಳ ಕೊಳವಲ್ಲಿ । **ಕ್ಷಿಯಂತಂ**—ವಾಸಿಸುವ । **ಮತ್ಸ್ಯಂ ನ**—ಮೀನಿನಂತೆ । **ಅಶ್ನಾ**—ಸುತ್ತಲೂ ವ್ಯಾಪಿಸಿರುವ ಶಿಲೆಯಿಂದ । **ಅಪಿನದ್ಧಂ**—ಮುಚ್ಚಲ್ಪಟ್ಟ । **ಮಧು**—ಗೋವನ್ನು । **ಬೃಹಸ್ಪತಿಃ**—ಬೃಹಸ್ಪತಿಯು । **ಪರ್ಯಪಶ್ಯತ್**—ನೋಡಿದನು । **ವೃಕ್ಷಾತ್**—ವೃಕ್ಷವನ್ನು ಕತ್ತರಿಸಿ ಅದರಿಂದ । **ಚಮಸಂ ನ**—ಚಮಸ ಪಾತ್ರೆಯನ್ನು ಸಿದ್ಧಪಡಿಸುವಂತೆ । **ವಿರವೇಣ**—ತನ್ನ ಶಬ್ದದಿಂದ । **ವಿಕೃತ್ಯ**—ವಲನನ್ನು ಸೀಳಿ । **ತತ್**—ಗೋರೂಪವಾದ ಮಧುವನ್ನು । **ನಿರ್ಜಭಾರ**—ಹೊರಕ್ಕೆ ಬರಮಾಡಿದನು.

ಭಾವಾರ್ಥ

ಶುಷ್ಕವಾದ ನೀರುಳ್ಳ ಕೊಳವಲ್ಲಿ ವಾಸಿಸುವ ಮೀನನ್ನು ಸುಲಭವಾಗಿ ನೋಡುವಂತೆ ಸುತ್ತಲೂ ಶಿಲೆಯಿಂದ ಮುಚ್ಚಲ್ಪಟ್ಟ ಗೋವನ್ನು ಬೃಹಸ್ಪತಿಯು ನೋಡಿದನು. ವೃಕ್ಷವನ್ನು ಕತ್ತರಿಸಿ ಅದರಿಂದ ಚಮಸಪಾತ್ರೆಯನ್ನು ಸಿದ್ಧಪಡಿಸುವಂತೆ ತನ್ನ ಘರ್ಜನೆ ಶಬ್ದದಿಂದ ವಲನನ್ನು ಸೀಳಿ ಗೋರೂಪವಾದ ಮಧುವನ್ನು ಹೊರಕ್ಕೆ ಬರಮಾಡಿದನು.

English Translation

Brihaspati looked round upon the cows shut up in the cave like fish in a dried-up pool, he seized Vala with a shout, cutting him off like a bowl from a tree.

ವಿಶೇಷವಿಷಯಗಳು

ಸಾಯಣರು ಈ ಋಕ್ಕಿಗೆ ವಿವರಿಸಿರುವ ಅರ್ಥಕ್ಕೂ ಯಾಸ್ಕರು ವಿವರಿಸಿರುವ ಅರ್ಥಕ್ಕೂ ವ್ಯತ್ಯಾಸವಿರುವುದು. ಯಾಸ್ಕರು ಬೃಹಸ್ಪತಿಶಬ್ದದ ನಿರ್ವಚನವನ್ನು ಹೇಳುತ್ತಾ—

**ಬೃಹಸ್ಪತಿಃ। ಬೃಹಸ್ಪತಿರ್ಬೃಹತಃ ಪಾತಾ ವಾ ಪಾಲಯಿತಾ ವಾ। ತಸ್ಯೈಷಾ ಭವತಿ। ಅಶ್ನಾಪಿನದ್ಧಂ ಮಧು ಪರ್ಯಪಶ್ಯನ್ಮತ್ಸ್ಯಂ ನ ದೀನ ಉದನಿ ಕ್ಷಿಯಂತಂ । ನಿಷ್ಟಜ್ಜಭಾರ ಚಮಸಂ ನ ವೃಕ್ಷಾ–**

ದ್ಬೃಹಸ್ಪತಿರ್ವಿರವೇಣಾ ವಿಕೃತ್ಯ || ಅಶನವತಾ ಮೇಘೇನಾಪಿನದ್ಧಂ ಮಧು ಪರ್ಯಪಶ್ಯನ್ಮತ್ಸ್ಯ-ಮಿವ ದೀನ ಉದಕೇ ನಿವಸಂತಂ ನಿರ್ಜಹಾರ ತಚ್ಚಮಸಮಿವ ವೃಕ್ಷಾತ್ | ಚಮಸಃ ಕಸ್ಮಾತ್ ಚಮಂತ್ಯಸ್ಮಿನ್ನಿತಿ | ಬೃಹಸ್ಪತಿರ್ವಿರವೇಣ ಶಬ್ದೇನ ವಿಕೃತ್ಯ ||

( ನಿ. ೧೦-೧೨ )

ಎಂದರೆ ದೊಡ್ಡದಾದ ಈ ಜಗತ್ತಿಗೆ ಅಥವಾ ಉದಕಕ್ಕೆ ಪಾಲಕನಾದುದರಿಂದ ಇವನಿಗೆ ಬೃಹಸ್ಪತಿಯೆಂಬ ಹೆಸರು. ಇವನ ಕರ್ಮವನ್ನು ವಿವರಿಸುವ ಅಶ್ನಾಪಿನದ್ಧಂ ಎಂಬ ಋಕ್ಕಿನ ವಿವರಣೆಯು ಈ ರೀತಿ ಇರುವುದು. ಸರ್ವತ್ರ ವ್ಯಾಪಿಸಿರುವ ಈ ಮೇಘದಿಂದ (ತನ್ನ ಒಳಭಾಗದಲ್ಲಿ ಅಥವಾ ಮಧ್ಯದಲ್ಲಿ) ಬಂಧಿತವಾಗಿರುವ ಎಂದರೆ ಯಾರಿಗೂ ಕಾಣದಂತೆ ಆಚ್ಛಾದಿತವಾಗಿರುವ ಉದಕವನ್ನು(ಮಧು)ಈ ಬೃಹಸ್ಪತಿಯು ನೋಡಿದನು. ಹೇಗೆ ನೋಡಿದನು ಎಂದರೆ ಆಳವಿಲ್ಲದ ನೀರಿನಲ್ಲಿ ಇರುವ ಮೀನನ್ನು ಯಾವರೀತಿ ಸುಲಭವಾಗಿ ನೋಡಬಹುದೋ ಅದರಂತೆ ಮೇಘಮಧ್ಯದಲ್ಲಿರುವ ಮಧುವನ್ನು ಎಂದರೆ ನೀರನ್ನು ಬೃಹಸ್ಪತಿಯು ನೋಡಿದನು ಮತ್ತು ವೃಕ್ಷದಿಂದ (ಮರದಿಂದ) ಚಮಸಪಾತ್ರೆಯನ್ನು ನಿರ್ಮಿಸಿ ತರುವಂತೆ ಮೇಘಮಧ್ಯದಲ್ಲಿದ್ದ ನೀರನ್ನು ಭಯಂಕರವಾದ ಶಬ್ದದಿಂದ(ಘರ್ಜನೆ ಅಥವಾ ಉಚ್ಚಧ್ವನಿಯಲ್ಲಿ ಪಠಿಸುವ ಮಂತ್ರಗಳಿಂದ) ಭೂಮಿಯಮೇಲೆ ತಂದನು ಎಂದರೆ ವೃಷ್ಟಿರೂಪದಿಂದ ಬೀಳುವಂತೆ ಮಾಡಿದನು. ಇಲ್ಲಿ **ಚಮಸ** ವೆಂದರೇನು ಎಂದರೆ ಚಮಸಶಬ್ದವು **ಚಮ್** ಭಕ್ಷಿಸು ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದು. ಈ ಚಮಸಪಾತ್ರೆಯಲ್ಲಿ ಸೋಮರಸವನ್ನು ಭಕ್ಷಿಸುವುದರಿಂದ ಎಂದರೆ ಪಾನಮಾಡುವುದರಿಂದ ಇದಕ್ಕೆ **ಚಮಸ**ವೆಂಬ ಹೆಸರು ಬಂದಿದೆ ಎಂದು ನಿರ್ವಚನಾಭಿಪ್ರಾಯವು.

ಸಂಹಿತಾಪಾಠಃ

**ಸೋಷಾಮವಿಂದತ್ಸಃ ಸ್ವ೧ಃಸೋ ಅಗ್ನಿಂ ಸೋ ಅರ್ಕೇಣ ವಿ ಬಬಾಧೇ ತಮಾಂಸಿ|**
**ಬೃಹಸ್ಪತಿರ್ಗೋವಪುಷೋ ವಲಸ್ಯ ನಿರ್ಮಜ್ಜಾನಂ ನ ಪರ್ವಣೋ ಜಭಾರ ||**

ಪದಪಾಠಃ

**ಸಃ | ಉಷಾಂ | ಅವಿಂದತ್ | ಸಃ | ಸ್ವ೧ರಿತಿ ಸ್ವಃ | ಸಃ | ಅಗ್ನಿಂ | ಸಃ | ಅರ್ಕೇಣ | ವಿ | ಬಬಾಧೇ | ತಮಾಂಸಿ |**
**ಬೃಹಸ್ಪತಿಃ | ಗೋಽವಪುಷಃ | ವಲಸ್ಯ | ನಿಃ | ಮಜ್ಜಾನಂ | ನ | ಪರ್ವಣಃ | ಜಭಾರ || ೯ ||**

ಸಾಯಣಭಾಷ್ಯಂ

ಸ ಬೃಹಸ್ಪತಿಸ್ತತ್ರ ಪರ್ವತವಿವರೇ ಗವಾಂ ದರ್ಶನಾಯೋಷಾಮುಷಸಮವಿಂದತ್ | ಅಲಭತ | ಸ ಏವ ಸ್ವರಾದಿತ್ಯಂ ಸೋಽಗ್ನಿಂ ಲಬ್ಧ್ವಾರ್ಕೇಣಾರ್ಚನೀಯೇನ ತೇಜಸಾ ತಮಾಂಸಿ ವಿ ಬಬಾಧೇ | ಅತ್ಯರ್ಥಂ ಬಾಧಿತವಾನ್ | ತತಃ ಸ ಗೋವಪುಷೋ ಗೋರೂಪಶರೀರಸ್ಯ ಪಶುಭಿಃ ಪರಿವೃತಸ್ಯ ವಲಸ್ಯ ಪರ್ವಣಃ ಪರ್ವತಾತ್ತಾ ಗಾ ನಿರ್ಜಭಾರ | ಬಲೇನ ನಿರ್ಜಹಾರ | ಬಲಾದಾಹರಣೇ ದೃಷ್ಟಾಂತಃ | ಮಜ್ಜಾನಂ ನ ಪರ್ವಣಃ ಅಸ್ಥ್ನೋ ಮಜ್ಜಾನಂ ಯಥಾತಿಕ್ಲೇಶೇನ ನಿರ್ಹರಂತಿ ತದ್ವತ್ ||

ಪ್ರತಿಪದಾರ್ಥ

**ಸಃ ಬೃಹಸ್ಪತಿಃ**—ಆ ಬೃಹಸ್ಪತಿಯು | **ಉಷಾಂ**—ಉಷಸ್ಸನ್ನೂ | **ಅವಿಂದತ್**—ಹೊಂದಿದನು | **ಸಃ**—ಅವನು | **ಸ್ವಃ**—ಆದಿತ್ಯನನ್ನೂ | **ಸಃ**—ಅವನು | **ಅಗ್ನಿಂ**—ಅಗ್ನಿಯನ್ನೂ ಪಡೆದು | **ಅರ್ಕೇಣ**—ಪೂಜ್ಯವಾದ ತೇಜಸ್ಸಿನಿಂದ | **ತಮಾಂಸಿ**—ಕತ್ತಲೆಗಳನ್ನು | **ವಿ ಬಬಾಧೇ**—ನಾಶಪಡಿಸಿದನು | **ಪರ್ವಣಃ**—ಮೂಳೆಗಳ ಅಂತಃ ಪ್ರವೇಶದಿಂದ | **ಮಜ್ಜಾನಂ ನ**—ಕೊಬ್ಬನ್ನು ಹೊರಕ್ಕೆ ಬರಮಾಡುವಂತೆ | **ಗೋವಪುಷಃ**—ಗೋರೂಪವಾದ ಶರೀರದಿಂದ ವ್ಯಾಪ್ತನಾದ | **ವಲಸ್ಯ**—ವಲನ | **ಪರ್ವಣಃ**—ಪರ್ವತದಿಂದ | **ನಿರ್ಜಭಾರ**—ಗೋವುಗಳನ್ನು ಶ್ರಮಪಟ್ಟು ಹೊರಕ್ಕೆ ಬರುವಂತೆ ಮಾಡಿದನು.

ಭಾವಾರ್ಥ

ಗೋದರ್ಶನಕ್ಕೆ ಸಹಾಯಮಾಡಲು ಬೃಹಸ್ಪತಿಯು ಉಷಸ್ಸನ್ನೂ ಆದಿತ್ಯನನ್ನೂ, ಅಗ್ನಿಯನ್ನೂ ಹೊಂದಿ ಅವುಗಳ ಪೂಜ್ಯವಾದ ತೇಜಸ್ಸಿನಿಂದ ಕತ್ತಲೆಗಳನ್ನು ನಾಶಪಡಿಸಿದನು. ಮೂಳೆಗಳ ಅಂತಃಪ್ರದೇಶದಿಂದ ಕೊಬ್ಬನ್ನು ಕಷ್ಟದಿಂದ ಹೊರಕ್ಕೆ ಬರುವಹಾಗೆ ಮಾಡುವಂತೆ, ಗೋರೂಪವಾದ ಶರೀರದಿಂದ ವ್ಯಾಪ್ತನಾಗ ವಲನ ಪರ್ವತದಿಂದ ಗೋವುಗಳನ್ನು ಶ್ರಮಪಟ್ಟು ಹೊರಕ್ಕೆ ಬರುವಂತೆ ಮಾಡಿದನು.

English Translation

Brihaspati found the dawn, the sun, Agni; he dispersed the gloom with light; he seized (the cattle from the rock) of Vala surrounded by the cows as (one extracts) marrow from a bone.

ಸಂಹಿತಾಪಾಠಃ

ಹಿಮೇವ ಪರ್ಣಾ ಮುಷಿತಾ ವನಾನಿ ಬೃಹಸ್ಪತಿನಾಕೃಪಯದ್ವಲೋ ಗಾಃ ।
ಅನಾನುಕೃತ್ಯಮಪುನಶ್ಚಕಾರ ಯಾತ್ಸೂರ್ಯಾಮಾಸಾ ಮಿಥ ಉಚ್ಚರಾತಃ ॥

ಪದಪಾಠಃ

ಹಿಮಾಽಇವ । ಪರ್ಣಾ । ಮುಷಿತಾ । ವನಾನಿ । ಬೃಹಸ್ಪತಿನಾ । ಅಕೃಪಯತ್ । ವಲಃ । ಗಾಃ ।
ಅನನುಽಕೃತ್ಯಂ । ಅಪುನರಿತಿ । ಚಕಾರ । ಯಾತ್ । ಸೂರ್ಯಾಮಾಸಾ । ಮಿಥಃ । ಉತ್ಽಚರಾತಃ ॥

ಸಾಯಣಭಾಷ್ಯಂ

**ಹಿಮೇವ ಯಥಾ ಹಿಮೇನ ಪರ್ಣಾ ಪರ್ಣಾನಿ ಪದ್ಮಪತ್ರಾಣಿ ಮುಷಿತಾ ಮುಷಿತಾನಿ ಭವಂತಿ ತದ್ವದ್ವಲೇನ ವನಾನಿ ವನನೀಯಾನಿ ಗೋಧನಾನಿ ಮುಷಿತಾನ್ಯಭೂವನ್ । ಅಥ ಗವಾಮನ್ವೇಷಣಾಯ ಬೃಹಸ್ಪತಿನಾಗತೇನ ಹೇತುನಾ ವಲೋಽಕೃಪಯತ್ । ಅಸ್ಮೈ ತಾ ಮುಷಿತಾ ಗಾಃ ಪ್ರಾಯಚ್ಛತ್ । ತತ್ರಾನನುಕೃತ್ಯಮನನುಕರಣೀಯಮಪುನಃಕರ್ತವ್ಯಂ ಚ ತತ್ಕರ್ಮ ಚಕಾರ । ಯಥಾ ತತ್ಪಶ್ಚಾತ್ಕರ-**

**ಣೀಯಂ ನ ಭವತಿ ಯಥಾ ಪುನರಕರಣೀಯಂ ತಥಾಕಾರ್ಷೀದಿರ್ಥಃ। ಕಿಂ ತದಿತಿ ಆಹ। ಸೂರ್ಯಾ-ಮಾಸಾ ಸೂರ್ಯಾಚಂದ್ರಮಸೌ ಮಿಥಃ ಪರಸ್ಪರಮಹೋರಾತ್ರಯೋರುಚ್ಚರಾತ ಉಚ್ಚರತ ಇತಿ ಯಾತ್ ತಚ್ಚಕಾರ॥ ಯಾದಿತಿ ದೀರ್ಘಶ್ಛಾಂದಸಃ॥**

ಪ್ರತಿಪದಾರ್ಥ

**ಪರ್ಣಾ**—ವೃಕ್ಷದ ಎಲೆಗಳು। **ಹಿಮೇವ ಮುಷಿತಾ**–ಹಿಮದಿಂದ ಅಪಹೃತವಾಗುವಂತೆ। **ಬೃಹಸ್ಪತಿನಾ**-ಬೃಹಸ್ಪತಿಯಿಂದ। **ವನಾನಿ**—ಆಕರ್ಷಕವಾದ ಗೋವುಗಳು (ವಲನಿಂದ) ಅಪಹರಿಸಲ್ಪಟ್ಟವು। **ಬೃಹಸ್ಪತಿನಾ**—ಬೃಹಸ್ಪತಿಯು ಬಂದೊಡನೆಯೇ। **ವಲಃ**—ವಲನು। **ಗಾಃ**—ಆ ಗೋವುಗಳನ್ನು। **ಅಕೃಪಯತ್**—ಅವನಿಗೆ ಒಪ್ಪಿಸಿಬಿಟ್ಟನು। **ಯಾತ್**—ಯಾವ ಅವನ ಶಕ್ತಿಯಿಂದ। **ಸೂರ್ಯಾಮಾಸಾ**—ಸೂರ್ಯ ಮತ್ತು ಚಂದ್ರರು। **ಮಿಥಃ**—ಪರಸ್ಪರ ಪರ್ಯಾಯರೂಪದಲ್ಲಿ। **ಉಚ್ಚರಾತಃ**—ಸಂಚರಿಸುವರೋ ಅಂತಹ। **ಅನನುಕೃತ್ಯಂ**—ಇನ್ನೊಬ್ಬರಿಂದ ಅನುಕರಿಸಲ್ಪಡದೇ ಇರುವುದೂ। **ಅಪುನಃ**—ಪುನಃ ಮಾಡಲು ಸಾಧ್ಯವಿಲ್ಲದಿರುವುದೋ ಆ ಕಾರ್ಯವನ್ನು। **ಚಕಾರ**—ನೆರವೇರಿಸಿದನು.

ಭಾವಾರ್ಥ

ವೃಕ್ಷದ ಎಲೆಗಳು ಹಿಮದಿಂದ ಅಪಹೃತವಾಗುವಂತೆ ಬೃಹಸ್ಪತಿಯಿಂದ ಆಕರ್ಷಕವಾದ ಗೋವುಗಳು (ವಲನಿಂದ) ಅಪಹರಿಸಲ್ಪಟ್ಟವು. ಬೃಹಸ್ಪತಿಯು ಬಂದೊಡನೆಯೇ ವಲನು ಆ ಗೋವುಗಳನ್ನು ಅವನಿಗೆ ಒಪ್ಪಿಸಿಬಿಟ್ಟನು. ಯಾವ ಅವನ ಶಕ್ತಿಯಿಂದ ಸೂರ್ಯ ಮತ್ತು ಚಂದ್ರರು ಪರಸ್ಪರಪರ್ಯಾಯರೂಪದಲ್ಲಿ ಸಂಚರಿಸುವಂತೆ ಆಗಿರುವರೋ ಅಂತಹ ಇನ್ನೊಬ್ಬರಿಂದ ಅನುಕರಿಸಲ್ಪಡದೇ ಇರುವುದೂ, ಪುನಃ ಮಾಡಲ್ಪಡಲು ಸಾಧ್ಯವಿಲ್ಲದಿರುವುದೂ ಆದ ಕಾರ್ಯವನ್ನು ಬೃಹಸ್ಪತಿಯು ನೆರವೇರಿಸಿದ್ದಾನೆ.

## English Translation

As the trees (bemoan) their leaves carried off by the winter, so Vala bemoaned his cows (carried off) by Brihaspati; he did that which cannot be imitated, which cannot be repeated, whereby sun and moon mutually rise (day and night).

ಸಂಹಿತಾಪಾಠಃ

**ಅಭಿ ಶ್ಯಾವಂ ನ ಕೃಶನೇಭಿರಶ್ವಂ ನಕ್ಷತ್ರೇಭಿಃ ಪಿತರೋ ದ್ಯಾಮಪಿಂಶನ್।**
**ರಾತ್ರ್ಯಾಂ ತಮೋ ಅದಧುರ್ಜ್ಯೋತಿರಹನ್ಬೃಹಸ್ಪತಿರ್ಭಿನದದ್ರಿಂ ವಿದದ್ಗಾಃ॥**

ಪದಪಾಠಃ

**ಅಭಿ। ಶ್ಯಾವಂ। ನ। ಕೃಶನೇಭಿಃ। ಅಶ್ವಂ। ನಕ್ಷತ್ರೇಭಿಃ। ಪಿತರಃ। ದ್ಯಾಂ। ಅಪಿಂಶನ್।**
**ರಾತ್ರ್ಯಾಂ। ತಮಃ। ಅದಧುಃ। ಜ್ಯೋತಿಃ। ಅಹನ್। ಬೃಹಸ್ಪತಿಃ। ಭಿನತ್। ಅದ್ರಿಂ। ವಿದತ್। ಗಾಃ॥**

ಸಾಯಣಭಾಷ್ಯಂ

ಪಿತರಃ ಪಾಲಯಿತಾರೋ ದೇವಾ ದ್ಯಾಂ ದ್ಯುಲೋಕಂ ನಕ್ಷತ್ರೇಭಿರಾಶ್ವಿನ್ಯಾದಿಭಿರಭ್ಯಪಿಂಶನ್ । ಅಭಿತೋಽದೀಪಯನ್ ॥ ಪಿಶ ಅವಯವೇ । ಅಯಂ ದೀಪನಾರ್ಥೋ ವರ್ತತೇ ॥ ತತ್ರ ದೃಷ್ಟಾಂತಃ । ಶ್ಯಾವಂ ನ ಯಥಾ ಶ್ಯಾವವರ್ಣಮಶ್ವಂ ಕೃಶನೇಭಿಃ ಸೌವರ್ಣೈರಾಭರಣೈರಲಂಕುರ್ವಂತಿ ತದ್ವತ್ । ತಥಾ ರಾತ್ರ್ಯಾಂ ತಮೋ ನಿಹಿತವಂತಃ । ಕಿಂಚಾಹನ್ನಹ್ನಿ ಜ್ಯೋತಿರಾದಿತ್ಯಾಖ್ಯಮದಧುಃ ॥ ಅದಧುರಿತ್ಯುತ್ತರವಾಕ್ಯೇನ ಸಂಬಂಧಃ ಕರಣೀಯಃ । ಅನ್ಯಥಾ ಸ್ವರೋ ನ ಘಟೇತ । ಅತ್ರ ತು ವಾಕ್ಯಭೇದಾದನಿಘಾತಃ ॥ ಯದಾ ಬೃಹಸ್ಪತಿರದ್ರಿಂ ವಲೇನಾಧಿಷ್ಠಿತಂ ಶಿಲೋಚ್ಚಯಂ ಭಿನತ್ ಅಭಿನತ್ ವಿಭಿದ್ಯ ಚ ತತ್ರ ಸ್ಥಿತಾನ್ಗಾಃ ಪಶೂನ್ವಿದತ್ ಅವಿದತ್ ಅಲಭತ ॥ ವಿದೇರ್ಲುಙಿ ಲೃದಿತ್ವಾದಙ್ ॥ ತದಾ ದೇವಾ ಏವಮಕಾರ್ಷುರಿತ್ಯರ್ಥಃ ॥

ಪ್ರತಿಪದಾರ್ಥ

**ಶ್ಯಾವಂ**—ಹೊಂಬಣ್ಣದ । **ಅಶ್ವಂ**—ಅಶ್ವವನ್ನು । **ಕೃಶನೇಭಿಃ ನ**—ಸುವರ್ಣಾಭರಣಗಳಿಂದ ಅಲಂಕರಿಸುವಂತೆ । **ಪಿತರಃ**—ಜಗತ್ಪಾಲಕರಾದ ದೇವತೆಗಳು । **ದ್ಯಾಂ**—ದ್ಯುಲೋಕವನ್ನು । **ನಕ್ಷತ್ರೇಭಿಃ**—ಅಶ್ವಿನ್ಯಾದಿ ನಕ್ಷತ್ರಗಳಿಂದ । **ಅಭ್ಯಪಿಂಶನ್**—ಅಲಂಕರಿಸಿದ್ದಾರೆ । **ರಾತ್ರ್ಯಾಂ**—ರಾತ್ರಿಯಲ್ಲಿ । **ತಮಃ**—ಕಗ್ಗತ್ತಲೆಯನ್ನು ಸ್ಥಾಪಿಸಿದ್ದಾರೆ । **ಅಹನ್**—ಅಹಸ್ಸಿನಲ್ಲಿ । **ಜ್ಯೋತಿಃ**—ಬೆಳಕನ್ನು । **ಅದಧುಃ**—ಸ್ಥಾಪಿಸಿದ್ದಾರೆ । **ಬೃಹಸ್ಪತಿಃ**—ಬೃಹಸ್ಪತಿಯು । **ಅದ್ರಿಂ**—ಪರ್ವತವನ್ನು । **ಭಿನತ್**—ಸೀಳಿದನು । **ಗಾಃ**—ಪಶುಗಳನ್ನು । **ವಿದತ್**—ಹೊಂದಿದನು.

ಭಾವಾರ್ಥ

ಹೊಂಬಣ್ಣದ ಅಶ್ವವನ್ನು ಸುವರ್ಣಾಭರಣಗಳಿಂದ ಅಲಂಕರಿಸುವಂತೆ ಜಗತ್ಪಾಲಕರಾದ ದೇವತೆಗಳು ದ್ಯುಲೋಕವನ್ನು ಅಶ್ವಿನ್ಯಾದಿ ನಕ್ಷತ್ರಗಳಿಂದ ಅಲಂಕರಿಸಿದ್ದಾರೆ. ಅವರು ರಾತ್ರಿಯಲ್ಲಿ ಕತ್ತಲೆಯನ್ನೂ, ಹಗಲಿನಲ್ಲಿ ಬೆಳಕನ್ನೂ ಸ್ಥಾಪಿಸಿದ್ದಾರೆ. ಬೃಹಸ್ಪತಿಯು ಈ ಬೆಳಕಿನ ಸಹಾಯದಿಂದ ಪರ್ವತವನ್ನು ಸೀಳಿದನು. ಪಶುಗಳನ್ನು ಹೊಂದಿದನು.

English Translation

The protecting (deities) have decorated the heaven with constellations as (men decorate) a brown horse with golden trappings: they established darkness in the night and light in the day; Brihaspati fractured the rock and recovered the cows.

ಸಂಹಿತಾಪಾಠಃ

ಇದಮಕರ್ಮ ನಮೋ ಅಭ್ರಿಯಾಯ ಯಃ ಪೂರ್ವೀರನ್ವಾನೋನವೀತಿ ।
ಬೃಹಸ್ಪತಿಃ ಸ ಹಿ ಗೋಭಿಃ ಸೋ ಅಶ್ವೈಃ ಸ ವೀರೇಭಿಃ ಸ ನೃಭಿರ್ನೋ
ವಯೋ ಧಾತ್ ॥ ೧೨ ॥

ಪದಪಾಠಃ

ಇದಂ । ಅಕರ್ಮ । ನಮಃ । ಅಭ್ರಿಯಾಯ । ಯಃ । ಪೂರ್ವೀಃ । ಅನು । ಆऽನೋನವೀತಿ ।

ಬೃಹಸ್ಪತಿಃ । ಸಃ । ಹಿ । ಗೋಭಿಃ । ಸಃ । ಅಶ್ವೈಃ । ಸಃ । ವೀರೇಭಿಃ । ಸಃ । ನೃऽಭಿಃ । ನಃ । ವಯಃ । ಧಾತ್ ॥ ೧೨ ॥

ಸಾಯಣಭಾಷ್ಯಂ

ಅಭ್ರಿಯಾಯಾಭ್ರೇಷು ಭವಾಯಾಂತರಿಕ್ಷ್ಯಾಯ ಮಧ್ಯಮಾಯ ಬೃಹಸ್ಪತಯೇ ಇದಮುಕ್ತಂ ನಮಃ ಸ್ತೋತ್ರಮಕರ್ಮ । ವಯಮಕಾರ್ಷ್ಮ । ಯೋ ಬೃಹಸ್ಪತಿಃ ಪೂರ್ವೀರ್ಬಹ್ವೀರ್ಋಚೋಽನ್ವನುಕ್ರಮೇಣಾನೋನವೀತಿ ಅತ್ಯರ್ಥಮಾಭಿಮುಖ್ಯೇನ ಬ್ರವೀತಿ ಸ ಬೃಹಸ್ಪತಿರೇವ ಗೋಭಿರಶ್ವೈಶ್ಚ ಯುಕ್ತಂ ವೀರೇಭಿಃ ಪುತ್ರೈರ್ನೃಭಿರ್ಭೃತ್ಯಾದಿಭಿಶ್ಚ ಸಹಿತಂ ವಯೋಽನ್ನಂ ನೋಽಸ್ಮಭ್ಯಂ ಸ್ತೋತೃಭ್ಯೋ ಧಾತ್ । ದಧಾತು । ಪ್ರಯಚ್ಛತು । ತಚ್ಛಬ್ದಾವೃತ್ತಿರಾದರಾರ್ಥಾ ॥

ಪ್ರತಿಪದಾರ್ಥ

**ಅಭ್ರಿಯಾಯ**—ಅಂತರಿಕ್ಷಸ್ಥನಾದ ಬೃಹಸ್ಪತಿಯನ್ನು ಉದ್ದೇಶಿಸಿ । **ಇದಂ ನಮಃ**–ಈ ಸ್ತುತಿಯನ್ನು । **ಅಕರ್ಮ**–ದಾವು ಅರ್ಪಿಸುತ್ತೇವೆ । **ಯಃ**—ಯಾವ ಬೃಹಸ್ಪತಿಯು । **ಪೂರ್ವೀಃ**—ಅನೇಕ ಮಂತ್ರಗಳನ್ನು । **ಅನು**–ಅನುಪೂರ್ವಿಯಿಂದ । **ಆನೋನವೀತಿ**—ಪಠಿಸುವನೋ । **ಸಃ ಬೃಹಸ್ಪತಿಃ**—ಅದೇ ಬೃಹಸ್ಪತಿಯು । **ಗೋಭಿಃ**—ಗೋವುಗಳೊಡನೆಯೂ । **ಅಶ್ವೈಃ**—ಅಶ್ವಗಳೊಡನೆಯೂ । **ವೀರೇಭಿಃ**—ವೀರಪುತ್ರರೊಡನೆಯೂ । **ನೃಭಿಃ**—ಭೃತ್ಯಾದಿಗಳೊಡನೆಯೂ । **ವಯಃ**—ಅನ್ನವನ್ನು । **ನಃ**—ನಮಗೆ । **ಧಾತ್**—ಕೊಡಲಿ.

ಭಾವಾರ್ಥ

ಅಂತರಿಕ್ಷಸ್ಥನಾದ ಬೃಹಸ್ಪತಿಯನ್ನುದ್ದೇಶಿಸಿ ಈ ಸ್ತುತಿಯನ್ನು ನಾವು ಅರ್ಪಿಸುತ್ತೇವೆ. ಯಾವ ಬಹಸ್ಪತಿಯು ಅನೇಕ ಮಂತ್ರಗಳನ್ನು ಅನುಪೂರ್ವಿಯೊಡನೆ ಪಠಿಸುವನೋ ಅದೇ ಬೃಹಸ್ಪತಿಯು ಗೋವುಗಳೊಡನೆಯೂ, ಅಶ್ವಗಳೊಡನೆಯೂ, ವೀರಪುತ್ರರೊಡನೆಯೂ, ಭೃತ್ಯಾದಿಗಳೊಡನೆಯೂ ಕೂಡಿದ ಅನ್ನವನ್ನು ನಮಗೆ ಕೊಡಲಿ.

English Translation

We have offered this homage to Brihaspati, who lives in mid-heaven, who recites in order many (sacred stanzas); may he bestow upon us food, with cows, with horses, with sons, with dependants.

## ಅರವತ್ತೊಂಭತ್ತನೆಯ ಸೂಕ್ತ

**ಷಷ್ಠೇಽನುವಾಕೇ ಷೋಡಶ ಸೂಕ್ತಾನಿ । ಭದ್ರಾ ಇತಿ ದ್ವಾದಶರ್ಚಂ ಪ್ರಥಮಂ ಸೂಕ್ತಂ ವಧ್ರ್ಯಶ್ವಪುತ್ರಸ್ಯ ಸುಮಿತ್ರಸ್ಯಾರ್ಷಂ । ಆದಿತೋ ದ್ವೇ ಜಗತ್ಯಾವಥ ದಶ ತ್ರಿಷ್ಟುಭಃ । ಅಗ್ನಿರ್ದೇವತಾ । ತಥಾ ಚಾನುಕ್ರಮ್ಯತೇ ॥ ಭದ್ರಾಃ ಸುಮಿತ್ರೋ ವಾಧ್ರ್ಯಶ್ವ ಆಗ್ನೇಯಂ ದ್ವಿಜಗತ್ಯಾದೀತಿ ॥ ಗತೋ ವಿನಿಯೋಗಃ**

**ಅನುವಾದವು**—ಋಗ್ವೇದಸಂಹಿತೆಯ ೧೦ ನೆಯ ಮಂಡಲದ ಆರನೆಯ ಅನುವಾಕದಲ್ಲಿ ಹದಿನಾರು ಸೂಕ್ತಗಳಿರುವವು. ಅವುಗಳಲ್ಲಿ **ಭದ್ರಾ ಅಗ್ನೇಃ** ಎಂಬ ಸೂಕ್ತವು ಮೊದಲನೆಯದು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಧ್ರ್ಯಶ್ವಪುತ್ರನಾದ ಸುಮಿತ್ರನೆಂಬುವನು ಋಷಿಯು ; ಈ ಸೂಕ್ತದ ಮೊದಲಿನ ಎರಡು ಋಕ್ಕುಗಳು ಜಗತೀಛಂದಸ್ಕವು ; ಮುಂದಿನ ಹತ್ತು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು ; ಅಗ್ನಿಯು ದೇವತೆಯು. ಅನುಕ್ರಮಣಿಕೆಯಲ್ಲಿ—**ಭದ್ರಾಃ ಸುಮಿತ್ರೋ ವಾಧ್ರ್ಯಶ್ವ ಆಗ್ನೇಯಂ ದ್ವಿಜಗತ್ಯಾದಿ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೬೯

ಮಂಡಲ—೧೦ || ಅನುವಾಕ—೬ || ಸೂಕ್ತ—೬೯ ||
ಅಷ್ಟಕ—೮ || ಅಧ್ಯಾಯ—೨ || ವರ್ಗ—೧೯, ೨೦ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ||
ಋಷಿಃ—ಸುಮಿತ್ರೋ ವಾಧ್ರ್ಯಶ್ವಃ ||
ದೇವತಾ—ಅಗ್ನಿಃ ||
ಛಂದಃ—೧, ೨. ಜಗತೀ | ೩-೧೨ ತ್ರಿಷ್ಟುಪ್ ||

ಸಂಹಿತಾಪಾಠಃ

ಭದ್ರಾ ಅಗ್ನೇರ್ವಧ್ರ್ಯಶ್ವಸ್ಯ ಸಂದೃಶೋ ವಾಮೀ ಪ್ರಣೀತಿಃ ಸುರಣಾ ಉಪೇ-
ತಯಃ |
ಯದೀಂ ಸುಮಿತ್ರಾ ವಿಶೋ ಅಗ್ರ ಇಂಧತೇ ಘೃತೇನಾಹುತೋ ಜರತೇ
ದವಿದ್ಯುತತ್ || ೧ ||

ಪದಪಾಠಃ

ಭದ್ರಾಃ | ಅಗ್ನೇಃ | ವಧ್ರಿऽಅಶ್ವಸ್ಯ | ಸಂऽದೃಶಃ | ವಾಮೀ | ಪ್ರऽನೀತಿಃ | ಸುऽರಣಾಃ | ಉಪऽಇತಯಃ ||
ಯತ್ | ಈಂ | ಸುऽಮಿತ್ರಾಃ | ವಿಶಃ | ಅಗ್ರೇ | ಇಂಧತೇ | ಘೃತೇನ | ಆऽಹುತಃ | ಜರತೇ |
ದವಿದ್ಯುತತ್ || ೧ ||

ಸಾಯಣಭಾಷ್ಯಂ

ಅಗ್ನೇರ್ವಕ್ಷ್ಯಮಾಣಗುಣಸ್ಯ ಸಂದೃಶಃ ಸಂದೃಷ್ಟಯೋ ವಧ್ರ್ಯಶ್ವಸ್ಯೈತನ್ನಾಮಕಸ್ಯ ಮಮ ಪಿತುರ್ಭದ್ರಾಃ ಕಲ್ಯಾಣಕಾರಿಣ್ಯೋ ಭವಂತು | ಯದ್ವಾ | ವಧ್ರ್ಯಶ್ವಸ್ಯ ವಧ್ರ್ಯಶ್ವಕುಲೇ ಜಾತಸ್ಯಾಗ್ನೇಃ ಸಂದೃಷ್ಟಯೋ ಭಜನೀಯಾ ಭವಂತು | ಪ್ರಣೀತಿಸ್ತಸ್ಯ ಪ್ರಣಯನಂ ವಾಮೀ ಕಲ್ಯಾಣಂ ಚ ಭವತು | ತಥೋಪೇತಯೋ ಯಜ್ಞಂ ಪ್ರತ್ಯುಪಗತಯಃ ಸುರಣಾಃ ಶೋಭನರಮಣಾ ಭವಂತು | ಸುಮಿತ್ರಾ ಏತನ್ನಾಮಧೇಯಾ ವಿಶೋऽಮೀ ಮನುಷ್ಯಾ ಈಮೇನಮಗ್ನಿಮಗ್ರೇ ಪ್ರಥಮಂ ಯದ್ಯದೇಂಧತೇ

ಹವಿರ್ಭಿರ್ದೀಪಯಂತಿ ತದಾ ಘೃತೇನಾಹುತೋ ಹವಿರ್ಭಿಶ್ಚ ದವಿದ್ಯುತದ್ಭೃಶಂ ದ್ಯೋತಮಾನಃ ॥ ದಾಧರ್ತಿದರ್ಧರ್ತೀತ್ಯಾದಿನಾ ನಿಪಾತಿತಃ । ಸೋಽಗ್ನಿರ್ಜರತೇ । ಅಸ್ಮಾಭಿಃ ಸ್ತೂಯತೇ ॥

ಪ್ರತಿಪದಾರ್ಥ

**ಅಗ್ನೇಃ**—ಅಗ್ನಿಯ । **ಸಂದೃಶಃ**—ಅನುಗ್ರಹಾತ್ಮಕವಾದ ದೃಷ್ಟಿಗಳು । **ವಧ್ರ್ಯಶ್ವಸ್ಯ**—ವಧ್ರ್ಯಶ್ವ ನೆಂಬ ನನ್ನ ಪಿತೃವಿಗೆ । **ಭದ್ರಾಃ**—ಕಲ್ಯಾಣಕಾರಕಗಳಾಗಲಿ । **ಪ್ರಣೀತಿಃ**—ಅವನ ಉತ್ತಮವಾದ ಮಾರ್ಗದರ್ಶಿತ್ವವು । **ಶಾಮೀ**—ಮಂಗಳಕಾರಕವಾಗಲಿ । **ಉಪೇತಯಃ**—ಯಜ್ಞಾಭಿಮುಖವಾದ ಆಗಮನವು । **ಸುರಣಾಃ**—ಅನುಗ್ರಹಾತ್ಮಕವಾಗಿರಲಿ । **ಸುಮಿತ್ರಾಃ**—ಸುಮಿತ್ರಸಂಜ್ಞಕರಾದ । **ವಿಶಃ**—ಜನರು । **ಈಂ**—ಅಗ್ನಿಯನ್ನು । **ಅಗ್ರೇ**—ಮೊದಲು । **ಯತ್**—ಯಾವಾಗ । **ಇಂಧತೇ**—ಪ್ರಜ್ವಲಿಸುವಂತೆ ಮಾಡುವರೋ ಆಗ । **ಘೃತೇನ**—ಆಜ್ಯದಿಂದ । **ಆಹುತಃ**—ಪೂಜಿಸಲ್ಪಟ್ಟವನೂ । **ದವಿದ್ಯುತತ್**—ಪ್ರಕಾಶಮಾನನೂ ಆದ ಅಗ್ನಿಯು । **ಜರತೇ**—ನಮ್ಮಿಂದ ಸ್ತುತಿಸಲ್ಪಡುತ್ತಾನೆ.

ಭಾವಾರ್ಥ

ಅಗ್ನಿಯ ಅನುಗ್ರಹಾತ್ಮಕವಾದ ದೃಷ್ಟಿಗಳು ವಧ್ರ್ಯಶ್ವನೆಂಬ ನನ್ನ ಪಿತೃವಿಗೆ ಕಲ್ಯಾಣಕಾರಕಳಾಗಲಿ. ಅವನ ಉತ್ತಮವಾದ ಮಾರ್ಗದರ್ಶಿತ್ವವು ಮಂಗಳಕಾರವಾಗಲಿ. ಯಜ್ಞಾಭಿಮುಖವಾದ ಅವನ ಅಗಮನವು ಅನುಗ್ರಹಾತ್ಮಕವಾಗಲಿ. ಸುಮಿತ್ರಸಂಜ್ಞಕರಾದ ಜನರು ಅಗ್ನಿಯನ್ನು ಮೊದಲು ಯಾವಾಗ ಪ್ರಜ್ವಲಿಸುವಂತೆ ಮಾಡುವರೋ ಆಗ ಆಜ್ಯದಂದ ಪೂಜಿಸಲ್ಪಟ್ಟವನೂ, ಪ್ರಕಾಶಮಾನನೂ ಆದ ಅಗ್ನಿಯು ನಮ್ಮಿಂದ ಸ್ತುತಿಸಲ್ಪಡುತ್ತಾನೆ.

## English Translation

May Agni's regards be benevolent to Vadhryashwa, may his guidance be auspicious, his approaches (to the sacrifice) favourable; when the Sumitra people first kindle Agni, then fed with butter and brilliantly blazing, he is glorified.

ಸಂಹಿತಾಪಾಠಃ

ಘೃತಮಗ್ನೇರ್ವಧ್ರ್ಯಶ್ವಸ್ಯ ವರ್ಧನಂ ಘೃತಮನ್ನಂ ಘೃತಮ್ವಸ್ಯ ಮೇದನಂ ।
ಘೃತೇನಾಹುತ ಉರ್ವಿಯಾ ವಿ ಪಪ್ರಥೇ ಸೂರ್ಯ ಇವ ರೋಚತೇ ಸರ್ಪಿರಾಸುತಿಃ ॥ ೨ ॥

ಪದಪಾಠಃ

ಘೃತಂ । ಅಗ್ನೇಃ । ವಧ್ರಿಽಅಶ್ವಸ್ಯ । ವರ್ಧನಂ । ಘೃತಂ । ಅನ್ನಂ । ಘೃತಂ । ಊಂ ಇತಿ । ಅಸ್ಯ । ಮೇದನಂ ।
ಘೃತೇನ । ಆಽಹುತಃ । ಉರ್ವಿಯಾ । ವಿ । ಪಪ್ರಥೇ । ಸೂರ್ಯಃಽಇವ । ರೋಚತೇ । ಸರ್ಪಿಃಽಆಸುತಿಃ ॥

ಸಾಯಣಭಾಷ್ಯಂ

**ವಧ್ರ್ಯಶ್ವಸ್ಯ ಸಂಬಂಧಿನೋಽಗ್ನೇರ್ಘೃತಂ ದೀಯಮಾನಂ ಹವಿರ್ವರ್ಧನಂ ಭವತು । ತಥಾ ಘೃತಮನ್ನಮದನೀಯಂ ಭವತು । ತಥಾಸ್ಯಾಗ್ನೇರ್ಘೃತಮು ಘೃತಮೇವ ಮೇದನಂ ಪುಷ್ಟಿಕರಂ ಭವತು। ಯೇನಾಗ್ನಿಃ ಪುಷ್ಟೋ ಭವತಿ ತನ್ಮೇದನಂ । ತೇನ ಘೃತೇನಾಹುತೋಽಗ್ನಿರುರ್ವಿಯೋರ್ವತ್ಯಂತಂ ವಿ ಪಪ್ರಥೇ। ಸ್ವತೇಜಸಾ ವಿಪ್ರಥಿತೋ ಭವತಿ। ತಥಾ ಸರ್ಪಿರಾಸುತಿಃ ಸರ್ಪಿರಾಸೂಯತೇ ಯಸ್ಮಿನ್ನಿತಿ ಸೋಽಗ್ನಿಃ ಸೂರ್ಯ ಇವ ರೋಚತೇ । ದೀಪ್ಯತೇ ॥**

ಪ್ರತಿಪದಾರ್ಥ

**ವಧ್ರ್ಯಶ್ವಸ್ಯ**—ವಧ್ರ್ಯಶ್ವನಿಂದ ಪೂಜಿತನಾದ । **ಅಗ್ನೇಃ**—ಅಗ್ನಿಯ । **ಘೃತಂ**—ಹವಿಸ್ಸು । **ವರ್ಧನಂ**—ವೃದ್ಧಿಯನ್ನು ಹೊಂದಲಿ । **ಘೃತಂ**—ಹವಿಸ್ಸು । **ಅನ್ನಂ**—ಅವನ ಭಕ್ಷಣಕ್ಕೆ ಯೋಗ್ಯವಾಗಲಿ । **ಅಸ್ಯ**—ಈ ಅಗ್ನಿಯ । **ಘೃತಮು**—ಘೃತರೂಪವಾದ ಹವಿಸ್ಸೇ । **ಮೇದನಂ**—ಪುಷ್ಟಿಕರವಾಗಲಿ । **ಘೃತೇನ**—ಘೃತದಿಂದ । **ಆಹುತಃ**—ಪೂಜಿತನಾದ ಅಗ್ನಿಯು । **ಉರ್ವಿಯಾ**—ಅತ್ಯಧಿಕವಾಗಿ । **ವಿ ಪಪ್ರಥೇ**—ತನ್ನ ತೇಜಸ್ಸಿನಿಂದ ವಿಸ್ತೃತನಾಗುತ್ತಾನೆ । **ಸರ್ಪಿರಾಸುತಿಃ**—ಸ್ತುತಿಗಳಿಂದ ಪ್ರಶಂಸಿತನಾದ ಅಗ್ನಿಯು । **ಸೂರ್ಯ ಇವ**—ಸೂರ್ಯನಂತೆ । **ರೋಚತೇ**—ಪ್ರಕಾಶಿಸುತ್ತಾನೆ.

ಭಾವಾರ್ಥ

ವಧ್ರ್ಯಶ್ವನಿಂದ ಪೂಜಿತನಾಗುವ ಅಗ್ನಿಗೆ ಅರ್ಪಿಸುವ ಹವಿಸ್ಸು ವೃದ್ಧಿಯನ್ನು ಹೊಂದಲಿ. ಹವಿಸ್ಸು ಅವನ ಭಕ್ಷಣಕ್ಕೆ ಯೋಗ್ಯವಾಗಲಿ. ಘೃತರೂಪವಾದ ಈ ಹವಿಸ್ಸು ಪುಷ್ಟಿಕರವಾಗಲಿ. ಘೃತದಿಂದ ಪೂಜಿತನಾಗುವ ಅಗ್ನಿಯು ತನ್ನ ತೇಜಸ್ಸಿನಿಂದ ಅತ್ಯಧಿಕವಾಗಿ ವಿಸ್ತೃತನಾಗುತ್ತಾನೆ. ಸ್ತುತಿಗಳಿಂದ ಪ್ರಶಂಸಿತನಾದ ಅಗ್ನಿಯು ಸೂರ್ಯನಂತೆ ಪ್ರಕಾಶಿಸುತ್ತಾನೆ.

English Translation

May ghi be the augmenter of the Agni of Vadhryashwa; may ghi be his food; may ghi be his nutriment; sacrificed to with ghi he expands exceedingly; he shines like the sun, when the clarified butter is poured out for him·

ಸಂಹಿತಾಪಾಠಃ

**ಯತ್ತೇ ಮನುರ್ಯದನೀಕಂ ಸುಮಿತ್ರಃ ಸಮೀಧೇ ಅಗ್ನೇ ತದಿದಂ ನವೀಯಃ।**
**ಸ ರೇವಚ್ಛೋಚ ಸ ಗಿರೋ ಜುಷಸ್ವ ಸ ವಾಜಂ ದರ್ಷಿ ಸ ಇಹ ಶ್ರವೋ ಧಾಃ ॥**

ಪದಪಾಠಃ

**ಯತ್ । ತೇ । ಮನುಃ । ಯತ್ । ಅನೀಕಂ । ಸುಽಮಿತ್ರಃ । ಸಂಽಈಧೇ । ಅಗ್ನೇ । ತತ್ । ಇದಂ । ನವೀಯಃ ।**

ಸಃ । ರೇವತ್ । ಶೋಚ । ಸಃ । ಗಿರಃ । ಜುಷಸ್ವ । ಸಃ । ವಾಜಂ । ದರ್ಷಿ । ಸಃ। ಇಹ । ಶ್ರವಃ । ಧಾಃ ॥

ಸಾಯಣಭಾಷ್ಯಂ

ಹೇ ಅಗ್ನೇ ತೇ ತ್ವದೀಯಂ ಯದನೀಕಂ ರಶ್ಮಿಸಂಘಂ ಮನುರೇತನ್ನಾಮಕೋ ಯಥಾ ಸಮೀಧೇ ಹವಿರ್ಭಿಃ ಸಮ್ಯಗ್ದೀಪಯತಿ ಸುಮಿತ್ರ ಏತನ್ನಾಮಕೋಽಹಂ ಸಮೀಧೇ। ಸಮ್ಯಗ್ದೀಪಯಾಮಿ॥ ಞಿಇಂಧೀ ದೀಪ್ತೌ । ಲಿಟೀಂಧಿಭವತಿಭ್ಯಾಂ ಚೇತಿ ಕಿತ್ತ್ವಾನ್ನಲೋಪಃ ॥ ತದಿದಂ ಸೋಽಯಂ ರಶ್ಮಿಸಂಘೋ ನವೀಯೋ ನವತರೋ ಭವತು । ಸ ತ್ವಂ ರೇವದ್ಧನಯುಕ್ತಂ ಯಥಾ ಭವತಿ ತಥಾ ಶೋಚ । ಪ್ರಜ್ವಲ । ಸ ಏವ ತ್ವಂ ಗಿರೋಽಸ್ಮದೀಯಾಃ ಸ್ತುತೀರ್ಜುಷಸ್ವ । ಸೇವಸ್ವ । ಸ ತ್ವಂ ವಾಜಂ ಶತ್ರುಬಲಂ ದರ್ಷಿ । ವಿದಾರಯ । ತಥೇಹ ಮಯಿ ಶ್ರವೋಽನ್ನಂ ಧಾಃ । ಧೇಹಿ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ತೇ**—ನಿನ್ನ । **ಯತ್ ಅನೀಕಂ**—ಯಾವ ಜ್ವಾಲಾಸಮೂಹವನ್ನು । **ಮನುಃ**—ಮನುವು । **ಸಮೀಧೇ**—ಪ್ರಜ್ವಲಿಸುವಂತೆ ಮಾಡಿದನೋ । **ಸುಮಿತ್ರಃ**—ಸುಮಿತ್ರಸಂಜ್ಞಕನಾದ ನಾನು ಯಾವ ನಿನ್ನ ಜ್ವಾಲೆಗಳನ್ನು ಪ್ರಜ್ವಲಿಸುವಂತೆ ಮಾಡಿದೆನೋ । **ತದಿದಂ**—ಆ ನಿನ್ನ ಜ್ವಾಲಾಸಮೂಹವು । **ನವೀಯಃ**—ಹೊಸ ಸ್ವರೂಪವನ್ನು ಹೊಂದಲಿ । **ಸಃ**—ನೀನು । **ರೇವತ್**—ಧನಪ್ರದನಾಗುವಂತೆ । **ಶೋಚ**—ಬೆಳಗು । **ಸಃ**—ನೀನು । **ಗಿರಃ**—ನಮ್ಮ ಸ್ತುತಿಗಳನ್ನು । **ಜುಷಸ್ವ**—ಸೇವಿಸು । **ಸಃ**—ನೀನು । **ವಾಜಂ**—ಶತ್ರುಬಲವನ್ನು । **ದರ್ಷಿ**—ನಾಶಪಡಿಸು । **ಇಹ**—ನನ್ನಲ್ಲಿ । **ಶ್ರವಃ**—ಅನ್ನವನ್ನು । **ಧಾಃ**—ಸ್ಥಾಪಿಸು.

ಭಾವಾರ್ಥ

ಎಲೈ ಅಗ್ನಿಯೇ, ಯಾವ ನಿನ್ನ ಜ್ವಾಲಾಸಮೂಹವನ್ನು ಮನುವು ಪ್ರಜ್ವಲಿಸುವಂತೆ ಮಾಡಿದನೋ ಮತ್ತು ಸುಮಿತ್ರಸಂಜ್ಞಕನಾದ ನಾನು ಯಾವ ನಿನ್ನ ಜ್ವಾಲೆಗಳನ್ನು ಪ್ರಜ್ವಲಿಸುವಂತೆ ಮಾಡಿದೆನೋ ಆ ನಿನ್ನ ಜ್ವಾಲಾ ಸಮೂಹವು ಹೊಸಸ್ವರೂಪವನ್ನು ಹೊಂದಲಿ. ನೀನು ಧನಪ್ರದನಾಗುವಂತೆ ಬೆಳಗು. ನೀನು ನಮ್ಮ ಸ್ತುತಿಗಳನ್ನು ಸೇವಿಸು. ಶತ್ರುಬಲವನ್ನು ನಾಶಪಡಿಸು. ನನ್ನಲ್ಲಿ ಅನ್ನವನ್ನು ಸ್ಥಾಪಿಸು.

English Translation

May that your army of flame, Agni, which Manu, which Sumitra has kindled, be the newest; do you shine wealthily, do you grociously accept our praises; do you destroy the might (of our foes); do you grant us abundance.

ಸಂಹಿತಾಪಾಠಃ

ಯಂ ತ್ವಾ ಪೂರ್ವಮೀಳಿತೋ ವಧ್ರ್ಯಶ್ವಃ ಸಮೀಧೇ ಅಗ್ನೇ ಸ ಇದಂ ಜುಷಸ್ವ।

ಸ ನಃ ಸ್ತಿಪಾ ಉತ ಭವಾ ತನೂಪಾ ದಾತ್ರಂ ರಕ್ಷಸ್ವ ಯದಿದಂ ತೇ ಅಸ್ಮೇ ॥೪॥

ಪದಪಾಠಃ

ಯಂ । ತ್ವಾ । ಪೂರ್ವಂ । ಈಳಿತಃ । ವಧ್ರಿಽಅಶ್ವಃ । ಸಂಽಈಧೇ । ಅಗ್ನೇ । ಸಃ । ಇದಂ । ಜುಷಸ್ವ ।

ಸಃ । ನಃ । ಸ್ತಿಽಪಾಃ । ಉತ । ಭವ । ತನೂಽಪಾಃ । ದಾತ್ರಂ । ರಕ್ಷಸ್ವ । ಯತ್ । ಇದಂ । ತೇ । ಅಸ್ಮೇ ಇತಿ ॥

ಸಾಯಣಭಾಷ್ಯಂ

ಈಳಿತಃ ॥ ವ್ಯತ್ಯಯೇನ ಕರ್ತರಿ ಕ್ತಃ ॥ ಸ್ತೋತಾ ವಧ್ರ್ಯಶ್ವೋ ಮಮ ಪಿತಾ ಪೂರ್ವಂ ಪೂರ್ವಸ್ಮಿನ್ಕಾಲೇ ಸಂಜಾತಂ ಯಂ ತ್ವಾ ಸಮೀಧೇ ಹವಿರ್ಭಿಃ ಸಮ್ಯಗದೀಪಯತ್ ಸ ತ್ವಮಿದಾನೀಂ ಮಯಾ ಕ್ರಿಯಮಾಣಮಿದಂ ಸ್ತೋತ್ರಂ ಜುಷಸ್ವ । ಸೇವಸ್ವ । ಯದ್ವಾ । ವಧ್ರ್ಯಶ್ವಸ್ತಸ್ಯ ಪುತ್ರೋಽಹಂ ಸಮ್ಯಗ್ದೀಪಿತವಾನಸ್ಮಿ। ಸ ತ್ವಂ ನೋಽಸ್ಮಾಕಂ ಸ್ತಿಪಾಃ ॥ ಪೃಷೋದರಾದಿಃ ॥ ಪಸ್ತ್ಯಂ ಗೃಹಂ। ತಸ್ಯ ರಕ್ಷಕೋ ಭವ । ಯದ್ವಾ । ಉಪಸ್ಥಿತಾಞ್ಜ್ಯೋತಿಷ್ಟೋಮಾದೀನ್ಯಾಗಾನ್ಪಾಲಯತೀತಿ ಸ್ತಿಪಾಃ । ಅಸ್ಮದೀಯಾನಾಂ ಯಜ್ಞಾನಾಂ ಪಾಲಯಿತಾ ಭವ । ಉತಾಪಿ ಚ ತನೂಪಾಃ ಸ್ವಾಂಗಾನಾಂ ರಕ್ಷಕೋ ಭವ । ಕಿಂಚ ದಾತ್ರಂ ತದ್ಧನಂ ರಕ್ಷಸ್ವ ಯದಿದಂ ಧನಂ ತೇ ತವ ಸ್ವಭೂತೇಷ್ವಸ್ಮೇ ಅಸ್ಮಾಸು ತಿಷ್ಠತಿ ॥

ಪ್ರತಿಪದಾರ್ಥ

**ಈಳಿತಃ**—ಸ್ತುತಿಕರ್ತನಾದ । **ವಧ್ರ್ಯಶ್ವಃ**—ವಧ್ರ್ಯಶ್ವನು । **ಪೂರ್ವಂ**—ಮೊದಲು । **ಯಂ ತ್ವಾ**—ಯಾವ ನಿನ್ನನ್ನು । **ಸಮೀಧೇ**—ಹವಿಸ್ಸುಗಳಿಂದ ಪ್ರಜ್ವಲಿತನಾಗುವಂತೆ ಮಾಡಿದನೋ । **ಸಃ**—ಅದೇ ನೀನು **ಇದಂ**—ನನ್ನ ಈ ಸ್ತೋತ್ರವನ್ನು । **ಜುಷಸ್ವ**—ಸೇವಿಸು । **ಸಃ**—ನೀನು । **ನಃ**—ನಮ್ಮ । **ಸ್ತಿಪಾಃ**—ಗೃಹರಕ್ಷಕನಾಗಿ । **ಭವ**—ಇರು । **ಉತ**—ಮತ್ತು । **ತನೂಪಾಃ**—ನಮ್ಮ ಅಂಗರಕ್ಷಕನಾಗಿರು । **ಯದಿದಂ**—ಯಾವ ಧನವು । **ತೇ**—ನಿನ್ನ ಪೂಜಕರಾದ । **ಅಸ್ಮೇ**—ನಮ್ಮಲ್ಲಿ ಸ್ಥಾಪಿತವಾಗಿರುವುದೋ । **ದಾತ್ರಂ**—ಅಂತಹ ಧನವನ್ನು । **ರಕ್ಷಸ್ವ**—ಕಾಪಾಡು.

ಭಾವಾರ್ಥ

ಎಲೈ ಅಗ್ನಿಯೇ, ಸ್ತುತಿಕರ್ತನಾದ ವಧ್ರ್ಯಶ್ವನು ಮೊದಲು ಯಾವ ನಿನ್ನನ್ನು ಹವಿಸ್ಸುಗಳಿಂದ ಪ್ರಜ್ವಲಿತನಾಗುವಂತೆ ಮಾಡಿದನೋ, ಅದೇ ನೀನು ನನ್ನ ಈ ಸ್ತೋತ್ರವನ್ನು ಸೇವಿಸು. ನೀನು ನಮ್ಮ ಗೃಹರಕ್ಷಕನಾಗಿರು. ನಮ್ಮ ಅಂಗರಕ್ಷಕನಾಗಿಯೂ ಇರು. ನಿನ್ನಿಂದ ದತ್ತವಾಗಿ ನಮ್ಮಲ್ಲಿ ಸ್ಥಾಪಿತವಾಗಿರುವ ಧನವನ್ನು ಕಾಪಾಡು.

English Translation

Do you, Agni, whom Vadhryshwa propitiating you formerly kindled, accept this; be the protector of our sacrifices, be the protector of our bodies; preserve this wealth which has been given to us by you.

ಸಂಹಿತಾಪಾಠಃ

ಭವಾ ದ್ಯುಮ್ನೀ ವಾಧ್ರ್ಯಶ್ವೋತ ಗೋಪಾ ಮಾ ತ್ವಾ ತಾರೀದಭಿಮಾತಿರ್ಜನಾನಾಂ ।

ಶೂರ ಇವ ಧೃಷ್ಣುಶ್ಚ್ಯವನಃ ಸುಮಿತ್ರಃ ಪ್ರ ನು ವೋಚಂ ವಾಧ್ರ್ಯಶ್ವಸ್ಯ
ನಾಮ ॥ ೫ ॥

ಪದಪಾಠಃ

ಭವ । ದ್ಯುಮ್ನೀ । ವಾಧ್ರಿಽಅಶ್ವ । ಉತ । ಗೋಪಾಃ । ಮಾ । ತ್ವಾ । ತಾರೀತ್ । ಅಭಿಽಮಾತಿಃ । ಜನಾನಾಂ ॥
ಶೂರಃಽಇವ । ಧೃಷ್ಣುಃ । ಚ್ಯವನಃ । ಸುಽಮಿತ್ರಃ । ಪ್ರ । ನು । ವೋಚಂ । ವಾಧ್ರಿಽಅಶ್ವಸ್ಯ । ನಾಮ ॥

ಸಾಯಣಭಾಷ್ಯಂ

ಹೇ ವಾಧ್ರ್ಯಶ್ವ ವಧ್ರ್ಯಶ್ವಕುಲೇ ಜಾತಾಗ್ನೇ ದ್ಯುಮ್ನೀ । ದ್ಯುಮ್ನಂ ದ್ಯೋತತೇರ್ಯಶೋ ವಾನ್ನಂ ವಾ । ತದ್ವಾನ್ಭವ । ಉತಾಪಿ ಚ ಗೋಪಾ ಗೋಪಾಯಿತಾ ಭವ । ಕಿಂಚ ತ್ವಾ ತ್ವಾಂ ಕಶ್ಚಿದಪಿ ಮಾ ತಾರೀತ್ । ಮಾ ಹಿನಸ್ತು । ಯತೋ ಜನಾನಾಂ ಶತ್ರೂಣಾಮಭಿಮಾತಿರಭಿಭವನಶೀಲಮಾನ-ಯುಕ್ತೋಽಭಿಭವಿತಾ ಭವಸಿ । ಕಿಂಚ ಶೂರ ಇವ ಬಲವಾನಿವ ಧೃಷ್ಣುಃ ಶತ್ರುಧರ್ಷಣಶೀಲಃ ತಸ್ಮಾ-ಚ್ಚ್ಯವನಸ್ತೇಷಾಂ ಚ್ಯಾವಯಿತಾ ಭವಸಿ । ಅಥ ವಾಧ್ರ್ಯಶ್ವಸ್ಯಾಗ್ನೇಸ್ತವ ನಾಮಾಗ್ನಿರ್ಜಾತವೇದಾ ವೈಶ್ವಾನರ ಇತ್ಯಾದೀನಿ ನಾಮಾನಿ ನು ಕ್ಷಿಪ್ರಂ ಸುಮಿತ್ರೋಽಹಂ ಪ್ರ ವೋಚಂ । ಪ್ರಬ್ರವೀಮಿ । ತಸ್ಮಾ-ನ್ಮೇಽನ್ನಾದಿಯುಕ್ತೋ ಭವ ॥

ಪ್ರತಿಪದಾರ್ಥ

**ವಾಧ್ರ್ಯಶ್ವ**—ವಧ್ರ್ಯಶ್ವಸಂಬಂಧಿಯಾದ ಎಲೈ ಅಗ್ನಿಯೇ । **ದ್ಯುಮ್ನೀ**—ಅನ್ನಯುಕ್ತನಾಗಿ । **ಭವ**—ಆಗು । **ಉತ**—ಮತ್ತು । **ಗೋಪಾಃ**—ನಮ್ಮ ರಕ್ಷಕನಾಗಿರು । **ತ್ವಾ**—ನಿನ್ನನ್ನು । **ಮಾ ತಾರೀತ್**—ಯಾರೂ ಹಿಂಸಿಸದಿರಲಿ । **ಜನಾನಾಂ**—ಸಕಲರಿಗೂ । **ಅಭಿಮಾತಿಃ**—ಸೋಲನ್ನುಂಟುಮಾಡುವವನಾಗಿದ್ದೀಯೆ । **ಶೂರ ಇವ**—ಪರಾಕ್ರಮಿಯಂತೆ । **ಧೃಷ್ಣುಃ**—ಶತ್ರುಗಳನ್ನು ಸದೆಬಡಿಯುವವನೂ । **ಚ್ಯವನಃ**—ಅವರ ನಾಶಕನೂ ಆಗಿದ್ದೀಯೆ । **ಸುಮಿತ್ರಃ**—ಸುಮಿತ್ರಸಂಜ್ಞಕನಾದ । **ಅಹಂ**—ನಾನು । **ವಾಧ್ರ್ಯಶ್ವಸ್ಯ**—ವಧ್ರ್ಯಶ್ವಸಂಬಂಧಿಯಾದ ನಿನ್ನ । **ನಾಮ**—ವೈಶ್ವಾನರಾದಿ ನಾಮಗಳನ್ನು । **ನು**—ಕ್ಷಿಪ್ರವಾಗಿ । **ಪ್ರ ವೋಚಂ**—ಪಠಿಸುತ್ತೇನೆ.

ಭಾವಾರ್ಥ

ವಧ್ರ್ಯಶ್ವಸಂಬಂಧಿಯಾದ ಎಲೈ ಅಗ್ನಿಯೇ, ನೀನು ಅನ್ನಯುಕ್ತನಾಗಿರು. ನಮ್ಮ ರಕ್ಷಕನಾಗಿರು. ನಿನ್ನನ್ನು ಯಾರೂ ಹಿಂಸಿಸದಿರಲಿ. ನೀನು ಸಕಲರಿಗೂ ಸೋಲನ್ನುಂಟುಮಾಡುವವನಾಗಿದ್ದೀಯೆ. ಶೂರರಂತೆ ಶತ್ರುಗಳನ್ನು ಸದೆಬಡಿಯುವವನೂ ಅವರ ನಾಶಕನೂ ಆಗಿದ್ದೀಯೆ. ಸುಮಿತ್ರಸಂಜ್ಞಕನಾದ ನಾನು ವಧ್ರ್ಯಶ್ವಸಂಬಂಧಿಯಾದ ನಿನ್ನ ವೈಶ್ವನರಾದಿ ನಾಮಗಳನ್ನು ಕ್ಷಿಪ್ರವಾಗಿ ಪಠಿಸುತ್ತೇನೆ.

## English Translation

Kinsman of Vadhryashwa, be the possessor of food and our protector; let one assail you, (for you are) the overcomer of men; like a resolute warrior (you are) the overthrower (of enemies); I, Sumitra, celebrate the names of the kinsmen of Vadhryashwa,

ಸಂಹಿತಾಪಾಠಃ

ಸಮಜ್ರ್ಯಾ ಪರ್ವತ್ಯಾ೩ ವಸೂನಿ ದಾಸಾ ವೃತ್ರಾಣ್ಯಾರ್ಯಾ ಜಿಗೇಥ ।
ಶೂರ ಇವ ಧೃಷ್ಣುಶ್ಚ್ಯವನೋ ಜನಾನಾಂ ತ್ವಮಗ್ನೇ ಪೃತನಾಯೂಂರಭಿ ಷ್ಯಾಃ ॥

ಪದಪಾಠಃ

ಸಂ । ಅಜ್ರ್ಯಾ । ಪರ್ವತ್ಯಾ । ವಸೂನಿ । ದಾಸಾ । ವೃತ್ರಾಣಿ । ಆರ್ಯಾ । ಜಿಗೇಥ ।
ಶೂರಃऽಇವ । ಧೃಷ್ಣುಃ । ಚ್ಯವನಃ । ಜನಾನಾಂ । ತ್ವಂ । ಅಗ್ನೇ । ಪೃತನಾऽಯೂನ್ । ಅಭಿ । ಸ್ಯಾಃ ॥

ಸಾಯಣಭಾಷ್ಯಂ

ಹೇ ಅಗ್ನೇ ಅಜ್ರ್ಯಾ । ಅಜಂತಿ ಗಚ್ಛಂತೀತ್ಯಜ್ರಯೋ ಜನಾಃ । ತೇಭ್ಯೋ ಹಿತಾನಿ ಪರ್ವತ್ಯಾ ಪರ್ವತೇಭವಾನಿ ವಸೂನಿ ಗವಾದಿಲಕ್ಷಣಾನಿ ಸಂ ಜಿಗೇಥ । ಶತ್ರುಭ್ಯಃ ಸಂಜಿತವಾನಸಿ । ತಥಾಽರ್ಯಾ ಬಲವದ್ಭಿಃ ಕೃತಾನ್ದಾಸಾ ದಾಸೈರಸುರೈಃ ಕೃತಾನ್ವೃತ್ರಾಣ್ಯುಪದ್ರವಾನ್ಸಂ ಜಿಗೇಥ । ತಾನ್ಹತವಾನಸೀತ್ಯರ್ಥಃ ॥ ಜಿ ಜಯೇ । ಲಿಟಿ ರೂಪಂ ॥ ಶೂರ ಇವ ಧೃಷ್ಣುರ್ಜನಾನಾಂ ಚ್ಯವನಸ್ತ್ವಂ ಪೃತನಾಯೂನ್ಸಂಗ್ರಾಮಕಾಮಾನಭಿ ಷ್ಯಾಃ । ಅಭಿಭವ ॥ ಪೃತನಾಯೂನಿತ್ಯತ್ರ ಲೋಪಾಭಾವಶ್ಛಾಂದಸಃ । ಅಶ್ವಾಘಸ್ಯಾದಿತ್ಯಾತ್ವಂ ವಿಧೀಯಮಾನಮಸ್ಮಾದಪಿ ವ್ಯತ್ಯಯೇನ ಭವತಿ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ಅಜ್ರ್ಯಾ**—ಮಾನವರಿಗೆ ಹಿತಕರವೂ । **ಪರ್ವತ್ಯಾ**—ಪರ್ವತೋತ್ಪನ್ನವೂ ಆದ । **ವಸೂನಿ**—ಧನಗಳನ್ನು । **ಸಂ ಜಿಗೇಥ**—ನೀನು ಶತ್ರುಗಳಿಂದ ಕಿತ್ತುಕೊಂಡಿದ್ದೀಯೆ । **ಆರ್ಯಾ**—ಆರ್ಯರಿಂದ ಉಂಟುಮಾಡಲ್ಪಟ್ಟವೂ । **ದಾಸಾ**—ದಾಸರಿಂದ ಉಂಟುಮಾಡಲ್ಪಟ್ಟವೂ ಆದ । **ವೃತ್ರಾಣಿ**—ಸಕಲ ಹಿಂಸೆಗಳನ್ನೂ । **(ಸಂ) ಜಿಗೇಥ**—ಒಟ್ಟಿಗೆ ನಾಶಮಾಡಿದ್ದೀಯೆ । **ಶೂರ ಇವ**—ಶೂರನಂತೆ । **ಧೃಷ್ಣುಃ**—ಶತ್ರುಧರ್ಷಕನಾದವನೂ । **ಜನಾನಾಂ**—ಶತ್ರುಜನರ । **ಚ್ಯವನಃ**—ನಾಶಕನೂ ಆದ । **ತ್ವಂ**—ನೀನು । **ಪೃತನಾಯೂನ್**—ಶತ್ರುಯೋಧರನ್ನು । **ಅಭಿ ಷ್ಯಾಃ**—ಸೋಲಿಸುತ್ತೀಯೆ.

ಭಾವಾರ್ಥ

ಎಲೈ ಅಗ್ನಿಯೇ, ಮಾನವರಿಗೆ ಹಿತಕರವೂ, ಪರ್ವತೋತ್ಪನ್ನವೂ (ಅಥವಾ ಪರ್ವತದಲ್ಲಿ ಅಡಗಿರುವುದೂ) ಆದ ಧನಗಳನ್ನು ನೀನು ಶತ್ರುಗಳಿಂದ ಕಿತ್ತುಕೊಂಡಿದ್ದೀಯೆ. ಆರ್ಯರಿಂದ ಉಂಟುಮಾಡಲ್ಪಟ್ಟವೂ, ದಾಸರಿಂದ ಉಂಟುಮಾಡಲ್ಪಟ್ಟವೂ ಆದ ಸಕಲ ಹಿಂಸೆಗಳನ್ನೂ ಒಟ್ಟಿಗೆ ನಾಶಮಾಡಿದ್ದೀಯೆ. ಶೂರನಂತೆ ಶತ್ರುಧರ್ಷಕನೂ, ಶತ್ರುಜನರ ನಾಶಕನೂ ಆದ ನೀನು ಶತ್ರುಯೋಧರನ್ನು ಸೋಲಿಸುತ್ತೀಯೆ.

## English Translation

You have gained mountain-treasures beneficial to men, (you have defeated ihe hostilities) of strong men, Dasas and Vritras, like are solute

warrior, do you Agni, the overthrower (of enemies), overcome those who are desirous of battle.

ಸಂಹಿತಾಪಾಠಃ

ದೀರ್ಘತಂತುರ್ಬೃಹದುಕ್ಷಾಯಮಗ್ನಿಃ ಸಹಸ್ರಸ್ತರೀಃ ಶತನೀಥ ಋಭ್ವಾ ।
ದ್ಯುಮಾನ್ ದ್ಯುಮತ್ಸು ನೃಭಿರ್ಮೃಜ್ಯಮಾನಃ ಸುಮಿತ್ರೇಷು ದೀದಯೋ ದೇವಯತ್ಸು ॥ ೭ ॥

ಪದಪಾಠಃ

ದೀರ್ಘऽತಂತುಃ । ಬೃಹತ್ऽಉಕ್ಷಾ । ಅಯಂ । ಅಗ್ನಿಃ । ಸಹಸ್ರऽಸ್ತರೀಃ । ಶತऽನೀಥಃ । ಋಭ್ವಾ । ದ್ಯುऽಮಾನ್ । ದ್ಯುಮತ್ऽಸು । ನೃऽಭಿಃ । ಮೃಜ್ಯಮಾನಃ । ಸುऽಮಿತ್ರೇಷು । ದೀದಯಃ । ದೇವऽಯತ್ऽಸು ॥ ೭ ॥

ಸಾಯಣಭಾಷ್ಯಂ

ದೀರ್ಘತಂತುಃ। ಯೈರ್ಯಜ್ಞಂ ಸಂತನೋತಿ ತೇ ತಂತವಃ ಸ್ತೋತ್ರಾದಯಃ । ಪ್ರಭೂತಸ್ತುತಿಮಾನ್ಬೃಹದುಕ್ಷಾ । ಉಕ್ಷಾ ಸೇಚಕೋ ರಶ್ಮಿಃ । ಪ್ರಭೂತರಶ್ಮಿಯುಕ್ತಃ ಸಹಸ್ರಸ್ತರೀರ್ಹವೀರೂಪಬಹ್ವಾಚ್ಛಾದನಃ ಶತನೀಥ ಆಹವನೀಯಾದಿದ್ವಾರೇಣ ಬಹುವಿಧನಯನ ಋಭ್ವಾ ಮಹಾನ್ದ್ಯುಮತ್ಸು ದೀಪ್ತಿಮತ್ಸು ಮಧ್ಯೇ ದ್ಯುಮಾನತಿಶಯೇನ ದೀಪ್ತಿಮಾನಯಮಗ್ನಿರ್ನೃಭಿಃ ಕರ್ಮನೇತೃಭಿರೃತ್ವಿಗ್ಭಿರ್ಮೃಜ್ಯಮಾನೋऽಲಂಕ್ರಿಯಮಾಣೋ ಭವತಿ ॥ ಮೃಜೂ ಶೌಚಾಲಂಕಾರಯೋಃ ॥ ಸ ತ್ವಂ ದೇವಯತ್ಸು ದೇವಾನ್ಕಾಮಯಮಾನೇಷು ಸುಮಿತ್ರೇಷ್ವಸ್ಮಾಸು ದೀದಯಃ । ದೀಪ್ಯಸ್ವ । ದೀದಯತಿರ್ದೀಪ್ತಿಕರ್ಮಾ ॥

ಪ್ರತಿಪದಾರ್ಥ

**ದೀರ್ಘತಂತುಃ**—ಅಧಿಕವಾದ ಸ್ತುತಿಯುಳ್ಳವನೂ । **ಬೃಹದುಕ್ಷಾ**—ಪ್ರಭೂತವಾದ ರಶ್ಮಿಗಳುಳ್ಳವನೂ। **ಸಹಸ್ರಸ್ತರೀಃ**—ಹವಿಸ್ಸಿನರೂಪದ ಅನೇಕ ಹೊದ್ದಿಕೆಯುಳ್ಳವನೂ । **ಶತನೀಥಃ**—ಅನೇಕರಿಗೆ ಮಾರ್ಗದರ್ಶಕನೂ। **ಋಭ್ವಾ**—ಮಹಾತ್ಮನೂ । **ದ್ಯುಮತ್ಸು**—ಕಾಂತಿಯುತರ ನಡುವೆ । **ದ್ಯುಮಾನ್**—ಅಧಿಕವಾದ ಪ್ರಕಾಶವುಳ್ಳವನೂ ಆದ । **ಅಯಂ ಅಗ್ನಿಃ**—ಈ ಅಗ್ನಿಯು । **ನೃಭಿಃ**—ಋತ್ವಿಕ್ಕುಗಳಿಂದ । **ಮೃಜ್ಯಮಾನಃ**—ಅಲಂಕರಿಸಲ್ಪಡುತ್ತಾನೆ । (ಎಲೈ ಅಗ್ನಿಯೇ) **ದೇವಯತ್ಸು**—ದೇವಪೂಜೆಯಲ್ಲಿ ಇಷ್ಟವುಳ್ಳ । **ಸುಮಿತ್ರೇಷು**—ಸುಮಿತ್ರ ಸಂಜ್ಞಕರಾದ ನಮ್ಮಲ್ಲಿ । **ದೀದಯಃ**—ಅತಿಶಯವಾಗಿ ಪ್ರಕಾಶಿಸು.

ಭಾವಾರ್ಥ

ಅಧಿಕವಾದ ಸ್ತುತಿಯುಳ್ಳವನೂ, ಪ್ರಭೂತವಾದ ರಶ್ಮಿಗಳುಳ್ಳವನೂ, ಹವಿಸ್ಸಿನ ರೂಪದ ಅನೇಕ ಹೊದ್ದಿಕೆಗಳುಳ್ಳವನೂ, ಅನೇಕರಿಗೆ ಮಾರ್ಗದರ್ಶಕನೂ, ಮಹಾತ್ಮನೂ, ಕಾಂತಿಯುತರ ನಡುವೆ ಅಧಿಕವಾದ ಪ್ರಕಾಶವುಳ್ಳ

ವನೂ ಆದ ಅಗ್ನಿಯು ಋತ್ವಿಕ್ಕುಗಳಿಂದ ಅಲಂಕರಿಸಲ್ಪಡುತ್ತಾನೆ. ಎಲೈ ಅಗ್ನಿಯೇ, ದೇವಪೂಜೆಯಲ್ಲಿ ನಿರತರಾದ ಸುಮಿತ್ರಸಂಜ್ಞಕರಾದ ನಮ್ಮಲ್ಲಿ ಅತಿಶಯವಾಗಿ ಪ್ರಕಾಶಿಸು.

English Translation

This Agni to whom a long series (of sacrifices has been addressed), who is bright with many rays, covering thousands (in the form of ghi), the leader of hundreds (of burnt offerings), the mighty one, brilliant among the brilliant, (is) heing glorified by the priests ; shine (Agni) upon the devout Sumitras.

ಸಂಹಿತಾಪಾಠಃ

ತ್ವೇ ಧೇನುಃ ಸುದುಘಾ ಜಾತವೇದೋಽಸಶ್ಚತೇವ ಸಮನಾ ಸಬರ್ಧುಕ್ ।
ತ್ವಂ ನೃಭಿರ್ದಕ್ಷಿಣಾವದ್ಭಿರಗ್ನೇ ಸುಮಿತ್ರೇಭಿರಿಧ್ಯಸೇ ದೇವಯದ್ಭಿಃ ॥ ೮ ॥

ಪದಪಾಠಃ

ತ್ವೇ ಇತಿ । ಧೇನುಃ । ಸುಽದುಘಾ । ಜಾತಽವೇದಃ । ಅಸಶ್ಚತಾಽಇವ । ಸಮನಾ । ಸಬಃಽಧುಕ್ ।
ತ್ವಂ । ನೃಽಭಿಃ । ದಕ್ಷಿಣಾವತ್ಽಭಿಃ । ಅಗ್ನೇ । ಸುಽಮಿತ್ರೇಭಿಃ । ಇಧ್ಯಸೇ । ದೇವಯುತ್ಽಭಿಃ ॥ ೮ ॥

ಸಾಯಣಭಾಷ್ಯಂ

ಹೇ ಜಾತವೇದೋ ಜಾತಪ್ರಜ್ಞಾಗ್ನೇ ತ್ವೇ ತ್ವಯಿ ಸುದುಘಾ ಸುಷ್ಠು ಪಯಸೋ ದೋಗ್ಧ್ರೀ ಕಾಚಿದ್ಧೋಮಸಾಧನಭೂತಾ ಧೇನುರಸ್ತಿ । ಕೀದೃಶೀ । ಅಸಶ್ಚತೇವ ಸಂಗವರ್ಜಿತೇನೇವೈಕತ್ರ ಸ್ಥಿತ್ಯಭಾವಾತ್ಕುತ್ರಾಪಿ ನ ಸಂಯುಕ್ತೇನಾದಿತ್ಯೇನ ಸಮನಾ ಸಂಗತಾ ಸಬರ್ಧುಗಮೃತಂ ದುಹಾನಾ। ಗೋರೂಪಾ ಮಾಧ್ಯಮಿಕಾ ವಾಗ್ವೈದ್ಯುತೇ ತ್ವಯ್ಯಸ್ತೀತಿ ಭಾವಃ । ತಾದೃಶಸ್ತ್ವಂ ನೃಭಿಃ ಕರ್ಮನೇತೃಭಿರ್ದಕ್ಷಿಣಾವದ್ಭಿರ್ಋತ್ವಿಗ್ಭ್ಯೋ ದೇಯತ್ವೇನ ತದ್ವದ್ಭಿರ್ದೇವಯದ್ಭಿರ್ದೇವಕಾಮೈಃ ಸುಮಿತ್ರೇಭಿರಸ್ಮಾಭಿರಿಧ್ಯಸೇ । ಹವಿರ್ಭಿರ್ದೀಪ್ಯಸೇ ॥

ಪ್ರತಿಪದಾರ್ಥ

**ಜಾತವೇದಃ**—ಜಾತವೇದೋರೂಪನಾದ । **ಅಗ್ನೇ**—ಎಲೈ ಅಗ್ನಿಯೇ । **ಅಸಶ್ಚತೇವ**—(ಎಲ್ಲಿಯೂ ಸ್ಥಿರವಾಗಿ ನಿಲ್ಲದ) ಸರ್ವದಾ ಸಂಚಾರಿಯಾದ ಆದಿತ್ಯನೊಡನೆ । **ಸಮನಾ**—ಸೇರಿಕೊಂಡಿರುವ (ಮತ್ತು) । **ಸಬರ್ಧುಕ್**—ಅಮೃತವನ್ನು ಕರೆಯುವ ಮಾಧ್ಯಮಿಕಾ ವಾಗ್ದೇವಿಯಂತೆ । **ತ್ವೇ**—ನಿನ್ನಲ್ಲಿ । **ಸುದುಘಾ**—ಉತ್ತಮವಾದ ಕ್ಷೀರವನ್ನು ಕರೆಯುವ । **ಧೇನುಃ**—ಧೇನುವು ಸ್ಥಾಪಿತಳಾಗಿದ್ದಾಳೆ । **ತ್ವಂ**—ನೀನು । **ದಕ್ಷಿಣಾವದ್ಭಿಃ**-

ದಕ್ಷಿಣೆಯೊಡನೆ ಕೂಡಿರುವವರೂ । **ದೇವಯದ್ಭಿಃ**—ದೇವಪೂಜಾನಿರತರೂ । **ಸುಮಿತ್ರೇಭಿಃ**—ಸುಮಿತ್ರಸಂಜ್ಞಕರೂ ಆದ । **ನೃಭಿಃ**—ಋತ್ವಿಕ್ಕುಗಳಿಂದ । **ಇಧ್ಯಸೇ**—ಪ್ರಜ್ವಲಿತನಾಗುತ್ತೀಯೆ.

ಭಾವಾರ್ಥ

ಜಾತವೇದೋರೂಪನಾದ ಎಲೈ ಅಗ್ನಿಯೇ, ಎಲ್ಲಿಯೂ ಸ್ಥಿರವಾಗಿ ನಿಲ್ಲದೆ ಸರ್ವದಾ ಸಂಚಾರಿಯಾದ ಆದಿತ್ಯನೊಡನೆ ಸೇರಿಕೊಂಡಿರುವ ಮತ್ತು ಅಮೃತವನ್ನು ಕರೆಯುವ ಮಾಧ್ಯಮಿಕಾ ವಾಗ್ದೇವಿಯಂತೆ ನಿನ್ನಲ್ಲಿ ಉತ್ತಮವಾದ ಕ್ಷೀರವನ್ನು ಕರೆಯುವ ಧೇನುವು ಸ್ಥಾಪಿತಳಾಗಿದ್ದಾಳೆ. ದಕ್ಷಿಣೆಯೊಡನೆ ಕೂಡಿರುವವರೂ, ದೇವಪೂಜಾನಿರತರೂ, ಸುಮಿತ್ರಸಂಜ್ಞಕರೂ ಆದ ಋತ್ವಿಕ್ಕುಗಳಿಂದ ನೀನು ಪ್ರಜ್ವಲಿತನಾಗುತ್ತೀಯೆ.

English Translation

In you, Jatavedas, is the milch cow, easy to be milked, yielding ambrosia as it were inexhaustibly in battle, you are kindled, Agni, by the devout Sumitras who are entitled to the sacrificial donation.

ಸಂಹಿತಾಪಾಠಃ

**ದೇವಾಶ್ಚಿತ್ತೇ ಅಮೃತಾ ಜಾತವೇದೋ ಮಹಿಮಾನಂ ವಾಧ್ರ್ಯಶ್ವ ಪ್ರ ವೋಚನ್ ।**
**ಯತ್ಸಂಪೃಚ್ಛಂ ಮಾನುಷೀರ್ವಿಶ ಆಯನ್ತ್ವಂ ನೃಭಿರಜಯಸ್ತ್ವಾವೃಧೇಭಿಃ ॥೯॥**

ಪದಪಾಠಃ

**ದೇವಾಃ । ಚಿತ್ । ತೇ । ಅಮೃತಾಃ । ಜಾತऽವೇದಃ । ಮಹಿಮಾನಂ । ವಾಧ್ರಿऽಅಶ್ವ । ಪ್ರ । ವೋಚನ್ ।**
**ಯತ್ । ಸಂऽಪೃಚ್ಛಂ । ಮಾನುಷೀಃ । ವಿಶಃ । ಆಯನ್ । ತ್ವಂ । ನೃऽಭಿಃ । ಅಜಯಃ । ತ್ವಾऽವೃಧೇಭಿಃ ॥**

ಸಾಯಣಭಾಷ್ಯಂ

**ಹೇ ಜಾತವೇದೋ ಹೇ ವಾಧ್ರ್ಯಶ್ವಾಗ್ನೇ ತೇ ತವ ಮಹಿಮಾನಮಮೃತಾ ದೇವಾಶ್ಚಿದ್ದೇವಾ ಅಪಿ ಪ್ರ ವೋಚನ್ । ಪ್ರಬ್ರುವಂತಿ। ಯದ್ಯದಾ ಮಾನುಷೀರ್ಮನುಷ್ಯಸಂಬಂಧಿನ್ಯೋ ವಿಶಃ ಪ್ರಜಾಃ ಸಂಪೃಚ್ಛಂ ದೇವೈಃ ಸಹ ಕೋ ವಾ ಅಸುರಾನ್ಹಂತೀತ್ಯೇವಮಾದಿಕಂ ಸಂಪ್ರಶ್ನಮಾಯನ್ ಪ್ರಾಪ್ತವಂತಃ ತದಾ ತ್ವಂ ನೃಭಿಃ ಸರ್ವಸ್ಯ ನೇತೃಭಿಸ್ತ್ವಾವೃಧೇಭಿಸ್ತ್ವಯಾ ವರ್ಧಿತೈರ್ದೇವೈಃ ಸಹ ಕರ್ಮವಿಘ್ನಕಾರಿಣಸ್ತ್ವನಜಯಃ । ಜಿತವಾನಸಿ ॥**

ಪ್ರತಿಪದಾರ್ಥ

**ವಾಧ್ರ್ಯಶ್ವ**—ವಧ್ರ್ಯಶ್ವಸಂಬಂಧಿಯಾದ । **ಜಾತವೇದಃ**—ಎಲೈ ಅಗ್ನಿಯೇ । **ತೇ**—ನಿನ್ನ । **ಮಹಿಮಾನಂ**—ಮಹತ್ತ್ವವನ್ನು । **ಅಮೃತಾಃ**—ಮರಣರಹಿತರಾದ । **ದೇವಾಶ್ಚಿತ್**—ದೇವತೆಗಳೂ ಕೂಡ ।

**ಪ್ರ ವೋಚನ್**—ಕೊಂಡಾಡುತ್ತಾರೆ | **ಯತ್**—ಯಾವಾಗ | **ಮಾನುಷೀಃ**—ಮಾನವರ ಗುಂಪಿಗೆ ಸೇರಿದ | **ವಿಶಃ**—ಪ್ರಜೆಗಳು | **ಸಂಪೃಚ್ಛಂ**—"ಅಸುರರನ್ನು ಕೊಲ್ಲುವವರು ಯಾರು ?" ಎಂಬ ಪ್ರಶ್ನೆಯನ್ನು | **ಆಯನ್**—ಕೇಳುವರೋ ಆಗ | **ತ್ವಂ**—ನೀನು | **ನೃಭಿಃ**—ಮಾರ್ಗದರ್ಶಕರಾದವರೂ | **ತ್ವಾವೃಧೇಭಿಃ**—ನಿನ್ನಿಂದ ಪೋಷಿಸಲ್ಪಡುವವರೂ ಆದ ದೇವತೆಗಳೊಡಗೂಡಿ | **ಅಜಯಃ**—ಅವರನ್ನು ಜಯಿಸುವೆ.

ಭಾವಾರ್ಥ

ವಧ್ರ್ಯಶ್ವಸಂಬಂಧಿಯಾದ ಎಲೈ ಅಗ್ನಿಯೇ, ನಿನ್ನ ಮಹತ್ತ್ವವನ್ನು ಮರಣರಹಿತರಾದ ದೇವತೆಗಳೂ ಕೂಡ ಕೊಂಡಾಡುತ್ತಾರೆ. ಮಾನವರಾದ ನಾವು ಯಾವಾಗ "ಅಸುರರನ್ನು ಕೊಲ್ಲತಕ್ಕ ವೀರನಾರು ?" ಎಂದು ಪ್ರಶ್ನಿಸುವೆವೋ ಆಗ ನೀನು ಮಾರ್ಗದರ್ಶಕರೂ, ನಿನ್ನಿಂದಲೇ ಪೋಷಿಸಲ್ಪಡುವವರೂ ಆದ ದೇವತೆಗಳೊಡಗೂಡಿ ಅವರನ್ನು ಜಯಿಸುವೆ.

English Translation

The immortal gods have proclaimed your greatness, Jatavedas, Vadhryashwa (Agni); when human beings came to inquire (who would slay the Asuras), then you with (the gods), the leaders of all, fostered by you overcame (those who impeded the ceremony).

ಸಂಹಿತಾಪಾಠಃ

ಪಿತೇವ ಪುತ್ರಮಬಿಭರುಪಸ್ಥೇ ತ್ವಾಮಗ್ನೇ ವಧ್ರ್ಯಶ್ವಃ ಸಪರ್ಯನ್ |
ಜುಷಾಣೋ ಅಸ್ಯ ಸಮಿಧಂ ಯವಿಷ್ಠೋತ ಪೂರ್ವಾ ಅವನೋರ್ವ್ರಾ-
ಧತಶ್ಚಿತ್ || ೧೦ ||

ಪದಪಾಠಃ

ಪಿತಾಽಇವ | ಪುತ್ರಂ | ಅಬಿಭಃ | ಉಪಽಸ್ಥೇ | ತ್ವಾಂ | ಅಗ್ನೇ | ವಧ್ರಿಽಅಶ್ವಃ | ಸಪರ್ಯನ್ |
ಜುಷಾಣಃ | ಅಸ್ಯ | ಸಂಽಇಧಂ | ಯವಿಷ್ಠ | ಉತ | ಪೂರ್ವಾನ್ | ಅವನೋಃ | ವ್ರಾಧತಃ | ಚಿತ್||೧೦||

ಸಾಯಣಭಾಷ್ಯಂ

ಹೇ ಅಗ್ನೇ ತ್ವಾಮುಪಸ್ಥೇ ಪೃಥಿವ್ಯಾ ಉಪಸ್ಥಾನ ಉತ್ತರವೇದ್ಯಾಂ ಸಪರ್ಯನ್ ಪರಿಚರ್ಯೋ-ಕವಮ್ ಪರಿಚರನ್ವಧ್ರ್ಯಶ್ವೋ ಮಮ ಪಿತಾಬಿಭಃ | ಧೃತವಾನ್| ಹವಿರ್ಭಿಃ ಪೋಷಿತವಾನ್ವಾ| ಕಥಮಿವ| ಪಿತೇವ ಯಥಾ ಪಿತಾ ಸಮೀಪೇ ಪುತ್ರಂ ಸ್ಥಾಪಯತಿ ಪೋಷಯತಿ ವಾ || ಡುಭೃಞ್ ಧಾರಣ-ಪೋಷಣಯೋಃ | ಲಙ್ ತಿಪಿ ಗುಣೇ ಕೃತೇ ಹಲ್ಙ್ಯಾದಿನಾ ತಿಪೋ ಲೋಪಃ || ಹೇ ಯವಿಷ್ಠ ಯುವತ-ಮಾಗ್ನೇ ಉತಾಪಿ ಚಾಸ್ಯ ವಧ್ರ್ಯಶ್ವಸ್ಯ ಪಿತುರ್ವಾ ಮಮ ವಾ ಸಮಿಧಂ ಜುಷಾಣಃ ಸೇವಮಾನಃ ಸನ್ ಪೂರ್ವಾನ್ಪ್ರತ್ನಾನ್ವ್ರಾಧತಶ್ಚಿದ್ಬಾಧಕಾನಪಿ ಶತ್ರೂನವನೋಃ | ಅವಧೀಃ || ವನತಿರ್ಹಿಂಸಾಯಾಂ ಭೌವಾ-ದಿಕಃ | ವ್ಯತ್ಯಯೇನೋಪ್ರತ್ಯಯಃ ||

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ | **ಪಿತೇವ**—ತಂದೆಯು | **ಪುತ್ರಂ**—ತನ್ನ ಮಗುವನ್ನು ಸಮೀಪದಲ್ಲಿ ಕುಳ್ಳಿರಿಸಿ ಪೋಷಿಸುವಂತೆ | **ತ್ವಾಂ**—ನಿನ್ನನ್ನು | **ಉಪಸ್ಥೇ**—ಉತ್ತರವೇದಿಯಲ್ಲಿ | **ಸಪರ್ಯನ್**—ಪೂಜಿಸಿದ | **ವಧ್ರ್ಯಶ್ವಃ**—ವಧ್ರ್ಯಶ್ವನು | **ಅಬಿಭಃ**—ಹವಿರಾದಿಗಳಿಂದ ಪೋಷಿಸಿದ್ದಾನೆ | **ಯವಿಷ್ಠ**—ಅತ್ಯಂತ ಯುವಕನಾದ ಎಲೈ ಅಗ್ನಿಯೇ | **ಅಸ್ಯ ಸಮಿಧಂ**—ನನ್ನ ಹವಿರಾದಿಗಳನ್ನು | **ಜುಷಾಣಃ**—ಸೇವಿಸುವ ನೀನು | **ಪೂರ್ವಾನ್**-ಹಿಂದಿನಿಂದ ಇರತಕ್ಕವರೂ | **ವ್ರಾಧತಶ್ಚಿತ್**-ಹಿಂಸಕರೂ ಆದ ಸಕಲ ಶತ್ರುಗಳನ್ನೂ | **ಅವನೋಃ**—ಕೊಂದಿರುವೆ.

ಭಾವಾರ್ಥ

ಎಲೈ ಅಗ್ನಿಯೇ, ತಂದೆಯು ತನ್ನ ಮಗುವನ್ನು ಸಮೀಪದಲ್ಲಿ ಕುಳ್ಳಿರಿಸಿ ಪೋಷಿಸುವಂತೆ ನಿನ್ನನ್ನು ಉತ್ತರವೇದಿಯಲ್ಲಿ ಪೂಜಿಸಿದ ವಧ್ರ್ಯಶ್ವನು ಹವಿರಾದಿಗಳಿಂದ ಪೋಷಿಸಿದ್ದಾನೆ. ಅತ್ಯಂತ ಯುವಕನಾದ ಎಲೈ ಅಗ್ನಿಯೇ, ನನ್ನ ಹವಿರಾದಿಗಳನ್ನು ಸೇವಿಸುವ ನೀನು ಹಿಂದಿನಿಂದ ಇರತಕ್ಕವರೂ, ಹಿಂಸಕರೂ ಆದ ಸಕಲ ಶತ್ರುಗಳನ್ನೂ ಕೊಂದಿರುವೆ.

English Translation

Vadhryashwa honouring you, Agni, placed yon upon the altar as a father (places) his son (upon his lap); pleased with his fuel, youngest (of the gods), you slew the ancient obstructers (of the rite).

ಸಂಹಿತಾಪಾಠಃ

ಶಶ್ವದಗ್ನಿರ್ವಧ್ರ್ಯಶ್ವಸ್ಯ ಶತ್ರೂನ್ನೃಭಿರ್ಜಿಗಾಯ ಸುತಸೋಮವದ್ಭಿಃ |
ಸಮನಂ ಚಿದದಹಶ್ಚಿತ್ರಭಾನೋಽವ ವ್ರಾಧಂತಮಭಿನದ್ವೃಧಶ್ಚಿತ್ ॥ ೧೧ ॥

ಪದಪಾಠಃ

ಶಶ್ವತ್ | ಅಗ್ನಿಃ | ವಧ್ರಿಽಅಶ್ವಸ್ಯ | ಶತ್ರೂನ್ | ನೃಽಭಿಃ | ಜಿಗಾಯ | ಸುತಸೋಮವತ್ಽಭಿಃ |
ಸಮನಂ | ಚಿತ್ | ಅದಹಃ | ಚಿತ್ರಭಾನೋ ಇತಿ ಚಿತ್ರಽಭಾನೋ | ಅವ | ವ್ರಾಧಂತಂ | ಅಭಿನತ್ | ವೃಧಃ | ಚಿತ್ || ೧೧ ||

ಸಾಯಣಭಾಷ್ಯಂ

ಸೋಽಗ್ನಿರ್ವಧ್ರ್ಯಶ್ವಸ್ಯ ಸುತಸೋಮವದ್ಭಿರಭಿಷುತಸೋಮೈಃ || ಅನುವಾದಕೋ ಮತ್ವರ್ಥೀಯಃ || ತೈರ್ನೃಭಿರ್ಋತ್ವಿಗ್ಭಿಃ ಶಶ್ವತ್ ಸರ್ವದಾ ಶತ್ರೂಞ್ಜಿಗಾಯ | ಜಿತವಾನ್ | ಅಥ ಪ್ರತ್ಯಕ್ಷಃ | ಹೇ ಚಿತ್ರಭಾನೋ ನಾನಾತೇಜಸ್ಕ ಚಾಯನೀಯದೀಪ್ತಿಮನ್ನಗ್ನೇ ತ್ವಂ ಸಮನಂ ಚಿತ್ | ಸಮನಮಿತಿ

**ಸಂಗ್ರಾಮನಾಮ | ತಮಸ್ಯದಹಃ ಸ್ವತೇಜೋಭಿಃ | ಅಥ ತವ ಸ್ತೋತಾ ವಾಧ್ರ್ಯಶ್ವೋ ವೃಧಶ್ಚಿತ್ಸ್ವಯಂ ವೃದ್ಧೋ ಭವನ್ವ್ಯ್ರಥಂತಂ ವರ್ಧಮಾನಂ ಹಿಂಸಕಂ ನಾವಾಭಿನತ್ | ಅವಾಙ್ಮುಖಂ ಕೃತ್ವಾಚ್ಛಿನತ್ | ಯದ್ವಾ | ತ್ವಮೇವ ತಮವಾಭಿನತ್ | ಅವಾಙ್ಮುಖಂ ಕೃತ್ವಾಭಿನಃ | ಅಚ್ಛಿನಃ || ಪ್ರಥಮಮಧ್ಯಮಯೋಃ ಸಮಾನಮೇತದ್ರೂಪಂ ||**

ಪ್ರತಿಪದಾರ್ಥ

**ಅಗ್ನಿಃ**—ಅಗ್ನಿಯು | **ವಧ್ರ್ಯಶ್ವಸ್ಯ**—ವಧ್ರ್ಯಶ್ವನಿಗೆ ಸೇರಿದವರೂ | **ಸುತ ಸೋಮವದ್ಭಿಃ**—ಹಿಂಡಿದ ಸೋಮವನ್ನು ಅರ್ಪಿಸುವವರೂ ಆದ | **ನೃಭಿಃ**—ಋತ್ವಿಕ್ಕುಗಳ ಸಹಾಯದಿಂದ | **ಶಶ್ವತ್**—ಸರ್ವದಾ | **ಶತ್ರೂನ್**—ಶತ್ರುಗಳನ್ನು | **ಜಿಗಾಯ**—ಜಯಿಸಿದ್ದಾನೆ | **ಚಿತ್ರಭಾನೋ**—ಅನೇಕವಿಧವಾದ ಕಾಂತಿಯುಳ್ಳ ಎಲೈ ಅಗ್ನಿಯೇ | **ಸಮನಂ ಚಿತ್**—ಸಂಗ್ರಾಮವನ್ನೂ | **ಅದಹಃ**—ನಿನ್ನ ತೇಜಸ್ಸಿನಿಂದ ದಹಿಸಿದ್ದೀಯೆ | (ನಿನ್ನನ್ನು ಸ್ತುತಿಸುವ ವಾಧ್ರ್ಯಶ್ವನು) **ವೃಧಶ್ಚಿತ್**—ಪ್ರಬಲನಾಗಿದ್ದರೂ | **ವ್ರ್ಯಥಂತಂ**—ಹಿಂಸಕನಾದ ಶತ್ರುವನ್ನು| **ಅವಾಭಿನತ್**—ನಾಶಪಡಿಸಿದ್ದಾನೆ.

ಭಾವಾರ್ಥ

ವಧ್ರ್ಯಶ್ವನಿಗೆ ಸೇರಿದದರೂ, ಹಿಂಡಿದ ಸೋಮವನ್ನು ಅರ್ಪಿಸುವವರೂ ಆದ ಋತ್ವಿಕ್ಕುಗಳ ಸಹಾಯದಿಂದ ಅಗ್ನಿಯು ಸರ್ವದಾ ಶತ್ರುಗಳನ್ನು ಜಯಿಸಿದ್ದಾನೆ. ಅನೇಕವಿಧವಾದ ಕಾಂತಿಯುಳ್ಳ ಎಲೈ ಅಗ್ನಿಯೇ, ನೀನು ನಿನ್ನ ತೇಜಸ್ಸಿನಿಂದ ಸಂಗ್ರಾಮವನ್ನೂ ದಹಿಸಿದ್ದೀಯೆ. ನಿನ್ನನ್ನು ಸ್ತುತಿಸುವ ವಾಧ್ರ್ಯಶ್ವನು ಪ್ರಬಲನಾದವನೂ, ಹಿಂಸಕನೂ ಆದ ಶತ್ರುವನ್ನೂ ಜಯಿಸಿದ್ದಾನೆ.

English Translation

Agni by means of the priests of Vadhryashwa pouring out libations always conqners his foes; you (Agni) shining with varied splendour, have consumed the battle; (your praiser) self-fosterod has destroyed his powerful (assailant),

ಸಂಹಿತಾಪಾಠಃ

ಅಯಮಗ್ನಿರ್ವಧ್ರ್ಯಶ್ವಸ್ಯ ವೃತ್ರಹಾ ಸನಕಾತ್ಪ್ರೇದ್ಧೋ ನಮಸೋಪವಾಕ್ಯಃ |
ಸ ನೋ ಅಜಾಮೀಁರುತ ವಾ ವಿಜಾಮೀನಭಿ ತಿಷ್ಠ ಶರ್ಧತೋ ವಾಧ್ರ್ಯಶ್ವ ||

ಪದಪಾಠಃ

ಅಯಂ | ಅಗ್ನಿಃ | ವಧ್ರಿಽಅಶ್ವಸ್ಯ | ವೃತ್ರಽಹಾ | ಸನಕಾತ್ | ಪ್ರಽಇದ್ಧಃ | ನಮಸಾ | ಉಪಽವಾಕ್ಯಃ |
ಸಃ | ನಃ | ಅಜಾಮೀನ್ | ಉತ | ವಾ | ವಿಽಜಾಮೀನ್ | ಅಭಿ | ತಿಷ್ಠ | ಶರ್ಧತಃ | ವಧ್ರಿಽಅಶ್ವ ||೧೨||

ಸಾಯಣಭಾಷ್ಯಂ

ವೃತ್ರಹಾ ಶತ್ರೂಣಾಂ ಹಂತಾಯಮಗ್ನಿಃ ಸನಕಾಚ್ಚಿರಾದಾರಭ್ಯ ವಧ್ರ್ಯಶ್ವಸ್ಯ ಹವಿಷಾ ಪ್ರೇದ್ಧಃ ಪ್ರಕರ್ಷೇಣ ದೀಪಿತೋ ಭವತಿ। ತಥಾ ತಸ್ಯ ನಮಸಾ ನಮಸ್ಕಾರೇಣ ಸಹೋಪವಾಕ್ಯ ಉಪಸ್ತೋತವ್ಯೋ ಭವತಿ। ಹೇ ವಾಧ್ರ್ಯಶ್ವ ವಧ್ರ್ಯಶ್ವಕುಲೇ ಮಥನೇನ ಸಮುತ್ಪನ್ನಾಗ್ನೇ ಸ ತ್ವಂ ನೋಽಸ್ಮಾಕಮಜಾಮೀನಜ್ಞಾತೀಞ್ಛತ್ರೂನ್ ಉತ ವಾಪಿ ವಾ ಶರ್ಧತೋ ಹಿಂಸತೋ ವಿಜಾಮೀನ್ವಿವಿಧಾಞ್ಜ್ಞಾತೀನಪ್ಯಭಿ ತಿಷ್ಠ। ಅಭಿಭವ॥

ಪ್ರತಿಪದಾರ್ಥ

**ವೃತ್ರಹಾ**—ಶತ್ರುನಾಶಕನಾದ। **ಅಯಂ ಅಗ್ನಿಃ**—ಈ ಅಗ್ನಿಯು। **ಸನಕಾತ್**—ಅನೇಕಕಾಲದಿಂದ। **ವಧ್ರ್ಯಶ್ವಸ್ಯ**—ವಧ್ರ್ಯಶ್ವನ ಹವಿಸ್ಸಿನಿಂದ। **ಪ್ರೇದ್ಧಃ**—ಪ್ರಜ್ವಲಿತನಾಗಿದ್ದಾನೆ। **ನಮಸಾ**—ಅವನ ನಮಸ್ಕಾರದೊಡನೆ। **ಉಪವಾಕ್ಯಃ**—ಪ್ರಶಂಸಿಸಲ್ಪಡುತ್ತಾನೆ। **ವಾಧ್ರ್ಯಶ್ವ**—ವಧ್ರ್ಯಶ್ವನ ಪ್ರಯತ್ನದಿಂದ ಉತ್ಪನ್ನನಾದ ಎಲೈ ಅಗ್ನಿಯೇ। **ಸಃ**—ನೀನು। **ನಃ**—ನಮಗೆ। **ಶರ್ಧತಃ**—ಹಿಂಸೆಯನ್ನು ಕೊಡುವ। **ಅಜಾಮೀನ್**—ಬಂಧುಗಳಲ್ಲದ ಶತ್ರುಗಳನ್ನೂ। **ಉತ ವಾ**—ಹಾಗೆಯೇ। **ವಿಜಾಮೀನ್**—ಜ್ಞಾತಿರೂಪರಾದ ಶತ್ರುಗಳನ್ನೂ। **ಅಭಿ ತಿಷ್ಠ**—ಸೋಲಿಸು.

ಭಾವಾರ್ಥ

ಶತ್ರುನಾಶಕನಾದ ಈ ಅಗ್ನಿಯು ಅನೇಕಕಾಲದಿಂದ ವಧ್ರ್ಯಶ್ವನ ಹವಿಸ್ಸಿನಿಂದ ಪ್ರಜ್ವಲಿತನಾಗಿದ್ದಾನೆ. ಅವನ ನಮಸ್ಕಾರದೊಡನೆ ಪ್ರಶಂಸಿತನಾಗಿದ್ದಾನೆ. ವಧ್ರ್ಯಶ್ವನ ಪ್ರಯತ್ನದಿಂದ ಉತ್ಪನ್ನನಾದ ಎಲೈ ಅಗ್ನಿಯೇ, ನಮಗೆ ಹಿಂಸೆಯನ್ನು ಕೊಡುವ ಸಕಲ ಶತ್ರುಗಳನ್ನೂ ಜಯಿಸಿ ಅವರು ನಮಗೆ ಬಂಧುಗಳಾಗಲಿ ಅಥವಾ ಬಂಧುಗಳಲ್ಲದಿರಲಿ ಅವರನ್ನು ನಾಶಪಡಿಸು.

## English Translation

From a long period has this Agni the slayer of foes been kindled (by the ohlation) of Vadhryashwa; (he is) to be addressed with reverence; do you, (Agni, kindled in the) family of Vadhryashwa, overcome our enemies, both those who have no kinsmen and those who have many kinsmen.

# ಎಪ್ಪತ್ತನೆಯ ಸೂಕ್ತ

**ಪೀಠಿಕೆ**

ಪ್ರಕೃತ ಸೂಕ್ತವು ಆಪ್ರಿಸೂಕ್ತಗಳಲ್ಲೊಂದಾಗಿದೆ. ಋಗ್ವೇದದಲ್ಲಿ ಒಟ್ಟು ೧೦ ಆಪ್ರೀಸೂಕ್ತಗಳವೆ. ಇವುಗಳಲ್ಲಿ ಇಧ್ಮಃ (ಸಮಿದ್ಧೋಗ್ನಿರ್ವಾ) ನರಾಶಂಸಃ, ತನೂನಪಾತ್, ಇಳಃ, ಬರ್ಹಿಃ, ದೇವೀರ್ದ್ವಾರಃ, ಉಷಾಸಾನಕ್ತಾ, ದೈವ್ಯಾ ಹೋತಾರಾ ಪ್ರಚೇತಸಾ, ತಿಸ್ರೋ ದೇವ್ಯಃ ಸರಸ್ವತೀಳಾಭಾರತ್ಯಃ, ತ್ವಷ್ಟಾ, ವನಸ್ಪತಿಃ ಸ್ವಾಹಾಕೃತಯಃ ಎಂಬ ದೇವತಾಕವಾದ ಮಂತ್ರಗಳಿವೆ. ಆದರೆ ನರಾಶಂಸಃ ಮತ್ತು ತನೂನಪಾತ್ ಎಂಬ ದೇವತೆಗಳ ವಿಷಯವಾಗಿ ಕೆಲವು ಸೂಕ್ತಗಳಲ್ಲಿ ನರಾಶಂಸಃ ಎಂಬ ಒಂದೇ ದೇವತೆಯನ್ನೂ ಮತ್ತೆ ಕೆಲವಲ್ಲಿ ತನೂನಪಾತ್ ಎಂಬ ಒಂದೇ ದೇವತೆಯನ್ನೂ

ಮತ್ತೆ ಕೆಲವು ಸೂಕ್ತಗಳಲ್ಲಿ ನರಾಶಂಸಃ ಮತ್ತು ತನೂನಪಾತ್ ಎಂಬ ಉಭಯ ದೇವತೆಗಳನ್ನೂ ಸ್ತುತಿಸಲಾಗಿದೆ. ಈ ಅರ್ಥಕ್ಕನುಸಾರವಾಗಿ ಈ ಆಪ್ರೀಸೂಕ್ತಗಳನ್ನು ಮೂರುವಿಧವಾಗಿ ವಿಂಗಡಿಸಿದ್ದಾರೆ. ಹೇಗೆಂದರೆ-ವಸಿಷ್ಠ, ಅತ್ರಿ, ವಾಧ್ರ್ಯಶ್ವ, ಗೃತ್ಸಮದ ಎಂಬ ಋಷಿಪ್ರಣೀತಗಳಾದ ಆಪ್ರೀಸೂಕ್ತಗಳು ಎಂದರೆ—

೧. **ಜುಷಸ್ವ ನಃ ಸಮಿಧಮಗ್ನೇ**—ಋ. ಸಂ. ೭–೨ (ಮೈತ್ರಾವರುಣಿರ್ವಸಿಷ್ಠಃ)

೨. **ಸುಸಮಿದ್ಧಾಯ ಶೋಚಿಷೇ**—ಋ. ಸಂ. ೫–೫ (ವಸುಶ್ರುತ ಆತ್ರೇಯಃ)

೩. **ಇಮಾಂ ಮೇ ಅಗ್ನೇ ಸಮಿಧಂ**—ಋ. ಸಂ. ೧೦–೭೦ (ಸುಮಿತ್ರೋ ವಾಧ್ರ್ಯಶ್ವಃ)

೪. **ಸಮಿದ್ಧೋ ಅಗ್ನಿರ್ನಿಹಿತಃ**—ಋ. ಸಂ. ೨–೩ (ಗೃತ್ಸಮದಃ)

ಎಂಬ ಈ ನಾಲ್ಕು ಸೂಕ್ತಗಳು ಒಂದು ಗುಂಪಿಗೆ ಸೇರಿದವು. ಇವುಗಳಲ್ಲಿ ನರಾಶಂಸಃ ಎಂಬ ದೇವತಾಕವಾದ ಒಂದೊಂದು ಋಕ್ಕುಗಳಿವೆ. ಆದ್ದರಿಂದ ಈ ನಾಲ್ಕು ಸೂಕ್ತಗಳಿಗೆ **ನರಾಶಂಸವಂತಿ ಸೂಕ್ತಾನಿ**—ನರಾಶಂಸ ದೇವತೆಯನ್ನು ಮಾತ್ರ ಸ್ತುತಿಸುವ ಅಪ್ರೀಸೂಕ್ತಗಳೆಂದು ಹೆಸರು.

೧. **ಸುಸಮಿದ್ಧೋ ನ ಆ ವಹ**—ಋ. ಸಂ. ೧–೧೩ (ಮೇಧಾತಿಥಿಃ ಕಾಣ್ವಃ)

೨. **ಸಮಿದ್ಧೋ ಅಗ್ನ ಆವಹ**—ಋ. ಸಂ. ೧–೧೪೨ (ದೀರ್ಘತಮಾ ಔಚಥ್ಯಃ)

ಎಂಬ ಈ ಎರಡು ಆಪ್ರೀಸೂಕ್ತಗಳು ಎರಡನೆಯ ಗುಂಪಿಗೆ ಸೇರಿದವು. ಇವುಗಳಲ್ಲಿ ನರಾಶಂಸ ಮತ್ತು ತನೂನಪಾತ್ ಎಂಬ ಉಭಯ ದೇವತೆಯ ಪರವಾಗಿ ಒಂದೊಂದು ಋಕ್ಕುಗಳಿವೆ. ಆದುದರಿಂದ ಈ ಆಪ್ರೀಸೂಕ್ತಗಳು ನರಾಶಂಸ ಮತ್ತು ತನೂನಪಾತ್ ಎಂಬ ಉಭಯವಿಧದೇವತಾಕವಾದ ಸೂಕ್ತಗಳೆಂದು ಪ್ರಸಿದ್ಧವಾಗಿವೆ. ಈ ಸೂಕ್ತಗಳಲ್ಲಿ ಉಭಯ ದೇವತೆಗಳೂ ಇರುವುದರಿಂದ ೧–೧೪೨ ನೆಯ ಸೂಕ್ತದಲ್ಲಿ ಇಂದ್ರನನ್ನು ಬಿಟ್ಟು ಹನ್ನೊಂದು ಪ್ರಯಾಜ ಹೋಮಗಳಿಗೆ ಬದಲಾಗಿ ಹನ್ನೆರಡು ಹೋಮಗಳಿದ್ದಂತಾಯಿತು.

೧. **ಸಮಿದ್ಧೋ ಅದ್ಯ** ರಾಜಸಿ—ಋ. ಸಂ. ೧–೧೮೮ (ಅಗಸ್ತ್ಯೋ ಮೈತ್ರಾವರುಣಿಃ)

೨. **ಸಮಿತ್ಸಮಿತ್ಸುಮನಾ**—ಋ. ಸಂ. ೩–೪ (ಗಾಧಿನೋ ವಿಶ್ವಾಮಿತ್ರಃ)

೩. **ಸಮಿದ್ಧೋ ವಿಶ್ವತಸ್ಪತಿಃ**—ಋ. ಸಂ. ೯–೫ (ಕಾಶ್ಯಪೋಽಸಿತೋ ದೇವಲೋ ವಾ)

೪. **ಸಮಿದ್ಧೋ ಅದ್ಯ ಮನುಷೋ**—ಋ. ಸಂ. ೧೦–೧೧೦ (ಜಮದಗ್ನಿಃ ಭಾರ್ಗವಃ)

ಎಂಬ ಸೂಕ್ತಗಳು ಮೂರನೆಯ ಗುಂಪಿಗೆ ಸೇರಿದವು. ಇವುಗಳಲ್ಲಿ ತನೂನಪಾತ್ ಎಂಬ ದೇವತಾಕವಾದ ಋಕ್ಕುಗಳು ಮಾತ್ರವಿರುವುವು. (ನರಾಶಂಸ ದೇವತಾಕವಾದ ಋಕ್ಕುಗಳಿರುವುದಿಲ್ಲ). ಆದುದರಿಂದ ಇವುಗಳಿಗೆ **ತನೂನಪಾತ್ವಂತಿ ಸೂಕ್ತಾನಿ** ಎಂದರೆ ತನೂನಪಾತ್ ಎಂಬ ದೇವತಾಕವಾದ ಮಂತ್ರಗಳನ್ನೊಳಗೊಂಡ ಆಪ್ರೀಸೂಕ್ತಗಳೆಂದು ಹೆಸರು.

ಈ ಆಪ್ರಿಸೂಕ್ತಗಳನ್ನು ಪಶುಹೋಮ ಮಾಡುವಾಗ ಏಕಾದಶ (ಹನ್ನೊಂದು) ಪ್ರಯಾಜ ಹೋಮಗಳನ್ನು ಮಾಡುವುದಕ್ಕಾಗಿ ಪಠಿಸುವರು. **ಏಕಾದಶಾವದಾನಾನ್ಯವದ್ಯತಿ ದಶ ವೈ ಪಶೋಃ ಪ್ರಾಣಾ ಆತ್ಮೈಕಾದಶಃ** (ತೈ.ಸಂ. ೬–೩–೧೦–೩)ಎಂದು ತೈತ್ತರೀಯಸಂಹಿತಾ ವಾಕ್ಯವಿರುವುದು. ಈ ಆಪ್ರೀ ಸೂಕ್ತಗಳನ್ನು ಪಠಿಸಿ ಪಶುಹೋಮ ಮಾಡುವಾಗ ಒಂದು ವಿಶೇಷ ನಿಯಮವಿರುವುದು. ಆಯಾ ಗೋತ್ರೋತ್ಪನ್ನರಾದ ಯಜ್ಞಕರ್ತರು ಯಜ್ಞಮಾಡುವಾಗ ಆಯಾ ಋಷಿಪ್ರಣೀತವಾದ ಆಪ್ರೀಸೂಕ್ತಗಳನ್ನೇ ಪಠಿಸಬೇಕೆಂದು ನಿಯಮವಿರುವುದು(ಆ. ೩–೨) ಪ್ರಕೃತವಾದ ಆಪ್ರೀಸೂಕ್ತವು ವಾಧ್ರ್ಯಶ್ವ ಗೋತ್ರೋತ್ಪನ್ನರಾದವರು ಪಠಿಸಬೇಕಾಗಿರುವುದು.

ರಲ್ಲಿ ಬ್ರಾಹ್ಮಣವಾಕ್ಯದಿಂದ ಇದೇ ಅಭಿಪ್ರಾಯವು ಸಮರ್ಥಿತವಾಗುತ್ತದೆ. ಆದರೆ ಕೆಲವರು **ಛಂದೋ**ದೇವತೆಗಳನ್ನುದ್ದೇಶಿಸಿದೆಯೆಂದೂ (ಶ. ಬ್ರಾ. ೧-೩-೨-೯), ಇನ್ನೂ ಕೆಲವರು **ಋತ್ವಾತ್ಮಕ**ವಾದ ದೇವತೆಗಳನ್ನುದ್ದೇಶಿಸಿದೆಯೆಂದೂ, (ಶ. ಬ್ರಾ. ೧-೩-೨-೮) ಇತರರು **ಯೋಗಪಶು**ವನ್ನುದ್ದೇಶಿಸಿದೆಯೆಂದೂ (**ಕೌ. ಬ್ರಾ. ೩.೪**) ಕೆಲವರು **ಪ್ರಾಣಾತ್ಮಕ**ವಾದ ದೇವತೆಯನ್ನುದ್ದೇಶಿಸಿದೆಯೆಂದೂ, (ಐ. ಬ್ರಾ. ೧-೧೧, ಶ. ಬ್ರಾ. ೧೧-೨-೬-೨೬) ಮತ್ತು ಇನ್ನೂ ಕೆಲವರು **ಆತ್ಮ**ನನ್ನೇ ಉದ್ದೇಶಿಸಿದೆಯೆಂದೂ (ತೈ. ಸಂ. ೬-೧-೫-೪) ಹೇಳಿರುವುದನ್ನೆಲ್ಲಾ ಸಂಗ್ರಹಿಸಿ ಹೇಳಿ ಅನಂತರ ಅಗ್ನಿಯನ್ನುದ್ದೇಶಿಸಿದೆಯೆಂದು ಹೇಳುವುದೇ ಸಾಧುವಾದ ಮತವೆಂದು ತಮ್ಮ ಉಚಿತವಾದ ಅಭಿಪ್ರಾಯವನ್ನು ಹೇಳಿದ್ದಾರೆ.

**ಕಾತ್ಯಾಯನರ ಸರ್ವಾನುಕ್ರಮಣಿಕೆಯಲ್ಲಿ ಆಪ್ರ** ಮತ್ತು **ಆಪ್ರೀ** ಎಂಬ ಶಬ್ದಗಳಿಗೆ ವ್ಯತ್ಯಾಸವನ್ನೂ ತಿಳಿಸಿ (ಈ ವ್ಯತ್ಯಾಸವನ್ನು ಆಪ್ರೀಸೂಕ್ತದ ಎಂದರೆ ೧-೧೪೨ ನೇ ಸೂಕ್ತದ ಕೊನೆಯಲ್ಲಿ ತಿಳಿಸಿರುತ್ತದೆ. **ನರಾಶಂಸ** ದೇವತೆಯನ್ನು ಉದ್ದೇಶಿಸಿರುವ ಋಕ್ಕುಗಳಿಗೆ **ಆಪ್ರ**ಮಂತ್ರಗಳೆಂದೂ ಮತ್ತು **ತನೂನಪಾತ್** ಎಂಬ ದೇವತೆಯನ್ನು ಉದ್ದೇಶಿಸಿರುವ ಋಕ್ಕುಗಳಿಗೆ ಆಪ್ರೀಮಂತ್ರಗಳೆಂದು ಪ್ರಸಿದ್ಧಿಯಿದೆಯೆಂದು ತೋರಿಸಿದ್ದಾರೆ. ಬೃಹದ್ದೇವತೆಯಲ್ಲಿ—

**ದ್ವಿತೀಯೇ ದ್ವಾದಶರ್ಚೇ ತು ಪ್ರತ್ಯೃಚಂ ಯಾಸ್ತು ದೇವತಾಃ ।**
**ಸ್ತೂಯಂತೇ ಹ್ಯಗ್ನಿನಾ ಸಾರ್ಧಂ ತಾಸಾಂ ನಾಮಾನಿ ಮೇ ಶೃಣು ॥**
**ಪ್ರಥಮಾಯಾಂ ಸ್ತುತಶ್ಚೇಧ್ಮೋ ದ್ವಿತೀಯಾಯಾಂ ತನೂನಪಾತ್ ।**
**ನರಾಶಂಸ ಸ್ತೃತೀಯಾಯಾಂ ಚತುರ್ಥ್ಯಾಂ ಸ್ತೂಯತೇ ತ್ವಿಳಃ ॥**
**ಬರ್ಹಿರೇವ ತು ಪಂಚಮ್ಯಾಂ ದ್ವಾರೋ ದೇವ್ಯಸ್ತತೋಽನ್ಯಯಾ ।**
**ನಕ್ತೋಷಾಸಾ ತು ಸಪ್ತಮ್ಯಾಮಷ್ಟಮ್ಯಾಂ ಸಂಸ್ತುತೌ ಸಹ ॥**
**ದೇವ್ಯಾವಿತಿ ತು ಹೋತಾರೌ ನವಮಾಮೃಚಿ ಸಂಸ್ತುತಾಃ ।**
**ತಿಸ್ರೋ ದೇವ್ಯೋ ದಶಮ್ಯಾಂ ತು ಜ್ಞೇಯಸ್ತ್ವಷ್ಟೈವ ತು ಸ್ತುತಃ ॥**
**ಏಕಾದಶ್ಯಾಂ ತು ಸೂಕ್ತಸ್ಯ ಸ್ತುತಂ ವಿದ್ಯಾದ್ವನಸ್ಪತಿಃ ।**
**ದ್ವಾದಶ್ಯಾಂ ತು ಸ್ತುತಾ ದೇವೀರ್ವಿದ್ಯಾತ್ಸ್ವಾಹಾಕೃತೀರಿತಿ ॥**
**ಸೂಕ್ತೇಽಸ್ಮಿನ್ಪ್ರತ್ಯೃಚಂ ಯಾಸು ದೇವತಾಃ ಪರಿಕೀರ್ತಿತಾಃ ।**
**ತಾ ಏವ ಸರ್ವಾಸ್ವಾಪ್ರೀಷು ದ್ವಿತೀಯಾ ತು ವಿಕಲ್ಪ್ಯತೇ ॥**

(ಬೃ. ದೇ. ೨-೧೪೬ ರಿಂದ ೧೫೧)

ಎಂದು ಇಧ್ಮಾದಿ ಎಲ್ಲಾ ದೇವತೆಗಳ ಹೆಸರನ್ನು ನಿರ್ದೇಶಿಸಿ ಸೂಕ್ತದ ಕ್ರಮವನ್ನೂ, ಅಲ್ಲಲ್ಲಿ ಒಂದೊಂದು ಋಕ್ಕುಗಳಲ್ಲೂ ಇರುವ ಪ್ರತ್ಯೇಕವಾದ ದೇವತೆಯನ್ನುದ್ದೇಶಿಸಿರುವುದನ್ನೂ ತಿಳಿಸಿದ್ದಾರೆ- ಆಪ್ರೀಸೂಕ್ತಗಳೆಷ್ಟು ಎಂಬ ವಿಷಯದಲ್ಲಿ ಹೇಳುತ್ತಾನಿರುಕ್ತಕಾರರು,

**ಇತೀಮಾನ್ಯೇಕಾದಶಾಪ್ರೀಸೂಕ್ತಾನಿ । ತೇಷಾಂ ವಾಸಿಷ್ಠಮಾತ್ರೇಯಂ ವಾಧ್ರ್ಯಶ್ವಂ ಗಾರ್ತ್ಸ-ಮದಮಿತಿ ನಾರಾಶಂಸವಂತಿ । ಮೈಧಾತಿಥಂ ದೈರ್ಘತಮಸಂ ಪ್ರೈಷಿತಮಿತ್ಯುಭಯವಂತ್ಯ-ತೋಽನ್ಯಾನಿ ತನೂನಪಾತ್ವಂತಿ ತನೂನಪಾತ್ವಂತಿ ॥**

(ನಿ. ೮-೨೨)

ಈ ಸೂಕ್ತಗಳಲ್ಲಿ **ವಸಿಷ್ಠ, ಅತ್ರಿ, ವಧ್ರ್ಯಶ್ವ** ಮತ್ತು **ಗೃತ್ಸಮದ** ಇವರಿಂದ ದೃಷ್ಟವಾದ ಸೂಕ್ತಗಳು, ನರಾಶಂಸಪರವಾದವು. **ಮೇಧಾತಿಥಿ** ಮತ್ತು **ದೀರ್ಘತಮಸ್** ಈ ಋಷಿಗಳಿಂದ ದೃಷ್ಟವಾದವೂ ಮತ್ತು ಪ್ರೈಷಸೂಕ್ತವೂ ಸಹ **ತನೂನಪಾತ್** ಮತ್ತು **ನರಾಶಂಸ** ಎಂಬ ಎರಡು ದೇವತೆಗಳನ್ನೂ ಉದ್ದೇಶಿಸಿದವು; ಉಳಿದ ನಾಲ್ಕು ಸೂಕ್ತಗಳೂ ಕೇವಲ **ತನೂನಪಾತ್** ಎಂಬ ದೇವತಾಪರವಾದವು. ಒಟ್ಟಿನಲ್ಲಿ (ಪ್ರೈಷಸೂಕ್ತವನ್ನೂ ಸೇರಿಸಿದರೆ) ಹನ್ನೊಂದು ಆಪ್ರೀಸೂಕ್ತಗಳು. ಇದೇ ಅಭಿಪ್ರಾಯವನ್ನು ಬೃಹದ್ದೇವತೆಯಲ್ಲಿಯೂ,

**ಪ್ರೇಷ್ಯೈಃ ಸಹಾಪ್ರೀಸೂಕ್ತಾನಿ ತಾನ್ಯೇಕಾದಶ ಸಂತಿ ಚ ।**
**ಯಜೂಂಷಿ ಪ್ರೈಷಸೂಕ್ತಂ ವಾ ದಶೈತಾನೀತರಾಣಿ ತು ॥**
**ಸೌತ್ರಾಮಣ್ಯಾನಿ ತು ತ್ರೀಣಿ ಪ್ರಾಜಾಪತ್ಯಾಶ್ವಮೇಧಿಕೇ ।**
**ಪುರುಷಸ್ಯ ತು ಯನ್ಮೇಧೇ ಯಜಷ್ಷೇವ ತು ತಾನಿ ಷಟ್ ॥**
**ಅತ್ರೈವ ಪ್ರೈಷಸೂಕ್ತಂ ಸ್ಯಾನ್ನ ಯಜುಷ್ಷಾದ್ರಿಯೇತ ತತ್ ।**
**ತೇಷಾಂ ಪ್ರೈಷಗತಂ ಸೂಕ್ತಂ ಯಚ್ಚ ದೀರ್ಘತಮಾ ಜಗೌ ।**
**ಮೇಧಾತಿಥೌ ಯದುಕ್ತಂ ಚ ತ್ರಿಣ್ಯೇವೋಭಯವಂತಿ ತು ।**
**ಋಷೌ ಗೃತ್ಸಮದೇ ಯಚ್ಚ ವಾಧ್ರ್ಯಶ್ವೇ ಚ ಯದುಚ್ಯತೇ ॥**
**ನರಾಶಂಸವದತ್ರೇಶ್ಚ ದದರ್ಶ ಚ ಯದೌರ್ವಶಃ ।**
**ತನೂನಪಾದಗಸ್ತ್ಯಶ್ಚ ಜಮದಗ್ನಿಶ್ಚ ಯಜ್ಜಗೌ ॥**
**ವಿಶ್ವಾಮಿತ್ರ ಋಷಿರ್ಯಶ್ಚ ಜಗೌ ವೈ ಕಾಶ್ಯಪೋಽಸಿತಃ ।**
**ಮೇಧಾತಿಥೇರೃಚಾಂ ಯಾಸ್ತು ಪ್ರೋಕ್ತಾ ದ್ವಾದಶದೇವತಾಃ ॥**
**ಸಂಪದ್ಯಂತೇ ಯಥಾಗ್ನಿಂ ತಾಃ ಸಂಪದಂ ತಾಂ ನಿಬೋಧತ ।**

(ಬೃ. ದೇ. ೨-೧೫೨ ರಿಂದ ೧೫೭)

ಎಂಬ ಶ್ಲೋಕಗಳಲ್ಲಿ **ಪ್ರೈಷ**ಸೂಕ್ತವನ್ನು ಸೇರಿಸಿದರೆ ಒಟ್ಟು ಹನ್ನೊಂದು **ಆಪ್ರೀ**ಸೂಕ್ತಗಳೆಂದೂ, ಇಲ್ಲದಿದ್ದರೆ ಹತ್ತು ಸೂಕ್ತಗಳೆಂದೂ ಹೇಳಿದೆ ಮತ್ತು ನಿರುಕ್ತವಾಕ್ಯವನ್ನೇ ಅನುಸರಿಸಿ **ನರಾಶಂಸ, ತನೂನಪಾತ್** ಇತ್ಯಾದಿ ದೇವತೆಗಳನ್ನುದ್ದೇಶಿಸಿದವೂ ಮತ್ತು ಮೇಧಾತಿಥ್ಯಾದಿ ಋಷಿಗಳಿಂದ ಪ್ರಣೀತವಾದವೂ ಆದ ಸೂಕ್ತಗಳ ಕ್ರಮವನ್ನು ಕೊಟ್ಟಿದೆ.

ಪ್ರೈಷಸೂಕ್ತವು ಕ್ರಮಬದ್ಧವಾಗಿಯೂ, ಎಲ್ಲಾ ಆಪ್ರೀಸೂಕ್ತಗಳ ಸಾರಾಂಶವನ್ನೂ ಒಟ್ಟಿಗೆ ಶೇಖರಿಸಿ ಒಂದು ನಿರ್ದಿಷ್ಟವಾದ ಚಿತ್ರವನ್ನು ಕೊಡತಕ್ಕುದಾಗಿಯೂ ಇದೆ. **ಆಪ್ರೀ**ಸೂಕ್ತಗಳಲ್ಲಿ ಉದ್ದೇಶಿಸಿರುವ ದೇವತೆಗಳ ವೈಯಕ್ತಿಕವಾದ ವಿಶೇಷಣಗಳನ್ನೆಲ್ಲಾ ಒಟ್ಟಿಗೆ ಸೇರಿಸಿ ಆಯಾ ದೇವತೆಗಳ ಸ್ವರೂಪವನ್ನೂ ಕರ್ತವ್ಯವನ್ನೂ ವಿಭಾಗಿಸಿ ತಿಳಿಸುತ್ತದೆ. ಪ್ರತಿಯೊಂದು ದೇವತೆಯನ್ನೂ ಉದ್ದೇಶಿಸುವಾಗಲೂ ಸಹ ಮೊದಲು **ಹೋತಾ ಯಕ್ಷತ್** ಎಂಬ ಒಂದು ನಿಯಮಿತ ಮಂತ್ರಭಾಗವನ್ನುಚ್ಚರಿಸಿ ಅನಂತರ ಆಯಾ ದೇವತೆಗಳನ್ನು ನಿರ್ದೇಶಿಸಿದೆ. ಮೊದಲು ಪ್ರೈಷಸೂಕ್ತದಲ್ಲಿ ವಿವರಿಸಿರುವ **ದೇವತಾ**, ದೇವತೆಯ ವಿಶೇಷಣ ಮತ್ತು ಕರ್ತವ್ಯ ಇವುಗಳನ್ನು ಪರಿಶೀಲಿಸಿ ಅನಂತರ ಇಂತಹ ದೇವತಾತ್ಮಕವಾದ ಆಪ್ರೀಸೂಕ್ತಗಳ ಉದ್ದಿಶ್ಯವೇನು ? ಅವುಗಳ ಲಕ್ಷಣವೇನು ? ಅವುಗಳ ಪಠನೆಗಳಿಂದ ಆಗತಕ್ಕ ಲಾಭವೇನು ? ಎಂಬ ವಿಷಯದಲ್ಲಿರುವ ಅಭಿಪ್ರಾಯಗಳ ಸಾಮರಸ್ಯವನ್ನೂ ಅಥವಾ ಭಿನ್ನಾಭಿಪ್ರಾಯಗಳನ್ನೂ ತಿಳಿಯಬಹುದು.

| ಸಂಖ್ಯೆ | ದೇವತಾ | ವಿಶೇಷದಿಗಳು |
|---|---|---|
| ೧ | **ಅಗ್ನಿಃ (ಸಮಿತ್)** | ಸಮಿಧಾ, ಸುಸಮಿಧಾ, ಸಮಿದ್ಧಃ |
| ೨ | **ಅಗ್ನಿಃ (ತನೂನಪಾತ್)** | ಅದಿತೇಃ ಗರ್ಭಂ ಭುವನಸ್ಯ ಗೋಪಾಂ |
| ೩ | **ಅಗ್ನಿಃ (ನರಾಶಂಸಃ)** | ನೃಪಸ್ತ್ರಂ ನ್ಯಾಃ ಪ್ರಣೇತ್ರಂ |
| ೪ | **ಅಗ್ನಿಃ (ಇಳಃ)** | ಈಳಿತೋ ದೇವಃ ಹವ್ಯವಾಟ್ ಅಮೂರಃ |
| ೫ | **ಬರ್ಹಿಃ** | ಸುಪ್ಸ್ತರೀಮ, ಊರ್ಣಮ್ರದ, ದೇವೇಭ್ಯಃ, ಸ್ವಾಸಸ್ಥಂ |
| ೬ | **ದೇವೀರ್ದ್ವಾರಃ** | ಋಷ್ವಾಃ ಕವಷ್ಯಃ, ಕೋಷಧಾವನೀಃ |
| ೭ | **ಉಷಾಸಾನಾಕ್ತಾ** | ಬೃಹತೀ, ಸುಪೇಶಸಾ, ಪತಿಭ್ಯಃ, ಯೋನಿಂ, ಕೃಣವಾನ್ತೇ, ಸಂಸ್ಮಯಮಾನೇ |
| ೮ | **ದೈವ್ಯಾ ಹೋತಾರಾ** | ಮಂದ್ರಾ, ಪೋತಾರಾ, ಕವೀ, ಪ್ರಚೇತಸಾ |
| ೯ | **ತಿಸ್ರೋ ದೇವೀಃ** | ಅಪಸಾಂ ಅಪಸ್ತಮಾಃ, ದೇವೀಃ |
| | | ಅಚಿಷ್ಟಃ ಅಪಾಕಃ, ರೇತೋಧಾಃ, ವಿಶ್ರವಸ್, ಯಶೋಧಾಃ ಪುರುರೂಪಃ, ಅಕಾಮಕರ್ಶನ |
| | | ಧಿಯೋ ಜ್ಯೇಷ್ಠಾ, ಸ್ವಧಾವಾನ್ ಸ್ವಧಿತಿಃ, ದೇವೇಭ್ಯಃಋತುಥಾ ಹವ್ಯವಾಟ್ ಯಜ್ಞಸ್ಯ ಆಯುಃ, ಕಲ್ಪಮಾನಃ |
| | | ಆಜ್ಯಸ್ಯ ಮೇದಸಃ ಸ್ವಾಹಾ |

ಆಪ್ರೀಸೂಕ್ತಗಳ ಮುಖ್ಯಾಂಶಗಳನ್ನು ಸಂಗ್ರಹಿಸಿ ಒಂದು ಕ್ರಮಬದ್ಧವಾದ ರಚನಾಕ್ರಮಗಳನ್ನೂ ಅವುಗಳ ಶೈಲಿಗಳನ್ನೂ ಮತ್ತು ಯಜ್ಞಕಾರ್ಯದಲ್ಲಿ ಕಾವ್ಯಾತ್ಮಕವಾದ ಸ್ವರೂಪವನ್ನೂ ಅವುಗಳ ವಿಷಯದಲ್ಲಿ ಆಧುನಿಕ ಸಹ ಕೊನೆಯಲ್ಲಿ ಹೇಳಲಾಗಿದೆ.

, ಉದ್ದಿಶ್ಯಗಳನ್ನು ಕುರಿತು Max Muller ಎಂಬ ಪಂಡಿತನು ಮೊದಲು ನ್ನಾಗಲಿ ಸಮಾಧಾನಗೊಳಿಸುವ ಸಾಧನವೆಂದು ಹೇಳಿ ಅನಂತರ ಅವುಗಳ ಡಿಕೊಳ್ಳುವುದೇ ಶ್ರಮವೆಂದು ಹೀಗೆ ಹೇಳಿದ್ದಾನೆ—

ಕ್ತಗಳಿಗಿರುವ ಸ್ಥಾನಮಾನಗಳ ವಿಷಯದಲ್ಲಿಯೂ, ದೇವತೆಗಳ ವಿಷಯ ಅಭಿಪ್ರಾಯಭೇದವಿದ್ದರೂ ಸಹ ಆಪ್ರೀಸೂಕ್ತಗಳೆಲ್ಲದರಲ್ಲೂ ಅನೇಕ ಕನೆಯಲ್ಲಿಯೂ ವಿಷಯಗಳಲ್ಲಿಯೂ ಒಂದು ನಿರ್ದಿಷ್ಟವಾದ ಮಾದರಿಯೂ ಗೆ ರಚಿಸಲ್ಪಟ್ಟವೆಂದಾಗಲೀ ಅಥವಾ ಒಂದಕ್ಕೊಂದಕ್ಕೆ ಸಂಬಂಧವಿಲ್ಲ ಲ್ಕನೆಯ ಮತ್ತು ಆರನೆಯ ಮಂಡಲಗಳ ಋಷಿಗಳನ್ನು ಬಿಟ್ಟು ಉಳಿದ ನೆತನದ ಸಾಂಪ್ರದಾಯಿಕವಾದ ಆಪ್ರೀಸೂಕ್ತಗಳನ್ನು ಹೊಂದಿದ್ದಾರೆ. ಪ್ರತ್ಯೇಕವಾದ ಆಪ್ರೀಸೂಕ್ತವಿಲ್ಲದಿದ್ದರೂ ಸಹ ಅವರು ೧-೧೩ ನೆಯ

ಸೂಕ್ತವನ್ನೇ ಉಪಯೋಗಿಸಿಕೊಳ್ಳುವುದು ಪ್ರಸಿದ್ಧವಾಗಿದೆ. ಆದರೆ ನಾಲ್ಕು ಮತ್ತು ಆರನೇ ಮಂಡಲದ ದ್ರಷ್ಟೃಗಳಾದ ಋಷಿಗಳಿಗೆ ಇದರ ಆವಶ್ಯಕತೆಯು ಇಲ್ಲದಿರುವುದಕ್ಕೆ ಕಾರಣವನ್ನು ಹೇಳುವುದಕ್ಕಾಗುವುದಿಲ್ಲ ಅಥವಾ **ವಾಮದೇವ** ಮತ್ತು **ಭಾರದ್ವಾಜ**ಸಂತತಿಯವರು ಈ ಸ್ಥಾನದಲ್ಲಿ ಬೇರೆ ಇನ್ನಾವ ಮಂತ್ರಗಳನ್ನಾಗಲೀ ಪಠಿಸುತ್ತಿದ್ದಿರಬಹುದು,

ಆಪ್ರೀ ಮತ್ತು **ಆಪ್ರ** ಎಂಬ ಸಂಜ್ಞೆಯಿಂದ ಸೂಚಿತವಾಗುವ ಮಂತ್ರಗಳು—

ಕಾತ್ಯಾಯನರು ಸರ್ವಾನುಕ್ರಮಣಿಕೆಯಲ್ಲಿ—**ಏತದಾಪ್ರೀಸೂಕ್ತಂ ಏತೇನಾನ್ಯುಕ್ತದೈವತಾನಿ ಏಕಾದಶಕಾನಿ ತು ನಾರಾಶಂಸಾನಿ ಆಪ್ರಶಬ್ದೋಕ್ತಾನಿ ಅತನೂನಪಾತ್ವಂತಿ** | ನರಾಶಂಸ ದೇವತೆಯನ್ನುದ್ದೇಶಿಸಿ ಪಠಿಸುವ ಮಂತ್ರಗಳು **ಆಪ್ರ**ವೆಂಬ ಹೆಸರಿನಿಂದಲೂ, **ತನೂನಪಾತ್** ದೇವತೆಯನ್ನುದ್ದೇಶಿಸಿ ಪಠಿಸುವ ಮಂತ್ರಗಳು **ಆಪ್ರೀ** ಎಂಬ ಹೆಸರಿನಿಂದಲೂ ಪ್ರಸಿದ್ಧವಾಗಿವೆಯೆಂದೂ ಹೇಳಿದ್ದಾರೆ. ಆದರೆ ನಿರುಕ್ತಾದಿಗಳಲ್ಲಿ ಈ ವ್ಯತ್ಯಾಸವನ್ನು ತೋರಿಸುವ ವಾಕ್ಯಗಳೇ ಇಲ್ಲ-

**ಆಪ್ರೀ** ಎಂಬ ಹೆಸರು **ದೇವತಾ**ಪರವಾದುದೇ ಅಥವಾ **ಸೂಕ್ತ**ಪರವಾದುದೇ ಎಂಬ ಪ್ರಶ್ನೆಯೂ ಸಹಜವಾದುದಾಗಿದೆ. ಸೂಕ್ಷ್ಮವಾಗಿ ನೋಡಿದರೆ ಮೊದಲು **ಸೂಕ್ತ**ಪರವಾಗಿದ್ದು ಅನಂತರ ದೇವತಾನಿರ್ದೇಶಕವಾದ ಮಂತ್ರಗಳಾಗಿದ್ದಿರಬಹುದೆಂದು ಹೇಳಬಹುದು.

**ಕರ್ಮದ ಸ್ವರೂಪ**—ಆಪ್ರೀಸೂಕ್ತದಿಂದ ನಿರ್ದಿಷ್ಟವಾದ ಯಜ್ಞಕರ್ಮವು ಬ್ರಾಹ್ಮಣಾದಿಗಳಿಂದ ಸೂಚಿತವಾಗುವಂತೆ ಗೌಣವಾದ ಸ್ಥಾನವನ್ನು ಹೊಂದಿರಲಿಲ್ಲವೆಂದೂ ಮುಖ್ಯ ಯಾಗದ ಸ್ಥಾನವನ್ನೇ ಹೊಂದಿದ್ದಿತೆಂದೂ ಹೇಳಬಹುದು. **ಪ್ರಯಾಜಾಹುತಿ**ಗಳಿಗೂ ಈ ಕರ್ಮದಲ್ಲಿ ನಿರ್ದಿಷ್ಟವಾದ ಆಹುತಿಗಳಿಗೂ ಇರುವ ವ್ಯತ್ಯಾಸವು ಅನೇಕಕಡೆಗಳಲ್ಲಿ ತಿಳಿಯುತ್ತದೆ. ೧-೧೩-೮, ೧-೧೪೮-೭, ೧-೧೪೨-೮, ೩-೪-೮, ೫-೫.೭, ೯-೫-೮. ಈ ಋಕ್ಕುಗಳಲ್ಲಿ **ಇಮಂ ಯಜ್ಞಂ** ಎಂಬ ಮಂತ್ರವೂ, ೫-೫-೨, ೩-೪-೫ ನೇ ಋಕ್ಕುಗಳಲ್ಲಿ **ನಃ ಯಜ್ಞಂ** ಎಂಬುದೂ ೧-೧೩-೨, ೭-೨-೭, ೧೦-೧೧೦-೮ ನೇ ಋಕ್ಕುಗಳಲ್ಲಿ **ಅಸ್ಮಿನ್ ಯಜ್ಞೇ** ಎಂಬುದೂ ಸಹ ಯಜ್ಞಕರ್ಮದಲ್ಲಿಯಾಗಲೀ ಅಥವಾ ಆಹುತ್ಯರ್ಪಣದಲ್ಲಾಗಲೀ ಪ್ರಧಾನವಾದ ಸ್ಥಾನವನ್ನು ತೋರಿಸುವುವೇ ಹೊರತು **ಪ್ರಯಾಜಾಹುತಿ**ಗಳಂತೆ ಗೌಣವಾದ ಸ್ಥಾನವನ್ನು ತೋರಿಸುವುದಿಲ್ಲ.

**ತ್ರಿರಾದಿವೋಮಿಮಿಕ್ಷತಿ** (೧-೧೪೨-೩); **ತ್ರಿರಹನ್ನಾಯಜಂತೇ** (೩-೪-೨) ಎಂಬ ಮಂತ್ರಗಳಿಂದ **ಈ** ಕರ್ಮವು ದಿನದಲ್ಲಿಯೂ ಮೂರು ಕಾಲಗಳಲ್ಲಿಯೂ ನೆರವೇರಿಸಲ್ಪಡತಕ್ಕದ್ದೆಂದೂ, **ಸಮಿದ್ಧೋ ಅದ್ಯ ಮನುಷೋ ದುರೋಣೇ**(೧೦-೧೧೦-೧) ಎಂಬುದರಿಂದ ಇದಕ್ಕಾಗಿ ಪ್ರತ್ಯೇಕವಾದ ಯಜ್ಞಗೃಹವಿಲ್ಲವೆಂದೂ, ಸಾಧಾರಣವಾದ ಮನೆಯಲ್ಲಿಯೇ ಅಗ್ನಿಯನ್ನು ಸ್ಥಾಪಿಸಬಹುದೆಂದೂ ತಿಳಿಯುತ್ತದೆ.

**ಸಮಿತ್ಸಮಿತ್ಸುಮನಾ ಬೋಧ್ಯಸ್ಮೇ ಶುಚಾಶುಚಾ ಸುಮತಿಂ ರಾಸಿ ವಸ್ವಃ |**
**ಆ ದೇವ ದೇವಾನ್ಯಜಥಾಯ ವಕ್ಷಿ ಸಖಾ ಸಖೀನ್ತ್ಸುಮನಾ ಯಕ್ಷ್ಯಗ್ನೇ ||**

(ಋ. ಸಂ. ೩-೪-೧)

ಎಂಬ ಋಕ್ಕಿನಲ್ಲಿ ವಿಶ್ವಾಮಿತ್ರಋಷಿಯು ಕಾವ್ಯರೂಪದಲ್ಲಿ ವರ್ಣಿಸುವ ಅಗ್ನಿಯ ಪ್ರಜ್ವಲನವೂ ಮತ್ತು

**ಜುಷಸ್ವ ನಃ ಸಮಿಧಮಗ್ನೇ ಅದ್ಯ ಶೋಚಾ ಬೃಹದ್ಯಜತಂ ಧೂಮಮೃಣ್ವನ್ |**

**ಉಪ ಸ್ಪೃಶ ದಿವ್ಯಂ ಸಾನು ಸ್ತೂಪೈಃ ಸಂ ರಶ್ಮಿಭಿಸ್ತತನಃ ಸೂರ್ಯಸ್ಯ ||**
(ಋ. ಸಂ. ೭-೨-೧)

ಎಂಬ ಋಕ್ಕಿನಲ್ಲಿ ಅಗ್ನಿ ಕಿರಣವೂ, ಸೂರ್ಯಕಿರಣವೂ ಒಟ್ಟಿಗೆ ಸೇರಿಕೊಂಡು ಪ್ರಸರಿಸುವ ವರ್ಣನವೂ ಸಹ ಮಂತ್ರಗಳ ಕಾವ್ಯಾತ್ಮಕ ಸ್ವರೂಪವನ್ನು ತಿಳಿಸುತ್ತವೆ. ಇದೇ ವರ್ಣನೆಗಳು ಈ ಯಾಗವು ಪ್ರಾತಃಕಾಲದಲ್ಲಿ ಪ್ರಾರಂಭಿಸಲ್ಪಡತಕ್ಕದ್ದು ಎಂಬುದನ್ನೂ ತಿಳಿಸುತ್ತವೆ.

**ಪೂರ್ವ್ಯಂ ತಂತುಂ ತನುಷ್ವ** (೧-೧೪೨-೧) ಎಂಬ ಮಂತ್ರವು ಈ ಯಾಗವು ಪ್ರಾಚೀನವಾದುದೆಂದು ತಿಳಿಸುತ್ತದೆ. ಈ ಯಜ್ಞವು ನಿರ್ವಿಘ್ನವಾಗಿ ನೆರವೇರಲು **ದೇವಹೋತೃ**ವಾದ **ಅಗ್ನಿಯ** ಸಹಾಯದ ಅವಶ್ಯಕತೆ ಇರುವುದರಿಂದ ಅಗ್ನಿಗೆ ಆಜ್ಯಾಹುತಿಯನ್ನು ಮೊದಲು ಅರ್ಪಿಸಬೇಕು. ಇದರಿಂದ ಅಗ್ನಿ ತೃಪ್ತಿಯಾದನಂತರ ಅಗ್ನಿಯು ಅಂತರಿಕ್ಷದ ಕಡೆಗೆ ಪ್ರಸರಿಸುತ್ತಾನೆ. (೭-೨-೧) ಅನಂತರ ದೇವತೆಗಳನ್ನು ಕರೆತರುತ್ತಾನೆ. ಅಗ್ನಿಯು ಮಾನವರ ಸಖನಾದುದರಿಂದ (೩-೪-೧) ಈ ಉಪಕಾರವನ್ನು ಮಾಡುತ್ತಾನೆ.

**ಕೃತಿಕೌಶಲ್ಯ**—ಆಪ್ರೀಸೂಕ್ತಗಳು ಒಂದಕ್ಕಿಂತ ಒಂದು ಬೇರೆಯಾಗಿ, ಬೇರೆಬೇರೆ ಕಾಲಗಳಲ್ಲಿ ನಿರ್ಮಿತವಾಗಿದ್ದರೂ ಮತ್ತು ಬೇರೆ ಬೇರೆ ಋಷಿಸಂತತಿಗಳಿಗೆ ಸಂಬಂಧಿಸಿದ್ದರೂ ಸಹ ಈ ಎಲ್ಲಾ ಸೂಕ್ತಗಳಲ್ಲಿಯೂ ಒಂದೇವಿಧವಾದ ವಾಕ್ಸರಣಿಯೂ ಧ್ಯೇಯವೂ ಇರುವುದರಿಂದ ಉಳಿದ ಎಲ್ಲಾ ವಿಧವಾದ ಸೂಕ್ತಗಳಿಗಿಂತಲೂ ಒಂದುವಿಧವಾಗಿ ಅಧಿಕವಾದ ಸಾಮರಸ್ಯವೂ, ಸ್ವಾರಸ್ಯವೂ ಇವುಗಳ ವೈಶಿಷ್ಟ್ಯವನ್ನು ತೋರಿಸುತ್ತದೆ.

(ಎರಡು ಸೂಕ್ತಗಳನ್ನು ಬಿಡು ಉಳಿದ) ಎಲ್ಲಾ ಸೂಕ್ತಗಳಲ್ಲೂ ಸಹ ಋಕ್ಕುಗಳ ಸಂಖ್ಯೆಯು ಹನ್ನೊಂದಿರುವುದೂ ಮತ್ತು **ಸಮಿದ್** ಎಂಬ ಪದದಿಂದ ಸೂಕ್ತವು ಪ್ರಾರಂಭವಾಗಿ **ಸ್ವಾಹಾ** ಎಂಬುದರೊಂದಿಗೆ ಮುಕ್ತಾಯವಾಗುವುದೂ ಕಾವ್ಯದೃಷ್ಟಿಯಿಂದಲೂ ಕಲಾದೃಷ್ಟಿಯಿಂದಲೂ ಒಂದು ನಿಯತವಾದ ನಿಯಮವನ್ನು ತೋರಿಸುತ್ತದೆ.

ಛಂದಸ್ಸಿನ ವಿಷಯದಲ್ಲಿ ಅಂತಹ ನಿರ್ಬಂಧವಿಲ್ಲ. ೧-೧೩, ೧-೧೮೮, ೫-೫, ೯-೫ ಈ ಸೂಕ್ತಗಳು **ಗಾಯತ್ರೀ** ಛಂದಸ್ಸಿನಲ್ಲೂ, ೧-೧೪೨ನೇ ಸೂಕ್ತವು **ಅನುಷ್ಟುಪ್** ಛಂದಸ್ಸಿನಲ್ಲೂ, ೨-೩, ೩-೫, ೭-೨, ೧೦-೭೦, ೧೦ ೧೧೦, ಈ ಸೂಕ್ತಗಳು **ತ್ರಿಷ್ಟುಪ್** ಛಂದಸ್ಸಿನಲ್ಲೂ ರಚಿತವಾಗಿವೆ.

**ದೇವಾನ್ ಆ ವಹ, ದೇವಾನ್ ವಕ್ಷಿ, ವಿಪ್ರಾ ಯಜ್ಞೇಷು ಮಾನವೇಷು ಕಾರುಃ**, ಇತ್ಯಾದ್ಯನೇಕ ಮಂತ್ರಭಾಗಗಳು ಪುನರಾವರ್ತಿತವಾಗಿವೆ.

ಸಾಯಣಭಾಷ್ಯಂ

**ಇಮಾಂ ಮ ಇತ್ಯೇಕಾದಶರ್ಚಂ ದ್ವಿತೀಯಂ ಸೂಕ್ತಂ । ವಾಧ್ರ್ಯಶ್ವಸ್ಯ ಸುಮಿತ್ರಸ್ಯಾರ್ಷಂ ತ್ರೈಷ್ಟುಭಂ ತನೂನಪಾದ್ವರ್ಜಿತಾಃ ಸನರಾಶಂಸಾಃ ಸಮಿದಾದಯಃ ಪ್ರತ್ಯೃಚಂ ದೇವತಾಃ । ತಥಾ ಚಾನುಕ್ರಾಂತಂ । ಇಮಾಂ ಮ ಏಕಾದಶಾಪ್ರಮಿತಿ ॥ ವಧ್ರ್ಯಶ್ವಗೋತ್ರಾಣಾಂ ಪಶಾವಿದಮಾಪ್ರೀಸೂಕ್ತಂ। ಸೂತ್ರಿತಂ ಚ । ಸಮಿದ್ಧೋ ಅದ್ಯೇತಿ ಸರ್ವೇಷಾಂ ಯಥಋಷಿ ವಾ । ಆ. ೩-೨ । ಇತಿ ॥**

ಅನುವಾದವು—**ಇಮಾಂ ಮೇ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಧ್ರ್ಯಶ್ವಪುತ್ರನಾದ ಸುಮಿತ್ರನೆಂಬುವನು ಋಷಿಯು; ತ್ರಿಷ್ಟುಪ್ ಛಂದಸ್ಸು; ಈ ಸೂಕ್ತಕ್ಕೆ (ಇದು ಆಪ್ರೀಸೂಕ್ತವಾದ್ದರಿಂದ) ತನೂನಪಾತ್ ಎಂಬ ದೇವತೆಯನ್ನು ಬಿಟ್ಟು ಅದಕ್ಕೆ ಬದಲಾಗಿ ನರಾಶಂಸದೇವತೆಸಹಿತವಾಗಿ ಸಮಿದಾದಿ ಆಪ್ರೀಸೂಕ್ತದ ಹನ್ನೊಂದುಮಂದಿ ದೇವತೆಗಳೇ ಪ್ರತಿಋಕ್ಕಿಗೂ

ಕ್ರಮವಾಗಿ ದೇವತೆಗಳು; ಅನುಕ್ರಮಣಿಕೆಯಲ್ಲಿ **ಇಮಾಂ ಮ ಏಕಾದಶಾಪ್ರಂ** ಎಂದು ಹೇಳಿರುವುದು. ವಧ್ರ್ಯಶ್ವ ಋಷಿ ಗೋತ್ರದವರಿಗೆ ಪಶುಹೋಮದಲ್ಲಿ ಈ ಆಪ್ರೀಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಸಮಿದ್ಧೋ ಅದ್ಯೇತಿ ಸರ್ವೇಷಾಂ ಯಥರ್ಷಿ ವಾ** ಎಂಬ ಸೂತ್ರದಿಂದ (ಆ. ೩-೨) ವಿವೃತವಾಗಿರುವುದು.

## ಸೂಕ್ತ—೭೦

ಮಂಡಲ—೧೦ ॥ ಅನುವಾಕ—೬ ॥ ಸೂಕ್ತ—೭೦ ॥
ಅಷ್ಟಕ—೮ ॥ ಅಧ್ಯಾಯ—೨ ॥ ವರ್ಗ—೨೧, ೨೨ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
ಋಷಿಃ—ಸುಮಿತ್ರೋ ವಾಧ್ರ್ಯಶ್ವಃ ॥
ದೇವತಾ—ಆಪ್ರಂ ॥ ೧. ಇಧ್ಮಃಸಮಿದ್ಧೋಽಗ್ನಿರ್ವಾ । ೨. ನರಾಶಂಸಃ । ೩. ಇಳಃ । ೪. ಬರ್ಹಿಃ । ೫. ದೇವೀರ್ದ್ವಾರಃ । ೬. ಉಷಾಸಾನಕ್ತಾ । ೭. ದೈವ್ಯಾ ಹೋತಾರಾ ಪ್ರಚೇತಸಾ । ೮. ತಿಸ್ರೋ ದೇವ್ಯಃ ಸರಸ್ವತೀಳಾಭಾರತ್ಯಃ । ೯. ತ್ವಷ್ಟಾ । ೧೦. ವನಸ್ಪತಿಃ । ೧೧. ಸ್ವಾಹಾಕೃತಯಃ ॥
ಛಂದಃ— ತ್ರಿಷ್ಟುಪ್ ॥

ಸಂಹಿತಾಪಾಠಃ

ಇಮಾಂ ಮೇ ಅಗ್ನೇ ಸಮಿಧಂ ಜುಷಸ್ವೇಳಸ್ಪದೇ ಪ್ರತಿ ಹರ್ಯಾ ಘೃತಾಚೀಂ।
ವರ್ಷ್ಮನ್ಪೃಥಿವ್ಯಾಃ ಸುದಿನತ್ವೇ ಅಹ್ನಾಮೂರ್ಧ್ವೋ ಭವ ಸುಕ್ರತೋ ದೇವಯಜ್ಯಾ ॥ ೧ ॥

ಪದಪಾಠಃ

ಇಮಾಂ । ಮೇ । ಅಗ್ನೇ । ಸಂಽಇಧಂ । ಜುಷಸ್ವ । ಇಳಃ । ಪದೇ । ಪ್ರತಿ । ಹರ್ಯ । ಘೃತಾಚೀಂ ।
ವರ್ಷ್ಮನ್ । ಪೃಥಿವ್ಯಾಃ । ಸುದಿನಽತ್ವೇ । ಅಹ್ನಾಂ । ಊರ್ಧ್ವಃ । ಭವ । ಸುಕ್ರತೋ ಇತಿ ಸುಽಕ್ರತೋ। ದೇವಽಯಜ್ಯಾ ॥ ೧ ॥

ಸಾಯಣಭಾಷ್ಯಂ

ಹೇ ಅಗ್ನೇ ಇಳಸ್ಪದ ಇಳಾಯಾಸ್ಪದೇ। ಏತದ್ವಾ ಇಳಾಯಾಸ್ಪದಂ ಯದುತ್ತರವೇದೀ ನಾಭಿಃ। ಇತಿ ಬ್ರಾಹ್ಮಣಂ । ಉತ್ತರವೇದ್ಯಾಮಿಮಾಂ ಮೇ ಮದೀಯಾಂ ಸಮಿಧಂ ಜುಷಸ್ವ । ಸೇವಸ್ವ । ತಥಾ ಘೃತಾಚೀಂ ಘೃತಮಂಚಂತೀಂ ಸ್ರುಚಂ ಪ್ರತಿ ಹರ್ಯ । ಪ್ರತಿಕಾಮಯಸ್ವ । ಕಿಂಚ ಹೇ ಸುಕ್ರತೋ ಸುಪ್ರಜ್ಞ ಪೃಥಿವ್ಯಾ ವರ್ಷ್ಮನ್ವರ್ಷ್ಮಣಿ ಸಮುಚ್ಛ್ರಿತೇ ಪೂರ್ವೋಕ್ತೇ ದೇಶೇಽಹ್ನಾಂ ಸುದಿನತ್ವೇ ತನ್ನಿಮಿತ್ತಂ ದೇವಯಜ್ಯಾ ದೇವಯಾಗೇನ ಹೇತುನೋರ್ಧ್ವೋ ಜ್ವಾಲಾಭಿರುನ್ನತೋ ಭವ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ | **ಇಳಸ್ಪದೇ**—ಉತ್ತರವೇದಿಯಲ್ಲಿ ಸ್ಥಾಪಿತನಾಗಿ | **ಮೇ**—ನನ್ನ | **ಇಮಾಂ ಸಮಿಧಂ**—ಈ ಸಮಿತ್ತುಗಳನ್ನು | **ಜುಷಸ್ವ**—ಸೇವಿಸು | **ಘೃತಾಚೀಂ**—ಘೃತಪೂರ್ಣವಾದ ಈ ಸ್ರುಕ್ಪಾತ್ರೆಯನ್ನು | **ಪ್ರತಿಹರ್ಯ**—ಅಪೇಕ್ಷಿಸು | **ಸುಕ್ರತೋ**—ಉತ್ತಮವಾದ ಪ್ರಜ್ಞೆಯುಳ್ಳ ಎಲೈ ಅಗ್ನಿಯೇ | **ಪೃಥಿವ್ಯಾಃ**—ಪೃಥ್ವಿಯ | **ವರ್ಷ್ಮನ್**-ಎತ್ತರವಾದ ಉತ್ತರವೇದಿಯಲ್ಲಿ | **ಅಹ್ನಾಂ**—ಅಹಸ್ಸುಗಳ | **ಸುದಿನತ್ವೇ**-ಕಲ್ಯಾಣಕ್ಕಾಗಿ | **ದೇವಯಜ್ಯಾ**—ದೇವಪೂಜಾದಿಗಳ ಮೂಲಕ | **ಊರ್ಧ್ವಃ ಭವ**—ಜ್ವಾಲಾರೂಪದಲ್ಲಿ ಮೇಲೆದ್ದು ಪ್ರಕಾಶಿಸು.

ಭಾವಾರ್ಥ

ಎಲೈ ಅಗ್ನಿಯೇ, ಉತ್ತರವೇದಿಯಲ್ಲಿ ಸ್ಥಾಪಿತನಾಗಿ ನನ್ನ ಈ ಸಮಿತ್ತುಗಳನ್ನು ಸೇವಿಸು. ಘೃತಪೂರ್ಣವಾದ ಈ ಸ್ರುಕ್ಪಾತ್ರೆಗೆ ಅಪೇಕ್ಷೆಪಡು. ಉತ್ತಮವಾದ ಪ್ರಜ್ಞೆಯುಳ್ಳ ಎಲೈ ಅಗ್ನಿಯೇ, ಪೃಥ್ವಿಯ ಎತ್ತರವಾದ ಉತ್ತರವೇದಿಯಲ್ಲಿ ಸಕಲ ಶ್ರೇಯಸ್ಸಿಗಾಗಿ ದೇವಪೂಜಾದಿಗಳ ಮೂಲಕ ಮೇಲೆದ್ದು ಜ್ವಾಲೆಯೊಡನೆ ಪ್ರಕಾಶಿಸು.

## English Translation

Graciously acept, Agni, this my fuel (placed) on the place of libation (the altar); delight in the butter-laden (spoon); most wise, rise up upon the lofty place of the earth for the propitiousness of the days through the worship of the gods.

ವಿಶೇಷವಿಷಯಗಳು

**ಸಮಿದ್ಧಃ—ಸಮ್ಯಗ್ದೀಪಿತಃ ಏತನ್ನಾಮಕಃ ತ್ವಂ** | ಸಮಿದ್ಧಂ ಎಂಬ ಹೆಸರಿನಿಂದ ಪ್ರಖ್ಯಾತನಾದ ಎಂದು ಸಾಯಣರು ವಿವರಿಸಿದ್ದಾರೆ. ಆಪ್ರೀಸೂಕ್ತದಲ್ಲಿ ಪ್ರಥಮಸ್ಥಾನವನ್ನು ಹೊಂದಿರುವ ಸಮಿದ್ಧಾಗ್ನಿಯನ್ನು ಉದ್ದೇಶಿಸಿದೆ.

**ಇಧ್ಮೋ ಯಃ ಸರ್ವಮೇವಾಗ್ನಿರಯಂ ಹೀಧ್ಮಃ ಸಮಿಧ್ಯತೇ |**
**ಧ್ಮಾತೇರ್ವೈ ತತ್ಕೃತಂ ರೂಪಂ ಧ್ಮಾತೋ ಹೀಧ್ಮಃ ಸಮಿಧ್ಯತೇ ||**

(ಬೃ. ದೇ. ೨-೧೮೮)

ಕಾಷ್ಠರೂಪವಾದ ಇಧ್ಮಕ್ಕೂ ಸರ್ವವ್ಯಾಪಿಯಾದ ಅಗ್ನಿಗೂ ಇಲ್ಲಿ ತಾದಾತ್ಮ್ಯವನ್ನು ಹೇಳಿದೆ. **ಧ್ಮಾ** ಎಂಬ ಧಾತುವಿನಿಂದ ಇಧ್ಮಶಬ್ದವು ನಿಷ್ಪನ್ನವಾಗಿದೆ. ಊದಿದನಂತರ ಪ್ರಜ್ವಲಿತವಾಗುವುದರಿಂದ ಈ ಹೆಸರು ಎಂದು ಬೃಹದ್ದೇವತಾಕಾರರು ಇಧ್ಮ, ಸಮಿದ್ಧ ಎಂಬ ಪದಗಳ ನಿರ್ವಚನವನ್ನು ಹೇಳಿದ್ದಾರೆ. ಈ ನಿರ್ವಚನವು ನಿರುಕ್ತಕಾರರ ವಿವರಣೆಯನ್ನನುಸರಿಸಿದೆ. ನಿರುಕ್ತದಲ್ಲೂ,

**ತಾಸಾಮಿಧ್ಮಃ ಪ್ರಥಮಾಗಾಮೀ ಭವತಿ | ಇಧ್ಮಃ ಸಮಿಂಧನಾತ್ |**

(ನಿ. ೮-೫)

ಎಂದು ಆಪ್ರೀಸೂಕ್ತದ ಪ್ರಥಮದೇವತೆಯ ವಿಷಯವಾಗಿ ಹೇಳಿದ್ದಾರೆ. **ತೈತ್ತಿರೀಯಬ್ರಾಹ್ಮಣದಲ್ಲಿಯೂ ಪ್ರೈಷ ಸೂಕ್ತದ** ಆರಂಭದಲ್ಲಿ—

**ಹೋತಾ ಯಕ್ಷದಗ್ನಿಗ್ಂ ಸಮಿಧಾ ಸಮಿದ್ಧಂ ಸುಷಮಿಧಾ ನಾಭಾ ಪೃಥಿವ್ಯಾಃ ಸಂಗಥೇ ವಾಮಸ್ಯ ।**

(ತೈ. ಬ್ರಾ. ೩-೬-೨.೧)

ಎಂದು ಸಮಿಧಾಖ್ಯವಾದ ಮತ್ತು ಪ್ರಥಮಾಪ್ರಯಾಜಾದೇವತೆಯಿಂದೊಡಗೂಡಿದ ಅಗ್ನಿಯನ್ನುದ್ದೇಶಿಸಿ ಯಾಗಮಾಡಿದ ರೆಂದು ಸಂಬೋಧಿಸಿದೆ.

ಇಲ್ಲಿ ಇನ್ನೊಂದು ವಿಷಯವನ್ನು ಗಮನಿಸಬೇಕಾಗಿದೆ. **ಇಧ್ಮ**ವೆಂಬ ಅಂಕಿತನಾಮವು **ಆಪ್ರೀಸೂಕ್ತ**ಗಳಲ್ಲಿ ಬರುವುದಿಲ್ಲ. ಪ್ರೈಷಸೂಕ್ತದಲ್ಲೂ ಸಹ ಈ ನಾಮವಿಲ್ಲ. ಸರ್ವಾನುಕ್ರಮಣಿಕೆಯಲ್ಲಿ ಮಾತ್ರ—

**ಸುಸಮಿದ್ಧ ಇತೀಧ್ಮಃ ಸಮಿದ್ಧೋ ವಾ ಅಗ್ನಿ.................ಇತಿ ಪ್ರತ್ಯೃಚಂ ದೇವತಾಃ ।**

ಎಂದು ನಿರ್ದೇಶಿಸಿದೆ. ಐತರೇಯಬ್ರಾಹ್ಮಣದಲ್ಲಿಯೂ ಈ ಪದದ ಪ್ರಯೋಗವು ಈ ಸನ್ನಿವೇಶದಲ್ಲಿಲ್ಲದಿರುವಾಗ **ಶೌನಕರೂ, ಕಾತ್ಯಾಯನರೂ** ಇದನ್ನು ಉಪಯೋಗಿಸುವುದರಲ್ಲಿ ನಿರುಕ್ತಕಾರರನ್ನು ಅನುಸರಿಸಿರುವುದು ಗೊತ್ತಾಗುತ್ತದೆ. ಅಲ್ಲದೆ **ಸಮಿದ್ಧ** ಅಥವಾ **ಸುಸಮಿದ್ಧ**ವೆಂಬ ವಿಶೇಷಣವು ಏಳು ಸೂಕ್ತಗಳಲ್ಲೂ, **ಸಮಿದ್** ಎಂಬ ವಿಶೇಷಣವು (ಋ. ಸಂ. ೩-೪-೧; ೭-೨-೧; ೧೦-೭೦-೧) ಎಂಬ ಉಳಿದ ಮೂರು ಸೂಕ್ತಗಳಲ್ಲೂ ಉಪಯೋಗಿಸಲ್ಪಟ್ಟಿದೆ.

ಸಮಿದ್ಧಾಖ್ಯನಾದ ಈ ಅಗ್ನಿಯು ದೇವತೆಗಳನ್ನು ಆಹ್ವಾನಿಸಬೇಕಾದುದು ಮೊದಲನೆಯ ಕರ್ತವ್ಯ ೧-೧೩-೧ ೧-೧೪೨-೧, ೩-೪-೧, ೧೦-೧೧೦-೧ ಎಂಬ ಸೂಕ್ತಗಳ ಪ್ರಾರಂಭದ ಋಕ್ಕುಗಳಲ್ಲಿ **ಸುಸಮಿದ್ಧೋನ ಆ ವಹ ದೇವಾ ಅಗ್ನೇ ಹವಿಷ್ಮತೇ** (ಋ. ಸಂ. ೧-೧೩-೧) ಎಂಬ ಋಕ್ಕಿನಲ್ಲಿರುವ ಪ್ರಾರ್ಥನೆಯಂತೆ ಅಗ್ನಿಯ ಕರ್ತವ್ಯವನ್ನು ಸೂಚಿಸಿದೆ. ಇಷ್ಟೇ ಅಲ್ಲದೆ ಹವಿರಾದಿಗಳನ್ನು ವಹಿಸಬೇಕೆಂದೂ ಪ್ರಾರ್ಥಿಸಿದೆ.

ಈ ದೇವತೆಯು ಅಗ್ನಿಯೇ ಅಲ್ಲವೇ ಎಂಬ ವಿಷಯದಲ್ಲಿ ಮೊದಲಿನಿಂದಲೂ ಅಭಿಪ್ರಾಯಭೇದವನ್ನು ನಿರುಕ್ತಕಾರರೂ ಉದಹರಿಸಿ ಅನಂತರ ತಮ್ಮ ಅಭಿಪ್ರಾಯವನ್ನು ಹೇಳುತ್ತಾರೆ.

**ಯಜ್ಞೇಧ್ಮ ಇತಿ ಕಾತ್ಥಕ್ಯಃ** (ನಿ. ೮-೫), **ಅಗ್ನಿರಿತಿ ಶಾಕಪೂಣಿಃ** (೮-೫) ಎಂದು ಆಯಾ ಋಷಿಗಳ ಮತವನ್ನು ತಿಳಿಸಿ ಅನಂತರ **ಅಗ್ನೇಯ ಇತಿ ತು ಸ್ಥಿತಿಃ** (ನಿ. ೮-೨೨) ಎಂದು ತಮ್ಮ ಅಭಿಪ್ರಾಯವನ್ನೂ ಹೇಳಿದ್ದಾರೆ. **ಐತರೇಯಬ್ರಾಹ್ಮಣದಲ್ಲಿ**—

**ಸಮಿಧೋ ಯಜತಿ । ಪ್ರಾಣಾ ವೈ ಸಮಿಧಃ । ಪ್ರಾಣಾ ಹೀದಂ ಸರ್ವಂ ಸಮಿಂಧತೇ ಯದಿದಂ ಕಿಂಚ ಪ್ರಾಣಾನೇವ ತತ್ಪ್ರೀಣಾತಿ ಪ್ರಾಣಾನ್ಯಜಮಾನೇ ದಧಾತಿ ॥**

(ಐ. ಬ್ರಾ. ೨-೪)

ಎಂಬ ವಾಕ್ಯಗಳಿಂದ **ಸಮಿತ್** ಮತ್ತು **ಪ್ರಾಣ** ಇವೆರಡಕ್ಕೂ ತಾದಾತ್ಮ್ಯವನ್ನು ಹೇಳಿದೆಯಾದರೂ ಕೂಡ ಉಳಿದ ಅನೇಕ ಆಧಾರಗಳಿಂದ ಈ ದೇವತೆಯು ಅಗ್ನಿಯೇ ಆಗಿರಬೇಕೆಂದು ಹೇಳಬಹುದು.

**ಸಂಹಿತಾಪಾಠಃ**

ಆ ದೇವಾನಾಮುಗ್ರಯಾವೇಹ ಯಾತು ನರಾಶಂಸೋ ವಿಶ್ವರೂಪೇಭಿರಶ್ವೈಃ ।
ಋತಸ್ಯ ಪಥಾ ನಮಸಾ ಮಿಯೇಧೋ ದೇವೇಭ್ಯೋ ದೇವತಮಃ ಸುಷೂದತ್ ॥

ಪದಪಾಠಃ

ಆ । ದೇವಾನಾಂ । ಅಗ್ರ್ಽಯಾವಾ । ಇಹ । ಯಾತು । ನರಾಶಂಸಃ । ವಿಶ್ವಽರೂಪೇಭಿಃ । ಅಶ್ವೈಃ ।

ಋತಸ್ಯ । ಪಥಾ । ನಮಸಾ । ಮಿಯೇಧಃ । ದೇವೇಭ್ಯಃ । ದೇವಽತಮಃ । ಸುಸೂದತ್ ॥ ೨ ॥

ಸಾಯಣಭಾಷ್ಯಂ

ದೇವಾನಾಮಗ್ರಯಾವಾಗ್ರೇ ಗಂತಾ ನರಾಶಂಸಃ ॥ ಉಭೇ ವನಸ್ಪತ್ಯಾದಿಷು ಯುಗಪದಿತಿ ಪೂರ್ವೋತ್ತರಪದಯೋರ್ಯುಗಪತ್ಪ್ರಕೃತಿಸ್ವರತ್ವಂ ॥ ನರೈಃ ಶಂಸನೀಯ ಏತನ್ನಾಮಕೋಽಗ್ನಿರ್ವಿಶ್ವರೂಪೇಭಿರ್ನಾನಾರೂಪೈರಶ್ವೈ ರೋಹಿದಾಖ್ಯೈಃ ಸಹೇಹಾಸ್ಮಿನ್ಯಜ್ಞ ಆ ಯಾತು । ಆಗತ್ಯ ಚ ಮಿಯೇಧೋ ಮೇಧ್ಯೋ ಯಜ್ಞಹಿತಃ ಸ್ತುತಿಯೋಗ್ಯೋ ವಾ ದೇವತಮೋ ದೇವಾನಾಂ ಮುಖ್ಯಃ ಸೋಽಗ್ನಿರ್ಹವಿರ್ನಯನಯೋಗ್ಯೇನರ್ತಸ್ಯ ಯಜ್ಞಸ್ಯ ಪಥಾ ಮಾರ್ಗೇಣ ನಮಸಾ ಸ್ತೋತ್ರೇಣ ಸಹ ದೇವೇಭ್ಯ ಇಂದ್ರಾದಿಭ್ಯಃ ಸುಷೂದತ್ । ಹವಿಃ ಪ್ರೇರಯತು ॥

ಪ್ರತಿಪದಾರ್ಥ

**ದೇವಾನಾಂ**—ದೇವತೆಗಳಿಗೆಲ್ಲ । **ಅಗ್ರಯಾವಾ**—ಮುಂದಾಳಾಗಿ ಹೋಗತಕ್ಕ । **ನರಾಶಂಸಃ** । ನರಾಶಂಸಸಂಜ್ಞಕನಾದ ಅಗ್ನಿಯು । **ವಿಶ್ವರೂಪೇಭಿಃ**—ಅನೇಕವಿಧವಾದ ರೂಪವುಳ್ಳ । **ಅಶ್ವೈಃ**—ಅಶ್ವಗಳೊಡಗೂಡಿ । **ಇಹ**—ಈ ಯಜ್ಞಕ್ಕೆ । **ಆ ಯಾತು**—ಬರಲಿ । **ಮಿಯೇಧಃ**—ಪೂಜ್ಯನೂ । **ದೇವತಮಃ**—ದೇವತೆಗಳಿಗೆಲ್ಲ ಮುಖ್ಯನೂ ಆದ ಅಗ್ನಿಯು । **ಋತಸ್ಯ**—ಯಜ್ಞದ । **ಪಥಾ**—ಮಾರ್ಗದಿಂದ । **ನಮಸಾ**—ಸ್ತುತಿಯುಕ್ತನಾಗಿ । **ದೇವೇಭ್ಯಃ**—ಇಂದ್ರಾದಿ ದೇವತೆಗಳನ್ನುದ್ದೇಶಿಸಿ । **ಸುಷೂದತ್**—ಹವಿಸ್ಸನ್ನು ಪ್ರೇರಿಸಲಿ.

ಭಾವಾರ್ಥ

ದೇವತೆಗಳಿಗೆಲ್ಲ ಮುಂದಾಳಾಗಿ ಹೋಗತಕ್ಕ ನರಾಶಂಸಸಂಜ್ಞಕನಾದ ಅಗ್ನಿಯು ಅನೇಕವಿಧವಾದ ರೂಪಗಳುಳ್ಳ ಅಶ್ವಗಳೊಡಗೂಡಿ ಈ ಯಜ್ಞಕ್ಕೆ ಬರಲಿ. ಪೂಜಾಯೋಗ್ಯನೂ, ದೇವತೆಗಳಿಗೆಲ್ಲ ಮುಖ್ಯನೂ ಆದ ಅಗ್ನಿಯು ಯಜ್ಞಮಾರ್ಗದಲ್ಲಿ ಬಂದು ಸ್ತುತಿಯುಕ್ತನಾಗಿ ಇಂದ್ರಾದಿದೇವತೆಗಳನ್ನುದ್ದೇಶಿಸಿ ಹವಿಸ್ಸನ್ನು ಪ್ರೇರಿಸಲಿ.

## English Translation

May Narashamsa, the preceder of the gods, come here with his horses of various forms; deserving of adoration, chief of the gods, may he effuse (oblations) to the gods by the path of the sacrifice with praise.

ವಿಶೇಷವಿಷಯಗಳು

**ನರಾಶಂಸಃ—ನರೈಃ ಶಂಸನೀಯಃ** (**ಅಗ್ನಿಃ**) ನರರಿಂದ ಸ್ತುತಿಸಲ್ಪಡುವ ಅಗ್ನಿಯೆಂದು ಇದು ಅಗ್ನಿಯ ಅನ್ವರ್ಥನಾಮವಾಗಿದೆ ಅಥವಾ **ನರಾಶಂಸೋಽಗ್ನಿರ್ಯಜ್ಞೋ ವಾ** । ನರಾಶಂಸನೆಂದರೆ ಅಗ್ನಿಯೆಂದಾಗಲಿ ಅಥವಾ ಯಜ್ಞವೆಂದಾಗಲಿ ಅರ್ಥವಾಗುವುದೆಂದು ಇನ್ನೊಂದು ಮತ. ಈ ಎರಡು ಅಭಿಪ್ರಾಯಗಳನ್ನೂ ನಿರುಕ್ತವಾಕ್ಯವು ಸಮರ್ಥಿಸುತ್ತದೆ.

**ನರಾಶಂಸೋ ಯಜ್ಞ ಇತಿ ಕಾತ್ಥಕ್ಯಃ । ನರಾ ಅಸ್ಮಿನ್ನಾಸೀನಾಃ ಶಂಸಂತಿ । ಅಗ್ನಿರಿತಿ ಶಾಕಪೂಣಿಃ । ನರೈಃ ಪ್ರಶಸ್ಯೋ ಭವತಿ ॥**

(ನಿ. ೮-೭)

ಎಂದರೆ ನರರು (ಮನುಷ್ಯರು) ಯಜ್ಞವೇದಿಯಲ್ಲಿ ಕುಳಿತುಕೊಂಡು (ದೇವತೆಗಳನ್ನು) ಪ್ರಶಂಸೆಮಾಡುವುದರಿಂದ (ಸ್ತುತಿಸುವುದರಿಂದ) ಯಜ್ಞಕ್ಕೆ ನರಾಶಂಸವೆಂಬ ಹೆಸರೆಂದು ಕಾತ್ಥಕ್ಯರೂ, ನರರಿಂದ ಪ್ರಶಸ್ಯನಾದುದರಿಂದ ಅಗ್ನಿಯೆಂಬ ಹೆಸರು ಅನ್ವಯಿಸುವುದೆಂದು ಶಾಕಪೂಣಿಯೂ ಹೇಳಿರುವುದಾಗಿ ನಿರುಕ್ತಕಾರರು ಈ ಎರಡು ಅಭಿಪ್ರಾಯಗಳನ್ನೂ ಸೂಚಿಸಿ ಅನಂತರ,

**ನರಾಶಂಸಸ್ಯ ಮಹಿಮಾನಮೇಷಾಮುಪ ಸ್ತೋಷಾಮ ಯಜತಸ್ಯ ಯಜ್ಞೈಃ ।**
**ಯೇ ಸುಕ್ರತವಃ ಶುಚಯೋ ಧಿಯಂಧಾಃ ಸ್ವದಂತಿ ದೇವಾ ಉಭಯಾನಿ ಹವ್ಯಾ ॥**

(ಋ. ಸಂ. ೭-೨-೨)

ಎಂಬ ಋಕ್ಕನ್ನು ಉದಹರಿಸಿದ್ದಾರೆ. ಈ ಋಕ್ಕಿನಲ್ಲಿ ನರಾಶಂಸಶಬ್ದಕ್ಕೆ ಅಗ್ನಿಯೆಂಬ ಅರ್ಥವೇ ಸಮಂಜಸವಾಗಿದೆ. ನಿಘಂಟುವಿನಲ್ಲಿ ಪಠಿತವಾಗಿರುವ ದೇವತೆಗಳ ಮಧ್ಯದಲ್ಲಿ ನರಾಶಂಸದೇವತೆಯು ಅಗ್ನಿಯ ರೂಪಾಂತರಗಳಲ್ಲೊಂದು ಎಂದು ಉಕ್ತವಾಗಿದೆ. ಇದನ್ನೇ ಬೃಹದ್ದೇವತಾಕಾರರು—

**ನರಾಶಂಸಸ್ತ್ರಿತಶ್ಚೈನಮೇನಮೇವಾಶ್ರಿತಸ್ತ್ವಿಳಃ ।**
**ಬರ್ಹಿರ್ದ್ವಾರಶ್ಚ ದೇವ್ಯೋಽಗ್ನಿಮೇನಮೇವ ತು ಸಂಶ್ರಿತಾಃ ॥**

(ಬೃ. ದೇ. ೧-೧೦೭)

ಎಂಬ ಶ್ಲೋಕದಲ್ಲಿ ನರಾಶಂಸ, ತ್ರಿತ, ಇಳ, ಬರ್ಹಿರ್ದ್ವಾರ ಇತ್ಯಾದಿ ದೇವತೆಗಳು ಈ ಅಗ್ನಿಯನ್ನೇ ಆಶ್ರಯಿಸಿ ಅವನಲ್ಲಿ ಅಂತರ್ಗತರಾಗಿರುವರೆಂದು ಹೇಳಿದಾರೆ ಮತ್ತು

**ಪೃಥಕ್ತ್ವೇನ ಸಮಸ್ತೈಸ್ತು ಯಜ್ಞೇ ಯಚ್ಛಸ್ಯತೇ ನೃಭಿಃ ।**
**ಸ್ತುವಂತ್ಯಾಪ್ರೀಷು ತೇನೇಮಂ ನರಾಶಂಸಂ ತು ಕಾರವಃ ॥**

(ಬೃ. ದೇ. ೨-೨೮)

ಯಜ್ಞದಲ್ಲಿ ಸೇರಿರತಕ್ಕ ಸಕಲ ನರರಿಂದಲೂ ಸಹ ಪ್ರತ್ಯೇಕವಾಗಿ ಪ್ರಶಂಸಿಸಲ್ಪಡುವುದರಿಂದ ಕೃತಿಕಾರರು ಇವನನ್ನು (ಅಗ್ನಿಯನ್ನು) ನರಾಶಂಸನೆಂಬ ಹೆಸರಿನಿಂದ ಆಪ್ರೀಸೂಕ್ತಗಳಲ್ಲಿ ಸ್ತುತಿಸಿದ್ದಾರೆ ಎಂದು ಹೇಳಿ, ನಿರುಕ್ತಕಾರರು ಹೇಳುವ ಅಭಿಪ್ರಾಯವನ್ನು ಇವರೂ ಅನುಮೋದಿಸಿದ್ದಾರೆ.

**ನರಾಶಂಸಮಿಹೈಕೇ ತು ಅಗ್ನಿಮಾಹುರಥೇತರೇ ।**
**ನರಾಃ ಶಂಸಂತಿ ಸರ್ವೇಽಸ್ಮಿನ್ನಾಸೀನಾ ಇತಿ ವಾಧ್ವರೇ ॥**
**ಏತಮೇವಾಹುರನ್ಯೇಽಗ್ನಿಂ ನರಾಶಂಸೋಽಧ್ವರೇ ಹ್ಯಯಂ ।**
**ನರೈಃ ಪ್ರಶಸ್ಯ ಆಸೀನೈರಾಹುಶ್ಚೈವರ್ತ್ವಿಜೋ ನರಃ ॥**

(ಬೃ. ದೇ. ೩-೨, ೩)

ಕೆಲವರು ನರಾಶಂಸನನ್ನು ಅಗ್ನಿಯೆಂದೇ ಹೇಳುತ್ತಾರೆ. ಯಜ್ಞದಲ್ಲಿ ನರರು ಸೇರಿ ಪ್ರಶಂಸಿಸುವುದರಿಂದ ಯಜ್ಞವೆಂದೇ ಮತ್ತೆ ಕೆಲವರು ಹೇಳುತ್ತಾರೆ. ಯಜ್ಞದಲ್ಲಿ ಸೇರಿರತಕ್ಕ ನರರಿಂದ ಪ್ರಶಂಸಿಸಲ್ಪಡುವುವರಿಂದ ನರಾಶಂಸನೆಂದರೆ

ಅಗ್ನಿಯೇ ಎಂದು ಇನ್ನೂ ಕೆಲವರ ಮತ. ಮೂರನೆಯದು, ಮೊದಲನೆಯ ಮತ್ತು ಎರಡನೆಯ ಮತಗಳ ಸಮನ್ವಯವಾಗಿದೆ. ಈ ಎರಡು ಅರ್ಥಗಳ ಜತೆಗೆ ಸಾಯಣರು ಮೂರನೆಯ ಅರ್ಥವನ್ನೂ ಹೇಳಿರುತ್ತಾರೆ. ಋ. ಸಂ. ೧-೮೯-೯ನೇ ಋಕ್ಕಿನ ಭಾಷ್ಯದಲ್ಲಿ—

**ನರಾಶಂಸಮೇತನ್ನಾಮಕಂ ದೇವವಿಶೇಷಂ । ಯದ್ವಾ ಅವಯವಾರ್ಥವ್ಯುತ್ಪತ್ತ್ಯಾ ಸದಸಸ್ಪತಿದೇವತಾಪರೋಽಯಂ ಶಬ್ದಃ । ಅತ್ರ ಅಗ್ನಿವತ್ ಸದಸಸ್ಪತೇರಪಿ ನರೈಃ ಶಸ್ಯಮಾನತ್ವಾತ್ ನರಾಶಂಸತ್ವಂ । ಏತಮೇವಾಭಿಪ್ರಾಯಂ ಹೃದಿ ನಿಧಾಯ ಬ್ರಾಹ್ಮಣಮೇವಮಾಮ್ನಾಯತೇ ಪ್ರಜಾ ವೈ ನರೋ ವಾಕ್ ಶಂಸಃ ॥**

(ಐ. ಬ್ರಾ. ೬-೨೭)

ಎಂಬ ವಿವರಣೆ ಇದೆ. ನರಾಶಂಸನೆಂದರೆ ಈ ಹೆಸರಿನ ದೇವತಾವಿಶೇಷವೆಂದಾಗಲೀ ಅಥವಾ ಸದಸಸ್ಪತಿಯೆಂದಾಗಲೀ ಅರ್ಥವಾಗಬಹುದು. ಸದಸಸ್ಪತಿಯೂ ನರರಿಂದ ಸ್ತುತಿಸಲ್ಪಡುವುದರಿಂದಲೂ, ಈ ಭಾವವು ಐತರೇಯಬ್ರಾಹ್ಮಣದಿಂದ ಉದಾಹೃತವಾಗಿರುವ ವಾಕ್ಯವು ಸೂಚಿಸುವುದರಿಂದಲೂ ಸಹ ಈ ಅರ್ಥವಾಗಬಹುದು ಎಂದು ಮೂರನೆಯ ಅರ್ಥವನ್ನು ತೋರಿಸಿದ್ದಾರೆ. ಆದರೆ ಈ ಶಬ್ದವು ಋಕ್ಸಂಹಿತೆಯಲ್ಲೆಲ್ಲಾ ಅಗ್ನಿಪರವಾಗಿಯೇ ಇದೆಯೆಂದು ಹೇಳಬಹುದು.

**ನರಾಶಂಸಃ ಪ್ರತಿ ಧಾಮಾನ್ಯಂಜನ್ ತಿಸ್ರೋ ದಿವಃ ಪ್ರತಿ ಮಹ್ನಾ ಸ್ವರ್ಚಿಃ।**
**ಘೃತಪ್ರುಷಾ ಮನಸಾ ಹವ್ಯಮುಂದನ್ಮೂರ್ಧನ್ಯಜ್ಞಸ್ಯ ಸಮನಕ್ತು ದೇವಾನ್ ॥**

(ಋ. ಸಂ. ೨-೩-೨)

ಇತ್ಯಾದಿ ಋಕ್ಕುಗಳಲ್ಲಿ ನರಾಶಂಸ ಶಬ್ದಕ್ಕೆ ಅಗ್ನಿಯೆಂದೇ ಅರ್ಥವಾಗುತ್ತದೆ.

ಸಂಹಿತಾಪಾಠಃ

ಶಶ್ವತ್ತಮಮೀಳತೇ ದೂತ್ಯಾಯ ಹವಿಷ್ಮಂತೋ ಮನುಷ್ಯಾಸೋ ಅಗ್ನಿಂ ।
ವಹಿಷ್ಠೈರಶ್ವೈಃ ಸುವೃತಾ ರಥೇನಾ ದೇವಾನ್ವಕ್ಷಿ ನಿ ಷದೇಹ ಹೋತಾ ॥ ೩ ॥

ಪದಪಾಠಃ

ಶಶ್ವತ್ऽತಮಂ । ಈಳತೇ । ದೂತ್ಯಾಯ । ಹವಿಷ್ಮಂತಃ । ಮನುಷ್ಯಾಸಃ । ಅಗ್ನಿಂ ।
ವಹಿಷ್ಠೈಃ । ಅಶ್ವೈಃ । ಸುऽವೃತಾ । ರಥೇನ । ಆ । ದೇವಾನ್ । ವಕ್ಷಿ । ನಿ । ಸದ । ಇಹ । ಹೋತಾ ॥

ಸಾಯಣಭಾಷ್ಯಂ

**ಶಶ್ವತ್ತಮಮತ್ಯಂತಂ ನಿತ್ಯಮಗ್ನಿಂ ಹವಿಷ್ಮಂತಃ ಸಂಭೃತಹವಿಷ್ಕಾ ಮನುಷ್ಯಾಸೋ ಮನುಷ್ಯಾ ಯಜಮಾನಾ ದೂತ್ಯಾಯ ॥ ದೂತಸ್ಯ ಭಾಗಕರ್ಮಣೀ ಇತಿ ಯಶ್ಪ್ರತ್ಯಯಃ ॥ ದೂತಕರ್ಮಣೇ ಹವಿರ್ವಹನಲಕ್ಷಣಾಯ ತನ್ನಿಮಿತ್ತಮೀಳತೇ। ಸ್ತುವಂತಿ । ಸ ತ್ವಮೇವಂ ಸ್ತುತೋ ವಹಿಷ್ಠೈರ್ವೋಢೃತಮೈರಶ್ವೈಃ ಸುವೃತಾ ಸುವರ್ತನೇನ ರಥೇನ ಚ ಸಹ ದೇವಾನಿಂದ್ರಾದೀನಾ ವಕ್ಷಿ । ಅಸ್ಮದೀಯಂ ಯಜ್ಞಂ ಪ್ರತ್ಯಾವಹ । ಪ್ರಾಪಯ । ತಸ್ತ್ವಂ ಹೋತಾ ಭವನ್ನಿಹಾಸ್ಮಿನ್ಯಜ್ಞೇ ನಿ ಸದ । ನಿಷೀದ ॥**

ಪ್ರತಿಪದಾರ್ಥ

**ಶಶ್ವತ್ತಮಂ**— ಅತ್ಯಂತ ನಿತ್ಯವಾದ ಸ್ಥಿತಿಯುಳ್ಳ | **ಅಗ್ನಿಂ**—ಅಗ್ನಿಯನ್ನು | **ಹವಿಷ್ಮಂತಃ**—ಹವಿರ್ಯುಕ್ತರಾದ | **ಮನುಷ್ಯಾಸಃ**—ಯಜಮಾನರು | **ದೂತ್ಯಾಯ**—ದೇವದೂತನ ಕರ್ಮವನ್ನು ನಿರ್ವಹಿಸಲು. **ಈಳತೇ**—ಸ್ತುತಿಸುತ್ತಾರೆ | **ವಹಿಷ್ಠೈಃ**—ರಥವನ್ನು ವಹಿಸಲು ಯೋಗ್ಯವಾದ | **ಅಶ್ವೈಃ**—ಅಶ್ವಗಳಿಂದ ಕೂಡಿದುದೂ | **ಸುವೃತಾ**—ಉತ್ತಮವಾದ ಸಂಚಾರವುಳ್ಳದ್ದೂ ಆದ | **ರಥೇನ**—ರಥದಿಂದ | **ದೇವಾನ್**—ಇಂದ್ರಾದಿ ದೇವತೆಗಳನ್ನು | **ಆ ವಕ್ಷಿ**—ನಮ್ಮ ಯಜ್ಞಕ್ಕೆ ಕರೆದುಕೊಂಡು ಬಾ | **ಹೋತಾ**—ಹೋತೃರೂಪದಲ್ಲಿದ್ದು | **ಇಹ**—ಈ ಯಜ್ಞದಲ್ಲಿ | **ನಿಷದ**—ಕುಳಿತುಕೋ.

ಭಾವಾರ್ಥ

ನಿತ್ಯವಾದ ಸ್ಥಿತಿಯುಳ್ಳ ಅಗ್ನಿಯನ್ನು ಹವಿರ್ಯುಕ್ತರಾದ ಯಜಮಾನರು ದೇವದೂತನ ಕರ್ಮವನ್ನು ನಿರ್ವಹಿಸಲು ಸ್ತುತಿಸುತ್ತಾರೆ. ಎಲೈ ಅಗ್ನಿಯೇ, ರಥವನ್ನು ವಹಿಸಲು ಯೋಗ್ಯವಾದ ಅಶ್ವಗಳಿಂದ ಕೂಡಿದುದೂ, ಉತ್ತಮವಾದ ಸಂಚಾರವುಳ್ಳದ್ದೂ ಆದ ರಥದಿಂದ ಇಂದ್ರಾದಿದೇವತೆಗಳನ್ನು ನಮ್ಮ ಯಜ್ಞಕ್ಕೆ ಕರೆದುಕೊಂಡು ಬಾ. ಹೋತೃರೂಪದಲ್ಲಿದ್ದು ಈ ಯಜ್ಞದಲ್ಲಿ ಕುಳಿತುಕೋ.

English Translation

Men offering oblations adore the eternal Agni to (induce him to perform) the duty of messenger (to the gods); do you with your stalwart draught horses and your well-turning chariots bear (our offering) to the gods, and sit down here as the ministrant priest.

ವಿಶೇಷವಿಷಯಗಳು.

**ಈಳತೇ—ಸರ್ವೈಃ ಸ್ತೂಯತೇ ಇಳನಾಮಕಃ ತ್ವಂ** | ಸಕಲರಿಂದಲೂ ಸ್ತುತನಾದವನೂ, ಇಡಃ ಎಂಬ ಹೆಸರಿನಿಂದ ಪ್ರಸಿದ್ಧನಾದವನೂ ಆದ ಅಗ್ನಿಯೆಂದು ಅರ್ಥಮಾಡಿದೆ. **ಈಳ ಈಟ್ಟೇಃ ಸ್ತುತಿಕರ್ಮಣಃ; ಇಂಧತೇರ್ವಾ** | ಸ್ತುತ್ಯರ್ಥಕವಾದ **ಈಡ್** ಧಾತುವಿನಿಂದಾಗಲೀ, ಜ್ವಲನಾರ್ಥಕವಾದ **ಇಂಧ್** ಧಾತುವಿನಿಂದಾಗಲೀ ನಿಷ್ಪನ್ನವಾಗಬಹುದು (ನಿ. ೮-೮) ಎಂದು ಈ ಪದದ ನಿರ್ವಚನವನ್ನು ತೋರಿಸಿ ನಿರುಕ್ತಕಾರರು ಋ. ಸಂ ೧೦-೧೧೦-೩ ನೇ ಋಕ್ಕನ್ನು ಉದಹರಿಸಿ ಈ ಪದದ ಸರಿಯಾದ ಅರ್ಥವನ್ನು ವಿವರಿಸಿದ್ದಾರೆ.

ಪ್ರಥಮತಃ, **ಸಮಿಧ್** ಎಂಬ ಪದದಂತೆ ಈ ಪದಕ್ಕೂ ಕೂಡ ಪ್ರತ್ಯೇಕವಾದ ದೇವತಾರೂಪವಾದ ನಿರ್ದೇಶವಿಲ್ಲದೆ ಅಗ್ನಿಗೆ ವಿಶೇಷಣವಾಗಿ ಮಾತ್ರ ಉಪಯೋಗವಿದ್ದಿರುವಂತೆ ತೋರುತ್ತದೆ. ಯಾಗನಿರ್ವಹಣಕಾಲದಲ್ಲಿ **ಅಗ್ನಿಯ** ಸಹಾಯವೂ ನೆರವೂ ಸಂಪೂರ್ಣವಾಗಿ ಆಗಬೇಕಾಗಿದ್ದುದರಿಂದ ಅವನು ಸ್ವಭಾವವಾಗಿಯೇ ಸ್ತುತ್ಯನಾದನು. ಪ್ರಾರಂಭದಲ್ಲಿ **ಅಗ್ನಿಯು** (೧) **ಸಮಿದ್ಧ**ನಾಗಬೇಕು. ಅನಂತರ (೨) ತನೂನಪಾತ್ ಅಥವಾ **ನರಾಶಂಸ** ಎಂಬ ನಾಮಧೇಯದಿಂದ ಯಾಗದ ಹವಿಸ್ಸುಗಳನ್ನು ಮಧುಪೂರಿತಗಳಾಗುವಂತೆ ಮಾಡಬೇಕು. ಅನಂತರ ದೇವತೆಗಳನ್ನು ಅವನು ಯಾಗಕ್ಕೆ ಕರೆತರಬೇಕು. ಈ ಕಾರ್ಯಕ್ಕೆ ಅವನು **ಈಡ್ಯ** (ಸ್ತುತ್ಯ) ನಾಗಲೇಬೇಕು. ಆದುದರಿಂದ ಈ ಸನ್ನಿವೇಶದಲ್ಲಿ ಅವನು ಯಜಮಾನರಿಂದ (೩) **ಈಡ್ಯ**ನಾಗಿದ್ದಾನೆ (ಪ್ರಾರ್ಥಿಸಲ್ಪಡುತ್ತಾನೆ).

ಆಪ್ರೀಸೂಕ್ತಗಳಲ್ಲಿ **ಈಡ್** ಧಾತುನಿಷ್ಪನ್ನವಾದ ಈ ಪದವು ಎಂಟುಕಡೆಗಳಲ್ಲಿ **ಸ್ತುತ**ನಾದವನು ಅಥವಾ **ಸ್ತುತ್ಯ**ನಾದವನು ಎಂದು ವಿಶೇಷಣವಾಗಿಯೂ ಮತ್ತು ಒಂದುಕಡೆ ಅಗ್ನಿಯ ದೌತ್ಯವನ್ನು ತೋರಿಸತಕ್ಕ ವಿಶೇಷಣವಾಗಿಯೂ ಒಟ್ಟು ಒಂಭತ್ತುಕಡೆಗಳಲ್ಲಿ ಅಗ್ನಿಪರವಾಗಿ ಉಪಯೋಗಿಸಲ್ಪಟ್ಟಿದೆ ಮತ್ತು ವಿಶ್ವಾಮಿತ್ರದೃಷ್ಟವಾದ,

**ಪ್ರದೀಧಿತಿರ್ವಿಶ್ವವಾರಾ ಜಿಗಾತಿ ಹೋತಾರಮಿಳಃ ಪ್ರಥಮಂ ಯಜಧ್ಯೈ |**
**ಅಚ್ಛಾ ನಮೋಭಿರ್ವೃಷಭಂ ವಂದಧ್ಯೈ ಸ ದೇವಾನ್ಯಕ್ಷದಿಷಿತೋ ಯಜೀಯಾನ್ ||**

(ಋ. ಸಂ, ೩-೪-೩)

ಎಂಬ ಋಕ್ಕಿನಲ್ಲಿ ಮಾತ್ರ ಹವಿಸ್ಸಿನ ರೂಪದ ಅನ್ನವೆಂಸರ್ಥವಾಗುತ್ತದೆ. ಆದರೂ ಸಹ ಆ ಋಕ್ಕಿನ ಮುಖ್ಯ ದೇವತೆಯಾದ ಅಗ್ನಿಯೊಂದಿಗೆ ಸಂಬಂಧವನ್ನು ಹೊಂದಿದೆ. ಈ ಅರ್ಥವು ಆಪ್ರೀಸೂಕ್ತದ ಸಂಪ್ರದಾಯದಿಂದ ಭಿನ್ನವಾಗಿದೆ. ಆದರೆ **ಪ್ರೈಷ**ಸೂಕ್ತದಲ್ಲಿ ಮಾತ್ರ ಅಗ್ನಿಪರ್ಯಾಯವಾಗಿಯೇ ಇದೆ.

**ಹೋತಾಯಕ್ಷದಗ್ನಿಮಿಡ ಈಡಿತೋ ದೇವೋ ದೇವಾಗ್ಂ ಆವಕ್ಷದ್ದೂತೋ ಹವ್ಯವಾಡಮೂರಃ | ಉಪೇಮಂ ಯಜ್ಞಮುಪೇಮಾಂ ದೇವೋ ದೇವಹೂತಿಮವತು ವೇತ್ವಾಜ್ಯಸ್ಯ ಹೋತರ್ಯಜ ||**

(ತೈ. ಬ್ರಾ. ೩-೬-೨-೧)

ಎಂಬ ವಾಕ್ಯಕ್ಕೆ ಭಾಷ್ಯಕಾರರು—**ಇಡೇತ್ಯೇತನ್ನಾಮಕಮಗ್ನಿಂ ತೃತೀಯಪ್ರಯಾಜದೇವಂ** ಎಂದು ಅಗ್ನಿಪರ್ಯಾಯನಾಮವೆಂದೂ ಹೇಳಿದ್ದಾರೆ. **ಐತರೇಯಬ್ರಾಹ್ಮಣದಲ್ಲಿ—**

**ಇಳೋ ಯಜತ್ಯನ್ನಂ ವಾ ಇಳೋಽನ್ನಮೇವ ತತ್ಪ್ರೀಣಾತ್ಯನ್ನಂ ಯಜಮಾನೇ ದಧಾತಿ |**

(ಐ. ಬ್ರಾ. ೨-೪)

ಇಳಃ ಎಂದರೆ ಯಾಗದಲ್ಲಿ ಅರ್ಪಿಸತಕ್ಕ ಹವೀರೂಪದ **ಅನ್ನ**ವೆಂದೂ, ಈ **ಅನ್ನದ** ಅರ್ಪಣೆಯ ಫಲವಾಗಿ ಯಜಮಾನನಿಗೂ ಅನ್ನಲಾಭವಾಗುವುದೆಂದೂ ಹೇಳಿದೆ.

ಮೇಲೆ ವಿವರಿಸಿರುವಂತೆ ಯಾಸ್ಕರು ಈ ಪದಕ್ಕೂ **ಇಂಧ್** ಧಾತುವಿಗೂ ಸಂಬಂಧವನ್ನು ತೋರಿಸಿರುವುದು ಸರಿಯಾಗಿ ಅರ್ಥವಾಗುವುದಿಲ್ಲ. ಇಲ್ಲಿ ಕಾತ್ಥಕ್ಯರ ಅಭಿಪ್ರಾಯವನ್ನು ಯಾಸ್ಕರು ಹೇಳಿಲ್ಲ. **ಬೃಹದ್ದೇವತೆಯಲ್ಲಿ—**

**ಇಳಸ್ತ್ವೃಷಿಕೃತಂ ರೂಪಂ ಈಡೇಶ್ಚ ಸ್ತುತಿಕರ್ಮಣಃ |**
**ಇಳಾವಾಂಸ್ತೇನ ವೋಕ್ತೋಽಗ್ನಿರಿಡಿನಾ ವೃದ್ಧಿಕರ್ಮಣಾ ||**

(ಬೃ. ದೇ. ೩-೪)

ಎಂಬ ವಾಕ್ಯಗಳಿಂದ ಈ ಶಬ್ದವು ಆರ್ಷೇಯವೆಂದೂ, ಅಗ್ನಿಪರ್ಯಾಯನಾಮವೆಂದೂ ತೋರಿಸಿದ್ದೆ ಮತ್ತು ಇಳಾವಾನ್ ಎಂಬ ಪದವು ಅಗ್ನಿಗೆ ವಿಶೇಷಣವಾಗಿದೆ.

**ಗೋಮಾँ ಅಗ್ನೇಽವಿಮಾँ ಅಶ್ವೀ ಯಜ್ಞೋ ನೃವತ್ಸಖಾ ಸದಮಿದಪ್ರಮೃಷ್ಯಃ |**
**ಇಳಾವಾँ ಏಷೋ ಅಸುರ ಪ್ರಜಾವಾನ್ದೀರ್ಘೋ ರಯಿಃ ಪೃಥುಬುಧ್ನಃ ಸಭಾವಾನ್ ||**

ಎಂಬ ಋಕ್ಕಿನಲ್ಲಿ **ಇಳಾವಾನ್** ಎಂಬ ಪದವು **ಅಗ್ನಿಗೆ** ವಿಶೇಷಣವಾಗಿರುವುದರಿಂದ ಬೃಹದ್ದೇವತೆಯಲ್ಲಿ ಆ ಅಂಶವನ್ನು **ಸೂಚಿಸಿದೆ.**

ವಿವರಣೆಗಳಲ್ಲಿ ಈರೀತಿ ಸಂಪ್ರದಾಯಭೇದಗಳು ಕಂಡರೂ ಸಹ ಸೂಕ್ತದಲ್ಲಿ ಮೂರನೇ ಸ್ಥಾನವನ್ನು ಹೊಂದಿರುವ ಅಗ್ನಿ ದೇವತಾಪರ್ಯಾಯನಾಮವೇದು ಒಟ್ಟಿನಲ್ಲಿ ಹೇಳಬಹುದು.

ಸಂಹಿತಾಪಾಠಃ

**ವಿ ಪ್ರಥತಾಂ ದೇವಜುಷ್ಟಂ ತಿರಶ್ಚಾ ದೀರ್ಘಂ ದ್ರಾಘ್ಮಾ ಸುರಭಿ ಭೂತ್ವಸ್ಮೇ ।**
**ಅಹೇಳತಾ ಮನಸಾ ದೇವ ಬರ್ಹಿರಿಂದ್ರಜ್ಯೇಷ್ಠಾಁ ಉಶತೋ ಯಕ್ಷಿ ದೇವಾನ್॥**

ಪದಪಾಠಃ

**ವಿ । ಪ್ರಥತಾಂ । ದೇವಽಜುಷ್ಟಂ । ತಿರಶ್ಚಾ । ದೀರ್ಘಂ । ದ್ರಾಘ್ಮಾ । ಸುರಭಿ । ಭೂತು । ಅಸ್ಮೇ ಇತಿ । ಅಹೇಳತಾ । ಮನಸಾ । ದೇವ । ಬರ್ಹಿಃ । ಇಂದ್ರಽಜ್ಯೇಷ್ಠಾನ್ । ಉಶತಃ । ಯಕ್ಷಿ । ದೇವಾನ್ ॥ ೪ ॥**

ಸಾಯಣಭಾಷ್ಯಂ

**ಹೇ ಬರ್ಹಿರ್ನಾಮಕಾಗ್ನೇ ದೇವಜುಷ್ಟಂ ದೇವೈಃ ಸೇವಿತಂ ತಿರಶ್ಚಾ ತಿರಶ್ಚೀನಂ ತಿರ್ಯಗಂಚನಮಿದಂ ಬರ್ಹಿರ್ವಿ ಪ್ರಥತಾಂ । ವಿಶೇಷೇಣ ವಿಸ್ತೃತಂ ಭವತು । ತಥಾ ದೀರ್ಘಂ ಚೇದಂ ದ್ರಾಘ್ಮಾ ದ್ರಾಘಿಮ್ನಾ ॥ ದೀರ್ಘಶಬ್ದಸ್ಯೇಮನಿಚಿ ಪ್ರಿಯಸ್ಥಿರೇತ್ಯಾದಿನಾ ದ್ರಾಘಿರಾದೇಶಃ । ಅಕಾರಸ್ಯೇಕಾರೋವರ್ಣವ್ಯಾಪತ್ತ್ಯಾ । ಪಶ್ಚಾದಲ್ಲೋಪಃ ॥ ದ್ರಾಘಿಮ್ನಾ ಯುಕ್ತಂ ಭವತು । ಅಸ್ಮೇ ಅಸ್ಮದೀಯಂ ಬರ್ಹಿಃ ಸುರಭಿ ಸೋಮಾದಿಹವಿರ್ನಿಧಾನೇನ ಸುಗಂಧಂ ಭೂತು । ಭವತು । ಹೇ ದೇವ ದ್ಯೋತಮಾನ ಹೇ ಬರ್ಹಿರೇತನ್ನಾಮಕಾಗ್ನೇ ಅಹೇಳತಾ। ಹೇಲ ಇತಿ ಕ್ರೋಧನಾಮ । ಅಕ್ರುಧ್ಯತಾ ಮನಸೋಶತೋ ಹವೀಂಷಿ ಕಾಮಯಮಾನಾನಿಂದ್ರಜ್ಯೇಷ್ಠಾನಿಂದ್ರಪ್ರಧಾನಾನ್ದೇವಾನ್ಯಕ್ಷಿ । ಯಜ । ಪೂಜಯ ॥**

ಪ್ರತಿಪದಾರ್ಥ

**ದೇವಜುಷ್ಟಂ**—ದೇವತೆಗಳಿಂದ ಸೇವಿತವೂ । **ತಿರಶ್ಚಾ**—ವಕ್ರಾಕಾರದಲ್ಲಿ ಸುತ್ತಿಕೊಂಡಿರುವುದೂ ಆದ । **ಬರ್ಹಿಃ**—ಬರ್ಹಿಯು (ಶ್ರೇಷ್ಠವಾದ ದರ್ಭಾಸನವು) । **ವಿ ಪ್ರಥತಾಂ**—ವಿಸ್ತೃತಿಯನ್ನು ಹೊಂದಲಿ । **ದೀರ್ಘಂ**—ದೀರ್ಘವಾದ ಬೆಳೆವಣಿಗೆಯನ್ನೂ । **ದ್ರಾಘ್ಮಾ**—ಅಧಿಕವಾದ ವಿಸ್ತೃತಿಯನ್ನೂ ಹೊಂದಿರುವ । **ಅಸ್ಮೇ**—ನಮ್ಮ ಬರ್ಹಿಯು । **ಸುರಭಿ**—ಸುಗಂಧಯುಕ್ತವಾಗಿ । **ಭೂತು**—ಆಗಲಿ । **ದೇವ**—ಪ್ರಕಾಶಮಾನನೂ । **ಬರ್ಹಿಃ**—ಬರ್ಹಿಸಂಜ್ಞಕನೂ ಆದ ಎಲೈ ಅಗ್ನಿಯೇ । **ಅಹೇಳತಾ**—ಕ್ರೋಧರಹಿತವಾದ । **ಮನಸಾ**—ಮನಸ್ಸಿನಿಂದ ಕೂಡಿ । **ಉಶತಃ**—ಹವಿಸ್ಸನ್ನು ಇಚ್ಛಿಸುವವರೂ । **ಇಂದ್ರಜ್ಯೇಷ್ಠಾನ್**—ಇಂದ್ರನೇ ಪ್ರಧಾನವಾಗಿ ಉಳ್ಳವರೂ ಆದ । **ದೇವಾನ್**—ದೇವತೆಗಳನ್ನು । **ಯಕ್ಷಿ**—ಪೂಜಿಸು.

ಭಾವಾರ್ಥ

ದೇವತೆಗಳಿಂದ ಸೇವಿತವೂ ವಕ್ರಾಕಾರದಲ್ಲಿ ಸುತ್ತಿಕೊಂಡಿರುವುದೂ ಆದ ಬರ್ಹಿಯು (ದರ್ಭಾಸನವು) ವಿಸ್ತೃತಿಯನ್ನು ಹೊಂದಲಿ. ದೀರ್ಘವಾದ ಬೆಳೆವಣಿಗೆಯನ್ನು ಹೊಂದಿರುವ ನಮ್ಮ ಬರ್ಹಿಯು ಸುಗಂಧಯುಕ್ತವಾಗಲಿ. ಪ್ರಕಾಶ

ಮಾನನೂ, ಬರ್ಹಿಸಂಜ್ಞಕನೂ ಆದ ಎಲೈ ಅಗ್ನಿಯೇ ಕ್ರೋಧರಹಿತವಾದ ಮನಸ್ಸಿನಿಂದ ಕೂಡಿ ಹವಿಸ್ಸನ್ನು ಇಚ್ಛಿಸುವವರೂ ಇಂದ್ರನೇ ಪ್ರಧಾನನಾಗಿ ಉಳ್ಳವರೂ ಆದ ದೇವತೆಗಳನ್ನು ಪೂಜಿಸು.

## English Translation

May our (sacred grass) acceptable to the gods twining crookedly be stretched out, may it be long, lengthy, and fragrant ; with mind free romf wrath, divine Barhis, offer worship to the gods desiring (the sacrifice), of whom Indra is the chief.

### ವಿಶೇಷವಿಷಯಗಳು

**ಬರ್ಹಿಃ—ಇಧ್ಮಃ, ಈಳಃ** ಎಂಬ ಭಾವನೆಗಿಂತ ಈ ಸಾಧನವು ಹೆಚು ಮೂರ್ತರೂಪವುಳ್ಳದ್ದಾಗಿದೆ. ಬರ್ಹಿಯೆಂದರೆ ದರ್ಭಾಸನವೆಂದೇ ಅರ್ಥ. **ದೇವೀಃ ದ್ವಾರಃ** ಎಂದು ದ್ವಾರಗಳಿಗೇ ಒಂದು ದೈವಿಕವಾದ ಅಂಶವನ್ನು ಆರೋಪಮಾಡುವಂತೆ ಬರ್ಹಿಗೆ ಮಾಡಿಲ್ಲ. ಕೇವಲ ದೇವತೆಗಳ ಆಸನವೆಂಬ ಅರ್ಥವು ಮಾತ್ರ ಸೂಚಿತವಾಗುತ್ತದ್ಕೆ ಅದೂ ಅಲ್ಲದೆ, ದೇವತೆಗಳ ಆಗಮನಕ್ಕಾಗಿ ದ್ವಾರಗಳು ಇತರ ಸಹಾಯವಿಲ್ಲದೇ ತಾವು ತೆರೆದುಕೊಂಡು ದಾರಿಯನ್ನು ಮಾಡಿಕೊಡಬೇಕೆಂದು ಪ್ರಾರ್ಥಿಸಿದೆ. ಅಚೇತನವಾದ ದ್ವಾರಗಳಿಗೆ ದೈವಿಕವಾದ ಶಕ್ತಿಯಿದ್ದ ಹೊರತು ತಮ್ಮಷ್ಟಕ್ಕೆ ತಾವೇ ತೆಗೆದುಕೊಂಡು ವಿಶಾಲವಾದ ಮಾರ್ಗವನ್ನು ಮಾಡುವುದಕ್ಕಾಗುವುದಿಲ್ಲ ಆದರೆ ಬರ್ಹಿಯ ವಿಷಯದಲ್ಲಿ ಮಾತ್ರ ಈ ಶಕ್ತಿಯ ಆರೋಪವಿಲ್ಲ. ಋತ್ವಿಕ್ಕುಗಳು ಇದನ್ನು ಹರಡಬೇಕು. ಕೇವಲ ಈ ಋಕ್ಕಿನಲ್ಲೇ ಅಲ್ಲದೇ ಆಪ್ರೀ ಸೂಕ್ತಗಳ ಇತರ ಋಕ್ಕುಗಳಲ್ಲೂ ಸಹ ಋತ್ವಿಗಾದಿಗಳ ಸಹಾಯದಿಂದಲೇ **ಬರ್ಹಿಯ** ಆಸ್ತರಣವಾಗಬೇಕೆಂದು ವಿಶದವಾಗಿ ಹೇಳಿದೆ. ಉದಾಹರಣೆಗೆ—

**ಪ್ರಾಚೀನಂ ಬರ್ಹಿರೋಜಸಾ ಸಹಸ್ರವೀರಮಸ್ತೃಣನ್ । ಯತ್ರಾದಿತ್ಯಾ ವಿರಾಜಥ ।**
(ಋ. ಸಂ. ೧-೧೮೮-೪)

ಎಂಬ ಋಕ್ಕಿನಲ್ಲಿಯೂ, ಹೀಗೆಯೇ ಋ. ಸಂ. ೯-೫-೪ ರಲ್ಲಿಯೂ **ಬರ್ಹಿಃ ಪ್ರಾಚೀನವೋಜಸಾ ಪವಮಾನಃ ಸ್ತೃಣನ್ ಹರಿಃ ।** ಎಂದೂ, ಋತ್ವಿಕ್ಕುಗಳು **ಬರ್ಹಿಯನ್ನು** ಹರಡುತ್ತಾರೆ ಎಂಬ ವರ್ಣನೆಯಿದೆ. ಹೀಗೆಯೇ ಇತರ **ಆಪ್ರೀಸೂಕ್ತಗಳ** ಋಕ್ಕುಗಳಲ್ಲಿಯೂ ಸಹ **ಬರ್ಹಿಯು** ಪಾರ್ಥಿವವಾದುದೂ, ಅಚೇತನವಾದುದೂ ಆದರೂ ದೇವತೆಗಳಿಗೆ ಪವಿತ್ರವಾದ ಸ್ಥಾನರೂಪವಾದ ಸ್ಥಾನವೆಂದೂ ಹೇಳಿದೆ. **ಪ್ರೈಷ** ಸೂಕ್ತದಲ್ಲಿ ಮಾತ್ರ,

**ಹೋತಾಯಕ್ಷದ್ಬರ್ಹಿಃ ಸುಷ್ಟರೀಮೋರ್ಣಮ್ರದಾ ಅಸ್ಮಿನ್ಯಜ್ಞೇ ವಿಚಪ್ರಚ ಪ್ರಥತಾಗ್ಂ ಸ್ವಾಸಸ್ಥಂ ದೇವೇಭ್ಯಃ । ಏಮೇನದಸ್ಯ ವಸವೋ ರುದ್ರಾ ಆದಿತ್ಯಾಃ ಸದಂತು ಪ್ರಿಯಮಿಂದ್ರಸ್ಯಾಸ್ತು ವೇತ್ವಾಜ್ಯಸ್ಯ ಹೋತರ್ಯಜ ॥**
(ತೈ. ಬ್ರಾ. ೩-೬-೨-೧)

**ಬರ್ಹಿರ್ನಾಮಕಂ ಚತುರ್ಥಪ್ರಯಾಜದೇವಮಗ್ನಿಂ** ಎಂದು ಅಗ್ನಿಪರ್ಯಾಯವಾದುದೂ **ದೇವತಾತ್ಮಕ**ವಾದುದೂ ಆದ ಆಸನವೆಂದು ಹೇಳಿದೆ. **ಐತರೇಯ ಬ್ರಾಹ್ಮಣದಲ್ಲಿ,**

**ಬರ್ಹಿರ್ಯಜತಿ । ಪಶವೋ ವೈ ಬರ್ಹಿಃ । ಪಶೂನೇವ ತತ್ಪ್ರೀಣಾತಿ ಪಶೂನ್ಯಜಮಾನೇ ಧದಾತಿ ।**
(ಐ. ಬ್ರಾ. ೨-೪- )

ಎಂದು ಹುಲ್ಲು ಮೇಯತಕ್ಕದ್ದೂ, ಹುಲ್ಲಿನಿಂದ ಕೂಡಿದುದೂ ಆದ ಪಶುವೆಂದು ಅರ್ಥಮಾಡಿದೆ. ಆದರೆ ಈ ಅರ್ಥಕ್ಕೆ ಸ್ವಲ್ಪವೂ ಅವಕಾಶವಿಲ್ಲವೆಂದು ತಿಳಿಯುತ್ತದೆ.

ನಿರುಕ್ತಕಾರರು **ಬರ್ಹಿಃ ಪರಿಬರ್ಹಣಾತ್** | ವೇಗವಾಗಿ ಬೆಳೆಯುವುದರಿಂದ ದರ್ಭೆಗೆ ಬರ್ಹಿಯೆಂದು ಹೆಸರೆಂದು ಹೇಳಿದ್ದಾರೆ. (ನಿ. ೮-೮) ಬೃಹದ್ದೇವತೆಯಲ್ಲಿ,

**ಬರ್ಹಿರೇವಾಯಮಗ್ನಿಸ್ತು ಸರ್ವಂ ಹಿ ಪರಿಬೃಂಹಿತಂ |**
**ಅನ್ನೇನ ಯದ್ಧುತೋ ವಾ ಸನ್ನಿಧ್ಮೇನ ಪರಿಬೃಂಹಿತಃ ||**
(ಬೃ. ದೇ. ೩-೫)

ಸಮಸ್ತವಾದ ಅನ್ನವೂ ತದ್ವ್ಯಾಪ್ಯವಾದುದರಿಂದಲೂ, ಆಹುತ್ಯನಂತರ ಇಧ್ಮದಿಂದ ಪೂರಿತವಾಗುವುದರಿಂದಲೂ **ಅಗ್ನಿಯೇ** ಬರ್ಹಿ ರೂಪದಲ್ಲಿದ್ದಾನೆ. ಎಂದು ತಾದಾತ್ಮ್ಯವನ್ನು ಹೇಳಿದೆ.

ಸಂಹಿತಾಪಾಠಃ

ದಿವೋ ವಾ ಸಾನು ಸ್ಪೃಶತಾ ವರೀಯಃ ಪೃಥಿವ್ಯಾ ವಾ ಮಾತ್ರಯಾ ವಿ
ಶ್ರಯಧ್ವಂ ।
ಉಶತೀರ್ದ್ವಾರೋ ಮಹಿನಾ ಮಹದ್ಭಿರ್ದೇವಂ ರಥಂ ರಥಯುರ್ಧಾರ-
ಯಧ್ವಂ ॥ ೫ ॥

ಪದಪಾಠಃ

ದಿವಃ । ವಾ । ಸಾನು । ಸ್ಪೃಶತ । ವರೀಯಃ । ಪೃಥಿವ್ಯಾ । ವಾ । ಮಾತ್ರಯಾ । ವಿ । ಶ್ರಯಧ್ವಂ ।
ಉಶತೀಃ । ದ್ವಾರಃ । ಮಹಿನಾ । ಮಹತ್ಽಭಿಃ । ದೇವಂ । ರಥಂ । ರಥಽಯುಃ । ಧಾರಯಧ್ವಂ ॥ ೫ ॥

ಸಾಯಣಭಾಷ್ಯಂ

ಹೇ ದ್ವಾರ ಏತನ್ನಾಮಧೇಯಾ ದೇವ್ಯಃ ಯೂಯಂ ದಿವೋ ವಾ । ವಾಶಬ್ದಶ್ಚಾರ್ಥೇ । ದಿವಶ್ಚ ಸಾನು ಸಮುಚ್ಛ್ರಿತಂ ವರೀಯ ಉರುತರಂ ಸ್ಥಾನಂ ಸ್ಪೃಶತ । ಉನ್ನತಾ ಭವತೇತ್ಯರ್ಥಃ ॥ ಚವಾಯೋಗೇ ಪ್ರಥಮೇತಿ ನ ನಿಘಾತಃ ॥ ಪೃಥಿವ್ಯಾಶ್ಚ ಯಾವತೀ ಮಾತ್ರಾಸ್ತಿ ತಾವತ್ಯಾ ಮಾತ್ರಯಾ ವಿ ಶ್ರಯಧ್ವಂ । ವಿಸ್ತೃತಾ ಭವತ । ಉಶತೀರ್ದೇವಾನ್ಕಾಮಯಮಾನಾ ಯೂಯಂ ರಥಯುಃ ॥ ಸುಪಾಂ ಸುಲುಗಿತಿ ಜಸಃ ಸುಃ ॥ ರಥಕಾಮಾಃ ಸತ್ಯೋ ಮಹಿನಾ ಮಹಿಮ್ನಾ ಮಹದ್ಭಿರ್ದೇವೈರಧಿಷ್ಠಿತಂ ಅತ ಏವ ದೇವಂ ದ್ಯೋತ-ಮಾನಂ ರಥಂ ರಮಣಸಾಧನಂ ಧಾರಯಧ್ವಂ । ಧಾರಯತ ॥

ಪ್ರತಿಪದಾರ್ಥ

**ದ್ವಾರಃ**—ದ್ವಾರಸಂಜ್ಞಕರಾದ ಎಲೈ ದೇವಿಯರೇ । **ದಿವಃ**—ದೇವಲೋಕದ । **ಸಾನು**—ಉಚ್ಚಸ್ಥಾನ ದಲ್ಲಿರುವುದೂ । **ವರೀಯಃ**—ವಿಸ್ತೃತವಾದುದೂ ಆದ ಸ್ಥಾನವನ್ನು । **ಸ್ಪೃಶತ**—ಸ್ಪರ್ಶಮಾಡಿರಿ । **ವಾ**—

ಅಥವಾ (ಮತ್ತು) | **ಪೃಥಿವ್ಯಾಃ**—ಪೃಥ್ವಿಯ | **ಮಾತ್ರಯಾ**— ಪ್ರಮಾಣಕ್ಕನುಸಾರವಾಗಿ | **ವಿ ಶ್ರಯಧ್ವಂ**—ವಿಸ್ತೃತಿಯನ್ನು ಹೊಂದಿರಿ | **ಉಶತೀಃ**—ದೇವಪೂಜೆಯನ್ನಪೇಕ್ಷಿಸುವ ನೀವು | **ರಥಯುಃ**—ರಥವನ್ನು ಇಚ್ಛಿಸಿದವರಾಗಿ | **ಮಹಿನಾ**—ನಿಮ್ಮ ಮಹತ್ತ್ವದಿಂದ | **ಮಹದ್ಭಿಃ**—ಮಹತ್ಸ್ವರೂಪವುಳ್ಳ ದೇವತೆಗಳು ಆಶ್ರಯಿಸಿರುವುದೂ | **ದೇವಂ**—ಪ್ರಕಾಶಮಾನವಾದುದೂ ಆದ | **ರಥಂ**—ರಥವನ್ನು | **ಧಾರಯಧ್ವಂ**—ಧರಿಸಿರಿ.

ಭಾವಾರ್ಥ

ದ್ವಾರಸಂಜ್ಞಕರಾದ ಎಲೈ ದೇವಿಯರೇ, ದೇವಲೋಕದ ಉಚ್ಚಸ್ಥಾನದಲ್ಲಿರುವುದೂ, ವಿಸ್ತೃತವೂ ಆದ ದಿವ್ಯ ಸ್ಥಾನವನ್ನು ಸ್ಪರ್ಶಿಸಿರಿ. ಪೃಥ್ವಿಯ ಪ್ರಮಾಣಕ್ಕನುಸಾರವಾದ ವಿಸ್ತೃತಿಯನ್ನು ಹೊಂದಿರಿ. ದೇವಪೂಜೆಯನ್ನಪೇಕ್ಷಿಸುವ ನೀವು ರಥವನ್ನು ಇಚ್ಛಿಸಿದವರಾಗಿ ನಿಮ್ಮ ಮಹತ್ತ್ವದಿಂದ ಮಹತ್ಸ್ವರೂಪವುಳ್ಳ ದೇವತೆಗಳು ಆಶ್ರಯಿಸಿರುವುದೂ, ಪ್ರಕಾಶಮಾನವಾದುದೂ ಆದ ರಥವನ್ನು ಧರಿಸಿರಿ.

English Translation

Be in contact, doors, with the lofty height of heaven, or expand according to the measure of the earth; desiring the gods, desiring a cheriot, sustain with yourmight the shining chariot (that is mounted) by the mighty gods.

ವಿಶೇಷವಿಷಯಗಳು

ಋ. ಸಂ. ೧-೧೮೮-೫ ನೇ ಋಕ್ಕಿನಲ್ಲಿ ದೇವೀರ್ದ್ವಾರಃ ಎಂಬ ಯಜ್ಞಗೃಹದ ದ್ವಾರದೇವತೆಗಳನ್ನು (ದುರಃ) ಪ್ರಾರ್ಥಿಸುವಾಗ ಮತ್ತೊಂದು ವಿಶೇಷವೇನೆಂದರೆ—ಯಜ್ಞಗೃಹದ ನಾಲ್ಕುದಿಕ್ಕುಗಳಲ್ಲಿಯೂ ಇರುವ ನಾಲ್ಕು ದ್ವಾರಗಳ ಹೆಸರುಗಳನ್ನು ಅಲ್ಲಿ ಸೂಚಿಸಿದೆ. ಇತರ ಆಪ್ರಿಸೂಕ್ತಗಳಲ್ಲಿ ಈರೀತಿ ಹೆಸರುಗಳಿರುವುದಿಲ್ಲ. ಆದರೂ ವಿರಾಟ್ ಮೊದಲಾದ ಶಬ್ದಗಳಿಗೆ ಅವಯವಾರ್ಥವನ್ನು ಕಲ್ಪಿಸಿ ದುರಃ ಎಂಬ ಶಬ್ದಕ್ಕೆ ವಿಶೇಷಣಪದಗಳನ್ನಾಗಿ ಹೇಳುವುದೂ ಸಮಂಜಸವಾಗಿದೆ. ಭಾಷ್ಯಕಾರರು ಈ ಎರಡುವಿಧವಾದ ಪ್ರಯತ್ನಗಳನ್ನೂ ಮಾಡಿದಾರೆ.

**ದುರಃ**— **ದ್ವಾರಃ** ಎಂಬ ಯಜ್ಞಗೃಹದ ದ್ವಾರದೇವತೆಗಳು, ಇವರು ಯಾರು ಎಂಬ ವಿಷಯದಲ್ಲಿ ಯಾಸ್ಕರು **ದ್ವಾರಃ | ದ್ವಾರೋ ಜವತೇರ್ವಾ ದ್ರವತೇರ್ವಾ ವಾರಯತೇರ್ವಾ | ಗೃಹದ್ವಾರ ಇತಿ ಕಾತ್ಥಕ್ಯಃ | ಅಗ್ನಿರಿತಿ ಶಾಕಪೂಣಿಃ ||**

(ನಿ. ೮-೧೦)

ಎಂದು ನಿರ್ವಚನವನ್ನು ಹೇಳಿದಾರೆ. ದ್ವಾರವೆಂದರೆ ಪ್ರವೇಶಿಸುವುದಕ್ಕೆ, ಒಳಗೆ ಹೋಗುವುದಕ್ಕೆ ಅಥವಾ ಒಳಗೆ ಹೋಗುವುದನ್ನು ತಡೆಯುವುದಕ್ಕೆ ಇರುವುದರಿಂದ ಇದಕ್ಕೆ ದ್ವಾರವೆಂದು ಹೆಸರು. ದ್ವಾರವೆಂದರೆ ಗೃಹದ್ವಾರ (ಬಾಗಿಲು) ಎಂದು ಕಾತ್ಥಕ್ಯರ ಮತವು ; ಅಗ್ನಿಯೆಂದು ಶಾಕಪೂಣಿಯ ಮತವು ಎಂದೂ ಹೇಳಿರುವರು. ಹೋಮವನ್ನು ಮಾಡುವ ಹೋಮಗೃಹವು ಅಗ್ನಿಯ ಸ್ವರೂಪವೆಂದೂ ಆದುದರಿಂದ ಅದರ ದ್ವಾರಗಳೂ ಅಗ್ನಿಯ ವಿಶೇಷರೂಪಗಳೆಂದೂ (ಅಗ್ನಿವಿಶೇಷಮೂರ್ತಯಃ) ಹೇಳುವರು. The doors of the chamber in which the oblation offered are said to be personification of Agni.

ಯಜ್ಞಗೃಹದ ದ್ವಾರಾಭಿಮಾನಿದೇವತೆಗಳೆಂದು ಸಾಯಣರು ವಿವರಿಸಿದ್ದಾರೆ. ಈ ದ್ವಾರಗಳು ಯಜ್ಞಗೃಹದ ದ್ವಾರಗಳೇ ಅಥವಾ ಇದು ಕೇವಲ ಆಲಂಕಾರಿಕವಾದ ಪ್ರಯೋಗವೇ ಎಂಬ ವಿಷಯದಲ್ಲಿ ಅಭಿಪ್ರಾಯಭೇದವಿದೆ.

ಒಂದುವೇಳೆ ಇಲ್ಲಿ ಈ ಶಬ್ದಕ್ಕೆ ಗೃಹದ್ವಾರಗಳೆಂದರ್ಥವಲ್ಲದಿದ್ದರೆ ಆಗ ಆಪ್ರೀಸೂಕ್ತಗಳ ದೇವತೆಗಳ ವಿಷಯದಲ್ಲೂ ಸಹ ಈಗ ಹೇಳಿರುವ ಅಂಶಗಳಿವೆ. ವ್ಯತ್ಯಾಸವಾದ ಅರ್ಥಗಳನ್ನು ಭಾವಿಸಬೇಕಾಗುತ್ತದೆ.

ಐತರೇಯಬ್ರಾಹ್ಮಣದಲ್ಲಿ—

**ದುರೋ ಯಜತಿ ವೃಷ್ಟಿರ್ವೈ ದುರೋ ವೃಷ್ಟಿಮೇವ ತತ್ಪ್ರೀಣಾತಿ ವೃಷ್ಟಿಮನ್ನಾದ್ಯಂ ಯಜಮಾನೇ ದಧಾತಿ |**

(ಐ. ಬ್ರಾ. ೨-೪)

ಎಂದು ದ್ವಾರವೆಂಬ ಅರ್ಥಕ್ಕೆ ಬದಲಾಗಿ ವೃಷ್ಟಿಯೆಂದರ್ಥಮಾಡಿದೆ. ಈ ಅರ್ಥವು ಹೇಗಾಗುವುದೆಂದು ವಿಶದಪಡಿಸಿಲ್ಲ. ನಿರುಕ್ತಕಾರರು,

**ದ್ವಾರೋ ಜವತೇರ್ವಾ ದ್ರವತೇರ್ವಾ ವಾರಯತೇರ್ವಾ |** ಮುಂದಕ್ಕೆ ಒತ್ತು ಎಂಬರ್ಥವನ್ನು ಕೊಡುವ **ಜು** ಧಾತುವಿನಿಂದಾಗಲೀ, ಮುಂದುಸರಿ ಎಂಬರ್ಥವನ್ನು ಕೊಡುವ **ದ್ರು** ಧಾತುವಿನಿಂದಾಗಲೀ ಅಥವಾ ಪ್ರತ್ಯೇಕಿಸು ಎಂಬರ್ಥವನ್ನು ಕೊಡುವ **ವೃ** ಧಾತುವಿನಿಂದಾಗಲೀ ನಿಷ್ಪನ್ನವಾಗಿದೆಯೆಂದು,

**ವ್ಯಚಸ್ವತೀರುರ್ವಿಯಾ ವಿ ಶ್ರಯಂತಾಂ ಪತಿಭ್ಯೋ ನ ಜನಯಃ ಶುಂಭಮಾನಾಃ |**
**ದೇವೀರ್ದ್ವಾರೋ ಬೃಹತೀರ್ವಿಶ್ವಮಿನ್ವಾ ದೇವೇಭ್ಯೋ ಭವತ ಸುಪ್ರಾಯಣಾಃ ||**

ಋ. ಸಂ. ೧೦-೧೧೦.೫)

ಎಂಬ ಋಕ್ಕನ್ನು ಉದಹರಿಸಿ **ದ್ವಾರ**ಶಬ್ದಕ್ಕೆ ಅರ್ಥವನ್ನು ವಿವರಿಸುತ್ತಾ **ಗೃಹದ್ವಾರ ಇತಿ ಕಾತ್ಥಕ್ಯಃ |** ಕಾತ್ಥಕ್ಯರ ಮತದಂತೆ ಗೃಹದ್ವಾರವೆಂದೂ, **ಅಗ್ನಿರಿತಿ ಶಾಕಪೂಣಿಃ |** ಶಾಕಪೂಣಿಯ ಮತದಂತೆ ಅಗ್ನಿಯೆಂದೂ ಶಹ ಮತಭೇದವನ್ನು ತಿಳಿಸಿದ್ದಾರೆ (ನಿ. ೮-೧೦) ಬೃಹದ್ದೇವತೆಯಲ್ಲಿ,

**ದ್ವಾರಸ್ತು ದೇವ್ಯೋ ಯಾಃ ಪ್ರೋಕ್ತಾ ವಿಶ್ವೇಷಾಂ ತಾಸ್ತು ಪತ್ನಯಃ |**
**ಅಗ್ನಾಯೀಮನುವರ್ತಂತೇ ತಥಾಗ್ನಾಯ್ಯಗ್ನಿಮೇವ ಚ ||**
**ಅಗ್ನೌ ಧ್ರುವಂ ಸ್ಥಿತಾಸ್ತಾಸ್ತು ಸಂಸ್ತೂಯಂತೇಽಗ್ನಿನಾ ಸಹ |**
**ಪ್ರಾಧಾನ್ಯಂ ತಾಸು ಚೈವಾಗ್ನೇ ಸ್ತುತಿಷ್ವೇವ ಹವಿಷ್ಷು ಚ ||**

(ಬೃ. ದೇ. ೩-೬ ರಿಂದ ೭)

ಈ ದ್ವಾರಗಳು ದೇವಪತ್ನಿಯರೆಂದೂ, ಅಗ್ನಿಯನ್ನು ಅನುಸರಿಸುವ ಅಗ್ನಾಯಿಯನ್ನು (ಅಗ್ನಿಪತ್ನಿಯನ್ನು) ಇವರು ಅನುಸರಿಸುವರೆಂದೂ, ಅಗ್ನಿಯಲ್ಲೇ ಸ್ಥಿರವಾಗಿ ನೆಲೆಸಿರುವುದರಿಂದ ಅಗ್ನಿಯೊಡನೆ ಸ್ತುತಿಸಲ್ಪಡುವರೆಂದೂ ಹೇಳಿರುವುದು ಸಂಯುಕ್ತಿಕವಾಗಿದೆ.

ಯಜ್ಞಗೃಹದ ನಾಲ್ಕು ದ್ವಾರಗಳನ್ನು ಸಂಸ್ಕಾರಮಾಡುವ ವಿಷಯದಲ್ಲಿ ತೈತ್ತಿರೀಯಸಂಹಿತೆಯಲ್ಲಿ ಈ ವಿವರಣೆಯು ಈರೀತಿ ವರ್ಣಿಸಿದೆ—

**ಪ್ರಾಚೀನವಗ್ಂಶಂ ಕರೋತಿ ದೇವಮನುಷ್ಯಾ ದಿಶೋ ವ್ಯಭಜಂತ ಪ್ರಾಚೀಂ ದೇವಾ ದಕ್ಷಿಣಾ ಪಿತರಃ ಪ್ರತೀಚೀಂ ಮನುಷ್ಯಾ ಉದೀಚೀಗ್ಂ ರುದ್ರಾಃ ||**

(ತೈ. ಸಂ. ೬-೧-೧-೧)

ಎಂದರೆ ಯಜ್ಞಗೃಹದ ಪೂರ್ವದ್ವಾರಗಳನ್ನು ದೇವತೆಗಳೂ, ದಕ್ಷಿಣದ್ವಾರವನ್ನು ಪಿತೃದೇವತೆಗಳೂ, ಪಶ್ಚಿಮದ್ವಾರವನ್ನು ಮನುಷ್ಯರೂ, ಉತ್ತರದ್ವಾರವನ್ನು (ಏಕಾದಶ) ರುದ್ರರೂ ಹಂಚಿಕೊಂಡರೆಂದಿದೆ.

ಈ ಯಜ್ಞಗೃಹದ ದ್ವಾರಗಳ ಹೆಸರುಗಳು ೧-೧೮೮-೫ ರಲ್ಲಿ ಹೇಳಿರುವಂತೆ ಈರೀತಿ ಇದೆ—**ವಿರಾಟ್** ಎಂಬುದು ಪೂರ್ವದ್ವಾರವೆಂದೂ, **ಸಮ್ರಾಟ್** ಎಂಬುದು ದಕ್ಷಿಣದ್ವಾರವೆಂದೂ, **ವಿಭ್ವೀಃ** ಎಂಬುದು ಪಶ್ಚಿಮದ್ವಾರ ವೆಂದೂ, **ಪ್ರಭ್ವೀಃ** ಎಂಬುದು ಉತ್ತರದ್ವಾರವೆಂದೂ ಹೇಳಬಹುದು. ಈ ಶಬ್ದಗಳ ಅವಯವಾರ್ಥವನ್ನು ಸಾಯಣರು ಅಲ್ಲಿಯೇ ವಿವರಿಸಿರುವರು.

ಸಂಹಿತಾಪಾಠಃ

**ದೇವೀ ದಿವೋ ದುಹಿತರಾ ಸುಶಿಲ್ಪೇ ಉಷಾಸಾನಕ್ತಾ ಸದತಾಂ ನಿ ಯೋನೌ।**
**ಆ ವಾಂ ದೇವಾಸ ಉಶತೀ ಉಶಂತ ಉರೌ ಸೀದಂತು ಸುಭಗೇ ಉಪಸ್ಥೇ॥೬॥**

ಪದಪಾಠಃ

**ದೇವೀ ಇತಿ । ದಿವಃ । ದುಹಿತರಾ । ಸುಶಿಲ್ಪೇ ಇತಿ ಸುऽಶಿಲ್ಪೇ । ಉಷಾಸಾನಕ್ತಾ । ಸದತಾಂ । ನಿ । ಯೋನೌ ।**
**ಆ । ವಾಂ । ದೇವಾಸಃ । ಉಶತೀ ಇತಿ । ಉಶಂತಃ । ಉರೌ । ಸೀದಂತು । ಸುಭಗೇ ಇತಿ ಸುऽಭಗೇ । ಉಪऽಸ್ಥೇ ॥ ೬ ॥**

ಸಾಯಣಭಾಷ್ಯಂ

**ದೇವೀ ದ್ಯೋತಮಾನೇ ದಿವೋ ದ್ಯುಲೋಕಸ್ಯ ದುಹಿತರಾ ದುಹಿತರೌ ಸುಶಿಲ್ಪೇ ಶೋಭನ-ರೂಪೇ ಉಷಾಸಾನಕ್ತೋಷಾಶ್ಚ ನಕ್ತಂ ಚಾಹೋರಾತ್ರೌ ಯೋನೌ ಯಜ್ಞಸ್ಯ ಸ್ಥಾನೇ ನಿ ಸದತಾಂ। ನಿಷೀದತಾಂ। ಹೇ ಉಶತೀ ಉಶತ್ಯೌ ಕಾಮಯಮಾನೇ ಹೇ ಸುಭಗೇ ಶೋಭನಧನೇ ಹೇ ದೇವ್ಯೌ ವಾಂ ಯುವಯೋರುರೌ ವಿಸ್ತೀರ್ಣಂ ಉಪಸ್ಥೇ ಸಮೀಪಸ್ಥೇ ಸ್ಥಾನ ಉಶಂತೋ ಹವೀಂಷಿ ಕಾಮಯ-ಮಾನಾ ದೇವಾಸೋ ದೇವಾ ಆ ಸೀದಂತು। ಉಪವಿಶಂತು॥**

ಪ್ರತಿಪದಾರ್ಥ

**ದೇವೀ**—ಪ್ರಕಾಶಮಾನರೂ। **ದಿವಃ**—ದ್ಯುಲೋಕಕ್ಕೆ। **ದುಹಿತರಾ**—ಪುತ್ರಿಯರೂ। **ಸುಶಿಲ್ಪೇ**—ಉತ್ತಮವಾದ ರೂಪವುಳ್ಳವರೂ ಆದ। **ಉಷಾಸಾನಕ್ತಾ**—ಎಲೈ ಅಹೋರಾತ್ರದೇವತೆಗಳೇ। **ಯೋನೌ**—ಯಜ್ಞಸ್ಥಾನದಲ್ಲಿ। **ನಿ ಸದತಾಂ**—ಕುಳಿತುಕೊಳ್ಳಿರಿ। **ಉಶತೀ**—ಸಂಪತ್ತನ್ನು ಅಪೇಕ್ಷಿಸುವವರೂ। **ಸುಭಗೇ**—ಉತ್ತಮವಾದ ಸಂಪತ್ತುಳ್ಳವರೂ ಆದ ಎಲೈ ದೇವತೆಗಳೇ। **ವಾಂ**—ನಿಮ್ಮ। **ಉರೌ**—ವಿಸ್ತೃತವಾದ। **ಉಪಸ್ಥೇ**—ಸಮೀಪಸ್ಥಾನದಲ್ಲಿ। **ಉಶಂತಃ**—ಹವಿಸ್ಸನ್ನು ಅಪೇಕ್ಷಿಸುವ। **ದೇವಾಸಃ**—ದೇವತೆಗಳು। **ಆ ಸೀದಂತು**—ಕುಳಿತುಕೊಳ್ಳಲಿ.

ಭಾವಾರ್ಥ

ಪ್ರಕಾಶಮಾನರೂ, ದ್ಯುಲೋಕಕ್ಕೆ ಪುತ್ರಿಯರೂ ಉತ್ತಮವಾದ ರೂಪವುಳ್ಳವರೂ ಆದ ಎಲೈ ಅಹೋರಾತ್ರ ದೇವತೆಗಳೇ, ಯಜ್ಞಸ್ಥಾನದಲ್ಲಿ ಕುಳಿತುಕೊಳ್ಳಿರಿ. ಸಂಪತ್ತನ್ನು ಅಪೇಕ್ಷಿಸುವವರೂ ಉತ್ತಮವಾದ ಸಂಪತ್ತುಳ್ಳವರೂ

ಆದ ದೇವತೆಗಳೇ, ನಿಮ್ಮ ವಿಸ್ತೃತವಾದ ಸಮೀಪಸ್ಥಾನದಲ್ಲಿ ಹವಿಸ್ಸನ್ನು ಅಪೇಕ್ಷಿಸುವ ದೇವತೆಗಳು ಕುಳಿತುಕೊಳ್ಳಲಿ.

## English Translation

Radiant daughters of heaven, Dawn and Night, sit down on the place of sacrifice ; O you, who are desirous and possessed of affluence, may the gods desirous (of oblations) sit down on your spacious lap.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ **ನಕ್ತೋಷಾಸಾ** ಎಂಬ ರಾತ್ರಿ ಮತ್ತು ಪ್ರಾತಃಕಾಲದ ಅಭಿಮಾನಿದೇವತೆಗಳು ಆಹ್ವಾನ ಮಾಡಲ್ಪಟ್ಟಿರುವರು **ನಕ್ತೋಷಾಸಾ** ಎಂಬ ಶಬ್ದಕ್ಕೆ ಯಾಸ್ಕರ ವಿವರಣೆಯು ಈ ರೀತಿ ಇರುವುದು.

**ಉಷಾಸಾನಕ್ತಾ । ಉಷಾಸಾನಕ್ತೋಷಾಶ್ಚ ನಕ್ತಾ ಚೋಷಾ ವ್ಯಾಖ್ಯಾತಾ । ನಕ್ತೇತಿ ರಾತ್ರಿ-ನಾಮಾನಕ್ತಿ ಭೂತನ್ಯವಶ್ಯಾಯೇನಾಪಿ ವಾ ನಕ್ತಾಽವ್ಯಕ್ತವರ್ಣಾ ॥**

**ನಕ್ತೋಷಾಸಾ, ಉಷಾಸಾನಕ್ತಾ** ಎಂದು ಎರಡು ವಿಧವಾಗಿ ಪಠಿಸಿದರೂ, ಅರ್ಥ ಮಾತ್ರ ಒಂದೇ ಆಗಿರುವುದು. **ಉಷಾಃ** ಶಬ್ದದ ವಿವರಣೆಯನ್ನು ಹಿಂದೆಯೇ ಹೇಳಿರುವೆವು **ನಕ್ತಾ** ಎಂದರೆ ರಾತ್ರಿಯ ಹೆಸರು. ಏಕೆಂದರೆ, **ನಕ್ತಾ** ಎಂದರೆ **ಅವ್ಯಕ್ತವರ್ಣಾ** ಕತ್ತಲೆಯಾಗಿರುವುದರಿಂದ ವಸ್ತುಗಳು ಅವ್ಯಕ್ತವಾಗಿರುವುವು ಎಂದರೆ ಚೆನ್ನಾಗಿ ಕಾಣಿಸದೆ ಇರುವುವು. ಆದುದರಿಂದ ಕತ್ತಲೆಯಿಂದ ಕೂಡಿದ ರಾತ್ರಿಗೆ **ನಕ್ತಾ** ಎಂದು ಹೆಸರು ಮತ್ತು ಈ ರಾತ್ರಿಕಾಲದಲ್ಲಿ ಪ್ರಾಣಿಗಳು ತಮ್ಮ ತಮ್ಮ ವ್ಯಾಪಾರಗಳನ್ನು ಮಾಡಲಸಮರ್ಥವಾಗಿರುವುವು. **ಅನಕ್ತಿ ಕ್ಲೇದಯತಿ ಭೂತಾನಿ ಅವಶ್ಯಾಯೇನ । ಅಪಿ ವಾನಕ್ತಾ ಅವ್ಯಕ್ತವರ್ಣಾ । ಯಥಾ ಅಹಃ ಸರ್ವಮಭಿವ್ಯಕ್ತರೂಪಂ ಬವತಿ ನ ತಥಾ ರಾತ್ರಿಃ ॥** ಕತ್ತಲೆಯು ಪ್ರಾಣಿಗಳ ವ್ಯಾಪಾರಾದಿಗಳು ಸರಿಯಾಗಿ ನಡೆಯಲು ಅವಕಾಶವಿಲ್ಲದಂತೆ ಅವುಗಳಿಗೆ ತೊಂದರೆ ಕೊಡುವುದರಿಂದ ಅಂತಹ ಕತ್ತಲೆಯಿಂದ ಕೂಡಿದ ರಾತ್ರಿಗೆ **ನಕ್ತಾ** ಎಂದು ಹೆಸರು. ಅಥವಾ ಯಾವುದೂ ಚೆನ್ನಾಗಿ ಕಾಣಿಸದಂತೆ ಅವ್ಯಕ್ತವಾಗಿರುವುದರಿಂದ **ನಕ್ತಾ** ಎಂದು ಹೆಸರು. ಹಗಲಿನಲ್ಲಿ ಸಮಸ್ತವಸ್ತುಗಳ ರೂಪಗಳು ಸ್ಪಷ್ಟವಾಗಿ ಕಾಣಿಸುವುವು. ರಾತ್ರಿಯಲ್ಲಿ ಆ ರೀತಿ ಕಾಣಿಸುವುದಿಲ್ಲ. ಆದುದರಿಂದ ರಾತ್ರಿಕಾಲಕ್ಕೆ **ನಕ್ತಾ** ಎಂದು ಹೆಸರು ಎಂದು ಅರ್ಥವಿವರಣೆ ಮಾಡಿರುವರು (ನಿ. ೮-೧೧).

**ಉಷಾಃ** ಎಂಬ ಶಬ್ದಕ್ಕೆ ಅರ್ಥವಿವರಣೆಯನ್ನು ಹಿಂದೆಯೇ ಮಾಡಿರುವೆವು ಎಂದು ಹೇಳಿರುವರಷ್ಟೆ. ಆ ವಿವರಣೆಯು ಈ ರೀತಿ ಇರುವುದು.

**ವಿಭಾವರೀ, ಸೂನರೀ** ಮೊದಲಾದ ಹದಿನಾರು ಶಬ್ದಗಳು ಉಷೋನಾಮ ಶಬ್ದಗಳು (೨-೧೯) ಮತ್ತು ಉಷಾಃ **ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಃ ॥**

ರಾತ್ರಿಕಾಲದ ತಮಸ್ಸನ್ನು (ಕತ್ತಲೆಯನ್ನು) ನಿವಾರಣೆ ಮಾಡುವುದರಿಂದ **ಉಷಾಃ** ಎಂದು ಹೆಸರು. ಎಂದರೆ ರಾತ್ರಿಯ ಅಪರಕಾಲವು. ಕೊನೆಯ ಭಾಗವು ಈ ಅರ್ಥವನ್ನು ಸಮರ್ಥಿಸುವುದಕ್ಕಾಗಿ ಒಂದು ಉದಾಹರಣೆಯನ್ನು ಕೊಟ್ಟಿರುವರು—

**ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಾಚ್ಚಿತ್ರಃ ಪ್ರಕೇತೋ ಅಜನಿಷ್ಟ ವಿಭ್ವಾ ।**
**ಯಥಾ ಪ್ರಸೂತಾ ಸವಿತುಃ ಸವಾಯಁ ಏವಾ ರಾತ್ರ್ಯುಷಸೇ ಯೋನಿಮಾರೈಕ್ ॥**
(ಋ. ಸಂ. ೧-೧೧೩-೧)

ಈ ಋಕ್ಕಿನ ನಿರುಕ್ತವು—

**ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಮತ್ । ಚಿತ್ರಂ ಪ್ರಕೇತನಂ ಪ್ರಜ್ಞಾತತಮಮಜನಿಷ್ಟ ವಿಭೂತತಮಂ ಯಥಾ ಪ್ರಸೂತಾ ಸವಿತುಃ ಪ್ರಸವಾಯ ರಾತ್ರಿರಾದಿತ್ಯಸ್ಯ । ಏವಂ ರಾತ್ರ್ಯುಷಸೇ ಯೋನಿಮರಿಚತ್ ಸ್ಥಾನಂ । ಸ್ತ್ರೀಯೋನಿರಭಿಯುತ ಏನಾಂ ಗರ್ಭಃ ॥**
(ನಿ. ೨-೧೯)

ಸೂರ್ಯನ ಉತ್ತಮವಾದ ಮತ್ತು ಅತಿ ಪ್ರಕಾಶಮಾನವಾದ ಬೆಳಕು ಉದಯಿಸುತ್ತಿರುವುದು. ಇಂತಹ ಸೂರ್ಯನ ಪ್ರಕಾಶಕ್ಕೆ ಪೂರ್ವಭಾವಿಯಾಗಿರುವ ಉಷಃಕಾಲವು ಆ ಪ್ರಕಾಶದ ನಿಕೇತನ (ಧ್ವಜ) ದಂತೆ ಬೆಳಕಿಗೆ ಮುಂಚೆಯೇ ತಲೆದೋರುವುದು. ಹೇಗೆಂದರೆ—ಸೂರ್ಯನ ಬೆಳಕು ಹಗಲೆಲ್ಲಾ ಪ್ರಕಾಶಿಸಿ, ಅಸ್ತಮಾನಕಾಲದಲ್ಲಿ ರಾತ್ರಿಗೆ ಯೋನಿಭೂತವಾಗಿ ಎಂದರೆ ಕಾರಣವಾಗಿರುವಂತೆ ರಾತ್ರಿಯು ತನ್ನ ಅವಸಾನಕಾಲದಲ್ಲಿ ಉಷಃಕಾಲಕ್ಕೆ ಯೋನಿಭೂತವಾಗಿರುವುದು ಎಂದರೆ ಕಾರಣಭೂತವಾಗಿರುವುದು. ಯೋನಿ ಎಂದರೆ ಜನ್ಮಸ್ಥಾನವು. ಹಗಲಿನ ಕೊನೆಯಲ್ಲಿ ರಾತ್ರಿಯೂ ರಾತ್ರಿಯ ಕೊನೆಯಲ್ಲಿ ಉಷಃಕಾಲವೂ ಒಂದಾಗುತ್ತಲೊಂದು ಪರಿವರ್ತನ ರೂಪದಿಂದ ಪ್ರಾಪ್ತವಾಗುವುವು ಎಂದು ಮುಖ್ಯಾಭಿಪ್ರಾಯವು. ಆದುದರಿಂದ ಉಷಃ ಎಂದರೆ ರಾತ್ರಿ ಕಳೆದನಂತರ ಸೂರ್ಯೋದಯಕ್ಕೆ ಪೂರ್ವದಲ್ಲಿ ಸಮಸ್ತ ದಿಕ್ಕುಗಳನ್ನು ವ್ಯಾಪಿಸಿ ತಲೆದೋರುವ ಪ್ರಕಾಶವು, ಬೆಳಕು ಎಂದರ್ಥವು.

ಭಾಷ್ಯಕಾರರ (ಸಾಯಣರ) ಅರ್ಥವಿವರಣೆಯು—**ನಕ್ತಶಬ್ದ ಉಷಶ್ಶಬ್ದಶ್ಚ ಲೋಕೇ ಕಾಲವಿಶೇಷವಾಚಿನೌ । ಇಹ ತು ತತ್ಕಾಲಾಭಿಮಾನಿವಹ್ನಿಮೂರ್ತಿದ್ವಯೇ ಪ್ರಯುಜ್ಯೇತೇ । ನಕ್ತೋಷಾಸಾ ನಕ್ತೋಷೋನಾಮಿಕೇ ವಹ್ನಿಮೂರ್ತೀ**—ಎಂದರೆ, ನಕ್ತ (ರಾತ್ರಿ) ಉಷಃ (ಪ್ರಾತಃಕಾಲ) ಎಂಬ ಈ ಎರಡು ಶಬ್ದಗಳಿಗೆ ಲೋಕವ್ಯವಹಾರದಲ್ಲಿ ಎಂದರೆ ಈ ಋಕ್ಕಿನಲ್ಲಿ ಅಥವಾ ಋಗ್ವೇದದಲ್ಲಿ ಈ ಶಬ್ದಗಳು ರಾತ್ರಿ ಮತ್ತು ಪ್ರಾತಃಕಾಲಾಭಿಮಾನಿದೇವತೆಗಳೆಂಬ ಅರ್ಥವನ್ನು ಪ್ರತಿಪಾದಿಸುವುವು. ಆದುದರಿಂದ **ನಕ್ತೋಷಾಸಾ** ಅಥವಾ **ಉಷಾಸಾನಕ್ತಾ** ಎಂಬ ಶಬ್ದಗಳು ರಾತ್ರಿ ಮತ್ತು ಉಷಃಕಾಲಾಭಿಮಾನಿದೇವತೆಗಳಾದ ಅಗ್ನಿಯ ಎರಡು ಮೂರ್ತಿ (ರೂಪಗಳು) ಗಳೆಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿವೆ. ಅಲ್ಲಲ್ಲಿ ಉಪಯೋಗಿಸಿರುವ **ಸುಪೇಶಸಾ** (ಒಳ್ಳೆಯ ರೂಪ ಅಥವಾ ಆಕಾರವುಳ್ಳ) ಎಂಬ ಶಬ್ದವು ಈ ಅರ್ಥವನ್ನು ಸಮರ್ಥಿಸುವುದು. ಏಕೆಂದರೆ, ರಾತ್ರಿ ಮತ್ತು ಪ್ರಾತಃಕಾಲಗಳು ಕಾಲವಿಭಾಗಗಳಾದ್ದರಿಂದ ಇವುಗಳಿಗೆ ರೂಪವಾಗಲಿ, ಆಕಾರವಾಗಲಿ ಇರುವುದಿಲ್ಲ. ಆ ಕಾಲದ ಅಭಿಮಾನಿದೇವತೆಗಳೆಂದು ಹೇಳುವ ಪಕ್ಷದಲ್ಲಿ ಆ ದೇವತೆಗಳಿಗೆ ರೂಪವನ್ನು ನಿರ್ದೇಶಿಸಬಹುದು. ಈ ಋಕ್ಕಿನಲ್ಲಿ ಆರೀತಿ ನಿರ್ದೇಶವಿರುವುದರಿಂದ ಇಲ್ಲಿ ಆ ಕಾಲಗಳ ಅಭಿಮಾನಿದೇವತೆಗಳನ್ನೇ ಪ್ರತಿಪಾದಿಸುವುದೆಂದು ತಿಳಿಯಬೇಕು. **ನಕ್ತೋಷಾಸಾ** ಎಂಬ ಶಬ್ದದಲ್ಲಿರುವ ಷಕಾರವು ಛಂದಸ್ಸಿನ ಅನುಕೂಲಕ್ಕಾಗಿ ದೀರ್ಘವಾಗಿರುವುದು.

ಋ. ಸಂ. ೧-೧೪೨-೭ನೆಯ ಋಕ್ಕಿನಲ್ಲಿರುವ ಋತಸ್ಯ ಮಾತರಾ ಎಂಬ ವಿಶೇಷಣವು ಬಹು ಮುಖ್ಯವಾದುದು.

**ಪ್ರವತಾಂ ತ ಉಷಸಾ ವಾಜಯಂತೀ ಅಗ್ನೇ ವಾತಸ್ಯ ಪಥ್ಯಾಭಿರಚ್ಛ ।**
**ಋತ್ಸೀಮಂಜಂತಿ ಪೂರ್ವ್ಯಂ ಹವಿರ್ಭಿರಾ ವಂಧುರೇವ ತಸ್ಥತುರ್ದುರೋಣೇ ॥**
(ಋ. ಸಂ. ೩-೧೪-೩)

ಎಂಬ ಋಕ್ಕಿನಲ್ಲಿ ಯಜ್ಞಕ್ಕೂ ಅವರಿಗೂ ಇರತಕ್ಕ ನಿತ್ಯಸಂಬಂಧವು ವರ್ಣಿತವಾಗಿದೆ. ಅವರನ್ನು ಆಹ್ವಾನಿಸಿರುವ ಋಕ್ಕುಗಳಲ್ಲೆಲ್ಲಾ (ಇಂತಹ ಋಕ್ಕುಗಳು ಸುಮಾರು ಇಪ್ಪತ್ತಿವೆ) ಇತರ ದೇವತೆಗಳೊಡನೆ ಬಂದು ದರ್ಭಾಸನದ ಮೇಲೆ ಕುಳಿತುಕೊಳ್ಳಬೇಕೆಂದು ಪ್ರಾರ್ಥಿಸಿದೆ. ಅವರಲ್ಲೂ ಉಷಃಕಾಲದಲ್ಲಿಯೂ, ಸಾಯಂಕಾಲದಲ್ಲಿಯೂ ಪ್ರಜ್ವಲಿತನಾಗತಕ್ಕ ಅಗ್ನಿಯೊಡನೆ ಅತ್ಯಂತ ನಿಕಟವಾದ ಸಂಬಂಧವಿದೆ. ಆದುದರಿಂದಲೇ ಅವರು ನಮ್ಮ ನಡುವೆ ಅಗ್ನಿಯನ್ನು ಧರಿಸಿ ಹಿಡಿದಿರುವುದಾಗಿ ಆಲಂಕಾರಿಕವಾದ ವರ್ಣನೆಯು.

**ನಕ್ತೋ॒ಷಾಸಾ॒ ವರ್ಣ॑ಮಾ॒ಮೇಮ್ಯಾ॑ನೇ ಧಾ॒ಪಯೇ॑ತೇ॒ ಶಿಶು॒ಮೇಕಂ॑ ಸಮೀ॒ಚೀ ।**
**ದ್ಯಾವಾ॒ಕ್ಷಾಮಾ॑ ರು॒ಕ್ಮೋ ಅಂ॒ತರ್ವಿ ಭಾ॑ತಿ ದೇ॒ವಾ ಅ॒ಗ್ನಿಂ ಧಾ॑ರಯನ್ದ್ರವಿಣೋ॒ದಾಂ ॥**
(ಋ. ಸಂ. ೧-೯೬-೫)

ಇತ್ಯಾದಿ ಋಕ್ಕುಗಳಲ್ಲಿ **ಶಿಶು** ರೂಪನಾದ **ಅಗ್ನಿಗೆ** ಹವಿಃಪಾನವಮಾಡಲು ಸಹಾಯವಮಾಡುತ್ತಾರೆಂದು ತಿಳಿಸುತ್ತದೆ. ಈ ಸಂಬಂಧವಿರುವುದರಿಂದಲೇ ಅವರು ಯಜ್ಞಕರ್ತರ ಸಮೀಪವರ್ತಿನಿಯರೆಂದು ಹೇಳಲ್ಪಟ್ಟಿದ್ದಾರೆ. ಸಾಧಾರಣವಾಗಿ ಆಪ್ರೀಸೂಕ್ತಗಳಲ್ಲೂ ಸಹ ಈ ಅಂಶದ ವರ್ಣನೆಯು ಪುನರಾವರ್ತಿತವಾಗಿದೆ. ಉದಾಹರಣೆಗೆ—

**ಆ ಸು॒ಷ್ವಯಂ॑ತೀ ಯಜ॒ತೇ ಉಪಾ॑ಕೇ ಉ॒ಷಾಸಾ॒ನಕ್ತಾ॑ ಸದತಾಂ॒ ನಿ ಯೋನೌ॑ ।**
**ದಿ॒ವ್ಯೇ ಯೋಷ॑ಣೇ ಬೃಹ॒ತೀ ಸು॑ರು॒ಕ್ಮೇ ಅಧಿ॒ ಶ್ರಿಯಂ॑ ಶುಕ್ರ॒ಪಿಶಂ॒ ದಧಾ॑ನೇ ॥**
(ಋ. ಸಂ. ೧೦-೧೧೦-೬)

ಎಂಬ ಆಪ್ರೀ ಸೂಕ್ತದ ಋಕ್ಕಿನಲ್ಲಿಯೂ ಇದೇ ವಿಷಯವು ಹೇಳಲ್ಪಟ್ಟಿವೆ.

**ಉಷಾಸಾನಕ್ತಾ** ದೇವತೆಗಳಿಗೆ ಯಜ್ಞಕಾರ್ಯಗಳಲ್ಲಿ ಗೌಣವಾದ ಸ್ಥಾನವಿಲ್ಲದೇ ಅತಿ ಮುಖ್ಯವಾದ ಸ್ಥಾನ ಲಭಿಸುವುದೆಂದು ಈ ಅಂಶದಿಂದ ತಿಳಿಯುತ್ತದೆ. ಈ ಪ್ರಧಾನವಾದ ಸ್ಥಾನಲಾಭವು,

**ಹೋತಾ॑ಯಕ್ಷದು॒ಷಾಸಾ॒ನಕ್ತಾ॑ ಬೃಹ॒ತೀ ಸು॒ಪೇಶ॑ಸಾ ನೃ॒ನ್‌ಃ ಪತಿ॑ಭ್ಯೋ॒ ಯೋನಿಂ॑ ಕೃಣ್ವಾ॒ನೇ ।**
**ಸ॒ಗ್ಗ್‌ಸ್ಮಯ॑ಮಾನೇ॒ ಇಂದ್ರೇ॑ಣ ದೇ॒ವೈರೇದಂ ಬ॒ರ್ಹಿಃ ಸೀ॑ದತಾಂ॒ ವೀ॒ತಾಮಾಜ್ಯ॑ಸ್ಯ॒ ಹೋತ॒ರ್ಯಜ ॥**
(ತೈ. ಬ್ರಾ. ೩-೬-೨-೧)

ಎಂಬ ಪ್ರೈಷಸೂಕ್ತದ ಮಂತ್ರದಲ್ಲಿ ಸೂಚಿತವಾಗಿ ಉಷಾನಕ್ತರು ಕೇವಲ ಅಗ್ನಿಯೊಡನೆ ಮಾತ್ರವಲ್ಲದೇ ಇಂದ್ರಾದಿ ದೇವತೆಗಳೊಡನೆಯೂ ದರ್ಭಾಸನದ ಮೇಲೆ ಕುಳಿತುಕೊಳ್ಳಬೇಕೆಂಬ ಪ್ರಾರ್ಥನೆಯಿದೆ. ಐತರೇಯಬ್ರಾಹ್ಮಣದಲ್ಲಿ ಇವರನ್ನು **ಅಹೋರಾತ್ರೇ** ಎಂದು ಸಂಭೋದಿಸಿದೆ. ನಿರುಕ್ತಕಾರರು ೮-೧೧ ರಲ್ಲು ಈ ದೇವತೆಗಳ ಸ್ವರೂಪವನ್ನು ವಿವರಿಸಿದ್ದಾರೆ. **ಉಷಸ್** ಮತ್ತು **ನಕ್ತಾ** ಎಂಬ ಎರಡು ಪದಗಳ ನಿಷ್ಪತ್ತಿಯನ್ನೂ, ಈ ದೇವತೆಗಳ ಸ್ವರೂಪವನ್ನು ನಿರುಕ್ತಕಾರರು ಹೇಳಿರುವುದನ್ನು ಹಿಂದೆಯೇ ತಿಳಿಸಿದೆ. ಬೃಹದ್ದೇವತೆಯಲ್ಲೂ ಸಹ, ಇವರನ್ನು ಈ ರೀತಿ ವರ್ಣಿಸಿದೆ.

**ನಕ್ತೋಷಾಸೌ ಚ ಯೇ ದೇವ್ಯಾವಾಗ್ನೇಯ್ಯಾವೇವ ತೇ ಸ್ಮೃತೇ ।**
**ಶ್ಯಾವ್ಯಾಗ್ನೇಯಿಾ ಹಿ ಕಾಲಸ್ಯ ತಸ್ಯೈವೋಷಾಃ ಕಲೇವ ತು ॥**
(ಬೃ. ದೇ. ೩-೮)

**ಉಷಸ್ಸು** ಮತ್ತು **ನಕ್ತಾ** ಈ ಎರಡು ದೇವತೆಗಳೂ ಸಹ **ಅಗ್ನಿ** ಸಂಬಂಧಿಗಳೆಂದು ಪ್ರಸಿದ್ಧವಾಗಿದೆ. ಇವುಗಳಲ್ಲಿ **ಶ್ಯಾವಿಯು** (ರಾತ್ರಿದೇವತೆ ೧-೭೧-೧) ಅಗ್ನಿಯೊಂದಿಗೆ ನಿಕಟವಾದ ಸಂಬಂಧವನ್ನು ಹೊಂದಿರುವುದೂ, ಮತ್ತು

**ಉಷಃ ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಃ** (ನಿ. ೨-೧೮) ಎಂಬ ನಿರುಕ್ತವಾಕ್ಯದಿಂದ **ಉಷಸ್ಸು** ಆ ರಾತ್ರಿಯ ಅಪರಕಾಲವೆಂದೂ ತಿಳಿದ ವಿಷಯವಾಗಿದೆ.

**ತಮ ಉಚ್ಛತ್ಯುಷಾ ನಕ್ತಾನಕ್ತೀನಾಂ ಹಿಮಬಿಂದುಭಿಃ ।**
**ಅಪಿ ವಾವ್ಯಕ್ತವರ್ಣೇತಿ ನಞದ್ಪೂರ್ವಾಂಚೇರಿದಂ ಭವೇತ್ ॥**
(ಬೃ. ದೇ. ೩-೯)

ಈ ಇಬ್ಬರಲ್ಲಿ ಉಷಸ್ಸು ಕತ್ತಲನ್ನು ಓಡಿಸುತ್ತಾಳೆ. ರಾತ್ರಿಯು ಹಿಮಬಿಂದುಗಳಿಂದ ಎಲ್ಲವನ್ನೂ ನೆನೆಯುವಂತೆಯೂ ವ್ಯಾಪ್ತವಾಗುವಂತೆಯೂ ಮಾಡುತ್ತಾಳೆ. ಅಥವಾ ನಿರ್ದಿಷ್ಟವಾದ ವರ್ಣವಿಲ್ಲದಿರುವುದರಿಂದ **ನಞ್** ಪದದೊಡನೆ **ಅಞ್ಜನ್** ಧಾತುವು ಸೇರಿ ಅವ್ಯಕ್ತವರ್ಣರೆಂಬ ಅರ್ಥವನ್ನು ಕೊಡುತ್ತದೆ.

**ಸಾ ಹಿ ದೋಷಾ ಭವತ್ಯಾದೌ ನಿಶೀಥೇ ಸಾ ತಮಸ್ವತೀ ।**
**ನಾಮ್ನಾ ಭವತ್ಯುಷಾಶ್ಚೈವ ಸೈಷಾ ಪ್ರಾಗುದಯಾದ್ರವೇಃ ॥**
(ಬೃ. ದೇ. ೩-೧೦)

ಪ್ರಾರಂಭದಲ್ಲಿ ಈ ದೇವತೆಗೆ (ಪ್ರ) **ದೋಷಾ** ಎಂದೂ, ಮಧ್ಯರಾತ್ರಿಯಲ್ಲಿ **ತಮಸ್ವತೀ**ಯೆಂದೂ, ಸೂರ್ಯೋದಯಕ್ಕೆ ಮೊದಲು **ಉಷಸ್ಸೆಂದೂ** ಹೆಸರು. **ದೋಷಾ ತಮಸ್ವತೀ, ಶ್ಯಾವೀ, ನಕ್ತಾ** ಇವೆಲ್ಲಾ ರಾತ್ರಿ ನಾಮಗಳೆಂದು ನಿಘಂಟುವಿನಲ್ಲಿ ಪಠಿತವಾಗಿದೆ. (ನಿಘಂಟು ೧-೭)

ಋಕ್ಸಂಹಿತೆಯ ಇತರ ಕಡೆಗಳಲ್ಲಿ **ತಂತುಂ ತತಂ ಸಂವಯಂತೀ** (ಋ. ಸಂ. ೨-೩-೬) ಇತ್ಯಾದಿ ವಿಶೇಷಣಗಳಿಂದ ಯಜ್ಞದ ವಿಸ್ತರಣೆಗೆ **ಉಷಾಸಾನಕ್ತ**ಗಳ ಸಹಾಯವನ್ನು ವಿವರಿಸಿದೆ.

ಸಂಹಿತಾಪಾಠಃ

**ಊರ್ಧ್ವೋ ಗ್ರಾವಾ ಬೃಹದಗ್ನಿಃ ಸಮಿದ್ಧಃ ಪ್ರಿಯಾ ಧಾಮಾನ್ಯದಿತೇರುಪಸ್ಥೇ ।**
**ಪುರೋಹಿತಾವೃತ್ವಿಜಾ ಯಜ್ಞೇ ಅಸ್ಮಿನ್ ವಿದುಷ್ಟರಾ ದ್ರವಿಣಮಾ ಯಜೇಥಾಂ ॥ ೭ ॥**

ಪದಪಾಠಃ

**ಊರ್ಧ್ವಃ । ಗ್ರಾವಾ । ಬೃಹತ್ । ಅಗ್ನಿಃ । ಸಂऽಇದ್ಧಃ । ಪ್ರಿಯಾ । ಧಾಮಾನಿ । ಅದಿತೇಃ । ಉಪऽಸ್ಥೇ । ಪುರಃऽಹಿತಾ । ಋತ್ವಿಜಾ । ಯಜ್ಞೇ । ಅಸ್ಮಿನ್ । ವಿದುಃऽತರಾ । ದ್ರವಿಣಂ । ಆ । ಯಜೇಥಾಂ ॥ ೭ ॥**

ಸಾಯಣಭಾಷ್ಯಂ

**ಗ್ರಾವಾ ಸೋಮಾಭಿಷವಾಯ ಯದೋರ್ಧ್ವ ಉನ್ನತೋ ಭವತಿ ಯದಾ ಚ ಬೃಹನ್ಮಹಾನಗ್ನಿಃ ಸಮಿದ್ಧೋ ಹವಿರ್ಭಿಃ ಸಮ್ಯಗ್ದೀಪ್ತೋ ಭವತಿ । ತಥಾ ಪ್ರಿಯಾಣಿ ದೇವಾನಾಂ ಸೋಮಾದಿಹವಿಷ್ಪ್ರದಾ-**

ನೇನ ಪ್ರೀಣಯಿತ್ರ್ಯಾಣಿ ಧಾಮಾನಿ ಹವಿಷಾಂ ಧಾರಕಾಣಿ ಯಜ್ಞಪಾತ್ರಾಣ್ಯದಿತೇಃ ಪೃಥಿವ್ಯಾ ಉಪಸ್ಥೇ ಯಜ್ಞಸದನೇ ಯದಾಸಾದಿತಾನಿ ಭವಂತಿ ತದಾನೀಂ ಹೇ ಋತ್ವಿಜೌ ದೇವ್ಯೌ ಪುರೋಹಿತೌ ಹೋತಾರೌ ಪುರತೋ ನಿಹಿತೌ ವಿದುಷ್ಟರಾ ॥ ಛಾಂದಸಂ ಸಂಪ್ರಸಾರಣಂ ॥ ವಿದ್ವತ್ತಮೌ ಯುವಾಮಸ್ಮಿನ್ಯಜ್ಞೇ ದ್ರವಿಣಂ ಧನಮಾ ಯಜೇಥಾಂ । ಯಜಿರ್ದಾನಾರ್ಥಃ । ಅಸ್ಮಭ್ಯಮಾಭಿಮುಖ್ಯೇನ ಪ್ರಯಚ್ಛತಂ ॥

### ಪ್ರತಿಪದಾರ್ಥ

**ಗ್ರಾವಾ**—ಸೋಮವನ್ನು ಹಿಂಡುವ ಕಲ್ಲುಗಳು । **ಊರ್ಧ್ವಃ**—ಯಾವಾಗ ಮೇಲ್ಮುಖವಾಗುವುವೋ ಆಗ । **ಬೃಹತ್**—ಮಹತ್ಸ್ವರೂಪವುಳ್ಳ । **ಅಗ್ನಿಃ**—ಅಗ್ನಿಯು । **ಸಮಿದ್ಧಃ**—ಪ್ರಜ್ವಲಿತನಾಗುತ್ತಾನೆ । **ಪ್ರಿಯಾ**—ದೇವತೆಗಳಿಗೆ ಪ್ರೀತಿಕರವಾದ । **ಧಾಮಾನಿ**—ಹವಿಸ್ಸನ್ನು ಹೊಂದಿರುವ ಪಾತ್ರೆಗಳು । **ಅದಿತೇಃ**—ಪೃಥ್ವಿಯ । **ಉಪಸ್ಥೇ**—ಯಜ್ಞಸ್ಥಾನದಲ್ಲಿ ಸಿದ್ಧವಾಗುತ್ತವೆ (ಆ ಕೂಡಲೇ) । **ಋತ್ವಿಜಾ**—ಋತ್ವಿಗ್ರೂಪರೂ । **ಪುರೋಹಿತಾ**—ಹೋತೃರೂಪರೂ । **ವಿದುಷ್ಟರಾ**—ವಿದ್ಯಾವತಿಯರೂ ಆದ ಎಲೈ ದೇವತೆಗಳೇ । (**ಯುವಾಂ**—ನೀವು) । **ಅಸ್ಮಿನ್ ಯಜ್ಞೇ**—ಈ ಯಜ್ಞದಲ್ಲಿ । **ದ್ರವಿಣಂ**—ಧನವನ್ನು । **ಆ ಯಜೇಥಾಂ**—ಕೊಡುತ್ತೀರಿ.

### ಭಾವಾರ್ಥ

ಸೋಮವನ್ನು ಹಿಂಡುವ ಕಲ್ಲುಗಳು ಯಾವಾಗ ಮೇಲ್ಮುಖವಾಗುವುವೋ ಆಗ ಮಹತ್ಸ್ವರೂಪವುಳ್ಳ ಅಗ್ನಿಯು ಪ್ರಜ್ವಲಿತನಾಗುತ್ತಾನೆ. ದೇವತೆಗಳಿಗೆ ಪ್ರೀತಿಕರವೂ, ಹವಿಸ್ಸನ್ನು ಹೊಂದಿರುವುವೂ ಆದ ಪಾತ್ರೆಗಳು ಯಜ್ಞಸ್ಥಾನದಲ್ಲಿ ಸಿದ್ಧವಾಗುತ್ತವೆ. ಆ ಕೂಡಲೇ ಋತ್ವಿಗ್ರೂಪರೂ, ಹೋತೃರೂಪರೂ, ವಿದ್ಯಾವತಿಯರೂ ಆದ ಎಲೈ ದೇವತೆಗಳೇ, ನೀವು ಈ ಯಜ್ಞದಲ್ಲಿ ಧನವನ್ನು ಕೊಡುತ್ತೀರಿ.

### English Translation

(When) the grinding-stone is uplifted, the mighty Agni kindled, the acceptable vessels (ready) on the lap of earth ; (then), most learned priests, who take the foremost place, bestow wealth upon us at tkis sacrifice.

### ವಿಶೇಷವಿಷಯಗಳು

**ದೇವಸಂಬಂಧಿನೌ ಹೋತಾರೌ** । **ಅಯಂ ಚ ಮಧ್ಯಮಸ್ಥಾನಶ್ಚ ಇತ್ಯುಭೌ** ದೇವಸಂಬಂಧಿಗಳೂ ಹೋತೃಗಳೂ ಆದ ಪಾರ್ಥಿವಾಗ್ನಿ ಮತ್ತು ಅಂತರಿಕ್ಷಸ್ಥವಾದ ಅಗ್ನಿ ಎಂಬ ಅಗ್ನಿಯ ಎರಡು ರೂಪಗಳೆಂದು ಸಾಯಣರು ಅರ್ಥಮಾಡಿದ್ದಾರೆ. ಆಧುನಿಕವಾದ ಕೆಲವು ಪಂಡಿತರು ಇವಕ್ಕೆ ಭಿನ್ನವಾದ ಅರ್ಥವನ್ನು ಹೇಳಿ ತಮ್ಮಲ್ಲೇ ಅಭಿಪ್ರಾಯ ಭೇದವನ್ನೂ ತೋರಿದ್ದಾರೆ. Gelder ಎಂಬ ಪಂಡಿತನು ಯಜ್ಞಕರ್ತನಾದ **ಹೋತೃ** ಮತ್ತು ಅವನ **ಅಗ್ನಿ**ಯೆಂದೂ Haug ಎಂಬುವನು **ಹೋತೃ** ಮತ್ತು **ಅಧ್ವರ್ಯು**ವೆಂದೂ Oldenberg ಎಂಬುವನು ಹೋತೃ ಮತ್ತು ಅವನ ಸಹಾಯಕನಾದ ಮೈತ್ರಾವರುಣನೆಂದೂ ಅರ್ಥಮಾಡಿದ್ದಾರೆ. ಇವೊಂದೂ ಸಮಂಜಸವಾಗಿಲ್ಲ.

ಯಜ್ಞವನ್ನು ನೆರವೇರಿಸುವುದೇ ಈ ಹೋತೃಗಳ ಮುಖ್ಯಕರ್ತವ್ಯವೆಂದು **ಯಜ್ಞಂ ನೋ ಯಕ್ಷತಾಮಿಮಂ** । ಎಂದು ೧-೧೩-೮, ೧-೧೮೮-೭ ನೇ ಋಕ್ಕುಗಳಲ್ಲೂ, **ದೇವಾನ್ಯಜಂತಾವೃತುಥಾ** । ಎಂದು ೨-೩-೭ ನೇ

ಋಕ್ಕಿನಲ್ಲೂ ಹೇಳಿದೆ. ಈ ಕರ್ತವ್ಯಜ್ಞಾಪನವು ಮಾನವನಾದ ಹೋತೃವಿಗೆ ಅನ್ವಯಿಸತಕ್ಕದ್ದು ಮತ್ತು ಅಗ್ನಿಯನ್ನು ಕುರಿತು ಅಲಂಕರಿವಾಗಿ ಸಂಭೋದಿಸಿದೆ.

**ದೈವ್ಯಾ ಹೋತಾರಾ** ಎಂಬ ಶಬ್ದದ ವಿಷಯದಲ್ಲಿ ಯಾಸ್ಕರ ವಿವರಣೆಯು—

**ದೈವ್ಯಾಹೋತಾರಾ ದೈವ್ಯೌಹೋತಾರಾವಯಂ ಚಾಗ್ನಿರಸೌ ಚ ಮಧ್ಯಮಃ ||**

(ನಿ. ೮-೧೨)

ಎಂದರೆ ಈ ಶಬ್ದವು ಅಗ್ನಿಯನ್ನೇ ಸೂಚಿಸುವುದು, ಅಗ್ನಿಯು ದೇವತೆಗಳನ್ನು ಆಹ್ವಾನ ಮಾಡುವುದರಿಂದ ದೇವತೆಗಳಿಗೂ, ಮನುಷ್ಯರಿಗೂ ಅಗ್ನಿಯು ಮಧ್ಯಸ್ಥನಾಗಿರುವನು ಎಂದು ಈ ವಿಷಯದಲ್ಲಿ ಒಂದು ಉದಾಹರಣೆಯನ್ನು ಕೊಟ್ಟಿರುವರು.

**ದೈವ್ಯಾ ಹೋತಾರಾ ಪ್ರಥಮಾ ಸುವಾಚಾ ಮಿಮಾನಾ ಯಜ್ಞಂ ಮನುಷೋ ಯಜಧ್ಯೈ |**
**ಪ್ರಚೋದಯಂತಾ ವಿದಥೇಷು ಕಾರೂ ಪ್ರಾಚೀನಂ ಜ್ಯೋತಿಃ ಪ್ರದಿಶಾ ದಿಶಂತಾ ||**

(ಋ. ಸಂ. ೧೦-೧೧೦-೭)

ಇದಕ್ಕೆ ದುರ್ಗಾಚಾರ್ಯಕೃತವ್ಯಾಖ್ಯಾನವು—

**ಯಾವೇತೌ ದೈವ್ಯೌ ಹೋತಾರೌ | ದೇವೇಷು ಭವೌ ದೇವ್ಯೌ ದೇವಾವೇವ ದೈವ್ಯೌ | ಸ್ವಾರ್ಥೇ ಏವ ತದ್ಧಿತಃ | ಮನುಷ್ಯಹೋತಾರೌ ಅಪೇಕ್ಷ್ಯ | ದೈವ್ಯೌ ಹೋತಾರೌ ಹೋತೃಮೈತ್ರಾವರುಣೌ ಇತಿ ವಿಶೇಷಣಂ | ಹೋತಾರಾ ಹೋತಾರೌ ಆಹ್ವಾತಾರೌ ದೇವಾನಾಂ ವಾಯ್ವಗ್ನೀ | ಪ್ರಥಮಾ ಪ್ರಥಮೌ ಮುಖ್ಯೌ ಮನುಷ್ಯಹೋತಾರಾವಪೇಕ್ಷ್ಯ | ಸುವಾಚಾ ಸುವಾಚೌ, ಪ್ರಶಸ್ತವಾಚೌ, ಸುಸ್ತುತೌ | ಮಿಮಾನಾ ಯಜ್ಞಂ ಯಜ್ಞನಿರ್ಮಾತಾರೌ ನಿತ್ಯಂ | ಮನುಷಃ ಮನುಷ್ಯಸ್ಯ ಯಜಧ್ಯೈ ಯಜನಾಯ | ಪ್ರಚೋದಯಂತಾ ಪ್ರಚೋದಯಮಾನೌ | ವಿದಥೇಷು ಯಜ್ಞೇಷು | ಕಾರೂ ಕರ್ತಾರೌ | ಇತ್ಯಾದಿ ||**

ಇವರ ಮುಖ್ಯಾಭಿಪ್ರಾಯವೇನೆಂದರೆ—ದೇವತೆಗಳಿಗೆ ಅಗ್ನಿವಾಯುಗಳು ಹೋತೃಗಳೆಂದೂ, ಮನುಷ್ಯರಿಗೆ ಹೋತೃಮೈತ್ರಾವರುಣರೆಂಬ ಋತ್ವಿಜರು ಹೋತೃಗಳೆಂದೂ ಪ್ರಸಿದ್ಧವು. ಅಗ್ನಿ ಅಥವಾ ಅಗ್ನಿವಾಯುಗಳು ದೇವತೆಗಳಿಗೂ ಮನುಷ್ಯರಿಗೂ ಮಧ್ಯದಲ್ಲಿದ್ದು ಅವರಿಗೆ ಸಂಬಂಧವನ್ನು ಕಲ್ಪಿಸುವುದರಿಂದ ಅಗ್ನಿಯು ಮಧ್ಯಮನೆಂದೂ ಹೇಳಲ್ಪಡುವನು.

**ದೈವ್ಯಾ ಹೋತಾರೌ** ಎಂಬ ದೇವತೆಗಳ ಹೆಸರು ಆಪ್ರೀಸೂಕ್ತಗಳಲ್ಲಲ್ಲದೆ—

**ವೈಶ್ವಾನರಂ ವಾಯುಮೃಭವೋ ಯ ಓಹತೇ ದೈವ್ಯಾ ಹೋತಾರಾ ಉಷಸಂ ಸ್ವಸ್ತಯೇ |**

(ಋ. ಸಂ. ೧೦-೬೫-೧೦)

**ದೈವ್ಯಾ ಹೋತಾರಾ ಪ್ರಥಮಾ ಪುರೋಹಿತ ಋತಸ್ಯ ಪಂಥಾಮನ್ವೇಮಿ ಸಾಧುಯಾ |**

(ಋ. ಸಂ. ೧೦-೬೬ ೧೩)

ಎಂಬ ಎರಡು ಋಕ್ಕುಗಳಲ್ಲಿ ಪಠಿತವಾಗಿರುವುದು. ಋ. ಸಂ. ೭-೨.೭ ನೆಯ ಋಕ್ಕಿನಲ್ಲಿ **ಜಾತವೇದಸಾ** ಎಂದೂ ಋ. ಸಂ. ೧೦-೭೦-೭ ನೆಯ ಋಕ್ಕಿನಲ್ಲಿ **ಪುರೋಹಿತೌ** ಎಂದೂ ಇವರನ್ನು ಕರೆದಿದ್ದಾರೆ. ಮತ್ತು ಮೇಲೆ ಹೇಳಿದ ಋಕ್ಕುಗಳಲ್ಲಿರುವ **ಮಿಮಾನಾ ಯಜ್ಞಂ ಮನುಷೋ ಯಜಧ್ಯೈ, ಯಜ್ಞೇಷು ಮಾನುಷೇಷು ಕಾರೂ** ಮತ್ತು **ಪ್ರಚೋದಯಂತಾ ವಿದಥೇಷು ಕಾರೂ** ಎಂಬ ಶಬ್ದಗಳು, ಈ ದೇವತೆಗಳು, ಮನುಷ್ಯರು ಮಾಡುವ ಯಜ್ಞಗಳನ್ನು ನಿರ್ವಹಿಸುವವರು ಎಂದು ಹೇಳಿರುವುದರಿಂದ ಇವರನ್ನು ಪುರೋಹಿತರೆಂದು ಕರೆದಿರುವುದು ಸಹಜವಾಗಿದೆ.

ದೇವತೆಗಳಲ್ಲಿ ಹೋತೃಗಳು ಅಗ್ನಿವಾಯುಗಳಾದರೆ, ಮನುಷ್ಯರಲ್ಲಿ ಹೋತೃ, ಇವನ ಸಹಾಯಕ ಋತ್ವಿಜನಾದ ಮೈತ್ರಾವರುಣನು ಹೋತೃಗಳೆಂದು ಕರೆಯಲ್ಪಡುವರು. ಈ ಮೈತ್ರಾವರುಣನು ಪ್ರೈಷಮಂತ್ರಗಳಿಂದ ಇತರ ಋತ್ವಿಜರಿಗೆ ಆಯಾಯ ಕಾರ್ಯಗಳನ್ನು ಮಾಡುವಂತೆ ಆಜ್ಞಾಪಿಸುವನು. ಯಜುರ್ವೇದದಲ್ಲಿ (ತೈ. ಸಂ. ೬.೧.೪ ೨) **ಮೈತ್ರಾವರುಣೋ ಹಿ ಪುರಸ್ತಾದೃತ್ವಿಗ್ಭ್ಯೋ ವಾಚಂ ವಿಭಜತಿ**—ಎಂದು ಹೇಳಿರುವುದು.

ಹೀಗೆ ಕೆಲವು ವಿಶೇಷಣಗಳು ಎರಡು ಹೋತೃಗಳಿಗೂ ಸಮಾನವಾಗಿದ್ದರೂ ಮಾನವನಾದ ಹೋತೃವಿನ ಕರ್ತವ್ಯವನ್ನೇ ಸೂಚಿಸುವಂತೆ ಇನ್ನು ಕೆಲವು ವಿಶೇಷಣಗಳೂ ಸಹ ಇಬ್ಬರಿಗೂ ಸಾಧಾರಣವಾಗಿದ್ದರೂ ಅವು **ದೇವ ಹೋತೃವಾದ** ಅಗ್ನಿಯ ಕರ್ತವ್ಯಗಳನ್ನೇ ವರ್ಣಿಸುತ್ತವೆ. ಉದಾಹರಣೆಗೆ—

**ದೈವ್ಯಾ ಹೋತಾರಾ ಪ್ರಥಮಾನ್ಯೃಂಜೇ ಸಪ್ತ ಪೃಕ್ಷಾಸಃ ಸ್ವಧಯಾ ಮದಂತಿ ।**
**ಋತಂ ಶಂಸಂತ ಋತಮಿತ್ತ ಆಹುರನು ವ್ರತಂ ವ್ರತಪಾ ದೀಧ್ಯಾನಾಃ ।**

(ಋ. ಸಂ. ೩-೪-೭)

ಎಂಬ ಋಕ್ಕಿನಲ್ಲಿ **ಪ್ರಥಮಾ** ಎಂಬ ವಿಶೇಷಣವು ದೇವಹೋತೃವಾದ ಅಗ್ನಿಪರವೇ ಆಗಿದೆ ಎಂಬುದರಲ್ಲಿ ಸಂದೇಹವಿಲ್ಲ. ೧-೧೩-೪ ರಲ್ಲು **ಹೋತಾ ಮನುರ್ಹಿತಃ** ಎಂದು ಅಗ್ನಿಯ ವಿಶೇಷಣವಾಗಿದೆ. ಈ ಎರಡು ಹೋತೃಗಳಿಗೂ ಇರತಕ್ಕ ನಿಷ್ಕರ್ಷವಾದ ವ್ಯತ್ಯಾಸವನ್ನು **ಪ್ರೈಷ**ಸೂಕ್ತದಲ್ಲಿ ಈರೀತಿಯಾಗಿ ಹೇಳಿದೆ.

**ಹೋತಾಯಕ್ಷದ್ದೈವ್ಯಾ ಹೋತಾರಾ ಮಂದ್ರಾ ಪೋತಾರಾ ಕವೀ ಪ್ರಚೇತಸಾ । ಸ್ವಿಷ್ಟಮದ್ಯಾನ್ಯಃ ಕರದಿಷಾ ಸ್ವಭಿಗೂರ್ತಮನ್ಯ ಊರ್ಜಾ ಸತವಸೇಮಂ ಯಜ್ಞಂ ದಿವಿ ದೇವೇಷು ಧತ್ತಾಂ ವೀತಾಮಾಜ್ಯಸ್ಯ ಹೋತರ್ಯಜ ॥**

(ತೈ. ಬ್ರಾ. ೩-೬-೨-೨)

ಎಂಬ ವಾಕ್ಯದಲ್ಲಿ ಒಬ್ಬ ಹೋತೃವು ಅನ್ನರೂಪವಾದ ಹವಿಸ್ಸಿನಿಂದ ಯಜ್ಞವನ್ನು ಸ್ವೀಕಾರಾರ್ಹವನ್ನಾಗಿ ಮಾಡಲೆಂದೂ ಇನ್ನೊಬ್ಬನು ಈ ಯಜ್ಞವನ್ನು ಸ್ವರ್ಗದಲ್ಲಿ ದೇವತೆಗಳ ನಡುವೆ ಸ್ಥಾಪಿಸಲೆಂದೂ ಸೂಚಿಸಿದೆ. ಈ ಕಾರ್ಯ ವಿನಿಮಯವು ಮಾನವನಾದ ಹೋತೃವಿಗೂ ದೇವಹೋತೃವಾದ ಅಗ್ನಿಗೂ ಇರುವ ವ್ಯತ್ಯಾಸವನ್ನು ತಿಳಿಸುತ್ತದೆ.

**ಐತರೇಯ ಬ್ರಾಹ್ಮಣದಲ್ಲಿ,**

**ದೈವ್ಯಾ ಹೋತಾರಾ ಯಜತಿ ಪ್ರಾಣಾಪಾನೌ ವೈ ದೈವ್ಯಾ ಹೋತಾರಾ ಪ್ರಾಣಾಪಾನಾವೇವ ತತ್ಪ್ರೀಣಾತಿ ಪ್ರಾಣಾಪಾನೌ ಯಜಮಾನೇ ಧದಾತಿ ॥**

(ಐ. ಬ್ರಾ. ೨-೪)

ಎಂದು ಈ ಹೋತೃಗಳಿಗೂ ಪ್ರಾಣಾಪಾನಗಳಿಗೂ ತಾದಾತ್ಮ್ಯವನ್ನು ಹೇಳಿ, ಈ ಮಂತ್ರವನ್ನು ಪಠಿಸತಕ್ಕವನು ಯಜ್ಞ ಕರ್ತನಿಗೆ ಪ್ರಾಣಾಪಾನಗಳ ಸುಸ್ಥಿತಿಯನ್ನು ಸಂಪಾದಿಸಿ ಕೊಡುತ್ತಾನೆಂದು ಹೇಳಿದೆ. **ನಿರುಕ್ತ**ದಲ್ಲಿ—

**ದೈವ್ಯಾ ಹೋತಾರಾ ದೈವ್ಯೌ ಹೋತಾರಾವಯಂ ಚಾಗ್ನಿರಸೌ ಚ ಮಧ್ಯಮಃ ।**

(ನಿ. ೮-೧೨)

ಎಂದು ಸಾಯಣರ ಅರ್ಥವನ್ನು ಸಮರ್ಥಿಸುವ ಆಧಾರವಾಕ್ಯಗಳಿಂದ **ಪಾರ್ಥಿವ**ವಾದ **ಅಗ್ನಿ** ಮತ್ತು ಅಂತರಿಕ್ಷಸ್ಥನಾದ **ಅಗ್ನಿ**ಯೆಂದು ಹೇಳಿದೆ. **ಬೃಹದ್ದೇವತೆಯಲ್ಲಿಯಲ್ಲಿಯೂ** ಇದೇ ಅಭಿಪ್ರಾಯವನ್ನನುಮೋದಿಸುತ್ತಾ,

**ದೈವ್ಯಾವಿತಿ ತು ಹೋತಾರಾವಗ್ನೀ ಪಾರ್ಥಿವಮಧ್ಯಮೌ ।**
**ದಿವ್ಯಾದಗ್ನೇರ್ಹಿ ಜಜ್ಞಾತೇ ದೈವ್ಯೌ ತೇನೇಹ ಜನ್ಮನಾ ॥**
(ಬೃ. ದೇ. ೩-೧೧)

ಈ ಇಬ್ಬರು ಹೋತೃಗಳೂ ಪಾರ್ಥಿವ ಮತ್ತು ಮಧ್ಯಮಸ್ಥಾನರಾದ (ಅಂತರಿಕ್ಷಸ್ಥವಾದ) ಅಗ್ನಿಗಳೆಂದು ಹೇಳಿದ್ದಾರೆ.

ಸಂಹಿತಾಪಾಠಃ

**ತಿಸ್ರೋ ದೇವೀರ್ಬರ್ಹಿರಿದಂ ವರೀಯ ಆ ಸೀದತ ಚಕೃಮಾ ವಃ ಸ್ಯೋನಂ ।**
**ಮನುಷ್ವದ್ಯಜ್ಞಂ ಸುಧಿತಾ ಹವೀಂಷೀಳಾ ದೇವೀ ಘೃತಪದೀ ಜುಷಂತ ॥ ೮ ॥**

ಪದಪಾಠಃ

**ತಿಸ್ರಃ । ದೇವೀಃ । ಬರ್ಹಿಃ । ಇದಂ । ವರೀಯಃ । ಆ । ಸೀದತ । ಚಕೃಮ । ವಃ । ಸ್ಯೋನಂ ।**
**ಮನುಷ್ವತ್ । ಯಜ್ಞಂ । ಸುऽಧಿತಾ । ಹವೀಂಷಿ । ಇಳಾ । ದೇವೀ । ಘೃತऽಪದೀ । ಜುಷಂತ ॥ ೮ ॥**

ಸಾಯಣಭಾಷ್ಯಂ

ಹೇ ತಿಸ್ರೋ ದೇವೀರಿಳಾದ್ಯಾಸ್ತಿಸ್ರೋ ದೇವ್ಯಃ ವರೀಯ ಉರುತರಮಿದಂ ಬರ್ಹಿರಾ ಸೀದತ ॥ ಕಾಲಾಧ್ವನೋರಿತಿ ದ್ವಿತೀಯಾ ॥ ಅತ್ಯಂತಂ ತಸ್ಮಿನ್ನಿಷೀದತ । ಕುತ ಏತತ್ ತತ್ರಾಹ। ವೋ ಯುಷ್ಮದರ್ಥಂ ಸ್ಯೋನಂ ವಿಸ್ತೀರ್ಣಮಿದಂ ಚಕೃಮ । ವಯಂ ಕೃತವಂತಃ ॥ ವಾಕ್ಯಭೇದಾದನಿಘಾತಃ ॥ ಇತ್ಯೇತನ್ನಾಮಿಕಾ ದೇವೀ ದ್ಯೋತಮಾನಾ ಸರಸ್ವತೀ ಘೃತಪದೀ ದೀಪ್ತಪದೋಪೇತಾ ಭಾರತೀ ಚೈತಾ ಮನುಷ್ವನ್ಮನೋ-ರ್ಯಜ್ಞೇ ಯಥಾ ಹವೀಂಷ್ಯಸೇವಂತ ತದ್ವದಸ್ಮದೀಯಂ ಯಜ್ಞಂ ಸುಧಿತಾ ಸುಷ್ಠು ನಿಹಿತಾನಿ ಹವೀಂಷಿ ಚ ಜುಷಂತ । ಸೇವತಾಂ ॥

ಪ್ರತಿಪದಾರ್ಥ

**ತಿಸ್ರಃ ದೇವೀಃ**—ಇಳೆಯೇ ಮುಂತಾದ ಎಲೈ ಮೂರು ದೇವತೆಗಳೇ । **ವರೀಯಃ**—ಅತಿವಿಸ್ತೃತವಾದ । **ಇದಂ ಬರ್ಹಿಃ**—ಈ ದರ್ಭಾಸನದ ಮೇಲೆ । **ಆ ಸೀದತ**—ಕುಳಿತುಕೊಳ್ಳಿರಿ । **ವಃ**—ನಿಮಗಾಗಿ । **ಸ್ಯೋನಂ ಚಕೃಮ**—ಈ ಆಸನವನ್ನು ವಿಸ್ತಾರವಾಗಿ ಹರಡಿದ್ದೇವೆ । **ಇಳಾ**—ಇಳಾದೇವಿಯೂ । **ದೇವೀ**—ಪ್ರಕಾಶಮಾನ ಳಾದ ಸರಸ್ವತಿಯೂ । **ಘೃತಪದೀ**—ಪ್ರಕಾಶಮಾನವಾದ ಪಾದಗಳುಳ್ಳ ಭಾರತಿಯೂ । **ಮನುಷ್ವತ್**—ಮನುವಿನ ಯಜ್ಞದಲ್ಲಿ ಸ್ವೀಕರಿಸಿದಂತೆ । **ಯಜ್ಞಂ**—ನಮ್ಮ ಯಜ್ಞದಲ್ಲಿ । **ಸುಧಿತಾ**—ಉತ್ತಮವಾಗಿ ಸ್ಥಾಪಿತವಾದ । **ಹವೀಂಷಿ**—ಹವಿಸ್ಸುಗಳನ್ನು । **ಜುಷಂತ**—ಸೇವಿಸಲಿ.

ಭಾವಾರ್ಥ

ಇಳೆಯೇ ಮುಂತಾದ ಎಲೈ ದೇವತೆಗಳೇ, ಅತಿವಿಸ್ತೃತವಾದ ಈ ದರ್ಭಾಸನದ ಮೇಲೆ ಕುಳಿತುಕೊಳ್ಳಿರಿ. ನಿಮಗಾಗಿ ಈ ಆಸನವನ್ನು ವಿಸ್ತಾರವಾಗಿ ಹರಡಿದ್ದೇವೆ. ಇಳಾದೇವಿಯೂ, ಪ್ರಕಾಶಮಾನಳಾದ ಸರಸ್ವತಿಯೂ ಕಾಂತಿ ಯುತವಾದ ಪಾದಗಳುಳ್ಳ ಭಾರತಿಯೂ, ಮನುವಿನ ಯಜ್ಞದಲ್ಲಿ ಸ್ವೀಕರಿಸಿದಂತೆ ನಮ್ಮ ಈ ಯಜ್ಞದಲ್ಲಿ ಉತ್ತಮವಾಗಿ ಸ್ಥಾಪಿತವಾದ ಹವಿಸ್ಸುಗಳನ್ನು ಸೇವಿಸಲಿ.

## English Translation

Sit down, you three goddesses, upon this broad barhis, we have spread it out for you ; Ila, radiant (Saraswati) and bright-footed (Bharati) accept our sacrifiee and well-presented oblations as if they were Manu's.

### ವಿಶೇಷವಿಷಯಗಳು.

ಈ ಋಕ್ಕಿನಲ್ಲಿ ಮೂರು ದೇವತೆಗಳ ಗುಂಪನ್ನು ಉದ್ದೇಶಿಸಿ ಅವರನ್ನು ಯಜ್ಞಕ್ಕೆ ದಯಮಾಡಿಸಬೇಕೆಂದು ಪ್ರಾರ್ಥಿಸಿದೆ. ಪ್ರಕೃತವಾದ ಸೂಕ್ತವನ್ನೂ ಮತ್ತು ೧.೧೪೨ನೇ ಸೂಕ್ತವನ್ನೂ ಬಿಟ್ಟು ಉಳಿದ ಎಲ್ಲಾ **ಆಪ್ರೀ** ಸೂಕ್ತಗಳಲ್ಲೂ ಸಹ ಈ ದೇವತೆಗಳನ್ನು ಒಟ್ಟಿಗೆ ಸೇರಿಸಿ **ತಿಸ್ರೋ ದೇವೀಃ** ಎಂದು ಸಾಮೂಹಿಕವಾಗಿ ನಿರ್ದೇಶಿಸಿದೆ. **ಇಳಾ, ಸರಸ್ವತೀ, ಭಾರತೀ** ಎಂಬುವರೇ ಈ ಮೂವರು ಈ ದೇವತೆಗಳ ಸ್ವರೂಪವೇನು ಎಂಬ ವಿಷಯದಲ್ಲಿ ಬಹಳವಾದ ಅಭಿಪ್ರಾಯ ಭೇದವಿದೆ. ೧.೧೪೨ರಲ್ಲಿ **ಭಾರತೀ** ಎಂಬ ದೇವತೆಗೆ ಹೋತ್ರಾ, ಶುಚಿಃ (ಮರುತ್ಸು, ದೇವೇಷು) ಅರ್ಪಿತಾ ಎಂಬ ವಿಶೇಷಣಗಳೂ, **ಸರಸ್ವತೀ** ಎಂಬ ದೇವತೆಗೆ **ಮಹೀ** ಎಂಬ ವಿಶೇಷಣವೂ ಇರುತ್ತದೆ. ಕೆಲವು ಸೂಕ್ತಗಳಲ್ಲಿ **ಮಹೀ** ಎಂಬ ಪದವು ವಿಶೇಷಣವಾಗಿದೆ. **ಭಾರತೀ** ದೇವತೆಯು ಪರ್ಯಾಯಪದವಾಗಿ ಉಪಯೋಗಿಸಲ್ಪಟ್ಟಿದೆ. ಪ್ರಕೃತದಲ್ಲಿ ಈ ದೇವತೆಗಳ ಸ್ವರೂಪವನ್ನು ನಿಷ್ಕರ್ಷವಾಗಿ ತಿಳಿಯಲು ಸಾಧ್ಯವೇ ಎಂಬುದನ್ನು ಶ್ರುತ್ಯಾದಿ ವಾಕ್ಯಗಳನ್ನು ಪ್ರಮಾಣವಾಗಿಟ್ಟುಕೊಂಡು ವಿಮರ್ಶಿಸಬಹುದು.

**ತಿಸ್ರೋ ದೇವೀಃ** ಎಂಬ ವಿಷಯದಲ್ಲಿ ಯಾಸ್ಕರು—

**ತಿಸ್ರೋ ದೇವೀಃ । ತಿಸ್ರೋ ದೇವೀಸ್ತಿಸ್ರೋ ದೇವ್ಯಃ ।**

ಎಂದು ಮಾತ್ರ ಹೇಳಿ ಉದಾಹರಣೆಗಾಗಿ ಕೊಟ್ಟಿರುವ ಋಕ್ಕಿನಲ್ಲಿ—

**ಆ ನೋ ಯಜ್ಞಂ ಭಾರತೀ ತೂಯಮೇತ್ವಿಳಾ ಮನುಷ್ವದಿಹ ಚೇತಯಂತೀ ।**
**ತಿಸ್ರೋ ದೇವೀರ್ಬರ್ಹಿರೇದಂ ಸ್ಯೋನಂ ಸರಸ್ವತೀ ಸ್ವಪಸಃ ಸದಂತು ॥**

(ಋ. ಸಂ. ೧೦-೧೧೦-೮)

**ಐತು ನೋ ಯಜ್ಞಂ ಭಾರತೀ ಕ್ಷಿಪ್ರಂ । ಭರತ ಆದಿತ್ಯಸ್ತಸ್ಯ ಭಾ ಇಳಾ ಚ ಮನುಷ್ವದಿಹ ಚೇತಯಮಾನಾ ತಿಸ್ರೋ ದೇವ್ಯೋ ಬರ್ಹಿರಿದಂ ಸುಖಂ ಸರಸ್ವತೀ ಚ ಸುಕರ್ಮಾಣ ಆಸೀದಂತು ॥**

ಎಂದು ವಿವರಿಸಿರುವರು ಎಂದರೆ—

**ಭಾರತೀಃ**—ಭರತನೆಂದರೆ ದ್ವಾದಶಾದಿತ್ಯರಲ್ಲಿ ಒಬ್ಬನು. ಆದಿತ್ಯನ ದೀಪ್ತಿಗೆ ಭಾ ಎಂದು ಹೆಸರು. ಆದುದರಿಂದ ಭಾರತಿಯೆಂದರೆ ಸೂರ್ಯನ ಪ್ರಕಾಶವು ಅಥವಾ ಸೂರ್ಯಮಂಡಲದಲ್ಲಿ ಪ್ರಕಾಶರೂಪದಿಂದಿರುವ ಅಗ್ನಿಯು.

**ಇಳಾ**—ಇಳಾ ಎಂದರೆ ಪೃಥಿವಿಯು. **ಮನುಷ್ವತ್ ಚೇತಯಂತೀ**—ಮನುಷ್ಯರಂತೆ ಪ್ರೇರಿಸುವ ಶಕ್ತಿಯುಳ್ಳ ಎಂದರೆ ಭೂಮಿಯ ಮೇಲೆ ಇರುವ ಮನುಷ್ಯರಿಗೆ ಅನ್ನಾದ್ಯಾಹಾರಗಳನ್ನೂ, ಧನಾದಿಗಳನ್ನೂ ಕೊಡುವುದರಿಂದ **ಇಳಾ** ಎಂದರೆ ಪೃಥಿವೀಸ್ಥಾನದಲ್ಲಿರುವ ಅಗ್ನಿಯ ರೂಪವಿಶೇಷವು.

**ಸರಸ್ವತೀ**—ಅಂತರಿಕ್ಷಸ್ಥಾನದಲ್ಲಿರುವ ಸಿಡಿಲು ಮಿಂಚುಗಳಿಗೆ ಅಭಿಮಾನಿದೇವತೆಯಾಗಿರುವುದರಿಂದ ಸರಸ್ವತಿಯು ಅಂತರಿಕ್ಷಸ್ಥಾನದಲ್ಲಿರುವ ಅಗ್ನಿಸ್ವರೂಪವೆಂದೂ ಹೇಳಲ್ಪಡುವುದು.

ಆದುದರಿಂದ ಇಳಾ, ಸರಸ್ವತೀ, ಭಾರತೀ ಎಂಬ ಮೂರು ಮಂದಿ ದೇವಿಯರನ್ನು ಸ್ವರ್ಗ, ಅಂತರಿಕ್ಷ, ಭೂಮಿಯ ಮೇಲೆ ಇರುವ ಅಗ್ನಿಯ ಮೂರು ರೂಪಗಳೆಂದು ಹೇಳುವ ರೂಢಿಯಿರುವುದು.

ಆಪ್ರೀಸೂಕ್ತಗಳ ಮುಖ್ಯಾಂಶಗಳನ್ನು ಸಂಗ್ರಹಿಸಿರುವ ಮಂತ್ರವನ್ನು ಪರಿಶೀಲಿಸಿವರೆ,

**ಹೋತಾಯಕ್ಷತ್ತಿಸ್ರೋ ದೇವೀರಪಸಾಮುಪಸ್ತಮಾ ಅಚ್ಛಿದ್ರಮದ್ಯೇದಮುಪಸ್ತೃಣತಾಂ ।**
**ದೇವೇಭ್ಯೋ ದೇವೀರ್ದೇವಮಪೋ ವಿಯಂತ್ವಾಜ್ಯಸ್ಯ ಹೋತರ್ಯಜ ॥**

(ತೈ. ಬ್ರಾ. ೩-೬-೨-೨)

ಎಂದು ಮೂಲದಲ್ಲಿ ಕೇವಲ **ತಿಸ್ರೋ ದೇವೀಃ** ಎಂದು ಮಾತ್ರವಿದೆ. ಭಾಷ್ಯದಲ್ಲಿ ಇದನ್ನು ವಿವರಿಸುತ್ತಾ **ಇಡಾ ಸರಸ್ವತೀ, ಭಾರತೀತ್ಯೇವಂ ರೂಪಾಸ್ತಿಸ್ರೋಽಷ್ಟಮ ಪ್ರಯಾಜದೇವ್ಯಸ್ತದ್ರೂಪಮಗ್ನಿಂ ದೈವ್ಯೋ ಹೋತಾ ಯಜತು** । ಇಡಾ, ಸರಸ್ವತೀ ಮತ್ತು ಭಾರತೀ ಎಂಬ ಮೂವರು ಅಷ್ಟಮಪ್ರಯಾಜದೇವತೆಗಳು ಅಗ್ನಿಯನ್ನು ಪ್ರತಿಬಿಂಬಿಸುವ ದೇವತೆಗಳೆಂದು ಹೇಳಿದೆ. ಅಲ್ಲದೆ **ಅಪಸಾಂ ಅಪಸ್ತಮಾಃ। ಕರ್ಮವತೀನಾಂ ಮಧ್ಯೇಽತಿಶಯೇನ ಕರ್ಮವತ್ಯಃ ।** ಅತ್ಯಂತ ಶ್ರೇಷ್ಠವಾದ ಕರ್ಮವತಿಯರೆಂದೂ ವಿಶೇಷಣದಿಂದ ತಿಳಿಸಿದೆ. ಐತರೇಯ ಬ್ರಾಹ್ಮಣದಲ್ಲಿ,

**ತಿಸ್ರೋ ದೇವೀರ್ಯಜತಿ ಪ್ರಾಣೋ ವಾ ಅಪಾನೋ ವ್ಯಾನಸ್ತಿಸ್ರೋ ದೇವ್ಯಸ್ತಾ ಏವ ತತ್ಪ್ರೀಣಾತಿ ತಾ ಯಜಮಾನೇ ದಧಾತಿ ।**

(ಐ. ಬ್ರಾ. ೨-೪)

ಎಂದು ಮೂರು ದೇವತೆಗಳಿಗೂ, **ಪ್ರಾಣ, ಅಪಾನ** ಮತ್ತು **ವ್ಯಾನ** ಎಂಬ ಜೀವತತ್ತ್ವಗಳಿಗೂ ತಾದಾತ್ಮ್ಯವನ್ನು ಹೇಳಿದೆ. ನಿರುಕ್ತಕಾರರು **ಆ ನೋ ಯಜ್ಞಂ** ಎಂದು ೧೦-೧೧೦-೮ ನೇ ಋಕ್ಕನ್ನುದಹರಿಸಿ ಅದಕ್ಕೆ ವಿವರಣೆಯನ್ನು ಈ ರೀತಿ ಕೊಟ್ಟಿರುತ್ತಾರೆ. **ಏತು ನೋ ಯಜ್ಞಂ ಭಾರತೀ ಕ್ಷಿಪ್ರಂ । ಭರತ ಆದಿತ್ಯಸ್ತಸ್ಯ ಭಾ ಇಳಾ ಚ ಮನುಷ್ಯವದಿಹ ಚೇತಯಮಾನಾ ತಿಸ್ರೋ ದೇವ್ಯಾಃ ಬರ್ಹಿರಿದಂ ಸುಖಂ ಸರಸ್ವತೀ ಚ ಸುಕರ್ಮಾಣ ಆಸೀದಂತು ।** (ನಿ. ೮-೧೩) ಭರತನ (ಸೂರ್ಯನ) ಪ್ರಭಾರೂಪವಾದ ದೇವತೆಯೂ, ಇಳೆಯೂ ಸರಸ್ವತಿಯೂ ಬರ್ಹಿಯನ್ನಲಂಕರಿಸಲಿ. ಬೃಹದ್ದೇವತೆಯಲ್ಲಿ,

**ತಿಸ್ರಸ್ತು ದೇವ್ಯೋ ಯಾಃ ಪ್ರೋಕ್ತಾಸ್ತ್ರಿಸ್ಥಾನ್ಯೈವೇಹ ಸಾ ತು ವಾಕ್ ।**
**ತ್ರಿವಿಧೇನೋಚ್ಯತೇ ನಾಮ್ನಾ ಜ್ಯೋತಿಃಷು ತ್ರಿಷು ವರ್ತಿನೀ ॥**
**ಅಗ್ನಿಮೇವಾನುಗೇಳಾ ತು ಮಧ್ಯಂ ಪ್ರಾಪ್ತಾ ಸರಸ್ವತೀ ।**
**ಅಮೂ ಸ್ಥಿತಾಧಿ ಲೋಕಂ ತು ಭಾರತೀ ಭವತಿ ಹ್ಯಸೌ ॥**
**ಸೈಷಾ ತು ತ್ರಿವಿಧಾ ವಾಗ್ಸೈ ದಿವಿ ಚ ವ್ಯೋಮ್ನಿ ಚೇಹ ಚ ।**
**ವ್ಯಸ್ತಾ ಚೈವ ಸಮಸ್ತಾ ಚ ಭಜತ್ಯಗ್ನೀನಿಮಾನಪಿ ॥**

(ಬೃ. ದೇ. ೩-೧೨ ರಿಂದ ೧೪)

**ತಿಸ್ರೋ ದೇವ್ಯಃ** ಎಂದರೆ ಮೂರು ಲೋಕಗಳಲ್ಲೂ ಇರುವ ವಾಗಧಿದೇವತೆಗಳು (ವಾಕ್ಕಿನ ಮೂರು ರೂಪಗಳನ್ನು ಬೃ. ದೇ. ೨-೭೨ ರಿಂದ ೮೨ ವರೆಗಿನ ಶ್ಲೋಕಗಳಲ್ಲಿ ವಿವರಿಸಿದೆ).

**ಅಯಂ ಪ್ರಯೋಗಸ್ತ್ರೇತೇಷಾಂ ಜ್ಯೋತಿಷಾಂ ತ್ರಿಷು ವರ್ತತಾಂ ।**

(ಬೃ. ದೇ. ೧-೯೦)

ಎಂದು ಹೇಳಿರುವಂತೆ ಮೂರು ಲೋಕಗಳಲ್ಲಿಯೂ ಇರುವ ಬೇರೆಬೇರೆ ದೇವತೆಗಳು ಒಂದೇ ವಾಗಧಿದೇವತೆಯ ರೂಪಾಂತರಗಳು ಇವರಲ್ಲಿ **ಇಳೆಯು** ಪಾರ್ಥಿವಾಗ್ನಿಯನ್ನನುಸರಿಸಿದಳು. **ಸರಸ್ವತಿಯು** ಮಧ್ಯಲೋಕವನ್ನಾಕ್ರಮಿಸಿದಳು ಮತ್ತು **ಭಾರತಿಯು** ದ್ಯುಲೋಕಸ್ಥಳಾದಳು. ಆದರೂ ಸಹ,

**ದೇವ್ಯಸ್ತಿಸ್ರಃ ಶ್ರಿತಾಶ್ಚೈನಂ ತ್ವಷ್ಟಾ ಚೈನ್ಮೈತದಾಶ್ರಯಃ ।**

(ಬೃ. ದೇ. ೧-೧೦೮)

ಎಂಬ ವಾಕ್ಯದಲ್ಲಿ ಹೇಳಿರುವಂತೆ ಈ ಮೂರು ಲೋಕದ ದೇವತೆಗಳೂ ಸಹ ಪಾರ್ಥಿವಾಗ್ನಿಯನ್ನೇ ಸೇವಿಸುತ್ತಾರೆಂದು ಎಲ್ಲವನ್ನೂ ಕೊನೆಯಲ್ಲಿ ಅಗ್ನಿಪರವಾಗಿಯೇ ಮುಕ್ತಾಯಮಾಡಿದೆ.

**ಇಳಾ ಸರಸ್ವತೀ ಮಹೀ ತಿಸ್ರೋ ದೇವೀರ್ಮಯೋಭುವಃ । ಬರ್ಹಿಃ ಸೀದಂತ್ವಸ್ರಿಧಃ ॥**

(ಋ. ಸಂ. ೧ ೧೩-೯)

ಎಂಬ ಋಕ್ಕಿನಲ್ಲಿಯೂ, ಇದೇ ಆನುಪೂರ್ವಿಯಿರುವ ಋ. ಸಂ. ೫-೫-೮ ನೇ ಋಕ್ಕಿನಲ್ಲಿಯೂ ಸಹ **ಭಾರತೀ** ಎಂಬ ನಿರ್ದೇಶವಿಲ್ಲದಿರುವುದರಿಂದ **ಮಹೀ** ಎಂಬುದು ಭಾರತೀದೇವತೆಯ ಪರ್ಯಾಯಪದವೆಂದು ಸಾಯಣರು ಹೇಳಿದ್ದಾರೆ. ಋ. ಸಂ. ೧-೧೮೮-೮ ನೇ ಋಕ್ಕಿನಲ್ಲಿಯೂ ಮತ್ತು

**ಭಾರತೀ ಪವಮಾನಸ್ಯ ಸರಸ್ವತೀಳಾ ಮಹೀ ।**
**ಇಮಂ ನೋ ಯಜ್ಞಮಾ ಗಮನ್ತಿಸ್ರೋ ದೇವೀಃ ಸುಪೇಶಸಃ ॥**

(ಋ. ಸಂ. ೯-೫ ೮)

ಎಂಬ ಋಕ್ಕಿನಲ್ಲಿಯೂ ಸಹ ವಿಶೇಷಣವಾಗಿದೆ.

**ಇಳಾಂ**—ಬೃಹದ್ದೇವತೆಯಲ್ಲಿ **ಅಗ್ನಿಮೇವಾನುರಾಗೇಳಾ** (೩-೧೩) **ಇಳೆಯು** ಪಾರ್ಥಿವಾಗ್ನಿಯನ್ನನುಸರಿಸಿದಳು ಎಂದು ಹೇಳಿರುವುದರಿಂದಲೂ,

**ಪ್ರದೀಧಿತಿರ್ವಿಶ್ವವಾರಾ ಜಿಗಾತಿ ಹೋತಾರಮಿಳಃ ಪ್ರಥಮಂ ಯಜಧ್ಯೈ ।**
**ಅಚ್ಛಾ ನಮೋಭಿರ್ವೃಷಭಂ ವಂದಧ್ಯೈ ಸ ದೇವಾನ್ಯಕ್ಷ ದಿಷಿತೋ ಯಜೀಯಾನ್ ॥**

(ಋ. ಸಂ. ೩-೪-೩)

ಎಂಬ ಋಕ್ಕಿನಲ್ಲಿ **ಇಳಃ** ಶಬ್ದಕ್ಕೆ ಹವೀರೂಪವಾದ ಅನ್ನವೆಂದು ಅರ್ಥಮಾಡಿರುವುದರಿಂದಲೂ ಮತ್ತು ೭-೧೬-೮ ನೇ ಋಕ್ಕಿನಲ್ಲಿ **ಘೃತಹಸ್ತಾ** ಎಂಬ ವಿಶೇಷಣವೂ, ೧೦-೭೦-೮ ರಲ್ಲಿ **ಘೃತಪದೀ** ಎಂಬ ವಿಶೇಷಣವೂ ಇರುವುದರಿಂದಲೂ ಇಳಾ ಎಂಬುದಕ್ಕೆ **ಹವಿಸ್ಸೆಂದರ್ಥ**ಮಾಡಬಹುದಾಗಿ ತೋರುತ್ತದೆ. ಬಹುಶಃ ಈ ಕಾರಣದಿಂದಲೇ,

**ಉತ್ತಾನಾಯಾಮವ ಭರಾ ಚಿಕಿತ್ವಾನ್ತ್ಸದ್ಯಃ ಪ್ರವೀತಾ ವೃಷಣಂ ಜಜಾನ ।**
**ಅರುಷಸ್ತೂಪೋ ರುಶದಸ್ಯ ಪಾಜ ಇಳಾಯಾಸ್ಪುತ್ರೋ ವಯುನೇಽಜನಿಷ್ಟ ॥**

(ಋ. ಸಂ. ೩-೨೯-೩)

ಎಂಬ ಋಕ್ಕಿನಲ್ಲಿ **ಇಳೆಯ** ಪುತ್ರನೆಂದೂ ಹೇಳಿದೆ.

**ಭಾರತೀ**—ನಿರುಕ್ತದಲ್ಲಿ ಆದಿತ್ಯನ ಪ್ರಭೆಯೆಂದು ಹೇಳಿದೆ. (**ಭರತಃ ಆದಿತ್ಯಃ ತಸ್ಯ ಭಾಃ**) Macdonell ಎಂಬ ಪಂಡಿತನು Vedic Mythology ಎಂಬ ಗ್ರಂಥದಲ್ಲಿ **ಭರತವಂಶ**ದವರಿಂದ ಅರ್ಪಿಸಲ್ಪಟ್ಟ **ಹವಿಸ್ಸು** ಎಂದೂ (p. 87) Grassmann ಎಂಬುವನು ವಾಗ್ದೇವತೆಯೆಂದೂ ಅರ್ಥಮಾಡಿದ್ದಾರೆ ಅಥವಾ ಅಗ್ನಿಸಂಬಂಧಿಯೆಂದೂ ಅರ್ಥಮಾಡಬಹುದು.

ತಸ್ಮಾ ಅಗ್ನಿರ್ಭಾರತಃ ಶರ್ಮ ಯಂಸಜ್ಜ್ಯೋಕ್ಪಶ್ಯಾತ್ಸೂರ್ಯಮುಚ್ಚರಂತಂ ।
ಯ ಇಂದ್ರಾಯ ಸುನವಾಮೇತ್ಯಾಹ ನರೇ ನರ್ಯಾಯ ನೃತಮಾಯ ನೃಣಾಂ ॥

(ಋ. ಸಂ. ೪-೨೫-೪)

ಎಂಬ ಋಕ್ಕಿನಲ್ಲಿ ಭಾರತಃ ಎಂದು ಅಗ್ನಿಗೆ ವಿಶೇಷಣವಾದುದರಿಂದ ಸತ್ಸಂಬಂಧಿಯಾದ ದೇವತೆ ಭಾರತೀ ಎಂದು ಹೆಸರಿರಬಹುದೆಂದು ಇನ್ನು ಕೆಲವರ ಮತ.

ಸಂಹಿತಾಪಾಠಃ

ದೇವ ತ್ವಷ್ಟರ್ಯದ್ಧ ಚಾರುತ್ವಮಾನಡ್ಯದಂಗಿರಸಾಮಭವಃ ಸಚಾಭೂಃ ।
ಸ ದೇವಾನಾಂ ಪಾಥ ಉಪ ಪ್ರ ವಿದ್ವಾನುಶನ್ಯಕ್ಷಿ ದ್ರವಿಣೋದಃ ಸುರತ್ನಃ ॥

ಪದಪಾಠಃ

ದೇವ । ತ್ವಷ್ಟಃ । ಯತ್ । ಹ । ಚಾರುಽತ್ವಂ । ಆನಟ್ । ಯತ್ । ಅಂಗಿರಸಾಂ । ಅಭವಃ । ಸಚಾಽಭೂಃ ॥

ಸಃ । ದೇವಾನಾಂ । ಪಾಥಃ । ಉಪ । ಪ್ರ । ವಿದ್ವಾನ್ । ಉಶನ್ । ಯಕ್ಷಿ । ದ್ರವಿಣಃಽದಃ । ಸುಽರತ್ನಃ ॥

ಸಾಯಣಭಾಷ್ಯಂ

ತ್ವಾಷ್ಟ್ರಸ್ಯ ಪಶೋರ್ವಪಾಯಾಗಸ್ಯ ದೇವ ತ್ವಷ್ಟರಿತಿ ಯಾಜ್ಯಾ । ಸೂತ್ರಿತಂ ಚ । ದೇವ ತ್ವಷ್ಟರ್ಯದ್ಧ ಚಾರುತ್ವಮಾನಟ್ ಪಿಶಂಗರೂಪಃ ಸುಭರೋ ವಯೋಧಾಃ । ಆ. ೩-೮ । ಇತಿ ॥

ಹೇ ದೇವ ತ್ವಷ್ಟರೇತನ್ನಾಮಕ ತ್ವಂ ಯಚ್ಚಾರುತ್ವಂ ಹವಿರ್ಭಿಃ ಕಲ್ಯಾಣರೂಪತ್ವಮಾನಟ್ ಪ್ರಾಪ್ತವಾನ್ ॥ ಅಶ್ನೋತೇರ್ಲಿಟಿ ಪ್ರತ್ಯಯಸ್ಯ ಲುಕ್ ॥ ಯಚ್ಚ ತ್ವಮಂಗಿರಸಾಮಸ್ಮಾಕಂ ಸಚಾಭೂಃ ಸಹಭಾವೀ ಸಖಾಭವಃ । ಹೇ ದ್ರವಿಣೋದೋ ಧನಸ್ಯ ದಾತಃ ಅತ ಏವ ಸುರತ್ನಃ ಸುಧನಃ ಸ ತ್ವಮುಶನ್ಹವೀಂಷಿ ಕಾಮಯಮಾನಃ ಸನ್ ವಿದ್ವಾನ್ ಅಸ್ಯೇದಮಸ್ಯೇದಮಿತಿ ಪ್ರಜಾನನ್ದೇವಾನಾಂ ಪಾಥೋಽನ್ನಮುಪ ಯಕ್ಷಿ । ಉಪಯಜ । ತೇಭ್ಯಃ ಪ್ರಯಚ್ಛ ॥

ಪ್ರತಿಪದಾರ್ಥ

**ದ್ರವಿಣೋದಃ**—ಧನಪ್ರದನೂ । **ದೇವ**—ದೇವತಾತ್ಮನೂ ಆದ । **ತ್ವಷ್ಟಃ**—ಎಲೈ ತ್ವಷ್ಟೃವೇ । **ಯತ್**—ಯಾವ ನಿಮಿತ್ತವಾಗಿ । **ಚಾರುತ್ವಂ**—ಕಲ್ಯಾಣಕಾರಕವಾದ ರೂಪವನ್ನು । **ಆನಟ್**—ನೀನು ಹೊಂದಿರುವೆಯೋ । **ಯತ್**—ಯಾವ ನಿನ್ನ ಮಹತ್ತ್ವದಿಂದ । **ಅಂಗಿರಸಾಂ**—ಅಂಗಿರಸ್ಸುಗಳೊಂದಿಗೆ (ನಮ್ಮೊಂದಿಗೆ) । **ಸಚಾಭೂಃ**—ಕೂಡಿಕೊಂಡು । **ಅಭವಃ**—ಇರುವೆಯೋ ಆದುದರಿಂದಲೇ । **ಸುರತ್ನಃ**—ಉತ್ತಮವಾದ ಧನವುಳ್ಳ । **ಸಃ**—ನೀನು । **ಉಶನ್**—ಹವಿಸ್ಸುಗಳನ್ನು ಅಪೇಕ್ಷಿಸಿ । **ಪ್ರ ವಿದ್ವಾನ್**—ಸಕಲವನ್ನೂ ತಿಳಿದವನಾಗಿ । **ದೇವಾನಾಂ**—ದೇವತೆಗಳಿಗೆ । **ಪಾಥಃ**—ಅನ್ನವನ್ನು । **ಉಪ ಯಕ್ಷಿ**—ಒದಗಿಸು.

ಭಾವಾರ್ಥ

ಧನಪ್ರದನೂ, ದೇವಾತ್ಮನೂ ಆದ ಎಲೈ ತ್ವಷ್ಟೃವೇ, ಯಾವ ನಿನ್ನ ಮಾಹಾತ್ಮ್ಯದಿಂದ ನೀನು ಸುಂದರವಾದ ರೂಪವನ್ನು ಹೊಂದಿರುವೆಯೋ ಮತ್ತು ಯಾವ ನಿನ್ನ ಮಹತ್ತ್ವದಿಂದ ಅಂಗಿರಸ್ಸಿನ ವಂಶಸ್ಥರಾದ ನಮ್ಮೊಂದಿಗೆ ಕೂಡಿ

ಕೊಂಡಿರುವೆಯೋ ಆದುದರಿಂದಲೇ, ಉತ್ತಮವಾದ ಧನವುಳ್ಳ ನೀನು ಹವಿಸ್ಸುಗಳನ್ನು ಅಪೇಕ್ಷಿಸಿ ಮತ್ತು ಸಕಲವನ್ನೂ ತಿಳಿದವನಾಗಿ ದೇವತೆಗಳಿಗೆ ಅನ್ನವನ್ನು ಒದಗಿಸು.

## English Translation

Divine Twashtri, since you have attained to beauty (through our oblations), and have become the associate of the Angirasas, do you, the bestower of wealth, possessed of precious treasure, and knowing (to whom each portion belongs), offer the food of the gods (to them).

### ವಿಶೇಷವಿಷಯಗಳು

ತ್ವಷ್ಟೃದೇವತೆಯನ್ನುದ್ದೇಶಿಸಿ ಮಾಡುವ ವಪಾಯಾಗದಲ್ಲಿ **ದೇವ ತ್ವಷ್ಟಃ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ದೇವ ತ್ವಷ್ಟರ್ಯದ್ಧ ಚಾರುತ್ವಮಾನಟ್ ಪಿಶಂಗರೂಪಃ ಸುಭರೋ ವಯೋಧಾಃ** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು.

ತ್ವಷ್ಟೃದೇವತೆಯ ವಿಷಯದಲ್ಲಿ ಯಾಸ್ಕರ ವಿವರಣೆಯು—

**ತ್ವಷ್ಟಾ । ತ್ವಷ್ಟಾ ತೂರ್ಣಮಶ್ನುತ ಇತಿ ನೈರುಕ್ತಾಃ । ತ್ವಿಷೇರ್ವಾ ಸ್ಯಾದ್ದೀಪ್ತಿಕರ್ಮಣಸ್ತ್ವಕ್ಷತೇರ್ವಾ ಸ್ಯಾತ್ಕರೋತಿಕರ್ಮಣಃ ॥ ಮಾಧ್ಯಮಿಕಸ್ತ್ವಷ್ಟೇತ್ಯಾಹುರ್ಮಧ್ಯಮೇ ಚ ಸ್ಥಾನೇ ಸಮಾಮ್ನಾತಃ । ಅಗ್ನಿರಿತಿ ಶಾಕಪೂಣಿಃ ॥**

(ನಿ. ೮-೧೪)

ಎಂದರೆ ತ್ವಷ್ಟಾ ಎಂಬ ಶಬ್ದಕ್ಕೆ ಜಾಗ್ರತೆಯಾಗಿ ವ್ಯಾಪಿಸುವವನು ಎಂದು ನಿರುಕ್ತಕಾರರು ಹೇಳುವರು ಅಥವಾ ಪ್ರಕಾಶಮಾನನಾಗಿರುವವನು ಅಥವಾ ಕರ್ಮಗಳನ್ನು (ಶಿಲ್ಪಕರ್ಮಗಳನ್ನು) ಮಾಡುವವನು ; ಮಾಧ್ಯಮಿಕನೆಂದೂ ಕೆಲವರು ಹೇಳುವರು. ಎಂದರೆ ದ್ಯಾವಾಪೃಥಿವಿಗಳ ಮಧ್ಯದಲ್ಲಿ (ಅಂತರಿಕ್ಷದಲ್ಲಿ) ಇರುವವನು. ಅಗ್ನಿಯೆಂದು ಶಾಕಪೂಣಿಯು ಹೇಳುವನು.

ತ್ವಷ್ಟೃವು ವಿಶ್ವಕರ್ಮನಂತೆ ದೇವತೆಗಳ ಶಿಲ್ಪಿಯೆಂದೂ ಕೆಲವರು ಹೇಳುವರು. ಏಕೆಂದರೆ ಯಾಸ್ಕರು ಉದಾಹರಣೆಗಾಗಿ ಕೊಟ್ಟಿರುವ ಋಕ್ಕಿನಲ್ಲಿ,

**ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈರಪಿಂಶದ್ಭುವನಾನಿ ವಿಶ್ವಾ ।**
**ತಮದ್ಯ ಹೋತರಿಷಿತೋ ಯಜೀಯಾನ್ ದೇವಂ ತ್ವಷ್ಟಾರಮಿಹ ಯಕ್ಷಿ ವಿದ್ವಾನ್ ॥**

ತ್ವಷ್ಟೃವು ದ್ಯಾವಾಪೃಥಿವಿಗಳ ನಿರ್ಮಾಪಕನು ಮತ್ತು ಸಮಸ್ತ ಲೋಕಗಳಲ್ಲಿರುವ ಪ್ರಾಣಿಗಳಿಗೆ ಅವರವರಿಗೆ ಯೋಗ್ಯವಾದ ರೂಪ, ಸೌಂದರ್ಯ, ಋದ್ಧಿ, ವೃದ್ಧಿ ಮೊದಲಾದವುಗಳಿಗೆ ಕಾರಣಕರ್ತನು ಎಂದು ಹೇಳಿರುವರು. ಇದಲ್ಲದೆ **ತ್ವಷ್ಟಾ ವೈ ಪಶೂನಾಂ ಮಿಥುನಾನಾಂ ರೂಪಕೃತ್** (ತೈ. ಸಂ. ೬-೧-೮-೫) **ತ್ವಷ್ಟಾ ರೂಪಾಣಾಮಧಿಪತಿಃ** (ತೈ. ಸಂ. ೩-೪-೫-೧) **ತ್ವಷ್ಟಾ ರೂಪಾಣಿ ವಿಕರೋತಿ** ಮೊದಲಾದ ಶ್ರುತಿ (ಯಜುರ್ವೇದ) ವಾಕ್ಯಗಳು ತ್ವಷ್ಟೃವಿನ ವಸ್ತುನಿರ್ಮಾಣಕುಶಲತೆಯನ್ನು ಪ್ರತಿಪಾದಿಸುವುವು ಮತ್ತು

**ಮಹ್ಯಂ ತ್ವಷ್ಟಾ ವಜ್ರಮತಕ್ಷದಾಯಸಂ ಮಯಿ ದೇವಾಸೋಽವೃಜನ್ನಪಿ ಕ್ರತುಂ ॥**

(ಋ. ಸಂ. ೧೦-೪೮-೩)

ತ್ವಷ್ಟೃವು ನನಗೆ ಉಕ್ಕಿನಿಂದ ವಜ್ರಾಯುಧವನ್ನು ನಿರ್ಮಾಣಮಾಡಿಕೊಟ್ಟನು ಎಂದು ಇಂದ್ರನು ಹೇಳಿರುವನು. ದೇವತೆಗಳಿಗೆ ಅವಶ್ಯಕವಾದ ಯಜ್ಞಸಾಮಗ್ರಿಗಳನ್ನೂ, ಇತರ ಅನೇಕ ವಸ್ತುಗಳನ್ನೂ ನಿರ್ಮಿಸಿ ಕೊಟ್ಟಿರುವನೆಂದು ಋಗ್ವೇದದ ಅನೇಕ ಮಂತ್ರಗಳಲ್ಲಿ ಹೇಳಿದೆ,

ತ್ವಷ್ಟೃವು ದ್ವಾದಶಾದಿತ್ಯರಲ್ಲಿ ಒಬ್ಬನೆಂದು ಪ್ರಸಿದ್ಧಿಯು. ಆದುದರಿಂದಲೇ ಪ್ರಕಾಶಮಾನನು ಎಂದು ಯಾಸ್ಕರು ಅರ್ಥವಿವರಣೆ ಮಾಡಿರುವರು.

ತ್ವಷ್ಟೃದೇವತೆಯ ವಿಷಯದಲ್ಲಿ ವೈಯಕ್ತಿಕವಾದ ಅಭಿಪ್ರಾಯವನ್ನು ತಿಳಿಸುವ ಶ್ರುತಿವಾಕ್ಯಗಳಲ್ಲಿ ಈ ಕೆಳಗೆ ಉದಾಹೃತವಾಗಿರುವುವು, ಆಪ್ರೀಸೂಕ್ತದೇವತೆಯನ್ನು ಮಾತ್ರ ನಿರ್ದೇಶಿಸುವುದಾಗಿವೆ.

> **ಹೋತಾಯಕ್ಷತ್ತ್ವಷ್ಟಾರಮಚಿಷ್ಟುಮಪಾಕಗ್ಂ ರೇತೋಧಾಂ ವಿಶ್ರವಸಂ ಯಶೋಧಾಂ। ಪುರುರೂಪಮಕಾಮಕರ್ಶನಗ್ಂ ಸುಪೋಷಃ ಪೋಷೈಃ ಸ್ಯಾತ್ಸುವೀರೋ ವೀರೈರ್ವೇತ್ವಾಜ್ಯಸ್ಯ ಹೋತರ್ಯಜ ॥** (ತೈ. ಬ್ರಾ. ೩-೬-೨-೨)

ಎಂಬ ಮಂತ್ರದಲ್ಲಿ **ಅಚಿಷ್ಟುಂ, ಅಪಾಕಂ, ರೇತೋಧಾಂ, ವಿಶ್ರವಸಂ, ಯಶೋಧಾಂ, ಪುರುರೂಪಂ, ಅಕಾಮಕರ್ಶನಂ** ಎಂಬ ವಿಶೇಷಣಗಳಿವೆ. ಇವುಗಳಲ್ಲಿ—

**ಅಚಿಷ್ಟುಂ** ಎಂದರೆ ಚೇಷ್ಟನರಹಿತಂ, ಚಾಂಚಲ್ಯರಹಿತಂ, ಸ್ಥಿರಂ, ಚಂಚಲವಿಲ್ಲದೇ ಸ್ಥಿರವಾಗಿರತಕ್ಕವನೆಂದೂ

**ಅಪಾಕಂ** ಎಂದರೆ **ಅಬಾಲಂ ಪ್ರಾಜ್ಞಂ** । ಬಾಲನಲ್ಲದೆ ಪ್ರಾಜ್ಞನೆಂದೂ

**ರೇತೋಧಾಂ** ಎನ್ನುವುದಕ್ಕೆ **ಪುತ್ರಾದಿಬೀಜಸ್ಯ ಯಜಮಾನೇ ಧಾರಯಿತಾರಂ** । ಯಜ್ಞಕರ್ತನಲ್ಲಿ ಪುತ್ರಾದಿಬೀಜವನ್ನು ಬಿತ್ತುವವನೆಂದೂ

**ವಿಶ್ರವಸಂ** ಎಂಬುದಕ್ಕೆ **ವಿವಿಧಕೀರ್ತಿಯುಕ್ತಂ** । ಬಗೆಬಗೆಯ ಕೀರ್ತಿಯುಕ್ತನೆಂದೂ

**ಯಶೋಧಾಂ** ಎಂದರೆ **ಯಜಮಾನೇ ಯಶಸಃ ಧಾರಯಿತಾರಂ** । ಯಜ್ಞಕರ್ತನು ಯಶೋಭಾಗಿಯಾಗುವಂತೆ ಮಾಡುವವನೆಂದೂ

**ಪುರುರೂಪಂ** ಎನ್ನುವುದಕ್ಕೆ **ಬಹುರೂಪಂ** ವಿಧವಿಧವಾದ ರೂಪವುಳ್ಳವನೆಂದೂ

**ಅಕಾಮಕರ್ಶನಂ**—ಎಂದರೆ **ಕಾಮಾನಾಂ ಅನಾಶಯಿತಾರಂ** । ಯಜಮಾನನ ಇಷ್ಟಾರ್ಥಗಳನ್ನು ಸಾರ್ಥಕಗೊಳಿಸುವವನೆಂದೂ ವಿವರಿಸಿದೆ.

ಈ ವಿಶೇಷಣಗಳು **ತ್ವಷ್ಟೃವಿನ** ವೈಯಕ್ತಿಕವಾದ ಸ್ವರೂಪವನ್ನು ತಿಳಿಸುತ್ತವೆ ನಿರುಕ್ತಕಾರರು **ತ್ವಷ್ಟೃ** ಶಬ್ದದ ನಿಷ್ಪತ್ತಿಯನ್ನು ತೋರಿಸುತ್ತಾ (೮-೧೪) **ತ್ವಷ್ಟಾ ತೂರ್ಣಮಶ್ನುತ ಇತಿ ನೈರುಕ್ತಾಃ । ತ್ವಿಷೇರ್ವಾ-ಸ್ಯಾದ್ದೀಪ್ತಿಕರ್ಮಣಸ್ತ್ವಕ್ಷತೇರ್ವಾ ಸ್ಯಾತ್ ಕರೋತಿಕರ್ಮಣಃ ।** ವೇಗವಾಗಿ ವ್ಯಾಪಿಸುವುದರಿಂದ ಈ ಹೆಸರೆಂದು ನೈರುಕ್ತಕಾರರ ಮತ ಮತ್ತು ಪ್ರಕಾಶಿಸು ಎಂಬರ್ಥವುಳ್ಳ **ತ್ವಿಷ್** ಧಾತುವಿನಿಂದಾಗಲಿ, ಕರ್ತ್ರರ್ಥಕವಾದ **ತ್ವಕ್ಷ್** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದೆಂದೂ ಹೇಳಿದ್ದಾರೆ. ಈ ನಿರ್ವಚನಗಳಿಂದ **ತ್ವಷ್ಟೃವು** ವೇಗವಾಗಿ ವ್ಯಾಪಿಸುವವನೆಂದೂ, ಪ್ರಕಾಶಿಸುವನೆಂದೂ ಮತ್ತು ನಿರ್ಮಾಪಕನೆಂದೂ ಅರ್ಥವಾಗುವುದು. ಈ ದೇವತೆಯು ಯಾವ ಲೋಕಕ್ಕೆ ಸೇರಿದವನೆಂದು ತೋರಿಸಲು **ಮಾಧ್ಯಮಿಕಸ್ತ್ವಷ್ಟೇತ್ಯಾಹುರ್ಮಧ್ಯಮೇ ಚ ಸ್ಥಾನೇ ಸಮಾಮ್ನಾತಃ ।**

ಅಂತರಿಕ್ಷಸ್ಥವಾದ ದೇವತೆಗಳ ಗುಂಪಿಗೆ ಸೇರಿದವನೆಂದು ಕೆಲವರೂ, ಅಗ್ನಿಯೆಂದು ಶಾಕಪೂಣಿಯೂ ಹೇಳಿರುವ ಮತಗಳನ್ನು ತಿಳಿಸಿದ್ದಾರೆ. ಬೃಹದ್ದೇವತೆಯಲ್ಲಿ ಮೊದಲನೆಯ ಮತವನ್ನನುಮೋದಿಸುತ್ತಾ,

**ತ್ವಷ್ಟಾ ರೂಪವಿಕರ್ತಾ ಚ ಯೋಽಸೌ ಮಾಧ್ಯಮಿಕೇ ಗಣೇ |**
**ಸ್ತುತಃ ಸ ಚ ನಿಪಾತೇನ ಸೂಕ್ತಂ ತಸ್ಯ ನ ವಿದ್ಯತೇ ||** (ಬೃ. ದೇ. ೩-೨೫)

ಎಂಬ ಶ್ಲೋಕದಲ್ಲಿ **ಮಧ್ಯಮಲೋಕದ** ದೇವತೆಗಳ ಗುಂಪಿನಲ್ಲಿ ಸೇರತಕ್ಕವನೆಂದು ಹೇಳಿದೆ. ಇದಕ್ಕೆ ಮೊದಲು,

**ತ್ವಷ್ಟಾ ತು ಯಸ್ತ್ವಯಮೇವ ಪಾರ್ಥಿವೋಽಗ್ನಿರಿತಿ ಸ್ತುತಿಃ |**
**ಪಾರ್ಥಿವಸ್ಯಾಸ್ಯ ವರ್ಚಃ ಸ್ಯುಃ ಕಸ್ಯಾಸ್ಯೈಕ್ ಚಾರ್ತವೇಷು ಚ ||**
**ತ್ರಿಷಿತಸ್ತ್ವಕ್ಷತೇರ್ವಾ ಸ್ಯಾತ್ ತೂರ್ಣಮಶ್ನುತ ಏವ ವಾ |**
**ಕರ್ಮಸೂತ್ರಾರಣೋ ವೇತಿ ತೇನ ನಾವ್ಯೈತದಶ್ನುತೇ ||**
**ಯಃ ಸಹಸ್ರತಮೋ ರಶ್ಮೀ ರವೇಶ್ಚಂದ್ರಮುಪಾಶ್ರಿತಃ |**
**ಸೋಽಪಿ ತ್ವಷ್ಟಾರನೇವಾಗ್ನಿಂ ಪರಂ ಚೇಹ ಚ ಯನ್ಮಧು ||**
(ಬೃ. ದೇ. ೩-೧೫ ರಿಂದ ೧೭)

ಪಾರ್ಥಿವಾಗ್ನಿಗೆ ಯಾವ ಸ್ತುತಿಯೋ ಅದೇ ತ್ವಷ್ಟೃವನ್ನೂ ಉದ್ದೇಶಿಸಿದ ಪೃಥ್ವಿಗೆ ಸಂಬಂಧಪಟ್ಟ ದೇವತೆಯೆಂಬ ಸೂಚನೆಯು ಕೆಲವೆಡೆಗಳಲ್ಲಿವೆ. ಋತುಪರವಾದ ಸೂಕ್ತಗಳಲ್ಲೂ ಇವನನ್ನು ಅಗ್ನಿಯ ಅಂಶವೆಂದೇ ವರ್ಣಿಸಿದೆ ಎಂದು ಅನಂತರ **ತ್ವಷ್ಟೃ** ಪದಕ್ಕೆ ನಿರುಕ್ತದಲ್ಲಿರುವ ನಿರ್ವಚನವನ್ನೇ ಹೇಳಿದೆ. **ಚಂದ್ರ** ವ್ಯಾಪ್ತನಾದ ಸೂರ್ಯನ ಸಹಸ್ರರಶ್ಮಿ ಮಧುವಿನಲ್ಲಿಯೂ, ಪರಲೋಕದಲ್ಲಿಯೂ, ಪೃಥ್ವಿಯಲ್ಲಿಯೂ ವ್ಯಾಪಿಸಿರುವಂತೆ ತ್ವಷ್ಟೃವಿನಲ್ಲಿಯೂ ಇದೆ ಎಂದೂ ಸಹ ವರ್ಣಿಸಿದೆ. ಮುಖ್ಯವಾಗಿ **ಬೃಹದ್ದೇವತಾಕಾರರು** ನಿರುಕ್ತೋಕ್ತವಾದ ಶೌಕಪೂಣಿಯ ಮತವನ್ನು ಈ ವಿಷಯದಲ್ಲಿ ಅನುಮೋದಿಸುತ್ತಾರೆ. **ನಿಘಂಟುವಿನಲ್ಲಿ** ತ್ವಷ್ಟೃವನ್ನು ಮೊದಲು **ಆಪ್ರೀದೇವತೆ**ಗಳೊಡನೆಯೂ, (೫-೨) ಅನಂತರ **ಅಂತರಿಕ್ಷಸ್ಥ**ನಾದ ದೇವತೆಗಳೊಡನೆಯೂ (೫-೫) ಮೊದಲನೆಯದಾಗಿ ದ್ಯುಲೋಕಸ್ಥರಾದ ದೇವತೆಗಳೊಡನೆಯೂ (೫-೬) ಸೇರಿಸಿದೆ.

ತ್ವಷ್ಟೃ ಮತ್ತು ದಧೀಚ ಋಷಿಯ ಕಥೆಯನ್ನು ಕುರಿತು ೧-೧೩೯ನೆಯ ಸೂಕ್ತದ ವಿಶೇಷವಿಷಯಗಳಲ್ಲಿ ತಿಳಿಸಿದೆ. ಐತರೇಯಬ್ರಾಹ್ಮಣದಲ್ಲಿ,

**ತ್ವಷ್ಟಾರಂ ಯಜತಿ ವಾಗ್ವೈ ತ್ವಷ್ಟಾ ವಾಗ್ಘೀದಂ ಸರ್ವಂ | ತ್ವಾಂಷ್ಟೀ ವಾಚಮೇವ ತತ್ಪ್ರೀಣಾತಿ ವಾಚಂ ಯಜಮಾನೇ ದಧಾತಿ |**

(ಐ. ಬ್ರಾ. ೨-೪)

ಎಂಬ ವಾಕ್ಯದಿಂದ **ತ್ವಷ್ಟೃವಿಗೂ ವಾಕ್ಕಿಗೂ** ತಾದಾತ್ಮ್ಯವನ್ನು ಹೇಳಿರುವುದೂ ಒಂದು ಮತವಾಗಿದೆ.

**ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈರಪಿಂಶದ್ಭುವನಾನಿ ವಿಶ್ವಾ |**
**ತಮದ್ಯ ಹೋತರಿಷಿತೋ ಯಜೀಯಾನ್ ದೇವಂ ತ್ವಷ್ಟಾರಮಿಹ ಯಕ್ಷಿ ವಿದ್ವಾನ್ |**
(ಋ. ಸಂ. ೧೦-೧೧೦-೯)

ಎಂಬ ಋಕ್ಕಿನಲ್ಲಿ ಈ ದೇವತೆಗೆ **ದಿವ್ಯಜನ್ಮ**ವಿದೆಯೆಂದೂ, ಆದುದರಿಂದಲೇ ಸೃಷ್ಟಿಕಾಲಗಳಲ್ಲಿಯೂ ಸಹ ಇವನು ತನ್ನ ಪ್ರಾಕ್ತನತ್ವವನ್ನು ತೋರಿಸುತ್ತಾನೆಂದೂ ಸ್ತುತಿಸಿದೆ. ತ್ವಷ್ಟೃವು ಅತ್ಯಂತ ಪ್ರಾಚೀನನು ಎಂಬಭಿಪ್ರಾಯವು.

ಇಹ ತ್ವಷ್ಟಾರಮಗ್ರಿಯಂ ವಿಶ್ವರೂಪಮುಪಹ್ವಯೇ । ಅಸ್ಮಾಕಮಸ್ತು ಕೇವಲಃ ॥
(ಋ. ಸಂ. ೧-೧೩-೧೦)

ತ್ವಷ್ಟಾರಮಗ್ರಜಾಂ ಗೋಪಾಂ ಪುರೋಯಾವಾನಮಾ ಹುವೇ ।
ಇಂದುರಿಂದ್ರೋ ವೃಷಾ ಹರಿಃ ಪವಮಾನಃ ಪ್ರಜಾಪತಿಃ ॥
(ಋ. ಸಂ. ೯-೫-೯)

ಇತ್ಯಾದಿ ಋಕ್ಕುಗಳಲ್ಲಿ ಅಗ್ರಿಯ, ಅಗ್ರಜ ಎಂಬ ವಿಶೇಷಣಗಳಿಂದ ತಿಳಿಯುತ್ತದೆ.

ತ್ವಷ್ಟಾ ರೂಪಾಣಿ ಹಿ ಪ್ರಭುಃ ಪಶೂನ್ವಿಶ್ವಾನ್ಸಮಾನಜೇ । ತೇಷಾಂ ನಃ ಸ್ಫಾತಿಮಾ ಯಜ ।
(ಋ. ಸಂ. ೧-೧೮೮-೯)

ತ್ವಷ್ಟಾ ರೂಪಾಣಿ ವಿಕರೋತಿ ।
(ತೈ. ಸಂ. ೧-೫-೯-೨)

ಇತ್ಯಾದಿ ವಾಕ್ಯಗಳು ತ್ವಷ್ಟೃವಿನ ನಿರ್ಮಾಣಕಾರ್ಯವನ್ನು ಸ್ತುತಿಸುತ್ತವೆ. ಅಲ್ಲದೇ ಅವನಿಗೆ ವಿಶ್ವರೂಪನೆಂಬ ವಿಶೇಷಣವೂ ಇದೆ. (ಋ. ಸಂ. ೧-೧೩-೧೦).

ಸಂಹಿತಾಪಾಠಃ

ವನಸ್ಪತೇ ರಶನಯಾ ನಿಯೂಯಾ ದೇವಾನಾಂ ಪಾಥ ಉಪ ವಕ್ಷಿ ವಿದ್ವಾನ್।
ಸ್ವದಾತಿ ದೇವಃ ಕೃಣವದ್ಧವೀಂಷ್ಯವತಾಂ ದ್ಯಾವಾಪೃಥಿವೀ ಹವಂ ಮೇ ॥೧೦॥

ಪದಪಾಠಃ

ವನಸ್ಪತೇ । ರಶನಯಾ । ನಿಽಯೂಯ । ದೇವಾನಾಂ । ಪಾಥಃ । ಉಪ । ವಕ್ಷಿ । ವಿದ್ವಾನ್ ।
ಸ್ವದಾತಿ । ದೇವಃ । ಕೃಣವತ್ । ಹವೀಂಷಿ । ಅವತಾಂ । ದ್ಯಾವಾಪೃಥಿವೀ ಇತಿ । ಹವಂ । ಮೇ ॥ ೧೦ ॥

ಸಾಯಣಭಾಷ್ಯಂ

ವನಸ್ಪತಿಸ್ತೋಮೇ ನಿಷ್ಕೇವಲ್ಯೇ ವನಸ್ಪತೇ ರಶನಯೇತ್ಯೇಷಾ ಸೂಕ್ತಮುಖೀಯಾ । ಸೂತ್ರಿತಂ ಚ । ದೇವೇಭ್ಯೋ ವನಸ್ಪತೇ ಹವೀಂಷಿ ವನಸ್ಪತೇ ರಶನಯಾ ನಿಯೂಯೇತಿ ಸೂಕ್ತಮುಖೀಯಾಃ । ಆ. ೯-೫ । ಇತಿ ॥

ಹೇ ವನಸ್ಪತೇ ವನಸ್ಪತಿವಿಕಾರ ಯೂಪ ವಿದ್ವಾಞ್ಜಾನಂಸ್ತ್ವಂ ರಶನಯಾ ರಜ್ಜ್ವಾ ನಿಯೂಯ ಬಧ್ವಾ ಪರಿವ್ಯಾಯ ಪಾಥೋಽನ್ನಂ ದೇವಾನಾಮಿಂದ್ರಾದೀನಾಮುಪ ವಕ್ಷಿ । ಉಪವಹ । ಪ್ರಾಪಯ । ತತೋ ದೇವೋ ವನಸ್ಪತಿಃ ಸ್ವದಾತಿ । ಹವಿಷ್ಪ್ರಾಪಣೇನ ಸ್ವದಯತು । ತಥಾ ಹವೀಂಷ್ಯಸ್ಮಾಭಿರ್ದತ್ತಾನಿ ಕೃಣವತ್ । ದೇವಾನಾಂ ಕರೋತು । ತಥಾ ಮೇ ಮದೀಯಂ ಹವಂ ದೇವವಿಷಯಾಹ್ವಾನಂ ದ್ಯಾವಾಪೃಥಿವೀ ದ್ಯಾವಾಪೃಥಿವ್ಯಾವವತಾಂ । ರಕ್ಷತಾಂ ॥

ಪ್ರತಿಪದಾರ್ಥ

ವನಸ್ಪತೇ—ವೃಕ್ಷದಿಂದ ನಿರ್ಮಿಸಲ್ಪಟ್ಟಿರುವ ಎಲೈ ಯೂಪದೇವತೆಯೇ । ವಿದ್ವಾನ್—ಸಕಲವನ್ನೂ ತಿಳಿದಿರುವ ನೀನು । ಪಾಥಃ—ಹವೀರೂಪವಾದ ಅನ್ನವನ್ನು । ರಶನಯಾ—ಹಗ್ಗದಿಂದ । ನಿಯೂಯ—

ಗಂಟುಕಟ್ಟಿಕೊಂಡು । **ದೇವಾನಾಂ ಉಪ**—ಇಂದ್ರಾದಿದೇವತೆಗಳ ಸಮೀಪಕ್ಕೆ । **ವಕ್ಷಿ**—ತೆಗೆದುಕೊಂಡುಹೋಗು (ಅನಂತರ) । **ದೇವಃ**—ವನಸ್ಪತಿ (ಅಥವಾ ಯೂಪಾಭಿಮಾನಿ) ದೇವನು । **ಸ್ವದಾತಿ**—ಹವಿಸ್ಸನ್ನು ಭಕ್ಷಿಸಲಿ । **ಹವೀಂಷಿ**—ನಮ್ಮಿಂದ ಅರ್ಪಿಸಲ್ಪಟ್ಟ ಹವಿಸ್ಸುಗಳನ್ನು । **ಕೃಣವತ್**—ದೇವತೆಗಳಿಗೆ ಕೊಡಲಿ । **ಮೇ**—ನನ್ನ । **ಹವಂ**—ದೇವವಿಷಯವಾದ ಆಹ್ವಾನವನ್ನು । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳು । **ಅವತಾಂ**—ರಕ್ಷಿಸಲಿ ಎಂದರೆ ಅನುಮೋದಿಸಲಿ.

**ಭಾವಾರ್ಥ**

ವೃಕ್ಷದಿಂದ (ಮರದಿಂದ) ನಿರ್ಮಿಸಲ್ಪಟ್ಟಿರುವ ಎಲೈ ಯೂಪದೇವತೆಯೇ, ಸಕಲವನ್ನೂ ತಿಳಿದಿರುವ ನೀನು ಹವೀರೂಪವಾದ ಅನ್ನವನ್ನು (ಪ್ರಯಾಣಕಾಲದಲ್ಲಿ ಜನರು ತೆಗೆದುಕೊಂಡುಹೋಗುವಂತೆ) ಹಗ್ಗದಿಂದ ಗಂಟುಕಟ್ಟಿಕೊಂಡು ದೇವತೆಗಳ ಸಮೀಪಕ್ಕೆ ತೆಗೆದುಕೊಂಡುಹೋಗು. ಅನಂತರ ವನಸ್ಪತಿ ಎಂಬ ಯೂಪಾಭಿಮಾನಿದೇವನು ಆ ಹವಿಸ್ಸನ್ನು ಭಕ್ಷಿಸಲಿ ಮತ್ತು ನಮ್ಮಿಂದ ಅರ್ಪಿತವಾದ ಹವಿಸ್ಸನ್ನು ದೇವತೆಗಳಿಗೆ ಕೊಡಲಿ ಮತ್ತು ದೇವತೆಗಳು ಈ ಯಜ್ಞಭೂಮಿಗೆ ಬರಬೇಕೆಂದು ಪ್ರಾರ್ಥಿಸಿ ಕರೆಯುವ ನನ್ನ ಆಹ್ವಾನವನ್ನು ದ್ಯಾವಾಪೃಥಿವಿದೇವತೆಗಳು ಅನುಮೋದಿಸಲಿ.

## English Translation

Vanspati, you are intelligent; having fastened it with a rope, convoy the food of the gods; may the divine (Vanaspati) taste it, may he take the oblations (to the gods); may heaven and earth protect my invocation.

**ವಿಶೇಷವಿಷಯಗಳು**

ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ ವನಸ್ಪತಿದೇವಿಯನ್ನು ಸ್ತುತಿಸುವ ಸಮಯದಲ್ಲಿ **ವನಸ್ಪತೇ ರಶನಯಾ** ಎಂಬ ಈ ಋಕ್ಕನ್ನು ಪ್ರಾರಂಭದಲ್ಲಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ದೇವೇಭ್ಯೋ ವನಸ್ಪತೇ ಹವೀಂಷಿ ವನಸ್ಪತೇ ರಶನಯಾ ನಿಯೂಯೇತಿ ಸೂಕ್ತಮುಖೀಯಾಃ** । ಎಂಬ ಸೂತ್ರದಿಂದ (ಆ. ೯-೫) ವಿವೃತವಾಗಿರುವುದು.

ವನಸ್ಪತಿಶಬ್ದಕ್ಕೆ ಎರಡು ವಿಧವಾದ ಅರ್ಥವಿರುವುದೆಂದು ಯಾಸ್ಕರು ತಮ್ಮ ನಿರ್ವಚನದಲ್ಲಿ ಹೇಳಿದಾರೆ—

**ವನಸ್ಪತ ಇತ್ಯೇನಮಾಹೈಷ ಹಿ ವನಾನಾಂ ಪಾತಾ ವಾ ಪಾಲಯಿತಾ ವಾ । ವನಂ ವನೋತೇಃ ।**

(ನಿ. ೮-೩)

ವನಸ್ಪತಿಯೆಂದರೇನು ? ವನಗಳ (ಅರಣ್ಯಗಳ) ಸಂರಕ್ಷಕನು ಎಂದರೆ ವನಸ್ಪತಿ ಎಂಬ ವನಾಭಿಮಾನಿದೇವನು. ಅರಣ್ಯದಲ್ಲಿರುವ ವೃಕ್ಷಗಳನ್ನು ಕಾಪಾಡುವವನು ಎಂದರ್ಥವು. ವನಶಬ್ದವು **ವನ-ಸಂಭಕ್ತೌ** ಹೊಂದು ಎಂಬರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾಗಿರುವುದು. ಜನರು ತಮ್ಮ ಕಾರ್ಯಗಳಿಗಾಗಿ ತಮಗೆ ಬೇಕಾದಾಗ ಇದನ್ನು (ವೃಕ್ಷ ಅಥವಾ ಮರವನ್ನು) ಹೊಂದುವುದರಿಂದ ಎಂದರೆ ತೆಗೆದುಕೊಂಡುಬರುವುದರಿಂದ ವೃಕ್ಷಕ್ಕೆ ವನವೆಂದು ಹೆಸರು. ವೃಕ್ಷಗಳಲ್ಲಿ ದೊಡ್ಡದಾದ ವೃಕ್ಷಕ್ಕೆ ಅಥವಾ ವೃಕ್ಷಾಭಿಮಾನಿದೇವತೆಗೆ ವನಸ್ಪತಿಯೆಂದು ಹೆಸರು. ಉದಾಹರಣೆಗಾಗಿ—ಈ ವನಸ್ಪತಿಶಬ್ದವಿರುವ **ಉಪಾವಸೃಜನ್** ಎಂಬ ಋಕ್ಕನ್ನು (ಋ. ಸಂ. ೧೦-೧೧೦-೧೦) ಹೇಳಿರುವರು.

**ತತ್ ಕೋ ವನಸ್ಪತಿಃ । ಯೂಪ ಇತಿ ಕಾತ್ಥಕ್ಯಃ । ಅಗ್ನಿರಿತಿ ಶಾಕಪೂಣಿಃ ॥**

(ನಿ. ೮-೧೮, ೧೯)

ವನಸ್ಪತಿಶಬ್ದಕ್ಕೆ ಯಜ್ಞದಲ್ಲಿ ಪಶುಗಳನ್ನು ಕಟ್ಟುವ ಯೂಪಸ್ತಂಭವೆಂದೂ ಅರ್ಥವಾಗುವುದು ಎಂದು ಕಾತ್ಥಕ್ಯ ಎಂಬುವರ ಮತವು, ಈ ವಿಷಯದಲ್ಲಿ **ಅಜಂತಿ ತ್ವಾಮಧ್ವರೇ** (ಋ. ಸಂ. ೩-೮-೧) ಎಂಬ ಋಕ್ಕಿನಲ್ಲಿ ವನಸ್ಪತಿ ಶಬ್ದಕ್ಕೆ ಯೂಪವೆಂಬ ಅರ್ಥವಿರುವುದನ್ನು ಉದಾಹರಣೆಯಾಗಿ ಕೊಟ್ಟಿರುವರು. ವನಸ್ಪತಿಶಬ್ದಕ್ಕೆ ಅಗ್ನಿಯೆಂದೂ ಅರ್ಥವೆಂದು ಶಾಕಪೂಣಿಯವರ ಮತವು. ಇದರ ಸಮರ್ಥನೆಗಾಗಿ **ದೇವೇಭ್ಯೋ ವನಸ್ಪತೇ** ಮತ್ತು **ವನಸ್ಪತೇ ರಶನಯಾ** ಎಂಬ ಮಂತ್ರಗಳನ್ನು ಉದಾಹರಣೆಯಾಗಿ ಕೊಟ್ಟಿರುವರು.

ಪಾಥಃ—ಪಾಥಶಬ್ದಕ್ಕೆ ಯಾಸ್ಕರು ಮೂರುವಿಧ ಅರ್ಥಗಳನ್ನು ಹೇಳಿರುವರು—

**ಪಾಥಃ । ಪಾಥೋಽನ್ತರಿಕ್ಷಂ ಪಥಾ ವ್ಯಾಖ್ಯಾತಂ । ಶ್ಯೇನೋ ನ ದೀಯನ್ನನ್ವೇತಿ ಪಾಥಃ । ಇತ್ಯಪಿ ನಿಗಮೋ ಭವತಿ ॥**

(ನಿ. ೬-೮)

(೧) ಪಾಥಶಬ್ದಕ್ಕೆ ಅಂತರಿಕ್ಷವೆಂದರ್ಥವು. ಈ ವಿಷಯದಲ್ಲಿ **ಶ್ಯೇನೋ ನ ದೀಯನ್ನನ್ವೇತಿ ಪಾಥಃ** ಎಂಬ ಶ್ರುತಿವಾಕ್ಯವು ಈ ಅರ್ಥವನ್ನು ಸಮರ್ಥಿಸುವುದು.

**ಉದಕಮಪಿ ಪಾಥ ಉಚ್ಯತೇ ಪಾನಾತ್ । ಆಚಷ್ಟ ಆಸಾಂ ಪಾಥೋ ನದೀನಾಂ । ಇತ್ಯಪಿ ನಿಗಮೋ ಭವತಿ ॥**

(ನಿ. ೬-೯)

(೨) ಪಾಥಶಬ್ದಕ್ಕೆ ಉದಕವೆಂದೂ ಅರ್ಥವು. ಏಕೆಂದರೆ ಇದನ್ನು ಪಾನಮಾಡುವರು. **ಆಚಷ್ಟ ಆಸಾಂ ಪಾಥೋ ನದೀನಾಂ** ಎಂಬ ಶ್ರುತಿವಾಕ್ಯವು ಈ ಅರ್ಥವನ್ನು ಸಮರ್ಥಿಸುವುದು.

**ಅನ್ನಮಪಿ ಪಾಥ ಉಚ್ಯತೇ ಪಾನಾದೇವ । ದೇವಾನಾಂ ಪಾಥ ಉಪವಕ್ಷಿ ವಿದ್ವಾನ್ ಇತ್ಯಪಿ ನಿಗಮೋ ಭವತಿ ॥**

(ನಿ. ೬-೧೦)

(೩) ಜನರು ಅನ್ನವನ್ನು ಭಕ್ಷಿಸುವುದರಿಂದ ಅನ್ನಕ್ಕೆ ಪಾಥವೆಂದೂ ಹೆಸರು. ಈ ವಿಷಯದಲ್ಲಿ **ದೇವಾನಾಂ ಪಾಥ ಉಪವಕ್ಷಿ ವಿದ್ವಾನ್** ಎಂಬ ಪ್ರಕೃತ ಋಕ್ಕೇ ಉದಾಹರಣೆಯಾಗಿರುವುದು.

ವನಸ್ಪತಿ ಶಬ್ದಕ್ಕೆ ಯಾಸ್ಕರ ವಿವರಣೆಯು—

**ವನಸ್ಪತ ಇತ್ಯೇನಮಾಹೈಷ ಹಿ ವನಾನಾಂ ಪಾತಾ ವಾ ಪಾಲಯಿತಾ ವಾ । ವನಂ ವನೋತೇಃ ।**

(ನಿ. ೮-೩)

**ತತ್ಕೋ ವನಸ್ಪತಿಃ । ಯೂಪ ಇತಿ ಕಾತ್ಥಕ್ಯಃ । ಅಗ್ನಿರಿತಿಶಾಕಪೂಣಿಃ ॥**

(ನಿ. ೮-೧೮)

ಎಂದರೆ ಅಗ್ನಿಯನ್ನೇ ವನಸ್ಪತಿಯೆಂದು ಹೇಳುವರು ಏಕೆಂದರೆ ಅಗ್ನಿಯು ವನಗಳ ಪಾಲಕನು ಅಥವಾ ಸಂರಕ್ಷನು. ವೃಕ್ಷದಲ್ಲಿ ಅಗ್ನಿಯು ಅಂತರ್ಭೂತವಾಗಿದ್ದರೂ ಅದನ್ನು ಸುಡುವುದಿಲ್ಲವಾದ್ದರಿಂದ ಅದರ ಸಂರಕ್ಷಕನೆಂದು ಹೇಳಲ್ಪಡುವನು. ಅಥವಾ ದಾರ್ವಾದಿ ಯಜ್ಞಸಾಧನಗಳಿಗೆ ಉಪಯೋಗವಾಗುವುದರಿಂದ ವನವೆಂದು ಹೆಸರು. ವನಸ್ಪತಿ ಎಂದರೆ

ವೃಕ್ಷರಾಜ, ದೊಡ್ಡದಾದ ವೃಕ್ಷ ಎಂದರ್ಥವು. ವನಸ್ಪತಿ ಎಂದರೆ ಯಾವ ದೇವತೆಯು? ಯಜ್ಞದಲ್ಲಿ ಪಶುವನ್ನು ಕಟ್ಟುವುದಕ್ಕಾಗಿ ನೆಟ್ಟಿರುವ ಮರದ ಕಂಭವೆಂದು ಕಾತ್ಥಕ್ಯರ ಅಭಿಪ್ರಾಯವು. ವನಸ್ಪತಿಯೆಂದರೆ ಅಗ್ನಿಯೆಂದು ಶಾಕಪೂಣಿಯ ಅಭಿಪ್ರಾಯವು.

ಕಾತ್ಥಕ್ಯರ ಅಭಿಪ್ರಾಯವನ್ನೂ ಸಮರ್ಥಿಸುವುದಕ್ಕಾಗಿ ಯಾಸ್ಕರು ಒಂದು ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು—

**ಅಂಜಂತಿ ತ್ವಾಮಧ್ವರೇ ದೇವಯಂತೋ ವನಸ್ಪತೇ ಮಧುನಾ ದೈವ್ಯೇನ ॥**
(ಋ. ಸಂ. ೩-೮-೧)

ಎಂದರೆ ಎಲೈ ವನಸ್ಪತಿಯೇ (ಯೂಪಸ್ತಂಭವೇ) ಯಜ್ಞದಲ್ಲಿ ಋತ್ವಿಗ್ಯಜಮಾನರು ನಿನ್ನನ್ನು ಮಂತ್ರಸಂಸ್ಕೃತವಾದ ಘೃತ (ತುಪ್ಪ) ದಿಂದ ಲೇಪನಮಾಡುವರು ಎಂದು ಪಶುವನ್ನು ಕಟ್ಟುವ ಯೂಪಸ್ತಂಭವನ್ನುದ್ದೇಶಿಸಿ ಸಂಬೋಧನೆ ಮಾಡಿರುವುದು ಮತ್ತು ಇದೇ ಸೂಕ್ತದ ೩, ೬, ೧೧ ನೆಯ ಋಕ್ಕುಗಳಲ್ಲಿಯೂ ವನಸ್ಪತಿಯನ್ನು ಯೂಪಸ್ತಂಭವೆಂದು ಸಂಭೋದನೆಮಾಡಿರುವುದಲ್ಲದೆ ಈ ಸೂಕ್ತಕ್ಕೆ ಯೂಪವೇ ದೇವತೆಯು ಎಂದು ಪ್ರಸಿದ್ಧವಾಗಿರುವುದು. ಈ ಸೂಕ್ತದ ಹನ್ನೊಂದನೆಯ ಋಕ್ಕಿನಲ್ಲಿ—**ವನಸ್ಪತೇ ಶತವಲ್ಶೋ ವಿರೋಹ ಸಹಸ್ರವಲ್ಶಾ ವಿ ವಯಂ ರುಹೇಮ** ಎಂದರೆ, ಎಲೈ ವನಸ್ಪತಿಯೇ, ನೂರಾರು ಮತ್ತು ಸಾವಿರಾರು (ಸ್ಥಳಗಳಲ್ಲಿ) ಚಿಗರುಗಳಿಂದ ಕೂಡಿ ಬೆಳಿ ಎಂದು ಹೇಳಿರುವುದು ವನಸ್ಪತಿಯಾದ ವೃಕ್ಷಕ್ಕೆ ಅನ್ವಯಿಸುವುದಾಗಿರುವುದು. ಋ. ಸಂ. ೧೮-೭೦-೧೦ ನೇ ಋಕ್ಕಿನಲ್ಲಿ **ವನಸ್ಪತೇ ರಶನಯಾ ನಿಯೂಯ** ಎಲೈ ವನಸ್ಪತಿಯೇ, ಪಶುವನ್ನು ಕಟ್ಟುವ ಹಗ್ಗದಿಂದ ಕಟ್ಟಿ ಎಂದು ಹೇಳಿರುವುದು ವನಸ್ಪತಿ ಶಬ್ದಕ್ಕೆ ಯೂಪಸ್ತಂಭವೆಂಬ ಅರ್ಥವನ್ನು ಪುಷ್ಟೀಕರಿಸುವುದು. ಆದುದರಿಂದ ವನಸ್ಪತಿಯೆಂದರೆ ಯೂಪಸ್ತಂಭವೆಂದೇ ಅರ್ಥವು. ಅಗ್ನಿಯೆಂದು ಪರೋಕ್ಷಾರ್ಥವು.

ವನಸ್ಪತಿಯ ಸ್ವರೂಪವೇನೆಂಬುದನ್ನು ಬಹಳ ವಿಮರ್ಶೆಮಾಡಿ ತಿಳಿಯಬೇಕು. ಈ ಪದದ ಆಧಾರದ ಮೇಲೆ ಕೆಲವು ಆಧುನಿಕರಾದ ಪಾಶ್ಚಾತ್ಯ ವಿದ್ವಾಂಸರು ವೇದಕಾಲದಲ್ಲಿ ಹಿಂಸಾತ್ಮಕವಾದ ಪಶುಯಾಗವು ರೂಢಿಯಾಗಿದ್ದು **ಆಪ್ರೀ** ಸೂಕ್ತಗಳು ಅಂತಹ ಯಾಗಕ್ಕೆ ಸಂಬಂಧಿಸಿದ ಪ್ರಯಾಜ ಮಂತ್ರಗಳೆಂದು ತೀರ್ಮಾನಕ್ಕೆ ಬಂದಿದ್ದಾರೆ.

ಸ್ಥೂಲವಾದ ದೃಷ್ಟಿಯಿಂದ ನೋಡಿದರೆ **ವನಸ್ಪತಿ**ಯೆಂದರೆ ಯಾಗಪಶುವನ್ನು ಕಟ್ಟತಕ್ಕ ಯೂಪಸ್ತಂಭವೆಂದಾಗುತ್ತದೆ. ಆದರೆ ಇದು ಯಜ್ಞಪಶುವನ್ನು ಕಟ್ಟುವ ಸ್ಥಂಭವೇ ಅಲ್ಲವೇ ಎಂಬ ವಿಷಯದಲ್ಲಿ ಶ್ರುತಿವಾಕ್ಯಗಳನ್ನು ಗಮನಿಸಿ ಅನಂತರ ಅವುಗಳ ಆಧಾರದ ಮೇಲೆ **ವನಸ್ಪತಿಯ** ಸ್ವರೂಪವನ್ನು ನಿಷ್ಕರ್ಷಿಸಬಹುದು.

**ಹೋತಾ ಯಕ್ಷದ್ವನಸ್ಪತಿಮಭಿಹಿ ಪಿಷ್ಟತಮಯಾ ರಭಿಷ್ಠಯಾ ರಶನಯಾಧಿತ ... **

**ಹೋತಾ ಯಕ್ಷದ್ವನಸ್ಪತಿಮುಪಾವಸ್ರಕ್ಷದ್ಧಿಯೋ ಜೋಷ್ಟಾರಗ್ಂ ಶಶಮಂ ನರಃ । ಸ್ವದಾತ್ಸ್ವಧಿತಿರ್ಋತುಥಾದ್ಯ ದೇವೋ ದೇವೇಭ್ಯೋ ಹವ್ಯಾವಾಡ್ವೇತ್ವಾಜ್ಯಸ್ಯ ಹೋತರ್ಯಜ ।**
(ತೈ. ಬ್ರಾ. ೩-೬ ೨-೨)

ಎಂಬ ಮಂತ್ರಕ್ಕೆ ಭಾಷ್ಯವು ಈ ರೀತಿಯಿದೆ. **ವನಸ್ಪತಿಂ ಯೂಪಾಧಾರಭೂತಂ ದಶಮಪ್ರಯಾಜದೇವತಾತ್ಮಕಮಗ್ನಿಂ ದೈವ್ಯೋ ಹೋತಾ ಯಜತು**-ವನಸ್ಪತಿಯು ಯೂಪಕ್ಕೆ ಆಧಾರಭೂತವಾದದ್ದು ಮತ್ತು ಹತ್ತನೆಯ ಪ್ರಯಾಜ ದೇವತಾತ್ಮಕನಾದ ಅಗ್ನಿಯು. ಇವನನ್ನುದ್ದೇಶಿಸಿ ಹೋತೃವು ಯಾಗಮಾಡಲೆಂದು **ವನಸ್ಪತಿಗೆ ಧಿಯೋ, ಜೋಷ್ಟಾ, ಸ್ವದಾತ್, ಸ್ವಧಿತಿಃ, ದೇವೇಭ್ಯಃ, ಋತುಥಾ ಹವ್ಯವಾಟ್**, ಯಜ್ಞಸ್ಯ **ಆಯುಃ ಕಲ್ಪಮಾನಃ** ಎಂಬ ವಿಶೇಷಣಗಳಿವೆ. ಈ ವಿಶೇಷಣಗಳಲ್ಲಿ **ಧಿಯೋ ಜೋಷ್ಟಾ** ಎಂಬುದಕ್ಕೆ **ಬುದ್ಧೇಃ ಪ್ರೀಣಯಿತಾರಂ**। ಬುದ್ಧಿಗೆ

ಹರ್ಷದಾಯಕನೆಂದೂ, **ಸ್ವಧಿತಿಃ**—ಸ್ವಧಿತಿಯಿಂದ (ವಜ್ರಾಯುಧ ಅಥವಾ) ದಿವ್ಯಶಸ್ತ್ರದಿಂದ ಸಂಸ್ಕೃತವಾದದ್ದೆಂದೂ, **ಋತುಥಾ-ಋತೌ ವಿಹಿತೇ ಕಾಲವಿಶೇಷೇ ಅದ್ಯ ಅಸ್ಮಿಕನ್ಕರ್ಮಣಿ ಸ್ವದಾದಸ್ಮಾಭಿರ್ದೀಯಮಾನಂ ಹವಿಃ ಸ್ವದಯತು । ಕಿಂಚ ದೇವೋ ವನಸ್ಪತಿರ್ದೇವೇಭ್ಯೋ ದೇವಾರ್ಥಂ ಹವ್ಯಾ ಹವೀಂಷಿ ಹವ್ಯವಾಡ್ವಹತು ।** ಈ ಯಾಗಕಾಲದಲ್ಲಿ ನಮ್ಮಿಂದ ಅರ್ಪಿತಗಳಾದ ಹವಿಸ್ಸುಗಳನ್ನು ದೇವತೆಗಳಿಗೆ ಅರ್ಪಿಸಲಿ ಎಂದು ಮಂತ್ರಾರ್ಥ. ಮತ್ತು **ಯಜ್ಞಸ್ಯ ಆಯುಃಕಲ್ಪಮಾನಃ** ಎಂಬ ವಿಶೇಷಣದಿಂದ ಯಜ್ಞದ ಆಯುಸ್ಸನ್ನು ಬೆಳೆಸುವವನು ಎಂದರ್ಥ. ಈ ವಿಧವಾದ ವಿಶೇಷಣಗಳಿಂದ **ಪ್ರೈಷಸೂಕ್ತದಲ್ಲಿ ಅಗ್ನಿಗೂ, ವನಸ್ಪತಿಗೂ** ತಾದಾತ್ಮ್ಯವನ್ನು ಹೇಳಿದೆ. ಐತರೇಯ ಬ್ರಾಹ್ಮಣದಲ್ಲಿ **ಪ್ರಾಣೋ ವೈ ವನಸ್ಪತಿಃ** (೨-೪) ಎಂಬ ವಾಕ್ಯದಿಂದ ನಿರ್ದೇಶಿಸಿದೆ. ನಿರುಕ್ತಕಾರರು ಮೊದಲು ವನಸ್ಪತಿಶಬ್ದದ ನಿರ್ವಚನವನ್ನು ಹೇಳಿ ಅನಂತರ **ಆಪ್ರೀ** ಸೂಕ್ತದಲ್ಲಿ ವನಸ್ಪತಿಯ ಸ್ವರೂಪವೇನೆಂಬುದನ್ನು ತಿಳಿಸಿದ್ದಾರೆ. ಋ. ಸಂ. ೨-೩೭-೩ ನೇ ಋಕ್ಕನ್ನು ವಿವರಿಸುವಾಗ ಅದರಲ್ಲಿರುವ ವನಸ್ಪತಿಶಬ್ದದ ನಿರ್ವಚನವನ್ನು ತೋರಿಸುತ್ತಾ (ನಿ. ೮-೩)**ವನಾನಾಂ ಪಾತಾ ವಾ ಪಾಲಯಿತಾ ವಾ। ವನಂ ವನೋತೇಃ।** ವನಗಳಿಗೆ ಪ್ರಭುವಾಗಿರುವುದರಿಂದಾಗಲಿ, ಅಥವಾ ಪಾಲಕನಾದುದರಿಂದಾಗಲಿ. ವನಸ್ಪತಿಯೆಂದು (ಅಗ್ನಿಯು) ಪ್ರಸಿದ್ಧನಾಗಿದ್ದಾನೆ ಮತ್ತು **ಷಡೆ** ಎಂಬರ್ಥವನ್ನು ಕೊಡತಕ್ಕ **ವನ್** ಧಾತುವಿನಿಂದ ನಿಷ್ಪನ್ನವಾಗಿದೆ ಎಂದು ಹೇಳಿ ಅನಂತರ **ಆಪ್ರೀ** ಸೂಕ್ತದ ದೇವತೆಗಳ ಸ್ವರೂಪವನ್ನು ಚರ್ಚಿಸುವಾಗ (ನಿ. ೮-೧೮) **ತತ್ ಕೋ ವನಸ್ಪತಿಃ ಯೂಪ ಇತಿ ಕಾತ್ಥಕ್ಯಃ ಅಗ್ನಿರಿತಿ ಶಾಕಪೂಣಿಃ** ಎಂದು ಎರಡು ಅಭಿಪ್ರಾಯಗಳನ್ನು ತಿಳಿಸಿ ಕಾತ್ಥಕ್ಯರ ಮತವನ್ನು ಸಮರ್ಥಿಸುವುದಕ್ಕೆ,

**ಅಂಜಂತಿ ತ್ವಾಮಧ್ವರೇ ದೇವಯಂತೋ ವನಸ್ಪತೇ ಮಧುನಾ ದೈವ್ಯೇನ ।**
**ಯದೂರ್ಧ್ವಸ್ತಿಷ್ಠಾ ದ್ರವಿಣೇಹ ಧತ್ತಾದ್ಯದ್ವಾ ಕ್ಷಯೋ ಮಾತುರಸ್ಯಾ ಉಪಸ್ಥೇ ॥**
(ಋ. ಸಂ. ೩-೮-೧)

ಎಂಬ ಋಕ್ಕನ್ನುದಹರಿಸಿದ್ದಾರೆ. ಈ ಋಕ್ಕಿನಲ್ಲಿ ಸಾಯಣರು **ವನಸ್ಪತಿ** ಯನ್ನು ಯೂಪವೆಂದೇ ಸಂಬೋಧಿಸಿದ್ದಾರೆ. ಅನಂತರ ನಿರುಕ್ತಕಾರರು **ಶಾಕಪೂಣಿಯ** ಮತವನ್ನು ಸಮರ್ಥಿಸಲು,

**ವನಸ್ಪತೇ ರಶನಯಾ ನಿಯೂಯಾ ದೇವಾನಾಂ ಪಾಥ ಉಪ ವಕ್ಷಿ ವಿದ್ವಾನ್ ।**
**ಸ್ವದಾತಿ ದೇವಃ ಕೃಣವದ್ಧವೀಂಷ್ಯವತಾಂ ದ್ಯಾವಾಪೃಥಿವೀಹವಂ ಮೇ ॥**
(ಋ. ಸಂ. ೧೦-೭೦-೧೦)

ಎಂಬ ಋಕ್ಕನ್ನುದಹರಿಸಿದ್ದಾರೆ. ಇಲ್ಲಿಯೂ ಸಾಯಣರು ಯೂಪವೆಂದೇ ಅರ್ಥಮಾಡಿದ್ದಾರೆ. ಆದರೆ ಯೂಪಾಂತರ್ಗತವಾದ **ಅಗ್ನಿ**ಯೆಂದು ನಿರುಕ್ತಕಾರರ ಮತ. ದುರ್ಗಾಚಾರ್ಯರು ನಿರುಕ್ತದಲ್ಲಿ ಈ ಋಕ್ಕನ್ನು ವಿವರಿಸುತ್ತಾ **ಏವಮಗ್ನಿರ್ವನಸ್ಪತಿಃ। ಯತ್।ಪುನರೇತದುಕ್ತಂ ಯೂಪಾಂಜನೀಯಾಯಾಂ ಯೂಪೇ ವನಸ್ಪತಿಶಬ್ದಃ ಇತಿ। ಅತ್ರ ಬ್ರೂಮಃ—ಅಗ್ನಿರೇವಾಸೌ ಯೂಪಾಂತರ್ಗತೋ ಯೂಪಾತ್ಮನಾ ವರ್ತಮಾನೋ ಯೂಪಾಂಜನೀಯಾಯಾಂ ವನಸ್ಪತಿಶಬ್ದೇನೋಚ್ಯತೇ ।** ಇಲ್ಲಿ ವನಸ್ಪತಿಯೆಂದರೆ **ಯೂಪಾಂತರ್ಗತನಾದ ಅಗ್ನಿಯೇ** ಹೊರತು ಬೇರೆಯಲ್ಲ ಎಂಬುದನ್ನು ಸ್ಥಿರಪಡಿಸಿದ್ದಾರೆ. ಬೃಹದ್ದೇವತಾಕಾರರು,

**ವನಸ್ಪತಿಂ ತು ಯಂ ಪ್ರಾಹುರಯಂ ಸೋಽಗ್ನಿರ್ವನಸ್ಪತಿಃ ।**
**ಅಯಂ ವನಾನಾಂ ಹಿ ಪತಿಃ ಪಾತಾ ಪಾಲಯತೀತಿ ವಾ ॥**
**ಅಗ್ನಿರ್ಗೃತ್ಸಮದೇನಾಯಂ ವನಸ್ಪತಿರಿತೀಳಿತಃ ।**
**ಮಂದಸ್ವೇತ್ಯಸ್ಯ ಸೂಕ್ತಸ್ಯ ಷಳ್ಳಚಸ್ಯ ತೃತೀಯಯಾ ॥**

**ಯೂಪವತ್ತ್ರರುವಚ್ಚೈವ ಸ್ತುತಿರ್ಯಾಸ್ಯ ಪ್ರಸಂಗಜಾ ।**
**ಸರ್ವೇಷಾಂಜಂತಿಸೂಕ್ತೇನ ತೃತೀಯೋ ಸಾ ತು ಮಂಡಲೇ ॥**
(ಬೃ. ದೇ. ೩-೨೬ ರಿಂದ ೨೮)

ಎಂಬ ವಾಕ್ಯಗಳಿಂದ ಋ. ಸಂ. ೮-೧೩-೧೧ ನೇ ಋಕ್ಕಿನಲ್ಲಿ ಉದ್ದೇಶಿಸಿರುವ ಆಪ್ರೀದೇವತೆಯ ಸ್ವರೂಪವನ್ನು ಚರ್ಚಿಸಿ ಇಲ್ಲಿ ವನಸ್ಪತಿಯೆಂದರೆ **ಪಾರ್ಥಿವಾಗ್ನಿಯೆಂದೂ** ಮತ್ತು ಋ. ಸಂ. ೨-೩೭-೨ ನೇ ಋಕ್ಕಿನಲ್ಲಿ **ಗೃತ್ಸಮದನೂ** ವನಸ್ಪತಿಶಬ್ದದಿಂದ ಈ ಪಾರ್ಥಿವಾಗ್ನಿಯನ್ನೇ ಉದ್ದೇಶಿಸಿದನೆಂದೂ, ಮೂರನೆಯ ಮಂಡಲದಲ್ಲಿ ಮಾತ್ರ ಕೆಲವು ಋಕ್ಕುಗಳಲ್ಲಿ **ಯೂಪ** ಅಥವಾ **ವೃಕ್ಷ**ವೆಂದರ್ಥವೆಂದೂ ಅದೂ ಸಹ ಪ್ರಸಂಗಜವೆಂದೂ ತಿಳಿಸಿದ್ದಾರೆ. ಇದೇ ಅಲ್ಲದೇ,

**ಇಹೈಷ ಪವಮಾನೋಽಗ್ನಿರ್ಮಧ್ಯಮೋಽಗ್ನಿರ್ವನಸ್ಪತಿಃ ।**
**ಅಮುಷ್ಮಿನ್ನೇವ ವಿಪ್ರೈಸ್ತು ಲೋಕೇಽಗ್ನಿಶ್ಶುಚಿರುಚ್ಯತೇ ॥**
(ಬೃ. ದೇ. ೧-೬೬)

ಎಂಬಲ್ಲಿ **ವನಸ್ಪತಿ**ಯೆಂದರೆ ಮಧ್ಯಮಲೋಕದ **ಅಗ್ನಿ**ಯೆಂದು ತೋರಿಸಿ ಋಕ್ಸಂಹಿತೆಯಲ್ಲಿ ಕೆಲವೆಡೆಗಳಲ್ಲಿ ಬಿಟ್ಟು ಉಳಿದ ನಾನಾ ಕಡೆಗಳಲ್ಲಿ ಈ ಪದವು **ಅಗ್ನಿಯನ್ನೇ** ನಿರ್ದೇಶಿಸಿರುವುದರಲ್ಲಿ ಸಂಶಯವೇ ಇಲ್ಲವೆಂಬುದನ್ನು ನಿಷ್ಕರ್ಷ ವಾಗಿ ಹೇಳಿದ್ದಾರೆ.

ಸಂಹಿತಾಪಾಠಃ

ಆಗ್ನೇ ವಹ ವರುಣಮಿಷ್ಟಯೇ ನ ಇಂದ್ರಂ ದಿವೋ ಮರುತೋ ಅಂತರಿಕ್ಷಾತ್ ।
ಸೀದಂತು ಬರ್ಹಿರ್ವಿಶ್ವ ಆ ಯಜತ್ರಾಃ ಸ್ವಾಹಾ ದೇವಾ ಅಮೃತಾ ಮಾದಯಂತಾಂ ॥ ೧೧ ॥

ಪದಪಾಠಃ

ಆ । ಅಗ್ನೇ । ವಹ । ವರುಣಂ । ಇಷ್ಟಯೇ । ನಃ । ಇಂದ್ರಂ । ದಿವಃ । ಮರುತಃ । ಅಂತರಿಕ್ಷಾತ್ ।
ಸೀದಂತು । ಬರ್ಹಿಃ । ವಿಶ್ವೇ । ಆ । ಯಜತ್ರಾಃ । ಸ್ವಾಹಾ । ದೇವಾಃ । ಅಮೃತಾಃ । ಮಾದಯಂತಾಂ ॥

ಸಾಯಣಭಾಷ್ಯಂ

**ಹೇ ಅಗ್ನೇ ತ್ವಂ ನೋಽಸ್ಮಾಕಮಿಷ್ಟಯೇ ಯಾಗಾಯೇಂದ್ರಂ ವರುಣಂ ಚ ಮರುತಶ್ಚ ದಿವೋ ದ್ಯುಲೋಕಾದಂತರಿಕ್ಷಾಚ್ಚಾಸ್ಮದೀಯಂ ಯಜ್ಞಮಾ ವಹ । ಪ್ರಾಪಯ । ಆಗತಾಸ್ತೇ ಯಜತ್ರಾ ಯಷ್ಟವ್ಯಾ ವಿಶ್ವೇ ಸರ್ವೇ ದೇವಾ ಬರ್ಹಿರಾ ಸೀದಂತು । ತತ್ರಾಸನ್ನಾ ಭವಂತು । ತತೋಽಮೃತಾ ಮರಣಧರ್ಮರಹಿತಾ ದೇವಾಃ ಸ್ವಾಹಾ ಸ್ವಾಹಾಕಾರೇಣ ದತ್ತೈರ್ಹವಿರ್ಭಿರ್ಮಾದಯಂತಾಂ । ಆತ್ಮಾನಂ ಮಾದಯಂತು ॥**

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ | **ನಃ**—ನಮ್ಮ | **ಇಷ್ಟಯೇ**—ಯಾಗಕ್ಕಾಗಿ | **ಇಂದ್ರಂ**—ಇಂದ್ರನನ್ನೂ | **ವರುಣಂ**—ವರುಣನನ್ನೂ | **ಮರುತಃ**—ಮರುದ್ದೇವತೆಗಳನ್ನೂ ಸಹ | **ದಿವಃ**—(ಅವರ ವಾಸಸ್ಥಾನವಾದ) ಸ್ವರ್ಗಲೋಕದಿಂದಲೂ | **ಅಂತರಿಕ್ಷಾತ್**—ಅಂತರಿಕ್ಷದಿಂದಲೂ | **ಆ ವಹ**—ನಮ್ಮ ಯಜ್ಞಭೂಮಿಗೆ ಕರೆದು ಕೊಂಡು ಬಾ | **ಅಮೃತಾಃ**—ಮರಣರಹಿತರಾದ | **ವಿಶ್ವೇದೇವಾಃ**—ಆ ಸಮಸ್ತ ದೇವತೆಗಳೂ | **ಬರ್ಹಿಃ**—ದರ್ಭಾಸನದಮೇಲೆ | **ಸೀದಂತು**—ಕುಳಿತುಕೊಳ್ಳಲಿ | ಮತ್ತು **ಸ್ವಾಹಾ**—ಸ್ವಾಹಾಕಾರಪೂರ್ವಕವಾಗಿ ನಾವು ಅರ್ಪಿಸುವ ಹವಿಸ್ಸಿನಿಂದ | **ಮಾದಯಂತಾಂ**—ತೃಪ್ತಿಯನ್ನು ಹೊಂದಲಿ.

ಭಾವಾರ್ಥ

ಎಲೈ ಅಗ್ನಿಯೇ, ನೀನು ನಮ್ಮ ಯಜ್ಞದಲ್ಲಿ ಭಾಗವಹಿಸುವುದಕ್ಕಾಗಿ ಇಂದ್ರನನ್ನೂ, ವರುಣನನ್ನೂ, ಮರುದ್ದೇವತೆಗಳನ್ನೂ ಅವರ ಸ್ವಸ್ಥಾನವಾದ ಸ್ವರ್ಗಾಂತರಿಕ್ಷಲೋಕಗಳಿಂದ ನಮ್ಮ ಯಜ್ಞಭೂಮಿಗೆ ಕರೆದುಕೊಂಡು ಬಾ. ಮರಣರಹಿತರಾದ ಆ ಸಕಲ ದೇವತೆಗಳು ದರ್ಭಾಸನದ ಮೇಲೆ ಕುಳಿತು ಸ್ವಾಹಾಕಾರಪೂರ್ವಕವಾಗಿ ನಾವು ಅರ್ಪಿಸುವ ಹವಿಸ್ಸಿನಿಂದ ಸಂತೋಷಪಡಲಿ.

## English Translation

Bring, Agni, to our sactifice Varnna and Indra from heaven, and the Maruts from the firmament; may the adorable universal gods sit down on the sacred grass, and may the immortal deities rejoice in (the oblation presented with) the Swaha.

ವಿಶೇಷವಿಷಯಗಳು

**ಸ್ವಾಹಾ** ಎಂಬ ಶಬ್ದಕ್ಕೆ ಯಾಸ್ಕರ ವಿವರಣೆಯು ಈರೀತಿ ಇದೆ—

**ಸ್ವಾಹಾಕೃತಯಃ | ಸ್ವಾಹೇತ್ಯೇತತ್ ಸು ಆಹೇತಿ ವಾ | ಸ್ವಾ ವಾಗಾಹೇತಿ ವಾ | ಸ್ವಂ ಪ್ರಾಹೇತಿ ವಾ | ಸ್ವಾಹುತಂ ಹವಿರ್ಜುಹೋತೀತಿ ವಾ ||**

(ನಿ. ೮–೨೧)

**ಸ್ವಾಹಾ** ಎಂಬ ಶಬ್ದಕ್ಕೆ ನಾಲ್ಕುವಿಧವಾದ ಅವಯವಾರ್ಥಗಳಿರುವವು—

(೧) **ಸು ಆಹೇತಿ ವಾ** | ಸು—ಚೆನ್ನಾಗಿ ಆಹ—ಹೇಳುತ್ತಾನೆ ಅಥವಾ ಉಚ್ಚರಿಸುತ್ತಾನೆ. ಸ್ವಾಹಾಂತ್ಯವಾದ ಮಂತ್ರವನ್ನು ಚೆನ್ನಾಗಿ ಅಥವಾ ಸ್ಪಷ್ಟವಾಗಿ ಉಚ್ಚರಿಸುವುದರಿಂದ ಇದಕ್ಕೆ ಸ್ವಾಹಾ ಎಂದು ಹೆಸರು.

(೨) **ಸ್ವಾ ವಾಗಾಹೇತಿ ವಾ** | ಸ್ವಾ—ಸ್ವಕೀಯವಾದ, ವಾಕ್—ವಾಕ್ಯವು **ತಂ ಸ್ವಾ ವಾಗಭ್ಯವದಜ್ಜುಹುಧೀತಿ | ತತ್ಸ್ವಾಹಾಕಾರಸ್ಯ ಜನ್ಮ |** ಎಂದು ಶ್ರುತಿವಾಕ್ಯವಿರುವುದು. ಎಂದರೆ ಹೋಮಮಾಡುವಾಗ ವೇದಮಂತ್ರವಾದ ಋಕ್ಕಿನ ಅಂತ್ಯದಲ್ಲಿ ಸ್ವಾಹಾ ಎಂಬ ಶಬ್ದವನ್ನು ಹೋಮಮಾಡುವವನು ತಾನೇ ಸೇರಿಸಿ ಹೇಳುವುದರಿಂದ ಇವಕ್ಕೆ ಸ್ವಾಹಾ ಎಂದು ಹೆಸರು.

(೩) **ಸ್ವಂ ಪ್ರಾಹೇತಿ ವಾ** | (ಯಜಮಾನನು ಅಥವಾ ಋತ್ವಿಜನು) ಸ್ವಂ—ತನ್ನ ಹವಿಸ್ಸನ್ನು, ಆಹ—ಹೋಮಮಾಡುವೆನೆಂದು ಹೇಳುವನು. ಆದ್ದರಿಂದ ಸ್ವಾಹಾ ಎಂದು ಹೆಸರು.

(೪) **ಸ್ವಾಹುತಂ ಹವಿರ್ಜುಹೋತೀತಿ ವಾ** । ತಾನು ಹೋಮಮಾಡುವ ಹವಿಸ್ಸನ್ನು ಸ್ವಾಹಾ ಎಂಬ ಶಬ್ದೋಚ್ಚಾರಣೆ ಮೂಲಕ ಹೋಮಮಾಡುವುದರಿಂದ ಎಂದರೆ ಅಗ್ನಿಯಲ್ಲಿ ಹವಿಃಪ್ರದಾನಮಾಡುವುದರಿಂದ ಸ್ವಾಹಾ ಎಂದು ಹೆಸರು.

ಎಂದು ನಾಲ್ಕುವಿಧ ಅರ್ಥವಿವರಣೆಯನ್ನು ಮಾಡಿ ಉದಾಹರಣೆಗಾಗಿ ಈ ಋಕ್ಕನ್ನು ಕೊಟ್ಟಿರುವರು.

**ಸದ್ಯೋ ಜಾತೋ ವ್ಯಮಿಮೀತ ಯಜ್ಞಮಗ್ನಿರ್ದೇವಾನಾಮಭವತ್ಪುರೋಗಾಃ ।**
**ಅಸ್ಯ ಹೋತುಃ ಪ್ರದಿಶ್ಯೃತಸ್ಯ ವಾಚಿ ಸ್ವಾಹಾಕೃತಂ ಹವಿರದಂತು ದೇವಾಃ ॥**
(ಋ. ಸಂ. ೧೦-೧೧೦-೧೧)

ಇದರ ಮುಖ್ಯಾರ್ಥವು— ಈಗತಾನೇ ಉತ್ಪನ್ನವಾದ (ಎಂದರೆ ಯಜ್ಞದಲ್ಲಿ ಈಗ ಪ್ರತಿಷ್ಠಿಸಲ್ಪಟ್ಟಿರುವ) ಅಗ್ನಿಯು ದೇವತೆಗಳ ಮುಂದೆ ಕುಳಿತು ಹೋತೃವಿನ ಕರ್ತವ್ಯವನ್ನು ಎಂದರೆ ದೇವತೆಗಳನ್ನು ಆಹ್ವಾನಮಾಡುವ ಕಾರ್ಯವನ್ನು ನೆರವೇರಿಸುತ್ತಾ ಯಜ್ಞವನ್ನು ನಿರ್ವಹಿಸುವನು. ಇಂತಹ ಹೋತೃವು ಪೂರ್ವದಿಕ್ಕಿನಲ್ಲಿ ಇದ್ದು ಸಮರ್ಪಿಸುವ, ಸ್ವಾಹಾಕಾರ ಶಬ್ದಪೂರ್ವಕವಾಗಿ ಹೋಮಮಾಡುವ ಹವಿಸ್ಸನ್ನು ದೇವತೆಗಳು ಭಕ್ಷಿಸಲಿ ಎಂದು. ಆದುದರಿಂದ ಸ್ವಾಹಾ ಎಂದರೆ ಯಜ್ಞಾರ್ಥವಾಗಿ ವಿಧಿಪೂರ್ವಕವಾಗಿ ಪ್ರತಿಷ್ಠಿತವಾದ ಅಗ್ನಿಯಲ್ಲಿ ದೇವತೆಗಳ ಪ್ರೀತ್ಯರ್ಥವಾಗಿ ಹವಿಸ್ಸನ್ನು ಹೋಮಮಾಡುವಾಗ ಮಂತ್ರಾಂತ್ಯದಲ್ಲಿ ಉಚ್ಚರಿಸುವ ಶಬ್ದಕ್ಕೆ ಸ್ವಾಹಾ ಎಂದು ಹೆಸರು ಎಂದಭಿಪ್ರಾಯವು.

ಕೆಲವು ಆಪ್ರೀಸೂಕ್ತಗಳಲ್ಲಿ **ಸ್ವಾಹಾಕೃತಯಃ** ಎಂದು ಬಹುವಚನಶಬ್ದಪ್ರಯೋಗವಿರುವುದು. ಈ ಸೂಕ್ತದಲ್ಲಿರುವ ಹನ್ನೊಂದು ದೇವತೆಗಳಿಗೆ ಹೋಮಮಾಡುವಾಗ ಉಪಯೋಗಿಸುವ ಹನ್ನೊಂದು ಪ್ರಯಾಜಮಂತ್ರಗಳಿಗೂ ಸ್ವಾಹಾಕಾರವನ್ನು ಸೇರಿಸಿ ಪಠಿಸುವುದರಿಂದ **ಸ್ವಾಹಾಕೃತಯಃ** ಎಂದು ಬಹುವಚನವನ್ನು ಪ್ರಯೋಗಿಸಲಾಗಿದೆ.

ಪುರಾಣಾದಿಗಳಲ್ಲಿ ಸ್ವಾಹಾ ಎಂಬ ಬೇರೆ ಅರ್ಥದಲ್ಲಿ ಉಪಯೋಗಿಸಲ್ಪಡುವುದು. ಅಂಗಿರಾಋಷಿಯ ಪುತ್ರನಾದ ಬೃಹಸ್ಪತಿಯ ಮಗಳಿಗೆ ಸ್ವಾಹಾ ಎಂದು ಮಹಾಭಾರತದಲ್ಲಿ ಹೇಳಿರುವುದು. ಪುರಾಣಗಳಲ್ಲಿ ಸ್ವಾಹಾದೇವಿಯು ದಕ್ಷಪ್ರಜಾಪತಿಯ ಮಗಳೆಂದೂ, ಅಗ್ನಿಯ ಪತ್ನಿಯೆಂದೂ ಹೇಳಿರುವುದು

**ಸ್ವಾಹಾ ಇತ್ಯೇವಂಪೂರ್ವಾ ಕೃತಿಃ ಕರಣಮುಚ್ಚಾರಣಂ ಯಕ್ಷ್ಯಮಾಣದೇವತಾನಾಂ ತಾಃ ಸ್ವಾಹಾಕೃತಯಃ । ತದ್ವಂತಿ ಹವ್ಯಾನಿ ॥** ಆಹುತ್ಯರ್ಪಣಕ್ಕೆ ಪಠಿಸತಕ್ಕ ಸ್ವಾಹಾ ಎಂಬ ಶಬ್ದದೊಡನೆ ಕೂಡಿದ ಹವ್ಯಗಳೆಂದು **ಹವ್ಯಾನಿ** ಎಂಬ ಪದಕ್ಕೆ ವಿಶೇಷಣವಾಗಿದೆ. ಆಪ್ರೀಸೂಕ್ತಗಳ ಕೊನೆಯ ಋಕ್ಕುಗಳಲ್ಲಿ ಮುಖ್ಯವಾಗಿ ಪಠಿಸಿರತಕ್ಕ ಪದವಾಗಿದೆ. ಕೆಲವು ಋಕ್ಕುಗಳಲ್ಲಿ ಕ್ರಿಯಾವಿಶೇಷಣವಾಗಿಯೂ ಇದೆ. ಎಂದರೆ, ೧-೧೩-೧೨ ನೆಯ ಋಕ್ಕಿನಲ್ಲಿ **ಸ್ವಾಹಾ ಕೃಣೋತನ** ಎಂದೂ, ೧-೧೪೨-೧೨ ನೇ ಋಕ್ಕಿನಲ್ಲಿ **ಸ್ವಾಹಾ ಕರ್ತನ** ಎಂದೂ, ೩-೪-೧೧; ೭-೨-೧೧; ೧೦-೭೦-೧೧ ನೇ ಋಕ್ಕುಗಳಲ್ಲಿ ಕರಣಾರ್ಥದಲ್ಲಿಯೂ ೨-೩-೧೧ ರಲ್ಲಿ ಹವ್ಯಕ್ಕೆ ವಿಶೇಷಣವಾಗಿಯೂ, ೧೦-೧೧೦-೧೧ ರಲ್ಲಿ **ಹವಿಃ** ಎಂಬುದಕ್ಕೆ ವಿಶೇಷಣವಾಗಿಯೂ ಇದೆ.

ಈ ಪದದ ವಿವರಣೆಯನ್ನು ಹೇಳುವಾಗ ಈ ಪದದಿಂದ ದೇವಾತ್ಮಕವಾದ ಸ್ವಾಹಾಕೃತಿಯನ್ನು ನಿರ್ದೇಶಿಸಿದೆಯೆಂದು ಕೆಲವರೂ, ಈ ಪದದಿಂದ ಅಗ್ನಿಯು ನಿರ್ದೇಶಿಸಲ್ಪಟ್ಟಿದ್ದಾನೆ ಎಂದೂ ಮತ್ತೆ ಕೆಲವರೂ ಅಭಿಪ್ರಾಯಪಟ್ಟಿದ್ದಾರೆ. ಪ್ರೈಷಸೂಕ್ತದಲ್ಲಿ,

**ಹೋತಾ ಯಕ್ಷದಗ್ನಿಗ್‌ಂ ಸ್ವಾಹಾಜ್ಯಸ್ಯ..............ವಿಯಂತು ಹೋತರ್ಯಜ ॥**
(ತೈ. ಬ್ರಾ. ೩-೬-೨-೨)

ಎಂದು ಪಠಿಸಿದೆ. ಇದಕ್ಕೆ ಸಾಯಣರು **ಯೋಽಯಂ ಸ್ವಾಹಾಶಬ್ದೋದಿತಃ ಉತ್ತಮಃಪ್ರಯಾಜದೇವಃ ಅಗ್ನಿಃ ತಂ ದೈವ್ಯೋ ಹೋತಾ ಯಜತು । ಸ್ವಾಹಾ** ಶಬ್ದದಿಂದ ಹನ್ನೊಂದನೆಯ ಪ್ರಯಾಜದೇವತೆಯಾದ ಅಗ್ನಿಯನ್ನು ಉದ್ದೇಶಿಸಿದೆ ಎಂದು ವಿವರಿಸಿದ್ದಾರೆ. ನಿರುಕ್ತಕಾರರು ಹೇಳಿರುವ ನಾಲ್ಕುವಿಧ ಅರ್ಥವಿವರಣೆಯನ್ನು ಹಿಂದೆಯೇ ಹೇಳಿದೆ. ಐತರೇಯಬ್ರಾಹ್ಮಣದಲ್ಲಿ—

**ಸ್ವಾಹಾಕೃತೀರ್ಯಜತಿ ಪ್ರತಿಷ್ಠಾ ವೈ ಸ್ವಾಹಾಕೃತಯಃ ಪ್ರತಿಷ್ಠಾಯಾಮೇವ ತದ್ಯಜ್ಞಮಂತತಃ ಪ್ರತಿಷ್ಠಾಪಯತಿ ॥**

(ಐ. ಬ್ರಾ. ೨-೪)

ಸ್ವಾಹಾಕೃತಿಯಿಂದ ಆಹುತಿಯು ಸಮಾಪ್ತವಾಗಿರುವುದರಿಂದ ಯಾಗಕ್ಕೆಲ್ಲಾ ಅದೇ ಉಪಷ್ಟಂಭಕವಾಗಿರುವುದು ಮತ್ತು ಯಜ್ಞವನ್ನು ಸರಿಯಾದ ಆಧಾರದ ಮೇಲೆ ನಿಲ್ಲಿಸುವುದು ಎಂದು ವಿವರಿಸಿದೆ. ಬೃಹದ್ದೇವತೆಯಲ್ಲಿ—

**ಸ್ವಾಹಾಕೃತಯೋಽನೇಕಾಶ್ಚ ವಿದುಷಾಂ ಏತಯೋಽಭವನ್ ।**
**ತತ್ಸರ್ವಂ ತ್ವಯಮೇವಾಗ್ನಿರ್ಭವತೀತಿ ವಿನಿಶ್ಚಯಃ ॥**
**ಅಯಂ ಹಿ ಕರ್ತಾ ಸ್ವಾಹಾನಾಂ ಕೃತಿಸ್ತಾಸಾಮಿಹೈಕಜಾ ।**
**ಅಯಂ ಪ್ರಸೂರ್ಭೂತಿತಾನಾಂ ಸರ್ವೇಷಾಮಯಮವ್ಯಯಃ ॥**

(ಬೃ. ದೇ. ೩-೨೯, ೩೦)

**ಸ್ವಾಹಾಕೃತಿ** ಎಂಬ ದೇವತೆಯ ವಿಷಯದಲ್ಲಿ ವಿದ್ವಾಂಸರ ಮತಭೇದಗಳು (ಭೇದಾಭಿಪ್ರಾಯಗಳು) ಅನೇಕವಾಗಿವೆ. ಆದರೆ ಅವರಲ್ಲಿ ಎಷ್ಟೇ ಮತಭೇದವಿದ್ದರೂ ಈ **ಸ್ವಾಹಾಕೃತಿ** ಎಂಬ ದೇವತೆಯು ಅಗ್ನಿಯ ರೂಪವಿಶೇಷವೆಂಬ ವಿಷಯದಲ್ಲಿ ಮಾತ್ರ ಎಲ್ಲರ ಅಭಿಪ್ರಾಯವೂ ಒಂದೇ ಆಗಿರುವುದು. ಏಕೆಂದರೆ ಸ್ವಾಹಾಕಾರಗಳಿಗೆ (ಎಂದರೆ ಸ್ವಾಹಾ ಶಬ್ದಪೂರ್ವಕವಾಗಿ ಅರ್ಪಿಸುವ ಹವಿಸ್ಸುಗಳಿಗೆ ಅಥವಾ ಮಂತ್ರಗಳಿಗೆ) ಈ ಅಗ್ನಿಯೇ ಕರ್ತೃವು. ಈ ವಿಧವಾದ ಮಂತ್ರಗಳಿಗೆಲ್ಲಾ ಇವನೇ ಕರ್ತೃವು, ಮತ್ತು ದೇವತೆಯು; ಈ ಅಗ್ನಿಯೇ ಸಮಸ್ತ ಭೂತಗಳಿಗೂ (ಪ್ರಾಣಿಗಳಿಗೂ) ಉತ್ಪತ್ತಿಸ್ಥಾನನು, ಎಂದರೆ ಇವನಿಂದಲೇ ಸಕಲ ಪ್ರಾಣಿಗಳೂ ಉತ್ಪನ್ನವಾಗುವವು. ಸರ್ವಪ್ರಾಣಿಗಳಲ್ಲಿ ಇವನಿಗೆ ಮಾತ್ರ ನಾಶವಿಲ್ಲ ಎಂದರೆ ಇವನು ನಾಶರಹಿತನು ಎಂದು ಬೃಹದ್ದೇವತಾಕಾರರು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ.

ಸ್ವಾಹಾಕಾರಾತ್ಮಕವಾದ (ಕೆಲವು ಆಪ್ರೀಸೂಕ್ತಗಳ ಕೊನೆಯ) ಋಕ್ಕುಗಳಲ್ಲಿ ಪೂಷಾ, ಮರುತ್ತುಗಳು, ವಾಯು, ಸೂರ್ಯ, ಇಂದ್ರ, ವರುಣ ಇತ್ಯಾದಿ ದೇವತೆಗಳನ್ನೆಲ್ಲಾ ನಿರ್ದೇಶಿಸಲಾಗಿದೆ. ಎಲ್ಲರಿಗಿಂತಲೂ ಅಧಿಕವಾಗಿ,

**ಪುರೋಗಾ ಅಗ್ನಿರ್ದೇವಾನಾಂ ಗಾಯತ್ರೇಣ ಸಮಜ್ಯತೇ ।**
**ಸ್ವಾಹಾಕೃತೀಷು ರೋಚತೇ ॥**

(ಋ. ಸಂ. ೧-೧೮೮-೧೧)

**ಸದ್ಯೋ ಜಾತೋ ವ್ಯಮಿಮೀತ ಯಜ್ಞಮಗ್ನಿರ್ದೇವಾನಾಮಭವತ್ಪುರೋಗಾಃ ।**
**ಅಸ್ಯ ಹೋತುಃ ಪ್ರದಿಶ್ಯೃತಸ್ಯ ವಾಚಿ ಸ್ವಾಹಾಕೃತಂ ಹವಿರದಂತು ದೇವಾಃ ॥**

(ಋ. ಸಂ. ೧೦-೧೧೦-೧೧)

ಎಂಬ ಋಕ್ಕುಗಳಲ್ಲಿ ಅಗ್ನಿಯು ಉತ್ಪನ್ನನಾದ ಕಾಲದಿಂದಲೂ ದೇವತೆಗಳ ಪುರೋಗನೆಂದು (ಪುರೋಹಿತ) ಸ್ತುತಿಸಿದೆ ಮತ್ತು ಸ್ವಾಹಾಕೃತಿಯ ಪ್ರಭಾವವನ್ನು ವಿವರಿಸುತ್ತಾ,

**ಆ ಯಾಹ್ಯಗ್ನೇ ಸಮಿಧಾನೋ ಅರ್ವಾಙಿಂದ್ರೇಣ ದೇವೈಃ ಸರಥಂ ತುರೇಭಿಃ |**
**ಬರ್ಹಿರ್ನ ಆಸ್ತಾಮದಿತಿಃ ಸುಪುತ್ರಾ ಸ್ವಾಹಾ ದೇವಾ ಅಮೃತಾ ಮಾದಯಂತಾಂ ||**

(ಋ. ಸಂ. ೩-೪-೧೧)

**ಅಗ್ನೇ ವಹ ವರುಣಮಿಷ್ಟಯೇ ನ ಇಂದ್ರಂ ದಿವೋ ಮರುತೋ ಅಂತರಿಕ್ಷಾತ್ |**
**ಸೀದಂತು ಬರ್ಹಿರ್ವಿಶ್ವ ಆ ಯಜತ್ರಾಃ ಸ್ವಾಹಾ ದೇವಾ ಅಮೃತಾ ಮಾದಯಂತಾಂ ||**

(ಋ. ಸಂ. ೧೦-೭೦.೧೧)

ಎಂಬ ಋಕ್ಕುಗಳಲ್ಲಿ ಸ್ವಾಹಾ ಎಂಬ ಮಂತ್ರದಿಂದ (ಸ್ವಾಹಾಶಬ್ದದಿಂದ) ದೇವತೆಗಳು ಹರ್ಷಗೊಳ್ಳುವುದರಿಂದ ಯಜ್ಞದಲ್ಲಿ ಸ್ವಾಹಾಶಬ್ದಕ್ಕೆ ಇಷ್ಟು ದಿವ್ಯವಾದ ಸ್ಥಾನವಿದೆಯೆಂದು ಸೂಚಿಸಿದೆ.

---

# ಎಪ್ಪತ್ತೊಂದನೆಯ ಸೂಕ್ತ

## ಪೀಠಿಕೆ

ಈ ಸೂಕ್ತದಲ್ಲಿ ಜ್ಞಾನವೆಂಬ ದೇವತೆಯನ್ನು ಸ್ತುತಿಸಲಾಗಿದೆ. ಮನಸ್ಸಿನಲ್ಲಿ ಉತ್ಪನ್ನವಾಗುವ ಕೆಲವು ಭಾವನೆಗಳನ್ನೇ ದೇವತೆಗಳೆಂದು ಭಾವಿಸಿ ಅವುಗಳನ್ನು ಋಷಿಗಳು ಸ್ತೋತ್ರಮಾಡಿರುವ ಸಂದರ್ಭಗಳು ಕೆಲವಿವೆ. ಅವುಗಳಲ್ಲಿ ಜ್ಞಾನವೂ ಒಂದು. ಇದರಂತೆ ಮನ್ಯು (ಕೋಪ) ಎಂಬ ಭಾವನಾದೇವತೆಯನ್ನು ಇದೇ ಮಂಡಲದ ೮೩ ಮತ್ತು ೮೪ ನೇ ಸೂಕ್ತಗಳಲ್ಲಿಯೂ, ಶ್ರದ್ಧಾ ಎಂಬ ದೇವತೆಯನ್ನು ಇದೇ ಮಂಡಲದ ೧೫೧ ನೇ ಸೂಕ್ತದಲ್ಲಿಯೂ ಸ್ತುತಿಸಲಾಗಿದೆ. ಹಾಗೆಯೇ, ದಾನ, ತಪಸ್ಸು (ಧ್ಯಾನ) ಮೇಧಾ, ಪ್ರಜ್ಞಾ, ಕಾಮ, ಸತ್ಯ, ದಮ, ಶಮ, ಧರ್ಮ, ಯಜ್ಞ, ಮನಸ್ಸು, ಸಂವತ್ಸರ ಅಥವಾ ಕಾಲ, ಶಾಂತಿ, ಆನಂದ ಇತ್ಯಾದಿಗಳೂ ಭಾವನಾದೇವತೆಗಳೆಂದು ಪರಿಗಣಿಸಲ್ಪಟ್ಟಿವೆ. ಈ ಭಾವನಾದೇವತೆಗಳ ವಿವರಣೆಯನ್ನು ಉದಾಹರಣೆಗಳ ಸಹಿತವಾಗಿ ನಾವು ಋ. ಸಂ. ೨೯ ನೇ ಭಾಗದ 310-314 ನೇ ಪೇಜುಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ.

ಶೌನಕಮಹರ್ಷಿಪ್ರೋಕ್ತವಾದ ಬೃಹದ್ದೇವತಾ ಎಂಬ ಗ್ರಂಥದಲ್ಲಿ ಈ ಸೂಕ್ತದ ವಿಷಯದಲ್ಲಿ ೭ ನೇ ಅಧ್ಯಾಯದಲ್ಲಿ ಈರೀತಿ ಹೇಳಿದೆ—

**ಯಜ್ಜ್ಯೋತಿರಮೃತಂ ಬ್ರಹ್ಮ ಯದ್ಯೋಗಾತ್ಸಮುಪಾಶ್ನುತೇ |**
**ತಜ್ಜ್ಞಾನಮಭಿತುಷ್ಟಾವ ಸೂಕ್ತೇನಾಥ ಬೃಹಸ್ಪತಿಃ || ೧೦೯ ||**

ನಿತ್ಯವೂ ನಾಶರಹಿತವಾದುದೂ ಆದ ಯಾವ ಪರಂಜ್ಯೋತಿಯ ಧ್ಯಾನದಿಂದ ಯೋಗಿಯು (ಅಥವಾ ತಪಸ್ವಿಯಾದ ಪುರುಷನು) ಪರಬ್ರಹ್ಮ (ಪದವಿ) ವನ್ನು ಪಡೆಯುವನೋ ಅಂತಹ ಶ್ರೇಷ್ಠವಾದ ಜ್ಞಾನವನ್ನು ಬೃಹಸ್ಪತಿಯು ಈ ಸೂಕ್ತದಲ್ಲಿ ವರ್ಣಿಸಿ ಸ್ತುತಿಸಿದ್ದಾನೆ.

**ಜೀವನಾರ್ಥಂ ಪ್ರಯೋಗಸ್ತು ಮಂತ್ರಾಣಾಂ ಪ್ರತಿಷಿಧ್ಯತೇ |**
**ವೇದತತ್ತ್ವಾರ್ಥವಿಜ್ಞಾನಂ ಪ್ರಾಯೇಣಾತ್ರ ಹಿ ದೃಶ್ಯತೇ || ೧೧೦ ||**

ವೇದಮಂತ್ರಗಳನ್ನು ಪ್ರಯೋಗಮಾಡಿ ಎಂದರೆ ಉಪಯೋಗಿಸಿ ಅದರಿಂದ ಜೀವನವನ್ನು ನಡೆಸುವುದು ನಿಷೇಧಿಸಲ್ಪಟ್ಟಿದೆ. ಎಂದರೆ ಜೀವನಾರ್ಥವಾಗಿ ವೇದಮಂತ್ರಗಳನ್ನು ಯಾರೂ ಬಳಸಬಾರದು. ಈ ಸೂಕ್ತದಲ್ಲಿ ವೇದಗಳಲ್ಲಿ ಹೇಳಿರುವ ಪರತತ್ತ್ವವನ್ನೂ ಅದಕ್ಕೆ ಸಾಧನೋಪಾಯವಾದ ವಿಜ್ಞಾನವನ್ನೂ ವರ್ಣಿಸಿರುವುದು ಇಲ್ಲಿ ಕಂಡುಬರುತ್ತದೆ.

**ಆಚಾರ್ಯೈಃ ಕೇಚಿದಿತ್ಯಾಹುರತ್ರ ವಾಗ್ವಿದುಷಾಂ ಸ್ತವಃ ।**
**ಯಥಾಭಿರ್ನಿಂದ್ಯತೇಽತ್ರರ್ಗ್ಭಿಃ ಸೂಕ್ತೇಽನ್ಯಾಭಿರನರ್ಥವಿತ್ ॥೧೧೧॥**

ಈ ಸೂಕ್ತದ ಕೆಲವು ಋಕ್ಕುಗಳಲ್ಲಿ ವಾಕ್ಯಗಳ (ಮಂತ್ರಗಳ) ಸ್ವರೂಪವನ್ನು ತಿಳಿದವರ ಪ್ರಶಂಸೆಯೂ ಮತ್ತೆ ಕೆಲವು ಋಕ್ಕುಗಳಲ್ಲಿ ವೇದಾರ್ಥವನ್ನು ತಿಳಿಯದವರ ನಿಂದೆಯೂ ಉಕ್ತವಾಗಿದೆಯೆಂದು ಕೆಲವು ಆಚಾರ್ಯರು ಹೇಳುವರು.

**ಯಥೈತಾಮನ್ವವಿಂದಂತೆ ವಿದ್ವಾಂಸರ್ಷಿಗತಾಂ ಸತೀಂ ।**
**ಯಥಾ ಚ ವ್ಯಭಜನ್ಯಜ್ಞೇ ತದತ್ರೋಕ್ತಂ ತೃತೀಯಯಾ ॥೧೧೨॥**

ಋಷಿಗಳು ತಮ್ಮ ಜ್ಞಾನದೃಷ್ಟಿಯಿಂದ ಸಾಕ್ಷಾತ್ಕರಿಸಿದ ಈ ವಾಗ್ದೇವತೆಯ ಸ್ವರೂಪವನ್ನೂ ಮತ್ತು ಯಜ್ಞಕರ್ಮಗಳಲ್ಲಿ ಆ ದೇವತಾಸ್ವರೂಪವಾದ ಮಂತ್ರಗಳನ್ನೂ ಯಾವ ರೀತಿ ಕರ್ಮಕ್ಕನುಸಾರವಾಗಿ ವಿಭಾಗಮಾಡಿ ಉಪಯೋಗಿಸಿದರ ಎಂಬುದನ್ನು ವಿದ್ವಾಂಸನಾದ ವಿವೇಕಿಯು ತಿಳಿಯುತ್ತಾನೆ ಎಂಬ ವಿಷಯವು ಈ ಸೂಕ್ತದ ೩ ನೇ ಋಕ್ಕಿನಲ್ಲಿ ಉಕ್ತವಾಗಿದೆ.

**ಪ್ರಶಸ್ಯತೇ ದಶಮ್ಯಾ ತು ವಿದ್ವಾನುತ್ತಮಯಾ ತ್ವೃಚಾ ।**
**ಯಜ್ಞೇ ಮಹರ್ತ್ವಿಜಾಮಾಹ ವಿನಿಯೋಗಂ ಚ ಕರ್ಮಣಾಂ ॥೧೧೩॥**

ಆದರೆ ೧೦ ನೇ ಋಕ್ಕಿನಲ್ಲಿ ವಿವೇಕಿಯಾದ ವಿದ್ವಾಂಸನನ್ನು ಸ್ತುತಿಸಲಾಗಿದೆ. ಕೊನೆಯ ಋಕ್ಕಿನಲ್ಲಿ ನಾಲ್ಕುಜನ ಋತ್ವಿಕ್ಕುಗಳು ಯಜ್ಞದಲ್ಲಿ ನಿರ್ವಹಿಸಬೇಕಾದ ಕರ್ಮಗಳನ್ನೂ ಅವುಗಳ ವಿನಿಯೋಗವನ್ನೂ ಋಷಿಯು ವರ್ಣಿಸಿರುವನು.

ಈ ಸೂಕ್ತದ ವಿನಿಯೋಗದ ವಿಷಯದಲ್ಲಿ ಶೌನಕರು ಋಗ್ವಿಧಾನವೆಂಬ ಗ್ರಂಥದಲ್ಲಿ ಈ ರೀತಿ ಹೇಳಿದಾರೆ—

**ಬೃಹಸ್ಪತೇ ಪ್ರಥಮಮಿತಿ ನಿತ್ಯಂ ಜ್ಞಾನಸ್ತುತಿಂ ಜಪೇತ್ ।**
**ಜ್ಞಾನವಾನ್ ಭವತಿ ಶ್ರೀಮಾನನಂತಾಂ ವಿಂದತೇ ಶ್ರಿಯಂ ।**
**ಅಲಕ್ಷ್ಮೀನಾಶನಾರ್ಥಂ ತು ಪಯೋಭಕ್ಷೋ ಭವೇದ್ದ್ವಿಜಃ ॥**
(ಋಗ್ವಿಧಾನ ಅಧ್ಯಾಯ ೩. ಶ್ಲೋ. ೭೨-೭೩)

ಬೃಹಸ್ಪತೇ ಎಂಬ ಈ ಸೂಕ್ತವನ್ನು ಪ್ರತಿದಿವಸವೂ ಜಪಮಾಡುತ್ತಿದ್ದರೆ ಉತ್ತಮಜ್ಞಾನವೂ ಅತುಳೈಶ್ವರ್ಯವೂ ಲಭಿಸುವುದು. ಬ್ರಾಹ್ಮಣನಾದವನು ದಾರಿದ್ರ್ಯನಾಶನಾರ್ಥವಾಗಿ ಪ್ರತಿದಿನವೂ ಹಾಲನ್ನು ಮಾತ್ರ ಸೇವಿಸುತ್ತಾ ಈ ಸೂಕ್ತವನ್ನು ಜಪಮಾಡಬೇಕು. ಹಾಗೆ ಮಾಡಿದರೆ ದಾರಿದ್ರ್ಯನಾಶವಾಗಿ ಸಂಪತ್ಸಮೃದ್ಧಿಯುಂಟಾಗುವುದು.

### ಸಾಯಣಭಾಷ್ಯಂ

**ಬೃಹಸ್ಪತ ಇತ್ಯೇಕಾದಶರ್ಚಂ ತೃತೀಯಂ ಸೂಕ್ತಂ । ಅಂಗಿರಸಸ್ಯ ಬೃಹಸ್ಪತೇರಾರ್ಷಂ ನವಮೀ ಜಗತೀ ಶಿಷ್ಟಾ ದಶ ತ್ರಿಷ್ಟುಭಃ । ಅನೇನ ಸೂಕ್ತೇನರ್ಷಿಃ ಪರಮಪುರುಷಾರ್ಥಸಾಧನಂ ಪರಬ್ರಹ್ಮಜ್ಞಾನಂ ಸ್ತುತವಾನ್ । ಅತಸ್ತದ್ದೇವತ್ಯಮಿದಂ । ಉಕ್ತಂ ಹಿ ಬೃಹದ್ದೇವತಾಯಾಂ । ಸುಜ್ಯೋತಿಃ ಪರಮಂ ಬ್ರಹ್ಮ ಯದ್ಯೋಗಾತ್ ಸಮುಪಾಶ್ನುತೇ । ತಜ್ಜ್ಞಾನಮಭಿತುಷ್ಟಾವ ಸೂಕ್ತೇನಾಥ ಬೃಹಸ್ಪತಿಃ ।**

**ಬೃ. ೭-೧೦೮ ೪ | ಇತಿ | ಅನುಕ್ರಾಂತಂ ಚ | ಬೃಹಸ್ಪತೇ ಬೃಹಸ್ಪತಿರ್ಜ್ಞಾನಂ ತುಷ್ಟಾವ ನವಮೀ ಜಗತೀ || ಸೂಕ್ತವಿನಿಯೋಗೋ ಗತಃ | ದೇವಾಸುವಾಂ ಹವಿಃಷು ಬೃಹಸ್ಪತಿರ್ವಾಚಸ್ಪತಿರಿತ್ಯಸ್ಯ ಪ್ರಥಮಾನುವಾಕ್ಯಾ | ಸೂತ್ರಿತಂ ಚ | ಬೃಹಸ್ಪತೇ ಪ್ರಥಮಂ ವಾಚೋ ಅಗ್ರಂ ಹಂಸೈರಿವ ಸಖಿಭಿರ್ವಾವದದ್ಭಿಃ | ಆ. ೪ ೧೧ ಇತಿ ||**

**ಅನುವಾದವು—ಬೃಹಸ್ಪತೇ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಂಗಿರಸಪುತ್ರನಾದ ಬೃಹಸ್ಪತಿಯು ಋಷಿಯು; ಈ ಸೂಕ್ತದ ಒಂಭತ್ತನೆಯ ಋಕ್ಕು ಜಗತೀಛಂದಸ್ಕವು, ಉಳಿದ ಹತ್ತು ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಋಷಿಯು ಈ ಸೂಕ್ತದಲ್ಲಿ ಪರಮಪುರುಷಾರ್ಥಸಾಧನಭೂತವಾದ ಪರಬ್ರಹ್ಮಜ್ಞಾನವನ್ನು ಸ್ತುತಿಸಿರುವನು. ಆದ್ದರಿಂದ ಈ ಸೂಕ್ತಕ್ಕೆ ಜ್ಞಾನವೇ ದೇವತೆಯು. ಬೃಹದ್ದೇವತೆಯೆಂಬ ಗ್ರಂಥದಲ್ಲಿ ಶೌನಕಮಹರ್ಷಿಯು—**ಸುಜ್ಯೋತಿಃ ಪರಮಂ ಬ್ರಹ್ಮ ಯದ್ಯೋಗಾತ್ಸಮುಪಾಶ್ನುತೇ | ತಜ್ಜ್ಞಾನಮಭಿತುಷ್ಟಾವ ಸೂಕ್ತೇನಾಥ ಬೃಹಸ್ಪತಿಃ ||** (ಬೃ. ದೇ. ೭-೧೦೯) ಎಂದು ಹೇಳಿರುವರು ಎಂದರೆ ಯೋಗಾಭ್ಯಾಸದಿಂದ (ತಪಸ್ಸಿನಿಂದ ಪರಬ್ರಹ್ಮಸ್ವರೂಪವಾದ ಯಾವ ದಿವ್ಯಜ್ಯೋತಿಯನ್ನು ಸಾಕ್ಷಾತ್ಕರಿಸಿ ಯೋಗಿಯು ಬ್ರಹ್ಮಾನಂದವನ್ನನುಭವಿಸುವನೋ ಅಂತಹ ಬ್ರಹ್ಮಪ್ರಾಪ್ತಿಗೆ ಸಾಧಕವಾದ ಜ್ಞಾನವನ್ನು ಬೃಹಸ್ಪತಿಋಷಿಯು ಈ ಸೂಕ್ತದಲ್ಲಿ ಸ್ತುತಿಸಿರುವನು ಎಂದು ಹೇಳಿದಾರೆ. ಅನುಕ್ರಮಣಿಕೆಯಲ್ಲಿ—**ಬೃಹಸ್ಪತೇ ಬೃಹಸ್ಪತಿರ್ಜ್ಞಾನಂ ತುಷ್ಟಾವ ನವಮೀ ಜಗತೀ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ದೇವಸುವ ಎಂಬ ದೇವತೆಗಳನ್ನುದ್ದೇಶಿಸಿ ಮಾಡುವ ಎಂಟು ದೇವಸುವಹೋಮಗಳಲ್ಲಿ ಬೃಹಸ್ಪತಿ ವಾಚಸ್ಪತಿ ಎಂಬ ದೇವತೆಯನ್ನುದ್ದೇಶಿಸಿ ಹೋಮಮಾಡುವಾಗ ಈ ಸೂಕ್ತದ ಮೊದಲಯ ಋಕ್ಕನ್ನು ಅನುವಾಕ್ಯಾ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಬೃಹಸ್ಪತೇ ಪ್ರಥಮಂ ವಾಚೋ ಅಗ್ರಂ ಹಂಸೈರಿವ ಸಖಿಭಿರ್ವಾವದದ್ಭಿಃ** ಎಂಬ ಸೂತ್ರದಿಂದ (ಆ. ೪-೧೧) ವಿವೃತವಾಗಿರುವುದು.

## ಸೂಕ್ತ—೭೧

ಮಂಡಲ—೧೦ || ಅನುವಾಕ—೬ || ಸೂಕ್ತ—೭೧ ||
ಅಷ್ಟಕ—೮ || ಅಧ್ಯಾಯ—೨ || ವರ್ಗ—೨೩, ೨೪ ||
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ||
ಋಷಿಃ—ಬೃಹಸ್ಪತಿಃ ||
ದೇವತಾ—ಜ್ಞಾನಂ ||
ಛಂದಃ—೧-೮, ೧೦, ೧೧. ತ್ರಿಷ್ಟುಪ್ | ೯. ಜಗತೀ ||

ಸಂಹಿತಾಪಾಠಃ

ಬೃಹಸ್ಪತೇ ಪ್ರಥಮಂ ವಾಚೋ ಅಗ್ರಂ ಯತ್ಪ್ರೈರತ ನಾಮಧೇಯಂ ದಧಾನಾಃ |
ಯದೇಷಾಂ ಶ್ರೇಷ್ಠಂ ಯದರಿಪ್ರಮಾಸೀತ್ಪ್ರೇಣಾ ತದೇಷಾಂ ನಿಹಿತಂ ಗುಹಾವಿಃ || ೧ ||

ಪದಪಾಠಃ

ಬೃಹಸ್ಪತೇ । ಪ್ರಥಮಂ । ವಾಚಃ । ಅಗ್ರಂ । ಯತ್ । ಪ್ರ । ಐರತ । ನಾಮಽಧೇಯಂ । ದಧಾನಾಃ ।

ಯತ್ । ಏಷಾಂ । ಶ್ರೇಷ್ಠಂ । ಯತ್ । ಅರಿಪ್ರಂ । ಆಸೀತ್ । ಪ್ರೇಣಾ । ತತ್ । ಏಷಾಂ । ನಿಽಹಿತಂ ।

ಗುಹಾ । ಆವಿಃ ॥ ೧ ॥

ಸಾಯಣಭಾಷ್ಯಂ

ಬೃಹಸ್ಪತಿರನೇನ ಸೂಕ್ತೇನ ವಿದಿತವೇದಾರ್ಥನ್ಬಾಲಾನ್ದೃಷ್ಟ್ವಾ ಸ್ಮಯಮಾನಃ ಸ್ವಾತ್ಮಾನಂ ಸಂಬೋಧ್ಯಾಹ । ಹೇ ಬೃಹಸ್ಪತೇಽಂತರಾತ್ಮನ್ ಪ್ರಥಮಮುತ್ಪತ್ತ್ಯನಂತರಮಿತರವಾಗುಚ್ಚಾರಣಾತ್ಪ್ರಾಗೇವ ನಾಮಧೇಯಂ ನಾಮ ದಧಾನಾಃ ಪದಾರ್ಥೇಷು ನಿದಧಾನಾ ಬಾಲಾ ಯತ್ಪ್ರೈರತ ಪ್ರೇರಿತವಂತಃ ತದ್ವಾಚೋಽಗ್ರಂ ಭವತಿ । ಯತ್ತತ ತಾತೇತ್ಯಾದಿಕಂ ವಾಕ್ಯಂ ಪೂರ್ವಮಭಿಧಾಯ ಪಶ್ಚಾದನ್ಯಾ ವಾಚೋ ವದಿಷ್ಯಂತಿ ಖಲು ತಸ್ಮಾದ್ವಾಚೋಽಗ್ರಂ । ಅಸ್ಯಾಂ ದಶಾಯಾಮವಸ್ಥಿತಾನ್ಬಾಲಾನ್ಪಶ್ಯ । ತಥೇದಾನೀಮೇಷಾಂ ಶ್ರೇಷ್ಠಂ ಪ್ರಶಸ್ಯತಮಂ ಯದ್ಯಚ್ಚಾರಿಪ್ರಂ ಪಾಪರಹಿತಂ ವೇದಾರ್ಥಜ್ಞಾನಮಾಸೀತ್ ಏಷಾಂ ತಜ್ಜ್ಞಾನಂ ಗುಹಾ ಗುಹಾಯಾಂ ನಿಹಿತಂ ಗೋಪ್ಯಂ ತತ್ಪ್ರೇಣಾ ॥ ಮಕಾರಲೋಪಶ್ಛಾಂದಸಃ ॥ ಪ್ರೇಮ್ಣಾವಿರ್ಭವತಿ । ವೇದಾಭ್ಯಾಸಕಾಲೇ ಸರಸ್ವತೀ ಸ್ವಾರ್ಥಮೇಭ್ಯಃ ಪ್ರಕಾಶಯತೀತ್ಯರ್ಥಃ । ಏವಂ ವಿಸ್ಮಯೋ ಬೃಹಸ್ಪತೇ ಪ್ರಥಮಂ ವಾಚೋ ಅಗ್ರಮಿತ್ಯಾದಿಕಮಾರಣ್ಯಕಮನುಸಂಧೇಯಂ । ಐ. ಆ. ೧-೩-೬ ॥

ಪ್ರತಿಪದಾರ್ಥ

ಬೃಹಸ್ಪತೇ—ಎಲೈ ಬೃಹಸ್ಪತಿಯೇ । **ಪ್ರಥಮಂ**—ಜಗತ್ತಿನಲ್ಲಿ ಆವಿರ್ಭಾವವನ್ನು ಹೊಂದಿದೊಡನೆಯೇ । **ನಾಮಧೇಯಂ**—ಪದಾರ್ಥಗಳ (ಅಥವಾ ಪುರುಷರ) ಹೆಸರನ್ನು । **ದಧಾನಾಃ**—ನಿರ್ದೇಶಿಸಿ ಯೋಜಿಸುತ್ತ । **ಯತ್**—ಯಾವ ಹೆಸರನ್ನು । **ಪ್ರೈರತ**—ಉಚ್ಚರಿಸುವರೋ ಅದು । **ವಾಚಃ**—ವಾಕ್ಕುಗಳಲ್ಲೆಲ್ಲ । **ಅಗ್ರಂ**—ಪೂರ್ವಭಾವಿಯಾಗಿರುತ್ತದೆ । **ಏಷಾಂ**—ಈ ವಾಕ್ಕುಗಳಲ್ಲಿ । **ಯತ್**—ಯಾವುದು । **ಶ್ರೇಷ್ಠಂ**—ಅತ್ಯುತ್ತಮವಾಗಿಯೂ । **ಅರಿಪ್ರಂ**—ಪಾಪರಹಿತವಾಗಿಯೂ । **ಆಸೀತ್**—ಇರುವುದೋ ಮತ್ತು । **ಏಷಾಂ**—ಇವುಗಳಲ್ಲಿ ಯಾವುದು । **ಗುಹಾ**—ರಹಸ್ಯಸ್ಥಾನದಲ್ಲಿ । **ನಿಹಿತಂ**—ಸ್ಥಾಪಿತವಾಗಿರುವುದೋ । **ತತ್**—ಅದನ್ನು । **ಪ್ರೇಣಾ**—ಅತ್ಯಂತ ಪ್ರೀತಿಯಿಂದ । **ಆವಿಃ**—ಸರಸ್ವತಿಯು ಪ್ರಕಾಶಪಡಿಸುತ್ತಾಳೆ.

ಭಾವಾರ್ಥ

ಎಲೈ ಬೃಹಸ್ಪತಿಯೇ, ಜಗತ್ತಿನಲ್ಲಿ ಆವಿರ್ಭಾವವನ್ನು ಹೊಂದಿದೊಡನೆಯೇ ಪದಾರ್ಥಗಳ ಅಥವಾ ಪುರುಷರ ಹೆಸರನ್ನು ನಿರ್ದೇಶಿಸಿ ಯೋಜಿಸುತ್ತ ಯಾವ ಹೆಸರನ್ನು ಉಚ್ಚರಿಸುವರೋ ಅದು ವಾಕ್ಕುಗಳಲ್ಲೆಲ್ಲ ಪೂರ್ವಭಾವಿಯಾಗಿರುತ್ತದೆ. ಯಾವುದು ಅತ್ಯುತ್ತಮವಾಗಿಯೂ, ಪಾಪರಹಿತವಾಗಿಯೂ ಇರುವುದೋ, ಮತ್ತು ಯಾವುದು ರಹಸ್ಯ ಸ್ಥಾನದಲ್ಲಿ ಸ್ಥಾಪಿತವಾಗಿರುವುದೋ ಅದನ್ನು ಸರಸ್ವತಿಯು ಅತ್ಯಂತ ಪ್ರೀತಿಯಿಂದ ಪ್ರಕಾಶಪಡಿಸುತ್ತಾಳೆ.

## English Translation

That, Brihaspati, is the best (part) of speech whieh those giving a name (to objects) first utter; that which was the best of those (words) and

free from defect, (Saraswati) reveals it though secretly implanted, by means of affection.

ಸಂಹಿತಾಪಾಠಃ

ಸಕ್ತುಮಿವ ತಿತಉನಾ ಪುನಂತೋ ಯತ್ರ ಧೀರಾ ಮನಸಾ ವಾಚಮಕ್ರತ ।
ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ ॥

ಪದಪಾಠಃ

ಸಕ್ತುಂಽಇವ । ತಿತಉನಾ । ಪುನಂತಃ । ಯತ್ರ । ಧೀರಾಃ । ಮನಸಾ । ವಾಚಂ । ಅಕ್ರತ ।
ಅತ್ರ । ಸಖಾಯಃ । ಸಖ್ಯಾನಿ । ಜಾನತೇ । ಭದ್ರಾ । ಏಷಾಂ । ಲಕ್ಷ್ಮೀಃ । ನಿಽಹಿತಾ । ಅಧಿ । ವಾಚಿ ॥೨॥

ಸಾಯಣಭಾಷ್ಯಂ

ತಿತಉನಾ । ಪರಿಪೂಯತೇಽನೇನೇತಿ । ಯದ್ವಾ । ತತಾ ವಿಸ್ತೃತಾ ಭೃಷ್ಟಯವಾ ಅತ್ರೇತಿ ತಿತಉಃ ॥ ತನೋತೇರ್ಡಉಃ ಸನ್ವಚ್ಚ । ಉ ೫-೫೨ । ಇತಿ ಡಉಪ್ರತ್ಯಯಃ । ಸನ್ವದ್ಭಾವಾದಿತ್ವಂ ॥ ಉಕ್ತನಿರ್ವಚನೇನ ಸೂರ್ಪೇಣ ಸಕ್ತುಮಿವ ಯಥಾ ಕಶ್ಚಿತ್ಸಕ್ತುಂ ದುರ್ಧಾನಂ ಪುನಾತಿ ತದ್ವತ್ ಪ್ರಕೃತಿತಃ ಪ್ರತ್ಯಯತಶ್ಚ ಶಬ್ದಾನುತ್ಪುನಂತೋ ಧೀರಾ ಧೀಮಂತೋ ವಿದ್ವಾಂಸೋ ಯತ್ರ ಯಸ್ಮಿನ್ಕಾಲೇ ವಿದ್ವತ್ಸಂಘೇ ವಾ ಮನಸಾ ಪ್ರಜ್ಞಾಯುಕ್ತೇನ ವಾಚಮಕ್ರತ ಅಕೃಷತ ಕುರ್ವಂತಿ ॥ ಕರೋತೇರ್ಲುಙಿ ರೂಪಂ ॥ ಅತ್ರ ತತ್ರ ಕಾಲೇ ಸಖಾಯಃ ಸಮಾನಖ್ಯಾನಾಃ ಶಾಸ್ತ್ರವಿಷಯಜ್ಞಾನಾಸ್ತೇ ಸಖ್ಯಾನಿ ತೇಷು ಭವಾನಿ ಜ್ಞಾನಾನಿ ಜಾನತೇ । ಜಾನಂತಿ । ಯದ್ವಾ । ಸಖಾಯೋ ವಾಚಾ ಬದ್ಧಸಖ್ಯಾಸ್ತೇ ತಸ್ಯಾಸ್ತಸ್ಯಾ ವಾಚಃ ಸಖ್ಯಾನಿ ಜಾನಂತಿ । ವಾಕ್ಯಯುಕ್ತಾನಭ್ಯುದಯಾಂಲ್ಲಭಂತ ಇತ್ಯರ್ಥಃ । ತಸ್ಮಾದೇಷಾಂ ವಾಚಿ ಭದ್ರಾ ಕಲ್ಯಾಣೀ ನಿಹಿತಾ ಲಕ್ಷ್ಮೀರ್ಭವತಿ । ಅಧಿಃ ಸಪ್ತಮ್ಯರ್ಥದ್ಯೋತಕಃ ॥ ಅರ್ಥಜ್ಞಾನಂ ವಾಚಿ ಪಶ್ಯಾಮ ಇತ್ಯರ್ಥಃ । ತಿತಉ ಪರಿಪವನಂ ಭವತಿ ತತವದ್ವಾ ತುನ್ನವದ್ವಾ ತಿಲಮಾತ್ರತುನ್ನಮಿತಿ ವಾ ಸಕ್ತುಮಿವ ತಿತಉನೇತ್ಯಾದಿ ನಿರುಕ್ತಮನುಸಂಧೇಯಂ । ನಿ. ೪-೧೦ ॥

ಪ್ರತಿಪದಾರ್ಥ

**ತಿತಉನಾ**—ಮಂದರಿಯಿಂದ । **ಸಕ್ತು ಮಿವ ಪುನಂತಃ**—ಯವಧಾನ್ಯವನ್ನು ಶೋಧಿಸುವಂತೆ । **ಧೀರಾಃ**—ಪ್ರಾಜ್ಞರು । **ಯತ್ರ**—ಯಾವಾಗ । **ಮನಸಾ**—ಪ್ರಜ್ಞಾಯುಕ್ತವಾದ ತಮ್ಮ ಮನಸ್ಸಿನಿಂದ । **ವಾಚಂ**—ವಾಕ್ಕನ್ನು । **ಅಕ್ರತ**—ಸಂಸ್ಕರಿಸುವರೋ । **ಅತ್ರ**—ಆಗ ।. **ಸಖಾಯಃ**—ಮಿತ್ರರು । **ಸಖ್ಯಾನಿ**—ತಮ್ಮ ಮಿತ್ರತ್ವವನ್ನು । **ಜಾನತೇ**—ಅರಿಯುತ್ತಾರೆ । **ಏಷಾಂ**—ಇವರ । **ವಾಚಿ ಅಧಿ**—ವಾಕ್ಕಿನಲ್ಲಿ । **ಭದ್ರಾ**—ಕಲ್ಯಾಣಾತ್ಮಕವಾದ । **ಲಕ್ಷ್ಮೀಃ**—ಶ್ರೇಯಸ್ಸು । **ನಿಹಿತಾ**—ಸ್ಥಾಪಿತವಾಗಿದೆ.

ಭಾವಾರ್ಥ

ಮಂದರಿಯಿಂದ ಯವಧಾನ್ಯವನ್ನು ಶೋಧಿಸುವಂತೆ ಪ್ರಾಜ್ಞರು ಯಾವಾಗ ಪ್ರಜ್ಞಾಯುಕ್ತವಾದ ತಮ್ಮ ಮನಸ್ಸಿನಿಂದ ವಾಕ್ಕನ್ನು ಸಂಸ್ಕರಿಸುವರೋ ಆಗ ಮಿತ್ರರು ತಮ್ಮ ಮಿತ್ರತ್ವವನ್ನು ಅರಿಯುತ್ತಾರೆ. ಇವರ ವಾಕ್ಕಿನಲ್ಲಿ ಕಲ್ಯಾಣಾತ್ಮಕವಾದ ಶ್ರೇಯಸ್ಸು ಸ್ಥಾಪಿತವಾಗಿದೆ.

## English Translation

When the wise create Speech throngh wisdom winnowihg (it) as (men winnow) barley with a sieve, then friends know friendship; good fortune is placed upon their word.

ವಿಶೇಷವಿಷಯಗಳು

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ತಿತಉ । ತಿತಉ ಪರಿಪವನಂ ಭವತಿ ತತವದ್ವಾ ತುನ್ನವದ್ವಾ ತಿಲಮಾತ್ರತುನ್ನಮಿತಿ ವಾ ।** (ನಿ. ೪-೯)

**ತಿತಉ** ಎಂದರೆ ಮೊರ (sieve) ಎಂದರ್ಥವು. ಇದನ್ನು ಧಾನ್ಯಾದಿಗಳನ್ನು ಅಥವಾ ಹಿಟ್ಟನ್ನು ಶೋಧಿಸುವುದಕ್ಕಾಗಿ ಉಪಯೋಗಿಸುವರು. ಈ ಹೆಸರು ಇದಕ್ಕೆ ಹೇಗೆ ಬಂತೆಂದರೆ—**ತತವದ್ವಾ । ತತೇನ ಚರ್ಮಣಾ ನದ್ಧಂ ।** ಈ ಮೊರದಿಯನ್ನು ಯಾವುದಾದರೂ ತಗಡಿನಿಂದ ಮಾಡಿ ಅದರಲ್ಲಿ ಸಣ್ಣಸಣ್ಣ ರಂಧ್ರಗಳಿದ್ದು ಆ ತಗಡಿನ ಸುತ್ತಲೂ ಚರ್ಮದ ಕಟ್ಟನ್ನು ಹಾಕಿರುವುದರಿಂದ ಮೊರದಿಗೆ **ತಿತಉ** ಎಂದು ಹೆಸರು. ಅಥವಾ **ತುನ್ನವದ್ವಾ-ತುನ್ನೈರ್ವಾ ಛಿದ್ರೈಃ ತದ್ವತ್ ।** ಈ ಮೊರದಿಯಲ್ಲಿ ಸಣ್ಣ ಸಣ್ಣ ಛಿದ್ರಗಳು ಅಥವಾ ರಂಧ್ರಗಳಿರುವುದರಿಂದ ಮೊರದಿಗೆ **ತಿತಉ** ಎಂದು ಹೆಸರು; ಅಥವಾ **ತಿಲಮಾತ್ರತುನ್ನಮಿತಿ ವಾ-ತಿಲಮಾತ್ರಾಣಿ ವಾ ತುನ್ನಾನಿ ತಸ್ಮಿನ್ನಿತಿ ।** ಇದರಲ್ಲಿರುವ ರಂಧ್ರಗಳು ಎಳ್ಳಿನಂತೆ ಬಹಳ ಸಣ್ಣದಾಗಿರುವುದರಿಂದ ಮೊರದಿಗೆ **ತಿತಉ** ಎಂದು ಹೆಸರು.

**ಸಕ್ತುಮಿವ ಪರಿಪವನೇನ ಪುನಂತಃ । ಸಕ್ತುಃ ಸಚತೇರ್ದುರ್ಧಾವೋ ಭವತಿ । ಕಸತೇರ್ವಾ ಸ್ಯಾದ್ವಿಪರೀತಸ್ಯ ವಿಕಸಿತೋ ಭವತಿ ಯತ್ರ ಧೀರಾ ಮನಸಾ ವಾಚಮಕೃಷತ ಪ್ರಜ್ಞಾನಂ । ಧೀರಾಃ ಪ್ರಜ್ಞಾನವಂತೋ ಧ್ಯಾನವಂತಃ । ತತ್ರ ಸಖಾಯಃ ಸಖ್ಯಾನಿ ಸಂಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ ಇತಿ । ಭದ್ರಂ ಭಗೇನ ವ್ಯಾಖ್ಯಾತಂ ಭಜನೀಯಂ ಭೂತಾನಾಮಭಿದ್ರವಣೀಯಂ ಭವದ್ರಮಯತೀತಿ ವಾ ಭಾಜನವದ್ವಾ । ಲಕ್ಷ್ಮೀರ್ಲಾಭಾದ್ವಾ ಲಕ್ಷಣಾದ್ವಾ (ಲಪ್ಸ್ಯನಾದ್ವಾ) ಲಾಂಛನಾದ್ವಾ ಲಷತೇರ್ವಾ ಸ್ಯಾತ್ ಪ್ರೇಪ್ಸಾಕರ್ಮಣೋ ಲಗ್ಯತೇರ್ವಾ ಸ್ಯಾದಾಶ್ಲೇಷಕರ್ಮಣೋ ಲಜ್ಜತೇರ್ವಾ ಸ್ಯಾದಶ್ಲಾಘಾಕರ್ಮಣಃ ॥** (ನಿ. ೪-೯)

(ಯವ) ಧಾನ್ಯವನ್ನು ಮೊರದಿಯಲ್ಲಿ ಹಾಕಿ ಶೋಧಿಸಿ ಶುದ್ಧಿಮಾಡುವಂತೆ; ಸಕ್ತುಶಬ್ದವು ಅಂಟಿಕೊಳ್ಳು ಎಂಬ ಅರ್ಥವಿರುವ ಸಚತಿ ಧಾತುವಿನಿಂದ ನಿಷ್ಪನ್ನವಾಗಿದೆ. ಏಕೆಂದರೆ ಇದನ್ನು ತೊಳೆಯುವಾಗ ಇದು ಒಂದಕ್ಕೊಂದು ಅಂಟಿಕೊಂಡು ತೊಳೆಯುವುದು ಕಷ್ಟವಾಗುವುದು. ಅಥವಾ ಇದನ್ನು ತೊಳೆದಾಗ ಇದು ವಿಕಸಿತವಾಗುವುದು ಅಥವಾ ಅರಳುವುದು. ಆದ್ದರಿಂದ ವಿ-ಕಸಿತ ಶಬ್ದದ ಅಕ್ಷರಗಳನ್ನು ಹಿಂದುಮುಂದು ಮಾಡುವುದರಿಂದ ಸಕ್ತುಶಬ್ದವು ನಿಷ್ಪನ್ನವಾಗಿದೆಯೆಂದೂ ಹೇಳಬಹುದು. ಮೊರದಿಯಿಂದ ಧಾನ್ಯವನ್ನು ಶೋಧಿಸಿ ಶುದ್ಧಿಮಾಡುವಂತೆ ಬುದ್ಧಿವಂತರೂ, ಜ್ಞಾನವಂತರೂ ಆದ ಜನರು ತಾವು ಆಡುವ ಮಾತನ್ನು (ಅಥವಾ ಮಂತ್ರವನ್ನು) ಮನಸ್ಸಿನಲ್ಲಿ ಚೆನ್ನಾಗಿ ಆಲೋಚಿಸಿ ಮಾತನಾಡುವರು. ಧಾನ್ಯವು ಮೊರದಿಯಲ್ಲಿ ಹಾಕುವುದರಿಂದ ಶುದ್ಧಿಯಾಗುವುದು. ಅದರಂತೆ ಬುದ್ಧಿವಂತರಾದ ಮನುಷ್ಯರ ಮನಸ್ಸೆಂಬ ಮೊರದಿಯಲ್ಲಿ ವಾಕ್ಯವೆಂಬ ಧಾನ್ಯವನ್ನು ಹಾಕಿ ಧ್ಯಾನವೆಂಬ ಚಲನೆಯಿಂದ ವಾಕ್ಯವು ಶುದ್ಧವಾಗುವುದು ಎಂದರೆ ಬುದ್ಧಿವಂತರು ಆಡುವ ಮಾತುಗಳು ಚೆನ್ನಾಗಿ ಆಲೋಚಿಸಲ್ಪಟ್ಟು ಆಡಲ್ಪಟ್ಟಿರುವುದರಿಂದ

ಯುಕ್ತಿಯುಕ್ತವಾಗಿಯೂ, ಅರ್ಥಗರ್ಭಿತವಾಗಿಯೂ ಇರುವವು ಎಂದಭಿಪ್ರಾಯವು. **ಸಖಾಯಃ ಸಖ್ಯಾನಿ ಸಂಜಾನತೇ** ಎಂದರೆ ಈ ವಿಧವಾದ ಸುಸಂಸ್ಕೃತವಾಕ್ಯಗಳಿಂದ ಜನರು ಪರಸ್ಪರಸ್ನೇಹಭಾವವನ್ನು ಅರಿಯುತ್ತಾರೆ. **ಸಖಾಯಃ** ಎಂದರೆ **ಸಮಾನಖ್ಯಾನಾಃ** ಒಂದೇ ವಿಧವಾದ ಅಭಿಪ್ರಾಯ ಅಥವಾ ಸಂಸ್ಕಾರವುಳ್ಳವರಿಗೆ **ಸಖಾಯಃ**— ಸ್ನೇಹಿತರು ಎಂದರ್ಥವು. ಎಂದರೆ ಸ್ನೇಹಿತರ ಮಾತುಗಳು, ಕಾರ್ಯಗಳು ಪರಸ್ಪರ ವಿರೋಧವಾಗಿಲ್ಲದೆ ಒಬ್ಬರಿಗೊಬ್ಬರು ಸಹಕರಿಸುವವು. **ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ ।** ಇಂತಹ ಸ್ನೇಹಿತರ ವಾಕ್ಯಗಳಲ್ಲಿ ಉತ್ತಮ ಅಥವಾ ಮಂಗಳಕರವಾದ ಚಿಹ್ನೆಯು (ಲಕ್ಷಣವು) ಕಂಡುಬರುವುದು. ಭದ್ರಶಬ್ದಕ್ಕೆ ಭಗವೆಂದರ್ಥವು. **ಭಗೋ ಭಜತೇಃ** (ನಿ. ೧-೭) ಭದ್ರಶಬ್ದಕ್ಕೆ ಹೊಂದಲ್ಪಡುವ, ಮಂಗಳಕರವಾದ ಅಥವಾ ಪ್ರಾಣಿಗಳಿಂದ ಅನುಭವಿಸಲ್ಪಡುವ ಎಂದರ್ಥವು. ಅಥವಾ ಇದರ ಉತ್ಪತ್ತಿಯೂ ಸುಖಾನುಭವಕ್ಕೆ ಕಾರಣಭೂತವಾಗಿರುವುದು ಅಥವಾ ಇದು ಇದನ್ನು ಹೊಂದಲು ಅರ್ಹರಾದವರನ್ನು ಹೋಗಿ ಸೇರುವುದು. ಅರ್ಹರಾದವರಿಗೆ ಮಾತ್ರ ಇದು ಸಿಕ್ಕುವುದು. **ಲಕ್ಷ್ಮೀಃ** ಎಂಬ ಶಬ್ದಕ್ಕೆ ಈ ಹೆಸರು **ಲಾಭಾದ್ವಾ** (ಹೊಂದುವುದು) ಎಂಬರ್ಥದಿಂದಾಗಲೀ, **ಲಕ್ಷಣಾದ್ವಾ** ನಿರ್ದೇಶಿಸುವುದರಿಂದಾಗಲೀ **ಲಪ್ಸ್ಯನಾತ್** ಅಪೇಕ್ಷಿಸುವುದರಿಂದಾಗಲೀ, **ಲಾಂಛನಾದ್ವಾ** ಚಿಹ್ನೆಯನ್ನು ಸೂಚಿಸುವುದರಿಂದಲಾಗಲೀ, ಅಥವಾ ಅಪೇಕ್ಷಿಸು ಎಂಬರ್ಥವುಳ್ಳ **ಲಷ್** ಧಾತುವಿನಿಂದಾಗಲೀ ಅಥವಾ ಹಿಂಜರಿ ಎಂಬರ್ಥವುಳ್ಳ **ಲಜ್** ಧಾತುವಿನಿಂದಾಗಲೀ ನಿಷ್ಪನ್ನವಾಗಬಹುದು ಅಥವಾ **ಅಶ್ಲಾಘಾಕರ್ಮಣಃ** ಸ್ವಯಂಪ್ರಶಂಸೆಮಾಡಿಕೊಳ್ಳದ ಎಂಬರ್ಥವಿರುವ **ಲಜ್ಜತಿ** ಧಾತುವಿನಿಂದ ನಿಷ್ಪನ್ನವಾಗಬಹುದು.

ಮೇಲಿನ ನಿರುಕ್ತವಚನದಲ್ಲಿ ತಿತಉನಾ, ಸಕ್ತುಂ, ಸಖಾಯಃ, ಭದ್ರಾ, ಲಕ್ಷ್ಮೀ ಎಂಬ ಶಬ್ದಗಳ ರೂಪನಿಷ್ಪತ್ತಿ ಅಥವಾ ಅವಯವಾರ್ಥವು ಉಕ್ತವಾಗಿದೆ. ಧಾನ್ಯವನ್ನು ಮಂದರಿಯಲ್ಲಿ ಜಾಲಾಡಿದರೆ ಹೊಟ್ಟು, ಕಲ್ಲು ಮುಂತಾದ ಅನವಶ್ಯಕವಸ್ತುಗಳು ಹೋಗಿ ಶುದ್ಧವಾದ ಧಾನ್ಯವು ದೊರೆಯುವುದು. ಇದರಂತೆ ಬುದ್ಧಿವಂತರಾದ ಪುರುಷರು ಮಾತನಾಡುವಾಗ ಮೊದಲು ತಮ್ಮ ಮನಸ್ಸಿನಲ್ಲಿ ಧ್ಯಾನಮಾಡಿ ಎಂದರೆ ಚೆನ್ನಾಗಿ ಆಲೋಚಿಸಿ ಸುಸಂಸ್ಕೃತವಾದ ಮತ್ತು ಅರ್ಥಗರ್ಭಿತವಾದ ಮಾತುಗಳನ್ನೇ ಆಡುವರು. ಇವರ ವಾಕ್ಯಗಳು ಇದರಂತೆ ಬುದ್ಧಿವಂತರಾದ ಜನರಲ್ಲಿ ಪರಿಣಾಮವನ್ನುಂಟುಮಾಡಿ ಪರಸ್ಪರ ಸ್ನೇಹಭಾವವನ್ನು ವೃದ್ಧಿಪಡಿಸುವವು ಮತ್ತು ಇವರ ವಾಕ್ಯಗಳಲ್ಲಿ ಉತ್ತಮವೂ ಮಂಗಳಕರವೂ ಆದ ಲಕ್ಷಣಗಳು ಅಥವಾ ಚಿಹ್ನೆಗಳು ಕಂಡುಬರುವವು ಎಂದು ನಿರುಕ್ತವಚನದ ಮುಖ್ಯಾಭಿಪ್ರಾಯವು.

ಸಂಹಿತಾಪಾಠಃ

**ಯಜ್ಞೇನ ವಾಚಃ ಪದವೀಯಮಾಯನ್ತಾಮನ್ವವಿಂದನ್ನೃಷಿಷು ಪ್ರವಿಷ್ಟಾಂ ।**
**ತಾಮಾಭೃತ್ಯಾ ವ್ಯದಧುಃ ಪುರುತ್ರಾ ತಾಂ ಸಪ್ತ ರೇಭಾ ಅಭಿ ಸಂ ನವಂತೇ ॥**

ಪದಪಾಠಃ

**ಯಜ್ಞೇನ । ವಾಚಃ । ಪದಽವೀಯಂ । ಆಯನ್ । ತಾಂ । ಅನು । ಅವಿಂದನ್ । ಋಷಿಷು । ಪ್ರಽವಿಷ್ಟಾಂ ।**
**ತಾಂ । ಆಽಭೃತ್ಯ । ವಿ । ಅದಧುಃ । ಪುರುಽತ್ರಾ । ತಾಂ । ಸಪ್ತ । ರೇಭಾಃ । ಅಭಿ । ಸಂ । ನವಂತೇ ॥ ೩ ॥**

ಸಾಯಣಭಾಷ್ಯಂ

**ವಾಗ್ದೇವತ್ಯಪಶೋರ್ವಪಾಪುರೋಡಾಶಯೋರ್ಯಜ್ಞೇನ ವಾಚ ಇತ್ಯಾದಿಕೇ ದ್ವೇ ಕ್ರಮೇಣ ಯಾಜ್ಯೇ । ಸೂತ್ರಿತಂ ಚ । ಯಜ್ಞೇನ ವಾಚಃ ಪದವೀಯಮಾಯನ್ನಿತಿ ದ್ವೇ ದೇವೀಂ ವಾಚಮಜನಯಂತ ದೇವಾಃ । ಆ. ೩-೮ । ಇತಿ ॥**

**ವಿದಿತಾರ್ಥಾ ಧೀರಾಃ ಪದವೀಯಂ॥ ವೇತೇರಚೋಯತ್ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದ್ಗುಣಾಭಾವಃ ॥ ಪದೇನ ಯಾತವ್ಯಃ ಪಂಥಾಃ ಪದವೀಯಃ । ತಂ ವಾಚೋ ಮಾರ್ಗಂ ಯಜ್ಞೇನಾಯನ್ । ಪ್ರಾಪ್ತವಂತಃ । ಋಷಿಷ್ವತೀಂದ್ರಿಯಾರ್ಥದರ್ಶಿಷು ಪ್ರವಿಷ್ಟಾಂ ತಾಂ ವಾಚಮನ್ವವಿಂದನ್ । ಅಲಭಂತ । ಅನಂತರಂ ತಾಂ ವಾಚಮಾಭೃತ್ಯಾಹೃತ್ಯ ಪುರುತ್ರಾ ಬಹುಷು ದೇಶೇಷು ವ್ಯದಧುಃ । ವ್ಯಕಾರ್ಷುಃ । ಸರ್ವಾನ್ಮನುಷ್ಯಾನಧ್ಯಾಪಯಾಮಾಸುರಿತ್ಯರ್ಥಃ । ಏತಾದೃಶೀಂ ವಾಚಂ ರೇಭಾಃ ಶಬ್ದಾಯಮಾನಾಃ ಪಕ್ಷಿಣಃ ಪಕ್ಷಿರೂಪಾಣಿ ಗಾಯತ್ರ್ಯಾದೀನಿ ಸಪ್ತ ಛಂದಾಂಸ್ಯಭಿ ಸಂ ನವಂತೇ । ಅಭಿತಃ ಸಂಗಚ್ಛಂತೇ ॥**

ಪ್ರತಿಪದಾರ್ಥ

**ವಾಚಃ**—ವಾಕ್ಕಿನ । **ಪದವೀಯಂ**—ಮಾರ್ಗವನ್ನು । **ಯಜ್ಞೇನ**—ಯಜ್ಞದ ಮೂಲಕ । **ಆಯನ್**—(ವಿವೇಕಿಗಳು) ಹೊಂದಿದರು । **ಋಷಿಷು**—ಋಷಿಗಳಲ್ಲಿ । **ಪ್ರವಿಷ್ಟಾಂ**—ಸ್ಥಾಪಿತವಾದ । **ತಾಂ**—ಆ ವಾಕ್ತತ್ತ್ವವನ್ನು । **ಅನ್ವವಿಂದನ್**—ಪಡೆದರು । **ತಾಂ**—ಆ ವಾಕ್ತತ್ತ್ವವನ್ನು । **ಆಭೃತ್ಯ**—ಶೇಖರಿಸಿ । **ಪುರುತ್ರಾ**—ಅನೇಕ ಪ್ರದೇಶಗಳಲ್ಲಿ । **ವ್ಯದಧುಃ**—ಹಂಚಿ ಹರಡಿದರು । **ತಾಂ**—ಅದನ್ನು । **ರೇಭಾಃ**—ಶಬ್ದಕಾರಕಗಳಾದ । **ಸಪ್ತ**—ಗಾಯತ್ರ್ಯಾದಿ ಸಪ್ತಚ್ಛಂದಸ್ಸುಗಳೂ । **ಅಭಿ ಸಂ**—ಸುತ್ತುವರಿದು । **ನವಂತೇ**—ಒಟ್ಟಿಗೆ ಕೂಡಿಕೊಳ್ಳುತ್ತವೆ.

ಭಾವಾರ್ಥ

ವಾಕ್ತತ್ತ್ವದ ಮಾರ್ಗವನ್ನು ವಿವೇಕಿಗಳು ಯಜ್ಞದ ಮೂಲಕ ಹೊಂದಿದರು. ಋಷಿಗಳಲ್ಲಿ ಸ್ಥಾಪಿತವಾದ ಆ ವಾಕ್ತತ್ತ್ವವನ)್ನು ಅವರು ಪಡೆದರು. ಅದನ್ನು ಒಟ್ಟಿಗೆ ಸೇರಿಸಿ ಅನೇಕ ಪ್ರದೇಶಗಳಲ್ಲಿ ಹಂಚಿ ಹರಡಿದರು. ಅದನ್ನು ಶಬ್ದಕಾರಕಗಳೂ ಪಕ್ಷಿರೂಪವುಳ್ಳವೂ ಆದ ಗಾಯತ್ರ್ಯಾದಿಛಂದಸ್ಸುಗಳು ಸುತ್ತುವರಿದು ಕೂಡಿಕೊಳ್ಳುತ್ತವೆ.

## English Translation

(The wise) reached the path of Speech by sacrifice, they found it centred in the Rishis; having acquired it they dispersed it in many places; the seven noisy (birds) meet together.

ವಿಶೇಷವಿಷಯಗಳು.

ವಾಗ್ದೇವತೆಯನ್ನುದ್ದೇಶಿಸಿ ಮಾಡುವ ಪಶುಯಾಗದ ವಪಾ ಮತ್ತು ಪುರೋಡಾಶಹೋಮಗಳಲ್ಲಿ **ಯಜ್ಞೇನ ವಾಚಃ** ಎಂಬ ಈ ಋಕ್ಕನ್ನೂ ಇದರ ಮುಂದಿನ **ಉತ ತ್ವಃ ಪಶ್ಯನ್** ಎಂಬ ಋಕ್ಕನ್ನೂ ಕ್ರಮವಾಗಿ ಯಾಜ್ಯಾಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯಜ್ಞೇನ ವಾಚಃ ಪದವೀಯಮಾಯನ್ನಿತಿ ದ್ವೇ ದೇವೀಂ ವಾಚಮಜನಯಂತ ದೇವಾಃ** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು.

ಹಿಂದಿನ ಋಕ್ಕಿನ ನಿರುಕ್ತವಚನದಲ್ಲಿ ಹೇಳಿರುವಂತೆ ಋಷಿಗಳು ಸುಸಂಸ್ಕೃತವಾದ ವಾಕ್ಯಗಳನ್ನು ಎಂದರೆ ಮಂತ್ರಗಳನ್ನು ಯಜ್ಞಾನುಷ್ಠಾನದ ಮೂಲಕ ಸಾಕ್ಷಾತ್ಕರಿಸಿ ಪಡೆದರು. ಎಂದರೆ ಯಜ್ಞಾನುಷ್ಠಾನದ ಮೂಲಕ ಇವರಿಗೆ ಮಂತ್ರಗಳು ದೃಷ್ಟವಾದವು. ಆ ಮಂತ್ರಗಳು ಗಾಯತ್ರ್ಯಾದಿ ಏಳುವಿಧ ಛಂದಸ್ಸುಗಳಿಂದ ಸಹಿತವಾಗಿ ಘೋಷ್ಠಿಯಾಗಿ ಪಠಿಸಲ್ಪಡುತ್ತಾ ಸಮಸ್ತ ಪ್ರದೇಶಗಳಲ್ಲಿಯೂ ಹರಡಿದವು ಎಂದು ಋಕ್ಕಿನ ಮುಖ್ಯಾಭಿಪ್ರಾಯವು.

ಸಂಹಿತಾಪಾಠಃ

**ಉತ ತ್ವಃ ಪಶ್ಯನ್ನ ದದರ್ಶ ವಾಚಮುತ ತ್ವಃ ಶೃಣ್ವನ್ನ ಶೃಣೋತ್ಯೇನಾಂ ।**
**ಉತೋ ತ್ವಸ್ಮೈ ತನ್ವಂ೧ ವಿ ಸಸ್ರೇ ಜಾಯೇವ ಪತ್ಯ ಉಶತೀ ಸುವಾಸಾಃ ॥**

ಪದಪಾಠಃ

**ಉತ । ತ್ವಃ । ಪಶ್ಯನ್ । ನ । ದದರ್ಶ । ವಾಚಂ । ಉತ । ತ್ವಃ । ಶೃಣ್ವನ್ । ನ । ಶೃಣೋತಿ । ಏನಾಂ ।**
**ಉತೋ ಇತಿ । ತ್ವಸ್ಮೈ । ತನ್ವಂ । ವಿ । ಸಸ್ರೇ । ಜಾಯಾಽಇವ । ಪತ್ಯೇ । ಉಶತೀ । ಸುಽವಾಸಾಃ ॥ ೪ ॥**

ಸಾಯಣಭಾಷ್ಯಂ

**ತ್ವಶಬ್ದ ಏಕವಾಚೀ । ಏಕಃ । ಉತಶಬ್ದೋಽಪ್ಯರ್ಥೇ । ಪಶ್ಯನ್ನಪಿ ಮನಸಾ ಪರ್ಯಾಲೋಚಯನ್ನಪಿ ವಾಚಂ ನ ದದರ್ಶ । ದರ್ಶನಫಲಾಭಾವಾನ್ನ ಪಶ್ಯತಿ । ತ್ವ ಏಕಃ ಶೃಣ್ವನ್ನಪ್ಯೇನಾಂ ವಾಚಂ ನ ಶೃಣೋತಿ ಶ್ರವಣಫಲಾಭಾವಾತ್ । ಇತ್ಯನೇನಾರ್ಧೇನಾವಿದ್ವಾನಭಿಹಿತಃ । ತೃತೀಯಪಾದೇನ ವಿದಿತವೇದಾರ್ಥಮಾಹ । ತ್ವಸ್ಮಾ ಏಕಸ್ಮಾ ಅಪಿ ತನ್ವಮಾತ್ಮೀಯಂ ಶರೀರಂ ವಿ ಸಸ್ರೇ । ಸ್ವಯಂ ವಾಗ್ವಿವಿಧಂ ಗಮಯತಿ । ಆತ್ಮಾನಂ ವಿವೃಣುತೇ ಪ್ರಕಾಶಯತೀತ್ಯರ್ಥಃ । ತತ್ರ ದೃಷ್ಟಾಂತಃ । ಜಾಯೇವ ಯಥೋಶತೀ ಸಂಭೋಗಂ ಕಾಮಯಮಾನಾ ಸುವಾಸಾಃ ಶೋಭನವಸನಾ ಜಾಯಾ ಪತ್ಯೇ ಭರ್ತ್ರೇ ಋತುಕಾಲೇ ಸಂಭೋಗಾರ್ಥಂ ಸ್ವಯಮಾತ್ಮಾನಂ ವಿವೃಣುತೇ ತದ್ವದೇನಾಂ ಪಶ್ಯತಿ ಶೃಣೋತಿ ಚೇತಿ ವಿದಿತವೇದಾರ್ಥಸ್ಯ ಪ್ರಶಂಸಾ । ಅಪ್ಯೇಕಃ ಪಶ್ಯನ್ನ ಪಶ್ಯತಿ ವಾಚಮಿತ್ಯಾದಿ ನಿರುಕ್ತಮತ್ರ ದ್ರಷ್ಟವ್ಯಂ । ನಿ. ೧-೧೯ ॥**

ಪ್ರತಿಪದಾರ್ಥ

**ತ್ವಃ**—ಒಬ್ಬನು (ಸಾಕ್ಷಾತ್ಕಾರ ಸಾಮರ್ಥ್ಯವಿಲ್ಲದವರು) । **ಪಶ್ಯನ್ ಉತ**—ನೋಡುತ್ತಿದ್ದರೂ । **ವಾಚಂ**—ಈ ವಾಕ್ತತ್ತ್ವವನ್ನು । **ನ ದದರ್ಶ**—ಸಾಕ್ಷಾತ್ಕರಿಸಿಕೊಳ್ಳಲಾಗಲಿಲ್ಲ । **ತ್ವಃ**—ಇನ್ನೊಬ್ಬನು (ಗೂಢವಾದ ತತ್ತ್ವವನ್ನರಿಯಲು ಯೋಗ್ಯವಾದ ಶ್ರೋತ್ರೇಂದ್ರಿಯವಿಲ್ಲದವನು) । **ಏನಾಂ**—ಈ ವಾಕ್ತತ್ತ್ವವನ್ನು । **ಶೃಣ್ವನ್ ಉತ**—ಕೇಳುತ್ತಿದ್ದರೂ । **ನ ಶೃಣೋತಿ**—ಕೇಳುವುದಿಲ್ಲ । **ಉಶತೀ**—ಪತಿಯ ಸಂಗವನ್ನ ಪೇಕ್ಷಿಸಿ । **ಸುವಾಸಾಃ**—ಉತ್ತಮವಾದ ವಸ್ತ್ರಾದಿಗಳಿಂದ ಅಲಂಕೃತಳಾದ । **ಜಾಯೇವ**— ಪತ್ನಿಯು । **ಪತ್ಯೇ** — ತನ್ನ ಪತಿಗೆ ತನ್ನ ಸುಂದರವಾದ ಸ್ವರೂಪವನ್ನು ಪ್ರಕಾಶಗೊಳಿಸುವಂತೆ । **ತ್ವಸ್ಮೈ**—ಇನ್ನೊಬ್ಬನಿಗೆ (ಸಾಕ್ಷಾತ್ಕಾರ ಮಾಡಿಕೊಳ್ಳುವ ಯೋಗ್ಯತೆಯಿರುವವನಿಗೆ) । **ತನ್ವಂ**—ತನ್ನ ಶರೀರವನ್ನು । **ವಿ ಸಸ್ರೇ**—ಪ್ರಕಾಶಪಡಿಸುತ್ತಾಳೆ.

**ಭಾವಾರ್ಥ**

ಸಾಕ್ಷಾತ್ಕಾರಮಾಡಲರಿಯದ ಕೆಲವರು ಈ ವಾಕ್ತತ್ತ್ವವನ್ನು ನೋಡಿದರೂ ನೋಡದಂತೆಯೇ ಆಗುತ್ತದೆ. ಇನ್ನು ಕೆಲವರು ಕಿವಿಯಲ್ಲಿ ಕೇಳುತ್ತಿದ್ದರೂ ಕೇಳಿದ ಪ್ರಯೋಜನವನ್ನು ಹೊಂದದೇ ಕೇಳದಿರುವಂತೆಯೇ ಆಗುತ್ತದೆ. ಆದರೆ, ಈ ತತ್ತ್ವವನ್ನರಿಯುವ ಸಾಮರ್ಥ್ಯವುಳ್ಳವರಿಗೆ ಮಾತ್ರ ಪತಿಗೆ ತನ್ನ ಸುಂದರವಾದ ಮತ್ತು ವಸ್ತ್ರಾದಿಗಳಿಂದ ಅಲಂಕೃತವಾದ ದೇಹವನ್ನು ಪತ್ನಿಯು ಪತಿಯ ಸಂಗವನ್ನು ಬಯಸಿ ಪ್ರಕಾಶಪಡಿಸುವಂತೆ ವಾಗ್ದೇವಿಯು ತನ್ನ ಸ್ವರೂಪವನ್ನು ಪ್ರಕಾಶಪಡಿಸುತ್ತಾಳೆ.

## English Translation

One (man) indeed seeing Speech has not seen her; another (man) hearing her has not heard her; but to another she delivers her person as a loving wife well-attired presents herself to her husband.

**ವಿಶೇಷವಿಷಯಗಳು**

ಈ ಋಕ್ಕಿನ ಪೂರ್ವಾರ್ಧದಲ್ಲಿ ವೇದಾರ್ಥವನ್ನು ತಿಳಿಯದಿರುವ ಅಜ್ಞಪುರುಷನ ನಿಂದೆಯೂ ಉತ್ತರಾರ್ಧದಲ್ಲಿ ವೇದಾರ್ಥವನ್ನು ತಿಳಿದವನಿಗೆ ವಾಗ್ದೇವತೆಯು ಹೇಗೆ ಅನುಗ್ರಹಮಾಡುತ್ತಾಳೆ ಎಂಬುದನ್ನೂ ವಿವರಿಸಲಾಗಿದೆ. ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳುವಾಗ—

**ಅಪ್ಯೇಕಃ ಪಶ್ಯನ್ನ ಪಶ್ಯತಿ ವಾಚಂ। ಅಪಿ ಚ ಶೃಣ್ವನ್ನ ಶೃಣೋತ್ಯೇನಾಮಿತ್ಯವಿದ್ವಾಂಸಮಾಹಾರ್ಧಂ॥ ಅಪ್ಯೇಕಸ್ಮೈ ತನ್ವಂ ವಿಸಸ್ರ ಇತಿ ಸ್ವಮಾತ್ಮಾನಂ ವಿವೃಣುತೇ। ಜ್ಞಾನಂ ಪ್ರಕಾಶನಮರ್ಥಸ್ಯಾಹಾನಯಾ ವಾಚೋಪಮೋತ್ತಮಯಾ ವಾಚಾ। ಜಾಯೇವ ಪತ್ಯೇ ಕಾಮಯಮಾನಾ ಸುವಾಸಾ ಋತುಕಾಲೇಷು॥ ಸುವಾಸಾಃ ಕಲ್ಯಾಣವಾಸಾಃ। ಕಾಮಯಮಾನಾ ಋತುಕಾಲೇಷು। ಯಥಾ ಸ ಏನಾಂ ಪಶ್ಯತಿ ಸ ಶೃಣೋತೀತ್ಯರ್ಥಜ್ಞಪ್ರಶಂಸಾ॥**
(ನಿ. ೧-೧೯)

ಅನೇಕ ಪುರುಷರು ವ್ಯಾಕರಣಸಾಹಿತ್ಯಾದಿ ಶಾಸ್ತ್ರಗ್ರಂಥಗಳಲ್ಲಿ ಪರಿಣತರಾಗಿರುತ್ತಾರೆ. ವೇದಾಧ್ಯಯನವನ್ನು ಮಾಡಿರುತ್ತಾರೆ. ಆದರೆ ಅವರಲ್ಲಿ ಒಬ್ಬನು (ಎಂದರೆ ಕೆಲವರು) **ವಾಚಂ** ವೇದವಾಕ್ಯವನ್ನು ಅಥವಾ ಮಂತ್ರವನ್ನು **ಪಶ್ಯನ್ನಪಿ ನ ಪಶ್ಯತಿ**—ತಿಳಿದಿದ್ದರೂ ಎಂದರೆ ಬಾಯಿಂದ ಪಠಿಸುತ್ತಿದ್ದರೂ **ನ ಪಶ್ಯತಿ**—ಆ ಮಂತ್ರದ ಅರ್ಥವನ್ನು ತಿಳಿಯುವುದಿಲ್ಲ. ಎಂದರೆ ಮಂತ್ರವನ್ನು ಪಠಿಸುತ್ತಿದರೂ ಅದರ ಅರ್ಥವನ್ನು ಮಾತ್ರ ತಿಳಿದಿರುವುದಿಲ್ಲ ಅಥವಾ ತಿಳಿದುಕೊಳ್ಳುವ ಶಕ್ತಿಯಿರುವುದಿಲ್ಲ. ಹಾಗೆಯೇ ಇನ್ನೊಬ್ಬನು ವೇದಮಂತ್ರವನ್ನು ಶ್ರವಣಮಾಡುತ್ತಿದ್ದರೂ ಆದರ ಅರ್ಥಜ್ಞಾನವಿರುವುದಿಲ್ಲ. ಕಣ್ಣಿದ್ದರೂ ನೋಡುವುದಿಲ್ಲ. ಕಿವಿಯಿದ್ದರೂ ಕೇಳುವುದಿಲ್ಲ. ಇದು ವೇದಾರ್ಥಜ್ಞಾನವಿಲ್ಲದಿರುದವರ ವಿಷಯವಾಯಿತು. ವೇದಾರ್ಥವನ್ನು ಚೆನ್ನಾಗಿ ತಿಳಿದಿರುವ ಇನ್ನೊಬ್ಬ ಪುರುಷನ ವಿಷಯದಲ್ಲಿಯಾದರೋ, ವಾಗ್ದೇವತೆಯು ಅವನಿಗೆ ತನ್ನ ನಿಜಸ್ವರೂಪವನ್ನು ಎಂದರೆ ವೇದಮಂತ್ರಗಳ ಗೂಢಾರ್ಥವನ್ನು ಸ್ಪಷ್ಟವಾಗಿ ಪ್ರಕಾಶಪಡಿಸುತ್ತಾಳೆ. ಹೇಗೆಂದರೆ ಒಳ್ಳೆಯ ವಸ್ತ್ರಾಭರಣಗಳಿಂದ ಅಲಂಕೃತಳಾದ ಸ್ತ್ರೀಯು ತನ್ನ ಪತಿಯ ಸಂಗವನ್ನು ಅಪೇಕ್ಷಿಸಿ ಋತುಕಾಲದಲ್ಲಿ (ಸಂಭೋಗ ಕಾಲದಲ್ಲಿ) ತನ್ನ ಅವಯವಗಳ ಸೌಂದರ್ಯವನ್ನು ತನ್ನ ಪತಿಗೆ ಹೇಗೆ ಪ್ರಕಟಿಸುವಳೋ ಎಂದರೆ ಪತಿಯು ತನ್ನ ಪತ್ನಿಯ ಸೌಂದರ್ಯಯುಕ್ತವಾದ ಅವಯವಗಳನ್ನು ರತಿಕಾಲದಲ್ಲಿ

ನೋಡಲು ಹೇಗೆ ಸಮರ್ಥನಾಗುವನೋ ಅದರಂತೆ ವೇದಾರ್ಥಜ್ಞನಾದ ಪುರುಷನಿಗೆ ಮಂತ್ರಗಳ ಗೂಢಾರ್ಥಗಳು ಸಹ ಸ್ಪಷ್ಟವಾಗಿ ಗೋಚರಿಸುವವು. ಇಲ್ಲಿ ತನ್ನ ಪತ್ನಿಯ ಉಪಮಾನವನ್ನು ಕೊಟ್ಟಿರುವ ಉದ್ದೇಶವೇನೆಂದರೆ—ಒಬ್ಬ ಪುರುಷನು ಅನೇಕ ಸ್ತ್ರೀಯರನ್ನು ಕಣ್ಣಿನಿಂದ ನೋಡಿದರೂ ತನ್ನ ಪತ್ನಿಯ ಅವಯವಗಳನ್ನು ಮಾತ್ರ ಏಕಾಂತದಲ್ಲಿ ಚೆನ್ನಾಗಿ ನೋಡಲು ಸಮರ್ಥನಾಗುತ್ತಾನೆ. ಅದರಂತೆ ವೇದಾರ್ಥವನ್ನರಿಯದ ಪುರುಷನು ಇತರ ಅನೇಕ ಶಾಸ್ತ್ರಗಳಲ್ಲಿ ಪಾರಂಗತನಾಗಿದ್ದರೂ ವೇದಮಂತ್ರಗಳ ರಹಸ್ಯಾರ್ಥಗಳನ್ನರಿಯಲು ಸಮರ್ಥನಾಗುವುದಿಲ್ಲ. ಆದರೆ ವೇದಾರ್ಥಜ್ಞನಾದ ಪುರುಷನಿಗೆ ಮಾತ್ರ ತನ್ನ ಪತ್ನಿಯನ್ನು ಏಕಾಂತದಲ್ಲಿ ನೋಡಲು ಶಕ್ಯವಾಗಿರುವಂತೆ ವೇದಮಂತ್ರಗಳ ರಹಸ್ಯಾರ್ಥಗಳನ್ನು ಸಹ ತಿಳಿದುಕೊಳ್ಳಲು ಶಕ್ತನಾಗಿರುವನು ಎಂದು ವೇದಾರ್ಥವನ್ನು ತಿಳಿಯದವನ ಮತ್ತು ತಿಳಿದವನ ಶಕ್ತಿಸಾಮರ್ಥ್ಯಗಳನ್ನು ವಿಶದಪಡಿಸುವುದಕ್ಕಾಗಿ **ಜಾಯೇವ ಪತ್ಯೇ** ಎಂದು ಪತಿಪತ್ನಿಯರ ದೃಷ್ಟಾಂತವನ್ನು ಹೇಳಿ ಋಷಿಯು ಅರ್ಥವಿವರಣೆಮಾಡಿದಾನೆ.

**ತ್ವಃ** ಎಂಬ ಶಬ್ದದ ವಿಷಯದಲ್ಲಿ ಯಾಸ್ಕರು ಈ ರೀತಿ ವಿವರಣೆಮಾಡಿದಾರೆ—

**ತ್ವ ಇತಿ ವಿನಿಗ್ರಹಾರ್ಥೀಯಂ ಸರ್ವನಾಮಾನುದಾತ್ತಂ । ಅರ್ಧನಾಮೇತ್ಯೇಕೇ ।** (ನಿ. ೧-೭)

**ತ್ವಃ** ಎಂಬ ಶಬ್ದವು ವಿರೋಧಾರ್ಥವನ್ನು ಸೂಚಿಸುವ ಸರ್ವನಾಮಪದವಾಗಿದೆ. ಇದು ಅನುದಾತ್ತಸ್ವರದಿಂದ ಕೂಡಿರುವುದು. ಕೆಲವರು ಈ ಶಬ್ದಕ್ಕೆ ಅರ್ಧವೆಂಬ ಅರ್ಥವಿರುವುದೆಂದು ಹೇಳುವರು.

**ನಿಪಾತ ಇತ್ಯೇಕೇ । ತತ್ಕಥಮನುದಾತ್ತಪ್ರಕೃತಿ ನಾಮ ಸ್ಯಾತ್ । ದೃಷ್ಟವ್ಯಯಂತು ಭವತಿ । ಉತ ತ್ವಂ ಸಖ್ಯೇ ಸ್ಥಿರಪೀತಮಾಹುಃ ಇತಿ ದ್ವಿತೀಯಾಯಾಂ । ಉತೋ ತ್ವಸ್ಮೈ ತನ್ವಂ೧ ವಿಸಸ್ರೇ ಇತಿ ಚತುರ್ಥ್ಯಾಂ । ಅಥಾಪಿ ಪ್ರಥಮಾ ಬಹುವಚನೇ ॥** (ನಿ. ೧-೮)

ಕೆಲವರು ಈ ಶಬ್ದವನ್ನು ಅವ್ಯಯವೆಂದು ಹೇಳುವರು. ಅದು ಸರಿಯಲ್ಲ. ಏಕೆಂದರೆ, ಸರ್ವಾನುದಾತ್ತವಾದ ಪದವು ಹೇಗಾಗುವುದು. ನಾಮಪದದಂತೆ ಇದಕ್ಕೆ ವಿಭಕ್ತಿ ವಚನಗಳಲ್ಲಿ ಪ್ರತ್ಯಯಗಳನ್ನು ಸೇರಿಸಲಾಗುವುದು. ಉದಾಹರಣೆಗೆ, **ಉತ ತ್ವಂ ಸಖ್ಯೇ ಸ್ಥಿರಪೀತಮಾಹುಃ** ಎಂಬ ವಾಕ್ಯದಲ್ಲಿ **ತ್ವಂ** ಎಂದು ದ್ವಿತೀಯಾವಿಭಕ್ತಿ ಪ್ರಯೋಗವಿದೆ. **ಉತೋ ತ್ವಸ್ಮೈ ತನ್ವಂ೧ ವಿಸಸ್ರೇ** ಎಂಬ ವಾಕ್ಯದಲ್ಲಿ **ತ್ವಸ್ಮೈ** ಎಂದು ಚತುರ್ಥೀವಿಭಕ್ತಿಪ್ರಯೋಗವಿದೆ. ಮತ್ತು ಪ್ರಥಮಾವಿಭಕ್ತಿಯ ಬಹುವಚನದಲ್ಲಿಯೂ ಈ ಶಬ್ದದ ಪ್ರಯೋಗವಿರುವುದು **ಅದಘ್ನಾಸ ಉಪಕಕ್ಷಾಸ ಉ ತ್ವೇ** ಎಂಬ ವಾಕ್ಯದಲ್ಲಿ ಕಂಡುಬರುವುದು.

**ಅಥಾಪಿ ಸಮುಚ್ಚಯಾರ್ಥೇ ಭವತಿ । ಪರ್ಯಾಯಾ ಇವ ತ್ವದಾಶ್ವಿನಂ । ಆಶ್ವಿನಂ ಚ ಪರ್ಯಾಯಾಶ್ಚೇತಿ ॥** (ನಿ. ೧-೯)

ಸಮುಚ್ಚಯಾರ್ಥದಲ್ಲಿಯೂ (ಮತ್ತು ಎಂಬರ್ಥದಲ್ಲಿಯೂ) ಈ ಶಬ್ದದ ಪ್ರಯೋಗವಿರುವುದು. ಹೇಗೆಂದರೆ, **ಪರ್ಯಾಯಾ ಇವ ತ್ವದಾಶ್ವಿನಂ** ಎಂಬ ವಾಕ್ಯದಲ್ಲಿ **ತ್ವತ್** ಎಂಬ ಶಬ್ದಕ್ಕೆ (**ಚ** ಶಬ್ದದ) ಮತ್ತು ಎಂಬರ್ಥವಿರುವುದು.

ಸಂಹಿತಾಪಾಠಃ

ಉತ ತ್ವಂ ಸಖ್ಯೇ ಸ್ಥಿರಪೀತಮಾಹುರ್ನೈನಂ ಹಿನ್ವಂತ್ಯಪಿ ವಾಜಿನೇಷು ।
ಅಧೇನ್ವಾ ಚರತಿ ಮಾಯಯೈಷ ವಾಚಂ ಶುಶ್ರುವಾಁ ಅಫಲಾಮಪುಷ್ಪಾಂ ॥೫॥

ಪದಪಾಠಃ

ಉತ । ತ್ವಂ । ಸಖ್ಯೇ । ಸ್ಥಿರऽಪೀತಂ । ಆಹುಃ । ನ । ಏನಂ । ಹಿನ್ವಂತಿ । ಅಪಿ । ವಾಜಿನೇಷು ।

ಅಧೇನ್ವಾ । ಚರತಿ । ಮಾಯಯಾ । ಏಷಃ । ವಾಚಂ । ಶುಶ್ರುऽವಾನ್ । ಅಫಲಾಂ । ಅಪುಷ್ಪಾಂ ॥ ೫ ॥

ಸಾಯಣಭಾಷ್ಯಂ

ತ್ವಮುತ್ವೈಕಮಪಿ ಸಖ್ಯೇ ವಿದುಷಾಂ ಸಂಸದಿ । ಯಾ ಸತ್ಕೆಥಾ ಸಾ ಸಖಿಕರ್ಮತ್ವಾತ್ಸಖ್ಯ-ಮಿತ್ಯುಚ್ಯತೇ । ಸಾ ಚ ವಾಚಾ ಕ್ರಿಯತೇ । ಅತೋ ವಾಕ್ಸಂಬಂಧಾದ್ವಾಕ್ಸಖ್ಯೇ ಸ್ಥಿರಪೀತಂ ಮಧು ಯಸ್ಯ ಹೃದಯೇ ಸ್ಥಿತಂ ಭವತಿ । ಯದ್ವಾ । ಸ್ಥಿರಪೀತಂ ಸ್ಥಿರಪ್ರಾಪ್ತಿಮಾಹುಃ । ಯದ್ವಾ । ತಸ್ಮಿಙ್ಜ್ಞಾ-ತಾರ್ಥಮಾಹುಃ । ಲೋಕೇ ಯತಾ ಜ್ಞಾತಾರ್ಥಂ ಪುರುಷಂ ಪೀತಾರ್ಥಮಿತಿ ವದಂತಿ । ಕಿಂಚೈನಂ ವಿಜ್ಞಾತಾರ್ಥಂ ಪುರುಷಂ ವಾಜಿನೇಷು । ವಾಗಿನೇಶ್ವರಾ ಯೇಷಾಂ ತೇ ವಾಜಿನಾ ಅರ್ಥಾ ವಾಚ ಆಯತ್ತಾಃ ಖಲು । ವಾಗ್ಜ್ಞೇಯೇಷ್ವರ್ಥೇಷು ನಾಪಿ ಹಿನ್ವಂತಿ । ಅಪಿಶಬ್ದೋऽನ್ಯರ್ಥೇ । ಕೇಚಿದಪಿ ನಾನುಗಚ್ಛಂತಿ । ಅಯಮೇವಾತಿಶಯೇನ ವಿದ್ವಾನಿತ್ಯರ್ಥಃ । ಯದ್ವಾ । ವಾಜಿನೇಷು ಸಾರಭೂತೇಷು ನಿರೂಪಣೀಯೇಷ್ವರ್ಥೇಷ್ವೇನಂ ನ ಹಿನ್ವಂತಿ । ನ ವಹಿಃ ಕುರ್ವಂತಿ । ಏನಂ ಪುರಸ್ಕೃತ್ಯೈವ ಸರ್ವಂ ವೇದಾರ್ಥಂ ವಿಚಾರಯಂತೀತ್ಯರ್ಥಃ । ಇತ್ಯರ್ಥಜ್ಞಃ ಪ್ರಶಸ್ತಃ । ಅನಂತರಮುತ್ತರಾರ್ಧೇನ ಕೇವಲ-ಪಾಠಕೋ ನಿಂದ್ಯತೇ । ಏಷೋऽವಿಜ್ಞಾತಾರ್ಥಃ ಪುರುಷೋऽಧೇನ್ವಾ ಧೇನುತ್ವವಿವರ್ಜಿತಯಾ ಕಾಮಾ-ನಾಮದೋಗ್ಧ್ರ್ಯಾ ದೇವಮನುಷ್ಯಸ್ಥಾನೇಷು ವಾಕ್ಪ್ರತಿರೂಪಯಾ ಮಾಯಯಾ ಚರತಿ । ಕಿಂ ಕುರ್ವನ್ । ಅಫಲಾಮಪುಷ್ಪಾಂ । ವಾಚೋऽರ್ಥಃ ಪುಷ್ಪಫಲಂ । ಅರ್ಥವರ್ಜಿತಾಂ । ಯದ್ವಾ । ವಾಚೋऽರ್ಥೋ ಯಾಜ್ಞದೈವತೇ । ಯಜ್ಞೇ ಭವಂ ಜ್ಞಾನಂ ಯಾಜ್ಞಂ ದೇವತಾಸು ಭವಂ ಜ್ಞಾನಂ ದೈವತಂ । ತದ್ವರ್ಜಿತಾಂ ಕರ್ಮಾದಿವಿಷಯಜ್ಞಾನವರ್ಜಿತಾಂ ವಾಚಂ ಶುಶ್ರುವಾಞ್ಛ್ರುತವಾನ್ । ಕೇವಲಂ ಪಾಠಮಾತ್ರೇಣೈವ ಶ್ರುತವಾನ್ ಸ ಚರತಿ । ಯಥಾ ವಂಧ್ಯಾ ಪೀನಾ ಗೌಃ ಕಿಂ ದ್ರೋಣಮಾತ್ರಂ ಕ್ಷೀರಂ ದೋಗ್ಧೀತಿ ಮಾಯಾ-ಮುತ್ಪಾದಯಂತೀ ಚರತಿ ಯಥಾ ವಂಧ್ಯೋ ವೃಕ್ಷೋऽಕಾಲೇ ಪಲ್ಲವಾದಿಯುಕ್ತಃ ಸನ್ಪುಷ್ಯತಿ ಫಲತೀತಿ ಭ್ರಾಂತಿಮುತ್ಪಾದಯಂಸ್ತಿಷ್ಠತಿ ತಥಾ ಪಾಠಂ ಪ್ರಬ್ರುವಾಣಶ್ಚರತೀತ್ಯರ್ಥಃ । ಅಪ್ಯೇಕಂ ವಾಕ್ಸಖ್ಯೇ ಸ್ಥಿರ-ಪೀತಮಿತ್ಯಾದಿ ನಿರುಕ್ತಮನುಸಂಧೇಯಂ ॥ ನಿ. ೧-೨೦ ॥

ಪ್ರತಿಪದಾರ್ಥ

**ತ್ವಂ ಉತ**—ಒಬ್ಬನನ್ನು । **ಸಖ್ಯೇ**—ವಿದ್ವಾಂಸರ ಗುಂಪಿನಲ್ಲಿ । **ಸ್ಥಿರಪೀತಂ**—ವಿಶೇಷಜ್ಞಾನ ವುಳ್ಳವನನ್ನಾಗಿ । **ಆಹುಃ**—ತಿಳಿದವರು ಹೇಳುತ್ತಾರೆ । **ಏನಂ**—ಇಂತಹ ಪುರುಷನನ್ನು । **ವಾಜಿನೇಷು**—ವಾಗ್ವ್ಯವಹಾರಗಳಲ್ಲಿ । **ನ ಅಪಿ ಹಿನ್ವಂತಿ**—ಯಾರೂ ಪ್ರತಿಭಟಿಸುವುದಿಲ್ಲ ಮತ್ತು ಅಲಕ್ಷಿಸುವುದಿಲ್ಲ । **ಏಷಃ**—ಜ್ಞಾನರಹಿತನಾದ ಪುರುಷನು । **ಅಧೇನ್ವಾ**—ರಸರಹಿತನಾಗಿ । **ಅಫಲಾಂ**—ಫಲವಿಲ್ಲದುದೂ । **ಅಪುಷ್ಪಾಂ**—ಪುಷ್ಪರಹಿತವೂ ಆದ । **ವಾಚಂ**—ವಾಕ್ಕನ್ನು । **ಶುಶ್ರುವಾನ್**—ಅರ್ಥರಹಿತವಾಗಿ ಕೇವಲ ಶ್ರವಣಮಾತ್ರದಿಂದ ಕೇಳಿ । **ಮಾಯಯಾ**—ಅಜ್ಞಾನಯುಕ್ತನಾಗಿ । **ಚರತಿ**—ಸಂಚರಿಸುತ್ತಾನೆ.

ಭಾವಾರ್ಥ

ವಾಕ್ತತ್ತ್ವವನ್ನು ಸಾಕ್ಷಾತ್ಕರಿಸಬಲ್ಲವನನ್ನು ತಿಳಿದವರು ವಿದ್ವಾಂಸರ ಗುಂಪಿನಲ್ಲಿ ವಿಶೇಷವಾಗಿ ಜ್ಞಾನವುಳ್ಳವನನ್ನಾಗಿ ಹೇಳುತ್ತಾರೆ. ಇಂತಹಪುರುಷನನ್ನು ವಾಗ್ವ್ಯವಹಾರಗಳಲ್ಲಿ ಯಾರೂ ಪ್ರತಿಭಟಿಸುವುದಿಲ್ಲ ಮತ್ತು ಅಲಕ್ಷಿಸುವುದಿಲ್ಲ ಜ್ಞಾನರಹಿತನಾದ ಪುರುಷನು ರಸರಹಿತನಾಗಿ ಫಲವಿಲ್ಲದುದೂ, ಪುಷ್ಪರಹಿತವೂ ಆದ ವಾಕ್ಕನ್ನು ಅರ್ಥವಿಲ್ಲದೆ ಕೇವಲ ಕಿವಿಯಿಂದ ಮಾತ್ರ ಕೇಳಿ ಅಜ್ಞಾನಯುಕ್ತನಾಗಿ ಸಂಚರಿಸುತ್ತಾನೆ.

## English Translation

They call one man firmly established in the friendship (of Speech), they do not exelude him from (the society of) the powerful (in knowledge); another wanders with an illusion that is barren, bearing Speech that is without fruit, without flowers.

ವಿಶೇಷವಿಷಯಗಳು

ಹಿಂದಿನ ಋಕ್ಕಿನಲ್ಲಿ ಹೇಳಿರುವ ವಿಷಯವನ್ನೇ ಇಲ್ಲಿ ಪುನಃ ಸ್ಪಷ್ಟವಾಗಿ ವಿವರಿಸಲಾಗಿದೆ. ಆವರೆ ಋಕ್ಕಿನ ಪೂರ್ವಾರ್ಧದಲ್ಲಿ ವೇದಾರ್ಥಜ್ಞನ ಪ್ರಶಂಸೆಯೂ ಉತ್ತರಾರ್ಧದಲ್ಲಿ ವೇದಾರ್ಥಜ್ಞನಲ್ಲದವನ ನಿಂದೆಯೂ ಉಕ್ತವಾಗಿದೆ. ಯಾಸ್ಕರು ಈ ಋಕ್ಕಿಗೂ ನಿರ್ವಚನವನ್ನು ಈರೀತಿ ಹೇಳಿದಾರೆ—

> **ಅಪ್ಯೇಕಂ ವಾಕ್ ಸಖ್ಯೇ ಸ್ಥಿರಪೀತಮಾಹುಃ ರಮಮಾಣಂ ವಿಪೀತಾರ್ಥಂ ದೇವಸಖ್ಯೇ ರಮಣೀಯೇ ಸ್ಥಾನ ಇತಿ ವಾ ವಿಜ್ಞಾತಾರ್ಥಂ ಯನ್ನಾಪ್ನುವಂತಿ ವಾಗ್ಜ್ಞೇಯೇಷು ಬಲವತ್ಸ್ವಪಿ। ಅಧೇನ್ವಾ ಹ್ಯೇಷ ಚರತಿ ಮಾಯಯಾ ವಾಕ್ಪ್ರತಿರೂಪಯಾ ನಾಸ್ಮೈ ಕಾಮಾನ್ದುಗ್ಧೇ ವಾಗ್ದೋಹ್ಯಾನ್ ದೇವಮಾನುಷ್ಯಸ್ಥಾನೇಷು ಯೋ ವಾಚಂ ಶ್ರುತವಾನ್ ಭವತ್ಯಫಲಾಮಪುಷ್ಪಾಮಿತ್ಯಫಲಾಸ್ಮಾ ಅಪುಷ್ಪಾ ವಾಕ್ ಭವತೀತಿ ವಾ ಕಿಂಚಿತ್ಪುಷ್ಪಫಲೇತಿ ವಾ ಅರ್ಥಂ ವಾಚಃ ಪುಷ್ಪಫಲಮಾಹ । ಯಜ್ಞದೈವತೇ ಪುಷ್ಪಫಲೇ ದೇವತಾಧ್ಯಾತ್ಮೇ ವಾ ॥**
>
> (ನಿ. ೧-೨೦)

**ಉತ ತ್ವಂ ಸಖ್ಯೇ ಸ್ಥಿರಪೀತಮಾಹುಃ**—ಇಲ್ಲಿ **ಸ್ಥಿರಪೀತಂ** ಎಂಬ ಶಬ್ದಕ್ಕೆ **ಆಪೀತಾರ್ಥಂ, ಗೃಹೀತಾರ್ಥಮಿತ್ಯರ್ಥಃ** ವೇದಮಂತ್ರಗಳ ಅರ್ಥವನ್ನು ಸ್ವೀಕರಿಸಿದವನು ಎಂದರೆ ಚೆನ್ನಾಗಿ ತಿಳಿದವನು ಎಂದಭಿಪ್ರಾಯವು. ಇಂತಹ ವೇದಾರ್ಥಜ್ಞನಾದ ಪುರುಷನು ವಾಕ್ಯಗಳೊಡನೆ ಎಂದರೆ ಮಂತ್ರಗಳೊಡನೆ ಸ್ನೇಹಭಾವದಿಂದಿರುವನೆಂದು ಹೇಳುವರು. ವೇದಾರ್ಥಜ್ಞನಿಗೂ ವೇದಮಂತ್ರಗಳಿಗೂ ಗಾಢವಾದ ಮೈತ್ರಿ (ಸ್ನೇಹ) ಇರುವುದೆಂದು ತಿಳಿದವರು ಹೇಳುವರು ಮತ್ತು ವೇದಾರ್ಥಜ್ಞನು ವೇದಮಂತ್ರಗಳೊಡನೆ (ಎಂದರೆ ಅವುಗಳ ಅರ್ಥವನ್ನು ತಿಳಿದು) ಸಂತೋಷದಿಂದ ಕ್ರೀಡಿಸುತ್ತಿರುವನು ಅಥವಾ ದೇವತೆಗಳ ಸ್ನೇಹಭಾವದಲ್ಲಿ ಅಥವಾ ಉತ್ತಮವಾದ ಯಜ್ಞಸ್ಥಾನಗಳಲ್ಲಿ ಸಂತೋಷಚಿತ್ತನಾಗಿ ವಿಹರಿಸುತ್ತಿರುವನು.

**ನೈನಂ ಹಿನ್ವಂತಿ ಅಪಿ ವಾಜಿನೇಷು—ವಾಜಿನೇಷು** ಎಂದರೆ ವಾಗ್ಜ್ಞೇಯೇಷು ; ವಾಕ್ಯಗಳಿಂದ ತಿಳಿಯಲ್ಪಡುವ ಅಥವಾ ಚರ್ಚಿಸಲ್ಪಡುವ ಸನ್ನಿವೇಶಗಳಲ್ಲಿ ಎಂದರೆ ವಾಗ್ವಾದಗಳಲ್ಲಿ, ವಿದ್ವತ್ಸಭೆಗಳಲ್ಲಿ ಯಜ್ಞಾದಿಕರ್ಮವಿಷಯ

ವಾಗಿ ಅಥವಾ ಅಧ್ಯಾತ್ಮವಿಚಾರವಾಗಿ ನಡೆಯುವ ವಿಮರ್ಶಾತ್ಮಕವಾದ ಚರ್ಚೆಗಳಲ್ಲಿ ಈ ವೇದಾರ್ಥಜ್ಞನನ್ನು ಯಾರೂ ಅನುಸರಿಸಲಾರರು ಎಂದರೆ ಸರಿಗಟ್ಟಲಾರರು. ಯಾರೂ ಇವನೊಡನೆ ವಾಗ್ವಾದವನ್ನು ಮಾಡಿ ಇವನನ್ನು ಜಯಿಸ ಲಾರರು ಎಂದಭಿಪ್ರಾಯವು. ಇದು ಈ ಋಕ್ಕಿನ ಪೂರ್ವಾರ್ಧದ ನಿರ್ವಚನಾಭಿಪ್ರಾಯವು.

ಇನ್ನು ಉತ್ತರಾರ್ಧದಲ್ಲಿ ವೇದಾರ್ಥವನ್ನು ತಿಳಿಯದಿರುವ ಪುರುಷನ ವಿಷಯದಲ್ಲಿ ಎರಡು ಉಪಮಾನಗಳಿಂದ ಅರ್ಥವಿವರಣೆಮಾಡಿರುವರು.

**ಅಧೇನ್ವಾ ಚರತಿ ಮಾಯಯೈಷಃ**—ಧೇನು ಶಬ್ದಕ್ಕೆ ಹಾಲನ್ನು ಕರೆಯುವ ಗೋವು ಎಂದರ್ಥವು. ಇಲ್ಲಿ ಗೋವಿನಂತೆ ಸಕಲೇಷ್ಟಾರ್ಥಗಳನ್ನು ಕರೆಯುವ ಎಂದರೆ ಕೊಡುವ ವಾಗ್ದೇವತೆಯು ಎಂದಭಿಪ್ರಾಯವು. ದೇವಮನುಷ್ಯಾದಿಗಳಲ್ಲಿ ವೇದಮಂತ್ರಗಳ ಅರ್ಥಾದಿಗಳನ್ನು (ವಾಚಂ) ತಿಳಿದವರಿಗೆ ವಾಗ್ದೇವತೆಯು ಯಾವ ವಿಧವಾದ ಫಲಾದಿಗಳನ್ನು ಅನುಗ್ರಹಿಸುವಳೋ ಆ ವಿಧವಾದ ಫಲವು ವೇದಾರ್ಥಜ್ಞನಲ್ಲದವನಿಗೆ ಲಭಿಸುವುದಿಲ್ಲ. ಎಂದರೆ ವೇದಾರ್ಥಜ್ಞನಲ್ಲದವನಿಗೆ ವಾಗ್ದೇವತೆಯು ಇಷ್ಟಾರ್ಥಗಳನ್ನು ಕೊಡುವುದಿಲ್ಲ. ಇಂತಹ ಪುರುಷನು **ಮಾಯಯಾ** ಎಂದರೆ ಕೃತ್ರಿಮವಾದುದೂ (ನಿಜವಲ್ಲದ್ದೂ) **ಅಧೇನ್ವಾ**—ಧೇನುವಿನಂತೆ ಇಷ್ಟಾರ್ಥಗಳನ್ನು ಕೊಡದಿರುವುದೂ ಆದ ವಾಕ್ಯಗಳನ್ನು ಎಂದರೆ ವೇದಮಂತ್ರಗಳನ್ನು ಸುಮ್ಮನೆ (ಯಾವ ಪ್ರಯೋಜನವೂ ಇಲ್ಲದೆ) ಪಠಿಸುತ್ತಾ ಸಂಚರಿಸುತ್ತಾನೆ. ಅದು ಹೇಗೆ ಎಂದರೆ,

**ವಾಚಂ ಶುಶ್ರುವಾನ್ ಅಫಲಾಂ ಅಪುಷ್ಪಾಂ**—ಮಂತ್ರಗಳನ್ನು ಮಾತ್ರ (ಅರ್ಥವಿಲ್ಲದೆ) ಕೇಳುತ್ತಿರುವ ಅಥವಾ ಪಠಿಸುತ್ತಿರುವ ಇವನು ಪುಷ್ಪವಾಗಲಿ, ಫಲವಾಗಲಿ ಇಲ್ಲದಿರುವ ವೃಕ್ಷದಿಂದ ಯಾವ ರೀತಿ ಉಪಯೋಗವಿರುವು ದಿಲ್ಲವೋ ಅದರಂತೆ ಅರ್ಥವನ್ನು ತಿಳಿಯದಿರುವ ಮಂತ್ರಗಳಿಂದ ಈ ಪುರುಷನಿಗೆ ಏನೂ ಪ್ರಯೋಜನವಿರುವುದಿಲ್ಲ. ಇಲ್ಲಿ **ಅಫಲಾಂ ಅಪುಷ್ಪಾಂ** ಎಂಬ ಶಬ್ದಗಳು **ವಾಚಂ** ಎಂಬ ಶಬ್ದಕ್ಕೆ ವಿಶೇಷಣಪದಗಳು. **ವಾಚಂ** ಎಂದರೆ ವೇದಮಂತ್ರಗಳನ್ನು ಎಂದರ್ಥವು; ವೇದಮಂತ್ರಗಳಿಗೆ ಫಲ ಅಥವಾ ಪುಷ್ಪಗಳಿರುವುದೆಂದರೇನು ಎಂದರೆ **ಅರ್ಥಂ ವಾಚಃ ಪುಷ್ಪಫಲಮಾಹ । ಯಾಜ್ಞದೈವತೇ ಪುಷ್ಪಫಲೇ, ದೇವತಾಧ್ಯಾತ್ಮೇ ವಾ** ಎಂದು ಹೇಳಿರುವರು. ವಾಕ್ಕುಗಳಿಗೆ ಎಂದರೆ ವೇದಮಂತ್ರಗಳಿಗೆ ಅರ್ಥವೇ ಪುಷ್ಪಫಲಗಳೆಂಬದಾಗಿ ಹೇಳಲ್ಪಟ್ಟಿರುವುದು. ಅಥವಾ ಯಜ್ಞಕರ್ಮಾನುಷ್ಠಾನವೂ ದೇವತಾನುಗ್ರಹವೂ ಪುಷ್ಪಫಲಗಳೆಂಬುದಾಗಿ ಹೇಳಲ್ಪಡುವವು. ವೃಕ್ಷದಲ್ಲಿ ಮೊದಲು ಪುಷ್ಪವು ಅಂಕುರವಾಗಿ ಅದು ಕ್ರಮೇಣ ಫಲವಾಗಿ ಮಾರ್ಪಡುವುದು ಅದರಂತೆ ಅರ್ಥಯುಕ್ತವಾದ ವೇದಮಂತ್ರಗಳಿಂದ ಮೊದಲು ಯಜ್ಞಾನುಷ್ಠಾನ ಮಾಡಿದಾಗ ಅದು ಪುಷ್ಪರೂಪದಿಂದಿದ್ದು ದೇವತಾನುಗ್ರಹವಾದ ಫಲರೂಪವಾಗಿ ಪರಿಣಮಿಸುವುದು ಎಂದಭಿಪ್ರಾಯವು. ಅಥವಾ ಅಧ್ಯಾತ್ಮಜ್ಞಾನವೇ ಫಲಪುಷ್ಪಗಳೆಂಬುದಾಗಿಯೂ ಹೇಳಲ್ಪಡುವುದು. ವೇದಾರ್ಥಜ್ಞಾನದಿಂದ ಅಧ್ಯಾತ್ಮ ಜ್ಞಾನವುಂಟಾಗುವುದು. ಇಲ್ಲಿ ಕೇವಲ ವೇದಮಂತ್ರಗಳನ್ನು ಅರ್ಥವಿಲ್ಲದೆ ಪಠಿಸುವವನಿಗೆ ವಾಗ್ದೇವತೆಯು (ಎಂದರೆ ವೇದಮಂತ್ರವು) ಯಾವ ಇಷ್ಟಾರ್ಥವನ್ನೂ ಕೊಡುವುದಿಲ್ಲ. ಮತ್ತು ಅವನು ವೇದಾರ್ಥಜ್ಞಾನದಿಂದ ಲಭಿಸಬೇಕಾದ ಯಾವ ಫಲಪುಷ್ಪಗಳನ್ನೂ (ಕರ್ಮಸಾಫಲ್ಯವನ್ನೂ ಅಥವಾ ಉತ್ತಮಜ್ಞಾನವನ್ನೂ) ಪಡೆಯದೆ ವ್ಯರ್ಥವಾಗಿ ಸಂಚರಿಸು ತ್ತಿರುವನು. ಅಥವಾ ಅವನಿಗೆ ಎಂದರೆ ವೇದಾರ್ಥವನ್ನು ತಿಳಿಯದವನಿಗೆ ಲಭಿಸುವ ಫಲಗಳು ಅತ್ಯಲ್ಪವಾಗಿರುವವು. ಎಂದು ನಿರ್ವಚನಾಭಿಪ್ರಾಯವು.

ಸಂಹಿತಾಪಾಠಃ

**ಯಸ್ತಿತ್ಯಾಜ ಸಚಿವಿದಂ ಸಖಾಯಂ ನ ತಸ್ಯ ವಾಚ್ಯಪಿ ಭಾಗೋ ಅಸ್ತಿ ।**

## ಯದೀಂ ಶೃಣೋತ್ಯಲಕಂ ಶೃಣೋತಿ ನಹಿ ಪ್ರವೇದ ಸುಕೃತಸ್ಯ ಪಂಥಾಂ ||

ಪದಪಾಠಃ

ಯಃ | ತಿತ್ಯಾಜ | ಸಚಿಽವಿದಂ | ಸಖಾಯಂ | ನ | ತಸ್ಯ | ವಾಚಿ | ಅಪಿ | ಭಾಗಃ | ಅಸ್ತಿ |

ಯತ್ | ಈಂ | ಶೃಣೋತಿ | ಅಲಕಂ | ಶೃಣೋತಿ | ನಹಿ | ಪ್ರಽವೇದ | ಸುಽಕೃತಸ್ಯ | ಪಂಥಾಂ || ೬ ||

ಸಾಯಣಭಾಷ್ಯಂ

ಸಚಿವಿದಂ | ಶಚಿಶಬ್ದಃ ಸಖಿವಾಚೀ | ಸಖಿವಿದಂ | ಯೋಽಧ್ಯೇತಾ ಸ ವೇದಸ್ಯ ಸಖಾ ಸಂಪದಾಯೋಚ್ಛೇದನಿವಾರಕತ್ವೇನ ವೇದ್ಮಂ ಪ್ರತ್ಯುಪಕಾರಿತ್ವಾತ್ | ತಾದೃಶಮುಪಕಾರಿಣಮಧ್ಯೇತಾರಂ ವೇತ್ತೀತಿ ಸಚಿವಿತ್ | ತಮಭಿಜ್ಞಂ ಸಖಾಯಮಧ್ಯೇತೄಣಾಂ ಪುರುಷಾಣಾಂ ಸಾರ್ಥಬೋಧನೇನೋಪಕಾರಿತ್ವಾತ್ಸಖಿಭೂತಂ ವೇದಂ ಯಃ ಪುಮಾಂಸ್ತಿತ್ಯಾಜ ಪರಾರ್ಥವಿನಿಯೋಗೇನ ಪರಿತ್ಯಜತಿ || ತ್ಯಜತೇರ್ಲಿಟ್ಯಪಸ್ಪೃಧೇಥಾಮಾನೃಚುರಿತ್ಯಾದಿನಾ ನಿಪಾತಿತಃ || ತಸ್ಯ ಪುರುಷಸ್ಯ ವಾಚಿ ಸರ್ವಸ್ಯಾಂ ಲೌಕಿಕ್ಯಾಂ ಶಾಸ್ತ್ರೀಯಾಯಾಂ ವಾಚ್ಯಪಿ ಭಾಗೋ ಭಜನೀಯಃ ಕಶ್ಚಿದರ್ಥೋ ನಾಸ್ತಿ | ಈಮಯಂ ಪುರುಷೋ ಯದ್ವೇದವ್ಯತಿರಿಕ್ತಂ ಶೃಣೋತಿ ತದಲಕಮಲೀಕಂ ವ್ಯರ್ಥಮೇವ ಶೃಣೋತಿ | ಹಿ ಯಸ್ಮಾತ್ತ್ಯಾಗಕಾರಣಾತ್ಸುಕೃತಸ್ಯ ಪಂಥಾಂ ಪಂಥಾನಂ ನ ಪ್ರವೇದ | ಶ್ರದ್ಧಾರಾಹಿತ್ಯಾದನುಷ್ಠಾನಮಾರ್ಗಂ ನ ಜಾನಾತಿ | ತಸ್ಮಾತ್ತದೀಯಶ್ರವಣಮಪಿ ನಿಷ್ಫಲಮಿತ್ಯರ್ಥಃ | ದ್ವಿತೀಯಚತುರ್ಥಪಾದಯೋರಭಿಪ್ರಾಯ ಆರಣ್ಯಕೇ ದರ್ಶಿತೋ ನ ತಸ್ಯಾನೂಕ್ತೇ ಭಾಗೋಽಸ್ತೀತ್ಯಾದಿನಾ | ಐ. ಆ. ೩-೨-೪ | ತಥಾ ತಂ ಯೋಽನೂತ್ಸೃಜತ್ಯಭಾಗೋ ವಾಚಿ ಭವತ್ಯಭಾಗೋ ನಾಕೇ ತದೇಷಾಭ್ಯುಕ್ತಾ | ತೈ. ಆ. ೨-೧೫-೫ | ಇತ್ಯಧ್ಯಯುರ್ಭಿಶ್ಚ ||

ಪ್ರತಿಪದಾರ್ಥ

**ಸಚಿವಿದಂ**—ಮಿತ್ರನ ಬೆಲೆಯನ್ನು ತಿಳಿದ ಎಂದರೆ ಮಿತ್ರರೂಪವಾದ ವಾಕ್ಕಿನ ಬೆಲೆಯನ್ನು ತಿಳಿದವನೂ | **ಸಖಾಯಂ**—ವೇದಮಂತ್ರಗಳಿಗೆ ಮಿತ್ರನೂ ಆದ ಪುರುಷನನ್ನು | **ಯಃ**—ಯಾವ ಮನುಷ್ಯನು | **ತಿತ್ಯಾಜ**—ತ್ಯಾಗಮಾಡುವನೋ (ಅಲಕ್ಷ್ಯಮಾಡುವನೋ) | **ತಸ್ಯ**—ಆ ಮನುಷ್ಯನ | **ವಾಚಿ**—ವಾಕ್ಕಿನಲ್ಲಿ (ವ್ಯವಹಾರದಲ್ಲಿ) | **ಭಾಗಃ**—ಪೂಜ್ಯವಾದ ಅಂಶವಾವುದೂ | **ನ ಅಸ್ತಿ**—ಇರುವುದಿಲ್ಲ | **ಈಂ**—ಈ ಪುರುಷನು | **ಯತ್**—ಯಾವ ವಾಕ್ಕನ್ನು | **ಶೃಣೋತಿ**—ಕೇಳುವನೋ ಅದನ್ನು | **ಅಲೀಕಂ**—ಸುಳ್ಳಾಗಿ (ಅಪ್ರಯೋಜಕವಾಗಿ) | **ಶೃಣೋತಿ**—ಕೇಳುತ್ತಾನೆ | **ಹಿ**—ಏತಕ್ಕೆಂದರೆ | **ಸುಕೃತಸ್ಯ**—ಉತ್ತಮವಾದ ಕರ್ಮವುಳ್ಳವರ | **ಪಂಥಾಂ**—ಮಾರ್ಗವನ್ನು | **ನ ಪ್ರವೇದ**—ಅವನು ಅರಿಯುವುದಿಲ್ಲ.

ಭಾವಾರ್ಥ

ಮಿತ್ರರೂಪವನ್ನು ಹೊಂದಿರುವ ವಾಕ್ಕಿನ ಬೆಲೆಯನ್ನು ತಿಳಿದವನೂ, ವೇದಮಂತ್ರಗಳಿಗೆ ಮಿತ್ರನೂ ಆದ ಪುರುಷನನ್ನು ಯಾವನು ತ್ಯಾಗಮಾಡುವನೋ ಆ ಮನುಷ್ಯನ ವ್ಯವಹಾರದಲ್ಲಿ ಪೂಜ್ಯವಾದ ಅಥವಾ ಸತ್ಯವಾದ ಅಂಶವು ಯಾವುದೂ ಇರುವುದಿಲ್ಲ. ಈ ಪುರುಷನು ಯಾವ ವಾಕ್ಕನ್ನು ಕೇಳುವನೋ ಅದನ್ನು ಅವನು ಕೇಳಿಯೂ ಪ್ರಯೋಜನವಿಲ್ಲ. ಉತ್ತಮವಾದ ಕರ್ಮವುಳ್ಳವರ ಮಾರ್ಗವನ್ನು ಅವನು ಅರಿಯದೆ ಇರುವುದರಿಂದ ಅದು ವ್ಯರ್ಥವು.

## English Translation

He who has abandoned the friend who knows the duty of a friend, in his Speech there is not a particle (of sense); what he hears, he hears amiss; for he knows not the path of righteousness.

### ವಿಶೇಷವಿಷಯಗಳು

ವೇದಗಳನ್ನೂ ವೇದಮಂತ್ರಗಳ ಅರ್ಥವನ್ನೂ ತಿಳಿದು ಅವುಗಳಿಗೆ ಮಿತ್ರನಂತಿರುವ ಪುರುಷನ ಮಾತುಗಳನ್ನು ಯಾವ ಪುರುಷನು ಅಲಕ್ಷ್ಯದಿಂದ ತಿರಸ್ಕರಿಸುವನೋ ಆ ಪುರುಷನ ಮಾತುಗಳಲ್ಲಿಯೂ ವ್ಯವಹಾರಗಳಲ್ಲಿಯೂ ಯಾವ ಉತ್ತಮವಾದ ಅಂಶವೂ ಇರುವುದಿಲ್ಲ. ಅವನು ಹೇಳುವುದೂ ಕೇಳುವುದೂ ಎಲ್ಲಾ ಅಸತ್ಯವೇ. ಅವನಿಗೆ ಉತ್ತಮವಾದ ಕಾರ್ಯಗಳಲ್ಲಿ ಆಸಕ್ತಿಯಾಗಲೀ, ಶ್ರದ್ಧೆಯಾಗಲೀ ಇರುವುದಿಲ್ಲ. ಅವನು ಸಜ್ಜನರ ಮಾರ್ಗವನ್ನು ಅನುಸರಿಸುವುದಿಲ್ಲ ಎಂದು ಮುಖ್ಯಾಭಿಪ್ರಾಯವು.

### ಸಂಹಿತಾಪಾಠಃ

ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ ಬಭೂವುಃ ।
ಆದಘ್ನಾಸ ಉ ಪಕಕ್ಷಾಸ ಉತ್ವೇ ಹ್ರದಾ ಇವ ಸ್ನಾತ್ವಾ ಉ ತ್ವೇ ದದೃಶ್ರೇ ॥

### ಪದಪಾಠಃ

ಅಕ್ಷಣ್ಽವಂತಃ । ಕರ್ಣಽವಂತಃ । ಸಖಾಯಃ । ಮನಃಽಜವೇಷು । ಅಸಮಾಃ । ಬಭೂವುಃ ।
ಆದಘ್ನಾಸಃ । ಉಪಽಕಕ್ಷಾಸಃ । ಊಂ ಇತಿ । ತ್ವೇ । ಹ್ರದಾಃಽಇವ । ಸ್ನಾತ್ವಾಃ । ಊಂ ಇತಿ । ತ್ವೇ ।
ದದೃಶ್ರೇ ॥ ೭ ॥

### ಸಾಯಣಭಾಷ್ಯಂ

ಅಕ್ಷಣ್ವಂತೋಽಕ್ಷಿಮಂತಃ ॥ ಛಂದಸ್ಯಪಿ ದೃಶ್ಯತ ಇತ್ಯಕ್ಷಿಶಬ್ದಾದನಜ್ । ಅನೋ ನುಡಿತಿ ನುಟ್ ॥ ಅನೇನ ದೃಶ್ಯತೇ ಸರ್ವಮಿತ್ಯಕ್ಷಿ ॥ ಯದ್ವಾ । ತೈಜಸತ್ವಾದನ್ಯೇಭ್ಯೋಽಂಗೇಭ್ಯೋ ವ್ಯಕ್ತತರಂ । ತಥಾ ಚ ಶ್ರೂಯತೇ । ತಸ್ಮಾದೇತೇ ವ್ಯಕ್ತತರೇ ಇವೇತಿ । ತಾದೃಶಾಕ್ಷಿಯುಕ್ತಾಃ । ಕರ್ಣವಂತಃ । ಕರ್ಣೋ ನಿಕೃತ್ತದ್ವಾರಃ। ಗರ್ಭಾವಸ್ಥಾಯಾಮೇವ ಕೇನಾಪಿ ನಿರ್ಮಿತಬಿಲ ಇತ್ಯರ್ಥಃ। ಯದ್ವಾ। ಶರೀರಸ್ಯ ಶಿರಸೋ ವೋರ್ಧ್ವಂ ಗತೇ ಉಚ್ಚೈಃ ಸ್ಥಿತೇ। ಕರ್ಣವಿಲಕ್ಷಣಾಕಾಶವಂತಃ। ತಥಾ ಚಾಮ್ನಾಯತೇ । ಖುಚ್ಛಂತೀ ಇವ ಖೇ ಉದಗಂತಾಮಿತಿ । ತಾದೃಶಾಃ ಸಖಾಯಃ । ಸಮಾನಂ ಖ್ಯಾನಂ ಜ್ಞಾನಂ ಯೇಷಾಮಿತಿ ಸಖಾಯಃ। ತೇಷು ವಾಕ್ಯೇಷು ಬಾಹ್ಯೇಷ್ವಿಂದ್ರಿಯೇಷು ಸಮಾನಜ್ಞಾನಾ ಇತ್ಯರ್ಥಃ । ತೇ ಮನೋಜವೇಷು। ಮನಸಾ ಗಮ್ಯಂತೇ ಜ್ಞಾಯಂತ ಇತಿ ಮನೋಜವಾಃ ಪ್ರಜ್ಞಾದ್ಯಾಃ। ತೇಷ್ವಸಮಾ ಅತುಲ್ಯಾ ಬಭೂವುಃ । ಭವಂತಿ। ತೇಷು ಮಧ್ಯೇ ಕೇಚಿದಾದಘ್ನಾಸಃ ॥ ಆಸ್ಯಶಬ್ದಸ್ಯ ಪೃಷೋದರಾದಿತ್ವಾದಾಕಾರಾದೇಶಃ ॥ ಆಸ್ಯದಘ್ನಾ ಆಸ್ಯಪ್ರಮಾಣೋದಕಾ ಹ್ರದಾ ಇವೇತಿ ಮಧ್ಯಮಪ್ರಜ್ಞಾನಾಹ । ಅಥ ತ್ವ ಏಕೇ ॥ ಸರ್ವನಾಮತ್ವಾಜ್ಜಸಃ

**ಶೀಭಾವಃ ॥ ಉಪಕಕ್ಷಾಸಃ ಕಕ್ಷಸಮೀಪಪ್ರಮಾಣೋದಕಾ ಹ್ರದಾ ಇವ । ಅಲ್ಪೋದಕಾ ಇತ್ಯರ್ಥಃ । ಅನೇನಾಲ್ಪಪ್ರಜ್ಞಾನಾಹ । ತಥಾ ತ್ವೇ ಏಕೇ ಸ್ನಾತ್ವಾಃ ॥ ಸ್ನಾತೇಃ ಕೃತ್ಯಾರ್ಥೇ ತ್ವನ್ಪ್ರತ್ಯಯಃ । ಪಾ. ೩-೪-೧೪ । ಸ ಚಾರ್ಹೇ ಕೃತ್ಯತೃಚಶ್ಚ । ಪಾ. ೩-೩-೧೬೯ । ಇತ್ಯರ್ಹಾರ್ಥೇ ಚ ಭವತಿ ॥ ಸ್ನಾನಾರ್ಹಾ ಅಪ್ರೋಽಭ್ಯೋದಕಾ ಹ್ರದಾ ಇವ ದದೃಶ್ರೇ । ದೃಶ್ಯಂತೇ । ಅನೇನ ಮಹಾಪ್ರಜ್ಞಾನಾಹ । ಉಃ ಪೂರಣಃ । ಅಕ್ಷಿಮಂತಃ ಕರ್ಣವಂತಃ ಸಖಾಯೋಽಕ್ಷಿ ಚಕ್ಷ್ಟೇರಿತ್ಯಾದಿಕಂ ನಿರುಕ್ತಮಂತ್ರೇ ದ್ರಷ್ಟವ್ಯಂ । ನಿ. ೧-೯ ॥**

ಪ್ರತಿಪದಾರ್ಥ

**ಅಕ್ಷಣ್ವಂತಃ**—ಸಮಾನವಾದ ಚಕ್ಷುಸ್ಸುಳ್ಳವರೂ । **ಕರ್ಣವಂತಃ**—ಸಮಾನವಾದ ಶ್ರೋತ್ರೇಂದ್ರಿಯವುಳ್ಳವರೂ । **ಸಖಾಯಃ**—ಮಿತ್ರರೇ ಆಗಿದ್ದಾರೆ (ಬಾಹ್ಯವ್ಯವಹಾರದಲ್ಲಿ ಒಂದೇ ಆಗಿದ್ದಾರೆ) । **ಮನೋಜವೇಷು**—ಮಾನಸಿಕಶಕ್ತಿಯ ವಿಷಯದಲ್ಲಿ । **ಅಸಮಾಃ ಬಭೂವುಃ**—ಒಂದೇ ರೀತಿಯಿರುವುದಿಲ್ಲ (ಇವರಲ್ಲಿ ಕೆಲವರು) । **ಆದಘ್ನಾಸಃ**—ಮುಖದವರೆಗೆ ನೀರುಳ್ಳ ಕೊಳದಂತೆ ಕೊಂಚಮಟ್ಟಿನ ಪ್ರಜ್ಞೆಯುಳ್ಳವರು । **ತ್ವೇ**—ಇನ್ನು ಕೆಲವರು । **ಉಪಕಕ್ಷಾಸಃ**—ಕಕ್ಷಪ್ರಮಾಣದ ನೀರುಳ್ಳ ಕೊಳದಂತೆ ಅಲ್ಪಮತಿಯುಳ್ಳವರಾಗಿದ್ದಾರೆ । **ತ್ವೇ**—ಇನ್ನು ಕೆಲವರು । **ಸ್ನಾತ್ವಾಃ**—ಸ್ನಾನಕ್ಕೆ ಯೋಗ್ಯವಾದ । **ಹ್ರದಾ ಇವ**—ಆಳವಾದ ನೀರುಳ್ಳ ಕೊಳದಂತೆ । **ದದೃಶ್ರೇ**—ತೋರುತ್ತಾರೆ.

ಭಾವಾರ್ಥ

ಸಾಧಾರಣವಾಗಿ ಮಾನವರೆಲ್ಲರೂ ಬಾಹ್ಯರೂಪಗಳಿಂದ ಒಂದೇಸಮನಾಗಿದ್ದಾರೆ. ಚಕ್ಷುಸ್ಸು, ಶ್ರೋತ್ರ ಇತ್ಯಾದೀಂದ್ರಿಯಗಳು ಎಲ್ಲರಿಗೂ ಸಮಾನವಾಗಿವೆ. ಆದರೆ, ಮಾನಸಿಕಶಕ್ತಿಯ ವಿಷಯದಲ್ಲಿ ಮಾತ್ರ ಅವರು ಸಮಾನರಲ್ಲ. ಕೆಲವರ ಶಕ್ತಿಯು ಅತ್ಯಧಿಕ. ಇನ್ನು ಕೆಲವರ ಶಕ್ತಿಯು ಅಲ್ಪ. ಮುಖದವರೆಗೆ ಮಾತ್ರ ನೀರುಳ್ಳ ಕೊಳದಂತೆ ಕೊಂಚ ಪ್ರಜ್ಞೆಯುಳ್ಳವರು ಕೆಲವರು. ಸೊಂಟದವರೆಗೆ ನೀರುಳ್ಳ ಕೊಳದಂತೆ ಇನ್ನೂ ಕೊಂಚ ಕಡಿಮೆಯಾದ ಪ್ರಜ್ಞೆಯುಳ್ಳವರು ಕೆಲವರು. ಆದರೆ ಮತ್ತೆ ಕೆಲವರು, ಆಳವಾದ ನೀರುಳ್ಳ ಕೊಳದಂತೆ ಗಭೀರವಾದ ಪ್ರಜ್ಞೆಯನ್ನು ಹೊಂದಿರುತ್ತಾರೆ.

## English Translation

Friends possessing eyes, possessing ears, were (yet) unequal tn mental apprehension ; some seemed like pools reaching to the mouth, others reaching to the loins, others like pools in which one ean bathe.

ವಿಶೇಷವಿಷಯಗಳು.

ಈ ಋಕ್ಕಿನಲ್ಲಿ ಎಲ್ಲಾ ಮನುಷ್ಯರ ಜ್ಞಾನವೂ (ತಿಳಿವಳಿಕೆಯೂ) ಒಂದೇ ಸಮನಾಗಿರುವುದಿಲ್ಲ. ಕೆಲವರ ಜ್ಞಾನವು ಅತ್ಯಧಿಕವಾಗಿಯೂ, ಕೆಲವರದು ಮಧ್ಯಸ್ಥವಾಗಿಯೂ, ಮತ್ತೆ ಕೆಲವರದು ಅತ್ಯಲ್ಪವಾಗಿಯೂ ಇರುವುದೆಂದು ಕೊಳದಲ್ಲಿರುವ ನೀರಿನ ದೃಷ್ಟಾಂತದಿಂದ ವರ್ಣಿಸುವರು. ಈ ಋಕ್ಕಿಗೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

**ಅಕ್ಷಿಮಂತಃ ಕರ್ಣವಂತಃ ಸಖಾಯಃ । ಅಕ್ಷಿಃ ಚಷ್ಟೇಃ ಅನಕ್ತೇರಿತ್ಯಾಗ್ರಾಯಣಃ । ತಸ್ಮಾದೇತೇ ವ್ಯಕ್ತತರೇ ಇವ ಭವತ ಇತಿ ಹ ವಿಜ್ಞಾಯತೇ । ಕರ್ಣಃ ಕೃಂತತೇರ್ನಿಕೃತ್ತದ್ವಾರೋ ಭವತಿ । ಋಚ್ಛತೇರಿತ್ಯಾಗ್ರಾಯಣಃ । ಋಚ್ಛಂತೀವ ಖೇ ಉದಗಂತಾಮಿತಿ ಹ ವಿಜ್ಞಾಯತೇ**

**ಮನಸಾಂ ಪ್ರಜವೇಷ್ವಸಮಾ ಬಭೂವುಃ । ಆಸ್ಯದಘ್ನಾ ಅಪರೇ ಉಪಕಕ್ಷದಘ್ನಾ ಅಪರೇ । ಆಸ್ಯಮಸ್ಯತೇಃ । ಆಸ್ಯಂದತ ಏತದನ್ನಮಿತಿ ವಾ । ದಘ್ನಂ ದಘ್ಯತೇಃ ಸ್ರವತಿಕರ್ಮಣಃ । ದಸ್ಯತೇರ್ವಾ ಸ್ಯಾದ್ವಿದಸ್ತತರಂ ಭವತಿ । ಪ್ರಸ್ನೇಯಾ ಹ್ರದಾ ಇವೈಕೇ । ಪ್ರಸ್ನೇಯಾ ದದೃ-ಶಿರೇ ಸ್ನಾನಾರ್ಹಾಃ । ಹ್ರದೋ ಹ್ರಾದತೇಃ ಶಬ್ದಕರ್ಮಣಃ । ಹ್ರಾದತೇರ್ವಾ ಸ್ಯಾಚ್ಛೀತೀ-ಭಾವಕರ್ಮಣಃ ॥**

(ನಿ. ೧-೯)

ಎಲ್ಲ ಸ್ನೇಹಿತರೇ, ಎಲ್ಲಾ ಮನುಷ್ಯರಿಗೂ ಕಣ್ಣುಗಳಿರುವವು, ಕಿವಿಗಳಿರುವವು. (ಅದರಂತೆ ಇತರ ಅವಯವಗಳೂ ಎಲ್ಲರಿಗೂ ಇರುವವು. ಅಥವಾ ಸರ್ವರಿಗೂ ಸಮಾನವಾದ ಅವಯವಗಳಿದ್ದಂತೆ ಅನೇಕರು ಸಮಾನಶಾಸ್ತ್ರಾಭ್ಯಾಸವನ್ನೂ ಮಾಡಿರುವರು) ಆದರೆ ಅವರ ಬುದ್ಧಿವಿಕಾಸವು ಬೇರೆ ಬೇರೆಯಾಗಿರುವುದು. ಕೆಲವರಿಗೆ ಬುದ್ಧಿಯು ಹೆಚ್ಚಾಗಿಯೂ ಕೆಲವರಿಗೆ ಸಾಧಾರಣವಾಗಿಯೂ ಮತ್ತೆ ಕೆಲವರಿಗೆ ಅತ್ಯಲ್ಪವಾಗಿಯೂ ಇರುವವು. ಎಂದರೆ ಬಾಹ್ಯಾವಯವಗಳಾದ ಣ, ಕಿವಿ, ಕೈಕಾಲುಗಳು ಎಲ್ಲರಿಗೂ ಒಂದೇ ಸಮನಾಗಿದ್ದರೂ ಬುದ್ಧಿಶಕ್ತಿಯಲ್ಲಿ ಮಾತ್ರ ವ್ಯತ್ಯಾಸವು ಕಂಡುಕಣ್ಣ ಬರುವುದು. ಹೇಗೆಂದರೆ ಕೊಳಗಳಲ್ಲಿ ಕೆಲವು ಒಂದಾಳುದ್ದದವರೆಗೆ ಎಂದರೆ ನೀರಿನಲ್ಲಿ ನಿಂತುಕೊಂಡರೆ ಮುಖದ (ಕತ್ತಿನ) ವರೆಗೂ ಆಳವಾಗಿರುವವು. ಮತ್ತೆ ಕೆಲವು ಕೊಳಗಳಲ್ಲಿ ನೀರು ಸೊಂಟಮಟ್ಟಕ್ಕೆ ಇರುವುದು. ಇವು ನೋಡುವುದಕ್ಕೆ ಮಾತ್ರ ಉಪಯೋಗವಾಗಿರುವವು. ಇವುಗಳಲ್ಲಿ ಸ್ನಾನಮಾಡಲು ಆಗುವುದಿಲ್ಲ. ಮತ್ತೆ ಕೆಲವು ಸ್ನಾನಮಾಡುವುದಕ್ಕೆ ಅರ್ಹವಾಗಿರುವವು. ಎಂದು ನಿರ್ವಚನಾಭಿಪ್ರಾಯವು.

ಅಕ್ಷಿ ಮೊದಲಾದ ಶಬ್ದಗಳಿಗೆ ರೂಪನಿಷ್ಪತ್ತಿಯನ್ನು ಇಲ್ಲಿ ಹೇಳಿರುವರು. ಅಕ್ಷಿ ಶಬ್ದವು ನೋಡು ಎಂಬರ್ಥವುಳ್ಳ ಚಕ್ಷ್ ಧಾತುವಿನಿಂದ ನಿಷ್ಪನ್ನವಾಗಿದೆ. ಅಲಂಕರಿಸು, ಅಥವಾ ಅಲಂಕಾರಾರ್ಥವಾಗಿ ಅಂಜನವನ್ನು (ಕಾಡಿಗೆಯನ್ನು) ಕಣ್ಣಿಗೆ ಹಚ್ಚು ಎಂಬ ಅರ್ಥವುಳ್ಳ ಅನಕ್ತಿ ಧಾತುವಿನಿಂದ **ಅಕ್ಷಿ** ಶಬ್ದವು ನಿಷ್ಪನ್ನವಾಗಿದೆಯೆಂದು ಆಗ್ರಾಯಣರ ಮತವು. ಅವು (ಕಣ್ಣುಗಳು) ಮುಖದಲ್ಲಿ ಸುಂದರವಾಗಿಯೂ, ವ್ಯಕ್ತವಾಗಿಯೂ ಕಾಣುವವು ಎಂಬರ್ಥವುಳ್ಳ **ತಸ್ಮಾದೇತೇ ವ್ಯಕ್ತತರೇ ಇವ ಭವತಃ** ಎಂಬ ಶ್ರುತಿವಾಕ್ಯವೂ ಉದಾಹರಣೆಯಾಗಿರುವುದು. **ಕರ್ಣ** ಶಬ್ದವು ಕತ್ತರಿಸು, ತೂತುಮಾಡು ಎಂಬರ್ಥವಿರುವ **ಕೃಂತತಿ** ಧಾತುವಿನಿಂದ ನಿಷ್ಪನ್ನವಾಗಿದೆ. ಏಕೆಂದರೆ ಕರ್ಣವು (ಕಿವಿಯು) ಶರೀರದೊಳಕ್ಕೆ ಕತ್ತರಿಸಿ ಕೊರೆದಿರುವ ದ್ವಾರದಂತಿದೆ. ಮತ್ತು ಕರ್ಣಶಬ್ದವು ಹೋಗು ಎಂಬರ್ಥವುಳ್ಳ **ಋ** (ಗತೌ) ಎಂಬ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಆಗ್ರಾಯಣರ ಮತವು. ಕಿವಿಗಳು ಶರೀರದಿಂದ ಮೇಲೆದ್ದು ಹೊರಟಿರುವಂತೆ ಕಾಣುವುದರಿಂದ ಈ ಹೆಸರು ಬಂದಿದೆಯೆಂದು ಅವರ ಅಭಿಮತವು. ಈ ವಿಷಯದಲ್ಲಿ **ಋಚ್ಛಂತೀವ ಖೇ ಉದಗಂತಾಂ** ಎಂಬ ಶ್ರುತಿವಾಕ್ಯದ ಉದಾಹರಣೆಯೂ ಇದೆ.

**ಆಸ್ಯ** (ಮುಖ) ಶಬ್ದವು **ಅಸು ಪ್ರಕ್ಷೇಪಣೆ** (ಎಸೆ) ಎಂಬ ಧಾತುವಿನಿಂದಾಗಲಿ, ಹರಿ, ಸ್ರವಿಸು ಎಂಬರ್ಥವುಳ್ಳ **ಆಸ್ಯಂದ್** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಏಕೆಂದರೆ ಆಹಾರವು ಇದರ ಮೂಲಕ ಉದರಕ್ಕೆ ಹರಿದುಹೋಗುವುದು ಮತ್ತು ಬಾಯಿಯಲ್ಲಿ ರಸವು ಸ್ರವಿಸುವುದು.

**ದಘ್ನಂ** ಎಂಬ ಶಬ್ದವು ಹರಿಯುವುದು ಎಂಬರ್ಥವುಳ್ಳ **ದಘ್** ಧಾತುವಿನಿಂದ ನಿಷ್ಪನ್ನವಾಗಿದೆ. ಅಥವಾ ಕ್ಷೀಣವಾಗು ಎಂಬರ್ಥವುಳ್ಳ **ದಸ್ಯತಿ** ಧಾತುವಿನಿಂದಲೂ ನಿಷ್ಪನ್ನವಾಗಬಹುದು. **ಸ್ನಾತ್ವಾಃ—ಪ್ರಸ್ನೇಯಾಃ** ಎಂದರೆ ಸ್ನಾನಮಾಡಲು ಯೋಗ್ಯವಾದವು ಎಂದರ್ಥವು.

ಹ್ರದಃ ಎಂಬ ಶಬ್ದವು ಶಬ್ದಮಾಡು ಎಂಬರ್ಥವುಳ್ಳ ಹ್ರದ್ ಧಾತುವಿನಿಂದಾಗಲೀ, ತಣ್ಣಗಿರು, ಶೈತ್ಯವನ್ನುಂಟು ಮಾಡು ಎಂಬರ್ಥವುಳ್ಳ ಹ್ಲಾದ್ ಧಾತುವಿನಿಂದಾಗಲೀ ನಿಷ್ಪನ್ನವಾಗಬಹುದು. ಬೇಸಿಗೆಯಲ್ಲಿಯೂ ಸಹ ಈ ಕೊಳದ ನೀರು ತಣ್ಣಗಿರುವುದರಿಂದ ಇದಕೆ ಹ್ರದವೆಂದು ಹೆಸರು.

ಸಂಹಿತಾಪಾಠಃ

ಹೃದಾ ತಷ್ಟೇಷು ಮನಸೋ ಜವೇಷು ಯದ್ಬ್ರಾಹ್ಮಣಾಃ ಸಂಯಜಂತೇ ಸಖಾಯಃ ।
ಅತ್ರಾಹ ತ್ವಂ ವಿ ಜಹುರ್ವೇದ್ಯಾಭಿರೋಹಬ್ರಹ್ಮಾಣೋ ವಿ ಚರಂತ್ಯು ತ್ವೇ ॥

ಪದಪಾಠಃ

ಹೃದಾ । ತಷ್ಟೇಷು । ಮನಸಃ । ಜವೇಷು । ಯತ್ । ಬ್ರಾಹ್ಮಣಾಃ । ಸಂಽಯಜಂತೇ । ಸಖಾಯಃ ।
ಅತ್ರ । ಅಹ । ತ್ವಂ । ವಿ । ಜಹುಃ । ವೇದ್ಯಾಭಿಃ । ಓಹಽಬ್ರಹ್ಮಾಣಃ । ವಿ । ಚರಂತಿ । ಊಂ ಇತಿ । ತ್ವೇ ॥

ಸಾಯಣಭಾಷ್ಯಂ

ಸಖಾಯಃ ಸಮಾನಖ್ಯಾನಾ ಬ್ರಾಹ್ಮಣಾ ಹೃದಾ ಬುದ್ಧಿಮತಾಂ ಹೃದಯೇನ ತಷ್ಟೇಷು ನಿಶ್ಚಿತೇಷು ಪರಿಕಲ್ಪಿತೇಷು ಮನಸೋ ಜವೇಷು ಗಂತವ್ಯೇಷು ವೇದಾರ್ಥೇಷು ಗುಣದೋಷನಿರೂಪಣಾ ಯದ್ಯದಾ ಸಂಯಜಂತೇ ಸಂಗಚ್ಛಂತೇ । ಯಜಿರತ್ರ ಸಂಗತಿಕರಣವಾಚೀ॥ ಅತ್ರಾಸ್ಮಿನ್ಬ್ರಾಹ್ಮಣಸಂಘೇ ತ್ವಮವಿಜ್ಞಾತಾರ್ಥಮೇಕಂ ಪುರುಷಂ ವೇದ್ಯಾಭಿರ್ವೇದಿತವ್ಯಾಭಿರ್ವಿದ್ಯಾಭಿಃ ಪ್ರವೃತ್ತಿಭಿರ್ವಾ ವಿ ಜಹುಃ । ವಿಶೇಷೇಣ ಪರಿತ್ಯಜಂತಿ । ಅಹೇತಿ ವಿನಿಶ್ಚಯೇ । ಓಹಬ್ರಹ್ಮಾಣಃ । ಊಹ್ಯಮಾನಂ ಬ್ರಹ್ಮ ವಿದ್ಯಾಶ್ರುತಿಮತಿಬುದ್ಧಿಲಕ್ಷಣಂ ಯೇಷಾಂ ತೇ ತಥೋಕ್ತಾಃ । ತಾದೃಶಾಸ್ತ್ವ ಏಕೇ ವಿದ್ವಾಂಸೋ ವಿ ಚರಂತಿ । ಯಥಾಕಾಮಂ ವೇದಾರ್ಥೇಷು ವಿನಿಶ್ಚಯಾರ್ಥಂ ಪ್ರವರ್ತಂತೇ । ಉಃ ಪ್ರಸಿದ್ಧೌ । ಹೃದಾ ತಷ್ಟೇಷು ಮನಸಾಂ ಜವೇಷ್ವಿತ್ಯಾದಿಕಂ ನಿರುಕ್ತಂ ದ್ರಷ್ಟವ್ಯಂ । ನಿ. ೧೩–೧೩ ॥

ಪ್ರತಿಪದಾರ್ಥ

**ಸಖಾಯಃ**—ಮಿತ್ರರಾದ । **ಬ್ರಾಹ್ಮಣಾಃ**—ಬ್ರಹ್ಮತತ್ತ್ವವನ್ನರಿತವರು । **ಹೃದಾ**—ಧ್ಯಾನಾತ್ಮಕವಾದ ಹೃದಯದಿಂದ । **ತಷ್ಟೇಷು**—ಪರಿಕಲ್ಪಿತವಾದುದೂ । **ಮನಸಃ ಜವೇಷು**—ಮಾನಸಿಕವಾದ ಶಕ್ತಿಯಿಂದ ನಿಷ್ಕರ್ಷಮಾಡಲ್ಪಟ್ಟುವೂ ಆದ ವೇದಾರ್ಥಗಳ ವಿಷಯದಲ್ಲಿ । **ಯತ್**—ಯಾವಾಗ । **ಸಂ ಯಜಂತೇ**—ಒಂದೇ ಅಭಿಪ್ರಾಯವುಳ್ಳವರಾಗಿರುತ್ತಾರೆಯೋ । **ಅತ್ರ**—ಆ ಕಾಲದಲ್ಲಿ । **ತ್ವಂ**—ಜ್ಞಾನರಹಿತನಾದ ಪುರುಷನನ್ನು । **ವೇದ್ಯಾಭಿಃ**—ಜ್ಞಾನವಿಷಯವಾದ ಸನ್ನಿವೇಶಗಳಿಂದ । **ವಿ ಜಹುಃ**—ದೂರಮಾಡುತ್ತಾರೆ । **ಓಹಬ್ರಹ್ಮಾಣಃ**—ಬ್ರಹ್ಮಜ್ಞಾನವನ್ನು ಹೊಂದಿರುವ । **ತ್ವೇ**—ಕೆಲವು ವಿದ್ವಾಂಸರು । **ವಿ ಚರಂತಿ**—ಅವರವರ ಶಕ್ತ್ಯನುಸಾರವಾಗಿ ವೇದಗಳ ಅರ್ಥಗಳನ್ನು ನಿಶ್ಚಯಿಸುತ್ತಾರೆ.

ಭಾವಾರ್ಥ

ಬ್ರಹ್ಮತತ್ತ್ವವನ್ನರಿತ ಮಿತ್ರರು ಧ್ಯಾನಾತ್ಮಕವಾದ ಹೃದಯದಿಂದ ಪರಿಕಲ್ಪಿತವಾದುದೂ, ಮಾನಸಿಕ ಶಕ್ತಿಯಿಂದ ನಿಷ್ಕರ್ಷವಾಡಲ್ಪಟ್ಟವೂ ಆದ ವೇದಾರ್ಥಗಳ ವಿಷಯದಲ್ಲಿ ಯಾವಾಗ ಒಂದೇ ಅಭಿಪ್ರಾಯವುಳ್ಳವರಾಗಿರುತ್ತಾರೆಯೋ, ಆ ಕಾಲದಲ್ಲಿ ಜ್ಞಾನರಹಿತನಾದ ಪುರುಷನನ್ನು ಅವರು ಜ್ಞಾನವಿಷಯವಾದ ಸನ್ನಿವೇಶಗಳಿಂದ ದೂರ ಮಾಡುತ್ತಾರೆ. ಬ್ರಹ್ಮಜ್ಞಾನವನ್ನು ಹೊಂದಿರುವ ಕೆಲವು ವಿದ್ವಾಂಸರು ಅವರವರ ಶಕ್ತ್ಯನುಸಾರವಾಗಿ ವೇದಗಳ ಅರ್ಥಗಳನ್ನು ನಿಶ್ಚಯಿಸುತ್ತಾರೆ.

English Translation

Although Brahmans who are friends concur in the mental apprehensions which are conceived by the heart (of the wise), yet in this (assembly) they abandon one man (to ignorance of the sciences) that are to be known.

ಸಂಹಿತಾಪಾಠಃ

ಇಮೇ ಯೇ ನಾರ್ವಾಙ್ನ ಪರಶ್ಚರಂತಿ ನ ಬ್ರಾಹ್ಮಣಾಸೋ ನ ಸುತೇಕರಾಸಃ।
ತ ಏತೇ ವಾಚಮಭಿಪದ್ಯ ಪಾಪಯಾ ಸಿರೀಸ್ತಂತ್ರಂ ತನ್ವತೇ ಅಪ್ರಜಜ್ಞಯಃ॥

ಪದಪಾಠಃ

ಇಮೇ । ಯೇ । ನ । ಅರ್ವಾಕ್ । ನ । ಪರಃ । ಚರಂತಿ । ನ । ಬ್ರಾಹ್ಮಣಾಸಃ । ನ । ಸುತೇಽಕರಾಸಃ ।
ತೇ । ಏತೇ । ವಾಚಂ । ಅಭಿಽಪದ್ಯ । ಪಾಪಯಾ । ಸಿರೀಃ । ತಂತ್ರಂ । ತನ್ವತೇ । ಅಪ್ರಽಜಜ್ಞಯಃ ॥ ೯ ॥

ಸಾಯಣಭಾಷ್ಯಂ

ಅನಯಾ ವೇದಾರ್ಥಾನಭಿಜ್ಞಾ ನಿಂದ್ಯಂತೇ । ಇಮೇ ಯೇಽವಿದ್ವಾಂಸೋಽರ್ವಾಗರ್ವಾಚೀನಮಧೋಭಾವಿನ್ಯಸ್ಮಿಂಲ್ಲೋಕೇ ಬ್ರಾಹ್ಮಣೈಃ ಸಹ ನ ಚರಂತಿ ಯೇ ಪರಃ ಪರಸ್ತಾದ್ದೇವೈಃ ಸಹ ನ ಚರಂತಿ ತೇ ಬ್ರಾಹ್ಮಣಾಸೋ ಬ್ರಾಹ್ಮಣಾ ವೇದಾರ್ಥತತ್ಪರಾ ನ ಭವಂತಿ । ತಥಾ ಸುತೇಕರಾಸಃ ಸೋಮಂ ಸುತಮಭಿಷುತಂ ಕುರ್ವಂತೀತಿ ಸುತೇಕರಾ ಋತ್ವಿಜಃ । ತೇಽಪಿ ನ ಭವಂತಿ । ಅಪ್ರಜಜ್ಞಯಃ ॥ ಜಾನಾತೇರಾದೃಗಮಹನ ಇತಿ ಕಿಪ್ರತ್ಯಯಃ ॥ ಅವಿದ್ವಾಂಸಸ್ತ ಏತೇ ಮನುಷ್ಯಾ ವಾಚಂ ಲೌಕಿಕೀಮಭಿಪದ್ಯ ಪ್ರಾಪ್ಯ ತಯಾ ಪಾಪಯಾ ಪಾಪಕಾರಿಣ್ಯಾ ವಾಚಾ ಯುಕ್ತಾಸ್ತೇ ಸಿರೀಃ ॥ ಛಂದಸೀವನಿಪಾವಿತೀಪ್ರತ್ಯಯಃ ಸುಪಾಂ ಸುಲುಗಿತಿ ಜಸಃ ಸುಃ ॥ ಸೀರಿಣೋ ಭೂತ್ವಾ ತಂತ್ರಂ ಕೃಷಿಲಕ್ಷಣಂ ತನ್ವತೇ । ವಿಸ್ತಾರಯಂತಿ । ಕುರ್ವಂತೀತ್ಯರ್ಥಃ । ಸರ್ವಥಾ ವೇದಾರ್ಥೋ ಜ್ಞೇಯ ಇತ್ಯಭಿಪ್ರಾಯಃ ॥

ಪ್ರತಿಪದಾರ್ಥ

**ಯೇ**—ವಿದ್ಯಾವಂತರಲ್ಲದ ಯಾರು । **ಅರ್ವಾಕ್**—ಈ ಭೂಲೋಕದಲ್ಲಿ । **ನ ಚರಂತಿ**—ವಿದ್ಯಾವಂತರೊಂದಿಗೆ ಸೇರಿ ಸಂಚರಿಸುವುದಿಲ್ಲವೋ । **ಪರಃ**—ದ್ಯುಲೋಕದಲ್ಲಿ । **ನ**—ದೇವತೆಗಳೊಡನೆ ಸಂಚರಿಸುವುದಿಲ್ಲವೋ । **ಇಮೇ**—ಅಂತಹ ಅಜ್ಞಾನಿಗಳು । **ನ ಬ್ರಾಹ್ಮಣಾಸಃ**—ಬ್ರಹ್ಮಜ್ಞಾನವುಳ್ಳವರಲ್ಲ । **ನ ಸುತೇಕರಾಸಃ**—

ಯಜ್ಞಕರ್ತರೂ ಅಲ್ಲ | **ಅಪ್ರಜಜ್ಞಯಃ**—ಪ್ರಜ್ಞಾರಹಿತರಾದ | **ತೇ ಏತೇ**—ಅಂತಹವರು | **ವಾಚಂ**—ಕೇವಲ ಲೌಕಿಕವಾದ ವಾಕ್ಕನ್ನು | **ಅಭಿಪದ್ಯ**—ಹೊಂದಿ | **ಪಾಪಯಾ**—ಅಶುದ್ಧವಾದ ವ್ಯವಹಾರವುಳ್ಳವರಾಗಿ | **ಸಿರೀಃ**—ಉಳುವ ಸಾಧನವನ್ನು ಹೊಂದಿ | **ತಂತ್ರಂ**—ಉಳುವುದೇ ಮುಂತಾದ ಕಾರ್ಯವನ್ನು | **ತನ್ವತೇ**—ವಿಸ್ತರಿಸುತ್ತಾರೆ.

ಭಾವಾರ್ಥ

ವಿದ್ಯಾವಂತರಲ್ಲದ ಯಾವ ಮಾನವರು ಈ ಲೋಕದಲ್ಲಿ ಜ್ಞಾನಿಗಳೊಂದಿಗೂ, ಪರದಲ್ಲಿ ದೇವತೆಗಳೊಂದಿಗೂ ಸೇರಿ ಆ ಸಂಪರ್ಕದ ಪ್ರಯೋಜನವನ್ನು ಹೊಂದುವುದಿಲ್ಲವೋ ಅವರು ಯಾವಾಗಲೂ ಅಜ್ಞಾನಿಗಳೇ ಆಗಿರುತ್ತಾರೆ. ಅವರಿಗೆ ಬ್ರಹ್ಮಜ್ಞಾನವೂ ಇಲ್ಲ, ಅವರು ಯಜ್ಞಕರ್ತರೂ ಅಲ್ಲ. ಪ್ರಜ್ಞಾರಹಿತರಾದ ಅಂತಹವರು ಕೇವಲ ಲೌಕಿಕವಾದ ವಾಕ್ಕನ್ನು ಹೊಂದಿ, ಅಶುದ್ಧವಾದ ವ್ಯವಹಾರವುಳ್ಳವರಾಗಿ ಉಳುವ ಸಾಧನವನ್ನು ಹೊಂದಿ ಉಳುವುದೇ ಮುಂತಾದ ಕಾರ್ಯವನ್ನು ವಿಸ್ತರಿಸುತ್ತಾರೆ (ಮಾಡುತ್ತಿರುತ್ತಾರೆ).

English Translation

Those illeterate men who not commingle with good Brahmins and gods, and who do not prepare Soma libations for the offering to the gods are always engaged in useless and sinful discourses and manual lahour such as agriculture.

ಸಂಹಿತಾಪಾಠಃ

ಸರ್ವೇ ನಂದಂತಿ ಯಶಸಾಗತೇನ ಸಭಾಸಾಹೇನ ಸಖ್ಯಾ ಸಖಾಯಃ |
ಕಿಲ್ಬಿಷಸ್ಪೃತ್ಪಿತುಷಣಿರ್ಹ್ಯೇಷಾಮರಂ ಹಿತೋ ಭವತಿ ವಾಜಿನಾಯ || ೧೦ ||

ಪದಪಾಠಃ

ಸರ್ವೇ | ನಂದಂತಿ | ಯಶಸಾ | ಆಽಗತೇನ | ಸಭಾಽಸಹೇನ | ಸಖ್ಯಾ | ಸಖಾಯಃ |
ಕಿಲ್ಬಿಷಽಸ್ಪೃತ್ | ಪಿತುಽಸನಿಃ | ಹಿ | ಏಷಾಂ | ಅರಂ | ಹಿತಃ | ಭವತಿ | ವಾಜಿನಾಯ || ೧೦ ||

ಸಾಯಣಭಾಷ್ಯಂ

ಸೋಮಪ್ರವಹಣೇ ಸರ್ವೇ ನಂದಂತೀತ್ಯೇಷಾ | ಸೂತ್ರಿತಂ ಚ | ಸೋಮ ಯಾಸ್ತೇ ಮಯೋಭುವ ಇತಿ ತಿಸ್ರಃ ಸರ್ವೇ ನಂದಂತಿ ಯಶಸಾಗತೇನ | ಆ. ೪-೪ | ಇತಿ ||

ಸಖಾಯಃ ಸಮಾನಖ್ಯಾನಾಃ ಸಮಾನಜ್ಞಾನಾಃ ಸರ್ವೇ ಸಭ್ಯಾ ಮನುಷ್ಯಾಃ ಸಭಾಸಹೇನ ಸಭಾಂ ಸೋಢುಂ ಶಕ್ನುವತಾ ಸಖ್ಯಾರ್ತ್ವಿಜಾಂ ಪ್ರತಿಭೂತೇನ ಯಜ್ಞಂ ಪ್ರತ್ಯಾಗತೇನ ಯಶಸಾ ಯಶಸ್ವಿನಾ ಸೋಮೇನ ಹೇತುನಾ ನಂದಂತಿ | ಹೃಷ್ಟಾ ಭವಂತಿ | ಸ ಹಿ ಸ ಏವ ಸೋಮ ಏಷಾಂ ಜನಾನಾಂ ಕಿಲ್ಬಿಷಸ್ಪೃತ್ | ಯಃ ಸ್ವಸ್ಮಾದನ್ಯಃ ಪುರುಷಃ ಶ್ರೇಷ್ಠತಾಮಶ್ನುತೇ ಸ ಕಿಲ್ಬಿಷಂ ಭವತಿ ಬಾಧ್ಯತ್ವೇನ | ಯಥಾ ಪಾಪಂ ಸದಾಚಾರ್ಯೈರ್ಬಾಧಿತವ್ಯಂ ಭವತಿ ತದ್ವತ್ | ಪಾಪರೂಪಸ್ಯ ಶತ್ರೋರ್ಬಾಧಕಃ | ಯದ್ವಾ | ಯಜ್ಞೇ ಸಾಧ್ವನುಪ್ರವಚನಾಕರಣೇನ ಯತ್ಕಿಲ್ಬಿಷಂ ಯೇಷಾಂ ಸಂಜಾಯತೇ ತದ್ಯೋ ಬಾಧತೇ ಸ ಕಿಲ್ಬಿಷಸ್ಪೃತ್

**ತಥಾ ತ್ವಂ ಪಿತುಷಣಿಃ । ಪಿತುರಿತ್ಯನ್ನನಾಮ ದಕ್ಷಿಣಾ ವಾ । ತಮನೇನ ಸೋಮೇನ ಸನೋತಿ ಯಜಮಾನಃ ಸಂಭಜತ ಇತಿ ತಾಪ್ಯಶಃ । ತೇಷಾಮನ್ನದಕ್ಷಿಣಾದಾತೇತ್ಯರ್ಥಃ । ಕಿಂಚ । ಹಿತಃ । ಪಾತ್ರೇಷು ನಿಹಿತಃ ಸೋಮೋ ವಾಜಿನಾಯ । ಇಂದ್ರಿಯಂ ವೀರ್ಯಂ ವಾಜಿನಂ । ತೇಷಾಂ ವೀರ್ಯಾಯ ತತ್ಕರ್ತುಮರಮಲಂ ಪರ್ಯಾಪ್ತಃ ಸಮರ್ಥೋ ಭವತಿ । ಸರ್ವೇ ನಂದಂತಿ ಯಶಸಾಗತೇನೇತ್ಯನ್ವಾಹ ಯಶೋ ವೈ ಸೋಮೋ ರಾಜೇತ್ಯಾದಿಕಮಿಂದ್ರಿಯಂ ವೈ ವೀರ್ಯಂ ವಾಜಿನಮಾಜರಸಂ ಹಾಸ್ಮೈ ವಾಜಿನಂ ನಾಪಚ್ಛಿದ್ಯತ ಇತ್ಯಂತಂ ಬ್ರಾಹ್ಮಣಮತ್ರಾನುಸಂಧೇಯಂ । ಐ. ಬ್ರಾ. ೧-೧೩ ॥**

ಪ್ರತಿಪದಾರ್ಥ

**ಸಖಾಯಃ**—ಸಮಾನವಾದ ಜ್ಞಾನವುಳ್ಳ । **ಸರ್ವೇ**—ಸಕಲ ಋತ್ವಿಕ್ಕುಗಳೂ (ಪ್ರಾಜ್ಞರೂ) । **ಸಭಾಸಹೇನ**—ವಿದ್ವತ್ಸಭೆಯನ್ನು ನಿರ್ವಹಿಸಲು ಶಕ್ತವಾದುದೂ । **ಸಖ್ಯಾ**—ಋತ್ವಿಕ್ಕುಗಳಿಗೆ ಮಿತ್ರರೂಪವಾದುದೂ। **ಆಗತೇನ**—ಯಜ್ಞಾಭಿಮುಖವಾದುದೂ । **ಯಶಸಾ**—ಯಶಸ್ವಿಯಾದುದೂ ಆದ ಸೋಮನ ಆಗಮನದಿಂದ । **ನಂದಂತಿ**—ಹರ್ಷಗೊಳ್ಳುತ್ತಾರೆ । **ಹಿ**—ಏತಕ್ಕೆಂದರೆ । **ಹಿತಃ**—ಯಜ್ಞಪಾತ್ರೆಗಳಲ್ಲಿರುವ ಸೋಮನು । **ಏಷಾಂ**—ಈ ಋತ್ವಿಕ್ಕುಗಳಿಗೆ । **ಕಿಲ್ಬಿಷಸ್ಪೃತ್**—ಪಾಪನಾಶಕನೂ (ಶತ್ರುನಾಶಕನೂ) । **ಪಿತುಷಣಿಃ**—ಅನ್ನಪ್ರದನೂ ಆಗಿ । **ವಾಜಿನಾಯ**—ಅವರ ಶಕ್ತಿಯ ಬೆಳೆವಣಿಗೆಗೆ । **ಅರಂ**—ಶಕ್ತನಾಗಿ । **ಭವತಿ**—ಆಗುತ್ತಾನೆ.

ಭಾವಾರ್ಥ

ಸಮಾನವಾದ ಜ್ಞಾನವುಳ್ಳವರೂ, ಮಿತ್ರರೂ ಆದ ಸಕಲ ಋತ್ವಿಕ್ಕುಗಳೂ ಸಹ ವಿದ್ವತ್ಸಭೆಯನ್ನು ನಿರ್ವಹಿಸಲು ಶಕ್ತವಾದುದೂ, ಋತ್ವಿಕ್ಕುಗಳಿಗೆ ಮಿತ್ರರೂಪವಾದುದೂ, ಯಜ್ಞಾಭಿಮುಖವಾದುದೂ, ಯಶಸ್ವಿಯಾದೂ ಆದ ಸೋಮನ ಆಗಮನದಿಂದ ಹರ್ಷಗೊಳ್ಳುತ್ತಾರೆ. ಯಜ್ಞಪಾತ್ರೆಗಳಲ್ಲಿರುವ ಸೋಮನು ಈ ಋತ್ವಿಕ್ಕುಗಳಿಗೆ ಪಾಪರೂಪವಾದ ಶತ್ರುನಾಶಕನೂ, ಅನ್ನಪ್ರದನೂ ಆಗಿ ಅವರ ಶಕ್ತಿಯ ಬೆಳೆವಣಿಗೆಗೆ ಸಹಾಯಕನಾಗುತ್ತಾನೆ.

English Translation

When the friend Soma, the sin-remover and food-provider is prepared and placed at the altar all the friends (priests) express great joy at Soma's triumphant coming.

ವಿಶೇಷವಿಷಯಗಳು

ಸೋಮಪ್ರವಹಣನೆಂಬ (ಸೋಮಲತೆಗಳನ್ನು ಯಜ್ಞವೇದಿಗೆ ತರುವ) ಯಜ್ಞಾಂಗಕರ್ಮದಲ್ಲಿ **ಸರ್ವೇ ನಂದಂತಿ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಸೋಮ ಯಾಸ್ತೇ ಮಯೋಭುವ ಇತಿ ತಿಸ್ರಃ ಸರ್ವೇ ನಂದಂತಿ ಯಶಸಾಗತೇನ** ಎಂಬ ಸೂತ್ರದಿಂದ (ಆ. ४-४) ವಿವೃತವಾಗಿರುವುದು.

ಸಂಹಿತಾಪಾಠಃ

ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ಗಾಯತ್ರಂ ತ್ವೋ ಗಾಯತಿ ಶಕ್ವರೀಷು ।
ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿ ಮಿಮೀತ ಉ ತ್ವಃ ॥

ಪದಪಾಠಃ

ಋಚಾಂ । ತ್ವಃ । ಪೋಷಂ । ಆಸ್ತೇ । ಪುಪುಷ್ವಾನ್ । ಗಾಯತ್ರಂ । ತ್ವಃ । ಗಾಯತಿ । ಶಕ್ವರೀಷು ।
ಬ್ರಹ್ಮಾ । ತ್ವಃ । ವದತಿ । ಜಾತಽವಿದ್ಯಾಂ । ಯಜ್ಞಸ್ಯ । ಮಾತ್ರಾಂ । ವಿ । ಮಿಮೀತೇ । ಊಂ ಇತಿ । ತ್ವಃ ॥

ಸಾಯಣಭಾಷ್ಯಂ

ಅನಯಾ ಹೋತ್ರಾದ್ಯೃತ್ವಿಕ್ಕರ್ಮಣಾಂ ವಿನಿಯೋಗಮಾಚಷ್ಟೇ । ತ್ವ ಏಕೋ ಹೋತರ್ಚಾಂ ಪೋಷಂ ಯಥಾವಿಧಿ ಕರ್ಮಣಿ ಪ್ರಯೋಗಂ ಪುಪುಷ್ವಾನ್ । ಏಕೋ ಧಾತುರನುವಾದಾರ್ಥಃ । ಬಹ್ವೀರ್ಋಚಃ ಪುಷ್ಯ್ಯಂಸನ್ನಾಸ್ತೇ । ತ್ವ ಏಕ ಉದ್ಗಾತಾ ಶಕ್ವರೀಷು । ಶಕ್ವರ್ಯ ಋಚಃ । ಆಭಿರ್ಋಗ್ಭಿರ್ವೃತ್ರಂ ಹಂತುಮಿಂದ್ರಃ ಸಮರ್ಥೋಽಭೂದಿತಿ ಶಕ್ವರ್ಯಃ । ತಾಸು ಗಾಯತ್ರಂ ಸಾಮ ಗಾಯತಿ । ತ್ವ ಏಕೋ ಬ್ರಹ್ಮಾ ಚ ಜಾತವಿದ್ಯಾಂ ಜಾತೇ ಜಾತೇ ಕರ್ತವ್ಯೇ ಪ್ರಾಯಶ್ಚಿತ್ತಾದೌ ವೇದಯಿತ್ರೀಂ ವಾಚಂ ವದತಿ । ಬ್ರಹ್ಮಾ ಹಿ ಸರ್ವಂ ವೇದಿತುಂ ಯೋಗ್ಯೋ ಭವತಿ ಖಲು ॥ ಚಾದಿಲೋಪೇ ವಿಭಾಷೇತಿ ನ ನಿಘಾತಃ ॥ ತ್ವ ಏಕೋಽಧ್ವರ್ಯುಶ್ಚ ಯಜ್ಞಸ್ಯ ಮಾತ್ರಾಂ ಯಜ್ಞೋ ಯಯಾ ಮೀಯತೇಽಭಿಷವಗ್ರಹಣಾದಿಕಯಾ ಕ್ರಿಯಯಾ ತಾಂ ಮಾತ್ರಾಂ ಯಜ್ಞಶರೀರಂ ವಿ ಮಿಮೀತೇ । ಅತ್ಯರ್ಥಂ ನಿರ್ಮಿಮೀತೇ । ಋಚಾಮೇಕಃ ಪೋಷಮಾಸ್ತೇ ಪುಪುಷ್ವಾನ್ ಹೋತರ್ಗರ್ಚನೀ । ನಿ. ೧-೮ । ಇತ್ಯಾದಿನಿರುಕ್ತಾನುಸಾರೇಣಾರ್ಥೋಽಭ್ಯಧಾಯಿ । ಏವಂ ಬೃಹಸ್ಪತಿರ್ವಿದಿತವೇದಾರ್ಥಂ ತುಷ್ಟಾವ ॥

ಪ್ರತಿಪದಾರ್ಥ

**ತ್ವಃ**—ಋತ್ವಿಕ್ಕುಗಳಲ್ಲಿ ಒಬ್ಬನು (ಹೋತೃವು) । **ಋಚಾಂ**—ಋಙ್ಮಂತ್ರಗಳ । **ಪೋಷಂ**—ಪ್ರಯೋಗವನ್ನು ನಿರ್ದೇಶಿಸಿ । **ಪುಪುಷ್ವಾನ್**—ಮಂತ್ರಗಳನ್ನು ಪಠಿಸುವವನಾಗಿ । **ಆಸ್ತೇ**—ಇರುತ್ತಾನೆ । **ತ್ವಃ**—ಇನ್ನೊಬ್ಬನು (ಉದ್ಗಾತೃವು) । **ಶಕ್ವರೀಷು**—ಶಕ್ವರೀಸಂಜ್ಞಕವಾದ (ಛಂದೋಬದ್ಧವಾದ) ಋಕ್ಕುಗಳಿಂದ । **ಗಾಯತ್ರಂ**—ಗಾಯತ್ರಸಾಮವನ್ನು । **ಗಾಯತಿ**—ಗಾನರೂಪದಲ್ಲಿ ಪಠಿಸುತ್ತಾನೆ । **ತ್ವಃ ಬ್ರಹ್ಮಾ**—ಬ್ರಹ್ಮರೂಪನಾದ ಇನ್ನೊಬ್ಬನು । **ಜಾತವಿದ್ಯಾಂ**—ಕರ್ಮಬೋಧಕವಾದ ವಾಕ್ಯಗಳನ್ನು । **ವದತಿ**—ಪಠಿಸುತ್ತಾನೆ । **ತ್ವಃ**—ಇನ್ನೊಬ್ಬನು (ಅಧ್ವರ್ಯುವು) । **ಯಜ್ಞಸ್ಯ**—ಯಜ್ಞದ । **ಮಾತ್ರಾಂ**—ಶರೀರವನ್ನು । **ವಿ ಮಿಮೀತೇ**—ಅಳೆಯುತ್ತಾನೆ.

ಭಾವಾರ್ಥ

ಋತ್ವಿಕ್ಕುಗಳಲ್ಲಿ ಒಬ್ಬನಾದ ಹೋತೃವು ಕರ್ಮಗಳಿಗೆ ಉಪಯುಕ್ತವಾದ ಋಙ್ಮಂತ್ರಗಳನ್ನು ನಿರ್ದೇಶಿಸಿ ಪಠಿಸುತ್ತಾನೆ. ಉದ್ಗಾತೃವು ಶಕ್ವರೀಸಂಜ್ಞಕವಾದ ಋಕ್ಕುಗಳಲ್ಲಿ ಗಾಯತ್ರಸಾಮವನ್ನು ಸೇರಿಸಿ ಗಾನರೂಪದಲ್ಲಿ ಪಠಿಸುತ್ತಾನೆ. ಬ್ರಹ್ಮನು ಪ್ರಾಯಶ್ಚಿತ್ತಾದಿ ಕರ್ಮಬೋಧಕವಾದ ವಾಕ್ಯಗಳನ್ನು ಪಠಿಸುತ್ತಾನೆ. (ತಿಳಿಸುತ್ತಾನೆ) ಅಧ್ವರ್ಯುವು ಯಜ್ಞಕ್ಕೆ ಒಂದು ರೂಪವನ್ನು ಕೊಟ್ಟು ಅದನ್ನು ನಿರ್ವಹಿಸುತ್ತಾನೆ.

## English Translation

As the sacrifice proceeds, one (Hoti priest) utters Riks (verses of Rigveda) and thus helps the sacrifice; another sings Gayatra (a verse of

Samaveda) in a loud Sakvari metre; still another, Brahma priest looks after the sacrifice and gives instructions for rectifying defects; the last one (Adhvaryu priest) being in charge of the sacrifice conducts it in proper form.

ವಿಶೇಷವಿಷಯಗಳು

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿರುವರು. ಇದರಲ್ಲಿ ಋತ್ವಿಕ್ಕುಗಳು ಯಜ್ಞದಲ್ಲಿ ನಿರ್ವಹಿಸಬೇಕಾದ ಕರ್ತವ್ಯವನ್ನು ನಿರ್ದೇಶಿಸಲಾಗಿದೆ—

**ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ಗಾಯತ್ರಂ ತ್ವೋ ಗಾಯತಿ ಶಕ್ವರೀಷು ।**
**ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿಮಿಮೀತ ಉ ತ್ವಃ ॥**

**ಇತ್ಯೃತ್ವಿಕ್ಕರ್ಮಣಾಂ ವಿನಿಯೋಗಮಾಚಷ್ಟೇ । ಋಚಾಮೇಕಃ ಪೋಷಮಾಸ್ತೇ ಪುಪುಷ್ವಾನ್ ಹೋತರ್ಗರ್ಚನೀ ಗಾಯತ್ರಮೇಕೋ ಗಾಯತಿ ಶಕ್ವರೀಷೂದ್ಗಾತಾ । ಗಾಯತ್ರಂ ಗಾಯತೇಃ ಸ್ತುತಿಕರ್ಮಣಃ । ಶಕ್ವರ್ಯ ಋಚಃ ಶಕ್ನೋತೇಃ । ತದ್ಯದಾಭಿರ್ವೃತ್ರಮಶಕದ್ಧಂತುಂ ತಚ್ಛಕ್ವರೀಣಾಂ ಶಕ್ವರೀತ್ವಮಿತಿ ವಿಜ್ಞಾಯತೇ। ಬ್ರಹ್ಮೈಕೋ ಜಾತೇ ಜಾತೇ ವಿದ್ಯಾಂ ವದತಿ । ಬ್ರಹ್ಮಾ ಸರ್ವವಿದ್ಯಃ ಸರ್ವಂ ವೇದಿತುಮರ್ಹತಿ । ಬ್ರಹ್ಮಾ ಪರಿವೃಳ್ಢಃ ಶ್ರುತತೋ ಬ್ರಹ್ಮ ವರಿವೃಳ್ಢಂ ಸರ್ವತಃ । ಯಜ್ಞಸ್ಯ ಮಾತ್ರಾಂ ವಿಮಿಮೀತ ಏಕೋಽಧ್ವರ್ಯುಃ । ಅಧ್ವರ್ಯುರಧ್ವರಯುರಧ್ವರಂ ಯುನಕ್ತ್ಯಧ್ವರಸ್ಯ ನೇತಾಧ್ವರಂ ಕಾಮಯತ ಇತಿ ವಾ । ಅಪಿ ವಾಧೀಯಾನೇ ಯುರುಪಬಂಧಃ । ಅಧ್ವರ ಇತಿ ಯಜ್ಞನಾಮ । ಧ್ವರತಿರ್ಹಿಂಸಾಕರ್ಮಾ ತತ್ಪ್ರತಿಷೇಧಃ ॥**

(ನಿ. ೧-೮)

ಈ ಋಕ್ಕಿನಲ್ಲಿ ಋತ್ವಿಕ್ಕುಗಳು ಯಜ್ಞದಲ್ಲಿ ಮಾಡಬೇಕಾದ ನಾನಾ ಕರ್ಮಗಳ ವಿನಿಯೋಗವನ್ನು ಹೇಳಲಾಗಿದೆ. ಈ ಋಕ್ಕಿನಲ್ಲಿರುವ ನಾಲ್ಕು ಪಾದಗಳಲ್ಲಿಯೂ ನಾಲ್ಕುಮಂದಿ ಋತ್ವಿಜರ ಕರ್ತವ್ಯವನ್ನು ನಿರ್ದೇಶಿಸಲಾಗಿದೆ. ಹೇಗೆಂದರೆ—ಮೊದಲನೆಯ ಪಾದದಲ್ಲಿ ಹೋತೃವಿನ ಕರ್ತವ್ಯವನ್ನೂ, ಎರಡನೆಯ ಪಾದದಲ್ಲಿ ಉದ್ಗಾತೃವಿನ ಕರ್ತವ್ಯವನ್ನೂ, ಮೂರನೆಯಲ್ಲಿ ಪಾದದಲ್ಲಿ ಬ್ರಹ್ಮನೆಂಬ ಋತ್ವಿಜನ ಕರ್ತವ್ಯವನ್ನೂ, ನಾಲ್ಕನೆಯ ಪಾದದಲ್ಲಿ ಅಧ್ವರ್ಯುವೆಂಬ ಋತ್ವಿಜನ ಕರ್ತವ್ಯವನ್ನೂ ಹೇಳಲಾಗಿದೆ. ಈಗ ಅವುಗಳನ್ನು ಒಂದೊಂದಾಗಿ ವಿವರಿಸಲಾಗುವುದು—

**ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್—ಋಚಾಮೇಕಃ ಪೋಷಮಾಸ್ತೇ ಪುಪುಷ್ವಾನ್ ಹೋತರ್ಗರ್ಚನೀ ॥**

ಇಲ್ಲಿ **ತ್ವಃ** ಎಂದರೆ ಒಬ್ಬನು, ಋತ್ವಿಜನು. ಯಜ್ಞಕರ್ಮವು ನೆರವೇರುತ್ತಿರುವಾಗ ಒಬ್ಬ ಋತ್ವಿಜನು ಋಕ್ಕುಗಳ ಪೋಷಣೆಮಾಡುವನು ಎಂದರೆ ಆಯಾ ಕರ್ಮಗಳಿಗೆ ಅನುಸಾರವಾದ ಋಙ್ಮಂತ್ರಗಳನ್ನು ಪಠಿಸಿ ಯಜ್ಞಕರ್ಮವು ಮುಂದುವರೆಯುವಂತೆ ಮಾಡುವನು. ಋಙ್ಮಂತ್ರವು ಯಜ್ಞಾದಿಗಳನ್ನು ಮಾಡುವಾಗ ಉಪಯೋಗಿಸಲ್ಪಡಬೇಕು ಎಂದರೆ ದೇವತೆಗಳನ್ನು ಆಹ್ವಾನಮಾಡುವಾಗಲೂ, ಸ್ತುತಿಸುವಾಗಲೂ ಯಾವಾಗಲೂ ಋಗ್ವೇದದ ಋಕ್ಕುಗಳನ್ನೇ ಪಠಿಸಬೇಕು. ಈ ಋಕ್ಕುಗಳನ್ನು ಪಠಿಸಬೇಕಾದುದು **ಹೋತೃ**ವೆಂಬ ಋತ್ವಿಕ್ಕಿನ ಕರ್ತವ್ಯವು. ಇವನು ಋಗ್ವೇದವನ್ನು

ಸಾಂಗವಾಗಿ ಅಧ್ಯಯನಮಾಡಿ ಆ ಮಂತ್ರಗಳ ಅರ್ಥವನ್ನೂ, ವಿನಿಯೋಗವನ್ನೂ ಆ ಮಂತ್ರಗಳನ್ನು ಯಜ್ಞದ ನಾನಾ ಕರ್ಮಗಳಲ್ಲಿ ಯಾವಾಗ, ಹೇಗೆ ಉಪಯೋಗಿಸಬೇಕೆಂಬುವುದನ್ನೂ ಚೆನ್ನಾಗಿ ತಿಳಿದವನಾಗಿರಬೇಕು. ಇದು ಹೋತೃವಿನ ಕರ್ತವ್ಯವು. ಇದನ್ನೇ ಈ ಪಾದದಲ್ಲಿ ಹೇಳಿದೆ.

**ಗಾಯತ್ರಂ ತ್ವೋ ಗಾಯತಿ ಶಕ್ವರೀಷು—ಗಾಯತ್ರಮೇಕೋ ಗಾಯತಿ ಶಕ್ವರೀಷೂದ್ಗಾತಾ ಗಾಯತ್ರಂ ಗಾಯತೇಃ ಸ್ತುತಿಕರ್ಮಣಃ । ಶಕ್ವರ್ಯ ಋಚಃ ಶಕ್ನೋತೇಃ । ತದ್ಯದಾಭಿ-ರ್ವೃತ್ರಮಶಕದ್ಧಂತುಂ ತಚ್ಛಕ್ವರೀಣಾಂ ಶಕ್ವರೀತ್ವಮಿತಿ ವಿಜ್ಞಾಯತೇ ॥**

ಇನ್ನೊಬ್ಬ ಋತ್ವಿಜನು ಗಾಯತ್ರವೆಂಬ ಸಾಮಮಂತ್ರವನ್ನು ಶಕ್ವರೀ ಛಂದಸ್ಸಿನ ಮಂತ್ರಗಳಿಂದ ಗಾನಮಾಡುತ್ತಿರುವನು. ಈ ರೀತಿ ಸಾಮಮಂತ್ರಗಳನ್ನು ಗಾನಮಾಡುವ ಋತ್ವಿಜನಿಗೆ **ಉದ್ಗಾತಾ** ಎಂದು ಹೆಸರು. ಇವನು ಸಾಮವೇದವನ್ನು ಚೆನ್ನಾಗಿ ಅಧ್ಯಯನಮಾಡಿ ತ್ರಿವೃದಾದಿಸ್ತೋಮಗಳ ಸ್ವರೂಪವನ್ನು ಚೆನ್ನಾಗಿ ತಿಳಿದವನಾಗಿರಬೇಕು. ಯಜ್ಞದಲ್ಲಿ ದೇವತೆಗಳ ಪ್ರೀತ್ಯರ್ಥವಾಗಿ ಸಾಮಗಾನಮಾಡುವುದೇ ಈ ಉದ್ಗಾತೃವೆಂಬ ಹೋತೃವಿನ ಕರ್ತವ್ಯವು. ಇಲ್ಲಿ **ಗಾಯತ್ರಂ** ಎಂಬ ಶಬ್ದವು ಸ್ತುತಿಸು, ಗಾನಮಾಡು ಎಂಬರ್ಥವುಳ್ಳ **ಗೈ** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. **ಶಕ್ವರ್ಯಃ** ಎಂದರೆ ಶಕ್ವರೀಛಂದಸ್ಸಿನ ಋಕ್ಕುಗಳು. ಶಕ್ವರೀ ಶಬ್ದವು ಶಕ್—ಶಕ್ತನಾಗು, ಸಮರ್ಥನಾಗು ಎಂಬರ್ಥವುಳ್ಳ ಶಕ್ನೋತಿಧಾತುವಿನಿಂದ ನಿಷ್ಪನ್ನವಾಗಿದೆ. ಈ ಶಕ್ವರೀಛಂದಸ್ಸಿನ ಋಕ್ಕುಗಳಿಂದ ಸ್ತುತನಾಗಿ ಇಂದ್ರನು ವೃತ್ರನನ್ನು ಸಂಹಾರಮಾಡಲು ಸಮರ್ಥನಾದನು. ಆದ್ದರಿಂದ ಈ ಛಂದಸ್ಸಿನ ಋಕ್ಕುಗಳಿಗೆ ಶಕ್ವರೀಛಂದಸ್ಸುಗಳು ಎಂಬ ಹೆಸರಾಯಿತು ಎಂದು ಶ್ರುತಿವಾಕ್ಯವೂ ಇರುವುದು.

**ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ-ಬ್ರಹ್ಮೈಕೋ ಜಾತೇ ಜಾತೇ ವಿದ್ಯಾಂ ವದತಿ । ಬ್ರಹ್ಮಾ ಸರ್ವವಿದ್ಯಃ ಸರ್ವಂ ವೇದಿತುಮರ್ಹತಿ । ಬ್ರಹ್ಮಾ ಪರಿವೃಢಃ ಶ್ರುತತೋ ಬ್ರಹ್ಮ ಪರಿವೃಢಂಸರ್ವತಃ॥**

ಯಜ್ಞವು ನಡೆಯುತ್ತಿರುವಾಗ ಇನ್ನೊಬ್ಬ ಋತ್ವಿಜನಾದ ಬ್ರಹ್ಮನೆಂಬುವನು ಯಜ್ಞಕರ್ಮವು ಸರಿಯಾಗಿ ನಡೆಯುತ್ತಿರುವುದೇ ಇಲ್ಲವೇ, ಎಂಬುವುದನ್ನು ಗಮನಿಸುತ್ತಿರುವನು ಮತ್ತು ಯಜ್ಞಾಂಗಕರ್ಮಗಳಲ್ಲಿ ಏನಾದರೂ ವ್ಯತ್ಯಾಸಗಳಾಗಲಿ, ಲೋಪದೋಷಗಳಾಗಲಿ ಸಂಭವಿಸಿದಲ್ಲಿ ಅವುಗಳಿಗೆ ಸರಿಯಾದ ಪ್ರಾಯಶ್ಚಿತ್ತಾದಿಗಳನ್ನು ನಿರ್ದೇಶಿಸಿ ಯಜ್ಞಕರ್ಮವು ಸಾಂಗವಾಗಿ ಸಮಾಪ್ತಿಯಾಗುವಂತೆ ಮಾಡುವನು. ಯಜ್ಞದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದೇ ಬ್ರಹ್ಮನೆಂಬ ಋತ್ವಿಜನ ಕರ್ತವ್ಯವು. ಇವನು ಮೂರು ವೇದಗಳನ್ನು ಅಧ್ಯಯನಮಾಡಿ ಸರ್ವವಿದ್ಯಾಪಾರಂಗತನಾಗಿರಬೇಕು. ವಿದ್ಯಗಳಲ್ಲಿ ಮಾತ್ರವೇ ಇವನಿಗೆ ಪಾಂಡಿತ್ಯವಿದ್ದರೆ ಸಾಲದು. ಯಜ್ಞಾಂಗಕರ್ಮಗಳಲ್ಲಿಯೂ ಅವುಗಳ ನಿರ್ವಹಣೆಯಲ್ಲಿಯೂ ಸರ್ವತೋಮುಖವಾದ ಪರಿಶ್ರಮವಿರಬೇಕು. ಇಂತಹ ಸಾಮರ್ಥ್ಯವುಳ್ಳ ಸರ್ವವಿದ್ಯಾಪಾರಂಗತನಾದ ಬ್ರಹ್ಮನೆಂಬ ಋತ್ವಿಜನು ಹೋತೃ ಮೊದಲಾದ ಋತ್ವಿಕ್ಕುಗಳಿಗೆ ಆಯಾ ಸಂದರ್ಭಗಳಲ್ಲಿ ಇಂತಿಂತಹ ಮಂತ್ರಗಳನ್ನು ಪಠಿಸಬೇಕೆಂದೂ, ಉದ್ಗಾತೃವಿಗೆ ಇಂತಹ ಸಾಮವನ್ನು ಗಾನಮಾಡಬೇಕೆಂದೂ ಅಧ್ವರ್ಯು ಮೊದಲಾದ ಋತ್ವಿಜರಿಗೆ ಯಜ್ಞದ ಕಾರ್ಯಕಲಾಪಗಳಲ್ಲಿ ಹೇಗೆ ವರ್ತಿಸಬೇಕೆಂಬುದನ್ನೂ (ವದತಿ) ಹೇಳುತ್ತಿರುವನು.

**ಯಜ್ಞಸ್ಯ ಮಾತ್ರಾಂ ವಿಮಿಮೀತ ಉ ತ್ವಃ-ಯಜ್ಞಸ್ಯ ಮಾತ್ರಾಂ ವಿಮಿಮೀತೇ ಏಕೋಽಧ್ವರ್ಯುಃ। ಅಧ್ವರ್ಯುರಧ್ವರಯುರಧ್ವರಂ ಯುನಕ್ತ್ಯಧ್ವರಸ್ಯ ನೇತಾಧ್ವರಂ ಕಾಮಯತ ಇತಿ ವಾ । ಅಪಿ ವಾಧೀಯಾನೇ ಯುರುಪಬಂಧಃ । ಅಧ್ವರ ಇತಿ ಯಜ್ಞನಾಮ । ಧ್ವರತಿರ್ಹಿಂಸಾ-ಕರ್ಮಾ ತತ್ಪ್ರತಿಷೇಧಃ ॥**

ಮತ್ತೊಬ್ಬ ಋತ್ವಿಜನಾದ ಅಧ್ವರ್ಯುವೆಂಬುವನು ಯಜ್ಞದ ನಾನಾಕಾರ್ಯಕಲಾಪಗಳಲ್ಲಿ ತೊಡಗಿ ಯಜ್ಞಕ್ಕೆ ಒಂದು ರೂಪವನ್ನು ಕೊಟ್ಟು ಅದು ಒಂದು ಕ್ರಮದಲ್ಲಿ ನಡೆಯುವಂತೆ ಮಾಡುವನು. ಎಂದರೆ ಯಜ್ಞದಲ್ಲಿ ಒಂದು ಕರ್ಮವಾದ ನಂತರ ಮತ್ತೆ ಯಾವ ಕರ್ಮವನ್ನು ಮಾಡಬೇಕು, ಅದನ್ನು ಯಾರು, ಹೇಗೆ, ಯಾವ ಕಾಲದಲ್ಲಿ ಮಾಡಬೇಕು ಎಂಬ ಸಮಸ್ತ ಕಾರ್ಯಕಲಾಪಗಳಲ್ಲಿಯೂ ಆಸಕ್ತಿಯನ್ನು ವಹಿಸಿ ನಾನಾ ಋತ್ವಿಕ್ಕುಗಳಿಂದ ಅವರವರ ಕರ್ಮಗಳನ್ನು ಮಾಡಿಸಬೇಕು, ತಾನು ಮಾಡುವ ಕರ್ತವ್ಯ ಕರ್ಮಗಳನ್ನು ನಿರ್ವಹಿಸಬೇಕು. ಇವೆಲ್ಲವೂ ಎಂದರೆ ಕಾರ್ಯನಿರ್ವಹಣೆಗೆ ಸಂಬಂಧಪಟ್ಟ ಕರ್ತವ್ಯವೆಲ್ಲವೂ ಅಧ್ವರ್ಯುವಿಗೆ ಸೇರಿದ್ದು. ಇವನು ಯಜುರ್ವೇದವನ್ನು ಸಾಂಗವಾಗಿ ಅಧ್ಯಯನ ಮಾಡಿ ಯಜ್ಞಕರ್ಮಗಳ ಸ್ವರೂಪವನ್ನೂ ಅವುಗಳನ್ನು ಹೇಗೆ ಮಾಡಬೇಕೆಂಬ ವಿಷಯದಲ್ಲಿ ಅನುಭವವನ್ನೂ ಪಡೆದವನಾಗಿರಬೇಕು. ಇಂತಹ **ಅಧ್ವರ್ಯು**ವೆಂಬ ಋತ್ವಿಜನು ಯಜ್ಞದಲ್ಲಿ ನಿರ್ವಹಿಸಬೇಕಾದ ಸಣ್ಣಸಣ್ಣ ಕರ್ಮಗಳನ್ನೂ, ದೊಡ್ಡ ಕರ್ಮಗಳನ್ನೂ ಒಂದಾಗುತ್ತಲೊಂದು ಕ್ರಮವಾಗಿ ನಡೆಯುವಂತೆ ಮಾಡುತ್ತಲೂ ಇತರ ಋತ್ವಿಕ್ಕುಗಳಿಂದ ಮಾಡಿಸುತ್ತಲೂ ಯಜ್ಞಕ್ಕೆ ಒಂದು ನಿರ್ದಿಷ್ಟವಾದ ರೂಪವನ್ನು ಕೊಟ್ಟು ಯಥಾಕ್ರಮದಲ್ಲಿ ನಡೆಯುವಂತೆ ಮಾಡುವನು. ಇದೇ ಇವನ ಕರ್ತವ್ಯವು. **ಅಧ್ವರ್ಯುಃ ಅಧ್ವರಯುಃ** ಎಂದರ್ಥವು ಅಧ್ವರಯುವೆಂದರೆ ಯಜ್ಞವನ್ನು ಇಚ್ಛಿಸುವವನು ಅಥವಾ **ಅಧ್ವರಸ್ಯ ನೇತಾ**—ಯಜ್ಞವನ್ನು ಹೀಗೆ ನಡೆಯಬೇಕೆಂದು ನಿರ್ದೇಶಿಸುವವನು, ಯಜ್ಞದ ಮಾರ್ಗದರ್ಶಿಯು (leader). ಅಧ್ವರ ಶಬ್ದಕ್ಕೆ ಯಜ್ಞವೆಂದರ್ಥವು. **ಧ್ವರತಿಃ ಹಿಂಸಾಕರ್ಮಾ ತತ್ಪ್ರತಿಷೇಧಃ**—ಧ್ವರವೆಂದರೆ ಹಿಂಸೆ; ಅಂತಹ ಹಿಂಸೆಯಿಲ್ಲದಿರುವ ಕರ್ಮಕ್ಕೆ ಅಧ್ವರ (ಯಜ್ಞ)ವೆಂದು ಹೆಸರು ಎಂದು ಅಧ್ವರಶಬ್ದದ ರೂಪನಿಷ್ಪತ್ತಿಯನ್ನು ಹೇಳಲಾಗಿದೆ.



**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕ ಭೂಪಾಲ-**
**ಸಾಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ**
**ವೇದಾರ್ಥಪ್ರಕಾಶ ಋಕ್ಸಂಹಿತಾಭಾಷ್ಯೇಽಷ್ಟಮಾಷ್ಟಕೇ**
**ದ್ವಿತೀಯೋಽಧ್ಯಾಯಃ ಸಮಾಪ್ತಃ ॥**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ಣಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಎಂಟನೆಯ ಅಷ್ಟಕದಲ್ಲಿ ಎರಡನೆಯ ಅಧ್ಯಾಯವು ಸಮಾಪ್ತವಾದುದು.



**ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ॥**
**ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥**

**॥ ಶುಭಂ ಭೂಯಾತ್ ।**

**॥ ಮಂಗಳಂ ॥**

# ಬೃಹದ್ದೇವತಾ

## ಪೀಠಿಕೆ

ಈ ಗ್ರಂಥದ ವಿಷಯದಲ್ಲಿ ಒಂದೆರಡು ಮಾತುಗಳನ್ನು ತಿಳಿಸುವುದು ಅವಶ್ಯಕವಾಗಿದೆ. ವೇದಗಳ, ಅದರಲ್ಲಿಯೂ ಋಗ್ವೇದದ, ಸರಿಯಾದ ಅರ್ಥವನ್ನು ತಿಳಿದುಕೊಳ್ಳಲು ಸಹಕಾರಿಯಾದ ಗ್ರಂಥಗಳು ಕೆಲವಿವೆ. ಅವುಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು, ಪ್ರಾಚೀನ ಮತ್ತು ಆಧುನಿಕ ಎಂದು. ಪ್ರಾಚೀನ ಗ್ರಂಥಗಳ ಶ್ರೇಣಿಗೆ ಸೇರಿದ ಗ್ರಂಥಗಳಲ್ಲಿ, ಯಾಸ್ಕರ ನಿರುಕ್ತ, ಕಾತ್ಯಾಯನರ ಸರ್ವಾನುಕ್ರಮಣಿಕೆ, ಶೌನಕರ ಬೃಹದ್ದೇವತಾ ಮತ್ತು ಋಗ್ವಿಧಾನ, ಆಶ್ವಲಾಯನರ ಶ್ರೌತಸೂತ್ರ ಎಂಬಿವು ಮುಖ್ಯವಾದವು. ವೆಂಕಟಮಾಧವ, ಸಾಯಣ ಮುಂತಾದವರು ಋಗ್ವೇದಕ್ಕೆ ಸುಮಾರು ೬೦೦ ವರ್ಷಗಳ ಹಿಂದೆ ಬರೆದಿರುವ ಭಾಷ್ಯಗಳು ಪ್ರಾಚೀನವಲ್ಲದಿದ್ದರೂ ಆಧುನಿಕವೆಂದೂ ಹೇಳಲಾಗುವುದಿಲ್ಲ. ವೇದಾಭ್ಯಾಸವು ಹಿಂದಿನ ಪದ್ಧತಿಯಂತೆ ನಡೆಯುತ್ತಿದ್ದಾಗ ಮತ್ತು ಸಂಸ್ಕೃತಭಾಷೆಗೆ ಪ್ರಾಧಾನ್ಯತೆ ಇದ್ದಾಗ ಮತ್ತು ಯಜ್ಞಯಾಗಾದಿಕರ್ಮಗಳನ್ನು ನೆರವೇರಿಸುವುದು ರೂಢಿಯಲ್ಲಿರುವಾಗ ಈ ಭಾಷ್ಯಗಳು ಬರೆಯಲ್ಪಟ್ಟಿರುವುದರಿಂದ ವೇದಾಭ್ಯಾಸಿಗಳಿಗೆ ಇವುಗಳಿಂದ ಮಹತ್ಪ್ರಯೋಜನವುಂಟಾಗುವ ವಿಷಯದಲ್ಲಿ ಯಾವ ಸಂಶಯವೂ ಇರುವುದಿಲ್ಲ ಸತ್ಯವಾಗಿ ಹೇಳಬೇಕಾದರೆ ಈ ಭಾಷ್ಯಗಳ ಸಹಾಯವಿಲ್ಲದಿದ್ದರೆ ಅತಿಪ್ರಾಚೀನಭಾಷೆಯಲ್ಲಿರುವ ವೇದಗಳ ಅರ್ಥವನ್ನು ತಿಳಿಯುವುದು ಸಾಧ್ಯವೇ ಆಗುತ್ತಿರಲಿಲ್ಲ. Maxmuller, Wilson, Macdonell ಮೊದಲಾದ ಪಾಶ್ಚಾತ್ಯಪಂಡಿತರೇ ಈ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು. ಪಾಶ್ಚಾತ್ಯಪಂಡಿತರೂ, ಅವರನ್ನನುಸರಿಸಿ ಕೆಲವು ಭಾರತೀಯ ವಿದ್ವಾಂಸರೂ ಈಚಿಗೆ ನಡೆಸಿದ ಸಂಶೋಧನೆಯ ಫಲವಾಗಿ ಇಂಗ್ಲಿಷ್, ಜರ್ಮನ್ ಮುಂತಾದ ಭಾಷೆಗಳಲ್ಲಿ ಋಗ್ವೇದಕ್ಕೆ ಸಂಬಂಧಪಟ್ಟ ಅನೇಕ ಗ್ರಂಥಗಳು ಪ್ರಕಟವಾಗಿವೆ. ವೇದಾರ್ಥಪ್ರಯತ್ನದಲ್ಲಿ ಈ ಗ್ರಂಥಗಳನ್ನು ಕಡೆಗಣಿಸುವುದಕ್ಕಾಗುವುದಿಲ್ಲ. ಸಂಸ್ಕೃತಭಾಷೆಯಲ್ಲಿ ಹೆಚ್ಚಾಗಿ ಪರಿಶ್ರಮವಿಲ್ಲದವರಿಗೆ ಈ ಗ್ರಂಥಗಳು ಬಹಳ ಉಪಕಾರಿಗಳಾಗಿವೆ.

ನಾವು ಈಗ ಬರೆದಿರುವ ಮತ್ತು ಬರೆಯುತ್ತಿರುವ ಋಗ್ವೇದಸಂಹಿತೆಯ ಅರ್ಥಾನುವಾದವಿವರಣೆಗಳಲ್ಲಿ ಮೇಲೆ ಹೇಳಿರುವ ಪೌರ್ವಾತ್ಯ ಮತ್ತು ಪಾಶ್ಚಾತ್ಯಗ್ರಂಥಗಳಲ್ಲಿರುವ ವಿವರಣೆಗಳನ್ನೂ ವಿಮರ್ಶೆಯನ್ನೂ ಆಯಾ ಸಂದರ್ಭಗಳಲ್ಲಿ ಸೇರಿಸಿದೇವೆ. ನಿರುಕ್ತ, ಶ್ರೌತಸೂತ್ರ ಮತ್ತು ಅನುಕ್ರಮಣಿಕೆಯಲ್ಲಿರುವ ವಿವರಣೆಗಳನ್ನು ಆಯಾ ಸಂದರ್ಭಗಳಲ್ಲಿ ಸೇರಿಸಿದೇವೆ. ಯಾಸ್ಕರ ನಿರುಕ್ತವೂ, ಶೌನಕರ ಬೃಹದ್ದೇವತಾಗ್ರಂಥವೂ, ಅತಿಪ್ರಾಚೀನಗ್ರಂಥಗಳು ಎಂದರೆ, ಮೂರು ಸಾವಿರ ವರ್ಷಗಳಿಗೂ ಹಿಂದಿನದು. ಅವು ಪ್ರಮಾಣಗ್ರಂಥಗಳೆಂದು ಪರಿಗಣಿಸಲ್ಪಟ್ಟಿವೆ. ನಿರುಕ್ತಗ್ರಂಥವನ್ನು ಮುಂದೆ ಪ್ರತ್ಯೇಕಭಾಗಗಳಲ್ಲಿ ಪ್ರಕಟಿಸಲಾಗುವುದು. ಬೃಹದ್ದೇವತೆಯು ಅಷ್ಟುದೊಡ್ಡಗ್ರಂಥವಲ್ಲದ್ದರಿಂದ ಅದನ್ನು ಋಗ್ವೇದದ ಈ ಭಾಗದಲ್ಲಿಯೇ ಪರಿಶಿಷ್ಟರೂಪದಲ್ಲಿ ಸೇರಿಸಲಾಗಿದೆ. ಈ ಗ್ರಂಥವು ವಿಶ್ವವಿದ್ಯಾನಿಲಯದ ಮತ್ತು ಕಾಲೇಜುಗಳ ವಿದ್ಯಾರ್ಥಿಗಳಿಗೂ, ವಿಮರ್ಶಾತ್ಮಕವಾಗಿ ವೇದಾರ್ಥವನ್ನು ತಿಳಿಯಲಿಚ್ಛಿಸುವ ಇತರರಿಗೂ ಬಹು ಉಪಯುಕ್ತವಾದ ಗ್ರಂಥವಾಗಿರುವುದರಿಂದ ಇದನ್ನು ಸಂಸ್ಕೃತಮೂಲ, ಕನ್ನಡ ಅರ್ಥಾನುವಾದವಿವರಣೆ, ಇಂಗ್ಲಿಷ್ ಭಾಷಾಂತರ, ಸಂಬಂಧಪಟ್ಟ ಅಂಕಿಅಂಶಗಳು ಇವುಗಳೊಡನೆ ಸರ್ವಜನೋಪಯುಕ್ತವಾಗುಂತೆ ಬರೆದಿದೇವೆ. ಇದರಲ್ಲಿರುವ ಇಂಗ್ಲಿಷ್ ಭಾಷಾಂತರವನ್ನು ವೇದಸಂಶೋಧನೆಯಲ್ಲಿ ಹೆಸರಾಂತ Professor Macdonell ಎಂಬ ಪಾಶ್ಚಾತ್ಯ ವಿದ್ವಾಂಸನು ಬರೆದಿರುವ ಬೃಹದ್ದೇವತಾ ಎಂಬ ಗ್ರಂಥದಿಂದ ತೆಗೆದು ಸೂಕ್ತಬದಲಾವಣೆಗಳನ್ನು ಮಾಡಿ ಇಲ್ಲಿ ಸೇರಿಸಲಾಗಿದೆ. ಈ ಪಾಶ್ಚಾತ್ಯಪಂಡಿತನು ವೇದಕ್ಕೆ ಸಂಬಂಧಪಟ್ಟಂತೆ Katyayana's Sarvanukramani, A Sanskrit-English Dictionary, Vedic Mythology, A History of Sanskrit Literature, Brihaddevata, Vedic Grammar, Vedic Index of Names and Subjects ಮೊದಲಾದ ಗ್ರಂಥಗಳನ್ನು ಬರೆದಿದಾನೆ. ಇವು ಅಮೆರಿಕ ಮತ್ತು ಯೂರೋಪ್ ದೇಶಗಳಲ್ಲಿ ಮುದ್ರಿತವಾಗಿ ಪ್ರಕಟಿಸಲ್ಪಟ್ಟಿವೆ.

*—Editor.*

|| ಶ್ರೀಃ ||

# || ಅಥ ಶೌನಕಮಹರ್ಷಿಪ್ರಣೀತಾ ಬೃಹದ್ದೇವತಾ ||

|| ಪ್ರಥಮೋಽಧ್ಯಾಯಃ ||

ಮಂತ್ರದೃಗ್ಭ್ಯೋ ನಮಸ್ಕೃತ್ವಾ ಸಮಾಮ್ನಾಯಾನುಪೂರ್ವಶಃ |
ಸೂಕ್ತರ್ಗರ್ಧರ್ಚಪಾದಾನಾಮೃಗ್ಭ್ಯೋ ವಕ್ಷ್ಯಾಮಿ ದೈವತಂ || ೧ ||
ವೇದಿತವ್ಯಂ ದೈವತಂ ಹಿ ಮಂತ್ರೇ ಮಂತ್ರೇ ಪ್ರಯತ್ನತಃ |
ದೈವತಜ್ಞೋ ಹಿ ಮಂತ್ರಾಣಾಂ ತದರ್ಥಮವಗಚ್ಛತಿ || ೨ ||
ತದ್ಧಿತಾಂಸ್ತದಭಿಪ್ರಾಯಾನೃಷೀಣಾಂ ಮಂತ್ರದೃಷ್ಟಿಷು |
ವಿಜ್ಞಾಪಯತಿ ವಿಜ್ಞಾನಂ ಕರ್ಮಾಣಿ ವಿವಿಧಾನಿ ಚ || ೩ ||

ಮೊದಲನೆಯ ಅಧ್ಯಾಯವು

**ಮಂತ್ರಗಳಲ್ಲಿ ಸ್ತುತರಾದ ದೇವತೆಗಳನ್ನು ತಿಳಿದುಕೊಳ್ಳಬೇಕಾದ ಅವಶ್ಯಕತೆ**

1. ಮಂತ್ರದ್ರಷ್ಟೃಗಳಾದ ಋಷಿಗಳಿಗೆ ನಮಸ್ಕರಿಸಿ, ಹಿಂದಿನಿಂದಲೂ ನಡೆದುಬಂದಿರುವ ಕ್ರಮವನ್ನನುಸರಿಸಿ ಋಗ್ವೇದಸಂಹಿತೆಯ ಸೂಕ್ತ, ಋಕ್, ಅರ್ಧಋಕ್, ಪಾದ ಇವುಗಳಲ್ಲಿ ಪ್ರತಿಪಾದಿತ (ಸ್ತುತ) ರಾಗಿರುವ ದೇವತೆಗಳ ವಿಷಯವನ್ನು ವಿವರಿಸುತ್ತೇನೆ.

2. ಪ್ರತಿ ಮಂತ್ರದಲ್ಲಿಯೂ ಸ್ತುತರಾಗಿರುವ ದೇವತೆಗಳ ಸ್ವರೂಪವನ್ನು ವಿವೇಕಿಯಾದವನು ಪ್ರಯತ್ನ ಪೂರ್ವಕವಾಗಿ ತಿಳಿದುಕೊಳ್ಳಬೇಕು. ಮಂತ್ರಗಳ ದೇವತೆಗಳನ್ನು ತಿಳಿದುಕೊಳ್ಳುವ ಪುರುಷನು ಆ ಮಂತ್ರಗಳ ಅರ್ಥ ವನ್ನೂ ಅವುಗಳ ಉದ್ದೇಶವನ್ನೂ ತಿಳಿದುಕೊಳ್ಳುವನು.

3. ಮಂತ್ರಪ್ರತಿಪಾದಿತದೇವತೆಗಳನ್ನು ತಿಳಿದುಕೊಳ್ಳುವ ಪುರುಷನು, ಋಷಿಗಳ ಜ್ಞಾನದೃಷ್ಟಿಗೆ ಮಂತ್ರಗಳು ಗೋಚರವಾಗುವಕಾಲದಲ್ಲಿ ಆ ಮಂತ್ರಗಳಿಗೆ ಯಾವವಿಧವಾದ ಅರ್ಥವಿದ್ದಿತೋ ಆ ಮಂತ್ರವಿಷಯದಲ್ಲಿ ಋಷಿಗಳ ಅಭಿಪ್ರಾಯವೇನಿದ್ದಿತೋ, ಆ ಮಂತ್ರಗಳಲ್ಲಿ ಉಕ್ತವಾಗಿರುವ ಕರ್ಮವಿಧಾನವು ಯಾವರೀತಿ ಇರುವುದೋ ಅವೆಲ್ಲ ವನ್ನೂ ತಿಳಿಯಲು ಸಮರ್ಥನಾಗುವನು.

---

## BRIHADDEVATA

*Traanslation and Explanation.*

### 1. Impartance of knowing the deities. The Vedic Triad.

1. With obeisance to the seers of formulas, I will, in the sequence of the traditional text, state the divinity of the hymn, for(all)stanzas, the stanza, the hemistich, and the verse.

2. In every formula ane should know the divinity with exactness; for he who knows the divinities of the formulas, understands their object.

3. He is capable of giving an (authoritative) opinion (ವಿಜ್ಞಾಪಯತಿ) as to their (ತನ್ಮಂತ್ರಾಣಾಂ) intentions which were contained (ಹಿ ತಾನ್) in them (ತತ್) at the time when the formulas were revealed to the seers (ಋಷೀಣಾಂ ಮಂತ್ರದೃಷ್ಟಿಷು)

ನ ಹಿ ಕಶ್ಚಿದವಿಜ್ಞಾಯ ಯಾಥಾತಥ್ಯೇನ ದೈವತಂ |
ಲೌಕ್ಯಾನಾಂ ವೈದಿಕಾನಾಂ ವಾ ಕರ್ಮಣಾಂ ಫಲಮಶ್ನುತೇ || ೪ ||
ಪ್ರಥಮೋ ಭಜತೇ ತ್ವಾಸಾಂ ವರ್ಗೋಽಗ್ನಿಮಿಹ ದೈವತಂ |
ದ್ವಿತೀಯೋ ವಾಯುಮಿಂದ್ರಂ ವಾ ತೃತೀಯಃ ಸೂರ್ಯಮೇವ ಚ || ೫ ||
ಅರ್ಥಮಿಚ್ಛನ್ನೃಷಿರ್ದೇವಂ ಯಂ ಯಮಾಹಾಯಮಸ್ತ್ವಿತಿ |
ಪ್ರಾಧಾನ್ಯೇನ ಸ್ತುವನ್ಭಕ್ತ್ಯಾ ಮಂತ್ರಸ್ತದ್ದೇವ ಏವ ಸಃ || ೬ ||
ಸ್ತುತಿಸ್ತು ನಾಮ್ನಾ ರೂಪೇಣ ಕರ್ಮಣಾ ಬಾಂಧವೇನ ಚ |
ಸ್ವರ್ಗಾಯುರ್ಧನಪುತ್ರಾದ್ಯೈರರ್ಥೈರಾಶೀಸ್ತು ಕಥ್ಯತೇ || ೭ ||

4. ಮಂತ್ರಗಳಲ್ಲಿ ಪ್ರತಿಪಾದಿತರಾಗಿರುವ ದೇವತೆಗಳನ್ನು ಯಥಾರ್ಥವಾಗಿ ತಿಳಿದುಕೊಳ್ಳದಿರುವ ಪುರುಷನು ಎಂದರೆ ದೇವತೆಗಳ ವಿಷಯದಲ್ಲಿ ಸರಿಯಾದ ತಿಳುವಳಿಕೆಯನ್ನು ಪಡೆಯದಿರುವ ಮನುಷ್ಯನು ಲೌಕಿಕ ಅಥವಾ ವೈದಿಕ ಕರ್ಮಗಳ ಆಚರಣೆಯಿಂದ ಲಭಿಸುವ ಫಲವನ್ನು ಪಡೆಯಲಾರನು.

### ತ್ರಿಸ್ಥಾನದೇವತೆಗಳು

5. ದೇವತೆಗಳನ್ನು ಮೂರುಗುಂಪುಗಳನ್ನಾಗಿ ವಿಂಗಡಿಸಿದಾರೆ. ಅಗ್ನಿ ಮೊದಲಾದ ದೇವತೆಗಳು ಪೃಥಿವೀ ಸ್ಥಾನದ ದೇವತೆಗಳೆಂದೂ, ವಾಯು ಅಥವಾ ಇಂದ್ರ ಮೊದಲಾದ ದೇವತೆಗಳು ಅಂತರಿಕ್ಷಸ್ಥದೇವತೆಗಳೆಂದೂ, ಸೂರ್ಯ ಮೊದಲಾದವರು ಸ್ವರ್ಗದ ದೇವತೆಗಳೆಂದೂ ದೇವತೆಗಳಲ್ಲಿ ಮೂರು ವರ್ಗ (ಗುಂಪು) ವಿರುವುದು.

6. ಯಾವುದಾದರೂ ಒಂದು ಇಷ್ಟ ಅಥವಾ ಉದ್ದೇಶಸಾಧನೆಗಾಗಿ ಋಷಿಯು ಓರ್ವದೇವತೆಯನ್ನು ಮಂತ್ರದಲ್ಲಿ ಭಕ್ತಿಯಿಂದ ಸ್ತುತಿಸಿದ್ದಲ್ಲಿ ಆ ಮಂತ್ರಕ್ಕೆ ಅದೇ ದೇವತೆಯೆಂದು ಹೇಳಲ್ಪಡುವುದು.

7. ಓರ್ವದೇವತೆಯನ್ನು ಆ ದೇವತೆಯ ಹೆಸರಿನಿಂದಾಗಲಿ, ರೂಪ ಅಥವಾ ಆಕಾರದಿಂದಾಗಲಿ, (ಸಾಹಸ) ಕೃತ್ಯಗಳಿಂದಾಗಲಿ, ಸಂಬಂಧದಿಂದಾಗಲಿ ವರ್ಣಿಸುವಾಗ ಅದು ಸ್ತುತಿಯೆನಿಸುವುದು. ಋಷಿಯು ತನಗೆ ಬೇಕಾದ ಸ್ವರ್ಗಪ್ರಾಪ್ತಿ, ಆಯುಸ್ಸು, ಧನ, ಪುತ್ರರು ಮೊದಲಾದವುಗಳನ್ನು ಬಯಸಿ ಸ್ತುತಿಸಿದಲ್ಲಿ ಅದು ಪ್ರಾರ್ಥನೆ (ಆಶೀಃ) ಯೆನಿಸುವುದು.

---

(and) as to the correct understanding (of them) and the various ceremonies (connected with them).

4. For no one without really having correct knowledge of the divinity (addressed in the formula), attains to the fruit of customary or Vedic ceremonies.

5. The first groop of these (deities) belongs here to the divinity Agni, the second to Vayu or Indra, and the third to Surya.

6. Whateves god a seer desiring an object mentions, let that one, it is said, be (the god of the formula). A formula predominently praising (a god) with devotion, is addressed to that same god.

### 2. Prayer and Praise.

7. Praise is expressed by means of name, form, action and relationship, but prayer by means of objects such as heaven, long life, wealth, and sons.

ಸ್ತುತ್ಯಾಶಿಷೌ ತು ಯೋಸ್ವೃಕ್ಷು ದೃಶ್ಯೇತೇಽಲ್ಪಾಸ್ತು ತಾ ಇಹ ।
ತಾಭ್ಯಶ್ಚಾಲ್ಪತರಾಸ್ತಾಃ ಸ್ಯುಃ ಸ್ವರ್ಗೋ ಯಾಭಿಸ್ತು ಯಾಚ್ಯತೇ ॥ ೮ ॥
ಸ್ತುವಂತಂ ವೇದ ಸರ್ವೋಽಯಮರ್ಥಯತ್ಯೇಷ ಮಾಮಿತಿ ।
ಸ್ತೌತೀತ್ಯರ್ಥಂ ಬ್ರುವಂತಂ ಚ ಸಾರ್ಥಂ ಮಾಮೇಷ ಪಶ್ಯತಿ ॥ ೯ ॥
ಸ್ತುವದ್ಭಿರ್ವಾ ಬ್ರುವದ್ಭಿರ್ವಾ ಋಷಿಭಿಸ್ತತ್ತ್ವದರ್ಶಿಭಿಃ ।
ಭವತ್ಯುಭಯಮೇವೋಕ್ತಮುಭಯಂ ಹ್ಯರ್ಥತಃ ಸಮಂ ॥ ೧೦ ॥
ಪ್ರತ್ಯಕ್ಷಂ ದೇವತಾನಾಮ ಯಸ್ಮಿನ್ಮಂತ್ರೇಽಭಿಧೀಯತೇ ।
ತಾಮೇವ ದೇವತಾಂ ವಿದ್ಯಾನ್ಮಂತ್ರೇ ಲಕ್ಷಣಸಂಪದಾ ॥ ೧೧ ॥

### ಪ್ರಾರ್ಥನೆ ಅಥವಾ ಸ್ತುತಿಯ ಸ್ವರೂಪ

8. ಮೇಲೆ ಹೇಳಿದ ಸ್ತುತಿ ಮತ್ತು ಪ್ರಾರ್ಥನೆಗಳೆರಡನ್ನೂ ಒಳಗೊಂಡ ಮಂತ್ರಗಳು ಋಗ್ವೇದದಲ್ಲಿ ಅಲ್ಪ ಪ್ರಮಾಣದಲ್ಲಿವೆ. ಸ್ವರ್ಗವನ್ನು ಬೇಕೆಂದು ಬಯಸಿ ಪ್ರಾರ್ಥಿಸಿರುವ ಮಂತ್ರಗಳೂ ಇನ್ನೂ ಅಲ್ಪಪ್ರಮಾಣದಲ್ಲಿವೆ. ಎಂದರೆ ಈ ವಿಧವಾದ ಮಂತ್ರಗಳು ಋಗ್ವೇದದಲ್ಲಿ ಹೆಚ್ಚಾಗಿಲ್ಲ.

9. ಪ್ರತಿಯೊಬ್ಬ ದೇವತೆಯೂ ತನ್ನನ್ನು ಸ್ತುತಿಸುವ ಪುರುಷನು ತನ್ನಿಂದ ಏನಾದರೊಂದನ್ನು ಬೇಡುವನೆಂದು ತಿಳಿದಿರುವನು ಮತ್ತು ಆ ಪುರುಷನು ತನ್ನಲ್ಲಿ ಆ ವಸ್ತುವಿರುವುದೆಂದೂ ಅದನ್ನು ತಾನು ಕೊಡಲು ಸಮರ್ಥನೆಂದೂ ತಿಳಿದು ಸ್ತುತಿಸುತ್ತಿರುವನೆಂದೂ ತಿಳಿದಿರುವನು.

10. ತತ್ತ್ವಜ್ಞಾನಿಗಳಾದ ಋಷಿಗಳು ದೇವತೆಗಳನ್ನು ಸ್ತುತಿಸಿದರೂ ಅಥವಾ ಅವರಲ್ಲಿ ತಮ್ಮ ಇಷ್ಟಾರ್ಥಗಳನ್ನು ನಿವೇದಿಸಿಕೊಂಡರೂ, ಇವೆರಡಕ್ಕೂ ಒಟ್ಟಿನಲ್ಲಿ ವ್ಯತ್ಯಾಸವೇನೂ ಇರುವುದಿಲ್ಲ. ಎರಡೂ ಒಂದೇ ಎಂದು ಭಾವಿಸಬೇಕು.

11. ಒಂದು ಮಂತ್ರದಲ್ಲಿ ಓರ್ವ ದೇವತೆಯ ಹೆಸರನ್ನು ಪ್ರತ್ಯಕ್ಷವಾಗಿ ಎಂದರೆ ಸಂಬೋಧನಾರೂಪವಾಗಿ (ಎಲೈ ಇಂದ್ರನೇ, ನೀನು ಇತ್ಯಾದಿ) ಪಠಿಸಿದ್ದಲ್ಲಿ, ಆ ಮಂತ್ರಕ್ಕೆ ಅದೇ ದೇವತೆಯೆಂದು ತಿಳಿಯಬೇಕು. ಇದೇ ಲಕ್ಷಣವು.

8. The stanzas in which both praise and prayer appear, are here (in the Rig-Veda ) but few; still fewer than these are those in which heaven it prayed for.

9. Every god (ಸರ್ವೋಽಯಂ) recognizes one who praises, (thinking) ‘ this man wants something from me, ’ and (he also recognises one who states an object), (thinking) ‘ he praises, (that is) he regards me as one having (those) object (to bestow) ’.

10. But whether the seers who discern the truth either praise or state (an object), they express both ; for both are in reality the same.

11. When the name of a deity is mentioned in the second person in a formula, one should know that to be the deity in the formula, because (that) indication is there (ಸಂಪದಾ).

ತಸ್ಮಾತ್ತು ದೇವತಾಂ ನಾಮ್ನಾ ಮಂತ್ರೇ ಮಂತ್ರೇ ಪ್ರಯೋಗವಿತ್ |
ಬಹುತ್ವಮಭಿಧಾನಾಂ ಚ ಪ್ರಯತ್ನೇನೋಪಲಕ್ಷಯೇತ್ || ೧೨ ||
ಸಂಪೂರ್ಣಮೃಷಿವಾಕ್ಯಂ ತು ಸೂಕ್ತಮಿತ್ಯಭಿಧೀಯತೇ |
ದೃಶ್ಯಂತೇ ದೇವತಾ ಯಸ್ಮಿನ್ನೇಕಸ್ಮಿನ್ಬಹುಷು ದ್ವಯೋಃ || ೧೩ ||
ದೇವತಾರ್ಷಾರ್ಥಛಂದಸ್ತೋ ವೈವಿಧ್ಯಂ ಚ ಪ್ರಜಾಯತೇ |
ಋಷಿಸೂಕ್ತಂ ತು ಯಾವಂತಿ ಸೂಕ್ತಾನ್ಯೇಕಸ್ಯ ವೈ ಸ್ತುತಿಃ || ೧೪ ||
ಶ್ರೂಯತೇ ತಾನಿ ಸರ್ವಾಣಿ ಋಷೇಃ ಸೂಕ್ತಂ ಹಿ ತಸ್ಯ ತತ್ |
ಯಾವದರ್ಥಸಮಾಪ್ತಿಃ ಸ್ಯಾದರ್ಥಸೂಕ್ತಂ ವದಂತಿ ತತ್ || ೧೫ ||

### ನಾನಾವಿಧ ಸೂಕ್ತಗಳು

12. ಆದ್ದರಿಂದ ಮಂತ್ರವಿನಿಯೋಗವನ್ನು ತಿಳಿದಿರುವ ಪುರುಷನು ಪ್ರತಿ ಮಂತ್ರದಲ್ಲಿಯೂ ಇರುವ ದೇವತೆಯ ಹೆಸರನ್ನೂ ಮತ್ತು ಆ ದೇವತೆಯ ಗುಣಗಳಿಗೆ ಅನುಸಾರವಾಗಿ ಇರಬಹುದಾದ ಇತರ ಹೆಸರುಗಳನ್ನೂ ಪ್ರಯತ್ನಪೂರ್ವಕವಾಗಿ ವಿಮರ್ಶಿಸಿ ತಿಳಿದುಕೊಳ್ಳಬೇಕು.

13. ಋಷಿಯು ಓರ್ವ ದೇವತೆಯ (ಅಥವಾ ಅನೇಕ ದೇವತೆಗಳ) ವಿಷಯವಾಗಿ ಸ್ತುತಿಸುವ ಅಥವಾ ಪಠಿಸುವ ವಾಕ್ಯಗಳೆಲ್ಲವೂ ಒಟ್ಟು ಸೇರಿಸಿದರೆ ಅದು (ಒಂದು) ಸೂಕ್ತವೆನಿಸುವುದು. ಆ ಸೂಕ್ತದಲ್ಲಿ ಒಂದು ಅಥವಾ ಅನೇಕ ಮಂತ್ರಗಳಿರಬಹುದು. ಆ ಮಂತ್ರಗಳಲ್ಲಿ ಒಂದರಲ್ಲಿ ಅಥವಾ ಎರಡರಲ್ಲಿ ಅಥವಾ ಅನೇಕ ಮಂತ್ರಗಳಲ್ಲಿ ದೇವತೆಯ ಹೆಸರು ಪಠಿತವಾಗಿರಬಹುದು.

14-15. ಸೂಕ್ತಗಳಲ್ಲಿ ವಿಷಯಾನುಸಾರವಾಗಿ ಅನೇಕವಿಧವಿರುವುದು. ಹೇಗೆಂದರೆ, ಒಂದು ಸೂಕ್ತದಲ್ಲಿರುವ ಮಂತ್ರಗಳಿಗೆಲ್ಲಾ ಒಬ್ಬನೇ ಋಷಿ ಇರಬಹುದು ಅಥವಾ ಒಂದೇ ಸೂಕ್ತದಲ್ಲಿರುವ ಬೇರೆಬೇರೆ ಮಂತ್ರಗಳಿಗೆ ಬೇರೆಬೇರೆ ಋಷಿಗಳಿರಬಹುದು. ದೇವತೆಗಳ ವಿಷಯವೂ ಅದರಂತೆಯೇ. ಸೂಕ್ತದಲ್ಲಿರುವ ಎಲ್ಲಾ ಮಂತ್ರಗಳಿಗೂ ಒಂದೇ ದೇವತೆ ಇರಬಹುದು ಅಥವಾ ಬೇರೆಬೇರೆ ಮಂತ್ರಗಳಿಗೆ ಬೇರೆಬೇರೆ ದೇವತೆಗಳಿರಬಹುದು. ಸೂಕ್ತದಲ್ಲಿ ಪ್ರತಿಪಾದಿತವಾಗಿರುವ ವಿಷಯವೂ ಇದರಂತೆಯೇ. ಸೂಕ್ತದಲ್ಲೆಲ್ಲಾ ಒಂದೇ ವಿಷಯವು ಪ್ರತಿಪಾದಿತವಾಗಿರಬಹುದು ಅಥವಾ ಬೇರೆಬೇರೆ ವಿಷಯಗಳು ಪ್ರತಿಪಾದಿತವಾಗಿರಬಹುದು. ಆದ್ದರಿಂದ ಒಂದು ಸೂಕ್ತದಲ್ಲಿರುವ ಮಂತ್ರಗಳಿಗೆಲ್ಲಾ ಒಬ್ಬನೇ ಋಷಿಯು ದ್ರಷ್ಟೃವಾಗಿದ್ದಲ್ಲಿ ಆ ಸೂಕ್ತಕ್ಕೆ ಋಷಿಸೂಕ್ತವೆಂದು ಹೆಸರು. ಏಕೆಂದರೆ ಆ

### Different kinds of hymns.

12. Therefore one familiar with(the)applciation (of formulas) should in every formula, carefully observe the deity, with regard to name, and the multiplicity of the designations (of deities).

13. The complete utterance of a seer is designated a hymn (ಸೂಕ್ತ), in which the deities appear in one, in many, (or) in two (formulas).

14, 15. A variety arises with regard to the deity, the authorship, the object, and the metre. All hymns which are revealed as the praise of one single (seer constitute) a seer's hymn (ಋಷಿಸೂಕ್ತ); for that is the (aggregate)

**ಸಮಾನಛಂದಸೋ ಯಾಃ ಸ್ಯುಸ್ತಚ್ಛಂದಃಸೂಕ್ತಮುಚ್ಯತೇ ।**
**ವೈವಿಧ್ಯಮೇವಂ ಸೂಕ್ತಾನಾಮಿಹ ವಿದ್ಯಾದ್ಯಥಾತಥಂ ।೧೬॥**
**ದೇವತಾನಾಮಧೇಯಾನಿ ಮಂತ್ರೇಷು ತ್ರಿವಿಧಾನಿ ತು ।**
**ಸೂಕ್ತಭಾಂಜ್ಯಥವರ್ಗ್ಭಾಂಜಿ ತಥಾ ನೈಪಾತಿಕಾನಿ ತು ॥೧೭॥**
**ಸೂಕ್ತಭಾಂಜಿ ಭಜಂತೇ ವೈ ಸೂಕ್ತಾನ್ಯೃಗ್ಭಾಂಜಿ ವೈ ಋಚಃ ।**
**ಮಂತ್ರೇಽನ್ಯದೈವತೇಽನ್ಯಾನಿ ನಿಗದ್ಯಂತೇಽತ್ರ ಕಾನಿಚಿತ್ ॥೧೮॥**

ಸೂಕ್ತಕ್ಕೆಲ್ಲಾ ಒಬ್ಬನೇ ಋಷಿಯು. ಒಂದು ಸೂಕ್ತದಲ್ಲಿ ಅಥವಾ ಒಂದು ಸೂಕ್ತದ ಬಹುಭಾಗ ಮಂತ್ರಗಳಲ್ಲಿ ಒಂದು ವಿಷಯವು ಪೂರ್ತಿಯಾಗಿ ಪ್ರತಿಪಾದಿತವಾಗಿದ್ದರೆ (ವಿವರಿಸಿದ್ದರೆ) ಆ ಸೂಕ್ತಕ್ಕೆ ಅರ್ಥಸೂಕ್ತವೆಂದು ಹೆಸರು.

16. ಒಂದು ಸೂಕ್ತದಲ್ಲಿರುವ ಋಕ್ಕುಗಳೆಲ್ಲಾ ಒಂದೇ (ಸಮಾನ) ಛಂದಸ್ಸಿನವಾಗಿದ್ದರೆ ಆ ಸೂಕ್ತಕ್ಕೆ ಛಂದಸ್ಸೂಕ್ತವೆಂದು ಹೆಸರು. (ಕೆಲವು ಸೂಕ್ತಗಳಲ್ಲಿ ಎಲ್ಲಾ ಋಕ್ಕುಗಳು ಒಂದೇ ಛಂದಸ್ಸಿನವಾಗಿರುವವು. ಕೆಲವು ಸೂಕ್ತಗಳಲ್ಲಿ ಆ ರೀತಿ ಇಲ್ಲದೆ ಬೇರೆಬೇರೆ ಛಂದಸ್ಸಿನ ಮಂತ್ರಗಳಿರುವವು). ಆದ್ದರಿಂದ ಋಷಿದೇವತಾಛಂದಸ್ಸಿಗನುಸಾರವಾಗಿ ಸೂಕ್ತಗಳನ್ನು ಋಷಿಸೂಕ್ತ, ದೇವತಾ (ಅಥವಾ ವಿಷಯ) ಅಥವಾ ಅರ್ಥಸೂಕ್ತ ಮತ್ತು ಛಂದಸ್ಸೂಕ್ತವೆಂದು ಸೂಕ್ತಗಳು ಮೂರುವಿಧವಾಗಿರುವವು ಎಂದು ತಿಳಿಯಬೇಕು.

**ಸೂಕ್ತಭಾಂಜಿ. ಋಗ್ಭಾಂಜಿ, ನೈಪಾತಿಕ ಎಂಬ ಮೂರುವಿಧ ಸೂಕ್ತಗಳು**

17. ಸೂಕ್ತಗಳಲ್ಲಿ ದೇವತೆಗಳ ಹೆಸರು ಮೂರುವಿಧವಾಗಿ ಪಠಿತವಾಗಿರುವುದು. ಅವುಗಳಿಗೆ ಕ್ರಮವಾಗಿ ಸೂಕ್ತಭಾಂಜಿ, ಋಗ್ಭಾಂಜಿ. ನೈಪಾತಿಕ ಎಂದು ಹೆಸರು.

18. ಸೂಕ್ತದ ಎಲ್ಲಾ ಮಂತ್ರಗಳಲ್ಲಿಯೂ ಒಂದು ದೇವತೆಯ ಹೆಸರಿದ್ದರೆ (ಅಥವಾ ಆ ದೇವತೆಯು ಪ್ರತಿಪಾದಿತವಾಗಿದ್ದರೆ) ಆ ಸೂಕ್ತಕ್ಕೆ ಸೂಕ್ತಭಾಂಜಿ ಎಂದು ಹೆಸರು. ಹಾಗಿಲ್ಲದೆ ದೇವತೆಯ ಹೆಸರು ಒಂದು ಋಕ್ಕಿನಲ್ಲಿ ಮಾತ್ರ ಪಠಿತವಾಗಿದ್ದರೆ ಅದು ಋಗ್ಭಾಂಜಿ ಎನಿಸುವುದು. ಮತ್ತೆ ಕೆಲವು ಸಂದರ್ಭಗಳಲ್ಲಿ ಒಂದು ಋಕ್ಕಿನಲ್ಲಿ ಪ್ರತಿಪಾದಿತವಾಗಿರುವ ದೇವತೆ ಅಥವಾ ವಿಷಯದ ಜತೆಗೆ ಪ್ರಸ್ತಾಪವಾಗಿ ಬೇರೆ ದೇವತೆಯ (ಅಥವಾ ವಿಷಯದ) ಹೆಸರು ಪಠಿತವಾಗಿದ್ದರೆ ಅದಕ್ಕೆ ನೈಪಾತಿಕವೆಂದು ಹೆಸರು.

---

hymn ot that seer. In so far as a subject is completed (in sevaral stanzas), they call it a subject-hymn (ಅರ್ಥಸೂಕ್ತ).

16. (The stanzas which have a common metre are ealled a metre-hymn (ಛಂದಃಸೂಕ್ತ). Thus one should here recognize the variety of hymns such as it really is.

**4. Hymn-deities, stanza-deities, incidental-deities.**

17. The denominations of the deities in the formulas are of three kinds : such as belong to a (whole) hymn, or such as belong to a stanza (only) as well as such as are incidental.

18. (Names) belonging to hymns belong to (whole) hymns, those belonging to stanzas belong to (single) stanzas (only). In a formula addressed to one divinity certain other (names) are here mentined.

**ಸಾಲೋಕ್ಯಾತ್ಸಾಹಚರ್ಯಾದ್ವಾ ತಾನಿ ನೈಪಾತಿಕಾನಿ ತು ।**
**ತಸ್ಮಾದ್ಬಹುಪ್ರಕಾರೇಽಪಿ ಸೂಕ್ತೇ ಸ್ಯಾತ್ಸೂಕ್ತಭಾಗಿನೀ ॥ ೧೯ ॥**
**ದೇವತಾ ತದ್ಯಥಾ ಸೂಕ್ತಮವಿಶೇಷ್ಯಂ ಪ್ರತೀಯತೇ ।**
**ಭಿನ್ನೇ ಸೂಕ್ತೇ ವದೇದೇವ ದೇವತಾಮಿಹ ಲಿಂಗತಃ ॥ ೨೦ ॥**
**ತತ್ರ ತತ್ರ ಯಥಾವಚ್ಚ ಮಂತ್ರಾನ್ಕರ್ಮಸು ಯೋಜಯೇತ್ ।**
**ದೇವತಾಯಾಃ ಪರಿಜ್ಞಾನಾತ್ತದ್ಧಿ ಕರ್ಮ ಸಮೃಧ್ಯತೇ ॥ ೨೧ ॥**
**ಆದ್ಯಂತಯೋಸ್ತು ಸೂಕ್ತಾನಾಂ ಪ್ರಸಂಗಪರಿಕೀರ್ತನಾತ್ ।**
**ಸ್ತೋತೃಭಿರ್ದೇವತಾ ನಾಮ್ನಾ ಉಪೇಕ್ಷೇತೇಹ ಮಂತ್ರವಿತ್ ॥ ೨೨ ॥**

19. ಒಂದು ದೇವತೆಯನ್ನು ಸ್ತುತಿಸುವಾಗ ಪ್ರಸ್ತಾಪವಾಗಿ ಅದೇ ಲೋಕದ (ಪೃಥಿವಿ, ಅಂತರಿಕ್ಷ, ಸ್ವರ್ಗ) ಇತರ ದೇವತೆಯ ಅಥವಾ ಆ ದೇವತೆಗೆ ಸಂಬಂಧಪಟ್ಟ (ಸಾಹಸಚರ್ಯ) ಇತರ ದೇವತೆಯ ವಿಷಯವಿವರಣೆ ಇರಬಹುದು. ಹಾಗಿದ್ದಲ್ಲಿ ಅಂತಹ ಸೂಕ್ತಗಳು ನೈಪಾತಿಕವೆನಿಸುವವು. ಆದ್ದರಿಂದ ಸೂಕ್ತಭಾಂಜಿ ಎಂಬ ವಿಧದ ಸೂಕ್ತಗಳಲ್ಲಿ ಅನೇಕಪ್ರಕಾರವಿರಬಹುದು.

20. ಒಂದು ಸೂಕ್ತ ಅಥವಾ ಮಂತ್ರದ ದೇವತೆಯನ್ನು ನಿಷ್ಕೃಷ್ಟವಾಗಿ ಹೆಸರಿನಿಂದ ತಿಳಿಸದಿದ್ದರೆ ಅಂತಹ ಸಂದರ್ಭದಲ್ಲಿ ಆ ಸೂಕ್ತದ (ಅಥವಾ ಮಂತ್ರದ) ಶಬ್ದಗಳನ್ನೋ ಅರ್ಥವನ್ನೋ ವಿಂಗಡಿಸಿ (ಬೇರೆ ಮಾಡಿ) ಅದರಿಂದ ಸೂಚಿತವಾಗುವ ಅರ್ಥಕ್ಕನುಸಾರವಾಗಿ ಆ ಸೂಕ್ತದ ಅಥವಾ ಮಂತ್ರದ ದೇವತೆಯನ್ನು ತಿಳಿಯಬಹುದು.

21. ಯಜ್ಞಾದಿಕರ್ಮಗಳಲ್ಲಿ ಉಪಯೋಗಿಸುವ ಮಂತ್ರಗಳ ದೇವತೆಗಳನ್ನು ಸರಿಯಾಗಿ ತಿಳಿದುಕೊಂಡು ಆಯಾ ಸಂದರ್ಭಾನುಸಾರವಾಗಿ ಮಂತ್ರಗಳನ್ನು ಉಪಯೋಗಿಸಬೇಕು. ಮಂತ್ರಪ್ರತಿಪಾದ್ಯದೇವತೆಗಳನ್ನು ಚೆನ್ನಾಗಿ ತಿಳಿದುಕೊಂಡು ಕರ್ಮಾಚರಣೆಮಾಡುವುದರಿಂದ ಕರ್ಮಸಾಫಲ್ಯವುಂಟಾಗುವುದು.

**ಹೆಸರುಗಳ ಸ್ವರೂಪ ಮತ್ತು ಅವು ಹೇಗೆ ಉತ್ಪತ್ತಿಯಾದವು ?**

22. ಸ್ತುತಿಕರ್ತರಾದ ಋಷಿಗಳು ಸಾಧಾರಣವಾಗಿ ಸೂಕ್ತಗಳ ಪ್ರಾರಂಭದಲ್ಲಿಯೂ, ಕೊನೆಯಲ್ಲಿಯೂ ಸೂಕ್ತದ ವಿಷಯವನ್ನು ಪ್ರಸ್ತಾಪಮಾಡಿರುವುದರಿಂದ ಮಂತ್ರಜ್ಞನಾದ ಪುರುಷನು ಸೂಕ್ತದಲ್ಲಿ ಪ್ರತಿಪಾದಿತರಾದ ದೇವತೆಗಳ ಹೆಸರುಗಳನ್ನು ವಿಮರ್ಶಿಸಿ ನಿಶ್ಚಯಿಸಬಹುದು.

---

19. either because they belong to the same world or because they are associated : these are incidental. Hence even in a hymn of manifold character, there may belong to the (whole) hymn.

20. a deity : that is, (such) a hymn is understoood to be one that cannot be definitely described. When a hymn is broken up (ಭಿನ್ನೇ), one should here state the deity from (its) characteristic mark.

21. In each case one should duly connect the formulas with the rites by ascertaining the deity ; for that is the rite which is completely successful.

**5. Origin of names.**

22. Because the praisers, at the beginning and end of hymns, proclaim the occasion, one who knows formulas should here observe the deities with regard to their names.

ತತ್ರೈತ್ಯಾಹುಃ ಕತಿಭ್ಯಸ್ತು ಕರ್ಮಭ್ಯೋ ನಾಮ ಜಾಯತೇ |
ಸತ್ತ್ವಾನಾಂ ವೈದಿಕಾನಾಂ ವಾ ಯದ್ವಾನ್ಯದಿಹ ಕಿಂಚನ || ೨೩ ||
ನವಭ್ಯ ಇತಿ ನೈರುಕ್ತಾಃ ಪುರಾಣಾಃ ಕವಯಶ್ಚ ಯೇ |
ಮಧುಕಃ ಶ್ವೇತಕೇತುಶ್ಚ ಗಾಲವಶ್ಚೈವ ವನ್ವತೇ || ೨೪ ||
ನಿವಾಸಾತ್ಕರ್ಮಣೋ ರೂಪಾನ್ಮಂಗಲಾದ್ವಾಚ ಆಶಿಷಃ |
ಯದೃಚ್ಛಯೋಪವಸನಾತ್ತಥಾಮುಷ್ಯಾಯಣಾಚ್ಚ ಯತ್ || ೨೫ ||
ಚತುರ್ಭ್ಯ ಇತಿ ತತ್ರಾಹುರ್ಯಾಸ್ಕಗಾರ್ಗ್ಯರಥೀತರಾಃ |
ಆಶಿಷೋಽಥಾರ್ಥವೈರೂಪ್ಯಾದ್ವಾಚಃ ಕರ್ಮಣ ಏವ ಚ || ೨೬ ||

23. ಆಯಾ ದೇವತೆಗಳಿಗೆ ಆಯಾ ಹೆಸರುಗಳು ಹೇಗೆ ಬಂದಿತು ಎಂಬ ವಿಷಯದಲ್ಲಿ,—ಆ ದೇವತೆಗಳು ನೆರವೇರಿಸಿದ ಕರ್ಮಗಳು ಯಾವುವು ? ಅಂತಹ ಎಷ್ಟು ಕಾರ್ಯಗಳಿಂದ ಆ ಹೆಸರು ಬಂದಿತು ? ಎಂಬುದನ್ನು ತಿಳಿದವರು ಹೇಳುವರು. ಈ ವಿಧವಾದ ಹೆಸರುಗಳು ವೇದಗಳಲ್ಲಿ ಸೂಚಿತವಾಗಿರುವ ಅಥವಾ ಇತರವಿಧವಾಗಿ ಅಲ್ಲಲ್ಲಿ ಪಠಿತವಾಗಿರುವ ಹೆಸರುಗಳ ವಿಷಯದಲ್ಲಿಯೂ ಅನ್ವಯಿಸುವುದು.

24. ನಾಮ (ಹೆಸರು) ಎಂಬ ಶಬ್ದವು ನವ (ಒಂಭತ್ತು) ಎಂಬ ಶಬ್ದದಿಂದ ನಿಷ್ಪನ್ನವಾಗಿರುವುದೆಂದು ನಿರುಕ್ತಕಾರರೂ, ಪೂರ್ವಿಕರಾದ ಕವಿಗಳೂ, ಮಧುಕ, ಶ್ವೇತಕೇತು, ಗಾಲವ ಮೊದಲಾದವರೂ ಅಭಿಪ್ರಾಯ ಪಡುವರು.

25. ಹೇಗೆಂದರೆ, ಒಂದು ವ್ಯಕ್ತಿಗೆ ಒಂದು ಹೆಸರು ಬರಬೇಕಾದರೆ ಆ ವ್ಯಕ್ತಿಯ ನಿವಾಸಸ್ಥಾನ, ಅದು ಮಾಡುವ ಕಾರ್ಯ, ಅದರ ರೂಪ, ಮಂಗಳ, ವಾಕ್ಯ, ಪ್ರಾರ್ಥನೆ, ಸಂದರ್ಭ, ಅದರ ರೀತಿನೀತಿಗಳು ಇವುಗಳ ಸಂಪರ್ಕದಿಂದ ಒಂದು ವ್ಯಕ್ತಿಗೆ ಒಂದು ನಿರ್ದಿಷ್ಟವಾದ ಹೆಸರು ಬರಬಹುದು.

26. ಒಂದು ವ್ಯಕ್ತಿಗೆ ಒಂದು ನಿರ್ದಿಷ್ಟವಾದ ಹೆಸರು ರೂಢಿಯಲ್ಲಿ ಬರುವ ವಿಷಯದಲ್ಲಿ—ಪ್ರಾರ್ಥಿಸುವುದು, (ಆಶಿಷಃ) ಉದ್ದಿಷ್ಟವಿಷಯಗಳಲ್ಲಿ ವೈವಿಧ್ಯತೆ, ಉಚ್ಚರಿಸುವ ವಾಕ್ಯಗಳು, ಮಾಡುವ ಕರ್ಮಗಳು ಎಂಬ ಈ ನಾಲ್ಕು ವಿಧದಿಂದ ಆಯಾ ವ್ಯಕ್ತಿಗೆ ಆಯಾ ಹೆಸರು ಬರುವುದು ಎಂದು ಯಾಸ್ಕರು ಗಾರ್ಗ್ಯರು, ರಥೀತರ ಎಂಬ ಆಚಾರ್ಯರುಗಳು ಹೇಳುವರು.

23. As to that, indeed, they say : 'from how many actions does a name arise, whether of Vedic beings or any other (name occurring) here' ?

24. 'From nine,' say the etymologists, and the ancient sages Madhuka, Svetaketu, and Galava think so too:

25. '(viz) that which (comes) from abode, action, form, luck, speech prayer, from accideut, as well as addiction aud extraction.'

26. With regard to that (question), Yaska, Gargya, rnd Rathitara say, 'from four : from prayer, from the diversity of objects, from speech. and from action.

ಸರ್ವಾಣ್ಯೇತಾನಿ ನಾಮಾನಿ ಕರ್ಮತಸ್ತ್ವಾಹ ಶೌನಕಃ ।
ಆಶೀಃ ರೂಪಂ ಚ ವಾಚ್ಯಂ ಚ ಸರ್ವಂ ಭವತಿ ಕರ್ಮತಃ ॥ ೨೭ ॥
ಯದೃಚ್ಛಯೋಽಪನಸನಾತ್ತಥಾಮುಷ್ಯಾಯಣಾಚ್ಚ ಯತ್ ।
ತಥಾ ತದಪಿ ಕರ್ಮೈವ ತಚ್ಛೃಣುಧ್ವಂ ಚ ಹೇತವಃ ॥ ೨೮ ॥
ಪ್ರಜಾಃ ಕರ್ಮಸಮುತ್ಥಾ ಹಿ ಕರ್ಮತಃ ಸತ್ತ್ವಸಂಗತಿಃ ।
ಕ್ವಚಿತ್ಸಂಜಾಯತೇ ಸಚ್ಚ ನಿವಾಸಾತ್ತತ್ಪ್ರಜಾಯತೇ ॥ ೨೯ ॥
ಯಾದೃಚ್ಛಿಕಂ ತು ನಾಮಾಭಿ ಧೀಯತೇ ಯತ್ರ ಕುತ್ರಚಿತ್ ।
ಔಪಮ್ಯಾದಪಿ ತದ್ವಿದ್ಯಾದ್ಭಾವಸ್ಯೈವೇಹ ಕಸ್ಯಚಿತ್ ॥ ೩೦ ॥

**ಶೌನಕರ ಮತವು; ವ್ಯಕ್ತಿಗೆ ಹೆಸರುಗಳು ವ್ಯಕ್ತಿಯ ಕರ್ಮಗಳಿಂದಲೇ ಉಂಟಾಗುವವು**

27. ಆಯಾ ವ್ಯಕ್ತಿಗಳಿಗೆ ಆಯಾ ಹೆಸರು ಬರಲು ಕಾರಣವೇನೆಂದರೆ—ಆ ವ್ಯಕ್ತಿಯು ಮಾಡುವ ಕರ್ಮ, ಹಾರೈಕೆ, ಅದರ ರೂಪ ಮತ್ತು ಉಚ್ಚರಿಸುವ (ಆಡುವ) ಮಾತು ಇವುಗಳಿಂದ ಮಾತ್ರ ಒಂದು ನಿರ್ದಿಷ್ಟವಾದ ಹೆಸರು ರೂಢಿಯಲ್ಲಿ ಬರುವುದೆಂದು ಶೌನಕಮಹರ್ಷಿಯ ಅಭಿಮತವು.

28. ಹಾಗೆಯೇ, ಒಂದು ವ್ಯಕ್ತಿಗೆ ಒಂದು ಹೆಸರು ಕಾರಣಾಂತರದಿಂದ ಅಥವಾ ಸಂದರ್ಭಾನುಸಾರ ಬಂತೆಂದು ಹೇಳುವಾಗಲೂ ಆ ಹೆಸರು ಬರಲು ಆ ವ್ಯಕ್ತಿಯ ಕರ್ಮವೇ ಮುಖ್ಯಕಾರಣವು. ಅದಕ್ಕೆ ಕಾರಣವನ್ನು ಹೇಳುವೆನು, ಕೇಳಿ.

29. ಪ್ರಾಣಿಗಳು ಕರ್ಮದಿಂದಲೇ ಉತ್ಪನ್ನವಾಗುವವು. ಆ ಕರ್ಮವೆಂಬುದು ಸ್ತ್ರೀಪುರುಷಪ್ರಾಣಿಗಳ ಸಮಾಗಮವೇ ಆಗಿದೆ. ಇಂತಹ ಸಮಾಗಮದಿಂದ ಎಲ್ಲಿಯೋ ಒಂದು ಸ್ಥಳದಲ್ಲಿ ಒಂದು ಪ್ರಾಣಿಯು ಉತ್ಪತ್ತಿಯಾಗುವುದು. ಅದು ಪ್ರಾಣಿಯ ನಿವಾಸಸ್ಥಾನದಲ್ಲಿ (ಅಥವಾ ಶರೀರದಿಂದ) ಉತ್ಪನ್ನವಾಗುವುದು.

30. ಕಾರಣಾಂತರದಿಂದ ಸಂದರ್ಭಾನುಸಾರವಾಗಿ ಎಲ್ಲಿಯಾದರೂ ಒಂದು ಸ್ಥಳದಲ್ಲಿ ಒಂದು ವ್ಯಕ್ತಿಗೆ ಒಂದು ಹೆಸರು ಬಂದರೂ ಅದೂ ಸಹ ಅದೇ ವಿಧವಾಗಿರುವ ಬೇರೆ ರೂಪದ ಅಥವಾ ವ್ಯಕ್ತಿಯ ಹೋಲಿಕೆಯಿಂದ ಬಂದಿತೆಂದು ತಿಳಿಯಬಹುದು.

### 6. Saunaka's view: all names derived from action.

27. Saunaka, however, says that all these names (come) from action: prayer and form and utterance, all arise from action.

28. Similarly, even that (name) which (comes) from accident, as well as from addition and extraction, is simply action: and so hear (what) the reasons (are).

29. Creatures arise from action; from action (comes) the intercourse of beings. And a being comes into existence somewhere; it is produced from (its) abode.

30. An accidental name is given somewhere or other: one should know that that also is here (derived from a comparison with some (form of) becoming.

ನಾಕರ್ಮಕೋಽಸ್ತಿ ಭಾವೋ ಹಿ ನ ನಾಮಾಸ್ತಿ ನಿರರ್ಥಕಂ ।
ನಾನ್ಯತ್ರ ಭಾವಾನ್ನಾಮಾನಿ ತಸ್ಮಾತ್ಸರ್ವಾಣಿ ಕರ್ಮತಃ ॥ ೩೧ ॥
ಮಂಗಲಾತ್ಕ್ರಿಯತೇ ಯಚ್ಚ ನಾಮೋಪವಸನಾಚ್ಚ ಯತ್ ।
ಭವತ್ಯೇವ ತು ಸಾ ಹ್ಯಾಶೀಃ ಸ್ವಸ್ತ್ಯಾದೇರ್ಮಂಗಲಾದಿಹ ॥ ೩೨ ॥
ಅಪಿ ಕುತ್ಸಿತನಾಮಾಯಮಿಹ ಜೀವೇತ್ಕಥಂ ಚಿರಂ ।
ಇತಿ ಕ್ರಿಯಂತೇ ನಾಮಾನಿ ಭೂತಾನಾಂ ವಿದಿತಾನ್ಯಪಿ ॥ ೩೩ ॥
ಮಂತ್ರಾ ನಾನಾಪ್ರಕಾರಾಃ ಸುರ್ದೃಷ್ಟಾ ಯೇ ಮಂತ್ರದರ್ಶಿಭಿಃ ।
ಸ್ತುತ್ಯಾ ಚೈವ ವಿಭೂತ್ಯಾ ಚ ಪ್ರಭಾವಾದ್ದೇವತಾತ್ಮನಃ ॥ ೩೪ ॥

31. ಯಾವ ವ್ಯಕ್ತಿಗೆ ಯಾವ ಹೆಸರು ಬರಬೇಕಾದರೂ ಆ ಹೆಸರು ಆ ವ್ಯಕ್ತಿಯು ಮಾಡುವ ಕರ್ಮಕ್ಕೆ ಸಂಬಂಧವಿಲ್ಲದೆ ಇರುವುದಿಲ್ಲ. ಆದ್ದರಿಂದ ಯಾವ ಹೆಸರೂ ಅರ್ಥರಹಿತವಾಗಿರುವುದಿಲ್ಲ. ಕರ್ಮಸಂಬಂಧವಿಲ್ಲದೆ ಯಾವ ಹೆಸರೂ ಉಂಟಾಗುವುದಿಲ್ಲ. ಆದ್ದರಿಂದ ಎಲ್ಲಾ ಹೆಸರುಗಳೂ ಆಯಾ ವ್ಯಕ್ತಿಗೆ ಸಂಬಂಧಪಟ್ಟ ಕರ್ಮಗಳಿಂದಲೇ ಉಂಟಾಗಿರುವವು.

### ಮಂಗಲಕರವಾದ ಹೆಸರುಗಳು ; ನಾನಾವಿಧ ಮಂತ್ರಗಳು

32. ಮಂಗಲಕರವಾದ ಕರ್ಮಗಳಿಂದಲೂ, ಅಂತಹ ಕರ್ಮಗಳ ಸಾಹಚರ್ಯದಿಂದಲೂ ಉಂಟಾಗುವ ಹೆಸರು ಪ್ರಾರ್ಥನೆ ಅಥವಾ ಆಶೀರ್ವಾದವೆನಿಸುವುದು. ಸ್ವಸ್ತಿ ಮೊದಲಾದ ಮಂಗಳಕರವಾದ ಶಬ್ದಗಳ ಉಚ್ಚಾರದಿಂದ ಆ ಹೆಸರು, ಮಂಗಲಕರವಾಗಿಯೇ ಇರುವುದು.

33. ಪ್ರಾಣಿಗಳ ಅವರಲ್ಲಿಯೂ ಪ್ರಸಿದ್ಧವಾದ ಪ್ರಾಣಿಗಳ ಹೆಸರುಗಳೂ ಸಹ ಈ ನಿಯಮವನ್ನೇ ಅನುಸರಿಸಿ ಉಂಟಾಗಿರುವವು. ಕೆಟ್ಟ ಅಥವಾ ದುಷ್ಟಪ್ರಾಣಿಗಳ ಹೆಸರು (ಅಥವಾ ಕೆಟ್ಟ ಮನುಷ್ಯನ ಹೆಸರು) ಬಹುಕಾಲ ಹೇಗೆ ತಾನೆ ಬಳಕೆಯಲ್ಲಿರುವುದು ?

34. ಮಂತ್ರದ್ರಷ್ಟೃಗಳಾದ ಋಷಿಗಳಿಂದ ದೃಷ್ಟವಾದ ಮಂತ್ರಗಳು ಸ್ತುತಿಯಿಂದಲೂ ಮಹಿಮೆಯಿಂದಲೂ ಸ್ತುತ್ಯರಾದ ದೇವತೆಗಳ ಪ್ರಭಾವದಿಂದಲೂ ಕೂಡಿ ನಾನಾಪ್ರಕಾರವಾಗಿರುವವು.

---

31. For there is no (form of) becoming unconnected with action, nor is any name meaningless. Names have no other source than becoming; therefore they are all derived from action.

### 7. Auspicious names. Different kinds of formulas.

32. A name which is formed from luck and from addition simply becomes a prayer: from (words expressing) luck, such as ಸ್ವಸ್ತಿ (welfare).

33. Names of beings, even the well-known ones are formed on the principle, 'how, pray, could this man, with such a contemptible name, live long here?'

34. The formulas which have been seen by the seers of such may be of various sorts both with respect to the (kind of) praise and to the (degree of) majesty (arising) from the prominence of a deity's nature.

ಸ್ತುತಿಃ ಪ್ರಶಂಸಾ ನಿಂದಾ ಚ ಸಂಶಯಃ ಪರಿದೇವನಾ ।
ಸ್ಪೃಹಾಶೀಃ ಕತ್ಥನಾ ಯಾಚ್ಞಾ ಪ್ರಶ್ನಃ ಪ್ರೈಷಃ ಪ್ರವಹ್ಲಿಕಾ ॥ ೩೫ ॥

ನಿಯೋಗಶ್ಚಾನುಯೋಗಶ್ಚ ಶ್ಲಾಘಾ ವಿಲಪಿತಂ ಚ ಯತ್ ।
ಆಚಿಖ್ಯಾಸಾಥ ಸಂಲಾಪಃ ಪವಿತ್ರಾಖ್ಯಾನಮೇವ ಚ ॥ ೩೬ ॥

ಆಹನಸ್ಯಾ ನಮಸ್ಕಾರಃ ಪ್ರತಿರಾಧಸ್ತಥೈವ ಚ ।
ಸಂಕಲ್ಪಶ್ಚ ಪ್ರಲಾಪಶ್ಚ ಪ್ರತಿವಾಕ್ಯಂ ತಥೈವ ಚ ॥ ೩೭ ॥

ಪ್ರತಿಷೇಧೋಪದೇಶೌ ಚ ಪ್ರಮಾದಾಪಹ್ನವೌ ಚ ಹ ।
ಉಪಪ್ರೈಷಶ್ಚ ಯಃ ಪ್ರೋಕ್ತಃ ಸಂಜ್ವರೋ ಯಶ್ಚ ವಿಸ್ಮಯಃ ॥ ೩೮ ॥

**ಅರ್ಥಾನುಸಾರವಾಗಿ ಮಂತ್ರಗಳು ಅನೇಕವಿಧವಾಗಿರುವವು.**

35. ಮಂತ್ರಗಳು ಅರ್ಥಾನುಸಾರವಾಗಿ ಅನೇಕವಿಧವಾಗಿರುವವು ಎಂದರೆ ಮಂತ್ರಗಳಲ್ಲಿ ಈ ಕೆಳಗೆಕಂಡ ಅರ್ಥವು ಸೂಚಿತವಾಗಿರುವುವು—(1) ಸ್ತುತಿ (2) ಪ್ರಶಂಸೆ (3) ನಿಂದೆ (4) ಸಂಶಯ (5) ವಿಷಾದ (6) ಇಚ್ಛೆ (7) ಆಶಿಷ (8) ಜಂಭ (9) ಯಾಚಿಸುವುದು (10) ಪ್ರಶ್ನೆ (11) ಹೇಳಿ ತಿಳಿಸುವುದು (12) ಸಂಶಯಪಡುವುದು.

36. (13) ನಿಯೋಗ ಅಥವಾ ತಿಳಿಸುವುದು (14) ನಿಯಮಿಸುವುದು (15) ಹೊಗಳುವುದು ಅಥವಾ ಸ್ವಪ್ರಶಂಸೆ (16) ವ್ಯಸನ (17) ಮಾತಿನಿಂದ ಹೇಳುವುದು ಅಥವಾ ವಿವರಿಸುವುದು (18) ಪರಸ್ಪರ ಸಂಭಾಷಣೆ (19) ಪವಿತ್ರ ಅಥವಾ ಶುದ್ಧವಾದ ಉಪಾಖ್ಯಾನ.

37. (20) ಆಹನನ (21) ನಮಸ್ಕಾರ (22) ವಿಘ್ನ (23) ಸಂಕಲ್ಪ ಅಥವಾ ನಿಶ್ಚಯ (24) ಹರಟೆ (25) ಪ್ರತ್ಯುತ್ತರ.

38. (26) ಪ್ರತಿಷೇಧ ಅಥವಾ ನಿಷೇಧ (27) ಉಪದೇಶ (28) ಮದ ಅಥವಾ ಮರೆವು (29) ತಿರಸ್ಕಾರ (30) ಹೇಳಿಕಳುಹಿಸಿ ಕರೆಸುವುದು (31) ಪೇಚಾಟ (32) ಆಶ್ಚರ್ಯ.

35. Praise (47), laudation (48), blame (49), donbt (51), plaint (50), desire (53), prayer (50), boasting (51), request (49), question (50), summons enigma (57).

36, commission (51), injuction (52), vaunt (53), lament (53) narration (58), conversation (52), purifying narrative (53).

**8. Different kinds of formulas and modes of expression.**

37. Lascivious verses (55), obeisance (54), obstacle (55), resolve (55), prattle (55), reply (50);

38. prohibition and admonition (52), intoxication and denial (56, 57), and whai is called invitation (56), agitation (56), and wonder (57);

ಆಕ್ರೋಶೋಽಭಿಷ್ಟವಶ್ಚೈವ ಕ್ಷೇಪಃ ಶಾಪಸ್ತಥೈವ ಚ ।
ಉಪಸರ್ಗೋ ನಿಪಾತಶ್ಚ ನಾಮ ಚಾಖ್ಯಾತಮಿತ್ಯಪಿ ॥ ೩೯ ॥
ಭೂತಂ ಭವ್ಯಂ ಭವಿಷ್ಯಂ ಚ ಪುಮಾನ್ ಸ್ತ್ರೀ ಚ ನಪುಂಸಕಂ ।
ಏವಂಪ್ರಕೃತಯೋ ಮಂತ್ರಾಃ ಸರ್ವವೇದೇಷು ಸರ್ವಶಃ ॥ ೪೦ ॥
ವಾಕ್ಯಾರ್ಥದರ್ಶನಾರ್ಥೀಯಾ ಋಚೋಽರ್ಧರ್ಚಾಃ ಪದಾನಿ ಚ ।
ಬ್ರಾಹ್ಮಣೇ ಚಾಥ ಕಲ್ಪೇ ಚ ನಿಗದ್ಯಂತೇಽತ್ರ ಕಾನಿ ಚಿತ್ ॥ ೪೧ ॥
ಶಬ್ದೇನೋಚ್ಚಾರಿತೇನೇಹ ಯೇನ ದ್ರವ್ಯಂ ಪ್ರತೀಯತೇ ।
ತದಕ್ಷರವಿಧೌ ಯುಕ್ತಂ ನಾಮೇತ್ಯಾಹುರ್ಮನೀಷಿಣಃ ॥ ೪೨ ॥

39. (33) ಕೋಪ ಅಥವಾ ಬಯ್ಯುವುದು (34) ಹೊಗಳುವುದು (35) ಇಲ್ಲದ್ದನ್ನು ಹುಟ್ಟಿಸಿ ಹೇಳುವುದು (36) ಶಾಪ ಎಂಬರ್ಥವಿರುವ ಮಂತ್ರಗಳು (37) ಉಪಸರ್ಗ (38) ನಿಪಾತ (ಅವ್ಯಯ) (39) ನಾಮಪದ ಅಥವಾ ಹೆಸರು (40) ಕ್ರಿಯಾಪದ.

40. (41) ಭೂತಕಾಲ (42) ವರ್ತಮಾನಕಾಲ (43) ಭವಿಷ್ಯತ್ಕಾಲ (44) ಪುಲ್ಲಿಂಗ (45) ಸ್ತ್ರೀಲಿಂಗ (46) ನಪುಂಸಕಲಿಂಗ ಇತ್ಯಾದಿ ವಿಭೇದಗಳಿಂದ ವೇದಗಳಲ್ಲಿರುವ ಮಂತ್ರಗಳು ನಾನಾಪ್ರಕಾರವಾಗಿರುವವು.

41. ಮಂತ್ರಾತ್ಮಕವಾದ ಋಕ್ಕುಗಳು, ಅರ್ಧ ಋಕ್ಕುಗಳು, ಪಾದಗಳು (ಅರ್ಧ ಋಕ್ಕಿನಲ್ಲಿ ಅರ್ಧಭಾಗಕ್ಕೆ ಪಾದವೆಂದು ಹೆಸರು) ವಾಕ್ಯದಲ್ಲಿ ಹೇಳಿರುವ ಅರ್ಥವನ್ನು ಒಳಗೊಂಡಿರುವವು. ಈ ವಿಧವಾದ ಋಕ್ಕುಗಳು, ವಾಕ್ಯಗಳು ಮೊದಲಾದವು ವೇದವಿವರಣೆಗಾಗಿ ರಚಿತವಾದ ಬ್ರಾಹ್ಮಣವೆಂಬ ಗ್ರಂಥಗಳಲ್ಲಿಯೂ, ಕರ್ಮಾನುಷ್ಠಾನ ವಿವರಣೆಗಾಗಿ ರಚಿತವಾಗಿರುವ ಕಲ್ಪ (ಸೂತ್ರಗ್ರಂಥಗಳು) ಗ್ರಂಥಗಳಲ್ಲಿಯೂ ಪ್ರಮಾಣ ಮತ್ತು ಉದಾಹರಣೆಯಾಗಿ ಅಲ್ಲಲ್ಲಿ ಹೇಳಲ್ಪಟ್ಟಿರುವವು.

42. ಶಬ್ದಗಳ ಉಚ್ಚಾರದ ಮೂಲಕ ನಾವು ಯಾವ ವಸ್ತುವನ್ನು ನಿರ್ದೇಶಿಸಿ ಹೇಳುವೆವೋ ಆ ವಸ್ತುವನ್ನೇ ಅಕ್ಷರಗಳ ಮೂಲಕ ಬರೆದು ಅಥವಾ ಉಚ್ಚರಿಸಿ ತಿಳಿಸುವಾಗ ಆ ಹೆಸರನ್ನು ನಾಮಪದವೆಂದು ತಿಳಿದವರು ಹೇಳುವರು.

---

39. abuse (48), eulogy, invective (49), eurse (49, 58), preposition, particle, noun, and verb ;

40. past, present, and future ; masculine, feminine, neuter : of such a nature are the formulas in all the Vedas everywhere.

41. Stanzas, hemistichs, and verses are for the purpose of setting forth the object of (their) utterances ; moreover, in Brahmana and ritual (ಕಲ್ಪ) some (of these stanzas &c.) here are quoted.

### 9. Definition of noun and verb.

42. The uttered sound by which we here apprehend a substantive, when connected in the (correct) disposition of syllables, the wise call 'noun' (name).

ಅಷ್ಟೌ ಯತ್ರ ಪ್ರಯುಜ್ಯಂತೇ ನಾನಾರ್ಥೇಷು ವಿಭಕ್ತಯಃ ।
ತನ್ನಾಮ ಕವಯಃ ಪ್ರಾಹುರ್ಭೇದೇ ವಚನಲಿಂಗಯೋಃ ॥ ೪೩ ॥
ಕ್ರಿಯಾಸು ಬಹ್ವೀಷ್ವಭಿಸಂಶ್ರಿತೋ ಯಃ ಪೂರ್ವಾಪರೀಭೂತ ಇಹೈಕ ಏವ ।
ಕ್ರಿಯಾಭಿನಿರ್ವೃತ್ತಿವಶೇನ ಸಿದ್ಧ ಆಖ್ಯಾತಶಬ್ದೇನ ತಮರ್ಥಮಾಹುಃ ॥ ೪೪ ॥
ಕ್ರಿಯಾಭಿನಿರ್ವೃತ್ತಿವಶೋಪಜಾತಃ ಕೃದಂತಶಬ್ದಾಭಿಹಿತೋ ಯದಾ ಸ್ಯಾತ್ ।
ಸಂಖ್ಯಾವಿಭಕ್ತ್ಯವ್ಯಯಲಿಂಗಯುಕ್ತೋ ಭಾವಸ್ತದಾ ದ್ರವ್ಯಮಿವೋಪಲಕ್ಷ್ಯಃ ॥ ೪೫ ॥
ಯಥಾ ನಾನಾವಿಧೈಃ ಶಬ್ದೈರಪಶ್ಯನ್ನೃಷಯಃ ಪುರಾ ।
ವಿವಿಧಾನೀಹ ವಾಕ್ಯಾನಿ ತಾನ್ಯನುಕ್ರಮತಃ ಶೃಣು ॥ ೪೬ ॥

43. ಈ ನಾಮಪದಕ್ಕೆ ಏಕವಚನ, ದ್ವಿವಚನ, ಬಹುವಚನಗಳೆಂಬ ಮೂರು ವಚನಗಳಲ್ಲಿಯೂ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗಗಳೆಂಬ ಮೂರು ಲಿಂಗಗಳಲ್ಲಿಯೂ ಶಬ್ದದ ಅರ್ಥವ್ಯತ್ಯಾಸಗಳನ್ನು ತಿಳಿಸುವುದಕ್ಕಾಗಿ ಎಂಟು ವಿಧವಾದ ಪ್ರತ್ಯಯಗಳನ್ನು ಸೇರಿಸಿ ಎಂಟು ವಿಭಕ್ತಿಗಳಾಗುವಂತೆ ನಾನಾರ್ಥಗಳಲ್ಲಿ ಆ ಶಬ್ದವು ಉಪಯೋಗಿಸಲ್ಪಡುವುದೆಂದು ಪ್ರಾಜ್ಞರು ಹೇಳುವರು.

44. ಅನೇಕವಿಧವಾದ ಕರ್ಮಗಳ ಸಂಬಂಧದಲ್ಲಿ ಆ ಕರ್ಮಗಳಿಂದ ಸೂಚಿತವಾಗುವ ಒಂದು ಭಾವವು (ಅರ್ಥವು) ಕಾಲಾನಂತರ ಆ ಕ್ರಿಯೆಗಳಲ್ಲಿಯೇ ಐಕ್ಯವಾದ ಒಂದು ನಿರ್ದಿಷ್ಟವಾದ ಅರ್ಥವನ್ನು ಸೂಚಿಸುವ ಶಬ್ದಕ್ಕೆ (ಅಥವಾ ಕ್ರಿಯೆಗೆ) ಆಖ್ಯಾತ ಅಥವಾ ಕ್ರಿಯಾಪದವೆಂದು ಹೇಳುವರು.

45. ಒಂದು ಕ್ರಿಯೆಯಿಂದ ಉಂಟಾಗುವ ಭಾವವನ್ನು (ಅರ್ಥವನ್ನು) ಸೂಚಿಸುವ ಶಬ್ದವು ಪ್ರತ್ಯಯಾದಿಗಳಿಂದ ಸಹಿತವಾಗಿಯೂ, ಸಂಖ್ಯಾ, ವಿಭಕ್ತಿ, ಅವ್ಯಯ, ಲಿಂಗ ಮೊದಲಾದ ಅರ್ಥವನ್ನು ಸೂಚಿಸುವ ಪ್ರತ್ಯಯಗಳಿಂದ ಯುಕ್ತವಾಗಿಯೂ ಇರುವಾಗ ಆ ಶಬ್ದವು ಅಥವಾ ಭಾವವು ಒಂದು ನಿರ್ದಿಷ್ಟವಾದ ದ್ರವ್ಯವನ್ನು ಸೂಚಿಸುವುದು.

### ನಾನಾವಿಧಶಬ್ದಯುಕ್ತವಾದ ನಾನಾವಿಧಮಂತ್ರಗಳು

46. ಪೂರ್ವದಲ್ಲಿ ಋಷಿಗಳು ನಾನಾವಿಧಶಬ್ದಗಳನ್ನು ಉಪಯೋಗಿಸಿ ನಾನಾವಿಧ ಅರ್ಥಗಳನ್ನೊಳಗೊಂಡ ವಾಕ್ಯಗಳನ್ನು ಹೇಗೆ ರಚಿಸಿದರೆಂಬ ವಿಷಯವನ್ನು ಕ್ರಮವಾಗಿ ವಿವರಿಸುವೆನು, ಕೇಳು.

---

43. That in which eight inflexions are employed in various senses, sages call a noun, when there is a distinction of number and gender.

44. That notion which, connected with many actions, becoming a later from an earlier, (and yet being) but one, is effected by the development of the action, they call by the term 'verb'

45. When there is a becoming whieh arises from the development of an action, and which is designated by a term with a primary suffix, and which is joined with number, inflexion (or) indeclinable form (ಅವ್ಯಯ , and gender, then it is to be regarded as a substantive (ದ್ರವ್ಯ).

### 10. Examples of different kinds of formulas.

46. Hear now, in succession, how the seers formerly with terms of different kinds saw their various utterances here.

**ರೂಪಾದಿಭಿಃ ಸ್ತುತಿಃ ಪ್ರೋಕ್ತಾ ಆಶೀಃ ಸ್ವರ್ಗಾದಿಭಿಸ್ತಥಾ |**
**ಯಾನಿ ವಾಕ್ಯಾನ್ಯತೋಽನ್ಯಾನಿ ತಾನ್ಯಪಿ ಸ್ಯುರನೇಕಧಾ** || ೪೭ ||

**ಮಂತ್ರೇ ಪ್ರಶಂಸಾ ಭೋಜಸ್ಯ ಚಿತ್ರ ಇತ್ಸೋಭರೇ ಸ್ತುತಿಃ |**
**ಆಕ್ರೋಶಾರ್ಥಸ್ತು ದೃಶ್ಯಂತೇ ಮಾತಾ ಚೇತ್ಯಭಿಮೋಥತಿ** || ೪೮ ||

**ಋಚ್ಯಮೋಘಮನ್ನಂ ನಿಂದಾ ಚ ಶಾಪೋ ಯೋ ಮೇತ್ಯೃಗೇವ ತು |**
**ಯಾಚ್ಞಾ ಯದಿಂದ್ರ ಚಿತ್ರೇತಿ ಕ್ಷೇಪೋಽಭೀದಮಿತಿ ತ್ವೃಚಿ** || ೪೯ ||

47. ಉತ್ತಮವಾದ ರೂಪಗಳ ವರ್ಣನೆಯಿಂದ ಸ್ತುತಿಯೆಂದು ಹೇಳಲ್ಪಡುವ ವಾಕ್ಯವುಂಟಾಗುವುದು. ಸ್ವರ್ಗ ಮೊದಲಾದ ಶಬ್ದಪ್ರಯೋಗದಿಂದ **ಆಶೀಃ** (ಪ್ರಾರ್ಥನೆ ಕೋರಿಕೆ) ಎಂಬ ವಾಕ್ಯಗಳು ನಿರ್ದಿಷ್ಟವಾಗುವವು. ಇವುಗಳಲ್ಲದೆ ಇನ್ನೂ ಅನೇಕ ವಿಧವಾದ ವಾಕ್ಯಗಳ ಪ್ರಯೋಗದಿಂದ ಅನೇಕ ವಿಧವಾದ ಅರ್ಥವನ್ನೊಳಗೊಂಡ ವಾಕ್ಯಗಳು ಸೂಚಿತವಾಗುವವು.

48. ನಾನಾವಿಧ ಅರ್ಥಗಳನ್ನೊಳಗೊಂಡ ಅನೇಕವಿಧ ಮಂತ್ರಗಳಿರುವವೆಂದು ಹಿಂದೆ (35-40 ನೇ ಶ್ಲೋಕಗಳಲ್ಲಿ ಹೇಳಿರುವ 46 ಪ್ರಭೇದಗಳು) ಹೇಳಿದೆಯಷ್ಟೆ. ಅವುಗಳಲ್ಲಿ ಕೆಲವನ್ನು ಉದಾಹರಣೆಪೂರ್ವಕವಾಗಿ ವಿವರಿಸಲಾಗುವುದು—**ವಯಮು ತ್ವಾ** ಎಂಬ ಸೂಕ್ತದ (ಋ ಸಂ. 8-21-18) **ಚಿತ್ರ ಇತ್** ಎಂಬ ಕೊನೆಯ ಋಕ್ಕಿನಲ್ಲಿ ಮಂತ್ರದ್ರಷ್ಟೃವಾದ ಸೋಭರಿಯೆಂಬ ಋಷಿಯು ಚಿತ್ರನೆಂಬ ರಾಜನ ದಾನಪ್ರಶಂಸೆಮಾಡಿರುವನು. ಇದು ಪ್ರಶಂಸೆಯನ್ನು ಸೂಚಿಸುವ ಋಕ್ಕಿಗೆ (35 ನೇ ಶ್ಲೋಕದಲ್ಲಿ 2 ನೇ ವಿಷಯ) ಉದಾಹರಣೆಯಾಗಿರುವುದು. ಆಕ್ರೋಶಾರ್ಥವನ್ನು (39-33) ಸೂಚಿಸುವ ಉದಾಹರಣೆಯು **ಮಾತಾ ಚ** ಎಂಬ ಋಕ್ಕಿನಲ್ಲಿರುವುದು.

49. **ಮೋಘಮನ್ನಂ** (10-117-6) ಎಂಬ ಋಕ್ಕು ನಿಂದೆಗೆ (35-3) ಉದಾಹರಣೆಯು; **ಯೋ ಮಾ** ಎಂಬ ಋಕ್ಕು (7-104-16) ಶಾಪಕ್ಕೆ (39-36) ಉದಾಹರಣೆಯು; **ಯದಿಂದ್ರ ಚಿತ್ರ** ಎಂಬ ಋಕ್ಕು (5-39-1) ಯಾಚನೆಗೆ (35-9) ಉದಾಹರಣೆಯು; **ಅಭೀ ಇದಂ** ಎಂಬ ಋಕ್ಕಿನಲ್ಲಿ (10-48-7) **ಕ್ಷೇಪ** ಎಂದರೆ ಇಲ್ಲದ್ದನ್ನು ಹುಟ್ಟಿಸಿ ಹೇಳಿರುವ ವಿಷಯವು ಅಥವಾ ಉತ್ಪ್ರೇಕ್ಷೆಯು ಉಕ್ತವಾಗಿದೆ.

47. By means of (attributing) beautiful form and so forth, praise (35) is pronounced; similarly prayer by (such terms as) heaven and so forth. The utterences which are different from these may also be of many kinds.

48. In the formula 'Citra indeed' (ಚಿತ್ರ ಇತ್ viii. 21-18) Sobhari's praise of the liberal giver is a laudation (35). (Formulas) expressive of abuse (39) appear: (e.g. the formula) in 'and thy mother' (ಮಾತಾ ಚ) reviles.

49. The stanza 'vain food' (ಮೋಘಮನ್ನಂ x 117. 6) is blame (35), while the stanza 'who me' (ಯೋ ಮಾ vii. 104. 16) is a curse (39). 'What, wondrous Indra' (ಯದಿಂದ್ರ ಚಿತ್ರ v. 39. I) is a request (35), while in the stanza over this world (ಅಭೀದಂ x. 48. 7) there is invective (39).

ಆಶೀಸ್ತು ವಾತ ಆ ವಾತು ದಂಡೇತಿ ಪರಿದೇವನಾ ।
ಪ್ರಶ್ನಶ್ಚ ಪ್ರತಿವಾಕ್ಯಂ ಚ ಪೃಚ್ಛಾಮಿ ತ್ವೇತ್ಯೃಚೌ ಪೃಥಕ್ ॥ ೫೦ ॥
ಸಂಶಯೋಽಧಃ ಸ್ವಿದಾಸೀಚ್ಚ ಕತ್ಥನಾ ಸ್ಯಾದಹಂ ಮನುಃ ।
ಇಮಂ ನೋ ಯಜ್ಞಮಿತ್ಯಸ್ಯಾಂ ನಿಯೋಗಃ ಪಾದ ಉಚ್ಯತೇ ॥ ೫೧ ॥
ಇಹ ಬ್ರವೀತ್ವನುಯೋಗಃ ಸಂಲಾಪ ಋಗುಪೋಪ ಮೇ ।
ಪ್ರತಿಷೇಧೋಪದೇಶೌ ತು ಅಕ್ಷೈರ್ಮೇತ್ಯಕ್ಷಸಂಸ್ತುತೌ ॥ ೫೨ ॥
ಆಖ್ಯಾನಂ ತು ಹಯೇ ಜಾಯೇ ವಿಲಾಪಃ ಸ್ಯಾನ್ನದಸ್ಯ ಮಾ ।

50. **ವಾತ ಆ ವಾತು** ಎಂಬ ಋಕ್ಕು (10-186-1) ಪ್ರಾರ್ಥನೆಗೆ (35-7) ಉದಾಹರಣೆಯು; **ದಂಡ** ಎಂಬ ಋಕ್ಕು (7-33-6) ವಿಷಾದ (35-5) ಕ್ಕೆ ಉದಾಹರಣೆಯು; **ಪೃಚ್ಛಾಮಿ ತ್ವಾ** ಎಂಬ ಋಕ್ಕು (1-164-34) ಪ್ರಶ್ನೆಗೆ (35-10) ಉದಾಹರಣೆಯು; **ವೇದಿಮಾಹುಃ** ಎಂಬ ಋಕ್ಕು (1-164-35) ಉತ್ತರಕ್ಕೆ (37-25) ಉದಾಹರಣೆಯು;

51. **ಅಧಃ ಸ್ವಿದಾಸೀತ್** ಎಂಬ ಋಕ್ಕು (10-129-5) ಸಂಶಯಕ್ಕೆ (35-4) ಉದಾಹರಣೆಯು; **ಅಹಂ ಮನುಃ** ಎಂಬ ಋಕ್ಕು (4-26-1) ಜಂಭಕೊಚ್ಚಿಕೊಳ್ಳುವುದಕ್ಕೆ (35-8) ಉದಾಹರಣೆಯು; **ಇಮಂ ನೋ ಯಜ್ಞಂ** ಎಂಬ ಋಕ್ಕಿನ ಮೊದಲನೆಯ ಪಾದದಲ್ಲಿ (3-21-1) ನಿಯೋಗದ (36-13) ಉದಾಹರಣೆ ಇದೆ.

52. **ಇಹ ಬ್ರವೀತು** ಎಂಬ ಋಕ್ಕಿನಲ್ಲಿ (1-164-7) ಅನುಯೋಗದ (36-14) ಉದಾಹರಣೆ ಇದೆ; **ಉಪೋಪ ಮೇ** ಎಂಬ ಋಕ್ಕಿನಲ್ಲಿ (1-126-7) ಸಂಭಾಷಣೆಯ (36-18) ಉದಾಹರಣೆ ಇದೆ. ಪಗಡೆ ದಾಳಗಳನ್ನು ಪ್ರಶಂಸೆಮಾಡುವ **ಅಕ್ಷೈರ್ಮಾ** ಎಂಬ ಋಕ್ಕಿನಲ್ಲಿ (10-34-13) ಪ್ರತಿಷೇಧ (38-26) ಮತ್ತು ಉಪದೇಶದ (38-27) ಉದಾಹರಣೆಗಳಿವೆ.

53. **ಹಯೇ ಜಾಯೇ** ಎಂಬ ಋಕ್ಕಿನಲ್ಲಿ (10-95-1) ಆಖ್ಯಾನದ (36-17) ಉದಾಹರಣೆಯೂ **ನದಸ್ಯ ಮಾ** ಎಂಬ ಋಕ್ಕಿನಲ್ಲಿ (1-179-4) ವ್ಯಸನ ಅಥವಾ ವಿಲಾಪದ (36-16) ಉದಾಹರಣೆಯೂ ಇದೆ

---

50. 'May wind waft hither' (ವಾತ ಆ ವಾತು x. 186. I) is a prayer (35); 'staves' (ದಂಡಾಃ vii. 33. 6) is plaint (35), while the two stanzas 'I ask thee' (ಪೃಚ್ಛಾಮಿ ತ್ವಾ i. 164. 34, 35) are respectively question (35) and reply (37).

51. 'What was below' (ಅಧಃ ಸ್ವಿದಾಸೀತ್ x. 129. 5) is doubt (35); 'I was Manu' (ಅಹಂ ಮನುಃ iv. 26. I) would be boasting (35); (in the stanza) this our sacrifice (ಇಮಂ ನೋ ಯಜ್ಞಂ iii. 21. I) the (first) verse is called commission (36).

52. 'Here let him say' (ಇಹ ಬ್ರವೀತು i. 164. 7) is injunction (36); the stanza 'clasp me tightly' (ಉಪೋಪ ಮೇ i. 126. 7) is conversation (36); but 'not with dice' (ಅಕ್ಷೈರ್ಮಾ x. 34. 13) in the praise of dice is prohibition and admonition (38).

53. 'Ho, wife, (ಹಯೇ ಜಾಯೇ x. 95. 1) is narrative (36); 'of the reed to to me' (ನದಸ್ಯ ಮಾ i. 179. 4) would be lamentation (36); 'without a husband'

ಅವೀರಾಮಾತ್ಮನಃ ಶ್ಲಾಘಾ ಸುದೇವ ಇತಿ ತು ಸ್ಪೃಹಾ || ೫೩ ||
ನಮಸ್ಕಾರಃ ಶುನಃಶೇಪೇ ನಮಸ್ತೇ ಅಸ್ತು ವಿದ್ಯುತೇ |
ಸಂಕಲ್ಪಯನ್ನಿದಂ ತುಲ್ಯೋಽಹಂ ಸ್ಯಾಮಿತಿ ಯದುಚ್ಯತೇ || ೫೪ ||
ಸಂಕಲ್ಪಸ್ತು ಯದಿಂದ್ರಾಹಂ ಪ್ರಲಾಪಸ್ತ್ವೈತಶಸ್ಯ ಯಃ |
ಮಹಾನಗ್ನ್ಯಾಹನಸ್ಯಾ ಸ್ಯಾತ್ಪ್ರತಿರಾಧೋ ಭುಗಿತ್ಯಪಿ || ೫೫ ||
ಪ್ರಮಾದಸ್ತ್ವೇಷ ಹಂತಾಹಂ ನ ಸ ಸ್ವ ಇತ್ಯಪಹ್ನವಃ |
ಇಂದ್ರಾಕುತ್ಸೇತ್ಯುಪಪ್ರೈಷೋ ನ ವಿಜಾನಾಮಿ ಸಂಜ್ವರಃ || ೫೬ ||

ಮತ್ತು **ಅವೀರಾಂ** ಎಂಬ ಋಕ್ಕಿನಲ್ಲಿ (10-86 9) ಸ್ವಪ್ರಶಂಸೆಯೂ (36-15) **ಸುದೇವಃ** ಎಂಬ ಋಕ್ಕಿನಲ್ಲಿ (10-95-14) ಸ್ಪೃಹಾ ಅಥವಾ ಇಚ್ಛೆಯ (35-6) ಉದಾಹರಣೆಯೂ ಇದೆ.

54. **ನಮಸ್ತೇ ಅಸ್ತು ವಿದ್ಯುತೇ** ಎಂಬಮಂತ್ರದಲ್ಲಿ(ಅ. ವೇ. 1-13-1)ನಮಸ್ಕಾರದ ಉದಾಹರಣೆ ಇದೆ.

55. **ಯದಿಂದ್ರಾಹಂ** ಎಂಬ ಋಕ್ಕಿನಲ್ಲಿ (8-14-1) ಸಂಕಲ್ಪ ಅಥವಾ ಮನೋನಿಶ್ಚಯದ (37-23) ಉದಾಹರಣೆಯೂ (ಅ. ವೇ. 20-27-1) ರಲ್ಲಿ (ಏತಶಋಷಿಯ) ಪ್ರಲಾಪ ಅಥವಾ ಹರಟೆಯ (37-24) ಉದಾಹರಣೆಯೂ **ಮಹಾನಗ್ನಿ** ಎಂಬ ಮಂತ್ರದಲ್ಲಿ (ಅ. ವೇ. 20-136-5) ಆಹನದ (37-20) ಉದಾಹರಣೆಯೂ **ಭುಕ್** ಎಂಬ ಮಂತ್ರಗಳಲ್ಲಿ (ಅ. ವೇ. 20-135-1, 2, 3) ಪ್ರತಿರಾಧ ಅಥವಾ ವಿಘ್ನದ (37-22) ಉದಾಹರಣೆಯೂ ಇದೆ.

56. **ಹಂತಾಹಂ** ಎಂಬ ಋಕ್ಕಿನಲ್ಲಿ (10-119-9) ಪ್ರಮಾದದ (38-28) ಉದಾಹರಣೆಯೂ **ನ ಸ ಸ್ವಃ** ಎಂಬ ಋಕ್ಕಿನಲ್ಲಿ (7-86-6) ಅಪಹ್ನವ ಅಥವಾ ಇಲ್ಲವೆಂಬ ತಿರಸ್ಕಾರದ (38-29) ಉದಾಹರಣೆಯೂ **ಇಂದ್ರಾಕುತ್ಸಾ** ಎಂಬ ಋಕ್ಕಿನಲ್ಲಿ (5-31-9) ಉಪಪ್ರೈಷದ (38-30) ಉದಾಹರಣೆಯೂ **ನ ವಿಜಾನಾಮಿ** ಎಂಬ ಋಕ್ಕಿನಲ್ಲಿ (1-164-37) ಪೇಚಾಟ, ಅಥವಾ ಕಳವಳದ ಉದಾಹರಣೆಯೂ (38-31) ಇದೆ.

---

(ಅವೀರಾಂ x. 86, 9) is vaunt (36) about oneself; while the lower (ಸುದೇವಃ x. 95. 14, expresses) desire (35).

54. Obeisance (37, is expressed) in (the formula of) ಶುನಃಶೇಪ, 'Obeisance to thee, lightning' (ನಮಸ್ತೇ ಅಸ್ತು ವಿದ್ಯುತೇ AV. i. 13. 1); but when one resolves what is exrpessed (with the words) 'I will be equal' (ತುಲ್ಯೋಽಹಂ ಸ್ಯಾಂ).

55. (there is) resolve (37); 'what, Indra, I' (ಯದಿಂದ್ರಾಹಂ viii. 14. 1, AV. xx. 27. 1) is the prattle (37) of Aitasa; (the harlot ಮಹಾನಗ್ನಿ AV. xx. 136. 5) would be lascivious verse (37); 'bang!' (ಭುಕ್ AV. xx. 135. 1.3), again, expresses) an obstacle (37).

### 12. Further examples of different kinds of formulas.

56. 'Well, I, (ಹಂತಾಹಂ x. 119. 9), this (formula) is intoxication (38); 'not our own' (ನ ಸ ಸ್ವಃ vii. 86. 6) is denial (38); 'O Indra-Kutsa' (ಇಂದ್ರಾಕುತ್ಸಾ v. 31. 9) is invitation (38); 'I discern not' (ನ ವಿ ಜಾನಾಮಿ i. 164. 37) is agitation (38).

ಹೋತಾ ಯಕ್ಷದಿತಿ ಪ್ರೈಷಃ ಕೋ ಅದ್ಯೇತಿ ತು ವಿಸ್ಮಯಃ ।
ಜಾಮಯೇಽಪಹ್ನವೋ ನ್ಯೈಷಾ ವಿತತಾದಿಃ ಪ್ರವಲ್ಹಿಕಾ ॥ ೫೭ ॥
ನ ಮೃತ್ಯುರಾಸೀದಿತ್ಯೇತಾಮಾಚಿಖ್ಯಾಸಾಂ ಪ್ರಚಕ್ಷತೇ ।
ಅಭಿಶಾಪೋಽಪ್ರಜಾಃ ಸಂತು ಭದ್ರಮಾಶೀಸ್ತು ಗೋತಮೇ ॥ ೫೮ ॥
ಬಹ್ವಪ್ಯೇವಂಪ್ರಕಾರಂ ತು ಶಕ್ಯಂ ದ್ರಷ್ಟುಮಿತೀದೃಶಂ ।
ವಕ್ತುಂ ಪ್ರಯೋಗತಶ್ಚೈಷಾಮೃಕ್ಸೂಕ್ತಾರ್ಧರ್ಚಸಂಶ್ರಿತಂ ॥ ೫೯ ॥
ಏತೇ ತು ಮಂತ್ರವಾಕ್ಯಾರ್ಥಾ ದೇವತಾಂ ಸೂಕ್ತಭಾಗಿನೀಂ ।
ಸಂಶ್ರಯಂತೇ ಯಥಾನ್ಯಾಯಂ ಸ್ತುತಿಸ್ತ್ವತ್ರಾನುಮಾನಿಕೀ ॥ ೬೦ ॥

57. **ಹೋತಾ ಯಕ್ಷತ್** ಎಂಬ ಋಕ್ಕಿನಲ್ಲಿ (1-139-10) ಪ್ರೈಷದ (35-11) ಉದಾಹರಣೆಯೂ, **ಕೋ ಅದ್ಯ** ಎಂಬ ಋಕ್ಕಿನಲ್ಲಿ (1 84-16 ಅಥವಾ 4-25-1) ವಿಸ್ಮಯ ಅಥವಾ ಆಶ್ಚರ್ಯದ (38-32) ಉದಾಹರಣೆಯೂ, **ನ ಜಾಮಯೇ** ಎಂಬ ಋಕ್ಕಿನಲ್ಲಿ (3-31-2) ಅಪಹ್ನವ ಅಥವಾ ನಿಷೇಧದ ಉದಾಹರಣೆಯೂ (38-26) **ವಿತತಾ** ಎಂದು ಮೊದಲಾಗುವ ಮಂತ್ರಗಳಲ್ಲಿ (ಅ. ವೇ. 20-133-1 ರಿಂದ 6) ಸಂಶಯದ (35-12) ಉದಾಹರಣೆಯೂ ಅಡಗಿದೆ.

58. **ನ ಮೃತ್ಯುರಾಸೀತ್** ಎಂಬ ಋಕ್ಕಿನಲ್ಲಿ (10-129-2) ಒಂದು ತತ್ತ್ವದ ವಿವರಣೆಯೂ(36.17) **ಅಪ್ರಜಾಃ ಸಂತು** ಎಂಬ ಋಕ್ಕಿನಲ್ಲಿ (1-25-5) ಅಭಿಶಾಪದ (39-36) ಉದಾಹರಣೆಯೂ, **ಭದ್ರಂ** ಎಂಬ ಋಕ್ಕಿನಲ್ಲಿ (1-89-8) ಆಶೀರ್ವಾದದ (ಒಳ್ಳೆಯದನ್ನು ಹಾರೈಸುವುದು) (35-7) ಉದಾಹರಣೆಯೂ ಇದೆ.

59. ಇದೇ ಪ್ರಕಾರವಾಗಿ ಇನ್ನೂ ಅನೇಕ ಉದಾಹರಣೆಗಳನ್ನು ಕೊಡಬಹುದು. ಸೂಕ್ತ, ಋಕ್ಕು ಅರ್ಧಋಕ್ಕು ಇತ್ಯಾದಿ ಸ್ಥಳಗಳಲ್ಲಿ ಇಂತಹ ಉದಾಹರಣೆಗಳನ್ನೊಳಗೊಂಡ ಪ್ರಯೋಗಗಳು ಬೇಕಾದಷ್ಟಿರುವುವು.

60. ಈ ಮಂತ್ರಗಳ ವಾಕ್ಯಗಳಲ್ಲಿ ಕಂಡುಬರುವ ಅರ್ಥವು ಸೂಕ್ತದಲ್ಲಿ ಸ್ತುತರಾದ ದೇವತೆಗಳ ವಿಷಯವಾಗಿರುವುದು. ಆದರೆ ಸ್ತುತಿ ಅಥವಾ ಪ್ರಶಂಸೆಯನ್ನು ಪೂರ್ವಾಪರ ಸಂದರ್ಭಗಳ ವಿವೇಚನೆಯಿಂದ ನಿಷ್ಕರ್ಷಿಸಬೇಕಾಗಿರುವುದು.

---

57. 'Let the invoker worship' (ಹೋತಾ ಯಕ್ಷತ್ i. 139 10) is a summons (35); 'who to-day' (ಕೋ ಅದ್ಯ i. 84, 16 or iv. 25. 1) is wonder (38); 'to his brother not' (ನ ಜಾಮಯೇ iii. 31. 2) this (stanza) is denial (38); (there is) an enigma (35) which begins 'outstretched' (ವಿತತೌ AV. xx. 133. 1 6).

58. 'Death was not' (ನ ಮೃತ್ಯುರಾಸೀತ್ x. 129. 2) this (stanza) they pronounce to be narration (36); 'may they be childless (ಅಪ್ರಜಾಃ ಸಂತು i. 25 5) is curse (39), while 'blessed' (ಭದ್ರಂ i. 89. 8) is a prayer (in Gotama.)

59. Much else of this kind can be found, and can in accordance with application (ಪ್ರಯೋಗತಃ) of these (formulas) be stated to be such, when contained in stanzas, (whole) hymns, and hemistiches.

60. These contents (ವಾಕ್ಯಾರ್ಥ) of the formulas are properly connected with the deity belonging to the hymn; but the praise in this case is a matter of inference.

ಭವದ್ಭೂತಸ್ಯ ಭವ್ಯಸ್ಯ ಜಂಗಮಸ್ಥಾವರಸ್ಯ ಚ
ಅಸ್ಯೈಕೇ ಸೂರ್ಯಮೇವೈಕಂ ಪ್ರಭವಂ ಪ್ರಲಯಂ ವಿದುಃ || ೬೧ ||
ಅಸತಶ್ಚ ಸತಶ್ಚೈವ ಯೋನಿರೇಷಾ ಪ್ರಜಾಪತಿಃ
ಯದಕ್ಷರಂ ಚ ವಾಚ್ಯಂ ಚ ಯಥೈತದ್ಬ್ರಹ್ಮ ಶಾಶ್ವತಂ || ೬೨ ||
ಕೃತ್ವೈಷ ಹಿ ತ್ರಿಧಾತ್ಮಾನಮೇಷು ಲೋಕೇಷು ತಿಷ್ಠತಿ ।
ದೇವಾನ್ಯಥಾಯಥಂ ಸರ್ವಾನ್ನಿವೇಶ್ಯ ಸ್ವೇಷು ರಶ್ಮಿಷು || ೬೩ ||
ಏತದ್ಭೂತೇಷು ಲೋಕೇಷು ಅಗ್ನಿಭೂತಂ ಸ್ಥಿತಂ ತ್ರಿಧಾ ।
ಋಷಯೋ ಗೀರ್ಭಿರರ್ಚಂತಿ ವ್ಯಂಜಿತಂ ನಾಮಭಿಸ್ತ್ರಿಭಿಃ || ೬೪ ||

**ಸೂರ್ಯ (ಪ್ರಜಾಪತಿ) ನೇ ಸರ್ವಕ್ಕೂ ಮೂಲವು**

61. ವರ್ತಮಾನ, ಭೂತಕಾಲ, ಭವಿಷ್ಯತ್ಕಾಲಗಳಲ್ಲಿ ಇರುವ ಸಮಸ್ತ ಚರಾಚರ ಪ್ರಪಂಚದ ಸ್ಥಿತಿಗೂ, ಲಯಕ್ಕೂ (ವಿನಾಶಕ್ಕೆ) ಸೂರ್ಯನೊಬ್ಬನೇ ಮುಖ್ಯಕಾರಣನಾಗಿರುವನು.

62. ಅವ್ಯಕ್ತಸ್ವರೂಪ ಮತ್ತು ವ್ಯಕ್ತಸ್ವರೂಪದಿಂದಿರುವ ಅಸತ್, ಸತ್ ಎಂಬ ತತ್ತ್ವಗಳಿಗೆ (ಸ್ಥಿತಿಗೆ) ಪ್ರಜಾಪತಿಯೇ ಮೂಲವು ಎಂದರೆ ಪ್ರಜಾಪತಿಯಿಂದಲೇ ವ್ಯಕ್ತಾವ್ಯಕ್ತಸ್ವರೂಪಗಳ ಆವಿರ್ಭಾವವಾಗುವುದು. ಈ ಪ್ರಜಾಪತಿಯೇ ನಾಶರಹಿತನಾದ, ನಿತ್ಯನಾದ (ಪರ) ಬ್ರಹ್ಮಶಬ್ದವಾಚ್ಯನಾಗಿರುವನು.

63. ಈ ಪ್ರಜಾಪತಿಯು ಅಥವಾ ಸೂರ್ಯನು ತನ್ನ ಸ್ವರೂಪವನ್ನೇ ಮೂರು ಭಾಗವಾಗಿ ವಿಭಾಗಿಸಿಕೊಂಡು ಈ ಲೋಕದಲ್ಲಿ ಸ್ಥಾಪಿತನಾಗಿದ್ದಾನೆ. ಸಮಸ್ತ ದೇವತೆಗಳನ್ನೂ ಸಹ ತನ್ನ ರಶ್ಮಿಗಳಲ್ಲಿ ಎಂದರೆ ತನ್ನ ಸ್ವಸಾಮರ್ಥ್ಯದ ಬಂಧನದಲ್ಲಿ ಇಟ್ಟಿದ್ದಾನೆ.

64. ಈ ಪ್ರಜಾಪತಿಯೇ (ಅಥವಾ ಸೂರ್ಯನೇ) ಈ ಲೋಕಗಳಲ್ಲಿ ಅಗ್ನಿಯ ರೂಪದಲ್ಲಿ ಮೂರು ವಿಧವಾಗಿ ಸ್ಥಾಪಿತನಾಗಿರುವನು. (ಭೂಮಿಯಲ್ಲಿ ಅಗ್ನಿಯಂತೆಯೂ, ಅಂತರಿಕ್ಷದಲ್ಲಿ ವಿದ್ಯುತ್ತಿನಂತೆಯೂ, ಸ್ವರ್ಗದಲ್ಲಿ ಸೂರ್ಯನಂತೆಯೂ ಮೂರು ವಿಧವಾಗಿ ಬೆಳಗುತ್ತಿರುವನು) ಋಷಿಗಳು ಇವನನ್ನೇ ವೇದವಾಕ್ಯಗಳಿಂದಲೂ, ಸಾಮಗಾನಗಳಿಂದಲೂ ಸ್ತುತಿಸಿ ಆರಾಧಿಸುವರು.

**13. The Sun and Prajapathi as the source of all.**

61. Of what is and has been and is to be, and of what moves and is stationery, of all this, some regard the Sun alone to be the origin and the cause of dissolution.

62. Both of what is not and what is, this source is (really) Prajapati, as being (this) eternal Brahma which is at once imperishable (ಅಕ್ಷರಂ) and the object of speech (ವಾಚ್ಯಂ).

63. He (the Sun), having divided himself into three, abides in these worlds, causing all the gods in due order to rest in his rays.

64. This (being) which, in the form of fire, abides in three forms (ತ್ರಿಧಾ) in the worlds that have come into being, the seers adore with songs as manifested under three names.

ತಿಷ್ಠತ್ಯೇವ ಹಿ ಭೂತಾನಾಂ ಜಠರೇ ಜಠರೇ ಜ್ವಲನ್ ।
ತ್ರಿಸ್ಥಾನಂ ಚೈನಮರ್ಚಂತಿ ಹೋತ್ರಾಯಾಂ ವೃಕ್ತಬರ್ಹಿಷಃ ॥ ೬೫ ॥

ಇಹೈಷ ಪವಮಾನೋಽಗ್ನಿರ್ಮಧ್ಯಮೋಽಗ್ನಿರ್ವನಸ್ಪತಿಃ ।
ಅಮುಷ್ಮಿನ್ನೇವ ವಿಪ್ರೈಸ್ತು ಲೋಕೇಽಗ್ನಿಃ ಶುಚಿರುಚ್ಯತೇ ॥ ೬೬ ॥

ಇಹಾಗ್ನಿಭೂತಸ್ತ್ವೃಷಿಭಿರ್ಲೋಕೇ ಸ್ತುತಿಭಿರೀಳಿತಃ ।
ಜಾತವೇದಾ ಸ್ತುತೋ ಮಧ್ಯೇ ಸ್ತುತೋ ವೈಶ್ವಾನರೋ ದಿವಿ ॥ ೬೭ ॥

ರಸಾನ್ರಶ್ಮಿಭಿರಾದಾಯ ವಾಯುನಾಯಂ ಗತಃ ಸಹ ।
ವರ್ಷತ್ಯೇಷ ಚ ಯಲ್ಲೋಕೇ ತೇನೇಂದ್ರ ಇತಿ ಸ ಸ್ಮೃತಃ ॥ ೬೮ ॥

65. ಈ ಅಗ್ನಿಯು (ಅಥವಾ ಪ್ರಜಾಪ್ರತಿಯು) ವೈಶ್ವಾನರಾಗ್ನಿರೂಪದಿಂದ ಸಮಸ್ತ ಪ್ರಾಣಿಗಳ ಜಠರದಲ್ಲಿ (ಉದರದಲ್ಲಿ ಜಾಠರಾಗ್ನಿರೂಪದಿಂದ) ಪ್ರಕಾಶಿಸುತ್ತಿರುವನು. ಈ ಅಗ್ನಿಯನ್ನು ಪೃಥಿವ್ಯಂತರಿಕ್ಷಸ್ವರ್ಗಗಳೆಂಬ ಮೂರು ಸ್ಥಾನಗಳಲ್ಲಿ ಸ್ಥಾಪಿತವಾಗಿರುವಂತೆ ತಿಳಿದು ಯಜ್ಞಾದಿಗಳಲ್ಲಿ ಬರ್ಹಿರಾದಿ ಯಜ್ಞಸಾಮುಗ್ರಿಗಳಿಂದ ಕೂಡಿ ಆರಾಧಿಸುವರು.

### ಅಗ್ನಿಯ ಮೂರುವಿಧ ರೂಪಗಳು

66. ಅಗ್ನಿಗೆ ಮೂರು ರೂಪಗಳಿರುವವು. ಈ ಭೂಮಿಯಲ್ಲಿ ಇರುವ ಅಗ್ನಿಗೆ ಪವಮಾನನೆಂದೂ, ಮಧ್ಯಮ (ಅಂತರಿಕ್ಷ) ಸ್ಥಾನನಾದ ಅಗ್ನಿಗೆ ವನಸ್ಪತಿಯೆಂದೂ ಸ್ವರ್ಗದಲ್ಲಿರುವ ಅಗ್ನಿಗೆ ಶುಚಿಯೆಂದೂ ವಿಪ್ರರು ಹೇಳುವರು.

67. ಈ ಭೂಲೋಕದಲ್ಲಿ ಅಗ್ನಿಯು ಅಗ್ನಿಯೆಂಬ ಹೆಸರಿನಿಂದಲೇ ಋಷಿಗಳಿಂದ ಸ್ತುತಿಸಲ್ಪಡುವನು. ಅಂತರಿಕ್ಷಲೋಕದಲ್ಲಿ ಜಾತವೇದಾಃ ಎಂಬ ಹೆಸರಿನಿಂದಲೂ ಸ್ವರ್ಗದಲ್ಲಿ ವೈಶ್ವಾನರನೆಂಬ ಹೆಸರಿನಿಂದಲೂ ಸ್ತುತಿಸಲ್ಪಡುವನು.

68. ಈ ಅಗ್ನಿಯು ಸೂರ್ಯರೂಪದಲ್ಲಿರುವಾಗ ಜಲಾಶಯಗಳಲ್ಲಿರುವ ರಸಾದಿಗಳನ್ನು (ಉದಕಗಳನ್ನು) ತನ್ನ ರಶ್ಮಿಗಳಿಂದ ಹೀರಿ ವಾಯುವಿನ ಸಹಾಯದಿಂದ ಭೂಮಿಯ ಮೇಲೆ ವೃಷ್ಟಿಯನ್ನು ಸುರಿಸುವುದರಿಂದ (ವೃಷ್ಟಿಯನ್ನು ಸುರಿಸುವುದು ಇಂದ್ರನ ಕರ್ಮವು) ಈ ಅಗ್ನಿಯು ಇಂದ್ರನೆಂಬ ಹೆಸರಿನಿಂದಲೂ ಕರೆಯಲ್ಪಡುವನು.

---

65. For he abides, glowing, in the interior of every being, and, with sacrificial litter spread, they adore him in the invocation as having three abodes.

### 14. The three forms of Agni.

66. Here (on earth) he is by priests called Agni Pavamana, (in the) middle (sphere), Agni Vanaspati, but in that (celestial) world, Agni Suchi.

67. In this world he is extolled by seers with praises as being Agni, in the middle (world) he is praised as Jatavedas, in heaven he is praised as Vaisvanara.

68. Because, taking up fluids with his rays, accompanied by Vayu, he rains upon the world, he is termed ಇಂದ್ರ.

ಅಗ್ನಿರಸ್ಮಿನ್ನಥೇಂದ್ರಸ್ತು ಮಧ್ಯತೋ ವಾಯುರೇವ ಚ |
ಸೂರ್ಯೋ ದಿವೀತಿ ವಿಜ್ಞೇಯಾಸ್ತಿಸ್ರ ಏವೇಹ ದೇವತಾಃ || ೬೯ ||
ಏತಾಸಾಮೇವ ಮಾಹಾತ್ಮ್ಯಾನ್ನಾಮಾನ್ಯತ್ವಂ ವಿಧೀಯತೇ |
ತತ್ತತ್ಸ್ಥಾನವಿಭಾಗೇನ ತತ್ರ ತತ್ರೇಹ ದೃಶ್ಯತೇ || ೭೦ ||
ತಾಸಾಮಿಯಂ ವಿಭೂತಿರ್ಹಿ ನಾಮಾನಿ ಯದನೇಕಶಃ |
ಆಹುಸ್ತಾಸಾಂ ತು ಮಂತ್ರೇಷು ಕವಯೋಽನ್ಯೋನ್ಯಯೋನಿತಾಂ || ೭೧ ||
ಯಥಾಸ್ಥಾನಂ ಪ್ರದಿಷ್ಟಾಸ್ತಾ ನಾಮಾನ್ಯತ್ವೇನ ದೇವತಾಃ |
ತದ್ಭಕ್ತಾಸ್ತತ್ಪ್ರಧಾನಾಶ್ಚ ಕೇಚಿದೇವಂ ವದಂತಿ ತಾಃ || ೭೨ ||

69. ಈ ಭೂಲೋಕದಲ್ಲಿ ಅಗ್ನಿಯು, ಮಧ್ಯ (ಅಂತರಿಕ್ಷ) ಲೋಕದಲ್ಲಿ ಇಂದ್ರ ಅಥವಾ ವಾಯು, ಸ್ವರ್ಗದಲ್ಲಿ ಸೂರ್ಯ ಎಂಬ ಮೂವರೇ ಮುಖ್ಯರಾದ ಮೂರುಮಂದಿ ದೇವತೆಗಳೆನಿಸುವರು.

70. ಈ ಮೂರು ಮಂದಿ ದೇವತೆಗಳ ಮಹಿಮೆಯಿಂದಲೇ (ಅವರ ನಾನಾವಿಧ ಮಹಿಮೆಗಳಿಗನುಸಾರವಾಗಿ) ಇವರಿಗೆ ಅನೇಕ ಹೆಸರುಗಳಿರುವವು. ಈ ದೇವತೆಗಳ ಆಯಾ ಸ್ಥಾನವಿಭಾಗಕ್ಕನುಸಾರವಾಗಿ ಇವರು ವಿಧವಿಧವಾದ ಹೆಸರುಗಳಿಂದ ಪ್ರಸಿದ್ಧಿಯನ್ನು ಪಡೆದಿರುವರು.

### ತ್ರಿಸ್ಥಾನದೇವತೆಗಳು ಮತ್ತು ಆತ್ಮ, ವಾಕ್ಕಿನ ಮೂರು ರೂಪಗಳು

71. ಈ ದೇವತೆಗಳು ತಮ್ಮ ಅತಿಶಯವಾದ ಸಾಮರ್ಥ್ಯ (ವಿಭೂತಿ) ದಿಂದ ಅನೇಕ ಹೆಸರುಗಳನ್ನು ಪಡೆದಿರುವನು. ಆದರೆ ಈ ದೇವತೆಗಳಿಗೆಲ್ಲಾ ಮೂಲಸ್ಥಾನವು ಒಂದೇ ಆಗಿರುವುದೆಂದು ಕವಿಗಳು (ಋಷಿಗಳು) ತಮ್ಮ ಮಂತ್ರಗಳಲ್ಲಿ ಹೇಳಿದಾರೆ.

72. ಈ ದೇವತೆಗಳು ತಮ್ಮ ತಮ್ಮ ಸ್ಥಾನಕ್ಕನುಗುಣವಾಗಿ ಬೇರೆ ಬೇರೆ ಹೆಸರುಗಳಿಂದ ಪ್ರಸಿದ್ಧರಾಗಿರುವರು. ಆ ದೇವತೆಗಳ ಸ್ಥಾನದ ಪ್ರಾಧಾನ್ಯದಿಂದಲೇ ಎಂದರೆ ಸ್ಥಾನಬಲದಿಂದ ದೇವತೆಗಳು ಈ ರೀತಿ ವಿಭಾಗಿಸಲ್ಪಟ್ಟಿರುವರೆಂದು ಕೆಲವರು ಹೇಳುವರು.

---

69. Agni in this (world), Indra and Vayu in the middle, Surya in heaven, are here to be recognised as the three deities.

70. Owing to the majesty of these (deities) different names are applied (to each of them); (the diversity of names) here appears in this and that (sphere) according to the division of their respective spheres.

### 15. The triad and the Atman. Three forms of ವಾಕ್

71. This is a manifestation of their power (ವಿಭೂತಿ) that their names are various. The poets, however, in their formulas say that these (deities) have a mutual origin (ಅನ್ಯೋನ್ಯಯೋನಿತಾಂ).

72. These deities are designated by different names according to their sphere. Some speak of them thus as belonging to (ಭಕ್ತ) that (sphere), and chiefly concerned with it.

ಪೃಥಕ್ಸ್ತುತಸ್ಯಾದ್ಯೇ ತೂಕ್ತಾ ಲೋಕಾಧಿಪತಯಸ್ತ್ರಯಃ |
ತೇಷಾಮಾತ್ಮೈವ ತತ್ಸರ್ವಂ ಯದ್ಯದ್ಭಕ್ತಿಃ ಪ್ರಕೀರ್ತ್ಯತೇ || ೭೩ ||
ತೇಜಸ್ತ್ವೇವಾಯುಧಂ ಪ್ರಾಹುರ್ವಾಹನಂ ಚೈವ ಯಸ್ಯ ಯತ್ |
ಇಮಾಮ್ಮೈಂದ್ರೀಂ ಚ ದಿವ್ಯಾಂ ಚ ವಾಚಮೇವಂ ಪೃಥಕ್ ಸ್ತುತಾಂ || ೭೪ ||
ಬಹುದೇವತಾ ಸ್ತುತಯೋ ದ್ವಿವತ್ಸಂಸ್ತುತಯಶ್ಚ ಯಾಃ |
ಪ್ರಾಧಾನ್ಯಮೇವ ಸರ್ವಾಸು ಪತೀನಾಮೇವ ತಾಸ್ವಪಿ || ೭೫ ||
ಸ್ಥಾನಂ ನಾಮಾನಿ ಭಕ್ತೀಶ್ಚ ದೇವತಾಯಾ ಸ್ತುತೌ ಸ್ತುತೌ |

73. ಲೋಕಾಧಿಪತಿಗಳಾದ ಈ ಮೂರು ದೇವತೆಗಳು ಬೇರೆ ಬೇರೆಯೆಂದು ಹಿಂದೆ ಪ್ರತ್ಯೇಕವಾಗಿ ಹೇಳಿದ್ದರೂ ಅವರ ಆತ್ಮವೆಲ್ಲ ಒಂದೇ ಎಂದು ಭಕ್ತಿಭಾವದಿಂದ ಪ್ರಶಂಸಿಸಲ್ಪಡುತ್ತದೆ.

74. ದೇವತೆಯ ಆಯುಧವೆಂದು ಎಲ್ಲಿ ಹೇಳಲ್ಪಟ್ಟಿರುವುದೋ ಅದು ಆ ದೇವತೆಯ (ಅಥವಾ ಆತ್ಮದ) ತೇಜಸ್ಸಲ್ಲದೆ (ಶಕ್ತಿ) ಬೇರೆಯಲ್ಲ. ವಾಹನ ವಿಷಯದಲ್ಲಿಯೂ ಈ ನಿಯಮವೇ ಅನ್ವಯಿಸುವುದು. ಅದೇ ರೀತಿ ವಾಕ್ಕನ್ನು ಪೃಥಿವೀಸಂಬಂಧವಾದದ್ದೆಂದೂ, ಇಂದ್ರನ ಸಂಬಂಧ ಎಂದರೆ ಮಧ್ಯಮಸ್ಥಾನಸಂಬಂಧವಾದದ್ದೆಂದೂ, ಸ್ವರ್ಗ ಸ್ಥಾನಸಂಬಂಧದ್ದೆಂದೂ ಪ್ರತ್ಯೇಕವಾಗಿ (ಮೂರುಪ್ರಕಾರವಾಗಿಯೂ) ಸ್ತುತಿಸಲ್ಪಡುವುದು.

75. ಅನೇಕ ದೇವತೆಗಳನ್ನು ಪ್ರತ್ಯೇಕವಾಗಿ ಅಥವಾ ಒಟ್ಟಿಗೆ ಸ್ತುತಿಸುವಾಗಲೂ ಇಬ್ಬಿಬ್ಬರನ್ನು ಸಂಸ್ತವಿಕವಾಗಿ ಸ್ತುತಿಸುವಾಗಲೂ ಈ ಎಲ್ಲಾ ದೇವತೆಗಳಲ್ಲಿಯೂ ಮೇಲೆ ಹೇಳಿದ ಮೂರುಮಂದಿ (ಅಗ್ನಿ, ಇಂದ್ರ ಅಥವಾ ವಾಯು, ಸೂರ್ಯ) ದೇವತೆಗಳಿಗೇ ಪ್ರಾಧಾನ್ಯವಿರುವುದು.

**ಸೂಕ್ತದ ಮುಖ್ಯದೇವತೆ**

76. ದೇವತೆಯನ್ನು ಸ್ತುತಿಸುವ ಪ್ರತಿಸೂಕ್ತದಲ್ಲಿಯಾ ಆಯಾ ದೇವತೆಯ ಸ್ಥಾನ (ಪೃಥಿವಿ, ಅಂತರಿಕ್ಷ,

73. The Soul (ಆತ್ಮ) is all that is proclaimed to be an attribute (ಭಕ್ತಿ) of those three chief lords of the world who have been separately mentioned above.

74. They say that it is the energy (of this Soul) which is the weapon and the vehicle of any (god).

Similarly (they say) that speech (ವಾಕ್) is praised separately as this (terrestrial) one, as connected with Indra (in the middle sphere), and as celestial.

75. In all those praises which are addressed to many deities, and in those joint praises which are in the dual, the (those) lords (of the world) are predominent.

### 16. The chiaf deity of a hymn.

76. In bringing out (ಸಂಪಾದಯನ್) the sphere, the names, and the

ಸಂಪಾದಯೆನ್ನುಪೇಕ್ಷೇತ ಯಾಂ ಕಾಂಚಿದಿಹ ಸಂಪದಂ ॥ ೭೬ ॥

ಅಗ್ನಿಭಕ್ತಿಸ್ತುತಾನ್ಸರ್ವಾನಗ್ನಾವೇವ ಸಮಾಪಯೇತ್ ।
ಯದಿಂದ್ರಭಕ್ತಿ ತಚ್ಚೇಂದ್ರೇ ಸೂರ್ಯೇ ಸೂರ್ಯಾನುಗಂ ಚ ಯತ್ ॥ ೭೭ ॥

ನಿರುಪ್ಯತೇ ಹವಿರ್ಯಸ್ಯೈ ಸೂಕ್ತಂ ಚ ಭಜತೇ ಚ ಯಾ ।
ಸೈವ ತತ್ರ ಪ್ರಧಾನಂ ಸ್ಯಾನ್ನ ನಿಪಾತೇನ ಯಾ ಸ್ತುತಾ ॥ ೭೮ ॥

ಇತಿ ತ್ರಯಾಣಾಮೇತೇಷಾಮುಕ್ತಃ ಸಾಮಾಸಿಕೋ ವಿಧಿಃ ।
ಸಮಾಸೇನೈವಮುಕ್ತಸ್ತು ವಿಸ್ತರೇಣ ತ್ವನುಕ್ರಮಃ ॥ ೭೯ ॥

ದ್ಯುಸ್ಥಾನಗಳಲ್ಲೊಂದು) ದೇವತೆಯ ಹೆಸರು, ದೇವತೆಯ ಗುಣಗಳು ಇವುಗಳನ್ನು ಸಾಧ್ಯವಾದ ಮಟ್ಟಿಗೆ ಗಮನದಲ್ಲಿಟ್ಟು ಕೊಂಡೇ ಅವುಗಳನ್ನು ಸ್ಪಷ್ಟವಾಗಿ ವಿವರಿಸಬೇಕು.

77. ಅಗ್ನಿಯ ಗುಣಗಳಿರುವ ದೇವತೆಗಳನ್ನೆಲ್ಲಾ ಅಗ್ನಿಯಲ್ಲಿಯೇ (ಅಥವಾ ಅಗ್ನಿವರ್ಗದ ದೇವತೆಗಳಲ್ಲಿಯೇ) ಸೇರಿಸಬೇಕು. ಹಾಗೆಯೇ ಇಂದ್ರನ ಗುಣಗಳಿರುವ ದೇವತೆಗಳನ್ನು ಇಂದ್ರನೊಡನೆಯೂ, ಸೂರ್ಯನ ಗುಣಗಳಿರುವ ದೇವತೆಗಳನ್ನು ಸೂರ್ಯನೊಡನೆಯೂ ಸೇರಿಸಬೇಕು.

78. ಒಂದು ಸೂಕ್ತದಲ್ಲಿ ಯಾವ ದೇವತೆಯನ್ನುದ್ದೇಶಿಸಿ ಹವಿಸ್ಸನ್ನು ಅರ್ಪಿಸಲಾಗುವುದೋ ಮತ್ತು ಯಾವ ದೇವತೆಯನ್ನು ಮುಖ್ಯವಾಗಿ ಪ್ರಶಂಸಿಸಲಾಗಿರುವುದೋ ಆ ದೇವತೆಯೇ ಆ ಸೂಕ್ತದ ಮುಖ್ಯವಾದ (ಪ್ರಧಾನ) ದೇವತೆಯು ಮತ್ತು ಆ ದೇವತೆಯೇ ಆ ಸೂಕ್ತದಲ್ಲಿ ಸ್ತುತಿಸಲ್ಪಟ್ಟಿರುವುದೆಂದು ತಿಳಿಯಬೇಕು ಕಾರಣಾಂತರದಿಂದ ಆ ಸೂಕ್ತದಲ್ಲಿ ಎಲ್ಲಿಯಾದರೂ ಬೇರೆ ದೇವತೆಯ ಪ್ರಸ್ತಾಪವಿದ್ದಮಾತ್ರಕ್ಕೆ ಅದು ಆ ಸೂಕ್ತದ ದೇವತೆಯಾಗಲಾರದು.

79. ಈ ರೀತಿ ಮೂರು ಮುಖ್ಯದೇವತೆಗಳ ವಿಷಯವನ್ನು ಸಾಮಾನ್ಯವಾಗಿ ಸಮಷ್ಟಿರೂಪದಿಂದ ವಿವರಿಸಲಾಯಿತು. ಈಗ ಆ ದೇವತೆಗಳ ವಿಷಯವನ್ನೇ ಪ್ರತ್ಯೇಕವಾಗಿಯೂ, ವಿಸ್ತಾರವಾಗಿಯೂ ವಿವರಿಸಲಾಗುವುದು.

---

attributes (ಭಕ್ತಿಃ) of a deity in each praise, one should here observe every possible means of doing so (ಸಂಪದಂ).

77. All who are praised with the attributes (ಭಕ್ತಿ) of Agni, one should sum up (ಸಮಾಪಯೇತ್) in Agni, and what has the attributes of Indra, in Indra, and what is attached to Surya, in Surya

78. That deity to whom the oblation is offered, and to wbom the hymn belongs, will there be the chief object (of praise), not (the deity) who is praised incidentally.

79. Thus the rule about these three (gods) has been stated in a general way. But after it has thus been stated in general, the list (of the gods is as follows) in detail.

ಅವಶ್ಯಂ ವೇದಿತವ್ಯೋ ಹಿ ನಾಮ್ನಾಂ ಸರ್ವಸ್ಯ ವಿಸ್ತರಃ ।
ನ ಹಿ ನಾಮಾನ್ಯವಿಜ್ಞಾಯ ಮಂತ್ರಾಃ ಶಕ್ಯಾ ಹಿ ವೇದಿತುಂ ॥ ೮೦ ॥

ಸತ್ತ್ವಾನ್ಯಮೂರ್ತಾನ್ಯಪಿ ಚ ದೇವತಾವನ್ಮಹರ್ಷಯಃ ।
ತುಷ್ಟುವುರ್‌ಋಷಯಃ ಶಕ್ತ್ಯಾ ತಾಸು ತಾಸು ಸ್ತುತಿಷ್ವಿಹ ॥ ೮೧ ॥

ಯೈಸ್ತ್ವಗ್ನಿರಿಂದ್ರಃ ಸೋಮಶ್ಚ ವಾಯುಃ ಸೂರ್ಯೋ ಬೃಹಸ್ಪತಿಃ ।
ಚಂದ್ರೋಽಥ ವಿಷ್ಣುಃ ಪರ್ಜನ್ಯಃ ಪೂಷಾ ಚಾಪ್ಯೃಭವೋಽಶ್ವಿನೌ ॥ ೮೨ ॥

ರೋದಸೀ ಮರುತೋ ದೇವಾಃ ಪೃಥಿವ್ಯಾಪಃ ಪ್ರಜಾಪತಿಃ ।
ದೇವೌ ಚ ಮಿತ್ರಾವರುಣೌ ಪೃಥಕ್ ಸಹ ಚ ತಾವುಭೌ ॥ ೮೩ ॥

ವಿಶ್ವೇ ಚ ದೇವಾಃ ಸವಿತಾ ತ್ವಷ್ಟಾ ವೈ ರೂಪಕೃನ್ಮತಃ ।

80. ಸಮಸ್ತ ದೇವತೆಗಳ ಹೆಸರುಗಳೇ ಮೊದಲಾದ ಸಂಬಂಧಪಟ್ಟ ವಿಷಯಗಳನ್ನು ವಿಸ್ತಾರವಾಗಿ ತಿಳಿದು ಕೊಳ್ಳಬೇಕಾದುದು ಅವಶ್ಯಕವು. ಏಕೆಂದರೆ ದೇವತೆಗಳ ಹೆಸರನ್ನೂ, ಇತರ ವಿಷಯಗಳನ್ನೂ ತಿಳಿಯದೆ ಮಂತ್ರಗಳ ಅರ್ಥಾದಿಗಳನ್ನು ತಿಳಿದುಕೊಳ್ಳುವುದು ಸಾಧ್ಯವಿಲ್ಲ.

**ನಾನಾ ದೇವತೆಗಳ ಹೆಸರುಗಳು**

81. ರೂಪಾದ್ಯಾಕಾರಗಳಿಲ್ಲದ ಭಾವನೆಗಳನ್ನೂ (ಜ್ಞಾನ, ಶ್ರದ್ಧೆ ಇತ್ಯಾದಿ) ರೂಪವಿರುವ ದೇವತೆಗಳಂತೆ ಭಾವಿಸಿ ಋಷಿಗಳು ತಮ್ಮ ಶಕ್ತ್ಯನುಸಾರವಾಗಿ ಅನೇಕ ಮಂತ್ರಗಳಲ್ಲಿ ಸ್ತುತಿಸಿರುವರು.

82. ಋಷಿಗಳು ಈ ಕೆಳಗೆ ಹೇಳಿರುವ ದೇವತೆಗಳನ್ನು ಪ್ರತ್ಯೇಕವಾಗಿ ಸ್ತುತಿಸಿರುವರು—ಅಗ್ನಿ, ಇಂದ್ರ, ಸೋಮ, ವಾಯು, ಸೂರ್ಯ, ಬೃಹಸ್ಪತಿ, ವಿಷ್ಣು, ಪರ್ಜನ್ಯ, ಪೂಷಾ, ಋಭುಗಳು, ಅಶ್ವಿನೀದೇವತೆಗಳು.

83. ದ್ಯಾವಾಪೃಥಿವೀ, ಮರುತ್ತುಗಳು, ದೇವತೆಗಳು (ಸಾಮಾನ್ಯ ಹೆಸರು) ಪೃಥಿವೀ, ಆಪಃ (ಉದಕಗಳು), ಪ್ರಜಾಪತಿ, ಮಿತ್ರಾವರುಣರೆಂಬ ಈರ್ವರು ದೇವತೆಗಳು (ಇವರನ್ನು ಒಟ್ಟಾಗಿಯೂ, ಬೇರೆ ಬೇರೆಯಾಗಿಯೂ),

84. ವಿಶ್ವೇದೇವತೆಗಳು, ಸವಿತೃ, ತ್ವಷ್ಟಾ, (ರೂಪಕ್ಕೆ ಅಧಿಪತಿ), ಅಶ್ವ, ಅನ್ನ, ಋತ್ವಿಕ್ಕುಗಳು, ವಜ್ರಾ

---

80. For the detailed account of the names of each must necessarily be known, since it is impossible to know the formulas without eognisance of the names.

**18. Names of deities enumerated.**

81. Even unembodied beings, the great sages, the seers, have also lauded as deities here, to the best of their ability, in their varions praises.

82. (the seers) by whom Agni, Indra, Soma, Vayu, Surya, Brihaspati, the Moon, Vishnu, Parjanya, Pusan, the Rbhus, the Asvins.

83. the Two Worlds, the divine Maruts, Earth, the Waters, Prajapati, and the divine Mitra, Varuna, seperately, and both together.

84. the All-gods, Savitr, Tvastr (who is) regarded as the fashioner

ಅಶ್ವೋಽನ್ನಮೃತ್ವಿಜೋ ವಜ್ರೋ ಗ್ರಾವಾಣೋ ರಥಸಂಯುತಾಃ || ೮೪ ||
ಸ್ತುತಾಃ ಪೃಥಕ್ಪೃಥಕ್ ಸ್ವೈಃ ಸ್ವೈಃ ಸೂಕ್ತೈರ್ಋಗ್ಭಿಶ್ಚ ನಾಮಭಿಃ |
ಸ್ತುತೌ ಸ್ತುತೌ ಪ್ರವಕ್ಷ್ಯಾಮಿ ತಾನಿ ತೇಷಾಮನುಕ್ರಮಾತ್ || ೮೫ ||
ವ್ಯವಸ್ಯೇನ್ಮಂತ್ರಮಾಗ್ನೇಯಂ ಲಿಂಗೈರಗ್ನೇಶ್ಚ ಲಕ್ಷಿತಂ |
ಹವಿಷ್ಪಂಕ್ತಿಪ್ರಧಾನೈಶ್ಚ ನಾಮಾಹ್ವಾನೈಶ್ಚ ಕೇವಲೈಃ || ೮೬ ||
ಐಂದ್ರಸ್ತು ಮಂತ್ರೋ ವಾಯವ್ಯೈರ್ಲಿಂಗೈರೈಂದ್ರೈಶ್ಚ ಲಕ್ಷ್ಯತೇ |
ನಾಮಧೇಯೈಶ್ಚ ವಜ್ರಸ್ಯ ಬಲಕೃತ್ಯಾ ಬಲೇನ ಚ || ೮೭ ||

ಯುಧ, ಸೋಮರಸವನ್ನು ಜಜ್ಜಿ ರಸವನ್ನು ಹಿಂಡುವುದಕ್ಕಾಗಿ ಉಪಯೋಗಿಸುವ ಕಲ್ಲುಗಳು, (ಇವರೆಲ್ಲರನ್ನು ರಥಯುಕ್ತರಾಗಿರುವಂತೆ).

85. ಇವರೆಲ್ಲರನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಅವರವರ ಸೂಕ್ತಗಳಲ್ಲಿಯೂ, ಋಕ್ಕುಗಳಲ್ಲಿಯೂ ಅವರ ಹೆಸರುಗಳಿಂದ ಸ್ತುತಿಸಲಾಗಿದೆ. ಪ್ರತಿಸೂಕ್ತದಲ್ಲಿಯೂ ಹೇಳಲ್ಪಟ್ಟಿರುವ ಆ ದೇವತೆಗಳ ಹೆಸರು ಮೊದಲಾದ ವಿವರಗಳನ್ನು ಈಗ ಕ್ರಮವಾಗಿ ವಿವರಿಸುತ್ತೇನೆ.

**ಅಗ್ನಿ, ಇಂದ್ರ ಅಥವಾ ವಾಯು, ಸೂರ್ಯ ಎಂಬ ದೇವತೆಗಳ ಪರವಾದ ಸೂಕ್ತಗಳ ವರ್ಣನೆಯು**

86. ಒಂದು ಸೂಕ್ತವು ಅಗ್ನಿ ಪರವಾದುದೆಂದು ತಿಳಿಯಬೇಕಾದರೆ ಆ ಸೂಕ್ತದಲ್ಲಿರುವ ಅಗ್ನಿಯ ಗುಣಗಳನ್ನು ವರ್ಣಿಸುವ ಶಬ್ದಗಳಿಂದಲೂ, ಐದು ವಿಧವಾದ ಹವಿಷ್ಪ್ರದಾನದಿಂದಲೂ, ಅಗ್ನಿಯ ಹೆಸರಿನಿಂದಲೂ, ಇರುವುದನ್ನು ನೋಡಿ ಅದು ಅಗ್ನಿದೇವತಾಕವಾದ ಸೂಕ್ತವೆಂದು ನಿಶ್ಚಯಿಸಬೇಕು.

87. ಇಂದ್ರನ ಪರವಾದ ಸೂಕ್ತದಲ್ಲಿ ಇಂದ್ರ ಅಥವಾ ವಾಯುವಿನ ಮುಖ್ಯಗುಣಗಳ ವರ್ಣನೆಯಿರುವುದು. ಮತ್ತು ವಜ್ರಾಯುಧದ ಹೆಸರು, ಸಾಹಸಕಾರ್ಯಗಳ ವರ್ಣನೆ, ಬಲ ಇವುಗಳಿರುವವು. ಈ ವಿಧವಾದ ವರ್ಣನೆಯಿಂದ ಅಥವಾ ಇಂದ್ರನ ಹೆಸರನ್ನು ಮುಖ್ಯವಾಗಿ ಸ್ತುತಿಸಿರುವುದರಿಂದ ಆ ಸೂಕ್ತವು ಇಂದ್ರಪರವಾದುದೆಂದು ತಿಳಿಯಬೇಕು.

of forms, the Steed, Food, Priests, the bolt, the Pressing-stones, (all these deities) furnished with cars.

**18. Characteristics of hymns of Agni, Indra or Vayu, and Surya.**

85, Are praised separately in their various hymns and stanzas by their names; these (names) of theirs in their respective praises I will declare in order.

86. One should determine a formula to be addressed to Agni when distinguished by the charecteristic marks of Agni, which on the one hand consist chiefly of the five oblations (ಹವಿಷ್ಪಂಕ್ತಿ) and on the other (are) simple invocations by name,

87. A formula addressed to Indra is distinguished by the characteristic marks of Vayu as well as of Indra, and by denominations of the bolt, by mighty activity, and by might.

ಸೌರ್ಯಸ್ತು ಲಿಂಗೈಃ ಸೂರ್ಯಸ್ಯ ಗುಣೈಃ ಸರ್ವೈಶ್ಚ ತೈಜಸೈಃ ।
ನಾಮಧೇಯೈಶ್ಚ ಚಂದ್ರಸ್ಯ ಸೂಕ್ತಂ ಚ ಭಜತೇಽತ್ರ ಯೈಃ ॥ ೮೮ ॥

ಏತಾಸಾಂ ದೇವತಾನಾಂ ತು ನಾಮಧೇಯಾನುಕೀರ್ತನೈಃ ।
ಯಸ್ಯ ಯಸ್ಯೇಹ ಯಾವಂತಿ ನ ವ್ಯವಸ್ಯಂತ್ಯತೋಽನ್ಯಥಾ ॥ ೮೯ ॥

ಅಯಂ ಪ್ರಯೋಗಸ್ತ್ವೇತೇಷಾಂ ಜ್ಯೋತಿಷಾಂ ತ್ರಿಷು ವರ್ತತಾಂ ।
ಲೋಕೇಷು ಮಂತ್ರವಿದ್ವಿದ್ವಾನ್ಪ್ರಯೋಗೇ ನಾವಸೀದತಿ ॥ ೯೦ ॥

ನೀಯತೇಽಯಂ ನೃಭಿರ್ಯಸ್ಮಾನ್ನಯತ್ಯಸ್ಮಾದಸೌ ಚ ತಂ ।
ತೇನೇಮೌ ಚಕ್ರತುಃ ಕರ್ಮ ಸನಾಮಾನೌ ಪೃಥಕ್ ಪೃಥಕ್ ॥ ೯೧ ॥

88. ಸೂರ್ಯಪರವಾದ ಸೂಕ್ತಗಳಲ್ಲಿ ಸೂರ್ಯನ ಗುಣವರ್ಣನೆ ಇರುವುದಲ್ಲದೆ ತೇಜಸ್ಸಿನ ವರ್ಣನೆಯೂ, ಕೆಲವು ಸಂದರ್ಭಗಳಲ್ಲಿ ಚಂದ್ರನ ಹೆಸರು ಮೊದಲಾದ ವಿವರಣೆಗಳೂ ಇರುವವು.

89. ಋಷಿದೃಷ್ಟವಾದ ಈ ಎಲ್ಲಾ ಸೂಕ್ತಗಳನ್ನು ಮೇಲೆ ಹೇಳಿದ ಕ್ರಮದಿಂದಲೇ ಎಂದರೆ ಹೆಸರು ಮೊದಲಾದ ವರ್ಣನೆಗಳಿಂದಲೇ ಯಾವ ದೇವತಾಪರವೆಂಬುದನ್ನು ನಿಶ್ಚಯವಾಗಿ ತಿಳಿಯಲು ಸಾಧ್ಯವಾಗುವುದಿಲ್ಲ. ಇದನ್ನು ಬೇರೆ ವಿಧದಿಂದಲೂ ತಿಳಿಯಬೇಕಾಗಿರುವುದು.

90. ಮೇಲೆ ಹೇಳಿದ ರೀತಿಯಲ್ಲಿ ಪೃಥಿವ್ಯಂತರಿಕ್ಷಗಳೆಂಬ ಮೂರು ಸ್ಥಾನಗಳಲ್ಲಿ ಅಥವಾ ಲೋಕಗಳಲ್ಲಿ ಜ್ಯೋತೀರೂಪದಿಂದಿರುವ (ಅಗ್ನಿ, ಇಂದ್ರ, ಸೂರ್ಯ) ಮೂರು ದೇವತೆಗಳ ಸ್ವರೂಪವನ್ನು ತಿಳಿದು ಅದನ್ನು ಸಂದರ್ಭಾನುಸಾರ ವ್ಯವಹರಿಸುವುದಾದರೆ ಮಂತ್ರಜ್ಞನಾದ ಪುರುಷನು, ಮಂತ್ರಗಳ ಪ್ರಯೋಗ ವಿಷಯದಲ್ಲಿ ತಪ್ಪನ್ನು ಮಾಡುವುದಿಲ್ಲ.

### ಮೂರುವಿಧ ಅಗ್ನಿಗಳು

91. ಅಗ್ನಿಶಬ್ದಾರ್ಥವಿವರಣೆ—ಈ ಅಗ್ನಿಯು ತನ್ನ ಉತ್ಪತ್ತಿಸ್ಥಾನವಾದ ಅರಣಿಯ ಸಮೀಪದಿಂದ ಉತ್ತರ ವೇದಿಯ ಬಳಿಗೆ (ಅಗ್ನ್ಯಾನಯನವಿಧಿಯಂತೆ) ಒಯ್ಯಲ್ಪಡುವುದರಿಂದಲೂ ಅಥವಾ ಈ ಅಗ್ನಿಯು ಯಜ್ಞಮಾಡುವ

88. (A formula) addressed to Surya (is distinguished) by the characteristic marks of Surya, as well as by all qualities relating to brilliance, and by those denominations of the moon by which it (the moon) here belongs to the hymn.

89. All such (hymns) of any (seer) here which (authorities) cannot determine by mention of the denominations of these deities, (must be determined) in some other way than this.

90. Let this application of these (three) lights take place in the three worlds (respectively) a wise man knowing the formulas does not fail in the application.

### 19. The three Agnis.

91. Because this (terristerial Agni) is led by men, and that (celestial

ಯದ್ವಿದ್ಯತೇ ಹಿ ಜಾತಃ ಸಞ್ಜಾತೈರ್ಯದ್ವಾತ್ರ ವಿದ್ಯತೇ ।
ತೇನೇಮೌ ತುಲ್ಯನಾಮಾನೌ ಉಭೌ ಲೋಕೌ ಸಮಾಪ್ನುತಃ ॥ ೯೨ ॥
ವಿಸೃಜನ್ನಯಮೇತೇಷಾಂ ಭ್ರಾಜತೇ ವ್ಯೋಮ್ನಿ ಮಧ್ಯಮಃ ।
ನಿಪಾತಮಾತ್ರೇ ಕಥ್ಯಂತೇ ತಥಾಗ್ನೇಯಾನಿ ಕಾನಿಚಿತ್ ॥ ೯೩ ॥
ಅರ್ಚಿಭಿಃ ಕೇಶ್ಯಯಂ ತ್ವಗ್ನಿರ್ವಿದ್ಯುದ್ಭಿಶ್ಚೈವ ಮಧ್ಯಮಃ ।
ಅಸೌ ತು ರಶ್ಮಿಭಿಃ ಕೇಶೀ ತೇನೈನಾನಾಹ ಕೇಶಿನಃ ॥ ೯೪ ॥

ಯಜಮಾನನನ್ನು (ಯಜ್ಞಫಲನಿಮಿತ್ತವಾಗಿ) ಸ್ವರ್ಗಕ್ಕೆ ಒಯ್ಯುವುದರಿಂದಲೂ ಪೃಥಿವೀಸ್ಥನಾದ ಅಗ್ನಿಗೆ ಅಗ್ನಿಯೆಂಬ ಹೆಸರು ಬಂದಿದೆ. ಅಗ್ನಿಗೆ ಈ ಎರಡು ಪ್ರತ್ಯೇಕವಾದ ಕರ್ಮಗಳಿದ್ದರೂ ಹೆಸರು ಮಾತ್ರ (ಅಗ್ನಿ ಎಂದು) ಒಂದೇ ಆಗಿರುವುದು.

92. ಅಗ್ನಿಯು ಅರಣಿಯಲ್ಲಿ ಉತ್ಪನ್ನನಾದ ಕೂಡಲೆ ಎಲ್ಲರಿಂದಲೂ ತಿಳಿಯಲ್ಪಡುವನು ಅಥವಾ ಈ ಲೋಕದ ಪ್ರಾಣಿಗಳಿಂದ ಅಗ್ನಿಯು ಅರಿಯಲ್ಪಡುವನು. ಆದ್ದರಿಂದ ಈ ಎರಡು ಕರ್ಮಗಳೂ ಅಗ್ನಿಯ (ಜಾತವೇದಸ್ಸಿನ) ಸ್ವರೂಪವನ್ನು ವಿಶದಪಡಿಸುವವು. ಇಲ್ಲಿ ಎರಡು ಕರ್ಮಗಳಿದ್ದರೂ ಹೆಸರು ಮಾತ್ರ ಒಂದೇ ಆಗಿರುವುದು ಎಂದರೆ ಜಾತವೇದಾಃ ಎಂಬ ಒಂದೇ ಹೆಸರಿಗೆ ಎರಡುವಿಧ ಅರ್ಥವನ್ನು ಹೇಳಬಹುದು.

93. ಮಧ್ಯಮಸ್ಥಾನದಲ್ಲಿರುವ (ಅಂತರಿಕ್ಷದಲ್ಲಿರುವ) ಅಗ್ನಿಯು (ವಿದ್ಯುದಗ್ನಿಯು) ಅಂತರಿಕ್ಷದಲ್ಲಿ ಪ್ರಕಾಶಿಸುತ್ತಾ ವೃಷ್ಟಿವರ್ಷಣಕ್ಕೆ ಪ್ರೇರಕನಾಗಿರುವನು. ಅಗ್ನಿಯ ಕೆಲವು ಹೆಸರುಗಳು ಕೆಲವು ಸಂದರ್ಭಗಳಲ್ಲಿ ಅನ್ವರ್ಥನಾಮವಾಗಿವೆ ಎಂದರೆ ಹೆಸರಿಗೆ ತಕ್ಕಂತೆ ಕಾರ್ಯವಿರುವುದು.

94. ಅಗ್ನಿಗೆ ಜ್ವಾಲೆ ಅಥವಾ ರಶ್ಮಿಗಳೇ ಕೇಶಗಳಂತಿರುವವು. ಪೃಥಿವೀಸ್ಥನಾದ ಅಗ್ನಿಗೆ ಜ್ವಾಲೆಗಳೇ ಕೇಶಗಳು; ಅಂತರಿಕ್ಷಸ್ಥನಾದ ವಿದ್ಯುದಗ್ನಿಗೆ ವಿದ್ಯುತ್ತೇ ಕೇಶವು; ಸ್ವರ್ಗದಲ್ಲಿ ಬೆಳಗುತ್ತಿರುವ ಸೂರ್ಯಾತ್ಮಕನಾದ ಅಗ್ನಿಗೆ ರಶ್ಮಿಗಳೇ ಕೇಶಗಳು. ಆದ್ದರಿಂದ ಕವಿಗಳಾದ ಋಷಿಗಳು ಅಗ್ನಿಯನ್ನು ಕೇಶೀ—ಕೇಶಯುಕ್ತನು ಎಂದು ವರ್ಣಿಸಿರುವರು.

---

Agni) leads him from this (world), therefore these two (Agnis), while having the same name, have performrd their work each separately.

92. Because he is known (ವಿದ್ಯತೇ) when born (ಜಾತಃ) or because he is known (ವಿದ್ಯತೇ) here by creatures (ಜಾತೈಃ) therefore these two, while having an identical name (i.e. ಜಾತವೇದಾಃ) pervade (ಸಮಾಪ್ನುತಃ) both worlds (separately).

93. He (Agni), as the middlemost of these (three), shines in the air discharging (rain); thus some (names) of Agni are mentioned only incidentally.

94. This (terristrial) Agni is hairy (ಕೇಶೀ) with flames, and the middle one with lightnings, while that (celestial) one is hairy with rays: therefore (the poet) calls them hairy ones (ಕೇಶಿನಃ).

ಏತೇಷಾಂ ತು ಪೃಥಕ್ತ್ವೇನ ತ್ರಯಾಣಾಂ ಕೇಶಿನಾಮಿಹ ।
ಸಲಂಕ್ಷ್ಯಂತೇ ಪ್ರಕ್ರಿಯಾಸು ತ್ರಯಃ ಕೇಶಿನ ಇತ್ಯೃಚಿ ॥ ೯೫ ॥

ನ ಚೈವೇಷಾಂ ಪ್ರಸೂತಿರ್ವಾ ವಿಭೂತಿಸ್ಥಾನಜನ್ಮ ವಾ ।
ನಿರ್ವಕ್ತುಂ ಶಕ್ಯಮೇತೈರ್ಹಿ ಕೃತ್ಸ್ನಂ ವ್ಯಾಪ್ತಮಿದಂ ಜಗತ್ ॥ ೯೬ ॥

ವೈಶ್ವಾನರಂ ಶ್ರಿತೋ ಹ್ಯಗ್ನಿರಗ್ನಿಂ ವೈಶ್ವಾನರಃ ಶ್ರಿತಃ ।
ಅನಯೋರ್ಜಾತವೇದಾಸ್ತು ತಥೈತೇ ಜಾತವೇದಸೀ ॥ ೯೭ ॥

ಸಾಲೋಕ್ಯಾಚ್ಚೈಕಜಾತತ್ವಾದ್ವ್ಯಾಪ್ತಿಮತ್ವಾತ್ತು ತೇಜಸಃ ।

95. ಈ ಮೂರು ವಿಧವಾದ ಕೇಶಿಗಳ ಎಂದರೆ ಕೇಶಯುಕ್ತರಾದ ಅಗ್ನಿಗಳ ವಿವರಣೆಯು ಬೇರೆ ಬೇರೆ ಯಾಗಿರುವುದರಿಂದ, **ತ್ರಯಃ ಕೇಶಿನಃ** (ಋ. ಸಂ. ೧-೧೬೪-೪೪) ಎಂಬ ಋಕ್ಕಿನಲ್ಲಿ ಮೂರುವಿಧ ಅಗ್ನಿಗಳನ್ನು ಅವರವರ ಕ್ರಿಯಾನುಗುಣವಾಗಿ ಲಕ್ಷಿಸಬಹುದು.

**ಅಗ್ನಿಃ, ಜಾತವೇದಾಃ, ವೈಶ್ವಾನರಃ ಎಂಬ ಹೆಸರುಗಳು ಒಂದೇ ಅಗ್ನಿಯನ್ನು ಸೂಚಿಸುವುದಾದರೂ ಆ ಅಗ್ನಿಗಳ ಗುಣವರ್ಣನೆಯಲ್ಲಿ ಭೇದವು ಕಂಡುಬರುವುದು.**

96. ಈ ಮೂರುವಿಧ ಅಗ್ನಿಗಳ ಉತ್ಪತ್ತಿ (ಪ್ರಸೂತಿ), ಸಾಮರ್ಥ್ಯ (ವಿಭೂತಿ) ಸ್ಥಾನ, ಜನ್ಮ ಇವುಗಳನ್ನು ವಿಶದವಾಗಿ ವಿವರಿಸುವುದು ಕಷ್ಟವೇ ಸರಿ. ಏಕೆಂದರೆ, ಸಮಸ್ತ ಜಗತ್ತೂ ಈ ಮೂರು ಅಗ್ನಿಗಳಿಂದ ವ್ಯಾಪ್ತ ವಾಗಿರುವುದು.

97. ಅಗ್ನಿಯು ವೈಶ್ವಾನರನೆಂಬ ಅಗ್ನಿಯಲ್ಲಿ ಸೇರಿರುವುದು, ವೈಶ್ವಾನರನು ಅಗ್ನಿಯಲ್ಲಿ ಸೇರಿರುವುದು ಎಂದರೆ ಪರಸ್ಪರ ಒಂದನ್ನೊಂದು ಆಶ್ರಯಿಸಿರುವುದು. ಈ ಎರಡರಲ್ಲಿ ಜಾತವೇದಾಗ್ನಿಯು ಇರುವುದು ಎಂದರೆ ಅಗ್ನಿ ಮತ್ತು ವೈಶ್ವನರಾಗ್ನಿಯು ಜಾತವೇದಾಗ್ನಿಯ ಎರಡು ರೂಪಾಂತರಗಳು.

98. ದೇವತೆಗಳ ದೇವತ್ವವು ಎಂದರೆ ಸ್ವರೂಪವು ಒಂದೇ ಲೋಕಕ್ಕೆ ಸೇರಿರುವುದರಿಂದಲೂ, ಒಂದೇವಿಧ

---

95. Now owing to the seperate nature of these three hairy ones here they are distinguished in their specific characters (ಪ್ರಕ್ರಿಯಾಸು) in the stanza, Three hairy ones' (ತ್ರಯಃ ಕೇಶಿನಃ 1-164.44).

**20. Agni, Jatavedas, Vaisvanara; essentially identical, but distinguished.**

96. It is impossible to explain their production (ಪ್ರಸೂತಿ) their power, sphere, and birth ; for the whole of this world is pervaded by them.

97. Agni is contained in (ಶ್ರಿತಃ) Vaisvanara, Vaiswanara is contained in Agni ; Jatavedas is in these two ; thus these two (lights) are two (forms of) Jatavedas.

98. The divine nature of each god here (is derived) from their belonging to the same world, from their having one and the same birth,

ತಸ್ಯ ತಸ್ಯೇಹ ದೇವತ್ವಂ ದೃಶ್ಯಂತೇ ಚ ಪೃಥಕ್ ಸ್ತುತಾಃ ॥ ೯೮ ॥
ಯತ್ತ್ವಾಗ್ನೇಯಮಿತಿ ಬ್ರೂಮಃ ಸೂಕ್ತಭಾಕ್ತತ್ರ ಪಾರ್ಥಿವಃ ।
ಜಾತವೇದಸ್ಯಮಿತ್ಯುಕ್ತೇ ಸೂಕ್ತೇಽಸ್ಮಿನ್ಮಧ್ಯಮಃ ಸ್ಮೃತಃ ॥ ೯೯ ॥
ವೈಶ್ವಾನರೀಯಮಿತಿ ತು ಯತ್ರ ಬ್ರೂಮೋಽಥ ವಾ ಕ್ವಚಿತ್ ।
ಸೂರ್ಯಃ ಸೂಕ್ತಸ್ಯ ಭಾಕ್ ತತ್ರ ಜ್ಞೇಯೋ ವೈಶ್ವಾನರಸ್ತುತೌ ॥ ೧೦೦ ॥
ಸೂರ್ಯಪ್ರಸೂತಾವಗ್ನೀ ತು ದೃಷ್ಟೌ ಪಾರ್ಥಿವಮಧ್ಯಮೌ ।
ಏತೇಷಾಮೇವ ಲೋಕಾನಾಂ ತ್ರಯಾಣಾಮಧ್ವರೇಽಧ್ವರೇ ॥ ೧೦೧ ॥

ವಾದ ಉತ್ಪತ್ತಿಯಿರುವುದರಿಂದಲೂ ತೇಜಸ್ಸಿನಿಂದ ವ್ಯಾಪ್ತವಾಗಿರುವುದರಿಂದಲೂ ಆಯಾ ಸ್ಥಾನದ ದೇವತೆಗಳಿಗೆ ಒಂದೇ ಮೂಲಸ್ಥಾನವಿದ್ದರೂ ಅವರ ಕರ್ಮಾನುಗುಣವಾಗಿ ಅವರ ಸ್ವರೂಪವು ಬೇರೆಬೇರೆಯಾಗಿರುವಂತೆ ಸ್ತುತಿಸಲ್ಪಡುವರು.

99. ನಾವು ಒಂದು ಸೂಕ್ತವನ್ನು ಆಗ್ನೇಯಸೂಕ್ತವೆಂದು ಹೇಳುವಾಗ ಆ ಸೂಕ್ತದಲ್ಲಿ ಪಾರ್ಥಿವಾಗ್ನಿಯು ಸ್ತುತನಾಗಿರುವನೆಂದು ತಿಳಿಯಬೇಕು. ಅದರಂತೆ ಒಂದು ಸೂಕ್ತವನ್ನು ಜಾತವೇದಸ್ಯವೆಂದು (ಜಾತವೇದಾಗ್ನಿಪರವಾದ ಸೂಕ್ತವೆಂದು) ಹೇಳುವಾಗ ಆ ಸೂಕ್ತದಲ್ಲಿ ಮಧ್ಯಮಸ್ಥಾನಾಗ್ನಿಯು (ವಿದ್ಯುದಗ್ನಿಯು) ಸ್ತುತನಾಗಿರುವನೆಂದು ತಿಳಿಯಬೇಕು.

100. ಮತ್ತು ಅದರಂತೆ ಒಂದು ಸೂಕ್ತವನ್ನು ವೈಶ್ವಾನರೀಯಸೂಕ್ತವೆಂದು ನಾವು ಹೇಳುವಾಗ ಆ ಸೂಕ್ತದಲ್ಲಿ ವೈಶ್ವಾನರನು ಸ್ತುತನಾಗಿದ್ದರೂ ಆ ಸೂಕ್ತಕ್ಕೆ ಸೂರ್ಯನೇ ಮುಖ್ಯದೇವತೆಯೆಂದೂ ವೈಶ್ವಾನರಸ್ತುತಿಯೇ ಸೂರ್ಯನ ಸ್ತುತಿಯೆಂದೂ ತಿಳಿಯಬೇಕು.

## ಪ್ರತ್ಯವರೋಹಕ್ರಮದಿಂದ ತ್ರಿಸ್ಥಾನದೇವತೆಗಳ ವರ್ಣನೆ

101-102. ಪಾರ್ಥಿವಾಗ್ನಿಯೂ ಮಧ್ಯಮಾಗ್ನಿಯೂ ಸೂರ್ಯನಿಂದ ಉತ್ಪತ್ತಿಯಾದಂತೆ ಕಂಡುಬರುವುದು. ಏಕೆಂದರೆ ಪ್ರತಿ ಯಜ್ಞದಲ್ಲಿಯೂ ಋತ್ವಿಕ್ಕುಗಳು ಪಠಿಸುವ ಆಗ್ನಿಮಾರುತಶಸ್ತ್ರಮಂತ್ರಪಠನದಲ್ಲಿ ರೋಹ ಪ್ರತ್ಯವರೋಹ

and from brilliance being inherent in them; at the same time (ಚ) they appear praised separately.

99. When we speak of (a hymn) as addressed to Agni, the terrestrial one in that case owns the hymn (ಸೂಕ್ತಭಾಕ್), When a hymn is stated to be addressed to Jatavedas, the middle (Agni) has been taught (as the object of praise) in it.

100. Or when again we speak anywhere of (a hymn) as addressed to Vaisvanara, Surya is in that case to be recognised in the praise of Vaisvanara to be the owner (ಭಾಕ್) of the hymn.

## 21. The deities of the three worlds in the descending series.

101-102. Now terrestrial and the middle (Agnis) are seen to be produced (ಪ್ರಸೂತ) from the Sun; at each sacrifice (the priest) wishing to

ರೋಹಾತ್ಪ್ರತ್ಯವರೋಹೇಣ ಚಿಕೀರ್ಷನ್ನಾಗ್ನಿಮಾರುತಂ ।
ಶಸ್ತ್ರಂ ವೈಶ್ವಾನರೀಯೇಣ ಸೂಕ್ತೇನ ಪ್ರತಿಪದ್ಯತೇ ॥ ೧೦೨ ॥

ತತಸ್ತು ಮಧ್ಯಮಸ್ಥಾನಾ ದೇವತಾಸ್ತ್ವನುಶಂಸತಿ ।
ರುದ್ರಂ ಚ ಮರುತಶ್ಚೈವ ಸ್ತೋತ್ರಿಯೇಽಗ್ನಿಮಿಮಂ ಪುನಃ ॥ ೧೦೩ ॥

ಯಥೈತದುಕ್ತಮೇತೇಷಾಂ ವಿಭೂತಿಸ್ಥಾನಸಂಭವಂ ।
ತಥಾ ಚ ದೇವದೇವಸ್ಯ ತತ್ರ ತತ್ರೇಹ ದೃಶ್ಯತೇ ॥ ೧೦೪ ॥

ಯದ್ಯತ್ರ ಪೃಥಿವೀಸ್ಥಾನಂ ಪಾರ್ಥಿವಂ ಚಾಗ್ನಿಮಾಶ್ರಿತಂ ।
ತತ್ಸರ್ವಮಾನುಪೂರ್ವ್ಯೇಣ ಕಥ್ಯಮಾನಂ ನಿಬೋಧತ ॥ ೧೦೫ ॥

ಕ್ರಮದಿಂದ (ಮೇಲಿನಿಂದ ಕೆಳಕ್ಕೆ ಎಂದರೆ ಸ್ವರ್ಗದಿಂದ ಅಂತರಿಕ್ಷ, ಅಂತರಿಕ್ಷದಿಂದ ಭೂಮಿ) ಮೊದಲು ವೈಶ್ವಾನರೀಯ ಸೂಕ್ತವು ಪಠಿಸಲ್ಪಡುವುದು. (ಎಂದರೆ ಮೊದಲು ಸೂರ್ಯನನ್ನೂ ಅನಂತರ ವಿದ್ಯುದಗ್ನಿ ಅಥವಾ ಜಾತವೇದಸ್ಸನ್ನೂ ಅನಂತರ ಪಾರ್ಥಿವಾಗ್ನಿಯನ್ನೂ ಸ್ತುತಿಸುವುದರಿಂದ ಸೂರ್ಯ ಅಥವಾ ವೈಶ್ವಾನರಾಗ್ನಿಯೇ ಇತರ ಎರಡು ಅಗ್ನಿಗಳಿಗೆ ಉತ್ಪತ್ತಿಸ್ಥಾನವೆಂದು ಹೇಳಿದಂತಾಯಿತು ಎಂದಭಿಪ್ರಾಯವು).

103. ಅನಂತರ ಮಧ್ಯಮ (ಅಂತರಿಕ್ಷ) ಸ್ಥಾನದ ದೇವತೆಗಳನ್ನು ಸ್ತುತಿಸಲಾಗುವುದು. ರುದ್ರ, ಮರುತ್ತುಗಳು ಮತ್ತು (ವಿದ್ಯುತ್) ಅಗ್ನಿ ಇವರುಗಳು ಮಧ್ಯಮಸ್ಥಾನದೇವತೆಗಳು.

104. ಈ ದೇವತೆಗಳ ಮಾಹಾತ್ಮ್ಯ, ಸ್ಥಾನ ಮೊದಲಾದವುಗಳನ್ನು ಯಾವರೀತಿ ವರ್ಣಿಸಲಾಗಿದೆಯೋ ಅದರಂತೆ ದೇವದೇವನ (ಪ್ರಜಾಪತಿಯ) ಮಾಹಾತ್ಮ್ಯ, ಸ್ಥಾನ ಮೊದಲಾದವುಗಳನ್ನು ಅಲ್ಲಲ್ಲಿ ವರ್ಣಿಸಿರುವುದು ಕಂಡುಬರುವುದು.

105. ಪೃಥಿವೀಸ್ಥಾನದೇವತೆಯಾದ ಪಾರ್ಥಿವಾಗ್ನಿಗೆ ಸಂಬಂಧಪಟ್ಟ ಸ್ಥಾನಾದಿಗಳನ್ನು ಎಲ್ಲೆಲ್ಲಿ ಯಾವ ರೀತಿ ಹೇಳಿದೆಯೋ ಅವೆಲ್ಲವನ್ನೂ ಈಗ ಒಂದು ಕ್ರಮದಲ್ಲಿ ವಿವರಿಸುವುದನ್ನು ಕೇಳಿರಿ.

---

perform the litany to Agni and the Maruts according to the descending series (which is) the reverse of the ascending series of these three worlds, begins with a hymn to Vaisvanara.

103. Then he lauds next the deities of the middle sphere, Rudra and the Maruts, (and) again this (terrestrial) Agni in the Stotria.

104. Just as this has been said of these (three) as arising from (their different) powers and spheres, so it also appears here in its respective place (as applicable) to the god of gods (ಪ್ರಜಾಪತಿ).

105. Whatever appears anywhere as belonging to the sphere of earth, and as contained in the terrestrial Agni, attend to all that (now) being told in due order.

ಜಾತವೇದಾಃ ಶ್ರಿತೋ ಹ್ಯಗ್ನಿಮಗ್ನಿಂ ವೈಶ್ವಾನರಃ ಶ್ರಿತಃ ।
ದ್ರವಿಣೋದಾಸ್ತಥೇಧ್ಮಶ್ಚ ಶ್ರಿತಶ್ಚಾಗ್ನಿಂ ತನೂನಪಾತ್ ॥ ೧೦೬ ॥

ನರಾಶಂಸಃ ಶ್ರಿತಶ್ಚೈನಮೇನಮೇವಾಶ್ರಿತಸ್ತ್ವಿಳಃ ।
ಬರ್ಹಿರ್ದ್ವಾರಶ್ಚ ದೇವ್ಯೋಽಗ್ನಿಮೇನಮೇವ ತು ಸಂಶ್ರಿತಾಃ ॥ ೧೦೭ ॥

ನಕ್ತೋಷಾಸಾ ಚ ದೇವ್ಯೌ ಚ ಹೋತಾರಾವೇತದಾಶ್ರಯೌ ।
ದೇವ್ಯಸ್ತಿಸ್ರಃ ಶ್ರಿತಾಶ್ಚೈನಂ ತ್ವಷ್ಟಾ ಚೈವೈತದಾಶ್ರಯಃ ॥ ೧೦೮ ॥

ಶ್ರಿತೋ ವನಸ್ಪತಿಶ್ಚೈನಂ ಸ್ವಾಹಾಕೃತಯ ಏವ ಚ ।

### ಪಾರ್ಥಿವಾಗ್ನಿಯನ್ನು ಪ್ರತಿಬಿಂಬಿಸುವ ದೇವತೆಗಳು

106. ಜಾತವೇದಾಃ ಎಂಬ ಹೆಸರಿನ ಅಗ್ನಿಯು ಅಗ್ನಿಯಲ್ಲಿಯೇ ಸೇರಿರುವುದು. ಹಾಗೆಯೇ ವೈಶ್ವಾನರ ನಾಮಕ ಅಗ್ನಿಯೂ, ದ್ರವಿಣೋದಾಃ (ಧನದಾತೃವಾದ) ಎಂಬ ಹೆಸರಿನ ಅಗ್ನಿಯೂ, ಇಧ್ಮ (ಸಮಿತ್ತು) ವೂ, ತನೂನಪಾತ್ ಎಂಬ ಹೆಸರಿನ ಅಗ್ನಿಯೂ ಇವೆಲ್ಲವೂ ಅಗ್ನಿಯಲ್ಲಿಯೇ ಸೇರಿರುವುದು ಎಂದರೆ ಇವೆಲ್ಲವೂ ಅಗ್ನಿಯ ರೂಪಾಂತರಗಳೇ ಆಗಿವೆ.

107. ಅದರಂತೆಯೇ ನರಾಶಂಸ ಎಂಬ ದೇವತೆಯೂ; ಇಳಃ, ಬರ್ಹಿಃ, ದ್ವಾರೋ ದೇವ್ಯಃ ಎಂಬ ಹೆಸರಿನ ದೇವತೆಗಳೂ (ಆಪ್ರೀಸೂಕ್ತದ ದೇವತೆಗಳು) ಅಗ್ನಿಯ ರೂಪಾಂತರಗಳೇ ಆಗಿರುವವು.

108. ಅದರಂತೆಯೇ **ನಕ್ತೋಷಾಸಾ** (ರಾತ್ರಿ ಮತ್ತು ಉಷಃಕಾಲಾಭಿಮಾನಿದೇವತೆಗಳು) **ದೇವ್ಯೌ ಹೋತಾರೌ** (ದೇವಸಂಬಂಧವಾದ ಹೋತೃಗಳೆಂಬ ಋತ್ವಿಜರು) **ದೇವ್ಯಸ್ತಿಸ್ರಃ** (ಇಳಾ, ಸರಸ್ವತೀ ಭಾರತೀ ಎಂಬ ಮೂರು ಮಂದಿ ದೇವಿಯರು) **ತ್ವಷ್ಟೃವು** ಇವರೂ (ಆಪ್ರೀಸೂಕ್ತದ ದೇವತೆಗಳು) ಅಗ್ನಿಯ ರೂಪಾಂತರಗಳು.

109. ಮತ್ತು ವನಸ್ಪತಿ, ಸ್ವಾಹಾಕೃತಿ (ಇವರೂ ಆಪ್ರಿಸೂಕ್ತದ ದೇವತೆಗಳು—**ಇಧ್ಮ** ಎಂಬುದರಿಂದ **ಸ್ವಾಹಾ** ಕೃತಿಯವರೆಗೆ ಇರುವ 11 ಮಂದಿ ದೇವತೆಗಳು ಆಪ್ರೀಸೂಕ್ತದ ದೇವತೆಗಳೆಂದು ಪ್ರಸಿದ್ಧರಾಗಿ ಇವರೆಲ್ಲರೂ)

---

### 22. The deities representing terrestrial Agni.

106. Jatavedas is contained in Agni, Vaisvanara is contained in Agni; so also are Dravinodas, and Fuel (ಇಧ್ಮ) and Tanunapat is contained in Agni.

107. Narasamsa is contained in him, in him is contained Ila, the litter (ಬರ್ಹಿ) and the Divine Doors are contained in this Agni.

108. Night and Dawn, and the two Divine Sacrificers are contained in him; and the Three Goddesses are contained in him, and Tvastr is contained in him.

109. Vanaspati is contained in him, also the Svahakrits; and the

ಅಶ್ವಶ್ಚ ಶಕುನಿಶ್ಚೈವ ಮಂಡೂಕಾಶ್ಚೈತದಾಶ್ರಯಾಃ ॥ ೧೦೯ ॥
ಗ್ರಾವಾಣಶ್ಚೈನಮಕ್ಷಾಶ್ಚ ನರಾಶಂಸಸ್ತಥಾ ರಥಃ ।
ದುಂದುಭಿಶ್ಚೇಷುಧಿಶ್ಚೈನಂ ಹಸ್ತಘ್ನೋಽಭೀಶವೋ ಧನುಃ ॥ ೧೧೦ ॥
ಜ್ಯಾ ಚೈತದಾಶ್ರಿತೇಷುಶ್ಚ ಶ್ರಿತಾ ಅಶ್ವಾಜನೀ ಚ ಯಾ ।
ವೃಷಭೋ ದ್ರುಘಣಶ್ಚೈನಮೇನಂ ಪಿತುರುಲೂಖಲಂ ॥ ೧೧೧ ॥
ನದ್ಯಶ್ಚೈವೈನಮಾಪಶ್ಚ ಸರ್ವಾ ಓಷಧಯಶ್ಚ ಹ ।
ರಾತ್ರ್ಯಪ್ವಾಗ್ನಾಯ್ಯರಣ್ಯಾನೀ ಶ್ರದ್ಧೇಳಾ ಪೃಥಿವೀ ತಥಾ ॥ ೧೧೨ ॥
ಧಜೇತೇ ಚೈನಮೇವಾಶ್ರಿತೇ ದ್ವಂದ್ವಭೂತೇ ಚ ರೋದಸೀ ।

ಅಗ್ನಿಯ ರೂಪಾಂತರಗಳೆಂದು ಹೇಳಲ್ಪಡುವರು. ಮತ್ತು ಅಶ್ವ (ಯಜ್ಞಾಶ್ವ) ಶಕುನಿ ಎಂಬ ಪಕ್ಷಿ, ಮಂಡೂಕಾಃ (ಕಪ್ಪೆಗಳು) ಇವುಗಳೂ ಅಗ್ನಿಯ ಅಂಶಗಳೆಂದು ಪರಿಗಣಿಸಲ್ಪಟ್ಟಿರುವವು.

110. ಇವರಲ್ಲದೆ 120 ನೇ ಶ್ಲೋಕದ ವರೆಗೆ ಹೇಳಿರುವ ದೇವತೆಗಳೆಲ್ಲರೂ ಅಗ್ನಿಯ ಅಂಶ ಅಥವಾ ರೂಪಗಳೆಂದೇ ಪ್ರಸಿದ್ಧಿಯು. ಅವರುಗಳ ಹೆಸರುಗಳನ್ನು ಇಲ್ಲಿ ಕ್ರಮವಾಗಿ ಹೇಳಲಾಗಿರುವುದು—ಸೋಮಲತೆಗಳನ್ನು ಜಜ್ಜುವ ಕಲ್ಲುಗಳು, ಪಗಡೆದಾಳಗಳು, ನರಾಶಂಸ, ರಥ, ದುಂದುಭಿ (ನಗಾರಿ), ಬಾಣಗಳನ್ನು ಇಡುವ ಬತ್ತಳಿಕೆ, ಹಸ್ತಘ್ನ (ಬಾಣವನ್ನು ಬಿಲ್ಲಿನಲ್ಲಿ ಹೂಡಿ ಎಳೆದು ಬಿಡುವಾಗ ಬಾಣದ ಕಡ್ಡಿಯು ಹಸ್ತಕ್ಕೆ ತಗಲಿ ಘಾಯಮಾಡದಿರುವುದಕ್ಕಾಗಿ ಹಸ್ತಕ್ಕೆ ಸುತ್ತಿರುವ ಬಟ್ಟೆ ಅಥವಾ ಆಯುಧಕ್ಕೆ ಹಸ್ತಘ್ನವೆಂದು ಹೆಸರು) ಕುದುರೆಯ ಲಗಾಮುಗಳು, ಧನುಸ್ಸು (ಬಿಲ್ಲು);

111. ಧನುಸ್ಸಿನ ಹೆದೆ (ಹಗ್ಗ), ಬಾಣ, ಚಾವಟಿ, ವೃಷಭ (ಎತ್ತು ಅಥವಾ ಹೋರಿ) ಸುತ್ತಿಗೆ, ಗುಂಡು ಕಲ್ಲು, ಒರಳು;

112. ನದಿಗಳು, ಆಪಃ (ಉದಕಗಳು), ಸಮಸ್ತ ಓಷಧಿಗಳು (ಲತೆಗಳು), ರಾತ್ರಿ, ಅಪ್ವ, ಅಗ್ನಾಯೀ (ಅಗ್ನಿಯ ಪತ್ನಿ) ಅರಣ್ಯಾನೀ, ಶ್ರದ್ಧಾ, ಇಳಾ, ಪೃಥಿವೀ;

113. ಬಿಲ್ಲಿನ ಎರಡು ತುದಿಗಳು, ದ್ಯಾವಾಪೃಥಿವಿಗಳು (ಈ ಹೆಸರಿನ ದೇವತೆಗಳು) ಮುಸಲ, ಉಲೂಖಲ,

---

Steed, and the Bird, and the Frogs are contained in him,

110. And the Pressing-stones are contained in him, and the Dice, also Narasamsa, the Car, and the Drum, and the Quiver (are contained) in him, the Handguard, the Reins, the Bow.

111. And the Bowstring is contained in him and the arrow, the Whip, the Bull, and the Mallet, in him the Draught and the Mortar.

112. And the Rivers (are contained) in him, and the Waters and all the Plants; Ratri, Apva, Agnayi, Aranyayi, Sraddha, Ila, and Prithvi,

113. And the two Ends of the Bow belong to him and the Two

ಮುಸಲೋಲೂಖಲೇ ಚೈನಂ ಹವಿರ್ಧಾನೇ ಚ ಯೇ ಸ್ಮೃತೇ || ೧೧೩ ||

ಜೋಷ್ಟ್ರೀ ಚೋರ್ಜಾಹುತೀ ಚೈನಂ ಶುತುದ್ರ್ಯಾ ಚ ವಿಪಾಟ್ ಸಹ |
ಯೌ ಚ ದೇವೌ ಶುನಾಸೀರೌ ತೌ ಚಾಗ್ನೀ ಚೈತದಾಶ್ರಯೌ || ೧೧೪ ||

ಲೋಕೋಽಯಂ ಯಜ್ಞೇ ವೈ ಪ್ರಾತಃ ಸವನಂ ಕ್ರಿಯತೇ ಮುಖೇ |
ವಸಂತಶರದೌ ಚರ್ತೂ ಸ್ತೋಮೋಽನುಷ್ಟುಬಥೋ ತ್ರಿವೃತ್ || ೧೧೫ ||

ಗಾಯತ್ರೀ ಚೈಕವಿಂಶಶ್ಚ ಯಜ್ಞೇ ಸಾಮ ರಥಂತರಂ |
ಸಾಧ್ಯಾಃ ಸಾಮ ಚ ವೈರಾಜಮಾಪ್ತ್ಯಾಶ್ಚ ವಸುಭಿಃ ಸಹ || ೧೧೬ ||

(ಒನಕೆ ಅಥವಾ ಗುಂಡುಕಲ್ಲು ಮತ್ತು ಒರಳುಕಲ್ಲು) ಹವಿರ್ಧಾನೇ ಎಂಬ ಸೋಮಲತೆಗಳನ್ನು ತುಂಬಿ ತರುವ ಎರಡು ಗಾಡಿಗಳು ;

114. ಜೋಷ್ಟ್ರೀ (ಪ್ರೀತಿದಾಯಕರಾದ ಇಬ್ಬರು ದೇವತೆಗಳು), ಊರ್ಜಾಹುತೀ (ಆಹುತಿಯ ಅರ್ಪಣೆಯಿಂದ ಆರಾಧಿಸಲ್ಪಡುವ ಇಬ್ಬರು ದೇವತೆಗಳು), ಶುತುದ್ರಿ (ಈ ಹೆಸರಿನ ನದಿ) ವಿಪಾಟ್ ಎಂಬ ನದಿ, ಶುನಾಸೀರೌ ಎಂಬ ದೇವತೆಗಳು ;

115. ಈ ಲೋಕವು (ಭೂಲೋಕ), ಪ್ರಾತಃಸವನಕರ್ಮವು (ಪ್ರಾತಃಕಾಲದಲ್ಲಿ ಸೋಮರಸವನ್ನು ಹಿಂಡುವ ಯಜ್ಞಾಂಗಕರ್ಮವು), ವಸಂತಋತು, ಶರದೃತು, ಸ್ತೋಮ (ತ್ರಿವೃದಾದಿಸ್ತೋಮಗಳು—ಅಥವಾ ಸ್ತೋತ್ರ), ಅನುಷ್ಟುಪ್ ಎಂಬ ಛಂದಸ್ಸು, ತ್ರಿವೃತ್ಸ್ತೋಮ ;

116. ಗಾಯತ್ರೀ, ಏಕವಿಂಶಸ್ತೋಮ, ರಥಂತರಸಾಮ, ವೈರಾಜಸಾಮ (ಸಾಮಗಾನದಲ್ಲಿ ಪ್ರಭೇದಗಳು) ಸಾಧ್ಯರು, ಆಪ್ತ್ಯರು, ವಸುಗಳು ;

Worlds forming a pair, and Pestle and Mortar (belong) to him, and the two Oblation-carts as they are called.

114. The two Fostering (goddesses) and the two worshipped with strengthening oblations (are contained) In him, and the Vipas together with the Sutudri, and the two Agnis, the divine Suna and Sira, are contained in him

115. This world, and the morning Soma pressing which is performed at the sacrifice, and the two seasons, Spring and Autumn, the Anustubh (metre) and the Trivrt Stoma ;

116. The Gayatri, the Ekavimas (Stoma), the Rathantara chant and the Vairaja chant, the Sadhyas and the Apatyas with the Vasus(belonging to sphere of Agni)

ಇಂದ್ರೇಣ ಚ ಮರುದ್ಭಿಶ್ಚ ಸೋಮೇನ ವರುಣೇನ ಚ |
ಪರ್ಜನ್ಯೇನರ್ತುಭಿಶ್ಚೈವ ವಿಷ್ಣುನಾ ಚಾಸ್ಯ ಸಂಸ್ತವಃ ॥ ೧೧೭ ॥

ಅಸ್ಯೈವಾಗ್ನೇಸ್ತು ಪೂಷ್ಣಾ ಚ ಸಾಮ್ರಾಜ್ಯಂ ವರುಣೇನ ಚ |
ದೇವತಾಮರ್ಥತತ್ತ್ವಜ್ಞೋ ಮಂತ್ರೈಃ ಸಂಯೋಜಯೇದ್ಧವಿಃ ॥ ೧೧೮ ॥

ಅಸಂಸ್ತುತಸ್ಯಾಪಿ ಸತೋ ಹವಿರೇಕಂ ನಿರುಪ್ಯತೇ |
ದೇವತಾವಾಹನಂ ಚೈವ ವಹನಂ ಹವಿಷಾಂ ತಥಾ ॥ ೧೧೯ ॥

ಕರ್ಮ ದೃಷ್ಟೇ ಚ ಯತ್ಕಿಂಚಿದ್ವಿಷಯೇ ಪರಿವರ್ತತೇ |
ಇತ್ಯುಕ್ತೋಽಯಂ ಗಣಃ ಸರ್ವಃ ಪೃಥಿವ್ಯಗ್ನ್ಯಾಶ್ರಯೋ ಮಹಾನ್ ॥ ೧೨೦

117. ಇಂದ್ರ, ಮರುತ್ತುಗಳು, ಸೋಮ, ವರುಣ, ಪರ್ಜನ್ಯ, ಋತುಗಳು ಮತ್ತು ವಿಷ್ಣು ಎಂಬ ದೇವತೆಗಳ ಜತೆಯಲ್ಲಿ ಸ್ತುತನಾದ ಅಗ್ನಿಯು (ಎಂದರೆ–ಇಂದ್ರನ ಜತೆಯಲ್ಲಿ ಸ್ತುತನಾದ ಅಗ್ನಿ ಎಂದರೆ, ಇಂದ್ರಾಗ್ನೀ ಎಂದೂ ಮರುದ್ಭಿರಗ್ನಿಃ, ಅಗ್ನಿಷೋಮಾ, ಇತ್ಯಾದಿ ಅಗ್ನಿಯಿಂದ ಕೂಡಿದ ಸಂಸ್ತವಿಕದೇವತೆಗಳು ಎಂದರ್ಥವು); ಇವರೆಲ್ಲರೂ ಅಗ್ನಿಯ ರೂಪಾಂತರಗಳು (ಎಂದರೆ ಅಗ್ನಿಯಂತೆ ಪೃಥಿವೀಸ್ಥಾನದೇವತೆಗಳು).

118. ಪೂಷಾ, ವರುಣ ಎಂಬ ದೇವತೆಗಳನ್ನು ಗೌರವಸೂಕ್ತವಾದ ಸಾಮ್ರಾಜ್ಯ ಅಥವಾ ರಾಜಶಬ್ದದಿಂದ ಸಹಿತವಾಗಿ ಸಂಬೋಧಿಸುವಂತೆ (ಪೂಷಾ ರಾಜನ್, ರಾಜಾ ವರುಣಃ ಇತ್ಯಾದಿ) ಅಗ್ನಿಗೂ ಗೌರವಸೂಚಕವಾದ ರಾಜಾ ಎಂಬ ಶಬ್ದವು ಅನ್ವಯಿಸುವುದು. ದೇವತೆಗಳ ಸ್ವರೂಪವನ್ನೂ ಅರ್ಥವನ್ನೂ ತಿಳಿದಿರುವ ಪುರುಷನು ಆಯಾ ದೇವತೆಗಳ ಹೆಸರುಗಳುಳ್ಳ ಮಂತ್ರಗಳೊಡನೆ ಹವಿಸ್ಸನ್ನು ಸೇರಿಸಿ ಹೋಮಮಾಡಬೇಕು. ಎಂದರೆ ಆಯಾ ದೇವತೆಗಳಿಗೆ ಹವಿಸ್ಸನ್ನರ್ಪಿಸಿ ಹೋಮಮಾಡುವಾಗ ಆಯಾ ದೇವತಾಸಂಬಂಧವಾದ ಮಂತ್ರಗಳನ್ನು ಪಠಿಸುತ್ತಾ ಹೋಮಮಾಡಬೇಕು.

119–120. ಕೆಲವು ಸಂದರ್ಭಗಳಲ್ಲಿ ಒಂದು ಮಂತ್ರದಲ್ಲಿ ಒಂದು ದೇವತೆಯ ಜತೆಯಲ್ಲಿ ಇನ್ನೊಂದು ದೇವತೆಯು ಸ್ತುತಿಸಲ್ಪಡದಿದ್ದರೂ ಹವಿಸ್ಸು ಮಾತ್ರ ಎರಡು ದೇವತೆಗಳಿಗೂ ಅರ್ಪಿಸಲ್ಪಡುವುದು. ಏಕೆಂದರೆ ದೇವತೆಗಳ ಆವಾಹನೆಯೂ ಅವರಿಗೆ ಹವಿಸ್ಸನ್ನರ್ಪಿಸುವುದೂ ಇತರ ಕಾರ್ಯಕಲಾಪಗಳೂ ಆ ಕರ್ಮದಲ್ಲಿ

---

117. With Indra and the Maruts, with Soma and Varuna, with Parjanya and the Seasons, and with Vishnu he shares praise.

113. This same Agni shares sovereignty with Pusan and with Varuna. One who knows the essential meaning (of the formulas) should connect the deity (and) the oblation by means of the formulas.

119. Even though (a god) be not praised along with (another in the dual), one and the same oblation is (occasionally) offered (to both). The bringing of the gods, as well as the taking of the oblations (to them).

120. is his activity, and whatever moves within the ken of vision

ಯಶ್ಚೈಂದ್ರೋ ಮಧ್ಯಮಸ್ಥಾನೋ ಗಣಃ ಸೋಽಯಮತಃ ಪರಃ ।
ವಿಮಾನಾನಿ ಚ ದಿವ್ಯಾನಿ ಗಣಶ್ಚಾಪ್ಸರಸಾಂ ತಥಾ ॥ ೧೨೧ ॥

ಇಂದ್ರಾಶ್ರಯಸ್ತು ಪರ್ಜನ್ಯೋ ರುದ್ರೋ ವಾಯುರ್ಬೃಹಸ್ಪತಿಃ ।
ವರುಣಃ ಕಶ್ಚ ಮೃತ್ಯುಶ್ಚ ದೇವಶ್ಚ ಬ್ರಹ್ಮಣಸ್ಪತಿಃ ॥ ೧೨೨ ॥

ಮನ್ಯುಶ್ಚ ವಿಶ್ವಕರ್ಮಾ ಚ ಮಿತ್ರಃ ಕ್ಷೇತ್ರಪತಿರ್ಯಮಃ ।
ತಾರ್ಕ್ಷ್ಯೋ ವಾಸ್ತೋಽಷ್ಪತಿಶ್ಚೈವ ಸರಸ್ವಾಂಶ್ಚೈವಮತ್ರ ಹ ॥ ೧೨೩ ॥

ಅಪಾಂನಪಾದ್ದಧಿಕ್ರಾಶ್ಚ ಸುಪರ್ಣೋಽಥ ಪುರೂರವಾಃ ।
ಋತೋಽಸುನೀತಿರ್ವೇನಶ್ಚ ತಸ್ಯೈತಸ್ಯಾಶ್ರಯೇಽದಿತಿಃ ॥ ೧೨೪ ॥

(ಉದ್ದಿಷ್ಟಕರ್ಮದಲ್ಲಿ) ಹೇಳಿರುವುದರಿಂದ ಅದರಂತೆ ನೆರವೇರಿಸಬೇಕಾಗಿರುವುದು. ಈ ರೀತಿಯಾಗಿ ಪಾರ್ಥಿವಾಗ್ನಿಯನ್ನು ಆಶ್ರಯಿಸಿರುವ (ಎಂದರೆ ಪೃಥಿವೀಸಂಬಂಧವಾದ) ಸಮಸ್ತದೇವತೆಗಳ ಸಮೂಹವನ್ನು ವಿವರಿಸಲಾಗಿದೆ.

**ಮಧ್ಯಮ (ಅಂತರಿಕ್ಷ) ಸ್ಥಾನ ದೇವತೆಗಳು ಮತ್ತು ಇಂದ್ರನಿಗೆ ಸಂಬಂಧಪಟ್ಟ ಇತರ ದೇವತೆಗಳು**

121. ಈಗ ಇಂದ್ರನಿಗೆ ಸಂಬಂಧಪಟ್ಟ ಮಧ್ಯಮಸ್ಥಾನದೇವತೆಗಳ ವಿಷಯವನ್ನು ವಿವರಿಸಲಾಗುವುದು. ಈ ಮಧ್ಯಮಸ್ಥಾನದೇವತೆಗಳಾರೆಂದರೆ—ಇಂದ್ರ, ದೇವತೆಗಳ ವಿಮಾನಗಳು, ಅಪ್ಸರೋಗಣಗಳು ;

122. ಇಂದ್ರನನ್ನು ಆಶ್ರಯಿಸಿರುವ ಪರ್ಜನ್ಯ, ರುದ್ರ, ವಾಯು, ಬೃಹಸ್ಪತಿ, ವರುಣ, ಕಃ (ಪ್ರಜಾಪತಿ), ಮೃತ್ಯು, ಬ್ರಹ್ಮಣಸ್ಪತಿ ಎಂಬ ದೇವತೆ ;

123. ಮನ್ಯು, (ಕ್ರೋಧಾಭಿಮಾನಿದೇವತೆ) ವಿಶ್ವಕರ್ಮ, ಮಿತ್ರ, ಕ್ಷೇತ್ರಪತಿ, ಯಮ, ತಾರ್ಕ್ಷ್ಯ, ವಾಸ್ತೋಷ್ಪತಿ, ಸರಸ್ವಾನ್ ;

124. ಅಪಾಂನಪಾತ್, ದಧಿಕ್ರಾಃ, ಸುಪರ್ಣ, ಪುರೂರವಾಃ, ಋತ, ಅಸುನೀತಿ, ವೇನ, ಅದಿತಿ ;

(is connected with that activity). Thus the whole of this great group contained in the Agni of earth has been stated.

**23. The group of deities of the middle Sphere belonging to Indra.**

121. Now the group of the middle sphere belonging to Indra follows here, (including) the celestial cars and the group of the Apsarases.

122. In Indra are contained Parjanya, Rudra, Vayu, Brhaspati, Varuna, Ka, Mrtyu, and the god Brahmanaspati,

123. Manyu, Visvakarman, Mitra, Ksetrapati, Yama, Tarksya, as well as Vastospati, and also Sarasvat are here :

124. Apam napat and Dadhikra, then Snparna, Pururavas, Rta, Asumati, in his sphere (ಆಶ್ರಯೇ) also is Aditi.

ತ್ವಷ್ಟಾ ಚ ಸವಿತಾ ಚೈವ ವಾತೋ ವಾಚಸ್ಪತಿಸ್ತಥಾ ।
ಧಾತಾ ಪ್ರಜಾಪತಿಶ್ಚೈವ ಅಥರ್ವಾಣಶ್ಚ ಯೇ ಸ್ಮೃತಾಃ ॥ ೧೨೫ ॥

ಶ್ಯೇನಶ್ಚೈವೈವಮಗ್ನಿಶ್ಚ ತಥೇಳಾ ಚೈವ ಯಾ ಸ್ಮೃತಾ ।
ವಿಧಾತೇಂದುರಹಿರ್ಬುಧ್ನ್ಯಃ ಸೋಮೋಽಹಿರಥ ಚಂದ್ರಮಾಃ ॥ ೧೨೬ ॥

ವಿಶ್ವಾನರಶ್ಚ ವೈ ದೇವೋ ರುದ್ರಾಣಾಂ ಸಂಸ್ತುತೋ ಗಣಃ ।
ಮರುತೋಽಙ್ಗಿರಸಶ್ಚೈವ ಪಿತರಶ್ಚರ್ಭುಭಿಃ ಸಹ ॥ ೧೨೭ ॥

ರಾಕಾ ವಾಕ್ಸರಮಾಪ್ತ್ಯಾಶ್ಚ ಭೃಗವೋಽಘ್ನ್ಯಾ ಸರಸ್ವತೀ ।
ಯಮ್ಯುರ್ವಶೀ ಸಿನೀವಾಲೀ ಪಥ್ಯಾ ಸ್ವಸ್ತಿರುಷಾಃ ಕುಹೂಃ ॥ ೧೨೮ ॥

ಪೃಥಿವ್ಯನುಮತಿರ್ಧೇನುಃ ಸೀತಾ ಲಾಕ್ಷಾ ತಥೈವ ಗೌಃ ।
ಗೌರೀ ಚ ರೋದಸೀ ಚೈವ ಇಂದ್ರಾಣ್ಯಾಶ್ಚೈಷ ವೈ ಪತಿಃ ॥ ೧೨೯ ॥

125. ತ್ವಷ್ಟೃ, ಸವಿತೃ, ವಾತ, ವಾಚಸ್ಪತಿ, ಧಾತಾ, ಪ್ರಜಾಪತಿ, ಅಥರ್ವಾಣಃ (ಎಂಬ ಋಷಿಗಳು) ;

126. ಶ್ಯೇನ (ಸ್ವರ್ಗದಿಂದ ಸೋಮಲತೆಯನ್ನು ತಂದ ಪಕ್ಷಿ) ಅಗ್ನಿ (ವಿದ್ಯುದಗ್ನಿ) ಇಳಾ, ವಿಧಾತೃ, ಇಂದು, ಅಹಿರ್ಬುಧ್ನ್ಯ, ಸೋಮ, ಅಹಿಃ (ಸರ್ಪ), ಚಂದ್ರ ;

127. ವಿಶ್ವಾನರ (ವೈಶ್ವಾನರದೇವ), ಮರುದ್ಗಣ, ಮರುತ್ತುಗಳು, ಅಂಗಿರಸರು (ಪಿತೃಗಳಲ್ಲಿ ಪ್ರಭೇದ) ಪಿತೃಗಳು, ಋಭುಗಳು ;

128. ರಾಕಾ. ವಾಕ್ (ವಾಗ್ದೇವತೆ), ಸರಮಾ (ದೇವಶುನಿ), ಆಪ್ತ್ಯಾಃ, ಭೃಗುಗಳು (ಪಿತೃಗಳಲ್ಲಿ ಒಂದು ಪ್ರಭೇದ), ಅಘ್ನ್ಯಾ, ಸರಸ್ವತೀ, ಯಮೀ, ಉರ್ವಶೀ, ಸಿನೀವಾಲೀ, ಪಥ್ಯಾ, ಸ್ವಸ್ತಿ, ಉಷಾಃ, ಕುಹೂಃ ;

129. ಪೃಥಿವೀ, ಅನುಮತಿ, ಧೇನು, ಸೀತಾ, ಲಾಕ್ಷಾ, ಗೌಃ, ಗೌರೀ, ರೋದಸೀ (ರುದ್ರಪತ್ನೀ ) ಇಂದ್ರಾಣೀ ( ಇಂದ್ರನಪತ್ನಿ ) ಅವಳ ಪತಿಯಾದ ಇಂದ್ರ ;

---

125. and Tvastr and Savitr, Vata as well as Vachaspati, Dhatr and also Prajapati, and those who are called Atharvanas ;

126. and so also the Falcon, and Agni, as well as she who is called Ila ; Vidhatr, Indu, the Dragon of the Deep, Soma, the Dragon, and the Moon.

127. and the divine Visvanara, and the group of the Rudras is praised with (him), the Maruts, as well as the Angirasas, and the fathers together with the Rbhus,

128, Raka, Vac, Sarama, and the Aptyas, the Bhrgus, Aghnya, Sarasvati, Yami, Urvasi, Sinivali, Pathya, Svasti, Usas, Kuhu.

129. Earth, Anumathi, Dhenu, Sita, Laksha, likewise cow and Gouri, as well as Rodasi ; and he (ಇಂದ್ರ) is the husband of Indrani.

ಛಂದಸ್ತ್ರಿಷ್ಟುಪ್ ಚ ಪಂಕ್ತಿಶ್ಚ ಲೋಕಾನಾಂ ಮಧ್ಯಮಶ್ಚ ಯಃ ।
ಏತೇಷ್ವೇವಾಶ್ರಯೋ ವಿದ್ಯಾತ್ಸವನಂ ಮಧ್ಯಮಂ ಚ ಯತ್ ॥ ೧೩೦ ॥

ಋತೂ ಚ ಗ್ರೀಷ್ಮಹೇಮಂತೌ ಯಚ್ಚ ಸಾಮೋಚ್ಯತೇ ಬೃಹತ್ ।
ಶಕ್ವರೀಷು ಚ ಯದ್ಗೀತಂ ನಾಮ್ನಾ ತತ್ಸಾಮ ಶಾಕ್ವರಂ ॥ ೧೩೧ ॥

ನಾಮ್ನಾ ತತ್ಸಾಮ ಶಾಕ್ವರಂ ॥

॥ ಇತಿ ಬೃಹದ್ದೇವತಾಯಾಂ ಪ್ರಥಮೋಽಧ್ಯಾಯಃ ॥

---

130. ತ್ರಿಷ್ಟುಪ್ಛಂದಸ್ಸು, ಪಂಕ್ತಿಶ್ಛಂದಸ್ಸು, ಮಧ್ಯಮಲೋಕ (ಅಂತರಿಕ್ಷ), ಮಾಧ್ಯಂದಿನಸವನ, ಇವೆಲ್ಲವೂ ಮಧ್ಯಮಲೋಕವನ್ನಾಶ್ರಯಿಸಿರುವವು.

131. ಹಾಗೆಯೇ, ಗ್ರೀಷ್ಮ ಮತ್ತು ಹೇಮಂತಋತುಗಳು, ಬೃಹತ್ಸಾಮ (ಸಾಮವೇದದ ಮಂತ್ರವಿಶೇಷ) ಶಕ್ವರೀಛಂದಸ್ಸುಗಳಲ್ಲಿ ಗಾನಮಾಡಲ್ಪಡುವ ಶಾಕ್ವರಸಾಮ (ಸಾಮಗಾನವಿಶೇಷ) ಇವೆಲ್ಲವೂ ಮಧ್ಯಮಸ್ಥಾನದೇವತೆಗಳೆಂದು ಹೇಳಲ್ಪಡುವವು.

ಇಲ್ಲಿಗೆ ಶೌನಕಮಹರ್ಷಿಪ್ರೋಕ್ತವಾದ ಬೃಹದ್ದೇವತೆಯೆಂಬ ಗ್ರಂಥದಲ್ಲಿ
ಮೊದಲನೆಯ ಅಧ್ಯಾಯವು ಸಮಾಪ್ತವಾದುದು.

---

130. The metre Tristubh and Pankti and the middlemost of the worlds and the middle (i.e. midday) pressing (of Soma), one should know, (belonging to his) sphere among these same (gods);

131. and the two seasons, Summer and Winter, and the chant which is called Brhat, (ಬೃಹತ್) and the chant which, Sakvara (ಶಾಕ್ವರಂ) by name, is sung in Sakvari verses,

Thus ends the first chapter.

# ಅಥ ಬೃಹದ್ದೇವತಾಯಾಂ ದ್ವಿತೀಯೋಽಧ್ಯಾಯಃ

ಆಹ ಚೈವಾಸ್ಯ ದ್ವೌ ಸ್ತೋಮಾವಾಶ್ರಯೌ ಶಾಕಟಾಯನಃ ।
ಯಶ್ಚ ಪಂಚದಶೋ ನಾಮ್ನಾ ಸಂಖ್ಯಯಾ ತ್ರಿಣವಶ್ಚ ಯಃ ॥ ೧ ॥
ಸಂಸ್ತುತಶ್ಚೈವ ಪೂಷ್ಣಾ ಚ ವಿಷ್ಣುನಾ ವರುಣೇನ ಚ ।
ಸೋಮವಾಯ್ವಗ್ನಿಕುತ್ಸೈಶ್ಚ ಬ್ರಹ್ಮಣಸ್ಪತಿನೈವ ಚ ॥ ೨ ॥
ಬೃಹತಸ್ಪತಿನಾ ಚೈವ ನಾಮ್ನಾ ಯಶ್ಚಾಪಿ ಪರ್ವತಃ ।
ಕಾಸುಚಿತ್ಕೇಚಿದಿತ್ಯಾಹುರ್ನಿಪಾತಾ ಸ್ತುತಿಷು ಸ್ತುತಾಃ ॥ ೩ ॥
ಮಿತ್ರಶ್ಚ ಶ್ರೂಯತೇ ದೇವೋ ವರುಣೇನ ಸಹಾಸಕೃತ್ ।
ರುದ್ರೇಣ ಸೋಮಃ ಪೂಷ್ಣಾ ಚ ಪುನಃ ಪೂಷಾ ಚ ವಾಯುನಾ ॥ ೪ ॥

## ಎರಡನೆಯ ಅಧ್ಯಾಯವು.

### ಮಧ್ಯಮಸ್ಥಾನದೇವತೆಗಳು (ಮುಂದುವರಿದುದು).

1. ಶಾಕಟಾಯನರ ಮತದಂತೆ, ಪಂಚದಶಸ್ತೋಮ ಮತ್ತು ತ್ರಿಣವಸ್ತೋಮ ಎಂಬ ಎರಡು ಸ್ತೋಮಗಳು,

2. ಇಂದ್ರನು, ಪೂಷಾ, ವಿಷ್ಣು, ವರುಣ, ಸೋಮ, ವಾಯು, ಅಗ್ನಿ, ಕುತ್ಸ, ಬ್ರಹ್ಮಣಸ್ಪತಿ, ಎಂಬ ದೇವತೆಗಳೊಡನೆ ಸಂಸ್ತವಿಕವಾಗಿ ಎಂದರೆ ಜತೆಯಲ್ಲಿ ಸ್ತುತನಾಗಿರುವಾಗ, (ಇಂದ್ರಾಪೂಷಾ, ಇಂದ್ರಾವಿಷ್ಣೂ ಇತ್ಯಾದಿ)

3. ಮತ್ತು ಬೃಹಸ್ಪತಿ ಪರ್ವತ ಇವರೊಡನೆ (ಇಂದಾಬೃಹಸ್ಪತೀ ಇಂದ್ರಾಪರ್ವತಾ) ಸ್ತುತನಾದಾಗ; ಕೆಲವು ಸ್ತುತಿಗಳಲ್ಲಿ ಮುಖ್ಯದೇವತೆಯಲ್ಲದೆ ಇತರ ದೇವತೆಯ ಸ್ತುತಿಯೂ ಸಂದರ್ಭಾನುಸಾರವಾಗಿ ಇರುವುದು.

4. ಕೆಲವು ಸಂದರ್ಭಗಳಲ್ಲಿ ಇಂದ್ರನು ವರುಣನೊಡನೆಯೂ, ರುದ್ರನು ಸೋಮನೊಡನೆಯೂ, ಸೋಮನು ಪೂಷನೊಡನೆಯೂ, ಪೂಷನು ವಾಯುವಿನೊಡನೆಯೂ ಸಂಸ್ತವಿಕವಾಗಿ (ಒಟ್ಟಿಗೆ, ಜತೆಯಲ್ಲಿ) ಸ್ತುತಿಸಲ್ಪಟ್ಟಿರುವರು. ಇಂದ್ರಾವರುಣಾ, ಸೋಮಾರುದ್ರಾ, ಸೋಮಾಪೂಷಾ ಇತ್ಯಾದಿ) ಈ ದೇವತೆಗಳೂ ಮಧ್ಯಮಸ್ಥಾನೀಯರು.

## Chapter 2.

### 1. Deities of Indra's sphere,

1. Sakatayana, moreover, says that to him(Indra)belong (ಅಸ್ಯಾಶ್ರಯೌ) two Stomas, (viz) that which is called the fifteenfold (ಪಂಚದಶ), and that whieh is three times nine in number (ತ್ರಿಣವ).

2. He is praised in combination (ಸಂಸ್ತುತಃ) which Pusan and Visnu and Varuna and with Soma, Vayu, Agni, Kutsa, as well as Brahmanaspati;

3. With Brahaspati as well as (with him) who is Parvata by name. They say that in some praises certain (gods) are praised as incidental.

4. And the god Mitra is frequently praised in the sacred text (ಶ್ರೂಯತೇ) with Varuna, Soma, with Rudra and Pusan, and again Pusan with Vayu;

ವಾತೇನೈವ ಚ ಪರ್ಜನ್ಯೋ ಲಕ್ಷ್ಯತೇಽನ್ಯತ್ರ ವೈ ಕ್ವಚಿತ್ ।
ಋಕ್ಷ್ವರ್ಧರ್ಚೇಷು ಪಾದೇಷು ಸೂಕ್ತೇಷ್ವೇಷು ತು ಕೃತ್ಸ್ನಶಃ ॥ ೫ ॥

ರಸಾದಾನಂ ತು ಕರ್ಮಾಸ್ಯ ವೃತ್ರಸ್ಯ ಚ ನಿಬರ್ಹಣಂ ।
ಸ್ತುತೇಃ ಪ್ರಭುತ್ವಂ ಸರ್ವಸ್ಯ ಬಲಸ್ಯ ನಿಖಿಲಾ ಕೃತಿಃ ॥ ೬ ॥

ಇತ್ಯೈನ್ದ್ರೋ ಮಧ್ಯಮಸ್ಥಾನೋ ಗಣಃ ಸಮ್ಯಗುದಾಹೃತಃ ।
ಯಃ ಪರಸ್ತು ಗಣಃ ಸೌರ್ಯೋ ದ್ಯುಸ್ಥಾನಸ್ತಂ ನಿಬೋಧತ ॥ ೭ ॥

ತಸ್ಯ ಮುಖ್ಯತಮೌ ದೇವಾವಶ್ವಿನೌ ಸೂರ್ಯಮಾಶ್ರಿತೌ ।
ವೃಷಾಕಪಾಯೀ ಸೂರ್ಯೋಷಾಃ ಸೂರ್ಯಸ್ಯೈವ ತು ಪತ್ನಯಃ ॥ ೮ ॥

5. ಮೇಲೆಹೇಳಿದಂತೆ ಪರ್ಜನ್ಯನು ವಾತನೊಡನೆ ಸಂಸ್ತವಿಕವಾಗಿ (ಪರ್ಜನ್ಯಾವಾತಾ) ಸ್ತುತಿಸಲ್ಪಟ್ಟಿರುವುದು. ಕೆಲವುಕಡೆ ಕಂಡುಬರುವುದು. ಇದಲ್ಲದೆ ಇಂದ್ರನು ಸೂಕ್ತಗಳಲ್ಲಲ್ಲದೆ ಕೆಲವು ಋಕ್ಕುಗಳಲ್ಲಿಯೂ, ಅರ್ಧಋಕ್, ಪಾದ ಇವುಗಳಲ್ಲಿ ಮಾತ್ರ ಸ್ತುತನಾಗಿರುವನು.

6. ಮೇಘಗಳನ್ನು ತಡೆದಿರುವ ವೃತ್ರನನ್ನು ಸಂಹರಿಸುವುದು, ಮೇಘಗಳಲ್ಲಿರುವ ಜಲವನ್ನು ಬಿಡುಗಡೆಮಾಡಿ ವೃಷ್ಟಿಯನ್ನು ಸುರಿಸುವಂತೆ ಮಾಡುವುದು, ಎಲ್ಲರಿಗೂ ಪ್ರಭುವಾಗಿರುವುದು, ಬಲ ಅಥವಾ ಸಾಹಸಕೃತ್ಯಗಳನ್ನೆಸಗುವುದು. ಇವೆಲ್ಲವೂ ಸ್ತುತಿಗಳಲ್ಲಿ ಕಂಡುಬರುವ ಇಂದ್ರನ ಗುಣವರ್ಣನೆಗಳು.

**ದ್ಯುಸ್ಥಾನದೇವತೆಗಳು, ಸೂರ್ಯನ ಮೂರುಮಂದಿ ಪತ್ನಿಯರು**

7. ಈ ರೀತಿಯಾಗಿ ಮಧ್ಯಮಸ್ಥಾನದೇವತೆಯಾದ ಇಂದ್ರನ ಮತ್ತು ಅವನ ಸಂಬಂಧವಾದ ದೇವತಾಗಣದ ವರ್ಣನೆಯನ್ನು ಹೇಳಿದ್ದಾಯಿತು. ಈಗ ದ್ಯುಸ್ಥಾನದೇವತೆಯಾದ ಸೂರ್ಯ ಮತ್ತು ಅವನ ಸಂಬಂಧವಾದ ದ್ಯುಸ್ಥಾನ ದೇವತೆಗಳ ವಿಷಯವನ್ನು ವಿವರಿಸಲಾಗುವುದು.

8. ಆ ದ್ಯುಸ್ಥಾನದೇವತೆಗಳಲ್ಲಿ ಸೂರ್ಯನನ್ನಾಶ್ರಯಿಸಿದವರೆಂದರೆ, ಅಶ್ವಿನೀದೇವತೆಗಳು, ವೃಷಾಕಪಾಯೀ, ಸೂರ್ಯಾ, ಉಷಾಃ ಎಂಬುವರು. ಇವರಲ್ಲಿ ವೃಷಾಕಪಾಯೀ, ಸೂರ್ಯಾ, ಉಷಾಃ ಎಂಬ (ಸ್ತ್ರೀ) ದೇವತೆಗಳು ಸೂರ್ಯನ ಪತ್ನಿಯರು.

---

5. and Parjanya with Vata. Elsewhere, however, he (Indra) is here and there (ಕ್ವಚಿತ್) in these stanzas, hemistchs, verses, (or) hymns (of the (ಋಗ್ವೇದ) as a whole, distinguished (as the deity).

6. Now the taking up of moisture is his function, and the destruction of Vritra, (and) the prevailing feature (ಪ್ರಭುತ್ವಂ) of (his) praise the complete accomplishment of every (kind of) mighty deed.

**2. Deities of Surya's sphere : his three wives.**

7. Thus Indra's group belonging to the middle sphere has been duly specified. Now learn the following group of the heavenly sphere (and) belonging to Surya.

8. The two chief gods of that (group) connected with Surya are the Asvins ; while Vrsakapayi, Surya, and Usas are the wives of Surya.

ಅನುತೋಽರ್ವಾಙ್ನಿವರ್ತಂತೇ ಪ್ರತಿಲೋಮಾಸ್ತದಾಶ್ರಯಾಃ |
ಪುರೋದಯಾತ್ತ್ವಾಮುಷಸಂ ಸೂರ್ಯಾಂ ಮಧ್ಯಂದಿನೇ ಸ್ಥಿತೇ || ೯ ||

ವೃಷಾಕಪಾಯೀಂ ಸೂರ್ಯಸ್ಯ ಕಾಮೇವಾಹುಸ್ತು ನಿಮ್ರುಚಿ |
ತಸ್ಯಾಶ್ರಯೇ ಸರಣ್ಯೂಶ್ಚ ಭಗಃ ಪೂಷಾ ವೃಷಾಕಪಿಃ || ೧೦ ||

ಯಮೋ ವೈಶ್ವಾನರೋ ವಿಷ್ಣುರ್ವರುಣಶ್ಚೈಕಪಾದಜಃ |
ಪೃಥಿವೀ ಚ ಸಮುದ್ರಶ್ಚ ದೇವಾಃ ಸಪ್ತರ್ಷಯಶ್ಚ ಯೇ || ೧೧ ||

ಆದಿತ್ಯಾಃ ಕೇಶಿಸಾಧ್ಯಾಶ್ಚ ಸವಿತಾ ವಸುಭಿರ್ಮನುಃ |
ದಧ್ಯಙ್ಙಥರ್ವಾ ವಿಶ್ವೇ ಚ ವಾಜಿನೋ ದೇವಪತ್ನಯಃ || ೧೨ ||

9. ಸೂರ್ಯನ ನಿವಾಸಸ್ಥಾನವಾದ ದ್ಯುಸ್ಥಾನ (ಸ್ವರ್ಗ) ದಿಂದ ಆ ಮೂರು ಮಂದಿ ಸ್ತ್ರೀದೇವತೆಗಳು ಕೆಳಗಿನ ಲೋಕವಾದ ಭೂಲೋಕಕ್ಕೆ ಇಳಿದು ಬರುವರು. ಅವರಲ್ಲಿ ಮೊದಲು ಎಂದರೆ ಸೂರ್ಯೋದಯಕ್ಕೆ ಪೂರ್ವದಲ್ಲಿ ಗೋಚರಿಸುವ ದೇವತೆಯನ್ನು ಉಷಸ್ಸೆಂದೂ, ಮಧ್ಯಾಹ್ನಕಾಲದಲ್ಲಿ ಸೂರ್ಯಾದೇವಿಯೆಂದೂ,

10. ಸೂರ್ಯಾಸ್ತಮಯಕಾಲದಲ್ಲಿ ವೃಷಾಕಪಾಯಿ ಎಂದೂ ಹೇಳುವರು. ಆ ಸೂರ್ಯನ ಆಶ್ರಯದಲ್ಲಿಯೇ, ಸರಣ್ಯೂದೇವಿ, ಭಗ, ಪೂಷಾ, ವೃಷಾಕಪಿ,

11. ಯಮ, ವೈಶ್ವಾನರ, ವಿಷ್ಣು, ವರುಣ, ಅಜಏಕಪಾತ್, ಪೃಥಿವೀ, ಸಮುದ್ರ, (ಸಾಮಾನ್ಯ) ದೇವತೆಗಳು, ಸಪ್ತರ್ಷಿಗಳು,

12. ಆದಿತ್ಯರು (ಅದಿತಿಪುತ್ರರು ಅಥವಾ ದ್ವಾದಶಾದಿತ್ಯರು) ಕೇಶಸಹಿತರಾದವರು (ಎಂದರೆ ಜ್ವಾಲಾಯುಕ್ತ ಅಗ್ನಿಗಳು) ಸಾಧ್ಯರು, ಸವಿತೃ, ವಸುಗಳು, ಮನು, ದಧ್ಯಙ್ (ಋಷಿ) ಅಥರ್ವಾ (ಋಷಿ) ವಿಶ್ವೇದೇವತೆಗಳು, ವಾಜಿಗಳು (ಅಶ್ವಗಳು) ದೇವಪತ್ನಿಯರು,

9. From that (heavenly world) the return hitherward, reversed, in connextion with him (ಸೂರ್ಯ). They call her Usas before sunrise, Surya when midday reigns.

10. but Vrsakapayi at the setting of the sun. In his sphere (ಆಶ್ರಯೇ) also the Saranyu, Bhaga, Pusan, Vrsakapi;

11. Yama, Vaisvanara, Visnu, Varuna, Aja ekapad, and Earth (ಪೃಥ್ವೀ) and Ocean (ಸಮುದ್ರ) the Gods, and the Seven Seers (ಸಪ್ತರ್ಷಯಃ);

**3. Deities of Surya's spheres (conttnued).**

12. the Adityas, the Hairy ones (ಕೇಶಿನಃ) and the Sadhyas, Savitr with the Vasus, Manu, Dadhyanch, Atharvan, the All (gods), the Steeds (ವಾಜಿನಃ) the wives of the Gods.

ಅಸೌ ತೃತೀಯಂ ಸವನಂ ಲೋಕಃ ಸಾಮ ಚ ರೈವತಂ ।
ವೈರೂಪಂ ಚೈವ ವರ್ಷಾಶ್ಚ ಶಿಶಿರೋಽಥ ಋತುಸ್ತಥಾ ॥ ೧೩ ॥

ತ್ರಯಸ್ತ್ರಿಂಶಶ್ಚ ಯಃ ಸ್ತೋಮಃ ಕ್ಲೃಪ್ತ್ಯಾ ಸಪ್ತದಶಶ್ಚ ಯಃ ।
ಛಂದಶ್ಚ ಜಗತೀ ನಾಮ್ನಾ ಕಥಾತಿಛಂದಸಶ್ಚ ಯಾಃ ॥ ೧೪ ॥

ಪೌರುಷಂ ಚಾಹುರಸ್ಯೈತತ್ಸರ್ವಮೇವ ತು ಪೌರುಷಂ ।
ಏತಸ್ಯೈವ ತು ವಿಜ್ಞೇಯಾ ದೇವಾಃ ಸಂಸ್ತವಿಕಾಸ್ತ್ರಯಃ ॥ ೧೫ ॥

ಚಂದ್ರಮಾಶ್ಚೈವ ವಾಯುಶ್ಚ ಯಂ ಚ ಸಂವತ್ಸರಂ ವಿದುಃ ।
ಕೇಚಿತ್ತು ನಿರ್ವಪಂತ್ಯಸ್ಯ ಸೌರ್ಯವೈಶ್ವಾನರಂ ಹವಿಃ ॥ ೧೬ ॥

13. ತೃತೀಯಸವನ (ಸಾಯಂಕಾಲದಲ್ಲಿ ಸೋಮರಸವನ್ನು ಹಿಂಡುವ ಯಜ್ಞಾಂಗಕರ್ಮ), ಸ್ವರ್ಗಲೋಕ, ರೈವತಸಾಮ (ಸಾಮಮಂತ್ರವಿಶೇಷ), ವೈರೂಪಸಾಮ (ಸಾಮಮಂತ್ರವಿಶೇಷ) ವರ್ಷಋತು, ಶಿಶಿರಋತು,

14. ತ್ರಯಸ್ತ್ರಿಂಶಸ್ತೋಮ, ಸಪ್ತದಶಸ್ತೋಮ, ಜಗತೀಛಂದಸ್ಸು, ಅತಿಛಂದಃ ಎಂಬ ಛಂದಸ್ಸು. ಇವೆಲ್ಲವೂ ದ್ಯುಸ್ಥಾನದೇವತೆಗಳು.

15. ಪುರುಷಸಂಬಂಧವಾದ ಸಕಲ ಜಗತ್ತು (ಪುರುಷ ಎಂದರೆ ಪ್ರಜಾಪತಿಯಿಂದ ಸೃಷ್ಟವಾದ ಸಕಲ ಜಗತ್ತೂ) ಸೂರ್ಯನೊಡನೆ ಸಂಸ್ತವಿಕವಾಗಿ (ಜತೆಯಲ್ಲಿ) ಸ್ತುತಿಸಲ್ಪಡುವ ಮೂರು ದೇವತೆಗಳು, ಇವರೆಲ್ಲರೂ ದ್ಯುಸ್ಥಾನದೇವತೆಯಾದ ಸೂರ್ಯನಿಗೆ ಸಂಬಂಧಪಟ್ಟವರು. (ಆ ಮೂರು ದೇವತೆಗಳು ಯಾರೆಂದರೆ)

16. ಚಂದ್ರ, ವಾಯು, ಸಂವತ್ಸರ ಎಂಬುವರೇ ಆ ಮೂರು ಮಂದಿ ದೇವತೆಗಳು (ಸೂರ್ಯಾಚಂದ್ರಾಮಸೌ ಇತ್ಯಾದಿ) ಕೆಲವರು ಸೂರ್ಯನನ್ನುದ್ದೇಶಿಸಿ ಸೌರ್ಯವೈಶ್ವಾರವೆಂಬ (ಸೂರ್ಯರೂಪದಿಂದಿರುವ ವೈಶ್ವಾನರ) ಹವಿಸ್ಸನ್ನು ಹೋಮಮಾಡುವರು.

13. That (heavenly) world, the third (Soma) pressing, the Raivata and the Vairupa chant (ಸಾಮನ್) and the Rains as well as the Cold Season ;

14. and the thirty-threefold Stoma and that which in arrangement (ಕ್ಲೃಪ್ತ್ಯಾ) is seventeenfold ; and the metre called Jagati as well as the Atichandas metres.

15. And what relates to Purusa, they say, is his (ಅಸ್ಯ) now all this (universe : ಏತತ್ ಸರ್ವಂ) is related to Purusa. Three gods are to be recognized) as associated with him (ಏತಸ್ಯ); in praise ;—

16. (viz) the Moon and Wind (ವಾಯು) and that which is regarded as the Year (ಸಂವತ್ಸರ). Now some offer to him an oblation addressed to Surya and Vaisvanara.

ಸೌರ್ಯವೈಶ್ವಾನರೀಯಂ ಹಿ ತತ್ಸೂಕ್ತಮಿವ ದೃಶ್ಯತೇ |
ಋಗರ್ಧರ್ಚೋಽಥವಾ ಪಾದೋ ದ್ವ್ಯೃಚೋ ವಾ ಯದಿ ವಾ ತ್ರ್ಯೃಚಃ || ೧೭ ||

ಅನೇನ ತು ಪ್ರವಾದೇನ ದೃಷ್ಟ್ವಾ ಮೂರ್ಧನ್ವತಾ ಸ್ತುತಿಃ |
ಸೂರ್ಯವೈಶ್ವಾನರಾಗ್ನೀನಾಮೈಕಾತ್ಮ್ಯಮಿಹ ದೃಶ್ಯತೇ || ೧೮ ||

ಹರಣಂ ತು ರಸಸ್ಯೈತತ್ಕರ್ಮಾಮುತ್ರ ಚ ರಶ್ಮಿಭಿಃ |
ಯೇನ ನಾತಿವಿಜಾನಂತಿ ಸರ್ವಭೂತಾನಿ ಚಕ್ಷುಷಾ || ೧೯ ||

ವಿಭಾಗನಿಮಮೇತೇಷಾಂ ವಿಭೂತಿಸ್ಥಾನಸಂಭವಂ |
ಸಂಯಗ್ವಿಜಾನನ್ಮಂತ್ರೇಷು ತಂ ತು ಕರ್ಮಸು ಯೋಜಯೇತ್ || ೨೦ ||

### ಸೌರ್ಯವೈಶ್ವಾನರನೆಂದರೆ ಅಗ್ನಿಯ ರೂಪಾಂತರ

17. ಸೌರ್ಯವೈಶ್ವಾನರವೆಂಬ ಸೂಕ್ತದಲ್ಲಿ ಸೂರ್ಯನನ್ನು ವೈಶ್ವಾನರನೆಂದು ಸಂಬೋಧಿಸಿ ಸ್ತುತಿಸಲಾಗಿರುವುದು (ಋ. ಸಂ. 10 ನೇ ಮಂಡಲದ 88 ನೇ ಸೂಕ್ತ. **ಹವಿಷ್ಪಾಂತಮಜರಂ** ಇತ್ಯಾದಿ) ಈ ವಿಧವಾದ ಸೂಕ್ತದಲ್ಲಿ ಒಂದು ಋಕ್ಕು, ಅರ್ಧಋಕ್ಕು, ಅಥವಾ ಪಾದ, ಎರಡು ಋಕ್ಕುಗಳು, ಮೂರು ಋಕ್ಕುಗಳಲ್ಲಿಯೂ ಸೂರ್ಯನನ್ನು ವೈಶ್ವಾನರನೆಂದೇ ಸ್ತುತಿಸಲಾಗಿರುವುದು.

18. ಈ ಸ್ತುತಿಯಲ್ಲಿ ಮೂರ್ಧನ್ ಎಂಬ ಶಬ್ದಪ್ರಯೋಗದಿಂದ (5 ನೇ ಋಕ್ಕಿನಲ್ಲಿ) ಅವನ ಸ್ತುತಿಯು ವಿಶದವಾಗಿರುವುದು. ಇಲ್ಲಿ ಎಂದರೆ ಈ ಸೂಕ್ತದಲ್ಲಿ ಸೂರ್ಯ, ವೈಶ್ವಾನರ, ಅಗ್ನಿ ಎಂಬ ಮೂರು ದೇವತೆಗಳಿಗೂ ತಾದಾತ್ಮ್ಯವನ್ನು (ಮೂರು ದೇವತೆಗಳೂ ಒಂದೇ ಎಂದು) ಹೇಳಿರುವುದು ಕಂಡುಬರುವುದು.

19. ರಸಾಹರಣವೇ ಎಂದರೆ ರಶ್ಮಿಗಳ ಮೂಲಕ ಜಲವನ್ನು ಹೀರುವುದೇ (ಸೂರ್ಯನ) ಮುಖ್ಯ ಕರ್ಮವು. ಇದನ್ನು ಸರ್ವಪ್ರಾಣಿಗಳೂ ತಮ್ಮ ಕಣ್ಣುಗಳಿಂದ ನೋಡಲು ಸಮರ್ಥರಲ್ಲ.

20. ಈ ಸೂಕ್ತದ ಮಂತ್ರಗಳಲ್ಲಿ ವರ್ಣಿಸಿರುವ ಮಾಹಾತ್ಮ್ಯ ಸ್ಥಾನ ಮೊದಲಾದ ಗುಣಗಳಿಂದ ಈ ಮೂರು ದೇವತೆಗಳನ್ನು (ಸೂರ್ಯ, ವೈಶ್ವಾನರ, ಅಗ್ನಿ) ಸ್ಪಷ್ಟವಾಗಿ ತಿಳಿಯಬಹುದು. ಮಂತ್ರಜ್ಞನಾದ ಪುರುಷನು ಆಯಾ

### 4. Surya and Vaisvanara a form of Agni.

17. For (the hymn) addressed to Surya and Vaisvanara appears like a hymn of his (Surya's : ತತ್ ಸೂಕ್ತಂ) (whether) a stanza, a hemistich, or a verse, or a couplet, or a triplet (is regarded).

18. But by that expression containing the word 'head' (his) praise is apparent. Here the identity of Surya, Vaisvanara, and Agni appears.

19. Now the holding (ಹರಣ) of moisture in that (celestial) world (ಅಮೃತ) also by means of (his) rays-this (his) function: therefore all beings fail to distinguish (him) very clearly by the eye.

20. Now distinguishing correctly in the formulas this distribution of these (three deities) which arises from (their different) powers and spheres.

ಅಧ್ಯಾಪಯನ್ನಧೀಯಾನೋ ಮಂತ್ರಂ ಚೈವಾನುಕೀರ್ತಯನ್ ।
ಸ್ಥಾನಂ ಸಾಲೋಕ್ಯಂ ಸಾಯುಜ್ಯಮೇತೇಷಾಮೇವ ಗಚ್ಛತಿ ॥ ೨೧ ॥
ಅಗ್ನೇಸ್ತು ಯಾನಿ ಸೂಕ್ತಾನಿ ಪಂಚ ನಾಮಾನಿ ಕಾರವಃ ।
ಷಡ್ವಿಂಶತಿಸ್ತಥೇಂದ್ರಸ್ಯ ಪ್ರಾಹುಃ ಸೂರ್ಯಸ್ಯ ಸಪ್ತ ಚ ॥ ೨೨ ॥
ತೇಷಾಂ ಪೃಥಙ್ನಿರ್ವಚನಮೇಕೈಕಸ್ಯೇಹ ಕರ್ಮಜಂ ।
ಉಚ್ಯಮಾನಂ ಯಥಾನ್ಯಾಯಂ ಶೃಣುಧ್ವಮಖಿಲಂ ಮಯಾ ॥ ೨೩ ॥
ಜಾತೋ ಯದಗ್ರೇ ಭೂತಾನಾಮಗ್ರಣೀರಧ್ವರೇ ಚ ಯತ್ ।
ನಾಮ್ನಾ ಸಂನಯತೇ ವಾಂಗಂ ಸ್ತುತೋಽಗ್ನಿರಿತಿ ಸೂರಿಭಿಃ ॥ ೨೪ ॥

ಮಂತ್ರಗಳಲ್ಲಿ ಪ್ರತ್ಯೇಕವಾಗಿ ಹೇಳಿರುವ ಗುಣವರ್ಣನೆಯ ಪ್ರಕಾರ ಆಯಾ ಮಂತ್ರಗಳನ್ನು ಆಯಾ ಕರ್ಮಗಳಲ್ಲಿ ಸಂದರ್ಭಾನುಸಾರ ಪ್ರಯೋಗಿಸಬೇಕು.

21. ಮಂತ್ರಗಳನ್ನು ತಾನು ಅಧ್ಯಯನ (ಕಲಿತುಕೊಳ್ಳುವುದು) ಮಾಡುವುದರಿಂದಲೂ, ಇತರರಿಗೆ ಹೇಳಿಕೊಡುವುದರಿಂದಲೂ, ಅವುಗಳನ್ನು ಪಠಿಸುವುದರಂದಲೂ ಪುರುಷನು ಈ ದೇವತೆಗಳ ಸ್ಥಾನವನ್ನೂ, ಲೋಕವನ್ನೂ, ಅವರೊಡನೆ ಸಾಯುಜ್ಯವನ್ನೂ ಪಡೆಯಲು ಸಮರ್ಥನಾಗುವನು.

**ಅಗ್ನಿಯ ಐದು ಹೆಸರುಗಳು, ಅಗ್ನಿಶಬ್ದದ ರೂಪನಿಷ್ಪತ್ತಿ, ದ್ರವಿಣೋದಾಃ ಮತ್ತು ತನೂನಪಾತ್ ಎಂಬ ಶಬ್ದಗಳ ನಿಷ್ಪತ್ತಿ**

22. ಸೂಕ್ತಗಳಲ್ಲಿ ಕವಿಗಳು (ಋಷಿಗಳು) ಅಗ್ನಿಯನ್ನು ಐದು ಹೆಸರುಗಳಿಂದಲೂ, ಇಂದ್ರನನ್ನು ಇಪ್ಪತ್ತಾರು ಹೆಸರುಗಳಿಂದಲೂ ಸೂರ್ಯನನ್ನು ಏಳು ಹೆಸರುಗಳಿಂದಲೂ ಸ್ತುತಿಸಿರುವರು.

23. ಆ ಹೆಸರುಗಳ ನಿರ್ವಚನವನ್ನೂ (ರೂಪನಿಷ್ಪತ್ತಿಯನ್ನು) ಆ ಹೆಸರು ಆ ದೇವತೆಯ ಕರ್ಮಕ್ಕನುಸಾರವಾಗಿ ಹೇಗೆ ಬಂದಿತೆಂಬುವುದನ್ನೂ ಒಂದೊಂದಾಗಿ ವಿವರಿಸುವೆನು. ಅವೆಲ್ಲವನ್ನೂ ಮನಸ್ಸಿಟ್ಟು ಕೇಳಿ,

24. ಅಗ್ನಿಶಬ್ದನಿರ್ವಚನ—ಸಮಸ್ತ ಪ್ರಾಣಿಗಳ ಉತ್ಪತ್ತಿಗಿಂತಲೂ ಮೊದಲೇ ಉತ್ಪನ್ನನಾದುದರಿಂದಲೂ, ಯಜ್ಞದಲ್ಲಿ ಅಗ್ನಿಗೇ ಮುಖ್ಯಭಾಗವಿರುವುದರಿಂದಲೂ ಎಂದರೆ ಯಜ್ಞಕ್ಕೆ ನಾಯಕನಾಗಿರುವುದರಿಂದಲೂ ತನ್ನ ಶರೀರ

21. Teaching, studying, and reciting a formula (addressed to them) a man attains to the sphere of, to identity of the world (and) intimate union with, these same (gods).

### 5. Five names of Agni, Derivation of Agni, Dravinodas, Tanunapat.

22. Now as to the hymns, the poets proclaim (in them) five names of Agni, twenty-six of Indra and seven of Surya.

23. The seperate explanation, based on the function (of the god), of each of these here, listen to as duly stated by me in its entirety.

24. Becanse he was born at the beginning (ಅಗ್ರೇ) of beings, and because he is a leader (ಅಗ್ರಣಿ) at the sacrifice, or (because) he unites (his) body (ಅಂಗಂ ಸಾಮ್ನಿ) he is praised by sages under the name of 'Agni'.

**ದ್ರವಿಣಂ ಧನಂ ಬಲಂ ವಾಪಿ ಪ್ರಾಯಚ್ಛದ್ಯೇನ ಕರ್ಮಣಾ |**
**ತತ್ಕರ್ಮ ದೃಷ್ಟ್ವಾತ್ರ ಕುತ್ಸಸ್ತು ಪ್ರಾಹೈನಂ ದ್ರವಿಣೋದಸಂ** || ೨೫ ||
**ಅಯಂ ತನೂನಪಾದಗ್ನಿರಸೌ ಹಿ ತನನಾತ್ತನುಃ |**
**ತತಸ್ತು ಮಧ್ಯಮೋ ಜಜ್ಞೇ ಸ್ಥಾನೇಽಯಂ ಮಧ್ಯಮಾತ್ತತಃ** || ೨೬ ||
**ಅನಂತರಾಂ ಪ್ರಜಾಮಾಹುರ್ನಪಾದಿತಿ ಕೃಪಣ್ಯವಃ |**
**ನಪಾದಮುಷ್ಯ ಚೈವಾಯಮಗ್ನಿಸ್ತೇನ ತನೂನಪಾತ್** || ೨೭ ||
**ಪೃಥಕ್ತ್ವೇನ ಸಮಾಸೈಸ್ತು ಯಜ್ಞೇ ಯಚ್ಛಸ್ಯತೇ ನೃಭಿಃ |**
**ಸ್ತುವಂತ್ಯಾಪ್ರೀಷು ತೇನೇಮಂ ನರಾಶಂಸಂ ತು ಕಾರವಃ** || ೨೮ ||

ವನ್ನು ಯಜ್ಞಾದಿಕರ್ಮಗಳಲ್ಲಿ ಸೇರಿಸುವುದರಿಂದಲೂ ಈ ದೇವತೆಯನ್ನು ಅಗ್ನಿಯೆಂಬ ಹೆಸರಿನಿಂದ ಪ್ರಾಜ್ಞರು ಸ್ತುತಿಸುವರು.

25. **ದ್ರವಿಣೋದಾಃ** ಶಬ್ದದ ನಿರ್ವಚನ — ಯಾವ ಯಜ್ಞಕರ್ಮಾನುಷ್ಠಾನದಿಂದ ಪ್ರೀತನಾದ ಅಗ್ನಿಯು ದ್ರವಿಣ, ಧನ, ಅಥವಾ ಬಲವನ್ನು ಯಜಮಾನನಿಗೆ ಅನುಗ್ರಹಿಸಿದನೋ ಅಂತಹ ಕರ್ಮವನ್ನು ನೋಡಿ ಕುತ್ಸನೆಂಬ ಋಷಿಯು ಈ ಅಗ್ನಿಯನ್ನು ದ್ರವಿಣೋದನೆಂದು ಹೇಳಿರುವನು.

26. **ತನೂನಪಾತ್** ಶಬ್ದದ ನಿರ್ವಚನ — ಈ ಪಾರ್ಥಿವಾಗ್ನಿಗೆ **ತನೂನಪಾತ್** ಎಂದು ಹೆಸರು. ಹೇಗೆಂದರೆ **ತನನ** ಶಬ್ದಕ್ಕೆ ವಿಸ್ತಾರವೆಂದರ್ಥವಿರುವುದು. ಸ್ವರ್ಗದಲ್ಲಿರುವ ಅಗ್ನಿಯಿಂದ ಮಧ್ಯಮಸ್ಥಾನದ ಅಗ್ನಿಯೂ, ಮಧ್ಯಮಸ್ಥಾನದ ಅಗ್ನಿಯಿಂದ ಈ ಪಾರ್ಥಿವಾಗ್ನಿಯೂ ಉತ್ಪನ್ನನಾದನು (ಆದ್ದರಿಂದ ಸ್ವರ್ಗಾಗ್ನಿಗೆ ಪಾರ್ಥಿವಾಗ್ನಿಯು ಮೊಮ್ಮಗನು. **ತನೂನಪಾತ್** ಶಬ್ದಕ್ಕೆ ಮೊಮ್ಮಗನೆಂದರ್ಥವು,)

27. ಸ್ತೋತ್ರಕರ್ತರು ಸ್ವರ್ಗಾಗ್ನಿಯ ಪುತ್ರನನ್ನು **ನಪಾತ್** ಎಂದೂ ಆ ಪುತ್ರನ (ಮಧ್ಯಮಾಗ್ನಿಯ) ತನುವಿನಿಂದ (ಶರೀರದಿಂದ) ಉತ್ಪನ್ನನಾದ ಪಾರ್ಥಿವಾಗ್ನಿಯನ್ನು **ತನೂನಪಾತ್** (ಮೊಮ್ಮಗ) ಎಂದೂ ಕರೆಯುವರು.

**ನರಾಶಂಸ, ಪವಮಾನ, ಜಾತವೇದಾಃ ಎಂಬ ದೇವತೆಗಳು**

28. **ನರಾಶಂಸಶಬ್ದದ** ನಿರ್ವಚನ-ಯಜ್ಞಾದಿಗಳಲ್ಲಿ ಜನರು ಬೇರೆಬೇರೆಯಾಗಿಯೂ ಒಟ್ಟಿಗೆ ಸೇರಿಯೂ

---

25. Kutsa observing the action by wuich he bestowed dravina wealth or strength—proclaimed him as ದ್ರವಿಣೋದಾಃ (1)

26. This (terrestrial) Agni is Tanunapat (2). For that (celcstial) Agni is tanu from tanana (extending); trom him the middle (Agni) was born, then from the middle one, in (his proper) place, this (terrestrial) one.

**6. Narasamsa, Pavamana, Jatavedas.**

27. The poets call an immediate descendant (ಪ್ರಜಾಂ) grandson (ನಪಾತ್) and this (terrestrial) Agni is the grandson of that (celestrial one ; hence he is Tanunapat.

28. Because he is individually (ಪೃಥಕ್ತ್ವೇನ) lauded (ಶಂಸ) by men (ನರ) combined at the sacrifice, therefore poets praise this (ಅಗ್ನಿ) as Narasamsa (3) in Apri hymns.

ಪುನಾತಿ ಯದಿದಂ ವಿಶ್ವಮೇವಾಗ್ನಿಃ ಪಾರ್ಥಿವೋಽಥ ಚ |
ವೈಖಾನಸರ್ಷಿಭಿಸ್ತೇನ ಪವಮಾನ ಇತಿ ಸ್ತುತಃ || ೨೯ ||
ಭೂತಾನಿ ವೇದ ಯಜ್ಜಾತೋ ಜಾತವೇದಾಥ ಕಥ್ಯತೇ |
ಯಚ್ಚೈಷ ಜಾತವಿದ್ಯೋಽಭೂದ್ವಿತ್ತಂ ಜಾತೋಽಧಿವೇತ್ತಿ ವಾ || ೩೦ ||
ವಿದ್ಯತೇ ಸರ್ವಭೂತೈರ್ಹಿ ಯದ್ವಾ ಜಾತಃ ಪುನಃ ಪುನಃ |
ತೇನೈಷ ಮಧ್ಯಭಾಗೇಂದ್ರೋ ಜಾತವೇದಾ ಇತಿ ಸ್ತುತಃ || ೩೧ ||
ಅಣಿಷ್ಠ ಏಷ ಯತ್ತು ತ್ರೀನ್ವ್ಯಾಪ್ಯೈಕೋ ವ್ಯೋಮ್ನಿ ತಿಷ್ಠತಿ |

ಈ ಅಗ್ನಿಯನ್ನು ಸ್ತುತಿಸುವುದರಿಂದಲೂ, ಸ್ತೋತೃಗಳು ಆಪ್ರೀಸೂಕ್ತಗಳಲ್ಲಿ ಈ ಅಗ್ನಿಯನ್ನು ನರಾಶಂಸನೆಂಬ ಹೆಸರಿನಿಂದ ಸ್ತುತಿಸುವುದರಿಂದಲೂ ಈ ಅಗ್ನಿಗೆ ನರಾಶಂಸನೆಂಬ ಹೆಸರು ಬಂದಿರುವುದು.

29. **ಪವಮಾನ**ಶಬ್ದನಿರ್ವಚನ—ಈ ಪಾರ್ಥಿವಾಗ್ನಿಯು ಈ ಸಮಸ್ತ ವಿಶ್ವವನ್ನೂ, ಶುದ್ಧಗೊಳಿಸುವವನಾದುದರಿಂದಲೂ (ಪುನಾತಿ–ಶುದ್ಧಗೊಳಿಸುತ್ತಾನೆ), ವೈಖಾನಸರೆಂಬ ಋಷಿಗಳು ಇವನನ್ನು ಪವಮಾನ ಎಂಬ ಹೆಸರಿನಿಂದ ಸ್ತುತಿಸಿರುವುದರಿಂದಲೂ ಈ ಪಾರ್ಥಿವಾಗ್ನಿಗೆ ಪವಮಾನನೆಂಬ ಹೆಸರು ಬಂದಿರುವುದು.

30. **ಜಾತವೇದ**ಶ್ಶಬ್ದನಿರ್ವಚನ—ಅಗ್ನಿಯು ಉತ್ಪನ್ನನಾದ ಕೂಡಲೇ ಸಮಸ್ತ ಪ್ರಾಣಿಗಳನ್ನೂ ತಿಳಿದುಕೊಳ್ಳುವುದರಿಂದ ಅಗ್ನಿಗೆ ಜಾತವೇದಾಃ ಎಂಬ ಹೆಸರು ಅಥವಾ ಈ ಅಗ್ನಿಯಲ್ಲಿ ವಿದ್ಯವು (ತಿಳುವಳಿಕೆ, ಜ್ಞಾನ)ಅಡಗಿರುವುದರಿಂದ ಅಥವಾ ಹುಟ್ಟಿದಕೂಡಲೇ ವಿತ್ತವನ್ನು ಎಂದರೆ ಧನವನ್ನು ತಿಳಿದಿರುವುದರಿಂದಲೂ ಅಗ್ನಿಗೆ ಜಾತವೇದಾಃ ಎಂದು ಹೆಸರು.

31. ಅಥವಾ (ಯಜ್ಞಾದಿಗಳಲ್ಲಿ) ಪುನಃಪುನಃ (ಅನೇಕವೇಳೆ) ಉತ್ಪನ್ನನಾದಾಗ ಸರ್ವಪ್ರಾಣಿಗಳಿಂದಲೂ (ಜನರಿಂದಲೂ) ತಿಳಿಯಲ್ಪಡುವನು ಮತ್ತು ಮಧ್ಯಮಸ್ಥಾನದೇವತೆಯಾದ ಇಂದ್ರನಂತೆ ಸರ್ವರಿಂದಲೂ ಜಾತವೇದಾಃ ಎಂದು ಸ್ತುತಿಸಲ್ಪಡುವನು. ಈ ಕಾರಣದಿಂದಲೂ ಅಗ್ನಿಗೆ **ಜಾತವೇದಾಃ** ಎಂದು ಹೆಸರು.

**ಇಂದ್ರನ ಇಪ್ಪತ್ತಾರು ನಾಮಗಳು; ವಾಯು, ವರುಣ, ರುದ್ರ ಮೊದಲಾದವರು**

32. **ವಾಯು**ಶಬ್ದನಿರ್ವಚನ—ಈ ದೇವತೆಯು ಬಹಳ ಸೂಕ್ಷ್ಮರೂಪದಿಂದ ಅಂತರಿಕ್ಷದಲ್ಲಿದ್ದು ಮೂರು

29. And again because the terrestrial Agni purifies (ಪುನಾತಿ) this uni-verse, therefore he is praised by hermit seers as (the Purifier) Pavamana (4).

30. Again, because when born (ಜಾತ) he knows (ವೇದ) beings he is spoken of as Jatavedas (5), and because he became one in whom knowledge (ವಿದ್ಯ) was produced (ಜಾತ) or (because) when born (ಜಾತ) he knows (ಅಧಿ ವೇತ್ತಿ) wealth;

31. or because when born (ಜಾತ) again and again he is known(ವಿದ್ಯತೇ) by all beings, therefore, he, as the Indra of the middle part (of the uni-verse), is praised as Jatavedas.

**7. The twenty-six names of Indra: Vayu, Varuna, Rudra, Indra.**

32. But because he, in a most subtle form. abides in the air as the

ತೇನೈನಮೃಷಯೋಽರ್ಚಂತಃ ಕರ್ಮಣಾ ವಾಯುಮಬ್ರುವನ್ || ೩೨ ||
ತ್ರೀಣೀಮಾನ್ಯಾವೃಣೋತ್ಯೇಕೋ ಮೂರ್ತೇನ ತು ರಸೇನ ಯತ್ |
ತೆಯ್ನೈನಂ ವರುಣಂ ಶಕ್ತ್ಯಾ ಸ್ತುತಿಷ್ವಾಹುಃ ಕೃಪಣ್ಯವಃ || ೩೩ ||
ಅರೋದೀದಂತರಿಕ್ಷೇ ಯದ್ವಿದ್ಯುದ್ವೃಷ್ಟಿಂ ದದನ್ನೃಣಾಂ |
ಚತುರ್ಭಿರ್ಋಷಿಭಿಸ್ತೇನ ರುದ್ರ ಇತ್ಯಭಿಸಂಸ್ತುತಃ || ೩೪ ||
ಚತುರ್ವಿಧಾನಾಂ ಭೂತಾನಾಂ ಪ್ರಾಣೋ ಭೂತ್ವಾ ವ್ಯವಸ್ಥಿತಃ |
ಈಷ್ಟೇ ಚೈವಾಸ್ಯ ಸರ್ವಸ್ಯ ತೇನೇಂದ್ರ ಇತಿ ಸ ಸ್ಮೃತಃ || ೩೫ ||
ಇರಾಂ ದೃಣಾತಿ ಯತ್ಕಾಲೇ ಮರುದ್ಭಿಃ ಸಹಿತೋಽಮ್ಬರೇ |

ಲೋಕಗಳಲ್ಲಿಯೂ ವ್ಯಾಪಿಸಿರುವನು. ಅವನ ಈ ವಿಧವಾದ ಕರ್ಮದಿಂದ ಋಷಿಗಳನ್ನು ಅವನನ್ನು ವಾಯುವೆಂದು ಕರೆಯುತ್ತಾ ಪೂಜಿಸುವರು.

33. **ವರುಣಶಬ್ದನಿರ್ವಚನ**-ವರುಣನೆಂಬ ದೇವತೆಯು ಈ ಮೂರು ಲೋಕಗಳನ್ನೂ ತನ್ನ ದ್ರವಸ್ವರೂಪದಿಂದ ಆವರಿಸಿರುವುದರಿಂದ ಸ್ತುತಿಕರ್ತರು ಈ ದೇವತೆಯನ್ನು ತಮ್ಮ ಸ್ತುತಿಗಳಲ್ಲಿ ವರುಣನೆಂದು ಪ್ರಶಂಸಿಸಿರುವರು.

34. **ರುದ್ರಶಬ್ದನಿರ್ವಚನ**—ಅಂತರಿಕ್ಷದಲ್ಲಿ ಘರ್ಜಿಸುವಂತೆ ಶಬ್ದಮಾಡುತ್ತಾ ಮಿಂಚಿನಿಂದ ಸಹಿತವಾಗಿ ವೃಷ್ಟಿಯನ್ನು ಮನುಷ್ಯರ ಉಪಕಾರಾರ್ಥವಾಗಿ ಸುರಿಸುವುದರಿಂದ ಈ ದೇವತೆಯನ್ನು ರುದ್ರನೆಂದು ನಾಲ್ಕುಜನ ಋಷಿಗಳು ಸ್ತುತಿಸಿರುವರು.

35. **ಇಂದ್ರಶಬ್ದನಿರ್ವಚನ** — ನಾಲ್ಕುವಿಧ ಎಂದರೆ ಅಂಡಜಾದಿ ನಾಲ್ಕುವರ್ಗದ ಪ್ರಾಣಿಗಳಲ್ಲಿಯೂ ಪ್ರಾಣಸ್ವರೂಪನಾಗಿ (ಅಂತರಾತ್ಮನಾಗಿ) ಇದ್ದುಕೊಂಡು ಅವುಗಳ ಸಮಸ್ತ ವ್ಯಾಪಾರಗಳನ್ನೂ ನಿಯಮಿಸುತ್ತಾ ಅವುಗಳಿಗೆ ಸ್ವಾಮಿಯಾಗಿರುವುದರಿಂದ ಇವನಿಗೆ ಇಂದ್ರನೆಂದು ಹೆಸರು.

36. ಮರುತ್ತುಗಳಿಂದ ಸಹಿತನಾಗಿ ಅಂತರಿಕ್ಷದಲ್ಲಿ ವೃಷ್ಟಿಯನ್ನು ಸುರಿಸುವಾಗ ಮಹಾಧ್ವನಿ (ಸಿಡಿಲು,

---

one pervading (ವ್ಯಾಪ್ಯ) the three (worlds), the seers adoring (him) by reason of this function, called him Vayu (1).

33, But because with concrete moisture he alone covers (ವೃಣೋತಿ) these three (worlds), the singers in their praises speak of him, by reason of this faculty, as Varuna (2).

34. Because he roared (ಅರೋದೀತ್) in the air, giving rain with lightning to men, therefore he is highly praised by four seers as Rudra (3).

35. And having become the established (source of) life of the four kinds of beings, he rules (ಈಷ್ಟೇ) over this universe ; therefore he has been named Indra (4).

36. Because he, associated with the Maruts, at the (proper) time

ರವೇಣ ಮಹತಾ ಯುಕ್ತಸ್ತೇನೇಂದ್ರಮೃಷಯೋಽಬ್ರುವನ್ ॥ ೩೬ ॥
ಯದಿಮಾಂ ಪ್ರಾರ್ಜಯತ್ಯೇಕೋ ರಸೇನಾಂಬರಜೇನ ಗಾಂ ।
ಕಾಲೇಽತ್ರಿರೌರ್ವಶಶ್ಚರ್ಷೀ ತೇನ ಪರ್ಜನ್ಯಮಾಹತುಃ ॥ ೩೭ ॥
ತರ್ಪಯತ್ಯೇಷ ಯಲ್ಲೋಕಾಞ್ಜನ್ಯೋ ಜನಹಿತಶ್ಚ ಯತ್ ।
ಪರೋ ಜೇತಾ ಜನಯಿತಾ ಯದ್ವಾಗ್ನೇಯಸ್ತತೋ ಜಗೌ ॥ ೩೮ ॥
ಬೃಹಂತೌ ಪಾತಿ ಯಲ್ಲೋಕಾವೇಷ ದ್ವೌ ಮಧ್ಯಮೋತ್ತಮೌ ।
ಬೃಹತಾ ಕರ್ಮಣಾ ತೇನ ಬೃಹಸ್ಪತಿರಿತೀಳಿತಃ ॥ ೩೯ ॥

ಗುಡುಗು) ಯಿಂದ ಉದಕಭರಿತವಾದ ಮೇಘವನ್ನು ಸೀಳುವುದರಿಂದ ಈ ದೇವತೆಯನ್ನು ಇಂದ್ರನೆಂದು ಋಷಿಗಳು ಕರೆಯುವರು.

**ಪರ್ಜನ್ಯ, ಬೃಹಸ್ಪತಿ, ಬ್ರಹ್ಮಣಸ್ಪತಿ, ಕ್ಷೇತ್ರಸ್ಯಪತಿ ಇತ್ಯಾದಿ**

37. **ಪರ್ಜನ್ಯಶಬ್ದನಿರ್ವಚನ**—ಅಂತರಿಕ್ಷದಲ್ಲಿ ಮೇಘರೂಪವಾಗಿ ಸಂಗೃಹೀತವಾದ ರಸ ಅಥವಾ ಜಲದಿಂದ ಭೂಮಿಯನ್ನು ವರ್ಷಾಕಾಲದಲ್ಲಿ ವೃಷ್ಟಿಯ ಮೂಲಕ ತೊಯ್ಯುವಂತೆ ಮಾಡುವ ಈ ಏಕಮಾತ್ರದೇವತೆಯನ್ನು ಪರ್ಜನ್ಯನೆಂಬ ಹೆಸರಿನಿಂದ ಅತ್ರಿಋಷಿಯೂ ಊರ್ವಶೀಪುತ್ರನಾದ ವಸಿಷ್ಠಋಷಿಯೂ ಕರೆಯುವರು.

38. ಈ ದೇವನು (ಪರ್ಜನ್ಯನು) ಲೋಕಗಳನ್ನು(ವೃಷ್ಟಿಯಿಂದ)ತೃಪ್ತಿಪಡಿಸುವವನಾದ್ದರಿಂದಲೂ ಜನರಿಗೆ ಹಿತವನ್ನುಂಟುಮಾಡುವವನಾದ್ದರಿಂದಲೂ, ಶ್ರೇಷ್ಠನಾದ ಜಯಶಾಲಿ ಮತ್ತು (ಹರ್ಷ) ಪ್ರದನಾದ್ದರಿಂದಲೂ ಇವನನ್ನು ಅಗ್ನಿಪುತ್ರನಾದ ಕುಮಾರನೆಂಬ ಋಷಿಯು ಪರ್ಜನ್ಯನೆಂದು ಸ್ತುತಿಸಿರುವನು.

39. **ಬೃಹಸ್ಪತಿ ಶಬ್ದನಿರ್ವಚನ**—ಬೃಹತ್ತಾದ (ದೊಡ್ಡದಾದ) ಸ್ವರ್ಗಾಂತರಿಕ್ಷಗಳೆಂಬ ಎರಡು ಲೋಕಗಳನ್ನು ತನ್ನ ಶ್ರೇಷ್ಠವಾದ ಕರ್ಮದಿಂದ ರಕ್ಷಿಸುವವನಾದ್ದರಿಂದ ಈ ದೇವತೆಯು ಬೃಹಸ್ಪತಿ ಎಂಬ ಹೆಸರಿನಿಂದ ಸ್ತುತಿಸಲ್ಪಟ್ಟಿರುವನು.

---

bursts open (ದೃಣಾತಿ) refreshment (ಇರಾಂ) in the sky, accompanied with great roar, therefore the seers called him Indra

**8. Parjanya, Brahaspati, Brahmanaspati, Ksetrasya pati, Rta.**

37. Because he alone endows (ಪ್ರಾರ್ಜಯತಿ) this earth at the (proper) time with moisture produced from the sky, therefore the seers Atri and the son of Urvasi (ವಸಿಷ್ಠ) speak of him as Parjanya (5).

38. Because he gladdens (ತರ್ಪಯತಿ) the worlds and because he is genial (ಜನ್ಯ) friendly to the people (ಜನ) (or because he is) a supreme (ಪರ) conqurer (ಜೇತಾ) or generator (ಜನಯಿತಾ) therefore (ಕುಮಾರ) Agneya sang (of him as ಪರ್ಜನ್ಯ).

39. Because he protects (ಪಾತಿ) the two great (ಬೃಹತ್) worlds, the middle and the highest, he is, by reason of this great function, lauded as Brhaspati (6).

ಬ್ರಹ್ಮ ವಾಗ್ಬ್ರಹ್ಮ ಸತ್ಯಂ ಚ ಬ್ರಹ್ಮ ಸರ್ವಮಿದಂ ಜಗತ್ ।
ಪಾತಾರಂ ಬ್ರಹ್ಮಣಸ್ತೇನ ಶೌನಹೋತ್ರಃ ಸ್ತುವಞ್ಜಗೌ ॥ ೪೦ ॥

ಅನ್ನಂ ಕ್ಷಿತಿಭ್ಯೋ ವಿದಧದ್ಯದೃತುಷ್ವವಿಶತ್ಕ್ಷಿತೌ ।
ತೇನೈನಮಾಹ ಕ್ಷೇತ್ರಸ್ಯ ವಾಮದೇವಃ ಸ್ತುವನ್ಪತಿಂ ॥ ೪೧ ॥

ಮನಸೇಮಂ ತು ಯದ್ದೃಶ್ಯಂ ಮಧ್ಯಮಂ ಲೋಕಮಾಶ್ರಿತಂ ।
ಶಂಸತ್ಸತ್ಯೇನ ಸತ್ಯೇ ವೈ ಸ ಏಷ ಸ್ತುತವಾನೃತಂ ॥ ೪೨ ॥

ರವೇಣಾನ್ತಾರಸೈಃ ಕ್ಷಿಪ್ತೈಃ ಸ್ಥಿತೋ ವ್ಯೋಮ್ನ್ಯೇಷ ಮಾಯಯಾ ।
ಋತಸ್ಯ ಶ್ಲೋಕ ಇತ್ಯೇಷ ಪುನಶ್ಚೈನಂ ತತೋಽಬ್ರವೀತ್ ॥ ೪೩ ॥

40. **ಬ್ರಹ್ಮಣಸ್ಪತಿ ಶಬ್ದನಿರ್ವಚನವು**—ವಾಕ್ಕೇ ಬ್ರಹ್ಮವು, ಸತ್ಯವೇ ಬ್ರಹ್ಮವು, ಈ ಸಮಸ್ತ ಪ್ರಪಂಚವೂ ಬ್ರಹ್ಮವೇ ಆಗಿರುವುದು. ಬ್ರಹ್ಮಸ್ವರೂಪವಾಗಿರುವ ಇವೆಲ್ಲವನ್ನೂ ರಕ್ಷಿಸುವವನಾದ್ದರಿಂದ ಈ ದೇವನನ್ನು ಬ್ರಹ್ಮಣಸ್ಪತಿ ಯೆಂಬ ಹೆಸರಿನಿಂದ ಶೌನಹೋತ್ರನು ಎಂದರೆ ಶುನಹೋತ್ರಪುತ್ರನಾದ ಗೃತ್ಸಮದನು ಸ್ತುತಿಸಿ ಗಾನಮಾಡಿರುವನು.

41. **ಕ್ಷೇತ್ರಸ್ಯ ಪತಿಯ** ವಿವರಣೆ—ಆಯಾ ಋತು (ಕಾಲ) ವಿನಲ್ಲಿ ಕ್ಷಿತಿಯನ್ನು (ಭೂಮಿಯನ್ನು) ಪ್ರವೇಶಿಸಿ ಭೂಮಿಯಲ್ಲಿರುವ ಜನರಿಗೆ ಅನ್ನಾದ್ಯಾಹಾರಗಳನ್ನು ಒದಗಿಸಿಕೊಡುವವನಾದ್ದರಿಂದ ಈ ದೇವನನ್ನು ಕ್ಷೇತ್ರಸ್ಯ ಪತಿಯೆಂದು (ಕ್ಷೇತ್ರಪಾಲಕ, ಭೂಮಿಗೆ, ಒಡೆಯ) ವಾಮದೇವಋಷಿಯು ಸ್ತುತಿಸಿರುವನು.

42. **ಋತ**—(ಸತ್ಯ) ಶಬ್ದವಾಚ್ಯನಾದ ಈ ದೇವನು ಮನಸ್ಸಿನಿಂದ ಮಾತ್ರ ತಿಳಿಯಲ್ಪಡುವವನು. ಮಧ್ಯಮ (ಅಂತರಿಕ್ಷ) ಲೋಕವನ್ನು ಆಶ್ರಯಿಸಿರುವನು. ಸತ್ಯಸ್ವರೂಪದಿಂದ ಸತ್ಯದಲ್ಲಿ ಅಡಗಿರುವನು. ಆದ್ದರಿಂದ ಈ ದೇವನನ್ನು ಋತ ಎಂಬ ಹೆಸರಿನಿಂದ ವಾಮದೇವಋಷಿಯು ಸ್ತುತಿಸಿರುವನು.

43. ತನ್ನ ಮಾಯಾಶಕ್ತಿಯಿಂದ ಅಂತರಿಕ್ಷದಲ್ಲಿ ಸಿಡಿಲು ಗುಡುಗಗಳಿಂದಲೂ ತೋಯಿಸುವ ಶಕ್ತಿಯುಳ್ಳ ಜಲಸೇಚನದಿಂದಲೂ ಇರುವವನಾದ್ದರಿಂದ ಈ ದೇವನನ್ನು ಋತಸ್ಯ ಶ್ಲೋಕ ಎಂಬಭಿಧಾನದಿಂದಲೂ ಆ ಋಷಿಯು ಸ್ತುತಿಸಿರುವನು.

---

40. Speech is Bhahma and truth is Brahma, this whole world is Brahma; therefore Saunahotra (ಗೃತ್ಸಮದ) praising, sang (of him) as protector (ಪಾತಾರಂ) of Brahma (i.e. as Brahmanaspati) (7).

41. Becanse he entered into the earth (ಕ್ಷಿತೌ) at the (proper) seasons, distributing food to the natlons (ಕ್ಷಿತಿಭ್ಯಃ) therefore Vamadeva, praising (him), calls him 'Lord of the Field' (8).

42. Because he declared him who, connected with the middle world, is to be seen by the mind (only), with truth (to be) in truth (ಸತ್ಯ) the name (ವಾಮದೇವ) praised him as (ಋತ) (9).

### 9. Vastospati, Vacaspati, Aditi, Ka, Yama

43. And by his magical power he abides in the air with internal moisture shed with thunder : hence he (Vamadeva) again spoke of him (as such in) 'the call of Rta' (ಋತಸ್ಯ ಶ್ಲೋಕಃ).

ವಾಸ್ತು ಪ್ರಯಚ್ಛಂಲ್ಲೋಕಸ್ಯ ಮಧ್ಯಮಃ ಸ ತು ಪಾತಿ ಯತ್ |
ತೇನ ವಾಸ್ತೋಷ್ಪತಿಂ ಪ್ರಾಹ ಚತುರ್ಭಿರಿಮಮೌರ್ವಶಃ || ೪೪ ||
ವಾಚಾ ವೇದಾ ಹ್ಯಧೀಯಂತೇ ವಾಚಾ ಛಂದಾಂಸಿ ತತ್ರ ಹ |
ಅಥೋ ವಾಕ್ಸರ್ವಮೇವೇದಂ ತೇನ ವಾಚಸ್ಪತಿಃ ಸ್ತುತಃ || ೪೫ ||
ನ ಕುತಶ್ಚನ ಯದ್ದೀನೋ ವೃತ್ವಾ ತಿಷ್ಠತಿ ಮಧ್ಯಮಃ |
ರಾಹೂಗಣ ಋಷಿಸ್ತೇನ ಪ್ರಾಹೈನಂ ಗೋತಮೋಽದಿತಿಂ || ೪೬ ||
ಪ್ರಜಾಭ್ಯಸ್ತ್ವೇಷ ಯಚ್ಚರ್ಮ ಕಮಿಚ್ಛನ್ಮನಸಾ ಸುಖಂ |

**ವಾಸ್ತೋಷ್ಪತಿ, ಅದಿತಿ, ಕಃ ಯಮ**

44. **ವಾಸ್ತೋಷ್ಪತಿ** ಶಬ್ದವಿವರಣೆ— ಈದೇವನು ಮಧ್ಯಮ(ಅಂತರಿಕ್ಷ)ಲೋಕದಲ್ಲಿದ್ದುಕೊಂಡು ಲೋಕದ ಜನರಿಗೆ ವಾಸ್ತು ಎಂದರೆ ನಿವಾಸಸ್ಥಾನವನ್ನು (ವಸತಿಗೃಹ) ಅನುಗ್ರಹಿಸಿಕೊಡುವನು ಮತ್ತು ಅದರ ರಕ್ಷಣೆಯ ಭಾರವನ್ನು ತಾನೇ ವಹಿಸಿರುವನು. ಆದ್ದರಿಂದ ಉರ್ವಶೀ ಪುತ್ರನಾದ ವಸಿಷ್ಠಋಷಿಯು ಈ ದೇವನನ್ನು **ವಾಸ್ತೋಷ್ಪತಿ** ಎಂಬ ಹೆಸರಿನಿಂದ ನಾಲ್ಕು ಮಂತ್ರಗಳಲ್ಲಿ ಸ್ತುತಿಸಿರುವನು.

45. **ವಾಚಸ್ಪತಿ** ಶಬ್ದವಿವರಣೆ—ವಾಕ್ಕಿನ ಸಹಾಯದಿಂದಲೇ ವೇದಗಳ ಅಧ್ಯಯನವು ನಡೆಯುವುದು. ವಾಕ್ಕಿನ ಸಹಾಯದಿಂದಲೇ ವಿಧವಾದ ಛಂದಸ್ಸಿನ ಅಭ್ಯಾಸವು (ಎಂದರೆ ಉಚ್ಚಾರಣೆಯು) ನಡೆಯುವುದು ಇಷ್ಟೇ ಅಲ್ಲ ಈ ವಾಕ್ಕೇ ಸಮಸ್ತ ಜಗತ್ಸ್ವರೂಪವಾಗಿರುವುದು ಎಂದರೆ ವಾಕ್ಕಿನ ಸಹಾಯವಿಲ್ಲದಿದ್ದರೆ ಜಗತ್ತಿನ ವ್ಯವಹಾರಗಳು ಯಾವುದೂ ನಡೆಯುವಂತಿಲ್ಲ. ಆದ್ದರಿಂದ ಈ ದೇವತೆಯನ್ನು ವಾಚಸ್ಪತಿಯೆಂದು ಸ್ತುತಿಸಲಾಗಿದೆ.

46 **ಅದಿತಿ** ಶಬ್ದವಿವರಣೆ— ಈ ದೇವತೆಯು ಸಕಲವನ್ನು ವ್ಯಾಪಿಸಿರುವ ಮಧ್ಯಮ (ಅಂತರಿಕ್ಷ) ಲೋಕದಲ್ಲಿ ಇದ್ದು ದೀನಳಲ್ಲವಾದ್ದರಿಂದ (ಸಂಕಟಕ್ಕೊಳಗಾಗುವುದಿಲ್ಲವಾದ್ದರಿಂದ ಈ ದೇವತೆಯನ್ನು ಅದಿತಿಯೆಂಬ ಹೆಸರಿನಿಂದ ರಾಹುಗಣಗೋತಮನೆಂಬ ಋಷಿಯು ಕರೆದು ಸ್ತುತಿಸಿರುವನು.

47. **ಕಃ** (ಪ್ರಜಾಪತಿಃ) ಶಬ್ದದ ವಿವರಣೆ. ಕ ಎಂಬ ಶಬ್ದಕ್ಕೆ ಸುಖವೆಂದರ್ಥವು. ಈ ದೇವತೆಯು ಸಮಸ

44. But because (being in the) middle (sphere) he granting an abode (ವಾಸ್ತು) to the world, protects (it), therefore the son of Urvasi (ವಸಿಷ್ಠ) proclaims him (to be) Vastospati (10) in four (formulas).

45. Since the Vedas are learned with speech (ವಾಕ್) (and) the metres there (are recited) with speech, and moreover speech is this universe, therefore (he is) praised as 'Lord of Speech' (11).

46. And because he abides (in the) middle (sphere) surrounding (the world), not afflicted (ದೀನ) on any side, therefore the seer Rahugana Gotama proclaims him as Aditi (12).

47. But because he is a protection to creatures, desiring (their) ಕ

ಹಿರಣ್ಯಗರ್ಭಸ್ತೇನೈನಮೃಷಿರರ್ಚನ್ನುವಾಚ ಕಂ || ೪೭ ||

ಇಹ ಪ್ರಜಾಃ ಪ್ರಯಚ್ಛನ್ಸ ಸಂಗೃಹೀತ್ವಾ ಪ್ರಯಾತಿ ಚ |
ಋಷಿರ್ವಿವಸ್ವತಃ ಪುತ್ರಂ ತೇನಾಹೈನಂ ಯಮೋ ಯಮಂ || ೪೮ ||

ಮಿತ್ರೀಕೃತ್ಯ ಜನಾ ವಿಶ್ವೇ ಯದಿಮಂ ಪರ್ಯುಪಾಸತೇ |
ಮಿತ್ರ ಇತ್ಯಾಹ ತೇನೈನಂ ವಿಶ್ವಾಮಿತ್ರಃ ಸ್ತುವನ್ಸ್ವಯಂ || ೪೯ ||

ನಿದಾಘಮಾಸಾತಿಗಮೇ ಯದೃತೇನಾವತಿ ಕ್ಷಿತಿಂ |
ವಿಶ್ವಸ್ಯ ಜನಯನ್ಕರ್ಮ ವಿಶ್ವಕರ್ಮೈಷ ತೇನ ಸಃ || ೫೦ ||

ಪ್ರಜೆಗಳಿಗೂ ಮನಃಪೂರ್ವಕವಾಗಿ ಸುಖವನ್ನು ಬಯಸುವವನಾದುದರಿಂದ ಇವನ್ನು ಕ ಶಬ್ದವಾಚ್ಯನೆಂದು ಹಿರಣ್ಯಗರ್ಭ ಋಷಿಯು ಸ್ತುತಿಸಿರುವನು.

48. **ಯಮ** ಶಬ್ದವಿವರಣೆ—ಯಮುಶಬ್ದಕ್ಕೆ (ಯುಚ್ಛ್-ಕೊಡು) ಕೊಡುವವನು ಎಂದರ್ಥವು. ಈ ದೇವತೆಯು ಜನರಿಗೆ ಸಂತಾನ (ಮಕ್ಕಳನ್ನು) ಅನುಗ್ರಹಿಸಿಕೊಡುವುದರಿಂದಲೂ, ಜನರ ಮರಣಾನಂತರ ಅವರನ್ನು (ಅವರ ಆತ್ಮವನ್ನು) ಬೇರೆ ಲೋಕಕ್ಕೆ (ಯಮ ಅಥವಾ ಪಿತೃಲೋಕಕ್ಕೆ) ತೆಗೆದುಕೊಂಡು ಹೋಗುವುದರಿಂದಲೂ ವಿವಸ್ವಂತನ ಪುತ್ರನಾದ ಇವನನ್ನು ಯಮನೆಂದು ಋಷಿಯು ವರ್ಣಿಸಿರುವನು.

### ಮಿತ್ರ, ವಿಶ್ವಕರ್ಮಾ, ಸರಸ್ವತ್, ಮನ್ಯು

49. **ಮಿತ್ರ** ಶಬ್ದವಿವರಣೆ—ಎಲ್ಲಾ ಜನರೂ ಇವನನ್ನು ಸ್ನೇಹಮಾಡಿಕೊಂಡು ಪೂಜಿಸುವುದರಿಂದ, ಇವನನ್ನು ಮಿತ್ರನೆಂಬ (ಮಿತ್ರ-ಸ್ನೇಹಿತ) ಹೆಸರಿನಿಂದ ವಿಶ್ವಾಮಿತ್ರಋಷಿಯೇ ಸ್ವಯಂ ಸ್ತುತಿಸಿರುವನು.

50. **ವಿಶ್ವಕರ್ಮಾ** ಎಂಬ ಶಬ್ದದ ವಿವರಣೆ—ಈ ದೇವನು ಬೇಸಿಗೆ ಕಾಲ ಕಳೆದನಂತರ ವರ್ಷಾಕಾಲದಲ್ಲಿ ಭೂಮಿಯನ್ನು ನೀರಿನಿಂದ (ಮಳೆಯಿಂದ) ಸೇಚಿಸಿ ಕಾಪಾಡುವವನಾದ್ದರಿಂದಲೂ, ಸಮಸ್ತ ವಿಶ್ವದ (ಜಗತ್ತಿನ) ಕರ್ಮಗಳಿಗೂ ಕಾರಣಭೂತನಾದ್ದರಿಂದಲೂ ಈ ದೇವನಿಗೆ ವಿಶ್ವಕರ್ಮಾ ಎಂಬ ಹೆಸರು ಪ್ರಸಿದ್ಧಿಯು.

happiness(ಸುಖ)in his heart, therefore the seer Hiranyagarbha, adoring (him), spoke of him as ಕ (13).

48. He giving (ಪ್ರಯಚ್ಛನ್) offspring here, and gathering (them) goes forth (to the other world) : therefore the seer Yama calls him, the son of Vivasvat, Yama (14).

### 10. Mitra, Visvakarman, Sarasvat, Manyu.

49. Because all men making (ಮಿತ್ರೀಕೃತ್ಯ) a friend (of him) worship him, therefore Visvamitra himself praising (him) calls him 'Mitra' (15).

50. Because at the close of the hot months he refreshes the earth with water (ಋತ) creating the activity (ಕರ್ಮ) of everything (ವಿಶ್ವಸ್ಯ) therefore he (is called) Visvakarman (16).

ಸರಾಂಸಿ ಪೃತವಂತ್ಯಸ್ಯ ಸಂತಿ ಲೋಕೇಷು ಯತ್ರಿಷು |
ಸರಸ್ವಂತಮಿತಿ ಪ್ರಾಹ ವಾಚಂ ಪ್ರಾಹುಃ ಸರಸ್ವತೀಂ || ೫೧ ||
ಪ್ರಾಣಭೂತಸ್ತು ಭೂತೇಷು ಯದ್ವೇನತ್ಯೇಷು ತಿಷ್ಠತಿ |
ತೇನೈನಂ ವೇನಮಾಹರ್ಷಿರ್ವೇನೋ ನಾಮೇಹ ಭಾರ್ಗವಃ || ೫೨ ||
ಸಸೃಜೇ ಮಾಸಿ ಮಾಸ್ಯೇನಮಭಿಮತ್ಯ ತಪೋಽಗ್ರಜಂ |
ತೇನೈನಂ ಮನ್ಯುರಿತ್ಯಾಹ ಮನ್ಯುರೇವ ತು ತಾಪಸಃ || ೫೩ ||
ಯದಂತಕಾಲೇ ಭೂತಾನಾಮೇಕ ಏವ ನಯತ್ಯಸೂನ್ |
ತೇನಾಸುನೀತಿರುಕ್ತೋಽಯಂ ಸ್ತುವತಾ ಶ್ರುತಬಂಧುನಾ || ೫೪ ||

51. **ಸರಸ್ವಾನ್** ಶಬ್ದದ ವಿವರಣೆ—ಮೂರು ಲೋಕಗಳಲ್ಲಿಯೂ ಇರುವ ಸರೋವರಗಳನ್ನು ಉದಕದಿಂದ ಪೂರ್ಣಮಾಡಿ ಇಟ್ಟಿರುವವನಾದ್ದರಿಂದ ಈ ದೇವನಿಗೆ ಸರಸ್ವಾನ್ ಎಂದು ಹೆಸರು. ವಾಕ್ಕನ್ನು (ಅಥವಾ ವಾಗ್ದೇವತೆಯನ್ನು) ಸರಸ್ವತೀ ಎಂದು ಕರೆಯುವರು

52. **ವೇನ** ಶಬ್ದಾರ್ಥವಿವರಣೆ—ಸಮಸ್ತ ಪ್ರಾಣಿಗಳಲ್ಲಿಯೂ ಪ್ರಾಣರೂಪದಿಂದ ಇದ್ದು ಅವುಗಳ ಶರೀರದಲ್ಲಿ (ವೇನತಿ-ಸಂಚರಿಸು) ಸಂಚರಿಸುವವನಾದ್ದರಿಂದ ಅಥವಾ ಪ್ರಾಣಿಗಳನ್ನು ಸಂಚರಿಸುವಂತೆ ಮಾಡುವವನಾದ್ದರಿಂದ ಈ ದೇವತೆಗೆ ವೇನನೆಂದು ಹೆಸರು ಎಂಬುದಾಗಿ ಭಾರ್ಗವಋಷಿಯು ವಿವರಿಸಿರುವನು.

53. **ಮನ್ಯು** ಶಬ್ದವಿವರಣೆ—ತಪಸ್ಸನ್ನು ಮಾಡುವಾಗ ಮೊದಲು ಪ್ರತಿಮಾಸದಲ್ಲಿಯೂ ಶಾಖವು ಅಥವಾ ಕೋಪವು ಉತ್ಪತ್ತಿಯಾಗುವುದರಿಂದ ಈ ದೇವತೆಯನ್ನು ಮನ್ಯುದೇವತೆಯೆಂದು ಮನ್ಯುಸ್ತಾಪಸಃ ಎಂಬ ಋಷಿಯು ಹೇಳಿರುವನು.

**ಅಸುನೀತಿ, ಅಪಾಂನಪಾತ್, ದಧಿಕ್ರಾ, ಧಾತೃ, ತಾರ್ಕ್ಷ್ಯ**

54. **ಅಸುನೀತಿ** ಶಬ್ದದ ವಿವರಣೆ—(ಅಸುವೆಂದರೆ ಪ್ರಾಣ ಅಥವಾ ಆತ್ಮ, ನೀತಿ ಎಂದರೆ ಒಯ್ಯುವುದು) ಪ್ರಾಣಿಗಳು ಮೃತರಾದಾಗ ಅವರ ಅಸು ಅಥವಾ ಪ್ರಾಣಗಳನ್ನು (ಬೇರೆ ಲೋಕಕ್ಕೆ) ಒಯ್ಯುವವನಾದ್ದರಿಂದ ಈ ದೇವತೆಗೆ ಅಸುನೀತಿ ಎಂಬ ಹೆಸರು ಬಂದಿರುವುದೆಂದು ಶ್ರುತಬಂಧುವೆಂಬ ಋಷಿಯು ಸ್ತುತಿಸಿರುವನು.

---

51. Because he has lakes (ಸರಾಂಸಿ) full of water in the three worlds, (the seer) proclaims (him) as 'Sarasvat', (while) ವಾಕ್ (speech) they call Sarasvati.

52. Because being their life (ಪ್ರಾಣ) he moves (ವೇನತಿ) abides in them, therefore the seer named Vena, Bhargava here calls him Vena (18).

53. Primaeval (ಅಗ್ರಜ) Heat (ತಪಃ) desiring (ಅಭಿಮಾತ್ಯ) created him month after month : therefore Manyu Tapasa calls him 'Manyu'.

**11. Asuniti, Apam napat, Dadhikra, Dhatr, Tarksya.**

54. Because at the time when beings die he alone leads (ನಯತಿ)(their) spirits (ಅಸೂ) therefore he is spoken of as Asuniti (20) by Srutabandhu who praises (him).

ನಿದಾಘಮಾಸಾತಿಗಮೋ ಜನ್ಮ ಮಧ್ಯೇ ಭವತ್ಯಪಾಂ ।
ನಪ್ತಾರಮಾಹ ತೇನೈನಮೃಷಿರ್ಗೃತ್ಸಮದಃ ಸ್ತುವನ್ ॥ ೫೫ ॥
ಅಪಾಮಂಬರಗರ್ಭಾಣಾಮಾದಧತ್ಸೋಽಷ್ಟಮಾಸಿಕಂ ।
ಯತ್ಕ್ರಂದತ್ಯಸಕೃನ್ಮಧ್ಯೇ ದಧಿಕ್ರಾಸ್ತೇನ ಕಥ್ಯತೇ ॥ ೫೬ ॥
ಮಾಸೇನ ಸಂಭೃತಂ ಗರ್ಭಂ ನವಮೇನಾಥ ಮಾಸಿಕಂ ।
ಸ್ವಯಂ ಕ್ರಂದನ್ದಧಾತ್ಯುರ್ವ್ಯಾಂ ಧಾತೇತ್ಯೃಗ್ಭಿಃ ಸ ಗೀಯತೇ ॥ ೫೭ ॥
ಸ್ತೀರ್ಣೇಽನ್ತರಿಕ್ಷೇ ಕ್ಷಿಯತಿ ಯದ್ವಾ ತೂರ್ಣಂ ಕ್ಷರತ್ಯಸೌ ।
ಅರಿಷ್ಟನೇಮಿಸ್ತಾರ್ಕ್ಷ್ಯರ್ಷಿಸ್ತಾರ್ಕ್ಷ್ಯಂ ತೇನೈವಮುಕ್ತವಾನ್ ॥ ೫೮ ॥

55. **ಅಪಾಂನಪಾತ್** ಶಬ್ದದ ವಿವರಣೆ—ಬೇಸಿಗೆ ಕಾಲದ ಕೊನೆಯ ಭಾಗದಲ್ಲಿ ಎಂದರೆ ಮಳೆಗಾಲದ ಪ್ರಾರಂಭದಲ್ಲಿ ಉದಕಗಳ ಮಧ್ಯದಲ್ಲಿ ಈ ದೇವತೆಯ ಉತ್ಪತ್ತಿಯಾಗುವುದರಿಂದ ಈ ದೇವತೆಯನ್ನು ಅಪಾಂನಪಾತ್ (ಉದಕದ ಪುತ್ರನು) ಎಂಬಭಿಧಾನದಿಂದ ಗೃತ್ಸಮದಋಷಿಯು ಸ್ತುತಿಸಿರುವನು.

56. **ದಧಿಕ್ರಾ** ಶಬ್ದದ ವಿವರಣೆ—(**ದಧಿ, ದಧತ್**-ಧರಿಸುವುದು) ಅಂತರಿಕ್ಷದಲ್ಲಿರುವ ಮೇಘಗಳ ಗರ್ಭ ರೂಪವಾದ ಜಲರಾಶಿಯನ್ನು ಎಂಟು ಮಾಸಗಳವರೆಗೆ ಧರಿಸಿ ಆಗಾಗ ಘರ್ಜನೆ (ಸಿಡಿಲು) ಮಾಡುವವನಾದ್ದರಿಂದ ಈ ದೇವತೆಗೆ **ದಧಿಕ್ರಾ** ಎಂಬ ಹೆಸರು ಬಂದಿರುವುದು.

57. **ಧಾತೃ** ಶಬ್ದಾರ್ಥ—(**ಧಾತೃ, ದಧಾತಿ**—ಇಡುವುದು) ಮೇಲೆ ಹೇಳಿದಂತೆ ಎಂಟು ಮಾಸಗಳ ವರೆಗೆ (ಮೇಘಗಳ ಗರ್ಭಸ್ಥವಾದ) ಉದಕವನ್ನು ಧರಿಸಿದ್ದು ಒಂಭತ್ತನೆಯ ತಿಂಗಳಲ್ಲಿ ಬೀಜರೂಪವಾದ ಆ ಜಲವನ್ನು (ಅಥವಾ ಓಷಧ್ಯಾದಿಗಳ ಬೀಜವನ್ನು) ಭೂಮಿಯ ಮೇಲೆ ಘರ್ಜನೆಸಹಿತವಾಗಿ ಇಡುವವನಾದ್ದರಿಂದ ಈ ದೇವನನ್ನು **ಧಾತಾ** ಎಂಬದಾಗಿ ಋಕ್ಕುಗಳಲ್ಲಿ ಸ್ತುತಿಸಲಾಗಿದೆ.

58. **ತಾರ್ಕ್ಷ್ಯ**ಶಬ್ದಾರ್ಥವಿವರಣೆ—ವಿಸ್ತಾರವಾದ ಅಂತರಿಕ್ಷಪ್ರದೇಶದಲ್ಲಿ ವಾಸಿಸುವುದರಿಂದ ಅಥವಾ ವೇಗ ವಾಗಿ ಸಂಚರಿಸುವುದರಿಂದ ಈ ದೇವತೆಗೆ ತಾರ್ಕ್ಷ್ಯನೆಂಬ ಹೆಸರೆಂದು ಅರಿಷ್ಟನೇಮಿಸ್ತಾರ್ಕ್ಷ್ಯ ಎಂಬ ಋಷಿಯು ಹೇಳಿರುವನು.

---

55. At the end of the hot months (his) birth takes place in (their) midst : therefore the seer Grtsamda (in) praising (him) calls him Child of Waters (21).

56. Because supporting (ಆ ದಧತ್) the mass of waters contained in the atmosphers for eight months, he roars (ಕ್ರಂದತಿ) frequently in (their) midst : therefore he is described as Dadhikra (22).

57. He then himself roaring deposits (ದಧಾತಿ) in the earth for a month the germ developed in the ninth month : (therefore) he is sung in the stanzas (of the Rig-Veda) as 'Dhatr' (23).

58. In the wide (ಸ್ತೀರ್ಣೇ) air he dwells (ಕ್ಷಿಯತಿ) or he swiftly (ತೂರ್ಣಂ) glides (ಕ್ಷರತಿ) : theretore the seer ಅರಿಷ್ಟನೇಮಿ Tarksya has spoken of him thus as Tarksya (24).

ರುವನ್ನ್ಯೇಮ್ನ್ಯುದಯಂ ಯಾತಿ ಕೃಂತತ್ರಾದ್ವಿಸೃಜನ್ನಪಃ |
ಪುರೂರವಸಮಾಹ್ವೈನಂ ಸ್ವವಾಕ್ಯೇನೋರುವಾಸಿನೀ || ೫೯ ||

ಯತ್ತು ಪ್ರಚ್ಯಾವಯನ್ನೇತಿ ಘೋಷೇಣ ಮಹತಾ ಮೃತಂ |
ತೇನ ಮೃತ್ಯುಮಿಮಂ ಸಂತಂ ಸ್ತೌತಿ ಮೃತ್ಯುರಿತಿ ಸ್ವಯಂ || ೬೦ ||

ನಾಮ್ನಾ ಸಂಕುಸುಕೋ ನಾಮ ಯಮಪುತ್ರೋ ಜಘನ್ಯಜಃ |
ಸಂವರ್ತಯಂಸ್ತಮಃ ಸೂರ್ಯಾದುಷಸಂ ಚ ಪ್ರವರ್ತಯನ್ || ೬೧ ||

ದಿವಾಕರಂ ಪ್ರಸೌತ್ಯೇಕಃ ಸವಿತಾ ತೇನ ಕರ್ಮಣಾ |
ಉದಿತೋ ಭಾಸಯಂಲ್ಲೋಕಾನಿಮಾಂಶ್ಚೈಷ ಸ್ವರಶ್ಮಿಭಿಃ ||

**ಪುರೂರವಾಃ, ಮೃತ್ಯು, ಸೂರ್ಯನ ಹೆಸರುಗಳು**

59. **ಪುರೂರವ**ಶಬ್ದವಿವರಣೆ—(**ಪುರು**-ಅಧಿಕವಾದ, **ರವ**-ಶಬ್ದ) ಬಹಳವಾಗಿ ಶಬ್ದಮಾಡುತ್ತಲೂ, ಝರಿಗಳಿಂದ ಉದಕಗಳನ್ನು ಸುರಿಸುತ್ತಲೂ ಆಕಾಶದಲ್ಲಿ ಉದಯವನ್ನು ತಾಳುವುದರಿಂದ ಇವನ ಹೆಸರು **ಪುರೂರವಾಃ** ಎಂದು ಊರ್ವಶಿಯು ತನ್ನ ಮಾತಿನಿಂದಲೇ ಹೇಳಿರುವಳು.

60-61. **ಮೃತ್ಯು**ಶಬ್ದಾರ್ಥವಿವರಣೆ—ಉಚ್ಚಧ್ವನಿಯಿಂದ ಎಂದರೆ ಘೋರವಾದ ಶಬ್ದದಿಂದ ಧ್ವನಿಗೈಯ್ಯುತ್ತಾ ಮೃತರಾದವರನ್ನು ಇಲ್ಲಿಂದ ಹೊರಡಿಸಿಕೊಂಡು ತನ್ನ (ಯಮ) ಲೋಕಕ್ಕೆ ಕರೆದೊಯ್ಯುವವನಾದ್ದರಿಂದ ಈ ದೇವನನ್ನು ಮೃತ್ಯುವೆಂಬ ಅಭಿಧಾನದಿಂದ ಯಮನ ಕನಿಷ್ಠಪುತ್ರನಾದ ಸಂಕುಸುಕ ಎಂಬ ಹೆಸರಿನ ಋಷಿಯು ಸ್ತುತಿಸಿರುವನು.

61--62. **ಸವಿತಾ**ಶಬ್ದವಿವರಣೆ-ಅಂಧಕಾರವನ್ನು (ಕತ್ತಲೆಯನ್ನು) ಹೋಗಲಾಡಿಸುತ್ತಲೂ, ಉಷಃಕಾಲವನ್ನು (ಪ್ರಾತಃಕಾಲವನ್ನು) ಉಂಟುಮಾಡುತ್ತಲೂ ಇರುವ ಸೂರ್ಯನೇ ಉದಯಕಾಲದಲ್ಲಿ (ಮೇಲೆ ಹೇಳಿದ ತನ್ನ ಅಂಧಕಾರಪರಿಹಾರ, ಉಷಃಕಾಲಪ್ರವರ್ತನ ಎಂಬ ಕರ್ಮಗಳನ್ನು ನೆರವೇರಿಸುವುದರಿಂದ) ಸವಿತೃಶಬ್ದವಾಚ್ಯನಾಗಿರುವನು ಎಂದರೆ ಉದಯಕಾಲದಲ್ಲಿ ಸೂರ್ಯನಿಗೆ ಸವಿತೃವೆಂದು ಹೆಸರು.

ಭಗಶಬ್ದವಿವರಣೆ—ಉದಯಾನಂತರ ಸೂರ್ಯನು ತನ್ನ ರಶ್ಮಿಗಳಿಂದ ಈ ಲೋಕಗಳೆಲ್ಲವನ್ನೂ ಪ್ರಕಾಶದಿಂದ

**12. Pururavas, Mrtyu, Names of the Sun : Savitr, Bhaga.**

59. Roaring (ರುವನ್) in the sky he proceeds to sunrise, discharging the waters from the abyss (ಕೃಂತತ್ರಾತ್); (therefore) Urvasini (i. e. Urvasi) calls him Pururavas (25) in her own words.

60, 61. But because with great din he goes driving on the deceased (ಮೃತಂ), therefore him, as being death (ಮೃತ್ಯು), the youngest son of Yama, named Samkusuka, himself praises as ' Mrtyu ' (26).

62. Causing the darkness to disappear from the sun and the Dawn to appear he alone propels (ಪ್ರಸೌತಿ) the day-star : by reason of that function he is Savitr (1). And he arose illuminating (ಭಾಸಯನ್) these worlds with his

ಸ್ವಯಂ ವಸಿಷ್ಠಸ್ತೇನೈನಮೃಷಿರಾಹ ಸ್ತುವನ್ಭಗಂ || ೬೨ ||

ಪುಷ್ಯನ್ ಕ್ಷಿತಿಂ ಪೋಷಯತಿ ಪ್ರಣುದನ್ರಶ್ಮಿಭಿಸ್ತಮಃ |
ತೇನೈನಮಸ್ತೌತ್ಪೂಷೇತಿ ಭರದ್ವಾಜಸ್ತು ಪಂಚಭಿಃ || ೬೩ ||

ತ್ರೀಣಿ ಭಾಂತಿ ರಜಾಂಸ್ಯಸ್ಯ ಯತ್ಪದಾನಿ ತು ತೇಜಸಾ |
ತೇನ ಮೇಧಾತಿಥಿಃ ಪ್ರಾಹ ವಿಷ್ಣುರೇನಂ ತ್ರಿವಿಕ್ರಮಂ || ೬೪ ||

ಕೃತ್ವಾ ಸಾಯಂ ಪೃಥಗ್ಯಾತಿ ಭೂತೇಭ್ಯಸ್ತಮಸೋಽತ್ಯಯೇ |
ಪ್ರಕಾಶಂ ಕಿರಣೈಃ ಕುರ್ವಂಸ್ತೇನೈನಂ ಕೇಶಿನಂ ವಿದುಃ || ೬೫ ||

ಬೆಳಗುವಂತೆ ಮಾಡುವನು. ಆದ್ದರಿಂದ ಉದಯಾನಂತರ (ಪ್ರಾತಃಕಾಲದಲ್ಲಿ) ತನ್ನ ಪ್ರಕಾಶದಿಂದ ಬೆಳಗುತ್ತಿರುವ ಸೂರ್ಯನನ್ನೇ ಭಗ ಎಂಬ ಅಭಿಧಾನದಿಂದ ವಸಿಷ್ಠಋಷಿಯೇ ಸ್ತುತಿಸಿರುವನು.

### ಪೂಷಾ, ವಿಷ್ಣು, ಕೇಶಿನ್, ವಿಶ್ವಾನರ, ವೃಷಾಕಪಿ

63. **ಪೂಷಾದೇವತೆಯ ವಿವರಣೆ—(ಪೂಷಾ, ಪುಷ್ಯತಿ—**ಪೋಷಿಸುವವನು) ತನ್ನ ರಶ್ಮಿಗಳಿಂದ ಕತ್ತಲೆಯನ್ನು ಹೋಗಲಾಡಿಸಿ ಭೂಮಿಯನ್ನು ಪೋಷಿಸುವುದರಿಂದ ಈ ದೇವನನ್ನು (ಸೂರ್ಯನನ್ನು) ಪೂಷಾ ಎಂಬಭಿಧಾನದಿಂದ ಭರದ್ವಾಜಋಷಿಯು ಐದು ಸೂಕ್ತಗಳಲ್ಲಿ (೬ ನೇ ಮಂಡಲದ ೫೩–೫೬ ಮತ್ತು ೫೮ ನೇ ಸೂಕ್ತಗಳಲ್ಲಿ) ಸ್ತುತಿಸಿರುವನು.

64. **ವಿಷ್ಣುಶಬ್ದವಿರಣೆ—**ಮೂರು ಲೋಕಗಳೂ ಯಾವ ದೇವನ ಮೂರು ಪಾದವಿಕ್ಷೇಪಗಳಿಂದ ಬೆಳಗುವುವೋ ಅಂತಹ ದೇವನನ್ನು ಮೂರು ಪಾದವಿಕ್ಷೇಪಗಳುಳ್ಳ ವಿಷ್ಣುವೆಂದು ಮೇಧಾತಿಥಿ ಋಷಿಯು ಹೇಳಿರುವನು.

65. **ಕೇಶಿಶಬ್ದಾರ್ಥವಿವರಣೆ—**ಸಾಯಂಕಾಲದಲ್ಲಿ ಅಸ್ತಮಯವನ್ನು ಹೊಂದಿ ಕತ್ತಲೆಯು ಕಳೆದುಹೋಗಿ ಬೆಳಕಾದನಂತರ ತನ್ನ ಕಿರಣಗಳಿಂದ ಸಮಸ್ತ ಪ್ರಾಣಿಗಳ ಉಪಕಾರಾರ್ಥವಾಗಿ ಬೆಳಕನ್ನು ಉಂಟುಮಾಡುವವನಾದ್ದರಿಂದ ಈ ದೇವನನ್ನು (ಸೂರ್ಯ) ಕೇಶೀ ಎಂದು ಕರೆಯುವರು.

rays: therefoae the seer Vasistha himself (in) praising (him) calls him Bhaga (2).

### 13. Pusan, Visnu, Kesin, Visvanara, Vrsakapi.

63. Nourshing (ಪುಷ್ಯನ್) he causes the earth to thrive, dispelling the darkness with his rays: therefore Bharadwaja praised him as 'Pusan' (3) with five (hymns).

64. Because the three (ತ್ರೀಣಿ) regions (ರಜಾಂಸಿ) shine with brilliance as his footsteps, therefore Medhetithi pronounces him (to be) Visnu (4) of the three strides (ತ್ರಿವಿಕ್ರಮ).

65. Because after making a sojourn (ಸಾಯಂ) apart, he goes, at the departure of darkness, making light (ಪ್ರಕಾಶಂ) for beings with his beams, therefore they regard him rs (the Hairy) Kesin (5).

ಸಂಪ್ರತ್ಯೇಕೈಕಶಸ್ತೇನಂ ಯೆನ್ಮನ್ಯಂತೇ ಪೃಥಙ್ನರಾಃ ।
ವಿಶ್ವೇ ವಿಶ್ವಾನರಸ್ತೇನ ಕರ್ಮಣಾ ಸ್ತುತಿಷು ಸ್ತುತಃ ॥ ೬೬ ॥
ವೃಷ್ಯೈಷ ಕಪಿಲೋ ಭೂತ್ವಾ ಯನ್ನಾಕಮಧಿರೋಹತಿ ।
ವೃಷಾಕಪಿರಸೌ ತೇನ ವಿಶ್ವಸ್ಮಾದಿಂದ್ರ ಉತ್ತರಃ ॥
ರಶ್ಮಿಭಿಃ ಕಂಪಯನ್ನೇತಿ ವೃಷಾ ವರ್ಷಿಷ್ಠ ಏವ ಸಃ ॥ ೬೭ ॥
ಸಾಯಾಹ್ನಕಾಲೇ ಭೂತಾನಿ ಸ್ವಾಪಯನ್ನಸ್ತಮೇತಿ ಯತ್ ।
ವೃಷಾಕಪಿರಿತೋ ವಾ ಸ್ಯಾದಿತಿ ಮಂತ್ರೇಷು ದೃಶ್ಯತೇ ॥ ೬೮ ॥
ತ್ರಿಷು ಧನ್ವೇತಿ ಹೀಂದ್ರೇಣ ಪ್ರಯುಕ್ತೋ ವಾರಿಷಾಕಪೇ ।

66. **ವಿಶ್ವಾನರಶಬ್ದಾರ್ಥ**—ಸಮಸ್ತ ಜನರೂ ಪ್ರತ್ಯೇಕವಾಗಿ ಎಂದರೆ ಪ್ರತಿಯೊಬ್ಬರೂ ಬೇರೆಬೇರೆಯಾಗಿ ಈ ದೇವನ ಸ್ವರೂಪವನ್ನು ತಿಳಿದುಕೊಳ್ಳುವುದರಿಂದ (ಈ ಕರ್ಮದಿಂದ) ಈ ದೇವನು ವಿಶ್ವಾನರನೆಂದು ಸೂಕ್ತಗಳಲ್ಲಿ ಸ್ತುತಿಸಲ್ಪಟ್ಟಿರುವನು.

67. **ವೃಷಾಕಪಿಶಬ್ದಾರ್ಥ**—ಈ ದೇವನು ಕಪಿಲವರ್ಣದ ವೃಷಭರೂಪದಿಂದ ಸ್ವರ್ಗಲೋಕಕ್ಕೂ ಏರಿ ಹೋಗುವುದರಿಂದ ಇವನನ್ನು ವೃಷಾಕಪಿಯೆಂದು ಹೇಳುವರು. ಈ ಇಂದ್ರನೇ ಸಮಸ್ತ ಜಗತ್ತಿಗಿಂತಲೂ ಅಧಿಕನು (ಋ. ಸಂ. ೧೦ ನೇ ಮಂಡಲದ ೮೬ ನೇ ಸೂಕ್ತ). ಈ ವೃಷವೇ ತನ್ನ ರಶ್ಮಿಗಳಿಂದ ಎಲ್ಲವನ್ನೂ ಕಂಪನಮಾಡುತ್ತಾ (ಅಲುಗಾಡಿಸುತ್ತಾ) ಹೋಗುವುದರಿಂದ ಇವನೇ ವರ್ಷಿಷ್ಠನೆಂದೂ ಕರೆಯಲ್ಪಡುವನು.

68. ಇದಲ್ಲದೆ ಸಾಯಂಕಾಲದಲ್ಲಿ ಸಮಸ್ತ ಪ್ರಾಣಿಗಳನ್ನೂ ಮಲಗಿ ನಿದ್ರಿಸುವಂತೆ ಮಾಡಿ ತಾನೂ ಅಸ್ತಂಗತನಾಗುವುದರಿಂದ (ಈ ಕಾರಣದಿಂದಲೂ) ಈ ದೇವನಿಗೆ ವೃಷಾಕಪಿಯೆಂಬ ಹೆಸರಿರುವುದು. **ಧನ್ವ ಚ** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿ (೧೦ ನೇ ಮಂಡಲದ ೮೬ ನೇ ಸೂಕ್ತದಲ್ಲಿ ೨೦-೨೨ ನೇ ಋಕ್ಕುಗಳಲ್ಲಿ) ಇಂದ್ರನಿಂದ ನಿಯೋಜಿತನಾಗಿರುವುದರಿಂದಲೂ ವೃಷಾಕಪಿಯೆಂಬ ಹೆಸರು ಬಂದಿರುವುದು.

69. **ವಿಷ್ಣುಶಬ್ದನಿರ್ವಚನ**—(**ವಿಶ್**-ವ್ಯಾಪಿಸು ಅಥವಾ **ವಿಶ್**-ಪ್ರವೇಶಿಸು, **ವಿನಿಶ್**-ಅಂತರ್ಗತನಾಗಿರು). ಈ ದೇವನು ಸಮಸ್ತ ಜಗತ್ತನ್ನೂ (ತನ್ನ ರಶ್ಮಿ ಅಥವಾ ಪ್ರಕಾಶದ ಮೂಲಕ) ವ್ಯಾಪಿಸುವುದರಿಂದಲೂ

66. Because all men (ವಿಶ್ವೇ ನರಾಃ) now singly (and) separately think of him, by reason of this function he is praised in laudations as Visvanara(6).

67. Because having become a brown (ಕಪಿಲ) bull (ವೃಷ) he mounts the firmament, therefore he is Vrsakapi (7), (in 'Indra is above all' (RV. x. 86): (of) this highest bull (vrsa) goes causing to waver (ಕಂಪಯನ್) with his rays:

**14. Derivation of Visnu. Incidental names cannot be enumerated.**

68. (i.e.) because he goes home (ಅಸ್ತಂ) at eventide causing beings to sleep, (his name) Vrsakapi may be (derived) from this: for in the three formulas beginning 'the waste' (ಧನ್ವ: RV. x. 86 20-22) in the hymn to Vrsakapi, he appears to be bidden thus (ಇತಿ) by Indra.

69. Visnu may be from (the root) vis (ವಿಷ್ಣಾತಿ) or vis (ವಿಶತಿ) (or) from

ವಿಷ್ಣಾತೇರ್ವಿಶತೇರ್ವಾ ಸ್ಯಾದ್ವೇವೇಷ್ಟೇರ್ವ್ಯಾಪ್ತಿಕರ್ಮಣಃ ||
ವಿಷ್ಣುರ್ನಿರುಚ್ಯತೇ ಸೂರ್ಯಃ ಸರ್ವಂ ಸರ್ವಾಂತರಶ್ಚ ಯಃ || ೬೯ ||

ಪಂಚ ಷಡ್ವಿಂಶತಿಶ್ಚೈವ ಯಾನಿ ನಾಮಾನಿ ಸಪ್ತ ಚ |
ಸಮ್ಯಗಗ್ನೀಂದ್ರಸೂರ್ಯಾಣಾಂ ತಾನ್ಯುಕ್ತಾನಿ ಯಥಾಕ್ರಮಂ || ೭೦ ||

ನೈಪಾತಿಕಾನಾಂ ನಾಮ್ನಾಂ ತು ಪ್ರಾಗುಕ್ತೈರ್ನಾಮಲಕ್ಷಣೈಃ |
ಸಂಪನ್ನಾನಾಂ ಪೃಥಕ್ತ್ವೇನ ಪರಿಸಂಖ್ಯಾ ನ ವಿದ್ಯತೇ || ೭೧ ||

ಪಾರ್ಥಿವೀ ಮಧ್ಯಮಾ ದಿವ್ಯಾ ವಾಗಪಿ ತ್ರಿವಿಧಾ ತು ಯಾ |
ತಸ್ಯಾಃ ಸೂಕ್ತಾನಿ ನಾಮಾನಿ ಯಥಾಸ್ಥಾನಂ ನಿಬೋಧತ || ೭೨ ||

ಅಥವಾ ಸಮಸ್ತ ವಸ್ತುಸ್ವರೂಪನಾದ್ದರಿಂದಲೂ ಅಥವಾ ಸಮಸ್ತ ವಸ್ತುಗಳಲ್ಲಿ ಅಂತರ್ಯಾಮಿಯಾಗಿ ಇರುವುದರಿಂದಲೂ ವಿಷ್ಣುವನ್ನು ಸೂರ್ಯನೆಂದು ಹೇಳುವರು ಅಥವಾ ಸೂರ್ಯನೇ ವಿಷ್ಣುಶಬ್ದವಾಚ್ಯನಾಗಿಯೂ ಇರುವನು.

70. ಅಗ್ನಿಯ ಐದು ನಾಮಗಳನ್ನೂ, ಇಂದ್ರನ ಇಪ್ಪತ್ತಾರು ನಾಮುಗಳನ್ನೂ ಸೂರ್ಯನ ಏಳು ನಾಮಗಳನ್ನೂ ಕ್ರಮವಾಗಿ ಹೇಳಿದ್ದಾಯಿತು.

71. ಆದರೆ ಸಂದರ್ಭೋಚಿತವಾದ ಮತ್ತು ನಾಮಕ್ಕೆ ಅನುರೂಪವಾದ ಲಕ್ಷಣಗಳಿಂದ (ಗುಣಗಳಿಂದ) ಕೂಡಿರುವ ಪ್ರತ್ಯೇಕವಾದ ಹೆಸರುಗಳ ಪಟ್ಟಿಯು (ಸಂಖ್ಯೆಯು) ಇರುವುದಿಲ್ಲ.

**ವಾಕ್ಕಿನ ಮೂರುವಿಧ ಸ್ವರೂಪ; ಪೃಥಿವೀ ಮತ್ತು ಮಧ್ಯಮಸ್ಥಾನದ ರೂಪಗಳು**

72. **ವಾಕ್ಕಿನ** (ವಾಗ್ದೇವತೆಯ) ಸ್ವರೂಪವು ಪೃಥಿವೀ, ಮಧ್ಯಮ (ಅಂತರಿಕ್ಷ) ಸ್ವರ್ಗಸ್ಥಾನಗಳಲ್ಲಿರುವವೆಂದು ಮೂರು ವಿಧವಾಗಿರುವುದು. ಆಯಾ ಸ್ಥಾನಗಳಲ್ಲಿರುವ ವಾಕ್ಕಿನ ಸೂಕ್ತಗಳನ್ನೂ, ಹೆಸರುಗಳನ್ನೂ ಹೇಳುವೆನು, ಕೇಳಿ.

---

vevis (ವೇವಿಷ್ಟಿ) expressing pervasion ; (he) is (thus) explained as the Sun who is everything and is contained in everything.

70. The five, the twenty-six, and the seven names of Agni, Indra, and Surya (respectively), have (thus) been duly stated in succession.

71. But of the incidental names accompanied by the abovementioned nominal characteristics (ನಾಮಲಕ್ಷಣೈಃ) a separate enumeration does not exist.

**15. Threefold Vac: her terrestrial and middle forms.**

72. As to Speech (ವಾಕ್) also, who is threefold as terrestrial, middle, (and) celestial, listen to (an account of) her hymns (and) names according to her sphere.

ಕೃತ್ಸ್ನಂ ತು ಭಜತೇ ಸೂಕ್ತಮೇಷಾ ನದ್ಯಃ ಸ್ತುತಾ ಭುವಿ ।
ಯದಾ ಚೈನಂ ಭಜಂತ್ಯಾಪೋ ಯದಾ ಚೌಷಧಯೋ ಯದಾ ॥ ೭೩ ॥

ಅರಣ್ಯಾನೀ ಚ ರಾತ್ರೀ ಚ ಶ್ರದ್ಧಾ ಚೋಷಾಃ ಸರಸ್ವತೀ ।
ಪೃಥಿವೀ ಚೈವ ನಾಮ್ನೈಷಾ ಭೂತ್ವಾಪ್ವರ್ಚಂ ಭಜಂತಿ ಚ ॥ ೭೪ ॥

ಅಗ್ನಾಯಿಾ ನಾಮತೋಽಪ್ಯೇಷಾ ಭೂತ್ವಾಗ್ನೇಯೇಷು ಕೇಷುಚಿತ್ ।
ಸ್ತುತಾ ನಿಪಾತಮಾತ್ರೇಣ ತತ್ರ ತತ್ರೇಹ ದೃಶ್ಯತೇ ॥ ೭೫ ॥

ಮಧ್ಯೇ ಸತ್ಯದಿತಿರ್ವಾಕ್ಚ ಭೂತ್ವಾ ಚೈಷಾ ಸರಸ್ವತೀ ।
ಸಮಗ್ರಂ ಭಜತೇ ಸೂಕ್ತಂ ತ್ರಿಭಿರೇವ ತು ನಾಮಭಿಃ ॥ ೭೬ ॥

ಏಷೈವ ದುರ್ಗಾ ಭೂತ್ವರ್ಚಂ ಕೃತ್ವಾ ಸ್ಯಾತ್ಸೂಕ್ತಭಾಗಿನೀ ।

73. ಭೂಮಿಯಲ್ಲಿರುವ ನದಿಗಳನ್ನೂ, ಉದಕಗಳನ್ನೂ, ಓಷಧಿಗಳನ್ನೂ ಸ್ತುತಿಸುವಾಗ ಪೂರ್ತಾ ಸೂಕ್ತವೆಲ್ಲಾ ವಾಕ್ಸ್ವರೂಪವೇ ಆಗಿರುವುದು.

74. ಮತ್ತು ಅರಣ್ಯಾನೀ, ರಾತ್ರಿ, ಶ್ರದ್ಧಾ, ಉಷಾಃ, ಪೃಥ್ವೀ, ಅಪ್ವ ಎಂಬ ದೇವತೆಗಳು ಸ್ತುತಿಸಲ್ಪಡುವಾಗ ವಾಕ್ಕು ಆಯಾ ಋಕ್ಕುಗಳಿಗನುಸಾರವಾಗಿ ಮಾತ್ರ ಇರುವುದು.

75. ಇದಲ್ಲದೆ ಅಗ್ನಾಯಿಾ ಎಂಬ ಹೆಸರಿನಿಂದ ಸ್ತುತಿಸಲ್ಪಡುವಾಗಲೂ ಕೆಲವು ಅಗ್ನಿಸೂಕ್ತಗಳಲ್ಲಿ ಪ್ರಸ್ತಾಪತ್ಪೀನ ಸ್ತುತಳಾಗಿಯೂ ಇರುವುದು ಅಲ್ಲಲ್ಲಿ ಕಂಡುಬರುವುದು.

76. ಈ ದೇವತೆಯು ಅಂತರಿಕ್ಷಸ್ಥಳಾದ **ವಾಕ್**, **ಅದಿತಿ**, **ಸರಸ್ವತೀ** ಎಂಬ ಮೂರು ನಾಮಗಳಿಂದ ಸ್ತುತಳಾದಾಗ ಆಯಾ ಸೂಕ್ತಕ್ಕೆಲ್ಲಾ ಸಮಗ್ರ (ಪೂರ್ತಿಯಾಗಿ) ವಾಗಿ ದೇವತೆಯಾಗಿರುವಳು.

**ವಾಗ್ದೇವತೆಯ ಇತರ ರೂಪಗಳು, ನಾಲ್ಕು ಸ್ವರ್ಗೀಯ ರೂಪಗಳು**

77. ಈ ದೇವತೆಯು **ದುರ್ಗಾ** ಎಂಬ ಹೆಸರಿನಿಂದ ಒಂದು ಋಕ್ಕಿನಲ್ಲಿ ಮಾತ್ರ ಸ್ತುತಳಾಗಿದ್ದರೂ ಸಮಗ್ರ

---

73. Now she owns the entire hymn when the rivers on earth, and when the waters, (and) when the plants, being praised, in it.

74 And when she becomes Aranyani and Ratri, Sraddha, Usas, and Prthvi by name, and Apva, (all these forms of her) own the stanza,

75. Also when she becomes Agnayi by name, she appears here (in the RV.) in various passage (ತತ್ರ ತತ್ರ) praised only incidentally in some (hymns) addressed to Agni.

76, When she, being Vac in the middle (sphere), has become Aditi and Sarasvathi, she owns the complete hymn under (these) three names only.

**16. Other middle forms of Vac. Her four celestial forms.**

77. She on becoming Durgi (and) uttering a stanza may own a

ಸೂರ್ಯಾಮೇವ ಸತೀಮೇತಾಂ ಗೌರೀಂ ವಾಚಂ ಸರಸ್ವತೀಂ ।
ಪಶ್ಯಾಮೋ ವೈಶ್ವದೇವೇಷು ನಿಪಾತೇನೈವ ಕೇವಲಾಃ ॥ ೮೧ ॥

ಘೋಷಾ ಗೋಧಾ ವಿಶ್ವವಾರಾ ಅಪಾಲೋಪನಿಷನ್ನಿಷತ್ ।
ಬ್ರಹ್ಮಜಾಯಾ ಜುಹೂರ್ನಾಮ ಅಗಸ್ತ್ಯಸ್ಯ ಸ್ವಸಾದಿತಿಃ ॥ ೮೨ ॥

ಇಂದ್ರಾಣೀ ಚೇಂದ್ರಮಾತಾ ಚ ಸರಮಾ ರೋಮಶೋರ್ವಶೀ ।
ಲೋಪಾಮುದ್ರಾ ಚ ನದ್ಯಶ್ಚ ಯಮಿಾ ನಾರೀ ಚ ಶಾಶ್ವತೀ ॥ ೮೩ ॥

ಶ್ರೀರ್ಲಾಕ್ಷಾ ಸಾರ್ಪರಾಜ್ಞೀ ವಾಕ್ ಶ್ರದ್ಧಾ ಮೇಧಾ ಚ ದಕ್ಷಿಣಾ ।
ರಾತ್ರೀ ಸೂರ್ಯಾ ಚ ಸಾವಿತ್ರೀ ಬ್ರಹ್ಮವಾದಿನ್ಯ ಈರಿತಾಃ ॥ ೮೪ ॥

81. ವಿಶ್ವೇದೇವತೆಗಳನ್ನು ಸ್ತುತಿಸುವ ಸೂಕ್ತಗಳಲ್ಲಿ ಈ ವಾಗ್ದೇವತೆಯು ಸೂರ್ಯಾ, ಗೌರೀ, ಸರಸ್ವತೀ ಎಂಬ ಹೆಸರುಗಳಿಂದ ಸ್ತುತಳಾಗಿದ್ದರೂ ಅವರೆಲ್ಲರೂ ಆ ಸೂಕ್ತಗಳಲ್ಲಿ ಪ್ರಸಕ್ತಪತ್ವೇನ ಸ್ತುತರಾಗಿರುವರೆಂದು ತಿಳಿಯಬೇಕು.

**ಋಷಿಕಾ ಅಥವಾ ಮಂತ್ರದ್ರಷ್ಟ್ರುಗಳಾದ ಸ್ತ್ರೀಯರು (ಸ್ತ್ರೀಋಷಿಗಳು); ಇವರಲ್ಲಿ ಮೂರು ಪಂಗಡಗಳು**

82. ಮೊದಲನೆಯ ಗುಂಪಿನಲ್ಲಿ—ಘೋಷಾ, ಗೋಧಾ, ವಿಶ್ವವಾರಾ, ಅಪಾಲಾ, ಉಪನಿಷತ್, ನಿಷತ್, ಜುಹೂ ಎಂಬ ಹೆಸರಿನ ಬ್ರಹ್ಮಜಾಯಾ, ಅಗಸ್ತ್ಯಋಷಿಯ ಸಹೋದರಿ ಮತ್ತು ಅದಿತಿ ಎಂಬ (ಒಂಭತ್ತು ಮಂದಿ) ಸ್ತ್ರೀಯರಿರುವರು.

83. ಎರಡನೇ ಗುಂಪಿನಲ್ಲಿ—ಇಂದ್ರಾಣೀ, (ಇಂದ್ರನ ಪತ್ನಿ) ಇಂದ್ರಮಾತಾ (ಇಂದ್ರನ ತಾಯಿಯು), ಸರಮಾ, ರೋಮಶಾ, ಉರ್ವಶೀ, ಲೋಪಾಮುದ್ರಾ, ನದಿಗಳು, ಯಮಿಾ, ಶಾಶ್ವತೀ ಎಂಬ ಒಂಭತ್ತು ಮಂದಿ ಇರುವರು.

84. ಮೂರನೆಯ ಗುಂಪಿನಲ್ಲಿ—ಶ್ರೀಃ, ಲಾಕ್ಷಾ, ಸಾರ್ಪರಾಜ್ಞೀ, ವಾಕ್, ಶ್ರದ್ಧಾ, ಮೇಧಾ, ದಕ್ಷಿಣಾ, ರಾತ್ರೀ, ಸೂರ್ಯಾ ಸಾವಿತ್ರೀ ಎಂಬ ಒಂಭತ್ತು ಮಂದಿಯು ಬ್ರಹ್ಮವಾದಿನಿಯರೆಂದು ಪ್ರಸಿದ್ಧರಾಗಿರುವರು.

---

81. We see that when this Vac is Surya, Gauri, Sarasvati, they (are) in the hymns to the All-gods (praised) incidentally only.

**17. Names of female seers : three groups.**

82. Ghosa, Godha, Visvavara, Apala, Upanishad, Nisad, Brahmh-jaya (who is) named Juhu, the sister of Agastya, Aditi,

83. and Indrani, and the mother of Indra, Sarama, Romasa, Urvasi, and Lopamudra, and The Rivers, (and) Yami, and the wife Sasvati.

84. Sri, Laksa, Sarparajni, Vac, Sraddha, Medha, Dakshina, Ratri, and Surya Savitri, (all these) are pronounced to be female seers (ಬ್ರಹ್ಮವಾದಿನ್ಯಃ).

ನವಕಃ ಪ್ರಥಮಸ್ತ್ವಾಸಾಂ ವರ್ಗಸ್ತುಷ್ಟಾವ ದೇವತಾಃ ।
ಋಷಿಭಿರ್ದೇವತಾಭಿಶ್ಚ ಸಮೂದೇ ಮಧ್ಯಮೋ ಗಣಃ ॥ ೮೫ ॥

ಆತ್ಮನೋ ಭಾವವೃತ್ತಾನಿ ಜಗೌ ವರ್ಗಸ್ತಥೋತ್ತಮಃ ।
ಉತ್ತಮಸ್ಯ ತು ವರ್ಗಸ್ಯ ಯ ಋಷಿಃ ಸ್ಯೈವ ದೇವತಾ ॥ ೮೬ ॥

ಆತ್ಮಾನಮಸ್ತೌದ್ವರ್ಗಸ್ತು ದೇವತಾಂ ಯಸ್ತಥೋತ್ತಮಃ ।
ತಸ್ಮಾದಾತ್ಮಸ್ತವೇಷು ಸ್ಯಾದ್ಯ ಋಷಿಃ ಸೈವ ದೇವತಾ ॥ ೮೭ ॥

ಸಂವಾದೇಷ್ವಾಹ ವಾಕ್ಯಂ ಯಃ ಸ ತು ತಸ್ಮಿನ್ಭವೇದೃಷಿಃ ।
ಯಸ್ತೇನೋಚ್ಯೇತ ವಾಕ್ಯೇನ ದೇವತಾ ತತ್ರ ಸಾ ಭವೇತ್ ॥ ೮೮ ॥

85. ಇವರಲ್ಲಿ ಮೊದಲನೆಯ ಗುಂಪಿನಲ್ಲಿರುವ ಒಂಭತ್ತು ಮಂದಿ ದೇವತೆಗಳನ್ನು ಸ್ತೋತ್ರ (ಮಾತ್ರ) ಮಾಡಿರುವರು. ಮಧ್ಯಮ ಎಂದರೆ ಎರಡನೇ ವರ್ಗದ ಒಂಭತ್ತು ಮಂದಿ ಋಷಿಗಳೊಡನೆಯೂ, ದೇವತೆಗಳೊಡನೆಯೂ ಸಂಭಾಷಣೆಮಾಡಿರುವರು (ಮಾತನಾಡಿರುವರು).

86. ಕೊನೆಯ ವರ್ಗದ ಒಂಭತ್ತು ಮಂದಿ ಭಾವವೃತ್ತದೇವತೆಗಳನ್ನು ಸ್ತುತಿಸಿರುವರು. ಎಂದರೆ ಆಯಾ ಸೂಕ್ತಕ್ಕೆ ಋಷಿಯೂ, ದೇವತೆಯೂ ಒಂದೇ ಆಗಿರುವುದು. ತಮ್ಮನ್ನೇ ಪ್ರಶಂಸೆಮಾಡಿರುವರೆಂದಭಿಪ್ರಾಯವು.

**ಸ್ವಪ್ರಶಂಸೆಮಾಡಿರುವ ದೇವತೆಗಳು, ಸಂವಾದಗಳು, ನಿಪಾತಗಳು**

87. ಕೊನೆಯ ವರ್ಗದ ಋಷಿಗಳಲ್ಲಿ ಪ್ರತಿಯೊಬ್ಬರೂ ತಮ್ಮನ್ನೇ ದೇವತೆಯೆಂದು ಭಾವಿಸಿ ಪ್ರಶಂಸೆ ಮಾಡಿಕೊಂಡಿರುವರು. ಆದ್ದರಿಂದ ಈ ಸೂಕ್ತಗಳಿಗೆ ಯಾರು ಋಷಿಗಳೋ ಅವರೇ ಆ ಸೂಕ್ತಗಳಿಗೆ ದೇವತೆಗಳೂ ಆಗಿರುವರು.

88. ಇದೇರೀತಿ ಸಂಭಾಷಣೆ ಅಥವಾ ಸಂವಾದರೂಪವಾದ ಮಂತ್ರಗಳಲ್ಲಿಯೂ ಯಾರು ವಾಕ್ಯವನ್ನು ಹೇಳುವರೋ (ಮಾತನಾಡುವರೋ) ಅವರೇ ಆ ಮಂತ್ರಕ್ಕೆ ಋಷಿಯು; ಮಂತ್ರದಲ್ಲಿ ಯಾರ (ಅಥವಾ ಯಾವ) ವಿಷಯವು ಹೇಳಲ್ಪಟ್ಟಿರುವುದೋ ಅವರೇ ಅಥವಾ ಅದೇ ವಿಷಯವೇ ಆ ಮಂತ್ರಕ್ಕೆ ದೇವತೆಯೆಂದು ಹೇಳಲ್ಪಡುವುದು.

85. The first group of these, consisting of nine, praised the deities; the middle series conversed with seers and deities.

86. The last group sang of the evolutionary forms (ಭಾವವೃತ್ತಂ) of Self. Whoever is the seer (of a hymn by one) of the last group is also the deity.

18. **Deity in self-laudations and colloquies, particles.**

87. Now (each seer of) the last group thus praise herself as the deity: therefore whoever may be the seer in self-laudations is at the same time the deity.

88. He who utters the speech in colloquies should be (regarded as) the seer in it; whoever may be addressed by that speeeh should be (regarded) as the deity therein.

**ಉಚ್ಚಾವಚೇಷು ಚಾರ್ಥೇಷು ನಿಪಾತಾಃ ಸಮುದಾಹೃತಾಃ ।**
**ಕರ್ಮೋಪಸಂಗ್ರಹಾರ್ಥೇ ಚ ಕ್ವಚಿಚ್ಚೌಪಮ್ಯ ಕಾರಣಾತ್** ॥ ೮೯ ॥

**ಊನಾನಾಂ ಪೂರಣಾರ್ಥಾ ವಾ ಪಾದಾನಾಮಪರೇ ಕ್ವಚಿತ್ ।**
**ಮಿತಾಕ್ಷರೇಷು ಗ್ರಂಥೇಷು ಪೂರಣಾರ್ಥಾಸ್ತ್ವನರ್ಥಕಾಃ** ॥ ೯೦ ॥

**ಕಮೀಮಿದ್ವಿತಿ ವಿಜ್ಞೇಯಾ ಯೇ ತ್ವನೇಕಾರ್ಥಕಾಶ್ಚ ತೇ ।**
**ಇವ ನ ಚಿನ್ನು ಚತ್ವಾರ ಉಪಮಾರ್ಥಾ ಭವಂತಿ ತೇ** ॥ ೯೧ ॥

**ಉಪಮಾರ್ಥೇ ನಕಾರಸ್ತು ಕ್ವಚಿದೇವ ನಿಪಾತ್ಯತೇ ।**

89. ನಿಪಾತಗಳು ಅನೇಕಾರ್ಥಗಳಲ್ಲಿ ಉಪಯೋಗಿಸಲ್ಪಡುವವು. ಕರ್ಮಗಳಲ್ಲಿ ಪರಸ್ಪರ ಸಂಬಂಧವನ್ನು ತೋರಿಸುವುದಕ್ಕಾಗಿಯೂ, ಕೆಲವುಕಡೆ ಉಪಮಾನ (ಹೋಲಿಕೆ) ಯನ್ನು ತಿಳಿಸುವುದಕ್ಕಾಗಿಯೂ, ಈ ನಿಪಾತಗಳ ಪ್ರಯೋಗವಿರುವುದು.

90. ಮತ್ತೆ ಕೆಲವು ಸಂದರ್ಭಗಳಲ್ಲಿ ಈ ನಿಪಾತಗಳು ಪಾದಪೂರಣಕ್ಕಾಗಿ ಎಂದರೆ ಛಂದಸ್ಸುಗಳಲ್ಲಿರಬೇಕಾದ ಕ್ಲೃಪ್ತಸಂಖ್ಯೆಯ ಅಕ್ಷರಗಳಿಲ್ಲದೆ ಕಮ್ಮಿಯಾಗಿದ್ದಲ್ಲಿ ಅವುಗಳನ್ನು ಪೂರಣಮಾಡುವುದಕ್ಕಾಗಿ ಉಪಯೋಗಿಸಲ್ಪಡುವವು. ಆದ್ದರಿಂದ ಅನೇಕ ಸಂದರ್ಭಗಳಲ್ಲಿ ಮಿತಾಕ್ಷರ ಎಂದರೆ ಛಂದೋಬದ್ಧವಾದ ಗ್ರಂಥಗಳಲ್ಲಿ (ಎಂದರೆ ಋಕ್ಕುಗಳಲ್ಲಿ) ಪೂರಣಾರ್ಥವಾಗಿ ಉಪಯೋಗಿಸಲ್ಪಟ್ಟಿರುವ ಈ ನಿಪಾತಗಳಿಗೆ ಯಾವ ನಿರ್ದಿಷ್ಟಾರ್ಥವೂ ಇರುವುದಿಲ್ಲ.

91. ಆ ನಿಪಾತಗಳಲ್ಲಿ ಕೆಲವು **ಕಂ ಈಂ ಇತ್ ಊ** ಎಂಬ ನಿಪಾತಗಳು ಪೂರಣಾರ್ಥವಾಗಿ ಉಪಯೋಗಿಸಲ್ಪಡುವುವಾದರೂ ಕೆಲವು ಸಂದರ್ಭಗಳಿಗೆ ಅವುಗಳಿಗೆ ಒಂದುವಿಧವಾದ ಎಂದರೆ ಬೇರೆಬೇರೆ ಅರ್ಥವೂ ಇರುವುದು. **ಇವ, ನ, ಚಿತ್, ನು,** ಎಂಬ ನಾಲ್ಕು ನಿಪಾತಗಳಿಗೆ ಉಪಮಾರ್ಥವಿರುವುದು.

92. **ನ** ಎಂಬ ನಿಪಾತವು ಛಂದೋಬದ್ಧಗ್ರಂಥಗಳಲ್ಲಿ (ಋಕ್ಕುಗಳಲ್ಲಿ) ಕೆಲವು ಸಂದರ್ಭಗಳಲ್ಲಿ ಮಾತ್ರ ಉಪಮಾರ್ಥದಲ್ಲಿ ಉಪಯೋಗಿಸಲ್ಪಡುವುದು. ಅನೇಕವೇಳೆ ನಿಷೇಧಾರ್ಥದಲ್ಲಿಯೂ ಇದರ ಪ್ರಯೋಗವಿರುವುದು.

---

89. Particles are enumerated in various sensess--both for the purpose of connecting actions, and occasionally for the sake of comparison.

90, Others again (are) occasionally (used) for the purpose of filling up defective verses (ಪಾದ). Those (particles) which in metrical books have the purpose of filling up (the verse) are meaningless.

91. They are to be recognised as kam, im, id, u, But (there are) also such (particles) as have various senses. ಇವ ನ ಚಿತ್ ನು—these are the four having the sense of comparison.

**19. Particles (continued). Prepositions. Genders.**

92. **Now** ನ **is, in material books, only occasionally uscd as a**

ಮಿತಾಕ್ಷರೇಷು ಗ್ರಂಥೇಷು ಪ್ರತಿಷೇಧೇ ತ್ವನಲ್ಪಶಃ || ೯೨ ||
ಇಯಂತ ಇತಿ ಸಂಖ್ಯಾನಂ ನಿಪಾತಾನಾಂ ನ ವಿದ್ಯತೇ |
ವಶಾತ್ಪ್ರಕರಣಸ್ಯೈತೇ ನಿಪಾತ್ಯಂತೇ ಪದೇ ಪದೇ || ೯೩ ||
ಉಪಸರ್ಗಾಸ್ತು ವಿಜ್ಞೇಯಾಃ ಕ್ರಿಯಾಯೋಗೇನ ವಿಂಶತಿಃ |
ವಿವೇಚಯಂತಿ ತೇ ಹ್ಯರ್ಥಂ ನಾಮಾಖ್ಯಾತವಿಭಕ್ತಿಷು || ೯೪ ||
ಅಚ್ಛ ಶ್ರದಂತರಿತ್ಯೇತಾನಾಚಾರ್ಯಃ ಶಾಕಟಾಯನಃ |
ಉಪಸರ್ಗಾನ್ ಕ್ರಿಯಾಯೋಗಾನ್ಮೇನೇ ತೇ ತು ತ್ರಯೋಽಧಿಕಾಃ || ೯೫ ||
ತ್ರಿಣ್ಯೇವ ಲೋಕೇ ಲಿಂಗಾನಿ ಪುಮಾನ್ ಸ್ತ್ರೀ ಚ ನಪುಂಸಕಂ |
ನಾಮಸೂಕ್ತಪ್ರಯೋಗೇಷು ವಾಚ್ಯಂ ಪ್ರಕರಣಂ ತಥಾ || ೯೬ ||

93. ಈ ನಿಪಾತಗಳ ಸಂಖ್ಯೆಯು ಇಷ್ಟೇ ಎಂದು ಪರಿಗಣಿಸಲು ಸಾಧ್ಯವಿಲ್ಲ. ಬೇಕಾದಷ್ಟಿವೆ. ಆಯಾ ಸಂದರ್ಭಾನುಸಾರವಾಗಿ ಅನೇಕವೇಳೆ ಅವುಗಳ ಪ್ರಯೋಗವಿರುವುದು.

**ಉಪಸರ್ಗಗಳು ಮತ್ತು ಲಿಂಗಗಳು**

94. ಕ್ರಿಯಾಪದಗಳಿಗೆ ಸಂಬಂಧಿಸಿರುವಂತೆ ಇಪ್ಪತ್ತು ಉಪಸರ್ಗಗಳಿರುವವು. ಅವುಗಳು ನಾಮಪದಗಳ ಮತ್ತು ಕ್ರಿಯಾಪದಗಳ ಅರ್ಥಗಳನ್ನು ವಚನವಿಭಕ್ತಿಗಳಿಗನುಸಾರವಾಗಿ ವ್ಯತ್ಯಸ್ತವಾಗಿರುವುದನ್ನು ವಿಶದಪಡಿಸುವವು.

95. **ಅಚ್ಛ, ಶ್ರತ್, ಅಂತಃ** ಎಂಬ ಮೂರು ಶಬ್ದಗಳನ್ನು ನಿಪಾತಗಳೆಂದು ಶಾಕಟಾಯನ ಎಂಬ ಆಚಾರ್ಯರು ತಿಳಿಸಿರುವರು. ಕ್ರಿಯಾಪದಗಳ ಅಥವಾ ಕ್ರಿಯೆಗಳ ಅರ್ಥವನ್ನು ತಿಳಿಸುವ ಸಂದರ್ಭದಲ್ಲಿ ಈ ಮೂರು ಶಬ್ದಗಳೂ ಆ ಇಪ್ಪತ್ತು ಉಪಸರ್ಗಗಳ ಜತೆಗೆ ಸೇರಿ ಇಪ್ಪತ್ತಮೂರು ಉಪಸರ್ಗಗಳಾಗಿರುವವೆಂದು ಆ ಆಚಾರ್ಯರ ಮತವು.

96. ಲೋಕವ್ಯವಹಾರದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗವೆಂಬ ಮೂರು ಲಿಂಗಗಳು ಮಾತ್ರ ಬಳಕೆಯಲ್ಲಿರುವವು. ನಾಮಪದಗಳ ಮತ್ತು ಸೂಕ್ತದಲ್ಲಿ ಉಕ್ತವಾಗಿರುವ ಪ್ರಕರಣಗಳ ವಿಷಯದಲ್ಲಿ ಈ ಲಿಂಗಗಳ ಉಪಯೋಗವನ್ನು ಗಮನಿಸಬೇಕು.

---

particle (ನಿಪಾತ್ಯತೇ) in the sense of comparison, but frequently in (the sense of) negation.

93. There does not exist an enumeration of the particles (starting explicitly) 'there are so many'. These particles are used (ನಿಪಾತ್ಯಂತೇ) at every turn (ಪದೇ ಪದೇ) on account of the subjeet-matter (ಪ್ರಕರಣ).

94. The twenty prepositions (ಉಪಸರ್ಗಾಃ) are to be recognised by reason of their connexion with (verbal) action; for they differentiate the meaning in the inflexion of noun and verb,

95. Acha, srad, antar—these the teacher Sakatayana considered prepositions because of their connexian with action; they are three more.

96. There are just three genders in popular usage (ಲೋಕೇ)—masculine, feminine, neuter. In (regard to) nouns, the employment of which has been stated, the subject-matter must be stated in this way.

ತೇಷಾಂ ತು ನಾಮಭಿರ್ಲಿಂಗೈರ್ಗ್ರಹಣಂ ಸರ್ವನಾಮಭಿಃ |
ಕೃತಾಕೃತಸ್ಯ ಸದೃಶೋ ಗೃಹೀತಸ್ಯ ಪುನರ್ಗ್ರಹಃ || ೯೭ ||

ಪಾದಸೂಕ್ತಋಗರ್ಧರ್ಚನಾಮಾನ್ಯನ್ಯಾನಿ ಯಾನಿ ಚ |
ಸರ್ವೇ ನಾಮಾನಿ ಚೈವಾಹುರನ್ಯೇ ಚೈವಂ ಯಥಾ ಕಥಾ || ೯೮ ||

ಪ್ರಧಾನಮರ್ಥಃ ಶಬ್ದೋ ಹಿ ತದ್ಗುಣಾಯತ್ತ ಇಷ್ಯತೇ |
ತಸ್ಮಾನ್ನಾನಾನ್ವಯೋಪಾಯೈಃ ಶಬ್ದಾನರ್ಥವಶಂ ನಯೇತ್ || ೯೯ ||

### ನಾಮಪದಗಳು, ಸರ್ವನಾಮಗಳು, ಅರ್ಥ, ವಾಕ್ಯರಚನೆ

97. ವಸ್ತುಗಳ ಅಥವಾ ಪ್ರಾಣಿಗಳ ಹೆಸರುಗಳು ನಾಮಪದಗಳಿಂದ ಮಾತ್ರವಲ್ಲದೆ ಬೇರೆ ಬೇರೆ ಲಿಂಗಗಳಿಂದಲೂ ನಿರ್ದೇಶಿಸಲ್ಪಡುವವು. ಸರ್ವನಾಮಗಳ ವಿಷಯದಲ್ಲಿಯೂ ಇದೇ ನಿಯಮವಿರುವುದು. ಒಂದಾವರ್ತಿ ನಿರ್ದೇಶಿಸಿದ ವಸ್ತುವನ್ನು ಪುನಃ ಹೇಳುವಾಗ ಸರ್ವನಾಮದ ಪ್ರಯೋಗವಿರುವುದು. ಮತ್ತು ಆ ಪ್ರಯೋಗವು ಕರ್ಮಾಕರ್ಮಗಳಿಗೆ ಅನುಸಾರವಾಗಿರುವುದು.

98. ಸೂಕ್ತ, ಋಕ್, ಅರ್ಧಋಕ್, ಪಾದ ಮೊದಲಾದವುಗಳಲ್ಲಿ ಯಾವ ಯಾವ ಹೆಸರುಗಳಿರುವವೋ ಅವೆಲ್ಲವೂ ನಾಮಪದಗಳೆಂದು ಎಲ್ಲರೂ ಹೇಳುವರು. ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿಲ್ಲ. ಆದರೆ ಮತ್ತೆ ಕೆಲವರು ಹೆಸರುಗಳಲ್ಲದ ಇತರ ಕೆಲವು ಶಬ್ದಗಳನ್ನು ಸಂದರ್ಭಾನುಸಾರವಾಗಿ ನಾಮಪದಗಳ ಗುಂಪಿಗೆ ಸೇರಿಸುವರು.

99. ಒಂದು ಶಬ್ದದ ಮುಖ್ಯವಾದ ಅರ್ಥವು ಆ ವಸ್ತುವಿನ ಗುಣವನ್ನನುಸರಿಸಿರುವುದು. ಆದ್ದರಿಂದ ಒಂದು ಶಬ್ದದ ಅರ್ಥವನ್ನು ಹೇಳುವಾಗ ಆ ಶಬ್ದಕ್ಕೆ ನಾನಾವಿಧವಾದ (ರೂಪಸಿಷ್ಪತ್ತಿ ಮೊದಲಾದ) ಉಪಾಯಗಳಿಂದ ಅರ್ಥವನ್ನು ಹೊಂದಿಸಬೇಕು.

---

### 20. Nouns, Pronouns, Sense, Rules for construing.

97. Now these (names) are mentioned (not only) by means of nouns, (but also) by means of genders; by means of pronouns repeated mention (is made) of (a noun already) mentioned, similar to (the repeated mention of) a positive or negative act (ಕೃತಾಕೃತಸ್ಯ).

98. All (authorities) say that the names (occuring) in verses, hymns, stanzas, hemistichs, and any others (there may be), (are) nouns; some (call them) so according to circumstances (ಯಥಾ ಕಥಾ).

99. The sense is the chief thing; for a term (ಶಬ್ದ) is required (to be) dependent on the qualities (ಗುಣ) of it (the sense); therefore one should bring terms under subjection to the sense by the various expedients of construing.

**ಅತಿರಿಕ್ತಂ ಪದಂ ತ್ಯಾಜ್ಯಂ ಹೀನಂ ವಾಕ್ಯೇ ನಿವೇಶಯೇತ್ ।**
**ವಿಪ್ರಕೃಷ್ಟಂ ಚ ಸಂದಧ್ಯಾದಾನುಪೂರ್ವೀಂ ಚ ಕಲ್ಪಯೇತ್** ॥ ೧೦೦ ॥
**ಲಿಂಗಂ ಧಾತುಂ ವಿಭಕ್ತಿಂ ಚ ಸಂನಮೇತ್ತತ್ರ ತತ್ರ ಚ ।**
**ಯದ್ಯಸ್ಯಾಚ್ಛಾಂದಸಂ ಮಂತ್ರೇ ತತ್ತತ್ಕುರ್ಯಾತ್ತು ಲೌಕಿಕಂ** ॥ ೧೦೧ ॥
**ಯಾವತಾಮೇವ ಧಾತೂನಾಂ ಲಿಂಗಂ ರೂಢಿಗತಂ ಭವೇತ್ ।**
**ಅರ್ಥಶ್ಚಾಪ್ಯಭಿಧೇಯಃ ಸ್ಯಾತ್ತಾವದ್ಭಿರ್ಗುಣವಿಗ್ರಹಃ** ॥ ೧೦೨ ॥

100. ಒಂದು ವಾಕ್ಯದಲ್ಲಿ ಅಸಂಬದ್ಧವಾದ (ಸಂದರ್ಭೋಚಿತವಲ್ಲದ, ಸರಿಯಾದ ಅರ್ಥವಿಲ್ಲದಿರುವ) ಶಬ್ದವನ್ನು ತ್ಯಜಿಸಬೇಕು ಎಂದರೆ ಆಶಬ್ದಕ್ಕೆ ಯಾವ ಅರ್ಥವನ್ನೂ ಹೇಳಬಾರದು. ಒಂದು ಅವಶ್ಯಕವಾದ ಶಬ್ದವು ವಾಕ್ಯದಲ್ಲಿಲ್ಲದಿದ್ದರೆ, ವಾಕ್ಯದ ಅರ್ಥವನ್ನು ಹೊಂದಿಸುವುದಕ್ಕಾಗಿ ಆ ಶಬ್ದವನ್ನು ಅಧ್ಯಾಹಾರಮಾಡಿಕೊಳ್ಳಬೇಕು ಮತ್ತು ಒಂದು ವಾಕ್ಯದಲ್ಲಿ ಸಂಬಂಧಪಟ್ಟ ಶಬ್ದಗಳು ಜತೆಯಲ್ಲಿರದೆ ದೂರದೂರದಲ್ಲಿದ್ದರೆ, ಆ ಶಬ್ದಗಳನ್ನು ಒಂದೆಡೆ ತಂದು ಸೇರಿಸಿ ಅನ್ವಯವನ್ನು ಹೊಂದುವಂತೆ ಮಾಡಿ ಅರ್ಥಮಾಡಬೇಕು.

101. ಅರ್ಥವು ಸರಿಯಾಗಿ ಹೊಂದುವುದಕ್ಕಾಗಿ ಮಂತ್ರದಲ್ಲಿರುವ ಲಿಂಗ, ಧಾತು, ವಿಭಕ್ತಿ ಮೊದಲಾದವುಗಳನ್ನು ಅಲ್ಲಲ್ಲಿ ಸರಿಪಡಿಸಿ ಅನ್ವಯಮಾಡಬೇಕು. (ಹೇಗೆಂದರೆ, ಮಂತ್ರಗಳಲ್ಲಿ ಪುಲ್ಲಿಂಗಕ್ಕೆ ಬದಲಾಗಿ ಸ್ತ್ರೀಲಿಂಗ ಪ್ರಯೋಗವಿರಬಹುದು; ಏಕವಚನಕ್ಕೆ ಬದಲಾಗಿ ದ್ವಿವಚನ ಅಥವಾ ಬಹುವಚನವಿರಬಹುದು ; ಒಂದು ವಿಭಕ್ತಿಗೆ ಬದಲಾಗಿ ಬೇರೊಂದು ವಿಭಕ್ತಿ ಇರಬಹುದು. ಆದ್ದರಿಂದ ಶಬ್ದಗಳಲ್ಲಿ ಕಂಡುಬರುವ ಲಿಂಗ, ಧಾತು, ವಿಭಕ್ತಿ ವಚನಗಳನ್ನೇ ಮುಖ್ಯವಾಗಿ ಪರಿಗಣಿಸದೆ ಅರ್ಥವು ಸಮಂಜಸವಾಗಿ ಹೊಂದುವಂತೆ ವಿಭಕ್ತಿವಚನಾದಿಗಳಲ್ಲಿ ಸಂದರ್ಭಾನುಸಾರ ವ್ಯತ್ಯಾಸವನ್ನು ಮಾಡಿ ಅರ್ಥಹೇಳಬೇಕೆಂದಭಿಪ್ರಾಯವು) ಮತ್ತು ಛಂದೋಬದ್ಧವಾದ ಋಕ್ಕುಗಳಲ್ಲಿಯೂ ಮಂತ್ರಗಳಲ್ಲಿಯೂ ವಿಷಯಗಳು ಸೂಕ್ಷ್ಮವಾಗಿಯೂ ಬೇಗನೆ ಅರ್ಥವಾಗದ ರೀತಿಯಲ್ಲಿಯೂ ಅಸ್ಪಷ್ಟವಾಗಿಯೂ ಇದ್ದರೆ ಆ ಮಂತ್ರಗಳ ಅರ್ಥವನ್ನು ಲೌಕಿಕಭಾಷೆಗೆ ಎಂದರೆ ಬಳಕೆಯಲ್ಲಿರುವ ಭಾಷೆಗೆ ಚೆನ್ನಾಗಿ ಅರ್ಥವಾಗುವಂತೆ ಪರಿವರ್ತಿಸಬೇಕು.

**ಪದವಿಚ್ಛೇದ ಮತ್ತು ಆರುವಿಧ ಸಮಾಸಪದಗಳು**

102. ಯಾವ ಧಾತುಗಳ ರೂಪವೂ ಅರ್ಥವೂ ಯಾವರೀತಿ ರೂಢಿಯಲ್ಲಿರುವುದೋ ಆ ಧಾತುಗಳ ಗುಣವಿವರಣೆಯೂ ರೂಪವನ್ನೂ ಅರ್ಥವನ್ನೂ ಅನುಸರಿಸಿರುವುದು.

---

100. A redundant word (ಪದ) should be rejected, while one that is lacking one should introduce into the sentence: and one that is far removed, one should bring into exta-position, and should (then) arrange the regular sequence (of the words).

**21. Analysis of words. Six kinds of compounds.**

101. Gender, root, and inflexion one should, in their respective places, adopt (to the sense). Whatever is Vedic in formula one should turn into everyday speech (ಲೌಕಿಕ).

102. The analysis of the secondary elements (ಗುಣ) may be (effected) by the aid of all roots (ಧಾತು) which possess a traditional characteristic form (ಲಿಂಗ), and the sense of which can be stated.

ಧಾತೂಪಸರ್ಗಾವಯವಗುಣಶಬ್ದಂ ದ್ವಿಧಾತುಜಂ ।
ಬಹ್ವೇಕಧಾತುಜಂ ವಾಪಿ ಪದಂ ನಿರ್ವಾಚ್ಯಲಕ್ಷಣಂ　　　॥ ೧೦೩ ॥
ಧಾತುಜಂ ಧಾತುಜಾಜ್ಜಾತಂ ಸಮಸ್ತಾರ್ಥಜಮೇವ ವಾ ।
ವಾಕ್ಯಜಂ ವ್ಯತಿಕೀರ್ಣಂ ಚ ನಿರ್ವಾಚ್ಯಂ ಪಂಚಧಾ ಪದಂ　　　॥ ೧೦೪ ॥
ದ್ವಿಗುರ್ದ್ವಂದ್ವೋಽವ್ಯಯೀಭಾವಃ ಕರ್ಮಧಾರಯ ಏವ ಚ ।
ಪಂಚಮಸ್ತು ಬಹುವ್ರೀಹಿಃ ಷಷ್ಠಸ್ತತ್ಪುರುಷಃ ಸ್ಮೃತಃ　　　॥ ೧೦೫ ॥
ವಿಗ್ರಹಾನ್ನಿರ್ವಚಃ ಕಾರ್ಯಂ ಸಮಾಸೇಷ್ವಪಿ ತದ್ಧಿತೇ ।

103. ಒಂದು ಪದವು (ಶಬ್ದವು) ಒಂದು ಧಾತು, ಎರಡು ಧಾತುಗಳು ಅಥವಾ ಅನೇಕ ಧಾತುಗಳಿಂದ ನಿಷ್ಪನ್ನವಾಗಿ, ಧಾತು, ಉಪಸರ್ಗ, ಅವಯವ (ವಿಭಾಗ) ಗುಣ, ಶಬ್ದ ಎಂಬ ಐದುವಿಧ ಅವಯವಗಳಿಂದ ಸಹಿತವಾಗಿ ಒಂದು ನಿರ್ದಿಷ್ಟಾರ್ಥವನ್ನು ಬೋಧಿಸುವುದು.

104. ಒಂದು ಶಬ್ದವನ್ನು ಐದುವಿಧವಾಗಿ ವಿವರಿಸಬಹುದು. ಆ ಶಬ್ದವು ಒಂದು ಧಾತುವಿನಿಂದ ನಿಷ್ಪನ್ನವಾಗಿ ಆ ಧಾತುವಿನ ಅರ್ಥವನ್ನು ನಿರ್ದೇಶಿಸಬಹುದು; (ಉದಾ—ಯಜ್ಞ-ಈ ಶಬ್ದವು ಯಜ್ ಧಾತುವಿನಿಂದ ನಿಷ್ಪನ್ನವಾಗಿದೆ) ಅಥವಾ ಒಂದು ಧಾತುವಿನಿಂದ ನಿಷ್ಪನ್ನವಾದ ಶಬ್ದದಿಂದ ಇನ್ನೊಂದು ಶಬ್ದವು ಉತ್ಪನ್ನವಾಗಿ ಒಂದು ನಿರ್ದಿಷ್ಟಾರ್ಥವನ್ನು ಸೂಚಿಸಬಹುದು. (ಉದಾ—ನಮಸ್ಕಾರ; ನಮ ಎಂಬುದು ನಮ್ ಧಾತುವಿನಿಂದ ಉಂಟಾಗಿದೆ. ಇದರ ಜತೆಗೆ ಕಾರ ಎಂಬ ಶಬ್ದವೂ ಸೇರಿ ನಮಸ್ಕಾರ ಎಂದಾಗಿದೆ) ಅಥವಾ ಆ ಶಬ್ದದಲ್ಲಿರುವ ಅಕ್ಷರಗಳ ಸಂಯೋಜನದಿಂದ ಲಬ್ದವಾಗುವ ಒಂದು ಒಟ್ಟರ್ಥವನ್ನು ಸೂಚಿಸಬಹುದು; (ಪುರೋಹಿತ) ಅಥವಾ ಒಂದು ವಾಕ್ಯದಿಂದ ನಿರ್ದಿಷ್ಟವಾಗುವ ಅಭಿಪ್ರಾಯವನ್ನು ಸೂಚಿಸಬಹುದು; (ವೃತ್ರಹಾ-ವೃತ್ರನನ್ನು ಕೊಂದವನು) ಅಥವಾ ರೂಪನಿಷ್ಪತ್ತಿಗೆ ಸಂಬಂಧವಿಲ್ಲದಿರುವ ಬೇರೊಂದು ಅರ್ಥವನ್ನು ಸೂಚಿಸಬಹುದು. (ಉದಾ—ರೋದಸೀ ಇತ್ಯಾದಿ).

105. ಆರುವಿಧ ವಿಗ್ರಹಗಳು (ಸಮಾಸಪದಗಳು)—ದ್ವಿಗು, ದ್ವಂದ್ವ, ಅವ್ಯಯೀಭಾವ, ಕರ್ಮಧಾರಯ, ಬಹುವ್ರೀಹಿ ಮತ್ತು ತತ್ಪುರುಷ.

106. ಸಮಾಸಪದಗಳ ಅರ್ಥವನ್ನು ವಿವರಿಸುವಾಗಲೂ, ಶಬ್ದಗಳ ರೂಪನಿಷ್ಪತ್ತಿಯನ್ನು ವಿವರಿಸುವಾಗಲೂ ಆ ಶಬ್ದಗಳ ಅವಯವಗಳನ್ನು (ಅದರಲ್ಲಿರುವ ಬೇರೆಬೇರೆ ಪದ, ಧಾತುಮೂಲ, ಅಕ್ಷರ, ಉಪಸರ್ಗ ಇತ್ಯಾದಿ) ವಿಂಗಡಿಸಿ

---

103. A word (ಪದ), the definition of which can be expressed, whether it be derived from two roots, many (roots), or one root, is one consisting of a sound (ಶಬ್ದ) that contains root, preposition, members (ಅವಯವ), and secondary elements (ಗುಣ).

104. A word may be explained in five ways, (viz) as derived from a root, as derived from the derivative of a root, as derived from a compound meaning (ಸಮಸ್ತಾರ್ಥ), as devrived from a sentence (vakya), and as (of) confused derivation.

105. Dvigu, Dvanda, Avyayibhava, and Karmadharaya, the fifth Bahuvrihi, and the sixth called Tatpurusa (are the compounds).

ಪ್ರವಿಭಜ್ಯೈವ ನಿರ್ಬ್ರೂಯಾದ್ದಂಡಾರ್ಹೋ ದಂಡ್ಯ ಇತ್ಯಪಿ || ೧೦೬ ||
ಭಾರ್ಯಾ ರೂಪವತೀ ಚಾಸ್ಯ ರೂಪವದ್ಭಾರ್ಯ ಇತ್ಯಪಿ |
ಇಂದ್ರಶ್ಚ ಸೋಮಶ್ಚೇತ್ಯೇವಮಿಂದ್ರಾಸೋಮೌ ನಿದರ್ಶನಂ || ೧೦೭ ||
ಶಬ್ದರೂಪಂ ಪದಾರ್ಥಶ್ಚ ವ್ಯುತ್ಪತ್ತಿಃ ಪ್ರಕೃತಿರ್ಗುಣಃ |
ಸರ್ವಮೇತದನೇಕಾರ್ಥಂ ದಶಾನವಗಮೇ ಗುಣಾಃ || ೧೦೮ ||

ನಿರ್ವಚನವನ್ನು ಹೇಳಿ ಅರ್ಥವಿವರಣೆಮಾಡಬೇಕು. ಹೇಗೆಂದರೆ ದಂಡಾರ್ಹನಾದವನಿಗೆ ದಂಡ್ಯ (ಶಿಕ್ಷಾರ್ಹ) ನೆಂದು ಹೇಳುವಂತೆ; (ದಂಡ್ಯಶಬ್ದಕ್ಕೆ ದಂಡಾರ್ಹ ಎಂದು ಅರ್ಥವು. ದಂಡಾರ್ಹ ಶಬ್ದದಲ್ಲಿ ದಂಡ-ಅರ್ಹ ಎಂಬ ಎರಡು ಶಬ್ದಗಳಿರುವವು. ಈ ಎರಡು ಶಬ್ದಗಳೂ ಸೇರಿ ದಂಡ್ಯ ಎಂಬ ಒಂದು ನಿರ್ದಿಷ್ಟಾರ್ಥವನ್ನು ಕೊಡುವುದು ಇತ್ಯಾದಿ).

### ಶಬ್ದಗಳ ಅರ್ಥ ಮತ್ತು ವಿವರಣೆ

107. ಮತ್ತು **ರೂಪವದ್ಭಾರ್ಯಃ** ಎಂಬ ಶಬ್ದಕ್ಕೆ ಅರ್ಥಮಾಡುವಾಗ **ರೂಪವತೀ ಭಾರ್ಯಾ ಯಸ್ಯ** ಎಂದು ಪದಗಳನ್ನು ಅಥವಾ ಅವಯವಗಳನ್ನು ವಿಂಗಡಿಸಿ ಅರ್ಥವಾಗುವಂತೆ ವಿವರಿಸಬೇಕು. ರೂಪವತಿಯಾದ ಭಾರ್ಯೆ ಅಥವಾ ಪತ್ನಿಯನ್ನು ಹೊಂದಿರುವವನು ಎಂದು ರೂಪವದ್ಭಾರ್ಯಃ ಎಂಬ ಶಬ್ದಕ್ಕೆ ಅರ್ಥವು. ಇಂದ್ರಾಸೋಮೌ ಎಂದರೆ ಇಂದ್ರ ಮತ್ತು ಸೋಮ ಎಂಬಿಬ್ಬರು ದೇವತೆಗಳು. ಇವರ ಅವಯವಾರ್ಥವನ್ನು ವಿಂಗಡಿಸುವಾಗ **ಇಂದ್ರಶ್ಚ ಸೋಮಶ್ಚ ಇಂದ್ರಾಸೋಮೌ**-ಇಂದ್ರನೂ ಮತ್ತು ಸೋಮನೂ ಇಬ್ಬರೂ ಸೇರಿದರೆ **ಇಂದ್ರಾಸೋಮೌ** ಎಂದು ಕರೆಯಲ್ಪಡುವರು. ಇದು ದ್ವಂದ್ವಸಮಾಸಕ್ಕೆ ಉದಾಹರಣೆಯು.

108. ಒಂದು ಶಬ್ದದ ನಿರ್ದಿಷ್ಟಾರ್ಥವನ್ನು ತಿಳಿದುಕೊಳ್ಳಬೇಕಾದರೆ—ಶಬ್ದದ ರೂಪ, ಶಬ್ದದ ಅರ್ಥ, ಅದರ ರೂಪನಿಷ್ಪತ್ತಿ, ಶಬ್ದದ ಮೂಲರೂಪ (ಎಂದರೆ ಆ ಶಬ್ದವು ಯಾವ ಧಾತು ಮೂಲ ಅಥವಾ ಶಬ್ದದಿಂದ ನಿಷ್ಪನ್ನವಾಗಿದೆ ಎಂಬುದು) ಅದರ ವಿಶೇಷಣ, ಅಥವಾ ಗುಣವಿವರಣೆ ಇವುಗಳನ್ನೆಲ್ಲಾ ವಿವೇಚಿಸಿ ಅರ್ಥಮಾಡಬೇಕು. ಇವೆಲ್ಲವನ್ನೂ ಗಮನಿಸಿದರೆ ಶಬ್ದಕ್ಕೆ ಅನೇಕಾರ್ಥಗಳು ಭಾಸವಾಗುವವು. ಇಂತಹ ಗುಣಗಳು ಹತ್ತು ಇರುವವು. ಶಬ್ದದ ಅರ್ಥವು ಚೆನ್ನಾಗಿ ತಿಳಿಯದಿದ್ದಲ್ಲಿ ಈ ಹತ್ತು ಗುಣಗಳನ್ನೂ ವಿವೇಚಿಸಿ(ವಿಮರ್ಶೆಮಾಡಿ)ಅರ್ಥ ನಿಷ್ಕರ್ಷೆಮಾಡಬೇಕು.

---

106. In compounds, as well as a secondary derivative, explanation (ನಿರ್ವಚಃ) should proceed from analysis; one should explain after separating (the parts) thus 'punishable' (ದಂಡ್ಯ) as 'deserving punishment' (ದಂಡಾರ್ಹ).

### 22. Meaning and analysis of words.

107. and 'fair-wived' ರೂಪವದ್ಭಾರ್ಯ) as 'he has a fair (ರೂಪವತೀ) wife (ಭಾರ್ಯಾ). Thus 'indra-soma' (ಇಂದ್ರಾ-ಸೋಮೌ) as 'Indra and Soma' is an example of a ದ್ವಂದ್ವ).

108. The form of the sound (ಶಬ್ದ), the sense of the word (ಪದ) the etymology, the primary form (ಪ್ರಕೃತಿ), the secondary element (ಗುಣ) all this has manifold sense; there are ten species (ಗುಣಾಃ, of explanation) in (case of) misunderstanding (ಅನವಗಮೇ).

ಸಾಮಾನ್ಯವಾಚಿನಃ ಶಬ್ದಾ ವಿಶೇಷೇ ಸ್ಥಾಪಿತಾಃ ಕ್ವಚಿತ್ ।
ಪಲಾಯನೇ ಯಥಾ ವೃತ್ತಿಃ ಕೋ ನು ಮರ್ಯಾ ಇತೀಷತೇ ॥ ೧೦೯ ॥

ವಿಶೇಷವಾಚಿನಸ್ತ್ವನ್ಯೇ ಸಾಮಾನ್ಯೇ ಸ್ಥಾಪಿತಾಃ ಕ್ವಚಿತ್ ।
ಹಿಮೇನಾಗ್ನಿಮಿತಿ ಮಂತ್ರೇ ಹಿಮಶಬ್ದೋ ನಿದರ್ಶನಂ ॥ ೧೧೦ ॥

ಪದಮೇಕಂ ಸಮಾದಾಯ ದ್ವಿಧಾ ಕೃತ್ವಾ ನಿರುಕ್ತವಾನ್ ।
ಪೂರುಷಾದಃಪದಂ ಯಾಸ್ಕೋ ವೃಕ್ಷೇವೃಕ್ಷ ಇತಿ ತ್ವೃಚಿ ॥ ೧೧೧ ॥

ಅನೇಕಂ ಸತ್ತಥಾ ಚಾನ್ಯದೇಕಮೇವ ನಿರುಕ್ತವಾನ್ ।

109. ಕೆಲವು ಶಬ್ದಗಳು ಸಾಮಾನ್ಯವಾಗಿ ರೂಢಿಯಲ್ಲಿರುವ ಅರ್ಥಗಳಲ್ಲಿ ಉಪಯೋಗಿಸಲ್ಪಡುವುವಾದರೂ ಕೆಲವು ಸಂದರ್ಭಗಳಲ್ಲಿ ವಿಶೇಷಾರ್ಥಗಳಲ್ಲಿ ಉಪಯೋಗಿಸಲ್ಪಡುವವು. ಹೇಗೆಂದರೆ, ಋ. ಸಂ. ೮-೪೫-೩ ನೇ **ಕೋ ನು ಮರ್ಯಾ** ಎಂಬ ಋಕ್ಕಿನಲ್ಲಿ **ಈಷತೇ** ಎಂಬ ಶಬ್ದಕ್ಕೆ ಹೋಗುತ್ತಾನೆ ಎಂಬ ಸಾಮಾನ್ಯಾರ್ಥವು ರೂಢಿಯಲ್ಲಿದ್ದರೂ ಈ ಋಕ್ಕಿನಲ್ಲಿ **ಈಷತೇ** ಎಂಬ ಶಬ್ದಕ್ಕೆ ಓಡಿಹೋಗುತ್ತಾನೆ ಎಂಬರ್ಥವಿರುವುದು.

110. ಹಾಗೆಯೇ ವಿಶೇಷಾರ್ಥದಲ್ಲಿ ಉಪಯೋಗಿಸಲ್ಪಡುವ ಕೆಲವು ಶಬ್ದಗಳು ಸಾಮಾನ್ಯಾರ್ಥಗಳನ್ನು ಸೂಚಿಸುವುದಕ್ಕಾಗಿಯೂ ಉಪಯೋಗಿಸಿರುವುದು ಕಂಡುಬರುವುದು. ಹೇಗೆಂದರೆ **ಹಿಮೇನಾಗ್ನಿಂ**(ಋ.ಸಂ.೧-೧೧೬-೮) ಎಂಬ ಋಕ್ಕಿನಲ್ಲಿ ಇರುವ ಹಿಮಶಬ್ದವೇ ಇದಕ್ಕೆ ನಿದರ್ಶನವು.

111. ಯಾಸ್ಕಮಹರ್ಷಿಯು **ವೃಕ್ಷೇವೃಕ್ಷೇ** ಎಂಬ ಋಕ್ಕಿನಲ್ಲಿರುವ (ಋ. ಸಂ. ೧೦-೨೭-೨೨) **ಪೂರುಷಾದಃ** ಎಂಬ ಶಬ್ದವನ್ನು ವಿವರಿಸುವಾಗ **ಪೂರುಷ— ಅದಃ** (ಮನುಷ್ಯರನ್ನು ತಿನ್ನುವ) ಎಂದು ಎರಡು ಪದಗಳನ್ನಾಗಿ ವಿಭಾಗಿಸಿ ನಿರ್ವಚನವನ್ನು ಹೇಳಿರುವರು.

**ಯಾಸ್ಕರ ತಪ್ಪಾದ ವಿವರಣೆಯು**

112. ಯಾಸ್ಕರು **ಅರುಣೋ ಮಾ ಸಕೃತ್** (ಋ. ಸಂ. ೧-೧೦೫-೧೮) ಎಂಬ ಋಕ್ಕಿನಲ್ಲಿರುವ ಮಾಸ

109. Terms (ಶಬ್ದಾಃ) expressive of a general meaning are occasionally applied in a particular sense (ವಿಶೇಷೇ); thus (in) 'Who', pray, O men' (ಕೋ ನು ಮರ್ಯಾಃ viii. 45, 37), the intrepretation (of) 'goes' (ಈಶತೇ) is in (the sense of) 'fleeing'.

110, But other (terms) expressive of a particular meaning are occasionally applied in a general sense; in the formula, 'With cold the fire' (ಹಿಮೇನಾಗ್ನಿಂ: i. 116. 8), the term 'frost' (ಹಿಮ) is an example.

111. Yaska has, in the stanza 'To every tree' (ವೃಕ್ಷೇ ವೃಕ್ಷೇ : x. 27, 22) explained the word 'man-eating' (ಪುರುಷಾದಃ) by taking one word (and) dividing (it) into two.

**23. Yaska's wrong explanation. Dropping of letters.**

112 Similiarly, another (expression) which is not one (word), he

**ಅರುಣೋ ಮಾ ಸಕೃನ್ಮಂತ್ರೇ ಮಾಸಕೃದ್ವಿಗ್ರಹೇಣ ತು** || ೧೧೨ ||

**ಪದವ್ಯವಾಯೇಽಪಿ ಪದೇ ಏಕೀಕೃತ್ಯ ನಿರುಕ್ತವಾನ್ |**
**ಗರ್ಭಂ ನಿಧಾನಮಿತ್ಯೇತೇ ನ ಜಾಮಯ ಇತಿ ತ್ವೃಚಿ** || ೧೧೩ ||

**ಪದಜಾತಿರವಿಜ್ಞಾತಾ ತ್ವಃಪದೇಽರ್ಥಃ ಶಿತಾಮನಿ |**
**ಸ್ವರಾನವಗಮೋಽಧಾಯಿ ವನೇ ನೇತ್ಯೃಚಿ ದರ್ಶಿತಃ** || ೧೧೪ ||

**ಶುನಃಶೇಪಂ ನರಾಶಂಸಂ ದ್ಯಾವಾ ನಃ ಪೃಥಿವೀತಿ ಚ |**
**ನಿರಸ್ಕೃತೇತಿಪ್ರಭೃತಿಷ್ವರ್ಥಾದಾಸೀತ್ಕ್ರಮೋ ಯಥಾ** || ೧೧೫ ||

ಕೃತ್ (ಮಾ ಸಕೃತ್) ಎಂಬ ಎರಡು ಪದಗಳನ್ನು ಒಂದೇ ಪದವನ್ನಾಗಿ ಭಾವಿಸಿ (ಮಾಸ—ಕೃತ್) ಅದರಂತೆ ಅರ್ಥ ವಿವರಣೆಮಾಡಿರುವರು.

113. ಇನ್ನೊಂದು ಋಕ್ಕಿನಲ್ಲಿ ಎಂದರೆ **ನ ಜಾಮಯೇ** (ಋ. ಸಂ. ೩-೩೧-೨) ಎಂಬ ಋಕ್ಕಿನಲ್ಲಿ **ಗರ್ಭಂ ಸನಿತುರ್ನಿಧಾನಂ** ಎಂದಿರುವಲ್ಲಿ ಗರ್ಭಂ ಮತ್ತು ನಿಧಾನಂ ಎಂಬ ಎರಡು ಪದಗಳ ಮಧ್ಯೆ ಸನಿತುಃ ಎಂಬ ಶಬ್ದವಿದ್ದರೂ, ಗರ್ಭಂನಿಧಾನಂ ಎಂಬುದನ್ನು ಒಂದೇ ಪದವನ್ನಾಗಿ ಭಾವಿಸಿ ಅರ್ಥವಿವರಣೆಮಾಡಿದಾರೆ. [ಆದರೆ ಋಗ್ವೇದದಲ್ಲಿ ಇಂತಹ ಪ್ರಯೋಗಗಳು ಒಂದೆರಡು ಇವೆ—**ನರಾ ವಾ ಶಂಸಂ** (ಋ. ಸಂ. ೧೦-೬೪-೩) ಎಂಬಲ್ಲಿ **ನರಾಶಂಸಂ** ಎಂಬ ಪದದ ಮಧ್ಯದಲ್ಲಿ **ವಾ** ಎಂಬ ಪದವಿರುವುದು. ಮತ್ತೊಂದುಕಡೆ (ಋ. ಸಂ. ೯-೮೬-೪೨) **ನರಾ ಚ ಶಂಸಂ** ಎಂಬಲ್ಲಿ **ಚ** ಶಬ್ದವಿರುವುದು.

114. ಋ. ಸಂ. ೧೦-೭೧-೪ ಮತ್ತು ೧೧ ನೇ ಋಕ್ಕುಗಳಲ್ಲಿರುವ **ತ್ವಃ** ಎಂಬ ಶಬ್ದವು ಯಾವ ವರ್ಗಕ್ಕೆ ಸೇರಿದ್ದು ಎಂಬುದನ್ನು ವಿವರಿಸಿಲ್ಲ. **ಶಿತಾಮನ್** ಎಂಬ ಶಬ್ದದ ವಿಷಯವೂ ಅದರಂತೆಯೇ. ಮತ್ತು **ವನೇ ನ** (ಋ. ಸಂ. ೧೦–೨೯–೧) ಎಂಬ ಋಕ್ಕಿನಲ್ಲಿರುವ **ಅಧಾಯಿ** ಎಂಬ ಶಬ್ದದ ಸ್ವರದ ವಿವರಣೆಯೂ ಸರಿಯಾಗಿಲ್ಲ.

115. ಶುನಃಶೇಪ, ನರಾಶಂಸಂ, ದ್ಯಾವಾನಃಪೃಥಿವೀ, ನಿರಸ್ಕೃತಾ ಇತ್ಯಾದಿ ಶಬ್ದಗಳಲ್ಲಿ (ಅವಯವ) ಶಬ್ದಗಳು ಅರ್ಥವನ್ನನುಸರಿಸಿರುವವು.

---

has explained as one only by (his) analysis as 'month-maker' (ಮಾಸಕೃತ್), in the formula, 'the ruddy one me once' (ಅರುಣೋ ಮಾ ಸಕೃತ್ : i. 105. 18).

113. In the stanza, 'not to his brother' (ನ ಜಾಮಯೇ : iii. 31. 2), he has explained the two words ಗರ್ಭಂ ನಿಧಾನಂ, even though (another) word intervenes, by making them into one.

114. The class of word is not recognized in tha word ತ್ವಃ (nor) the sense in ಶಿತಾಮನ್. Misunderstanding of the accent (in) ಅಧಾಯಿ is shown in the stanza 'As on the tree' (ವನೇ ನ : x. 29. 1).

115. As the regular order (of the words) was (arranged according to the seuse in Sunah-sepam, Nara-samsam, Dyava nah prithvi, nir-askrta, and the rest.

ವರ್ಣಸ್ಯ ವರ್ಣಯೋರ್ಲೋಪೋ ಬಹೂನಾಂ ವ್ಯಂಜನಸ್ಯ ಚ |
ಅತ್ರಾಣೀತಿ ಕಪಿರ್ನಾಭಾ ದನೋ ಯಾಮ್ಯತ್ಯಘಾಸು ಚ ॥ ೧೧೬ ॥

ಅರ್ಥಾತ್ಪದಂ ಸ್ವಾಭಿಧೇಯಂ ಪದಾದ್ವಾಕ್ಯಾರ್ಥನಿರ್ಣಯಃ |
ಪದಸಂಘಾತಜಂ ವಾಕ್ಯಂ ವರ್ಣಸಂಘಾತಜಂ ಪದಂ ॥ ೧೧೭ ॥

ಅರ್ಥಾತ್ಪ್ರಕರಣಾಲ್ಲಿಂಗಾದೌಚಿತ್ಯಾದ್ದೇಶಕಾಲತಃ |
ಮಂತ್ರೇಷ್ವರ್ಥವಿವೇಕಃ ಸ್ಯಾದಿತರೇಷ್ವಿತಿ ಚ ಸ್ಥಿತಿಃ ॥ ೧೧೮ ॥

ಇತಿ ನಾನಾನ್ವಯೋಪಾಯೈರ್ನೈರುಕ್ತೇ ಯೋ ಯತೇತ ಸಃ |

116. ಅನೇಕಶಬ್ದಗಳಲ್ಲಿ ಒಂದು, ಎರಡು, ಅಥವಾ ಅನೇಕ ಅಕ್ಷರಗಳನ್ನು ಬಿಟ್ಟಿರುವುದು ಕಂಡುಬರುವುದು. ಅತ್ರಾಣಿ (ಅಮಿತ್ರಾಣಿ) ಕಪಿಃ (ಕಪಿಲ) ನಾಭಾ (ನಾಭಾನೇದಿಷ್ಠ) ಇತ್ಯಾದಿ. ಹಾಗೆಯೇ ದನಃ, ಯಾಮಿ, ಅಘಾಸು ಇತ್ಯಾದಿ ಶಬ್ದಗಳಲ್ಲಿ ವರ್ಣಲೋಪವಿರುವುದು.

**ಪದ ಮತ್ತು ಅರ್ಥ, ಕ್ರಿಯಾಶಬ್ದಾರ್ಥ**

117. ಒಂದು ನಿರ್ದಿಷ್ಟಾರ್ಥವನ್ನು ಸೂಚಿಸುವುದಕ್ಕಾಗಿಯೇ ಒಂದು ಪದದ ಪ್ರಯೋಗವಿರುವುದು. ಪದವು (ಅಥವಾ ಶಬ್ದವು), ವಾಕ್ಯದಲ್ಲಿರುವ ಸ್ಥಾನಕ್ಕನುಸಾರವಾಗಿ ಅರ್ಥವನ್ನು ಸೂಚಿಸುವುದು. ವರ್ಣಗಳ ಅಥವಾ ಅಕ್ಷರಗಳ ಗುಂಪೇ (ಯೋಜನೆಯೇ) ಪದವು, ಪದಗಳ ಜೋಡಣೆಯೇ ವಾಕ್ಯವು.

118. ಅರ್ಥಕ್ಕನುಸಾರವಾಗಿ, ಮಂತ್ರಾದಿಗಳಲ್ಲಿ ಪ್ರಕರಣ, ಲಿಂಗ, ಸಂದರ್ಭ, ದೇಶ, ಕಾಲಗಳನ್ನು ನಿರ್ಣಯಿಸಬೇಕು. ಇವೆಲ್ಲವನ್ನೂ ವಿಮರ್ಶಿಸಿ ಮಂತ್ರಕ್ಕೆ ಸರಿಯಾದ ಅರ್ಥವನ್ನು ನಿರ್ಣಯಿಸಬೇಕು. ಮಂತ್ರಗಳಲ್ಲಲ್ಲದೆ ಇತರ ವಾಕ್ಯಗಳಲ್ಲಿಯೂ ಇದೇ ಕ್ರಮವು ಅನ್ವಯಿಸುವುದು.

119. ಈರೀತಿ ನಾನಾವಿಧವಾದ ಅನ್ವಯ (ಅರ್ಥವನ್ನು ಹೊಂದಿಸುವ) ಕ್ರಮ ಮತ್ತು ಯುಕ್ತಿಗಳಿಂದ ಪದಗಳ ಮತ್ತು ವಾಕ್ಯಗಳ (ಮಂತ್ರಗಳ) ನಿರ್ವಚನವನ್ನು (ಸರಿಯಾದ ಅರ್ಥವನ್ನು) ವಿವರಿಸಲು ಯಾವ ಪುರುಷನು

---

116, (so) there is dropping of a letter, (ವರ್ಣ) of two letters, of many, aad of a consonant: for instance, in) atrani, kapih, nabah; danah, yami and aghasu.

24. **Word and sense. The verb expresses a form of beaoming.**

117. From the sense (comes) the word (ಪದ), its designation; from the word (comes) the ascertainment of the sense of the sentence (ವಾಕ್ಯ). (For) the sentence arises from an aggregation of words, the word arises from an aggregation of letters.

118. From the sense (of the word), the subject-matter (ಪ್ರಕರಣ), the gender, the appropriateness, and from (considerations of) place and time, the (possibility of) discriminating the (whole) sense in the formulas will result: such is the settled rule (ಸ್ಥಿತಿಃ) in (regard to) other (writings) also.

119. Ho who thus exerts himself in the study of etymology (ನೈರುಕ್ತೇ)

ಜಿಜ್ಞಾಸುರ್ಬ್ರಹ್ಮಣೋ ರೂಪಮಪಿ ದುಷ್ಕೃತ್ಪರಂ ವ್ರಜೇತ್ ॥ ೧೧೯ ॥
ಯಥೇದಮಗ್ರೇ ನೈವಾಸೀದಸದಪ್ಯಥವಾಪಿ ಸತ್ ।
ಜಜ್ಞೇ ಯಥೇದಂ ಸರ್ವಂ ತದ್ಭಾವವೃತ್ತಂ ವದಂತಿ ತು ॥ ೧೨೦ ॥
ಭಾವಪ್ರಧಾನಮಾಖ್ಯಾತಂ ಷಡ್ವಿಕಾರಾ ಭವಂತಿ ತೇ ।
ಜನ್ಮಾಸ್ತಿತ್ವಂ ಪರಿಣಾಮೋ ವೃದ್ಧಿರ್ಹಾನಂ ವಿನಾಶನಂ ॥ ೧೨೧ ॥
ವಿಶೇಷಾಸ್ತೇವ ಷಣ್ಣಾಂ ತು ಯೇಽನ್ಯೇ ಭಾವವಿಕಾರಜಾಃ ।
ತೇ ಯಥಾವಾಕ್ಯಮಭ್ಯೂಹ್ಯಾಃ ಸಾಮರ್ಥ್ಯಾನ್ಮಂತ್ರವಿತ್ತಮೈಃ ॥ ೧೨೨ ॥

ಪ್ರಯತ್ನಪಡುವನೋ, ಅವನು ದುಶ್ಚರಿತನಾಗಿದ್ದರೂ ಪರವಸ್ತುವಾದ ಬ್ರಹ್ಮನ (ಪರಬ್ರಹ್ಮನ) ರೂಪವನ್ನೂ ಸಹ ಜಿಜ್ಞಾಸಾದಿಗಳಿಂದ (ವಿಮರ್ಶೆಯಿಂದ) ತಿಳಿದು ಪರಮಪದವಿಯನ್ನು ಹೊಂದುವನು.

120. ಸೃಷ್ಟಿಗೆ ಪೂರ್ವದಲ್ಲಿ ಈ ಸಕಲ ಜಗತ್ತು ಯಾವರೀತಿ ಇರಲಿಲ್ಲವೆಂಬುದೂ, ಆ ಕಾಲದಲ್ಲಿ ಸತ್, ಅಸತ್ ಎಂದರೆ ವ್ಯಕ್ತಾವ್ಯಕ್ತವಸ್ತುಗಳು ಇರಲಿಲ್ಲವೆಂಬುದೂ, ಅನಂತರ ಈ ಸಮಸ್ತ ವಿಶ್ವವೂ ಯಾವರೀತಿ ಉತ್ಪನ್ನವಾಯಿತು ಎಂಬುವುದೂ ಇವೆಲ್ಲವನ್ನೂ ಒಳಗೊಂಡ ವಿವರಣೆಯನ್ನು ಭಾವವೃತ್ತವೆಂದು ಹೇಳುವರು.

121. ಈ ಭಾವವೃತ್ತದ ಮುಖ್ಯವಿವರಣೆಯನ್ನು ಮೇಲೆ ಹೇಳಿದ್ದಾಯಿತು. ಇದರಲ್ಲಿ ಎಂದರೆ ಭಾವವೃತ್ತದಲ್ಲಿ ಆರುವಿಧ ವಿಕಾರಗಳು ಎಂದರೆ ಪ್ರಭೇದಗಳಿರುವವು.—ಜನ್ಮ, (ಉತ್ಪತ್ತಿ) ಅಸ್ತಿತ್ವಂ (ಸ್ಥಿತಿ) ಪರಿಣಾಮ (ಬದಲಾವಣೆ—ಜಗತ್ತು ಯಾವಾಗಲೂ ಒಂದೇ ಸ್ಥಿತಿಯಲ್ಲಿರದೆ ಸ್ವಲ್ಪಸ್ವಲ್ಪವಾಗಿ ಬದಲಾಯಿಸುತ್ತಿರುವುದು. ಇವಕ್ಕೆ ಪರಿಣಾಮವೆಂದು ಹೆಸರು). ವೃದ್ಧಿ (ಅಭಿವೃದ್ಧಿ-ಹೆಚ್ಚಾಗುವುದು) ಹಾನಂ (ಕಡಮೆಯಾಗುವುದು) ವಿನಾಶ ಎಂಬಿವೇ ಆರು ಪ್ರಭೇದಗಳು.

122. ಈ ಆರು ವಿಕಾರಗಳಲ್ಲದೆ ಇತರ ವಿಕಾರಗಳೂ (ಅಥವಾ ಪ್ರಭೇದಗಳು) ಇರುವವೆಂದು ತಿಳಿಯುವುದಾದರೆ ಅವೆಲ್ಲವೂ ಮೇಲೆ ಹೇಳಿದ ಆರು ಮುಖ್ಯ ವಿಕಾರಗಳಲ್ಲಿಯೇ ಸೇರಿಹೋಗಿರುವವೆಂದು ಭಾವಿಸಬೇಕು. ಮಂತ್ರಜ್ಞರಾದವರು ವಾಕ್ಯ (ಮಂತ್ರ) ಗಳಲ್ಲಿ ಸೂಚಿತವಾಗುವ ಅರ್ಥಾದಿಗಳಿಂದಲೂ ತಮ್ಮ ಸ್ವಸಾಮರ್ಥ್ಯ ಎಂದರೆ ವಿಮರ್ಶಾಪೂರ್ವಕವಾದ ಯುಕ್ತಿಗಳಿಂದಲೂ ಅವುಗಳನ್ನು ಊಹಿಸಿ ತಿಳಿದುಕೊಳ್ಳಬೇಕು.

by the various means of construing (ಅನ್ವಯ), being desirous of knowing the form of Brahma, will, even though an evil-doer, go to the supreme (ಪರಂ).

120. How this (world) did not exist in the beginning, either as non-existent, how this universe (ಸರ್ವಂ) came into being, (all) this they term the evolution (ವೃತ್ತಂ) of becoming (ಭಾವ).

121. The verb (ಆಖ್ಯಾತ) has becoming as its fundamental meaning (ಪ್ರಧಾನ)' There are these six modifications (ವಿಕಾರಾಃ) of becoming genesis (ಜನ್ಮ) existence (ಅಸ್ತಿತ್ವಂ), transformation (ಪರಿಣಾಮ), growth (ವೃದ್ಧಿಃ), decline (ಹಾನಂ), drstrnction (ವಿನಾಶನಂ).

### The deities of the Vyahrtis and of Om·

122. But whatever other modifications of becoming arise from these six must be inferred in each case according to the sense, to the best

ದೇವಾನಾಂ ಚ ಪಿತೃಣಾಂ ಚ ನಮಸ್ಕಾರೈಸ್ತಥೈವ ಚ ।
ಅಥ ವ್ಯಸ್ತಂ ಸಮಸ್ತಂ ವಾ ಶೃಣು ವ್ಯಾಹೃತಿದೈವತಂ ॥ ೧೨೩ ॥

ವ್ಯಾಹೃತೀನಾಂ ಸಮಸ್ತಾನಾಂ ದೈವತಂ ತು ಪ್ರಜಾಪತಿಃ ।
ವ್ಯಸ್ತಾನಾಮಯಮಗ್ನಿಶ್ಚ ವಾಯುಃ ಸೂರ್ಯಶ್ಚ ದೇವತಾಃ ॥ ೧೨೪ ॥

ವಾಗ್ದೇವತ್ಯೋऽಥವಾಪ್ಯೈಂದ್ರೋ ಯದಿ ವಾ ಪರಮೇಷ್ಠಿನಃ ।
ಓಂಕಾರೋ ವೈಶ್ವದೇವೋ ವಾ ಬ್ರಾಹ್ಮೋ ದೈವಃ ಕ ಏವ ವಾ ॥ ೧೨೫ ॥

ಇತಿ ಪೀಠಿಕಾಪ್ರಕರಣಂ ಸಮಾಪ್ತಂ

**ಓಂ ಎಂಬ ವ್ಯಾಹೃತಿ ಮತ್ತು ಅದರ ದೇವತೆಗಳು**

123. ಮತ್ತು ದೇವತೆಗಳನ್ನು ಪಿತೃಗಳನ್ನು ನಮಸ್ಕಾರ ಮಾಡುವುದರಿಂದಲೂ ಮಂತ್ರಜ್ಞರು ವೇದಮಂತ್ರಗಳ ವಾಕ್ಯಾರ್ಥವನ್ನು ಸರಿಯಾಗಿ ಊಹಿಸಿ ತಿಳಿದುಕೊಳ್ಳಬಹುದು. ಈಗ ವ್ಯಾಹೃತಿಗಳ ದೇವತೆಗಳಾರು ಎಂಬುವುದನ್ನು ಒಟ್ಟಾಗಿಯೂ ಬೇರೆಯಾಗಿಯೂ ಹೇಳುವೆನು, ಕೇಳು.

124. ಸಮಸ್ತ ವ್ಯಾಹೃತಿಗಳಿಗೂ (ಸಾಮಾನ್ಯವಾಗಿ) ಪ್ರಜಾಪತಿಯೇ ದೇವತೆಯು; ಒಂದೊಂದು ವ್ಯಾಹೃತಿಗಳಿಗೂ ಬೇರೆಬೇರೆಯಾಗಿ ದೇವತೆಯನ್ನು ನಿರ್ದೇಶಿಸುವುದಾದರೆ—**ಭೂಃ** ಎಂಬ ವ್ಯಾಹೃತಿಗೆ ಅಗ್ನಿಯೂ, **ಭುವಃ** ಎಂಬ ವ್ಯಾಹೃತಿಗೆ ವಾಯುವೂ, **ಸುವಃ** (ಅಥವಾ ಸ್ವಃ) ಎಂಬ ವ್ಯಾಹೃತಿಗೆ ಸೂರ್ಯನೂ ದೇವತೆಯು.

125. ಓಂ ಎಂಬ ವ್ಯಾಹೃತಿಗೆ ವಾಗ್ದೇವತೆಯಾಗಲಿ, ಇಂದ್ರ, ಪರಮೇಷ್ಠೀ, ವಿಶ್ವೇದೇವತೆಗಳು, ಬ್ರಹ್ಮ, ಕಃ (ಪ್ರಜಾಪತಿ) ಇವರಲ್ಲಿ ಯಾರಾದರೂ ಒಬ್ಬರು ದೇವತೆಯಾಗಬಹುದು.

ಇಲ್ಲಿಗೆ ಪೀಠಿಕಾಪ್ರಕರಣವು ಸಮಾಪ್ತವು.

of their ability (ಸಾಮರ್ಥ್ಯಾತ್), by those who are most familiar wlth the formulas.

123. and (must) likewise (be inferred) in accordance with the (nature of the) adorations (ನಮಸ್ಕಾರೈಃ) of the Gods and Fathers (appearing ia those formulas).

Now hear the divinity of the sacred utterances (ವ್ಯಾಹೃತಿ), individually and collectively.

124. Now the divinity of the sacred utterances collectively is Prajapati, while the deities of them individually are this (terrestrial) Agni, Vayu, and Surya (respectively).

125. The syllable Om has Vac for its deity, or else it is addressed to Indra, or else (it belongs) to Paramesthin; or it ss addressed to the All-gods, or to Brahman, or to the Gods, (in general), or Ka (is its deity).

ಆಗ್ನೇಯಂ ಪ್ರಥಮಂ ಸೂಕ್ತಂ ಮಧುಚ್ಛಂದಸ ಆರ್ಷಕಂ |
ಜ್ಞೇಯಾಃ ಸರ್ವೇಽನ್ಯದೇವತ್ಯಾಸ್ತೃಚಾಃ ಸಪ್ತಾತ ಉತ್ತರಾಃ || ೧೨೬ ||

ವಾಯವ್ಯಃ ಪ್ರಥಮಸ್ತ್ವೇಷಾಮೈಂದ್ರವಾಯವ ಉತ್ತರಃ |
ಮೈತ್ರಾವರುಣೋಽಥಾಶ್ವಿನೋಽಪ್ಯೈಂದ್ರೋಽತೋ ವೈಶ್ವದೇವಕಃ || ೧೨೭ ||

ತನ್ನಾಮಾ ವಿಶ್ವಲಿಂಗೋ ವಾ ಗಾಯತ್ರೋಽನ್ತ್ಯಸ್ತು ಯಸ್ತೃಚಃ |
ಬಹುದೈವತಮನ್ಯತ್ತು ವೈಶ್ವದೇವೇಷು ಶಸ್ಯತೇ || ೧೨೮ ||

## ಪ್ರಥಮಮಂಡಲದ ಸೂಕ್ತಗಳ ವಿವರಣೆಯು
## ಮೊದಲ ಮೂರು ಸೂಕ್ತಗಳು; ವೈಶ್ವದೇವಸೂಕ್ತಗಳ ದ್ರಷ್ಟೃಗಳು

126. ಮೊದಲನೆಯ ಸೂಕ್ತಕ್ಕೆ (ಅಗ್ನಿಮೀಳೇ ೧-೧) ಅಗ್ನಿಯು ದೇವತೆಯು; ಮಧುಚ್ಛಂದಾಃ ಎಂಬುವನು ಋಷಿಯು. ಎರಡನೆಯ ಸೂಕ್ತ (೯ ಋಕ್ಕು) ಮತ್ತು ಮೂರನೆಯ ಸೂಕ್ತ (೧೨ ಋಕ್ಕು) ಗಳಲ್ಲಿರುವ ಒಟ್ಟು ೨೧ ಋಕ್ಕುಗಳಲ್ಲಿ ಪ್ರತಿ ತೃಚಕ್ಕೂ (ತೃಚವೆಂದರೆ ಮೂರು ಋಕ್ಕುಗಳು) ಎಂದರೆ ಪ್ರತಿ ಮೂರು ಋಕ್ಕುಗಳ ಸಮೂಹಕ್ಕೂ ಬೇರೆಬೇರೆ ದೇವತೆಗಳಿರುವರು. ಈ ೨ ಮತ್ತು ೩ ನೇ ಸೂಕ್ತಗಳಲ್ಲಿ ಒಟ್ಟು ೭ ತೃಚಗಳಿರುವವು.

127. ಎರಡನೆಯ ಸೂಕ್ತದ ಮೊದಲನೆಯ ತೃಚಕ್ಕೆ (೨ ನೇ ಸೂಕ್ತ ೧-೩ ಋಕ್ಕುಗಳು) ವಾಯುವು ದೇವತೆಯು; ಮುಂದಿನ ತೃಚಕ್ಕೆ (೨ ನೇ ಸೂಕ್ತ ೪-೬ ಋಕ್ಕು) ಇಂದ್ರವಾಯುಗಳೂ ಅದರ ಮುಂದಿನ ತೃಚಕ್ಕೆ (೨ ನೇ ಸೂ. ೭-೯) ಮಿತ್ರಾವರುಣರೂ, ಅದರ ಮುಂದಿನ ತೃಚಕ್ಕೆ (೩ ನೇ ಸೂಕ್ತ ೧-೩ ಋಕ್ಕು) ಅಶ್ವಿನೀದೇವತೆಗಳೂ, ಅದರ ಮುಂದಿನ ತೃಚಕ್ಕೆ (೩ ನೇ ಸೂ. ೭-೯ ಋಕ್ಕು) ವಿಶ್ವೇದೇವತೆಗಳೂ ದೇವತೆಯು.

128. ಈಗ ಕೊನೆಯ ತೃಚ (ಎಂದರೆ ೩ ನೇ ಸೂಕ್ತದ ೭-೯) ಋಕ್ಕುಗಳು ಗಾಯತ್ರೀಛಂದಸ್ಕವು. ವಿಶ್ವೇದೇವತೆಗಳೆಂದರೆ ಅನೇಕ ದೇವತೆಗಳು. ಆದ್ದರಿಂದ ವೈಶ್ವದೇವಸೂಕ್ತಗಳಲ್ಲಿ ಅನೇಕ ದೇವತೆಗಳು ಸ್ತುತರಾಗಿರುವರು.

## 26. The first three hymns. Authors of Vaisvadeva hymns.

126. The first hymn is addressed to Agni. Its seer isMadhuchandas. The seven triplets wihch follow it should all be recognised as addressed to different deities.

127. The first of these (2. 1-3) is addressed to Vayu, the following one (2. 4-6) to Indra and Vayu, then one to Mitra and Varuna (2. 7-9), one also to the Aswins (3. 1-3), one to Indra (3. 4-6), then one to the All gods (3. 7-9).

128. Now (this) last triplet (3. 7-9), composed in the Gayatri metre, contains that name (ತನ್ನಾಮ), or has (the word) 'all' (ವಿಶ್ವ) as its characteristic mark. But (any) other (hymn) addressed to many divinities can be recited in (the place of those addressed to the All gods).

ಲುಶೇ ದುವಸ್ಯೌ ಶಾರ್ಯಾತೇ ಗೋತಮೇಽಥ ಋಜಿಶ್ವನಿ ।
ಅವತ್ಸಾರೇ ಪರುಚ್ಛೇಪೇ ಅತ್ರೌ ದೀರ್ಘತಮಸ್ಯೃಷೌ ॥ ೧೨೯ ॥
ವಸಿಷ್ಠೇ ನಾಭಾನೇದಿಷ್ಠೇ ಗಯೇ ಮೇಧಾತಿಥೌ ಮನೌ ।
ಕಕ್ಷೀವತಿ ವಿಹವ್ಯೇ ಚ ಬಹುಷ್ವನ್ಯೇಷ್ವೃಷಿಷು ॥ ೧೩೦ ॥
ಅಗಸ್ತ್ಯೇ ಬೃಹದುಕ್ಥೇ ಚ ವಿಶ್ವಾಮಿತ್ರೇ ಚ ಗಾಥಿನಿ ।
ದೃಶ್ಯಂತೇ ವಿಪ್ರವಾದಾಶ್ಚ ತಾಸು ತಾಸು ಸ್ತುತಿಷ್ವಿಹ ॥ ೧೩೧ ॥
ಬಹ್ವೀನಾಂ ಸಂನಿಪಾತಸ್ತು ಯಸ್ಮಿನ್ಮಂತ್ರೇ ಪ್ರದೃಶ್ಯತೇ ।

## ವೈಶ್ವದೇವಸೂಕ್ತಗಳ ಸ್ವರೂಪ ಮತ್ತು ವಿವರಣೆ

129-131 .ವೈಶ್ವದೇವಸೂಕ್ತಗಳ ಮುಖ್ಯದ್ರಷ್ಟೃಗಳಾದ ಋಷಿಗಳಾರೆಂದರೆ—ಲುಶ (೧೦ ನೇ ಮಂಡಲದ ೩೫, ೩೬ ಸೂಕ್ತಗಳು) ದುವಸ್ಯು (೧೦ ನೇ ಮಂಡಲದ ೧೦೦ ನೇ ಸೂಕ್ತ) ಶಾರ್ಯಾತ (೧೦ ನೇ ಮಂಡಲದ ೯೨ ನೇ ಸೂಕ್ತ) ಗೋತಮ (೧೦ ನೇ ಮಂಡಲದ ೧೩೭ ನೇ ಸೂಕ್ತ ; ೧ನೇ ಮಂಡಲದಲ್ಲಿ ೮೯, ೯೦ ನೇ ಸೂಕ್ತಗಳು) ಋಜಿಶ್ವಾ (೬ ನೇ ಮಂಡಲದ ೪೯, ೫೦, ೫೧, ೫೨ ನೇ ಸೂಕ್ತಗಳು) ಅವತ್ಸಾರಃ ಕಾಶ್ಯಪಃ (೫ ನೇ ಮಂಡಲದ ೪೪ ನೇ ಸೂಕ್ತ) ಪರುಚ್ಛೇಪ (೧ ನೇ ಮಂಡಲದ ೧೩೯ ನೇ ಸೂಕ್ತ) ಅತ್ರಿರ್ಭೌಮಃ (೫ ನೇ ಮಂಡಲದ ೪೨, ೪೩ ನೇ ಸೂಕ್ತಗಳು) ದೀರ್ಘತಮಾಃ (೧ ನೇ ಮಂಡಲದ ೧೬೪ ನೇ ಸೂಕ್ತ) ವಸಿಷ್ಠ (೧೦ ನೇ ಮಂಡಲದ ೧೩೭ ನೇ ಸೂಕ್ತ) ನಾಭಾನೇದಿಷ್ಠ (೧೦ ನೇ ಮಂಡಲದ ೬೧, ೬೨ ನೇ ಸೂಕ್ತಗಳು) ಗಯಃ ಪ್ಲಾತಃ (೧೦ ನೇ ಮಂಡಲದ ೬೩, ೬೪ ನೇ ಸೂಕ್ತಗಳು) ಮೇಧಾತಿಥಿಃ (೮ ನೇ ಮಂಡಲದ ೫೮ ನೇ ಸೂಕ್ತ) ಮನುರ್ವೈವಸ್ವತಃ (೮ ನೇ ಮಂಡಲದಲ್ಲಿ ೨೭, ೨೮ ನೇ ಸೂಕ್ತಗಳು) ಕಕ್ಷೀವಾನ್ (೧ ನೇ ಮಂಡಲದಲ್ಲಿ ೧೨೧, ೧೨೨ ನೇ ಸೂಕ್ತಗಳು) ವಿಹವ್ಯ ಆಂಗಿರಸಃ (೧೦ ನೇ ಮಂಡಲದ ೧೨೮ ನೇ ಸೂಕ್ತ) ಅಗಸ್ತ್ಯ (೧ ನೇ ಮಂಡಲದ ೧೮೬ ನೇ ಸೂಕ್ತ) ಬೃಹದುಕ್ಥ (೧೦ ನೇ ಮಂಡಲದ ೫೬ ನೇ ಸೂಕ್ತ) ಬಂಧ್ವಾದಯ: (೧೦ ನೇ ಮಂಡಲದ ೫೭ ನೇ ಸೂಕ್ತ) ಪ್ರಜಾಪತಿರ್ವೈಶ್ವಾಮಿತ್ರಃ (೩ ನೇ ಮಂಡಲದ ೫೬ ನೇ ಸೂಕ್ತ) ವಿಶ್ವಾಮಿತ್ರ (೩ ನೇ ಮಂಡಲದ ೫೭ ನೇ ಸೂಕ್ತ ; ೧೦ ನೇ ಮಂಡಲದ ೧೩೭ ನೇ ಸೂಕ್ತ). ಈ ಋಷಿಗಳಲ್ಲದೆ ಇನ್ನೂ ಇತರ ಋಷಿಗಳು ವಿಶ್ವೇದೇವತೆಗಳನ್ನು ಅಲ್ಲಲ್ಲಿ ಕೆಲವು ಋಕ್ಕುಗಳಲ್ಲಿ ಸ್ತುತಿಸಿರುವರು. ಇವರುಗಳ ಸ್ತುತಿಗಳಲ್ಲಿಯೂ ದೇವತಾ ಪ್ರಭೇದಗಳಲ್ಲಿಯೂ ಇತರ ವಿಷಯಗಳಲ್ಲಿಯೂ ಅನೇಕ ಪ್ರಕಾರಗಳು ಕಂಡುಬರುವವು.

132. ಒಂದು ಸೂಕ್ತದಲ್ಲಿ ಅಥವಾ ಮಂತ್ರದಲ್ಲಿ ಅನೇಕ ದೇವತೆಗಳ ಸ್ತುತಿಯಿದ್ದಲ್ಲಿ ಆ ಸೂಕ್ತವು ಅಥವಾ ಮಂತ್ರವು ವಿಶ್ವೇದೇವತಾಕವೆಂದು ಯಾಸ್ಕ, ಶಾಂಡಿಲ್ಯ ಎಂಬ ಆಚಾರ್ಯರು ಹೇಳಿರುವರು.

---

129. In Lusa, Duvasyu, Saryata, Gotama, Rijisvan, Avatsara, Paruchepa, Atri, the Dirghatamas.

27. **Character of Vaisvadeva hymns.**

130. In Vasistha, Nabhanedistha, Gaya, Medhatithi, Manu, Kaksivat, Vihavya, as well as in many other seers.

131, In Agastya, Brhaduktha, Visvamitra, and Gathin, variations (ವಿಪ್ರವಾದಾಃ) are here in (in the ಋಗ್ವೇದ) apparent in their respective praises.

132. Now the teachers Yaska and Sandilya say that any formula

ಆಚಾರ್ಯೌ ಯಾಸ್ಕಶಾಂಡಿಲ್ಯೌ ವೈಶ್ವದೇವಂ ತದಾಹತುಃ ॥ ೧೩೨ ॥
ಪಾದಂ ವಾ ಯದಿ ವಾರ್ಧರ್ಚಮೃಚಂ ವಾ ಸೂಕ್ತಮೇವ ವಾ ।
ವೈಶ್ವದೇವಂ ವದೇತ್ಸರ್ವಂ ಯತ್ಕಿಂಚಿದ್ಬಹುದೈವತಂ ॥ ೧೩೩ ॥
ಋಷಿಭಿರ್ದೇವತಾಃ ಸರ್ವಾ ವಿಶ್ವಾಭಿಃ ಸ್ತುತಿಭಿಃ ಸ್ತುತಾಃ ।
ಸಂಜ್ಞಾ ತು ವಿಶ್ವಮಿತ್ಯೇಷಾ ಸರ್ವಾವಾಪ್ತೌ ನಿಪಾತಿತಾ ॥ ೧೩೪ ॥
ಸಾರಸ್ವತಸ್ತು ಸಪ್ತಮ ಏತಾಃ ಪ್ರಉಗದೇವತಾಃ ।
ಸರಸ್ವತೀತಿ ದ್ವಿವಿಧಮೃಕ್ಷು ಸರ್ವಾಸು ಸಾ ಸ್ತುತಾ ॥ ೧೩೫ ॥
ನದೀವದ್ದೇವತಾವಚ್ಚ ತತ್ರಾಚಾರ್ಯಸ್ತು ಶೌನಕಃ ।

133, ಒಂದು ಸೂಕ್ತ, ಋಕ್ಕು, ಅರ್ಧಋಕ್ಕು, ಪಾದ ಇವುಗಳಲ್ಲಿ ಯಾವುದರಲ್ಲಾದರೂ ಅನೇಕ ದೇವತೆಗಳ ಪ್ರಶಂಸೆ ಇದ್ದರೆ ಅದನ್ನು ವಿಶ್ವೇದೇವತಾಕವೆಂದು ಹೇಳಬೇಕು.

134. ಈ ವೈಶ್ವದೇವಸೂಕ್ತಗಳಲ್ಲಿ ಎಲ್ಲಾ ದೇವತೆಗಳನ್ನು ಎಲ್ಲಾವಿಧ ಸ್ತುತಿಗಳಿಂದಲೂ ಋಷಿಗಳು ಸ್ತುತಿಸಿರುವರು. ಈ ಎಲ್ಲಾ ದೇವತೆಗಳನ್ನು ನಿರ್ದೇಶಿಸುವಾಗ ವಿಶ್ವ (ಎಲ್ಲಾ) ಎಂಬ ಶಬ್ದಪ್ರಯೋಗವಿರುವುದರಿಂದ ಎಲ್ಲಾ ದೇವತೆಗಳನ್ನು ನಿರ್ದೇಶಿಸಲಾಗಿದೆಯೆಂದು ತಿಳಿಯಬೇಕು.

**ಸರಸ್ವತೀದೇವತಾಕವಾದ ಮಂತ್ರಗಳು ಮತ್ತು ಇಂದ್ರದೇವತಾಕವಾದ ಸೂಕ್ತಗಳು**

135. ಈಗ ಮೂರನೇ ಸೂಕ್ತದ ೭ ನೇ ತೃಚದಲ್ಲಿ (ಮೂರನೇ ಸೂಕ್ತದ ೯-೧೨ ನೇ ಋಕ್ಕುಗಳಲ್ಲಿ) ಸರಸ್ವತೀದೇವತೆಯು ಸ್ತುತಳಾಗಿರುವಳು. ಈ ಋಕ್ಕುಗಳು ಪ್ರಉಗಶಸ್ತ್ರಮಂತ್ರಗಳಲ್ಲಿ ಸೇರಿವೆ. ಸರಸ್ವತೀದೇವತೆಯು ಮಂತ್ರಗಳಲ್ಲಿ ಎರಡು ವಿಧವಾಗಿ ಸ್ತುತಿಸಲ್ಪಟ್ಟಿರುವಳು.

136. ಸರಸ್ವತಿಯು ನದಿಯೆಂದೂ, ಸರಸ್ವತೀ ಎಂಬ ಹೆಸರಿನ ದೇವತೆಯೆಂದೂ ಎರಡು ವಿಧವಾಗಿ

---

in which a combination of many (deities) appears, is addressed to the All-gods.

133. One should state everything, whatever it be, a verse, or hemistich, or stanza, or hymn, which is addressed to many divinities, to be addressed to the All-gods.

134. All (ಸರ್ವಾಃ) the deities are praised by the seers with collective laudations ; now this technical term (ಸಂಜ್ಞಾ) 'collective' (ವಿಶ್ವ) is laid down (ನಿಪಾತಿತ) in (the sense of) all-comprehensiveness (ಸರ್ವಾವಾಪ್ತೌ).

**28. Paassages of the Rig-Veda addressed to Sarasvati. Indra hymns.**

135. Now the seventh (triplet) is addressed to Sarasvati (3. 10-12). These are the Prauga deities. She is praised in all stanzas by the name of Sarasvatı ın two ways :

136. As a river, and as a deity. Now with regard to this the

**ನದಿವನ್ನಿಗವಾಃ ಷಟ್ ತೇ ಸಪ್ತಮೋ ನೇತ್ಯುವಾಚ ಹ** || ೧೩೬ ||
**ಅಂಬ್ಯೇಕಾ ಚ ದೃಷದ್ವತ್ಯಾಂ ಚಿತ್ರ ಇಚ್ಛ ಸರಸ್ವತೀ ।**
**ಇಯಂ ಶುಷ್ಮೇಭಿರಿತ್ಯೇತಂ ಮೇನೇ ಯಾಸ್ಕಸ್ತು ಸಪ್ತಮಂ** || ೧೩೭ ||
**ಪಶೋಃ ಸಾರಸ್ವತಸ್ಯೈತಾಂ ಯಾಜ್ಯಾಂ ಮೈತ್ರಾಯಣೀಯಕೇ ।**
**ಪ್ರಾಧಾನ್ಯಾದ್ಧವಿಷಃ ಪಶ್ಯನ್ವಾಚ ಐನ್ಯೈತರೋಽಬ್ರವೀತ್** || ೧೩೮ ||
**ಸುರೂಪಕೃತ್ನುಮಿತ್ಯೈಂದ್ರಂ ಸಪ್ತ ಚಾನ್ಯಾನ್ಯತಃ ಪರಂ ।**

ಆ ದೇವತೆಯ ಸ್ತುತಿ ಇರುವುದು. ನದೀರೂಪದಲ್ಲಿ ಈ ದೇವತೆಯನ್ನು ಸ್ತುತಿಸಿರುವ ಮಂತ್ರಗಳು ಆರು ಮಾತ್ರ ಎಂದು ಶೌನಕಮಹರ್ಷಿಯು ಹೇಳಿರುವರು. ಇವಲ್ಲದೆ ಏಳನೆಯ ಮಂತ್ರವು ಯಾವುದೂ ಇರುವುದಿಲ್ಲ.

137. ಆ ಆರು ಮಂತ್ರಗಳು ಯಾವವೆಂದರೆ— **ಅಂಬಿತಮೇ** (ಋ. ಸಂ. ೨-೪೧-೧೬) **ಏಕಾ ಚೇತ್ಸರಸ್ವತೀ** (ಋ. ಸಂ. ೭-೯೫-೨) **ನಿ ತ್ವಾ ದಧೇ** (ಋ. ಸಂ. ೩-೨೩-೪) **ಚಿತ್ರ ಇದ್ರಾಜಾ** (ಋ. ಸಂ. ೮-೨೧-೧೮) **ಸರಸ್ವತೀ ಸರಯುಃ** (ಋ. ಸಂ. ೧೦-೬೪-೯) **ಇಂದ್ರೋ ನೇದಿಷ್ಠ** (ಋ. ಸಂ. ೬-೫೨-೬) ಇವೇ ಆ ಆರು ಮಂತ್ರಗಳು. ಆದರೆ ಯಾಸ್ಕರು **ಇಯಂ ಶುಷ್ಮೇಭಿಃ** (ಋ. ಸಂ. ೬-೬೧-೨) ಎಂಬ ಏಳನೆಯ ಮಂತ್ರವೂ ಸರಸ್ವತೀನದಿಯನ್ನು ಸ್ತುತಿಸುವುದೆಂದು ಅಭಿಪ್ರಾಯಪಡುವರು.

138. ಆದರೆ ಮೈತ್ರಾಯಣೀಯಸಂಹಿತೆಯಲ್ಲಿ ಹೇಳಿರುವಂತೆ ಈ **ಇಯಂ ಶುಷ್ಮೇಭಿಃ** ಎಂಬ ಏಳನೆಯ ಮಂತ್ರವು ಸರಸ್ವತೀದೇವತೆಯನ್ನುದ್ದೇಶಿಸಿ ಮಾಡುವ ಪಶುಹೋಮದಲ್ಲಿ ಯಾಜ್ಯಾಮಂತ್ರವನ್ನಾಗಿ ಪಠಿಸುವುದರಿಂದಲೂ ಹವಿಸ್ಸನ್ನು ಹೋಮಮಾಡುವುದು ಯಜ್ಞದಲ್ಲಿ ಪ್ರಧಾನಕರ್ಮವಾದುದರಿಂದಲೂ ಆ ಹೋಮವು ವಾಗ್ದೇವತೆಯನ್ನುದ್ದೇಶಿಸಿರುವುದರಿಂದಲೂ ಈ ಮಂತ್ರವೂ ವಾಗ್ದೇವತೆಯಾದ ಸರಸ್ವತಿಯನ್ನೇ ನಿರ್ದೇಶಿಸುವುದೆಂದು ಇತರಾ ಎಂಬ ಸ್ತ್ರೀಯ ಪುತ್ರನಾದ ಐತರನೆಂಬ ಋಷಿಯು ಹೇಳಿರುವನು.

139. **ಸುರೂಪಕೃತ್ನು** ಎಂಬ ಸೂಕ್ತಕ್ಕೂ ಅದರ ಮುಂದಿನ ಏಳು ಸೂಕ್ತಗಳಿಗೂ (೫-೧೧ ಸೂಕ್ತ

teacher Saunaka has stated that the passages (in which she is praised) as a river are six, (and that there is) not a seventh.

137. (the six being) 'Best Mother' (ಅಂಬಿತಮೇ : ii. 41-16), 'Alone' (vii. 95. 2), 'On the Drisadvati' (ದೃಷದ್ವತ್ಯಾಂ : iii. 23 4), 'Citra indeed' (ಚಿತ್ರ ಇತ್ : vii. 21-18) 'Sarasvati' (x. 64-9 and vi. 52.6). Yaska, however, regarded this (passage), 'She with her might' (ಇಯಂ ಶುಷ್ಮೇಭಿಃ : vi. 61-2), to be a seventh.

138. Aitra regarding this (stanza) as a sacrificial text (ಯಾಜ್ಯ) for the victim offered to Sarasvati (ಸಾರಸ್ವತ) in the Maitrayaniya (ಸಂಹಿತಾ), because the oblation is (here) the chief thing, has stated (that it is addressed to the Vac (ವಾಕ್).

139. (The hymn) 'Doer of fair deeds' (ಸುರೂಪಕೃತ್ನುಂ : i.4) is addressed to Indra, as well as seven others after it (5-11). Six successive stanzas

ಷಳಾದಹ ಸ್ವಧಾಮನು ನಾರುತ್ಯೋಽನನ್ತರಾ ಋಚಃ || ೧೩೯ ||

ಏಕಾ ವೀಳು ಚಿದಿಂದ್ರಾಯ ಮರುದ್ಭಿಃ ಸಹ ಗೀಯತೇ |
ತಸ್ಯಾ ಏಕಾಂತರಾಯಾಸ್ತು ಅರ್ಧರ್ಚೋಽನ್ತ್ಯೋ ದ್ವಿದೇವತಃ || ೧೪೦ ||

ಮರುದ್ಗಣಪ್ರಧಾನೋ ಹೀತ್ಥಂ ಚೇಂದ್ರೋ ವಿಚಿಕಿತ್ಸಿತಃ |
ಮಂದೂ ಸಮಾನವರ್ಚಸಾ ಮಂದುನಾ ವಾ ಸವರ್ಚಸಾ || ೧೪೧ ||

ಮಂದೂ ಇತಿ ಪ್ರಗೃಹ್ಣಂತಿ ಯೇಷಾಮೇವ ದ್ವಿದೇವತಃ |
ಏಕದೇವತ್ಯಮಾಶ್ರಾವ್ಯೋ ವಿಜ್ಞಾಯಾಧ್ಯಯನಾತ್ಪದಂ || ೧೪೨ ||

ಗಳಿಗೂ) ಇಂದ್ರನು ದೇವತೆಯು. ಆದರೆ, **ಯುಂಜಂತಿ ಬ್ರಧ್ನಂ** ಎಂಬ ಆರನೆಯ ಸೂಕ್ತದಲ್ಲಿ ೪, ೬, ೮, ೯ ನೇ ಋಕ್ಕುಗಳಿಗೆ ಇಂದ್ರ ಮತ್ತು ಮರುತ್ತುಗಳೂ ದೇವತೆಯು.

**೬ ನೇ ಸೂಕ್ತದ ೫, ೭ ನೇ ಋಕ್ಕುಗಳಲ್ಲಿರುವ ಇಂದ್ರ ಮತ್ತು ಮರುತ್ತುಗಳ ಸಾಹಚರ್ಯ**

140. **ಯುಂಜಂತಿ ಬ್ರಧ್ನಂ** ಎಂಬ ಆರನೆಯ ಸೂಕ್ತದಲ್ಲಿರುವ **ವೀಳು ಚಿತ್** ಎಂಬ ಐದನೆಯ ಋಕ್ಕಿನಲ್ಲಿ ಇಂದ್ರನನ್ನು ಮರುತ್ತುಗಳೊಡನೆ ಸ್ತುತಿಸಲಾಗಿದೆ. ಅದರಿಂದ ಮುಂದಿನ ಏಳನೆಯ ಋಕ್ಕಿನಲ್ಲಿ (**ಇಂದ್ರೇಣ ಸಂ** ಎಂಬ ಋಕ್ಕು) ಉತ್ತರಾರ್ಧಕ್ಕೆ ಇಬ್ಬರು ದೇವತೆಗಳಿರುವರು.

141-142. ಈ ಏಳನೆಯ ಋಕ್ಕಿಗೆ ಮರುದ್ಗಣವೇ ಮುಖ್ಯದೇವತೆಯು. ಇಂದ್ರನೂ ದೇವತೆಯಾಗಿರುವ ವಿಷಯದಲ್ಲಿ ಕೆಲವರು ಸಂಶಯವನ್ನು ವ್ಯಕ್ತಪಡಿಸುವರು. ಈ ಋಕ್ಕಿನ ಉತ್ತರಾರ್ಧದಲ್ಲಿರುವ **ಮಂದೂ** ಎಂಬ ಶಬ್ದವು ದ್ವಿವಚನವೆಂದು ಭಾವಿಸಿದರೆ ಆಗ ಇಬ್ಬರು ದೇವತೆಗಳೆಂದು ಹೇಳಬೇಕಾಗುವುದು. ಆದರೆ **ಮಂದೂ** ಎಂಬ ಶಬ್ದಕ್ಕೆ **ಮಂದುನಾ** ಎಂಬ ತೃತೀಯ ವಿಭಕ್ತ್ಯರ್ಥವನ್ನು ಹೇಳುವುದಾದರೆ ಆಗ ಈ ಋಕ್ಕಿಗೆ ಒಂದೇ ದೇವತೆಯೆಂದು ಹೇಳಬೇಕಾಗುವುದು. ಆದ್ದರಿಂದ ಈ ಋಕ್ಕಿನ ದೇವತೆಗಳ ವಿಷಯದಲ್ಲಿ ಅಭಿಪ್ರಾಯಭೇದವಿರುವುದು.

---

(beginning) 'Then according to their wont' ( ಅಥ ಸ್ವಧಾಮನು : 6. 4-9) are addressed to the Maruts.

**29, Indra associated with the Maruts jn RV. j. 6.**

140. One (of them) 'What is firm' (ವೀಳು ಚಿತ್ : 6.5) is sung in honour of Indra with the Maruts. But the latter hemistich of the (stanza) next but one to this (i.e. 6.7) is addreseed to two deities.

141. For while it is chiefly addressed to the host of the Maruts, Indra is at the same time intended to be distinguished thus: 'both glad (and) equal in brilliance' (ಮಂದೂ ಸಮಾನವರ್ಚಸಾ); or (this means) 'with him who is glad (and) of equal brilliance'.

142. Those to whom (the hemistich appears to be) addressed to two deities, explain (the final vowel of) mandu as not liable to phonetic combination (ಪ್ರಗೃಹ್ಣಂತಿ). One (however) who from his study (of it) recognizes the pada to have only one deity, deverses a hearing.

ರೋದಸೀ ದೇವಪತ್ನೀನಾಮಥರ್ವಾಂಗಿರಸೇ ಯಥಾ |
ಮರುದ್ಗಣಪ್ರಧಾನೇಯಮಾಚಾರ್ಯೈರ್ಣಾಂ ಸ್ತುತಿರ್ಮತಾ || ೧೪೩ ||
ಮರುದ್ಗಣಪ್ರಧಾನತ್ವಾದಿಂದ್ರಸ್ತು ವಿಚಿಕಿತ್ಸಿತಃ |
ಮರುದ್ಗಣಂ ಮಹೇಂದ್ರಸ್ಯ ಸಮಾಂಶಂ ಸಕಲಂ ವಿದುಃ || ೧೪೪ ||
ಅಗ್ನಿನಿತ್ಯಗ್ನಿದೈವತ್ಯಂ ಪಾದಸ್ತತ್ರ ದ್ವಿದೇವತಃ |
ನಿರ್ಮಥ್ಯಾಹವನೀಯಾವರ್ಥಾವಗ್ನಿನಾಗ್ನಿಃ ಸಮಿಧ್ಯತೇ || ೧೪೫ ||
ದ್ವಿತೀಯೇ ದ್ವಾದಶರ್ಚೇ ತು ಪ್ರತ್ಯೃಚಂ ಯಾಸ್ತು ದೇವತಾಃ |

143. ಅಥರ್ವವೇದದಲ್ಲಿ **ರೋದಸೀ** (ರುದ್ರಪತ್ನಿ) ಎಂಬುದು ದೇವಪತ್ನಿಯರಲ್ಲಿ ಓರ್ವ ಸ್ತ್ರೀಯೆಂಬ ಅರ್ಥವನ್ನು ಸೂಚಿಸುವಂತೆ ಈ ಸೂಕ್ತದಲ್ಲಿ ಈ ಋಕ್ಕಿಗೆ (೭ನೇ ಋಕ್ಕಿಗೆ) ಮರುದ್ಗಣವೇ ಮುಖ್ಯದೇವತೆಯೆಂದು (ಇಂದ್ರಶಬ್ದವಿದ್ದರೂ ಸಹ) ಅನೇಕ ಆಚಾರ್ಯರ ಮತವು.

144. ಮರುದ್ಗಣವೇ ಇಲ್ಲಿ ಪ್ರಧಾನದೇವತೆಯಾಗಿರುವುದರಿಂದ ಇಂದ್ರನು ಪ್ರಸ್ತಾಪಪ್ರಸಕ್ತಿನ ಸೂಚಿತವಾಗಿರುವನೆಂದು ತಿಳಿಯಬಹುದು. ಏಕೆಂದರೆ ಮರುತ್ಸಂಬಂಧವಾದ ಸಕಲ ಯಜ್ಞಕರ್ಮಗಳಲ್ಲಿಯೂ ಹವಿರ್ಭಾಗದಲ್ಲಿಯೂ ಇಂದ್ರನಿಗೂ ಮರುದ್ಗಣಗಳಿಗೂ ಸಮಾನವಾದ ಭಾಗವಿರುವುದೆಂದು ಪ್ರಸಿದ್ಧಿಯು.

**ಪ್ರಥಮಮಂಡಲದ ೧೨ ನೇ ಸೂಕ್ತ ಮತ್ತು ೧೩ ನೇ ಸೂಕ್ತವಾದ**
**ಆಪ್ರೀಸೂಕ್ತ**

145. **ಅಗ್ನಿಂ ದೂತಂ ವೃಣೀಮಹೇ** ಎಂಬ ಹನ್ನೆರಡನೆಯ ಸೂಕ್ತಕ್ಕೆ ಅಗ್ನಿಯೇ ದೇವತೆಯು ; ಈ ಸೂಕ್ತದ **ಅಗ್ನಿನಾಗ್ನಿಃ ಸಮಿಧ್ಯತೇ** ಎಂಬ ಆರನೆಯ ಋಕ್ಕಿಗೆ ಇಬ್ಬರು ದೇವತೆಗಳು—ನಿರ್ಮಥ್ಯಾಗ್ನಿ, ಆಹವನೀಯಾಗ್ನಿ ಎಂದು. ನಿರ್ಮಥ್ಯಾಗ್ನಿ (ಅರಣಿಗಳಲ್ಲಿ ಕಡೆದ ಅಗ್ನಿ) ಯಿಂದ ಆಹವನೀಯಾಗ್ನಿಯು ಹೊತ್ತಿಸಲ್ಪಡುವುದೆಂದು ಇಲ್ಲಿ ಹೇಳಿದೆ.

146. ಇದರ ಮುಂದಿನ ಸೂಕ್ತವಾದ **ಸುಸಮಿದ್ಧೋ ನ** ಎಂಬ ಹದಿಮೂರನೆಯ ಸೂಕ್ತದಲ್ಲಿ ಹನ್ನೆರಡು

143. as Rodasi in the Atharva-veda (ಅಥರ್ವಾಂಗಿರಸ) is (regarded as one) of the wives of the gods.

This praise is by the teachers regarded as chiefly addressed to the host of the Maruts.

144. As the host of the Maruts is chiefly addressed, Indra is at the same time intended to be distinguished. For the entire host of the Maruts is considered to share (in sacrifice) equaly (ಸಮಾಂಶಮಂ) with the great Indra.

**30. The deities of RV. i. 12, and of the Apri hymn i. 13.**

145. The hymn 'Agni' (ಅಗ್ನಿ) : i. 12) has Agni as its divinity. In it one verse, 'by Agni Agni is kindled' (ಅಗ್ನಿನಾಗ್ನಿಃಸಮಿಧ್ಯತೇ 6), is addressed to two deities: they mean ನಿರ್ಮಥ್ಯ and ಆಹವನೀಯ.

146. Now as to the deities which, in the second hymn of twelve stanzas(i. 13),are praised along with Agni, hear their names from me.

ಸ್ತೂಯಂತೇ ಹ್ಯಗ್ನಿನಾ ಸಾರ್ಧಂ ತಾಸಾಂ ನಾಮಾನಿ ಮೇ ಶೃಣು ॥ ೧೪೬ ॥
ಪ್ರಥಮಾಯಾಂ ಸ್ತುತಶ್ಚೇಧ್ಮೋ ದ್ವಿತೀಯಾಯಾಂ ತನೂನಪಾತ್ ।
ನರಾಶಂಸಸ್ತೃತೀಯಾಯಾಂ ಚತುರ್ಥ್ಯಾಂ ಸ್ತೂಯತೇ ತ್ವಿಳಃ ॥ ೧೪೭ ॥
ಬರ್ಹಿರೇವ ತು ಪಂಚಮ್ಯಾಂ ದ್ವಾರೋ ದೇವ್ಯಸ್ತತೋಽನ್ಯಯಾ ।
ನಕ್ತೋಷಾಸಾ ತು ಸಪ್ತಮ್ಯಾಮಷ್ಟಮ್ಯಾಂ ಸಂಸ್ತುತೌ ಸಹ ॥ ೧೪೮ ॥
ದೈವ್ಯಾವಿತಿ ತು ಹೋತಾರೌ ನವಮ್ಯಾಮೃಚಿ ಸಂಸ್ತುತಾಃ ।
ತಿಸ್ರೋ ದೇವ್ಯೋ ದಶಮ್ಯಾಂ ತು ಜ್ಞೇಯಸ್ತ್ವಷ್ಟೈವ ತು ಸ್ತುತಃ ॥ ೧೪೯ ॥
ಏಕಾದಶ್ಯಾಂ ತು ಸೂಕ್ತಸ್ಯ ಸ್ತುತಂ ವಿದ್ಯಾದ್ವನಸ್ಪತಿಂ ।
ದ್ವಾದಶ್ಯಾಂ ತು ಸ್ತುತಾ ದೇವೀರ್ವಿದ್ಯಾತ್ಸ್ವಾಹಾಕೃತೀರಿತಿ ॥ ೧೫೦ ॥

ಋಕ್ಕುಗಳಿರುವುವು. ಪ್ರತಿಋಕ್ಕಿಗೂ ಬೇರೆ ಬೇರೆ ದೇವತೆಗಳಿದ್ದು ಅವರು ಅಗ್ನಿಯಿಂದ ಸಹಿತರಾಗಿ ಸ್ತುತಿಸಲ್ಪಟ್ಟಿರುವರು. ಆ ದೇವತೆಗಳ ಹೆಸರುಗಳನ್ನು ಹೇಳುವೆನು, ಕೇಳು.

147. ಮೊದಲನೆಯ ಋಕ್ಕಿನಲ್ಲಿ ಇಧ್ಮವೂ (ಜ್ವಲಿತಾಗ್ನಿಯೂ) ಎರಡನೆಯ ಋಕ್ಕಿನಲ್ಲಿ **ತನೂನಪಾತ್** ಎಂಬ ದೇವತೆಯೂ, ಮೂರನೆಯ ಋಕ್ಕಿನಲ್ಲಿ **ನರಾಶಂಸ**ನೆಂಬ ದೇವತೆಯೂ, ನಾಲ್ಕನೆಯ ಋಕ್ಕಿನಲ್ಲಿ **ಇಳಃ** ಎಂಬ ದೇವತೆಯೂ ಸ್ತುತರಾಗಿರುವರು.

148. ಐದನೆಯ ಋಕ್ಕಿನಲ್ಲಿ **ಬರ್ಹಿಃ** (ಕತ್ತರಿಸಿದ ದರ್ಭೆಗಳು) ಎಂಬ ದೇವತೆಯೂ, ಮುಂದಿನ ಋಕ್ಕಿನಲ್ಲಿ **ದ್ವಾರೋ ದೇವ್ಯಃ** ಎಂಬ ದ್ವಾರಾಭಿಮಾನಿದೇವತೆಗಳೂ, ಏಳನೆಯ ಋಕ್ಕಿನಲ್ಲಿ **ನಕ್ತೋಷಾಸಾ** ಎಂಬ (ರಾತ್ರಿ ಮತ್ತು ಉಷಃಕಾಲಾಭಿಮಾನಿದೇವತೆಗಳು) ದೇವತೆಗಳೂ, ಎಂಟನೆಯ ಋಕ್ಕಿನಲ್ಲಿ,

149. **ದೇವ್ಯೌ ಹೋತಾರೌ** ಎಂಬ ದೇವತೆಗಳೂ, ಒಂಭತ್ತನೆಯ ಋಕ್ಕಿನಲ್ಲಿ (ಸರಸ್ವತೀ ಇಳಾ ಭಾರತೀ) **ತಿಸ್ರೋ ದೇವ್ಯಃ** ಎಂಬ ಮೂರು ಮಂದಿ ದೇವತೆಯರೂ, ಹತ್ತನೆಯ ಋಕ್ಕಿನಲ್ಲಿ **ತ್ವಷ್ಟೃವೂ**

150. ಹನ್ನೊಂದನೆಯ ಋಕ್ಕಿನಲ್ಲಿ **ವನಸ್ಪತಿ**ಯೆಂಬ ದೇವತೆಯೂ, ಹನ್ನೆರಡನೆಯ ಋಕ್ಕಿನಲ್ಲಿ **ಸ್ವಾಹಾಕೃತಿ** ಎಂಬ ದೇವತೆಯೂ ಸ್ತುತರಾಗಿರುವರು.

147. In the first (stanxa Fuel( ಇಧ್ಮ )is praised, in the second Tanunapat, Narasamsa in tne third, but in the forth Ila is praised.

148. but the Litter (ಬರ್ಹಿ) in the fifth, then the Divine Doors with other (6), Night and Morning (ನಕ್ತೋಷಾಸಾ) in the seventh, while in the eight are praised together.

149. the two 'Divine' Sacrificers, in the ninth stanza are praised the Three Goddesses; But Tvastr is to be known as praised in the tenth.

**31. The eleven Apri hymns.**

150. In the eleventh (stanza) of the hymn one should know Vanaspati to be praised; but in the twelfth one should know the divine 'Svahakrtis' to be praised.

ಸೂಕ್ತೇಽಸ್ಮಿನ್ಪ್ರತ್ಯೃಚಂ ಯಾಸ್ತು ದೇವತಾಃ ಪರಿಕೀರ್ತಿತಾಃ ।
ತಾ ಏವ ಸರ್ವಾಸ್ವಾಪ್ರೀಷು ದ್ವಿತೀಯಾ ತು ವಿಕಲ್ಪತೇ ॥ ೧೫೧ ॥
ಪ್ರೈಷೈಃ ಸಹಾಪ್ರೀಸೂಕ್ತಾನಿ ತಾನ್ಯೇಕಾದಶ ಸಂತಿ ಚ ।
ಯಜೂಂಷಿ ಪ್ರೈಷಸೂಕ್ತಂ ವಾ ದಶೈತಾನೀತರಾಣಿ ತು ॥ ೧೫೨ ॥
ಸೌತ್ರಾಮಣಾನಿ ತು ತ್ರೀಣಿ ಪ್ರಾಜಾಪತ್ಯಾಶ್ವಮೇಧಿಕೇ ।
ಪುರುಷಸ್ಯ ತು ಯನ್ಮೇಧೇ ಯಜುಃಷ್ವೇವ ತು ತಾನಿ ಷಟ್ ॥ ೧೫೩ ॥
ಅತ್ರೈವ ಪ್ರೈಷಸೂಕ್ತಂ ಸ್ಯಾನ್ನ ಯಜುಃಷ್ವಾದ್ರಿಯೇತ ತತ್ ।

**ಹನ್ನೊಂದು (ಹತ್ತು) ಆಪ್ರೀಸೂಕ್ತಗಳು**

151. ಈ ಸೂಕ್ತದ ಪ್ರತಿಋಕ್ಕಿನಲ್ಲಿಯೂ ಯಾವ ಯಾವ ದೇವತೆಗಳು ಸ್ತುತರಾಗಿರುವರೋ ಅವರೆಲ್ಲರೂ ಎಲ್ಲಾ (ಹತ್ತು) ಆಪ್ರೀಸೂಕ್ತಗಳಲ್ಲಿಯೂ ಈ ಕ್ರಮದಿಂದಲೇ ಸ್ತುತರಾಗಿರುವರು. ಎರಡನೆಯ ದೇವತೆಯ ವಿಷಯದಲ್ಲಿ (**ತನೂನಪಾತ್** ಅಥವಾ **ನರಾಶಂಸ**) ಸ್ವಲ್ಪ ವ್ಯತ್ಯಾಸವಿರುವುದು.

152. ಪ್ರೈಷಸೂಕ್ತವನ್ನೂ ಸೇರಿಸಿಕೊಂಡರೆ ಒಟ್ಟು ಹನ್ನೊಂದು ಆಪ್ರೀಸೂಕ್ತಗಳಿರುವುವು. ಪ್ರೈಷಸೂಕ್ತವು ಮುಖ್ಯವಾಗಿ ಯಜುರ್ವೇದಕ್ಕೆ ಸಂಬಂಧಪಟ್ಟ ಮಂತ್ರಗಳನ್ನು ನಿರ್ದೇಶಿಸುವುದರಿಂದ ಅದನ್ನು ಬಿಟ್ಟರೆ ಋಗ್ವೇದದಲ್ಲಿ ಒಟ್ಟು ಹತ್ತು ಆಪ್ರೀಸೂಕ್ತಗಳಿರುವುವು.

153. ಇವುಗಳಲ್ಲದೆ, ಸೌತ್ರಾಮಣಿ ಎಂಬ ಯಾಗಕ್ಕೆ ಸಂಬಂಧಪಟ್ಟಂತೆ ಮೂರು ಆಪ್ರೀಸೂಕ್ತಗಳೂ, ಪ್ರಾಜಾಪತ್ಯ, ಅಶ್ವಮೇಧ, ಪುರುಷಮೇಧ ಎಂಬ ಯಾಗಗಳಿಗೆ ಸಂಬಂಧಪಟ್ಟಂತೆ ಒಂದೊಂದು ಆಪ್ರೀಸೂಕ್ತವೂ ಒಟ್ಟು ಆರು ಆಪ್ರೀಸೂಕ್ತಗಳೂ ಯಜುರ್ವೇದಕ್ಕೆ ಸಂಬಂಧಪಟ್ಟಂತಿರುವವು.

154. ಈ ಆರು ಆಪ್ರೀಸೂಕ್ತಗಳಲ್ಲಿ ಶುಕ್ಲಯಜುರ್ವೇದದ ವಾಜಸನೇಯ ಸಂಹಿತೆಯಲ್ಲಿರುವ 29 ರಿಂದ 40 ವರೆಗಿನ ಪ್ರೈಷಮಂತ್ರಗಳನ್ನು ಮಾತ್ರ ವಿಮರ್ಶೆಮಾಡಬೇಕು. ಉಳಿದ ಐದು ಸೂಕ್ತಗಳನ್ನು ವಿವೇಚಿಸಬೇಕಾದ

151. Now as to the deities which, in each stanza, are celebrated in this hymn (i. 13), they (occur) in all the Apris; the second (deity), however, is subject to option (ವಿಕಲ್ಪತೇ).

152. As to the Apri hymns, including the praises (ritual summons), they are eleven (in number); or (ratner) the praisa hymn (consists of) sacrificial formulas, while these other (hymns of the Rg.veda are ten in number).

153. Now there are three (Apri hymns) relating to the sautramani sacrifice (ಸೌತ್ರಾಮಣಂ), one to Prajapati (prajapatya), and one used at the horse-sacrifice (ಅಶ್ವಮೇಧಿಕಾ), and the one (employed) in the human sacrifice (ಪುರುಷಸ್ಯ ಮೇಧೇ); these (make) six (speeial additional Apri hymns) in the Yajur-veda (ಯಜುಃಸು).

154. Here onlv the Praisa hvmn (VS. xxi. 29-40) need be (considered) that (which has been referred to beyond this), in the Yajur-veda

ತೇಷಾಂ ಪ್ರೈಷಗತಂ ಸೂಕ್ತಂ ಯಚ್ಚ ದೀರ್ಘತಮಾ ಜಗೌ || ೧೫೪ ||
ಮೇಧಾತಿಥೌ ಯದುಕ್ತಂ ಚ ತ್ರೀಣ್ಯೇವೋಭಯವಂತಿ ತು |
ಋಷೌ ಗೃತ್ಸಮದೇ ಯಚ್ಚ ವಾಧ್ರ್ಯಶ್ವೇ ಚ ಯದುಚ್ಯತೇ || ೧೫೫ ||
ನರಾಶಂಸವದತ್ರೇಶ್ಚ ದದರ್ಶ ಚ ಯದೌರ್ವಶಃ |
ತನೂನಪಾದಗಸ್ತ್ಯಶ್ಚ ಜಮದಗ್ನಿಶ್ಚ ಯಜ್ಜಗೌ || ೧೫೬ ||

ಅವಶ್ಯಕತೆ ಇಲ್ಲ. ಮೇಲೆ ಹೇಳಿದ ಪ್ರೈಷಸೂಕ್ತದ 11 ಮಂತ್ರಗಳನ್ನು **ದೀರ್ಘತಮಾಃ** ಎಂಬ ಋಷಿಯು ಪಠಿಸಿರುವನು.

**ಆಪ್ರೀಸೂಕ್ತಗಳ ಮೂರು ಗುಂಪುಗಳು ಅಥವಾ ಪ್ರಭೇದಗಳು**

155 ಈ ಮೇಲಿನ 10 ಆಪ್ರೀಸೂಕ್ತಗಳಲ್ಲಿ ಮೇಧಾತಿಥಿ ಋಷಿದೃಷ್ಟವಾದ (1 ನೇ ಮಂಡಲದ 13 ನೇ ಸೂಕ್ತ) ಸೂಕ್ತದಲ್ಲಿಯೂ, **ದೀರ್ಘತಮಾಃ** ಎಂಬ ಋಷಿದೃಷ್ಟವಾದ **ಸಮಿದ್ಧೋ ಅಗ್ನ ಆ ವಹ** ಎಂಬ 1 ನೇ ಮಂಡಲದ 142 ನೇ ಸೂಕ್ತದಲ್ಲಿಯೂ ಎರಡನೆಯ ದೇವತೆಯ ಸ್ಥಾನದಲ್ಲಿ **ತನೂನಪಾತ್** ಮತ್ತು **ದರಾಶಂಸ** ಎಂಬ ಎರಡು ದೇವತೆಗಳೂ ಇವೆ. ಆದ್ದರಿಂದ ಈ 2 ಸೂಕ್ತಗಳಿಗೆ **ಉಭಯವಂತಿ ಸೂಕ್ತಾನಿ** ಎಂದು ಹೆಸರು, ಈ ಸೂಕ್ತದಲ್ಲಿರುವಂತೆ ಎರಡನೆಯ ದೇವತೆಯ ಸ್ಥಾನದಲ್ಲಿ ನರಾಶಂಸದೇವತೆಯಿರುವ ಇನ್ನೂ ಮೂರು ಆಪ್ರೀಸೂಕ್ತಗಳಿರುವವು. ಅವು ಯಾವ ವೆಂದರೆ—ಗೃತ್ಸಮದಋಷಿದೃಷ್ಟವಾದ ಸೂಕ್ತ (2 ನೇ ಮಂಡಲದ 3 ನೇ ಸೂಕ್ತ). **ಸಮಿದ್ಧೋ ಅಗ್ನಿರ್ನಿಹಿತಃ** ಎಂಬ ಸೂಕ್ತ; ವಾಧ್ರ್ಯಶ್ವಋಷಿದೃಷ್ಟವಾದ **ಇಮಾಂ ಮೇ ಅಗ್ನೇ** ಎಂಬ ಸೂಕ್ತ (10 ನೇ ಮಂಡಲದ 70 ನೇ ಸೂಕ್ತ); ವಸುಶ್ರುತ ಆತ್ರೇಯನಿಂದ ದೃಷ್ಟವಾದ **ಸುಸಮಿದ್ಧಾಯ** ಎಂಬ ಐದನೆಯ ಮಂಡಲದ ಐದನೆಯ ಸೂಕ್ತ; ವಸಿಷ್ಠ ದೃಷ್ಟವಾದ **ಜುಷಸ್ವ ನಃ** ಎಂಬ ಏಳನೆಯ ಮಂಡಲದ ಎರಡನೆಯ ಸೂಕ್ತ. ಈ ನಾಲ್ಕು ಸೂಕ್ತಗಳಲ್ಲಿಯೂ ಎರಡನೆಯ ಸ್ಥಾನದೇವತೆಯು ನರಾಶಂಸನಾದುದರಿಂದ ಈ ನಾಲ್ಕು ಆಪ್ರೀಸೂಕ್ತಗಳಿಗೆ **ನಾರಾಶಂಸವಂತಿ ಸೂಕ್ತಾನಿ** ಎಂದು ಹೆಸರು.

156-157. ಅಗಸ್ತ್ಯಋಷಿದೃಷ್ಟವಾದ **ಸಮಿದ್ಧೋ ಅದ್ಯ ರಾಜಸಿ** ಎಂಬ ಮೊದಲನೇ ಮಂಡಲದ 188 ನೇ ಸೂಕ್ತದಲ್ಲಿಯೂ, ಜಮದಗ್ನಿಋಷಿದೃಷ್ಟವಾದ **ಸಮಿದ್ಧೋ ಅದ್ಯ ಮನುಷೋ** ಎಂಬ 10 ನೇ ಮಂಡಲದ

(ಯಜುಃಸು) need not be troubled about (here).

Of those (eleven) the hymn relating to the Praisas, and that which Dirghatamas sang (i. 142),

### 32. Tanunapat and Narasamsa in Apri hymns. Idhma a form of Agni.

155. and that which has been mentioned in (the collection of) Medhatithi (i. 13): only these three contain both (ತನೂನಪಾತ್ and ನರಾಶಂಸ). Both that which is mentioned in (the collection of) Grtsamada (ii. 3) and in (that of) Vadhryasva (x 70).

156. Both (the hymn) of Atri (v. 5) and that (vii. 2) which was revealed to the son of Urvasi (Vasistha), contain Narasamsa. Tanunapat (appears in that) which Agastya (i. 188) and Jamadagni (x. 110) sang.

ವಿಶ್ವಾಮಿತ್ರ ಋಷಿರ್ಯಚ್ಚ ಜಗೌ ವೈ ಕಾಶ್ಯಪೋಽಸಿತಃ ।
ಮೇಧಾತಿಥೇರ್ಋಚಾಂ ಯಾಸ್ತು ಪ್ರೋಕ್ತಾ ದ್ವಾದಶ ದೇವತಾಃ ॥ ೧೫೭ ॥
ಸಂಪದ್ಯಂತೇ ಯಥಾಗ್ನಿಂ ತಾಃ ಸಂಪದಂ ತಾಂ ನಿಬೋಧತ ।
ಇಧ್ಮೋ ಯಃ ಸರ್ವಮೇವಾಗ್ನಿರಯಂ ಹೀಧ್ಮಃ ಸಮಿಧ್ಯತೇ ॥
ಧ್ಮಾತೇರ್ವೈತತ್ಕೃತಂ ರೂಪಂ ಧ್ಮಾತೋ ಹೀಧ್ಮಃ ಸಮಿಧ್ಯತೇ ॥ ೧೫೮ ॥
ಧ್ಮಾತೋ ಹೀಧ್ಮಃ ಸಮಿಧ್ಯತೇ

॥ ಇತಿ ಬೃಹದ್ದೇವತಾಯಾಂ ದ್ವಿತೀಯೋಽಧ್ಯಾಯಃ ॥

110 ನೇ ಸೂಕ್ತದಲ್ಲಿಯೂ, ವಿಶ್ವಾಮಿತ್ರಋಷಿದೃಷ್ಟವಾದ **ಸಮಿತ್ಸಮಿತ್ಸುಮನಾ** ಎಂಬ ಮೂರನೆಯ ಮಂಡಲದ ನಾಲ್ಕನೆಯ ಸೂಕ್ತದಲ್ಲಿಯೂ ಕಶ್ಯಪಪುತ್ರನಾದ ಅಸಿತ (ಅಥವಾ ದೇವಲ) ಎಂಬ ಋಷಿದೃಷ್ಟವಾದ **ಸಮಿದ್ಧೋ ವಿಶ್ವತಸ್ಪತಿಃ** ಎಂಬ ೯ ನೇ ಮಂಡಲದ 5 ನೇ ಸೂಕ್ತದಲ್ಲಿಯೂ **ತನೂನಪಾತ್** ಎಂಬುದು ಎರಡನೆಯ ದೇವತೆಯಾಗಿರುವುದು. ಆದ್ದರಿಂದ ಈ ನಾಲ್ಕು ಸೂಕ್ತಗಳಿಗೆ **ತನೂನಪಾತ್ವಂತಿ ಸೂಕ್ತಾನಿ** ಎಂದು ಹೆಸರು. ಮೇಧಾತಿಥಿ ಋಷಿದೃಷ್ಟವಾದ 1 ನೇ ಮಂಡಲದ 13 ನೇ ಸೂಕ್ತದಲ್ಲಿ ಒಟ್ಟು ಹನ್ನೆರಡು ಮಂದಿ ದೇವತೆಗಳು ಸ್ತುತರಾಗಿದಾರೆ.

158. ಈ ದೇವತೆಗಳು ಯಾವ ರೀತಿ ಅಗ್ನಿಯನ್ನು ಪ್ರತಿಬಿಂಬಿಸುವರೆಂಬುದನ್ನು ಹೇಳುವೆನು, ಕೇಳಿ. ಈ ಎಲ್ಲಾ ಆಪ್ರೀಸೂಕ್ತಗಳಲ್ಲಿಯೂ ಮೊದಲನೆಯ ಋಕ್ಕಿನಲ್ಲಿರುವ **ಇಧ್ಮಃ** ಎಂಬ ಶಬ್ದವು ಅಗ್ನಿಯನ್ನು ಸೂಚಿಸುವುದು. ಏಕೆಂದರೆ **ಸಮಿಧ್ಯತೇ** ಎಂಬ ಶಬ್ದಕ್ಕೆ ಹೊತ್ತಿಸಿ ಜ್ವಲಿಸುವಂತೆ ಮಾಡಲ್ಪಡುವುದು ಎಂದೂ, ಧ್ಮಾತಿ ಶಬ್ದಕ್ಕೆ (ಊದುಕೊಳವಿಯಿಂದ) ಊದಿ ಉರಿಮಾಡುವುದು ಎಂದೂ ಅರ್ಥವಿರುವುದು. ಈ ಎರಡು ಕಾರ್ಯಗಳೂ (ಹೊತ್ತಿಸುವುದು, ಮತ್ತು ಊದಿ ಉರಿಮಾಡುವುದು) ಅಗ್ನಿಗೆ ಸಂಬಂಧಪಟ್ಟಿರುವುದರಿಂದ ಮೊದಲನೆಯ ಋಕ್ಕಿನಲ್ಲಿ ಕಂಡುಬರುವ **ಸಮಿದ್ಧಃ** ಇತ್ಯಾದಿ ಪದಗಳು ಅಗ್ನಿಯನ್ನೇ ಸೂಚಿಸುವವು. ಆದ್ದರಿಂದ ಆಪ್ರೀಸೂಕ್ತದ ಮೊದಲನೆಯ ಋಕ್ಕಿಗೆ (ಪ್ರಜ್ವಲಿತನಾದ) ಅಗ್ನಿಯೇ ದೇವತೆಯು.

ಇಲ್ಲಿಗೆ ಬೃಹದ್ದೇವತೆಯೆಂಬ ಗ್ರಂಥದಲ್ಲಿ ಎರಡನೆಯ ಅಧ್ಯಾಯವು ಸಮಾಪ್ತವಾದುದು.

---

157. and that which the seer Viswamitra (iii. 4) and Asita the son of Kasyapa (ix. 5) sang.

Now as to the twelve deities which have been stated (to belong) to the stanzas of Medhatithi (i 13, 1-12).

158. learn the manner (ಸಂಪದಂ) in which they represent (ಸಂಪದ್ಯಂತೇ) Agni.

The Fuel (ಇಧ್ಮ) is the Agni who is everything; for this (Agni) is kindled ಸಮಿಧ್ಯತೇ as fuel. Or this form (ಇಧ್ಮ) is made from the root dhma- to blow; for fuel is kindled when blown (ಧಮಿತಃ).

Thus ends the 2nd. chapter.

# ಅಥ ಬೃಹದ್ದೇವತಾಯಾಂ ತೃತೀಯೋಽಧ್ಯಾಯಃ

ತನೂನಪಾದಯಂ ತ್ವೇವ ನಾಮ್ನಾ ಯಚ್ಛತ್ಯಸೌ ತನುಂ |
ನಪಾದಿತಿ ಪ್ರಜಾಮಾಹುರಮುತೋಽಸ್ಯ ಚ ಸಂಭವಂ || ೧ ||
ನರಾಶಂಸಮಿಹೈಕೇ ತು ಅಗ್ನಿಮಾಹುರಥೇತರೇ |
ನರಾಃ ಶಂಸಂತಿ ಸರ್ವೇಽಸ್ಮಿನ್ನಾಸೀನಾ ಇತಿ ವಾಧ್ವರೇ || ೨ ||
ಏತಮೇವಾಹುರನ್ಯೇಽಗ್ನಿಂ ನರಾಶಂಸೋಽಧ್ವರೇ ಹ್ಯಯಂ |
ನರೈಃ ಪ್ರಶಸ್ಯ ಆಸೀನೈರಾಹುಶ್ಚೈವರ್ತ್ವಿಜೋ ನರಃ || ೩ ||

## ಮೂರನೆಯ ಅಧ್ಯಾಯವು.

ಆಪ್ರೀಸೂಕ್ತವಿವರಣೆ (ಮುಂದುವರೆದುದು)

### ತನೂನಪಾತ್, ನರಾಶಂಸ, ಇಳೆ, ಬರ್ಹಿ ಎಂಬ ದೇವತೆಗಳು

1. **ತನೂನಪಾತ್**—ಈ ಅಗ್ನಿಗೆ **ತನೂನಪಾತ್** ಎಂದು ಹೆಸರು. **ನಪಾತ್** ಎಂದರೆ ಪ್ರಜೆ, ಸಂತತಿ ಎಂದರ್ಥವು. ಸ್ವರ್ಗೀಯಾಗ್ನಿಯು ತನ್ನ ಶರೀರವನ್ನು (**ತನು**) ವಿಸ್ತರಿಸುವುದರಿಂದ ಮತ್ತು ಅದರಿಂದ ಪಾರ್ಥಿವಾಗ್ನಿಯ ಉತ್ಪತ್ತಿಯಾಗುವುದರಿಂದ ಪಾರ್ಥಿವಾಗ್ನಿಗೆ **ತನೂನಪಾತ್** ಎಂದು ಹೆಸರು.

2. **ನರಾಶಂಸಃ**—ಈ ನರಾಶಂಸದೇವತೆಯನ್ನು ಅಗ್ನಿಯೆಂದೇ ಕೆಲವರು ಹೇಳುವರು ಅಥವಾ ಸಮಸ್ತ ಜನರು (ನರಾಃ) ಯಜ್ಞದಲ್ಲಿ ಕುಳಿತು ಈ ದೇವತೆಯನ್ನು ಪ್ರಶಂಸೆ (ಸ್ತುತಿ) ಮಾಡುವುದರಿಂದ ಈ ದೇವತೆಗೆ ನರಾಶಂಸನೆಂಬ ಹೆಸರು ಬಂದಿರುವುದು.

3. ಮತ್ತೆ ಕೆಲವರು ಈ ದೇವತೆಯನ್ನು (ನರಾಶಂಸನನ್ನು) ಅಗ್ನಿಯೆಂದು ಹೇಳುವರು. ಏಕೆಂದರೆ, ಯಜ್ಞದಲ್ಲಿ ಕುಳಿತಿರುವ ನರರಿಂದ (ಜನರಿಂದ) ಈ ದೇವತೆಯು ಎಂದರೆ ಅಗ್ನಿಯು ಪ್ರಶಂಸಿಸಲ್ಪಡುವನು. ಋತ್ವಿಕ್ಕುಗಳೂ ಇದೇ ರೀತಿ ಹೇಳುವರು.

## Chapter 3.

### 1. Tanunapat, Narasamsa. Ila. Barhis.

1. Now this same Agni is (also) Tanunapat by name. That (celesticl Agni) extends (ಯಚ್ಛತಿ) his body (ತನುಂ).

They say that 'Napat' is a descendant, and that the origin of this one (ಅಸ್ಯ) is from that one (ಅಮುತಃ).

2. Now some say that Narasamsa here is Agni Again (ಅಥವಾ) others (use the term) in (the sense of) sacrifice, (saying) 'all men (ನರಾಃ) utter praise (ಶಂಸಂತಿ) seated at it'.

3. Others say he is Agni, because he is Narasamsa as the object of praise (ಪ್ರಶಸ್ಯ) by men seated at the sacrifice; and so also say the ritualists (ಋತ್ವಿಜೋ ನರಃ),

ಇಳೆಸ್ತ್ವೃಷಿಕೃತಂ ರೂಪಮೀಡೇಶ್ಚ ಸ್ತುತಿಕರ್ಮಣಃ ।
ಇಳಾವಾಂಸ್ತೇನ ವೋಕ್ತೋಽಗ್ನಿರಿಡಿನಾ ವರ್ಧಿಕರ್ಮಣಾ ॥ ೪ ॥
ಬರ್ಹಿರೇವಾಯಮಗ್ನಿಸ್ತು ಸರ್ವಂ ಹಿ ಪರಿಬೃಂಹಿತಂ ।
ಅನೇನ ಯದ್ದುತೋ ವಾ ಸನ್ನಿಧ್ಮೇನ ಪರಿಬೃಂಹಿತಃ ॥ ೫ ॥
ದ್ವಾರಸ್ತು ದೇವ್ಯೋ ಯಾಃ ಪ್ರೋಕ್ತಾ ವಿಶ್ವೇಷಾಂ ತಾಸ್ತು ಪತ್ನಯಃ ।
ಅಗ್ನಾಯೀಮನುವರ್ತಂತೇ ತಥಾಗ್ನಾಯ್ಯಗ್ನಿಮೇವ ಚ ॥ ೬ ॥
ಅಗ್ನೌ ಧ್ರುವಂ ಸ್ಥಿತಾಸ್ತಾಸ್ತು ಸಂಸ್ತೂಯಂತೇಽಗ್ನಿನಾ ಸಹ ।
ಪ್ರಾಧಾನ್ಯಂ ತಾಸು ಚೈವಾಗ್ನೇಃ ಸ್ತುತಿಷ್ವೇವ ಹವಿಃಷು ಚ ॥ ೭ ॥

4. **ಇಳೆಃ**—ಇಳ ಶಬ್ದವು **ಈಳ ಸ್ತುತೌ** (ಸ್ತುತಿಸು) ಎಂಬ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಋಷಿಗಳು ಹೇಳುವರು. ಅಗ್ನಿಗೆ **ಇಳಾವಾನ್** ಎಂದೂ ಹೆಸರು. ಈ ಶಬ್ದವು ಈಡ್-ಸ್ತುತಿಸು ಎಂಬ ಧಾತುವಿನಿಂದಾಗಲೀ ಇದ್-ವೃದ್ಧಿಯನ್ನು ಹೊಂದು ಎಂಬ ಧಾತುವಿನಿಂದಾಗಲೀ ನಿಷ್ಪನ್ನವಾಗಿರುವುದು.

5. **ಬರ್ಹಿಃ**—ಅಗ್ನಿಯೇ ಬರ್ಹಿಃ ಎಂಬ ಹೆಸರಿನಿಂದಲೂ ಕರೆಯಲ್ಪಡುವನು. ಏಕೆಂದರೆ, ಅಗ್ನಿಯು ಹವೀರೂಪವಾದ ಅನ್ನದಿಂದಲಾಗಲಿ, ಇಧ್ಮದಿಂದಾಗಲಿ, ಪೋಷಿಸಲ್ಪಟ್ಟು ವೃದ್ಧಿಯನ್ನೈದುವನು (ಪರಿಬೃಂಹಿತಃ).

**ದೇವೀರ್ದ್ವಾರಃ ಮತ್ತು ಉಷಾಸಾನಕ್ತಾ ಎಂಬ ದೇವತೆಗಳು**

6. **ದ್ವಾರಃ ದೇವ್ಯಃ**—ಸಮಸ್ತ ದೇವತೆಗಳ ಪತ್ನಿಯರೇ (ಎಂದರೆ ದೇವಪತ್ನಿಯರೇ) ಈ ಹೆಸರಿನಿಂದ ಕರೆಯಲ್ಪಡುವರು. ಇವರೆಲ್ಲರೂ ಅಗ್ನಿಪತ್ನಿಯಾದ ಅಗ್ನಾಯಿ ಎಂಬ ದೇವತೆಯನ್ನು ಅನುಸರಿಸಿರುವರು. ಈ ಅಗ್ನಾಯಿಯು ಅಗ್ನಿಯನ್ನು ಅನುಸರಿಸುವಳು.

7. ಈ ದೇವತೆಗಳು ಅಗ್ನಿಯಲ್ಲಿ ದೃಢವಾಗಿ ಸ್ಥಾಪಿತರಾಗಿರುವರು ಮತ್ತು ಅಗ್ನಿಯೊಡನೆ ಸ್ತುತಿಸಲ್ಪಡುವರು. ಇವರನ್ನು ಉದ್ದೇಶಿಸಿ ಅರ್ಪಿಸುವ ಸ್ತುತಿಗಳಲ್ಲಿಯೂ, ಹವಿಸ್ಸುಗಳಲ್ಲಿಯೂ ಅಗ್ನಿಗೇ ಪ್ರಾಧಾನ್ಯತೆ ಇರುವುದು.

4. Ila is a form made by the Rishis, and (is derived) from the root id, expressing praise: Agni is called idavan (possessing refreshment) either from that (root) or from the root id, expressing increase.

5. Again, this Agni is the Litter (ಬರ್ಹಿಃ), for the whole of it (ಸರ್ವಂ) is furnished (ಪರಿಬೃಂಹಿತಂ) with food; or because, when sacrificed to, he (Agni) is furnished (ಪರಿಬೃಂಹಿತಃ) with fuel.

**2. The Divine Doors, Night and Morning.**

6. The Divine Doors, as they are called, are the wives of all (the gods); they follow Agnayi, and so also Agnayi (follows) Agni.

7. Now being firmly established in Agni they are praised in combination with Agni, In their case also there is a predominance of Agni both in praises and oblations.

ನಕ್ತೋಷಾಸೌ ಚ ಯೇ ದೇವ್ಯಾವಾಗ್ನೇಯ್ಯಾವೇವ ತೇ ಸ್ಮೃತೇ ।
ಶ್ಯಾವ್ಯಾಗ್ನೇಯಿಯಾ ಹಿ ಕಾಲಸ್ಯ ತಸ್ಯೈವೋಷಾಃ ಕಲೇವ ತು ॥ ೮ ॥
ತಮ ಉಚ್ಛೃತ್ಯುಷಾ ನಕ್ತಾನಕ್ತೀಮಾಂ ಹಿಮಬಿಂದುಭಿಃ ।
ಅಪಿ ವಾವ್ಯಕ್ತವರ್ಣೇತಿ ನಞ್ಪೂರ್ವಾ ಞ್ಚೇರಿದಂ ಭವೇತ್ ॥ ೯ ॥
ಸಾ ಹಿ ದೋಷಾ ಭವತ್ಯಾದೌ ನಿಶೀಥೇ ಸಾ ತಮುಸ್ವತೀ ।
ನಾಮ್ನಾ ಭವತ್ಯುಷಾಶ್ಚೈವ ಸೈಷಾ ಪ್ರಾಗುದಯಾದ್ರವೇಃ ॥ ೧೦ ॥
ದೈವ್ಯಾವಿತಿ ತು ಹೋತಾರಾವಾಗ್ನೀ ಪಾರ್ಥಿವಮಧ್ಯಮೌ ।

8. **ನಕ್ತೋಷಾಸೌ ಅಥವಾ ಉಷಾಸಾನಕ್ತಾ**—(ಎಂದರೆ ಉಷೋದೇವತೆ ಮತ್ತು ರಾತ್ರ್ಯಭಿಮಾನಿ ದೇವತೆ) ಈ ಎರಡು ದೇವತೆಗಳೂ ಸಹ ಅಗ್ನಿಗೇ ಸಂಬಂಧಪಟ್ಟಿರುವರೆಂದು ಹೇಳಲಾಗಿದೆ. ಏಕೆಂದರೆ, ಅಗ್ನಿಯು ಕತ್ತಲೆಯನ್ನು ಪರಿಹಾರವಮಾಡುವುದರಿಂದ ಅಗ್ನಿಗೂ ಕತ್ತಲೆಗೂ (ಶ್ಯಾವಿ) ಒಂದು ವಿಧವಾದ ಸಂಬಂಧವಿದ್ದಂತಾಯಿತು. ಉಷಸ್ಸೂ ಸಹ ಆ ರಾತ್ರಿಕಾಲದ ಒಂದು ಕಲೆಯೆಂದು (ಹದಿನಾರರಲ್ಲಿ ಒಂದು ಭಾಗ) ಹೇಳಲ್ಪಡುವುದು.

9. **ತಮಃ ಉಚ್ಛೃತೀತ್ಯುಷಾಃ**—ಕತ್ತಲೆಯನ್ನೂ ಓಡಿಸುವುದಾದ್ದರಿಂದ ಈ ದೇವತೆಗೆ **ಉಷಾಃ** ಎಂದು ಹೆಸರು. **ಇಮಾಂ (ರಾತ್ರಿಂ) ಅನಕ್ತಿ ಹಿಮಬಿಂದುಭಿರತಿ ನಕ್ತಾ**—ಈ ರಾತ್ರಿಕಾಲವನ್ನು ಹಿಮಬಿಂದುಗಳಿಂದ (ಮಂಜಿನಿಂದ) ತೋಯಿಸುವುದರಿಂದ ರಾತ್ರಿಗೆ **ನಕ್ತಾ** ಎಂದು ಹೆಸರು ಅಥವಾ **ನಕ್ತಾ** ಎಂಬ ಶಬ್ದವು **ನ—ಅಂಚತಿ** ಎಂಬುದರಿಂದ ನಿಷ್ಪನ್ನವಾಗಬಹುದು. ಈ ರಾತ್ರಿಕಾಲದಲ್ಲಿ ಯಾವುದೂ ಸ್ಪಷ್ಟವಾಗಿ ಕಾಣಿಸುವುದಿಲ್ಲವಾದ್ದರಿಂದ **ನಕ್ತಾ—ಅವ್ಯಕ್ತವರ್ಣಾ** ಎಂದೂ ಅರ್ಥವು.

10. ಈ ರಾತ್ರಿದೇವತೆಗೆ ಕಾಲಾನುಸಾರವಾಗಿ ಮೂರು ವಿಧ ಹೆಸರುಗಳಿರುವವು. ರಾತ್ರಿಯ ಪ್ರಾರಂಭ ಕಾಲದಲ್ಲಿ ರಾತ್ರಿಗೆ **ದೋಷಾ** ಎಂದೂ ಅರ್ಧರಾತ್ರಿಯ ಸಮಯದಲ್ಲಿ **ತಮಸ್ವತೀ** ಎಂದೂ, ರಾತ್ರಿಯ ಕೊನೆಯಲ್ಲಿ ಎಂದರೆ ಸೂರ್ಯೋದಯಕ್ಕೆ ಪೂರ್ವದಲ್ಲಿ **ಉಷಾಃ** ಎಂದೂ ಹೆಸರು.

**ದೈವ್ಯಾ ಹೋತಾರೌ, ತಿಸ್ರೋ ದೇವ್ಯಃ, ತ್ವಷ್ಟಾ**

11. **ದೈವ್ಯಾ ಹೋತಾರೌ** ಎಂದರೆ ಪಾರ್ಥಿವಾಗ್ನಿ ಮತ್ತು ಮಧ್ಯಮಾಗ್ನಿಯು. ಈ ಎರಡು ಅಗ್ನಿಯ

8. And as to the two goddesses, Night and dawn (ನಕ್ತೋಷಾಸೌ), they too are regarded as related to Agni. For the Dark (ಶ್ಯಾವೀ) is related to Agni, while Dawn is, as it were, a sixteenth portion (ಕಲಾ) of that time (ಕಾಲ).

9. Dawn (ಉಷಾಃ) lightens (ಉಚ್ಛತಿ) the darkness, Night (ನಕ್ತ) anoints (ಅನಕ್ತಿ) her with drops of dew (ಹಿಮ); or else this (form) might be (derived) from the root ಅಂಚ್ preceded by the negative (ನಞ್), (and) mean 'the indefinite.coloured one' (ಅವ್ಯಕ್ತವರ್ಣ).

10. For at first she becomes Gloaming (ದೋಷಾ), at midnight she is Darkling (ತಮುಸ್ವತೀ), and before the rising of the Sun she becomes Dawn (ಉಷಾಃ) by name.

**3. The Two Divine Sacrificers. The Three Goddesses. Tvastr.**

11. Now the Two Divine Sacrificers are the terrestrial and the

ದಿವ್ಯಾದಗ್ನೇರ್ಹಿ ಜಜ್ಞಾತೇ ದೈವ್ಯೌ ತೇನೇಹ ಜನ್ಮನಾ ॥ ೧೧ ॥

ತಿಸ್ರಸ್ತು ದೇವ್ಯೋ ಯಾಃ ಪ್ರೋಕ್ತಾಸ್ತ್ರಿಸ್ಥಾನೈವೇಹ ಸಾ ತು ವಾಕ್ ।
ತ್ರಿವಿಧೇನೋಚ್ಯತೇ ನಾಮ್ನಾ ಜ್ಯೋತಿಃಷು ತ್ರಿಷು ವರ್ತನೀ ॥ ೧೨ ॥

ಅಗ್ನಿಮೇವಾನುಗೇಳಾ ತು ಮಧ್ಯಂ ಪ್ರಾಪ್ತಾ ಸರಸ್ವತೀ ।
ಅಮುಂ ಸ್ಥಿತಾಧಿ ಲೋಕಂ ತು ಭಾರತೀ ಭವತಿ ಹ್ಯಸೌ ॥ ೧೩ ॥

ಸೈಷಾ ತು ತ್ರಿವಿಧಾ ವಾಗ್ದೈ ದಿವಿ ಚ ವ್ಯೋಮ್ನಿ ಚೇಹ ಚ ।
ವ್ಯಸ್ತಾ ಚೈವ ಸಮಸ್ತಾ ಚ ಭಜತ್ಯಗ್ನೀನಿಮಾನಪಿ ॥ ೧೪ ॥

ರೂಪಗಳೂ ಸ್ವರ್ಗೀಯಾಗ್ನಿಯಿಂದ (ದಿವ್ಯಾದಗ್ನೇಃ) ಉತ್ಪತ್ತಿಯಾಗಿರುವವು. ಆದ್ದರಿಂದ ಅಗ್ನಿಯ ಈ ಎರಡು ರೂಪಗಳನ್ನು ದೈವ್ಯೌ (ಸ್ವರ್ಗಸಂಬಧಪಾದ) ಎಂಬ ಹೆಸರಿನಿಂದ ಕರೆಯಲಾಗಿರುವುದು.

12. **ತಿಸ್ರೋ ದೇವ್ಯಃ**—ತಿಸ್ರಃ ದೇವ್ಯಃ (ಮೂರು ಮಂದಿ ದೇವತೆಯರು) ಎಂಬ ದೇವತೆಗಳು ತ್ರಿಸ್ಥಾನಗಳಲ್ಲಿರುವ ವಾಕ್ ಅಥವಾ ವಾಗ್ದೇವತೆಯನ್ನು ಪ್ರತಿಬಿಂಬಿಸುವರು. ಈ ವಾಗ್ದೇವತೆಯು ಮೂರು ಸ್ಥಾನಗಳಲ್ಲಿರುವುದರಿಂದ ಮೂರುವಿಧ ರೂಪಗಳುಳ್ಳವಳೆಂದು ಮೂರು ಬೇರೆಬೇರೆ ಹೆಸರುಗಳಿಂದ ಕರೆಯಲ್ಪಡುವಳು.

13. ಪಾರ್ಥಿವಾಗ್ನಿಯನ್ನು ಅನುಸರಿಸಿ ಈ ಲೋಕದಲ್ಲಿರುವ ವಾಗ್ದೇವಿಗೆ **ಇಳಾ** ಎಂದು ಹೆಸರು. ಮಧ್ಯಮ (ಅಂತರಿಕ್ಷ) ಲೋಕದಲ್ಲಿರುವ ವಾಕ್ಕಿಗೆ **ಸರಸ್ವತಿ**ಯೆಂದೂ, ಸ್ವರ್ಗಲೋಕದಲ್ಲಿರುವ ವಾಗ್ದೇವತೆಗೆ **ಭಾರತೀ** ಎಂದು ಹೆಸರು. (ಒಂದೇ ದೇವತೆಗೆ ಸ್ಥಾನಭೇದಗಳಿಂದ ಮೂರು ಬೇರೆಬೇರೆ ಹೆಸರುಗಳಿರುವವು).

14. ಈ ವಾಗ್ದೇವತೆಯು ಒಬ್ಬಳೇ ಆದರೂ, ಪೃಥಿವಿ, ಅಂತರಿಕ್ಷ, ಸ್ವರ್ಗಗಳೆಂಬ ಮೂರು ಸ್ಥಾನಗಳಲ್ಲಿ ಮೂರುವಿಧವಾದ ಹೆಸರುಗಳಿಂದ ಇರುವಳು. ಈ ದೇವತೆಯು ಒಂದೇ ರೂಪದಲ್ಲಿದ್ದರೂ ಬೇರೆಬೇರೆ ರೂಪಗಳಿದ್ದರೂ ಆಯಾ ಸ್ಥಾನದಲ್ಲಿರುವ ಅಗ್ನಿಯೊಡನೆ (ಪೃಥಿವ್ಯಂತರಿಕ್ಷಸ್ವರ್ಗಗಳಲ್ಲಿರುವ ಮೂರುವಿಧ ಅಗ್ನಿಯೊಡನೆ) ಸೇರಿರುವಳು.

---

middle (forms of) Agni. For they were born from the celestial (ದಿವ್ಯ) Agni; they are therefore celestial (ದೈವ್ಯ) by birth.

12. Now they who are called the Three Goddesses are here simply (representative of) Speech (ವಾಕ್) in the three speheres. She is spoken of by a three-fold name as abiding in the three lights.

13. Ila follows (the terrestrial) Agni, Sarasvati is attached to (ಪ್ರಾಪ್ತಾ) the middle one, while the third (celestial form of Vac) becomes Bharati as occnpying that (celestial) world.

14. Now this same Vac is threefold (as) in heaven [and in air and here (on earth). Both when individual and combined she belongs (ಭಜತಿ) to all these (three) Agnis.

ತ್ವಷ್ಟಾ ತು ಯಸ್ತ್ವಯಮೇವ ಪಾರ್ಥಿವೋಽಗ್ನಿರಿತಿ ಸ್ತುತಿಃ ।
ಪಾರ್ಥಿವಸ್ಯಾಸ್ಯ ವರ್ಚಃ ಸ್ಯುಃ ಕಸ್ಯಾಪ್ಯೃಕ್ ಚಾರ್ತವೇಷು ಚ ॥ ೧೫ ॥
ತ್ವಿಷಿತಸ್ತ್ವಕ್ಷತೇರ್ವಾ ಸ್ಯಾತ್ತೂರ್ಣಮಶ್ನುತ ಏವ ವಾ ।
ಕರ್ಮಸೂತ್ತಾರಣೋ ವೇತಿ ತೇನ ನಾಮ್ನೈತದಶ್ನುತೇ ॥ ೧೬ ॥
ಯಃ ಸಹಸ್ರತಮೋ ರಶ್ಮೀ ರವೇಶ್ಚಂದ್ರಮುಪಾಶ್ರಿತಃ ।
ಸೋಽಪಿ ತ್ವಷ್ಟಾರಮೇವಾಗ್ನಿಂ ಪರಂ ಚೇಹ ಚ ಯನ್ಮಧು ॥ ೧೭ ॥
ಪ್ರಾದಾದ್ಬ್ರಹ್ಮಾಪಿ ಸುಪ್ರೀತಃ ಸುತಾಯ ತದಥರ್ವಣಃ ।

15. ತ್ವಷ್ಟಾ ಎಂಬ ಯಾವ ದೇವತೆಯಿರುವುದೋ ಅದು ಪಾರ್ಥಿವಾಗ್ನಿಯೆಂದೇ (ಅಥವಾ ಅದರ ರೂಪಾಂತರವೆಂದೇ) ಸ್ತುತಿಸಲ್ಪಟ್ಟಿರುವುದು ಅಥವಾ ಈ ದೇವತೆಯು ಪಾರ್ಥಿವದೇವತೆಯೆಂದು (ಪೃಥಿವೀಸ್ಥಾನಕ್ಕೆ ಸಂಬಂಧಪಟ್ಟ) ಸ್ತುತಿಸಿರುವ ಋಕ್ಕುಗಳಿರುವವು ಮತ್ತು ಋತುಗಳನ್ನು ಸ್ತುತಿಸುವ ಋಕ್ಕುಗಳ ಮಧ್ಯದಲ್ಲಿ ಈ ತ್ವಷ್ಟೃದೇವತೆಯನ್ನು ಅಗ್ನಿಯ ರೂಪಾಂತರವೆಂದು (ಕಶ್ಯಪ) ಸ್ತುತಿಸಿರುವ ಋಕ್ಕು ಒಂದಿರುವುದು.

### ಸ್ವರ್ಗೀಯ ದೇವತೆಯಾದ ತ್ವಷ್ಟೃ; ದಧೀಚಋಷಿಯ ವೃತ್ತಾಂತ

16. ತ್ವಷ್ಟೃ ಶಬ್ದನಿರ್ವಚನ—ತ್ವಷ್ಟೃ ಶಬ್ದವು ತ್ವಿಷ್ (ಪ್ರಕಾಶಿಸು) ಅಥವಾ ತ್ವಕ್ಷ್ ಎಂಬ ಧಾತುವಿನಿಂದ ನಿಷ್ಪನ್ನವಾಗಬಹುದು. ಅಥವಾ ಬೇಗನೆ (ತೂರ್ಣ) ಪಡೆಯುವವನಾದ್ದರಿಂದ ಅಥವಾ ಕರ್ಮಗಳಲ್ಲಿ ಸಹಾಯ ಮಾಡುವವನಾದ್ದರಿಂದ ಈ ದೇವನಿಗೆ ತ್ವಷ್ಟಾ ಎಂಬ ಹೆಸರು ಬಂದಿರುವುದು.

17. ಸೂರ್ಯನ ಸಾವಿರಾರು ರಶ್ಮಿಗಳು ಚಂದ್ರನಲ್ಲಿ ಆಶ್ರಯವನ್ನು ಪಡೆದಿರುವವು. ಆ ರಶ್ಮಿಯು ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ ಇರುವ ಅಗ್ನಿಯ ರೂಪಾಂತರವಾದ ತ್ವಷ್ಟೃವನ್ನೂ, ಮಧುವಿದ್ಯೆಯನ್ನೂ (ಮೃತಸಂಜೀವಿನೀ ವಿದ್ಯೆ) ವ್ಯಾಪಿಸಿ ಅಲ್ಲಿ ಆಶ್ರಯವನ್ನು ಪಡೆದಿರುವುದು.

18. ಒಂದು ಸಮಯದಲ್ಲಿ ಇಂದ್ರನು ಅಥರ್ವಣಪುತ್ರನಾದ ದಧ್ಯಂಚ ಋಷಿಯ ವಿಷಯದಲ್ಲಿ ಸಂತುಷ್ಟನಾಗಿ

---

15. Now as to Tvrstr. there is praise (of him) as this same terrestrial Agni; or (it may be said) there are stanzas to him as terrestrial, and there is one stanza also in the (hymns) to the seasons (addressed) to (him as) one or other (ಕಸ್ಯಾಪಿ) form of Agni.

**4. The celestial Tvastr. Story of Dadhyanch and the Mead.**

16. (ತ್ವಷ್ಟೃ) may be (derived) from ತ್ವಿಷ್ or from ತ್ವಕ್ಷ್, or (it means) 'he quickly (ತೂರ್ಣಂ) obtains (ಅಶ್ನುತೇ)' or 'he assists (ಉತ್ತಾರಣ) in works (ಕರ್ಮಸು)' therefore he obtains this name.

17. The thousandfold ray of the sun which abides in the moon, as well as the mead (ಮಧು) which is above (ಪರಂ) and on earth (ಇಹ), also (abides) in the Tvastr (who is Agni).

18. Well-pleased (with him, Indra) bestowed on the son of Athar-

ಸ ಚಾಭವದೃಷಿಸ್ತೇನ ಬ್ರಹ್ಮಣಾ ದೀಪ್ತಿಮತ್ತರಃ || ೧೮ ||

ತಮೃಷಿಂ ನಿಷಿಷೇಧೇಂದ್ರೋ ನ್ಯೈವಂ ವೋಚಃ ಕ್ವಚಿನ್ಮಧು |
ನ ಹಿ ಪ್ರೋಕ್ತೇ ಮಧುನ್ಯಸ್ಮಿನ್ಜೀವಂತಂ ತ್ವೋತ್ಸೃಜಾಮ್ಯಹಂ || ೧೯ ||

ತಮೃಷಿಂ ತ್ವಶ್ವಿನೌ ದೇವೌ ವಿವಿಕ್ತೇ ಮಧ್ವಯಾಚತಾಂ |
ಸ ಚ ತಾಭ್ಯಾಂ ತದಾಚಷ್ಟೇ ಯದುವಾಚ ಶಚೀಪತಿಃ || ೨೦ ||

ತಮಬ್ರೂತಾಂ ತು ನಾಸತ್ಯಾವಾಶ್ವ್ಯೇನ ಶಿರಸಾ ಭವಾನ್ |
ಮಧ್ವಾಶು ಗ್ರಾಹಯತ್ವಾವಾಂ ನೇಂದ್ರಸ್ತ್ವಾ ವಧೀತ್ತತಃ || ೨೧ ||

ಆವನಿಗೆ ಮಧುವಿದ್ಯೆ (ಬ್ರಹ್ಮವಿದ್ಯೆ) ಯನ್ನು ಉಪದೇಶಿಸಿದನು. ಆ ವಿದ್ಯಾಪ್ರಭಾವದಿಂದ ದಧೀಚಿಋಷಿಯು ಅತ್ಯಂತ ತೇಜಸ್ಸಿನಿಂದ (ವರ್ಚಸ್ಸಿನಿಂದ) ಬೆಳಗುತ್ತಿದ್ದನು.

19. ಈ ಮಧುವಿದ್ಯೆಯನ್ನು ಉಪದೇಶಿಸುವಾಗ ಇಂದ್ರನು ಆ ಋಷಿಯನ್ನು ಕುರಿತು—ಇದನ್ನು (ಈ ಮಧುವಿದ್ಯೆಯನ್ನು) ನೀನು ಯಾರಿಗೂ ಹೇಳಿಕೊಡಕೂಡದು. ಒಂದುವೇಳೆ ನನ್ನ ಮಾತನ್ನುಲ್ಲಂಘಿಸಿ ಇದನ್ನು ಯಾರಿಗಾದರೂ ಹೇಳಿದ್ದೇ ಆದರೆ ಆಗ ನಾನು ನಿನ್ನನ್ನು ಜೀವದಿಂದಿರಲು ಬಿಡುವುದಿಲ್ಲ ಎಂದು ಹೇಳಿದನು.

20. ಹೀಗಿರುವಾಗ ಒಂದು ಸಮಯದಲ್ಲಿ ದಧೀಚಿಋಷಿಯ ಬಳಿಗೆ ಅಶ್ವಿನೀದೇವತೆಗಳು ಬಂದು ತಮಗೆ ಆ ಮಧುವಿದ್ಯೆಯನ್ನು ಹೇಳಿಕೊಡಬೇಕೆಂದು ರಹಸ್ಯವಾಗಿ ಪ್ರಾರ್ಥಿಸಿದರು. ಅದನ್ನು ಕೇಳಿ ಆ ಋಷಿಯು ಶಚೀಪತಿಯು (ಇಂದ್ರನು) ಈ ವಿದ್ಯವನ್ನು ಯಾರಿಗೂ ಹೇಳಬೇಡವೆಂದು ಹೇಳಿರುವ ವಿಷಯವನ್ನು ತಿಳಿಸಿದನು.

**ದಧೀಚಿಋಷಿಯ ಅಶ್ವಶಿರಸ್ಸು—ಮಧ್ಯಸ್ಥಾನನಾದ ತ್ವಷ್ಟೃವು**

21. ಅದನ್ನು ಕೇಳಿ ಅಶ್ವಿನೀದೇವತೆಗಳು—ಹಾಗಾದರೆ ನೀನು ಒಂದು ಅಶ್ವದ (ಕುದುರೆಯ) ಶಿರಸ್ಸನ್ನು ಧರಿಸಿ ಆ ರೂಪದಿಂದ ನಮಗೆ ಮಧುವಿದ್ಯೆಯನ್ನು ಹೇಳಿಕೊಡು. ಇಂದ್ರನು ನಿನ್ನನ್ನು ಕೊಲ್ಲುವುದಿಲ್ಲ ಎಂದರು.

---

van (i.e. ದಧ್ಯಂಚ್) even that spell (ಬ್ರಹ್ಮ); and the seer became more brilliant by means of the spell.

19. Indra forbade the sage (saying), 'Do not speak anywhere of the mead thus (revealed); for if this mead is proclaimed (to any one), I will not let you escape alive'.

20. Now the divine Aswins asked for the mead in secret from the seer; and he told them what the Lord of Sachi had said.

**5. The horse's head of Dadhyanch The middle Tvastr.**

21. To him the Nasatyas spoke: 'Do you quickly make us two receive the mead by means of a horse's head; Indra shall not slay you for that'.

ಆಶ್ವ್ಯೇನ ಶಿರಸಾ ತೌ ತು ದಧ್ಯಙ್ಙಾಹ ಯದಶ್ವಿನೌ ।
ತದಸ್ಯೇಂದ್ರೋಽಹರತ್ಸ್ವಂ ತನ್ನ್ಯಧತ್ತಾಮಸ್ಯ ಯಚ್ಛಿರಃ || ೨೨ ||

ದಧೀಚಶ್ಚ ಶಿರಶ್ಚಾಶ್ವ್ಯಂ ಕೃತ್ತಂ ವಜ್ರೇಣ ವಜ್ರಿಣಾ ।
ಪಪಾತ ಸರಸೋ ಮಧ್ಯೇ ಪರ್ವತೇ ಶರ್ಯಣಾವತಿ || ೨೩ ||

ತದಶ್ವ್ಯಸ್ತು ಸಮುತ್ಥಾಯ ಭೂತೇಭ್ಯೋ ವಿವಿಧಾನ್ವರಾನ್ ।
ಪ್ರಾದಾಯ ಯುಗಪರ್ಯಂತಂ ತಾಸ್ವೇವಾಪ್ಸು ನಿಮಜ್ಜತಿ || ೨೪ ||

ತ್ವಷ್ಟಾ ರೂಪವಿಕರ್ತಾ ಚ ಯೋಽಸೌ ಮಾಧ್ಯಮಿಕೇ ಗಣೇ ।
ಸ್ತುತಃ ಸ ಚ ನಿಪಾತೇನ ಸೂಕ್ತಂ ತಸ್ಯ ನ ವಿದ್ಯತೇ || ೨೫ ||

22. ಅನಂತರ ದಧ್ಯಂಚಋಷಿಯು ಅಶ್ವಿನೀದೇವತೆಗಳಿಗೆ ಆ ಮಧುವಿದ್ಯೆಯನ್ನು ಉಪದೇಶಿಸಿದನು. ಇದರಿಂದ ಕೋಪಗೊಂಡ ಇಂದ್ರನು ಆ ದಧೀಚಿಋಷಿಯ ಅಶ್ವಶಿರಸ್ಸನ್ನು ಕತ್ತರಿಸಿಹಾಕಿದನು. ಬಳಿಕ ಅಶ್ವಿನೀದೇವತೆಗಳು ದಧೀಚಿಋಷಿಯ ಮುಂಚೆ ಇದ್ದ ಶಿರಸ್ಸನ್ನೇ ಪುನಃ ಅವನ ಶರೀರಕ್ಕೆ ಸೇರಿಸಿದರು.

23. ಇಂದ್ರನ ವಜ್ರಾಯುಧದಿಂದ ಕತ್ತರಿಸಲ್ಪಟ್ಟ ದಧೀಚಿಋಷಿಯ ಅಶ್ವಶಿರಸ್ಸು ಶರ್ಯಣಾವತ್ ಎಂಬ ಪರ್ವತದಲ್ಲಿದ್ದ ಒಂದು ಸರೋವರದ ಮಧ್ಯದಲ್ಲಿ ಹೋಗಿ ಬಿದ್ದಿತು.

24. ಸರೋವರದ ನೀರಿನಲ್ಲಿ ಮುಳುಗಿಹೋಗ ಆ ಅಶ್ವಶಿರಸ್ಸು ಆಗಾಗ ಮೇಲಕ್ಕೆ ಎದ್ದುಬಂದು ಪ್ರಾಣಿಗಳಿಗೆ ನಾನಾವಿಧ ವರಗಳನ್ನು ಅನುಗ್ರಹಿಸಿ ಪುನಃ ಆ ನೀರಿನಲ್ಲಿಯೇ ಮುಳುಗಿರುವುದು. ಈ ಕಾರ್ಯವು ಯುಗಪರ್ಯಂತರ ನಡೆದುಬರುತ್ತಿರುವುದು.

25. ಮಧ್ಯಮಸ್ಥಾನದೇವತೆಯಾದ ತ್ವಷ್ಟೃವು ರೂಪಗಳಿಗೆ ಅಧಿಪತಿಯಾಗಿ ಪ್ರಾಣಿಗಳೇ ಮೊದಲಾದವರಿಗೆ ಯಾವ ರೂಪವನ್ನು ಬೇಕಾದರೂ ಉಂಟುಮಾಡಬಲ್ಲನು. ಈ ದೇವನು ಅನೇಕ ಸೂಕ್ತಗಳಲ್ಲಿ ಸಂದರ್ಭತ್ವೇನ ಅಲ್ಲಲ್ಲಿ ಸ್ತುತನಾಗಿರುವನು. ಆದರೆ ಇವನನ್ನು ಸ್ತುತಿಸುವ ಪ್ರತ್ಯೇಕ ಸೂಕ್ತವು ಯಾವುದೂ ಇರುವುದಿಲ್ಲ.

22. Because Dadhyanch had told (the secret) to the two Aswins with the horse's head, Indra took off that (head) of his; (but) his own head they (the Aswins) put on (again),

23. And the horse's head of Dadhyanch, severed by the bolt-bearer with his bolt, fell in the midst of a lake on Mount Saryanavat.

24. Rising up from the waters (and) bestowing manifold boons on living beings, it lies submerged in those same waters to the close of the cosmic age (ಯುಗ).

25. That Tvastr, who is in the group of the middle sphere (ಮಾಧ್ಯಮಿಕ) is a modifier (ವಿಕರ್ತೃ) of forms. He too is praised incidentally; a hymn to him does not exist.

ವನಸ್ಪತಿಂ ತು ಯಂ ಪ್ರಾಹುರಯಂ ಸೋಽಗ್ನಿರ್ವನಸ್ಪತಿಃ ।
ಅಯಂ ವನಾನಾಂ ಹಿ ಪತಿಃ ಪಾತಾ ಪಾಲಯತೀತಿ ವಾ ॥ ೨೬ ॥
ಅಗ್ನಿರ್ಗೃತ್ಸಮದೇನಾಯಂ ವನಸ್ಪತಿರಿತೀಳಿತಃ ।
ಮಂದಸ್ವೇತ್ಯಸ್ಯ ಸೂಕ್ತಸ್ಯ ಷಳೃಚಸ್ಯ ತೃತೀಯಯಾ ॥ ೨೭ ॥
ಯೂಪವತ್ತರುವಚ್ಚೈವ ಸ್ತುತಿರ್ಯಾಸ್ಯ ಪ್ರಸಂಗಜಾ ।
ಸರ್ವೇಣಾಂಜಂತಿಸೂಕ್ತೇನ ತೃತೀಯೇ ಸಾ ತು ಮಂಡಲೇ ॥ ೨೮ ॥
ಸ್ವಾಹಾಕೃತಯೋಽನೇಕಾಶ್ಚ ವಿದುಷಾಂ ಮತಯೋಽಭವನ್ ।
ತತ್ಸರ್ವಂ ತ್ವಯಮೇವಾಗ್ನಿರ್ಭವತೀತಿ ವಿನಿಶ್ಚಯಃ ॥ ೨೯ ॥

**ವನಸ್ಪತಿ ಮತ್ತು ಸ್ವಾಹಾಕೃತಿ ಎಂಬ ದೇವತೆಗಳು**

26. **ವನಸ್ಪತಿ**—ವನಸ್ಪತಿಯೆಂದು ಯಾವ ದೇವನನ್ನು ಕರೆಯುವರೋ ಆ ದೇವನು ವನಗಳಿಗೆ ಪಾಲಕನೆಂದು ಹೇಳಲ್ಪಡುವ ಅಗ್ನಿಯ ರೂಪಾಂತರವೇ ಆಗಿರುವನು. ಅಗ್ನಿಯೇ ವನಸ್ಪತಿಯೆಂದು ಹೇಳಲ್ಪಡುವನು. ಏಕೆಂದರೆ, ಈ ಅಗ್ನಿಯು ವನಗಳ ಸಂರಕ್ಷಕನು ಅಥವಾ ಈ ವನಗಳನ್ನು (ವೃಕ್ಷಗಳನ್ನು) ತೊಂದರೆಗೆ ಈಡಾಗದಂತೆ ಕಾಪಾಡುವವನು.

27. ಗೃತ್ಸಮದಋಷಿಯು, ಆರು ಋಕ್ಕುಗಳಿರುವ **ಮಂದಸ್ವ ಹೋತ್ರಾದನು** ಎಂಬ ಸೂಕ್ತದ (೨ ನೇ ಮಂಡಲದ ೩೭ ನೇ ಸೂಕ್ತ) ಮೂರನೆಯ ಋಕ್ಕಿನಲ್ಲಿ (**ಮೇದ್ಯಂತು ತೇ ವಹ್ನಯಃ** ಎಂಬ ಋಕ್ಕಿನಲ್ಲಿ) ಅಗ್ನಿಯನ್ನು ವನಸ್ಪತಿಶಬ್ದದಿಂದ ಸ್ತುತಿಸಿರುವನು.

28. ಆದರೆ ಮೂರನೆಯ ಮಂಡಲದ **ಅಂಜಂತಿ ತ್ವಾ** ಎಂಬ 8 ನೇ ಸೂಕ್ತದಲ್ಲೆಲ್ಲಾ ಪ್ರಸಂಗವಶದಿಂದ ವನಸ್ಪತಿದೇವತೆಯನ್ನು ಯೂಪವೆಂದೂ ದೊಡ್ಡ ವೃಕ್ಷವೆಂದೂ ಸ್ತುತಿಸಲಾಗಿದೆ.

29. **ಸ್ವಾಹಾಕೃತಿ** ಎಂಬ ದೇವತೆಯ ವಿಷಯದಲ್ಲಿ ವಿದ್ವಾಂಸರ ಮತಭೇದಗಳು (ಭೇದಾಭಿಪ್ರಾಯಗಳು) ಅನೇಕವಾಗಿವೆ. ಆದರೆ ಅವರಲ್ಲಿ ಎಷ್ಟೇ ಮತಭೇದವಿದ್ದರೂ ಈ **ಸ್ವಾಹಾಕೃತಿ** ಎಂಬ ಈ ದೇವತೆಯು ಅಗ್ನಿಯ ರೂಪವಿಶೇಷವೆಂಬ ವಿಷಯದಲ್ಲಿ ಮಾತ್ರ ಎಲ್ಲರ ಅಭಿಪ್ರಾಯವೂ ಒಂದೇ ಆಗಿರುವುದು.

**6. Vanaspati. The Svahakritis.**

26. Now he whom they proclaim as Vanaspati is this (ಅಯಂ) Agni as Lord of the Wood ; for this (Agni) is lord (ಪತಿ) of wood as (their) protector (ಪಾತಾ), or because he guards (ಪಾಲಯತಿ) them.

27. This (ಅಯಂ) Agni is also lauded as Vanaspati by Grtsamada in in the third (stanza) of the hymn 'Enjoy' (ಮಂದಸ್ವ : ii. 37), which contains six stanzas.

28. But an occasional (ಪ್ರಸಂಗಜಾ) praise of him (ವನಸ್ಪತಿ), as a sacrificial post and as a tree, with the whole hymn, 'They anoint' (ಅಂಜಂತಿ : iii. 8) is (to be found) in the third Mandala.

29. As to the Svahakritis—the views of the learned have been various. It is, however, a certain conclusion that all that (viz., which is meant by the term) is simply (a form of) this Agni.

**ಅಯಂ ಹಿ ಕರ್ತಾ ಸ್ವಾಹಾನಾಂ ಕೃತಿಸ್ತ್ವಾಸಾಮಿಹೈಕಜಾ ।**
**ಅಯಂ ಪ್ರಸೂತಿರ್ಭೂತಾನಾಂ ಸರ್ವೇಷಾಮುಯಮುವ್ಯಯಃ** ॥ ೩೦ ॥
**ತನೂನಪಾದ್ದ್ವಿತೀಯಾ ಚ ನರಾಶಂಸವತೀ ಚ ಯಾ ।**
**ಸಮುಸ್ಯೇತೇ ಪ್ರಯೋಕ್ತ್ರವ್ಯೇ ತ್ರಿಷ್ವೇವೋಭಯುವತ್ಸು ತು** ॥ ೩೧ ॥
**ನರಾಶಂಸವತೀ ವಾ ಸ್ಯಾದ್ದ್ವಿತೀಯಾ ಚ ಪ್ರಜಾರ್ಥಿನಾಂ ।**
**ಬಲಕಾಮೋಽನ್ನಕಾಮೋ ವಾ ಭೂತಿಮಿಚ್ಛೇದಥಾಪಿ ಯಃ** ॥ ೩೨ ॥

30. ಏಕೆಂದರೆ ಸ್ವಾಹಾಕಾರಗಳಿಗೆ (ಎಂದರೆ ಸ್ವಾಹಾಶಬ್ದಪೂರ್ವಕವಾಗಿ ಅರ್ಪಿಸುವ ಹವಿಸ್ಸುಗಳಿಗೆ ಅಥವಾ ಮಂತ್ರಗಳಿಗೆ) ಈ ಅಗ್ನಿಯೇ ಕರ್ತೃವು. ಈ ವಿಧವಾದ ಮಂತ್ರಗಳಿಗೆಲ್ಲಾ ಇವನೇ ಕರ್ತೃವು ಮತ್ತು ದೇವತೆಯು; ಈ ಅಗ್ನಿಯೇ ಸಮಸ್ತ ಭೂತಗಳಿಗೂ (ಪ್ರಾಣಿಗಳಿಗೂ) ಉತ್ಪತ್ತಿಸ್ಥಾನನು ಎಂದರೆ ಇವನಿಂದಲೇ ಸಕಲ ಪ್ರಾಣಿಗಳೂ ಉತ್ಪನ್ನವಾಗುವವು. ಸರ್ವಪ್ರಾಣಿಗಳಲ್ಲಿ ಇವನಿಗೆ ಮಾತ್ರ ನಾಶವಿಲ್ಲ ಎಂದರೆ ಇವನು ನಾಶರಹಿತನು.

**ತನೂನಪಾತ್ ಮತ್ತು ನರಾಶಂಸ ಎಂಬ ಎರಡು ದೇವತೆಗಳನ್ನು ಸ್ತುತಿಸಿರುವ ಆಪ್ರೀಸೂಕ್ತಗಳು**

31. ಆಪ್ರೀಸೂಕ್ತದಲ್ಲಿ (ಎರಡನೆಯ ದೇವತೆಯಾದ) **ನೂನಪಾತ್** ಮತ್ತು **ನರಾಶಂಸ** ಎಂಬ ಎರಡು ದೇವತೆಗಳನ್ನು ಸ್ತುತಿಸಿರುವ ಸೂಕ್ತಗಳು ಋಗ್ವೇದದಲ್ಲಿ ಮೂರು ಮಾತ್ರವಿರುವವು. (ಈ ವಿಧವಾದ ಸೂಕ್ತಗಳು ಯಾವವೆಂದರೆ—1 ನೇ ಮಂಡಲದ 13 ನೇ ಸೂಕ್ತ (**ಮೇಧಾತಿಥಿಃ ಕಾಣ್ವಃ** ಎಂಬ ಋಷಿದೃಷ್ಟವಾದುದು) ಮತ್ತು 1 ನೇ ಮಂಡಲದ 142 ನೇ ಸೂಕ್ತ (**ದೀರ್ಘತಮಾ ಔಚಥ್ಯಃ** ಎಂಬ ಋಷಿದೃಷ್ಟವಾದುದು.) ಈ ನಿಧವಾದ ಸೂಕ್ತಗಳು ಮೂರು ಇರುವವೆಂದು ಇಲ್ಲಿ ಹೇಳಿದೆ. (ಪ್ರೈಷಸೂಕ್ತವನ್ನು ಬಿಟ್ಟರೆ) ಇದು ತಪ್ಪು. ಎರಡು ಮಾತ್ರ ಇರುವವು.

32. ಎರಡನೇ ಮಂತ್ರವು ನರಾಶಂಸದೇವತಾಕವಾದ ಆಪ್ರೀಸೂಕ್ತಪ್ರಯೋಗದಿಂದ ಯಜ್ಞಮಾಡುವ ಯಜಮಾನನು ತಾನು ಬಯಸುವ ಪ್ರಜಾಸಂತತಿಯನ್ನೂ, ಬಲವನ್ನೂ, ಅನ್ನವನ್ನೂ ಅಥವಾ ಸಂಪತ್ತನ್ನೂ ಪಡೆಯುವನು.

---

30. For he is the maker (ಕರ್ತಾ) of oblations (ಸ್ವಾಹಾ); the making (ಕೃತಿ) of them (that is to say), here is of a single nature (ಏಕಜಾ): it is he who is the source (ಪ್ರಸೂತಿ) of living beings, the imperishale (source) of all of them.

### 7. Tanunapat and Narasamsa. Deities of RV. i. 14 and 15.

31. Both the the second (stanza) with Tanunapat and that which contains Narasamsa, are combined as applicable (ಪ್ರಯೋಕ್ತ್ರವ್ಯೇ) in only three (hymns) which (thus) contain both.

32. The (stanza) containing Narasamsa, as well as the second, may be (applied in behalf) of those wanting children, (of him) who desires strength, or who desires food, as well as (of him) who may wish for prosperity.

ಆಗ್ನೇಯಂ ಸೂಕ್ತಮೈಭಿರ್ಯದ್ವೈಶ್ವದೇವಮಿಹೋಚ್ಯತೇ ।
ತದ್ವಿಶ್ವಲಿಂಗಂ ಗಾಯತ್ರಂ ವೈಶ್ವದೇವೇಷು ಶಸ್ಯತೇ ॥ ೩೩ ॥
ಇಂದ್ರ ಸೋಮಂ ಪಿಬೇತೀದಂ ಯದ್ದ್ವಾದಶಕಮಾರ್ತವಂ ।
ತಸ್ಮಿನ್ಸಹರ್ತುನಾ ಸಪ್ತ ಪ್ರತ್ಯೃಚಂ ಸ್ತೌತಿ ದೇವತಾಃ ॥ ೩೪ ॥
ತತ್ರರ್ತುನೇತಿ ಷಟ್ಸ್ವೃಕ್ಷು ಚತಸೃಷ್ವೃತುಭಿಃ ಸಹ ।
ಪುನರ್ದ್ವಯೋರ್ಋತುನೇತಿ ಬಹುತ್ವೈಕತ್ವಲಕ್ಷಿತಾಃ ॥ ೩೫ ॥
ಋತವೋ ದೇವತಾಭಿಶ್ಚ ನಿಪಾತೇನೇಹ ಸಂಸ್ತುತಾಃ ।

### ೧ ನೇ ಮಂಡಲದ ೧೪ ಮತ್ತು ೧೫ ನೇ ಸೂಕ್ತಗಳ ದೇವತೆಗಳು

33. ಐಭಿರಗ್ನೇ ಎಂಬ ೧೪ ನೆಯ ಸೂಕ್ತದಲ್ಲಿ ಅಗ್ನಿಯನ್ನು ಸಂಬೋಧಿಸಿ ಸ್ತುತಿಸಿದ್ದರೂ ಈ ಸೂಕ್ತವು ವೈಶ್ವದೇವಸೂಕ್ತವೆಂದು ಹೇಳಲ್ಪಡುವುದು. ಏಕೆಂದರೆ, ಗಾಯತ್ರೀಛಂದಸ್ಸುಗಳಿಂದ ಕೂಡಿರುವ ಈ ಸೂಕ್ತದಲ್ಲಿ ವಿಶ್ವೇದೇವತಾಕವಾದ ಸೂಕ್ತದ ಲಕ್ಷಣಗಳೆಲ್ಲವೂ ಇರುವವು.

### ಋತುದೇವತಾಕವಾದ ಸೂಕ್ತ, ೧ ನೇ ಮಂಡಲದ ೧೫ ನೇ ಸೂಕ್ತ

34. ಇಂದ್ರ ಸೋಮಂ ಪಿಬ ಎಂಬ ೧೨ ಋಕ್ಕುಗಳುಳ್ಳ ೧೫ ನೇ ಸೂಕ್ತದಲ್ಲಿ ಒಂದೊಂದು ಋಕ್ಕಿನಲ್ಲಿ ಒಂದೊಂದು ದೇವತೆಯಂತೆ ಏಳುಮಂದಿ ದೇವತೆಗಳು ಋತುದೇವತೆಯಿಂದ ಸಹಿತರಾಗಿ ಸ್ತುತರಾಗಿರುವರು. (ಇಲ್ಲಿ ಏಳುಮಂದಿ ದೇವತೆಗಳೆಂದು ಹೇಳಿದೆ. ಇದು ತಪ್ಪು. ಈ ಸೂಕ್ತದಲ್ಲಿ ಒಂಭತ್ತುಮಂದಿ ದೇವತೆಗಳನ್ನು ಸ್ತುತಿಸಲಾಗಿದೆ).

35. ಈ ಸೂಕ್ತದ ಕೆಲವು ಋಕ್ಕುಗಳಲ್ಲಿ ಋತುನಾ ಎಂಬ ಏಕವಚನಪ್ರಯೋಗವೂ, ಕೆಲವು ಋಕ್ಕುಗಳಲ್ಲಿ ಋತುಭಿಃ ಎಂಬ ಬಹುವಚನಶಬ್ದಪ್ರಯೋಗವೂ ಇರುವುದು. ಹೇಗೆಂದರೆ, ಮೊದಲಿನ ಆರು ಋಕ್ಕುಗಳಲ್ಲಿ ಋತುನಾ ಎಂದು ಏಕವಚನವೂ, ಅಲ್ಲಿಂದ ಮುಂದಿನ ನಾಲ್ಕು ಋಕ್ಕುಗಳಲ್ಲಿ ಋತುಭಿಃ ಎಂದು ಬಹುವಚನವೂ, ಕೊನೆಯ ಎರಡು ಋಕ್ಕುಗಳಲ್ಲಿ ಋತುನಾ ಎಂದು ಏಕವಚನವೂ ಕಂಡುಬರುವುದು.

36. ಈ ಸೂಕ್ತದಲ್ಲಿ ದೇವತೆಗಳನ್ನು ಸ್ತುತಿಸುವಾಗ ಋತುಗಳನ್ನು ಪ್ರಸ್ತಾಪತ್ವೇನ ಸ್ತುತಿಸಲಾಗಿದೆ. ಅದ

---

33. The hymn, 'Hither with these (ಐಭಿರಗ್ನೇ i. 14), which invoking Agni is spoken of here as addressed to the All-gods (ವೈಶ್ವದೇವ), is recited (ಶಸ್ಯತೇ) among the hymns to the All gods, because, being composed in the gayatri metre, it contains the characteristic 'All' (ವಿಶ್ವ).

34. As to the hymn, 'Indra, drink Soma' (ಇಂದ್ರ ಸೋಮಂ ಪಿಬ. i. 15), consisting of twelve stanzas, and addressed to seasons, (the seer) praises in it seven deities in their respective stanzas, together with the season. (ಋತು).

35. There (the deities) are characterized in the plural and in the singular; in six stanzas (1--6), with rtu, (ಋತುನಾ), in four with the (ಋತುಭಿಃ) then again in two (11, 12) 'with Rtu.'

**8. Hymn to the seasons: RV. i. 15.**

36. The Rtus are here incidentally praised with the deities; so it

ತಥರ್ತುಪ್ರೈಷಸೂಕ್ತೇ ಚ ತಥಾ ಗಾರ್ತ್ಸಮದೇऽಪಿ ಚ || ೩೬ ||

ಮುಖ್ಯಯಾ ತ್ವಿಂದ್ರಮೇವಾಸ್ತೌನ್ಮರುತಸ್ತು ದ್ವಿತೀಯಯಾ |
ತೃತೀಯಯಾ ತು ತ್ವಷ್ಟಾರಂ ಚತುರ್ಥ್ಯಾ ಚಾಗ್ನಿಮೇವ ಚ || ೩೭ ||

ಪಂಚಮ್ಯಾ ತು ಪುನಃ ಶಕ್ರಂ ಷಷ್ಠ್ಯಾ ದೇವವೃತಾವೃಧೌ |
ಸಪ್ತಮ್ಯಾದ್ಯಾಭಿರಗ್ನಿಂ ಚ ಚತುರ್ಭಿರ್ದ್ರವಿಣೋದಸಂ || ೩೮ ||

ಆದೇಶಾದ್ದೈವತಂ ಜ್ಞೇಯಮೃಙ್ಮಂತ್ರಾಣಾಂ ನ ಲಿಂಗತಃ |
ನ ಶಕ್ಯಂ ಲಿಂಗತೋ ಹ್ಯಾಸಾಂ ಜ್ಞಾತುಂ ತತ್ತ್ವೇನ ದೈವತಂ || ೩೯ ||

ರಂತೆಯೇ ಪ್ರೈಷಸೂಕ್ತದಲ್ಲಿಯೂ ಗೃತ್ಸಮದಋಷಿದೃಷ್ಟನಾದ (ಋತುದೇವತಾಕವಾದ) ಸೂಕ್ತದಲ್ಲಿಯೂ (೨ ನೇ ಮಂಡಲದ ೩೭ ನೇ ಸೂಕ್ತ) ದೇವತೆಗಳನ್ನು ಋತುಗಳೊಡನೆ ಸ್ತುತಿಸಲಾಗಿರುವುದು.

37. ಮೇಲೆ ಹೇಳಿದ **ಇಂದ್ರ ಸೋಮಂ** ಎಂಬ ಸೂಕ್ತದಲ್ಲಿ ಋಷಿಯು ಮೊದಲನೆಯ ಋಕ್ಕಿನಲ್ಲಿ ಇಂದ್ರನನ್ನು ಸ್ತುತಿಸಿರುವನು. ಅದರಂತೆಯೇ ಎರಡನೆಯ ಋಕ್ಕಿನಲ್ಲಿ ಮರುದ್ದೇವತೆಗಳನ್ನೂ, ಮೂರನೆಯ ಋಕ್ಕಿನಲ್ಲಿ ತ್ವಷ್ಟೃದೇವತೆಯನ್ನೂ, ನಾಲ್ಕನೆಯ ಋಕ್ಕಿನಲ್ಲಿ ಅಗ್ನಿಯನ್ನೂ,

38. ಐದನೆಯ ಋಕ್ಕಿನಲ್ಲಿ ಪುನಃ ಇಂದ್ರನನ್ನೂ, ಆರನೆಯ ಋಕ್ಕಿನಲ್ಲಿ ಋತಾವೃಧಾ ಎಂಬ ಹೆಸರಿನಿಂದ ಪ್ರಸಿದ್ಧರಾದ ಮಿತ್ರಾವರುಣರನ್ನೂ, ಏಳನೆಯ ಋಕ್ಕಿನಿಂದ ಹತ್ತನೆಯ ಋಕ್ಕಿನವರೆಗೆ ನಾಲ್ಕುಋಕ್ಕುಗಳಲ್ಲಿ ದ್ರವಿಣೋದ (ಅಗ್ನಿ) ಎಂಬ ಹೆಸರಿನ ದೇವತೆಯನ್ನೂ ಋಷಿಯು ಸ್ತುತಿಸಿರುವನು.

39. ಋಗ್ವೇದಮಂತ್ರಗಳಿಗೆ ಇರುವ ದೇವತೆಗಳನ್ನು ಪ್ರಮಾಣದಿಂದ (ಆದೇಶ) ತಿಳಿದುಕೊಳ್ಳಬೇಕು. ಪ್ರಮಾಣವೆಂದರೆ ಅನುಕ್ರಮಣಿಕೆ ಮೊದಲಾದ ಗ್ರಂಥಗಳು. ಏಕೆಂದರೆ ಈ ಮಂತ್ರಗಳಿಗೆ ಮಂತ್ರಲಕ್ಷಣಗಳಿಂದಾಗಲಿ ಪ್ರಸ್ತಾಪತ್ವೇನ ಮಂತ್ರದಲ್ಲಿ ಉಕ್ತವಾಗಿರುವ ದೇವತೆಯ ಹೆಸರಿನಿಂದಾಗಲಿ ಮಂತ್ರೋಕ್ತದೇವತೆಯನ್ನು ಸರಿಯಾಗಿ ನಿಶ್ಚಯಿಸಿ ತಿಳಿಯಲು ಸಾಧ್ಯವಿಲ್ಲ.

is both in the hymn of summons (ಪ್ರೈಷ) for offerings to the Rtus, and in the hymn of Grtsadama also.

37. Now with the fisst (stanza) he (the seer) praised Indra, the Maruts with the second, Tvastr with the third, and Agni with the fourth ;

38. With the fifth Sakra (Indra) again, the two gods who delight in truth (Mitra-Varuna) with the sixth, and with the four beginning with the seventh (7-10) Agni Dravinodas.

39. The divinity of the formulas of the Rg-Veda is to be known from authoritative statement (ಆದೇಶ), not from its characteristic mark (ಲಿಂಗ); for it is not possible to know actually (ತತ್ತ್ವೇನ) the divnity of these (stanzas) from its characteristic mark,

ಏಕಾದಶ್ಯಾ ತು ನಾಸತ್ಯೌ ದ್ವಾದಶ್ಯಾಗ್ನಿಮಿಮಂ ಪುನಃ ।
ಪೃಥಕ್ಪೃಥಕ್ಸ್ತುತೀದಂ ತು ಸೂಕ್ತಮಾಹ ರಥೀತರಃ || ೪೦ ||
ಬಹುದೈವೇ ದ್ವಿದೈವೇ ವಾ ಗುಣೈರ್ವಾ ಯತ್ರ ಕರ್ಮಜೈಃ ||
ಸ್ತೂಯತೇ ದೇವತೈಕೈಕಾ ವಿಭಕ್ತಸ್ತುತಿ ತದ್ವಿದುಃ || ೪೧ ||
ವೈಶ್ವದೇವಾನಿ ಸೂಕ್ತಾನಿ ತ್ರಿವಿಧಾನಿ ಭವಂತಿ ತು ।
ಸೂರ್ಯಸಂಸ್ತವಸಂಯುಕ್ತಂ ವಿಶ್ವಲಿಂಗಂ ಪೃಥಕ್ಸ್ತುತಿ || ೪೨ ||
ಪೃಥಕ್ಸ್ತುತೀತಿ ಯತ್ಪ್ರೋಕ್ತಂ ತದ್ವಿಧ್ಯಾದ್ಬಹುದೈವತಂ |

40. ಹನ್ನೊಂದನೆಯ ಋಕ್ಕಿನಲ್ಲಿ ಅಶ್ವಿನೀದೇವತೆಗಳನ್ನೂ, ಹನ್ನೆರಡನೆಯ ಋಕ್ಕಿನಲ್ಲಿ ಪುನಃ ಅಗ್ನಿಯನ್ನೂ ಸ್ತುತಿಸಲಾಗಿದೆ. ಈ ಸೂಕ್ತದ ಪ್ರತಿಯೊಂದು ಋಕ್ಕು ಆಯಾ ದೇವತೆಯನ್ನು ಸ್ತುತಿಸುವ ಪ್ರತ್ಯೇಕ ಸ್ತುತಿಯಾಗಿರುವುದೆಂದು ರಥೀತರ ಎಂಬ ಋಷಿಯ ಅಭಿಪ್ರಾಯವು.

41. ಒಂದು ಸೂಕ್ತದಲ್ಲಿ ಎರಡು ದೇವತೆಗಳನ್ನು ಅಥವಾ ಅನೇಕ ದೇವತೆಗಳನ್ನು ಅವರವರ ಗುಣಗಳಿಂದಲೂ, ಸಾಹಸಕರ್ಮಗಳಿಂದಲೂ ವರ್ಣಿಸಿ ಪ್ರತಿದೇವತೆಯನ್ನು ಪ್ರತ್ಯೇಕವಾಗಿ ಸ್ತುತಿಸಿದ್ದರೆ ಆ ಸೂಕ್ತವನ್ನು ವಿಭಕ್ತಿಸ್ತುತಿಯೆಂದು ಹೇಳುವರು.

### ಮೂರು ವಿಧವಾದ ವೈಶ್ವದೇವಸೂಕ್ತಗಳು

42. ವೈಶ್ವದೇವಸೂಕ್ತಗಳಲ್ಲಿ (ವಿಶ್ವೇದೇವತೆಗಳನ್ನು ಸ್ತುತಿಸಿರುವ ಸೂಕ್ತಗಳಲ್ಲಿ) ಮೂರು ವಿಧಗಳಿರುವವು. ಮೊದಲನೆಯದು—ಸೂರ್ಯ ಅಥವಾ ಆದಿತ್ಯನೊಡನೆ ಎಲ್ಲಾ ದೇವತೆಗಳನ್ನು ಸ್ತುತಿಸಿರುವುದು (ಉದಾ-1 ನೇ ಮಂಡಲದ 164 ನೇ ಸೂಕ್ತ ಇತ್ಯಾದಿ); ಎರಡನೆಯ ವರ್ಗ—ಎಲ್ಲಾ ದೇವತೆಗಳನ್ನು ಒಟ್ಟಾಗಿ (ಸಮಷ್ಟಿಯಾಗಿ) ಸ್ತುತಿಸಿರುವುದು; ಮೂರನೆಯ ವರ್ಗ—ಸೂಕ್ತದಲ್ಲಿರುವ ಎಲ್ಲಾ ದೇವತೆಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ (ಪ್ರತ್ಯೇಕ ಮಂತ್ರಗಳಿಂದ) ಸ್ತುತಿಸಿರುವುದು. ಇವುಗಳಲ್ಲಿ ಮೊದಲನೆಯ ವರ್ಗದ ಸ್ತುತಿಗೆ ಸೂರ್ಯಸಂಸ್ತವ ಸಂಯುಕ್ತವೆಂದೂ ಎರಡನೆಯ ವರ್ಗದ ಸ್ತುತಿಗೆ ವಿಶ್ವಲಿಂಗವೆಂದೂ, ಮೂರನೆಯ ವರ್ಗದ ಸ್ತುತಿಗೆ ಪೃಥಕ್ಸ್ತುತಿಯೆಂದೂ ಹೆಸರು.

೪3. **ಪೃಥಕ್ಸ್ತುತಿ** ಎಂಬ ವರ್ಗದ ಸ್ತುತಿಗಳಲ್ಲಿ ಅನೇಕ ದೇವತೆಗಳನ್ನು ಅವರ ಹೆಸರುಗಳಿಂದ ಪ್ರತ್ಯೇಕ

---

40. With the eleventh (he praises) the Nasatyas (Asvins), with the twelth this Agni again. Rathitara, however, says that this hymn consists of single separate praises.

### 9. Three kinds of hymns to tne All-gods.

41. For where, (in a hymn) with many deities or two deities, each deity is praised singly (ಏಕೈಕ) or by qualities arising from its activities, they regard that (hymn) as one containing distributed praise (ವಿಭಕ್ತಿಸ್ತುತಿ).

42. Now the hymns to the All-gods (ವೈಶ್ವದೇವ) are of three kinds; that which is provided with joint-praise of the Sun (ಸೂರ್ಯ-ಸಂಸ್ತವ), that which contains the characteristic 'All' (ವಿಶ್ವಲಿಂಗ) and that which contains separate praise (ಪೃಥಕ್‌ಸ್ತುತಿ)

43. That which is called 'Separate praise' (ಪೃಥಕ್‌ಸ್ತುತಿ) one should

ವಿಶ್ವಲಿಂಗಂ ತು ತದ್ಯತ್ರ ವಿಶ್ವೈಃ ಸ್ವೈಃ ಕರ್ಮಜೈರ್ಗುಣೈಃ || ೪೩ ||
ವಿಶ್ವಾನುದ್ದಿಶ್ಯ ಯದ್ದೇವಾನ್ ಸ್ತೌತಿ ಸೂರ್ಯಮನೇಕಧಾ |
ದೇವಾನೇವಾಭಿಸಂಸ್ತೌತಿ ತಂ ಪ್ರಾಹುಃ ಸೂರ್ಯಸಂಸ್ತವಂ || ೪೪ ||
ನ ತು ಭಾಗಸ್ಯ ಸೂಕ್ತಾದೌ ಸೂಕ್ತೇಷ್ವೇವೌಷಸೇಷು ವಾ |
ನ ಸಾವಿತ್ರೇ ಹ್ವಯಾಮೀತಿ ನ ಸೂರ್ಯಾಯಾಂ ಕ್ರತೌ ಮಖೇ || ೪೫ ||
ನ ಚೈವೈವಂ ಪ್ರವಾದೇಷು ಮಂತ್ರೇಷ್ವನ್ಯೇಷು ಕೇಷುಚಿತ್ |
ನ ಚ ಯತ್ರ ಸಜೋಷೇತಿ ಪದಂ ವಾ ಸ್ಯಾತ್ಸಜೂರಿತಿ || ೪೬ ||

ಪ್ರತ್ಯೇಕವಾಗಿ ಸ್ತುತಿಸಲಾಗಿರುವುದು. ವಿಶ್ವಲಿಂಗವೆಂಬ ವರ್ಗದ ಸೂಕ್ತಗಳಲ್ಲಿ ವಿಶ್ವೇದೇವತೆಗಳನ್ನು ಒಟ್ಟಾಗಿ ಅವರವರ ಕರ್ಮಗಳ ಮತ್ತು ಗುಣಗಳ ವರ್ಣನೆಯಿಂದ ಸ್ತುತಿಸಲಾಗಿರುವುದು.

44. ಸೂರ್ಯಸಂಸ್ತವವೆಂಬ ವರ್ಗದ ಸೂಕ್ತಗಳಲ್ಲಿ ಅನೇಕ ದೇವತೆಗಳನ್ನುದ್ದೇಶಿಸಿ (ಸೂರ್ಯನಿಗೂ, ವಿಶ್ವೇದೇವತೆಗಳಿಗೂ ತಾದಾತ್ಮ್ಯವನ್ನು ವರ್ಣಿಸಿ) ಸೂರ್ಯನನ್ನು ಅನೇಕ ಪ್ರಕಾರವಾಗಿ ಸ್ತುತಿಸಲಾಗಿರುವುದು.

|| ವೈಶ್ವದೇವಸೂಕ್ತದ ಲಕ್ಷಣ ||

45. ಆದರೆ ಒಂದು ಸೂಕ್ತದ ಪ್ರಾರಂಭದಲ್ಲಿ (ಪ್ರಾರಂಭ ಮಂತ್ರದಲ್ಲಿ) ಭಗದೇವತೆಯನ್ನು ಸ್ತುತಿಸಿದ್ದರೂ, ಉಷೋದೇವತೆಯನ್ನು ಸ್ತುತಿಸಿದ್ದರೂ, ಸವಿತೃದೇವತೆಯು ಸ್ತುತಿಯಿದ್ದರೂ (ಹ್ವಯಾಮ್ಯಗ್ನಿಂ-ಋ. ಸಂ. ೧-೩೫ ಇತ್ಯಾದಿ) ಅಥವಾ ಸೂರ್ಯದೇವತಾಕವಾದ ಸೂಕ್ತದಲ್ಲಿ ಯಜ್ಞಸಂಬಂಧವಾದ ಆಹುತ್ಯರ್ಪಣೆ ಇದ್ದರೂ ಆ ಸೂಕ್ತವು ವೈಶ್ವದೇವಸೂಕ್ತವೆನಿಸುವುದಿಲ್ಲ.

46. ಹಾಗೆಯೇ ಒಂದು ಸೂಕ್ತದ ಮಂತ್ರಗಳಲ್ಲಿ ಸ್ತುತಿ ಇಲ್ಲದೆ ಕೇವಲ ವಿಷಯನಿರೂಪಣೆ (ಪ್ರವಾದ) ಇದ್ದರೂ ಸಜೋಷಾ, ಸಜೂಃ ಎಂಬ ಪದಗಳ ಪ್ರಯೋಗವಿದ್ದರೂ ಅದು ವೈಶ್ವದೇವಸೂಕ್ತವೆನಿಸುವುದಿಲ್ಲ.

---

recognise as addressed to many divinities; that which is characterised by 'All' (ವಿಶ್ವಲಿಂಗ) is the one in which (the gods are praised) with their universal (ವಿಶ್ವ) qualities arising from their activities.

44, That which with reference to the All-gods frequently praises the Sun, (and) at the same time praises the gods themselves, they call a joint-praise of the Sun (ಸೂರ್ಯಸಂಸ್ತವ).

45. But (the term does) not (apply) at the beginning of the hymn to Bhaga, nor in hymns to Usas, nor in the hymn to Savitr, 'I invoke' (ಹ್ವಯಾಮಿ: i. 35), nor in the Surya (hymn), in (regaad to) oblation (and) sacrifice (ಮಖ).

### 10. How to ascertain the deity of a hymn.

46. nor, similarly, in any other formulas (which are) statements (ಪ್ರವಾದಾಃ), or where the word 'associated' (ಸಜೋಷಾಃ) or 'together' (ಸಜೂಃ) may be (used).

ಯಸ್ಮಿನ್ಪ್ರಸಂಗಾದಪಿ ತು ಬಹ್ವೀನಾಂ ಪರಿಕೀರ್ತನಂ |
ವೈಶ್ವದೇವಂ ತದಪ್ಯಾಹ ಸ್ಥವಿರೋ ಲಾಮಕಾಯನಃ || ೪೭ ||

ಅಸಂಸ್ತುತಂ ಸ್ತುತಂ ವಾಪಿ ಪ್ರದಿಷ್ಟಂ ದೈವತಂ ಕ್ವಚಿತ್ |
ಮಂತ್ರೈಸ್ತದೃಷಯೋಽರ್ಚಂತಿ ತಾಂ ತು ಬುಧ್ಯೇತ ಶಾಸ್ತ್ರವಿತ್ || ೪೮ ||

ಆದೌ ಹಿ ಮಧ್ಯೇ ಚಾಂತೇ ಚ ಪೃಥಕ್ತ್ವೇಷು ಚ ಕರ್ತೃಭಿಃ
ಕರ್ಮಾಣ್ಯನಪದಿಷ್ಟಾನಿ ಪ್ರದಿಷ್ಟಾನ್ಯಪಿ ತು ಕ್ವಚಿತ್ || ೪೯ ||

ಕರ್ಮೈವ ತಾವಿತ್ಸಾವಿತ್ರ್ಯಂ ನಿವಿದಿ ಸ್ತೌತಿ ಕರ್ಮಣಾ |

47. ಆದರೆ ಒಂದು ಸೂಕ್ತದಲ್ಲಿ ಪ್ರಸಂಗವಶದಿಂದ ಅನೇಕ ದೇವತೆಗಳ ಹೆಸರುಗಳು ಸೂಚಿತವಾಗಿದ್ದರೂ ಅದನ್ನೂ ವೈಶ್ವದೇವಸೂಕ್ತವೆಂದು ಭಾವಿಸಬೇಕೆಂದು ಲಾಮಕಾಯನ ಎಂಬ ಆಚಾರ್ಯರ ಮತವಿರುವುದು.

48. ಒಂದು ಮಂತ್ರದಲ್ಲಿ ನಿರ್ದಿಷ್ಟದೇವತೆಯನ್ನು ಸ್ತುತಿಸಿರಲಿ, ಸ್ತುತಿಸದೇ ಇರಲಿ ಮಂತ್ರದಲ್ಲಿ ದೇವತೆಯ ಹೆಸರನ್ನು ಎಲ್ಲಿಯಾದರೂ ಒಂದುಕಡೆ ಮಾತ್ರ ಸೂಚಿಸಿದ್ದರೂ ಆ ಮಂತ್ರದಿಂದ ಆ ದೇವತೆಯನ್ನು ಋಷಿಗಳು (ಮತ್ತು ಇತರರು) ಅರ್ಚಿಸುತ್ತಾರೆ. ಈ ವಿಷಯವನ್ನು ಶಾಸ್ತ್ರಜ್ಞನಾದವನು ತಿಳಿದು ಅದರಂತೆ ಆಚರಿಸಬೇಕು.

49. ಸ್ತುತಿಕರ್ತರಾದ (ಋಷಿಗಳಿಂದ) ದೇವತೆಗಳ ಸಾಹಸಕಾರ್ಯಗಳ (ಅಥವಾ ಗುಣಗಳ) ವರ್ಣನೆಯು ಮಂತ್ರದ (ಅಥವಾ ಸೂಕ್ತದ) ಮೊದಲಲ್ಲಿಯಾಗಲಿ, ಕೊನೆಯಲ್ಲಿಯಾಗಲಿ, ಪ್ರತ್ಯೇಕ ವಾಕ್ಯಗಳಲ್ಲಾಗಲಿ ಪ್ರಶಂಸಿಶಲ್ಪಡದ್ದಿದರೂ, ಎಲ್ಲಿಯಾದರೂ ಒಂದೆಕಡೆ ಸ್ವಲ್ಪಮಟ್ಟಿಗೆ ಸೂಚಿತವಾಗಿದ್ದರೂ ಆ ಮಂತ್ರವು ಆ ದೇವತೆಯನ್ನು ನಿರ್ದೇಶಿಸಿದೆಯೆಂದು ತಿಳಿಯಬೇಕು.

50 ಆಯಾ ವ್ಯಕ್ತಿಗಳ ಕರ್ಮಗಳಿಂದ ಆಯಾ ವ್ಯಕ್ತಿಯನ್ನು ನಿರ್ದೇಶಿಸುವಂತೆ ಎಂದರೆ **ದೋಗ್ಧ್ರೀ** (ಹಾಲು ಕರೆಯುವ ಕಾರ್ಯದಿಂದ) ಹಸುವನ್ನೂ, ಆಶುಃ (ಶೀಘ್ರಗಮನಕಾರ್ಯದಿಂದ) ಅಶ್ವವನ್ನೂ ವೋಳ್ಹಾ (ಭಾರವನ್ನು ವಹಿಸುವ ಕಾರ್ಯದಿಂದ) ಎತ್ತನ್ನೂ ಗುರುತಿಸುವಂತೆ, ಸವಿತೃದೇವತಾಕವಾದ ಮಂತ್ರಗಳ ಮಧ್ಯದಲ್ಲಿರುವ ನಿವಿತ್ಸೂಕ್ತದಿಂದ ಆ ದೇವತೆಯನ್ನು ತಿಳಿಯುವಂತೆಯೂ, ಆಯಾ ದೇವತಾಸಂಬಂಧವಾದ ಕಾರ್ಯಗಳಿಂದ ಆಯಾ

47. But the old Lamakayana states even that (hymn) to be addressed to the All-gods, in which many (deities) are celebrated even incidentally (ಪ್ರಸಂಗಾತ್)

48. The divinity, whether praised or not, (but) indicated somewhere (in the hymn), the seers adore with formnlas. That (deity) one learned in scriptures (ಶಾಸ್ತ್ರ) should take note of.

49. For the action (of the gods), though not designated by their agents, are nevertheless indicated somewhere—at the beginning, and in middle, and at the end, and in individual passages (ಪೃಥಕ್ತ್ವೇಷು).

50. The very action itself in the Nivid to Savitr praises by the

ಯದ್ಧೇನುಃ ಸಪ್ತ್ಯನಡ್ವಾಹೌ ವೋಳ್ಹಾ ದೋಗ್ಧ್ರ್ಯಶುರೇವ ವಾ || ೫೦ ||

ಭಾಗೇ ಯತ್ಸ್ತೌತಿ ಚಾಗ್ನ್ಯಾದೀನ್ಮಿತ್ರಾದೀಂಶ್ಚಾಶ್ವಸಂಸ್ತುತೌ |
ಯದೈಭಿರಿತಿ ಚೈತಸ್ಮಿನ್ವೈಶ್ವದೇವೇಗ್ನಿಮರ್ಚತಿ || ೫೧ ||

ತದಾಹುರಾದಾವಂತೇ ಚ ಪ್ರಾಯಶೋಽನ್ಯಾ ಸ್ತುವನ್ನೃಚಃ |
ಪ್ರತಿಯೋಗಾತ್ಪ್ರಸಂಗಾದ್ವಾ ಸ್ತೌತ್ಯನ್ಯಾಮಪಿ ದೇವತಾಂ || ೫೨ ||

ದೇವತೆಗಳ ಹೆಸರನ್ನು ನಿರ್ದಿಷ್ಟವಾಗಿ ತಿಳಿಯಬಹುದು. (ಎಂದರೆ ಒಂದು ಮಂತ್ರದಲ್ಲಿ ದೇವತೆಯ ನಾಮನಿರ್ದೇಶವಿಲ್ಲದಿದ್ದರೆ ಆ ಸಂದರ್ಭದಲ್ಲಿ ಆ ಮಂತ್ರದ ದೇವತೆಯು ಯಾರೆಂಬುದನ್ನು ತಿಳಿಯುವುದಕ್ಕಾಗಿ ಮೇಲೆ ಹೇಳಿದ ಕ್ರಮವನ್ನು ಅನುಸರಿಸಬೇಕು ಎಂದಭಿಪ್ರಾಯವು).

### ಸೂಕ್ತಭಾಗಿನೀ ಮತ್ತು ನಿಪಾತಿನೀ ಮಂತ್ರಗಳು

51. ಭಗದೇವತಾಕವಾದ ಸೂಕ್ತದಲ್ಲಿ (೭ ನೇ ಮಂಡಲ ೪೧ನೇ ಸೂಕ್ತ) ಅಗ್ನ್ಯಾದಿ ದೇವತೆಗಳನ್ನೂ ಅಶ್ವಸ್ತುತಿ ಇರುವ ಸೂಕ್ತದಲ್ಲಿ (೧ ನೇ ಮಂಡಲ ೧೬೨ನೇ ಸೂಕ್ತ) ಮಿತ್ರಾದಿ ದೇವತೆಗಳನ್ನೂ, ವೈಶ್ವದೇವಸೂಕ್ತವಾದ ಐಭಿರಗ್ನೇ (೧ ನೇ ಮಂಡಲದ ೧೪ನೇ ಸೂಕ್ತ) ಎಂಬ ಸೂಕ್ತದಲ್ಲಿ ಅಗ್ನಿಯನ್ನು ಸ್ತುತಿಸಿರುವಂತೆಯೇ,

52. ಒಂದು ಸೂಕ್ತದ ಮುಖ್ಯದೇವತೆಯನ್ನು ಸ್ತುತಿಸುವಾಗ ಆ ಸೂಕ್ತದ ಬಹುಭಾಗದ ಋಕ್ಕುಗಳಲ್ಲಿ ಮುಖ್ಯದೇವತೆಯನ್ನು ಸ್ತುತಿಸಿ ಮುಖ್ಯದೇವತೆಗೆ ಸಂಬಂಧಪಟ್ಟ ವಿಷಯವನ್ನು ಹೇಳುವಾಗ ಅಥವಾ ಪ್ರಸಂಗವಶದಿಂದ ಇತರ ದೇವತೆಗಳನ್ನು ಸೂಕ್ತದ ಕೆಲವು ಋಕ್ಕುಗಳಲ್ಲಿ ಋಷಿಯು ಸ್ತುತಿಸಿರುವುದು ಕಂಡುಬರುವುದು. ಎಂದರೆ ಒಂದು ಸೂಕ್ತದಲ್ಲಿ ಮುಖ್ಯದೇವತೆಯನ್ನು ಮಾತ್ರ ಸ್ತುತಿಸಬೇಕೆಂದು ನಿಯಮವಲ್ಲ. ಮುಖ್ಯದೇವತೆಯ ಸ್ತುತಿಯನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಸಂದರ್ಭಾನುಸಾರವಾಗಿ ಅಥವಾ ಮುಖ್ಯದೇವತೆಯ ವಿಷಯವನ್ನು ವಿವರಿಸುವುದಕ್ಕಾಗಿ ಇತರ ದೇವತೆಗಳನ್ನೂ ಸ್ವಲ್ಪಮಟ್ಟಿಗೆ ಸ್ತುತಿಸುವುದು ಸಹಜವೂ ರೂಢಿಯೂ ಆಗಿದೆ.

action: since the cow, the courser, and the ox are (called) milker, swift, or career (respectively).

### 11. Hymn-owning and incidental deities. Seers of Visvedeva hymns

51. Inasmuch as (the seer) praises Agni and others in the hymn to Bhaga (vii. 41), Mitra and others in the panegyric of the horse (i. 162), and adores Agni in (the hymn) to the All-gods, 'Hither with these' (ಐಭಿಃ i. 14):

52. as to that, they say that, while for the most part employing in his praise (ಸ್ತುವನ್) other stanzas at the beginning and end (of a hymn), he (the seer) from association (ಪ್ರತಿಯೋಗಾತ್) or on occasion (ಪ್ರಸಂಗಾತ್) praises another deity at the same time.

ಯಸ್ಯಾಂ ವದತ್ಯರ್ಥವಾದಾನ್ಸಾ ಜ್ಞೇಯಾ ಸೂಕ್ತಭಾಗಿನೀ ।
ಯಾಂ ತು ಸ್ತೌತಿ ಪ್ರಸಂಗೇನ ಸಾ ವಿಜ್ಞೇಯಾ ನಿಪಾತಿನೀ ॥ ೫೩ ॥

ಚತುರ್ಧಾ ಭಣ್ಯತೇ ತಸ್ಮಿನ್ಸೂಕ್ತೇ ವಾ ಸೂಕ್ತಭಾಗಿನೀ ।
ಯಸ್ಮಿನ್ಸರ್ವಾಂಸ್ತು ರಾಜರ್ಷೀನೃಷೀನ್ವಾಪಿ ಸ್ತುವನ್ನೃಷಿಃ ॥ ೫೪ ॥

ಮೇಧಾತಿಥಿರಗಸ್ತ್ಯಸ್ತು ಬೃಹದುಕ್ಥೋ ಮನುರ್ಗಯಃ ।
ಋಜಿಶ್ವಾ ವಸುಕರ್ಣಶ್ಚ ಶಾರ್ಯಾತೋ ಗೋತಮೋ ಲುಶಃ ॥ ೫೫ ॥

ಸ್ವಸ್ತ್ಯಾತ್ರೇಯಃ ಪರುಚ್ಛೇಪಃ ಕಕ್ಷೀವಾನ್ ಗಾಥಿನೌರ್ವಶೌ ।
ನಾಭಾಕಶ್ಚೈವ ನಿರ್ದಿಷ್ಟೋ ದುವಸ್ಯುರ್ಮಮತಾಸುತಃ ॥ ೫೬ ॥

53 ಒಂದು ಮಂತ್ರದಲ್ಲಿ ಯಾವ ದೇವತೆಯನ್ನು ಪ್ರಧಾನ (ಮುಖ್ಯ) ದೇವತೆಯೆಂದು ಭಾವಿಸಿ ಆ ದೇವತೆಯನ್ನು ಸ್ತುತಿಸಲಾಗುವುದೋ ಆ ಮಂತ್ರಕ್ಕೆ ಅಥವಾ ಋಕ್ಕಿಗೆ ಸೂಕ್ತಭಾಗಿನೀ (ಪ್ರಧಾನದೇವತೆಯನ್ನು ಸ್ತುತಿಸಿರುವ ಸೂಕ್ತ) ಎಂದೂ ಪ್ರಸಂಗವಶದಿಂದ ಪ್ರಧಾನದೇವತೆಯಲ್ಲದ ಇತರ ದೇವತೆಯನ್ನು ಸ್ತುತಿಸಿರುವ ಋಕ್ಕಿಗೆ ನಿಪಾತಿನೀ (ಕಾರಣಾಂತರದಿಂದ ಬೇರೆ ದೇವತೆಯನ್ನು ಸ್ತುತಿಸಿರುವ ಮಂತ್ರ)ಎಂದೂ ಹೆಸರು. ಒಂದು ಸೂಕ್ತದಲ್ಲಿ ಸೂಕ್ತಭಾಗಿನೀ ಮಂತ್ರಗಳು ಮಾತ್ರವಿರಬಹುದು. ಅಥವಾ ಸೂಕ್ತಭಾಗಿನೀ ಮತ್ತು ನಿಪಾತಿನೀ ಎಂಬ ಎರಡು ವಿಧ ಮಂತ್ರಗಳೂ ಇರಬಹುದು.

54. ಸೂಕ್ತಭಾಗಿನೀ ಎಂಬ ಋಕ್ಕು ನಾಲ್ಕು ವಿಧವಾಗಿ. ಹೇಳಲ್ಪಟ್ಟಿರುವುದು ಸೂಕ್ತದ್ರಷ್ಟೃವಾದ ಋಷಿಯು. ಆ ಸೂಕ್ತದಲ್ಲಿ ಅನೇಕ ರಾಜರ್ಷಿಗಳನ್ನೂ ಋಷಿಗಳನ್ನೂ ಪ್ರಶಂಸೆ ಮಾಡಿರುವುದು ಕಂಡುಬರುವುದು.

### ವಿಶ್ವೇದೇವತಾಕಸೂಕ್ತಗಳ ದ್ರಷ್ಟೃಗಳಾದ ಋಷಿಗಳ ಹೆಸರುಗಳು

55. ವೈಶ್ವದೇವಸೂಕ್ತಗಳ (ವಿಶ್ವೇದೇವತೆಗಳನ್ನು ಸ್ತುತಿಸಿರುವ ಸೂಕ್ತಗಳ) ದ್ರಷ್ಟೃಗಳಾದ ಋಷಿಗಳಾರೆಂದರೆ—ಮೇಧಾತಿಥಿ, ಅಗಸ್ತ್ಯ, ಬೃಹದುಕ್ಥ, ಮನು, ಗಯಃ. ಋಜಿಶ್ವಾ, ವಸುಕರ್ಣ, ಶಾರ್ಯಾತ, ಗೋತಮ, ಲುಶ,

56. ಸ್ವಸ್ತ್ಯಾತ್ರೇಯ, ಪರುಚ್ಛೇಪಃ, ಕಕ್ಷೀವಾನ್, ಗಾಧಿಪುತ್ರನಾದ ವಿಶ್ವಾಮಿತ್ರ, ಉರ್ವಶೀಪುತ್ರನಾದ ವಸಿಷ್ಠ, ನಾಭಾಕ, ದುವಸ್ಯು, ಮಮತಾದೇವಿಯ ಪುತ್ರನಾದ ದೀರ್ಘತಮಾಃ,

53. The deity to whom he addresses statements of an object (ಅರ್ಥವಾದಾನ್) is to be known as hymn-owning (ಸೂಕ್ತಭಾಗಿನೀ) ; but the one whom he praises on occasion (ಪ್ರಸಂಗೇನ) is to be recognised as incidental (ನಿಪಾತಿನೀ),

54. In four ways (ಚತುರ್ಧಾ) it may be said (ವಾ), rhe hymn-owning (deity) is mentioned (ಭಣ್ಯತೇ) in that hymn in which a seer who praises all the royal Rishis or (divine) Rishis is indicated (ನಿರ್ದಿಷ್ಟ).

55. as Medhatithi, Agastya, Brhaduktha, Manu, Gaya, Rijisvan, Vasukarna, Saryata, Gotama, Lusa;

### 12. Seers of Vaisvadeva hymn (continued).

56. Svastyatreya, Paruchepa, Kaksivat, the son of Gathin (ವಿಶ್ವಾಮಿತ್ರ), and the son of Urvasi (ವಸಿಷ್ಠ), Nabhaka, Duvasyu, and the son of Mamata (ದೀರ್ಘತಮಾಃ).

ವಿಹವ್ಯಃ ಕಶ್ಯಪ ಋಷಿರವತ್ಸಾರಶ್ಚ ನಾಮ ಯಃ ।
ವಾಮದೇವೋ ಮಧುಚ್ಛಂದಾಃ ಪಾರ್ಥೋ ದಕ್ಷಸುತಾದಿತಿಃ ॥ ೫೭ ॥
ಜುಹೂರ್ಗೃತ್ಸಮದಶ್ಚರ್ಷಿರ್ದೇವಾಃ ಸಪ್ತರ್ಷಯಶ್ಚ ಯೇ ।
ಯಮೋಽಗ್ನಿಸ್ತಾಪಸಃ ಕುತ್ಸಃ ಕುಸೀದೀ ತ್ರಿತ ಏವ ಚ ॥ ೫೮ ॥
ಬಂಧುಪ್ರಭೃತಯಶ್ಚೈವ ಚತ್ವಾರೋ ಭ್ರಾತರಃ ಪೃಥಕ್ ।
ವಿಷ್ಣುಶ್ಚ ನೇಜಮೇಷಶ್ಚ ನಾಮ್ನಾ ಸಂವನನಶ್ಚ ಯಃ ॥ ೫೯ ॥
ಏತೇ ತು ಸರ್ವ ಏವಾಸ್ಯ ವಿಶ್ವೈಃ ಸ್ವೈಃ ಕರ್ಮಜೈರ್ಗುಣೈಃ ।
ಸಮಸ್ತೈರಥ ಚ ವ್ಯಸ್ತೈಃ ಪೃಥಕ್ಸೂಕ್ತೇಷು ತುಷ್ಟುವುಃ ॥ ೬೦ ॥
ಪಾರ್ಥಿವೋ ದ್ರವಿಣೋದೋಽಗ್ನಿಃ ಪುರಸ್ತಾದ್ಯಸ್ತು ಕೀರ್ತಿತಃ ।

57. ವಿಹವ್ಯ, ಕಶ್ಯಪ, ಅವತ್ಸಾರ, ವಾಮದೇವ, ಮಧುಚ್ಛಂದಾಃ, ಪಾರ್ಥ, ದಕ್ಷಪುತ್ರಿಯಾದ ಅದಿತಿ,

58. ಜುಹು, ಗೃತ್ಸಮದ, ಸಪ್ತಋಷಿಗಳು (ಭರದ್ವಾಜ, ಕಶ್ಯಪ, ಗೋತಮ, ಅತ್ರಿ, ವಿಶ್ವಾಮಿತ್ರ, ಜಮದಗ್ನಿ, ವಸಿಷ್ಠ ಎಂಬ ಸಪ್ತರ್ಷಿಗಳು ೧೦ನೇ ಮಂಡಲದ ೧೩೭ನೇ ಸೂಕ್ತದಲ್ಲಿ ಪ್ರತಿಯೊಬ್ಬರೂ ವಿಶ್ವೇದೇವತೆಗಳನ್ನು ಒಂದೊಂದು ಋಕ್ಕಿನಲ್ಲಿ ಸ್ತುತಿಸಿರುವರು,) ಯಮ, ಅಗ್ನಿಸ್ತಾಪಸಃ, ಕುತ್ಸ, ಕುಸೀದೀ, ತ್ರಿತ,

59. ಬಂಧುಪ್ರಭೃತಿಗಳು (ಎಂದರೆ, ಬಂಧು, ಸುಬಂಧು, ಶ್ರುತಬಂಧು, ವಿಪ್ರಬಂಧು ಎಂಬ ನಾಲ್ಕು ಮಂದಿ ಸಹೋದರರು ಪ್ರತ್ಯೇಕವಾಗಿ ವಿಶ್ವೇದೇವತೆಗಳನ್ನು ಸ್ತುತಿಸಿರುವರು), ವಿಷ್ಣು, ನೇಜಮೇಷ, ಸಂವನನ ಎಂಬ ಹೆಸರಿನ ಋಷಿ ;

60. ಈ ಋಷಿಗಳೆಲ್ಲರೂ ವಿಶ್ವೇದೇವತೆಗಳನ್ನು ಅವರವರ ಕರ್ಮಗಳು ಮತ್ತು ಗುಣಗಳಿಗೆ ಅನುಸಾರವಾಗಿ ಒಟ್ಟಾಗಿಯೂ, ಬೇರೆಬೇರೆಯಾಗಿಯೂ ನಾನಾಸೂಕ್ತಗಳಲ್ಲಿ ಸ್ತುತಿಸಿರುವರು.

### ದ್ರವಿಣೋದಾಃ ಎಂಬ ದೇವತೆಯ ವಿಷಯ.

61. ಹಿಂದೆ ಹೇಳಿದಂತೆ (೧೫ನೇ ಸೂಕ್ತದ ೭-೧೦ ಋಕ್ಕುಗಳಲ್ಲಿ) ಪಾರ್ಥಿವಾಗ್ನಿಯನ್ನೇ ದ್ರವಿಣೋದ

---

57. Vihavya, the seer Kasyapa, and he who is Avatsara by name, Vamadeva, Madhuchandas, Partha, Aditi, daughter of Daksa ;

58. Juhu, and the seer Grtsamada, and those who are the divine seven Rishis, Yama, Agni, Tapasa, Kutsa, Kusidin, and Trita ;

59. also the four brothers, Bandhu and the rest separately (ಪೃಥಕ್) and Visnu, and Nejamesa, and he who is Samvanana by name.

60. All these have praised (them) in separate hymns with their universal (ವಿಶ್ವೈಃ) qualities arising from their activities, (whether those qualities are mentioned) collectively or individuelly.

### 13. Explanation of Dravinodas of RV. i. 16-18.

61. Now the Dravinoda, who has been asserted above (iii. 38) (to

ತಮಾಹುರಿಂದ್ರಂ ದಾತೃತ್ವಾದೇಕೇ ತು ಬಲವಿತ್ತಯೋಃ ॥ ೬೧ ॥
ಅಯಂ ಹಿ ದ್ರವಿಣೋದೋಽಗ್ನಿರಯಂ ದಾತಾ ಬಲಸ್ಯ ಹಿ ।
ಜಾಯತೇ ಚ ಬಲೇನಾಯಂ ಮಥ್ಯತ್ಯೃಷಿಭಿರಧ್ವರೇ ॥ ೬೨ ॥
ಹವೀಂಷಿ ದ್ರವಿಣಂ ಪ್ರಾಹುರ್ಹವಿಷೋ ಯತ್ರ ಜಾಯತೇ ।
ದಾತಾರಶ್ಚರ್ತ್ವಿಜಸ್ತೇಷಾಂ ದ್ರವಿಣೋದಾಸ್ತತಃ ಸ್ವಯಂ ॥ ೬೩ ॥
ಋಷೀಣಾಂ ಪುತ್ರ ಇತ್ಯೇಷಾಂ ದೃಶ್ಯತೇ ಸಹಸೋ ಯಹೋ ।
ಮಧ್ಯಮಾದ್ವಾ ಯತೋ ಜಜ್ಞೇ ತಸ್ಮಾದ್ವಾ ದ್ರಾವಿಣೋದಸಃ ॥ ೬೪ ॥

ಎಂಬ ದೇವತೆಯೆಂದು ಕರೆಯುವರು. ಈ ದೇವತೆಯು ಬಲವನ್ನೂ ದ್ರವ್ಯವನ್ನೂ ಭಕ್ತರಿಗೆ ಕೊಡುವವನಾದ್ದರಿಂದ ಕೆಲವರು ಇವನನ್ನು ಇಂದ್ರನೆಂದೂ ಹೇಳುವರು.

62. ಬಲವನ್ನು ಕೊಡುವವನಾದ್ದರಿಂದ ಈ ಅಗ್ನಿಯೇ ದ್ರವಿಣೋದನು. ಅಥವಾ ಯಜ್ಞಾದಿಗಳಲ್ಲಿ ಋಷಿಗಳು ಅರಣಿಗಳಲ್ಲಿ ಅಗ್ನಿಮಥನಮಾಡುವಾಗ ಬಲವನ್ನು ಉಪಯೋಗಿಸಿ ಕಡೆಯುವುದರಿಂದಲೂ ಈ ಅಗ್ನಿಗೆ ದ್ರವಿಣೋದನೆಂಬ ಹೆಸರು.

63. ಇದಲ್ಲದೆ ಹವಿಸ್ಸನ್ನು ದ್ರವ್ಯ (ದ್ರವಿಣ)ವೆಂದು ಕರೆಯುವರು. ಏಕೆಂದರೆ ಯಜ್ಞಾಗ್ನಿಯಲ್ಲಿ ಹವಿಸ್ಸನ್ನು ಹೋಮ ಮಾಡುವುದರಿಂದ ಅದಕ್ಕೆ ಪ್ರತಿಫಲವಾಗಿ ದ್ರವ್ಯವು ಲಭಿಸುವುದು. ಈಗ ಯಜ್ಞದಲ್ಲಿ ಭಾಗವಹಿಸುವ ಋತ್ವಿಕ್ಕುಗಳು ಹವಿಸ್ಸನ್ನು ಅರ್ಪಿಸಿ ಆ ಮೂಲಕ ದ್ರವ್ಯಪ್ರಾಪ್ತಿಗೆ ಕಾರಣರಾಗುವುದರಿಂದ ಋತ್ವಿಕ್ಕುಗಳಿಗೆ ದ್ರವಿಣೋದರೆಂದೂ ಹೇಳಬಹುದು.

64. ಅಥವಾ ಋಷಿಗಳು ತಮ್ಮ ಸ್ತುತಿಗಳಲ್ಲಿ ಅಗ್ನಿಯನ್ನು ಪುತ್ರನೆಂದೂ, ಬಲದ (ಬಲಪ್ರಯೋಗದಿಂದ ಜನಿಸುವ) ಪುತ್ರನೆಂದೂ ಪ್ರೀತ್ಯಾದರಗಳಿಂದ ಸಂಬೋಧಿಸುತ್ತಾರೆ. ಅಥವಾ ಈ ಪಾರ್ಥಿವಾಗ್ನಿಯು ಮಧ್ಯಮಾಗ್ನಿ (ಅಂತರಿಕ್ಷಸ್ಥಾನಾಗ್ನಿ) ಯಿಂದ ಜನಿಸುವವನು. ಈ ಕಾರಣಗಳಿಂದಲೂ ಈ ಪಾರ್ಥಿವಾಗ್ನಿಯೇ ದ್ರವಿಣೋದನು.

---

be) the terrestrial Agni, some call Indra, because of his being the giver of strength and wealth.

62. This (terrestrial) Agni is Dravinoda; for he is giver of strength; and he is produced by strength, (that is) rubbed (ಮಥ್ಯತಿ) by the seers at the sacrifice.

63. They call the oblations wealth (ದ್ರವಿಣ), because it is produced from the oblation; now the sacrificers (ಋತ್ವಿಜ್) are givers of them (oblations); hence they themselves are wealth-givers (ದ್ರವಿಣೋದಾಃ).

64. or he (Agni) is (called) Dravinodas because he appears (connected) with them (ಏಷಾಂ) from (such expressions as) 'the son of the seers', (and) 'O child of strength'; or because he was produced from the middle (Agni).

ದ್ರವಿಣೋದೋಽಗ್ನಿರೇವಾಯಂ ದ್ರವಿಣೋದಾಸ್ತದೋಚ್ಯತೇ |
ಆಗ್ನೇಯೇಷ್ವೇವ ದೃಶ್ಯಂತೇ ಪ್ರವಾದಾ ದ್ರವಿಣೋದಸಃ || ೬೫ ||

ಐಂದ್ರಸ್ಯ ನವಕಸ್ಯೇಹ ಯದ್ವೈಂದ್ರಾವರುಣಂ ಪರಂ |
ತಸ್ಯೋತ್ತರಂ ಚ ಸೋಮಾನಂ ಸ್ತೂಯತೇ ಬ್ರಹ್ಮಣಸ್ಪತಿಃ || ೬೬ ||

ಋಗ್ಭಿಃ ಪಂಚಭಿರಾದ್ಯಾಭಿಸ್ತಿಸೃಭಿಃ ಸದಸಸ್ಪತಿಃ |
ನರಾಶಂಸೋಽನ್ತ್ಯಯಾ ಚರ್ಚಾ ಸೋಮೇಂದ್ರೌ ತು ನಿಪಾತಿತೌ || ೬೭ ||

ಚತುರ್ಥ್ಯಾಂ ಸೋಮ ಇಂದ್ರಶ್ಚ ಪಂಚಮ್ಯಾಂ ದಕ್ಷಿಣಾಧಿಕಾ |

65. ಈ ಪಾರ್ಥಿವಾಗ್ನಿಯೇ ದ್ರವಿಣೋದನೆಂದು ಹೇಳಲು ಇನ್ನೂ ಒಂದು ಕಾರಣವಿರುವುದು. ಈ ಪಾರ್ಥಿವಾಗ್ನಿಯೇ ತನ್ನನ್ನು ಸ್ತುತಿಸುವವರಿಗೆ ದ್ರವಿಣ ಎಂದರೆ ಧನಾದಿಸಂಪತ್ತನ್ನು ಕೊಡುವವನು ಎಂದು ಪ್ರಸಿದ್ಧಿಯು. ಇದಲ್ಲದೆ, ಅಗ್ನಿದೇವತಾಕವಾದ ಸೂಕ್ತಗಳಲ್ಲಿಯೇ ಅಗ್ನಿಯನ್ನು ದ್ರವಿಣೋದನೆಂದು ಕರೆದಿರುವ ಪ್ರಸಂಗಗಳು ಅನೇಕವಿರುವುವು.

### ೧೬, ೧೭, ೧೮ ನೇ ಸೂಕ್ತಗಳ ದೇವತೆಗಳು

66. ಪ್ರಥಮಮಂಡಲದ 16ನೇ ಸೂಕ್ತಕ್ಕೆ ಇಂದ್ರನು ದೇವತೆಯು; ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಇದರ ಮುಂದಿನ ಸೂಕ್ತಕ್ಕೆ (ಇದರಲ್ಲಿಯೂ ೯ ಋಕ್ಕುಗಳಿರುವವು) ಇಂದ್ರಾವರುಣರು ದೇವತೆಯು. ಅದರ ಮುಂದಿನ (೧೮ ನೇ ಸೂಕ್ತ) ಸೂಕ್ತದಲ್ಲಿ ಸೋಮದೇವತೆಯೂ, ಬೃಹಸ್ಪತಿಯೂ ಸ್ತುತಿಸಲ್ಪಟ್ಟಿರುವರು.

67-68. ಈ ಸೂಕ್ತದ (೧೮ ನೇ ಸೂಕ್ತದ) ಮೊದಲ ಐದು ಋಕ್ಕುಗಳಲ್ಲಿ ಬ್ರಹ್ಮಣಸ್ಪತಿಯೂ, ಮುಂದಿನ ಮೂರು ಋಕ್ಕುಗಳಲ್ಲಿ (೬-೮) ಸದಸಸ್ಪತಿ ಎಂಬ ದೇವತೆಯೂ, ಕೊನೆಯ ಋಕ್ಕಿನಲ್ಲಿ ನರಾಶಂಸ ದೇವತೆಯೂ ಸ್ತುತರಾಗಿರುವರು. ಈ ಸೂಕ್ತದಲ್ಲಿ (೪ ನೇ ಋಕ್ಕಿನಲ್ಲಿ) ಬ್ರಹ್ಮಣಸ್ಪತಿಯ ಜತೆಯಲ್ಲಿ ಪ್ರಸಂಗವಶದಿಂದ ಸೋಮ ಮತ್ತು ಇಂದ್ರನೂ, ಐದನೆಯ ಋಕ್ಕಿನಲ್ಲಿ ಈ ದೇವತೆಗಳ ಜತೆಗೆ ದಕ್ಷಿಣಾ ಎಂಬ ದೇವತೆಯೂ ಸ್ತುತರಾಗಿರುವರು. ಈ ಋಕ್ಕು

---

65. It is this (terrestrial) Agni who is wealth-giver (ದ್ರವಿಣೋದಾಃ); it is then that he is called 'Dravinodas': it is only in (hymns) addressed to Agni that mention of Drovinodas appears.

66. Here (the hymn) which follows that of nine stanzas to Indra (i. 16) is addressed to Indra-Varuna (i. 17). The one next to it is 'The Soma-Presser' (ಸೋಮಾನಂ: 1. 18) Brahmanaspati is praised

### 14. Deities of RV. i. 18. Eight names of Prajapati.

67. in the first five stanzas; in (the next) three (6-8) Sadasaspati; and in the last stanza (9) Narasamsa; Soma-Indra are incidentally praised (ನಿಪಾತಿತೌ).

68. in the fourth; Soma and Indra, and Daksina as well (ಅಧಿಕಾ) in the fifth.

ಪ್ರಸಂಗಾದೃಷಿಣಾ ಪ್ರೋಕ್ತಾಃ ಸಂಬಂಧಾಃ ಸ್ಥಾನಲೋಕಯೋಃ || ೬೮ ||

ಪ್ರಾಜಾಪತ್ಯಂ ತಥೇಂದ್ರಃ ಸ್ಯಾದಿತಿ ತಸ್ಯೇಹ ನಾಮನೀ |
ಕಥಿತೇ ದ್ವೇ ಚ ಷಟ್ ಚಾನ್ಯಾನ್ಯೇಷಾಂ ಚಾದ್ಯಃ ಪ್ರಜಾಪತಿಃ || ೬೯ ||

ಶಿಷ್ಟಾನಿ ಯಾನಿ ನಾಮಾನಿ ತಾನಿ ವಕ್ಷ್ಯಾಮ್ಯತಃ ಪರಂ |
ಸತ್ಪತಿಃ ಕಶ್ಚ ಕಾಮಶ್ಚ ಸದಸಸ್ಪತಿರೇವ ಚ || ೭೦ ||

ಇಳಸ್ಪತಿರ್ವಾಚಸ್ಪತಿಸ್ತತಸ್ತು ಬ್ರಹ್ಮಣಸ್ಪತಿಃ |
ತೃತೀಯಾಂತ್ಯೇ ತು ಸೂಕ್ತಸ್ಯ ಪ್ರಥಮಂ ಪಂಚಮಂ ಚ ಯತ್ || ೭೧ ||

ಗಳಲ್ಲಿ ಋಷಿಯು ಮುಖ್ಯದೇವತೆಯ ಜತೆಗೆ ಇತರ ದೇವತೆಗಳನ್ನು ಸ್ಥಾನ ಮತ್ತು ಸಂದರ್ಭಕ್ಕನುಸಾರವಾಗಿ ಪ್ರಸ್ತಾಪ ಮಾಡಿ ಸ್ತುತಿಸಿರುವನು.

69. ಈ ಸೂಕ್ತದಲ್ಲಿ ಪ್ರಜಾಪತಿಯನ್ನು ಸೂಚಿಸುವುದಕ್ಕಾಗಿ ಇಂದ್ರಶಬ್ದಪ್ರಯೋಗವಿರಬಹುದು. ಇಲ್ಲಿ ಎರಡು ಸಲ ಇಂದ್ರಶಬ್ದವಿರುವುದರಿಂದ ಒಂದು ಇಂದ್ರಶಬ್ದಕ್ಕೆ ಪ್ರಜಾಪತಿಯೆಂದು ಅರ್ಥಮಾಡಬಹುದು. ಪ್ರಜಾಪತಿಗೆ ಈ ಎರಡು ಹೆಸರುಗಳಲ್ಲದೆ ಇನ್ನೂ ಆರು ಹೆಸರುಗಳಿರುವವು. ಈ ಒಟ್ಟು ಎಂಟು ಹೆಸರುಗಳಲ್ಲಿ ಪ್ರಜಾಪತಿಯೆಂಬುದೇ ಮೊದಲನೆಯದು.

70. ಪ್ರಜಾಪತಿಯ ಉಳಿದ ಹೆಸರುಗಳನ್ನು ಹೇಳುವೆನು, ಕೇಳು. ಸತ್ಪತಿಃ, ಕಃ, ಕಾಮಃ, ಸದಸಸ್ಪತಿಃ.

71. ಇಳಸ್ಪತಿಃ, ವಾಚಸ್ಪತಿಃ, ಬ್ರಹ್ಮಣಸ್ಪತಿಃ ಎಂಬಿವೇ ಪ್ರಜಾಪತಿಯ ಎಂಟು ಹೆಸರುಗಳು. ಇವುಗಳಲ್ಲಿ ಮೂರನೆಯ ಹೆಸರೂ (ಕಃ ಎಂಬುದು) ಕೊನೆಯ ಹೆಸರೂ (ಬ್ರಹ್ಮಣಸ್ಪತಿಃ ಎಂಬುದು) ಮತ್ತು ಮೊದಲನೆಯದು (ಪ್ರಜಾಪತಿಃ) ಮತ್ತು ಐದನೆಯದು (ಸದಸಸ್ಪತಿ ಎಂಬುದು) ಕೆಲವು ಸೂಕ್ತಗಳಲ್ಲಿ ಆ ಸೂಕ್ತಗಳ ದೇವತೆಯೆಂದು ಸ್ತುತಿಸಲ್ಪಟ್ಟಿರುವುದು.

---

On occasion the relationships (ಸಂಬಂಧಾಃ) of sphere and world are proclaimed by thr seer.

69. Thus (a name) of Prajapati (ಪ್ರಾಜಾಪತ್ಯಂ) might be (meant for) Indra : on this principle (ಇತಿ) two names of his are mentioned here. There are six others as well : Prajapati is the first of them.

70. The remaining names I will next state :—Satpati, Ka, Kama, and Sadasaspati,

71. Ilaspati, Vachaspati, then Brahmanaspati : the third and the last (belong) to a hymn, as well as the first and the fifth ;

ಚತುರ್ಭಿರಿತರೈಸ್ತ್ವೇನಂ ನ ಸೂಕ್ತಂ ನಾಪ್ಯೃಗಶ್ನುತೇ ।
ಸರ್ವಾಣ್ಯೇವತು ಸರ್ವಾಸಾಂ ದೇವತಾನಾಂ ಪ್ರಜಾಪತೇಃ ॥ ೭೨ ॥
ನಾಮಾನಿ ಕಥಯಂತ್ಯೇತೇ ಸಮ್ಯಗ್ಭಕ್ತಿದಿದೃಕ್ಷವಃ ।
ತದಾಹುರ್ನೈತದೇವಂ ಸ್ಯಾದಷ್ಟಾನಾಮೇಷ ಹಿ ಸ್ಮೃತಃ ॥ ೭೩ ॥
ತೈರೇವ ಚಾಸ್ಯ ಕಲ್ಪ್ಯಂತೇ ಕ್ರತವಶ್ಚ ಹವೀಂಷಿ ಚ ।
ಮರುದ್ಭಿರ್ಮಧ್ಯಮಸ್ಥಾನೈರಯಮಗ್ನಿಸ್ತು ಪಾರ್ಥಿವಃ ॥ ೭೪ ॥
ನವಕೇನೇಹ ಸೂಕ್ತೇನ ಪ್ರತಿ ತ್ಯಮಿತಿ ಸಂಸ್ತುತಃ ।
ಮರುತಾಂ ಸಾಹಚರ್ಯಾತ್ತು ಸೂಕ್ತೇಽಸ್ಮಿನ್ನಾಗ್ನಿಮಾರುತೇ ॥ ೭೫ ॥

72-73. ಆದರೆ ಪ್ರಜಾಪತಿಯ ಉಳಿದ ನಾಲ್ಕು ಹೆಸರುಗಳನ್ನು (ಸತ್ಪತಿ, ಕಾಮಃ, ಇಳಸ್ಪತಿ, ವಾಚಸ್ಪತಿಃ) ಸ್ತುತಿಸಿರುವ ಪ್ರತ್ಯೇಕ ಸೂಕ್ತಗಳಾಗಲಿ, ಋಕ್ಕುಗಳಾಗಲಿ ಇರುವುದಿಲ್ಲ. ಆದರೆ ಕೆಲವರು ಭಕ್ತಿಭಾವದಿಂದ ಪರವಶರಾಗಿ, ಎಲ್ಲಾ ದೇವತೆಗಳ ಎಲ್ಲಾ ಹೆಸರುಗಳೂ ಪ್ರಜಾಪತಿಯನ್ನೇ ನಿರ್ದೇಶಿಸುವುವು ಎಂದು ಹೇಳುವರು. ಮತ್ತೆ ಕೆಲವರು ಈ ಅಭಿಪ್ರಾಯವು ಸರಿಯಲ್ಲವೆಂದೂ ಮೇಲೆ ಹೇಳಿದ ಎಂಟು ಹೆಸರುಗಳು ಮಾತ್ರ ಪ್ರಜಾಪತಿಯನ್ನು ನಿರ್ದೇಶಿಸುವವೆಂದೂ ಹೇಳುವರು. ಏಕೆಂದರೆ ಈ ಎಂಟು ಹೆಸರುಗಳಿಂದ ಮಾತ್ರವೇ ಪ್ರಜಾಪತಿಗೆ ಹವಿರಾದಿಗಳನ್ನು ಕಲ್ಪಿಸಿ ಅರ್ಪಿಸಲಾಗುವುದು.

**೧೯ ನೇ ಸೂಕ್ತದ ದೇವತೆಗಳು**

74-75. ೯ ಋಕ್ಕುಗಳಿರುವ **ಪ್ರತಿ ತ್ಯಂ ಚಾರುಂ** ಎಂಬ ೧೯ ನೇ ಸೂಕ್ತದಲ್ಲಿ ಮಧ್ಯಮಸ್ಥಾನದೇವತೆಗಳಾದ ಮರುತ್ತುಗಳೊಡನೆ ಪಾರ್ಥಿವಾಗ್ನಿಯು ಸ್ತುತನಾಗಿರುವನು. ಮರುದ್ದೇವತೆಗಳ ಸಾಹಸಚರ್ಯೆಯಿಂದ ಈ ಸೂಕ್ತದಲ್ಲಿ ಅಗ್ನಿಯು ಮರುದ್ದೇವತೆಗಳೊಂದಿಗೆ ಸ್ತುತನಾಗಿರುವನು.

**15. Prajapati's names (continued). Deities of RV. i. 19.**

72, 73. but under the four other (names) neither a hymn nor a stanza belongs to (ಅಶ್ನುತೇ) him.

Now certain people (ಏತೇ) desirous of a correct view in devotion say that all the names of all the deities (belong) to Prajapati. With regard to that (others) say, this should not be so; for he is traditionally held(ಸ್ಮೃತ) to be (the owner) of eight (only).

74. and by these (names) only are sacrifices and oblations offered (ಕಲ್ಪ್ಯಂತೇ) to him.

Now together with the Maruts, who belong to the middle sphere, this terrestrial Agni,

75. is here praised with the hymn of nine stanzas 'to this' (ಪ್ರತಿ ತ್ಯಂ : i. 19). But by reason of the association with the Maruts in this hymn addressed to Agni and the Maruts.

ಮನ್ಯತೇ ಮಧ್ಯಮಂ ಚೈವ ಯಾಸ್ಕೋಽಗ್ನಿಂ ನ ತು ಪಾರ್ಥಿವಂ ।
ಸ್ಯಾದಯಂ ಪಾರ್ಥಿವಸ್ತ್ವೇವ ತಥಾ ರೂಪಂ ಹಿ ದೃಶ್ಯತೇ ॥ ೭೬ ॥
ಹೂಯಸೇ ಪೀತಯೇ ಚೇತಿ ವೈದ್ಯುತೇ ನ ತದಸ್ತಿ ಹಿ ।
ಅಥ ಸ್ಯಾದಭಿಧಾನಸ್ಯ ದೇವತಾಯೋಃ ಪೃಥಕ್ ಪೃಥಕ್ ॥ ೭೭ ॥
ಋಚೋಽರ್ಧರ್ಚಸ್ಯ ಪಾದಸ್ಯ ಕಥಂ ಜ್ಞಾಯೇತ ದೈವತಂ ।
ಯಥಾ ನಿವಿದಿ ಸಾವಿತ್ರ್ಯಂ ಸ್ತೂಯತೇ ಕರ್ಮ ಕರ್ಮಣಾ ॥ ೭೮ ॥

76. ಈ ಸೂಕ್ತದಲ್ಲಿ ಸ್ತುತನಾಗಿರುವ ಅಗ್ನಿಯು ಮಧ್ಯಮಸ್ಥಾನಾಗ್ನಿಯೇ ಹೊರತು ಪಾರ್ಥಿವಾಗ್ನಿಯಲ್ಲ ಎಂದು ಯಾಸ್ಕರ ಮತವು. ಆದರೆ ಸೂಕ್ತದಲ್ಲಿ ಕಂಡುಬರುವ ಅಗ್ನಿಯ ರೂಪ ಮತ್ತು ಗುಣವರ್ಣನೆಯಿಂದ ಇಲ್ಲಿ ಸ್ತುತನಾಗಿರುವ ಅಗ್ನಿಯು ಪಾರ್ಥಿವಾಗ್ನಿಯೆಂದೇ ಕಂಡುಬರುವುದು.

### ಮಂತ್ರದಲ್ಲಿ ನಿರ್ದಿಷ್ಟರಾಗಿರುವ ದೇವತೆಗಳನ್ನು ತಿಳಿಯುವ ಬಗೆ

77. ಕೆಲವು ದೇವತೆಗಳ ವಿಷಯದಲ್ಲಿ ಕೆಲವು ನಿರ್ದಿಷ್ಟವಾದ ಕರ್ಮ ಅಥವಾ ಗುಣವರ್ಣನೆ ಇರುವುದು- ಆ ವರ್ಣನೆಯಿಂದ ಆ ದೇವತೆಯ ಸ್ವರೂಪವನ್ನೂ ಆ ದೇವತೆಯ ಹೆಸರನ್ನೂ ತಿಳಿಯಬಹುದು. ಉದಾಹರಣೆಗೆ— ಮಧ್ಯಮಸ್ಥಾನದ ದೇವತೆಯಾದ ವೈದ್ಯುತಾಗ್ನಿಯ ವಿಷಯ.ದಲ್ಲಿ ಪಾನಾರ್ಥವಾಗಿ ನೀನು ಕರೆಯಲ್ಪಡುವೆ ಎಂದರೆ ಹವಿಸ್ಸ್ವೀಕಾರಾರ್ಥವಾಗಿ ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇವೆ ಇತ್ಯಾದಿ ಪ್ರಾರ್ಥನೆಗಳು ಯಾವಾಗಲೂ ಉಪಯೋಗಿಸಲ್ಪಡುವುದಿಲ್ಲ. ಆದ್ದರಿಂದ ಮಂತ್ರದಲ್ಲಿ ಸ್ತುತರಾಗಿರುವ ಪ್ರತಿಯೊಂದು ದೇವತೆಯ ಹೆಸರನ್ನೂ ಆ ದೇವತೆಯ ಗುಣವರ್ಣನೆಯಿಂದ ಪ್ರತ್ಯೇಕವಾಗಿ ತಿಳಿಯಬೇಕು.

78. ಈಗ ಒಂದು ಋಕ್ಕು, ಅರ್ಧಋಕ್ಕು ಅಥವಾ ಪಾದ ಇವುಗಳಿಗೆ ದೇವತೆ ಯಾರು ಎಂದು ಹೇಗೆ ತಿಳಿಯಬೇಕು ಎಂದರೆ ಸವಿತೃದೇವತಾಕವಾದ ಮಂತ್ರಗಳ ಮಧ್ಯದಲ್ಲಿ ಪಠಿಸುವ ನಿವಿತ್‌ಸೂಕ್ತದಲ್ಲಿ ಸವಿತೃದೇವತೆಯ ಕರ್ಮಗಳನ್ನು ವರ್ಣಿಸಿ ಸ್ತುತಿಸಲಾಗಿರುವದಷ್ಟೆ. ಆ ದೇವತೆಯ ಗುಣವರ್ಣನೆಯಿಂದ (ಅಥವಾ ಕರ್ಮವರ್ಣನೆಯಿಂದ) ಆ ಮಂತ್ರದಲ್ಲಿ ಸವಿತೃವೇ ನಿರ್ದಿಷ್ಟದೇವತೆಯೆಂದು ತಿಳಿಯುವಂತೆ ಇತರಮಂತ್ರಗಳ ವಿಷಯದಲ್ಲಿಯೂ ಸ್ತುತರಾಗಿರುವ. ದೇವತೆಗಳ ಕರ್ಮಗಳನ್ನೂ ಗುಣಗಳನ್ನೂ ವಿವೇಚಿಸಿ ಆ ಮಂತ್ರಕ್ಕೆ ನಿರ್ದಿಷ್ಟದೇವತೆ ಯಾರೆಂಬುದನ್ನು ತಿಳಿದುಕೊಳ್ಳಬೇಕು.

76. Yakas thinks the middle Agni, and not the terrestrial one, (is meant. But it can only be this terrestrial (Agni), for such is (here) evidently (his) character (ರೂಪ).

### 16. How to ascertain the deity of a stanza.

77. Such (a prayer) as 'you are invoked to drink' is not (applicable) in (the case of) the lightning (Agni): so (the invocation) must belong to the designation of the respective deity.

78. How is one to know the divinity of a stanza, of a hemistich, of a verse? As in the Nivid to Savitr the activity (of the god) is praised by the (statement of his) activity.

**ದೋಗ್ಧ್ರೀ ಧೇನುರ್ವೋಢಾನಡ್ವಾನಾಶುಃ ಸಪ್ತಿಃ ಪುರಂಧಿಯೋ ।**
**ಯಥಾ ಚ ಶಂನೋಮಿತ್ರೀಯೋ ವರುಣಃ ಪ್ರಾವಿತಾ ಭುವತ್** ॥ ೭೯ ॥

**ಸೂಕ್ತಪ್ರಾಯೇಣೈಭಿರಗ್ನೇ ಪರೀಕ್ಷ್ಯಾಸ್ತತ್ರ ದೇವತಾಃ ॥**
**ಶಬ್ದಾನಾಂ ದ್ವೈಪದಾದೀನಾಂ ದ್ವಿದೈವಬಹುದೈವತಂ** ॥ ೮೦ ॥

79. ಮೇಲಿನ ಶ್ಲೋಕದಲ್ಲಿ ಹೇಳಿರುವ ವಿಷಯವನ್ನು ಸ್ಪಷ್ಟಪಡಿಸುವುದಕ್ಕಾಗಿ ಕೆಲವು ಉದಾಹರಣೆಗಳನ್ನು ಕೊಡುವರು. ಒಂದು ಋಕ್ಕಿನಲ್ಲಿ ದೋಗ್ಧ್ರೀ (ಹಾಲನ್ನು ಕರೆಯುವ) ಎಂಬ ಶಬ್ದವಿದ್ದು ಇತರ ನಿರ್ದಿಷ್ಟಶಬ್ದವಿಲ್ಲದಿದ್ದರೆ ಆಗ ಲೋಕವ್ಯವಹಾರದಲ್ಲಿ ರೂಢಿಯಲ್ಲಿರುವಂತೆ ಹಾಲನ್ನು ಕರೆಯುವ ಪ್ರಾಣಿಯು ಹಸುವಾದ್ದರಿಂದ ದೋಗ್ಧ್ರೀ ಶಬ್ದಕ್ಕೆ ಧೇನುವೆಂದು ಅರ್ಥಮಾಡಬೇಕು. ಅದರಂತೆ ವೋಢಾ (ಭಾರವನ್ನು ಹೊರುವ ಪ್ರಾಣಿಯು) ಎಂಬ ಶಬ್ದವಿದ್ದಲ್ಲಿ ಅನಡ್ವಾನ್ (ಎತ್ತು) ಎಂದೂ, ಆಶುಃ (ಶೀಘ್ರಗತಿಯುಳ್ಳ ಪ್ರಾಣಿಯು) ಶಬ್ದವಿದ್ದಲ್ಲಿ ಸಪ್ತಿಃ (ಕುದುರೆ) ಎಂದೂ ಪುರಂಧಿಯಾ (ಚಟುವಟಿಕೆಯಾಗಿ ಕೆಲಸವಮಾಡುವವಳು) ಶಬ್ದವಿದ್ದಲ್ಲಿ ಆ ಕ್ರಿಯೆಯುಳ್ಳ ಸ್ತ್ರೀಯೆಂದೂ ತಿಳಿಯಬೇಕು. ಇದೇ ರೀತಿ **ಶಂನೋ ಮಿತ್ರಃ** (೧-೯೦-೯) । **ವರುಣಃ ಪ್ರಾವಿತ್ ಭುವತ್** (೧-೧೪-೧) । ಇತ್ಯಾದಿ ಮಂತ್ರಗಳಲ್ಲಿ ಅಲ್ಲಿರುವ ಶಬ್ದಪ್ರಯೋಗದಿಂದ ನಿರ್ದಿಷ್ಟದೇವತೆಯನ್ನು ತಿಳಿದುಕೊಳ್ಳಬಹುದು.

80. **ಐಭಿರಗ್ನೇ** (೧೪ನೇ ಸೂಕ್ತ) ಎಂಬ ಸೂಕ್ತದಲ್ಲಿಯೂ ಇತರ ಸೂಕ್ತ ಅಥವಾ ಮಂತ್ರಗಳಲ್ಲಿಯೂ ಸೂಕ್ತದಲ್ಲಿ ವಿವರಿಸಿರುವ ವಿಷಯಗಳನ್ನು ಹಿಂದೆ ಹೇಳಿರುವ ಕ್ರಮದಂತೆ ಚೆನ್ನಾಗಿ ಪರೀಕ್ಷಿಸಿ (ವಿಮರ್ಶಿಸಿ) ಆಯಾ ಸೂಕ್ತದ ಅಥವಾ ಮಂತ್ರದ ನಿರ್ದಿಷ್ಟದೇವತೆಯನ್ನು ತಿಳಿದುಕೊಳ್ಳಬೇಕು. ಮಂತ್ರಗಳಲ್ಲಿರುವ ಶಬ್ದಗಳಲ್ಲಿ ಎರಡು ಅಥವಾ ಹೆಚ್ಚು ಪದಗಳಿದ್ದಲ್ಲಿ ಇಬ್ಬರು ಅಥವಾ ಬಹುದೇವತೆಗಳು ನಿರ್ದೇಶಿಸಲ್ಪಟ್ಟಿರುವರೆಂದು ತಿಳಿಯಬೇಕು. (ಉದಾ—**ರಾಜಾನಾ, ಋತಾವೃಧಾ** ಇತ್ಯಾದಿ ದ್ವಿವಚನಾಂತಶಬ್ದಪ್ರಯೋಗವಿದ್ದರೆ ಅಲ್ಲಿ ಮಿತ್ರಾವರುಣರು, ಅಶ್ವಿನೀದೇವತೆಗಳು ಇತ್ಯಾದಿ ಇಬ್ಬರು ದೇವತೆಗಳು ನಿರ್ದಿಷ್ಟರಾಗಿರುವರೆಂದು ತಿಳಿಯಬೇಕು. ಅದರಂತೆ **ಯಜತ್ರಾಃ ಅನೃತಾಃ ಋತಜ್ಞಾಃ** ಇತ್ಯಾದಿ ಬಹುವಚನಶಬ್ದಪ್ರಯೋಗವಿದ್ದಲ್ಲಿ ಅನೇಕಮಂದಿ ದೇವತೆಗಳು ನಿರ್ದಿಷ್ಟರಾಗಿರುವರೆಂದು ತಿಳಿಯಬೇಕು.)

---

79 (as in) (The milking cow, the carrying ox, the swift courser, the industrious (woman), and as (in the stanzas) ‘ May Mitra be gracious to us ’ (ಶಂ ನೋ ಮಿತ್ರಃ : 1· 90. 9), ‘ May Varuna be our protector ’ (ವರುಣಃ ಪ್ರಾವಿತಾ ಭುವತ್ : i. 23.6).

80. (and) ‘ Hither with these, O Agni ’ (ಐಭಿರಗ್ನೇ i. 14. 1)—in such cases (ತತ್ರ) the deities have to be carefully observed in accordance with the general purport (ಪ್ರಾಯೇಣ) of hymn.

Connected with words (ಶಬ್ದ) containing two are more members (ಪದ), there are two deities or many deities.

ಅಸಂಸ್ತುತಂ ಸಂಸ್ತುತವತ್ಪ್ರದಿಷ್ಟಂ ದೈವತಂ ಕ್ವಚಿತ್ ।
ಯತ್ರ ದ್ವಿದೈವತೇ ಮಂತ್ರೇ ಏಕವದ್ದೇವತೋಚ್ಯತೇ　　॥ ೮೧ ॥
ವಿಭಕ್ತಸ್ತುತಿ ತದ್ವಿದ್ಯಾದ್ಬಹುಷ್ವಬಹುವಚ್ಚ ಯತ್ ।
ಆಶೀರ್ವಾದೇಷು ಸಂಜ್ಞಾಸು ಕರ್ಮಸಂಸ್ಥಾಸು ದೇವತಾಃ
ಬಹ್ವ್ಯೋ ಹ ಬಹುವತ್ತತ್ರ ದ್ವಿಪದೇ ಯತ್ರ ಸಂಸ್ತುತೇ　　॥ ೮೨ ॥
ಸುಧನ್ವನ ಆಂಗಿರಸಸ್ಯಾಸನ್ಪುತ್ರಾಸ್ತ್ರಯಃ ಪುರಾ ।
ಋಭುರ್ವಿಭ್ವಾ ಚ ವಾಜಶ್ಚ ಶಿಷ್ಯಾಸ್ತ್ವಷ್ಟುಶ್ಚ ತೇಽಭವನ್　　॥ ೮೩ ॥

81　ಒಂದು ಮಂತ್ರದಲ್ಲಿ ಒಂದು ದೇವತೆಯನ್ನು ನಿರ್ದಿಷ್ಟವಾಗಿ ಸ್ತುತಿಸಿಲ್ಲದಿದ್ದರೂ ಆ ದೇವತೆಯ ಹೆಸರು ಪ್ರಸ್ತಾಪತ್ವೇನ ಬಂದಿದ್ದರೆ ಸಾಕು ಆ ದೇವತೆಯನ್ನು ಸ್ತುತಿಸಿರುವಂತೆಯೇ ಭಾವಿಸಬೇಕು. ಮತ್ತು ಒಂದು ಮಂತ್ರದಲ್ಲಿ ಎರಡು ದೇವತೆಗಳು ಒಟ್ಟಿಗೆ ಸ್ತುತಿಸಿದ್ದಲ್ಲಿ ಆಗ ಆ ಎರಡು ದೇವತೆಗಳನ್ನೂ ಒಂದೇ ದೇವತೆಯನ್ನು ಸ್ತುತಿಸಿರುವಂತೆ ಭಾವಿಸಬೇಕು.

82. ಒಂದು ಮಂತ್ರದಲ್ಲಿ ಅನೇಕ ದೇವತೆಗಳಿದ್ದು ಅವುಗಳನ್ನು ಸಮಷ್ಟಿಯಾಗಿ (ಒಟ್ಟಿಗೆ) ಸ್ತುತಿಸದೆ ಪ್ರತಿಯೊಂದು ದೇವತೆಯನ್ನು ಪ್ರತ್ಯೇಕ ಪ್ರತ್ಯೇಕವಾಗಿ ಸ್ತುತಿಸಿದ್ದಲ್ಲಿ ಆಗ ಒಂದು ದೇವತೆಯನ್ನೇ ಸ್ತುತಿಸಿರುವಂತೆ (ವಿಭಕ್ತಸ್ತುತಿ) ಭಾವಿಸಬೇಕು. ಆಶೀರ್ವಾದವನ್ನೂ, ದೇವತೆಗಳ ಅಥವಾ ಯಜ್ಞಗಳ ಕರ್ಮಕ್ರಮವನ್ನೂ ಒಳಗೊಂಡಿರುವ ಮಂತ್ರಗಳಲ್ಲಿ ಅನೇಕ ದೇವತೆಗಳಿರುವರು ಮತ್ತು ಇಬ್ಬರು ದೇವತೆಗಳನ್ನೂ ಒಟ್ಟಿಗೆ (ದ್ವಿವಚನದಲ್ಲಿ) ಸ್ತುತಿಸಿರುವ ಸಂದರ್ಭದಲ್ಲಿಯೂ, ಅಲ್ಲಿಯೂ ಅನೇಕ ದೇವತೆಗಳನ್ನು ಸ್ತುತಿಸಲಾಗಿದೆಯೆಂದು ಭಾವಿಸಬೇಕು.

### ಋಭುಗಳ ಮತ್ತು ತ್ವಷ್ಟೃವಿನ ವೃತ್ತಾಂತ

83. ಪೂರ್ವಕಾಲದಲ್ಲಿ ಆಂಗಿರಸಪುತ್ರನಾದ (ಅಥವಾ ಗೋತ್ರದವನಾದ) ಸುಧನ್ವನೆಂಬುವನಿಗೆ ಋಭು ವಿಭು, ಮತ್ತು ವಾಜ ಎಂಬ ಹೆಸರಿನ ಮೂವರು ಪುತ್ರರಿದ್ದರು. ಅವರು ತ್ವಷ್ಟೃವಿನ ಶಿಷ್ಯರಾಗಿದ್ದರು.

---

81. A divinity not associated in praise (ಅಸಂಸ್ತುತ) is (to be regarded) as though associated in praise if indicated anywhere.

Where in a formula addressed to two divinities a deity is spoken of in the singular (ಏಕವತ್),

82. One should know that to contain separate praise (ವಿಭಕ್ತಿಸ್ತುತಿ): also that in which, when there are many (divinities), a deity is (spoken of) singly (ಅಬಹುವತ್).

In benedictions (ಆಶೀರ್ವಾದೇಷು), in (enumerations of) technical names (ಸಂಜ್ಞಾಸು), in leading ritual forms (ಕರ್ಮಸಂಸ್ಥಾಸು) many deities are in the plural (ಬಹುವತ್) where two membered (deities : ದ್ವಿಪದೇ) are associated in praise.

### 17. Story of the Rubhus and Tvastr.

83. In former times there were three sons of Sudhanvan, son of Angiras, (viz) Rbhu, Vibhavan, and Vaja; and they became pupils of Tvastr.

ಶಿಕ್ಷಯಾಮಾಸ ತಾಂಸ್ತ್ವಷ್ಟಾ ತ್ವಾಷ್ಟ್ರಂ ಯತ್ಕರ್ಮ ಕಿಂಚನ ।
ಪರಿನಿಷ್ಠಿತಕರ್ಮಾಣೋ ವಿಶ್ವೇ ದೇವಾ ಉಪಾಹ್ವಯನ್ ॥ ೮೪ ॥
ವಿಶ್ವೇಷಾಂ ತೇ ತತಶ್ಚಕ್ರುರ್ವಾಹನಾನ್ಯಾಯುಧಾನಿ ತು ।
ಧೇನುಂ ಸಬರ್ದುಘಾಂ ಚಕ್ರುರಮೃತಂ ಸಬರುಚ್ಯತೇ ॥ ೮೫ ॥
ಬೃಹಸ್ಪತೇರಥಾಶ್ವಿಭ್ಯಾಂ ರಥಂ ದಿವ್ಯಂ ತ್ರಿವಂಧುರಂ ।
ಇಂದ್ರಾಯ ಚ ಹರೀ ದೇವಪ್ರಹಿತೇನಾಗ್ನಿನಾಪಿ ಯತ್ ॥ ೮೬ ॥
ಏಕಂ ಚಮಸಮಿತ್ಯುಕ್ತೇ ಜ್ಯೇಷ್ಠ ಆಹೇತ್ಯಥೋ ದಿವಿ ।

84. ಸರ್ವಕರ್ಮಕುಶಲನಾದ ತ್ವಷ್ಟೃವು ತನ್ನ ಶಿಷ್ಯರಾದ ಆ ಋಭು ಮೊದಲಾದವರಿಗೆ ಕುಶಲವಿದ್ಯೆ (ಶಿಲ್ಪ ಮೊದಲಾದ ವಿದ್ಯೆ) ಗಳನ್ನು ಹೇಳಿಕೊಟ್ಟನು. ಆಗ ಸಮಸ್ತ ದೇವತೆಗಳೂ ಕುಶಲಕರ್ಮಪ್ರವೀಣರಾದ ಆ ಋಭುಗಳನ್ನು ಕರೆದು ತಮ್ಮ ವಿದ್ಯಾಪ್ರದರ್ಶನಮಾಡಬೇಕೆಂದು ಕೋರಿದರು.

85. ಆಗ ಆ ಋಭುಗಳು ಸಮಸ್ತ ದೇವತೆಗಳಿಗೂ ಅವರವರಿಗೆ ತಕ್ಕಂತೆ ವಾಹನಗಳನ್ನೂ, ಆಯುಧಗಳನ್ನೂ ಮಾಡಿಕೊಟ್ಟರು. ಅಮೃತವನ್ನು ಕರೆಯುವ ಧೇನುವನ್ನು ನಿರ್ಮಿಸಿದರು. (**ತಕ್ಷನ್ ಧೇನುಂ ಸಬರ್ದುಘಾಂ** ೧-೨೦-೩) ಇಲ್ಲಿ **ಸಬಃ** ಎಂದರೆ ಅಮೃತವು.

86. ಬೃಹಸ್ಪತಿಗೆ ಒಂದು ದಿವ್ಯವಾದ ರಥವನ್ನು ಮಾಡಿಕೊಟ್ಟರು. ಅಶ್ವಿನೀದೇವತೆಗಳಿಗೆ ಮೂರು ಮೂಕಿ ಮರಗಳಿಂದ (ತ್ರಿವಂಧುರಂ) ಸುಸಜ್ಜಿತವಾದ ಒಂದು ಉತ್ತಮವಾದ ರಥವನ್ನು ನಿರ್ಮಿಸಿಕೊಟ್ಟರು. (**ತಕ್ಷನ್ನಾಸತ್ಯಾಭ್ಯಾಂ ಪರಿಜ್ಮಾನಂ ಸುಖಂ ರಥಂ ೧-೨೦-೩**) ಇಂದ್ರನಿಗೆ ಎರಡು ಹರಿತವರ್ಣದ ಕುದುರೆಗಳನ್ನು ನಿರ್ಮಿಸಿಕೊಟ್ಟರು. (**ಯ ಇಂದ್ರಾಯ ವಚೋಯುಜಾ ತತಕ್ಷುರ್ಮನಸಾ ಹರೀ ೧-೨೦-೨**) ದೇವತೆಗಳು ಅಗ್ನಿಯ ಮೂಲಕ ಹೇಳಿಕಳುಹಿಸಿದಂತೆ,

87. ಒಂದು ಚಮಸಪಾತ್ರೆಯನ್ನು ಮಾಡಲು ಹೇಳಿಕಳುಹಿಸಿದಾಗ ಒಂದು ಚಮಸಪಾತ್ರೆಯನ್ನು ಮಾಡಬೇಕೆಂಬ ಉದ್ದೇಶವಿದ್ದಿತು. ಆದರೆ ಆ ಋಭುಗಳಲ್ಲಿ ಜ್ಯೇಷ್ಠನಾದ ಋಭುವು ಎರಡನ್ನು ಮಾಡಬೇಕೆಂದೂ, ಎರಡನೆಯವನು ಮೂರನ್ನು ಮಾಡಬೇಕೆಂತಲೂ, ಕೊನೆಯವನು ನಾಲ್ಕನ್ನು ಮಾಡಬೇಕೆಂತಲೂ ಅವರಲ್ಲಿ ವಿವಾದವುಂಟಾಗಿ

84. Tvastr instructed them in every art of which he was a master (ತ್ವಾಷ್ಟ್ರ). The All-gods, who were thoroughly versed in the arts (ಪರಿನಿಷ್ಠಿತ ಕರ್ಮಾಣಃ), challenged them.

85. They then made for all (the gods) vehicles and weapons. they made the nectar-yielding cow ; the draught of immortality (ಅಮೃತ) is called nectar (ಸಬರ್)—a chariot,

86. to Brhaspati; then for the Asvins a divine car with three seats, and for Indra, his two bay steeds; also what (they did) through Agni who had been dispatched (to them) by the gods.

87. When he had said 'One cup, make into four': (ಏಕಂಚಮಸಂ) RV. i. 161. 2) and when they had conversed in heaven (with the stanza),

ಉಕ್ತ್ವಾ ತತಶ್ಚಕ್ರುಶ್ಚಮಸಾನ್ಯಥೋಕ್ತಂ ತೇನ ಹರ್ಷಿತಾಃ || ೮೭ ||
ತ್ವಷ್ಟಾ ಚ ಸವಿತಾ ಚೈವ ದೇವದೇವಃ ಪ್ರಜಾಪತಿಃ |
ಸರ್ವಾನ್ದೇವಾನ್ಸಮಾಮಂತ್ರ್ಯ ಅಮೃತತ್ವಂ ದದುಶ್ಚ ತೇ || ೮೮ ||
ತೇಷಾಮಾದ್ಯಾನ್ತ್ಯಯೋರ್ನಾಮ್ನಾ ದೃಶ್ಯತೇ ಬಹುವತ್ಸ್ತವಃ |
ತೃತೀಯಸವನೇ ತೇಷಾಂ ತೈಸ್ತು ಭಾಗಃ ಪ್ರಕಲ್ಪಿತಃ || ೮೯ ||
ಅಪಿಬತ್ಸೋಮಮಿಂದ್ರಶ್ಚ ತೈಸ್ತತ್ರ ಸವನೇ ಸಹ |
ತೇಷಾಂ ಸ್ತುತಿರಿದಂ ಸೂಕ್ತಂ ತ್ವಯಮಿತ್ಯಷ್ಟಕಂ ಪರಂ || ೯೦ ||

ಕೊನೆಗೆ ತಮ್ಮ ಗುರುವಾದ ತ್ವಷ್ಟೃವಿನ ಮಾತಿನಂತೆ ನಾಲ್ಕು ಚಮಸಪಾತ್ರೆಗಳನ್ನು ಮಾಡಿಕೊಟ್ಟರು. ಅದರಿಂದ ದೇವತೆಗಳು ಹರ್ಷಿತರಾದರು (**ಜ್ಯೇಷ್ಠ ಆಹ ಚಮಸಾ ದ್ವಾ ಕರೇತಿ ಕನೀಯಾನ್ ತ್ರೀನ್ ಕೃಣವಾಮೇತ್ಯಾಹ | ಕನಿಷ್ಠ ಆಹ ಚತುರಸ್ಕರೇತಿ ತ್ವಷ್ಟ ಋಭವಸ್ತತ್ಪನಯದ್ವಚೋ ವಃ** | (೪-೩೩-೫).

88. ತ್ವಷ್ಟೃವೂ, ಸವಿತೃದೇವನೂ, ದೇವದೇವನಾದ ಪ್ರಜಾಪತಿಯೂ ಸಮಸ್ತ ದೇವತೆಗಳನ್ನು ಕರೆದು (ಅವರೆದುರಿಗೆ) ಋಭುಗಳಿಗೆ ಅಮೃತತ್ವ ಎಂದರೆ ಮರಣರಾಹಿತ್ಯವನ್ನು ಎಂದರೆ ದೇವತ್ವವನ್ನು ಅನುಗ್ರಹಿಸಿಕೊಟ್ಟನು.

89. ಋಗ್ವೇದದಲ್ಲಿ ಋಭುಗಳನ್ನು ಸ್ತುತಿಸುವಾಗ ಸೂಕ್ತಗಳಲ್ಲಿ ಋಭು, ವಿಭು, ವಾಜ ಎಂಬ ಮೂವರಲ್ಲಿ ಮೊದಲನೆಯವನ ಹೆಸರಿನಿಂದಲೂ (ಋಭವಃ) ಅಥವಾ ಕೊನೆಯವನ ಹೆಸರಿನಿಂದಲೂ (ವಾಜಿನಃ) **ಈ** ಋಭುಗಳು ನಿರ್ದೇಶಿಸಲ್ಪಡುವರು. ಈ ಋಭುಗಳಿಗೆ ತೃತೀಯಸವನದಲ್ಲಿ ದೇವತೆಗಳೊಡನೆ ಸೋಮಪಾನವು (ಅಥವಾ ಹವಿರ್ಭಾಗವು) ಕಲ್ಪಿಸಲ್ಪಟ್ಟಿರುವುದು.

**೨೦-೨೨ ನೇ ಸೂಕ್ತಗಳ ದೇವತೆಗಳು**

90. ಈ ಋಭುಗಳ ಜತೆಯಲ್ಲಿ ಇಂದ್ರನು ಸವನಕಾಲದಲ್ಲಿ ಸೋಮರಸವನ್ನು ಪಾನಮಾಡಿದನು. ಪ್ರಥಮ ಮಂಡಲದ **ಅಯಂ ದೇವಾಯ ಜನ್ಮನೇ** (೧ ನೇ ಮಂಡಲದ ೨೦ ನೇ ಸೂಕ್ತ) ಎಂಬ ಎಂಟು ಋಕ್ಕಿನ ಸೂಕ್ತದಲ್ಲಿ ಈ ಋಭುಗಳ ಸ್ತುತಿ ಇರುವುದು.

---

'The eldest said' (iv. 33. 5), they fashioned the (four) cups as had been said, gladdened by him.

### 18. Deities of RV. i. 20-22.

88. And Tvastr, and Savitr, (and) the god of gods, Prajapati summoning all the gods, bestowed immortality (on the Ruhus).

89. There appears (in the RV.) praise of them in the plural (ಬಹುವತ್) with the name of the first and the last.

In the third pressing (ಸವನ) a share is prescribed for them (ತೇಷಾಂ) with those (All-gods).

90. And Indra drank Soma with them (the Ruhus) at that pressing. Now this hymn (beginning) 'This' (ಅಯಂ, i. 20), which follows and consists of eight stanzas, is their praise.

ಇಹೇಂದ್ರಾಗ್ನೀ ಸ್ತುತೌ ದೇವೌ ತೃತೀಯಸ್ಯಾದಿರಶ್ವಿನೌ |
ಹಿರಣ್ಯಪಾಣಿಂ ಸಾವಿತ್ರ್ಯಶ್ಚತಸ್ರಶ್ಚಾಪ್ಯಥೋತ್ತರಾಃ || ೯೧ ||

ಏಕಾಗ್ನೇರ್ದ್ವೇ ತು ದೇವೀನಾಂ ದ್ವಾದಶ್ಯಾಂ ದೇವಪತ್ನಯಃ |
ಇಂದ್ರಾಣೀ ವರುಣಾನೀ ಚ ಅಗ್ನಾಯೀ ಚ ಪೃಥಕ್ ಸ್ತುತಾಃ || ೯೨ ||

ದ್ಯಾವಾಪೃಥಿವ್ಯಾ ದ್ವೇ ಚ ಸ್ಯಾತ್ಸ್ಯೋನೇತ್ಯೃಕ್ ಪಾರ್ಥಿವೀ ಸ್ಮೃತಾ |
ದೇವಾನಾಂ ವಾತ ಇತ್ಯೇಷಾ ಸೂಕ್ತಶೇಷಸ್ತು ವೈಷ್ಣವಃ || ೯೩ ||

ವಾಯೋಸ್ತೀವ್ರೇಂದ್ರವಾಯುಭ್ಯಾಂ ದ್ವ್ಯೃಚೋ ದ್ವಾಭ್ಯಾಂ ತತಃ ಪರಂ |

91. ಇಹೇಂದ್ರಾಗ್ನೀ ಎಂಬ ೨೧ ನೇ ಸೂಕ್ತದಲ್ಲಿ ಇಂದ್ರಾಗ್ನಿಗಳು ಸ್ತುತರಾಗಿರುವರು. ಮುಂದಿನ ಸೂಕ್ತವಾದ **ಪ್ರಾತರ್ಯುಜಾ** ಎಂಬ ೨೨ ನೇ ಸೂಕ್ತದ ಮೊದಲಿನ ನಾಲ್ಕು ಋಕ್ಕುಗಳಲ್ಲಿ ಅಶ್ವಿನೀದೇವತೆಗಳನ್ನೂ ಅದರ ಮುಂದಿನ ನಾಲ್ಕು ಋಕ್ಕುಗಳಲ್ಲಿ (೫-೮) ಹಿರಣ್ಯಪಾಣಿ ಎಂಬ ಅಭಿಧಾನದಿಂದ ಸವಿತೃದೇವತೆಯನ್ನೂ,

92. ಅದರ ಮುಂದಿನ ಎಂದರೆ ೯ ನೇ ಋಕ್ಕಿನಲ್ಲಿ ಅಗ್ನಿಯನ್ನೂ ಅದರ ಮುಂದಿನ (೧೦-೧೧) ಎರಡು ಋಕ್ಕುಗಳಲ್ಲಿ ದೇವಪತ್ನಿಯರನ್ನೂ ೧೨ ನೇ ಋಕ್ಕಿನಲ್ಲಿ ಇಂದ್ರಾಣೀ, ವರುಣಾನೀ, ಅಗ್ನಾಯೀ ಎಂಬ ಇಂದ್ರನ, ವರುಣನ, ಅಗ್ನಿಯ ಪತ್ನಿಯರನ್ನೂ ಅವರ ಹೆಸರುಗಳಿಂದ ಬೇರೆ ಬೇರೆಯಾಗಿ ಸ್ತುತಿಸಲಾಗಿದೆ.

93. ಅದರ ಮುಂದಿನ ಎರಡು ಋಕ್ಕುಗಳಲ್ಲಿ (೧೩-೧೪) ದ್ಯಾವಾಪೃಥಿವಿಗಳನ್ನೂ, ಅದರ ಮುಂದಿನ (೧೫) ಒಂದು ಋಕ್ಕಿನಲ್ಲಿ ಪ್ರತ್ಯೇಕವಾಗಿ ಪೃಥಿವೀದೇವತೆಯನ್ನೂ ಮಾತ್ರ ಸ್ತುತಿಸಲಾಗಿದೆ. ಅದರ ಮುಂದೆ ಸೂಕ್ತದ ಕೊನೆಯವರೆಗೂ ಇರುವ (೬) ಋಕ್ಕುಗಳಲ್ಲಿ ವಿಷ್ಣುವನ್ನು ಸ್ತುತಿಸಲಾಗಿದೆ.

**೨೩ ನೇ ಸೂಕ್ತದ ದೇವತೆಗಳು**

94. **ತೀವ್ರಾಃ ಸೋಮಾಸಃ** ಎಂಬ ೨೩ ನೆಯ ಸೂಕ್ತದಲ್ಲಿ ಮೊದಲನೆಯ ಋಕ್ಕಿನಲ್ಲಿ ವಾಯುವನ್ನೂ ಮುಂದಿನ ಎರಡು ಋಕ್ಕುಗಳಲ್ಲಿ (೨-೩) ಇಂದ್ರವಾಯುಗಳನ್ನೂ ಅಲ್ಲಿಂದ ಮುಂದಕ್ಕೆ ಮೂರು ಋಕ್ಕುಗಳಲ್ಲಿ (೪-೬)

---

91. (In) 'Here' (ಇಹ : i. 21) the two gods Indra-Agni are praised. The beginning of the third (hymn praises) the Asvins. and then the next (stanzas) 'The golden-handed' (ಹಿರಣ್ಯಪಾಣಿಂ : i. 22. 5-8) are addressed to Savitr.

92. One (9) is (addressed) to Agni, but two (10. 11) to the Goddesses ; in the twelfth (stanza) the wives of the gods, Indrani and Varunani and Agnayi, are praised seperately.

**19. RV. i. 22 (continued). RV i. 23 :** Pusan Aghrni.

93. And two (stanzas, 13, 14, praise) Heaven and Earth. the stanza 'Soft' (ಸ್ಯೋನಾ : 15) should be held to be addressed to Earth. The (stanza) 'From thence' (ಅತೋ : 16) is (addressed) optionally (ವಾ) to the gods ; the rest of the hymn (17-21) is addressed to Visnu.

94. To Vayu (belongs) 'Mighty' (ತೀವ್ರಾಃ i. 23. 1) : for the two,

ತೃಚೋ ಮಿತ್ರಾವರುಣಯೋಸ್ತಥೇಂದ್ರಾಯ ಮರುತ್ವತೇ || ೯೪ ||
ತೃಚೋ ವಿಶ್ವೇಷಾಂ ದೇವಾನಾಂ ಪೂಷ್ಣ ಆಘೃಣಯೇ ತೃಚಃ |
ಆಸಕ್ತೋ ಹಿ ಘೃಣಿಸ್ತಸ್ಯ ದಧ್ನಃ ಪೂರ್ಣೋ ದೃತೀ ರಥೇ || ೯೫ ||
ಆಘೃಣಿಸ್ತತ್ಸ್ತುತಃ ಪೂಷಾ ಕೀರಿಭೀ ರಿಭ್ಯತೇ ತತಃ |
ಯಥಾ ಹಿ ಮಧುನಃ ಪೂರ್ಣೋ ದೃತಿರರ್ಥ್ಯೇತಿ ಚಾಶ್ವಿನೌ || ೯೬ ||
ಆ ವರ್ತನಿಂ ಮಧುನೇತಿ ದೃತಿರೇವ ಚ ದೃಶ್ಯತೇ |
ಅರ್ಧಾಷ್ಟಮಾ ಅಪಾಂ ಜ್ಞೇಯಾ ಅಧ್ಯರ್ಧಾಂತ್ಯಾಗ್ನಿದೇವತಾ || ೯೭ ||

ಮಿತ್ರಾವರುಣರನ್ನೂ ಆದರ ಮುಂದಿನ ತೃಚದಲ್ಲಿ (೭-೯ ಎಂಬ ಮೂರು ಋಕ್ಕುಗಳಲ್ಲಿ) ಮರುತ್ತುಗಳಿಂದ ಸಹಿತನಾದ ಇಂದ್ರನನ್ನೂ (ಇಂದ್ರೋ ಮರುತ್ವಾನ್).

95. ಮುಂದಿನ ತೃಚದಲ್ಲಿ (೧೦-೧೨) ವಿಶ್ವೇದೇವತೆಗಳನ್ನೂ ಆದರ ಮುಂದಿನ ತೃಚದಲ್ಲಿ (೧೩-೧೫) ಆಘೃಣಿಪೂಷನೆಂಬ ದೇವತೆಯನ್ನೂ ಸ್ತುತಿಸಲಾಗಿದೆ. ಈ ಪೂಷನ್ ಎಂಬ ದೇವತೆಯ ರಥಕ್ಕೆ ಮೊಸರಿನಿಂದ ತುಂಬಿದ ಒಂದು ಚರ್ಮದ ಚೀಲವನ್ನು (ಘೃಣಿ) ಕಟ್ಟಿರುವುದರಿಂದ ಈ ದೇವತೆಗೆ ಆಘೃಣಿ ಎಂಬ ಹೆಸರು ಬಂದಿರುವುದು.

96-97. ಯಾವರೀತಿ ಮಧುವಿನಿಂದ ಪೂರ್ಣರಾದ ಅಶ್ವಿನೀದೇವತೆಗಳು ಮಧುಶಬ್ದದಿಂದ ಸ್ತುತರಾಗುವರೋ (**ಅಶ್ವಿನಾ ಪಿಬತಂ ಮಧು ದೀದ್ಯಗ್ನೀ ಶುಚಿವ್ರತಾ** ೧-೧೫-೧೧), **ಆ ವರ್ತನಿಂ ಮಧುನಾ ಜಿನ್ವತು** (೪-೪೫-೩ ಇತ್ಯಾದಿ) ಆದರಂತೆ ಈ ಪೂಷದೇವನೂ ಆಘೃಣಿಶಬ್ದದಿಂದ ಸ್ತುತನಾಗಿ ಪ್ರಶಂಸಿಸಲ್ಪಡುವನು. ಅದರಿಂದ ಮುಂದಿನ ಏಳೂವರೆ ಋಕ್ಕುಗಳಲ್ಲಿ (೧೬-೨೨, ೨೩ರಲ್ಲಿ ಪೂರ್ವಾರ್ಧ) ಆಪಃ ಎಂಬ ಅಬ್ದೇವತೆಗಳೂ ಆದರ ಮುಂದಿನ ಒಂದೂವರೆ ಋಕ್ಕುಗಳಲ್ಲಿ (೨೩ ರಲ್ಲಿ ಉತ್ತರಾರ್ಧ, ೨೪ ನೇ ಋಕ್ಕು) ಅಗ್ನಿಯೂ ಸ್ತುತಿಸಲ್ಪಟ್ಟಿರುವವು.

---

Indra-Vayu, there is a couplet (2,3) : after that there is a triplet to Mitra-Varuna (4-6), also (one) for Indra accompanied by Maruts.

95. (then) a triplet for the All-gods (10-12) and a triplet for Pusan Aghrni (13-15).

(He is thus named) for there is attached (ಆಸಕ್ತ) to his car a ghrni : a skin full of curds.

96. Therefore (ತತ್) he is praised as ಆಘೃಣಿ hence--he is lauded (ರಿಭ್ಯತೇ) by singers (ಕೀರಿ) For as their skin ದೃತಿ is fnll of mead, the suppliant (ಅರ್ಥಿನ್) also approaches the Asvins (in the same way).

97. The skin itself appears in (the passage) ‘ Refresh the track with mead (ಆ ವರ್ತನಿಂ ಮಧುನಾ iv. 45. 3).

Seven and a half (stanzas) are to be known as (belonging) to the Waters (16-23); the last in addition to the (preceding) half (23. 24) has Agni as its deity.

ಕಸ್ಯ ನೂನಂ ತು ಕಾಯ್ಯಾದ್ಯಾ ಆಗ್ನೇಯ್ಯೃಕ್ ಸವಿತುಸ್ತ್ರೃಚಃ ।
ಭಗಭಕ್ತಸ್ಯ ಭಾಗೀ ವಾ ಪರಂ ಯಚ್ಚಿಚ್ಚ ವಾರುಣಂ ॥ ೯೮ ॥
ವಸಿಷ್ವಾ ಹೀತಿ ಚಾಗ್ನೇಯೇ ಋಗಗ್ನೇರ್ಮಧ್ಯಮಸ್ಯ ತು ।
ಜರಾಬೋಧೇತಿ ವಿಜ್ಞೇಯಾ ವೈಶ್ವದೇವ್ಯುತ್ತಮಾ ನಮಃ ॥ ೯೯ ॥
ಪರಾಶ್ಚತಸ್ರೋ ಯತ್ರೇತಿ ಇಂದ್ರೋಲೂಖಲಯೋಃ ಸ್ತುತಿಃ ।
ಮನ್ಯೇತೇ ಯಾಸ್ಕಕಾತ್ಥಕ್ಯಾವಿಂದ್ರಸ್ಯೇತಿ ತು ಭಾಗುರಿಃ ॥ ೧೦೦ ॥

## ೨೪-೩೦ ನೇ ಸೂಕ್ತಗಳ ದೇವತೆಗಳು

98. **ಕಸ್ಯ ನೂನಂ** ಎಂಬ ೨೪ ನೇ ಸೂಕ್ತದಲ್ಲಿ ಮೊದಲನೆಯ ಋಕ್ಕು (ಕಃ ಅಥವಾ ಪ್ರಜಾಪತಿಃ) ಕಃ ಎಂಬಭಿಧಾನದ ಪ್ರಜಾಪತಿಯನ್ನೂ ೨ ನೇ ಋಕ್ಕು ಅಗ್ನಿಯನ್ನೂ ಅದರ ಮುಂದಿನ ಮೂರು ಋಕ್ಕುಗಳು (೩-೫) ಸವಿತೃದೇವತೆಯನ್ನೂ ಅದರ ಮುಂದಿನ ಋಕ್ಕು (೬) ಭಗದೇವತೆಯನ್ನೂ ಅಥವಾ ವರುಣನನ್ನೂ ಅಲ್ಲಿಂದ ಮುಂದಿನ ಕೊನೆಯವರೆಗಿನ ಋಕ್ಕುಗಳೂ (೬-೧೫) **ಯಚ್ಚಿದ್ಧಿ** ಎಂಬ ೨೫ ನೇ ಸೂಕ್ತವೂ ವರುಣನನ್ನೂ ಸ್ತುತಿಸುವವು.

99. **ವಸಿಷ್ವಾ ಹಿ** ಎಂಬ ೨೬ ನೇ ಸೂಕ್ತವೂ, **ಅಶ್ವಂ ನ ತ್ವಾ** ಎಂಬ ೨೭ ನೇ ಸೂಕ್ತವೂ, ಅಗ್ನಿಯನ್ನು ಸ್ತುತಿಸುವವು. ಆದರೆ **ಜರಾಬೋಧ** (೨೭ ನೇ ಸೂಕ್ತದಲ್ಲಿ ೧೦ ನೇ ಋಕ್ಕು) ಎಂಬ ಋಕ್ಕಿನಲ್ಲಿ ಮಧ್ಯಮಾಗ್ನಿಯನ್ನು ಸ್ತುತಿಸಲಾಗಿರುವುದೆಂದು ತಿಳಿಯಬೇಕು. ೨೭ ನೇ ಸೂಕ್ತದ ಕೊನೆಯ ಋಕ್ಕಿನಲ್ಲಿ (೧೩ ನೇ ಋಕ್ಕು) ಎಲ್ಲಾ ದೇವತೆಗಳನ್ನೂ ಸ್ತುತಿಸಲಾಗಿರುವುದು.

100. **ಯತ್ರ ಗ್ರಾವಾ** ಎಂಬ ೨೮ನೆಯ ಸೂಕ್ತದಲ್ಲಿ ಮೊದಲಿನ ನಾಲ್ಕು ಋಕ್ಕುಗಳಲ್ಲಿ ಇಂದ್ರನ (೧-೪) ಮತ್ತು ಉಲೂಖಲಗಳ (ಒರಳುಕಲ್ಲುಗಳ) ಸ್ತುತಿ ಇರುವುದೆಂದು ಯಾಸ್ಕ ಮತ್ತು ಕಾತ್ಥಕ್ಯ ಎಂಬ ಆಚಾರ್ಯರುಗಳ ಮತವಿರುವುದು. ಆದರೆ ಈ ಋಕ್ಕುಗಳಿಗೆ ಇಂದ್ರನೊಬ್ಬನೇ (ಇಂದ್ರನು ಮಾತ್ರ) ದೇವತೆಯೆಂದು ಭಾಗುರಿ ಎಂಬುವರ ಮತವು.

## 20. Deities of RV. i. 24-30.

98. But (in) of whom now (ಕಸ್ಯ ನೂನಂ i. 24) the first (stanza) is addressed to Ka (1) there is (then) a stanza addressed to Agni (2), a triplet (next) to Saivtr (3-5), Bestowed by the gods (ಭಗಭಕ್ತಸ್ಯ), being optionally (ವಾ) addressed to Bhaga.

What follows (6-15) as well as (the next hymn), ' Whatever ' (ಯಚ್ಚಿತ್ i. 25), is addressed to Varuna.

99. ' Do you put on ' (ವಸಿಷ್ವಾ i. 26) are two (hymns) addressed to Agni (26, 27); but the stanza 'you that know' (ಜರಾಬೋಧ i. 27-10) is to be recognised as (belonging) to the Middle Agni; the last (stanza) ' Obeisance ' (ನಮಃ i. 27. 13) is addressed to the All-gods.

100. The following four (stanzas), ' Where ' (ಯತ್ರ i. 28. 1-4) are (in) praise of Indra and the Mortar, (so) think Yaska and Katthakya, but Bhaguri (thinks) of Indra (alone).

ಯಚ್ಚಿದ್ಧ್ಯುಲೂಖಲಸ್ಯ ದ್ವೇ ದ್ವೇ ಪರೇ ಮುಸಲಸ್ಯ ತು ।
ಚರ್ಮಾಧಿಷವಣೀಯಂ ವಾ ಸೋಮಂ ವಾಂತ್ಯಾ ಪ್ರಶಂಸತಿ ॥ ೧೦೧ ॥
ಐಂದ್ರಂ ಯಚ್ಚಿದ್ಧಿ ಸತ್ಯೇತಿ ಉತ್ತರಂ ಚಾಶ್ವಿನಾತ್ತೃಚಾತ್ ।
ಅಶ್ವಿನಾದುತ್ತರಃ ಕಸ್ತ ಉಷಸ್ಯಸ್ತ್ವೃಚ ಉತ್ತಮಃ ॥ ೧೦೨ ॥
ಸ್ತೂಯಮಾನಃ ಶಶ್ವದಿತಿ ಪ್ರೀತಸ್ತು ಮನಸಾ ದದೌ ।
ಶುನಃಶೇಪಾಯ ದಿವ್ಯಂ ತು ರಥಂ ಸರ್ವಂ ಹಿರಣ್ಮಯಂ ॥ ೧೦೩ ॥
ಆಗ್ನೇಯಂ ಯತ್ತ್ವಮೈಂದ್ರೇ ಚ ತ್ರಿಶ್ಚಿದಿತ್ಯಾಶ್ವಿನಂ ತತಃ ।

101. ಇದೇ ಸೂಕ್ತದ (೨೮ ನೇ ಸೂಕ್ತದ) ೫, ೬ ನೇ ಋಕ್ಕುಗಳಲ್ಲಿ ಉಲೂಖಲವೂ(ಒರಳು)೭, ೮ ನೇ ಋಕ್ಕುಗಳಲ್ಲಿ ಮುಸಲವೂ (ಒನಕೆ) ಕೊನೆಯದಾದ ೯ನೆಯ ಋಕ್ಕಿನಲ್ಲಿ ಸೋಮ ಅಥವಾ ಸೋಮರಸವನ್ನು ತುಂಬುವ ಚರ್ಮದ ಚೀಲವೂ ಪ್ರಶಂಸಿಸಲ್ಪಟ್ಟಿರುವುದು.

102. **ಯಚ್ಚಿದ್ಧಿ ಸತ್ಯ** ಎಂಬ ೨೯ನೇ ಸೂಕ್ತಕ್ಕೂ ಅದರ ಮುಂದಿನ **ಆ ವ ಇಂದ್ರಂ** ಎಂಬ ೩೦ ನೆಯ ಸೂಕ್ತಕ್ಕೂ ಇಂದ್ರನು ದೇವತೆಯು ; ಆದರೆ ೩೦ನೇ ಸೂಕ್ತದ ೧೭-೧೯ನೆಯ ಋಕ್ಕುಗಳಲ್ಲಿ ಅಶ್ವಿನೀದೇವತೆಗಳೂ ಮುಂದಿನ ಮೂರು ಋಕ್ಕುಗಳಲ್ಲಿ (೨೦-೨೨) ಉಷೋದೇವತೆಯೂ ಸ್ತುತಿಸಲ್ಪಟ್ಟಿರುವರು.

103. ೩೦ನೇ ಸೂಕ್ತದ ೧೬ನೇ ಋಕ್ಕಾದ **ಶಶ್ವದಿಂದ್ರಃ** ಎಂಬ ಋಕ್ಕಿನಿಂದ ಶುನಃಶೇಪನಿಂದ ಸ್ತುತಿಸಲ್ಪಟ್ಟ ಇಂದ್ರನು ಸಂತುಷ್ಟನಾಗಿ ಆ ಶುನಃಶೇಪನಿಗೆ ಚಿನ್ನದಿಂದ ಮಾಡಲ್ಪಟ್ಟ ಒಂದು ದಿವ್ಯವಾದ ರಥವನ್ನು ಕೊಟ್ಟನು.

**೩೧—೪೦ ಸೂಕ್ತಗಳ ದೇವತೆಗಳು**

104. **ತ್ವಮಗ್ನೇ ಪ್ರಥಮಃ** ಎಂಬ ೩೧ನೇ ಸೂಕ್ತದಲ್ಲಿ ಅಗ್ನಿಯನ್ನೂ ಮುಂದಿನ ಎರಡು ಸೂಕ್ತಗಳಲ್ಲಿ (೩೨-೩೩) ಇಂದ್ರನನ್ನೂ ಸ್ತುತಿಸಲಾಗಿರುವುದು. ಮುಂದಿನ **ತ್ರಿಶ್ಚಿನ್ನೋ ಅದ್ಯ** ಎಂಬ ೩೪ನೇ ಸೂಕ್ತದಲ್ಲಿ ಅಶ್ವಿನೀ

---

101. 'If indeed' (ಯಚ್ಚಿದ್ಧಿ i. 28. 5) are two (stanzas in praise) of the Mortar (5. 6), the two following (7. 8) are (in praise) of the Pestle also; the last (stanza) lauds the skin used in pressing (ಅಧಿಷವಣೀಯ) of Soma.

102. 'What though, O True one' (ಯಚ್ಚಿದ್ಧಿ ಸತ್ಯ: i. 29) is addressed to Indra as well as the following (i. 30). After the triplet 'Hither, O Asvins' (ಅಶ್ವಿನಾ : i. 30. 17-19), addressed to the Asvins, the next(ಉತ್ತರ)triplet 'Who of you' (ಕಸ್ತೇ : 20-22) addressed to Dawn, is the last (triplet).

**21. Deities of RV. i. 31-40.**

103. Being praised (with the stanza) 'For ever' (ಶಶ್ವತ್ : i. 30-16), he (Indra) rejoiced in mind gave to Sunahsepha (the seer) a celestial car all made of gold.

104. The (Hymn) which (begins) 'you' (ತ್ವಂ : i. 31) is addressed to Agni; and (then come) two (32-33) addressed to Indra. Then 'Even

ಋತೇಽರ್ಥವಾದಂ ಕರ್ಮ್ಯೈತದಿಂದ್ರಸ್ಯೇತಿ ತು ಶಂಸತಿ ॥ ೧೦೪ ॥
ಪಾದೋಽಗ್ನಯೇ ಹ್ವಯಾಮೀತಿ ಮೈತ್ರಾವರುಣ ಉತ್ತರಃ ।
ತೃತೀಯೋ ರಾತ್ರಿಸಂಸ್ತಾವಃ ಸೂಕ್ತಂ ಸಾವಿತ್ರಮುಚ್ಯತೇ ॥ ೧೦೫ ॥
ಪಂಚೈತಾನಿ ಜಗೌ ದೃಷ್ಟ್ವಾ ಸೂಕ್ತಾನ್ಯಾಂಗಿರಸೋ ಮುನಿಃ ।
ಹಿರಣ್ಯಸ್ತೂಪತಾಂ ಪ್ರಾಪ್ಯ ಸಖ್ಯಂ ಚೇಂದ್ರೇಣ ಶಾಶ್ವತಂ ॥ ೧೦೬ ॥
ಆಗ್ನೇಯಂ ಪ್ರೇತಿ ಮರುತಾಂ ಕ್ರೀಳಂ ತ್ರೀಣಿ ಪರಾಣ್ಯತಃ ।
ಉತ್ತಿಷ್ಠ ಬ್ರಾಹ್ಮಣಸ್ಪತ್ಯಂ ಯಂ ರಕ್ಷಂತಿ ತ್ರಯಸ್ತೃಚಾಃ ॥ ೧೦೭ ॥

ದೇವತೆಗಳನ್ನು ಸ್ತುತಿಸಲಾಗಿದೆ. **ಇಂದ್ರಸ್ಯ ನು** ಎಂಬ ೩೨ ನೇ ಸೂಕ್ತದಲ್ಲಿ ಯಾವ ಸ್ವಪ್ರಯೋಜನದ ಉದ್ದಿಶ್ಯವೂ ಇಲ್ಲದೆ ಇಂದ್ರನ ಸಾಹಸಕಾರ್ಯಗಳನ್ನು ಋಷಿಯು ಸ್ತುತಿಸಿರುವನು.

105. **ಹ್ವಯಾಮ್ಯಗ್ನಿಂ** ಎಂಬ ೩೫ನೆಯ ಸೂಕ್ತದ ಮೊದಲನೆಯ ಋಕ್ಕಿನ ಮೊದಲನೆಯ ಪಾದದಲ್ಲಿ ಅಗ್ನಿಯನ್ನೂ, ಎರಡನೆಯ ಪಾದದಲ್ಲಿ ಮಿತ್ರಾವರುಣರನ್ನೂ ಸ್ತುತಿಸಲಾಗಿದೆ. ಮೂರನೆಯ ಪಾದದಲ್ಲಿ ರಾತ್ರಿದೇವತೆಯ ಸ್ತುತಿ ಇರುವುದು. ಒಟ್ಟು ಈ ಸೂಕ್ತಕ್ಕೆಲ್ಲಾ ಸವಿತೃವೇ ದೇವತೆಯು.

106. ಈ ಸೂಕ್ತದ ಋಷಿಯಾದ ಅಂಗಿರಸನ ಪುತ್ರನು ಈ ಐದು ಸೂಕ್ತಗಳ (೩೧—೩೫ ಸೂಕ್ತಗಳನ್ನು) ದ್ರಷ್ಟೃವಾಗಿ ಅವುಗಳನ್ನು ಗಾನಮಾಡಿ ಹಿರಣ್ಯಸ್ತೂಪವೆಂಬ ಪದವಿಯನ್ನೂ ಇಂದ್ರನೊಡನೆ ಸ್ನೇಹವನ್ನೂ ಸಂಪಾದಿಸಿದನು.

107. **ಪ್ರ ವೋ ಯಹ್ವಂ** ಎಂಬ ಸೂಕ್ತವು (೩೬ನೇ ಸೂಕ್ತ) ಅಗ್ನಿಯನ್ನೂ **ಕ್ರೀಳಂ ವಃ** ಎಂದು ಮೊದಲಾಗುವ ಮುಂದಿನ ಮೂರು ಸೂಕ್ತಗಳು (೩೭-೩೯) ಮರುದ್ದೇವತೆಗಳನ್ನೂ, **ಉತ್ತಿಷ್ಠ** ಎಂಬ (೪೦) ಸೂಕ್ತವು ಬ್ರಹ್ಮಣಸ್ಪತಿಯನ್ನೂ ಪ್ರಶಂಸಿಸುವುವು. ಮುಂದಿನ **ಯಂ ರಕ್ಷಂತಿ** ಎಂಬ ೪೧ನೆಯ ಸೂಕ್ತದಲ್ಲಿ ಮೂರು ತೃಚ ಎಂದರೆ ಒಂಭತ್ತು ಋಕ್ಕುಗಳಿರುವುವು.

---

thrice' (ತ್ರಿಷ್ಚಿತ್ : I. 34) is addressed to the Aswins; Of Indra, (ಇಂದ್ರಸ್ಯ : i. 32) lauds the action (of Indra) without (any) statement of an object (ಅರ್ಥವಾದ).

105. (In) 'I invoke' (ಹ್ವಯಾಮಿ : i. 35) one verse (1) is to Agni, the next (2) is addressed to Mitra-Varuna, the third is (in) praise of Night, (while) the (whole) hymn is stated to be addressed to Savitr.

106. These five hymns (31-35) the sage, the son of Angiras, after he had seen them, sang, on gaining the position of Hiranyastupa and eternal friendship with Indra.

107. (Forth) (ಪ್ರ : i. 36) is addressed to Agni; the three (37-39) following this (beginning) sporting (ಕ್ರೀಳಂ : i. 37) are to the Maruts 'Stand Up' (ಉತ್ತಿಷ್ಠ : i. 40) is addressed to Brahmanaspati. 'Whom they protect' ಯಂ ರಕ್ಷಂತಿ : i. 41) is (composed of) three triplets.

ವರುಣಾರ್ಯಮಮಿತ್ರಾಣಾಂ ಮಧ್ಯ ಆದಿತ್ಯದೈವತಃ |
ಪೌಷ್ಣಂ ಸಂ ಪೂಷನ್ ಷಡ್ರೌದ್ರ್ಯಸ್ತೃತೀಯಾ ನ ತು ಕೇವಲಾ || ೧೦೮ ||
ಮಿತ್ರೇಣ ವರುಣೇನಾತ್ರ ವಿಶ್ವೈರ್ದೇವೈಶ್ಚ ಸಂಸ್ತವಃ |
ಉಕ್ತಮೃಷಿಣಾ ಪೂರ್ವಮಾದೇಶಾದ್ದೈವತಂ ವಿನಾ || ೧೦೯ ||
ಜ್ಞಾತುಂ ನ ಶಕ್ಯತೇ ಲಿಂಗಾತ್ತಥಾಪಿ ಕ್ವಚಿದುಚ್ಯತೇ |
ಆದಿತ್ಯಾ ವಸವೋ ರುದ್ರಾಸ್ತ್ವಮಗ್ನ ಇತಿ ಸಂಸ್ತುತಾಃ || ೧೧೦ ||

**೪೧—೪೭ ನೇ ಸೂಕ್ತಗಳ ದೇವತೆಗಳು**

108. ೪೧ನೇ ಸೂಕ್ತದ ಮೊದಲ ಮತ್ತು ಮೂರನೆಯ ತೃಚಗಳಲ್ಲಿ (೧-೩ ಮತ್ತು ೭-೯) ವರುಣ, ಮಿತ್ರ, ಅರ್ಯಮಾ ಎಂಬ ಮೂವರು ದೇವತೆಗಳೂ ಎರಡನೆಯ ತೃಚದಲ್ಲಿ (೪-೬) ಆದಿತ್ಯರೂ ದೇವತೆಗಳೆಂದು ಸ್ತುತರಾಗಿರುವರು. **ಸಂಪೂಷನ್** ಎಂಬ ೪೨ನೆಯ ಸೂಕ್ತದಲ್ಲಿ ಪೂಷಾ ಎಂಬ ದೇವತೆಯು ಸ್ತುತನಾಗಿರುವನು. ಅನಂತರ **ಕದ್ರುದ್ರಾಯ** ಎಂಬ ಮುಂದಿನ ಸೂಕ್ತದಲ್ಲಿ (೪೩ನೇ ಸೂಕ್ತ) ಇರುವ ೯ ಋಕ್ಕುಗಳಲ್ಲಿ ಮೊದಲ ಆರು ಋಕ್ಕುಗಳಿಗೆ ರುದ್ರನು ದೇವತೆಯು. ಆದರೆ ಮೂರನೆಯ ಋಕ್ಕಿನಲ್ಲಿ ರುದ್ರನ ಜತೆಯಲ್ಲಿ ಮಿತ್ರಾವರುಣರು ಇರುವರು. ಕೊನೆಯ ತೃಚದಲ್ಲಿ (೭-೯) ಸೋಮದೇವನ ಪ್ರಶಂಸೆ ಇದೆ. ಆದುದರಿಂದ ಈ ಸೂಕ್ತದಲ್ಲಿ ಎಲ್ಲಾ ದೇವತೆಗಳನ್ನು (ವಿಶ್ವೈರ್ದೇವೈಃ) ಪ್ರಶಂಸಿಸಲಾಗಿದೆ ಎಂದು ಹೇಳಿರುವುದು.

109-110. ಈ ಸೂಕ್ತದ (೪೩ ನೇ ಸೂಕ್ತದ) ೩ನೇ ಋಕ್ಕಿನಲ್ಲಿ ರುದ್ರನ ಜತೆಯಲ್ಲಿ ಮಿತ್ರ, ವರುಣ, ಅರ್ಯಮಾ, ಮತ್ತು ವಿಶ್ವೇದೇವತೆಗಳೂ ಸ್ತುತರಾಗಿರುವರು. ಒಂದು ಸೂಕ್ತದ ಅಥವಾ ಮಂತ್ರದ ನಿರ್ದಿಷ್ಟದೇವತೆಯು ಯಾರೆಂದು ನಿರ್ಣಯಿಸುವಾಗ ಪ್ರಮಾಣ (ಆದೇಶ)ವೇ ಮುಖ್ಯವೆಂದೂ ಮಂತ್ರದ ಲಕ್ಷಣವು ಮುಖ್ಯವಲ್ಲವೆಂದೂ ಋಷಿಯು ಹಿಂದೆಯೇ ಹೇಳಿರುವನು. ಆದರೆ ಕೆಲವು ಸ್ಥಳಗಳಲ್ಲಿ ದೇವತೆಗಳ ಹೆಸರುಗಳೂ ಹೇಳಲ್ಪಟ್ಟಿರುವುವು. ಹೇಗೆಂದರೆ **ತ್ವಮಗ್ನೇ ವಸೂನ್** ಎಂಬ ೪೫ನೇ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಆದಿತ್ಯರು, ವಸುಗಳು, ರುದ್ರರು ಅಗ್ನಿಯೊಡನೆ ಸ್ತುತಿಸಲ್ಪಟ್ಟಿರುವರು.

## 22. Deities of RV. i. 41-47.

108. (the first, 1-3, and the third, 7-9, being addressed) to Varuna, and Mitra, (while) the middle one (4-6) has the Adityas for its divinities. 'Shorten, O Pusan' (ಸಂಪೂಷನ್: i. 42) is addressed to Pusan. (Then come) six (stanzas) addressed to Rudra (i. 43. 1-6), the third, however, not exclusively.

109. There is here (i. 43-3) praise (of Rudra) along with Mitra, Varuna, and the All-gods.

It has already been said before by the seer that without an authoritative statement (ಆದೇಶ) the divinity,

110. cannot be known from its characteristic mark (ಲಿಂಗ): yet in some places (ಕ್ವಚಿತ್) it (the deity) is stated: (thus) in 'you, O Agni, (ತ್ವಮಗ್ನೇ: i. 45. 1) the Adityas, Vasus, Rudras are praised at the same time (with Agni).

ತಿಸ್ರಃ ಸೌಮ್ಯೋಽಗ್ನ ಆಗ್ನೇಯೀ ಪ್ರಗಾಥೇನಾಶ್ವಿನಾ ಸ್ತುತೌ ।
ಸಹೋಷಸಾ ಲಿಂಗಭಾಜಾ ಅಯಂ ಸೋಮಃ ಸುದಾನವಃ ॥ ೧೧೧ ॥

ಅರ್ಧರ್ಚೋ ದೇವದೇವತ್ಯ ಏಷೋ ಇತ್ಯಾಶ್ವಿನೇ ಪರೇ ।
ಆದಿತ್ಯಂ ಮನ್ಯತೇ ಯಾಸ್ಕೋ ಹವಿಷೇತಿ ಸಹ ಸ್ತುತಂ ॥ ೧೧೨ ॥

ಸಹೌಷಸೇ ತತಃ ಸೌರ್ಯಮುದು ತ್ಯಮಿತಿ ಸಂಸ್ತುತಃ ।

111. ೪೩ನೇ ಸೂಕ್ತದ ಕೊನೆಯ ಮೂರು ಋಕ್ಕುಗಳಲ್ಲಿ (೭-೯) ಸೋಮದೇವತೆಯ ಸ್ತುತಿ ಇರುವುದು. **ಅಗ್ನೇ ವಿವಸ್ವತ್**(೪೪ನೇ ಸೂಕ್ತ) ಎಂಬ ಸೂಕ್ತವೂ, **ತ್ವಮಗ್ನೇ ವಸೂನ್** (೪೫ನೇ ಸೂಕ್ತ)ಎಂಬ ಸೂಕ್ತವೂ ಅಗ್ನಿಯನ್ನು ಸ್ತುತಿಸುವುವು. ೪೪ನೇ ಸೂಕ್ತದಲ್ಲಿ ಪ್ರಗಾಥ ಛಂದಸ್ಸಿನ ೧-೨ ಋಕ್ಕುಗಳಲ್ಲಿ ಅಗ್ನಿಯ ಜತೆಗೆ ಅಶ್ವಿನೀದೇವತೆಗಳನ್ನೂ, ಉಷೋದೇವತೆಯನ್ನೂ ಸ್ತುತಿಸಲಾಗಿದೆ. ಈ ಋಕ್ಕುಗಳಲ್ಲಿ ಉಷೋ ದೇವತೆಯ ಸ್ವರೂಪವಿವರಣೆ ಇದೆ. ೪೫ ನೇ ಸೂಕ್ತದ **ಅಯಂ ಸೋಮಃ ಸುದಾನವಃ** ಎಂಬ ಮೂರನೆಯ ಪಾದದಲ್ಲಿ,

112. ದೇವತೆಗಳನ್ನು ದ್ದೇಶಿಸಿದ ಸ್ತುತಿ ಇರುವುದು. ಇದರ ಮುಂದಿನ **ಏಷೋ ಉಷಾ** ಎಂಬ ೪೬ ನೇ ಸೂಕ್ತಕ್ಕೂ ಅದರ ಮುಂದಿನ **ಅಯಂ ವಾಂ** ಎಂಬ ೪೭ ನೇ ಸೂಕ್ತಕ್ಕೂ ಅಶ್ವಿನೀದೇವತೆಗಳೇ ದೇವತೆಯು. ಆದರೆ ಈ ೪೬ನೇ ಸೂಕ್ತದ **ಹವಿಷಾ ಜಾರಃ** ಎಂಬ ನಾಲ್ಕನೆಯ ಋಕ್ಕಿನಲ್ಲಿ ಅಶ್ವಿನೀದೇವತೆಗಳ ಜತೆಗೆ ಆದಿತ್ಯನೂ ಸ್ತುತನಾಗಿರುವನೆಂದು ಯಾಸ್ಕರು ತಿಳಿಸುವರು.

113. **ಸಹ ವಾಮೇನ** (೪೮ನೇ ಸೂಕ್ತ) ಮತ್ತು **ಉಷೋ ಭದ್ರೇಭಿಃ** (೪೯ ನೇ ಸೂಕ್ತ)ಎರಡು ಸೂಕ್ತಗಳಿಗೂ ಉಷಸ್ಸೇ ದೇವತೆಯು. ಅದರ ಮುಂದಿನ **ಉದು ತ್ಯಂ** ಎಂಬ ೫೦ ನೇ ಸೂಕ್ತೂಲ್ಲಿ ಸೂರ್ಯನನ್ನು ಸ್ತುತಿಸಲಾಗಿದೆ. ಈ ಸೂಕ್ತದ **ಯೇನಾ ಪಾವಕ** ಎಂಬ ಆರನೆಯ ಋಕ್ಕಿನಲ್ಲಿ ವರುಣನು ಸೂರ್ಯನೊಡನೆ (ಅಥವಾ ಸ್ವರ್ಗ

111. (Then come) three (stanzas) addressed to Soma (i. 43. 7-9). 'O Agni' (ಅಗ್ನೇ: i. 44. 1) are two (hymns) addresed to Agni (44, 45). With a Pragatha couplet the Aswins are (here) praised with Dawn who bears her characteristic mark (ಲಿಂಗಭಾಕ್). 'Here is Soma, O bounteous ones (ಅಯಂ ಸೋಮಃ ಸುದಾನವಃ : i. 45. 10).

112. is a hemistich which has the gods for its deities. The two following (hymns, beginning) 'She here' (ಏಷೋ : i. 46. 1) are addressed to the Asvins (46, 47).

Yaska thinks the Sun (ಆದಿತ್ಯ) is praised at the same time in (the stanza) 'With oblatian' (ಹವಿಷಾ : i. 46. 4).

### 23. RV. i. 48-60. Story of Savya. The Satarchins.

113. 'Together with' (ಸಹ : i. 48. 1) are two (hymns), addressed to Dawn (48, 49) : then 'Upward him' (and ಉದುತ್ಯಂ : i. 50) is addressed to Surya : (in) 'Wherewith' (ಯೇನ : i. 50. 6) Varnna connected with Heaven

ದ್ಯುಭಕ್ತಿರ್ಯೇನ ವರುಣೋ ರೋಗಘ್ನಸ್ತ್ವೃಚ ಉತ್ತಮಃ || ೧೧೩ ||
ರೋಗಾಪನುತ್ತಿರಾದ್ಯಾಭ್ಯಾಮುದ್ಯನ್ನಿತ್ಯುತ್ತಮೇ ತ್ವೃಚೇ |
ಅರ್ಧರ್ಚೇ ತು ದ್ವಿಷದ್ದ್ವೇಷ ಐಂದ್ರಃ ಸವ್ಯಃ ಶತರ್ಚಿಷು || ೧೧೪ ||
ಸ್ವಯಮಿಂದ್ರಸಮಂ ಪುತ್ರಮಿಚ್ಛತೋಽಙ್ಗಿರಸೋ ಮುನೇಃ |
ವಜ್ರ್ಯೇವ ಸವ್ಯೋ ಭೂತ್ವರ್ಷೇರ್ಯೋಗಿತ್ವಾತ್ಪುತ್ರತಾಂ ಗತಃ || ೧೧೫ ||
ಪ್ರಥಮೇ ಮಂಡಲೇ ಜ್ಞೇಯಾ ಋಷಯಸ್ತು ಶತರ್ಚಿನಃ |

ದ್ಯುಭಕ್ತಿ) ಪ್ರಾರ್ಥಿತನಾಗಿದಾನೆ. ಕೊನೆಯ ಮೂರು ಋಕ್ಕುಗಳು (೧೧-೧೩ ಋಕ್ಕುಗಳು) ರೋಗಗಳನ್ನು ನಾಶಮಾಡುವ ಶಕ್ತಿಯುಳ್ಳವೆಂದು ಪ್ರಸಿದ್ಧವಾಗಿವೆ.

114. ಕೊನೆಯ ಈ ಮೂರು ಋಕ್ಕುಗಳಲ್ಲಿ (೧೧-೧೩) ಮೊದಲಿನ ಎರಡು ಋಕ್ಕುಗಳು (೧೧-೧೨) ರೋಗವನ್ನು ನಾಶಮಾಡುವುವು. ಕೊನೆಯ ೧೩ ನೆಯ ಋಕ್ಕಿನ ಉತ್ತರಾರ್ಧವು ಶತ್ರುನಾಶಕರವಾಗಿರುವುದು. ಶತರ್ಚಿಗಳು ಎಂಬ ಹೆಸರಿನಿಂದ ಪ್ರಸಿದ್ಧರಾದ ಋಷಿಗಳಲ್ಲಿ ಸವ್ಯ ಎಂಬುವನು ಇಂದ್ರನ ಅಂಶಭೂತನು. (ಶತರ್ಚಿ ಎಂದರೆ ಸುಮಾರು ಒಂದು ನೂರು ಋಕ್ಕುಗಳ ದ್ರಷ್ಟೃಗಳು. ಇಂತಹ ಅನೇಕ ಋಷಿಗಳ ಸೂಕ್ತಗಳು ಮೊದಲನೆಯ ಮಂಡಲದಲ್ಲಿರುವುದರಿಂಡ ಈ ಮಂಡಲಕ್ಕೆ ಶತರ್ಚಿನಃ ಎಂಬ ಹೆಸರು ಪ್ರಸಿದ್ಧವಾಗಿವೆ.)

### ಸವ್ಯನ ವೃತ್ತಾಂತ; ಶತರ್ಚಿನರು ಎಂದರೆ ಯಾರು ?

115. ಅಂಗಿರಾಃ ಎಂಬ ಋಷಿಯು ಪರಾಕ್ರಮಾದಿಗಳಲ್ಲಿ ಇಂದ್ರನಿಗೆ ಸಮನಾದ ಪುತ್ರನನ್ನು ಪಡೆಯಬೇಕೆಂದು ಬಯಸಿ ತಪಸ್ಸನ್ನು ಮಾಡಿದನು. ಆಗ ವಜ್ರಾಯುಧಧಾರಿಯಾದ ಇಂದ್ರನೇ ತನ್ನ ಯೋಗಸಾಮರ್ಥ್ಯದಿಂದ ಆ ಋಷಿಗೆ ಸವ್ಯನೆಂಬ ಪುತ್ರನಾದನು. (ಈ ಸವ್ಯನು-ಸವ್ಯ ಆಂಗಿರಸಃ—ಪ್ರಥಮ ಮಂಡಲದ ೫೧-೫೭ ಸೂಕ್ತಗಳಿಗೆ (೭೨ ಋಕ್ಕುಗಳಿಗೆ) ಋಷಿಯಾಗಿರುವನು).

116. ಪ್ರಥಮ ಮಂಡಲದಲ್ಲಿರುವ ಸೂಕ್ತಗಳ ಋಷಿಗಳಿಗೆ ಶತರ್ಚಿನರೆಂದು ಹೆಸರು (ಏಕೆಂದರೆ ಇವರು ಸಾಧಾರಣವಾಗಿ ನೂರು ಋಕ್ಕುಗಳ ದ್ರಷ್ಟೃಗಳು) ಕೊನೆಯ ಹತ್ತನೆಯ ಮಂಡಲದ ಋಷಿಗಳಿಗೆ ಕ್ಷುದ್ರಸೂಕ್ತಮಹಾಸೂಕ್ತಗಳ (ಸಣ್ಣ ಸೂಕ್ತಗಳ ಮತ್ತು ದೊಡ್ಡ ಸೂಕ್ತಗಳ) ದ್ರಷ್ಟೃಗಳಾದ ಋಷಿಗಳೆಂದು ಹೆಸರು. ಮೊದಲನೆಯ

(ದ್ಯುಭಕ್ತಿ) is praised; the last triplet (50. 11-13) is destructive of disease (ರೋಗಘ್ನ).

114. With the first two (stanzas) in the last triplet (beginning) ‘Rising’ (ಉದ್ಯನ್: i. 50—11, 12) there is driving away of disease, while in a hemistich (of the last stanza) there is hostility to foes.

Among the Satarchins is ಸವ್ಯ who is a form of Indra (ಐಂದ್ರ).

115. Of the sage Angirasa who wished for a son like Indra, the Bolt-bearer himself became the son, having assumed the form of Savya in consequence of the seer's asceticism.

116. Now the seers in the first book are to be known as Satarchins in

ಕ್ಷುದ್ರಸೂಕ್ತಮಹಾಸೂಕ್ತಾ ಅಂತ್ಯೇ ಮಧ್ಯೇಷು ಮಧ್ಯಮಾಃ || ೧೧೬ ||
ನವಕಂ ಜಾತವೇದಸ್ಯಂ ನೂ ಚಿದ್ಯತ್ತು ವಯಾ ಇತಿ |
ವೈಶ್ವಾನರೀಯಂ ತತ್ಸೂಕ್ತಂ ವಹ್ನಿಮಾಗ್ನೇಯಮುತ್ತರಂ || ೧೧೭ ||
ಐಂದ್ರಾಣ್ಯಸ್ಮೈ ತತಸ್ತ್ರೀಣಿ ವೃಷ್ಣೇ ಶರ್ಧಾಯ ಮಾರುತಂ |
ಆಗ್ನೇಯಾನಿ ತು ಪಶ್ವೇತಿ ನವ ಶಶ್ವದ್ಧಿ ವಾಮಿತಿ || ೧೧೮ ||
ದಶಾಶ್ವಿನಾನೀಮಾನೀತಿ ಇಂದ್ರಾವರುಣಯೋಃ ಸ್ತುತಿಃ |
ಸೌಪರ್ಣೇಯಾಸ್ತು ಯಾಃ ಕಾಶ್ಚಿನ್ನಿಪಾತಸ್ತುತಿಷು ಸ್ತುತಾಃ || ೧೧೯ ||

ಮಂಡಲಕ್ಕೂ ಹತ್ತನೆಯ ಮಂಡಲಕ್ಕೂ ಮಧ್ಯದಲ್ಲಿರುವ ೨, ೩, ೪, ೫, ೬, ೭, ೮, ೯ ಎಂಬ ಎಂಟು ಮಂಡಲದ ಋಷಿಗಳಿಗೆ ಮಧ್ಯಮಋಷಿಗಳೆಂದು ಹೆಸರು.

117. **ನೂ ಚಿತ್** ಎಂಬ ಒಂಭತ್ತು ಋಕ್ಕುಗಳುಳ್ಳ ೫೮ ನೇ ಸೂಕ್ತಕ್ಕೆ ಜಾತವೇದಾಗ್ನಿಯೂ, **ವಯಾ ಇದಗ್ನೇ** ಎಂಬ ೫೯ ನೇ ಸೂಕ್ತಕ್ಕೆ ವೈಶ್ವಾನರಾಗ್ನಿಯೂ, **ವಹ್ನಿಂ ಯಶಸಂ** ಎಂಬ ೬೦ ನೇ ಸೂಕ್ತಕ್ಕೆ ಅಗ್ನಿಯೂ ದೇವತೆಗಳು.

### ೬೧-೭೩ ನೇ ಸೂಕ್ತಗಳ ದೇವತೆಗಳು

118. **ಅಸ್ಮಾ ಇದು** ಎಂಬ ಮುಂದಿನ ಮೂರು ಸೂಕ್ತಗಳಿಗೆ (೬೧-೬೩) ಇಂದ್ರನು ದೇವತೆಯು. **ವೃಷ್ಣೇ ಶರ್ಧಾಯ** ಎಂಬ ೬೪ ನೇ ಸೂಕ್ತಕ್ಕೆ ಮರುತ್ತುಗಳು ದೇವತೆಯು ; **ಪಶ್ವಾ ನ** ಎಂಬ ೬೫ ನೇ ಸೂಕ್ತದಿಂದ ಮುಂದಿನ ಒಂಭತ್ತು ಸೂಕ್ತಗಳಿಗೆ (೬೫-೭೩) ಅಗ್ನಿಯು ದೇವತೆಯು **ಶಶ್ವದ್ಧಿ ವಾಂ** ಎಂದು ಮೊದಲಾಗುವ,

119. ೧೦ ಸೂಕ್ತಗಳಿಗೆ ಅಶ್ವಿನೀದೇವತೆಗಳು ದೇವತೆಯು ; **ಇಮಾನಿ ವಾಂ** ಎಂಬ ಖಿಲ ಸೂಕ್ತದಲ್ಲಿ (೮ ನೇ ಮಂಡಲದ ೫೯ ನೇ ಸೂಕ್ತ) ಇಂದ್ರಾವರುಣರ ಸ್ತುತಿ ಇರುವುದು. ಸುಪರ್ಣಸೂಕ್ತಗಳಲ್ಲಿ ಸೂಚಿತವಾಗಿರುವ ಇತರ ದೇವತೆಗಳನ್ನು ಸಂದರ್ಭಾನುಸಾರ ಪ್ರಸ್ತಾಪಮಾಡಲಾಗಿದೆಯೆಂದು ತಿಳಿಯಬೇಕು.

---

the last, as seers of short hymns and of long hymns; in the middle ones, as middlemen (ಮಧ್ಯಮಾ).

117. 'Now indeed' (ನೂ ಚಿತ್ : i. 58), containing nine stanzas, is addressed to Jatavedas: while the hymn which (begins) 'Branches' (ವಯಾಃ i. 59) is addressed to Vaisvanara; the following one, 'Bearer' (ವಹ್ನಿಂ : i. 60) is addressed to Agni.

### 24. RV. i. 61-73. Eleven Khilas. RV. i. 74-89.

118. Then (come) three (61-63), 'To him' (ಅಸ್ಮೈ : i. 64) is addressed to the Indra : 'For the manly host' (ವೃಷ್ಣೇ ಶರ್ಧಾಯ : i. 64) is addressed to the Maruts; 'With a cow' (ಪಶ್ವಾ; i. 65) is the first of nine hymns (65-73) addressed to Agni; 'Ever indeed of you' (ಶಶ್ವದ್ಧಿ ವಾಂ).

119. are ten addressed to the Asvins; (the hymn) 'These' (ಇಮಾನಿ : viii. 59) is (in) praise of Indra-Varuna. But Whatever (other deities) belong to the Sauparna hymns are praised incidentally (ನಿಪಾತಸ್ತುತಿಷು).

ಉಪಪ್ರಯಂತಃ ಸೂಕ್ತಾನಿ ಆಗ್ನೇಯಾನ್ಯುತ್ತರಾಣಿ ಷಟ್ ।
ಹಿರಣ್ಯಕೇಶೋ ರಜಸಸ್ತ್ರ್ಯೃಚೋऽಗ್ನೇರ್ಮಧ್ಯಮಸ್ಯ ತು ॥ ೧೨೦ ॥
ಇತ್ಥೇತಿ ಪಂಚ ತ್ವೈಂದ್ರಾಣಿ ಯಾಮಿತ್ಯಸ್ಯಾಂ ನಿಪಾತಿತಾಃ ।
ದಧ್ಯಙ್ಮನುರಥರ್ವಾ ಚ ಮಾರುತಾನಿ ಪ್ರ ಯೇ ತತಃ ॥ ೧೨೧ ॥
ಚತ್ವಾರ್ಯಾ ನೋ ವೈಶ್ವದೇವೇ ದ್ವೇ ದೇವಾನಾಂ ಸ್ತುತಿರ್ಮತೇ ।
ಆ ನೋ ಭದ್ರಾಶ್ಚ ದೇವಾನಾಂ ಭದ್ರಂ ಯಾವಚ್ಛತಂ ಪುನಃ ॥ ೧೨೨ ॥
ಮಧು ವಾತಾಸ್ತೃಚೇ ತಸ್ಮಿನ್ಪರಮಂ ಮಧ್ವಪೀಷ್ಯತೇ ।

### ೭೪–೯೦ ಸೂಕ್ತಗಳ ದೇವತೆಗಳು

120. **ಉಪಪ್ರಯಂತಃ** ಎಂಬ ಸೂಕ್ತದಿಂದ ಮುಂದಿನ ಆರು ಸೂಕ್ತಗಳಿಗೆ (೭೪–೭೯) ಅಗ್ನಿಯು ದೇವತೆಯು; ಆದರೆ ೭೯ ನೇ ಸೂಕ್ತದ **ಹಿರಣ್ಯ ಕೇಶೋ ರಜಸಃ** ಎಂದು ಮೊದಲಾಗುವ ಮೂರು ಋಕ್ಕುಗಳಿಗೆ (೧–೩) ಅಗ್ನಿ ಅಥವಾ ಮಧ್ಯಮಾಗ್ನಿಯು ದೇವತೆಯು.

121. **ಇತ್ಥಾ ಹಿ** ಎಂಬ ಮುಂದಿನ ಐದು ಸೂಕ್ತಗಳಿಗೆ (೮೦-೮೪) ಇಂದ್ರನು ದೇವತೆಯು; ಆದರೆ ೮೦ ನೇ ಸೂಕ್ತದ **ಯಾಮಥರ್ವಾ** ಎಂಬ ೧೬ ನೇ ಋಕ್ಕಿನಲ್ಲಿ ದಧ್ಯಙ್, ಮನು, ಅಥರ್ವಾ ಎಂಬುವರ ಹೆಸರುಗಳು ಪ್ರಾಸಂಗಿಕವಾಗಿ ಸೂಚಿತವಾಗಿರುವವು. ಆದರ ಮುಂದಿನ **ಪ್ರ ಯೇ** ಎಂಬ ೮೫ ನೇ ಸೂಕ್ತದಿಂದ ಮುಂದಿನ,

122. ನಾಲ್ಕು ಸೂಕ್ತಗಳಿಗೆ (೮೯–೯೦ ಸೂಕ್ತಗಳಿಗೆ) ವಿಶ್ವೇದೇವತೆಗಳು ದೇವತೆಯು; ಆದರೆ ೮೯ ನೇ ಸೂಕ್ತದ ಮೊದಲ ೨ ಋಕ್ಕುಗಳಿಗೆ (**ಆ ನೋ ಭದ್ರಾಃ** ೧–೨) ಸಾಮಾನ್ಯ ದೇವತೆಗಳು ದೇವತೆಯು ಮತ್ತು ಆದರಂತೆಯೇ ಈ ಸೂಕ್ತದ (೮೯ ನೇ ಸೂಕ್ತದ) **ದೇವಾನಾಂ** ಎಂಬ ಎರಡನೆಯ ಋಕ್ಕಿಗೂ, **ಭದ್ರಂ ಕರ್ಣೇಭಿಃ** ಎಂಬ ಎಂಟನೆಯ ಋಕ್ಕಿಗೂ, **ಶತಮಿನ್ನು** ಎಂಬ ಒಂಭತ್ತನೆಯ ಋಕ್ಕಿಗೂ (ಸಾಮಾನ್ಯ) ದೇವತೆಗಳೇ ದೇವತೆಯು.

123. ೯೦ ನೇ ಸೂಕ್ತದಲ್ಲಿರುವ **ಮಧು ವಾತಾ** ಎಂಬ ತೃಚದಲ್ಲಿ (೬-೮) ಉತ್ತಮವಾದ ಮಧುವನ್ನು

---

120. The following six hymns (74-79), 'Going forth' (ಉಪಪ್ರಯಂತ: i. 74. 1), are addressed to Agni; but the triplet 'With golden locks of hair' (ಹಿರಣ್ಯಕೇಶೋ ರಜಸ : i. 79. 1-3) is (addressed) to the middle Agni.

121. Now 'Thus' (ಇತ್ಥಾ : i. 80. 1) are five (80-34) addressed to Indra; in the (stanza) 'Whatever' (ಯಂ : i. 80. 16) Dadhyanch, Manu, and Atharvan are incidentally mentioned. Then 'They who forth' (ಪ್ರ ಯೇ : i. 85. 1) are addressed to the Maruts,

122. being four (85-88) 'To us' (ಆ ನಃ : i. 8. 1) are two (hymns) to the All-gods (89, 90); two (stanzas here) are regarded as (in) praise of the gods (in general), both 'To us, the auspicious' (ಆ ನೋ ಭದ್ರಾಃ : i. 89.1), 'Of the gods' (ದೇವಾನಾಂ : i. 89.2), and again 'What is auspicious' (ಭದ್ರಂ : i. 89.8) up to (yavat) 'A hundred' (ಶತಂ : i. 89. 9).

### 25. RV. i. 90-93. Order of hymn-groups in Mandala i. 74-164

123. In the triplet 'The winds waft mead' (ಮಧು ವಾತಾಃ : i. 90. 6) the

ಅದಿತಿರ್ದ್ಯೌರಿತಿ ತ್ವಸ್ಯಾಂ ವಿಭೂತಿಃ ಕಥಿತಾದಿತೇಃ || ೧೨೩ ||
ತ್ವಂ ಸೋಮ ಸೌಮ್ಯಮೌಷಸಮೇತಾ ಉ ತ್ಯಾಸ್ತ್ರ್ಯೃಚೋಽಶ್ವಿನೋಃ |
ಅಶ್ವಿನಾಗ್ನೇಃ ಸಸೋಮಸ್ಯ ಅಗ್ನೀಷೋಮಾವಿತಿ ಸ್ತುತಿಃ || ೧೨೪ ||
ಗೋತಮಾದಾಶಿಜಃ ಕುತ್ಸಃ ಪರುಚ್ಛೇಪಾದೃಷೇಃ ಪರಃ |
ಕುತ್ಸಾದ್ದೀರ್ಘತಮಾಃ ಶಶ್ವತ್ತೇ ದ್ವೇ ಏವಮಧೀಯತೇ || ೧೨೫ ||
ಇಮಂ ಕುತ್ಸ ಆಂಗಿರಸೋ ದದರ್ಶ ಜಾತವೇದಸ್ಯಂ ಜಗಾದ ಷೋಳಶರ್ಚಂ |

(ಉದಕವನ್ನು) ಅಪೇಕ್ಷಿಸಲಾಗಿದೆ. ೮೯ ನೇ ಸೂಕ್ತದ ೧೦ ನೇ ಋಕ್ಕಾದ **ಅದಿತಿರ್ದ್ಯೌರದಿತಿಃ** ಎಂಬ ಋಕ್ಕಿನಲ್ಲಿ ಅದಿತಿಯ ಮಾಹಾತ್ಮ್ಯೆಯು ಉಕ್ತವಾಗಿದೆ.

**೯೧-೧೦೪ ನೇ ಸೂಕ್ತಗಳ ದೇವತೆಗಳು**

124. **ತ್ವಂ ಸೋಮ** ಎಂಬ ಸೂಕ್ತಕ್ಕೆ (೯೧ ನೇ ಸೂಕ್ತ) ಸೋಮನೂ, **ಏತಾ ಉತ್ಯಾ** (೯೨ ನೇ ಸೂಕ್ತ) ಎಂಬ ಸೂಕ್ತಕ್ಕೆ ಉಷೋದೇವತೆಯೂ ದೇವತೆಗಳು, ಈ ಸೂಕ್ತದ ೧-೧೮ ನೇ ಋಕ್ಕುಗಳಿಗೆ ಅಶ್ವಿನೀದೇವತೆಗಳು. ದೇವತೆಯು ; **ಅಗ್ನೀಷೋಮಾ** ಎಂಬ ೯೩ ನೇ ಸೂಕ್ತಕ್ಕೆ ಅಗ್ನಿ ಮತ್ತು ಸೋಮ ಎಂಬಿಬ್ಬರೂ ದೇವತೆಗಳು.

125. ಪ್ರಥಮಮಂಡಲದ ೭೪-೯೩ ಸೂಕ್ತಗಳಿಗೆ ಗೋತಮನು ಋಷಿಯು ; (ಅನಂತರ ೯೪-೧೧೫ ಸೂಕ್ತಗಳಿಗೆ ಕುತ್ಸನು ಋಷಿಯು) ; ೧೧೬-೧೨೬ ಸೂಕ್ತಗಳಿಗೆ **ಕಕ್ಷೀವಾನ್** ಎಂಬುವನು ಋಷಿಯು. ಈ ಋಷಿಯು **ಉಶಿಕ್** ಎಂಬ ಸ್ತ್ರೀಯ ಪುತ್ರನು ; ಅನಂತರ ೧೨೭-೧೩೯ ಸೂಕ್ತಗಳಿಗೆ **ಪರುಚ್ಛೇಪಋಷಿಯೂ** ಅನಂತರ ೧೪೦-೧೬೪ ಸೂಕ್ತಗಳಿಗೆ **ದೀರ್ಘತಮಾಃ** ಎಂಬ ಋಷಿಯೂ ಋಷಿಗಳು. **ಕುತ್ಸ** ಮತ್ತು **ದೀರ್ಘತಮಾಃ** ಎಂಬ ಋಷಿಗಳಿಬ್ಬರೂ (ಎಂದರೆ ಇವರಿಬ್ಬರ ಸೂಕ್ತಗಳೂ) ಜತೆಯಲ್ಲಿರುವರು.

126. ಆಂಗಿರಸಪುತ್ರನಾದ ಕುತ್ಸನೆಂಬ ಋಷಿಯು **ಇಮಂ ಸ್ತೋಮಂ** ಎಂಬ ೯೪ ನೇ ಸೂಕ್ತದ ದ್ರಷ್ಟೃವಾಗಿರುವನು ಮತ್ತು ಜಾತವೇದೋಽಗ್ನಿಯನ್ನು ಸ್ತುತಿಸಿರುವ ಈ ಸೂಕ್ತದ ೧೬ ಋಕ್ಕುಗಳನ್ನು ಪಠಿಸಿರುವನು. ಆದರೆ.

---

supreme (ಪರಮ) mead is also (ಅಪಿ) desired; but in the (stanza) 'Aditi is Heaven' (ಅದಿತಿರ್ದ್ಯೌಃ : i. 89. 10) the majesty of Aditi is told.

124. 'you, Soma, (ತ್ವಂ ಸೋಮ : i. 91) is addressed to Soma; 'These Dawns' (ಏತಾ ಉತ್ಯಾ : i. 92) is addressed to Dawn; the triplet 'O Asvins (ಅಶ್ವಿನಾ: i. 92. 16-18) to the Asvins. 'Agni and Soma' (ಅಗ್ನೀಷೋಮೌ : 1. 93) is (in) praise of Agni associated with Soma.

125. After Gotama (74-93) the son of Usij (Kaksivat comes: 116-126); after the seer Paruchepa (127-139) follows Kutsa (99-115); after Kutsa, Dirghatamas (140-164): always (ಶಶ್ವತ್) these two (sets respectively); in this order (ಏವಂ) is read (the text of the Rg-veda).

**26. RV. i. 94-111. Seers of hymns with refrains; Khilas of Kasyapa**

126. Kutsa, son of Angiras, saw 'This' (ಇಮಂ; i. 94): he uttered (this hymn) containing sixteen stanzas (and) addressed to Jatavedas.

**ಪೂರ್ವೋ ದೇವಾ ಇತ್ಯೃಚೋ ದೇವದೇವಾಸ್ತ್ರಯಃ ಪಾದಾ ಉತ್ತಮಾಯಾಸ್ತು-ತೋಽರ್ಧಂ ॥ ೧೨೬ ॥**

**ತಸ್ಯೈವ ವಾ ಯಸ್ಯ ತತ್ಪೂರ್ವಸೂಕ್ತಂ ಮಿತ್ರಾದಿಭ್ಯೋ ವಾತ್ರ ಷಡ್ಭ್ಯಃ ಪ್ರಕೃತಾಭ್ಯಃ ।**

**ಅಂತ್ಯೋಽರ್ಧರ್ಚಸ್ತು ವಾ ಷಣ್ಣಾಂ ಸ್ತುತಾನಾಂ ಪೂರ್ವೋ ದೇವಾಃ ಪಾದೈಸ್ತು ತ್ರಿಭಿಃ ಸ್ತುತಾಃ ॥ ೧೨೭ ॥**

**ಭರದ್ವಾಜೇ ಗೃತ್ಸಮದೇ ವಸಿಷ್ಠೇ ನೋಧಸ್ಯಗಸ್ತ್ಯೇ ವಿಮದೇ ನಭಾಕೇ ।**

**ಕುತ್ಸೇ ನೋದರ್ಕಾ ಬಹುದೈವತೇಷು ತಥಾ ದ್ವಿದೇವೇಷು ಸಮಾನಧರ್ಮಿಣಃ ॥ ೧೨೮ ॥**

ಈ ಸೂಕ್ತದ **ಪೂರ್ವೋ ದೇವಾಃ** ಎಂಬ ೮ ನೇ ಋಕ್ಕಿನ ಮೊದಲಿನ ಮೂರು ಪಾದಗಳಿಗೂ **ಸ ತ್ವಮಗ್ನೇ** ಎಂಬ ೧೬ ನೇ ಋಕ್ಕಿನ ಉತ್ತರಾರ್ಧಕ್ಕೂ ದೇವತೆಗಳೇ ದೇವತೆಯು.

127. ೧೬ ನೇ ಋಕ್ಕಿನ ಉತ್ತರಾರ್ಧವು, ಈ ಸೂಕ್ತದ ಮುಖ್ಯದೇವತೆಯಾದ ಜಾತವೇದೋಗ್ನಿಯ ಪರವಾಗಿರುವುದು ಅಥವಾ ಅರ್ಧಋಕ್ಕಿನಲ್ಲಿಯೇ ಹೇಳಿರುವಂತೆ ಮಿತ್ರಾದಿ ಆರು ದೇವತೆಗಳ ಪರವಾಗಿಯೂ ಇರುವುದು. ಆದರೆ ಕೊನೆಯ ಋಕ್ಕಿನ (೧೬) ಉತ್ತರಾರ್ಧದಲ್ಲಿ ಮಿತ್ರಾದಿ ಆರು ದೇವತೆಗಳ ಹೆಸರನ್ನು ಪ್ರತ್ಯೇಕವಾಗಿ ಸೂಚಿಸಿದೆ. ೮ ನೇ ಋಕ್ಕಿನಲ್ಲಿ ಮೊದಲು ಮೂರು ಪಾದಗಳ ದೇವತೆಗಳ ಹೆಸರನ್ನು ಹೇಳದೆ ಸಾಮಾನ್ಯವಾಗಿ **ದೇವಾಃ**—ದೇವತೆಗಳು ಎಂದು ಮಾತ್ರ ಸ್ತುತಿಸಲಾಗಿದೆ.

128. ಭರದ್ವಾಜ, ಗೃತ್ಸಮದ, ವಸಿಷ್ಠ, ನೋಧಾಃ, ಅಗಸ್ತ್ಯ, ವಿಮದ, ನಭಾಕ, ಕುತ್ಸ ಎಂಬ ಋಷಿಗಳಿಂದ ದೃಷ್ಟವಾದ ಸೂಕ್ತಗಳಲ್ಲಿ, ಬಹುದೇವತೆಗಳ ವಿಷಯದಲ್ಲಾಗಲಿ, ದ್ವಿದೇವತೆ (ಮಿತ್ರಾವರುಣಾ, ಅಶ್ವಿನೌ ಇತ್ಯಾದಿ) ಗಳ ವಿಷಯದಲ್ಲಾಗಲಿ, ಗುಣವರ್ಣನೆಯ ಸಾಮಾನ್ಯತೆಯು ಕಂಡುಬರುವುದಿಲ್ಲ ಎಂದರೆ ದ್ವಿದೇವತೆಗಳನ್ನೂ ನಾನಾ ದೇವತೆಗಳನ್ನೂ ಸ್ತುತಿಸುವಾಗ ಮೇಲೆ ಹೇಳಿದ ಋಷಿಗಳು ಒಂದೇ ವಿಧವಾದ ಕ್ರಮವನ್ನು ಅನುಸರಿಸಿರುವುದಿಲ್ಲ. ಪ್ರತಿಯೊಬ ಋಷಿಯ ಸ್ತುತಿಯ ವೈಶಿಷ್ಟ್ಯವೂ ಬೇರೆ ಬೇರೆಯಾಗಿರುವುದು.

---

Three verses of the stanza 'Foremost, O Gods' (ಪೂರ್ವೋ ದೇವಾಃ : i. 94. 8) have the gods as their deities; then half of the last (stanza : i. 94-16)

127. either belongs to the same deity (i.e. Agni) as the (whole) hymn which precedes it (ತತ್ಪೂರ್ವ), or it is (addressed) to the six deities, Mitra and the rest, who are here referred to (ಪ್ರಕೃತ).

The last hemistich (i. 94. 16) is (addressed) optionally (ವಾ) to the six (deities) praised, whereas in 'Foremost'(ಪೂರ್ವಃ : 1. 94. 8) the gods (in general) are praised with three verses.

128. In Bharadvaja, Grtsamada, Vasistha, Nodhas, Agastya, Vimada, Nabhaka, Kutsa there are no similar (ಸಮಾನಧರ್ಮಿಣಃ) refrains in (hymns) addressd to many divinities, also (not) in those addressed to two gods.

**ದ್ವೇ ವಿರೂಪೇ ಸೂಕ್ತಮೌಷಸಾಯಾಗ್ನಯೇ ಸ ಪ್ರತ್ನಥೇತಿ ದ್ರವಿಣೋದಸೇಽಗ್ನಯೇ ।**
**ವೈಶ್ವಾನರಸ್ಯೇತಿ ವೈಶ್ವಾನರೀಯಮಸ್ಮಾತ್ಪೂರ್ವಂ ಶುಚಯೇಽಗ್ನಯೇ ಪುನಃ ॥ ೧೨೯ ॥**
**ಜಾತವೇದಸ್ಯಂ ಸೂಕ್ತಸಹಸ್ರಮೇಕ ಐಂದ್ರಾತ್ಪೂರ್ವಂ ಕಶ್ಯಪಾರ್ಷಂ ವದಂತಿ ।**
**ಜಾತವೇದಸೇ ಸೂಕ್ತಮಾದ್ಯಂ ತು ತೇಷಾಮೇಕಭೂಯಸ್ತ್ವಂ ಮನ್ಯತೇ ಶಾಕಪೂಣಿಃ ॥ ೧೩೦ ॥**
**ಸ ಯೋ ವೃಷ್ಯೈಂದ್ರಾಣಿ ಪಂಚ ವೈಶ್ವದೇವಾನಿ ಚಂದ್ರಮಾಃ ।**
**ತ್ರೀಣ್ಯೈಂದ್ರಾಗ್ನೇ ಯ ಇಂದ್ರಾಗ್ನೀ ತತಮಿತ್ಯಾರ್ಭವೇ ಪರೇ ॥ ೧೩೧ ॥**

129. **ದ್ವೇ ವಿರೂಪೇ** (೯೫ನೇ ಸೂಕ್ತ) ಎಂಬ ಸೂಕ್ತದಲ್ಲಿ ಉಷೋದೇವತೆಯನ್ನೂ ಮತ್ತು ಅಗ್ನಿಯನ್ನೂ ಸ್ತುತಿಸಲಾಗಿದೆ. **ಸ ಪ್ರತ್ನಥಾ** ಎಂಬ ಸೂಕ್ತದಲ್ಲಿ (೯೬ ನೇ ಸೂಕ್ತ) **ದ್ರವಿಣೋದಾಃ** ಎಂಬ ಹೆಸರಿನ ಅಗ್ನಿಯನ್ನು ಸ್ತುತಿಸಲಾಗಿದೆ. **ವೈಶ್ವಾನರಸ್ಯ ಸುಮತೌ** (೯೮ ನೇ ಸೂಕ್ತ) ಎಂಬ ಸೂಕ್ತದಲ್ಲಿ ವೈಶ್ವಾನರನೆಂಬ ಅಗ್ನಿಯನ್ನೂ ಅದರ ಹಿಂದಿನ ಸೂಕ್ತವಾದ **ಅಪ ನಃ** (೯೭ ನೇ ಸೂಕ್ತ) ಎಂಬ ಸೂಕ್ತದಲ್ಲಿ **ಅಗ್ನಿಃ ಶುಚಿಃ** ಎಂಬ ಅಗ್ನಿಯ ರೂಪಾಂತರವನ್ನು ಅಥವಾ ಕೇವಲ ಅಗ್ನಿಯನ್ನು ಸ್ತುತಿಸಲಾಗಿದೆ.

130. ಋಗ್ವೇದಸಂಹಿತೆಯಲ್ಲಿ ಅಗ್ನಿ ದೇವತಾಕವಾದ ಸುಮಾರು ಒಂದುಸಾವಿರ ಸೂಕ್ತಗಳಲ್ಲಿ **ಜಾತವೇದಸೇ** (೯೯ ನೇ ಸೂಕ್ತ) ಎಂಬ ಸೂಕ್ತವು ಜಾತವೇದೋಗ್ನಿಯನ್ನು ಸ್ತುತಿಸಿರುವ ಸೂಕ್ತಗಳಲ್ಲಿ ಮೊದಲನೆಯದೆಂದು ಕೆಲವರು ಹೇಳುವರು. ಪ್ರಕೃತ ಮೇಲೆ ಹೇಳಿದ **ಜಾತವೇದಸೇ** ಎಂಬ ಸೂಕ್ತಕ್ಕೆ ಕಶ್ಯಪನು ಋಷಿಯು; ಈ ಸೂಕ್ತವು ಇಂದ್ರ ದೇವತಾಕವಾದ (**ಸ ಯೋ ವೃಷಾ** ಎಂಬ ೧೦೦ ನೇ ಸೂಕ್ತ) ಸೂಕ್ತದ ಹಿಂದಿನ ಸೂಕ್ತವು (ಎಂದರೆ ೯೯ ನೇ ಸೂಕ್ತ) ಮತ್ತು ಇದರಲ್ಲಿ ಒಂದು ಋಕ್ಕು ಮಾತ್ರವಿರುವುದು ಎಂದು **ಶಾಕಪೂಣಿ** ಎಂಬ ಆಚಾರ್ಯರು ಹೇಳುತ್ತಾರೆ.

131. **ಸ ಯೋ ವೃಷಾ** ಎಂಬ (೧೦೦ ನೇ) ಸೂಕ್ತವು ಇಂದ್ರದೇವತಾಕವಾದ ಐದು ಸೂಕ್ತಗಳಲ್ಲಿ (೧೦೦-೧೦೪ ಸೂಕ್ತಗಳಲ್ಲಿ) ಮೊದಲನೆಯದು ; **ಚಂದ್ರಮಾ** (೧೦೫ ನೇ ಸೂಕ್ತ) ಎಂಬ ಸೂಕ್ತವು ವಿಶ್ವೇದೇವತಾಕವಾದ ಮೂರು ಸೂಕ್ತಗಳಲ್ಲಿ (೧೦೫-೧೦೭) ಮೊದಲನೆಯದು ; **ಯ ಇಂದ್ರಾಗ್ನೀ** (೧೦೮ ನೇ ಸೂಕ್ತ) ಎಂಬ ಸೂಕ್ತವು ಇಂದ್ರಾಗ್ನಿಗಳನ್ನು ಸ್ತುತಿಸಿರುವ ಎರಡು ಸೂಕ್ತಗಳಲ್ಲಿ (೧೦೮-೧೦೯) ಮೊದಲನೆಯದು ; ಮುಂದಿನ ಎರಡು ಸೂಕ್ತಗಳಲ್ಲಿ (೧೧೦-೧೧೧) ಋಭುದೇವತೆಗಳನ್ನು ಸ್ತುತಿಸಲಾರುಗಿವುದು. ಇವುಗಳಲ್ಲಿ **ತತಂ ಮೇ** ಎಂಬ (೧೧೦) ಸೂಕ್ತವು ಮೊದಲನೆಯದು.

---

129. 'Two unlike' (ದ್ವೇ ವಿರೂಪೇ : i. 95) is a hymn to Agni Ausasa, 'He in the ancient way' (ಸ ಪ್ರತ್ನಥಾ : 1. 96) is to Agni Dravinodas, 'Of Vaisvanara' (ವೈಶ್ವಾನರಸ್ಯ : i. 98) is addressed to Vaisvanara; but the one before this (i. 97) is to Agni Suchi.

130. Some say that the thousand hymns addressed to Jatavedas (which come) before (the hymn) addressed to Indra (i. 100) have Kasyapa as their seer; the first hymn of these is 'For Jatavedas' (ಜಾತವೇದಸೇ : i. 99). Sakapuni thinks that they increase by one (in the number of their stanzas).

131. 'The mighty one who' (ಸ ಯೋ ವೃಷಾ : i. 100) is (the first of) five (hymns) addressed to Indra (100-104); there are (then) three (105-107) addressed to the All-gods, (beginning) 'The Moon (ಚಂದ್ರಮಾಃ : i. 105. 1). 'That which, O Indra-Agni (ಯ ಇಂದ್ರಾಗ್ನೀ : 1. 108) is (the first of) two addressed to Indra-Agni (108-109); the two following (110, 111) 'I wrought' (ತತಂ : i. 110. 1) are addressed to the Rbhus.

ತ್ರಿತಂ ಗಾಸ್ತ್ವನುಗಚ್ಛಂತಂ ಕ್ರೂರಾಃ ಸಾಲಾವೃಕೀಸುತಾಃ ।
ಕೂಪೇ ಪ್ರಕ್ಷಿಪ್ಯ ಗಾಃ ಸರ್ವಾಸ್ತತ ಏವಾಪಜಹ್ರಿರೇ ॥ ೧೩೨ ॥

ಸ ತತ್ರ ಸುಷುವೇ ಸೋಮಂ ಮಂತ್ರವಿನ್ಮಂತ್ರವಿತ್ತಮಃ ।
ದೇವಾಂಶ್ಚಾವಾಹಯತ್ಸರ್ವಾಂಸ್ತಚ್ಚುಶ್ರಾವ ಬೃಹಸ್ಪತಿಃ ॥ ೧೩೩ ॥

ಆಗಚ್ಛತೋಽಥ ತಾನ್ದೃಷ್ಟ್ವಾ ಕ್ವ ವಸತ್ಯಸ್ಯ ತತ್ತ್ವತಃ ।
ಸರ್ವದೃಕ್ತ್ವಂ ಚ ವರುಣಸ್ಯಾರ್ಯಮ್ಣಶ್ಚೇತ್ಯುಪಾಲಭತ್ ॥ ೧೩೪ ॥

ತ್ರಿತ ಆಪ್ತ್ಯಃ ಎಂಬ ಋಷಿಯ ವೃತ್ತಾಂತವು (೧೦೫ ನೇ ಸೂಕ್ತ)

132. ಒಂದಾನೊಂದು ಕಾಲದಲ್ಲಿ ಗೋವುಗಳನ್ನು ಮೇಯಿಸುವುದಕ್ಕಾಗಿ ಹೊಡೆದುಕೊಂಡು ಹೋಗುತ್ತಿದ್ದ ತ್ರಿತನನ್ನು ಸಾಲಾವೃಕಿ (ಎಂಬ ಹೆಣ್ಣುತೋಳದ) ಯ ಕ್ರೂರರಾದ ಪುತ್ರರು ಬಂದು ಪಾಳುಭಾವಿಯಲ್ಲಿ ತಳ್ಳಿ ಅವನ ಗೋವುಗಳನ್ನು ಅಪಹರಿಸಿಕೊಂಡು ಹೋದರು.

133. ಮಂತ್ರಜ್ಞನಾದ ಆ ತ್ರಿತಋಷಿಯು ಭಾವಿಯಲ್ಲಿ ಬಿದ್ದು ಮೇಲೆದ್ದುಬರಲು ಸಾಧ್ಯವಿಲ್ಲದೆ ಅಲ್ಲಿಯೇ ಬೆಳೆದಿದ್ದ ಸೋಮಲತೆಗಳನ್ನು ಕಿತ್ತು ಅದರ ರಸವನ್ನು ಹಿಂಡಿ ಅದನ್ನು ಪಾನಮಾಡಿ ತನ್ನನ್ನು ಬಂಧಮುಕ್ತನನ್ನಾಗಿ ಮಾಡಬೇಕೆಂದು ದೇವತೆಗಳನ್ನೆಲ್ಲಾ ಪ್ರಾರ್ಥಿಸಿ ಕರೆದನು. ಇವನ ಈ ವಿಧವಾದ ಪ್ರಾರ್ಥನೆಯನ್ನು ಬೃಹಸ್ಪತಿಯೂ ಕೇಳಿದನು.

134. ಇವನ ಪ್ರಾಥನೆಯನ್ನು ಕೇಳಿ ಇವನಿದ್ದ ಭಾವಿಯ ಬಳಿಗೆ ಬಂದು ಈ ತ್ರಿತನು ಎಲ್ಲಿದಾನೆ ಎಂದು ತಿಳಿಯದೆ ಹುಡುಕುತ್ತಿರುವ ದೇವತೆಗಳ್ನು ತ್ರಿತನು ನೋಡಿ-ಈ ದೇವತೆಗಳ—ಅದರಲ್ಲಿಯೂ ವರುಣ ಮತ್ತು ಅರ್ಯಮರ ಸಮಸ್ತವನ್ನು ನೋಡಬಲ್ಲ ಶಕ್ತಿಯು ಎಲ್ಲಿ ಹೋಯಿತು ? ನಾನಿರುವ ಸ್ಥಳವನ್ನು ಕಾಣದೆ ಇವರು ಹುಡುಕುತ್ತಿರುವರಲ್ಲಾ ಎಂದು ವಿಷಾದದಿಂದ ಹೇಳಿದನು.

## 27, RV· i· 105 : Story of Trita

132. The cruel sons of the she-wolf (ಸಾಲಾವೃಕೀ) having cast Trita, who was following the cows, into a well, carried off all the cows from thence.

133. He, the best knower of formulas among all knowers of such, pressed Soma there and summoned all the gods: Brhaspati heard that (call).

134. Now on seeing them coming, he reproached (them), saying, 'Where, indeed, abides, the all seeing power (ಸರ್ವದೃಕ್ತ್ವ) of this Varuna and of Aryaman ?

ಕೂಪೇಷ್ಟಕಾಭಿರ್ವ್ರಣಿತಾನ್ಯಂಗಾನ್ಯೇವಾಭವನ್ಮಮ |
ದೃಷ್ಟ್ವಾ ಸರ್ವಾನಹಂ ಸ್ತೌಮಿ ಯದ್ಯಪ್ಯೇಕೋ ನ ಪಶ್ಯತಿ || ೧೩೫ ||
ಬೃಹಸ್ಪತಿಪ್ರಚೋದಿತಾ ವಿಶ್ವೇದೇವಗಣಾಸ್ತ್ರಯಃ |
ಜಗ್ಮುಸ್ತ್ರಿತಸ್ಯ ತಂ ಯಜ್ಞಂ ಭಾಗಾಂಶ್ಚ ಜಗೃಹುಃ ಸಹ || ೧೩೬ ||
ಬೃಹಸ್ಪತಿಸ್ತ್ರಿತಸ್ಯೈತಜ್ಜ್ಞಾನಂ ವಿಜ್ಞಾನಮೇವ ಚ |
ತೃಚೇನಾಂತ್ಯೇನ ಸೂಕ್ತಸ್ಯ ಜಗಾದರ್ಷಿರಸಾವಿತಿ || ೧೩೭ ||
ದ್ಯಾವಾಪೃಥಿವ್ಯೋರೀಳೇತಿ ಆಗ್ನೇಯಃ ಪಾದ ಉತ್ತರಃ |
ಆಶ್ವಿನಃ ಸೂಕ್ತಶೇಷಃ ಸ್ಯಾದಿದಂ ರಾತ್ರ್ಯುಷಸೋಃ ಸ್ತುತಿಃ || ೧೩೮ ||

135. ಭಾವಿಯಲ್ಲಿ ಬಿದ್ದದ್ದರಿಂದ ನನ್ನ ಕೈಕಾಲಗಳಿಗೆ ಗಾಯವಾಗಿದೆ. ಭಾವಿಯಲ್ಲಿ ಬಿದ್ದಿರುವ ನನಗೆ ಈ ದೇವತೆಗಳು ಕಾಣಿಸುತ್ತಿರುವುದು. ಆದರೆ ನಾನು ಮಾತ್ರ ಈ ದೇವತೆಗಳಲ್ಲಿ ಯಾರಿಗೂ ಕಾಣಿಸುತ್ತಿಲ್ಲ.

136. ಕೊನೆಗೆ ಬೃಹಸ್ಪತಿಯಿಂದ ಪ್ರೇರಿತರಾಗಿ ಆ ಸ್ವರ್ಗಾಂತರಿಕ್ಷಭೂಮಿಗಳೆಂಬ ತ್ರಿಸ್ಥಾನಗಳಲ್ಲಿ ವಾಸಿಸುವ ದೇವತೆಗಳೆಲ್ಲ ಆ ತ್ರಿತನಿದ್ದೆಡೆಗೆ ಬಂದು ಅವನು ಯಜ್ಞಾರ್ಥವಾಗಿ ಅರ್ಪಿಸಿದ ಸೋಮರಸದ ಭಾಗವನ್ನು ಸ್ವೀಕರಿಸಿ ತೃಪ್ತರಾದರು.

137. ಬೃಹಸ್ಪತಿಯು ತ್ರಿತನ ಜ್ಞಾನವನ್ನೂ ವಿಜ್ಞಾನವನ್ನೂ ಚೆನ್ನಾಗಿ ತಿಳಿದು ಈ ಸೂಕ್ತದ(೧೦೫ ನೇ ಸೂ) **ಅಸೌ ಯಃ** ಎಂದು ಮೊದಲಾಗುವ ಮೂರು ಋಕ್ಕುಗಳಿಂದ (೧೬-೧೮)ಅವನ ಶಕ್ತಿಸಾಮರ್ಥ್ಯವನ್ನು ಕೊಂಡಾಡಿದನು.

**೧೧೨-೧೨೦ ಸೂಕ್ತಗಳ ದೇವತೆಗಳು.**

138. **ಈಳೇ ದ್ಯಾವಾಪೃಥಿವೀ** ಎಂಬ ಸೂಕ್ತದಲ್ಲಿ (೧೧೨) ಮೊದಲನೆಯ ಪಾದದಲ್ಲಿ ದ್ಯಾವಾಪೃಥಿವಿಗಳ ಸ್ತೋತಿಯೂ ಮುಂದಿನ (೨ನೇ) ಪಾದದಲ್ಲಿ ಅಗ್ನಿಯ ಸ್ತುತಿಯೂ ಇರುವುದು. ಅಲ್ಲಿಂದ ಮುಂದಕ್ಕೆ ಸೂಕ್ತ ಸಮಾಪ್ತಿಯವರೆಗೂ ಅಶ್ವಿನೀ ದೇವತೆಗಳ ಸ್ತುತಿ ಇರುವುದು. **ಇದಂ ಶ್ರೇಷ್ಠಂ** ಎಂಬ ೧೧೩ನೇ ಸೂಕ್ತದಲ್ಲಿ ರಾತ್ರಿ ಮತ್ತು ಉಷೋದೇವತೆಗಳ ಸ್ತುತಿ ಇರುವುದು.

135. 'My limbs were wounded by the bricks of the well. Having seen all (the gods) I praise (them), even though not one (of them) sees (me).

136. The three troops of the All-gods, urged on by Brhaspati, went to that sacrifice of Trita and took shares of it together.

**28. Deities of RV. i. 112-121**

137. As a seer Brhaspati declared the knowledge and discernment of Trita here displayed (ಏತತ್) with the last triplet (i. 105. 16-18) of the hymn (beginning 'That' (ಅಸೌ : i. 105. 16).

138. (The verse) 'I praise' (ಈಳೇ : i. 112. 1) is to Heaven and Earth, the next verse (1) is addressed to Agni; the remainder of the hymn (112. 1-25) should be (regarded as) addressed to the Asvins. 'This' (ಇದಂ : i. 113) is (in) praise of Night and Dawn.

ಇಮಾ ರೌದ್ರಂ ಪರಂ ಸೌರ್ಯಂ ಚಿತ್ರಂ ಪಂಚಾಶ್ವಿನಾನ್ಯತಃ |
ನಾಸತ್ಯಾಭ್ಯಾಮಿತಿ ತ್ವನ್ಯೇ ಅಂತ್ಯಾ ದುಃಸ್ವಪ್ನನಾಶಿನೀ || ೧೩೯ ||

ಐಂದ್ರಂ ಕದ್ವೈಶ್ವದೇವಂ ಚ ಪ್ರೌಷಸೇ ಪೃಥುರುತ್ತರೇ |
ಋಷಿರ್ದಾನಂ ಚ ಭಾವ್ಯಸ್ಯ ಪ್ರಾತರಿತ್ಯತ್ರ ಶಂಸತಿ || ೧೪೦ ||

ಕಾಕ್ಷೀವತಂ ಕದಿತ್ಥೇತಿ ಯದ್ಯೈಂದ್ರಮುಪದಿಶ್ಯತೇ |
ಪರೋಕ್ಷಂ ವೈಶ್ವದೇವಂ ತತ್ಪ್ರದಿಷ್ಟಂ ಸ್ವರಸಾಮಸು || ೧೪೧ ||

139. **ಇಮಾ ರುದ್ರಾಯ** ಎಂಬ ೧೧೪ನೇ ಸೂಕ್ತವು ರುದ್ರದೇವತಾಕವು ; **ಚಿತ್ರಂ ದೇವಾನಾಂ** ಎಂಬ ೧೧೫ನೇ ಸೂಕ್ತದಲ್ಲಿ ಸೂರ್ಯನನ್ನು ಸ್ತುತಿಸಲಾಗಿದೆ. ಅಲ್ಲಿಂದ ಮುಂದಿನ **ನಾಸತ್ಯಾಭ್ಯಾಂ** ಎಂದು ಮೊದಲಾಗುವ ಐದು ಸೂಕ್ತಗಳಿಗೆ (೧೧೬-೧೨೦) ಅಶ್ವಿನೀದೇವತೆಗಳು ದೇವತೆಯು : ೧೨೦ನೇ ಸೂಕ್ತದ **ಅಥ ಸ್ವಪ್ನಸ್ಯ** ಎಂಬ ಕೊನೆಯ ಋಕ್ಕು (೧೨ನೇ ಋಕ್ಕು) ದುಃಸ್ವಪ್ನ (ಫಲ)ವನ್ನು ಪರಿಹಾರ ಮಾಡುವುದು.

140. **ಕದಿತ್ಥಾ** ಎಂಬ ೧೨೧ನೇ ಸೂಕ್ತಕ್ಕೆ ಇಂದ್ರನು, **ಪ್ರ ವಃ ಪಾಂತಂ** ಎಂಬ ೧೨೨ನೇ ಸೂಕ್ತಕ್ಕೆ ವಿಶ್ವೇದೇವತೆಗಳೂ, ಅದರ ಮುಂದಿನ ಎರಡು ಸೂಕ್ತಗಳಿಗೆ (೧೨೩ ಮತ್ತು ೧೨೪) ಉಷೋದೇವತೆಯೂ ದೇವತೆಗಳು. **ಪ್ರಾತಾ ರತ್ನಂ** ಎಂಬ ೧೨೫ನೇ ಸೂಕ್ತದಲ್ಲಿ ಋಷಿಯು ಭಾವಯವ್ಯ ಪುತ್ರನಾದ ಸ್ವನಯನೆಂಬುವನು ಮಾಡಿದ ದಾನವನ್ನು ಪ್ರಶಂಸೆ ಮಾಡಿರುವನು.

141. **ಕದಿತ್ಥಾ** ಎಂಬ ೧೨೧ನೇ ಸೂಕ್ತಕ್ಕೆ ಕಕ್ಷೀವಾನ್ ಎಂಬುವನು ಋಷಿಯು. ಈ ಸೂಕ್ತದಲ್ಲಿ ಪ್ರತ್ಯಕ್ಷವಾಗಿ ಇಂದ್ರನನ್ನು ಸ್ತುತಿಸಿದ್ದರೂ ಪರೋಕ್ಷವಾಗಿ ಈ ಸೂಕ್ತಕ್ಕೆ ವಿಶ್ವೇದೇವತೆಗಳೂ ದೇವತೆಯು ಎಂದು ಸ್ವರಸಾಮ ಮಂತ್ರಗಳಲ್ಲಿ ಉಕ್ತವಾಗಿದೆ.

---

139. 'These' (ಇಮಾಃ : i. 114) is addressed to Rudra; the next, 'The brilliant' (ಚಿತ್ರಂ: i. 115), is addressed to the Sun. Then (come) five (i. 116-120) addressed to the Asvins (beginning) 'For the Nasatyas' (ನಾಸತ್ಯಾಭ್ಯಾಂ: i. 116.1) the last (stanza) in the last (hymn; 1. 120. 12) is destructive of evil dreams.

140 'When'? (ಕದಿತ್ಥಾ : i. 121) is addressed to Indra, and 'Forth' (ಪ್ರ. i. 122) is addressed to the All gods. The two (123-124) next (beginning) 'Broad' (ಪೃಥುಃ : i. 123 1) are addressed to Dawn (ಔಷಸೇ). In 'At morn' (ಪ್ರಾತಃ : i. 125) the seer lauds the gift of Bhavayavya.

141. 'When, indeed?' (ಕದಿತ್ಥಾ : 1. 121), a hymn of Kaksivat which is traditionally held to be addressed to Indra, is indicated as indirectly addressed (ಪರೋಕ್ಷ) to the All-gods in the Svarasamans.

ಅಧಿಗಮ್ಯ ಗುರೋರ್ವಿದ್ಯಾಂ ಗಚ್ಛನ್ಸ್ವನಿಲಯಂ ಕಿಲ |
ಕಕ್ಷೀವಾನಧ್ವನಿ ಶ್ರಾಂತಃ ಸುಷ್ವಾಪಾರಣ್ಯಗೋಚರಃ || ೧೪೨ ||
ತಂ ರಾಜಾ ಸ್ವನಯೋ ನಾಮ ಭಾವಯವ್ಯಸುತೋ ವ್ರಜನ್ |
ಕ್ರೀಡಾರ್ಥಂ ಸಾನುಗೋಽಪಶ್ಯತ್ಸಭಾರ್ಯಃ ಸಪುರೋಹಿತಃ || ೧೪೩ ||
ಅಥೈನಂ ರೂಪಸಂಪನ್ನಂ ದೃಷ್ಟ್ವಾ ದೇವಸುತೋಪಮಂ |
ಕನ್ಯಾದಾನೇ ಮತಿಂ ಚಕ್ರೇ ವರ್ಣಗೋತ್ರಾವಿರೋಧತಃ || ೧೪೪ ||

### ಕಕ್ಷೀವಾನ್ ಮತ್ತು ಸ್ವನಯ ಎಂಬುವರ ವೃತ್ತಾಂತವು.

142. ಕಕ್ಷೀವಾನ್ ಎಂಬ ಋಷಿಯು ಯುವಕನಾಗಿದ್ದಾಗ ತನ್ನ ಗುರುವಿನ ಹತ್ತಿರ ವಿದ್ಯಾಭ್ಯಾಸವನ್ನು ಮಾಡಿ ಮುಗಿಸಿ ಅಲ್ಲಿಂದ ತನ್ನ ಮನೆಗೆ ಹೊರಟು ಬರುವಾಗ ಮಾರ್ಗಾಯಾಸದಿಂದ ಬಳಲಿ ದಾರಿಯಲ್ಲಿ ಸಿಕ್ಕಿದ ಒಂದು ಅರಣ್ಯ ಮಧ್ಯದಲ್ಲಿ ವಿಶ್ರಾಂತಿಗಾಗಿ ಮಲಗಿ ನಿದ್ರೆಮಾಡುತ್ತಿದ್ದನು.

143. ಆ ಸಮಯದಲ್ಲಿ ತನ್ನ ಪತ್ನಿಯಿಂದಲೂ ಪುರೋಹಿತನಿಂದಲೂ ಮತ್ತು ಅನುಚರರಿಂದಲೂ ಸಹಿತನಾದ ಭಾವಯವ್ಯ ಪುತ್ರನಾದ ಸ್ವನಯನೆಂಬ ರಾಜನು ಬೇಟೆಯಾಡುವುದಕ್ಕಾಗಿ ಆ ಅರಣ್ಯದಲ್ಲಿ ಸುತ್ತುತ್ತಿರುವಾಗ ಅಲ್ಲಿ ನಿದ್ರಿಸುತ್ತಿದ್ದ ಈ ಕಕ್ಷೀವಾನ್ ಎಂಬ ಋಷಿಪುತ್ರನನ್ನು ನೋಡಿದನು.

144. ಆಗ ಆ ಸ್ವನಯರಾಜನು, ಅಲ್ಲಿ ನಿದ್ರಿಸುತ್ತಿದ್ದ ರೂಪಯೌವನಸಂಪನ್ನನೂ ದೇವಕುಮಾರನಂತೆ ಸರ್ವಲಕ್ಷಣಶೋಭಿತನೂ ಆದ ಈ ಋಷಿಪುತ್ರನನ್ನು ಕಂಡು ಅವನ ರೂಪಕ್ಕೆ ಬೆರಗಾಗಿ ಈ ಋಷಿಪುತ್ರನ ಜಾತಿ, ಗೋತ್ರ ಮುಂತಾದವುಗಳು ಅನುಕೂಲವಾಗಿದ್ದಲ್ಲಿ ತನ್ನ ಪುತ್ರಿಯನ್ನು ಇವನಿಗೆ ಕೊಡಬೇಕೆಂದು ಅಪೇಕ್ಷಿಸಿದನು.

### 29. Story of Kaksivat and Svanaya.

142. Having acquired knowledge from the spiritual teacher (and) going home, as we are told (ಕಿಲ), Kaksivat fatigued on the way fell asleep within the forest.

143. Him a king, Svanaya by name, the son of Bhavayavya, saw as he went along to amuse himself, accompanied by his retinue, his wife. and his domestic priest.

144. Then on seeing him endowed with beauty (and) resembling the son of god, he thought of bestowing his daughter (on him), if there were no ohjection on the score of caste and family,

ಸಂಬೋಧ್ಯೈನಂ ಸ ಪಪ್ರಚ್ಛ ವರ್ಣಗೋತ್ರಾದಿಕಂ ತತಃ ।
ರಾಜನ್ನಾಂಗಿರಸೋಽಸ್ಮೀತಿ ಕುಮಾರಃ ಪ್ರತ್ಯುವಾಚ ತಂ　　॥ ೧೪೫ ॥
ಪುತ್ರೋಽಹಂ ದೀರ್ಘತಮಸ ಔಚಥ್ಯಸ್ಯ ಋಷೇರ್ನೃಪ ।
ಅಥಾಸ್ಮೈ ಸ ದದೌ ಕನ್ಯಾ ದಶಾಭರಣಭೂಷಿತಾಃ　　॥ ೧೪೬ ॥
ತಾವತಶ್ಚ ರಥಾಞ್ಛ್ಯಾವಾನ್ಪೀಡ್ವಂಗಾನ್ಶ್ಚ ಚತುರ್ಯುಜಃ ।
ವಧೂನಾಂ ವಾಹನಾರ್ಥಾಯ ಧನಕುಪ್ಯಮಜಾವಿಕಂ　　॥ ೧೪೭ ॥
ನಿಷ್ಕಾಣಾಂ ವೃಷಭಾಣಾಂ ಚ ಶತಂ ಶತಮುದಾತ್ಪುನಃ ।
ಏತದುತ್ತರಸೂಕ್ತೇನ ಶತಮಿತ್ಯಾದಿನೋದಿತಂ　　॥ ೧೪೮ ॥

145. ಬಳಿಕ ಆ ರಾಜನು ಆ ಋಷಿಕುಮಾರನನ್ನು ನಿದ್ರೆಯಿಂದ ಎಬ್ಬಿಸಿ ಅವನ ಕುಲಗೋತ್ರ ಮುಂತಾದ ವಿವರಗಳನ್ನು ಕೇಳಿದನು. ಅದಕ್ಕೆ ಆ ಋಷಿಕುಮಾರನು ಇಂತೆಂದನು—ಎಲೈ ರಾಜನೇ, ನಾನು ಆಂಗಿರಸ ಗೋತ್ರದವನು,

146. ಉಚಥ್ಯಪುತ್ರನಾದ ದೀರ್ಘತಮಸ್ಸೆಂಬ ಋಷಿಯ ಪುತ್ರನು ಎಂದು ಹೇಳಲಾಗಿ ಅದನ್ನು ಕೇಳಿ ಸಂತೋಷಪಟ್ಟು ಸರ್ವಾಭರಣಭೂಷಿತೆಯರಾದ ತನ್ನ ಹತ್ತು ಮಂದಿ ಪುತ್ರಿಯರನ್ನು ಅವನಿಗೆ ವಿವಾಹಮಾಡಿಕೊಟ್ಟನು

147. ಮತ್ತು ವಿವಾಹಕಾಲದಲ್ಲಿ ತನ್ನ ಪುತ್ರಿಯರನ್ನು ಕಳುಹಿಸುವುದಕ್ಕಾಗಿ ಆ ಋಷಿಪುತ್ರನಿಗೆ ಹತ್ತು ರಥಗಳನ್ನೂ, ಒಂದೊಂದು ರಥಕ್ಕೆ ನಾಲ್ಕರಂತೆ ಕೆಂಪುವರ್ಣದ ಧಷ್ಟಪುಷ್ಟವಾದ ಕುದುರೆಗಳನ್ನೂ, ಧನಾದಿದ್ರವ್ಯವನ್ನೂ, ಪಾತ್ರೆಪದಾರ್ಥಗಳನ್ನೂ, ಆಡು, ಕುರಿಗಳನ್ನೂ ಬಳುವಳಿಯಾಗಿ ಕೊಟ್ಟನು.

148. ಇದಲ್ಲದೆ ನೂರು ಚಿನ್ನದ ನಿಷ್ಕಗಳನ್ನು (ಅಥವಾ ಆಭರಣಗಳನ್ನೂ) ನೂರು ಹೋರಿ (ಎತ್ತು) ಗಳನ್ನು ಅವನಿಗೆ ಕೊಟ್ಟನು. ಈ ವಿಷಯವನ್ನೇ ಮುಂದಿನ ಸೂಕ್ತದ (೧೨೬ನೇ ಸೂಕ್ತದ) **ಶತಂ ರಾಜ್ಞೋ ನಾಧಮಾನಸ್ಯ ನಿಷ್ಕಾನ್** (೨ನೇ ಋಕ್ಕು) ಎಂದು ಮೊದಲಾದ ಋಕ್ಕುಗಳಲ್ಲಿ ವರ್ಣಿಸಲಾಗಿದೆ.

145. Then after wakening him he inquired as to his caste, family, and so forth. The youth replied to him saying, 'O king, I am of the race of Angirasas;

146. 'I am a son of the seer Drighatamas, son of Uchathya, O king.' Thereupon he (ಸ್ವನಯ) gave him ten maidens decked with ornaments.

### 30. Story of Kaksivat and Svanaya (continued)

147. and the same number of chariots, strong-bodied bay steeds going in teams of four, for the purpose of conveying the maidens, money and (utensils of) inferior metal, goats and sheep.

148. Further he gave (him) a hundred necklets and a hundred bulls. This is told in the next hymn with (the stanza) 'A hundred' (ಶತಂ. 1-126-2) and so forth.

ಶತಮಶ್ವಾನ್ನಿಷ್ಕಶತಂ ನಿಷ್ಕಾನ್ರಥಾನ್ದಶ ವಧೂಮತಃ ।
ಚತುರ್ಯುಜೋ ಗವಾಂ ಚೈವ ಸಹಸ್ರಂ ಷಷ್ಟ್ಯಧಿಕಂ ॥ ೧೪೯ ॥
ಸ್ವನಯಾದ್ಭಾವಯವ್ಯಾದ್ಯಃ ಕಕ್ಷೀವಾನ್ಪ್ರತ್ಯಪದ್ಯತ ।
ಪ್ರತಿಗೃಹ್ಯ ಚ ತುಷ್ಟಾವ ಪ್ರಾತಃ ಪಿತ್ರೇ ಶಶಂಸ ಚ ॥ ೧೫೦ ॥
ಫಲಪ್ರದರ್ಶನಂ ತಸ್ಯ ಕ್ರಿಯತೇ ಪ್ರಾಯಶಸ್ತ್ವಿಹ ।
ದ್ವಿತೀಯಾಂ ತು ಪಿತಾಪಶ್ಯತ್ಸುಗುರಿತ್ಯಾದಿಕಾಮೃಚಂ ॥ ೧೫೧ ॥
ಕಾಕ್ಷೀವತಂ ಸರ್ವಮಿತಿ ಭಗವಾನಾಹ ಶೌನಕಃ ।
ಏಷಾ ತು ದೈರ್ಘತಮಸೀ ಸಾನುಲಿಂಗಾ ಕಥಂ ಭವೇತ್ ॥ ೧೫೨ ॥

149. ಮತ್ತು ನೂರು ಕುದುರೆಗಳನ್ನೂ, ನೂರು ಚಿನ್ನದ ನಿಷ್ಕ ಅಥವಾ ಆಭರಣಗಳನ್ನೂ, ಹತ್ತು ರಥಗಳನ್ನೂ ಆ ರಥಗಳಿಗೆ ಒಂದೊಂದಕ್ಕೆ ನಾಲ್ಕರಂತೆ ಕುದುರೆಗಳನ್ನೂ ಅರವತ್ತು ಸಾವಿರ ಗೋವುಗಳನ್ನೂ,

150. ಭಾವಯವ್ಯನ ಪುತ್ರನಾದ ಸ್ವನಯರಾಜನಿಂದ ಈ ಕಕ್ಷೀವಾನ್ ಋಷಿಕುಮಾರನು ಪಡೆದನು. ಬಳುವಳಿಯಾಗಿ ಕೊಟ್ಟ ಈ ವಸ್ತುಗಳಿಂದ ಸಂತುಷ್ಟನಾದ ಋಷಿಕುಮಾರನು ಅವುಗಳನ್ನು ಸ್ವೀಕರಿಸಿ ಆ ವಿಷಯವನ್ನು ಮಾರನೆಯ ದಿವಸ ಪ್ರಾತಃಕಾಲದಲ್ಲಿ ತನ್ನ ತಂದೆಗೆ ವಿಶದವಾಗಿ ತಿಳಿಸಿದನು.

**ರಾಜರ ದಾನಪ್ರಶಂಸೆ, ನಾರಾಶಂಸೀ ಮಂತ್ರಗಳು ಮತ್ತು ೧೨೬ನೇ ಸೂಕ್ತದ ೬,೭ನೇ ಮಂತ್ರಗಳ ವಿಷಯದಲ್ಲಿ ಕೆಲವು ಅಭಿಪ್ರಾಯಗಳು.**

151. ಈಗ ಈ ೧೨೫ನೇ ಸೂಕ್ತದಲ್ಲಿ ಮೇಲೆ ಹೇಳಿದ ವಿವಿಧ ವಸ್ತುಗಳ ದಾನ ಪ್ರಶಂಸೆಯು ಉಕ್ತವಾಗಿರುವುದು. ಈ ಸೂಕ್ತದ **ಸುಗುರಸತ್** ಎಂಬ ೨ನೇ ಋಕ್ಕಿಗೆ ಈ ಕಕ್ಷೀವಂತನ ತಂದೆಯಾದ **ದೀರ್ಘತಮಾಃ** ಎಂಬುವನು ದ್ರಷ್ಟೃವು.

152. ಆದರೆ ಈ ಸೂಕ್ತವೆಲ್ಲಕ್ಕೂ ಕಕ್ಷೀವಂತನೇ ದ್ರಷ್ಟೃವೆಂದು (ಋಷಿಯೆಂದು) ಪೂಜ್ಯರಾದ ಶೌನಕರು ಅಭಿಪ್ರಾಯಪಡುವರು. ಹೀಗಿರುವಾಗ ಮಧ್ಯದಲ್ಲಿರುವ ಈ ೨ನೆ, ಋಕ್ಕು ಮಾತ್ರ (ಅದರಲ್ಲಿರುವ ವಿಷಯಗಳನ್ನು ಪರಿಶೀಲಿಸಿದರೆ) ದೀರ್ಘತಮಸ್ಸೆಂಬ (ಕಕ್ಷೀವಂತನ ತಂದೆ) ಋಷಿದೃಷ್ಟವಾಗುವುದು ಹೇಗೆ ಸಾಧ್ಯ ?

---

149. A hundred horses, a hundred necklettes, ten chariots with maidens, (steeds) going in teams of four, and a thousand and sixty cows.

150. Kaksivat, who obtained (all this) from Svanaya Bhavayavya, both praised (him) after receiving (it) and recited (the hymn) ‘At morn’ (ಪ್ರಾತಃ i. 125) to his father.

**31. Gifts of kings; Narasamsi stanzas; Opinions regarding i. 126—6, 7.**

151. Now here (in 125) the rewards of (liberality) are for the most part set forth to him. The father, howcver saw the second (stanza), which begins ‘ possessed of many cows (ಸುಗುಃ : 125. 2).

152. The revered Saunaka says that the whole (hymn) is Kaksivat's But as to this (stanza), how could it, according to the indications (it contains) have been seen by Dirghatamas?

ಉಚ್ಯತೇ ಪ್ರಾತರಿತ್ಯುಕ್ತೇ ಸೂನೋರ್ದಾನೇನ ಹರ್ಷಿತಃ ।
ರಾಜ್ಞ ಆಶಿಷಮಾಹಾಥ ಸುಗುರಿತ್ಯಾದಿನಾ ಕಿಲ ॥ ೧೫೩ ॥
ಕರ್ಮಾಣಿ ಯಾಭಿಃ ಕಥಿತಾನಿ ರಾಜ್ಞಾಂ ದಾನಾನಿ ಚೋಚ್ಚಾವಚಮಧ್ಯಮಾನಿ ।
ನಾರಾಶಂಸೀರಿತ್ಯೃಚಸ್ತಾಃ ಪ್ರತೀಯಾದ್ಯಾಭಿಃ ಸ್ತುತಿರ್ದಾಶತಯೀಷು ರಾಜ್ಞಾಂ ॥ ೧೫೪ ॥
ಪಂಚಾಮಂದಾನ್ಭಾವಯವ್ಯಸ್ಯ ಗೀತಾ ಜಾಯಾಪತ್ಯೋಃ ಸಂಪ್ರವಾದೋ ದ್ವ್ಯಚೇನ ।
ಸಂಪ್ರವಾದಂ ರೋಮಶಯೇಂದ್ರರಾಜ್ಞೋರೇತೇ ಋಚೌ ಮನ್ಯತೇ ಶಾಕಪೂಣಿಃ ॥೧೫೫॥

153. ಅದಕ್ಕೆ ಸಮಾಧಾನವೇನೆಂದರೆ–ಕಕ್ಷೀವಂತನು ತನ್ನ ತಂದೆಗೆ **ಪ್ರಾತಾ ರತ್ನಂ** (೧೨೫ನೇ ಸೂಕ್ತ) ಎಂಬ ಸೂಕ್ತದಂತೆ ರಾಜನ ದಾನವನ್ನು ಪ್ರಶಂಸಿಸಿ ಹೇಳಿದಾಗ ಅದನ್ನು ಕೇಳಿ ಹರ್ಷಗೊಂಡ ಅವನ ತಂದೆಯಾದ ದೀರ್ಘತಮಸ್ಸು **ಸುಗುಃ** ಎಂದು ಮೊದಲಾಗುವ ಮಂತ್ರಗಳಿಂದ ತನ್ನ ಪುತ್ರನಿಗೆ ದಾನವನ್ನು ಕೊಟ್ಟ ಸ್ವನಯರಾಜನ ವಿಷಯದಲ್ಲಿ ಆಶೀರ್ವಾದವನ್ನು ಪಠಿಸಿ ಅವನಿಗೆ ಒಳ್ಳೆಯದಾಗಲೆಂದು ಹಾರೈಸಿರುವನು ಎಂದು ಹೇಳುವುದು. ಸಮಂಜಸವಷ್ಟೆ,

154. ರಾಜರ ದಾನಪ್ರಶಂಸೆ ಇರುವ ಮಂತ್ರಗಳು ಅವು ದೊಡ್ಡವಾಗಿರಲಿ, ಸಣ್ಣವಾಗಿರಲಿ ಅಥವಾ ಮಧ್ಯಸ್ಥವಾಗಿರಲಿ ಋಗ್ವೇದದ ಹತ್ತು ಮಂಡಲಗಳಲ್ಲಿ ಅಲ್ಲಲ್ಲಿ ಇರುವ ಅಂತಹ ಮಂತ್ರಗಳಿಗೆ **ನಾರಾಶಂಸೀ** ಮಂತ್ರಗಳೆಂದು ಕರೆಯುವ ರೂಢಿ ಇರುವುದು.

155. **ಅಮಂದಾನ್** ಎಂಬ ೧೨೬ ನೇ ಸೂಕ್ತದ ಮೊದಲ ಐದು ಋಕ್ಕುಗಳಲ್ಲಿ ಭಾವಯವ್ಯ (ಸ್ವನಯ) ಎಂಬ ರಾಜನ ಪ್ರಶಂಸೆ ಇರುವುದು. ಮತ್ತು ೬-೭ ನೇ ಋಕ್ಕುಗಳಲ್ಲಿ ದಂಪತಿಗಳಾದ ಸ್ವನಯನಿಗೂ ಅವನ ಪತ್ನಿಯಾದ **ರೋಮಶಾ** ಎಂಬ ಸ್ತ್ರೀಗೂ ನಡೆದ ಸಂಭಾಷಣೆ ಇರುವುದು. ಆದರೆ ಈ ಎರಡು ಋಕ್ಕುಗಳಲ್ಲಿರುವ ಸಂಭಾಷಣೆಯು **ರೋಮಶಾ** ಎಂಬ ಸ್ತ್ರೀಗೂ, ರಾಜನಿಗೂ ಇಂದ್ರನಿಗೂ ನಡೆದದ್ದು ಎಂದು **ಶಾಕಪೂಣಿ** ಎಂಬ ಆಚಾರ್ಯರ ಅಭಿಪ್ರಾಯವಿರುವುದು.

---

153. The answer is, that when ‹ At morn ’ (ಪ್ರಾತಃ : 1. 125. 1) had been uttered (by Kaksivat), he (Dirghatamas) was delighted by the gift to his son, and then uttered a prayer for the king with (the stanza) ‘ possessed of many cows’ (ಸುಗುಃ : 1. 125 2).

154. The stanzas in which the deeds of kings and their gifts, great, small, and middling, are told, should be understood to be called ‘ Laudations of Men ’ (ನಾರಾಶಂಸಿ), as the praise of kings (is expressed) by them in the ten books (of the Rg-Veda).

155. The five (stanzas) ‘ Lively ’ (ಅಮಂದಾನ್ : i. 126. 1-5) are a song (in praise) of Bhavayavya. With a couplet (6, 7) there is a conversation of a husband and wife. Sakapuni thinks these two stanzas are a conversation of Indra and the king with Romasa.

**ಇಂದ್ರೇಣ ಜಾಯಾಪತ್ಯೋಶ್ಚೇತಿಹಾಸಂ ದ್ವ್ಯೃಚೇಽಸ್ಮಿನ್ಮನ್ಯತೇ ಶಾಕಟಾಯನಃ ।**
**ಪ್ರಾದಾತ್ಸುತಾಂ ರೋಮಶಾಂ ನಾಮ ನಾಮ್ನಾ ಬೃಹಸ್ಪತಿರ್ಭಾವಯವ್ಯಾಯ ರಾಜ್ಞೇ ॥೧೫೬॥**
**ಬೃಹಸ್ಪತಿರ್ಭಾವಯವ್ಯಾಯ ರಾಜ್ಞೇ ॥**

**॥ ಇತಿ ಬೃಹದ್ದೇವತಾಯಾಂ ತೃತೀಯೋಽಧ್ಯಾಯಃ ಸಮಾಪ್ತಃ ॥**

156. ಈ ಎರಡು ಋಕ್ಕುಗಳ ವಿಷಯದಲ್ಲಿ ಶಾಕಟಾಯನರೆಂಬ ಆಚಾರ್ಯರ ಅಭಿಪ್ರಾಯವು ಬೇರೆ ರೀತಿಯಲ್ಲಿರುವುದು—ಇಂದ್ರನಿಗೆ ಸಂಬಂಧಿಸಿದಂತೆ ದಂಪತಿಗಳ (ಗಂಡಹೆಂಡಿರ) ಇತಿಹಾಸವು ಈ ಋಕ್ಕುಗಳಲ್ಲಿ ಉಕ್ತವಾಗಿರುವುದು. ಬೃಹಸ್ಪತಿಯು ತನ್ನ ಪುತ್ರಿಯಾದ **ರೋಮಶಾ** ಎಂಬ ಸ್ತ್ರೀಯನ್ನು **ಭಾವಯವ್ಯ** ಎಂಬ ರಾಜನಿಗೆ ಮದುವೆ ಮಾಡಿಕೊಟ್ಟನು ಎಂದು ಈ ಇತಿಹಾಸದ ಸಾರಾಂಶವು.

ಇಲ್ಲಿಗೆ ಶೌನಕಮಹರ್ಷಿಪ್ರೋಕ್ತವಾದ ಬೃಹದ್ದೇವತಾ ಎಂಬ ಗ್ರಂಥದಲ್ಲಿ ಮೂರನೆಯ ಅಧ್ಯಾಯವು ಸಮಾಪ್ತವಾದುದು.

156. Sakatayana thinks that in this couplet there is a story of a husband and wife (in connexion) with Indra. Brhaspati gave his daughter Romasa by name, to king Bhavayavya.

**Thus ends the Third Chapter.**



# ಅಥ ಬೃಹದ್ದೇವತಾಯಾಂ ಚತುರ್ಥೋಽಧ್ಯಾಯಃ

ತತಸ್ತಮರ್ಥಂ ಹರಿವಾನ್ವಿದಿತ್ವಾ ಪ್ರಿಯಂ ಸಖಾಯಂ ಸ್ವನಯಂ ದಿದೃಕ್ಷುಃ |
ಅಭ್ಯಾಜಗಾಮಾಶು ಶಚೀಸಹಾಯಃ ಪ್ರೀತ್ಯಾರ್ಚಯತ್ತಂ ವಿಧಿನೈವ ರಾಜಾ || ೧ ||

ಅಭ್ಯಾಜಗಾಮಾಂಗಿರಸೀ ಚ ತತ್ರ ಹೃಷ್ಟಾ ತಯೋಃ ಸಾ ಚರಣೌ ವವಂದೇ |
ಇಂದ್ರಃ ಸಖಿತ್ವಾದಥ ತಾಮುವಾಚ ರೋಮಾಣಿ ತೇ ಸಂತಿ ನ ಸಂತಿ ರಾಜ್ಞಿ || ೨ ||

## ನಾಲ್ಕನೆಯ ಅಧ್ಯಾಯವು.

### ರೋಮಶಾ ಮತ್ತು ಇಂದ್ರ ಇವರ ವೃತ್ತಾಂತ—೧೨೬-೧೩೬ ನೇ ಸೂಕ್ತಗಳು

1. ಅನಂತರ ಸ್ವನಯರಾಜನು ತನ್ನ ಪುತ್ರಿಯರನ್ನು ಕಕ್ಷೀವಂತನಿಗೆ ವಿವಾಹಮಾಡಿಕೊಟ್ಟ ವಿಚಾರವನ್ನು ತಿಳಿದು ಇಂದ್ರನು ತನ್ನ ಪ್ರಿಯಮಿತ್ರನಾದ ಸ್ವನಯರಾಜನನ್ನು ನೋಡಬೇಕೆಂಬ ಅಪೇಕ್ಷೆಯಿಂದ ತನ್ನ ಪತ್ನಿಯಾದ ಶಚೀದೇವಿಯೊಡಗೂಡಿ ಸ್ವನಯನ ಸಮೀಪಕ್ಕೆ ಬೇಗನೆ ಬಂದನು. ಇಂದ್ರನು ತನ್ನ ಮನೆಗೆ ಬಂದುದನ್ನು ಕಂಡು ಸ್ವನಯರಾಜನು ಅವನನ್ನು ಪ್ರೀತ್ಯಾದರಗಳಿಂದ ಸತ್ಕರಿಸಿ ಪೂಜಿಸಿದನು.

2. ಆಗ ಅಂಗಿರಸಗೋತ್ರದಲ್ಲಿ ಉತ್ಪನ್ನಳಾದ ಎಂದರೆ ಬೃಹಸ್ಪತಿಯ ಪುತ್ರಿಯು ಅಲ್ಲಿಗೆ ಬಂದು ಸಂತೋಷಭರಿತಳಾಗಿ ಇಂದ್ರನ ಮತ್ತು ಶಚೀದೇವಿಯರ ಪಾದಗಳನ್ನು ಮುಟ್ಟಿ ನಮಸ್ಕರಿಸಿದಳು. ಬಳಿಕ ಇಂದ್ರನು ಸ್ನೇಹಭಾವದಿಂದ ಆ ಪುತ್ರಿಯನ್ನು ಕುರಿತು—ಎಲೈ ರಾಜಪುತ್ರಿಯೇ, ನಿನಗೆ ರೋಮಗಳು ಇವೆಯೇ ಅಥವಾ ಇಲ್ಲವೇ ಎಂದು ಕೇಳಿದನು (ಎಂದರೆ ಯೌವನಸೂಚಕವಾದ ರೋಮಗಳು ಮರ್ಮಾಂಗಗಳಲ್ಲಿ ಬೆಳದಿವೆಯೇ ಅಥವಾ ಇಲ್ಲವೇ ಎಂದರೆ, ನೀನು ಸಂಭೋಗಾರ್ಹಳಾದ ಯುವತಿಯೇ ಅಥವಾ ಇನ್ನೂ ಬಾಲ್ಯಾವಸ್ಥೆಯಲ್ಲಿರುವ ಕುಮಾರಿಯೇ ಎಂದು ಕೇಳಿದನು ಎಂದಭಿಪ್ರಾಯವು).

---

## Chapter 4.

### 1. Romasa and Indra. RV. i. 127-136 Praise in the dual.

1. Then the Lord of Bays, the Companion of Sachi (Indra) becoming aware of that affair, (and) desirous of seeing his dear friend Swanaya, quickly went to him. The king joyfully honoured him with due ceremony.

2 And the daughter of the Angiras (Brhaspati) came there; rejoicing she adored their feet. Indra then in a friendly way said to her: 'Have you hair or have you not, O Queen ?'.

ಸಾ ಬಾಲಭಾವಾದಥ ತಂ ಜಗಾದ ಉಪೋಪ ಮೇ ಶಕ್ರ ಪರಾಮೃಶೇತಿ ।
ತಾಂ ಪೂರ್ವಯಾ ಸ್ಯಾಂತ್ವ್ಯ ನೃಪಃ ಪ್ರಹೃಷ್ಟೋ ಅನ್ವವ್ರಜತ್ಸಾಥ ಪತಿಂ ಪತಿವ್ರತಾ ॥ ೩ ॥
ಅಥಾಗ್ನೇಯೇ ಅಗ್ನಿಮಿತ್ಯುತ್ತರೇ ಯಂ ಪಂಚೈಂದ್ರಾಣಿ ಪ್ರ ತದೈನ್ದವ್ಯೃಗತ್ರ ।
ಯುವಂ ತಮಿಂದ್ರಾಪರ್ವತೌ ಸಹ ಸ್ತುತೌ ತ್ವಿಂದ್ರಂ ಮೇನ ಇಹ ಯಾಸ್ಕಃ ಪ್ರಧಾನಂ ।೪॥
ಋಕ್ಷು ಸ್ತುತಃ ಪರ್ವತವದ್ಧಿ ವಜ್ರೋ ದ್ವಿವತ್ಸ್ತುತೌ ಚೇಂದ್ರಮಾಹುಃ ಪ್ರಧಾನಂ ।

3. ಆ ಯುವತಿಯು ಇಂದ್ರನ ಪ್ರಶ್ನೆಗೆ ಉತ್ತರಕೊಡುತ್ತಾ ತನ್ನ ಬಾಲಭಾವಕ್ಕೆ ಸಹಜವಾದ ಮೃದುನುಡಿಯಿಂದ ಎಲೈ ಇಂದ್ರನೇ, ನನ್ನ ಸಮಿಾಪಕ್ಕೆ ಬಂದು ನನ್ನನ್ನು ಮುಟ್ಟಿನೋಡು ಎಂದು ಹೇಳಿದಳು (೧೨೬ ನೇ ಸೂಕ್ತದ **ಉಪೋಪ ಮೇ** ಎಂಬ ೭ ನೇ ಋಕ್ಕು). ಆವಳ ಮಾತನ್ನು ಕೇಳಿ ರಾಜನು ಆವಳನ್ನು ಹಿಂದಿನ ಋಕ್ಕಿನಿಂದ (**ಆಗಧಿತಾ** ಎಂಬ ೬ ನೇ ಋಕ್ಕು) ಸಮಾಧಾನಮಾಡಿ ಹರ್ಷದಿಂದಿದ್ದನು. ಅನಂತರ ಆ ರಾಜಪುತ್ರಿಯು ತನ್ನ ಪತಿಯನ್ನು ಸಾಧ್ವಿಯಾದ ಪತಿವ್ರತೆಯಂತೆ ಅನುಸರಿಸಿ ಹೋದಳು.

4. ಅನಂತರ ಮುಂದಿನ ಎರಡು ಸೂಕ್ತಗಳಿಗೆ (**ಅಗ್ನಿಂ ಹೋತಾರಂ** ಎಂದು ಮೊದಲಾಗುವ ೧೨೭, ೧೨೮ ನೇ ಸೂಕ್ತಗಳಿಗೆ) ಅಗ್ನಿಯು ದೇವತೆಯು ; ಅಲ್ಲಿಂದ ಮುಂದಿನ **ಯಂ ತ್ವಂ** ಎಂದು ಮೊದಲಾಗುವ ಐದು ಸೂಕ್ತಗಳಿಗೆ (೧೨೯-೧೩೩) ಇಂದ್ರನು ದೇವತೆಯು ; ಆದರೆ ೧೨೯ ನೇ ಸೂಕ್ತದ **ಪ್ರ ತದ್ವೋಚೇ** ಎಂಬ ೬ ನೇ ಋಕ್ಕಿನಲ್ಲಿ ಇಂದುವು ಸ್ತುತಿಸಲ್ಪಟ್ಟಿರುವನು. ಮತ್ತು ೧೩೨ ನೇ ಸೂಕ್ತದ **ಯುವಂ ತಮಿಂದ್ರಾಪರ್ವತಾ** ಎಂಬ ೬ ನೇ ಋಕ್ಕಿನಲ್ಲಿ ಇಂದ್ರ ಮತ್ತು ಪರ್ವತರಿಬ್ಬರ ಸ್ತುತಿಯೂ ಇರುವುದು. ಆದರೂ ಈ ಋಕ್ಕುಗಳಲ್ಲಿ ಇಂದ್ರನಿಗೆ ಪ್ರಾಧಾನ್ಯವಿರುವುದೆಂದು ಯಾಸ್ಕರು ಭಾವಿಸುವರು.

5. ಏಕೆಂದರೆ, ಕೆಲವು ಋಕ್ಕುಗಳಲ್ಲಿ ಇಂದ್ರನ ವಜ್ರಾಯುಧವು ಪರ್ವತದಂತೆ ಎಂದರೆ ಪರ್ವತಶಬ್ದದಿಂದ ವರ್ಣಿಸಲಾಗಿರುವುದು. ಆದ್ದರಿಂದ ಇಂದ್ರ ಮತ್ತು ಆವನ ವಜ್ರಾಯುಧವನ್ನು ಸ್ತುತಿಸುವಾಗ ದ್ವಿವಚನಪ್ರಯೋಗವಿರುವುದು ಸಹಜವು. ಆದ್ದರಿಂದ ಇಂತಹ ಸಂದರ್ಭಗಳಲ್ಲಿ ಇಂದ್ರನಿಗೆ ಪ್ರಾಧಾನ್ಯತೆ ಇರುವುದೆಂದು ಕೆಲವರು ಹೇಳುವರು. ಮುಂದಿನ **ಆ ತ್ವಾ** ಎಂಬ ೧೩೪ ನೇ ಸೂಕ್ತದಲ್ಲಿರುವ ೬ ಋಕ್ಕುಗಳಿಗೂ ಮುಂದಿನ **ಸ್ತೀರ್ಣಂ ಬರ್ಹಿಃ** ಎಂಬ ೧೩೫ ನೇ

3. She in a childlike way then addressed him 'Feel me closely (ಉಪೋಪಮೇ : i. 126. 7), Mighty one'. The king having soothed her with the previous (stanza : i. 126. 6), rejoiced. She then followed her husband as a devoted wife.

4. Next follow, two hymns (127, 128) addressed to Agni beginning) 'Agni' (ಅಗ್ನಿಂ : i. 127). There are (then) five (129-133) addressed to Indra (beginning), 'Which' (ಯಂ : i. 129). Here the stanza (Forth this' ( ಪ್ರತತ್ : i. 129. 6) is addressed to Indu, while Indra-Parvata are praised together (in) 'Ye him' (ಯುಂ ತಂ : i. 132. 6). Yaska here considered Indra to be predominant.

5. For in (certain) stanzas (Indra's) bolt is praised as Parvata, and when there is praise (of the two) in the dual (ದ್ವಿವತ್ಸ್ತುತೌ) they say that Indra is predominant, (Beginning with 'Hither you (ಆ ತ್ವಾ : i. 134. 1)

ಆ ತ್ವಾ ವಾಯೋರ್ನವ ಪಂಚೇಂದ್ರವಾಯ್ವೋರೇಕಾ ವಾಯೋರುತ್ತರಂ ದ್ವಿಪ್ರಧಾನಂ ||೫||
ತತ್ರ ಪಂಚ ವರುಣಮಿತ್ರದೇವಾ ದಿವಾದಿಭ್ಯಃ ಕಥಿತಾಭ್ಯಃ ಪರೇ ದ್ವೇ |
ದ್ವೇ ದ್ವೇ ಪದೇ ಸಂಸ್ತುತೇ ರೋದಸೀ ಚ ದೇವಾಶ್ಚಾರ್ಧರ್ಚೇನ ವಿಭಕ್ತಮನ್ಯತ್ || ೬ ||
ಮೈತ್ರಾವರುಣಂ ಸುಷುಮೇತಿ ಸೂಕ್ತಂ ಪ್ರಪ್ರ ಪೌಷ್ಣಂ ವೈಶ್ವದೇವಂ ತೃತೀಯಂ |
ಅಸ್ತು ಶ್ರೌಷಟ್ ವೈಶ್ವದೇವಂ ತೃತೀಯಂ ವೈಶ್ವದೇವಂ ಸ್ಯಾದ್ಬಹುದೇವತೇಷು || ೭ ||

ಸೂಕ್ತದಲ್ಲಿ ಮೊದಲ ಮೂರು ಋಕ್ಕುಗಳಿಗೂ (೧-೩) ಒಟ್ಟು ೯ ಋಕ್ಕುಗಳಿಗೆ ವಾಯುವು ದೇವತೆಯು ; ಮುಂದಿನ ೫ ಋಕ್ಕುಗಳಿಗೆ (೧೩೫ರಲ್ಲಿ ೪-೮ ಋಕ್ಕುಗಳಿಗೆ) ಇಂದ್ರವಾಯುಗಳೂ, ಅದರ ಮುಂದಿನ ಒಂದು ಋಕ್ಕಿಗೆ (೯ನೇ ಋಕ್ಕಿಗೆ) ವಾಯುವೂ ದೇವತೆಯು ; ಮುಂದಿನ **ಪ್ರ ಸು** ಎಂಬ ೧೩೬ ನೇ ಸೂಕ್ತಕ್ಕೆ ಮುಖ್ಯರಾದ (ಮಿತ್ರಾವರುಣರೆಂಬ) ಇಬ್ಬರು ದೇವತೆಗಳಿರುವರು.

6. ೧೩೬ ನೇ ಸೂಕ್ತದ ಮೊದಲ ೫ ಋಕ್ಕುಗಳಿಗೆ ಮಿತ್ರಾವರುಣರು ದೇವತೆಗಳು. ಮುಂದಿನ (೬-೭) ಎರಡು ಋಕ್ಕುಗಳಿಗೆ ದ್ಯಾವಾಪೃಥಿವೀ ಮೊದಲಾದವರು ದೇವತೆಗಳು. ೬ ನೇ ಋಕ್ಕಿನ ಪ್ರತಿಪಾದದಲ್ಲಿಯೂ ಇಬ್ಬಿಬ್ಬರು ದೇವತೆಗಳು ಸ್ತುತರಾಗಿರುವರು. ೭ ನೇ ಋಕ್ಕಿನ ಪೂರ್ವಾರ್ಧದಲ್ಲಿ ದೇವತೆಗಳೆಂದು ದೇವತೆಗಳನ್ನು ಒಟ್ಟಾಗಿಯೂ ಉತ್ತರಾರ್ಧದಲ್ಲಿ ಪ್ರತ್ಯೇಕವಾಗಿ ಹೆಸರುಗಳಿಂದಲೂ ಸ್ತುತಿಸಲಾಗಿದೆ.

**೧೩೭-೧೩೯ ನೇ ಸೂಕ್ತಗಳ ದೇವತೆಗಳು ; ವೈಶ್ವದೇವಸೂಕ್ತಗಳ ಸ್ವರೂಪ**

7. **ಸುಷುಮಾ ಯಾತಂ** ಎಂಬ ೧೩೭ ನೇ ಸೂಕ್ತಕ್ಕೆ ಮಿತ್ರಾವರುಣರೂ, **ಪ್ರಪ್ರ** ಎಂಬ ೧೩೮ ನೇ ಸೂಕ್ತಕ್ಕೆ ಪೂಷನೂ, **ಅಸ್ತು ಶ್ರೌಷಟ್** ಎಂಬ ೧೩೯ ನೇ ಸೂಕ್ತಕ್ಕೆ ವಿಶ್ವೇದೇವತೆಗಳೂ ದೇವತೆಯು; ಮೂರನೆಯದಾದ **ಅಸ್ತು ಶ್ರೌಷಟ್** ಎಂಬ ಸೂಕ್ತದಲ್ಲಿ ಅನೇಕ ದೇವತೆಗಳ ಸ್ತುತಿಯಿರುವುದು ವಿಶ್ವೇದೇವತಾಕವಾದ (ಅಥವಾ ವೈಶ್ವದೇವ) ಸೂಕ್ತಗಳಲ್ಲಿ ಅನೇಕ ದೇವತೆಗಳ ಸ್ತುತಿ ಇರುವುದು ಎಂದರೆ, ಅನೇಕ ದೇವತೆಗಳ ಸ್ತುತಿ ಇರುವ ಸೂಕ್ತಕ್ಕೆ ವೈಶ್ವದೇವಸೂಕ್ತವೆಂದು ಹೆಸರು.

---

there are nine (stanzas : i. 134. 1-6, 135 1-3) to Vayu, (then) five (i. 135.4-8) to Indra-Vayu, (then) one (i. 135. 9) to Vayu. The next (hymn : i. 136) has two predominant (deities).

**2. Distributed Praise. RV. i. 137–139 Vaisvadeva hymns.**

6. There, five stanzas (i. 136 1-5) have Varuna and Mitra for their gods; the following two (i. 136. 6,7) are (addressed) to the (deities) mentioned, Dyaus and the rest. Couples (of deities ದ್ವೇ ದ್ವೇ), including the Two worlds (ರೋದಸೀ), are praised together (ಸಂಸ್ತುತೇ), each in a verse (ಪಾದ), and the gods (are praised with a hemistich (7) ; the rest (7) is distributed (in praise).

7. The hymn 'We have pressed' (ಸುಷುಮಾ ಯಾತಮದ್ರಿಭಿಃ : i. 137) is addressed to Mitra-Varuna. 'Forth, forth' (ಪ್ರ-ಪ್ರ : i. 138) is addressed to Pusan, the third (i. 139) is addressed to the All-gods. 'Let it be heard' (ಅಸ್ತು ಶ್ರೌಷಟ್ : i. 139) is the third hymn addressed to the All-gods.

A hymn to the All-gods may be (included) among those which contain many deities.

**ಬಹುಶಸ್ತು ವೈಶ್ವದೇವೇಷು ಸಂತ್ಯೃಚಃ ಪಾದಾರ್ಧರ್ಚಾ ದ್ವೈಪದಾಸ್ತ್ರೈಪದಾಶ್ಚ |**
**ದ್ವಿಪ್ರಧಾನಾ ಅಪಿ ಚೈಕಪ್ರಧಾನಾ ಬಹುಪ್ರಧಾನಾ ಅಪಿ ವೈಶ್ವದೇವಾಃ || ೮ ||**
**ವೈಶ್ವದೇವೀ ಮೈತ್ರಾವರುಣೀ ದ್ವಿತೀಯಾ ತಿಸ್ರೋಽಶ್ವಿಭ್ಯಾಂ ತತ ಐಂದ್ರೀ ತತೋಽಗ್ನೇಃ|**
**ಮಾರುತ್ಯೇಕಾ ತತ ಐಂದ್ರಾಗ್ನ್ಯನಂತರಾ ಬಾರ್ಹಸ್ಪತ್ಯಾ ಚೋತ್ತಮಾ ಸ್ತೌತಿ ದೇವಾನ್||೯||**
**ಋಷೀನೃಷಿರ್ವಾ ಸ್ತೌತಿ ದಧ್ಯಙ್ ಹ ಮೇಽಸ್ಯಾಮಾತ್ಮಾನಂ ವಾ ತೇಷು ಶಂಸನ್ಸ್ವಜನ್ಮ |**
**ತಸ್ಮಾದಸ್ಯಾಂ ವಿಪ್ರವದಂತಿ ಕೇಚಿದಿಂದ್ರಾಗ್ನೀ ತಸ್ಯಾಂ ತು ನಿಪಾತಭಾಜೌ || ೧೦ ||**

8. ವೈಶ್ವದೇವಸೂಕ್ತಗಳಲ್ಲಿ ಸಾಧಾರಣವಾಗಿ ನಾನಾದೇವತೆಗಳು ಬೇರೆಬೇರೆಯಾಗಿ (ಅಥವಾ ಒಟ್ಟಾಗಿ) ಕೆಲವು ಋಕ್ಕುಗಳಲ್ಲಿಯೂ, ಅಥವಾ ಒಂದು ಋಕ್ಕು, ಅರ್ಧ ಋಕ್ಕು ಅಥವಾ ಒಂದು ಪಾದ, ಎರಡು ಪಾದಗಳು ಅಥವಾ ಮೂರು ಪಾದಗಳಲ್ಲಿ ಪ್ರತ್ಯೇಕವಾಗಿ ಸ್ತುತರಾಗಿರುವರು. ಈ ಸೂಕ್ತಗಳಲ್ಲಿ ಪ್ರಧಾನದೇವತೆಗಳು ಒಬ್ಬರು ಅಥವಾ ಇಬ್ಬರು ಅಥವಾ ಅನೇಕಮಂದಿ ಇರಬಹುದು.

9. ಪ್ರಸಕ್ತವಾದ **ಅಸ್ತು ಶ್ರೌಷಟ್** ಎಂಬ ೧೩೯ ನೇ ಸೂಕ್ತದಲ್ಲಿ ವಿಶ್ವೇದೇವತೆಗಳ ಸ್ತುತಿ ಇದೆ ಎಂದರೆ ಮೊದಲನೆಯ ಋಕ್ಕಿನಲ್ಲಿ ವಿಶ್ವೇದೇವತೆಗಳನ್ನು ಒಟ್ಟಾಗಿ ಸ್ತುತಿಸಿದೆ. ೨ ನೇ ಋಕ್ಕಿನಲ್ಲಿ ಮಿತ್ರಾವರುಣರನ್ನೂ ಮುಂದಿನ ಮೂರು ಋಕ್ಕುಗಳಲ್ಲಿ (೩-೫) ಅಶ್ವಿನೀದೇವತೆಗಳನ್ನೂ, ಮುಂದಿನ ೬ ನೇ ಋಕ್ಕಿನಲ್ಲಿ ಇಂದ್ರನನ್ನೂ, ೭ ನೇ ಋಕ್ಕಿನಲ್ಲಿ ಅಗ್ನಿಯನ್ನೂ, ೮ ನೇ ಋಕ್ಕಿನಲ್ಲಿ ಮರುದ್ದೇವತೆಗಳನ್ನೂ, ೯ ನೇ ಋಕ್ಕಿನಲ್ಲಿ ಇಂದ್ರಾಗ್ನಿಗಳನ್ನೂ, ೧೦ ನೇ ಋಕ್ಕಿನಲ್ಲಿ ಬೃಹಸ್ಪತಿಯನ್ನೂ, ಕೊನೆಯ ೧೧ ನೇ ಋಕ್ಕಿನಲ್ಲಿ ಒಟ್ಟಾಗಿ ವಿಶ್ವೇದೇವತೆಗಳನ್ನೂ ಸ್ತುತಿಸಲಾಗಿದೆ.

10. ಈ ಸೂಕ್ತದ (೧೩೯ ನೇ ಸೂಕ್ತದ) ಋಷಿಯಾದ ಪರುಚ್ಛೇಪಋಷಿಯು **ದಧ್ಯಙ್ ಹ ಮೇ** ಎಂಬ ೯ನೇ ಋಕ್ಕಿನಲ್ಲಿ ದಧ್ಯಙ್ ಎಂಬ ಹೆಸರಿನ ಪುರಾತನ ಋಷಿಯನ್ನು ಸ್ತುತಿಸಿರುವನು ಅಥವಾ ತಾನು ಆ ದಧ್ಯಙ್‌ಋಷಿಯ ವಂಶೋತ್ಪನ್ನನೆಂದು ಸೂಚಿಸುವುದಕ್ಕಾಗಿ ತನ್ನನ್ನೇ ಸ್ತುತಿಸಿರಬಹುದು. ಆದ್ದರಿಂದ ಆ ಋಕ್ಕಿನಲ್ಲಿ ಇಂದ್ರಾಗ್ನಿಗಳನ್ನು ಪ್ರಧಾನದೇವತೆಗಳನ್ನಾಗಿ ಸ್ತುತಿಸಿಲ್ಲವೆಂದೂ ಪ್ರಸ್ತಾಪತ್ವೇನ (ಸಂದರ್ಭಾನುಸಾರವಾಗಿ) ಇವರನ್ನು ಸ್ತುತಿಸಲಾಗಿದೆಯೆಂದೂ ಕೆಲವರಲ್ಲಿ ಅಭಿಪ್ರಾಯಭೇದವಿರುವುದು.

8. There are variously (ಬಹುಶಃ), in(hymns)addressed to the All-gods stanzas, verses, hemistichs, stanzas with two verses (ದ್ವೈಪದಾಃ) or with three (ತ್ರೈಪದಾಃ) : (such) Vaisvadeva (formulas) have two predominant (deities) or one predominant (deity) or many predominant (deities).

9. There is (one : i. 139. 1) addressed to the All-gods, the second (2) is addressed to Mitra-Varuna; three (3-5) are to the Aswins, then (one) is addressed to Indra (6), then (one) to Agni (7). one is addressed to the Maruts (8), then (one) is addressed to Indra-Agni (9) and the next is addressed to Brahspati (10) ; the last (stanza) praises the gods (11).

10. The seer in the (stanza Dadhyanc of me) (ದಧ್ಯಙ್ ಹ ಮೇ : i. 139. 9) praised either the (ancient) seers or himself by proclaiming his own origin among them. For this reason some disagree in regard to this (stanza, saying), that Indra-Agni are at the same time (ತು) incidentally praised ನಿಪಾತಭಾಜ್) in it.

(

ದ್ವಾವುಚಥ್ಯಬೃಹಸ್ಪತೀ ಋಷಿಪುತ್ರೌ ಬಭೂವತುಃ ।
ಆಸೀದುಚಥ್ಯಭಾರ್ಯಾ ತು ಮಮತಾ ನಾಮ ಭಾರ್ಗವೀ ॥ ೧೧ ॥
ತಾಂ ಕನೀಯಾನ್ಬೃಹಸ್ಪತಿರ್ಮೈಥುನಾಯೋಪಚಕ್ರಮೇ ।
ಶುಕ್ರಸ್ಯೋತ್ಸರ್ಗಕಾಲೇ ತು ಗರ್ಭಸ್ತಂ ಪ್ರತ್ಯಭಾಷತ ॥ ೧೨ ॥
ಇಹಾಸ್ಮಿ ಪೂರ್ವಸಂಭೂತೋ ನ ಕಾರ್ಯಃ ಶುಕ್ರಸಂಕರಃ ।
ತಚ್ಛುಕ್ರಪ್ರತಿಷೇಧಂ ತು ನ ಮಮರ್ಷ ಬೃಹಸ್ಪತಿಃ ॥ ೧೩ ॥
ಸ ವ್ಯಾಜಹಾರ ತಂ ಗರ್ಭಂ ತಮಸ್ತೇ ದೀರ್ಘಮಸ್ತ್ವಿತಿ ।
ಸ ಚ ದೀರ್ಘತಮಾ ನಾಮ ಬಭೂವರ್ಷಿರುಚಥ್ಯಜಃ ॥ ೧೪ ॥

### ದೀರ್ಘತಮಾಃ ಎಂಬ ಋಷಿಯ ಜನ್ಮವೃತ್ತಾಂತ

11. ಪೂರ್ವದಲ್ಲಿ ಒಬ್ಬ ಋಷಿಗೆ **ಉಚಥ್ಯ** ಮತ್ತು **ಬೃಹಸ್ಪತಿ** ಎಂಬ ಈರ್ವರು ಪುತ್ರರಿದ್ದರು. ಉಚಥ್ಯನ ಪತ್ನಿಯ ಹೆಸರು **ಮಮತಾ** ಎಂದು. ಈಕೆಯು ಭೃಗುವಂಶದವಳು.

12. ಆ ಇಬ್ಬರು ಋಷಿಪುತ್ರರಲ್ಲಿ ಕಿರಿಯುವನಾದ ಬೃಹಸ್ಪತಿಯು ತನ್ನ ಅತ್ತಿಗೆಯಾದ **ಮಮತಾ** ಎಂಬ ಗರ್ಭಿಣಿಯಾದ ಸ್ತ್ರೀಯೊಡನೆ ರತಿಕ್ರೀಡೆಯಲ್ಲಿ ಉದ್ಯುಕ್ತನಾಗಿದ್ದನು. ವೀರ್ಯಸ್ಖಲನಕಾಲದಲ್ಲಿ ಗರ್ಭದಲ್ಲಿದ್ದ ಪಿಂಡವು ಬೃಹಸ್ಪತಿಯನ್ನುದ್ದೇಶಿಸಿ ಇಂತೆಂದಿತು— .

13. ಎಲೈ ಬೃಹಸ್ಪತಿಯೇ, ನಾನು ಈ ಸ್ತ್ರೀಯ ಗರ್ಭದಲ್ಲಿ ಮೊದಲಿನಿಂದಲೂ ವಾಸವಾಗಿದೇನೆ. ಆದ್ದರಿಂದ ನೀನು ನಿನ್ನ ವೀರ್ಯವನ್ನು ಈ ಗರ್ಭದಲ್ಲಿ ಬಿಟ್ಟು ವೀರ್ಯಸಂಪರ್ಕವಾಗುವಂತೆ ಮಾಡಬೇಡ ಎಂದಿತು. ಆದರೆ ಬೃಹಸ್ಪತಿಯು ವೀರ್ಯಸ್ಖಲನವನ್ನು ತಡೆಯಲಾಗದೆ ವೀರ್ಯಸಂಕರವಾಗುವುದೆಂಬ ಅಡ್ಡಿಯನ್ನು ಸಹಿಸಲಿಲ್ಲ ಮತ್ತು,

14. ಕೋಪಾನ್ವಿತನಾಗಿ ಆ ಗರ್ಭವನ್ನು (ಗರ್ಭಸ್ಥಪಿಂಡವನ್ನು) ಕುರಿತು ನೀನು ಯಾವಾಗಲೂ ಕತ್ತಲೆಯಲ್ಲಿರುವಂತಾಗಲಿ (ಕುರುಡಾಗಲಿ) ಎಂದು ಶಪಿಸಿದನು. ಆದ್ದರಿಂದ ಆ ಗರ್ಭದಿಂದ ಹುಟ್ಟಿದ ಉಚಥ್ಯಋಷಿಯ ಪುತ್ರನು **ದೀರ್ಘತಮಾಃ** ಎಂಬ ಹೆಸರಿನಿಂದ ಪ್ರಸಿದ್ಧನಾದನು.

### 3. Story of the birth of Dirghatamas.

11. There were (once) two seers' sons Uchathya and Brahspati. Now Uchathya's wife was Mamata by name, of the race of Bhrgu.

12. Brahaspati, the younger (of the two), approached her for sexual intercouse. Now at the time of impregnation the embryo addressed him.

13. 'Here am I previously engendered; you must not cause a commingling of seed'. Brahspati, however, could not brook this remonstrance about the seed.

14. (So) he addressed the embryo: 'Long darkness shall be your lot'. And (hence) the seer, Uchathya's, son, was born with the name Dirghatamas (Long Darkness).

**ಸ ಜಾತೋಽಭ್ಯತಪದ್ದೇವಾನಕಸ್ಮಾದಂಧತಾಂ ಗತಃ ।**
**ದದುರ್ದೇವಾಸ್ತು ತನ್ನೇತ್ರೇ ತತೋಽನಂಧೋ ಬಭೂವ ಸಃ** ॥ ೧೫ ॥
**ಸ ವೇದಿಷದಿತ್ಯಸ್ತೌಚ್ಚ ತುರ್ಭಿರ್ಜಾತವೇದಸಂ ।**
**ಸಮಿದ್ಧ ಆಪ್ರಿಯೋಽತ್ಯೈಂದ್ರೀ ತಮಿತ್ಯಗ್ನೇಃ ಪರಾಣಿ ಷಟ್** ॥ ೧೬ ॥
**ಸ್ತುತೌ ತು ಮಿತ್ರಾವರುಣೌ ಸೂಕ್ತೈರ್ಮಿತ್ರಮಿತಿ ತ್ರಿಭಿಃ ।**
**ಮಿತ್ರಂ ನ್ಮೈತ್ರೀಂ ವದತ್ಯೇತಾಮಾ ಧೇನವಶ್ಚ ಶಂಸತಿ** ॥ ೧೭ ॥

15· ಆ ಉಚಥ್ಯಪುತ್ರನು (**ದೀರ್ಘತಮಾಃ** ಎಂಬುವನು) ಹುಟ್ಟಿದ ಕೂಡಲೇ ಕುರುಡನಾದನು. ಅವನು ತನ್ನ ಅಂಧತ್ವನಿವಾರಣೆಗಾಗಿ ದೇವತೆಗಳನ್ನು ಕುರಿತು ತಪಸ್ಸುಮಾಡಲು ದೇವತೆಗಳು ಅವನಿಗೆ ಕಣ್ಣುಗಳನ್ನು (ನೋಡುವ ಶಕ್ತಿಯನ್ನು) ಅನುಗ್ರಹಿಸಿದರು. ಆದ್ದರಿಂದ ಅವನು ಕುರುಡನಾಗದೆ ಎಲ್ಲರಂತೆ ಕಣ್ಣುಗಳಿಂದ ನೋಡುವ ಸಾಮರ್ಥ್ಯವನ್ನು ಪಡೆದನು.

**ದೀರ್ಘತಮಾಃ ಎಂಬ ಋಷಿಯಿಂದ ದೃಷ್ಟವಾದ ಸೂಕ್ತಗಳು ೧೪೦-೧೫೬**

16· **ಈ ದೀರ್ಘತಮಾಃ** ಎಂಬ ಋಷಿಯು **ವೇದಿಷದೇ** ಎಂದು ಮೊದಲಾಗುವ ೪ ಸೂಕ್ತಗಳಿಂದ (೧೪೦, ೧೪೧, ೧೪೩, ೧೪೪ ನೇ ಸೂಕ್ತಗಳಿಂದ) ಜಾತವೇದೋಗ್ನಿಯನ್ನು ಸ್ತುತಿಸಿರುವನು. **ಸಮಿದ್ಧ** ಎಂಬ ೧೪೨ ನೇ ಸೂಕ್ತವು ಆಪ್ರೀಸೂಕ್ತವು. ಇದರ ಕೊನೆಯ ಋಕ್ಕು ಇಂದ್ರದೇವತಾಕವು. ಅಲ್ಲಿಂದ ಮುಂದಿನ **ತಂ ಪೃಚ್ಛತಾ** ಎಂದು ಮೊದಲಾಗುವ ಆರು ಸೂಕ್ತಗಳಿಗೆ (೧೪೫-೧೫೦) ಅಗ್ನಿಯು ದೇವತೆಯು.

17. **ಮಿತ್ರಂ ನ** ಎಂದು ಮೊದಲಾಗುವ ಮೂರು ಸೂಕ್ತಗಳಲ್ಲಿ (೧೫೧-೧೫೩) ಮಿತ್ರಾವರುಣರನ್ನು ಸ್ತುತಿಸಲಾಗಿದೆ. ಆದರೆ ೧೫೧ ನೇ ಸೂಕ್ತದ **ಮಿತ್ರಂ ನ** ಎಂಬ ಮೊದಲನೆಯ ಋಕ್ಕಿನಲ್ಲಿ ಮಿತ್ರನೊಬ್ಬನನ್ನು ಮಾತ್ರ ಸ್ತುತಿಸಲಾಗಿದೆ. ೧೫೨ ನೇ ಸೂಕ್ತದ **ಆ ಧೇನವಃ** ಎಂಬ ೬ ನೇ ಋಕ್ಕಿನಲ್ಲಿ,

---

15· He when born distressed the gods, having become suddenly blind. The gods, however, gave him (the use of) his eyes (ತನ್ನೇತ್ರೇ), so he was cured of his blindness.

**4· Hymns revealed to Dirghatamas: RV· 140·156.**

16· With four (hymns beginning) 'To him seated on the altar' (ವೇದಿಷದೇ: i. 40) he praised Jatavedas (Agni). 'Kindled' (ಸಮಿದ್ಧಃ: i. 142) is an Apri hymn, its last (stanza) being addressed to Indra (i· 142· 13). The six (i. 145-150) following (beginning) 'Him' (ತಂ; i· 145. 1) are to Agni.

17. But Mitra-Varuna are praised with the three (151-153) hymns (beginning) 'A Friend' (ಮಿತ್ರಂ: 1. 151). 'A Friend' (ಮಿತ್ರಂ: i· 151· 1) expresses that this (stanza) is addressed to Mitra (only). 'May the cows' (ಧೇನವಃ; i. 152· 6) lauds,

ಅದಿತಿಂ ವಾಥವಾಪ್ಯಗ್ನಿಂ ತಥಾ ರೂಪಂ ಹಿ ದೃಶ್ಯತೇ |
ಅಗ್ನಿಂ ಮೇನೇಽದಿತಿಂ ತ್ವೇವ ಕುತ್ಸೇ ಚೇಹ ಚ ಶೌನಕಃ || ೧೮ ||
ಋಷಿರತ್ರ ಪ್ರಸಂಗಾದ್ವಾ ದರ್ಶನಾದ್ವಾನುಕೀರ್ತಯೇತ್ |
ವಿಷ್ಣೋರ್ನು ಕಮಿತಿ ತ್ರೀಣಿ ವೈಷ್ಣವಾನಿ ಪರಾಣ್ಯತಃ || ೧೯ ||
ಪ್ರ ವಸ್ತಿಸೃಭಿರ್ಋಗ್ಭಿರಿಂದ್ರಾವಿಷ್ಣೂ ಸಹ ಸ್ತುತೌ |
ಗೃಹಾಣಿ ವಾ ವೈಷ್ಣವಾನಿ ತಾ ವಾಮಿತ್ಯೃಚಿ ಕಾಂಕ್ಷತಿ || ೨೦ ||
ಜೀರ್ಣಂ ತು ದೀರ್ಘತಮಸಂ ಖಿನ್ನಾಸ್ತತ್ಪರಿಚಾರಿಣಃ |
ದಾಸಾ ಬಧ್ವಾ ನದೀತೀರೇ ದೃಷ್ಟಿಹೀನಮವಾದಧುಃ || ೨೧ ||

18. ಅದಿತಿಯನ್ನಾಗಲೀ, ಅಥವಾ ಅಗ್ನಿಯನ್ನಾಗಲೀ ಸ್ತುತಿಸಲಾಗಿದೆ- ಏಕೆಂದರೆ ಆ ಋಕ್ಕಿನ ವಿಷಯವು ಆರೀತಿ ಇದೆ. ಪ್ರಕೃತ ಋಕ್ಕಿನಲ್ಲಿಯೂ ಕುತ್ಸಋಷಿದೃಷ್ಟವಾದ ಮಂತ್ರದಲ್ಲಿಯೂ ಅದಿತಿಯೆಂದರೆ ಅಗ್ನಿಯೆಂದೇ ಹೇಳಬಹುದೆಂದು ಶೌನಕರ ಅಭಿಪ್ರಾಯವಿರುವುದು.

19. ಏಕೆಂದರೆ, ಋಷಿಯು ಇಲ್ಲಿ ಪ್ರಸಂಗವಶದಿಂದ ಅದಿತಿಶಬ್ದಪ್ರಯೋಗಮಾಡಿರಬಹುದು ಅಥವಾ ಅಗ್ನಿಯನ್ನು ಅದಿತಿರೂಪದಲ್ಲಿ ಭಾವಿಸಿ ಕಂಡಿರಬಹುದು. ಆದ್ದರಿಂದ ಆರೀತಿ ಹೇಳಿರಬಹುದು. ಅಲ್ಲಿಂದ ಮುಂದಿನ **ವಿಷ್ಣೋರ್ನುಕಂ** ಎಂದು ಮೊದಲಾಗುವ ಮೂರು ಸೂಕ್ತಗಳಿಗೆ (೧೫೪–೧೫೬) ವಿಷ್ಣುವು ದೇವತೆಯು.

20. **ಪ್ರ ವಃ ಪಾಂತಂ** ಎಂಬ ೧೫೫ ನೇ ಸೂಕ್ತದ ಮೊದಲ ಮೂರು ಋಕ್ಕುಗಳಲ್ಲಿ (೧–೩) ಇಂದ್ರ ಮತ್ತು ವಿಷ್ಣುಗಳು ಒಟ್ಟಿಗೆ ಸ್ತುತರಾಗಿರುವರು. ೧೫೪ ನೇ ಸೂಕ್ತದ **ತಾ ವಾಂ** ಎಂಬ ೬ ನೇ ಋಕ್ಕಿನಲ್ಲಿ ಋಷಿಯು ವಿಷ್ಣುವಿನ ಪರಮಪದವೆಂಬ ಉತ್ತಮಸ್ಥಾನವನ್ನು ಬಯಸಿರುವುದು ವ್ಯಕ್ತವಾಗಿರುವುದು.

**ದೀರ್ಘತಮಾಃ ಎಂಬ ಋಷಿಯ ಮುಂದಿನ ವೃತ್ತಾಂತವು**

21. ಈ ದೀರ್ಘತಮಸ್ಸೆಂಬ ಋಷಿಗೆ ವಯಸ್ಸಾಗಿ ಮುಪ್ಪಿನಿಂದ ಶರೀರವು ಜೀರ್ಣವಾಗಿ ಕಣ್ಣು ಕಾಣಿಸದೆ ಇರುವಾಗ ಇವನ ಈ ಸ್ಥಿತಿಯನ್ನು ನೋಡಿ ಇವನ ಅನುಚರರು ಬೇಸರಗೊಂಡು ಇವನ ಕೈಕಾಲುಗಳನ್ನು ಹಗ್ಗದಿಂದ ಕಟ್ಟಿ ನದಿಯ ನೀರಿನಲ್ಲಿ ಎಸೆದುಬಿಟ್ಟರು.

---

18. either Aditi or Agni; for(its)character is evidently such. Saunaka, however, thought that both in Kutsa and here Aditi means Agni only.

19. The seer may here mention (ಅದಿತಿ) either incidentally (ಪ್ರಸಂಗಾತ್) or because he saw (Agni in this form). The three (hymns) after this (i. 154-156), (beginning) 'Of Visnu now' (ವಿಷ್ಣೋರ್ನುಕಂ : i. 154. 6) are addressed to Visnu.

20. and with the three stanzas 'Forth your' (ಪ್ರ ವಃ : i. 155. 1-3) Indra-Vishnu are praised together. In the stanza 'Those of you two' (ತಾ ವಾಂ : i. 154. 6) he(the seer)may be said to long for(ವಾ ಕಾಂಕ್ಷತಿ)the mansions of Visnu.

**5. Story of Dirghatamas (continued).**

21. His attendent slaves, being weary, bound the aged and blind Dirghatamas and cast him down into the waters of the river.

ತತ್ರೈಕಸ್ತ್ರೈತನೋ ನಾಮ ಶಸ್ತ್ರೇಣೈನಮುಪಾಹನತ್ |
ಶಿರಶ್ಚಾಂಸಾವುರಶ್ಚೈವ ಸ್ವಯಮೇವ ನ್ಯಕೃಂತತ || ೨೨ ||
ಹತ್ವಾ ದೀರ್ಘತಮಾಸ್ತಂ ತು ಪಾಪೇನ ಮಹತಾ ವೃತಂ |
ಆತ್ಮಾಂಗಾನ್ಯನುದಚ್ಚೈವ ತತ್ರೋದೋನ್ಮೋಹಿತೋ ಭೃಶಂ || ೨೩ ||
ಅಂಗದೇಶಸಮೀಪೇ ತು ತಂ ನದ್ಯಃ ಸಮುದಕ್ಷಿಪನ್ |
ಅಂಗರಾಜಗೃಹೇ ಯುಕ್ತಾಮುಶಿಜಂ ಪುತ್ರಕಾಮ್ಯಯಾ || ೨೪ ||
ರಾಜ್ಞಾ ಚ ಪ್ರಹಿತಾಂ ದಾಸೀಂ ಭಕ್ತಾಂ ಮತ್ವಾ ಮಹಾತಪಾಃ |
ಜನಯಾಮಾಸ ಚೋತ್ಥಾಯ ಕಕ್ಷೀವತ್ಪ್ರಮುಖಾನೃಷೀನ್ || ೨೫ ||

22. ಆ ಅನುಚರರಲ್ಲಿ ತ್ರೈತನೆಂಬುವನು ಈ ಋಷಿಯನ್ನು ತನ್ನ ಕೈಲಿದ್ದ ಕತ್ತಿಯಿಂದ ಪ್ರಹರಿಸಲು ಹೋಗಿ ಆಯತಪ್ಪಿದ್ದರಿಂದ ತನ್ನ ತಲೆ, ಎದೆ, ಭುಜಗಳಿಗೇ ಏಟುಬಿದ್ದು ಕತ್ತರಿಸಿಹೋಯಿತು.

23. ತನ್ನನ್ನು ಕೊಲ್ಲಲು ಬಂದ ಮಹಾಪಾಪಿಷ್ಠನಾದ ಆ ಅನುಚರನನ್ನು ಈರೀತಿ ಪರಿಹರಿಸಿ ದೀರ್ಘತಮ ಋಷಿಯು ತನ್ನ ಕೈಕಾಲುಗಳಿಗೆ ಕಟ್ಟಿದ್ದ ಹಗ್ಗವನ್ನು ಬಿಡಿಸಿಕೊಂಡು ನೀರಿನಲ್ಲಿ ಜ್ಞಾನಹೀನನಾಗಿ ಒದ್ದಾಡುತ್ತಾ ತೇಲಿ ಹೋಗುತ್ತಿದ್ದನು.

24. ನದಿಯ ಪ್ರವಾಹವು ಇವನನ್ನು ಅಂಗದೇಶದ ರಾಜನ ಅರಮನೆಯ ಸಮೀಪಕ್ಕೆ ಒಯ್ದು ಅಲ್ಲಿಯೇ ಬಿಟ್ಟಿತು. ಆ ರಾಜನ ಅರಮನೆಯಲ್ಲಿ ಉಶಿಜ್ ಎಂಬ ಓರ್ವ ದಾಸಿ ಇದ್ದಳು. ಅಂಗರಾಜನು ತನಗೆ ಮಕ್ಕಳಿಲ್ಲದ್ದರಿಂದ ಮಕ್ಕಳನ್ನು ಪಡೆಯಬೇಕೆಂಬ ಇಚ್ಛೆಯಿಂದ ಈ ಉಶಿಜ್ ಎಂಬ ದಾಸಿಯನ್ನು

25. ಈ ದೀರ್ಘತಮಾಃ ಎಂಬ ಋಷಿಯ ಬಳಿಗೆ ಕಳುಹಿಸಿದನು. ನದಿಯ ಪ್ರವಾಹದಿಂದ ತಪ್ಪಿಸಿಕೊಂಡು ಬಂದ ಈ ಮಹಾತಪಸ್ವಿಯಾದ ಋಷಿಯು ಉಶಿಜ್ ಎಂಬ ದಾಸಿಯು ತನ್ನ ವಿಷಯದಲ್ಲಿ ಭಕ್ತಿಭಾವದಿಂದಿರುವುದನ್ನು ಕಂಡು ಅವಳಲ್ಲಿ ಕಕ್ಷೀವಾನ್ ಮುಂತಾದ ಶ್ರೇಷ್ಠರಾದ ಅನೇಕ ಋಷಿಪುತ್ರರನ್ನು ಉತ್ಪಾದನೆಮಾಡಿದನು.

---

22. One among them, Traitana by name, tried to strike him away with his sword, and (in so doing) cut to pieces (ನ್ಯಕೃಂತತ) his own head, shoulders and breast.

23. Now Dirghatamas having (thus) slain him (who had) involved (himself) in great sin, moved his limbs there (in the river), (though) excessively stupefied (ಉನ್ಮೋಹಿತ) by the water (ಉದ).

24. Now the currents (ನದ್ಯಃ) threw him up in the neighbourhood of the Anga country.

Usij was employed in the house of the king of Anga. Through desire of obtaining a son,

25. The king dispatched (this) slave (to Dirghatamas). The great ascetic observing her to be devoted (to him), after he had come out (of the water), begot (with her) the seer Kaksivat and others.

ತುಷ್ಟಾವ ಚೈವ ಸೂಕ್ತಾಭ್ಯಾಮಬೋಧೀತ್ಯಶ್ವಿನಾವೃಷಿಃ ।
ಪ್ರೇತಿ ದ್ಯಾವಾಪೃಥಿವ್ಯೌ ತು ಪರಾಭ್ಯಾಮೇತದುತ್ತರಂ ॥ ೨೬ ॥
ಕಿಮೃಭವಂ ಪರೇ ಮಾ ನೋ ಮೇಧ್ಯಸ್ಯಾಶ್ವಸ್ಯ ಸಂಸ್ತವಃ ।
ಈರ್ಮಾಂತಾಸ ಇತಿ ತ್ವಸ್ಯಾಂ ನೀಯಮಾನಂ ಪ್ರಶಂಸತಿ ॥ ೨೭ ॥
ಸ್ವಯೂಥ್ಯಾಸ್ತಸ್ಯ ಚೈವಾತ್ರ ಬಹವಃ ಸಂಸ್ತುತಾ ಹಯಾಃ ।
ನಿಯುಕ್ತಾಶ್ಚಾನಿಯುಕ್ತಾಶ್ಚ ಪ್ರಸಂಗಾದನುಕೀರ್ತಿತಾಃ ॥ ೨೮ ॥

ೞ೫೭–೧೬೩ ನೇ ಸೂಕ್ತಗಳ ದೇವತೆಗಳು

26. ಈ **ದೀರ್ಘತಮಾಃ** ಎಂಬ ಋಷಿಯು **ಅಬೋಧಿ** ಎಂದು ಮೊದಲಾಗುವ ೨ ಸೂಕ್ತಗಳಿಂದ (೧೫೭-೧೫೮) ಅಶ್ವಿನೀದೇವತೆಗಳನ್ನೂ ಮುಂದಿನ **ಪ್ರ ದ್ಯಾವಾ** ಎಂದು ಮೊದಲಾಗುವ ಎರಡು ಸೂಕ್ತಗಳಿಂದ (೧೫೯–೧೬೦) ದ್ಯಾವಾಪೃಥಿವಿಗಳನ್ನೂ ಸ್ತುತಿಸಿರುವನು.

27. ಮತ್ತು **ಕಿಮು** ಎಂಬ ೧೬೧ ನೇ ಸೂಕ್ತದಿಂದ ಋಭುಗಳನ್ನೂ ಮುಂದಿನ **ಮಾ ನೋ ಮಿತ್ರಃ** ಎಂದು ಮೊದಲಾಗುವ ಎರಡು ಸೂಕ್ತಗಳಿಂದ (೧೬೨-೧೬೩) ಯಜ್ಞಾಶ್ವವನ್ನೂ ಸ್ತುತಿಸಿರುವನು. ೧೬೩ ನೇ ಸೂಕ್ತದ **ಈರ್ಮಾಂತಾಸಃ** ಎಂಬ ಹತ್ತನೆಯ ಋಕ್ಕಿನಲ್ಲಿ ಯಜ್ಞಾಶ್ವವು ಯಜ್ಞವೇದಿಗೆ ಒಯ್ಯಲ್ಪಡುವ ವಿಷಯವು ಪ್ರಶಂಸಿತವಾಗಿದೆ.

28. ಮತ್ತು ಈ ಋಕ್ಕಿನಲ್ಲಿ (೧೬ ನೇ ಸೂಕ್ತದ ೧೦ ನೇ ಋಕ್ಕಿನಲ್ಲಿ) ಯಜ್ಞಾಶ್ವವಲ್ಲದ ಇತರ ಅಶ್ವಗಳ ಸ್ತುತಿಯೂ ಇರುವುದು. ಪ್ರಸಂಗವಶದಿಂದ ರಥಕ್ಕೆ ಹೂಡುವ ಅಥವಾ ಹೂಡದಿರುವ ಇತರ ಅಶ್ವಗಳ ಸ್ತುತಿಯೂ ಇಲ್ಲಿ ಉಕ್ತವಾಗಿದೆ.

## 6. Deities of RV. i. 157-163.

26. And the seer praised with the two (157-158) hymns (beginning) 'He is awake' (ಅಬೋಧಿ: i. 157. 1), the two Aswins: but with the two (159, 160) following (beginning) 'forth' (ಪ್ರ: i. 159. 1), Heaven and Earth. That which comes next to these (ಏತದುತ್ತರಂ).

27. (Beginning) - Why' (ಕಿಂ: i. 161. 1) is addressed to the Rbhus. The two (162, 163) following (beginning) 'Not us' (ಮಾ ನಃ: i. 162. 1) are a laudation of the sacrificial horse. In the (stanza) 'Full-haunched' (ಈರ್ಮಾಂತಾಸಃ i. 163. 10) he extols the horse as he is being led.

28. And here also (i. 163. 10) the many steeds belonging to his troop (ಸ್ವಯೂಥ್ಯಾಃ) are praised: both the yoked and unyoked are incidentally (ಪ್ರಸಂಗಾತ್) mentioned.

ಸಂಜ್ಞಪ್ತವದಸಂಜ್ಞಪ್ತಂ ಭವಿಷ್ಯಂ ಚಾಹ ಭೂತವತ್ |
ತಸ್ಯ ಮಾಂಸಸ್ಯ ಸೂನಸ್ಯ ಚರೂಣಾಂ ಹವಿಷಸ್ತಥಾ || ೨೯ ||
ವಾಸೋಽಧಿವಾಸಸೋಶ್ಚಾತ್ರ ಯದ್ವಿಶಸ್ಯಂ ಚ ಕೀರ್ತಿತಂ |
ಗಾತ್ರಸ್ಯ ಶೂಲಸ್ಥೂಣಾನಾಂ ಸ್ವಧಿತೇಶ್ಚ ಪ್ರಕೀರ್ತನಂ || ೩೦ ||
ಛಾಗಸ್ಯ ಕೀರ್ತನಂ ಚಾತ್ರ ಇಂದ್ರಾಪೂಷ್ಣೋಃ ಸಹ ಸ್ತುತಿಃ |
ಸೂಕ್ತಂ ಯದಸ್ಯವಾಮೀಯಂ ವೈಶ್ವದೇವಂ ತದುಚ್ಯತೇ || ೩೧ ||

29. ಯಜ್ಞಾಶ್ವವು ಇನ್ನೂ ಕೊಲ್ಲಲ್ಪಡದಿರುವಾಗಲೇ ಅದು ಯಜ್ಞದಲ್ಲಿ ಕೊಲ್ಲಲ್ಪಟ್ಟಿರುವಂತೆ ಭಾವಿಸಿ ಋಷಿಯು ಸ್ತುತಿಸಿರುವನು. ಹಾಗೆಯೇ, ಆ ಅಶ್ವದ ಭವಿಷ್ಯವನ್ನು (ಎಂದರೆ ಅದಕ್ಕೆ ಉಂಟಾಗುವ ಉತ್ತಮಪದವಿಯ ಪ್ರಾಪ್ತಿಯನ್ನು) ಭೂತಕಾಲಕ್ಕೆ ಸೇರಿಹೋದಂತೆಯೂ (ಪಡೆದಂತೆಯೂ) ಅದರ ಮಾಂಸವನ್ನು ಬುಟ್ಟಿಯಲ್ಲಿ ಇಟ್ಟಿರುವಂತೆಯೂ, ಚರು ಮತ್ತು ಹವಿಸ್ಸುಗಳಂತೆ ಸಿದ್ಧಪಡಿಸಿರುವಂತೆಯೂ ಋಷಿಯು ಭಾವಿಸಿ ವರ್ಣಿಸಿರುವನು.

30. ಮತ್ತು ಅದರಂತೆ ಅಶ್ವದ ಶರೀರದ ಮೇಲೆ ಹೊದಿಸುವ ವಾಸ, ಅಧಿವಾಸ (ಮೇಲುಹೊದಿಕೆ) ಗಳೆಂಬ ವಸ್ತ್ರಗಳನ್ನೂ, ಅಶ್ವಶರೀರವನ್ನು ಕತ್ತರಿಸುವುದನ್ನೂ, ಅಶ್ವಶರೀರದ ಬೇರೆ ಬೇರೆ ಅವಯುವಗಳು ಬೇಯಿಸಿದನಂತರ ಗೊತ್ತಾಗುವುದಕ್ಕಾಗಿ ಆ ಮಾಂಸಖಂಡಗಳಿಗೆ ಗುರುತಿಗಾಗಿ ಚುಚ್ಚುವ ಶೂಲ (ಮುಳ್ಳು) ಗಳನ್ನೂ, ಯೂಪವನ್ನೂ ಮಾಂಸವನ್ನು ಕತ್ತರಿಸುವ ಕತ್ತಿಯನ್ನೂ ಇಲ್ಲಿ ಪ್ರಶಂಸಿಸಲಾಗಿದೆ.

31. ಯಜ್ಞಾಶ್ವದ ಮುಂದುಗಡೆ ಒಯ್ಯಲ್ಪಡುವ ಛಾಗದ ಎಂದರೆ ಆಡಿನ ಪ್ರಶಂಸೆಯೂ ಇಂದ್ರ ಮತ್ತು ಪೂಷದೇವನ ಸ್ತುತಿಯೂ ಇಲ್ಲಿಯೇ ಹೇಳಲ್ಪಟ್ಟಿದೆ. ಮುಂದಿನ ಸೂಕ್ತವಾದ **ಅಸ್ಯ ವಾಮಸ್ಯ** ಎಂಬ ೧೬೪ ನೇ ಸೂಕ್ತವು ವೈಶ್ವದೇವಸೂಕ್ತವೆಂದು ಪ್ರಸಿದ್ಧವಾಗಿದೆ.

29. He speaks of him (though) not (yet) sacrificed as (already) sacrificed, of (his) future (state) as if past. Of his flesh (ಮಾಂಸ), of the basket (ಸೂನ), of the pots (ಚರು), and of the oblation (ಹವಿಃ).

30. and of the robe (ವಾಸಃ) and upper covering (ಅಧಿವಾಸ), and of his body (ಗಾತ್ರ) which is mentioned as about to be dissected (ವಿಶಸ್ಯ), of the spit (ಶೂಲ) and the post (ಸ್ಥೂಣ), and of the axe (ಸ್ವಧಿತಿ) there is here (ಅತ್ರ) laudation.

### 7. Deities of RV. i. 164: the three Agnis; the year.

31. There is here also mention of the goat (ಛಾಗ) (and) praise at the same time of Indra-Pusan.

The hymn which (begins) 'Of this benignant' (ಅಸ್ಯ ವಾಮಸ್ಯ : i. 164) is stated to he addressed to the All-gods.

ಪ್ರವಾದಾ ವಿವಿಧಾಸ್ತತ್ರ ದೇವಾನಾಂ ಚಾತ್ರ ಕೀರ್ತನಂ ।
ಸೂಕ್ತೇಽಸ್ಯರ್ಚಿ ಪರೋಕ್ಷೋಕ್ತಾ ವಕ್ಷ್ಯಾಮಿ ಭ್ರಾತರಸ್ತ್ರಯಃ ॥ ೩೨ ॥
ಅಗ್ನಿಸ್ತು ವಾಮಃ ಪಲಿತೋ ವಾಯುರ್ಭ್ರಾತಾ ತು ಮಧ್ಯಮಃ ।
ಘೃತಪೃಷ್ಠಸ್ತೃತೀಯೋಽತ್ರ ಸಪ್ತ ವೈ ರಶ್ಮಯಃ ಸ್ತುತಾಃ ॥ ೩೩ ॥
ಪರಾಸ್ತು ಕಥಯಂತ್ಯಗ್ನಿಂ ಯಥಾ ವರ್ಷತಿ ಪಾತಿ ಚ ।
ಅಹೋರಾತ್ರಾನ್ದಿನಾನ್ಮಾಸಾನೃತೂಂಶ್ಚ ಪರಿವರ್ತಿನಃ ॥ ೩೪ ॥
ಪಂಚಧಾ ಚ ತ್ರಿಧಾ ಚೈವ ಷೋಢಾ ದ್ವಾದಶಧೈವ ಚ ।
ಸಂವತ್ಸರಂ ಚಕ್ರವಚ್ಚ ಪರಾಭಿಃ ಕೀರ್ತಯತ್ಯೃಷಿಃ ॥ ೩೫ ॥

**೧೬೪ ನೇ ಸೂಕ್ತದ ದೇವತೆಗಳು, ಮೂರುವಿಧ ಅಗ್ನಿಗಳು, ಸಂವತ್ಸರ**

32. ಈ ಸೂಕ್ತದ ಮಂತ್ರಗಳಿಗೆ ನಾನಾವಿಧ ಅರ್ಥಭೇದಗಳನ್ನು ಹೇಳುವ ರೂಢಿ ಇದೆ. ದೇವತೆಗಳ ವಿಷಯದಲ್ಲಿಯೂ ಮತಭೇದಗಳಿವೆ. ಈ ಸೂಕ್ತದ (**ಅಸ್ಯ ವಾಮಸ್ಯ** ಎಂಬ ೧೬೪ ನೇ ಸೂಕ್ತದ) ಮೊದಲನೆಯ ಋಕ್ಕಿನಲ್ಲಿ ಮೂರು ಮಂದಿ ಸಹೋದರರು (**ಭ್ರಾತರಸ್ತ್ರಯಃ**) ಎಂದು ಪ್ರಥಮಪುರುಷದಲ್ಲಿ ಹೇಳಲಾಗಿದೆ. **ಭ್ರಾತರಸ್ತ್ರಯಃ** ಎಂದರೇನು ಎಂಬುವುದನ್ನು ಹೇಳುತ್ತೇನೆ.

33. ಈ ಮೊದಲನೆಯ ಋಕ್ಕಿನಲ್ಲಿ ಹೇಳಿರುವ ವಾಮಶಬ್ದವು ಅಗ್ನಿಯನ್ನೂ ಪಲಿತಶಬ್ದವು ಮಧ್ಯಮಸ್ಥಾನದ ವಾಯುವನ್ನೂ ಘೃತಪೃಷ್ಠಶಬ್ದವು ಮೂರನೆಯ ಸಹೋದರನನ್ನೂ ಸೂಚಿಸುವವು. ಈ ಅಗ್ನಿಯ ಏಳು ರಶ್ಮಿಗಳನ್ನು (ಸಪ್ತಜ್ವಾಲೆ) ಇಲ್ಲಿ ಸ್ತುತಿಸಲಾಗಿದೆ.

34. ಆದರೆ ಮುಂದಿನ ಋಕ್ಕುಗಳಲ್ಲಿ ಅಗ್ನಿಯ ವಿಷಯವನ್ನೂ, ಈ ಅಗ್ನಿಯು ಹೇಗೆ ವೃಷ್ಟಿಗೆ ಕಾರಣನು ಮತ್ತು ಜನರನ್ನು (ಯಜಮಾನರನ್ನು) ಹೇಗೆ ರಕ್ಷಿಸುವನು, ಅಹೋರಾತ್ರಿಗಳ ವಿಷಯ, ದಿನಗಳು, ಮಾಸಗಳು, ಒಂದಾದ ಮೇಲೆ ಮತ್ತೊಂದು ಬರುವ ಋತುಗಳ ವಿಷಯ, ಇವೆಲ್ಲವನ್ನೂ ಪ್ರಸ್ತಾಪಿಸಲಾಗಿದೆ.

35. ಮುಂದಿನ ಕೆಲವು ಋಕ್ಕುಗಳಲ್ಲಿ ಋಷಿಯು ಸಂವತ್ಸರವನ್ನು ಒಂದು ಚಕ್ರಕ್ಕೆ ಹೋಲಿಸಿ, ಐದು, ಮೂರು, ಆರು, ಹನ್ನೆರಡು ಭಾಗಗಳಿಂದ ಕೂಡಿರುವಂತೆ ವರ್ಣಿಸಿರುವನು.

---

32. In it are various sayings (ಪ್ರವಾದಾಃ) and here (too) mention of the gods.

In the stanza ' of this ' (ಅಸ್ಯ : i. 164. 1) in the hymn, three brothers are spoken of in the third person (ಪರೋಕ್ಷ)—I will explain (them).

33. Now the benignant, grey-haired one is Agni, while the middle brother is Vayu. The third here is butter-backed (ಘೃತಪೃಷ್ಠ) : (his seven rays are praised.

34. But the following (stanzas) tell of Agni, how he rains and protects ; and of days and nights (ಅಹೋರಾತ್ರಾನ್), of days (ದಿನ), of months, and of revolving seasons.

35. With the following (stanzas) the seer celebrates the year (ಸಂವತ್ಸರ) like a wheel (as) fivefold, and threefold, sixfold and twelvefold.

ಕ್ಷೇತ್ರಜ್ಞಾನಂ ಚ ಧೇನುಂ ಚ ಗೌರೀಂ ವಾಚಂ ಸರಸ್ವತೀಂ ।
ಧರ್ಮಂ ಪೂರ್ವಯುಗೀಯಂ ಚ ಸಾಧ್ಯಾನ್ದೇವಗಣಾಂಸ್ತಥಾ ॥ ೩೬ ॥

ವಿವಿಧಾನಿ ಚ ಕರ್ಮಾಣಿ ಅಗ್ನಿವಾಯುವಿವಸ್ವತಾಂ ।
ವಿಭೂತಿಮಗ್ನೇರ್ವಾಯೋಶ್ಚ ಜಗತಿ ಸ್ಥಾಸ್ನುಜಂಗಮೇ ॥ ೩೭ ॥

ಹರಣಂ ರಶ್ಮಿಭಿರ್ವಾರೋ ವಿಸರ್ಗಂ ಪುನರೇವ ಚ ।
ಕರ್ಮಾನುಕೀರ್ತನಂ ಚಾತ್ರ ಪರ್ಜನ್ಯಾಗ್ನಿವಿವಸ್ವತಾಂ ॥ ೩೮ ॥

ಮಾತಾಪುತ್ರೌ ತು ವಾಕ್ಪ್ರಾಣೌ ಮಾತಾ ವಾಗಿತರಃ ಸುತಃ ।
ಸರಸ್ವಂತಮಿತಿ ಪ್ರಾಣೋ ವಾಚಂ ಪ್ರಾಹುಃ ಸರಸ್ವತೀಂ ॥ ೩೯ ॥

36. ಹಾಗೆಯೇ, ಕ್ಷೇತ್ರಜ್ಞಾನವನ್ನೂ (ಶರೀರದಲ್ಲಿರುವ ಆತ್ಮನ ವಿಷಯವನ್ನೂ) ಧೇನು, ಗೌರಿ, ವಾಕ್, ಸರಸ್ವತೀ ಹಿಂದಿನ ಯುಗದ ಧರ್ಮ, ಸಾಧ್ಯರು, ದೇವಗಣಗಳು, ಇವುಗಳನ್ನೂ,

37. ಅಗ್ನಿ, ವಾಯು, ವಿವಸ್ವತ್ ಎಂಬ ದೇವತೆಗಳ ನಾನಾವಿಧ ಕರ್ಮಗಳನ್ನೂ ಚರಾಚರಾತ್ಮಕವಾದ ಜಗತ್ತಿನಲ್ಲಿ ಅಗ್ನಿವಾಯುಗಳ ವಿಭೂತಿ (ಮಹಿಮೆ, ಸಾಮರ್ಥ್ಯ) ಯನ್ನೂ ವರ್ಣಿಸಿರುವನು.

38. ಸೂರ್ಯರಶ್ಮಿಗಳಿಂದ ಜಲಾಶಯಗಳ ಉದಕವು ಆವಿಯ ರೂಪದಲ್ಲಿ ಹೀರಲ್ಪಟ್ಟು ಪುನಃ ಮೇಘಗಳಿಂದ ವೃಷ್ಟಿರೂಪದಲ್ಲಿ ಬೀಳುವುದೂ, ಈ ಸಂಬಂಧದಲ್ಲಿ **ಪರ್ಜನ್ಯ, ಅಗ್ನಿ, ವಿವಸ್ವಾನ್** ಎಂಬ ದೇವತೆಗಳ ಕರ್ಮಗಳೂ (ಪಾತ್ರಗಳೂ) ತಿಳಿಸಲ್ಪಟ್ಟಿವೆ.

39. ವಾಕ್ಪ್ರಾಣಗಳು ಮಾತಾಪುತ್ರರೆಂದು ಹೇಳಲ್ಪಡುವುವು. ಎಂದರೆ **ವಾಕ್** ಎಂಬುದು ತಾಯಿಯು. ಪ್ರಾಣವೆಂಬುದು ಪುತ್ರನು. ಇಲ್ಲಿ ಪ್ರಾಣವನ್ನು **ಸರಸ್ವಾನ್** ಎಂದೂ ವಾಕ್ಕನ್ನು **ಸರಸ್ವತಿ**ಯೆಂದೂ ಹೇಳುವರು.

**8. Account of the contents of RV. i. 164 (continued).**

36. and knowledge of the soul (ಕ್ಷೇತ್ರಜ್ಞಾನ) and the cow (ಧೇನು), the buffalo (ಗೌರಿ), Vac, Sarasvati, and the ordinance (ಧರ್ಮ) of former ages, the Sadhyas, and the troops of the gods.

37. and the various activities of Agni, Vayu, and Vivasvat (the Sun), and the mighty power (ವಿಭೂತಿ) of Agni, and Vayu in the stationary, and moving world.

38. The taking (ಹರಣಂ) of water (ವಾಃ) by the (Snn's) rays and its discharge again. There is here also glorification of the activities of Parjanya, Agni, and Vivasvat (the Sun).

39. Now mother and son are Vac (Speech) and Prana (Breath): the mother is Vac, the son is the other (Prana). Prana is (meant by) 'Sarasvat', while Vac they call Sarasvati.

ಶರೀರಮಿಂದ್ರಿಯೈರ್ಯುಕ್ತಂ ಕ್ಷೇತ್ರಮಿತ್ಯಭಿಧೀಯತೇ ।
ವೇದ ತತ್ಪ್ರಾಣ ಏವೈಕಸ್ತಸ್ಮಾತ್ಕ್ಷೇತ್ರಜ್ಞ ಉಚ್ಯತೇ ॥ ೪೦ ॥

ಮೇಘೇ ಶಕಸ್ತಸ್ಯ ಧೂಮಃ ಸಲಿಲಂ ವಾಸ ಏವ ವಾ ।
ಸೋಮ ಉಕ್ಷಾ ಭವಂತ್ಯಸ್ಯ ಪಾವಕಾಶ್ಚ ತ್ರಯೋಽಧಿಪಾಃ ॥ ೪೧ ॥

ಗೌರೀರಂತಂ ವೈಶ್ವದೇವಮುಪರಿ ಸ್ಯಾತ್ಪೃಥಕ್ಸ್ತುತಿಃ ।
ಇಂದ್ರಂ ಮಿತ್ರಮಿಮೇ ಸೌರ್ಯೌ ಸೌರೀ ವಾಂತ್ಯಾ ಸರಸ್ವತೇ ॥ ೪೨ ॥

40. ಇಂದ್ರಿಯಗಳಿಂದ (ಐದು ಕರ್ಮೇಂದ್ರಿಯ, ಐದು ಜ್ಞಾನೇಂದ್ರಿಯ) ಕೂಡಿರುವ ಶರೀರಕ್ಕೆ ಕ್ಷೇತ್ರವೆಂದು ಹೆಸರು. ಪ್ರಾಣಕ್ಕೆ ಮಾತ್ರವೇ ಈ ಕ್ಷೇತ್ರದ ಸ್ವರೂಪವು ತಿಳಿದಿರುವುದು. ಆದ್ದರಿಂದ ಪ್ರಾಣ ಅಥವಾ ಆತ್ಮವನ್ನು ಕ್ಷೇತ್ರಜ್ಞನೆಂದು ಹೇಳುವರು.

41. ೧೬೪ ನೇ ಸೂಕ್ತದ ೪೩ ನೇ ಋಕ್ಕಿನಲ್ಲಿರುವ ಶಕವೆಂಬ ಶಬ್ದವು ಮೇಘವೆಂಬ ಅರ್ಥದಲ್ಲಿ ಉಪಯೋಗಿಸಲ್ಪಡುವುದು. ಧೂಮವೆಂದರೆ ನೀರು ಅಥವಾ ಆಚ್ಛಾದಿತವಾದ ವಸ್ತ್ರವು ; ವೃಷಭ (ಉಕ್ಷಾ) ಎಂದರೆ ಸೋಮವು: ಮೂರು ಮಂದಿ ಅಧಿಪತಿಗಳೇ ಈ ಸೋಮದ ಶುದ್ಧಿಕಾರಕರು.

42. **ಗೌರೀರ್ಮಿಮಾಯ** ಎಂಬ ಋಕ್ಕಿನವರೆಗಿರುವ ಈ ಸೂಕ್ತಭಾಗವು ಎಂದರೆ ೧-೪೧ ಋಕ್ಕುಗಳು ವಿಶ್ವೇದೇವತಾಕವು. ಅನಂತರ ಮುಂದೆ ಇರುವ ಋಕ್ಕುಗಳಲ್ಲಿ ದೇವತೆಗಳನ್ನು ಅವರವರ ಹೆಸರಿನಿಂದ ಬೇರೆಬೇರೆಯಾಗಿ ಸ್ತುತಿಸಲಾಗಿದೆ. **ಇಂದ್ರಂ ಮಿತ್ರಂ** ಎಂದು ಮೊದಲಾಗುವ ಎರಡು ಋಕ್ಕುಗಳಿಗೆ (೪೬-೪೭) ಸೂರ್ಯನು ದೇವತೆಯು. **ದಿವ್ಯಂ ಸುಪರ್ಣಂ** ಎಂಬ ಕೊನೆಯ ಋಕ್ಕಿಗೆ (೫೨ ನೇ ಋಕ್ಕಿಗೆ) **ಸರಸ್ವಾನ್** ಅಥವಾ ಸೂರ್ಯನು ದೇವತೆಯಾಗಬಹುದು.

---

40. The body joined with the organs of sense is designated ksetra (ಕ್ಷೇತ್ರ) Prana alone knows it: hence the (ಪ್ರಾಣ) is spoken of as 'he who knows the body' (ಕ್ಷೇತ್ರಜ್ಞ).

**9. RV. i. 164 (concluded). RV. i. 165: Indra and the Maruts.**

41. Saka is (used) in (the sense of) cloud ; its dhuma (ಧೂಮ) is water orgarment. The bull is Soma ; and the three lords (ಅಧಿಪ) are his purifiers.

42. That (part of i. 164) which ends with (the (stanza) 'The buffalo' (ಗೌರೀಃ : i. 164. 41) is addressed to the All-gods : afterwards there may be (said to be) separate praise (ಪೃಥಕ್ ಸ್ತುತಿ). The two (stanzas: 46-47), 'Indra, Mitra' (ಇಂದ್ರಂ ಮಿತ್ರಂ : i. 164, 46), are addressed to Surya : the last (stanza) to Sarasvat (i. 164-52) may optinally (ವಾ) be addressed to Surya.

ಸೂಕ್ತಮಲ್ಪಸ್ತವಂ ತ್ವೇತಜ್ಜ್ಞಾನಮೇವ ಪ್ರಶಂಸತಿ ।
ಪ್ರವಾದಬಹುಲತ್ವಾಚ್ಚ ತತಃ ಸಲಿಲಮುಚ್ಯತೇ ॥ ೪೩ ॥
ಮಾರುತ್ಯೈಂದ್ರಸ್ತು ಸಂವಾದಃ ಕಯೇತಿ ಪರಮಃ ಸ್ಮೃತಃ ।
ಮರುತಾಮಯುಜಸ್ತ್ವೃಂದ್ರ್ಯೋ ಯುಗ್ಮಾಃ ಸರ್ವಾಃ ಸಹಾಂತ್ಯಯಾ ॥ ೪೪ ॥
ಏಕಾದಶೀ ಪ್ರಥಮಾ ಚ ಮಾರುತಸ್ತ್ವೃಚ ಉತ್ತರಃ ।
ತೃಚಸ್ಯೈವ ತು ತತ್ಪ್ರೋಕ್ತಂ ಕರ್ತೃತ್ವಮಿತರಸ್ಯ ತು ॥ ೪೫ ॥
ಇತಿಹಾಸಃ ಪುರಾವೃತ್ತ ಋಷಿಭಿಃ ಪರಿಕೀರ್ತ್ಯತೇ ।
ಸಮಾಗಚ್ಛನ್ಮರುದ್ಭಿಸ್ತು ಚರನ್ವ್ಯೋಮ್ನಿ ಶತಕ್ರತುಃ ॥ ೪೬ ॥

43. ಈ ೧೬೪ ನೇ ಸೂಕ್ತದಲ್ಲಿ ಸ್ತೋತ್ರಭಾಗವು ಸ್ವಲ್ಪವಾಗಿರುವುದು. ಆದರೆ ಮುಖ್ಯವಾಗಿ ಜ್ಞಾನವನ್ನೇ (ಜ್ಞಾನವಿಷಯವನ್ನೇ) ಹೆಚ್ಚಾಗಿ ಪ್ರತಿಪಾದಿಸಲಾಗಿದೆ. ನಾನಾವಿಧ ವಿಷಯಗಳ ನಿರೂಪಣೆಯೂ ಇದೆ. ಆದ್ದರಿಂದ ಸಲಿಲ ಎಂದರೆ ನೀರಿನ ವಿಷಯವೂ ಉಕ್ತವಾಗಿದೆ.

### ೧೬೫-೧೬೮ ನೇ ಸೂಕ್ತಗಳ ದೇವತೆಗಳು

44. **ಕಯಾ ಶುಭಾ** ಎಂಬ ೧೬೫ ನೇ ಸೂಕ್ತದಲ್ಲಿ ಮರುದ್ದೇವತೆಗಳಿಗೂ ಇಂದ್ರನಿಗೂ ನಡೆದ ಸಂಭಾಷಣೆಯ ವಿವರವಿದೆ. ಈ ಸೂಕ್ತದ ಋಕ್ಕುಗಳಲ್ಲಿ ಅಸಮಸಂಖ್ಯೆಯ ಋಕ್ಕುಗಳು ಮರುದ್ವಾಕ್ಯಗಳು. ಸಮಸಂಖ್ಯೆಯ ಋಕ್ಕುಗಳು (ಕೊನೆಯ ಋಕ್ಕೂ ಸೇರಿ) ಇಂದ್ರನ ವಾಕ್ಯವು.

45. ಮೇಲಿನ ಸೂಕ್ತದಲ್ಲಿ (೧೬೫) ೧ ಮತ್ತು ೧೧ ನೇ ಋಕ್ಕುಗಳೂ ಇಂದ್ರನ ವಾಕ್ಯವು. ಎಂದರೆ ಈ ಋಕ್ಕುಗಳಿಗೆ ಮರುತ್ತುಗಳೇ ದೇವತೆಯು. ಕೊನೆಯ ಮೂರು ಋಕ್ಕುಗಳಿಗೆ ಕರ್ತೃವು ಬೇರೆ ಇರುವುದೆಂದು ಅಭಿಪ್ರಾಯಭೇದವಿದೆ.

### ಮರುದ್ದೇವತೆಗಳ ವಿಷಯದಲ್ಲಿ ಒಂದು ಇತಿಹಾಸವು

46. ಪೂರ್ವಕಾಲದಲ್ಲಿ ನಡೆದ ಒಂದು ಇತಿಹಾಸವನ್ನು ಋಷಿಗಳು ಈರೀತಿ ಹೇಳುವರು. ಒಂದಾನೊಂದು ಕಾಲದಲ್ಲಿ ಇಂದ್ರನು ಸಂಚಾರಮಾಡುತ್ತಿದ್ದಾಗ ಅವನು ಮರುದ್ದೇವತೆಗಳನ್ನು ಕಂಡನು.

---

43. Now this hymn contains little praise: it lauds knowledge. And because it contains many statements, water (ಸಲಿಲ) is also mentioned (in it).

44. (The hymn) 'With what?' (ಕಯಾ : i. 165) is traditionally held to be the chief (ಪರಮ) dialogue of Maruts and Indra. The odd (stanzas) are (the speech) of the Maruts, all the even ones, including the last, are Indra's.

45. (as well as) the eleventh and the first. The next triplet (i. 165. 13-15) is addressed to the Maruts.

But the authorhip (ಕರ್ತೃತ್ವಂ) of the triplet there is attributed to another.

46. A story of ancient events (ಪುರಾವೃತ್ತ) is (here) proclaimed by the seers.

Satakratu (Indra), while roaming in the sky, fell in with the Maruts.

**ದೃಷ್ಟ್ವಾ ತುಷ್ಟಾವ ತಾನಿಂದ್ರಸ್ತೇ ಚೇಂದ್ರಮೃಷಯೋಽಬ್ರುವನ್ |**
**ತೇಷಾಮಗಸ್ತ್ಯಃ ಸಂವಾದಂ ತಪಸಾ ವೇದ ತತ್ತ್ವತಃ || ೪೭ ||**

**ಸ ತಾನಭಿಜಗಾಮಾಶು ನಿರುಪ್ಯೈಂದ್ರಂ ಹವಿಸ್ತದಾ |**
**ಮರುತಶ್ಚಾಭಿತುಷ್ಟಾವ ಸೂಕ್ತೈಸ್ತನ್ನ್ವಿತಿ ಚ ತ್ರಿಭಿಃ || ೪೮ ||**

**ಮಹಶ್ಚಿದಿತಿ ಚೈವೇಂದ್ರಂ ಸಹಸ್ರಮಿತಿ ಚೈತಯಾ |**
**ನಿರುಪ್ತಂ ತದ್ಧವಿಶ್ಚೈಂದ್ರಂ ಮರುದ್ಭ್ಯೋ ದಾತುಮಿಚ್ಛತಿ || ೪೯ ||**

**ವಿಜ್ಞಾಯಾವೇಕ್ಷ್ಯ ತದ್ಭಾವಮಿಂದ್ರೋ ನೇತಿ ತಮಬ್ರವೀತ್ |**

47. ಆಗ ಇಂದ್ರನು ಆ ಮರುದ್ದೇವತೆಗಳನ್ನು ಸ್ತುತಿಸಿದನು. ಮರುತ್ತುಗಳೂ ಋಷಿಗಳು ದೇವತೆಗಳನ್ನು ಸ್ತುತಿಸುವಂತೆ ಇಂದ್ರನನ್ನು ಸ್ತುತಿಸಿದರು. ಮರುತ್ತುಗಳಿಗೂ, ಇಂದ್ರನಿಗೂ ನಡೆದ ಈ ಸಂಭಾಷಣೆಯನ್ನು ಅಗಸ್ತ್ಯ ಋಷಿಯು ತನ್ನ ತಪೋಮಹಿಮೆಯಿಂದ ತಿಳಿದನು (೧೬೫ ನೇ ಸೂಕ್ತ).

48. ಬಳಿಕ ಆ ಅಗಸ್ತ್ಯನು ಇಂದ್ರನಿಗಾಗಿ ಹವಿಸ್ಸನ್ನು ಸಿದ್ಧಪಡಿಸಿ ಅನಂತರ ಶೀಘ್ರವಾಗಿ ಮರುದ್ದೇವತೆಗಳ ಸಮೀಪಕ್ಕೆ ಹೋಗಿ ಅವರನ್ನು **ತನ್ನು ವೋಚಾಮ** ಎಂದು ಮೊದಲಾಗುವ ಮೂರು ಸೂಕ್ತಗಳಿಂದ (೧೬೬–೧೬೮) ಸ್ತುತಿಸಿದನು.

**ಇಂದ್ರ, ಮರುತ್ತುಗಳು ಮತ್ತು ಅಗಸ್ತ್ಯಋಷಿ (೧೬೯–೧೭೦)**

49. ಅನಂತರ ಅಗಸ್ತ್ಯನು **ಮಹಶ್ಚಿತ್** ಎಂಬ ೧೬೯ ನೇ ಸೂಕ್ತದಿಂದ ಇಂದ್ರನನ್ನು ಸ್ತುತಿಸಿದನು ಮತ್ತು **ಸಹಸ್ರಂ** ಎಂಬ ಋಕ್ಕಿನಿಂದ (೧೬೭ ನೇ ಸೂಕ್ತದ ೧ ನೇ ಋಕ್ಕಿನಿಂದ) ಹಿಂದೆ ಹೇಳಿದಂತೆ ಇಂದ್ರನಿಗಾಗಿ ತಾನು ಸಿದ್ಧಮಾಡಿದ ಹವಿಸ್ಸನ್ನು ಮರುದ್ದೇವತೆಗಳಿಗೆ ಕೊಡಲು ಇಚ್ಛಿಸಿದನು.

50. ಋಷಿಯ ಆಶಯವನ್ನು ಇಂದ್ರನು ತಿಳಿದು ತನಗಾಗಿ ಸಿದ್ಧಪಡಿಸಿದ ಹವಿಸ್ಸನ್ನು ಮರುದ್ದೇವತೆಗಳಿಗೆ ಕೊಡಕೂಡದೆಂದು ಹೇಳಿದನು ಮತ್ತು (ಎಲೈ ಋಷಿಯೇ, ನೀನು ನನಗಾಗಿ ಹವಿಸ್ಸನ್ನು ನಾಳೆ ಕೊಡುವೆನೆಂದು ಹೇಳುವಿಯಾದರೆ) ನಿಜವಾಗಿ ನೋಡುವುದಾದರೆ ನಾಳೆ ಎಂಬುವುದು ಯಾವುದೂ ಇಲ್ಲ, ಈಗ ಎನ್ನುವುದೂ ಇಲ್ಲ. ಏಕೆಂದರೆ

---

47. On seeing them Indra praised them, and they as seers addressed Indra. By the aid of austerity Agastya became fully (ತತ್ತ್ವತಃ) aware of their dialogue.

48. He quickly went to them after having preparcd (ನಿರುಪ್ಯ) an oblation to Indra, and he praised the Maruts also with the three hymns (i. 166–168) 'Now that' ( ತನ್ನು : i. 166. 1).

### 10. Indra, the Maruts, and Agastya : RV. i. 169, 170.

49. And (with) 'Even from great' (ಮಹಶ್ಚಿತ್ : i. 169) he (praised) Indra, and with the (stanza) 'A thousand' (ಸಹಸ್ರಂ : i. 167. 1) he wished to give the oblation which he had prepared (ನಿರುಪ್ತಂ) for Indra to the Maruts.

50 Indra recognizing his intention (ತದ್ಭಾವಂ) said to him regarding

ನ ಶ್ವೋ ನಾದ್ಯ ತನಂ ಹ್ಯಸ್ತಿ ವೇದ ಕಸ್ತದ್ಯದದ್ಭುತಂ || ೫೦ ||

ಕಸ್ಯ ಚಿತ್ತ್ವರ್ಥಸಂಚಾರೇ ಚಿತ್ತಮೇವ ವಿನಶ್ಯತಿ |
ಕಿಂ ನ ಇತ್ಯಬ್ರವೀದಿಂದ್ರಮಗಸ್ತ್ಯೋ ಭ್ರಾತರಸ್ತವ || ೫೧ ||

ಮರುದ್ಭಿಃ ಸಂಪ್ರಕಲ್ಪಸ್ವ ವಧೀರ್ಮಾ ನಃ ಶತಕ್ರತೋ |
ಕಿಂ ನೋ ಭ್ರಾತರಿತಿ ತ್ವಸ್ಯಾಮಿಂದ್ರೋ ಮಾನ್ಯಮುಪಾಲಭತ್ || ೫೨ ||

ಅಗಸ್ತ್ಯಸ್ತ್ವರಮಿತ್ಯಸ್ಯಾಂ ಕ್ಷುಬ್ಧಮಿಂದ್ರಂ ಪ್ರಶಾಮಯತ್ |
ಪ್ರಾದಾತ್ಸಂವನನಂ ಕೃತ್ವಾ ತೇಭ್ಯ ಏವ ಚ ತದ್ಧವಿಃ || ೫೩ ||

ಮುಂದೆ ಏನು ಸಂಭವಿಸುವುದೆಂಬುವುದನ್ನು ಯಾರೂ ತಿಳಿಯಲಾರರು ಎಂಬರ್ಥವಿರುವ **ನ ನೂನಮಸ್ತಿ** (೧೭೦ ನೇ ಸೂಕ್ತದ ೧ ನೇ ಋಕ್ಕಿನಿಂದ) ತಿಳಿಯಪಡಿಸಿದನು.

51. ಒಬ್ಬ ಪುರುಷನ ಉದ್ದೇಶವು ಸ್ಥಿಮಿತವಿಲ್ಲದಿದ್ದರೆ ಅವನ ಮನಸ್ಸಿನ ನಿಶ್ಚಯವೇ ಅಥವಾ ಉದ್ದೇಶವೇ ನಾಶವಾಗುವುದು ಎಂದರೆ ಸ್ಥಿರಮನಸ್ಕನಾಗಿರದಿದ್ದರೆ ಅವನ ಉದ್ದೇಶವು ಸಫಲವಾಗುವುದಿಲ್ಲ ಎಂದು ಇಂದ್ರನು ಹೇಳಲು ಅಗಸ್ತ್ಯನು ಅದಕ್ಕೆ ಪ್ರತ್ಯುತ್ತರವಾಗಿ—**ಕಿಂ ನಃ** (೧೭೦ ರಲ್ಲಿ ೨ ನೇ ಋಕ್ಕು) ಎಂಬ ಋಕ್ಕಿನಿಂದ, ಎಲೈ ಇಂದ್ರನೇ, ಅದೇಕೆ ಹಾಗೆ ಹೇಳುವಿ ? ನಿನಗೆ ಸಿದ್ಧಪಡಿಸಿದ ಹವಿಸ್ಸನ್ನು ಮರುತ್ತುಗಳಿಗೆ ಏಕೆ ಕೊಡಬಾರದು ?) ಆ ಮರುತ್ತುಗಳು ನಿನಗೆ ಸಹೋದರರಲ್ಲವೇ ?

52. ಮರುತ್ತುಗಳೊಡನೆ ಸಮಾಧಾನದಿಂದಿರು (ಎಂದರೆ ಮರುತ್ತುಗಳಿಗೆ ಹವಿಸ್ಸನ್ನು ಅರ್ಪಿಸುವ ವಿಷಯದಲ್ಲಿ ನೀನು ಸಮ್ಮತಿಸು). ಎಲೈ ಇಂದ್ರನೇ ನಮ್ಮನ್ನು ಕೊಲ್ಲಬೇಡ ಎಂದನು. ಅದಕ್ಕೆ ಇಂದ್ರನು **ಕಿಂ ನೋ ಭ್ರಾತಃ** (೧೭೦ ರಲ್ಲಿ ೩ ನೇ ಋಕ್ಕು) ಎಂಬ ಋಕ್ಕಿನಿಂದ ಅಗಸ್ತ್ಯನನ್ನು ಆಕ್ಷೇಪಿಸಿದನು.

53. ಆದರೆ ಅಗಸ್ತ್ಯನು **ಅರಂ ಕೃಣ್ವಂತು** (೧೭೦ ರಲ್ಲಿ ೪ ನೇ ಋಕ್ಕು) ಎಂಬ ಋಕ್ಕಿನಿಂದ ವಿಹ್ವಲನಾದ ಇಂದ್ರನನ್ನು ಸಮಾಧಾನಮಾಡಿದನು ಮತ್ತು ಸಮಾಧಾನಮಾಡಿದನಂತರ ಆ ಹವಿಸ್ಸನ್ನು ಆ ಮರುತ್ತುಗಳಿಗೇ ಅರ್ಪಿಸಿದನು.

---

(ಅವೇಕ್ಷ್ಯ) it, 'Not' (ನ : i. 170. 1) : 'there is, indeed, not (anything for) to-morrow, nor to-day : who knows that which has not beem (ಅದ್ಭುತಂ)' ?

51. 'But the intention itself (ಚಿತ್ತಮೇವ) of any one, in the uncertainty of purpose (ಅರ್ಥಸಂಚಾರೇ), comes to naught'. Agastya (then) said to Indra, 'Why us ?' (ಕಿಂ ನಃ : i. 170. 2i ;) they (the Maruts) are your brothers.

52. 'Agree with the Maruts ; slay us not, Satakrtu'. But in the (stanza) 'Why us, O Brother ?' (ಕಿಂ ನೋ ಭ್ರಾತಃ : i. 170. 3) Indra reproached Manya (ಅಗಸ್ತ್ಯ).

53. But Agastya in the (stanza) 'Ready' (ಅರಂ : i. 170. 4) pacified the agitated (ಕ್ಷುಬ್ಧ) Indra. After propitiating him, he made over the oblation to them (the Maruts).

ಸುತೇ ಚಕಾರ ಸೋಮೇಽಥ ತಾನಿಂದ್ರಃ ಸೋಮಪೀಥಿನಃ ।
ತಸ್ಮಾದ್ವಿದ್ಯಾನ್ನಿಪಾತೇನ ಐಂದ್ರೇಷು ಮರುತಃ ಸ್ತುತಾನ್ || ೫೪ ||

ಪ್ರೀತಾತ್ಮಾ ಪುನರೇವರ್ಷಿಸ್ತಾಂಸ್ತುಷ್ಟಾವ ಪೃಥಕ್ಪೃಥಕ್ ।
ಮರುತಃ ಪ್ರತಿ ಸೂಕ್ತಾಭ್ಯಾಮಿಂದ್ರಂ ಷಡ್ಭಿಃ ಪರೈಸ್ತು ಸಃ || ೫೫ ||

ಸ್ತುತಶ್ಚ ತಸ್ಯಭಿಶ್ಚೇಂದ್ರಃ ಸ್ತುತಾಸ ಇತಿ ತೈಃ ಸಹ ।
ಮರುದ್ಭಿಃ ಸಹ ಯತ್ರೇಂದ್ರೋ ಮರುತ್ವಾಂಸ್ತತ್ರ ಸೋಽಭವತ್ || ೫೬ ||

ಋತೌ ಸ್ನಾತಾಮೃಷಿರ್ಭಾರ್ಯಾಂ ಲೋಪಮುದ್ರಾಂ ಯಶಸ್ವಿನೀಂ ।
ಉಪಜಲ್ಪಿತುಮಾರೇಭೇ ರಹಃಸಂಯೋಗಕಾಮ್ಯಯಾ || ೫೭ ||

54. ಆದ್ದರಿಂದ ಸೋಮರಸವು ಹಿಂಡಲ್ಪಡುವಾಗಲೆಲ್ಲಾ ಇಂದ್ರನು ಮರುತ್ತುಗಳಿಗೆ ಸೋಮಪಾನವು ಲಭಿಸುವಂತೆ ಮಾಡಿದನು. ಆದ್ದರಿಂದ ಇವನನ್ನು ಸ್ತುತಿಸುವ ಸೂಕ್ತಗಳಲ್ಲಿ ಮರುದ್ದೇವತೆಗಳ ವಿಷಯವು ಪ್ರಾಸಂಗಿಕವಾಗಿ ಉಕ್ತವಾಗಿರುವುದು.

55. ಸಂತುಷ್ಟನಾದ ಆ ಅಗಸ್ತ್ಯಋಷಿಯು ಮರುದ್ದೇವತೆಗಳನ್ನೂ, ಇಂದ್ರನನ್ನೂ ಬೇರೆ ಬೇರೆ ಸೂಕ್ತಗಳಿಂದ ಸ್ತುತಿಸಿದನು. **ಪ್ರತಿ ವ** ಎಂದು ಮೊದಲಾಗುವ ಎರಡು ಸೂಕ್ತಗಳಿಂದ (೧೭೧-೧೭೨) ಮರುದ್ದೇವತೆಗಳನ್ನೂ ಅದರ ಮುಂದಿನ ಆರು ಸೂಕ್ತಗಳಿಂದ (೧೭೩-೧೭೮) ಇಂದ್ರನನ್ನೂ ಪ್ರತ್ಯೇಕವಾಗಿ ಸ್ತುತಿಸಿದನು.

56. ಮತ್ತು ೧೭೧ ನೇ ಸೂಕ್ತದ **ಸ್ತುತಾಸಃ** ಎಂದು ಮೊದಲಾಗುವ ೪ ಋಕ್ಕುಗಳಿಂದ (೩-೬) ಇಂದ್ರನು ಮರುದ್ದೇವತೆಗಳೊಡನೆ ಸಹಿತನಾಗಿ ಸ್ತುತಿಸಲ್ಪಟ್ಟಿರುವನು. ಆದ್ದರಿಂದ ಮರುದ್ದೇವತೆಗಳೊಡನೆ ಇಂದ್ರನು ಎಲ್ಲೆಲ್ಲಿ ಸ್ತುತಿಸಲ್ಪಡುವನೋ ಅಲ್ಲೆಲ್ಲಾ ಇಂದ್ರನನ್ನು **ಮರುತ್ವಾನ್** (ಮರುದ್ದೇವತೆಗಳೊಡನೆ ಸಹಿತನಾದವನು) ಎಂದು ಸ್ತುತಿಸಲಾಗಿದೆ.

**ಅಗಸ್ತ್ಯ ಮತ್ತು ಅವನ ಪತ್ನಿಯಾದ ಲೋಪಾಮುದ್ರಾ ; ೧೭೯ ನೇ ಸೂಕ್ತ**

57. ಒಂದಾನೊಂದುಕಾಲದಲ್ಲಿ ಅಗಸ್ತ್ಯಋಷಿಯು ಋತುಸ್ನಾನಮಾಡಿದ ತನ್ನ ಭಾರ್ಯೆಯಾದ ಲೋಪಾಮುದ್ರೆಯೊಡನೆ ರಹಸ್ಯವಾಗಿ ಸಂಭೋಗಮಾಡಲು ಅಪೇಕ್ಷಿಸಿ ಅವಳೊಡನೆ ಸಂವಾದಮಾಡಲುಉಪಕ್ರಮಿಸಿದನು.

**11. RV. i. 171-178. Agastya and Lopamudra : RV. i. 179.**

54. Then when Soma had been pressed, Indra made them (the Maruts) drinkers of Soma (with him). Therefore one should understand that in (hymns) addressed to Indra the Maruts are incidentally praised.

55. Pleased at heart the seer praised the Maruts again seperately in the two (171, 172) hymns ' To you ' (ಪ್ರತಿ : i 171. 1), but Indra with the six follhwing ones (173-178).

56. And Indra in thc four (etanzas) ' praised ' (ಸ್ತುತಾಸಃ : i. 171, 3-6) is praised with them. Wherever Indra was with the Maruts, he was Marutvat (attended by the Maruts).

57. The seer began, from desire of secret union, to talk to his wife, the illustrious Lopamudra, when she had bathed after her courses (ಋತೌ).

**ದ್ವಾಭ್ಯಾಂ ಸಾ ತ್ವಬ್ರವೀದೃಗ್ಭ್ಯಾಂ ಪೂರ್ವೀರಿತಿ ಚಿಕೀರ್ಷಿತಂ ।**
**ರಿರಂಸುಸ್ತಾಮಥಾಗಸ್ತ್ಯ ಉತ್ತರಾಭ್ಯಾಮತೋಷಯತ್ ॥ ೫೮ ॥**

**ವಿದಿತ್ವಾ ತಪಸಾ ಸರ್ವಂ ತಯೋರ್ಭಾವಂ ರಿರಂಸತೋಃ ।**
**ಶ್ರುತ್ವೈನಃ ಕೃತವಾನಸ್ಮಿ ಬ್ರಹ್ಮಚಾರ್ಯುತ್ತಮೋ ಜಗೌ ॥ ೫೯ ॥**

**ಪ್ರಶಸ್ಯ ತಂ ಪರಿಷ್ವಜ್ಯ ಗುರೂ ಮೂರ್ಧನ್ಯವಜಿಘ್ರತುಃ ।**
**ಸ್ಮಿತ್ವೈನಮಾಹತುಶ್ಚೋಭಾವನಾಗಾ ಅಸಿ ಪುತ್ರಕ ॥ ೬೦ ॥**

58. ೧೭೯ ನೇ ಸೂಕ್ತದ **ಪೂರ್ವೀರಹಂ** ಎಂದು ಮೊದಲಾಗುವ ೨ ಋಕ್ಕುಗಳಿಂದ (೧-೨) ಲೋಪಾಮುದ್ರೆಯು ತನ್ನ ಅಭಿಲಾಷೆಯನ್ನು ವ್ಯಕ್ತಪಡಿಸಿರುವಳು. ಅದರ ಮುಂದಿನ ಎರಡು ಋಕ್ಕುಗಳಲ್ಲಿ (೩-೪) ಅಗಸ್ತ್ಯನು ರತಿಕ್ರೀಡೆಯಲ್ಲಿ ಆಸಕ್ತಿಯುಳ್ಳವನಾಗಿ ಅವಳನ್ನು ಸಂತೋಷಪಡಿಸಿದನೆಂಬ ವಿಷಯವು ಉಕ್ತವಾಗಿದೆ.

59. ಈ ದಂಪತಿಗಳು (ಅಗಸ್ತ್ಯ ಲೋಪಾಮುದ್ರೆಯರು) ರತಿಕ್ರೀಡೆಯ ಕಾಲದಲ್ಲಿ ನಡೆಸಿದ ರಹಸ್ಯಸಂಭಾಷಣೆಯನ್ನು ತನ್ನ ತಪೋಮಹಿಮೆಯಿಂದ ತಿಳಿದ ಅಗಸ್ತ್ಯಶಿಷ್ಯನು—ನಾನು ಬ್ರಹ್ಮಚಾರಿಯಾಗಿದ್ದರೂ ಇಂತಹ ಸಂಭಾಷಣೆಯನ್ನು ಕೇಳಿ ಇದರಿಂದ ತನಗೆ ಮಹಾಪಾಪವು ಸಂಭವಿಸಿತೆಂದು ತಿಳಿದು ಅದರ ಪ್ರಾಯಶ್ಚಿತಾರ್ಥವಾಗಿ ಈ ಸೂಕ್ತದ (೧೭೯) ಕೊನೆಯ ಎರಡು ಋಕ್ಕುಗಳನ್ನು (೫-೬) ಪಠಿಸಿರುವನು.

60. ಅದನ್ನು ಕೇಳಿ ಅವನ ಗುರುವಾದ ಅಗಸ್ತ್ಯನೂ ಅವನ ಪತ್ನಿಯಾದ ಲೋಪಾಮುದ್ರೆಯೂ ಸಹ ಅವನು ನುಡಿದ ಪ್ರಾಯಶ್ಚಿತ್ತರೂಪವಾದ ವಾಕ್ಯವನ್ನು ಕೇಳಿ ಅವನನ್ನು ಪ್ರಶಂಸಿಸಿ ಪ್ರೀತಿಯಿಂದ ಆಲಿಂಗನಮಾಡಿ ಅವನ ಶಿರಸ್ಸನ್ನು ಮೂಸಿನೋಡಿ ಮಂದಹಾಸಯುಕ್ತರಾಗಿ ಆ ಬಾಲಕನನ್ನು ಕುರಿತು—ಎಲೈ ಪುತ್ರನೇ, ಚಿಂತಿಸಬೇಡ, ನೀನು ಪಾಪರಹಿತನಾಗಿರುವೆ ಎಂದು ಹೇಳಿ ಸಮಾಧಾನಮಾಡಿದರು.

## 12. Agastya and Lopamudra. RV. i. 180-191.

58. She with the two stanzas 'During many' (ಪೂರ್ವೀಃ : i. 179. 1,2) expressed her purpose. Then Agastya, desiring to enjoy himself, satisfied her with the two (3, 4) following (stanzas).

59. The disciple (of the seer) becoming aware by austerity of the whole condition of these two desiring to enjoy themselves, (but) thinking he had committed a sin (ಏನಃ) in listening (ಶ್ರುತ್ವಾ), sang the last two (stanzas 5, 6).

60. The preceptor and his wife (ಗುರು) lauding and embracing him kissed him on the head, smiling both of them said to him, 'You are sinless, son'.

ಯುವೋ ರಜಾಂಸೀತಿ ತತಃ ಸೂಕ್ತೈಃ ಪಂಚಭಿರಶ್ವಿನೌ |
ಅಗಸ್ತ್ಯ ಏವ ತುಷ್ಟಾವ ಕತರೇತಿ ಪರೇಣ ತು ॥ ೬೧ ॥

ದ್ಯಾವಾಪೃಥಿವ್ಯೌ ಸೂಕ್ತೇನ ಆ ನೋ ವಿಶ್ವಾನ್ದಿವೌಕಸಃ |
ಪಿತುಮನ್ನಂ ಸಮಿದ್ಧಾಪ್ರ್ಯೇ ಅಗ್ನಿಮಗ್ನೇ ನಯೇತಿ ಚ ॥ ೬೨ ॥

ಬೃಹಸ್ಪತೇರನರ್ವಾಣಂ ಕಂಕತೋಽಪನಿಷತ್ಪರಂ |
ಅಪಾಂ ತೃಣಾನಾಂ ಸೂರ್ಯಸ್ಯ ಕೇಚಿದೇತಾಂ ಸ್ತುತಿಂ ವಿದುಃ ॥ ೬೩ ॥

### ೧೮೦-೧೯೧ ನೇ ಸೂಕ್ತಗಳು

61. **ಯುವೋ ರಜಾಂಸಿ** ಎಂದು ಮೊದಲಾಗುವ ಐದು ಸೂಕ್ತಗಳಿಂದ (೧೮೦-೧೮೪) ಅಗಸ್ತ್ಯಋಷಿಯು ಅಶ್ವಿನೀದೇವತೆಗಳನ್ನು ಸ್ತುತಿಸಿರುವನು. ಅದರ ಮುಂದಿನ ಸೂಕ್ತವಾದ **ಕತರಾ ಪೂರ್ವಾ** ಎಂಬ ೧೮೫ ನೇ ಸೂಕ್ತದಿಂದ,

62. ದ್ಯಾವಾಪೃಥಿವಿಗಳನ್ನೂ **ಆ ನಃ** ಎಂಬ ೧೮೬ ನೇ ಸೂಕ್ತದಿಂದ ವಿಶ್ವೇದೇವತೆಗಳನ್ನೂ, **ಪಿತುಂ ನ** ಎಂಬ ೧೮೭ ನೇ ಸೂಕ್ತದಿಂದ ಅನ್ನವನ್ನೂ ಸ್ತುತಿಸಿರುವನು. **ಸಮಿದ್ಧಃ** ಎಂಬ ೧೮೮ ನೇ ಸೂಕ್ತವು ಆಪ್ರೀಸೂಕ್ತವು ; **ಅಗ್ನೇ ನಯ** ಎಂಬ ೧೮೯ ನೇ ಸೂಕ್ತದಲ್ಲಿ ಅಗ್ನಿಯನ್ನು ಸ್ತುತಿಸಲಾಗಿದೆ.

63. **ಅನರ್ವಾಣಂ** ಎಂಬ ೧೯೦ ನೇ ಸೂಕ್ತಕ್ಕೆ ಬೃಹಸ್ಪತಿಯು ದೇವತೆಯು; **ಕಂಕತೋ ನ** ಎಂಬ ೧೯೧ ನೇ ಸೂಕ್ತವು ಉಪನಿಷತ್ಪರವಾಗಿರುವುದು. ಆದರೆ ಕೆಲವರು ಈ ಸೂಕ್ತದಲ್ಲಿ ಅಬ್ದೇವತೆಗಳನ್ನೂ ತೃಣಾಭಿಮಾನಿ ದೇವತೆಯನ್ನೂ ಸೂರ್ಯನನ್ನೂ (ಅಪ್ತೃಣಸೂರ್ಯಾಃ) ಸ್ತುತಿಸಲಾಗಿದೆಯೆಂದು ಅಭಿಪ್ರಾಯಪಡುವರು.

---

61. Then with the five hymns (i. 180-184), 'Your (coursers) through the regions' (ಯುವೋ ರಜಾಂಸಿ : i. 180. 1), Agastya praised the Asvins; but with the following, 'Which of the two'? (ಕತರಾ : i. 185).

62. (he praised) Heaven and Earth; with the hymn 'To our' (ಆ ನಃ : i. 186), all the dwellers in the sky (ವಿಶ್ವಾನ್ ದಿವೌಕಸಃ); (with) 'The draught' (ಪಿತುಂ : i. 187), Food; 'Kindled' (ಸಮಿದ್ಧಃ : i. 188) is an Apri hymn and (with) 'O Agni, lead' (ಅಗ್ನೇ ನಯ : i. 189), (he praised) Agni.

63. 'The resistless' (ಅನರ್ವಾಣಂ : i. 190) is to Brhaspati. The following (hymn), 'Venomous creatuae' (ಕಂಕತಃ : i. 191), is of esoteric import (ಉಪನಿಷತ್). Some consider this to be a praise of Waters, Grass, and the Sun.

ದದರ್ಶ ತದಗಸ್ತ್ಯೋ ವಾ ವಿಷಘ್ನಂ ವಿಷಶಂಕಯಾ ।
ಅದೃಷ್ಟಾಖ್ಯೋ ನಷ್ಟರೂಪಃ ಸೂಕ್ತಸ್ಯಾಂತ್ಯೋಽತ್ರ ತು ದ್ವೃಚಃ ॥ ೬೪ ॥

॥ ಇತಿ ಪ್ರಥಮಂ ಮಂಡಲಂ ಸಮಾಪ್ತಂ ॥

64. ಅಥವಾ ವಿಷವು ತನ್ನ ದೇಹಕ್ಕೆ ಸೇರಿದೆಯೆಂಬ ಶಂಕೆಯಿಂದ ವಿಷಪರಿಹಾರಕವಾದ ಈ ಸೂಕ್ತವು ಅಗಸ್ತ್ಯಋಷಿಗೆ ದೃಷ್ಟವಾಯಿತೆಂದೂ ಕೆಲವರ ಅಭಿಪ್ರಾಯವಿರುವುದು. ಈ ಸೂಕ್ತದ (೧೯೧) ಕೊನೆಯ ಎರಡು ಋಕ್ಕುಗಳಲ್ಲಿ ಯಾವ ನಿರ್ದಿಷ್ಟವಾದ ಹೆಸರೂ ಇರುವುದಿಲ್ಲ ಮತ್ತು ಅವುಗಳ ಸ್ವರೂಪವೂ ವಿಶದವಾಗಿಲ್ಲ.

ಇಲ್ಲಿಗೆ ಬೃಹದ್ದೇವತಾ ಗ್ರಂಥದಲ್ಲಿ ಮೊದಲನೆಯ ಮಂಡಲದ ವಿವರಣೆಯು ಸಮಾಪ್ತವು.

64. Or Agastya, in fear of poison, saw this (hymn) as an antidote. The last couplet here of the hymn, however, contains no distinct name (ಅದೃಷ್ಟಾಖ್ಯಃ) and its character is obscure (ನಷ್ಟರೂಪಃ).

End of I Mandla.



**ಅಥ ದ್ವಿತೀಯಂ ಮಂಡಲಂ**

**ಅಸ್ತೌದ್ಗೃತ್ಸಮದೋಽಗ್ನಿಂ ತ್ವಂ ಜಾತವೇದಸ್ಯಮಾಪ್ರಿಯಃ |**
**ಯಜ್ಞೇನಾಥ ಸಮಿದ್ಧೋಽಗ್ನಿರತೋಽಗ್ನಿಂ ಸಪ್ತಭಿರ್ಹುವೇ** || ೬೫ ||

**ಸಂಯುಜ್ಯ ತಪಸಾತ್ಮಾನಮೈಂದ್ರಂ ಬಿಭ್ರನ್ಮಹದ್ವಪುಃ |**
**ಅದೃಶ್ಯತ ಮುಹೂರ್ತೇನ ದಿವಿ ಚ ವ್ಯೋಮ್ನಿ ಚೇಹ ಚ** || ೬೬ ||

**ತಮಿಂದ್ರಮಿತಿ ಮತ್ವಾ ತು ದೈತ್ಯೌ ಭೀಮಪರಾಕ್ರಮೌ |**
**ಧುನಿಶ್ಚ ಚುಮುರಿಶ್ಚೋಭೌ ಸಾಯುಧಾವಭಿಪೇತತುಃ** || ೬೭ ||

## ಎರಡನೆಯ ಮಂಡಲವು

### ೨ ನೇ ಮಂಡಲದ ೧-೧೨ ಸೂಕ್ತಗಳು; ಗೃತ್ಸಮದ, ಇಂದ್ರ ಮತ್ತು ದೈತ್ಯರು

65. ಈ ೨ ನೇ ಮಂಡಲದ ದ್ರಷ್ಟೃವಾದ ಗೃತ್ಸಮದಋಷಿಯು **ತ್ವಮಗ್ನೇ** ಎಂಬ ಮೊದಲನೆಯ ಸೂಕ್ತದಿಂದ ಅಗ್ನಿಯನ್ನೂ **ಯಜ್ಞೇನ ವರ್ಧತ** ಎಂಬ ಎರಡನೆಯ ಸೂಕ್ತದಿಂದ ಜಾತವೇದೋಽಗ್ನಿಯನ್ನೂ ಸ್ತುತಿಸಿರುವನು. **ಸಮಿದ್ಧೋ ಅಗ್ನಿಃ** ಎಂಬ ೩ ನೇ ಸೂಕ್ತವು ಆಪ್ರೀಸೂಕ್ತವು; ಅದರ ಮುಂದಿನ **ಹುವೇ ವಃ** ಎಂದು ಮೊದಲಾಗುವ ೭ ನೇ ಸೂಕ್ತಗಳಲ್ಲಿ (೪–೧೦) ಅಗ್ನಿಯನ್ನು ಸ್ತುತಿಸಲಾಗಿದೆ.

66. ಒಂದು ಸಮಯದಲ್ಲಿ ಈ ಗೃತ್ಸಮದಋಷಿಯು ತನ್ನ ತಪಃಪ್ರಭಾವದಿಂದ ಇಂದ್ರನಂತಿರುವ ದೊಡ್ಡ ಶರೀರವನ್ನು ಧರಿಸಿ ಸ್ವಲ್ಪಕಾಲದವರೆಗೆ ಪೃಥಿವ್ಯಂತರಿಕ್ಷಸ್ವರ್ಗಗಳಲ್ಲಿ ಎಲ್ಲರಿಗೂ ಕಾಣಿಸುವಂತೆ ಗೋಚರಿಸಿದನು.

67. ಇಂದ್ರನ ಆಕಾರವನ್ನು ಧರಿಸಿ ಇಂದ್ರನಂತೆಯೇ ಕಾಣುತ್ತಿದ್ದ ಈ ಗೃತ್ಸಮದಋಷಿಯನ್ನು ಮಹಾಬಲ ಪರಾಕ್ರಮಶಾಲಿಗಳಾದ ಧುನಿ ಮತ್ತು ಚುಮುರಿ ಎಂಬಿಬ್ಬರು ದೈತ್ಯರು ನೋಡಿ ಅವನೇ ಇಂದ್ರನೆಂದು ತಿಳಿದು ಆಯುಧೋಪೇತರಾಗಿ ಅವನಮೇಲೆ ನುಗ್ಗಿಬಂದರು.

## II Mandala.

### 13. Deities of RV. ii. 1–12. Grtsamada, Indra and the Daityas.

65. Grtsamada praised Agni (with) 'you' (ತ್ವಂ : ii. 1). Then (With sacrifice' (ಯಜ್ಞೇನ : ii. 2) and 'Agni kindled' (ಸಮಿದ್ಧೋ ಅಗ್ನಿಃ : ii. 3) are (respectively) addressed to Jatavedas and Apri stanzas. Then with the seven (hymns : 4–10) 'I call' (ಹುವೇ : ii. 4) (he prised) Agni.

66. Having applied himself to austerity, he with (ಬಿಭ್ರತ್) a great body like that of Indra (ಐಂದ್ರ), in a moment appeared in heaven and air and here (on earth).

67. Now the two Daityas of terrible prowess, Dhuni and Chumuri, thinking him to be Indra, both fell upon him armed.

ವಿದಿತ್ವಾ ಸ ತಯೋರ್ಭಾವಮೃಷಿಃ ಪಾಪಂ ಚಿಕೀರ್ಷತೋಃ |
ಯೋ ಜಾತ ಇತಿ ಸೂಕ್ತೇನ ಕರ್ಮಾಣ್ಯೈಂದ್ರಾಣ್ಯಕೀರ್ತಯತ್ || ೬೮ ||
ಉಕ್ತೇಷು ಕರ್ಮಸ್ವೈಂದ್ರೇಷು ಭೀಸ್ತಾವಾಶು ವಿವೇಶ ಹ |
ಇದಮಂತರಮಿತ್ಯುಕ್ತ್ವಾ ತಾವಿಂದ್ರಸ್ತು ನಿಬರ್ಹಯತ್ || ೬೯ ||
ನಿಹತ್ಯ ತೌ ಗೃತ್ಸಮದಮೃಷಿಂ ಶಕ್ರೋಽಭ್ಯಭಾಷತ |
ಯಥೇಷ್ಟಂ ಮಾಂ ಸಖೇ ಪಶ್ಯ ಪ್ರಿಯತ್ವಂ ಹ್ಯಾಗತೋಽಸಿ ಮೇ || ೭೦ ||
ವರಂ ಗೃಹಾಣ ಮತ್ತಸ್ತ್ವಮಕ್ಷಯಂ ಚಾಸ್ತು ತೇ ತಪಃ |
ಪ್ರಹ್ವಸ್ತಂ ಪ್ರತ್ಯುವಾಚರ್ಷಿರಸ್ಮಾಕಂ ವದತಾಂ ವರ || ೭೧ ||

68. ಪಾಪಿಷ್ಠರಾದ ಈ ದೈತ್ಯರ ದುರಾಲೋಚನೆಯನ್ನು ತಿಳಿದು ಗೃತ್ಸಮದಋಷಿಯು **ಯೋ ಜಾತ ಏವ** ಎಂಬ ೧೨ ನೇ ಸೂಕ್ತದಿಂದ ಇಂದ್ರನ ಸಾಹಸಕಾರ್ಯಗಳನ್ನೂ ಗುಣಗಳನ್ನೂ ವರ್ಣಿಸಿದನು.

69. ಇಂದ್ರನ ಬಲಪರಾಕ್ರಮಗಳನ್ನು ಕೇಳಿ ಆ ದೈತ್ಯರ ಮನಸ್ಸಿನಲ್ಲಿ ಬಹಳವಾದ ಭೀತಿಯು ಆವರಿಸಿತು. ಇವರನ್ನು ಕೊಲ್ಲುವುದಕ್ಕೆ ಇದೇ ತಕ್ಕ ಸಮಯವು ಎಂದು ಇಂದ್ರನು ಹೇಳಿ (ತಿಳಿದು) ಆ ಇಬ್ಬರು ದೈತ್ಯರನ್ನೂ ಪ್ರಹರಿಸಿ ಕೊಂದನು.

### ಗೃತ್ಸಮದ ಮತ್ತು ಇಂದ್ರ

70. ಈ ರೀತಿಯಾಗಿ ಆ ದೈತ್ಯರನ್ನು ಸಂಹಾರಮಾಡಿದ ಬಳಿಕ ಇಂದ್ರನು ಗೃತ್ಸಮದನನ್ನು ಕುರಿತು—ಎಲೈ ಮಿತ್ರನೇ, ನಾನು ನಿನಗೆ ಹಿತವನ್ನು ಬಯಸುವ ಮಿತ್ರನೆಂದು ತಿಳಿ. ಏಕೆಂದರೆ, ನೀನು ನನಗೆ ಪ್ರೀತಿಪಾತ್ರನಾಗಿರುವೆ.

71. ಆದ್ದರಿಂದ, ನಿನ್ನ ತಪಸ್ಸು ನಿರ್ವಿಘ್ನವಾಗಿ ನಡೆಯಲಿ. ನಿನಗೆ ಬೇಕಾದ ವರವನ್ನು ಕೇಳು, ಕೊಡುವೆನು ಎಂದನು. ಆದನ್ನು ಕೇಳಿ ಋಷಿಯು ಆ ಇಂದ್ರನನ್ನು ಬಗ್ಗಿ ನಮಸ್ಕರಿಸಿ ಇಂತೆಂದನು—ಮಾತನಾಡುವವರಲ್ಲಿ ಶ್ರೇಷ್ಠವಾದ ಎಲೈ ಇಂದ್ರನೇ,

---

68. The seer becoming aware of the intention (ಭಾವ) of these two bent on evil, proclaimed the deeds of Indra with the hymn 'Who when born' (ಯೋ ಜಾತಃ : ii. 12).

69. The deeds of Indra being (thus) declared, fear quickly entered them. Now Indra (saying) 'This is (my) opportunity,' struck them down (ನಿಬರ್ಹಯತ್).

### 14. Grtsamada and Indra.

70. Having smitten them down, Sakra addressed Grtsamada the seer : 'Look upon me, friend, as one beloved ; for you have become dear to me

71. 'Ask a boon of me ; and may your penance never fail.' Bowing down, the seer replied to him : 'For us, O chief of speakers,

ತನೂನಾಮಸ್ತು ಚಾರಿಷ್ಟಿರ್ವಾಕ್ ಚಾಸ್ತು ಹೃದಯಂಗಮಾ ।
ಸುವೀರಾ ರಯಿಮಂತಶ್ಚ ವಯಂ ತ್ವಾಮಿಂದ್ರ ಧೀಮಹೇ ॥ ೭೨ ॥

ಇಂದ್ರ ತ್ವಾಂ ಚ ವಿಜಾನೀಮೋ ವಯಂ ಜನ್ಮನಿ ಜನ್ಮನಿ ।
ತ್ವದ್ಗತಶ್ಚೈಷ ನೋ ಭಾವೋ ಮಾಪಗಾಸ್ತ್ವಂ ರಥೀತರಃ ॥ ೭೩ ॥

ನಿರುಕ್ತಂ ತದಿದಂ ವಾರ್ಯಮಿಂದ್ರ ಶ್ರೇಷ್ಠಾನ್ಯೃಚಾಂತ್ಯಯಾ ।
ವವ್ರೇ ವರಮಿದಂ ಸರ್ವಂ ತದಾಕರ್ಣ್ಯ ಶಚೀಪತಿಃ ॥ ೭೪ ॥

ತಥೇತ್ಯುಕ್ತ್ವಾ ತುರಾಷಾಟ್ ತು ಪಾಣೌ ಜಗ್ರಾಹ ದಕ್ಷಿಣೇ ।
ಋಷಿಶ್ಚಾಸ್ಯ ಸಖಿತ್ವೇನ ಪಾಣಿನಾ ಪಾಣಿಮಸ್ಪೃಶತ್ ॥ ೭೫ ॥

72. ನಮ್ಮ ಶರೀರಗಳಿಗೂ ಮನಸ್ಸಿಗೆ ಸಂತೋಷವನ್ನುಂಟುಮಾಡುವ ವಾಕ್ಕಿಗೂ (ಮಾತು, ಕವಿತ್ವ) ಯಾವಾಗಲೂ ತೊಂದರೆಯುಂಟಾಗದಿರಲಿ. ವೀರರೂ ಧನಾಢ್ಯರೂ ಆದ ಪುತ್ರಾದಿಗಳನ್ನು ನಮಗೆ ಅನುಗ್ರಹಿಸು. ಎಲೈ ಇಂದ್ರನೇ, ನಮ್ಮ ಬುದ್ಧಿಯು ಯಾವಾಗಲೂ ನಿನ್ನಲ್ಲಿ ಅನುರಕ್ತವಾಗಲಿ.

73. ಎಲೈ ಇಂದ್ರನೇ, ನಾವು ಜನ್ಮಜನ್ಮಗಳಲ್ಲಿಯೂ ನಿನ್ನ ಮಹತ್ಸ್ವರೂಪವನ್ನು ತಿಳಿಯುವಂತಾಗಲಿ. ನನ್ನ ಮನಸ್ಸು ಯಾವಾಗಲೂ ನಿನ್ನಲ್ಲಿ ಅನುರಕ್ತವಾಗಿರಲಿ, ಬೇರೆಕಡೆ ಹೋಗದಿರಲಿ. ಎಲೈ ಇಂದ್ರನೇ, ನೀನು ರಥಿಕರಲ್ಲಿ ಶ್ರೇಷ್ಠನಾದವನು ಎಂದನು.

74. ಗೃತ್ಸಮದನು ಕೇಳಿದ ಈ ವರಗಳ ವಿಷಯವು ಇಂದ್ರ **ಶ್ರೇಷ್ಠಾನಿ** ಎಂಬ ಋಕ್ಕಿನವರೆಗಿರುವ (೨೧ನೇ ಸೂಕ್ತದ ೬ ನೇ ಋಕ್ಕು) ಸೂಕ್ತಗಳಲ್ಲಿ ವಿವೃತವಾಗಿದೆ. ಗೃತ್ಸಮದಋಷಿಯು ಈ ರೀತಿಯಾದ ಸಮಸ್ತ ವರಗಳನ್ನೂ ಬೇಡಿದನು. ಅದನ್ನು ಕೇಳಿ ಇಂದ್ರನು,

75. ಹಾಗೆಯೇ ಆಗಲೆಂದು ಸಮ್ಮತಿಸಿ ಆ ಋಷಿಯ ಬಲಗೈಯನ್ನು ಹಿಡಿದುಕೊಂಡು ಅವನು ಕೇಳಿದ ವರಗಳನ್ನು ಕೊಟ್ಟನು. ಬಳಿಕ ಋಷಿಯೂ ಸಹ ಸ್ನೇಹಭಾವದಿಂದ ಇಂದ್ರನ ಹಸ್ತವನ್ನು ತನ್ನ ಹಸ್ತದಿಂದ ಸ್ಪರ್ಶ ಮಾಡಿದನು.

72. let there be both security for our bodies and speech that stirs the heart. Let us abound in heroes and wealth. We, O Indra, turn our thoughts (ಧೀಮಹೇ) to you;

73. and you, O Indra, we discern in every birth, and this my heart is fixed on you; go not away: you are the better chariot-fighter (ರಥೀತರಃ).

74. This choice (made by Grtsamada) is explained in the final (6) stanza (of RV. ii. 21), 'O Indra, the best' (ಇಂದ್ರ ಶ್ರೇಷ್ಠಾನಿ): he chose all this as a boon. The Lord of Sachi hearing that,

### 15. Story of Indra and Grtsamada (continued).

75. the Swift Conqueror (ತುರಾಷಾಟ್) agreeing, grasped (him) by the right hand, and the seer, through his friendship for him, touched Indras's hand with his own.

ಸಹಿತೌ ಜಗ್ಮತುಶ್ಚೈವಂ ಮಹೇಂದ್ರಸದನಂ ಪ್ರತಿ |
ತತ್ರೈನಮಾರ್ಹಯತ್ಪ್ರೀತ್ಯಾ ಸ್ವಯಮೇವ ಪುರಂದರಃ || ೭೬ ||

ಕರ್ಮಣಾ ವಿಧಿದೃಷ್ಟೇನ ತಮೃಷಿಂ ಚಾಭ್ಯಪೂಜಯತ್ |
ಸಖಿತ್ವಾಚ್ಚ ಪುನಶ್ಚೈನಮುವಾಚ ಹರಿವಾಹನಃ || ೭೭ ||

ಗೃಣನ್ಮಾದಯಸೇ ಯಸ್ಮಾತ್ತ್ವಮಸ್ಮಾನೃಷಿಸತ್ತಮ |
ತಸ್ಮಾದ್ಗೃತ್ಸಮದೋ ನಾಮ ಶೌನಹೋತ್ರೋ ಭವಿಷ್ಯಸಿ || ೭೮ ||

ತತೋ ದ್ವಾದಶಭಿಃ ಸೂಕ್ತೈಸ್ತುಷ್ಟಾವೇಂದ್ರಂ ಶ್ರುಧೀತ್ಯೃಷಿಃ |
ದದರ್ಶ ಸಂಸ್ತುವನ್ನೇವ ತತ್ರ ಸ ಬ್ರಹ್ಮಣಸ್ಪತಿಂ || ೭೯ ||

76. ಅನಂತರ ಅವರಿಬ್ಬರೂ ಜತೆಯಾಗಿ ಇಂದ್ರನ ಮನೆಗೆ ಹೋದರು. ಅಲ್ಲಿ ಇಂದ್ರನು ತಾನೇ ಸ್ವತಃ ಆ ಗೃತ್ಸಮದ ಋಷಿಯನ್ನು ಪ್ರೀತ್ಯಾದರಗಳಿಂದ ಸತ್ಕರಿಸಿ ಗೌರವಿಸಿದನು.

77. ವಿಧ್ಯುಕ್ತವಾದ ಅತಿಥಿಸತ್ಕಾರಕರ್ಮಗಳಿಂದ ಇಂದ್ರನು ಆ ಋಷಿಯನ್ನು ಪೂಜಿಸಿದನು. ಬಳಿಕ ಆ ಇಂದ್ರನು ಸ್ನೇಹಭಾವದಿಂದ ಆ ಋಷಿಯನ್ನುದ್ದೇಶಿಸಿ ಇಂತೆಂದನು.

78. ಎಲೈ ಋಷಿಶ್ರೇಷ್ಠನೇ, ನೀನು ದೇವತೆಗಳಾದ ನಮ್ಮನ್ನು ಸ್ತುತ್ಯಾದಿಗಳಿಂದ ಸಂತೋಷಪಡಿಸುವೆ. ಆದ್ದರಿಂದ ಶೌನಹೋತ್ರನಾದ ನಿನು ಗೃತ್ಸಮದ ಎಂಬ ಹೆಸರಿನಿಂದ ಪ್ರಸಿದ್ಧನಾಗುವೆ (ಎಂದನು).

79. ಬಳಿಕ ಗೃತ್ಸಮದನು **ಶ್ರುಧೀ ಹವಂ** ಎಂದು ಮೊದಲಾಗುವ ೧೨ ಸೂಕ್ತಗಳಿಂದ (೧೧-೨೨) ಇಂದ್ರನನ್ನು ಸ್ತುತಿಸಿದನು. ಇಂದ್ರನನ್ನು ಈ ರೀತಿ ಸ್ತುತಿಸುತ್ತಿರುವ ಸಮಯದಲ್ಲಿ ಅಲ್ಲಿಯೇ ಬ್ರಹ್ಮಣಸ್ಪತಿಯನ್ನು ಕಂಡನು.

---

76. And thus they went together to great Indra's abode. There the Destroyer of Forts (ಪುರಂದರ) himself affectionately honoured him,

77. and paid reverence to the seer with ceremony prescribed by rule. And because of his friendship the Lord of Bay Steeds (ಹರಿವಾಹನಃ) again addressed him :

78. 'Since you, O best of seers, with your praise (ಗೃಣನ್) delight (ಮಾದಯಸೇ) us, therefore, being the son of Sunahotra, you shall be (called) Grtsamada by name.

79. Then with the twelve (ii. 11-22) hymns beginning 'hear' (ಶ್ರುಧಿ : ii. 11.1) the seer praised Indra. And just as he was prasing (him) he saw Brahmansaptti there.

ಬೃಹಸ್ಪತಿಂ ತು ತುಷ್ಟಾವ ದೃಷ್ಟಲಿಂಗಾಭಿರೇವ ಚ ।
ಸ ತೆಮುಸ್ಯಭಿತುಷ್ಟಾವ ಚತುರ್ಭಿರಿತ ಉತ್ತರೈಃ ॥ ೮೦ ॥
ಗಣಾನಾಂ ವಿಶ್ವಮಿತ್ಯಸ್ಯಾಂ ಸಹೇಂದ್ರಾಬ್ರಹ್ಮಣಸ್ಪತೀ ।
ಬೃಹಸ್ಪತಿಂ ಪ್ರಸಂಗಾದ್ವಾ ಬ್ರಹ್ಮಣಸ್ಪತಿಮೇವ ಚ ॥ ೮೧ ॥
ತುಷ್ಟಾವ ಕರ್ಮಣೈಕೇನ ಪ್ರಭಾವಸ್ಯಾಂತರಂ ದ್ವಯೋಃ ।
ಮಿತ್ರಾವರುಣದಕ್ಷಾಂಶತುವಿಜಾತಭಗಾರ್ಯಮ್ಣಾಂ ॥ ೮೨ ॥
ಆದಿತ್ಯಾನಾಮಿಮಾಃ ಸೂಕ್ತಮಿದಂ ವಾರುಣಮುಚ್ಯತೇ ।

**೨೩-೩೦ ಸೂಕ್ತಗಳು**

80. ಅನಂತರ ಬೃಹಸ್ಪತಿಯನ್ನೂ ಆ ಹೆಸರಿನೊಡನೆ ಸಂಬಂಧಿಸಿರುವ ಬ್ರಹ್ಮಣಸ್ಪತಿಯನ್ನೂ ಸ್ತುತಿಸಿದನು. ಮತ್ತು ಬ್ರಹ್ಮಣಸ್ಪತಿಯನ್ನು ಮುಂದಿನ ನಾಲ್ಕು ಸೂಕ್ತಗಳಿಂದಲೂ (೨೩-೨೬.) ಸ್ತುತಿಸಿದನು.

81. **ಗಣಾನಾಂ** ಎಂಬ ಋಕ್ಕಿನಲ್ಲಿಯೂ (೨೩ ನೇ ಸೂಕ್ತದ ೧ ನೇ ಋಕ್ಕು) **ವಿಶ್ವಂ ಸತ್ಯಂ** ಎಂಬ ಋಕ್ಕಿನಲ್ಲಿಯೂ (೨೪ ನೇ ಸೂಕ್ತದ ೧೨ ನೇ ಋಕ್ಕು) ಇಂದ್ರನನ್ನೂ, ಬ್ರಹ್ಮಣಸ್ಪತಿಯನ್ನೂ ಒಟ್ಟಿಗೆ ಸ್ತುತಿಸಲಾಗಿದೆ. ಮುಖ್ಯವಾಗಿ ಹೇಳುವುದಾದರೆ ಈ ಸೂಕ್ತಗಳಲ್ಲಿ (೨೩-೨೬) ಬ್ರಹ್ಮಣಸ್ಪತಿಯನ್ನೇ ಮುಖ್ಯದೇವತೆಯನ್ನಾಗಿ ಸ್ತುತಿಸ್ಲಲಾಗಿದೆ. ಬೃಹಸ್ಪತಿಯನ್ನು ಪ್ರಸಂಗವಶದಿಂದ ಸ್ತುತಿಸಲಾಗಿದೆ.

82. ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿ ಎಂಬ ಇಬ್ಬರು ದೇವತೆಗಳಲ್ಲಿಯೂ ಒಂದೇವಿಧವಾದ ಕರ್ಮವನು ಅಥವಾ ಗುಣವನ್ನು ಆರೋಪಿಸಿ ಋಷಿಯು ಸ್ತುತಿಸಿರುವನು. ಮಿತ್ರ, ವರುಣ, ದಕ್ಷ, ಅಂಶ, ತುವಿಜಾತ, ಭಗ, ಅರ್ಯಮಾ ಎಂಬುವರೂ,

83. ಆದಿತ್ಯರೂ ಈ ಸೂಕ್ತದಲ್ಲಿ (೨೭ ನೇ ಸೂಕ್ತದಲ್ಲಿ) ಸ್ತುತರಾಗಿದಾರೆ. **ಇದಂ ಕವೇಃ** ಎಂಬ ೨೮ ನೇ

---

## 16 Deities of RV. ii. 23-30.

80. Now he praised Brihaspati also in those (stanzas in which (that form of) the name (ಲಿಂಗ) appears. He praised him also with the four (hymns) after this (ii. 23-26).

81. (beginning) ' Of the hosts ' (ಗಣಾನಾಂ : ii. 23. 1) ; in the (stanza) ' All ' (ವಿಶ್ವಂ : ii. 24. 12) Indra and Brhamanapati together. Or (he praised) Brhaspati incidentally (ಪ್ರಸಂಗಾತ್) and Brahmanrpati stricly speaking (ಏವ).

82. He praised the different powers of the two by (lauding) one and the same deed.

To Mitra, Varuna, Daksa, Amsa, Tuvijata, Bhaga, Aryaman,

83. the Adityas, belongs the hymn ' These ' (ಇಮಾಃ : ii. 27). (The hymn) ' This ' (ಇದಂ : ii. 28) is stated to be addressed to Varuna. (The

ವಾರುಣೀ ಯೋ ಮ ಇತ್ಯಾದ್ಯಾ ದುಃಸ್ವಪ್ನಾದ್ಯಪ್ರಣಾಶಿನೀ ॥ ೮೩ ॥
ಧೃತವ್ರತಾ ವೈಶ್ವದೇವಮೃತಮೈಂದ್ರಂ ಪರಂ ತು ಯತ್ ।
ಪ್ರ ಹಿ ಕ್ರತುಮಿತಿ ತ್ವಸ್ಯಾಮಿಂದ್ರಾಸೋಮೌ ಸಹ ಸ್ತುತೌ ॥ ೮೪ ॥
ಸರಸ್ವತಿ ತ್ವಮಿತ್ಯಸ್ಮಿನ್ನರ್ಧರ್ಚೇ ಮಧ್ಯಮಾ ತು ವಾಕ್ ।
ಬೃಹಸ್ಪತಿಸ್ತುತಿರ್ಯೋ ನಸ್ತಂ ವ ಋಙ್ಮರುತಾಂ ಸ್ತುತಿಃ ॥ ೮೫ ॥
ಅಸ್ಮಾಕಂ ವೈಶ್ವದೇವಂ ಸ್ಯಾದಾದಾವಸ್ಯೇತಿ ಚಾಸ್ಯ ಋಕ್ ।
ದ್ಯಾವಾಪೃಥಿವ್ಯೋಸ್ತ್ವಾಷ್ಟ್ರ್ಯೌ ವಾ ಅಥವೈಂದ್ರ್ಯೌ ಪರೇ ತತಃ ॥ ೮೬ ॥

ಸೂಕ್ತಕ್ಕೆ ವರುಣನು ದೇವತೆಯು; ಈ ಸೂಕ್ತದಲ್ಲಿರುವ **ಯೋ ಮೇ ರಾಜನ್** ಎಂಬ ೧೦ ನೇ ಋಕ್ಕು ದುಃಸ್ವಪ್ನವನ್ನೂ ಅದರ ಕೆಟ್ಟಫಲಗಳನ್ನು ನಾಶಮಾಡುವುದು.

84. **ಧೃತವ್ರತಾಃ** ಎಂಬ ಸೂಕ್ತಕ್ಕೆ (೨೯ ನೇ ಸೂಕ್ತ) ವಿಶ್ವೇದೇವತೆಗಳೂ, **ಋತಂ ದೇವಾಯ** ಎಂಬ ೩೦ ನೇ ಸೂಕ್ತಕ್ಕೆ ಇಂದ್ರನೂ ದೇವತೆಗಳು. ಈ ಸೂಕ್ತದಲ್ಲಿರುವ **ಪ್ರ ಹಿ ಕ್ರತುಂ** ಎಂಬ ೬ ನೇ ಋಕ್ಕಿನಲ್ಲಿ ಇಂದ್ರ ಮತ್ತು ಸೋಮ ಇಬ್ಬರೂ ಒಟ್ಟಿಗೆ ಸ್ತುತರಾಗಿರುವರು.

85. ಮತ್ತು ಸರಸ್ವತಿ ಎಂಬ ೮ ನೇ ಋಕ್ಕಿನ ಪೂರ್ವಾರ್ಧದಲ್ಲಿ ಮಾಧ್ಯಮಿಕಾ ವಾಗ್ದೇವತೆಯನ್ನು ಸ್ತುತಿಸಲಾಗಿದೆ. **ಯೋ ನಃ** ಎಂಬ ೯ ನೇ ಋಕ್ಕಿನಲ್ಲಿ ಬೃಹಸ್ಪತಿಯನ್ನೂ **ತಂ ವಃ ಶರ್ಧಂ** ಎಂಬ ೧೧ ನೇ ಋಕ್ಕಿನಲ್ಲಿ ಮರುದ್ದೇವತೆಗಳನ್ನೂ ಸ್ತುತಿಸಲಾಗಿದೆ.

**೩೧-೩೫ ನೇ ಸೂಕ್ತಗಳ ದೇವತೆಗಳು**

86. **ಅಸ್ಮಾಕಂ** ಎಂಬ ೩೧ ನೇ ಸೂಕ್ತಕ್ಕೆ ವಿಶ್ವೇದೇವತೆಗಳು ದೇವತೆಯು; **ಅಸ್ಯ ಮೇ** ಎಂಬ ೩೨ ನೇ ಸೂಕ್ತದಲ್ಲಿ ಮೊದಲನೇ ಋಕ್ಕಿಗೆ ದ್ಯಾವಾಪೃಥಿವಿಗಳು ದೇವತೆಯು; ಮುಂದಿನ ಎರಡು ಋಕ್ಕುಗಳಿಗೆ (೨-೩) ತ್ವಷ್ಟೃ ಅಥವಾ ಇಂದ್ರನು ದೇವತೆಯು.

stanza) addressed to Varnna beginning ' Who me ' (ಯೋ ಮೇ : ii. 28. 10) is dertructive of evil dreams and the like.

84. ' Upholders of law ' (ಧೃತವ್ರತಾಃ : ii. 29) is addressed to the All-gods, but that which follows, ' Right ' (ಋತಂ : ii. 30), is addressed to Indra. In the (stanza) ' His Power indeed ' (ಪ್ರ ಹಿ ಕ್ರತುಂ : ii. 30. 6) Indra-Soma are praised together.

85. But in the hemistich ' O Sarasvati , you , (ಸರಸ್ವತಿ ತ್ವಂ : ii.30. 8) the middle Vac (is praised). 'who us,(ಯೋ ನಃ ii.30.9)is(in) praise of Brihaspati. the stanza (That of yours, ತಂ ವಃ i i.30.11) is (in) praise of the Maruts.

**17. Deities of RV. ii. 31-35**

86. 'Our, (ಅಸ್ಮಾಕಂ: ii. 31) should be (regarded as) addressed to the All-gods ; and the stanza at the beginning of (the hymn) 'Of this (ಅಸ್ಯ : ii. 32. 1) belongs to Heaven and Earth ; the two following it (ii. 32-2, 3) are addressed either to Tvastr or to Indra.

ದ್ವೇ ದ್ವೇ ರಾಕಾಸಿನೀವಾಲ್ಯೋಃ ಷಡ್ಗುಂಗ್ವಾದ್ಯಾಸ್ತಥಾಂತ್ಯಯಾ ।
ತತ್ಪೂರ್ವೇ ದ್ವೇ ಋಚೌ ಕುಹ್ವಾಃ ಕುಹೂಮಹಮಿತಿ ಸ್ಮೃತೇ । ॥ ೮೭ ॥
ತದುತ್ತರೇ ದ್ವೇಽನುಮತೇರನು ನೋಽನ್ವಿದಿತಿ ಸ್ಮೃತೇ ।
ಧಾತುಶ್ಚ ತಸ್ರಸ್ತತ್ರಾದೌ ಧಾತಾ ದದಾತು ನೋ ರಯಿಂ ॥ ೮೮ ॥
ರೌದ್ರಂ ಮಾರುತಂ ತು ಪರಮಾ ತೇ ಧಾರಾವರಾ ಇತಿ ।
ವಾಮತಸ್ತು ಮೃಗಂ ದೃಷ್ಟ್ವಾ ಬಿಭ್ಯದೇತ್ಯ ಋಷಿಃ ಸ್ವಯಂ ॥ ೮೯ ॥

87. ಅದರ ಮುಂದಿನ ಎರಡು ಋಕ್ಕುಗಳಿಗೆ (೪-೫) ರಾಕಾ ಎಂಬ ದೇವತೆಯೂ, ೬-೭ ನೇ ಋಕ್ಕುಗಳಿಗೆ ಸಿನೀವಾಲೀ ಎಂಬ ದೇವತೆಯೂ ದೇವತೆಯು; ಕೊನೆಯ ಋಕ್ಕಿನಲ್ಲಿ (೮ ನೇ ಋಕ್ಕಿನಲ್ಲಿ) ಗುಂಗೂ ಮೊದಲಾದ ಆರು ಮಂದಿ ದೇವತೆಗಳು ಸ್ತುತರಾಗಿರುವರು. ಅದರ ಹಿಂದಿನ ಎರಡು ಋಕ್ಕುಗಳಲ್ಲಿ ಕುಹೂ ಎಂಬ ದೇವತೆಯನ್ನು ಸ್ತುತಿಸ ಲಾಗಿದೆ. [ಋಗ್ವೇದಸಂಹಿತೆಯ ಈ ೩೨ ನೇ ಸೂಕ್ತದಲ್ಲಿ ಅಥವಾ ಬೇರೆ ಎಲ್ಲಿಯಾದರೂ **ಕುಹೂಮಹಂ** ಎಂಬ ಋಕ್ಕುಗಳಿರುವುದಿಲ್ಲ. ಆದರೆ ಪರಿಶಿಷ್ಟದಲ್ಲಿ ೩ ನೇ ಖಿಲಸೂಕ್ತದಲ್ಲಿ **ಕುಹೂಮಹಂ** ಮತ್ತು **ಕುಹೂರ್ದೇವಾನಾಂ** ಎಂಬ ಎರಡು ಋಕ್ಕುಗಳು (೧-೨) ಪಠಿತವಾಗಿವೆ ಮತ್ತು ತೈ. ಸಂ. ೩-೩-೧೧-೫ ರಲ್ಲಿಯೂ ಈ ಮಂತ್ರಗಳಿವೆ].

88. ಅಲ್ಲಿಂದ ಮುಂದಿನ ಎರಡು ಋಕ್ಕುಗಳಿಗೆ ಎಂದರೆ, **ಅನು ನೋ ದ್ಯಾನುಮತಿಃ** ಮತ್ತು **ಅನ್ವಿದನುಮತೇ ತ್ವಂ** ಎಂಬ ಋಕ್ಕುಗಳಿಗೆ (೩-೪) ಅನುಮತಿಯು ದೇವತೆಯು; ಇದಾದನಂತರ **ಧಾತಾ ದಧಾತು ನೋ ರಯಿಂ** ಎಂಬ ನಾಲ್ಕು ಋಕ್ಕುಗಳಿಗೆ (೫-೮) ಧಾತೃವು ದೇವತೆಯು. [ಈ ಆರು ಮಂತ್ರಗಳೂ ೩ ನೇ ಖಿಲ ಸೂಕ್ತದಲ್ಲಿಯೇ ಇವೆ ಮತ್ತು ತೈತ್ತಿರೀಯಸಂಹಿತೆಯಲ್ಲಿಯೂ ಹಿಂದೆ ಹೇಳಿದ ಸ್ಥಳದಲ್ಲಿಯೇ ಇವೆ].

89. ಮುಂದಿನ **ಆ ತೇ ಪಿತಃ** ಎಂಬ ೩೩ ನೇ ಸೂಕ್ತಕ್ಕೆ ರುದ್ರನೂ; ಅದರ ಮುಂದಿನ **ಧಾರಾವರಾಃ** ಎಂಬ ೩೪ ನೇ ಸೂಕ್ತಕ್ಕೆ ಮರುತ್ತುಗಳೂ ದೇವತೆಯು. ೩೩ ನೇ ಸೂಕ್ತದಿಂದ ರುದ್ರನನ್ನು ಋಷಿಯು ಸ್ತುತಿಸುತ್ತಿರುವಾಗ ತನ್ನ ಎಡಗಡೆ ಒಂದು ಮೃಗವಿರುವುದನ್ನು ಕಂಡು ಹೆದರಿ,

---

87. Two (stanzas) each belong to Raka (ii. 32-4, 5) and Sinivali (6, 7) while with the last (8) the six (goddesses) Gungu and the rest (are praised).

Preceded by these (stanzas : ತತ್ಪೂರ್ವೇ) there are two stnnzas (beginning) 'Kuhu' (ಕುಹೂಮಹಂ) traditionally held to (belong) to Kuhu.

88. Followed by these (ತದುತ್ತರೇ) there are two, ಅನು ನಃ (and) ಅನ್ವಿತ್, traditionally held to belong to Anumathi, at the beginning in the same place there are four (stanzas) to Dhatr (beginning) 'May the Creator grant us wealth' (ಧಾತಾ ದದಾತು ನೋ ರಯಿಂ).

89. Now 'To you' (ಆ ತೇ; ii. 33) is addressed to Rudra (and) the following, 'Delighting in showers' (ಧಾರಾವರಾಃ; ii. 34) to the Marnts.

Seeing a beast (ಮೃಗಂ) on his left, the seer himself approaching in fear (ಬಿಭ್ಯದೇತ್ಯ),

ಸ್ತುಹಿ ಶ್ರುತಮಿತಿ ತ್ವಸ್ಯಾಂ ತಮೇವಾಸ್ತೌತ್ಪ್ರಸಾದಯನ್ ।
ಅಪಾಂ ನಪಾದುಪೇತ್ಯತ್ರ ಸ್ತುತಃ ಸೂಕ್ತೇ ತತಃ ಪರೇ ॥ ೯೦ ॥

ತುಭ್ಯಮಿತ್ಯಾರ್ತವೇ ಸೂಕ್ತೇ ಸಾವಿತ್ರಾದಾಶ್ವಿನಂ ಪರಂ ।
ಸೋಮಃ ಪೂಷಾದಿತಿಶ್ಚೈವ ಸೋಮಾಪೌಷ್ಣೇಽನ್ತ್ಯಯಾ ಸ್ತುತಾಃ ॥ ೯೧ ॥

ವಾಯವ್ಯೇ ಚೈಂದ್ರವಾಯವೀ ಪಂಚಾಥ ಪ್ರಾಉಗಾಸ್ತೃಚಾಃ ।
ಪ್ರೇತ್ಯೃಕ್ ಸ್ತೌತಿ ಹವಿರ್ಧಾನೇ ಅಗ್ನಿಸ್ತತ್ರ ನಿಪಾತಭಾಕ್ ।

90. ಅದನ್ನು **ಸ್ತುಹಿ ಶ್ರುತಂ** ಎಂಬ ಋಕ್ಕಿನಿಂದ (೩೩ ನೇ ಸೂಕ್ತದ ೧೧ ನೇ ಋಕ್ಕು) ಸ್ತುತಿಸಿರುವನು. ಅನಂತರ ಮುಂದಿನ **ಉಪೇಮಸೃಕ್ಷಿ** ಎಂಬ ೩೫ ನೇ ಸೂಕ್ತದಿಂದ **ಅಪಾಂನಪಾತ್** ಎಂಬ ದೇವತೆಯನ್ನು ಸ್ತುತಿಸಿರುವನು.

**೩೬-೪೩ ನೇ ಸೂಕ್ತದ ದೇವತೆಗಳು ; ಕಪಿಂಜಲರೂಪನಾದ ಇಂದ್ರನು**

91. **ತುಭ್ಯಂ ಹಿನ್ವಾನಃ** ಎಂಬ ೩೬ ನೇ ಸೂಕ್ತದಲ್ಲಿಯೂ, **ಮಂದಸ್ವ** ಎಂಬ ೩೭ ನೇ ಸೂಕ್ತದಲ್ಲಿಯೂ ಋತುದೇವತೆಗಳನ್ನು ಸ್ತುತಿಸಲಾಗಿದೆ. ಅದರ ಮುಂದಿನ **ಉದು ಷ್ಯ** ಎಂಬ ೩೮ ನೇ ಸೂಕ್ತದಲ್ಲಿ ಸವಿತೃದೇವತೆಯನ್ನೂ ಅದರ ಮುಂದಿನ **ಗ್ರಾವಾಣೇವ** ಎಂಬ ೩೯ ನೇ ಸೂಕ್ತದಲ್ಲಿ ಅಶ್ವಿನೀದೇವತೆಗಳನ್ನೂ ಸ್ತುತಿಸಲಾಗಿದೆ. **ಸೋಮಾಪೂಷಣಾ** ಎಂಬ ೪೦ ನೇ ಸೂಕ್ತಕ್ಕೆ ಸೋಮ ಮತ್ತು ಪೂಷಾ ಎಂಬುವರು ದೇವತೆಗಳು. ಆದರೆ ಕೊನೆಯ ೬ ನೇ ಋಕ್ಕಿನಲ್ಲಿ ಸೋಮ, ಪೂಷಾ ಅದಿತಿ ಎಂಬ ದೇವತೆಗಳು ಸ್ತುತರಾಗಿದಾರೆ.

92. **ವಾಯೋ ಯೇ ತೇ** ಎಂಬ ೪೧ ನೇ ಸೂಕ್ತದಲ್ಲಿ ಮೊದಲಿನ ಎರಡು ಋಕ್ಕುಗಳಿಗೆ ವಾಯುವೂ, ೩ ನೇ ಋಕ್ಕಿಗೆ ಇಂದ್ರವಾಯುಗಳೂ ದೇವತೆಯು. ಅಲ್ಲಿಂದ ಮುಂದಿನ ೫ ತೃಚಗಳಲ್ಲಿ (ತೃಚವೆಂದರೆ ೩ ಋಕ್ಕುಗಳು) ಪ್ರಉಗಶಸ್ತ್ರಮಂತ್ರಗಳ ದೇವತೆಗಳನ್ನು ಸ್ತುತಿಸಲಾಗಿದೆ (ಎಂದರೆ ೪-೬ ಋಕ್ಕುಗಳಲ್ಲಿ ಮಿತ್ರಾವರುಣರನ್ನೂ ೭-೯ ರಲ್ಲಿ ಅಶ್ವಿನೀದೇವತೆಗಳನ್ನೂ, ೧೦-೧೨ ರಲ್ಲಿ ಇಂದ್ರನನ್ನೂ, ೧೩-೧೫ ರಲ್ಲಿ ವಿಶ್ವೇದೇವತೆಗಳನ್ನೂ ೧೬-೧೮ ರಲ್ಲಿ ಸರಸ್ವತಿಯನ್ನೂ ಸ್ತುತಿಸಲಾಗಿದೆ). **ಪ್ರೇತಾಂ** ಎಂಬ ೧೯ ನೇ ಋಕ್ಕಿನಲ್ಲಿ ಹವಿರ್ಧಾನದೇವತೆಗಳನ್ನೂ (ಹವಿರ್ಧಾನವೆಂದರೆ

90. praised the same in the (stanza) 'Praise the famous' (ಸ್ತುಹಿ ಶ್ರುತಂ : ii. 33. 11), propitiating him. Then in the following hymn (beginning) 'Unto' (ಉಪ : ii. 35) Apam-napat is praised.

**18. Deities of RV. ii. 36-43. Indra as a Kapinjala.**

91. There are two hymns (ii. 36-37) addressed to the Seasons (beginning) ('To you' ತುಭ್ಯಂ : ii. 36. 1). After one addressed to Savitr (38) follows one to the Asvins (39) With the last (stanza 6) of (the hymn) to Soma-Pusan (40), Soma, Pusan and Aditi as well, are praised.

92. And (at the beginning of ii. 41) there are two (stanzas) to Vayu (1, 2), one to Indra-Vayu (3) ; next (come) five triplets (4-18) addressed to the Prauga deities. The stanza 'Fourh' (ಪ್ರ : 19) praises the two Soma

ದ್ಯಾವಾಪೃಥಿವ್ಯೌ ದ್ಯಾವೇತಿ ಹವಿರ್ಧಾನೇ ತತಃ ಪರೇ || ೯೨ ||
ಸ್ತುತಿಂ ತು ಪುನರೇವೇಚ್ಛನ್ನಿಂದ್ರೋ ಭೂತ್ವಾ ಕಪಿಂಜಲಃ |
ಋಷೇರ್ಜಿಗಮಿಷೋರಾಶಾಂ ವವಾಶಾಸ್ಥಾಯ ದಕ್ಷಿಣಾಂ || ೯೩ ||
ಸ ತಮಾರ್ಷೇಣ ಸಂಪ್ರೇಕ್ಷ್ಯ ಚಕ್ಷುಷಾ ಪಕ್ಷಿರೂಪಿಣಂ |
ಪರಾಭ್ಯಾಮಭಿತುಷ್ಟಾವ ಸೂಕ್ತಾಭ್ಯಾಂ ತು ಕನಿಕ್ರದತ್ || ೯೪ ||

ಇತಿ ದ್ವಿತೀಯಂ ಮಂಡಲಂ ಸಮಾಪ್ತಂ

ಸೋಮಲತೆಗಳನ್ನು ತುಂಬಿ ಯಜ್ಞವೇದಿಗೆ ತರುವ ಎರಡು ಗಾಡಿಗಳು) ಪ್ರಾಸಂಗಿಕವಾಗಿ ಅಗ್ನಿಯನ್ನೂ **ದ್ಯಾವಾ ನಃ** ಎಂಬ ೨೦ ನೇ ಋಕ್ಕಿನಲ್ಲಿ ದ್ಯಾವಾಪೃಥಿವಿಗಳನ್ನೂ ಅನಂತರ **ಆ ವಾಂ** ಎಂಬ ೨೧ ನೇ ಋಕ್ಕಿನಲ್ಲಿ ಹವಿರ್ಧಾನಗಳನ್ನು ಸ್ತುತಿಸಲಾಗಿದೆ.

93. ಒಂದು ಸಮಯದಲ್ಲಿ ಇಂದ್ರನು ಗೃತ್ಸಮದಋಷಿಯಿಂದ ಸ್ತುತಿಯನ್ನು ಅಪೇಕ್ಷಿಸಿ ಕಪಿಂಜಲವೆಂಬ ಪಕ್ಷಿಯ ರೂಪವನ್ನು ತಾಳಿ, ಋಷಿಯು ಎಲ್ಲಿಗೋ ಹೊರಡುತ್ತಿರುವಾಗ ಅವನ ಬಲಭಾಗದಲ್ಲಿ ನಿಂತು ಧ್ವನಿಗೈದನು.

94. ಗೃತ್ಸಮದನು ಮಂಗಳಕರವಾಗಿ ಕೂಗುತ್ತಿರುವ ಕಪಿಂಜಲಪಕ್ಷಿಯನ್ನು ನೋಡಿ ತನ್ನ ಋಷಿಪ್ರಭಾವದಿಂದ ಇಂದ್ರನೇ ಆ ಪಕ್ಷಿರೂಪದಲ್ಲಿರುವನೆಂದು ತಿಳಿದು ಮುಂದಿನ **ಕನಿಕದ್ರತ್** ಎಂದು ಮೊದಲಾಗುವ ಎರಡು ಸೂಕ್ತಗಳಿಂದ (೪೨-೪೩) ಪಕ್ಷಿರೂಪಿಯಾದ ಇಂದ್ರನನ್ನು ಸ್ತುತಿಸಿದನು.

ಇಲ್ಲಿಗೆ ಎರಡನೇ ಮಂಡಲದ ಸೂಕ್ತಗಳ ವಿವರಣೆಯು ಸಮಾಪ್ತವಾದುದು.

carts: Agni is there incidental (ನಿಪಾತಭಾಜ್). 'Heaven and Earth' (ದ್ಯಾವಾ: 20) (praises) Heaven and Earth; then follow (21) the two Soma Carts,

93, Now Indra again desiring praise, became a falcoline patridge, and taking up a position on the right quarter of the seer as he was about to set out, uttered a cry (ವವಾಶ).

94. He (Grtsamada), with the eye of a seer, recognising him (Indra) in the form of the bird, praised him in the two following hymns (ii. 42, 43), 'With repeated cry' (ಕನಿಕ್ರದತ್: ii. 42. 1).

End of 2nd Mandala



### ಅಥ ತೃತೀಯಂ ಮಂಡಲಂ

ಪ್ರಶಾಸ್ಯ ಗಾಂ ಯಸ್ತಪಸಾಭ್ಯಗಚ್ಛದ್ಬ್ರಹ್ಮರ್ಷಿತಾಮೇಕಶತಂ ಚ ಪುತ್ರಾನ್ ।
ಸ ಗಾಥಿಪುತ್ರಸ್ತು ಜಗಾದ ಸೂಕ್ತಂ ಸೋಮಸ್ಯ ಮೇತ್ಯಾಗ್ನೇಯಂ ಯತ್ಪರೇ ಚ ॥ ೯೫ ॥

ವೈಶ್ವಾನರೀಯೇ ಸಮಿತ್ಸಮಿದಾಪ್ರ್ಯೇ ದ್ವೇ ಆಗ್ನೇಯೇ ಉತ್ತರೇ ತ್ವತ್ರ ಸೂಕ್ತೇ ।
ದ್ಯಾವಾಪೃಥಿವ್ಯಾ ಉಷಸೋ ನಿಪಾತಾ ಆಪೋಽಥ ದೇವಾಃ ಪಿತರಶ್ಚ ಮಿತ್ರಃ ॥ ೯೬ ॥

## ಮೂರನೆಯ ಮಂಡಲ

**ಮಂಡಲದ್ರಷ್ಟೃವಾದ ವಿಶ್ವಾಮಿತ್ರಋಷಿಯು; ೧-೬ ಸೂಕ್ತಗಳು**

95. ಗಾಧಿರಾಜನ ಪುತ್ರನಾದ ವಿಶ್ವಾಮಿತ್ರನು ರಾಜನಾಗಿ ಭೂಮಿಯನ್ನು ಪಾಲಿಸುತ್ತಿದ್ದು ತಪಸ್ಸನ್ನು ಮಾಡಿ ಅದರ ಪ್ರಭಾವದಿಂದ ಬ್ರಹ್ಮರ್ಷಿಪದವಿಯನ್ನೂ ನೂರೊಂದು ಮಂದಿ ಪುತ್ರರನ್ನೂ ಪಡೆದನು. ಇಂತಹ ಈ ಮೂರನೇ ಮಂಡಲದ್ರಷ್ಟೃವಾದ ವಿಶ್ವಾಮಿತ್ರಋಷಿಯು ಈ ಮಂಡಲದ ಪ್ರಥಮಸೂಕ್ತವಾದ **ಸೋಮಸ್ಯ ಮಾ** ಎಂಬ ಸೂಕ್ತವನ್ನು ಪಠಿಸಿರುವನು. ಈ ಸೂಕ್ತಕ್ಕೆ ಅಗ್ನಿಯು ದೇವತೆಯು. ಅದರ ಮುಂದಿನ ಎರಡು ಸೂಕ್ತಗಳಿಗೂ (೨-೩).

96. ವೈಶ್ವಾನರಾಗ್ನಿಯೇ ದೇವತೆಯು. **ಸಮಿತ್ಸಮಿತ್** ಎಂಬ ನಾಲ್ಕನೆಯ ಸೂಕ್ತವು ಆಪ್ರೀಸೂಕ್ತವು; ಅದರ ಮುಂದಿನ ಎರಡು ಸೂಕ್ತಗಳಿಗೆ (೫-೬) ಅಗ್ನಿಯು ದೇವತೆಯು. ಆದರೆ ಈ ಸೂಕ್ತಗಳಲ್ಲಿ ದ್ಯಾವಾಪೃಥಿವಿಗಳು, ಉಷಸ್ಸು, ಅಬ್ದೇವತೆಗಳು, ದೇವತೆಗಳು, ಪಿತೃದೇವತೆಗಳು ಮಿತ್ರ ಇವರೆಲ್ಲರನ್ನೂ ಪ್ರಸಂಗವಶದಿಂದ ಸ್ತುತಿಸಲಾಗಿದೆ.

## Mandala iii.

### 13. The seer Viswamitra. Deities of RV. iii. 1-6

95. The son of Gathi who, after ruling the earth, attained by penance to the position of a Braman seer (ಬ್ರಹ್ಮರ್ಷಿ) and (obtained) a hundred and one sons, uttered the hymn which is addressed to Agni, 'Of Soma me' (ಸೋಮಸ್ಯ ಮಾ : iii. 1), and the two following (iii. 2, 3).

96. addressed to Vaisvanara. 'With every log' (ಸಮಿತ್ಸಮಿತ್ : iii. 4) is an Apri hymn (ಆಪ್ರ್ಯಃ). There follow here two hymns (iii. 5, 6) addressed to Agni: Heaven and Earth, the Dawns, the Waters, the Gods, the Fathers, and Mitra are incidentally mentioned deities (ನಿಪಾತಾಃ).

ಆಗ್ನೇಯೇಷು ದೃಶ್ಯಂತೇ ಸ್ತುತಾಸ್ತು ವೈಶ್ವಾನರೋ ವರುಣೋ ಜಾತವೇದಾಃ ।
ಸ್ತೂಯೇತೈಕೋ ಯತ್ರ ಯತ್ರಾಸ್ತುತಿರ್ವಾ ನಿಪಾತ್ಯರ್ಥಾಂಶ್ಚೋಪಮಾರ್ಥಾಂಶ್ಚ ವಿದ್ಯಾತ್ ॥ ೯೭ ॥

ರಾಜರ್ಷಯೋ ಗೃತ್ಸಮದಾ ವಸಿಷ್ಠಾ ಭರದ್ವಾಜಾಃ ಕುಶಿಕಾ ಗೋತಮಾಶ್ಚ ।
ವಿಶ್ವೇಽಶ್ವಿನಾಮಂಗಿರಸೋಽತ್ರಯೋಽದಿತಿರ್ಭೋಜಾಃ ಕಣ್ವಾ ಭೃಗವೋ ರೋದಸೀ ದಿಶಃ॥

ಸಾವಿತ್ರಸೌಮ್ಯಾಶ್ವಿನಮಾರುತೇಷು ಐಂದ್ರಾಗ್ನೇಯೇ ರೌದ್ರಸೌರ್ಯೌಷಸೇಷು ।
ಆದಾವಂತೇ ಸೂಕ್ತಮಧ್ಯೇ ಸ್ತುತಾಸ್ತು ನ ವ್ಯಾಘ್ನಂತಿ ದೇವತಾಃ ಸೂಕ್ತಭಾಜಃ ॥ ೯೯ ॥

97. ಅಗ್ನಿದೇವತಾಕವಾದ ಸೂಕ್ತಗಳಲ್ಲಿ ವೈಶ್ವಾನರ, ವರುಣ, ಜಾತವೇದಾಃ ಇತ್ಯಾದಿ ದೇವತೆಗಳನ್ನು ಸ್ತುತಿಸಿರುವುದು ಕೆಲವು ಸಂದರ್ಭಗಳಲ್ಲಿ ಕಂಡುಬರುವುದು. ಮತ್ತು ಈ ಸಂದರ್ಭದಲ್ಲಿ (ಅಗ್ನಿಯಲ್ಲದ) ಬೇರೆ ಒಂದು ದೇವತೆಯ ಸ್ತುತಿ ಇದ್ದರೂ ಅಥವಾ ಸ್ತುತಿ ಇಲ್ಲದೆ ಕೇವಲ ದೇವತೆಯ ಹೆಸರನ್ನು ಮಾತ್ರ ಸೂಚಿಸಿದ್ದರೂ ಅವೆಲ್ಲವೂ, ಪ್ರಸಂಗವಶದಿಂದ ಅಥವಾ ಹೋಲಿಕೆ (ಉಪಮಾರ್ಥ) ಗಾಗಿ ಇತರ ದೇವತೆಗಳ ಹೆಸರು ಅಗ್ನಿಸೂಕ್ತಗಳಲ್ಲಿರುವುದೆಂದು ತಿಳಿಯಬೇಕು.

98. ರಾಜರ್ಷಿಗಳು, ಗೃತ್ಸಮದ, ವಸಿಷ್ಠ, ಭರದ್ವಾಜ, ಕುಶಿಕ, ಗೋತಮ ಎಂಬ ಋಷಿಗಳ ವಂಶದವರು, ವಿಶ್ವೇದೇವತೆಗಳು, ಅಶ್ವಿನೀದೇವತೆಗಳು, ಅಂಗಿರಸರು, ಅತ್ರಿವಂಶದ ಋಷಿಗಳು, ಅದಿತಿಯು, ಭೋಜರು, ಕಣ್ವಋಷಿಗಳು, ಭೃಗುವಂಶದ ಋಷಿಗಳು, ದ್ಯಾವಾಪೃಥಿವಿಗಳು, ದಿಕ್ಕುಗಳು, (ಇವರುಗಳಲ್ಲಿ ಯಾರಾದರೂ),

99. ಸವಿತೃ, ಸೋಮ, ಅಶ್ವಿನೀದೇವತೆಗಳು, ಮರುತ್ತುಗಳು, ಇಂದ್ರ, ಅಗ್ನಿ, ರುದ್ರ, ಸೂರ್ಯ, ಉಷಸ್ಸು ಮೊದಲಾದವರು ದೇವತೆಗಳಾಗಿರುವ ಸೂಕ್ತಗಳಲ್ಲಿ ಸೂಕ್ತದ ಪ್ರಾರಂಭದಲ್ಲಾಗಲಿ, ಮಧ್ಯದಲ್ಲಾಗಲಿ, ಕೊನೆಯಲ್ಲಾಗಲಿ ಸ್ತುತಿಸಲ್ಪಟ್ಟಿದ್ದರೂ ಅವರು ಸೂಕ್ತದ ಮುಖ್ಯದೇವತೆಯ ಸ್ತುತಿಗೆ ವಿಘ್ನವನ್ನುಂಟುಮಾಡುವುದಿಲ್ಲ. ಇವರ ಸ್ತುತಿಯು ಪ್ರಸಂಗವಶವೆಂದು ಪರಿಗಣಿಸಬೇಕು.

---

97. In (hymns) addressed to Agni, Vaiswanara, Varuna, Jatavedas are seen to be praised. Whenever (here) one (of them) may be praised or there is no (actual) praise, one should know that they are intended to be incidental or to serve as a comparison.

98. The royal seers, the Grtsamadas, the Vasisthas, the Bharadvajas, the Kusikas, and the Gotamas, the All (gods), the Asvins, the Angirasas, the Atris, Aditi, the Bhojas, the Kanvas, fhe Bhrgus, the two Worlds (ರೋದಸೀ), the Regions (ದಿಶಃ),

99. when praised at the beginning, end, or middle of a hymn, in (hymns) addressed to Savitr, Soma, the Asvins, or the Maruts, to Indra of Agni, to Rudra, Surya, or Usas, do not interfere (ವ್ಯಾಘ್ನಂತಿ) with the deities who own the hymn (ಸೂಕ್ತಭಾಜ).

ಅಗ್ನೇಃ ಸಪ್ತದಶೋಽಧ್ಯಾಯ ಊರ್ಧ್ವ ಊ ಷು ಣ ಊತಯೇ ।
ಏತೇ ಕಾಣ್ವ್ಯಾವೃಚೌ ಯೌಪ್ಯಾ ಅಂಜಂತಿ ತ್ವೇತಿ ಪಂಚ ಚ ॥ ೧೦೦ ॥

ಶೇಷಾ ಬಹುಭ್ಯೋ ಯೂಪೇಭ್ಯೋ ವೈಶ್ವದೇವೀ ತ್ವೃಗಷ್ಟಮೀ ।
ಅಸ್ಯಾಂತ್ಯಾ ವ್ರಶ್ಚನೀ ಯೋಕ್ತಾ ಷಷ್ಠಮೈಂದ್ರಾಗ್ನಮುಚ್ಯತೇ ॥ ೧೦೧ ॥

ಅಗ್ನಿಮುಷಸಂ ವೈಶ್ವದೇವೀ ದಧಿಕ್ರಾಮಿತಿ ಚೈತಯಾ ।

**೭-೨೯ ನೇ ಸೂಕ್ತದ ದೇವತೆಗಳು**

100. ಹದಿನೇಳನೆಯ ಅಧ್ಯಾಯದ ಸೂಕ್ತಗಳೆಲ್ಲಾ (೩ ನೇ ಅಷ್ಟಕದ ಮೊದಲನೆಯ ಅಧ್ಯಾಯ ಅಥವಾ ೩ನೇ ಮಂಡಲದ ೭-೨೯ ಸೂಕ್ತಗಳು) ಅಗ್ನಿದೇವತಾಕವಾದವು; ಆದರೆ ಕಣ್ವಋಷಿದೃಷ್ಟವಾದ **ಊರ್ಧ್ವ ಊ ಷು ಣಃ** ಮತ್ತು **ಊರ್ಧ್ವೋ ನಃ ಪಾಹಿ** ಎಂಬ ಋಕ್ಕುಗಳಿಗೂ (ಪ್ರಥಮಮಂಡಲದ ೩೬ ನೇ ಸೂಕ್ತದ ೧೩-೧೪ ನೆಯ ಋಕ್ಕುಗಳು) **ಅಂಜಂತಿ ತ್ವಾ** ಎಂಬ (೩ ನೇ ಮಂಡಲದ) ೮ ನೇ ಸೂಕ್ತದಲ್ಲಿ ಮೊದಲ ಐದು ಋಕ್ಕುಗಳಿಗೂ (೧-೫) ಯೂಪವು ದೇವತೆಯು.

101. ಈ ೮ ನೇ ಸೂಕ್ತದಲ್ಲಿ ೬ ನೇ ಋಕ್ಕಿನಿಂದ ಮುಂದಿನ ಋಕ್ಕುಗಳಿಗೂ ಸಾಧಾರಣವಾಗಿ ಯೂಪವೇ ದೇವತೆಯು; ಆದರೆ, ೮ ನೇ ಋಕ್ಕಿಗೆ (ಆದಿತ್ಯಾ ರುದ್ರಾ ಎಂಬ ಋಕ್ಕಿಗೆ) ವಿಶ್ವೇದೇವತೆಗಳೂ, ಕೊನೆಯ (೧೧ ನೇ) ಋಕ್ಕಾದ ವನಸ್ಪತೇ ಎಂಬ ಋಕ್ಕಿಗೆ **ವ್ರಶ್ಚನಃ** ಎಂಬುದೂ ದೇವತೆಯು; (೩ ನೇ ಅಷ್ಟಕದ ಮೊದಲನೆಯ) ಅಧ್ಯಾಯದ ಆರನೆಯ ಸೂಕ್ತಕ್ಕೆ (ಎಂದರೆ ಮೂರನೆಯ ಮಂಡಲದ ೧೨ ನೇ ಸೂಕ್ತಕ್ಕೆ) ಇಂದ್ರಾಗ್ನಿಗಳು ದೇವತೆಯು,

102. **ಅಗ್ನಿಮುಷಸಂ** ಎಂಬ ಇಪ್ಪತ್ತನೆಯ ಸೂಕ್ತದಲ್ಲಿ **ಅಗ್ನಿಮುಷಸಂ** ಎಂಬ ಮೊದಲನೆಯ ಋಕ್ಕೂ **ದಧಿಕ್ರಾಂ** ಎಂಬ ೫ ನೆಯ ಋಕ್ಕೂ ವಿಶ್ವೇದೇವತಾಕವು. **ಅಗ್ನೇ ದಿವಃ** ಎಂಬ ೨೫ ನೇ ಸೂಕ್ತದ ಅಗ್ನ ಇಂದ್ರಶ್ಚ

## 20. Deities of RV. iii. 7-29

100. The seventeenth Adhyaya (RV. iii. 7-29) is Agni's. 'Stand erect to aid us, (ಊರ್ಧ್ವ ಊ ಷು ಣ ಊತಯೇ : i. 36. 13-14) these two stanzas of Kanva are adressed to the sacrificial post (ಯೂಪ), and the five (beginning) 'The anoint thee' (ಅಂಜಂತಿ ತ್ವಾ : iii. 8. 1-5).

101. The rest (are addressed) to many posts, while the eigth stanza is addressed to the All gods; the last (stanza) of this (hymn) is that which is said to be concerned with cutting (the post). The sixth (hymn : iii. 12) is said to be addressed to Indra-Agni.

102. (The stanza) 'Agni, Dawn' (ಅಗ್ನಿಮುಷಸಂ : iii. 20. 1) is addressed to the All-gods; (they are) also (invoked) with the (stanza) 'Dadhikara' (ದಧಿಕ್ರಾಂ : iii. 20. 5). But the stanza 'Agni and Indra' (ಅಗ್ನ ಇಂದ್ರಶ್ಚ : iii.

ಅಗ್ನೇಂದ್ರೀ ತ್ವಗ್ನ ಇಂದ್ರಶ್ಚರ್ಕ್ ಪರೋ ವೈಶ್ವಾನರಸ್ತ್ರೃಚಃ || ೧೦೨ ||
ಪ್ರ ಯಂತು ಮಾರುತೇಶ್ಚಾಂತ್ಯಾ ಶತಧಾರಂ ಗುರುಸ್ತವಃ |
ಪ್ರ ವೋ ವಾಜಾ ಋತೂನ್ಸ್ತೌತಿ ಋತ್ವಿಜಃ ಸ್ತೌತಿ ಮನ್ಥತ || ೧೦೩ ||
ಪುರೀಷ್ಯಾಸ ಇತಿ ತ್ವಸ್ಯಾಂ ಧಿಷ್ಣ್ಯಾನಗ್ನೀನ್ಪ್ರಶಂಸತಿ |
ಜ್ಞೇಯಾಶ್ಚೈವ ತು ಹೋತಾರಸ್ತೇ ದೈವ್ಯಾಶ್ಚೈವ ತತ್ರ ತು || ೧೦೪ ||
ತ್ರಯೋವಿಂಶತಿರೈಂದ್ರಾಣಿ ಇಚ್ಛಂತೀತಿ ಪರಾಣ್ಯತಃ |
ಸೂಕ್ತೇ ಪ್ರೇತಿ ತು ನದ್ಯಶ್ಚ ವಿಶ್ವಾಮಿತ್ರಃ ಸಮೂದಿರೇ || ೧೦೫ ||

ಎಂಬ ೪ ನೇ ಋಕ್ಕಿಗೆ ಅಗ್ನಿ ಮತ್ತು ಇಂದ್ರ ಇವರು ದೇವತೆಯು; **ವೈಶ್ವಾನರಂ** ಎಂಬ ೨೬ ನೇ ಸೂಕ್ತದ ಮೊದಲ ಮೂರು ಋಕ್ಕುಗಳಿಗೆ (೧-೩) ವೈಶ್ವಾನರೋಗ್ನಿಯು ದೇವತೆಯು.

103. ಮೇಲಿನ ೨೬ ನೇ ಸೂಕ್ತದಲ್ಲಿ **ಪ್ರ ಯಂತು** ಎಂದು ಮೊದಲಾಗುವ ಮೂರು ಋಕ್ಕುಗಳಿಗೆ (೪-೬) ಮರುತ್ತುಗಳು ದೇವತೆಯು; **ಶತಧಾರಂ** ಎಂಬ ಸೂಕ್ತದ ಕೊನೆಯ ಋಕ್ಕಿಗೆ (೯) ಗುರುಸ್ತುತಿಯೇ ದೇವತೆಯು. **ಪ್ರ ವೋ ವಾಜಾ** ಎಂಬ ೨೭ ನೇ ಸೂಕ್ತದಲ್ಲಿ ಋತುಗಳನ್ನು ಸ್ತುತಿಸಲಾಗಿದೆ. **ಅಸ್ತೀದಂ** ಎಂಬ ೨೯ ನೇ ಸೂಕ್ತದ **ಮಂಥತ** ಎಂಬ ೫ ನೇ ಋಕ್ಕಿನಲ್ಲಿ ಋತ್ವಿಕ್ಕುಗಳನ್ನು ಸ್ತುತಿಸಲಾಗಿದೆ.

104. **ಅಯಂ ಸೋ ಅಗ್ನಿಃ** ಎಂಬ ೨೨ ನೇ ಸೂಕ್ತದ **ಪುರಿಷ್ಯಾಸಃ** ಎಂಬ ಋಕ್ಕಿನಲ್ಲಿ ಧಿಷ್ಣ್ಯಾಗ್ನಿಗಳನ್ನು (ವೇದಿಯ ಮೇಲಿರುವ ಅಗ್ನಿಗಳನ್ನು) ಪ್ರಶಂಸಿಸಲಾಗಿದೆ. ಈ ಅಗ್ನಿಗಳನ್ನೇ **ದೈವ್ಯಾ ಹೋತಾರಃ** (ದೇವತೆಗಳ ಹೋತೃಗಳು) ಎಂಬ ಹೆಸರಿನಿಂದ ಕರೆಯಲಾಗಿದೆ ಎಂದು ತಿಳಿಯಬೇಕು.

**೩೦-೩೩ ನೇ ಸೂಕ್ತಗಳ ದೇವತೆಗಳು; ವಿಶ್ವಾಮಿತ್ರ, ಸುದಾಸ ಮತ್ತು ನದಿಗಳು**

105. ಇಲ್ಲಿಂದ ಮುಂದಿನ ಎಂವರೆ **ಇಚ್ಛಂತಿ ತ್ವಾ** ಎಂಬ ಸೂಕ್ತದಿಂದ (೩೦ ನೇ ಸೂಕ್ತ) ಮುಂದಿನ ೨೩ ಸೂಕ್ತಗಳಿಗೆ (೩೦-೫೨) ಇಂದ್ರನು ದೇವತೆಯು ಆದರೆ **ಪ್ರ ಪರ್ವತಾನಾಂ** ಎಂಬ ೩೩ ನೇ ಸೂಕ್ತದಲ್ಲಿ ವಿಶ್ವಾಮಿತ್ರ ಋಷಿಗೂ ನದಿಗಳಿಗೂ ನಡೆದ ಸಂಭಾಷಣೆಯು ಉಕ್ತವಾಗಿದೆ.

25. 4) is addressed to Agni-Indra. The following triplet (iii 26. 1-3) is addressed to Vaisvanara.

103. And (the triplet) 'Let them go forth' (ಪ್ರ ಯಂತು : iii. 26. 4-6) is addressed to the Marnts. The last (stanza), 'With a hundred streams' (ಶತಧಾರಂ : iii. 26. 9) is (in) praise of a precepter. 'Forth your food' (ಪ್ರ ವೋ ವಾಜಾಃ : iii. 27. 1) prrises the seasons. 'Rub ye' (ಮಂಥತ : iii. 29. 6) praises the priests.

104. But in the (stanza) 'Misty' (ಪುರೀಷ್ಯಾಸಃ : iii. 22. 4) he (the seer) lauds the fires on the altar (ಧಿಷ್ಣ್ಯ), how they are there to be recognised as the Divine Sacrificers.

**21. Deities of RV. iii. 30-33. Visvamitra, Sudas, and the Rivers.**

105. The twenty-three (hymns) after this (beginning) 'They desire (ಇಚ್ಛಂತಿ : iii. 30) are addressed to Indra. But in the hymn 'Forth' (ಪ್ರ: iii 33) Viswamitra and the Rivers engaged in a dialogue.

ಪುರೋಹಿತಃ ಸನ್ನಿಜ್ಯಾರ್ಥಂ ಸುದಾಸಾ ಸಹ ಯನ್ನೃಷಿಃ |
ವಿಪಾಟ್‌ಛುತುದ್ರ್ಯೋಃ ಸಂಭೇದಂ ಶಮಿತ್ಯೇತೇ ಉವಾಚ ಹ || ೧೦೬ ||

ಪ್ರವಾದಾಸ್ತತ್ರ ದೃಶ್ಯಂತೇ ದ್ವಿವದ್ಬಹುವದೇಕವತ್ |
ಅಚ್ಛೇತ್ಯರ್ಧರ್ಚೇ ಪಚ್ಛೋ ವಾ ನದೀಷ್ವಸ್ಯೇಕವನ್ನಿ ತೇ || ೧೦೭ ||

ಆದ್ಯೇ ದ್ವ್ಯೃಚೇ ದ್ವಿತತ್ಸಾರ್ಧೇ ವಿಶ್ವಾಮಿತ್ರವಚಃ ಶ್ರುತೇಃ |
ಏತಾಭಿರ್ಋಗ್ಭಿರ್ವಾ ನದ್ಯ ಋಷಿಂ ಬಹುವದೂಚಿರೇ || ೧೦೮ ||

106. ಒಂದಾನೊಂದು ಸಮಯದಲ್ಲಿ ಈ ವಿಶ್ವಾಮಿತ್ರಋಷಿಯು ಸುದಾಸನೆಂಬ ರಾಜನಿಗೆ ಪುರೋಹಿತನಾಗಿದ್ದುದರಿಂದ ಅವನೊಡನೆ ಯಜ್ಞಾರ್ಥವಾಗಿ ಹೊರಟು ಒರುತ್ತಿರುವಾಗ ದಾರಿಯಲ್ಲಿ **ವಿಪಾಟ್** ಮತ್ತು **ಶುತುದ್ರಿ** ಎಂಬ ನದಿಗಳ ಸಂಗಮುಕ್ಕೆ ಬಂದನು. ಮತ್ತು ಆ ನದಿಗಳನ್ನು ಸಂಬೋಧಿಸಿ ನಿಮಗೆ ಮಂಗಳವಾಗಲಿ ಎಂದು ನುಡಿದನು.

107. ಈ ೩೩ ನೇ ಸೂಕ್ತದಲ್ಲಿ ವಿಶ್ವಾಮಿತ್ರನು **ವಿಪಾಟ್** ಮತ್ತು **ಶುತುದ್ರಿ** ಎಂಬ ಎರಡು ನದಗಳನ್ನು ಸಂಬೋಧಿಸಿ ಮಾತನಾಡಿದ್ದರೂ ಕೆಲವುಕಡೆ ಆ ನದಿಗಳನ್ನು ದ್ವಿವಚನದಿಂದಲೂ ಕೆಲವುಕಡೆ ಬಹುವಚನದಿಂದಲೂ ಕೆಲವು ಕಡೆ ಏಕವಚನದಿಂದಲೂ ನಿರ್ದೇಶಿಸಿರುವುದು ಕಂಡುಬರುತ್ತದೆ. ಹೇಗೆಂದರೆ—**ಅಚ್ಛಾ** ಎಂಬ ೩ ನೇ ಋಕ್ಕಿನ ಪೂರ್ವಾರ್ಧದಲ್ಲಿ **ಸಿಂಧುಂ, ಸುಭಗಾಂ** ಇತ್ಯಾದಿ ಏಕವಚನಶಬ್ದಪ್ರಯೋಗವಿದೆ. ಹಾಗೆಯೇ ಅದರ ಮುಂದಿನ ಋಕ್ಕುಗಳ ಕೆಲವು ಪಾದಗಳಲ್ಲಿ **ಚರಂತೀಃ ನದ್ಯಃ** ಇತ್ಯಾದಿ ಬಹುವಚನಶಬ್ದಪ್ರಯೋಗವಿದೆ. ಮತ್ತು ೧೧ನೇ ಋಕ್ಕಿನಲ್ಲಿ ಮೂರುಸಲ **ತೇ** (ಷಷ್ಠೀ ಏಕವಚನ) ಎಂಬ ಏಕವಚನಶಬ್ದಪ್ರಯೋಗವೂ ಕಂಡುಬರುವುದು ಈರೀತಿ ಈ ಸೂಕ್ತದಲ್ಲಿ ಅನೇಕ ಪ್ರವಾದಗಳು (ಅಸಂಗತಿ ವಿಷಯಗಳು) ಇರುವವು.

108. ಸೂಕ್ತದ ಮೊದಲಿನ ಎರಡು ಋಕ್ಕುಗಳಲ್ಲಿಯೂ (೧-೨) ೩ ನೇ ಋಕ್ಕಿನ ಪೂರ್ವಾರ್ಧದಲ್ಲಿಯೂ ವಿಶ್ವಾಮಿತ್ರನು ನದಿಗಳನ್ನು ದ್ವಿವಚನದಲ್ಲಿ ಸಂಬೋಧಿಸಿದಾನೆ. ಆದರೆ ಮುಂದಿನ ಕೆಲವು ಋಕ್ಕುಗಳಲ್ಲಿ (ಉದಾಹರಣೆಗೆ ೪ ನೇ ಋಕ್ಕಿನಲ್ಲಿ) **ನದ್ಯಃ** ಎಂಬ ಬಹುವಚನಶಬ್ದವನ್ನು ಉಪಯೋಗಿಸಿದಾನೆ.

---

106. The seer going with Sudas-being his domestic priest-for the sake of sacrifice to the confluence of the Vipas and Sutudri addressed these two (rivers) with (the words) 'Be propitious' (ಶಂ).

107. In that (hymn) there appear statements (ಪ್ರವಾದಾ: in the dual, plural, and singular : in the hemistich 'Unto' (ಅಚ್ಛ: iii. 33. 3) or in the (successive) padas (ಪಚ್ಛಃ) 'Down to thee' (ನಿ ತೇ : 10, 10, 11), in the singular (ಏಕವತ್) in (refererence to) the rivers.

108. in the dual (ದ್ವಿವತ್) in the first distich (iii. 33 : 1, 2) besides a hemistich (3) the speech (being that) of Visvamitra according to the sacred text (ಶ್ರುತೇಃ). Or (on the other hand) the rivers acdressed the seer in **the plural (ಬಹುವತ್) with these (following) stanzas,**

**ಷಷ್ಠ್ಯಷ್ಟಮ್ಯಾ ಚತುರ್ಥ್ಯಾ ಚ ದಶಮ್ಯಾ ಚೇತರಾ ಋಷೇಃ |**
**ಸಪ್ತಮ್ಯಾಮೃಚಿ ಷಷ್ಠ್ಯಾಂ ಚ ಯೌ ದೇವೌ ಪರಿಕೀರ್ತಿತೌ** || ೧೦೯ ||
**ನಿಪಾತಿನೌ ತು ತೌ ಜ್ಞೇಯೌ ಐಂದ್ರಾಪಾರ್ವತ್ಯೃಗುತ್ತಮೇ |**
**ಕರೋತಿ ಪುತ್ರಿಕಾಂ ನಾಮ ಯಥಾ ದುಹಿತರಂ ತಥಾ** || ೧೧೦ ||
**ತಸ್ಯಾಂ ಸಿಂಚತಿ ರೇತೋ ವಾ ತಚ್ಛಾಸದಿತಿ ಕೀರ್ತಿತಂ |**
**ರಿಕ್ಥಸ್ಯ ದುಹಿತುರ್ದಾನಂ ನೇತ್ಯೃಚಿ ಪ್ರತಿಷಿಧ್ಯತೇ** || ೧೧೧ ||
**ತಸ್ಯಾಶ್ಚಾಹ ಯವೀಯಾಂಸಂ ಭ್ರಾತರಂ ಜ್ಯೇಷ್ಠವತ್ಸುತಂ |**
**ಸುದಾಸಸ್ಯ ಮಹಾಯಜ್ಞೇ ಶಕ್ತಿನಾ ಗಾಥಿಸೂನವೇ** || ೧೧೨ ||

109. ಈ ಸೂಕ್ತದ ೬, ೮, ೪, ೧೦ ನೇ ಋಕ್ಕುಗಳಲ್ಲಿ ನದಿಗಳು ಹೇಳಿದ ವಾಕ್ಯಗಳಿವೆ. ಉಳಿದ ಋಕ್ಕುಗಳು ಋಷಿಯ ವಾಕ್ಯಗಳು. ಏಳನೆಯ ಋಕ್ಕಿನಲ್ಲಿಯೂ ಆರನೆಯ ಋಕ್ಕಿನಲ್ಲಿಯೂ ಸವಿತೃ ಮತ್ತು ಇಂದ್ರ ಎಂಬ ಇಬ್ಬರು ದೇವತೆಗಳು ಸ್ತುತರಾಗಿರುವರು. ಆದರೆ ಅವರು ಅಲ್ಲಿ,

|| **ದತ್ತುಪುತ್ರಿಯ ವಿಷಯ ; ವಿಶ್ವಾಮಿತ್ರ ಮತ್ತು ಶಕ್ತಿ** ||

110-111. ಪ್ರಸಂಗವಶದಿಂದ ಸ್ತುತರಾಗಿರುವರೆಂದು ತಿಳಿಯಬೇಕು. ಈ ಎರಡು ಋಕ್ಕುಗಳಲ್ಲಿಯೂ ಇಂದ್ರಾಪರ್ವತರ (ಇಂದ್ರ ಮತ್ತು ಮೇಘ) ಸ್ತುತಿ ಇರುವುದು. ಪುತ್ರನಿಲ್ಲದ ಪುರುಷನು ಪುತ್ರಿಯನ್ನೇ ಪುತ್ರನೆಂದು ಭಾವಿಸಿ ಅವಳಲ್ಲಿ ಪುತ್ರನನ್ನು (ದೌಹಿತ್ರವೆಂಬ ಮೊಮ್ಮಗನನ್ನು) ಪಡೆಯುವ ವಿಧಾನವನ್ನು **ಶಾಸತ್** ಎಂಬ ೩೧ ನೇ ಸೂಕ್ತದಲ್ಲಿ ಹೇಳಲಾಗಿದೆ. ಅದೇ ಸೂಕ್ತದ **ನ ಜಾಮಯೇ** ಎಂಬ ಎರಡನೆಯ ಋಕ್ಕಿನಲ್ಲಿ ಪುತ್ರಿಗೆ ದಾಯಭಾಗ ಕೊಡುವುದನ್ನು ನಿಷೇಧಿಸಲಾಗಿದೆ.

112. ಪುತ್ರನಿಲ್ಲದ ಪುರುಷನ ಪುತ್ರಿಯ ಮಗನು (ಮೊಮ್ಮಗನು) ತನ್ನ ಪುತ್ರಿಗಿಂತ (ತನ್ನ ತಾಯಿಗಿಂತ) ವಯಸ್ಸಿನಲ್ಲಿ ಚಿಕ್ಕವನಾಗಿದ್ದರೂ ದೌಹಿತ್ರವಾದ ಆ ಮೊಮ್ಮಗನನ್ನೇ ತನಗೆ ಜ್ಯೇಷ್ಠಪುತ್ರನಿಗೆ ಸಮಾನನೆಂದು ಭಾವಿಸಬೇಕೆಂದು ಋಷಿಯು ಹೇಳಿರುವನು. ಸುದಾಸನು ಮಾಡಿದ ಯಜ್ಞದಲ್ಲಿ ಶಕ್ತಿ ಎಂಬುವನಿಂದ ಗಾಧಿಪುತ್ರನಾದ ವಿಶ್ವಾಮಿತ್ರನ,

---

109. (viz.) with the sixth, the eighth, the fourth, and the tenth; the rest (ಇತರಾಃ) are the seer's. The two gods who are celebrated in the seventh stanza and in the sixth,

**22. RV. iii. 31 : an adoptive daughter. Visvamitra & Sakti.**

110-111. are to be recognised as incidental. In the last (hymn) there is (a stanza) addressed to Indra-Parvatha. How one makes a daughter what is called an adoptive ehild (ಪುತ್ರಿಕಾ) or in that sense (ತಥಾ) impregnates her, that is told in the (hymn) 'Teaching' (ಶಾಸತ್ : iii. 31). In the stanza 'Not' (ನ : iii. 31-2) the giving of inheritance to a daughter is forbidden.

112. and (the seer) says that her son (who is) younger (than she) is a brother like an eldest (brother).

At a great sacrifice of Sudas, by Sakti Gathi's son (Visvamitra).

**ನಿಗೃಹೀತಂ ಬಲಾಚ್ಚೇತಃ ಸೋऽವಸೀದದ್ವಿಚೇತನಃ |**
**ತಸ್ಮೈ ಬ್ರಾಹ್ಮೀಂ ತು ಸೌರೀಂ ವಾ ನಾಮ್ನಾ ವಾಚಂ ಸಸರ್ಪರೀಂ** || ೧೧೩ ||
**ಸೂರ್ಯವೇಶ್ಮನ ಆಹೃತ್ಯ ದದುಸ್ತೇ ಜಮದಗ್ನಯಃ |**
**ಕುಶಿಕಾನಾಂ ತತಃ ಸಾ ವಾಗಮತಿಂ ತಾಮಪಾಹನತ್** || ೧೧೪ ||
**ಉಪೇತಿ ಚಾಸ್ಯಾಂ ಕುಶಿಕಾನ್ವಿಶ್ವಾಮಿತ್ರೋऽನುಬೋಧಯತ್ |**
**ಲಬ್ಧ್ವಾ ವಾಚಂ ಚ ಹೃಷ್ಟಾತ್ಮಾ ತಾನೃಷೀನ್ಪ್ರತ್ಯಪೂಜಯತ್** || ೧೧೫ ||
**ಸಸರ್ಪರೀರಿತಿ ದ್ವಾಭ್ಯಾಮೃಗ್ಭ್ಯಾಂ ವಾಚಂ ಸ್ತುವನ್ಸ್ವಯಂ |**
**ಸ್ಥಿರಾವಿತ್ಯನಸೋऽಙ್ಗಾನ್ಯನಡುಹಶ್ಚ ಗೃಹಾನ್ವ್ರಜನ್** || ೧೧೬ ||

113-114. ಜ್ಞಾನವು ಬಲಾತ್ಕಾರವಾಗಿ ಅಪಹರಿಸಲ್ಪಟ್ಟದ್ದರಿಂದ ವಿಶ್ವಾಮಿತ್ರನು ಜ್ಞಾನವಿಲ್ಲದೆ ನಿಶ್ಚೇಷ್ಟಿತನಾಗಿ ಬಿದ್ದಿದ್ದನು. ಆಗ ಜಮದಗ್ನಿ ಮುಂತಾದವರು ಸೂರ್ಯನ ನಿವಾಸಸ್ಥಾನದಿಂದ ಸಸರ್ಪರೀ ಎಂಬ ಬ್ರಹ್ಮನ ಪುತ್ರಿಯನ್ನು ಕರೆತಂದು ವಿಶ್ವಾಮಿತ್ರನಿಗೆ ಜ್ಞಾನಬರುವಂತೆ ಮಾಡಿ ಮಾತನಾಡಲು ಶಕ್ತಿಯನ್ನು ಉಂಟುಮಾಡಿದರು. ಆಗ ಆ ಬ್ರಹ್ಮಪುತ್ರಿಯು ಕುಶಿಕಪುತ್ರನಾದ ವಿಶ್ವಾಮಿತ್ರನ ವಾಕ್ಸ್ತಂಭನವನ್ನು ಪರಿಹರಿಸಿ ಅವನಿಗೆ ಮಾತನಾಡುವ ಶಕ್ತಿಯನ್ನು ಅನುಗ್ರಹಿಸಿದಳು.

**ವಿಶ್ವಾಮಿತ್ರ ಮತ್ತು ವಾಕ್ ಸಸರ್ಪರೀ; ವಸಿಷ್ಠರಿಗೆ ವಿಶ್ವಾಮಿತ್ರನ ಶಾಪ**

115. **ಉಪಪ್ರೇತ** ಎಂಬ ೫೩ ನೇ ಸೂಕ್ತದ ೧೧ ನೇ ಋಕ್ಕಿನಲ್ಲಿ ಹೇಳಿರುವಂತೆ ವಿಶ್ವಾಮಿತ್ರನು ನಿಶ್ಚೇಷ್ಟಿತರಾಗಿದ್ದ ಕುಶಿಕರಿಗೆ (ತನ್ನ ವಂಶದವರಿಗೆ) ಜ್ಞಾನಬರುವಂತೆ ಮಾಡಿ ಎಬ್ಬಿಸಿದನು. ಮಾತನಾಡುವ ಶಕ್ತಿಯನ್ನೂ ಪಡೆದು ಸಂತೋಷದಿಂದ ತನಗೆ ಉಪಕಾರಮಾಡಿದ ಜಮದಗ್ನಿಋಷಿಗಳನ್ನು ಪೂಜಿಸಿ ಸತ್ಕರಿಸಿದನು.

116. ಇದಲ್ಲದೆ ಆ ವಿಶ್ವಾಮಿತ್ರನು ತಾನೇ **ಸಸರ್ಪರೀಂ** ಎಂದು ಮೊದಲಾಗುವ ಎರಡು ಋಕ್ಕುಗಳಿಂದ (೫೩ ನೇ ಸೂಕ್ತದ ೧೫-೧೬ ನೇ ಋಕ್ಕುಗಳಿಂದ) ವಾಗ್ದೇವತೆಯನ್ನು ಸ್ತುತಿಸಿದನು. ಮತ್ತು ತಾನು ತನ್ನ ಗೃಹಕ್ಕೆ ಹೊರಡುವಾಗ ತನ್ನ ಗಾಡಿಯ ಚಕ್ರಾದಿಭಾಗಗಳನ್ನೂ (ಗಾಡಿಯನ್ನೆಳೆಯುವ) ಎತ್ತುಗಳನ್ನೂ **ಸ್ಥಿರೌ ಗಾವೌ** ಎಂದು ಮೊದಲಾಗುವ ನಾಲ್ಕು ಋಕ್ಕುಗಳಿಂದ (೧೭-೨೦) ಸ್ತುತಿಸಿರುವನು.

---

113-114. was forcibly deprived of consciousness. He sank down unconscious. But to him the Jamadagnis gave Speech called Sasarpari, daughter of Brahma or of the Sun, having brought her from the dwelling of the Sun. Then that Speech dispelled the Kusikas' loss of intelligence (ಅಮತಿಂ).

**23. Visvamitra and Vac Sasarpari. Spells against the Vasisthas.**

115. And in the (stanza) 'Hither' (ಉಪ: iii. 53-11) Visvamitra restored the Kusikas to consciousness (ಅನುಬೋಧಯತ್). And gladdened at heart by receiving Speech he paid homage to those seers (the Jamadagnis).

116. himself praising Speech with the two stanzas 'Sasarpari' (ಸಸರ್ಪರೀ: iii. 53. 15. 16). (With the stanzas) 'Strong' (ಸ್ಥಿರೌ: iii. 53. 17-20) (he praised) the parts of the cart and the oxen, as he started for home.

ತತಶ್ಚ ಸ್ವಶರೀರೇಣ ಗೃಹಾನ್ಗಚ್ಛನ್ಸರೀವದೇ ।
ಪರಾಶ್ಚತಸ್ರೋ ಯಾಸ್ತ್ವತ್ರ ವಸಿಷ್ಠದ್ವೇಷಿಣ್ಯಃ ಸ್ಮೃತಾಃ ॥ ೧೧೭ ॥
ವಿಶ್ವಾಮಿತ್ರೇಣ ತಾಃ ಪ್ರೋಕ್ತಾ ಅಭಿಶಾಪಾ ಇತಿ ಸ್ಮೃತಾಃ ।
ದ್ವಿಷದ್ವೇಷಾಸ್ತು ತಾಃ ಪ್ರೋಕ್ತಾ ವಿದ್ಯಾಶ್ಚೈವಾಭಿಚಾರಿಕಾಃ ॥ ೧೧೮ ॥
ವಸಿಷ್ಠಾಸ್ತಾ ನ ಶೃಣ್ವಂತಿ ತದಾಚಾರ್ಯಕಸಂಮತಂ ।
ಕೀರ್ತನಾಚ್ಛ್ರವಣಾದ್ವಾಪಿ ಮಹಾದೋಷಶ್ಚ ಜಾಯತೇ ॥ ೧೧೯ ॥
ಶತಧಾ ಭಿದ್ಯತೇ ಮೂರ್ಧಾ ಕೀರ್ತಿತೇನ ಶ್ರುತೇನ ವಾ ।
ತೇಷಾಂ ಬಾಲಾಃ ಪ್ರಮೀಯಂತೇ ತಸ್ಮಾತ್ತಾಸ್ತು ನ ಕೀರ್ತಯೇತ್ ॥ ೧೨೦ ॥

117. ಅನಂತರ ಮನೆಗೆ ಬಂದಮೇಲೆ (ಗಾಡಿಯನ್ನೂ ಎತ್ತುಗಳನ್ನೂ) ತಾನೇ ಅವುಗಳ ಸ್ಥಾನಕ್ಕೆ ಸೇರಿಸಿದನು. ಮುಂದಿನ ನಾಲ್ಕು ಋಕ್ಕುಗಳು (೫೩ನೇ ಸೂಕ್ತದ ೨೧-೨೪ ಋಕ್ಕುಗಳು) ವಸಿಷ್ಠಋಷಿಗೂ ಅವನ ವಂಶದವರಿಗೂ ಕೆಡಕನ್ನುಂಟುಮಾಡುವುವೆಂದು (ವಸಿಷ್ಠದ್ವೇಷಿಣ್ಯಃ) ಪ್ರಸಿದ್ಧವಾಗಿವೆ.

118. ಈ ನಾಲ್ಕು ಋಕ್ಕುಗಳನ್ನು (ಇಂದ್ರೋತಿಭಿಃ ಇತ್ಯಾದಿ ೨೧-೨೪) ವಿಶ್ವಾಮಿತ್ರನೇ ಸ್ವತಃ ಉಚ್ಚರಿಸಿ ಶಾಪವಿತ್ತನೆಂದು ಹೇಳಲ್ಪಟ್ಟಿದೆ. ಇವುಗಳು ಶಾಪರೂಪವಾದ ವಾಕ್ಯಗಳೆಂದೂ ಇವುಗಳಿಗೆ ಶತ್ರುಗಳನ್ನು ನಾಶಮಾಡುವ ಶಕ್ತಿಯಿರುವುದೆಂದೂ ಅಭಿಚಾರಿಕವಿದ್ಯಗಳೆಂದೂ (ಮಾಟ) ಹೇಳಲ್ಪಡುವುವು.

119. ವಸಿಷ್ಠವಂಶದವರು ಈ ನಾಲ್ಕು ಋಕ್ಕುಗಳನ್ನು (೫೩ನೇ ಸೂಕ್ತದ ೨೧-೨೪ ಋಕ್ಕುಗಳನ್ನು) ಕಿವಿಯಿಂದ ಕೇಳುವುದೂ ಇಲ್ಲ. ಇದು ಅವರ ಆಚಾರ್ಯವರ್ಗದವರಿಗೆ ಸಮ್ಮತಿಯೆಂಬ ಅಭಿಪ್ರಾಯವಿರುವುದು. ವಸಿಷ್ಠವಂಶದವರು ಈ ಋಕ್ಕುಗಳನ್ನು ಪಠಿಸಿದರಾಗಲಿ, ಕಿವಿಯಿಂದ ಕೇಳಿದರಾಗಲಿ ಮಹಾದೋಷವು ಸಂಭವಿಸುವುದು.

120. ಇವುಗಳನ್ನು ಪಠಿಸಿದವರ ಅಥವಾ ಕೇಳಿದವರ ಶಿರಸ್ಸು ನೂರು ಹೋಳುಗಳಾಗಿ ಕತ್ತರಿಸಿ ಹೋಗುವುದು. ಮತ್ತು ಅವರ ಮಕ್ಕಳುಗಳು ಮೃತರಾಗುವರು. ಆದ್ದರಿಂದ ವಸಿಷ್ಠವಂಶದವರು ಆ ಋಕ್ಕುಗಳನ್ನು ಎಂದಿಗೂ ಉಚ್ಚರಿಸಬಾರದು ಎಂದು ಪ್ರತೀತಿ ಇರುವುದು.

---

117. And then going home deposited (them there) in person (ಸ್ವಶರೀರೇಣ).

But the fonr stanzas which follow (iii. 53. 21-24) are traditionally held to be hostile to the Vasisthas.

118. They were pronounced by Viswamitra; they are traditionally held to be 'imprecations' (ಅಭಿಶಾಪ). They are pronounced to be hostile to enemies and magical (ಆಭಿಚಾರಿಕಾಃ) incantations.

119. The Vasisthas will not listen to them. This is the unanimous opinion of their anthorities (ಆಚಾರ್ಯಕ) great guilt arises from repeating or listening (to them);

120. By repeating or hearing (them) one's head is broken into a hundred fragments; the children of those (who do so) perish : therefore one should not repeat them.

ವಿಶ್ವಾಂಶ್ಚ ದೇವಾಂಸ್ತುಷ್ಟಾವ ಚತುರ್ಭಿರಿಮಮಿತ್ಯೃಷಿಃ ।
ಅಸ್ತೌದ್ವಿಶ್ವಾತ್ಮನಾ ಸರ್ವಾನ್ಮನ್ಯಮಾನಃ ಪರಂ ಪದಂ ॥ ೧೨೧ ॥

ದೇವಾನಾಮಸುರತ್ವಂ ತದೇಕಂ ಮಹದಿತೀರಯನ್ ।
ಅಶ್ವಿನೌ ಮಿತ್ರ ಋಭವೋ ಧೇನುರ್ಮಿತ್ರ ಇಹೇಹ ವಃ ॥ ೧೨೨ ॥

ವೈಶ್ವದೇವೀತಿ ವಿಜ್ಞೇಯಾ ಮೈತ್ರೀ ಮಿತ್ರಾಯ ಪಂಚ ತು ।
ಐಂದ್ರಾರ್ಭವಸ್ತ್ಯೃಚಸ್ತ್ವತ್ರ ಆರ್ಭವೇ ಸೂಕ್ತ ಉತ್ತಮಃ ॥ ೧೨೩ ॥

121. ಅನಂತರ ಋಷಿಯು **ಇಮಂ ಮಹೇ** ಎಂದು ಮೊದಲಾಗುವ ನಾಲ್ಕು ಸೂಕ್ತಗಳಿಂದ (೫೪-೫೭ ಸೂಕ್ತಗಳು) ವಿಶ್ವೇದೇವತೆಗಳನ್ನು ಸ್ತುತಿಸಿರುವನು. ಈ ದೇವತೆಗಳನ್ನು ಸ್ತುತಿಸುವಾಗ ಋಷಿಯು ಅವರ ವಿಶೇಷ ಸ್ಥಾನಮಾನಗಳನ್ನು ಅರಿತು ತನ್ನ ಹೃದಯಾಂತರಾಳದಿಂದ ಅವರನ್ನು ಸ್ತುತಿಸಿರುವನು.

122. ಹಿಂದೆ ಹೇಳಿದಂತೆ ವಿಶ್ವೇದೇವತೆಗಳನ್ನು ಸ್ತುತಿಸುವಾಗ **ಮಹದ್ದೇವಾನಾಮಸುರತ್ವಮೇಕಂ** (೫೫ನೇ ಸೂಕ್ತದ ಪ್ರತಿ ಋಕ್ಕಿನ ಕೊನೆಯಪಾದ) ಈ ದೇವತೆಗಳ ಶಕ್ತಿಯು ಮಹಾ ಅದ್ಭುತವಾದುದು ಇತ್ಯಾದಿ ಯಾಗಿ ಸ್ತುತಿಸಿರುವನು. ಅನಂತರ **ಧೇನುಃ ಪ್ರತ್ನಸ್ಯ** ಎಂಬ ೫೭ನೇ ಸೂಕ್ತದಿಂದ ಅಶ್ವಿನೀದೇವತೆಗಳನ್ನೂ, **ಮಿತ್ರೋ ಜನಾನ್** ಎಂಬ ೫೯ನೇ ಸೂಕ್ತದಿಂದ ಮಿತ್ರನೆಂಬ ದೇವತೆಯನ್ನೂ **ಇಹೇಹ ವಃ** ಎಂಬ ೬೦ನೇ ಸೂಕ್ತದಿಂದ ಋಭು ಗಳನ್ನೂ ಸ್ತುತಿಸಿರುವನು.

123. ೫೯ ನೇ ಸೂಕ್ತದಲ್ಲಿ **ಮಿತ್ರಾಯ ಪಂಚ** ಎಂಬ ೮ ನೇ ಋಕ್ಕಿನಲ್ಲಿ ಮಿತ್ರದೇವತೆಯ ಸ್ತುತಿಯಿ ದ್ದರೂ ಅಲ್ಲಿ ವಿಶ್ವೇದೇವತೆಗಳನ್ನೂ ಸ್ತುತಿಸಲಾಗಿದೆಯೆಂದು ತಿಳಿಯಬೇಕು. **ಇಹೇಹ ವಃ** ಎಂಬ ಋಭುದೇವತಾಕ ವಾದ ೬೦ ನೇ ಸೂಕ್ತದ ಕೊನೆಯ ಮೂರು ಋಕ್ಕುಗಳಲ್ಲಿ ಇಂದ್ರನೂ ಋಭುಗಳೂ ಒಟ್ಟಿಗೆ ಸ್ತುತರಾಗಿರುವರು.

---

121. The seer praised the All-gods with the four (hymns) 'To him' (ಇಮಂ ; iii. 54-57).

He praised them all with his whole soul, thinking of the highest Abode.

122. while the he uttered 'Great is that unique mysterious power of the gods' (ಮಹದ್ದೇವಾನಾಮಸುರತ್ವ ಮೇಕಂ )

The Asvins, Mitra, the Rbhus are (the respective deities of) 'The milch-cow (ಧೇನುಃ : iii. 58), 'Mitra' (ಮಿತ್ರಃ : iii. 59), and 'Here, here, of you' (ಇಹೇಹ ವಃ : iii. 60).

123. (The stanza) addressed to Mitra, 'To Mitra five' (ಮಿತ್ರಾಯ ಪಂಚ : iii. 59-8), should be recoognised as addressed to the All-gods.

But the last triplet here in the hymn to the Rbhus (iii. 60. 5-7) is addressed to Indra and the Rbhus.

ಪೂರ್ವೇ ಧ್ವೃಚೇ ನಿಪಾತೀಂದ್ರ ಉಷೋ ವಾಜೇನ ಪಂಚಮಾತ್ |
ಔಷಸಾದುತ್ತರಾಸ್ತ್ವನ್ತ್ಯೇ ಷಟ್ ಪೃಥಗ್ದೇವತಾಸ್ತ್ರೃಚಾಃ |
ಐಂದ್ರಾವರುಣಃ ಪ್ರಥಮೋ ಬಾರ್ಹಸ್ಪತ್ಯಸ್ತಥಾಪರಃ | ೧೨೪ ||
ಪೌಷ್ಣಸಾವಿತ್ರಸೌಮಾಶ್ಚ ಮೈತ್ರಾವರುಣ ಉತ್ತಮಃ |
ತುಷ್ಟಾವ ಜಮದಗ್ನಿಶ್ಚ ತೇನ ದೇವಾವೃತಾವೃಧೌ || ೧೨೫ ||

ಇತಿ ತೃತೀಯಂ ಮಂಡಲಂ

**೬೧-೬೨ ನೇ ಸೂಕ್ತದ ದೇವತೆಗಳು**

124. ಹಿಂದಿನ ಸೂಕ್ತದಲ್ಲಿ (೬೦ ನೇ ಸೂಕ್ತದಲ್ಲಿ) ೩-೪ ನೇ ಋಕ್ಕುಗಳಲ್ಲಿ ಇಂದ್ರನ ವಿಷಯವು ಪ್ರಸಂಗ ವಶದಿಂದ ಇರುವುದು. **ಉಷೋ ವಾಜೇನ** ಎಂಬ ೬೧ ನೇ ಸೂಕ್ತದಲ್ಲಿ ಕೊನೆಯ ೩ ಋಕ್ಕುಗಳಲ್ಲಿ ಉಷೋದೇವತೆಯೂ ಮುಂದಿನ **ಇಮಾ ಉ ವಾಂ** ಎಂಬ ೬೨ ನೇ ಸೂಕ್ತದ ೧೮ ಋಕ್ಕುಗಳಲ್ಲಿ ಬೇರೆ ಬೇರೆ ದೇವತೆಗಳನ್ನುದ್ದೇಶಿಸಿ ಆರು ತೃಚಗಳೂ ಎಂದರೆ ಮೂರು ಮೂರು ಋಕ್ಕುಗಳಿಗೆ ಒಂದೊಂದು ದೇವತೆಯಂತೆ ಸ್ತುತಿಸಲಾಗಿರುವುದು. ಹೇಗೆಂದರೆ ಮೊದಲನೇ ತೃಚದಲ್ಲಿ ಎಂದರೆ ೧-೩ ಋಕ್ಕುಗಳಲ್ಲಿ ಇಂದ್ರಾವರುಣರೂ, ೪-೬ ಋಕ್ಕುಗಳಲ್ಲಿ ಬೃಹಸ್ಪತಿಯೂ,

145. ೭-೯ನೇ ಋಕ್ಕುಗಳಲ್ಲಿ ಪೂಷನೂ, ೧೦-೧೨ರಲ್ಲಿ ಸವಿತೃವೂ ೧೩-೧೫ ರಲ್ಲಿ ಸೋಮನೂ ೧೬-೧೮ರಲ್ಲಿ ಮಿತ್ರಾವರುಣರೂ ಸ್ತುತರಾಗಿರುವರು. ಈ ಸೂಕ್ತದ ಕೊನೆಯ ಎರಡು ಋಕ್ಕುಗಳಲ್ಲಿ (೧೭-೧೮) ಜಮದಗ್ನಿಯು ಸತ್ಯ ಅಥವಾ ಯಜ್ಞವರ್ಧಕರಾದ ಮಿತ್ರಾವರುಣರನ್ನು ಸ್ತುತಿಸಿರುವನು.

ಇಲ್ಲಿಗೆ ಮೂರನೆಯ ಮಂಡಲದ ಸೂಕ್ತಗಳ ವಿವರಣೆಯು ಸಮಾಪ್ತವಾದುದು.

## 25. Deities of RV. iii 61-62.

124. In the preceding couplet (iii. 60-3, 4) Indra is incidental. After 'O Usas, with strength' (ಉಷೋ ವಾಜೇನ : iii. 61) the fifth (hymn), which is addressed to Dawn, there follow in the final (hymn : iii. 62) six triplets addressed to separate deities : the first (1-3) is addressed to Indra-Varuna, and the following one (4-6) to Brhaspati ;

125. and (then come three respectively) addressed to Pusan (7-9) Savitr (10-12), Soma (13-15), while the last (16-18) is addressed to Mitra-Varuna. And with that (final triplet) Jamadagni praised the two gods who delight in law (ಋತಾವೃಧೌ).

End of 3rd Mandala



### ಅಥ ಚತುರ್ಥಂ ಮಂಡಲಂ

ದೇವರ್ಷಿಪಿತೃಪೂಜಾರ್ಥಂ ಪಪಾಚಾಂತ್ರಾಣಿ ಯಚ್ಛುನಃ |
ಯಸ್ಮೈ ವೈ ಶ್ಯೇನರೂಪೇಣ ಅಹರದ್ವೃತ್ರಹಾ ಮಧು || ೧೨೬ ||

ಸೋಽಗ್ನಿಂ ತು ಪಂಚದಶಭಿರಿಂದ್ರಂ ಷೋಡಶಭಿಃ ಪರೈಃ |
ಋಷಿಸ್ತ್ವಾಮಿತಿ ತುಷ್ಟಾವ ಸೂಕ್ತೈರೇತಿ ತು ಗೌತಮಃ || ೧೨೭ ||



## ನಾಲ್ಕನೆಯ ಮಂಡಲವು.

### ನಾಲ್ಕನೆಯ ಮಂಡಲದ ೧-೧೫ ಸೂಕ್ತಗಳು

126. ವಾಮದೇವಋಷಿಯ ವಿಷಯವಾಗಿ ಒಂದು ವೃತ್ತಾಂತವನ್ನು ಇಲ್ಲಿ ಹೇಳಲಾಗಿದೆ. ಒಂದು ಸಮಯದಲ್ಲಿ ಅನೇಕ ವರ್ಷಗಳವರೆಗೆ ಮಳೆಬರದೆ ಅನಾವೃಷ್ಟಿಯುಂಟಾಯಿತು. ಸಸ್ಯಾದಿಗಳು ಒಣಗಿಹೋದವು, ಜಲಾಶಯಗಳು ಬತ್ತಿಹೋಗಿದ್ದವು. ಆ ಕಾಲದಲ್ಲಿ ವಾಮದೇವಋಷಿಯು ಎಷ್ಟು ಪ್ರಯತ್ನಪಟ್ಟರೂ ಯಾವ ವಿಧವಾದ ಆಹಾರವೂ ದೊರೆಯದಿದ್ದುದರಿಂದ ಸಮೀಪದಲ್ಲಿದ್ದ ಒಡಕಲಾದ ಒಂದು ನಾಯಿಯ ಕರುಳು ಮುಂತಾದ ಮಾಂಸವನ್ನು (Entrrils of a dog) ಬೇಯಿಸಿ ದೇವತೆಗಳಿಗೂ, ಪಿತೃಗಳಿಗೂ, ಋಷಿಗಳಿಗೂ ಅರ್ಪಿಸಿದನು. ಆಗ ಇಂದ್ರನು ಶ್ಯೇನ ಪಕ್ಷಿರೂಪದಿಂದ ಅಲ್ಲಿಗೆ ಬಂದು ಅವನು ಬೇಯಿಸಿದ್ದ ಮಾಂಸವನ್ನು ತಿಂದು ಮಧು ಎಂದರೆ ಮಧುರವಾದ ಉದಕವನ್ನು ವೃಷ್ಟಿರೂಪದಲ್ಲಿ ಯಥೇಚ್ಛವಾಗಿ ಸುರಿಸಿದನು. ಈ ವಿಷಯವು ಈ ನಾಲ್ಕನೆಯ ಮಂಡಲದ ೧೮ ನೇ ಸೂಕ್ತದ **ಅವರ್ತ್ಯಾ ಶುನ** ಎಂಬ ೧೩ ನೇ ಋಕ್ಕಿನಲ್ಲಿ ಹೇಳಲಾಗಿದೆ. ಆ ವಿಷಯವನ್ನೇ ಈ ೧೨೬ ನೇ ಶ್ಲೋಕದಲ್ಲಿ ತಿಳಿಸಿದೆ.

127. ಗೋತಮವಂಶಜನಾದ ಆ ವಾಮದೇವಋಷಿಯು ಅಗ್ನಿಯನ್ನು **ತ್ವಾಂ ಹ್ಯಗ್ನೇ** ಎಂದು ಮೊದಲಾಗುವ ೧೫ ಸೂಕ್ತಗಳಲ್ಲಿಯೂ (ನಾಲ್ಕನೇ ಮಂಡಲದ ೧-೧೫ ಸೂಕ್ತಗಳು) ಇಂದ್ರನನ್ನು ಅದರ ಮುಂದಿನ **ಆ ಸತ್ಯೇನ** ಎಂದು ಮೊದಲಾಗುವ ೧೬ ಸೂಕ್ತಗಳಲ್ಲಿಯೂ (೧೬-೩೨) ಸ್ತುತಿಸಿರುವನು.

## Mandala iv.

### 26. Deities of RV. iv. 1.15.

126. He (Vamadeva) for whom, when he cooked the entrails of a dog for the sake of honouring the Gods, the seers and the Fathers, the Vitra-slayer (Indra), in the form of an eagle, brought the mead.

127. That seer, descendant of Gotama, praised Agni with fifteen hymns (beginning) 'You' (ತ್ವಾಂ : iv. 1-15), and Indra with the following sixteen, 'Hither' (ಆ : iv. 16-32).

ಸ ಭ್ರಾತರಮಿತಿ ತ್ವಾಸು ತಿಸೃಷ್ವಗ್ನಿರ್ನಿಪಾತಭಾಕ್ ।
ವರುಣೇನಾಭಿಸಂಸ್ತೌತಿ ಆಹುರನ್ಯೇ ನಿಪಾತಿನಂ ॥ ೧೨೮ ॥

ಲಿಂಗೋಕ್ತದೇವತೇ ಸೂಕ್ತೇ ಏಕೇ ಪ್ರತ್ಯಗ್ನಿರೇವ ತು ।
ಋಷಿರ್ಬೋಧದಿತಿ ದ್ವಾಭ್ಯಾಂ ಸ್ತೌತಿ ಸೋಮಕಮೇವ ತು ॥ ೧೨೯ ॥

ತಸ್ಯೈವ ಚಾಯುಷೋऽರ್ಥಾಯ ಪರಾಭ್ಯಾಮಶ್ವಿನೌ ಸ್ತುತೌ
ಅಂಜಸಾ ನ ಜನಿಷ್ಯೇऽಹಂ ಬ್ರುವಾಣಂ ಗರ್ಭಮೇವ ತು ॥ ೧೩೦ ॥

128. (ನಾಲ್ಕನೆಯ ಮಂಡಲದ) ಮೊದಲನೆಯ ಸೂಕ್ತದ **ಸ ಭ್ರಾತರಂ** ಎಂದು ಮೊದಲಾಗುವ ೪ ಋಕ್ಕುಗಳಲ್ಲಿ (೨-೫) ಅಗ್ನಿಯನ್ನು ಪ್ರಾಸಂಗಿಕವಾಗಿ ಸ್ತುತಿಸಲಾಗಿದೆ. ಕೆಲವರು ಈ ಋಕ್ಕುಗಳಲ್ಲಿ ಅಗ್ನಿಯನ್ನು ಪ್ರಾಸಂಗಿಕವಾಗಿಯೂ, ವರುಣನನ್ನು ಮುಖ್ಯವಾಗಿಯೂ ಸ್ತುತಿಸಲಾಗಿದೆಯೆಂದು ಹೇಳುವರು. [ಮೂಲಶ್ಲೋಕದಲ್ಲಿ **ಆಸು ತಿಸೃಷು**-ಮೂರು ಋಕ್ಕುಗಳಲ್ಲಿ ಎಂದು ಹೇಳಿರುವುದು ಸರಿಯಲ್ಲ ನಾಲ್ಕು ಋಕ್ಕುಗಳಲ್ಲಿ ಎಂದಿರಬೇಕು.]

129. **ಪ್ರತ್ಯಗ್ನಿಃ** ಎಂದು ಪ್ರಾರಂಭವಾಗುವ ೧೩, ೧೪ ನೇ ಸೂಕ್ತಗಳಲ್ಲಿ (ಲಿಂಗೋಕ್ತದೇವತೆಗಳೆಂದರೆ—ಆಯಾ ಋಕ್ಕಿನಲ್ಲಿ ಹೇಳಿರುವ ದೇವತೆಗಳನ್ನು) ಸ್ತುತಿಸಲಾಗಿದೆಯೆಂದು ಕೆಲವರು ಹೇಳುವರು. ಆದರೆ ೧೫ ನೇ ಸೂಕ್ತದ **ಬೋಧ್ಯದ್ಯನ್ಮಾ** ಎಂದು ಮೊದಲಾಗುವ ೭-೮ ನೇ ಋಕ್ಕುಗಳಲ್ಲಿ ಋಷಿಯು ಸೋಮಕನನ್ನು (ಸಹದೇವನ ಪುತ್ರನು) ಮಾತ್ರ ಋಷಿಯು ಸ್ತುತಿಸಿರುವನು.

### ವಾಮದೇವಋಷಿಯ ಜನನ ವೃತ್ತಾಂತ ಇತ್ಯಾದಿ

130. ಆ ಸೋಮಕನ ದೀರ್ಘಾಯುಸ್ಸಿಗಾಗಿ ಈ ೧೫ ನೇ ಸೂಕ್ತದ ೯-೧೦ ನೇ ಋಕ್ಕುಗಳಿಂದ ಋಷಿಯು ಅಶ್ವಿನೀದೇವತೆಗಳನ್ನು ಸ್ತುತಿಸಿರುವನು. ವಾಮದೇವಋಷಿಯು ತನ್ನ ತಾಯಿಯ ಗರ್ಭದಲ್ಲಿದ್ದಾಗ ನಾನು ಎಲ್ಲರಂತೆ (ಮಾತೃಯೋನಿ ಮೂಲಕ) ಹುಟ್ಟುವುದಿಲ್ಲ ಎಂದು ಗರ್ಭವೇ ಹೇಳಿದಾಗ,

---

128. In the three (stanzas) ‘As such, your brother’ (ಸ ಭ್ರಾತರಂ : iv. 1. 2-4) Agni is incidental (ನಿಪಾತಭಾಜ); others say that (the seer) praises the incidental (ನಿಪಾತಿನ್) Agni together with Varuna.

129. Some (say) that the two hymns ‘Agni, upon’ (ಪ್ರತ್ಯಗ್ನಿಃ : iv. 13,14) are addressed to the divinities mentioned by their characteristic names (ಲಿಂಗೋಕ್ತದೇವತಾಃ). But with the two (stanzas) ‘He noted’ (ಬೋಧತ್ : iv. 15. 7, 8) the seer praises Somaka only).

### 27. RV. iv. 18-30. Indra’s birth and fight with Vamadeva.

130. And with a view to (long) life for him the Asvins are praised with the two following (stanzas : iv. 15 -9, 10). Her unborn child (ಗರ್ಭಂ) who said, ‘I will not be born in the straightforward way (ಅಂಜಸಾ).

ಅನ್ವಶಾದದಿತಿಃ ಪುತ್ರಮಿಂದ್ರಮಾತ್ಮಹಿತೈಷಿಣೀ |
ಸ ಜಾತಮಾತ್ರೋ ಯುದ್ಧಾಯ ಋಷಿಮೇವಾಜಹಾವ ತು || ೧೩೧ ||

ಯೋಧಯನ್ವಾಮದೇವಸ್ತಂ ಕೃತ್ವಾತ್ಮನಿ ಬಲಂ ತಥಾ |
ದಿನಾನಿ ದಶ ರಾತ್ರೀಶ್ಚ ವಿಜಿಗ್ಯೇ ಚೈನಮೋಜಸಾ || ೧೩೨ ||

ಸ ತಂ ಕ ಇಮಮಿತ್ಯಸ್ಯಾಂ ವಿಕ್ರೀಣನ್ನೃಷಿಸಂಸದಿ |
ಸ್ವಯಂ ತೇನಾಭಿತುಷ್ಟಾವ ನಕಿರಿಂದ್ರೇತಿ ಗೌತಮಃ || ೧೩೩ ||

131, ಇಂದ್ರನ ಮಾತೆಯೂ, ವಾಮದೇವಋಷಿಯ **ತಾ**ಯಿಯ ಸ್ನೇಹಿತೆಯೂ ಆದ ಅದಿತಿಯು, ಋಷಿಯ ತಾಯಿಗೆ ಹಿತವನ್ನು ಬಯಸಿ ತನ್ನ ಪುತ್ರನಾದ ಇಂದ್ರನಿಗೆ ಆಜ್ಞಾಪಿಸಿದಳು. ಆಗ ಇಂದ್ರನು ವಾಮದೇವಋಷಿಯು ಹುಟ್ಟಿದಕೂಡಲೇ ಅವನನ್ನು ಯುದ್ಧಕ್ಕೆ ಕರೆದನು.

132. ಆಗ ವಾಮದೇವಋಷಿಯು ತನ್ನ ಶಕ್ತಿಯನ್ನು ಹೆಚ್ಚಿಸಿಕೊಂಡು ಇಂದ್ರನೊಡನೆ ಹತ್ತುದಿನಗಳೂ ಹತ್ತು ರಾತ್ರಿಗಳೂ ಕಳೆಯುವವರಿಗೆ ಯುದ್ಧಮಾಡಿ ಅವನನ್ನು ಜಯಿಸಿದನು.

133. ಒಂದು ಕಾಲದಲ್ಲಿ ಗೋತಮಪುತ್ರನಾದ ವಾಮದೇವನು ಋಷಿಗಳ ಸಭೆಯಲ್ಲಿ ಇಂದ್ರನನ್ನು ಸ್ತುತಿಸಿ ತನ್ನ ಪರವಾಗಿರುವಂತೆ ಪ್ರಾರ್ಥಿಸಿದನು. ಇಲ್ಲಿ ಸ್ತುತಿಸುವುದೇ ಕ್ರಯವಿಕ್ರಯವೆಂದು ಹೇಳಲ್ಪಡುವುದು. ಕ್ರಯದಿಂದ ಪಡೆದ ವಸ್ತುವು ತನ್ನ ವಶವಾಗಬೇಕಾಗಿರುವಂತೆ ಇಂದ್ರನನ್ನು ಮೊದಲು ಸ್ತುತಿಸಿದ ವಾಮದೇವಋಷಿಯ ಯಜ್ಞಕ್ಕೆ ಇಂದ್ರನು ಹೋಗಬೇಕು. ಇತರ ಋಷಿಗಳು ಇಂದ್ರನನ್ನು ಹೆಚ್ಚಾಗಿ ಅನಂತರ ಸ್ತುತಿಸಿದರೂ ಅವರ ಯಜ್ಞಕ್ಕೆ ಮೊದಲು ಹೋಗಬೇಕಾಗಿಲ್ಲ. ಹೇಗೆಂದರೆ, ಒಂದು ವಸ್ತುವನ್ನು ಕ್ರಯಕ್ಕೆ ಪಡೆದವನಿಗೆ ಅದರ ಮೇಲಿನ ಹಕ್ಕಿಗೆ ಕ್ರಯವಾದನಂತರ ಇನ್ನೊಬ್ಬನು ಹೆಚ್ಚು ದ್ರವ್ಯವನ್ನು ಕೊಡುವುದಾಗಿ ವ್ಯಾಪಾರಿಯನ್ನು ಕೇಳಿದರೂ ಅದನ್ನು ಮೊದಲು ಕೇಳಿ ಕ್ರಯವನ್ನು ನಿರ್ಧರಿಸಿ ಒಪ್ಪಿಕೊಂಡವನಿಗೆ ಕೊಡಬೇಕಾಗಿರುವುದು. ಅದರಂತೆ ವಾಮದೇವಋಷಿಯು ಇಂದ್ರನನ್ನು ಮೊದಲು ಸ್ತುತಿಸಿರುವುದರಿಂದ ವ್ಯಾಪಾರದ ಒಪ್ಪಂದದಂತೆ ಇಂದ್ರನು ಅವನ ಯಜ್ಞಕ್ಕೆ ಮೊದಲು ಹೋಗಬೇಕು. ಅದಿಲ್ಲವೆ ಇತರ ಋಷಿಯು ಹೆಚ್ಚು ಸ್ತೋತ್ರಗಳಿಂದ ಸ್ತುತಿಸಿದರೂ ಅದರಂತೆ ನಡೆಯಬೇಕಾಗಿಲ್ಲ ಎಂಬ ವಿಷಯವು **ಕಾಸುಷ್ಟುತಿಃ** ಎಂಬ ೨೪ ನೇ ಸೂಕ್ತದ **ಕ ಇಮಂ** ಎಂಬ ೧೦ ನೇ ಋಕ್ಕಿನಲ್ಲಿ ವಿವೃತವಾಗಿದೆ. ಅದಕ್ಕಾಗಿ ಋಷಿಯು ಇಂದ್ರನನ್ನು **ನ ಕಿರಿಂದ್ರ** ಎಂಬ ೩೦ ನೇ ಸೂಕ್ತದ ಮೊದಲನೇ ಋಕ್ಕಿನಿಂದ ಸ್ತುತಿಸಿರುವನು.

---

131. (that is), her son Indra, Aditi, anxious for her own welfare, admonished (ಅನ್ವಶಾತ್). But he (Indra), as soon as born, challenged the seer to fight.

132 Vamadeva, engaging him, after he (Indra) and thus done violence to himself (the seer), for ten days and nights, vanquished him with might.

133. Gautama, selling him in the assembly of seers in the (stanza) 'Who this' (ಕ ಇಮಂ : iv. 24. 10), himself for that purpose (ತೇನ) praised (him with the (stanza) 'None, O Indra' (ನಕಿರಿಂದ್ರ : iv. 30.1).

**ಕಿಮಾದುತಾಸೀತಿ ಚಾಸ್ಯಾಂ ಮನ್ಯುಮರ್ಧೇ ಪರಾಣುದತ್ ।**
**ಅಥಾಸ್ಯ ರೂಪವೀರ್ಯಾಣಿ ಧೈರ್ಯಕಾರ್ಯಾಣಿ ತಾನ್ಯೃಷಿಃ** ॥ ೧೩೪ ॥

**ವಿವಿಧಾನಿ ಚ ಕರ್ಮಾಣಿ ಶಶಂಸಾದಿತಯೇ ತಥಾ ।**
**ಅಹಮಿತ್ಯಾತ್ಮಸಂಸ್ತಾವಸ್ತೃಚೇ ಸ್ತುತಿರಿವಾಸ್ಯ ಹಿ** ॥ ೧೩೫ ॥

**ಪ್ರ ಸು ಷ ವಿಭ್ಯೋ ನವಭಿರ್ಯಗ್ಭಿಃ ಶ್ಯೇನಸ್ಯ ಸಂಸ್ತವಃ ।**
**ಪರಾಭಿಸ್ತ್ವೇತಿ ಪಂಚರ್ಚೇ ಸೋಮೇನೇಂದ್ರಃ ಸ್ತುತಃ ಸಹ** ॥ ೧೩೬ ॥

**ಸೋಮಪ್ರಧಾನಮೇತಾಂ ತು ಕ್ರೌಷ್ಟುಕಿರ್ಮನ್ಯತೇ ಸ್ತುತಿಂ ।**
**ದಿವಶ್ಚಿದಿತಿ ಚೈತೇನ ತೃಚೇನೇಂದ್ರೇಣ ಸಂಸ್ತುತಾಂ** ॥ ೧೩೭ ॥

134-135. ಇದೇ ೩೦ ನೇ ಸೂಕ್ತದ **ಕಿಮಾದುತಾಸಿ** ಎಂಬ ೭ ನೇ ಋಕ್ಕಿನಿಂದ ಇಂದ್ರನನ್ನು ಸ್ತುತಿಸಿ ಇಂದ್ರನ ಕೋಪವನ್ನು ಅರ್ಧಶಮನಮಾಡಿದನು. ಅನಂತರ ವಾಮದೇವಋಷಿಯು, ಇಂದ್ರನ ರೂಪವನ್ನೂ ಸಾಹಸ ಕೃತ್ಯಗಳನ್ನೂ, ಪರಾಕ್ರಮಗಳನ್ನೂ, ಇಂದ್ರನು ಮಾಡಿದ ನಾನಾವಿಧಕಾರ್ಯಗಳನ್ನೂ ಅದಿತಿಗೆ ಹೇಳಿ ವರ್ಣಿಸಿದನು. **ಅಹಂ ಮನುರಭವಂ** ಎಂಬ ಸೂಕ್ತದ ಮೊದಲು ಮೂರು ಋಕ್ಕುಗಳಲ್ಲಿ (೨೬ ನೇ ಸೂಕ್ತದ ೧-೩ ಋಕ್ಕುಗಳಲ್ಲಿ) ಋಷಿಯ ಅರ್ಧ ಆತ್ಮಪ್ರಶಂಸೆಯೂ, ಅರ್ಧ ಇಂದ್ರನ ಸ್ತುತಿಯೂ ಇರುವುದು.

136. ಇದೇ ೨೬ ನೇ ಸೂಕ್ತದ ಮುಂದಿನ **ಪ್ರ ಸು ಷ** ವಿಭ್ಯಃ ಎಂದು ಮೊದಲಾಗುವ ನಾಲ್ಕು ಋಕ್ಕುಗಳಲ್ಲಿ (೪-೭) ಯೂ ಮುಂದಿನ **ಗರ್ಭೇ ನು** ಎಂಬ ೨೭ ನೇ ಸೂಕ್ತದ ೫ ಋಕ್ಕುಗಳಲ್ಲಿಯೂ (೧-೫) ಒಟ್ಟು ಒಂಭತ್ತು ಋಕ್ಕುಗಳಲ್ಲಿ ಶ್ಯೇನಪಕ್ಷಿಯ ಸ್ತುತಿ ಇರುವುದು. ಮುಂದಿನ **ತ್ವಾ ಯುಜಾ** ಎಂಬ ೨೮ ನೇ ಸೂಕ್ತದ ೫ ಋಕ್ಕುಗಳಲ್ಲಿ ಇಂದ್ರನು ಸೋಮದೇವನೊಡನೆ ಸ್ತುತನಾಗಿರುವನು.

137-138. ಈ ಸೂಕ್ತಕ್ಕೆ (೨೮) ಸೋಮನೇ ಪ್ರಧಾನದೇವತೆಯೆಂದು **ಕ್ರೌಷ್ಟುಕಿ** ಎಂಬ ಆಚಾರ್ಯರ ಮತವು. ೩೦ ನೇ ಸೂಕ್ತದ **ದಿವಶ್ಚಿತ್** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿ (೯-೧೧) ಇಂದ್ರನೊಡನೆ

134. and in the (stanza) ‘ What then, are you ’ (ಕಿಮಾದುತಾಸಿ : iv. 30.7) he halfway (ಅರ್ಧೇ) dispelled his wrath. Then the seer (praised) his (Indra’s) form and heroic deeds, his valiant exploits.

135. and his various deeds, proclaimed to Aditi. ‘ I ’ (ಅಹಂ ; iv. 26) is self-praise in a triplet ; for there is praise (in it) as if of him (Indra).

136. With the following nine stanzas (beginning) ‘ Before all birds this ’ (ಪ್ರ ಸು ಷ ವಿಭ್ಯಃ : iv. 26. 4-7 ; 27. 1-5) there is praise of the eagle. In the hymn of five stanzas ‘ You ’ (ತ್ವಾ : iv. 28) Indra is praised together with Soma.

137-138. Kraustuki regards this praise to be chiefly addressed to Soma ; while with the triplet ‘ Even of the Sky ’ (ದಿವಶ್ಚಿತ್ : iv 30. 9-11)

**ಉಷಸಂ ಮಧ್ಯಮಾಂ ಮೇನೇ ಆಚಾರ್ಯಃ ಶಾಕಟಾಯನಃ ।**
**ವಾಮಮ್ವೃಚಿ ಸ್ತುತಾಶ್ಚಾತ್ರ ಭಗಃ ಪೂಷೇತಿ ಚಾರ್ಯಮಾ** ॥ ೧೩೮ ॥
**ಕರೂಳತೀತಿ ಪೂಷೋಕ್ತೋಽದನ್ತಕಃ ಸ ಇತಿ ಶ್ರುತೇಃ ।**
**ಅಸ್ಮಾಕಮುತ್ತಮಂ ಸೂರ್ಯಂ ಸ್ತೌತೀತ್ಯಾಹಾಶ್ವಲಾಯನಃ** ॥ ೧೩೯ ॥
**ಇಂದ್ರಸ್ಯ ಹರಯೋ ಹ್ಯಶ್ವಾ ಅಗ್ನೇರಶ್ವಾಸ್ತು ರೋಹಿತಃ ।**
**ಸೂರ್ಯಸ್ಯ ಹರಿತಶ್ಚೈವ ವಾಯೋರ್ನಿಯುತ ಏವ ಚ** ॥ ೧೪೦ ॥
**ರಾಸಭಃ ಸಹಿತೋಽಶ್ವಿಭ್ಯಾಮಜಾಃ ಪೂಷ್ಣಶ್ಚ ವಾಜಿನಃ ।**
**ಪೃಷತ್ಯೋಽಶ್ವಾಸ್ತು ಮರುತಾಂ ಗಾವೋಽರುಣ್ಯಸ್ತಥೋಷಸಾಂ** ॥ ೧೪೧ ॥

ಮಧ್ಯಮಸ್ಥಾನದೇವತೆಯಾದ ಉಷಸ್ಸೂ ಸ್ತುತಳಾಗಿರುವಳೆಂದು ಶಾಕಟಾಯನರು ಅಭಿಪ್ರಾಯಪಡುವರು ಮತ್ತು ಈ ಸೂಕ್ತದ **ವಾಮಂವಾಮಂ** ಎಂಬ ೨೪ ನೇ ಋಕ್ಕಿನಲ್ಲಿ ಭಗ, ಪೂಷಾ, ಅರ್ಯಮಾ ಎಂಬ ದೇವತೆಗಳು ಸ್ತುತರಾಗಿರುವರು.

139. ಈ ಋಕ್ಕಿನಲ್ಲಿ (೩೦ ನೇ ಸೂಕ್ತದ ೨೪ ನೇ ಋಕ್ಕಿನಲ್ಲಿ) ಪೂಷನನ್ನು **ಕರೂಳತೀ** ಎಂದರೆ ಹಲ್ಲಿಲ್ಲದವನು ಎಂದರ್ಥವು ಶ್ರುತಿಯಲ್ಲಿ ಹೇಳಿರುವುದು. ೩೧ ನೇ ಸೂಕ್ತದ **ಅಸ್ಮಾಕಮುತ್ತಮಂ** ಎಂಬ ೧೫ ನೇ ಋಕ್ಕಿನಲ್ಲಿ ಸೂರ್ಯನನ್ನು ಸ್ತುತಿಸಲಾಗಿದೆಯೆಂದು ಆಶ್ವಲಾಯನಮಹರ್ಷಿಯು ಹೇಳುವರು.

### ನಾನಾದೇವತೆಗಳ ವಾಹನಗಳು

140. ಇಂದ್ರನ ವಾಹನಕ್ಕೆ **ಹರಯಃ ಅಶ್ವಾಃ** ಹರಿತವರ್ಣವುಳ್ಳ ಅಶ್ವಗಳು( ಸಾಮಾನ್ಯವಾಗಿ ಹರೀ ಎಂಬ ಎರಡು ಕುದುರೆಗಳು) ಎಂದು ಹೆಸರು. ಅಗ್ನಿಗೆ ರೋಹಿತಃ ಎಂಬ ಕೆಂಪುಬಣ್ಣದ ಕುದುರೆಗಳೇ ವಾಹನವು; ಸೂರ್ಯನಿಗೆ ಹಸರುಬಣ್ಣದ ಕುದುರೆಗಳೂ, ವಾಯುವಿಗೆ ನಿಯುತಃ ಎಂಬ ಜಿಂಕೆಗಳೂ ವಾಹನಗಳು.

141. ಅಶ್ವಿನೀದೇವತೆಗಳಿಗೆ ರಾಸಭವೂ (ಕತ್ತೆಯೂ) ಪೂಷನಿಗೆ ಆಡೂ, ಮರುದ್ದೇವತೆಗಳಿಗೆ ಪೃಷತ್ಯಃ ಎಂಬ ಚಿಕ್ಕೆಗಳುಳ್ಳ ಜಿಂಕೆಗಳೂ ಉಷೋದೇವತೆಗೆ ಕೆಂಪುವರ್ಣದ ಗೋವುಗಳೂ ವಾಹನಗಳು.

---

the teacher Sakatayana considered the middle Dawn to be praised with Indra. And in the stanza here 'Good wealth' (ವಾಮಂವಾಮಂ : iv. 30. 24) Bhaga, Pusan, and Aryaman are praised :

139. Pusan is (here) called 'ಕರೂಳತೀ': according to a Vedic text (ಶ್ರುತಿ) he is 'toothless'. Asvalayana says that (the stanza) 'Of us most excellent' (ಅಸ್ಮಾಕಮುತ್ತಮಂ : iv. 31. 15) praises the Sun

### 29. The steeds of the various gods.

140. The horses of Indra are Bays (ಹರೀ), the horses of Agni are Ruddy ones (ರೋಹಿತ್) ; those of Surya are Fallows (ಹರಿತಃ), and those of Vayu Teams (ನಿಯುತ್).

141. The Ass is associated (ಸಹಿತ) with the Aswins, and Goats are **the steeds** (ವಾಜಿನ್) of Pusan, but Dappled mares (ಪೃಷತಯಃ) are the horses of **the Maruts,** while ruddy (ಅರುಣೀ) Cows are those of the Dawns.

ಸವಿತುರ್ವಾಜಿನಃ ಶ್ಯಾವಾ ವಿಶ್ವರೂಪಾ ಬೃಹಸ್ಪತೇಃ ।
ಸಹೈತೇ ದೇವತಾಭಿಸ್ತು ಸ್ತೂಯಂತೇಽಪ್ಯಲ್ಪಶೋಽನ್ಯಥಾ ॥ ೧೪೨ ॥

ಆಯುಧಂ ವಾಹನಂ ಚಾಪಿ ಸ್ತುತೌ ಯಸ್ಯೇಹ ದೃಶ್ಯತೇ ।
ತಮೇವ ತು ಸ್ತುತಂ ವಿದ್ಯಾತ್ತಸ್ಯಾತ್ಮಾ ಬಹುಧಾ ಹಿ ಸಃ ॥ ೧೪೩ ॥

ಕನೀನಕಾ ಸೂಕ್ತಶೇಷೋ ಹರ್ಯೋಃ ಸ್ತುತಿರಿಹೋಚ್ಯತೇ ।
ಚತ್ವಾರ್ಯತಶ್ಚ ವಿಜ್ಞೇಯಾನ್ಯಪ್ರಗೃಹ್ಯಾಣಿ ವಿದ್ರಧೇ ॥ ೧೪೪ ॥
ಅಪ್ರಗೃಹ್ಯಾಣಿ ವಿದ್ರಧೇ ॥

ಇತಿ ಬೃಹದ್ದೇವತಾಯಾಂ ಚತುರ್ಥೋಽಧ್ಯಾಯಃ

142. ಸವಿತೃದೇವತೆಗೆ ಶ್ಯಾವಾಃ ಎಂಬ ಪಾಸಲು ಕೆಂಪುಬಣ್ಣದ ಕುದುರೆಗಳೂ, ಬೃಹಸ್ಪತಿಗೆ ನಾನಾರೂಪಗಳ ಅಶ್ವಗಳೂ ವಾಹನಗಳು ; ಆದರೆ ಕೊನೆಯ ಎರಡು ದೇವತೆಗಳ ಎಂದರೆ ಸವಿತೃ ಮತ್ತು ಬೃಹಸ್ಪತಿಯ ವಿಷಯದಲ್ಲಿ ಅವರ ಸ್ತುತಿಗಳಲ್ಲಿ ವಾಹನದ ಪ್ರಸ್ತಾಪವಿರುವುದಿಲ್ಲ. ಇದ್ದರೂ ಅತ್ಯಲ್ಪವಾಗಿರುವುದು.

143. ಯಾವ ಮಂತ್ರಗಳಲ್ಲಿ ಮೇಲೆ ಹೇಳಿದ ಯಾವುದಾದರೂ ಆಯುಧ ಅಥವಾ ವಾಹನಗಳ ವರ್ಣನೆ ಇದ್ದಲ್ಲಿ ಆ ಮಂತ್ರಗಳಲ್ಲಿ ಆ ದೇವತೆಯನ್ನು ಸ್ತುತಿಸಲಾಗಿದೆಯೆಂದು ತಿಳಿಯಬೇಕು. ಏಕೆಂದರೆ ಆ ದೇವತೆಯು ತನ್ನ ಆಯುಧ ಅಥವಾ ವಾಹನದ ಸ್ವರೂಪವೇ ಆಗಿರುವುದು.

144. ೩೨ ನೇ ಸೂಕ್ತದ **ಕನೀನಕೇವ** ಎಂದು ಮೊದಲಾಗುವ ಕೊನೆಯ ಎರಡು ಋಕ್ಕುಗಳಲ್ಲಿ(೨೩-೨೪) ಇಂದ್ರನ ಎರಡು ಕುದುರೆಗಳನ್ನು ಸ್ತುತಿಸಲಾಗಿದೆ. ಈ ಋಕ್ಕುಗಳಲ್ಲಿರುವ **ವಿದ್ರಧೇ ನವೇ ದ್ರುಪದೇ ಅರ್ಭಕೇ** ಎಂಬ ನಾಲ್ಕು ಶಬ್ದಗಳೂ ಒಂದು ನಿರ್ದಿಷ್ಟವಾದ (ವೈಶಿಷ್ಟ್ಯಯುಕ್ತವಾದ) ಅರ್ಥವನ್ನೂ ಹೊಂದಿವೆಯೆಂದು ತಿಳಿಯಬೇಕು.

ಇಲ್ಲಿಗೆ ನಾಲ್ಕನೆಯ ಅಧ್ಯಾಯವು ಮುಗಿದುದು.

---

142. The steeds of Savitr are Duns (ಶ್ಯಾವಾಃ); the Mnltiform (ವಿಶ್ವರೂಪಾಃ) is (the steed) of Brhaspati. Now these two are not praised with (their) deities, otherwise but seldom.

143. (The god) whose weapon and vehicle appear here in a laudation should be recognized as the one praised ; for that (god) is in many ways the soul (ಆತ್ಮಾ) of it.

144. 'Two small girls' (ಕನೀನಕೇವ : iv. 32-23, 24), the remainder of the hymn, is called a praise of the two Bays (of Indra). And the four (words) after it, (viz.) ವಿದ್ರಧೇ (and the rest) are to be recognized as liable to phonetic combination (ಅಪ್ರಗ್ರಾಹ್ಯಾಣಿ).

Thus ends Fourth Chapter.



# ಅಥ ಬೃಹದ್ದೇವತಾಯಾಂ ಪಂಚಮೋಽಧ್ಯಾಯಃ

ಪ್ರೇತಿ ಪಂಚಾರ್ಭವಂ ತ್ರೀಣಿ ದಾಧಿಕ್ರಾಣಿ ಪರಾಣ್ಯತಃ ।
ಋಗ್ದ್ಯಾವಾಪೃಥಿವ್ಯೌ ಸ್ತೌತಿ ದಾಧಿಕ್ರಾಣಾಂ ಮುಖೇ ತು ಯಾ ॥ ೧ ॥
ಪರೋಕ್ಷೈರವ್ಯತೋ ವಾಗ್ಭಿರ್ನಾಮಭಿಶ್ಚ ಸ್ತುತಾಸ್ತ್ರಯಃ ।
ಅಗ್ನಿರ್ವಾಯುಶ್ಚ ಸೂರ್ಯಶ್ಚ ಹಂಸಃ ಶುಚಿಷದಿತ್ಯೃಚಿ ॥ ೨ ॥
ನಿಯುಕ್ತಾ ಸೂರ್ಯದೇವತ್ಯಾ ಹಂಸ ಇತ್ಯೈತರೇಯಕೇ ।
ದ್ವೇ ತ್ವೈಂದ್ರಾವರುಣೇ ಸೂಕ್ತೇ ತತಸ್ತ್ರೀಣ್ಯಾಶ್ವಿನಾನಿ ಕಃ ॥ ೩ ॥

## ಐದನೆಯ ಅಧ್ಯಾಯವು.

### ೩೩-೫೨ ನೇ ಸೂಕ್ತದ ದೇವತೆಗಳು

1. **ಪ್ರ ಋಭುಭ್ಯಃ** ಎಂದು ಮೊದಲಾಗುವ ಐದು ಸೂಕ್ತಗಳಲ್ಲಿ (೩೩-೩೭) ಋಭುದೇವತೆಗಳನ್ನು ಸ್ತುತಿಸಲಾಗಿದೆ. ಅಲ್ಲಿಂದ ಮುಂದಿನ ಮೂರು ಸೂಕ್ತಗಳಲ್ಲಿ (೩೮-೪೦) **ದಧಿಕ್ರಾ** ಎಂಬ ದೇವತೆಯನ್ನು ಸ್ತುತಿಸಲಾಗಿದೆ. ಆದರೆ ೩೮ ನೇ ಸೂಕ್ತದ **ಉತೋ ಹಿ ವಾಂ** ಎಂಬ ಮೊದಲನೆಯ ಋಕ್ಕಿನಲ್ಲಿ **ದಧಿಕ್ರಾ** ದೇವತೆಯ ಜತೆಯಲ್ಲಿ ದ್ಯಾವಾಪೃಥಿವಿಗಳನ್ನೂ ಸ್ತುತಿಸಲಾಗಿರುವುದು.

2. ಆದರೆ ೪೦ ನೇ ಸೂಕ್ತದ **ಹಂಸಃ ಶುಚಿಷತ್** ಎಂಬ ೫ ನೇ ಋಕ್ಕಿನಲ್ಲಿ ಅಗ್ನಿ, ವಾಯು, ಸೂರ್ಯ ಎಂಬ ದೇವತೆಗಳನ್ನು ಪರೋಕ್ಷವಾಗಿ ಸ್ತುತಿಸಲಾಗಿರುವುದು.

3. ಮೇಲೆ ಹೇಳಿದ **ಹಂಸಃ ಶುಚಿಷತ್** ಎಂಬ ಋಕ್ಕನ್ನು ಹಂಸವತೀ ಋಕ್ಕೆಂದೂ ಇದಕ್ಕೆ ಸೂರ್ಯನು ದೇವತೆಯೆಂದೂ ಐತರೇಯಬ್ರಾಹ್ಮಣದಲ್ಲಿ ಹೇಳಲಾಗಿದೆ. ಮುಂದಿನ ಎರಡು ಸೂಕ್ತಗಳಲ್ಲಿ (೪೧-೪೨) ಇಂದ್ರಾವರುಣರನ್ನೂ ಅದರ ಮುಂದಿನ ಎಂದರೆ **ಕ ಉ ಶ್ರವತ್** (೪೩ ನೇ ಸೂಕ್ತ) ಎಂದು ಮೊದಲಾಗುವ ಮೂರು ಸೂಕ್ತಗಳಲ್ಲಿ (೪೩-೪೫) ಅಶ್ವಿನೀದೇವತೆಗಳನ್ನೂ ಸ್ತುತಿಸಲಾಗಿದೆ.

### 1. Deities of RV. iv. 33-52.

1 (With) 'Forth' (ಪ್ರ: iv. 33. 1) begins a group of five hymns addressed to the Rbhus (iv. 33-37). Following that are three (hymns) addressed to Dadhikra (iv. 38-40): but the stanza which is at the head of the hymns addressed to Dadhikra (iv. 38. 1) praises Heaven and Earth.

2. Then with indirect (ಪರೋಕ್ಷ) expressions (ವಾಕ್) and names, the three Agni, Vayu, Surya, are praised in the stanza, 'The Swan dwelling in light' (ಹಂಸಃ ಶುಚಿಷತ್ : iv. 40 5).

3. In the Aitareya (Brahmana) 'The Swan' (ಹಂಸಃ : iv. 40.5) is prescribed as having Surya for its deity. Now (there follow) two hymns addressed to Indra-Varuna (iv. 41.42), then three (iv. 43-45) addressed to the Asvins (beginning) 'Who ?', (ಕಃ : iv. 43. 1).

**ಅಯಂ ವಾಯೋ ವಿಹೀತ್ಯೇಷು ವಾಯವ್ಯಾಃ ಸಪ್ತ ಕೀರ್ತಿತಾಃ ।**
**ನವ ಚೈವೇಂದ್ರವಾಯವ್ಯಾ ಇಂದ್ರಸ್ತ್ರಿಸ್ರಃ ಶತೇನ ಷಟ್** ॥ ೪ ॥

**ಇದಂ ಕಥಿತದೇವತ್ಯಂ ಯಸ್ತಸ್ತಂಭೋತ್ತಮೋ ದ್ವ್ಯೃಚಃ ।**
**ಸ್ತುತಿರಿಂದ್ರಾಬೃಹಸ್ಪತ್ಯೋರಷ್ಟಾವೇತಾ ಋಚಃ ಸ್ಮೃತಾಃ** ॥ ೫ ॥

**ಸೂಕ್ತಂ ತು ತದ್ಬಾರ್ಹಸ್ಪತ್ಯಮಿದಮಿತ್ಯುಷಸೇ ಪರೇ ।**
**ಪುರೋಧಾತುಃ ಕರ್ಮಶಂಸಾ ಸ ಇದ್ರಾಜೋಚ್ಯತೇ ತೃಚೇ** ॥ ೬ ॥

4. **ಅಗ್ರಂ ಪಿಬಾ** ಎಂಬ ೪೬ನೇ ಸೂಕ್ತದ ೧ನೇ ಋಕ್ಕಿನಲ್ಲಿಯೂ ೪೭ ನೇ ಸೂಕ್ತದ **ವಾಯೋ ಶುಕ್ರೋ** ಎಂಬ ಋಕ್ಕಿನಲ್ಲಿಯೂ **ವಿಹಿ** ಎಂಬ ೪೮ ನೇ ಸೂಕ್ತದ ೫ ಋಕ್ಕುಗಳಲ್ಲಿಯೂ ಒಟ್ಟು ಒಟ್ಟು ೭ ಋಕ್ಕುಗಳಲ್ಲಿ ವಾಯುವು ಸ್ತುತನಾಗಿರುವನು. ಉಳಿದ ೯ ಋಕ್ಕುಗಳಲ್ಲಿ ಎಂದರೆ ೪೬ ನೇ ಸೂಕ್ತದ ೬ ಋಕ್ಕುಗಳಲ್ಲಿಯೂ (೨-೭) ೪೭ ನೇ ಸೂಕ್ತದ ೩ ಋಕ್ಕುಗಳಲ್ಲಿಯೂ (೨-೪) ಇಂದ್ರವಾಯುಗಳು ಸ್ತುತರಾಗಿರುವರು.

5. **ಇದಂ** ಎಂಬ ೪೯ ನೇ ಸೂಕ್ತದ ೬ ಋಕ್ಕುಗಳಲ್ಲಿಯೂ **ಯಸ್ತಸ್ತಂಭ** ಎಂಬ ೫೦ ನೇ ಸೂಕ್ತದ ಕೊನೆಯ ಎರಡು ಋಕ್ಕುಗಳಲ್ಲಿಯೂ (೧೦-೧೧) ಒಟ್ಟು ೮ ಋಕ್ಕುಗಳಲ್ಲಿ ಇಂದ್ರಾಬೃಹಸ್ಪತಿಗಳು ಸ್ತುತರಾಗಿರುವರು.

6. ಆ ಸೂಕ್ತವು (೫೦ ನೇ ಸೂಕ್ತವು) ಬೃಹಸ್ಪತಿದೇವತಾಕವೆಂದು ಹೇಳಲ್ಪಡುವುದು. ಮುಂದಿನ ಎರಡು ಸೂಕ್ತಗಳಲ್ಲಿ (೫೧-೫೨) ಉಷೋದೇವತೆಯ ಸ್ತುತಿ ಇರುವುದು. ಆದರೆ ೫೦ ನೇ ಸೂಕ್ತದ **ಸ ಇದ್ರಾಜಾ** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿ (೭-೯) ಪುರೋಧಾತುವಿನ ಕರ್ಮಪ್ರಶಂಸೆಯು ಉಕ್ತವಾಗಿರುವುದು.

---

4. In the (hymn) 'The beast' (ಅಗ್ರಂ : iv. 46. 1) · O Vayu' (ವಾಯೋ : iv. 47. 1), 'Enjoy' (ವಿಹಿ : iv. 48. 1-5) seven stanzas are declared to be addressed to Vayu; and nine are addressed to Indra-Vayu, (viz.) 'Indra' (ಇಂದ್ರಃ : iv. 47. 2-4) being three, (and) 'With a hundred' (ಶತೇನ : iv. 46. 2-7) being six.

5. 'This' (ಇದಂ : iv. 49) addressed to the deities mentioned in it, (and) the last couplet (10, 11) of 'He who has propped' (ಯಸ್ತಸ್ತಂಭ : iv. 50)—these eight stanzas are traditionally held to be (in) praise of Indra-Brahspati.

6. That hymn, however, is addressed to Brahspati; the two next (beginning) 'That' (ಇದಂ : iv. 51-52) are addressed to Usas. In the triplet 'Surely that king' (ಸ ಇದ್ರಾಜಾ : iv. 50. 7-9) laudation of the function of the appointer of priests (ಪುರೋಧಾತುಃ) is expressed.

ತತ್ಸಾವಿತ್ರೇ ದ್ವೇ ತು ಕೋ ವೈಶ್ವದೇವಂ ಮಹೀ ದ್ಯಾವಾಪೃಥಿವೀಯಂ ಪರಂ ತು ಯತ್ |
ಕ್ಷೇತ್ರಸ್ಯೇತಿ ತಿಸ್ರಸ್ತು ಕ್ಷೈತ್ರಪತ್ಯಾಃ ಶುನಂ ವಾಹಾಃ ಶುನದೇವೀ ತ್ವೃಗುತ್ತರಾ ॥ ೭ ॥
ವಾಯುಃ ಶುನಃ ಸೂರ್ಯ ಇವಾತ್ರ ಸೀರಃ ಶುನಾಸೀರೌ ವಾಯುಸೂರ್ಯೌ ವದಂತಿ |
ಶುನಾಸೀರಂ ಯಾಸ್ಕ ಇಂದ್ರಂ ತು ಮೇನೇ ಸೂರ್ಯೇಂದ್ರೌ ತೌ ಮನ್ಯತೇ ಶಾಕಪೂಣಿಃ ॥
ಶುನಾಸೀರೌ ಪಂಚಮ್ಯಾಂ ತು ಸ್ತುತೌ ತೌ ದ್ವೇ ತು ಸೀತಾಯೈ ಷಷ್ಠೀ ಸಪ್ತಮಿ ಚ |
ಶುನಂ ನಃ ಫಾಲಾಃ ಕೃಷಿಂ ಸ್ತೌತಿ ಪಾದಃ ಶುನಂ ಕೀನಾಶಾಃ ಕೃಷಿಜೀವಾನ್ಸನುಷ್ಯಾನ್ ॥

### ೫೩-೫೮ ನೇ ಸೂಕ್ತದ ದೇವತೆಗಳು

7. **ತದ್ದೇವಸ್ಯ** ಎಂದು ಮೊದಲಾಗುವ ಎರಡು ಸೂಕ್ತಗಳಿಗೆ (೫೩-೫೪) ಸವಿತೃವು ದೇವತೆಯು; **ಕೋ ವಸ್ತ್ರಾತಾ** ಎಂಬ ೫೫ ನೇ ಸೂಕ್ತವು ವೈಶ್ವದೇವತಾಕವು; **ಮಹೀ ದ್ಯಾವಾಪೃಥಿವೀ** ಎಂಬ ೫೬ ನೇ ಸೂಕ್ತಕ್ಕೆ ದ್ಯಾವಾಪೃಥಿವಿಗಳು ದೇವತೆಯು; **ಕ್ಷೇತ್ರಸ್ಯ ಪತಿನಾ** ಎಂಬ ೫೭ನೇ ಸೂಕ್ತದಲ್ಲಿ ಮೊದಲ ಮೂರು ಋಕ್ಕುಗಳಿಗೆ (೧-೩) ಕ್ಷೇತ್ರಪತಿಯು ದೇವತೆಯು; **ಶುನಂ ವಾಹಾಃ** ಎಂಬ ೪ ನೇ ಋಕ್ಕಿಗೆ ಶುನದೇವಿಯು ದೇವತೆಯು.

8. ಈ ಸೂಕ್ತದಲ್ಲಿರುವ **ಶುನ** ಶಬ್ದಕ್ಕೆ ವಾಯುವೆಂದೂ, **ಸೀರಾ** ಎಂದರೆ ಸೂರ್ಯನೆಂದೂ . ಆದ್ದರಿಂದ **ಶುನಾಸೀರಾ** ಎಂದರೆ ವಾಯುಸೂರ್ಯರೆಂದೂ ಹೇಳುವರು. ಆದರೆ ಯಾಸ್ಕರು **ಶುನಾಸೀರಾ** ಎಂದರೆ ಇಂದ್ರನೆಂದೂ ಶಾಕಪೂಣಿಯು **ಶುನಾಸೀರಾ** ಎಂದರೆ ಸೂರ್ಯ ಮತ್ತು ಇಂದ್ರರೆಂದೂ ಅಭಿಪ್ರಾಯಪಡುವರು.

9. ಈ **ಶುನಾ** ಮತ್ತು **ಸೀರಾ** ಎಂಬ ದೇವತೆಗಳು ಈ ಸೂಕ್ತದ ೫ ನೇ ಋಕ್ಕಿನಲ್ಲಿ ಸ್ತುತರಾಗಿರುವರು ೬-೭ ನೇ ಋಕ್ಕುಗಳಲ್ಲಿ **ಸೀತಾ** ಎಂಬ ದೇವತೆಯನ್ನು ಸ್ತುತಿಸಲಾಗಿದೆ. ೮ ನೇ ಋಕ್ಕಿನ **ಶುನಂ ನಃ ಫಾಲಾ** ಎಂಬ ಮೊದಲನೆಯ ಪಾದದಲ್ಲಿ ವ್ಯವಸಾಯವನ್ನೂ (ಕೃಷಿ), **ಶುನಂ ಕೀ ನಾಶಾ** ಎಂಬ ಎರಡನೆಯ ಪಾದದಲ್ಲಿ ವ್ಯವಸಾಯದಿಂದ ಜೀವಿಸುವವರನ್ನೂ ಪ್ರಶಂಸಿಸಲಾಗಿದೆ.

### Deities of RV. iv. 53–58.

7. There are two hymns addressed to savitr (beginning) 'That. (ತತ್: iv. 53, 54); 'Who?' (ಕಃ: iv. 55) is addressed to the All-gods, while that which follows (viz.) 'The mighty' (ಮಹೀ: iv. 56) is addressed to Heaven and Earth. But (in the hymn) 'of the field' (ಕ್ಷೇತ್ರಸ್ಯ: iv. 57) the (first) three (stanzas) are addressed to the Lord of the Field, while the next stanza, 'Prosperously the steers' (ಶುನಂ ವಾಹಾಃ: iv. 57. 4), has Suna as its god.

8. Suna here is Vayu, Sira is Surya: (for) they say that Suna and Sira are Vayu and Surya. Yaksa, however, considered Sunasira to be Indra, (and) Sakapuni thinks those two (ಶುನ and ಸೀರ) to be Surya and Indra.

9. Now these two, Suna and Sira, are praised in the fifth (stanza: iv. 57. 5), while there are two (6, 7), the sixth and the seventh (stanzas), to Sita. The verse (ಪಾದ) 'Prosperously our shares' (ಶುನಂ ನಃ ಫಾಲಾಃ: iv. 57.8) praises agricultare; 'Prosperously the ploughers' (ಶುನಂ ಕೀನಾಶಾಃ: iv. 57. 8) men who live by agriculture.

**ಸ್ತುತಃ ಪಾದೇಽತ್ರ ಪರ್ಜನ್ಯಸ್ತೃತೀಯೇ ಅಂತ್ಯಂ ತ್ವೃಷಿರ್ಧನಕಾಮೋ ಜಗಾದ ।**
**ಕೃಷಿಂ ವಾ ಸ್ತೌತಿ ಸರ್ವಂ ಹಿ ಸೂಕ್ತಂ ಸಮುದ್ರಾದಿತ್ಯಗ್ನೇರ್ಮಧ್ಯಮಸ್ಯ ॥ ೧೦ ॥**
**ಆದಿತ್ಯಂ ವಾ ಬ್ರಾಹ್ಮಣೋಕ್ತಂ ಪ್ರದಿಷ್ಟಮಾಗ್ನೇಯಂ ವಾಪ್ಯಾಜ್ಯಸೂಕ್ತಂ ಹಿ ದೃಷ್ಟಂ ।**
**ಅಪಾಂ ಸ್ತುತಿಂ ವಾ ಯದಿ ವಾ ಘೃತಸ್ತುತಿಂ ಗವ್ಯಮೇಕೇ ಸೌರ್ಯಮೇತದ್ವದಂತಿ ॥೧೧॥**

**ಇತಿ ಚತುರ್ಥಂ ಮಂಡಲಂ**

10. ಮೇಲಿನ ೮ ನೇ ಋಕ್ಕಿನ **ಶುನಂ ಪರ್ಜನ್ಯಃ** ಎಂಬ ಮೂರನೆಯ ಪಾದದಲ್ಲಿ ಪರ್ಜನ್ಯನನ್ನು ಸ್ತುತಿಸಲಾಗಿದೆ. ಕೊನೆಯ ಪಾದದಲ್ಲಿ ಋಷಿಯು ಧನವನ್ನು ಬಯಸಿದಾನೆ. ಅಥವಾ ಈ ಸೂಕ್ತದಲ್ಲೆಲ್ಲಾ ಕೃಷಿ ಅಥವಾ ವ್ಯವಸಾಯವನ್ನೇ ಸ್ತುತಿಸಲಾಗಿದೆಯೆಂದು ಹೇಳಬಹುದು. **ಸಮುದ್ರಾದೂರ್ಮಿಃ** ಎಂಬ ೫೮ ನೇ ಸೂಕ್ತದಲ್ಲಿ ಮಧ್ಯಮಸ್ಥಾನಾಗ್ನಿಯನ್ನು ಸ್ತುತಿಸಲಾಗಿದೆ.

11. ಬ್ರಾಹ್ಮಣಾದಿ ಗ್ರಂಥಗಳಲ್ಲಿ ಹೇಳಿರುವಂತೆ ಈ ಸೂಕ್ತವು ಸೂರ್ಯ ಅಥವಾ ಅಗ್ನಿದೇವತಾಕವಾಗಿರುವುದು. ಇದಕ್ಕೆ ಆಜ್ಯಸೂಕ್ತವೆಂದೂ ಹೆಸರಿರುವುದು ಮತ್ತು ಈ ಸೂಕ್ತದಲ್ಲಿ ಉದಕಗಳನ್ನೂ (ಆಪಃ) ಘೃತವನ್ನೂ (ಆಜ್ಯ, ತುಪ್ಪ) ಗೋವುಗಳನ್ನೂ ಸೂರ್ಯನನ್ನೂ ಸ್ತುತಿಸಲಾಗಿದೆಯೆಂದೂ ಕೆಲವರು ಹೇಳುವರು.

ಇಲ್ಲಿಗೆ ನಾಲ್ಕನೆಯ ಮಂಡಲವು ಸಮಾಪ್ತವು.

---

10. Parjanya is here praised in the thiid verse (iv. 57. 8) while the seer pronounced the last (ಪಾದ) with a desire of wealth (iv. 57. 8). Or (it may he said) the whole hymn praises agriculture. 'From the ocean' (ಸಮುದ್ರಾತ್: iv. 58) belongs to the Middle Agni.

11. As mentioned in a Brahmana it is indicated as addressed either to the Sun (ಆದಿತ್ಯ) or to Agai ; for it appears as an Ajya hymn ; or some speak of it as (in) praise of Waters or (in) praise of Ghee, (or) as addressed to Cows, (or) to Surya.

**End of 4th Maṇdala.**

---

ಅಥ ಪಂಚಮಂ ಮಂಡಲಂ

ಸ್ವರ್ಭಾನುದೃಷ್ಟಂ ಸೂರ್ಯಸ್ಯ ಅಪಹೃತ್ಯ ತಮೋಽತ್ರಯಃ ।
ಸಪ್ತವಿಂಶತಿಭಿಃ ಸೂಕ್ತೈರಬೋಧೀತ್ಯಗ್ನಿಮಸ್ತುವನ್ ॥ ೧೨ ॥

ತ್ರೈವೃಷ್ಣಸ್ತ್ರಸದಸ್ಯುಶ್ಚ ಅಶ್ವಮೇಧ ಋಣಂಚಯಃ ।
ಸ್ತೂಯಮಾನಾಃ ಪರೀಕ್ಷ್ಯಾಃ ಸ್ಯುರತ್ರಿಸ್ವೇತೇ ಕ್ವಚಿತ್ಕ್ವಚಿತ್ ॥ ೧೩ ॥

ಐಕ್ಷ್ವಾಕುಸ್ತ್ರ್ಯರುಣೋ ರಾಜಾ ತ್ರೈವೃಷ್ಣೋ ರಥಮಾಸ್ಥಿತಃ ।
ಸಂಜಗ್ರಾಹಾಶ್ವರಶ್ಮೀಂಶ್ಚ ವೃಶೋ ಜಾನಃ ಪುರೋಹಿತಃ ॥ ೧೪ ॥

## ಐದನೆಯ ಮಂಡಲವು

### ೧-೨೮ ಸೂಕ್ತಗಳ ದೇವತೆಗಳು ; ತ್ರ್ಯರುಣ ಮತ್ತು ವೃಶಜಾನರ ವೃತ್ತಾಂತವು

12. ಸ್ವರ್ಭಾನುಗೃಹೀತನಾದ ಸೂರ್ಯನನ್ನು (ಸೂರ್ಯಗ್ರಹಣಕಾಲದಲ್ಲಿ ರಾಹುವಿನಿಂದ ಆಕ್ರಮಿಸಲ್ಪಟ್ಟ ಸೂರ್ಯನನ್ನು) ಗ್ರಹಣದಿಂದ ಬಿಡಿಸಿ ಅತ್ರಿಋಷಿಗಳು **ಅಬೋಧ್ಯಗ್ನಿಃ** ಎಂದು ಮೊದಲಾಗುವ ೫ ನೇ ಮಂಡಲದ ಇಪ್ಪತ್ತೇಳು ಸೂಕ್ತಗಳಿಂದ (೧-೨೭) ಅಗ್ನಿಯನ್ನು ಸ್ತುತಿಸಿರುವರು.

13 ಅತ್ರಿಋಷಿಗಳಿಂದ ದೃಷ್ಟವಾದ ಈ ಮಂಡಲದ ಅನೇಕ ಸೂಕ್ತಗಳಲ್ಲಿ ತ್ರೈವೃಷ್ಣ (ತ್ರ್ಯರುಣ), ತ್ರಸದಸ್ಯು, ಅಶ್ವಮೇಧ, ಋಣಂಚಯ ಎಂಬುವರನ್ನು ಸ್ತುತಿಸಿರುವುದು ಕಂಡುಬರುವುದು.

14. ಇಕ್ಷ್ವಾಕುವಂಶದ ತ್ರಿವೃಷ್ಣ ಎಂಬ ರಾಜನ ಮಗನಾದ ತ್ರ್ಯರುಣ ಎಂಬ ರಾಜನು ಒಂದಾನೊಂದು ಕಾಲದಲ್ಲಿ ತನ್ನ ರಥದಲ್ಲಿ ಕುಳಿತು ಸಂಚರಿಸುತ್ತಿದ್ದನು. ಆಗ ಆವನ ಮನೆಯ ಪುರೋಹಿತನಾದ ಜನಋಷಿಯ ಪುತ್ರನಾದ ವೃಶನೆಂಬುವನು ರಥವನ್ನು ನಡೆಸುವ ಸಾರಥಿಯಾಗಿ ಅಶ್ವಗಳ ಲಗಾಮುಗಳನ್ನು ಹಿಡಿದಿದ್ದನು. ಎಂದರೆ ರಥಸಾರಥಿಯಾಗಿ ಅಶ್ವಗಳ ಲಗಾಮುಗಳನ್ನು ಕೈಯ್ಯಲ್ಲಿ ಹಿಡಿದು ರಥವನ್ನು ನಡೆಸುತ್ತಿದ್ದನು.

---

## Mandala V.

### 3. Deities of RV. v. 1-28. Story of Tryaruna and Vrsa Jana.

12. The Atris having dispelled the eclipse of the sun decreed (ದೃಷ್ಟಂ) by Svarbanu, praised Agni with the twsnty seven hymns ‘ He has awoke ’ (ಅಬೋಧಿ : v 1–28).

13. Traivrsna (ತ್ರ್ಯರುಣ), Trasadasyu, Asvamedha, Runanchaya may be observed as objects of praise in various passages in the (hymns of the) Atris.

14. King Tryaruna, son of Trivrsna, of the race of Iksvaku, was riding in the chariet, and his domesic priest, Vrsa, son of Jana, took the horses’ reins.

ಸ ಬ್ರಾಹ್ಮಣಕುಮಾರಸ್ಯ ರಥೋ ಗಚ್ಛಞ್ಛಿರೋಽಚ್ಛಿನತ್ ।
ಏನಸ್ವೀತ್ಯಬ್ರವೀಚ್ಚೈವ ಸ ರಾಜ್ಞೈನಂ ಪುರೋಹಿತಂ ॥ ೧೫ ॥
ಸೋಽಥರ್ವಾಂಗಿರಸಾನ್ಮಂತ್ರಾನ್ ದೃಷ್ಟ್ವಾ ಸಂಜೀವ್ಯ ತಂ ಶಿಶುಂ ।
ಕ್ರೋಧಾತ್ಸಂತ್ಯಜ್ಯ ರಾಜಾನಮನ್ಯದೇಶಂ ಸಮಾಶ್ರಿತಃ ॥ ೧೬ ॥
ಹರೋಽಪ್ಯಗ್ನೇರ್ನನಾಶಾಸ್ಯ ತಸ್ಯಾಪಕ್ರಮಣಾದೃಷೇಃ ।
ಅಗ್ನೌ ಪ್ರಾಸ್ತಾನಿ ಹವ್ಯಾನಿ ನ ಹ್ಯಪಚ್ಯಂತ ಕಾನಿಚಿತ್ ॥ ೧೭ ॥
ತತಃ ಪ್ರವ್ಯಥಿತೋ ರಾಜಾ ಸೋಽಭಿಗಮ್ಯ ಪ್ರಸಾದ್ಯ ತಂ ।
ಆನೀತ್ವಾ ಸ ವೃಶಂ ಜಾನಂ ಪುನರೇವ ಪುರೋದಧೇ ॥ ೧೮ ॥

15. ಪುರೋಹಿತನು ರಥವನ್ನು ನಡೆಸುತ್ತಿರುವಾಗ ಆ ರಥಕ್ಕೆ ಒಬ್ಬ ಬ್ರಾಹ್ಮಣ ಬಾಲಕನು ಸಿಕ್ಕಿ, ಅವನ ತಲೆಯು ಕತ್ತರಿಸಿಹೋಗಿ ಮೃತನಾದನು. ಆಗ ರಾಜನು—ಪುರೋಹಿತನನ್ನು ಕುರಿತು, ಎಲೈ ಪುರೋಹಿತನೇ, ನೀನು ಈ ಬಾಲಕನನ್ನು ಕೊಂದು ಮಹಾಪಾಪವನ್ನು ಮಾಡಿರುವೆ ಎಂದು ಹೇಳಿದನು.

16 ಇದರಿಂದ ಕೋಪಗೊಂಡ ಪುರೋಹಿತನು ತನಗೆ ಬರುತ್ತಿದ್ದ ಅಥರ್ವಾಂಗಿರಸಮಂತ್ರಗಳಿಂದ (ಮೃತ ಸಂಜೀವಿನೀ ವಿದ್ಯ ಅಥವಾ ಮಧುವಿದ್ಯ) ಆ ಮೃತಬಾಲಕನನ್ನು ಬದುಕಿಸಿ ಕೋಪದಿಂದ ರಾಜನನ್ನು ಬಿಟ್ಟು ಬೇರೆ ದೇಶಕ್ಕೆ ಹೊರಟುಹೋದನು.

17. ಪುರೋಹಿತನು ಕೋಪಿಸಿಕೊಂಡು ಹೊರಟುಹೋದದ್ದರಿಂದ ಆ ರಾಜನ (ಯಜ್ಞ) ಗೃಹದಲ್ಲಿದ್ದ ಅಗ್ನಿಯ ಔಷ್ಣ್ಯವು (ಶಾಖವು, ಸುಡುವ ಶಕ್ತಿ) ನಾಶವಾಯಿತು. ಆ ಅಗ್ನಿಯಲ್ಲಿ ಹೋಮದೂಡಿದ ಹವಿಸ್ಸೆಲ್ಲವೂ ಪಕ್ವವಾಗದೆ ಹಾಗೆಯೇ ಇದ್ದವು.

18. ಅದರಿಂದ ಆ ರಾಜನಿಗೆ ಬಹಳ ವ್ಯಥೆಯಾಯಿತು. ಅವನು ತನ್ನ ಪುರೋಹಿತನಿದ್ದ ಸ್ಥಳಕ್ಕೆ ಹೋಗಿ ಅವನನ್ನು ಸಮಾಧಾನಮಾಡಿ ತನ್ನ ಜತೆಯಲ್ಲಿಯೇ ಕರೆದುಕೊಂಡುಬಂದು ಹಿಂದಿನಂತೆ ತನ್ನ ಪುರೋಹಿತನನ್ನಾಗಿ ಮಾಡಿದನು.

---

15. The chariot, as it went along, cut of the head of a Brahman boy, and the king said to his domestic priest, ‘ You are gullty. ,

16. He (ವೃಶ) having had revealed to him Atharvan spells and having (with them) brought the boy back to life, left the king in anger and betook himself to another country.

17. In consequence of the departure of the seer, the heat of his (the king's) fire also disappeared, for none of the oblations cast on the fire were (any longer) cooked.

### 4. Story of Tryaruna (continued).

18. Hence the king distressed, went to Vrsa Jana, propitiated and brought him back, and again made him his domestic priest.

**ಸ ಪ್ರಸನ್ನೋ ವೃಶೋಽನ್ವೈಚ್ಛದ್ಧರಮಗ್ನೇರ್ನೃಪಕ್ಷಯೇ ।**
**ಅವಿಂದತ ಪಿಶಾಚೀಂ ತಾಂ ಜಾಯಾಂ ತಸ್ಯ ಚ ಭೂಪತೇಃ** ॥ ೧೯ ॥

**ನಿಷಣ್ಣಃ ಸ ತಯಾ ಸಾರ್ಧಮಾಸಂದ್ಯಾಂ ಕಶಿಪಾವಪಿ ।**
**ತಾಮುಪಾಮಂತ್ರಯಾಂ ಚಕ್ರೇ ಕಮೇತಂ ತ್ವಮಿತಿ ತ್ವೃಚಾ** ॥ ೨೦ ॥

**ಹರಃ ಕುಮಾರರೂಪೇಣ ಬ್ರುವಂಸ್ತಾಮಭ್ಯಭಾಷತ ।**
**ವಿಜ್ಯೋತಿಷೇತಿ ಚೋಕ್ತಾಯಾಂ ಸಹಸಾಗ್ನಿರುದಜ್ವಲತ್** ॥ ೨೧ ॥

**ಸಹಮಾನಃ ಸಹಾಯಾಂತಂ ಪ್ರಕಾಶಂ ಚ ಪ್ರಕಾಶಯನ್ ।**
**ಪೀಶಾಚೀಮದಹತ್ತಾಂ ಸ ಯತ್ರ ಚೋಪವಿವೇಶ** ಸಾ ॥ ೨೨ ॥

19. ವೃಶನು ಪ್ರಸನ್ನನಾಗಿ ರಾಜನ ಬಳಿಗೆ ಬಂದು ಅಗ್ನಿಯ ಔಷ್ಣ್ಯವು ಏತಕ್ಕೆ ಹೀಗಾಗಿರುವುದೆಂದು ಹುಡುಕಿನೋಡಿದನು. ರಾಜನ ಮನೆಯಲ್ಲಿ ರಾಜನ ಪತ್ನಿಯು ಪಿಶಾಚಿಯಾಗಿರುವುದು ಅವನಿಗೆ ತಿಳಿಯಿತು.

20. ಬಳಿಕ ಆವನು ಅವಳೊಡನೆ ಅರಮನೆಯಲ್ಲಿದ್ದ ಒಂದು ಸೋಫಾದಮೇಲೆ ಕುಳಿತುಕೊಂಡು **ಕಮೇತಂ ತ್ವಂ** ಎಂಬ ಋಕ್ಕಿನಿಂದ (೨ ನೇ ಸೂಕ್ತದ ೨ ನೇ ಋಕ್ಕು) ಅವಳನ್ನು ಪ್ರಶ್ನೆಮಾಡಿದನು.

21. ಆ ವೃಶನು ಕುಮಾರರೂಪದಿಂದ ಅಗ್ನಿಯ ಔಷ್ಣ್ಯನಾಶದ ವಿಚಾರವಾಗಿ ಮೇಲೆ ಹೇಳಿದಂತೆ ಕೇಳಲು ಮತ್ತು **ವಿ ಜ್ಯೋತಿಷಾ** ಎಂಬ (೨ ನೇ ಸೂಕ್ತದ ೯ ನೇ ಋಕ್ಕು) ಋಕ್ಕನ್ನು ಪಠಿಸಲು ಆ ತಕ್ಷಣವೇ ಅಗ್ನಿಯು ಜ್ವಾಜಲ್ಯಮಾನವಾಗಿ ಉರಿಯಲು ಪ್ರಾರಂಭಿಸಿತು.

22. ಆ ಅಗ್ನಿಯು ಯಾರನ್ನೂ ಹತ್ತಿರ ಬರಗೊಡದೆ ಅತಿಪ್ರಕಾಶವಾಗಿ ಬೆಳಗುತ್ತಾ ಆ ರಾಜಪತ್ನಿಯು ಕುಳಿತಿದ್ದ ಸ್ಥಳದಲ್ಲಿದ್ದ ಪಿಶಾಚಿಯನ್ನು ಸುಟ್ಟು ಭಸ್ಮಮಾಡಿತು.

19. Vrsa being propitiated sought for the heat of the fire in the king's house, and he found a Pisachi (ಪಿಶಾಚಿ) as a wife of the king.

20. Having seated himself with her upon the cushion on a stool, he addressed her with the stanza, 'Whom do you here ?' (ಕಮೇತಂ ತ್ವಂ : v. 2. 2).

21. Speaking of the heat (ಹರಃ) in the form of a boy he addressed her (thus). And when he had uttered the (stanza) (Far with light' (ವಿಜ್ಯೋತಿಷಾ : v. 2. 9) the fire suddenly flamed up,

22. repelling (ಸಹಮಾನ) him who approached and illumintinting. what was (already) bright ;

and it burned the Pisachi where she sat.

ಏಷ ಏವ ಪರಾಮೃಷ್ಟೋ ಭಾಲ್ಲವಿಬ್ರಾಹ್ಮಣೇ ದ್ವ್ಯೃಚಃ ।
ನಿದಾನಸಂಜ್ಞಕೇ ಗ್ರಂಥೇ ಛಂದೋಗಾನಾಮಿತಿ ಶ್ರುತಿಃ ॥ ೨೩ ॥
ಭವೇದೇವ ಪರಾಮರ್ಶಃ ಸೂಕ್ತಸ್ಯಾಸ್ಯ ವ್ಯಪೇಕ್ಷಯಾ ।
ಭವಂತಿ ಬಾಹ್ಯಾ ಮಂತ್ರಾ ಹಿ ವಿಧಿದೃಷ್ಟೇನ ಚೋದಿತಾಃ ॥ ೨೪ ॥
ದೃಶ್ಯಂತೇ ಬ್ರಾಹ್ಮಣೇ ಮಂತ್ರಾ ಏಕದೇಶೇ ಪ್ರದರ್ಶಿತಾಃ ।
ಜಾಮದಗ್ನ್ಯಸ್ತಥೈವಾಪ್ರ್ಯ ಸ್ತೋಕೀಯಾಶ್ಚೈತರೇಯಕೇ ॥ ೨೫ ॥
ಆಪ್ರಿಯಃ ಸುಸಮಿದ್ಧಾಯ ಪಂಚಮಂ ಸೂಕ್ತಮತ್ರ ತು ।

**ಈ ಋಕ್ಕುಗಳ (೨ ನೇ ಸೂಕ್ತದ ೨ ಮತ್ತು ೯ ನೇ ಋಕ್ಕುಗಳ) ವಿಷಯದಲ್ಲಿ ಇತರ ಗ್ರಂಥಗಳ ಪ್ರಮಾಣವು ಮತ್ತು ೨೯-೪೦ ಸೂಕ್ತಗಳ ದೇವತೆಗಳು**

23. ಈ ಎರಡು ಋಕ್ಕುಗಳಲ್ಲಿ ಹೇಳಿರುವ ವಿಷಯವು ಭಾಲ್ಲವೀಯಬ್ರಾಹ್ಮಣದಲ್ಲಿಯೂ, ಸಾಮವೇದಿಗಳ ನಿದಾನವೆಂಬ ಗ್ರಂಥದಲ್ಲಿಯೂ ವರ್ಣಿಸಲಾಗಿದೆ.

24. ಪ್ರಾಯಶಃ ಈ ಎರಡು ಋಕ್ಕುಗಳಲ್ಲಿ ಸೂಚಿಸಿರುವ ವಿಷಯಗಳನ್ನು ಅನುಸರಿಸಿಯೇ ಮೇಲೆ ಹೇಳಿದ ಗ್ರಂಥಗಳಲ್ಲಿ ಇದರ ವರ್ಣನೆ ಇರುವುದು. ಈ ಮಂತ್ರಗಳು ನೋಡುವುದಕ್ಕೆ ಈರೀತಿ ಇದ್ದರೂ ಅದರಲ್ಲಿರುವ ವಿಷಯಗಳು ವಿಧಿಪ್ರೇರಿತವಾದವು ಎಂದು ತಿಳಿಯಬೇಕು.

25. ವೇದದಲ್ಲಿ (ಋಗ್ವೇದದಲ್ಲಿ) ಎಲ್ಲಿಯಾದರೂ ಒಂದುಕಡೆ ಇರುವ ಮಂತ್ರಗಳ ವಿಷಯವು ಅನೇಕ ಬ್ರಾಹ್ಮಣಗ್ರಂಥಗಳಲ್ಲಿ ವರ್ಣಿಸಿರುವುದು ಕಂಡುಬರುವುದು. ಅದರಂತೆ ಜಮದಗ್ನಿಋಷಿದೃಷ್ಟವಾದ ಆಪ್ರೀಸೂಕ್ತಗಳನ್ನೂ ಆಜ್ಯಸ್ತೋಕೀಯಮಂತ್ರಗಳನ್ನೂ ಐತರೇಯಬ್ರಾಹ್ಮಣದಲ್ಲಿ ವಿಮರ್ಶಿಸಿರುವುದು ಕಂಡುಬರುವುದು.

26. ಈ ಮಂಡಲದ ೫ ನೇ ಸೂಕ್ತವು **ಸುಸಮಿದ್ಧಾಯ** ಎಂದು ಪ್ರಾರಂಭವಾಗುವ ಆಪ್ರೀಸೂಕ್ತವಾಗಿದು

**5. Reference to RV. v. 2-2, 9 in other works. Deities of RV. v. 29-40.**

23. This couplet is mentioned (ಪರಾಮೃಷ್ಟ) in the Brahmana of the Bhallavins :

such in the Vedic passage (ಶ್ರುತಿ) (quoted) in the work entiled Nidana of the Samavedins (ಛಂದೋಗ).

24. The mention (of them is probably (ಭವೇದೇವ) wtth reference to this hymn (as a whole) : for exoteric (ಬಾಹ್ಯ) formulas are to be found enjoined by the requirements (ದೃಷ್ಟ) of a ceremonial rule (ವಿಧಿ)

25. Formulas (thus) appear in a Brahmana pointed out in a particular passage (ಏಕದೇಶ) : so the Apri stanzas of Jamadagni and the stanzas relating to the drops of ghee (ಸ್ತೋಕೀಯ) in the Aitareya.

26. Now the fifth hymn here is (made up of) the Apri stanzas 'To the well-kindled' (ಸುಸಮಿದ್ಧಾಯ : v. 5-1). The stanza (Thereon ' (ಏದು

ಏದಮ್ಯೃಗ್ವೈಶ್ವದೇವೀ ವಾ ಅಂತ್ಯಾ ಚೈಂದ್ರಾಗ್ನ್ಯುಪೋತ್ತಮೇ || ೨೬ ||
ಐಂದ್ರಾಣಿ ದ್ವಾದಶ ತ್ರೀತಿ ಉಶನಾ ತ್ವತ್ರ ಸಂಸ್ತುತಃ |
ಉಶನೇತಿ ತು ಪಾದೇನ ಸಂ ಹ ಯದ್ವಾಮನೇನ ಚ || ೨೭ ||
ಇಂದ್ರಾಕುತ್ಸೇತಿ ಚೈತಸ್ಯಾಂ ಕುತ್ಸೇನೇಂದ್ರಃಸ್ತುತಃ ಸಹ
ಯತ್ವಾ ಸೂರ್ಯೇತಿ ಚಾತ್ರೀಣಾಂ ಪಂಚರ್ಚೇ ಕರ್ಮ ಕೀರ್ತ್ಯತೇ || ೨೮ ||
ಅನಸ್ವಂತೇತಿ ಸೂಕ್ತೇಽಸ್ಮಿನ್ನಾಗ್ನೇಯೇಽತ್ರಿರೃಷಿಃ ಸ್ವಯಂ |
ದಾನತುಷ್ಟಃ ಶಶಂಸೈತಾನ್ರಾಜರ್ಷೀನಿತಿ ಕೇಚನ || ೨೯ ||

ವುದು. ೨೬ ನೇ ಸೂಕ್ತದ **ಏದಂ ಮರುತಃ** ಎಂಬ ಋಕ್ಕಿನಲ್ಲಿ (೯) ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ. ಹಾಗೆಯೇ ೨೭ ನೇ ಸೂಕ್ತದ ೬ ನೇ ಋಕ್ಕಿನಲ್ಲಿ ಇಂದ್ರಾಗ್ನಿಗಳನ್ನು ಸ್ತುತಿಸಲಾಗಿದೆ.

27. **ತ್ರ್ಯರ್ಯಮಾ** ಎಂಬ ಮೊದಲಾಗುವ ಮುಂದಿನ ೧೨ ಸೂಕ್ತಗಳಲ್ಲಿ ಇಂದ್ರನನ್ನು ಸ್ತುತಿಸಲಾಗಿದೆ. ಆದರೆ ೨೯ ನೇ ಸೂಕ್ತದ **ಉಶನಾ ಯತ್** ಎಂಬ ಋಕ್ಕಿನ ಮೊದಲನೆಯ ಪಾದದಲ್ಲಿಯೂ ೩೧ ನೇ ಸೂಕ್ತದ ೮ ನೇ **ಸಂ ಹ ಯತ್** ಎಂಬ ನಾಲ್ಕನೆಯ ಪಾದದಲ್ಲಿಯೂ **ಉಶನಾಃ** ಎಂಬ ಋಷಿಯನ್ನು ಸ್ತುತಿಸಲಾಗಿದೆ.

28. ೩೧ ನೇ ಸೂಕ್ತದ **ಇಂದ್ರಾಕುತ್ಸಾ** ಎಂಬ ೯ ನೇ ಋಕ್ಕಿನಲ್ಲಿ ಕುತ್ಸನೊಡನೆ ಇಂದ್ರನು ಸ್ತುತನಾಗಿರುವನು. ೪೦ ನೇ ಸೂಕ್ತದ **ಯತ್ವಾ ಸೂರ್ಯ** ಎಂದು ಮೊದಲಾಗುವ ೫ ಋಕ್ಕುಗಳಲ್ಲಿ (೫-೯) ಅತ್ರಿಋಷಿಗಳು ಮಾಡಿದ ಕರ್ಮದ ಪ್ರಶಂಸೆ ಇದೆ.

29. **ಅನಸ್ವಂತೆ**ವೆಂದು ಮೊದಲಾಗುವ ೨೭ ನೇ ಅಗ್ನಿದೇವತಾಕವಾದ ಸೂಕ್ತದಲ್ಲಿ ತ್ರ್ಯರುಣ ಮೊದಲಾದ ರಾಜರ್ಷಿಗಳತ್ತ ದಾನದಿಂದ ಸಂತುಷ್ಟನಾದ ಅತ್ರಿಋಷಿಯು ಈ ರಾಜರನ್ನು ಸ್ತುತಿಸಿರುವನೆಂದು ಕೆಲವರ ಅಭಿಪ್ರಾಯವು.

v. 26. 9) is optionally (ವಾ) addressed to the All-gods, and the last (stanza) in the last hymn but one (v. 27-6) is addressed to Indra-Agni.

27. There are twelve hymns addressed to Indra (beginning) ' Three ' (ತ್ರಿ : v. 29. 40) ; but here Usana is praised with the verse (ಪಾದ) ' Usana ' (ಉಶನಾ : v. 29. 9) and also with that (which begins) ' when together to you two ' (ಸಂ ಹ ಯದ್ವಾಂ : v. 31. 8).

## 6. Atri's praise of gifts.

28. And in the (stanza) ' O Indra and Kutsa (ಇಂದ್ರಾಕುತ್ಸಾ : 5. 31. 9) Indra is praised with Kutsa ; and in the five stanzas ' When you, ' O Surya (ಯತ್ವಾ ಸೂರ್ಯ : v. 40. 5-9) the fact of the Atris is celebrated.

29. In the (hymn) addressed to Agni, 'With a wagon'(ಅನಸ್ವಂತ: v. 27) the seer Atri himself, pleased with his gifts, proclaimed these (kings) as royal seers, so say some (authorities).

ಆಶೀರಧ್ಯೇಷಣಾಚ್ಚೈಭ್ಯೋ ಅಗ್ನಿಂ ಪ್ರತಿ ಚ ದೃಶ್ಯತೇ ।
ಅಯುತಂ ಚ ಗವಾಂ ತ್ರೀಣಿ ಶತಾನ್ಯಥ ಚ ವಿಂಶತಿಂ || ೩೦ ||

ಸೌವರ್ಣಂ ಶಕಟಂ ಗೋಭ್ಯಾಂ ತ್ರ್ಯರುಣೋಽದಾನ್ನೃಪೋಽತ್ರಯೇ ।
ಅಶ್ವಮೇಧಃ ಶತಂ ಚೋಕ್ಷ್ಣಾಂ ತ್ರಸದಸ್ಯುರ್ಧನಂ ಬಹು || ೩೧ ||

ರಾಜ್ಞಃ ಪ್ರತಿ ಚ ತತ್ಸೂಕ್ತಂ ಬಭಾಷ ಇತಿ ಕೇಚನ ।
ಆತ್ಮಾ ಹಿ ನಾತ್ಮನೇ ದದ್ಯಾದಗ್ರಹೀನ್ನೃಪತೇರ್ಋಷಿಃ || ೩೨ ||

ಅತ್ರೇಃ ಸುತಮೃಷಿಂ ಬಭ್ರುಮಾರ್ತ್ವಿಜ್ಯಾಯ ಋಣಂಚಯಃ ।
ಸಹಸ್ರದಕ್ಷಿಣೇ ಸೋಮೇ ವವ್ರೇ ತಂ ಸೋಽಸ್ಯಯಾಜಯತ್ || ೩೩ ||

30. ದಾನವಿತ್ತ ಈ ರಾಜರ್ಷಿಗಳ ಶ್ರೇಯಸ್ಸನ್ನು ಕೋರಿ ಅತ್ರಿಋಷಿಯು ಅಗ್ನಿಯನ್ನು ಪ್ರಾರ್ಥಿಸಿರುವನೆಂದು ಕಂಡುಬರುತ್ತದೆ. ತ್ರ್ಯರುಣನೆಂಬ ರಾಜನು ಅತ್ರಿಗೆ ಹತ್ತುಸಾವಿರ ಮುನ್ನೂರ ಇಪ್ಪತ್ತು ಗೋವುಗಳನ್ನೂ,

31. ಎರಡು ಎತ್ತುಗಳನ್ನು ಹೂಡಿದ ಸುವರ್ಣಮಯವಾದ ಗಾಡಿಯನ್ನೂ ಕೊಟ್ಟನು. ಅಶ್ವಮೇಧನೆಂಬುವನು ನೂರು ಎತ್ತುಗಳನ್ನೂ ತ್ರಸದಸ್ಯುವು ಬಹಳವಾದ ಧನವನ್ನೂ ಕೊಟ್ಟರು.

**೪೧-೫೧ ಸೂಕ್ತಗಳ ದೇವತೆಗಳು ಮತ್ತು ಋಣಂಚಯನು ಬಭ್ರುವಿಗೆ ಮಾಡಿದ ದಾನದ ಪ್ರಶಂಸೆಯು.**

32. ಅತ್ರಿಋಷಿಯೂ ಈ ಸೂಕ್ತವನ್ನು (೨೭) ದಾನಮಾಡಿದ ರಾಜರನ್ನೇ ಸಂಬೋಧಿಸಿ ಹೇಳಿದನೆಂದು ಕೆಲವರು ಹೇಳುವರು. ತನಗೆ ತಾನೇ ಕೊಟ್ಟು ಕೊಳ್ಳುವುದು ರೂಢಿಯಿಲ್ಲ. ಋಷಿಯು ಎಲ್ಲ ರಾಜರಿಂದಲೂ ಬೇರೆ ಬೇರೆಯಾಗಿ ದಾನವನ್ನು ಸ್ವೀಕರಿಸಿದನು.

33. ಋಣಂಚಯರಾಜನು ಸಹಸ್ರದಕ್ಷಿಣೆಗಳುಳ್ಳ ಸೋಮಯಾಗವನ್ನು ಮಾಡಲುದ್ದೇಶಿಸಿ ಆ ಯಜ್ಞದಲ್ಲಿ ಪೌರೋಹಿತ್ಯವನ್ನು ವಹಿಸಲು ಅತ್ರಿಋಷಿಯ ಪುತ್ರನಾದ ಬಭ್ರು ಎಂಬುವನನ್ನು ಆಹ್ವಾನಿಸಿದನು. ಈ ಬಭ್ರುಋಷಿಯು ರಾಜನ ಆಹ್ವಾನವನ್ನು ಸ್ವೀಕರಿಸಿ ಅವರ ಯಜ್ಞವನ್ನು ನೆರವೇರಿಸಿದನು.

---

30. There also appears (here) a prayer to Agni on their behalf (ಏಭ್ಯೋ) in cosequence of (their) request (ಅಧ್ಯೇಷಣಾತ್). Ten thousand, three hundred and twenty cows.

31. (and) a golden wagon with two oxen, king Tryaruna gave to Atri. And Asvamedha (gave) a hundred oxen, Trasadasyu much wealth.

**7. Rnanchaya's gifts to Babhru. Deities of RV. v. 41-51.**

32. Others say that he (Atri) addressed this hymn to the kings, for one cannot give to oneself, (and) the seer received (the gifts) from (eacn) king.

33. ಋಣಂಚಯ chose the seer ಬಭ್ರು, son of Atri, to officiate as priest at a Soma sacrifice in which a thousand sacrificial fees were bestowed. So he (ಬಭ್ರು) sacrificed for him (ಋಣಂಚಯ).

ದದೌ ಚ ರೌಮಶೋ ರಾಜಾ ಸಹಸ್ರಾಣಿ ಶತಾನಿ ಚ ।
ತಸ್ಮೈ ಚತ್ವಾರಿ ಚತ್ವಾರಿ ಮಹಾವೀರಂ ಚ ಕಾಂಚನಂ ॥ ೩೪ ॥
ಪ್ರವರ್ಗ್ಯೇಷು ಮಹಾವೀರಾಃ ಸೌವರ್ಣಾಸ್ತಸ್ಯ ಚಾಭವನ್ ।
ಪ್ರತಿಗೃಹ್ಯ ಋಷಿರ್ಗಚ್ಛನ್ಮಧ್ಯಮೇನಾಗ್ನಿನಾ ಪಥಿ ॥ ೩೫ ॥
ಪೃಷ್ಟ ಇಂದ್ರೇಣ ಚಾಚಖ್ಯೌ ಭದ್ರಂ ಚತಸೃಭಿಶ್ಚ ತತ್ ।
ಕೋ ನು ವಾಂ ವೈಶ್ವದೇವಾನಿ ಏಕಾದಶ ಪರಾಣ್ಯತಃ ॥ ೩೬ ॥
ಮಾರುತಾನಿ ದಶ ಪ್ರೇತಿ ಇಳಾಭೀತ್ಯೃಚಿ ತು ಸ್ತುತಾ ।
ಉದಿತ್ಯೃಚಿ ತೃತೀಯಾಯಾಂ ಸವಿತಾ ಶೌನಕೋಽಬ್ರವೀತ್ ॥ ೩೭ ॥

34. ಹಾಗೆಯೇ ರೌಮಶನೆಂಬ ರಾಜನು ನಾಲ್ಕುಸಾವಿರದ ನಾನೂರುನಾಲ್ಕು ಗೋವುಗಳನ್ನೂ ಒಂದು ಸುವರ್ಣನಿರ್ಮಿತವಾದ ಪಾತ್ರೆಯನ್ನೂ ಕೊಟ್ಟನು.

35-36. ಪ್ರವರ್ಗ್ಯವೆಂಬ ಯಾಗವನ್ನು ಮಾಡಿಸಿದ್ದಕ್ಕಾಗಿ ಚಿನ್ನದ ಪಾತ್ರೆಗಳನ್ನು ಪಡೆದನು. ಅನಂತರ ಋಷಿಯು ಹೊರಟುಬರುತ್ತಿರುವಾಗ ಮಾರ್ಗಮಧ್ಯದಲ್ಲಿ ಮಾಧ್ಯಮಿಕಾಗ್ನಿಯೂ ಇಂದ್ರನೂ ಅವನನ್ನು ಪ್ರಶ್ನೆಮಾಡಿದರು. ಅದಕ್ಕೆ ಋಷಿಯು ೩೦ ನೇ ಸೂಕ್ತದ **ಭದ್ರಮಿದಂ** ಎಂದು ಮೊದಲಾಗುವ ನಾಲ್ಕು ಋಕ್ಕುಗಳಿಂದ (೧೨-೧೫)ಎಲ್ಲವನ್ನೂ ವಿವರಿಸಿ ಹೇಳಿದನು. **ಕೋ ನು ವಾಂ** ಎಂದು ಮೊದಲಾಗುವ ೧೧ ಸೂಕ್ತಗಳು (೪೧-೫೧) ವಿಶ್ವೇದೇವತಾಕವು.

37. ಅನಂತರ ಮುಂದಕ್ಕೆ **ಪ್ರ ಶ್ಯಾವಾಶ್ವ** ಎಂದು ಮೊದಲಾಗುವ ೧೦ ಸೂಕ್ತಗಳಲ್ಲಿ (೫೨-೬೧) ಮರುದ್ದೇವತೆಗಳನ್ನು ಸ್ತುತಿಸಲಾಗಿದೆ. ೪೧ ನೇ ಸೂಕ್ತದ **ಅಭಿ ನ ಇಳಾ** ಎಂಬ ೧೯ ನೇ ಋಕ್ಕಿನಲ್ಲಿ **ಇಳಾ** ಎಂಬ ದೇವತೆಯನ್ನು ಸ್ತುತಿಸಲಾಗಿದೆ. ೪೨ ನೇ ಸೂಕ್ತದ **ಉದೀರಯ** ಎಂಬ ೩ ನೇ ಋಕ್ಕಿನಲ್ಲಿ ಸವಿತೃದೇವತೆಯನ್ನು ಸ್ತುತಿಸಲಾಗಿದೆಯೆಂದು ಶೌನಕರು ಹೇಳುತ್ತಾರೆ.

---

34 And the king of the Rusamas (ರೌಮಶ) gave him four thousand four hundred (cows) and a golden cauldron (ಮಹಾವೀರ)

35, 36. And he received golden cauldrons for the Pravargya rites. And having received (them), the seer as he went along was questioned on the way by the Middle Agni as well as by Indra; and he related (all) this with the four (stanzas) ' This good ' (ಭದ್ರಂ v. 30. 12-15).

The next eleven (hymns) after this (beginning) ' Who pray of you two ? (ಕೋ ನು ವಾಂ v. 41-51) are addressed to the All-gods.

### Detailed account of RV. v. 41-43.

37. (Then come) ten (hymns) addressed to the Maruts (beginning) ' Forth ' (ಪ್ರ v. 52-61). Ila, however, is praised in the stanza ' To ' (ಅಭಿ v. 41. 19).

In the third stanza ' Up ' (ಉತ್ v. 42.3) Savitr (is praised), Saunaka said,

**ಉಪೇತಿ ಬಾರ್ಹಸ್ಪತ್ಯಸ್ತು ತೃಚೋ ಮಾರುತ್ಯೃಗುತ್ತರಾ ।**
**ತಮು ಷ್ಟುಹೀತಿ ರೌದ್ರೀ ತು ಪ್ರಸುಷ್ಟುತಿರಿತಿ ತ್ವೃಚಿ** ॥ ೩೮ ॥
**ಶೌನಕಾದಿಭಿರಾಚಾರ್ಯೈರ್ದೇವತಾ ಬಹುಧೇರಿತಾ ।**
**ಇಳಸ್ಪತಿಂ ಶಾಕಪೂಣಿಃ ಪರ್ಜನ್ಯಾಗ್ನೀ ತು ಗಾಲವಃ** ॥ ೩೯ ॥
**ಯಾಸ್ಕಸ್ತು ಪೂಷಣಂ ಮೇನೇ ಸ್ತುತಮಿಂದ್ರಂ ತು ಶೌನಕಃ ।**
**ವೈಶ್ವಾನರಂ ಭಾಗುರಿಸ್ತು ಮಾರುತ್ಯೇಷ ಸಮಾಶ್ವಿನೀ** ॥ ೪೦ ॥
**ವಾಯವ್ಯಾಧ್ವರ್ಯವಃ ಸೌಮೀ ದಶೇತ್ಯೈಂದ್ರೀ ಪರಾ ತು ಯಾ ।**
**ಅಗ್ನಿಂ ಘರ್ಮಂ ಪರಾಂಜಂತಿ ಅಶ್ವಿನಾ ಸ್ತೌತ್ಯೃಗಚ್ಛ ಚ** ॥ ೪೧ ॥

38-39. ೪೨ ನೇ ಸೂಕ್ತದ **ಉಪ ಸ್ತುಹಿ** ಎಂದು ಮೊದಲಾಗುವ ೩ ಋಕ್ಕುಗಳಲ್ಲಿ (೭-೯) ಬೃಹಸ್ಪತಿಯನ್ನು ಸ್ತುತಿಸಲಾಗಿದೆ. ಮುಂದಿನ ೧೦ ನೇ ಋಕ್ಕಿನಲ್ಲಿ ಮರುದ್ದೇವತೆಗಳನ್ನೂ **ತಮು ಷ್ಟುಹಿ** ಎಂಬ ೧೧ ನೇ ಋಕ್ಕಿನಲ್ಲಿ ರುದ್ರನನ್ನೂ ಸ್ತುತಿಸಲಾಗಿದೆ. ಆದರೆ **ಪ್ರ ಸುಷ್ಟುತಿಃ** ಎಂಬ ೧೪ ನೇ ಋಕ್ಕಿನ ದೇವತೆಯು ಯಾವು ಎಂಬ ವಿಷಯದಲ್ಲಿ ಶೌನಕರಿಗೂ ಇತರ ಆಚಾರ್ಯರಿಗೂ ಭಿನ್ನಾಭಿಪ್ರಾಯವಿದೆ. ಶಾಕಪೂಣಿಯು ಈ ಋಕ್ಕಿಗೆ ಇಳಸ್ಪತಿಯು ದೇವತೆಯೆಂದೂ, ಗಾಲವರು ಪರ್ಜನ್ಯಾಗ್ನಿಯೆಂದೂ,

40. ಯಾಸ್ಕರು ಪೂಷನೆಂದೂ, ಶೌನಕರು ಇಂದ್ರನೆಂದೂ, ಭಾಗುರಿ ಎಂಬ ಆಚಾರ್ಯರು ವೈಶ್ವಾನರನೆಂದೂ ಹೇಳುವರು. **ಏಷಃ ಸ್ತೋಮಃ** ಎಂಬ ೧೫ ಋಕ್ಕಿನಲ್ಲಿ ಮರುದ್ದೇವತೆಗಳನ್ನು ಸ್ತುತಿಸಲಾಗಿದೆ. **ಸಮಶ್ವಿನೋಃ** ಎಂಬ ೧೮ ನೇ ಋಕ್ಕಿನಲ್ಲಿ ಅಶ್ವಿನೀದೇವತೆಗಳನ್ನು ಸ್ತುತಿಸಲಾಗಿದೆ.

41. ೪೩ ನೇ ಸೂಕ್ತದಲ್ಲಿ **ಅಧ್ವರ್ಯವಃ** ಎಂಬ ೩ ನೇ ಋಕ್ಕಿನಲ್ಲಿ ವಾಯುವನ್ನೂ, **ದಶ ಕ್ಷಿಪಃ** ಎಂಬ ೪ ನೇ ಋಕ್ಕಿನಲ್ಲಿ ಸೋಮನನ್ನೂ ಅದರ ಮುಂದಿನ (**ಅಸಾವಿ** ಎಂಬ) ೫ ನೇ ಋಕ್ಕಿನಲ್ಲಿ ಇಂದ್ರನನ್ನೂ ಅದರ ಮುಂದಿನ **ಆ ನೋ** (೬) ಮತ್ತು **ಅಂಜಂತಿ** (೭) ಎಂಬ ಋಕ್ಕುಗಳಲ್ಲಿ ಕ್ರಮವಾಗಿ ಅಗ್ನಿ ಮತ್ತು ಘರ್ಮಪಾತ್ರೆಗಳನ್ನೂ ಅದರ ಮುಂದಿನ **ಅಚ್ಛಾ ಮಹೀ** ಎಂಬ ೮ ನೇ ಋಕ್ಕಿನಲ್ಲಿ ಅಶ್ವಿನೀದೇವತೆಗಳನ್ನೂ ಸ್ತುತಿಸಲಾಗಿದೆ.

38. The triplet 'Invoke' (ಉಪ v. 42. 7-9) is addressed to Brhaspati; the next stanza (v. 42. 10) is addressed to the Maruts; 'Praise him' (ತಮು ಷ್ಟುಹಿ v. 42-11) is addressed to Rudra. But in the stanza 'Forth the fair praise' (ಪ್ರ ಸುಷ್ಟುತಿಃ v. 42. 14),

39. the deity is variously stated by Saunaka and other teachers. Sakapuni (considered) Ilaspati, Galava Parjanya-Agni,

40. Yaska thought Pusan, Saunaka Indra to be praised, Bhaguri Vaisvanara. 'This' (ಏಷಃ v. 42. 15) is addressed to the Maruts; 'Together' (ಸಂ v. 42. 18) is addressed to the Asvins.

41. 'Adhvaryus' (ಅಧ್ವರ್ಯವಃ v. 43 3) is addressed to Vayu; 'The ten' (ದಶ v. 43. 4) is addressed to Soma, while that which follows (v. 43. 5) is addressed to Indra.

The following (6) 'They deck' (ಅಂಜಂತಿ 7) (praise respectively) Agni (and) the Kettle (ಘರ್ಮ), and the stanza 'Hither' (ಅಚ್ಛಾ 8) praises the Asvins.

ಪ್ರೇತಿ ವಾಯುಂ ಪೂಷಣಂ ಚ ಅರ್ಧರ್ಚೇಽಗ್ನಿರಿಹೋಚ್ಯತೇ |
ಪ್ರಥಮೋಽಥ ದ್ವಿತೀಯೇ ಚ ಸ್ತುತಾ ಏತಿ ದಿವೌಕಸಃ || ೪೨ ||

ಆ ವಾಚಂ ಮಧ್ಯಮಾಂ ಸ್ತೌತಿ ತತೋಽನ್ಯಾ ತು ಬೃಹಸ್ಪತಿಂ |
ಜ್ಯಾಯಾಂಸಮಿತಿ ಚಾದಿತ್ಯಂ ಪ್ರ ವೋ ವಾಯುರಿಹೋಚ್ಯತೇ || ೪೩ ||

ತಂ ಪ್ರತ್ನಥೇತಿ ಸೌಮ್ಯಾ ವಾ ದೈವ್ಯೈಂದ್ರೀ ವಾ ಪ್ರಜಾಪತೇಃ |
ಪರೋಕ್ಷವೈಶ್ವದೇವಂ ತದಾಹ ಕೌಷೀತಕಿಃ ಸ್ವಯಂ || ೪೪ ||

### ೪೩, ೪೪, ೪೫ ನೇ ಸೂಕ್ತಗಳ ದೇವತೆಗಳು

42. ೪೩ ನೇ ಸೂಕ್ತದ **ಪ್ರ ತವ್ಯಸಃ** ಎಂಬ ೯ ನೇ ಋಕ್ಕಿನಲ್ಲಿ ವಾಯು ಮತ್ತು ಪೂಷದೇವತೆಯನ್ನೂ, **ಆ ನಾಮಭಿಃ** ಎಂಬ ೧೦ ನೇ ಋಕ್ಕಿನ ಪೂರ್ವಾರ್ಧದಲ್ಲಿ ಅಗ್ನಿಯನ್ನೂ, ಉತ್ತರಾರ್ಧದಲ್ಲಿ ದೇವತೆಗಳನ್ನೂ ಸ್ತುತಿಸಲಾಗಿದೆ.

43. ೪೩ ನೇ ಸೂಕ್ತದ **ಆ ನೋ ದಿವಃ** ಎಂಬ ೧೧ ನೇ ಋಕ್ಕಿನಲ್ಲಿ ಮಾಧ್ಯಮಿಕಾ ವಾಕ್ಕನ್ನೂ ಮುಂದಿನ **ಆ ವೇಧಸಂ** ಎಂಬ ೧೨ ನೇ ಋಕ್ಕಿನಲ್ಲಿ ಬೃಹಸ್ಪತಿಯನ್ನೂ ೪೪ ನೇ ಸೂಕ್ತದ **ಜ್ಯಾಯಾಂಸಮಸ್ಯ** ಎಂಬ ೮ ನೇ ಋಕ್ಕಿನಲ್ಲಿ ಆದಿತ್ಯನನ್ನೂ ಸ್ತುತಿಸಲಾಗಿದೆ. ಇದೇ ಸೂಕ್ತದ (೪೪) **ಪ್ರ ವ ಏತೇ** ಎಂಬ ೪ ನೇ ಋಕ್ಕಿನಲ್ಲಿ ವಾಯುವಿನ ಪ್ರಸ್ತಾಪವಿದೆ.

44. **ತಂ ಪ್ರತ್ನಥಾ** ಎಂಬ ೪೪ ನೇ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಸೋಮ ಅಥವಾ ದೇವತೆಗಳ ಸ್ತುತಿ ಇದೆ. ಅಥವಾ ಈ ಋಕ್ಕಿಗೆ ಇಂದ್ರನಾಗಲಿ, ಪ್ರಜಾಪತಿಯಾಗಲಿ ದೇವತೆಯಾಗಬಹುದು. ಈ ಸೂಕ್ತದಲ್ಲಿ ಪರೋಕ್ಷವಾಗಿ ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆಯೆಂದು **ಕೌಷೀತಕಿ** ಎಂಬ ಆಚಾರ್ಯರು ಹೇಳಿರುವರು.

### 9. Deities of RV. v. 43. (continued), 44, 45.

42. ' Forth ' (ಪ್ರ v. 43. 9) (praises) Vayu and Pusan. In the first hemistich (of) ' Hither ' (ಆ v. 43. 10) Agni is here mentioned, and in the second (10) the celestials (ದಿವೌಕಸಃ) are praised.

43. ' Hither ' (ಆ v. 43. 11) praises the middle Vac, then another (12) Brihaspathi,

' The higher one ' (ಜ್ಯಾಯಾಂಸಂ v. 44. 8) praises the Sun (ಆದಿತ್ಯ). Vayu is here spoken of (in) ' Forth to you ' (ಪ್ರ ವಃ v. 44. 4).

44. ' Him as of old ' (ತಂ ಪ್ರತ್ನಥಾ v. 44. 1) is addressed either to Soma (or) the Gods, or Indra. (or belongs) to Prajapati. Kausitaki himself has spoken of this (hymn) as one in which the All-gods are indirectly addressed (ಪರೋಕ್ಷ).

**ತೇಷು ತೃತೀಯಮಿತ್ಯುಕ್ತಂ ದೇವಾನ್ ಹುವ ಇದಂ ಪರಂ ।**
**ದೇವಾನಾಂ ಪತ್ನೀರಿತಿ ತು ದೇಷಪತ್ನ್ಯೋ ದ್ವೃಚೇ ಸ್ತುತಾಃ ॥ ೪೫ ॥**
**ಅಯಂ ಚತುರ್ಣಾಮಿತಿ ಚೇಂದ್ರವಾಯೂ ತ್ರಿಭಿಃ ಸ್ತುತೌ ವಾಯವಾ ಯಾಹಿ ವಾಯುಂ ।**
**ರಥಂ ತ್ವೃಚಾ ರೋದಸೀ ಸ್ತೂಯತೇಽತ್ರ ಯಸ್ಯಾ ಸ್ತುತಾ ಮರುತೋ ರುದ್ರಪತ್ನ್ಯಾಃ ॥**
**ಆ ರುದ್ರಾಸ ಇತಿ ತ್ವಸ್ಯಾಂ ರುದ್ರಾಣಾಂ ಸಂಸ್ತುತೋ ಗಣಃ ।**
**ಮರುತಾಂ ತು ಗಣಸ್ಯೈತನ್ನಾಮ ರುದ್ರಾ ಇತಿ ಸ್ಮೃತಾಃ ॥ ೪೭ ॥**

45. ಇವುಗಳಲ್ಲಿ (ವೈಶ್ವದೇವಸೂಕ್ತಗಳಲ್ಲಿ ?) ಇದು ಮೂರನೆಯದೆಂದು ಹೇಳಲ್ಪಟ್ಟಿದೆ. ಇದಾದನಂತರ **ದೇವಾನ್ ಹುವೇ** ಎಂಬ ೧೦ ನೇ ಮಂಡಲದ ೬೬ ನೇ ಸೂಕ್ತವನ್ನು ಪಠಿಸಬೇಕು. ೪೬ ನೇ ಸೂಕ್ತದ **ದೇವಾನಾಂ ಪತ್ನೀಃ** ಎಂದು ಮೊದಲಾಗುವ ೨ ಋಕ್ಕುಗಳಲ್ಲಿ (೭-೮) ದೇವತೆಗಳ ಪತ್ನಿಯರನ್ನು ಸ್ತುತಿಸಲಾಗಿದೆ.

**೫೧-೬೦ ಸೂಕ್ತಗಳ ದೇವತೆಗಳು**

46. ೫೧ ನೇ ಸೂಕ್ತದಲ್ಲಿ **ಅಯಂ ಸೋಮಃ** ಎಂದು ಮೊದಲಾಗುವ ೪ ಋಕ್ಕುಗಳಲ್ಲಿ (೪-೭) ಮೂರು ಋಕ್ಕುಗಳು ಎಂದರೆ ೪, ೬ ೭ ನೇ ಋಕ್ಕುಗಳು ಇಂದ್ರವಾಯುಗಳನ್ನು ಸ್ತುತಿಸುವವು; **ವಾಯವಾ ಯಾಹಿ** ಎಂಬ ೫ ನೇ ಋಕ್ಕಿನಲ್ಲಿ ಕೇವಲ ವಾಯುವಿನ ಪ್ರಶಂಸೆ ಇದೆ. ೫೬ ನೇ ಸೂಕ್ತದ **ರಥಂ ನು** ಎಂಬ ೮ ನೇ ಋಕ್ಕಿನಲ್ಲಿ ಮರುದ್ದೇವತೆಗಳ (ರುದ್ರರ) ಪತ್ನಿಯಾದ ರೋದಸೀ ಎಂಬ ದೇವತೆಯನ್ನು ಸ್ತುತಿಸಲಾಗಿದೆ. ಒಟ್ಟು ಸೂಕ್ತದಲ್ಲಿ ಈ ರೋದಸಿಯ ಪತಿಗಳಾದ ಮರುದ್ದೇವತೆಗಳ ಪ್ರಶಂಸೆ ಇದೆ.

47. **ಆ ರುದ್ರಾಸಃ** ಎಂಬ ೫೭ ನೇ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ರುದ್ರರ (ಅಥವಾ ರುದ್ರಪುತ್ರರಾದ ಮರುತ್ತುಗಳ) ಗಣವನ್ನು ಸ್ತುತಿಸಲಾಗಿದೆ. ಮರುದ್ದೇವತೆಗಳಿಗೆ ಅಥವಾ ಅವರ ಗಣಗಳಿಗೆ **ರುದ್ರಾಃ** (ಎಂದರೆ ರುದ್ರನ ಪುತ್ರರೆಂದು) ಕರೆಯುವ ರೂಢಿ ಇದೆ.

---

45. Among these it is spoken of as the third: after it comes the (hymn) 'I invoke the gods' (ದೇವಾನ್ ಹುವೇ x 66).

In the couplet 'The Spouses of the Gods' (ದೇವಾನಾಂ ಪತ್ನೀಃ v. 46-7, 8), the spouses of the gods are praised.

**10. Deities of RV. v. 51-60.**

46. Aad with three of the four (beginning) 'This' (ಅಯಂ v. 51. 4-7) Indra-Vayu are praised, while 'O Vayu, come' (ವಾಯವಾ ಯಾಹಿ v. 51-5) (praises) Vayu (only). With the stanza 'The car' (ರಥಂ v. 56. 8) is here praised Rodasi, whose (husbands) the Maruts—she being the spouse of the Rudras—are praised (in the whole hymn).

47. But in the (stanza) 'Hither, O Rudra' (ಆ ರುದ್ರಾಸಃ v. 57. 1) the host of the Rudras is praised. Now this is the name of the host of the Maruts: they are called Rudras.

ಅಸಾವಗ್ನಿರಯಂ ಚೋಭಾವಗ್ನೀ ಪಾರ್ಥಿವಮಧ್ಯಮೌ ।
ಅಗ್ನೇ ಮರುದ್ಭಿರಿತ್ಯಸ್ಯಾಂ ಮರುದ್ಭಿಃ ಸಹ ಸಂಸ್ತುತೌ ॥ ೪೮ ॥
ಮಧ್ಯಮಾ ವಾಕ್ ಸ್ತ್ರಿಯಃ ಸರ್ವಾಃ ಪುಮಾನ್ ಸರ್ವಶ್ಚ ಮಧ್ಯಮಃ ।
ಗಣಾಶ್ಚ ಸರ್ವೇ ಮರುತೋ ಗುಣಭೇದಾತ್ಪೃಥಕ್ ಪೃಥಕ್ ॥ ೪೯ ॥
ರಾಜರ್ಷಿರಭವದ್ದಾರ್ಭ್ಯೋ ರಥವೀತಿರಿತಿ ಶ್ರುತಃ ।
ಸ ಯಕ್ಷ್ಯಮಾಣೋ ರಾಜಾತ್ರಿಮಭಿಗಮ್ಯ ಪ್ರಸಾದ್ಯ ಚ ॥ ೫೦ ॥
ಆತ್ಮಾನಂ ಕಾರ್ಯಮರ್ಥಂ ಚ ಖ್ಯಾಪಯನ್ಪ್ರಾಂಜಲಿಃ ಸ್ಥಿತಃ ।
ಅವೃಣೀತರ್ಷಿಮಾತ್ರೇಯಮಾರ್ತ್ವಿಜ್ಯಾಯಾರ್ಚನಾನಸಂ ॥ ೫೧ ॥

48. ೬೦ ನೇ ಸೂಕ್ತದ ಅಗ್ನೇ ಮರುದ್ಭಿಃ ಎಂಬ ೮ ನೇ ಋಕ್ಕಿನಲ್ಲಿ ಈ ಪಾರ್ಥಿವಾಗ್ನಿಯೂ, ಮಧ್ಯಮಾಗ್ನಿಯೂ ಮರುದ್ದೇವತೆಗಳೊಡನೆ ಸ್ತುತರಾಗಿರುವರು.

49. ದೇವಪತ್ನಿಯರೇ ಮೊದಲಾದ ಸ್ತ್ರೀದೇವತೆಗಳು ಮಾಧ್ಯಮಿಕಾ ವಾಗ್ದೇವತೆಯ ಸ್ವರೂಪರಾಗಿರುವರು; ಪುರುಷರಾಗಿದ್ದಲ್ಲಿ ಮಧ್ಯಮದೇವತೆಯರಾಗಿರುವರು. ಮರುದ್ದೇವತೆಗಳೂ, ಅವರ ಗಣಗಳೂ ಮಧ್ಯಮದೇವತೆಗಳಾಗಿದ್ದರೂ ಗುಣಭೇದದಿಂದ ಬೇರೆಬೇರೆಯಾಗಿರುವರು.

## ಶ್ಯಾವಾಶ್ವನ ವೃತ್ತಾಂತವು

50. ರಥವೀತಿ ದಾರ್ಭ್ಯ ಎಂಬ ಹೆಸರಿನ ಒಬ್ಬ ರಾಜರ್ಷಿಯಿದ್ದನು. ಅವನು ಯಜ್ಞಮಾಡಬೇಕೆಂದಿಚ್ಛಿಸಿ ಅತ್ರಿಋಷಿಯ ಬಳಿಗೆ ಬಂದು ಅವನನ್ನು ಸತ್ಕರಿಸಿ ಸಂತೋಷಪಡಿಸಿದನು.

51. ಬಳಿಕ ರಾಜನು ತಾನು ಯಾರೆಂಬುದನ್ನೂ ತಾನು ಬಂದ ಕಾರ್ಯವನ್ನೂ ಪ್ರಾಂಜಲಿಬದ್ಧನಾಗಿ ಋಷಿಗೆ ತಿಳಿಸಿ ಅವನ ಅನುಜ್ಞೆಯಿಂದ ಅತ್ರಿಋಷಿಯ ಪುತ್ರನಾದ ಅರ್ಚನಾನಾಃ ಎಂಬ ಋಷಿಯು ತಾನು ಮಾಡುವ ಯಜ್ಞದಲ್ಲಿ ಪುರೋಹಿತನಾಗಿರಬೇಕೆಂದು ಪ್ರಾರ್ಥಿಸಿದನು.

48. Now that Agni and this, (viz.) both the middle and the terrestrial Agnis, are praised with the Maruts in the (stanza) 'O Agni, with the Maruts' (ಅಗ್ನೇ ಮರುದ್ಭಿಃ v. 60. 8).

49. Vac (may be) middle, all female goddesses (ಸ್ತ್ರಿಯಃ) (may be middle) and every male (deity may be) middle, as well as all groups (ಗಣ), (such as) the Maruts, respectively according to their different qualities.

## 11. Story of Syavasva.

50. There was a royal seer famous by the name of Rathaviti Darbhya That king being about to sacrifice went to Atri and propitiated him.

51. And making known his identity and the object he had in view, as he stood with folded hands, he chose the seer Archananas, the son of Atri, to officiate as (his) priest.

ಸ ಸಪುತ್ರೋಽಭ್ಯಗಚ್ಛೈತ್ತಂ ರಾಜಾನಂ ಯಜ್ಞಸಿದ್ಧಯೇ ।
ಶ್ಯಾವಾಶ್ವಶ್ಚಾತ್ರಿಪುತ್ರಸ್ಯ ಪುತ್ರಃ ಖಲ್ವರ್ಚನಾನಸಃ ॥ ೫೨ ॥

ಸಾಂಗೋಪಾಂಗಾನ್ಸರ್ವವೇದಾನ್ಯಃ ಪಿತ್ರಾಧ್ಯಾಪಿತೋ ಮುದಾ ।
ಅರ್ಚನಾನಾಃ ಸಪುತ್ರೋಽಥ ಗತ್ವಾ ನೃಪಮಯಾಜಯತ್ ॥ ೫೩ ॥

ಯಜ್ಞೇ ಚ ವಿತತೇಽಪಶ್ಯದ್ರಾಜಪುತ್ರೀಂ ಯಶಸ್ವಿನೀಂ ।
ಸ್ನುಷಾ ಮೇ ರಾಜಪುತ್ರೀ ಸ್ಯಾದಿತಿ ತಸ್ಯ ಮನೋಽಭವತ್ ॥ ೫೪ ॥

ಶ್ಯಾವಾಶ್ವಸ್ಯ ಚ ತಸ್ಯಾಂ ವೈ ಸಕ್ತಮಾಸೀತ್ತದಾ ಮನಃ ।
ಸಂಯುಜ್ಯಸ್ವ ಮಯಾ ರಾಜನ್ನಿತಿ ಯಾಜ್ಯಂ ಚ ಸೋಽಬ್ರವೀತ್ ॥ ೫೫ ॥

52. ರಾಜನ ಪ್ರಾರ್ಥನೆಯನ್ನು ಮನ್ನಿಸಿ ಅತ್ರಿಪುತ್ರನಾದ ಅರ್ಚನಾನಸ ಋಷಿಯು ತನ್ನ ಪುತ್ರನೊಡನೆ ರಾಜನ ಯಜ್ಞನಿರ್ವಹಣಕ್ಕಾಗಿ ಹೊರಟನು. ಅರ್ಚನಾನಸಋಷಿಯ ಪುತ್ರನ ಹೆಸರು ಶ್ಯಾವಾಶ್ವನೆಂದು.

53. ಅರ್ಚನಾನಸಋಷಿಯು ತನ್ನ ಪುತ್ರನಾದ ಶ್ಯಾವಾಶ್ವನಿಗೆ ಷಡಂಗ, ಉಪಾಂಗಗಳ ಸಹಿತವಾಗಿ ಸಕಲ ವೇದಗಳನ್ನೂ ಅಧ್ಯಯನಮಾಡಿಸಿದ್ದನು. ಇಂತಹ ವೇದಾಧ್ಯಯನಸಂಪನ್ನನಾದ ಪುತ್ರನೊಡನೆ ಹೊರಟು ರಾಜನಿಗೆ ಯಜ್ಞವನ್ನು ಮಾಡಿಸಿದನು.

54. ಯಜ್ಞವು ನಡೆಯುತ್ತಿರುವ ಸಮಯದಲ್ಲಿ ಅರ್ಚನಾನಸಋಷಿಯು ರೂಪಯೌವನಸಂಪನ್ನಳಾದ ರಾಜಪುತ್ರಿಯನ್ನು ನೋಡಿದನು. ಆಗ ಅವನ ಮನಸ್ಸಿನಲ್ಲಿ ಈ ರಾಜಪುತ್ರಿಯು ನನ್ನ ಸೊಸೆಯಾಗಬಾರದೇ ಎಂದೆನಿಸಿತು.

55. ಆಗ ಶ್ಯಾವಾಶ್ವನ ಮನಸ್ಸೂ ಆ ರಾಜಪುತ್ರಿಯಲ್ಲಿ ಅನುರಕ್ತವಾಯಿತು. ಆದ್ದರಿಂದ ಶ್ಯಾವಾಶ್ವನು ಯಜ್ಞಮಾಡುತ್ತಿದ್ದ ರಾಜನನ್ನು ಕುರಿತು—ಎಲೈ ರಾಜನೇ, ಈ ರಾಜಪುತ್ರಿಯೊಡನೆ ನನ್ನ ವಿವಾಹವನ್ನು ನೆರವೇರಿಸು ಎಂದು ಪ್ರಾರ್ಥಿಸಿದನು.

---

52. He, accompanied by his son, went to the king for the performance of the sacrifice. Now the son of Archananas, Atri's son, was Syavasva,

53. who had been gladly taught by his father all the Vedas with their members (ಅಂಗ) and subordinate members (ಉಪಾಂಗ). Then Archananas having gone with his son, performed the sacrifice for the king.

54. And as the sacrifice was in progress, he saw the illustrious daughter of the king. The thought occured to him that the princess might become his daughter-in-law.

55. Then the heart of Syavasva too became fixed on her, and so he said to the institutor of the sacrifice: 'Ally yourself with me, O king'.

ಶ್ಯಾವಾಶ್ವಾಯ ಸುತಾಂ ದಿತ್ಸುರ್ಮಹಿಷೀಂ ಸ್ವಾಂ ನೃಪೋಽಬ್ರವೀತ್ |
ಕಿಂ ತೇ ಮತಮಹಂ ಕನ್ಯಾಂ ಶ್ಯಾವಾಶ್ವಾಯ ದದಾಮಿ ಹಿ || ೫೬ ||
ಅತ್ರಿಪುತ್ರೋಽದುರ್ಬಲೋ ಹಿ ಜಾಮಾತಾ ತ್ವಾವಯೋರಿತಿ |
ರಾಜಾನಮಬ್ರವೀತ್ಸಾಪಿ ನೃಪರ್ಷಿಕುಲಜಾ ಹ್ಯಹಂ || ೫೭ ||
ನಾನೃಷೀರ್ನೌ ತು ಜಾಮಾತಾ ನೈಷ ಮಂತ್ರಾನ್ ಹಿ ದೃಷ್ಟವಾನ್ |
ಋಷಯೇ ದೀಯತಾಂ ಕನ್ಯಾ ವೇದಸ್ಯಾಂಬಾ ಭವೇತ್ತಥಾ |
ಋಷಿರ್ಮಂತ್ರದೃಶಂ ವೇದಪಿತರಂ ಮನ್ಯತೇ ಯತಃ || ೫೮ ||
ಪ್ರತ್ಯಾಚಷ್ಟೇ ಸ ತಂ ರಾಜಾ ಸಹ ಸಂಮಂತ್ರ್ಯ ಭಾರ್ಯಯಾ |
ಅನೃಷಿರ್ನೈವ ಜಾಮಾತಾ ಕಶ್ಚಿದ್ಭವಿತುಮರ್ಹತಿ || ೫೯ ||

56. ಆಗ ರಾಜನು ಶ್ಯಾವಾಶ್ವನಿಗೆ ತನ್ನ ಪುತ್ರಿಯನ್ನು ವಿವಾಹಮಾಡಿಕೊಡಲು ಇಷ್ಟಪಟ್ಟರೂ ತನ್ನ ಪಟ್ಟಮಹಿಷಿಯಾದ ರಾಣಿಯನ್ನು ಕಂಡು— ಈ ಶ್ಯಾವಾಶ್ವನಿಗೆ ನಮ್ಮ ಪುತ್ರಿಯನ್ನು ವಿವಾಹಮಾಡಿಕೊಡುವ ವಿಚಾರದಲ್ಲಿ ನಿನ್ನ ಅಭಿಪ್ರಾಯವೇನು,

57. ಅತ್ರಿಪುತ್ರನಾದ ಈ ಶ್ಯಾವಾಶ್ವನು ನಿಕೃಷ್ಟನೇನೂ ಅಲ್ಲ. ಇವನು ನಮಗೆ ಅಳಿಯನಾಗುವ ವಿಷಯದಲ್ಲಿ ಯೋಚಿಸಬೇಕಾಗಿಲ್ಲ ಎಂದನು. ಅದಕ್ಕೆ ರಾಣಿಯು— ನೀವು ಹೇಳುವುದೇನೋ ಸರಿ. ಆದರೆ ನಿಮ್ಮ ಪತ್ನಿಯಾದ ನಾನೂ ಸಹ ರಾಜರ್ಷಿಯ ಕುಲದಲ್ಲಿಯೇ ಹುಟ್ಟಿರುವೆನಲ್ಲವೇ ?

58. ಋಷಿಯಾಗಿಲ್ಲದವನು ನಮಗೆ ಅಳಿಯನಾಗಬಾರದು. ಈ ಯುವಕನು ಮಂತ್ರದ್ರಷ್ಟೃವಾದ ಋಷಿಯೇನಲ್ಲ. ಆದ್ದರಿಂದ ಮಂತ್ರದ್ರಷ್ಟೃವಾದ ಬೇರೊಬ್ಬ ಋಷಿಗೆ ನಮ್ಮ ಪುತ್ರಿಯನ್ನು ಕೊಡೋಣ. ಆಗ ಅವಳು ವೇದಗಳಿಗೆ ತಾಯಿಯೆಂದು (ವೇದಮಂತ್ರದ್ರಷ್ಟೃವಾದ ಋಷಿಗೆ ತಾಯಿಯೆಂದು) ಪ್ರಸಿದ್ಧಿಯನ್ನು ಪಡೆಯುವಳು ಏಕೆಂದರೆ ಮಂತ್ರದ್ರಷ್ಟೃವಾದ ಋಷಿಯನ್ನು ವೇದಕ್ಕೆ ತಂದೆಯೆಂದು ಹೇಳುವರಲ್ಲವೇ ಎಂದಳು.

59. ಪತ್ನಿಯ ಅಭಿಪ್ರಾಯವನ್ನು ತಿಳಿದು ರಾಜನು ಆ ಋಷಿಯನ್ನು ಕರೆದು ಮಂತ್ರದ್ರಷ್ಟೃವೂ ಋಷಿಯೂ ಆಗದಿರುವ ಯಾವ ಪುರುಷನೂ ನನ್ನ ಅಳಿಯನಾಗಲಾರನು ಎಂದು ಹೇಳಿದನು.

## 12. Story of Syavasva (continued).

56. The king wishing to give his daughter to Syavasva, said to his royal consort: 'What is your opinion? I (desire to) give the girl to Syavasva.

57. For a son of Atri would be no contemptible (ಅದುರ್ಬಲ) son-in-law for us. She on her part said to the king: 'I have been born in a family of royal seers;

58. One who is not a seer should not be our son-in law: this (youth) has not seen formulas. Let the girl be given to a seer: she would thus become a mother (ಅಂಬ) of the Veda; for a (certain) seer regards one who sees formulas as a father of the Veda'.

59. The king after conferring with his wife, refused him (saying), 'No one is worthy to be (our) son-in-law who is not a seer.'

ಪ್ರತ್ಯಾಖ್ಯಾತ ಋಷಿಸ್ತೇನ ವೃತ್ತೇ ಯಜ್ಞೇ ನ್ಯವರ್ತತ ।
ಶ್ಯಾವಾಶ್ವಸ್ಯ ತು ಕನ್ಯಾಯಾ ಮನೋ ನೈವ ನ್ಯವರ್ತತ ॥ ೬೦ ॥
ತತಸ್ತೌ ತು ನಿವರ್ತೇತಾಮುಭಾವೇವಾಭಿಜಗ್ಮತುಃ ।
ಶಶೀಯಸೀಂ ತರಂತಂ ಚ ಪುರುಮೀಳ್ಹಂ ಚ ಪಾರ್ಥಿವಂ ॥ ೬೧ ॥
ತರಂತಪುರುಮೀಳ್ಹೌ ತು ರಾಜಾನೌ ವೈದದಶ್ವ್ಯೃಷೀ ।
ತಾಭ್ಯಾಂ ತೌ ಚಕ್ರತುಃ ಪೂಜಾಮೃಷಿಭ್ಯಾಂ ನೃಪತೀ ಸ್ವಯಂ ॥ ೬೨ ॥
ಋಷಿಪುತ್ರಂ ಮಹಿಷ್ಯಾಶ್ಚ ದರ್ಶಯಾಮಾಸ ತಂ ನೃಪಃ ।
ತರಂತಾನುಮತಾ ಚೈವ ಪ್ರಾದಾದ್ಬಹುವಿಧಂ ವಸು ॥ ೬೩ ॥
ಅಜಾವಿಕಂ ಗವಾಶ್ವಂ ಚ ಶ್ಯಾವಾಶ್ವಾಯ ಶಶೀಯಸೀ ।
ಅತ್ರಿಂ ಯಾಜ್ಯಾರ್ಚಿತೌ ಗತ್ವಾ ಪಿತಾಪುತ್ರೌ ಸ್ವಮಾಶ್ರಮಂ ॥ ೬೪ ॥

60. ರಾಜನಿಂದ ತಿರಸ್ಕೃತನಾದ ಋಷಿಯು (ಅರ್ಚನಾನಸನು) ಯಜ್ಞಕರ್ಮವು ಸಮಾಪ್ತಿಯಾದನಂತರ ತನ್ನ ಗೃಹಕ್ಕೆ ಹಿಂತಿರುಗಿದನು. ಆದರೆ ಶ್ಯಾವಾಶ್ವನ ಮನಸ್ಸು ಆ ರಾಜಪುತ್ರಿಯನ್ನು ಬಿಟ್ಟಿರಲಿಲ್ಲ.

61. ಅನಂತರ ತಂದೆಯೂ ಮಗನೂ ಹಿಂತಿರುಗಿ ಬರುತ್ತಿರುವಾಗ ಅವರಿಗೆ ದಾರಿಯಲ್ಲಿ ಶಶೀಯಸೀ, ತರಂತ ಮತ್ತು ಪುರುಮೀಳ್ಹರಾಜನು ಸಂಧಿಸಿದರು.

62. ತರಂತ ಮತ್ತು ಪುರುಮೀಳ್ಹ ಎಂಬುವರು ವಿದದಶ್ವ ಎಂಬ ರಾಜನ ಪುತ್ರರು. ಇವರಿಬ್ಬರೂ ಮಂತ್ರ ದ್ರಷ್ಟೃಗಳಾದ ಋಷಿಗಳೂ ಆಗಿದ್ದರು. ಇವರಿಬ್ಬರೂ ತಮಗೆ ದಾರಿಯಲ್ಲಿ ಸಂಧಿಸಿದ ಅರ್ಚನಾನಸ ಮತ್ತು ಇವನ ಪುತ್ರನಾದ ಶ್ಯಾವಾಶ್ವನನ್ನು ವಿಧಿವತ್ತಾಗಿ ಪೂಜಿಸಿದರು.

63. ಅನಂತರ ತರಂತರಾಜನು ಋಷಿಪುತ್ರನಾದ ಶ್ಯಾವಾಶ್ವನನ್ನು ತನ್ನ ಪಟ್ಟಮಹಿಷಿಗೆ ತೋರಿಸಿದನು. ರಾಜನ ಅನುಮತಿಯಿಂದ ಆ ಮಹಿಷಿಯು(ರಾಜಪತ್ನಿಯು) ಆ ಶ್ಯಾವಾಶ್ವನಿಗೆ ಅನೇಕ ವಿಧವಾದ ದ್ರವ್ಯವನ್ನು ಕೊಟ್ಟಳು.

64. ಶಶೀಯಸೀ ಎಂಬ ಆ ರಾಣಿಯು ಶ್ಯಾವಾಶ್ವನಿಗೆ ಅನೇಕ ಆಡುಗಳನ್ನೂ, ಕುರಿಗಳನ್ನೂ, ಗೋವುಗಳನ್ನೂ, ಅಶ್ವಗಳನ್ನೂ ಕೊಟ್ಟಳು. ಆವನ ತಂದೆಯಾದ ಅತ್ರಿಯನ್ನೂ (ಅರ್ಚನಾನಸಋಷಿಯನ್ನೂ) ಪೂಜಿಸಿದ ಬಳಿಕ ತಂದೆಮಕ್ಕಳಿಬ್ಬರೂ ಅವರ ಸತ್ಕಾರವನ್ನು ಸ್ವೀಕರಿಸಿ ತಮ್ಮ ಆಶ್ರಮಕ್ಕೆ ತೆರಳಿದರು.

60. The seer, being rejected by him, returned, when the sacrifice was over ; but the heart of Syavasya returned not from the girl.

61. So these two returned ; they both met Sasiyasi and Taranta and king Purumilha.

62. Now the two kings Taranta and Purumilha were seers, son of Vidadasva. These two kings themselves paid homage to the two seers.

63. And the king (ತರಂತ) showed the seer's son to royal consort ; and with Taranta's approval she gave manifold wealth,

## 13. Story of Syavasva (continued.)

64. Goats and sheep, cows and horses, to Syavasva, did Sasiyasi. Father and son, (thus) honoured by the institutors of the sacrifice, went to their hermitage to Atri.

ಅಭ್ಯವಾದಯತಾಮತ್ರಿಂ ಮಹರ್ಷಿಂ ದೀಪ್ತತೇಜಸಂ ।
ಶ್ಯಾವಾಶ್ವಸ್ಯ ಮನಸ್ಯಾಸೀನ್ಮಂತ್ರಸ್ಯಾದರ್ಶನಾದಹಂ ॥ ೬೫ ॥
ನ ಲಬ್ಧವಾನಹಂ ಕನ್ಯಾಂ ಹಂತ ಸರ್ವಾಂಗಶೋಭನಾಂ ।
ಅಪ್ಯಹಂ ಮಂತ್ರದರ್ಶೀ ಸ್ಯಾಂ ಭವೇದ್ಧರ್ಷೋ ಮಹಾನ್ಮಮ ॥ ೬೬ ॥
ಇತ್ಯರಣ್ಯೇ ಚಿಂತಯತಃ ಪ್ರಾದುರಾಸೀನ್ಮರುದ್ಗಣಃ ।
ದದರ್ಶ ಸಂಸ್ಥಿತಾನ್ಪಾರ್ಶ್ವೇ ತುಲ್ಯರೂಪಾನಿವಾತ್ಮನಃ ॥ ೬೭ ॥
ಸಮಾನವಯಸಶ್ಚೈವ ಮರುತೋ ರುಕ್ಮವಕ್ಷಸಃ ।
ತಾಂಸ್ತುಲ್ಯವಯಸೋ ದೃಷ್ಟ್ವಾ ದೇವಾನ್ಪುರುಷವಿಗ್ರಹಾನ್ ॥ ೬೮ ॥
ಶ್ಯಾವಾಶ್ವೋ ವಿಸ್ಮಿತೋಽಪೃಚ್ಛತ್ ಕೇ ಷ್ಠೇತಿ ಮರುತಸ್ತದಾ ।
ತತಸ್ತು ಮರುತೋ ದೇವಾನ್ರುದ್ರಸೂನೂನಬುಧ್ಯತ ॥ ೬೯ ॥

65. ಬಳಿಕ ಆ ರಾಜರಿಬ್ಬರೂ ಮಹಾತೇಜಸ್ವಿಯಾದ ಆ ಅತ್ರಿಮಹರ್ಷಿಯನ್ನು ನಮಸ್ಕರಿಸಿದರು. ಶ್ಯಾವಾಶ್ವನ ಮನಸ್ಸಿನಲ್ಲಿ ನಾನು ಮಂತ್ರದ್ರಷ್ಟೃವಾದ ಋಷಿಯಾಗಲಿಲ್ಲವಲ್ಲಾ ಎಂಬ ವಿಷಾದವುಂಟಾಯಿತು.

66. ಆಹಾ, ಆ ಸರ್ವಾಂಗಸುಂದರಿಯಾದ ಆ ರಾಜಕನ್ಯೆಯು ನನಗೆ ಸಿಕ್ಕಲಿಲ್ಲವಲ್ಲಾ. ನಾನೂ ಮಂತ್ರದರ್ಶಿಯಾದ ಋಷಿಯಾಗಿದ್ದಲ್ಲಿ ನನಗೆ ಬಹಳ ಸಂತೋಷವುಂಟಾಗುತ್ತಿತ್ತು.

67. ಅರಣ್ಯದಲ್ಲಿ ಸಂಚರಿಸುತ್ತಾ ಈರೀತಿ ಚಿಂತಿಸುತ್ತಿರುವಾಗ ಅವನಿಗೆ ಮರುದ್ದೇವತೆಗಳ ಸಮೂಹವು ಗೋಚರವಾಯಿತು. ಶ್ಯಾವಾಶ್ವನು ತನ್ನ ಸಮೀಪದಲ್ಲಿ ನಿಂತಿರುವ ಆ ಮರುದ್ದೇವತೆಗಳನ್ನು ನೋಡಿದನು. ಅವರೆಲ್ಲರೂ ರೂಪದಲ್ಲಿ ಒಂದೇವಿಧವಾಗಿದ್ದರು.

68. ಆ ಮರುದ್ದೇವತೆಗಳೆಲ್ಲಾ ಒಂದೇ ವಯಸ್ಸಿನವರಾಗಿದ್ದರು. ಎದೆಯಲ್ಲಿ ಸುವರ್ಣಮಯವಾದ ಹಾರಗಳನ್ನು ಧರಿಸಿದ್ದರು. ಪುರುಷಾಕಾರದಿಂದಿರುವವರೂ, ಸಮಾನವಯಸ್ಕರೂ ಆದ ಮರುದ್ದೇವತೆಗಳನ್ನು ಶ್ಯಾವಾಶ್ವನು ನೋಡಿ,

69. ಆಶ್ಚರ್ಯದಿಂದ ಆ ಮರುದ್ದೇವತೆಗಳನ್ನು (**ಕೇ ಷ್ಠಾ ನರಃ** ಎಂಬ ೬೧ ನೇ ಸೂಕ್ತದ ಮೊದಲನೆಯ ಋಕ್ಕು) ಪ್ರಶ್ನೆಮಾಡಿದನು. ಆಗ ಅವರು ರುದ್ರಪುತ್ರರಾದ ಮರುದ್ದೇವತೆಗಳೆಂದು ಇವನಿಗೆ ತಿಳಿಯಿತು.

65. And they saluted Atri, the great seer, of brilliant splendour. (But) Syavasva thought : ‘ Because I have not seen (any) formula,

66. I have, alas ! not obtained the maiden beautiful in all her limbs. Could I but become a seer of formulas, my joy would be great.

67. To him as he thus reflected in the forest the host of the Maruts appeared.

He saw standing at his (ಆತ್ಮನಃ) side, quite (ಇವ) similar in form,

68. and equal in age, the Maruts, with gold on their breasts. Seeing the gods similar in age, with the figures of men,

69. Syavasva, astonished, then asked the Maruts, ‘ Who are ye ? ’ (ಕೇ ಷ್ಠಾ : v. 61. 1). Then, however, he became aware that they were the divine Maruts, the sons of Rudra.

ಯ ಈಂ ವಹಂತ ಇತ್ಯಾಭಿರ್ಬುಧ್ವಾ ತುಷ್ಟಾವ ತಾಂಸ್ತಥಾ ।
ಅತಿಕ್ರಮಂ ಹಿ ತಂ ಮೇನೇ ಋಷಿರ್ವಿಪುಲಮಾತ್ಮನಃ ॥ ೭೦ ॥

ಯನ್ನ ದೃಷ್ಟ್ವೈವ ತುಷ್ಟಾವ ಯಚ್ಚ ಕೇ ಷ್ಠೇತಿ ಪೃಷ್ಟವಾನ್ ।
ಸ್ತುತಾ ಸ್ತುತ್ಯಾ ತಯಾ ಪ್ರೀತಾ ಗಚ್ಛಂತಃ ಪೃಶ್ನಿಮಾತರಃ ॥ ೭೧ ॥

ಅವಮುಚ್ಯ ಸ್ವವಕ್ಷೋಭ್ಯೋ ರುಕ್ಮಂ ತಸ್ಮೈ ತದಾ ದದುಃ ।
ಮರುತ್ಸು ತು ಪ್ರಯಾತೇಷು ಶ್ಯಾವಾಶ್ವಃ ಸುಮಹಾಯಶಾಃ ॥ ೭೨ ॥

ರಥವೀತೇರ್ದುಹಿತರಮಗಚ್ಛನ್ಮನಸಾ ತದಾ ।
ಸ ಸದ್ಯ ಋಷಿರಾತ್ಮಾನಂ ಪ್ರವಕ್ಷ್ಯನ್ರಥವೀತಯೇ ॥ ೭೩ ॥

70. ಬಳಿಕ ಅವನು ಆ ಮರುದ್ದೇವತೆಗಳನ್ನು **ಯ ಈಂ ವಹಂತೇ** ಎಂಬ ೬೧ ನೇ ಸೂಕ್ತದ ೧೧ ನೇ ಋಕ್ಕಿನಿಂದ ಸ್ತುತಿಸಿದನು. ಅವರನ್ನು ನೋಡಿದ ಕೂಡಲೇ ಅವರನ್ನು ಸ್ತುತಿಸಲಿಲ್ಲವಲ್ಲಾ, ನಾನು ದೊಡ್ಡ ತಪ್ಪನ್ನು ಮಾಡಿದೆನು ಎಂದು ಋಷಿಯು ವ್ಯಥೆಪಟ್ಟನು.

71. ಆ ಮರುದ್ದೇವತೆಗಳೂ ಕೂಡ—ಈ ಋಷಿಪುತ್ರನು ನಮ್ಮನ್ನು ನೋಡಿದ ಕೂಡಲೆ ಸ್ತುತಿಸಲಿಲ್ಲ ಮತ್ತು ನೀವು ಯಾರೆಂದು ನಮ್ಮನ್ನೇ ಕೇಳಿದನು. ಎಂದು ತಮ್ಮಲ್ಲಿ ಪರಸ್ಪರ ಮಾತನಾಡಿಕೊಂಡರೂ ಅವನು ಮಾಡಿದ ಸ್ತುತಿಯಿಂದ ಪ್ರೀತರಾದ ಆ ಪೃಶ್ನಿ ಪುತ್ರರು ತಾವು ಹೊರಡುವಾಗ,

72. ತಮ್ಮ ಎದೆಯ ಮೇಲಿದ್ದ ಸುವರ್ಣಹಾರವನ್ನು ತೆಗೆದು ಆ ಶ್ಯಾವಾಶ್ವನಿಗೆ ಕೊಟ್ಟರು. ಮರುದ್ದೇವತೆಗಳ ಹೊರಟುಹೋದಮೇಲೆ ಕೀರ್ತಿಶಾಲಿಯಾದ ಆ ಶ್ಯಾವಾಶ್ವನೂ ಕೂಡ,

73. ರಥವೀತಿರಾಜನ ಪುತ್ರಿಯನ್ನೇ ಮನಸ್ಸಿನಲ್ಲಿ ಚಿಂತಿಸುತ್ತಿದ್ದನು. ತಾನು ಈಗತಾನೇ ಮಂತ್ರದ್ರಷ್ಟೃವಾದ ಋಷಿಯಾದೆನೆಂಬ ವಿಷಯವನ್ನು ಆ ರಥವೀತಿರಾಜನಿಗೆ ಹೇಳಬೇಕೆಂದು ಇಚ್ಛಿಸಿ,

70. Having observed (this), he also praised them with the (stanzas) 'They that ride' (ಯ ಈಂ ವಹಂತೇ : v. 61. 11). For the seer considered it a great transgression on his part,

71. that, as soon as he had seen them, he did not praise them, and that he asked them, 'Who are ye?' Being praised and being delighted with their praise, the sons of Prsni (the Maruts) as they went along,

### 14. Story of Syavasva (continued)

72. taking off the gold from their breasts, gave it, to him. Now when the Maruts had gone thence, the illustrious Syavasva

73. went in thought to the daughter of Rathaviti. He, only just (ಸದ್ಯಃ) a seer, wishing to declare himself to Rathaviti,

ಏತಂ ಮೇ ಸ್ತೋಮಮಿತ್ಯಾಭ್ಯಾಂ ದೌತ್ಯೇ ರಾತ್ರೀಂ ನ್ಯಯೋಜಯತ್ |
ರಥವೀತಿಮಪಶ್ಯಂತೀಂ ಸಂಪ್ರೇಕ್ಷ್ಯಾರ್ಷೇಣ ಚಕ್ಷುಷಾ || ೭೪ ||
ರಮ್ಯೇ ಹಿಮವತಃ ಪೃಷ್ಠೇ ಏಷ ಕ್ಷೇತೀತಿ ಚಾಬ್ರವೀತ್ |
ಋಷೇರ್ನಿಯೋಗಮಾಜ್ಞಾಯ ದೇವ್ಯಾ ರಾತ್ರ್ಯಾ ಪ್ರಚೋದಿತಃ || ೭೫ ||
ಆದಾಯ ಕನ್ಯಾಂ ತಾಂ ದಾರ್ಭ್ಯ ಉಪೇಯಾಯಾರ್ಚನಾನಸಂ |
ಪಾದೌ ತಸ್ಯೋಪಸಂಗೃಹ್ಯ ಸ್ಥಿತ್ವಾ ಪ್ರಹ್ವಃ ಕೃತಾಂಜಲಿಃ || ೭೬ ||
ರಥವೀತಿರಹಂ ದಾರ್ಭ್ಯ ಇತಿ ನಾಮ ಶಶಂಸ ಚ |
ಮಯಾ ಸಂಗತಿಮಿಚ್ಛಂತಂ ತ್ವಾಂ ಪ್ರತ್ಯಾಚಕ್ಷಿ ಯತ್ಪುರಾ || ೭೭ ||

74. ರಾತ್ರಿದೇವತೆಯನ್ನು ಕರೆದು ಆ ದೇವತೆಯ ಮುಖಾಂತರ **ಏತಂ ಮೇ ಸ್ತೋಮಂ** ಎಂದು ಮೊದಲಾಗುವ ಎರಡು ಋಕ್ಕುಗಳಿಂದ (೬೧ ನೇ ಸೂಕ್ತದ ೧೭-೧೮ ನೇ ಋಕ್ಕುಗಳು) ಹೇಳಿಕಳುಹಿಸಿದನು. ಆದರೆ ಆ ರಾತ್ರಿದೇವತೆಯು ರಥವೀತಿರಾಜನನ್ನು ನೋಡಿರಲಿಲ್ಲ. ಅವನು ಎಲ್ಲಿರುವನೆಂಬುದೂ ಗೊತ್ತಿರಲಿಲ್ಲ. ಆದ್ದರಿಂದ ಶ್ಯಾವಾಶ್ವನು ಋಷಿಸಹಜವಾದ ತನ್ನ ದಿವ್ಯದೃಷ್ಟಿಯಿಂದ ರಾಜನಿರುವ ಸ್ಥಳವನ್ನು ತಿಳಿದು,

75. ಎಲೈ ರಾತ್ರಿಯೇ, ಆ ರಥವೀತಿರಾಜನು ಮನೋಹರವಾದ ಹಿಮಾಲಯಪರ್ವತದ ತಪ್ಪಲುಪ್ರದೇಶದಲ್ಲಿ ವಾಸಿಸುತ್ತಿರುವನು ಎಂದು **ಏಷ ಕ್ಷೇತಿ** ಎಂಬ ಋಕ್ಕಿನಿಂದ (೬೧ ನೇ ಸೂಕ್ತದ ೧೯ ನೇ ಋಕ್ಕು) ತಿಳಿಸಿದನು. ಆದರಂತೆ ರಾತ್ರಿಯು ಶ್ಯಾವಾಶ್ವನ ನಿಯೋಗವನ್ನು ರಾಜನಿಗೆ ತಿಳಿಸಲು,

76. ದರ್ಭಪುತ್ರನಾದ ಆ ರಥವೀತಿರಾಜನು ತನ್ನ ಪುತ್ರಿಯನ್ನು ಜತೆಯಲ್ಲಿ ಕರೆದುಕೊಂಡು ಶ್ಯಾವಾಶ್ವನ ತಂದೆಯಾದ ಅರ್ಚನಾನಸನಿರುವ ಸ್ಥಳಕ್ಕೆ ಬಂದು ಅವನ ಪಾದಗಳನ್ನು ಮುಟ್ಟಿ ನಮಸ್ಕರಿಸಿ ಕೈಮುಗಿದುಕೊಂಡು ವಿನೀತನಾಗಿ,

77. ಎಲೈ ಮಹರ್ಷಿಯೇ, ನಾನು ದರ್ಭಪುತ್ರನಾದ ರಥವೀತಿರಾಜನು. ನೀನು ಹಿಂದೆ ನನ್ನೊಡನೆ ಬಂಧುತ್ವವನ್ನು ಬೆಳೆಸಬೇಕೆಂದು ಇಷ್ಟಪಟ್ಟಾಗ ನಾನು ಅದನ್ನು ತಿರಸ್ಕರಿಸಿದೆನಷ್ಟೆ.

---

74. commissinoned Night on a message with the two (stanzas) 'This my song of praise' (ಏತಂ ಮೇ ಸ್ತೋಮಂ : v. 61-17, 18); and to her (Night) who did not see Rathaviti, he discerning (him)with the eye of a seer,

75. said, 'Here he dwells' (ಏಷ ಕ್ಷೇತಿ v. 61. 19) 'on a delightful ridge of the Himavat' Urged by the goddess Night, after learning his instructions,

76. the son of Darbha, taking the girl with him, approached Archananas, and after clasping his feet, standing bent forward with folded hands,

### 15. Story of Syavasva (concluded).

77. he announced his name(saying), I am Rathaviti, son of Darbha; inasmuch as I refused you formerly when you desired an alliance with me,

ತತ್ಕ್ಷಮಸ್ವ ನಮಸ್ತೇಽಸ್ತು ಮಾ ಚ ಮೇ ಭಗವನ್ಕ್ರುಧಃ ।
ಋಷೇಃ ಪುತ್ರಃ ಸ್ವಯಮೃಷಿಃ ಪಿತಾಸಿ ಭಗವನ್ನೃಷೇಃ ॥ ೭೮ ॥
ಹಂತ ಪ್ರತಿಗೃಹಾಣೇಮಾಂ ಸ್ನುಷಾಮಿತ್ಯೇವಮಬ್ರವೀತ್ ।
ಪಾದ್ಯಾರ್ಘ್ಯಮಧುಪರ್ಕೈಶ್ಚ ಪೂಜಯಿತ್ವಾ ಸ್ವಯಂ ನೃಪಃ ॥ ೭೯ ॥
ಶುಕ್ಲಮಶ್ವಶತಂ ದತ್ವಾ ಅನುಜಜ್ಞೇ ಗೃಹಾನ್ಪ್ರತಿ ।
ಶಶೀಯಸೀಂ ತರಂತಂ ಚ ಪುರುಮೀಳ್ಹಂ ಚ ಪಾರ್ಥಿವಂ ॥ ೮೦ ॥
ಷಡ್ಭಿಃ ಸನದಿತಿ ಸ್ತುತ್ವಾ ಜಗಾಮರ್ಷಿರಪಿ ಕ್ಷಯಂ ।
ಋತೇನ ಮೈತ್ರಾವರುಣಾನ್ಯೇಕಾದಶ ಪರಾಣಿ ತು ॥ ೮೧ ॥

78. ಈಗ ಆ ತಪ್ಪನ್ನು ಕ್ಷಮಿಸು- ಇಗೋ ನಿನಗೆ ನಮಸ್ಕರಿಸುವೆನು. ನನ್ನ ಮೇಲೆ ಕೋಪಮಾಡಬೇಡ. ಎಲೈ ಪೂಜ್ಯನೇ, ನೀನು ಋಷಿಯ (ಮಂತ್ರದ್ರಷ್ಟೃವಿನ) ಪುತ್ರನು, ಸ್ವಯಂ ನೀನೂ ಋಷಿಯು ಮತ್ತು ಮಂತ್ರ ದ್ರಷ್ಟೃವಾದ ಋಷಿಯ ತಂದೆಯೂ ಆಗಿರುವೆ.

79. ಒಳ್ಳೇದು, ಆದದ್ದಾಯಿತು. ಈಗ ಈ ಕನ್ಯೆಯನ್ನು (ನನ್ನ ಪುತ್ರಿಯನ್ನು) ನಿನ್ನ ಸೊಸೆಯಾಗಿ ಪರಿಗ್ರಹಿಸು, ಎಂದು ಹೇಳಿ ಆ ರಾಜನು ತಾನೇ ಸ್ವತಃ ಆ ಋಷಿಯನ್ನು ಪಾದ್ಯ, ಅರ್ಘ್ಯ, ಮಧುಪರ್ಕಾದಿ ಸತ್ಕಾರ ಗಳಿಂದ ಪೂಜಿಸಿದನು.

80. ಅನಂತರ ಆ ಋಷಿಪುತ್ರನಿಗೆ ನೂರು ಶ್ವೇತಾಶ್ವಗಳನ್ನು (ಬಿಳೀ ಕುದುರೆಗಳನ್ನು) ಬಳುವಳಿಯಾಗಿ ಕೊಟ್ಟು ಅವನಿಂದ ಅನುಜ್ಞೆಯನ್ನು ಪಡೆದು ತನ್ನ ಗೃಹಾಭಿಮುಖವಾಗಿ ಹೊರಟುಹೋದನು. ಋಷಿಯೂ ಸಹ ಶಶೀಯಸಿ (ರಾಜಪತ್ನಿ) ಯನ್ನೂ, ತರಂತನನ್ನೂ, ಪುರುಮೀಳ್ಹರಾಜನನ್ನೂ,

81. **ಸನತ್ ಸಾಶ್ವ್ಯಂ** ಎಂದು ಮೊದಲಾಗುವ ಆರು ಋಕ್ಕುಗಳಿಂದ (೬೧ ನೇ ಸೂಕ್ತದ ೫-೧೦ ಋಕ್ಕು ಗಳು) ಪ್ರಶಂಸೆಮಾಡಿ ತಾನೂ ತನ್ನ ಮನೆಗೆ ಹೊರಟುಹೋದನು. ಈಗ ಇದರ ಮುಂದಿನ **ಋತೇನ ಋತಂ** ಎಂದು ಮೊದಲಾಗುವ ೧೧ ಸೂಕ್ತಗಳಲ್ಲಿ (೬೨-೭೨ ಸೂಕ್ತಗಳಲ್ಲಿ) ಮಿತ್ರಾವರುಣರನ್ನು ಸ್ತುತಿಸಲಾಗಿದೆ.

---

78. forgive me for that. I pay homage to you; and do not, adorable one, be wrath with me. You are the son of a seer, a seer yourself, you are, adorable one, the father of a seer.

79. Come, accept this (girl) as a daughter-in-law, So said the king, and himself honouring him with water to wash his feet (ಪಾದ್ಯ), with the water of hospitality (ಅರ್ಘ್ಯ) and with a mixture of honey (ಮಧುಪರ್ಕ),

80-81. and giving him a hundred white (ಶುಕ್ಲ) steeds, he dismissed him to his home. And the seer, on his part, having praised Sasiyasi, and king Purumilha with the six (stanzas) ' May she gain ' (ಸನತ್ : v. 61. 5.10), departed to his abode.

Now the following eleven (hymns beginning) ' With law ' (ಋತೇನ ; v. 62-72) are addressed to Mitra-Varuna.

ಷಳಾಶ್ವಿನಾನಿ ಗರ್ಭಾರ್ಥಂ ಪಂಚರ್ಚೋಽಪನಿಷತ್ಸ್ತುತಿಃ ।
ಸಪ್ತ ಕೃತ್ವಾಽಪರಾಧಾನ್ವೈ ವಿಫಲೇ ದಾರಸಂಗ್ರಹೇ ॥ ೮೨ ॥
ಋಷಿಃ ಕೃತೋಽಶ್ವಮೇಧೇನ ಭಾರತೇನೇತಿ ವೈ ಶ್ರುತಿಃ ।
ತಮಷ್ಟಮೇಽಪರಾಧೇ ತು ವೃಕ್ಷದ್ರೋಣ್ಯಾಂ ಸ ಪಾರ್ಥಿವಃ ॥ ೮೩ ॥
ಋಬೀಸೇ ಹ ವಿನಿಕ್ಷಿಪ್ಯ ಸ್ಕನ್ನಂ ರಾತ್ರ್ಯಾಂ ನ್ಯಧಾರಯತ್ ।
ಸೋಽಶ್ವಿನಾವಿತಿ ಸೂಕ್ತೇನ ತುಷ್ಟಾವರ್ಷಿಃ ಶುಭಸ್ಪತೀ ॥ ೮೪ ॥
ತೌ ತಂ ತಸ್ಮಾತ್ಸಮುದ್ಧೃತ್ಯ ಚಕ್ರತುಃ ಸಫಲಂ ಪುನಃ ।
ತೃಚಃ ಸ್ವಸ್ಯೈವ ಗರ್ಭಾರ್ಥಂ ಸ್ವಪತೇಸ್ತಸ್ಯ ಗರ್ಭವತ್ ॥ ೮೫ ॥

### ಸಪ್ತವಧ್ರಿಯ ವೃತ್ತಾಂತ

82-84. ಇಗರ ಮುಂದಿನ ಆರು ಸೂಕ್ತಗಳಲ್ಲಿ (೭೩-೭೮) ಅಶ್ವಿನೀದೇವತೆಗಳನ್ನು ಸ್ತುತಿಸಲಾಗಿದೆ. ಈ ೭೮ ನೇ ಸೂಕ್ತದ ಐದು ಋಕ್ಕುಗಳಲ್ಲಿ (೫-೯) ಗರ್ಭಾರ್ಥವಾಗಿ ಪ್ರಾರ್ಥಿಸಿರುವ ಸ್ತುತಿಯು ಉಕ್ತವಾಗಿದೆ. ಈ ವಿಷಯದಲ್ಲಿ ಒಂದು ಪೂರ್ವೇತಿಹಾಸವಿರುವುದು. ಭರತಕುಲದ ಅಶ್ವಮೇಧನೆಂಬ ರಾಜನಿಗೆ ಮಕ್ಕಳಿರಲಿಲ್ಲ. ಇವನಿಗೆ ಮಕ್ಕಳಾಗುವಂತೆ ದೇವತೆಗಳನ್ನು ಪ್ರಾರ್ಥಿಸಿ ಅವರ ಅನುಗ್ರಹವನ್ನು ಸಂಪಾದಿಸುವಂತೆ ಈ ಅತ್ರಿಋಷಿಯು ನಿಯಮಿಸಲ್ಪಟ್ಟನು. ಋಷಿಯು ರಾಜನ ಪುತ್ರಪ್ರಾಪ್ತಿಗಾಗಿ ಏಳಾವರ್ತಿ ಪ್ರಯತ್ನಪಟ್ಟರೂ ಸಫಲವಾಗಲಿಲ್ಲ. ಎಂಟನೆಯ ಸಲವೂ ಋಷಿಯ ಪ್ರಯತ್ನವು ವಿಫಲವಾದುದನ್ನು ಕಂಡು ರಾಜನಿಗೆ ಕೋಪಬಂದು ಇವನನ್ನು ಒಂದು ಮರದಪೆಟ್ಟಿಗೆಯಲ್ಲಿ ಹಾಕಿ ಆಳವಾದ ಒಂದು ಕಮರಿಯಲ್ಲಿ ನಿರ್ಬಂಧಿಸಿ ಇಟ್ಟಿದ್ದನು. ರಾತ್ರಿಕಾಲದಲ್ಲಿ ಆ ಪೆಟ್ಟಿಗೆಯಿಂದ ಹೇಗೋ ಈಚೆಗೆ ಬಂದು ಅಶ್ವಿನೀದೇವತೆಗಳನ್ನು **ಅಶ್ವಿನಾವೇಹ ಗಚ್ಛತಂ** ಎಂಬ ೭೮ ನೇ ಸೂಕ್ತದಿಂದ ಸ್ತುತಿಸಿದನು.

85-86. ಆ ಅಶ್ವಿನೀದೇವತೆಗಳು ಇವನನ್ನು ಆ ಹಳ್ಳದಿಂದ ಮೇಲಕ್ಕೆತ್ತಿ ಇವನ ಇಷ್ಟಾರ್ಥವನ್ನು ನೆರವೇರಿಸಿದರು. ಗರ್ಭವಾಸದಲ್ಲಿದ್ದಂತೆ ಮರದಪೆಟ್ಟಿಗೆಯಲ್ಲಿ ನಿರ್ಬಂಧಿತನಾಗಿದ್ದ ಆ ಋಷಿಗೆ ಮಕ್ಕಳಾಗುವುದಕ್ಕಾಗಿ **ಯಥಾ ವಾತಃ** ಎಂದು ಮೊದಲಾಗುವ ಮೂರು ಋಕ್ಕುಗಳು (೭೮ ನೇ ಸೂಕ್ತದ ೭-೯ ಋಕ್ಕುಗಳು) ಋಷಿಯಿಂದ ಪಠಿತ

### 16. RV. v. 73-78. Story of Saptavadhri.

82. There are six (hymns) addressed to the Asvins (v. 73-78). There is (here) a mystic (ಉಪನಿಷತ್) praise consisting of five stanzas (v. 78. 5-9) with a view to childbirth.

83-84 There is a sacred tradition (ಶ್ರುತಿ) that the seer after incurring seven faillures (ಅಪರಾಧಾನ್) was appointed (again) by (king) Asvamedha of the race of Bharata, his wedlock being childless. On the eighth failure, however, the king casting him, in a trough (made) of a tree (ವೃಕ್ಷದ್ರೋಣೀ), into a chasm (ಋಬೀಸ) kept him down (in it) when he leapt up at night (Then) the seer praised the Lords of Light (ಶುಭಸ್ಪತೀ) with the hymn 'Ye Asvins' (ಅಶ್ವಿನೌ : v. 78).

85-86. They, raising him out of that (chasm), made him productive again. The triplet 'Like the wind' (ಯಥಾ ವಾತಃ : v. 78. 7-9) is with

ಯಥಾ ವಾತ ಇತಿ ಜ್ಞೇಯೋ ತ್ವಶ್ವಿಭ್ಯಾಮಿತರೇ ಋಚೌ ।
ಸ್ರವತಾಮಪಿ ಗರ್ಭಾಣಾಂ ದೃಷ್ಟಂ ತದನುಮಂತ್ರಣಂ ॥ ೮೬ ॥

ಭಾವವೃತ್ತಂ ತು ತದ್ವತ್ಸ್ಯಾತ್ತಥಾರೂಪಂ ಹಿ ದೃಶ್ಯತೇ ।
ಜರಾಯುಗರ್ಭಶಬ್ದಾಭ್ಯಾಮೇತದ್ರೂಪಂ ಹಿ ದೃಶ್ಯತೇ ॥ ೮೭ ॥

ಮಹೇ ಉಷಸ್ಯೇ ಸಾವಿತ್ರೇ ಯುಂಜತೇಽಚ್ಛೇತಿ ವೈ ಸ್ತುತಃ ।
ಪರ್ಜನ್ಯೋ ಬಳಿತಿ ತ್ವಸ್ಮಿನ್ಪೃಥಿವೀ ಮಧ್ಯಮಾ ಸ್ತುತಾ ॥ ೮೮ ॥

ವಾಗಿವೆ. ಆದರೆ ಕೊನೆಯ ಎರಡು ಋಕ್ಕುಗಳಲ್ಲಿ (೮-೯) ಅಶ್ವಿನೀದೇವತೆಗಳನ್ನು ಗರ್ಭಸ್ರಾವಾರ್ಥವಾಗಿ ಸ್ತುತಿಸಲಾಗಿದೆ. ಸ್ತ್ರೀಯರ ಪ್ರಸವಕಾಲದಲ್ಲಿ ಸುಖಪ್ರಸವವಾಗುವುದಕ್ಕಾಗಿ ಈ ಮಂತ್ರಗಳನ್ನು ಪಠಿಸಬಹುದೆಂದು ಹೇಳಲಾಗಿದೆ. ಈ ಐದು ಋಕ್ಕುಗಳಿಗೂ (೫-೯) ಗರ್ಭಸ್ರಾವಿಣ್ಯೋಪನಿಷತ್ ಎಂಬ ಹೆಸರಿದೆ.

87. ಈ ಐದು ಋಕ್ಕುಗಳಲ್ಲಿ (೭೮ ನೇ ಸೂಕ್ತದ ೫-೯) ಪ್ರತಿಪಾದಿತವಾಗಿರುವ ವಿಷಯಗನ್ನು ಪರಿಶೀಲಿಸಿದರೆ ಈ ಋಕ್ಕುಗಳಿಗೆ ಭಾವವೃತ್ತವೇ ದೇವತೆಯೆಂದು ಹೇಳಬೇಕಾಗುವುದು. ಏಕೆಂದರೆ ಈ ಋಕ್ಕುಗಳಲ್ಲಿರುವ **ಜರಾಯು, ಗರ್ಭ** ಎಂಬ ಶಬ್ದಗಳು ಈ ವಿಧವಾದ ಅಭಿಪ್ರಾಯವನ್ನು ಪುಷ್ಟೀಕರಿಸುವವು.

**೭೯–೮೭ ನೇ ಸೂಕ್ತಗಳ ದೇವತೆಗಳು**

88. **ಮಹೇ ನೋ ಅದ್ಯ** ಎಂದು ಮೊದಲಾಗುವ ೨ ಸೂಕ್ತಗಳಲ್ಲಿ (೭೯–೮೦) ಉಷೋದೇವತೆಯೂ, **ಯುಂಜತೇ ಮನ** ಎಂದು ಪ್ರಾರಂಭವಾಗುವ ಮುಂದಿನ ಎರಡು ಸೂಕ್ತಗಳಲ್ಲಿ (೮೧–೮೨) ಸವಿತೃವೂ, **ಅಚ್ಛಾ ವದ** ಎಂಬ ೮೩ ನೇ ಸೂಕ್ತದಲ್ಲಿ ಪರ್ಜನ್ಯನೂ **ಬಳಿತ್ಥಾ** ಎಂಬ ೮೪ ನೇ ಸೂಕ್ತದಲ್ಲಿ ಮಧ್ಯಮಸ್ಥಾನದೇವತೆಯಾದ ಪೃಥಿವಿಯೂ ಸ್ತುತರಾಗಿರುವರು.

---

a view to a child (ಗರ್ಭ) for himself who like a child (in the womb) slept (in the tree); but the other two stanzas are to be known as for the Asvins.

This is also recognied (ದೃಷ್ಟಂ) as a consecrating prayer for children issuing from the womb (ಸ್ರವತಾಂ)

**17. Deities of RV. v. 79-87. Khilas.**

87. But it may likewise (ತದ್ವತ್) be (regaded as) concerned with the evolution of becoming (ಭಾವವೃತ್ತ), for it evidently has such a character: that it has this character (ರೂಪ) is evident from the two words after birth (ಜರಾಯು) and embryo (ಗರ್ಭ).

88. The two (hymns) 'To great' (ಮಹೇ : v. 79, 80) are addressed to Dawn, the two 'They yoke' (ಯುಂಜತೇ : v. 81. 82) are addressed to Savitr. (In) 'Unto' (ಅಚ್ಛಾ : v 83) Parjanya is praised ; but in 'Verily' (ಬಟ್ ; v. 84) the MIddle Earth is praissed.

ಅದ್ಯಾ ನೋ ದೇವ ಸವಿತರಿಯಂ ದುಃಸ್ವಪ್ನನಾಶಿನೀ |
ವಾರುಣಂ ತು ಪ್ರ ಸಮ್ರಾಜೇ ಇಂದ್ರಾಗ್ನೇ ಐಂದ್ರಾಗ್ನಮುತ್ತರಂ || ೮೯ ||
ವಿಷ್ಣುನ್ಯಂಗಂ ಪರಂ ಪ್ರೇತಿ ಮಾರುತಂ ಸೂಕ್ತಮುತ್ತಮಂ |
ಏವಯಾಮರುದಾಖ್ಯಾತಂ ದ್ಯೌರ್ನೇಂದ್ರೇ ಪ್ರತಿಪೂರ್ವಕಂ || ೯೦ ||
ಶ್ರೀಸೂಕ್ತಮಾಶೀರ್ವಾದಸ್ತು ಶ್ರೀಪುತ್ರಾಣಾಂ ಪರಾಣಿ ಷಟ್ |
ತತ್ಸ್ಯಾದ್ವಾಲಕ್ಷ್ಮ್ಯಪನುದಮಗ್ನಿಸ್ತತ್ರ ನಿಪಾತಭಾಕ್ || ೯೧ ||

89. **ಅದ್ಯಾ ನೋ ದೇವ ಸವಿತಃ** ಎಂಬ ಋಕ್ಕು (೮೨ ನೇ ಸೂಕ್ತದ ೪ ನೇ ಋಕ್ಕು) ದುಃಸ್ವಪ್ನವನ್ನು ನಾಶಮಾಡುವುದು. ಮುಂದಿನ **ಪ್ರ ಸಮ್ರಾಜೇ** ಎಂಬ ೮೫ ನೇ ಸೂಕ್ತದಲ್ಲಿ ವರುಣನನ್ನೂ, ಅದರ ಮುಂದಿನ **ಇಂದ್ರಾಗ್ನೀ** ಎಂಬ ೮೬ ನೇ ಸೂಕ್ತದಲ್ಲಿ ಇಂದ್ರಾಗ್ನಿಗಳನ್ನೂ ಸ್ತುತಿಸಲಾಗಿದೆ.

90. ಇದರ ಮುಂದಿನ ಸೂಕ್ತವೂ ಮಂಡಲದ ಕೊನೆಯ ಸೂಕ್ತವೂ ಆದ **ಪ್ರ ವೋ ಮಹೇ** ಎಂಬ ೮೭ನೇ ಸೂಕ್ತದಲ್ಲಿ ಮರುದ್ದೇವತೆಗಳನ್ನು ಸ್ತುತಿಸಲಾಗಿದೆ. ಸೂಕ್ತದ ಕೆಲವು ಋಕ್ಕುಗಳಲ್ಲಿ ವಿಷ್ಣುವಿನ ಹೆಸರು ಅಲ್ಲಲ್ಲಿ ಪ್ರಾಸಂಗಿಕವಾಗಿ ಉಕ್ತವಾಗಿದೆ. ಈ ಸೂಕ್ತಕ್ಕೆ ಏವಯಾಮರುತ್ ಎಂಬುವನು ಋಷಿಯು. ೬ ನೇ ಮಂಡಲದ **ದ್ಯೌರ್ನ** ಎಂಬ ೨೦ ನೇ ಸೂಕ್ತವು ಇಂದ್ರಸೂಕ್ತವೆಂದು ಕರೆಯಲ್ಪಡುವಂತೆ ಈ ಸೂಕ್ತಕ್ಕೆ ಏವಯಾಮರುತ್ಸೂಕ್ತವೆಂದು ಹೆಸರಿದೆ.

91. ಈ ಮಂಡಲಾಂತ್ಯದಲ್ಲಿ ಪಠಿಸಲ್ಪಡುವ (**ಹಿರಣ್ಯವರ್ಣಾಂ**) ಎಂಬ ಶ್ರೀಸೂಕ್ತವು ಆಶೀರ್ವಾದರೂಪವಾಗಿದೆ. ಈ ಸೂಕ್ತದ (ಮೊದಲಿನ) ಆರು ಋಕ್ಕುಗಳಲ್ಲಿ ಸಂಪತ್ ಮತ್ತು ಪುತ್ರರ ಪ್ರಸ್ತಾಪವಿದೆ ಅಥವಾ ಇದರಲ್ಲಿ ಅಲಕ್ಷ್ಮಿಯ (ದಾರಿದ್ರ್ಯದ) ಪರಿಹಾರವನ್ನು ಪ್ರಾರ್ಥಿಸಲಾಗಿದೆ. ಈ ಸೂಕ್ತದಲ್ಲಿರುವ ಅಗ್ನಿಯ ಸ್ತುತಿಯು ಪ್ರಾಸಂಗಿಕವಾಗಿರುವುದು.

---

89. The (stanza) 'For us to-day, god Savitr' (ಅದ್ಯಾ ನೋ ದೇವ ಸವಿತಃ : v. 82-4) destroys evil dreams.

'Forth to the sovereign lord' (ಪ್ರ ಸಮ್ರಾಜೇ : v. 85) is addressed to Varuna. The following one 'O Indra-Agni' (ಇಂದ್ರಾಗ್ನೀ : v. 86) is addressed to Indra-Agni.

90. The following hymn 'Forth' (ಪ್ರ : v. 87), the last (of the ಮಂಡಲ) is addressed to the Maruts while makiug incidental mention of Visnu (ವಿಷ್ಣುನ್ಯಂಗ).

It is called Evayamarut, being the antecedent (ಪ್ರತಿಪೂರ್ವಕ) in the (case of the) Indra hymn 'As Heaven' (ದ್ಯೌರ್ನ : vi. 20).

91. But the hymn of Fortune (ಶ್ರೀಸೂಕ್ತ) is a benediction: the following six are connected with fortune and sons. Or that (hymn) may be regarded (or meant) to banish ill-luck, Agni is incidentally praised (ನಿಪಾತಭಾಜ) in it.

ಪ್ರಜಾವಜ್ಜೀವಪುತ್ರೌ ವಾ ಗರ್ಭಕರ್ಮಣಿ ಸಂಸ್ತುತೌ |
ನಾನಾರೂಪಾ ಪಯಸ್ವಿನ್ಯಃ ಸಂಸ್ರವಂತೀತಿ ಸಂಸ್ತುತಾಃ || ೯೨ ||

ಆಶೀರ್ವಾದೇಷು ಸಂಜ್ಞಾಸು ಕರ್ಮಸಂಸ್ಥಾಸು ದೇವತಾ |
ನಿಪಾತಭಾಕ್ ಲಿಂಗವಾಕ್ಯಾತ್ಪರೀಕ್ಷೇತೇಹ ಮಂತ್ರವಿತ್ || ೯೩ ||

ಮಂತ್ರಪ್ರಯೋಗಮಂತ್ರಯೋಃ ಪ್ರಯೋಗೋ ಬಲವತ್ತರಃ |
ವಿಧೇಸ್ತಯೋಃ ಪರೀಕ್ಷಾ ಸ್ಯಾನ್ಮಂತ್ರಾಃ ಸ್ಯುರಭಿಧಾಯಕಾಃ || ೯೪ ||

92. ಅಥವಾ ಪ್ರಜಾವತ್ ಮತ್ತು ಜೀವಪುತ್ರ ಎಂಬ ಎರಡು ಸೂಕ್ತಗಳನ್ನು ಗರ್ಭಪ್ರಸವಕಾಲದಲ್ಲಿ ಪಠಿಸಬಹುದು. ಸಂಸ್ರವಂತಿ ಎಂಬ ಸೂಕ್ತದಲ್ಲಿ ಪಯಸ್ವಿನಿಯರಾದ (ಹಾಲನ್ನು ಕೊಡುವ) ನಾನಾವಿಧ ಸ್ತ್ರೀಯರ ಪ್ರಶಂಸೆ ಇದೆ ಅಥವಾ ಬಹೂದಕವುಳ್ಳ ನಾನಾನದಿಗಳ ಪ್ರಶಂಸೆ ಇದೆ ಎಂದೂ ಹೇಳಬಹುದು.

93. ಆಶೀರ್ವಾದರೂಪವಾದ ಮಂತ್ರಗಳಲ್ಲಿಯೂ, ನಾನಾಕರ್ಮಪ್ರಯೋಗಮಂತ್ರಗಳಲ್ಲಿಯೂ, ಅನೇಕ ದೇವತೆಗಳ ಸ್ತುತಿಯು ಪ್ರಸಂಗವಶದಿಂದ ಇರುವುದು ಕಂಡುಬರುವುದು. ಆದರೆ ಮಂತ್ರಜ್ಞನಾದ ಪುರುಷನು ಆಯಾ ಮಂತ್ರಗಳಲ್ಲಿರುವ ವಾಕ್ಯಾದಿಗಳಿಂದ ಮುಖ್ಯದೇವತೆ ಯಾವುದು, ಪ್ರಸಂಗವಶದಿಂದ ಸ್ತುತಿಸಲಾಗಿರುವ ದೇವತೆ ಯಾವುದು ಎಂಬುದನ್ನು ಪರೀಕ್ಷಿಸಿ ತಿಳಿಯಬೇಕು.

94. ಮಂತ್ರಗಳ ಮತ್ತು ಮಂತ್ರಪ್ರಯೋಗಗಳ (ಯಾವ ಮಂತ್ರವನ್ನು ಯಾವ ಸಂದರ್ಭದಲ್ಲಿ ಉಪಯೋಗಿಸಬೇಕೆಂಬುದಕ್ಕೆ ಪ್ರಯೋಗದೆಂದು ಹೆಸರು) ವಿಷಯದಲ್ಲಿ ಮಂತ್ರಪ್ರಯೋಗವೇ ಮುಖ್ಯವಾದುದು. ಈ ವಿಷಯದಲ್ಲಿ ಉಕ್ತವಾಗಿರುವ ವಿಧಿನಿಯಮಗಳನ್ನನುಸರಿಸಿ ಪರೀಕ್ಷೆಮಾಡಬೇಕು. ಮಂತ್ರಗಳು ಕೇವಲ ವಿಷಯಗಳನ್ನು ಮಾತ್ರ ಸೂಚಿಸುವವು.

**18. The Khilas of Prajavat and Jivaputra. Employment of formulas.**

92. Or the two (hymns of) Prajavat and Jivaputra (may be) used together as praise (ಸಂಸ್ತುತೌ) in the ceremony of pregnancy (ಗರ್ಭಕರ್ಮಣಿ). (In the hymn) 'Flow together' (ಸಂಸ್ರವಂತಿ) various kinds of females having milk are praised together.

93. In benedictions, in (enumerations of) technical names, in leading ritual forms, a deity is incidentally mentioned (ನಿಪಾತಭಾಜ). One familiar with formulas should here observe (it) carefully from the statement of its characteristic name (ಲಿಂಗ).

94. (In the case) of the application of a formula and the formula (itself), the application is the more important. There should be careful observation of the rule (ವಿಧಿ) regarding the two. The formulas should be (regarded as) making (only) statements (ಅಭಿಧಾಯಕಾಃ).

ತಸ್ಮಾತ್ತೇನ ವಿಸಂವಾದೋ ಮಂತ್ರಾಣಾಂ ತದ್ಗತಾನಿ ತು ।
ಗುಣಾಭಿಧಾಯಕಾನಿ ಸ್ಯುಃ ಸಂವಿಜ್ಞಾನಪದಾನಿ ತು ॥ ೯೫ ॥

ಮಂತ್ರೇಷು ಗುಣಭೂತೇಷು ಪ್ರಧಾನೇಷು ಚ ಕರ್ಮಸು ।
ಪ್ರಧಾನಗುಣಭೂತಾಃ ಸ್ಯುರ್ದೇವತಾ ಇತಿ ಗಮ್ಯತೇ ॥ ೯೬ ॥

ತ್ರಿಸಾಂವತ್ಸರಿಕಂ ಸತ್ರಂ ಪ್ರಜಾಕಾಮಃ ಪ್ರಜಾಪತಿಃ ।
ಆಹರತ್ಸಹಿತಃ ಸಾಧ್ಯೈರ್ವಿಶ್ವೈರ್ದೇವೈಃ ಸಹೇತಿ ಚ ॥ ೯೭ ॥

ತತ್ರ ವಾಗ್ದೀಕ್ಷಣೀಯಾಯಾಮಾಜಗಾಮ ಶರೀರಿಣೀ ।
ತಾಂ ದೃಷ್ಟ್ವಾ ಯುಗಪತ್ತತ್ರ ಕಸ್ಯಾಥ ವರುಣಸ್ಯ ಚ ॥ ೯೮ ॥

95. ಆದ್ದರಿಂದ ಮಂತ್ರಗಳ ಪ್ರಯೋಗವಿಧಾನದಲ್ಲಿ ಭಿನ್ನಾಭಿಪ್ರಾಯಗಳು ಉದ್ಭವಿಸುವುದು ಸಹಜವಾಗಿದೆ. ಆ ಮಂತ್ರಗಳಲ್ಲಿರುವ ಕೆಲವು ಪದಗಳು ಸಾಧಾರಣವಾಗಿ ಒಂದು ನಿರ್ದಿಷ್ಟಾರ್ಥವನ್ನು ಸೂಚಿಸುವುದಾಗಿದ್ದರೂ ಕೆಲವು ಸಂದರ್ಭಗಳಲ್ಲಿ ಅವು ಗುಣವರ್ಣನೆಗಾಗಿ ವಿಶೇಷಪದಗಳಂತೆ ಉಪಯೋಗಿಸಲ್ಪಟ್ಟಿರಬಹುದು.

96. ಗುಣವರ್ಣನೆ ಮಾಡುವ ಮಂತ್ರಗಳು ಅಷ್ಟುಮುಖ್ಯವಲ್ಲ. ಕರ್ಮಗಳೇ ಮುಖ್ಯವು. ಅಂತಹ ಕರ್ಮಗಳಲ್ಲಿ ಉಪಯೋಗಿಸಲು ಅರ್ಹವಾದ ಪ್ರಧಾನಗುಣಗಳಿಂದ ಕೂಡಿದ ಮಂತ್ರಗಳಲ್ಲಿ ಹೇಳಿರುವುದೇ ಪ್ರಧಾನ ದೇವತೆಗಳು. ಎಂದರೆ ಪ್ರಧಾನದೇವತೆಗಳ ಗುಣಗಳು ಮಾಡುವ ಕರ್ಮಗಳಿಗೆ ಅನುರೂಪವಾಗಿರಬೇಕು.

### ಭೃಗು, ಅಂಗಿರಸ, ಅತ್ರಿ ಎಂಬ ಋಷಿಗಳ ಜನನ ವೃತ್ತಾಂತ

97. ಒಂದಾನೊಂದು ಕಾಲದಲ್ಲಿ ಪ್ರಜಾಪತಿಯು ಪುತ್ರಾಪೇಕ್ಷೆಯಿಂದ ಸಾಧ್ಯರಿಂದಲೂ, ವಿಶ್ವೇದೇವತೆಗಳಿಂದಲೂ ಕೂಡಿ ಮೂರು ವರ್ಷಗಳವರೆಗೆ ಮಾಡಬೇಕಾದ ಸತ್ರಯಾಗವನ್ನು ಕೈಗೊಂಡನು.

98. ಆಗ ಯಾಗದೀಕ್ಷೆಯ ಕಾಲದಲ್ಲಿ ಸಾಕ್ಷಾತ್ ವಾಗ್ದೇವತೆಯೇ ಶರೀರವನ್ನು ಧರಿಸಿ ಅಲ್ಲಿಗೆ ಬಂದಳು. ಅವಳನ್ನು ನೋಡಿದ ಕೂಡಲೇ ಏಕಕಾಲದಲ್ಲಿ ಪ್ರಜಾಪತಿಯ ಮತ್ತು ವರುಣನ,

---

95 Hence (there may be) a disagreement of the formulas with the (application). But the words (ಪದ) occuring in them (the formulas), which have a generally understood meaning (ಸಂವಿಜ್ಞಾನ), may express what is secondary (ಗುಣ).

96. The formulas being secondary and the rites primary, the deities may be primary or secondary : this is (to be) understood.

### 19. Story of the birth of Bhrugu, Angiras and Atri.

97. Prajapati, desirous of offspring, offered a sessional sacrifice (ಸತ್ರ) lasting three years, accompanied by the Sadhyas and the All-gods, we are told (ಇತಿ).

98. Thither came Vac in bodily from to the ceremony of initiation On seeing her simultaneously Ka's (Prajapati's) and Varuna's.

ಶುಕ್ರಂ ಚಸ್ಕಂದ ತದ್ವಾಯುರಗ್ನೌ ಪ್ರಾಸ್ಯದ್ಯದೃಚ್ಛಯಾ ।
ತತೋಽರ್ಚಿಭ್ಯೋ ಭೃಗುರ್ಜಜ್ಞೇ ಅಂಗಾರೇಷ್ವಂಗಿರಾ ಋಷಿಃ ॥ ೯೯ ॥
ಪ್ರಜಾಪತಿಂ ಸುತೌ ದೃಷ್ಟ್ವಾ ದೃಷ್ಟ್ವಾ ವಾಗಭ್ಯಭಾಷತ ।
ಆಭ್ಯಾಮೃಷಿಸ್ತೃತೀಯೋಽಪಿ ಭವೇದತ್ರೈವ ಮೇ ಸುತಃ ॥ ೧೦೦ ॥
ಪ್ರಜಾಪತಿಸ್ತಯೇತ್ಯುಕ್ತಃ ಪ್ರತ್ಯಭಾಷತ ಭಾರತೀಂ ।
ಋಷಿರತ್ರಿಸ್ತತೋ ಜಜ್ಞೇ ಸೂರ್ಯಾನಲಸಮದ್ಯುತಿಃ ॥ ೧೦೧ ॥
ಯೋಽಙ್ಗಾರೇಭ್ಯ ಋಷಿರ್ಜಜ್ಞೇ ತಸ್ಯ ಪುತ್ರೋ ಬೃಹಸ್ಪತಿಃ ।
ಬೃಹಸ್ಪತೇರ್ಭರದ್ವಾಜೋ ವಿದಥೀತಿ ಯ ಉಚ್ಯತೇ ॥ ೧೦೨ ॥

### ಇತಿ ಪಂಚಮಂ ಮಂಡಲಂ

99. ವೀರ್ಯವು ಸ್ಖಲನವಾಯಿತು. ವಾಯುವು (ಗಾಳಿಯು) ಬೀಸುತ್ತಿರುವಾಗ ಆ ಗಾಳಿಯಿಂದ ವೀರ್ಯವು ಅಗ್ನಿಯಲ್ಲಿ ಬಂದು ಬಿದ್ದಿತು. ಅದರಿಂದ ಉಂಟಾದ ಅಗ್ನಿಜ್ವಾಲೆಯಿಂದ ಭೃಗುಋಷಿಯ ಉತ್ಪತ್ತಿಯಾಯಿತು. ಕೆಂಡಗಳಿಂದ ಅಂಗಿರಾಋಷಿಯ ಉತ್ಪತ್ತಿಯಾಯಿತು.

100. ಆಗ ವಾಗ್ದೇವತೆಯು ಈರೀತಿ ಉತ್ಪನ್ನರಾದ ಇಬ್ಬರು ಮಕ್ಕಳನ್ನು (ಭೃಗು ಮತ್ತು ಅಂಗಿರಾಃ) ನೋಡಿ ಪ್ರಜಾಪತಿಯನ್ನು ಕುರಿತು—ಎಲೈ ಪ್ರಜಾಪತಿಯೇ, ಈ ಇಬ್ಬರ ಮಕ್ಕಳ ಜತೆಗೆ ನನಗೆ (ಇನ್ನೂ ಒಬ್ಬ) ಮೂರನೆಯ ಪುತ್ರನೂ ಆಗಬೇಕೆಂದಳು.

101. ವಾಗ್ದೇವತೆಯ ಮಾತನ್ನು ಕೇಳಿ ಪ್ರಜಾಪತಿಯು ಹಾಗೆಯೇ ಆಗಲೆಂದು ಹೇಳಿದನು. ಅನಂತರ ಸೂರ್ಯಾಗ್ನಿಗಳ ಕಾಂತಿಗೆ ಸಮನಾದ ದಿವ್ಯಕಾಂತಿಯಿಂದ ಬೆಳಗುತ್ತಿರುವ ಅತ್ರಿಋಷಿಯು ಉತ್ಪನ್ನನಾದನು.

### ಭರದ್ವಾಜಋಷಿಯ ಜನನ ವೃತ್ತಾಂತ

102. ಹಿಂದೆ ಪ್ರಜಾಪತಿಯ ವೀರ್ಯವು ಬಿದ್ದ ಅಗ್ನಿಯ ಕೆಂಡಗಳಿಂದ ಅಂಗಿರಾಋಷಿಯ ಉತ್ಪತ್ತಿಯಾಯಿತೆಂದು ಹೇಳಿದೆಯಷ್ಟೆ. ಆ ಅಂಗಿರಾಋಷಿಯ ಪುತ್ರನೇ ಬೃಹಸ್ಪತಿಯು; ಬೃಹಸ್ಪತಿಯ ಪುತ್ರನು ಭರದ್ವಾಜನು. ಇವನಿಗೆ ವಿಥತೀ ಎಂದೂ ಹೆಸರು. ಅಂಗಿರಾಋಷಿಗೆ ಮೊಮ್ಮಗನಾದ ಈ ಭರದ್ವಾಜಋಷಿಯು ಮರುದ್ದೇವತೆಗಳಿಗೆ ಗುರುವಾಗಿದ್ದನು.

ಇಲ್ಲಿಗೆ ಐದನೆಯ ಮಂಡಲವು ಸಮಾಪ್ತವಾದುದು.

---

99. Seman was effused. Vayu scattered it in the fire at his will. Then from the flames Bhrgu was born, (and) the seer Angiras among the coal (ಅಂಗಾರ).

100. Vac, on seeing the two sons, herself being seen, said to Prajapeti: 'May a third seer also, in addition to these two, be (born) to me as a son'.

101. Prajapati (thus) addressed, replied 'So be it' to Bharati (ವಾಕ್). Then the seer Atri was born, equal in splendour to Sun and Fire.

102. Brhaspati was the son of the seer who was born from the coals (Angiras). Brihaspati's (son) Bharadvaja, who is called Vidathin.

End of Fifth Mandala.

### ಅಥ ಷಷ್ಠಂ ಮಂಡಲಂ

ಮರುತ್ಸ್ವಾಸೀದ್ಗುರುರ್ಯಶ್ಚ ಸ ಏವಾಂಗಿರಸೋ ನಪಾತ್ ॥
ಸಪುತ್ರಸ್ಯ ತು ತಸ್ಯೈತನ್ಮಂಡಲಂ ಷಷ್ಠಮುಚ್ಯತೇ ॥ ೧೦೩ ॥
ತ್ವಂ ಹ್ಯಗ್ನ ಇತಿ ತತ್ರಾದಾವಾಗ್ನೇಯಾನಿ ತ್ರಯೋದಶ ।
ಸೂಕ್ತಾನಿ ತ್ರೀಣಿ ಮೂರ್ಧಾನಮಗ್ನೇರ್ವೈಶ್ವಾನರಸ್ಯ ತು ॥ ೧೦೪ ॥
ಏಕಾನ್ನತ್ರಿಂಶದೇವಾತ್ರ ಪಿಬೇತ್ಯೈಂದ್ರಾಣ್ಯತಃ ಪರಂ ।
ಅಗ್ನೇ ಸ ಕ್ಷೇಷದಿತ್ಯಸ್ಯಾಂ ದೇವೌ ಯೌ ತು ನಿಪಾತಿತೌ ॥ ೧೦೫ ॥

## ಆರನೆಯ ಮಂಡಲವು

### ಆರನೇ ಮಂಡಲದ ೧-೪೬ ಸೂಕ್ತಗಳ ದೇವತೆಗಳು

103. ಈ ಆರನೇ ಮಂಡಲಕ್ಕೆ ಈ ಭರದ್ವಾಜಋಷಿಯೂ ಅವನ ಪುತ್ರರೂ ಮಂತ್ರದ್ರಷ್ಟೃಗಳಾದ ಋಷಿಗಳೆಂದು ಹೇಳುವರು.

104. ಈ ಆರನೇ ಮಂಡಲದಲ್ಲಿ **ತ್ವಂ ಹ್ಯಗ್ನೇ** ಎಂದು ಪ್ರಾರಂಭವಾಗುವ ೧೩ ಸೂಕ್ತಗಳಿಗೆ (೧-೬ ಮತ್ತು ೧೦-೧೬ ಒಟ್ಟು ೧೩ ಸೂಕ್ತಗಳಿಗೆ) ಅಗ್ನಿಯು ದೇವತೆಯು ; **ಮೂರ್ಧಾನಂ ದಿವಃ** ಎಂದು ಪ್ರಾರಂಭವಾಗುವ ಮೂರು ಸೂಕ್ತಗಳಿಗೆ (೭-೯) ವೈಶ್ವಾನರಾಗ್ನಿಯು ದೇವತೆಯು.

105. ಅನಂತರ **ಪಿಬಾ ಸೋಮಂ** ಎಂದು ಪ್ರಾರಂಭವಾಗುವ ೨೯ ಸೂಕ್ತಗಳಿಗೆ (೧೭-೪೬) ಇಂದ್ರನು ದೇವತೆಯು ; ಈ ಮಂಡಲದ **ಅಗ್ನೇ ಸ ಕ್ಷೇಷತ್** ಎಂಬ ೩ ನೇ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಕಂಡುಬರುವ ಇಬ್ಬರು ದೇವತೆಗಳು (ಮಿತ್ರ ಮತ್ತು ವರುಣ) ಅಲ್ಲಿ ಪ್ರಸಂಗವಶದಿಂದ ಸೂಚಿತರಾಗಿರುವರು.

### Mandala vi.

### 20. Origin of Bharadvaja. Deities of RV. vi. 1-46.

103. And who was a preceptor among the Maruts, was (thus) the grandson of Angiras, Now this sixth Mandala is stated to be his and his sons.

104. In it there are thirteen hymns addressed to Agni (beginning) 'You, O Agni' (ತ್ವಂ ಹ್ಯಗ್ನೇ : vi. 1-6, 10-16), while there are three (beginning) 'The head' (ಮೂರ್ಧಾನಂ : vi. 7-9) to Agni Vaisvanara.

105. After this (i.e. vi. 16) there are here exactly twenty-nine (hymns) addressed to Indra (beginning) 'Drink' (ಪಿಬ : vi. 17-1). The two gods who (occur) in the (stanza) 'O Agni, he dwells' (ಅಗ್ನೇ ಸ ಕ್ಷೇಷತ್ : vi. 3-1) are incidentally mentioned (ನಿಪಾತಿತೌ).

ಪ್ರೋ೬ತಯೇ ನೂ ಮ ಇತ್ಯೇತೇ ವೈಶ್ವದೇವ್ಯಾವೃಚೌ ಸ್ಮೃತೇ |
ಋಗ್ದ್ವಿತೀಯಾ ಪದಂ ಚಾಂತ್ಯಮೈಂದ್ರಮೇತಿ ಗವಾಂ ಸ್ತುತಿಃ || ೧೦೬ ||
ಆಸಸ್ರಾಣಾಸ ಇತ್ಯಸ್ಯಾಂ ವಾಯುರಿಂದ್ರಶ್ಚ ಸಂಸ್ತುತೌ |
ಇಂದ್ರಃ ಪ್ರಾಧಾನ್ಯತೋ ವಾತ್ರ ಸ್ತುತೋ ವಾಯುರ್ನಿಪಾತಭಾಕ್ || ೧೦೭ ||
ಅಯಂ ದೇವಸ್ತ್ರ್ಯಚಂ ಸೌಮ್ಯಮೈಂದ್ರಮೇಕೇ ಪ್ರಚಕ್ಷತೇ |
ಯ ಆನಯದಿತಿ ತ್ವಸ್ಯ ತೃಚೋಽಧೀತಿ ಬೃಬುಸ್ತುತಿಃ || ೧೦೮ ||

106. ಮತ್ತು ೨೧ ನೇ ಸೂಕ್ತದ **ಪ್ರೋ೬ತಯೇ ವರುಣಂ** ಎಂಬ ೯ ನೇ ಋಕ್ಕೂ, **ನೂ ಮ** ಆ ಎಂಬ ೧೧ ನೇ ಋಕ್ಕೂ ವಿಶ್ವೇದೇವತಾಕವೆಂದು ಹೇಳಲ್ಪಡುವವು. ೨೮ ನೇ ಸೂಕ್ತದಲ್ಲಿ ಗೋವುಗಳ ಸ್ತುತಿ ಇರುವುದು. ಆದರೆ ೨ ಮತ್ತು ಕೊನೆಯ ೮ ನೇ ಋಕ್ಕುಗಳಲ್ಲಿ ಇಂದ್ರನನ್ನು ಸ್ತುತಿಸಲಾಗಿದೆ.

### ೩೭, ೪೪, ೪೫, ೪೭ ನೇ ಸೂಕ್ತಗಳ ದೇವತೆಗಳು

107. ೩೭ ನೇ ಸೂಕ್ತದಲ್ಲಿರುವ **ಆಸಸ್ರಾಣಾಸಃ** ಎಂಬ ೩ ನೇ ಋಕ್ಕಿನಲ್ಲಿ ವಾಯು ಮತ್ತು ಇಂದ್ರ ಇವರಿಬ್ಬರೂ ಸ್ತುತರಾಗಿರುವರು ಅಥವಾ ಈ ಋಕ್ಕಿನಲ್ಲಿ ಮುಖ್ಯವಾಗಿ ಇಂದ್ರನನ್ನೂ, ಪ್ರಾಸಂಗಿಕವಾಗಿ ವಾಯುವನ್ನೂ ಸ್ತುತಿಸಲಾಗಿದೆಯೆಂದು ಭಾವಿಸಬಹುದು.

108. ೪೪ ನೇ ಸೂಕ್ತದ **ಅಯಂ ದೇವಃ** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿ (೨೨-೨೪) ಸೋಮನನ್ನು ಸ್ತುತಿಸಲಾಗಿದ್ದರೂ ಕೆಲವರು ಈ ಋಕ್ಕುಗಳಿಗೆ ಇಂದ್ರನು ದೇವತೆಯೆಂದು ಹೇಳುವರು. **ಯ ಆನಯತ್** ಎಂಬ ೪೫ ನೇ ಸೂಕ್ತದ **ಅಧಿ ಬೃಬುಃ** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿ (೩೧-೩೩) **ಬೃಬುಸ್ತಕ್ಷಾ** ಎಂಬ ದೇವತೆಯನ್ನು ಸ್ತುತಿಸಲಾಗಿದೆ.

---

106. But these two stanzas 'Bring to aid' (ಪ್ರೋ೬ತಯೇ: vi. 21. 9) 'Now my' (ನೂ ಮೇ: vi. 21. 11) are traditionally held to be addressed to the All-gods. The hymn 'Hither' (ಆ: vi. 28) is (in) praise of cows, the second stanza (i. 28. 2) and the last verse (vi. 28. 8) being addressed to Indra.

### 21. Deities of RV. vi. 37, 44, 45, 47.

107. In the (stanza) 'Bringing hither' (ಆಸಸ್ರಾಣಾಸಃ: vi. 37. 3) Vayu and Indra are praised together.

Or else Indra is here predominantly praised, while Vayu is incidental (ನಿಪಾತಭಾಜ).

108. The triplet 'This god' (ಅಯಂ ದೇವಃ: vi. 44. 22-24), which is addressed to Soma, some say, is addressed to Indra.

But the triplet 'Above' (ಅಧಿ: 31-33) of the (hymn) 'Who brought' (ಯ ಆನಯತ್: vi. 45) is (in) praise of Bṛbu (ಬೃಬು).

ಪಿತರಂ ಸ್ತೌತಿ ಶಂಯುಶ್ಚ ತೃಚಸ್ಯಾಂತೇ ಪದೇ ಸ್ವಕಂ ।
ಸ್ವಾದುಷ್ಕಿಲಾಯಮಿತಿ ತು ಸೌಮ್ಯಃ ಪಂಚರ್ಚ ಉತ್ತರಃ ॥ ೧೦೯ ॥
ಇಂದ್ರಃ ಪ್ರಧಾನತೋ ವಾತ್ರ ಸ್ತುತಃ ಸೋಮೋ ನಿಪಾತಭಾಕ್ ।
ಇಂದ್ರಸ್ಯೈಂದ್ರ್ಯೋಽನುಪಾನೀಯಾಃ ಶ್ರೂಯಂತೇ ಹ್ಯೈತರೇಯಕೇ ॥ ೧೧೦ ॥
ಅಗವ್ಯೂತಿ ಸ್ತೌತಿ ದೇವಾನ್ಪಾದೋ ಭೂಮಿಮಥೋತ್ತರಃ ।
ಬೃಹಸ್ಪತಿಂ ತೃತೀಯಸ್ತು ಇಂದ್ರಮೇವೋತ್ತಮಂ ಪದಂ ॥ ೧೧೧ ॥
ವನಸ್ಪತೇ ವೀಡ್ವಂಗಃ ಪರಂ ಯತ್ರ ದಾಚಾರ್ಯಾ ಭಾವವೃತ್ತಂ ವದಂತಿ ।

109. ೪೬ ನೇ ಸೂಕ್ತದ ಕೊನೆಯ ಋಕ್ಕಿನ ಕೊನೆಯ ಪಾದದಲ್ಲಿ ಸೂಕ್ತದ ಋಷಿಯಾದ ಶಂಯುವು ತನ್ನ ತಂದೆಯನ್ನು (ಭರದ್ವಾಜ) ಸ್ತುತಿಸಿರುವನು. ಇಂದ್ರದೇವತಾಕವಾದ ಸೂಕ್ತಗಳಾದನಂತರ **ಸ್ವಾದುಷ್ಕಿಲಾಯಂ** ಎಂಬ ೪೭ ನೇ ಸೂಕ್ತದ ಮೊದಲ ೫ ಋಕ್ಕುಗಳು (೧-೫) ಸೋಮದೇವತಾಕವು.

110. ಅಥವಾ ಈ ಋಕ್ಕುಗಳಿಗೆ (೧-೫) ಇಂದ್ರನೇ ಪ್ರಧಾನದೇವತೆಯು, ಸೋಮನು ಪ್ರಸಂಗವಶದಿಂದ ಸ್ತುತನಾಗಿರುವನು ಎಂದೂ ಹೇಳಬಹುದು. ಏಕೆಂದರೆ ಐತರೇಯಬ್ರಾಹ್ಮಣದಲ್ಲಿ ಈ ಮಂತ್ರಗಳು ಇಂದ್ರದೇವತಾಕವಾದ ಅನುಪಾನೀಯಮಂತ್ರಗಳೆಂದು ಹೇಳಲ್ಪಟ್ಟಿವೆ.

111. ೪೭ ನೇ ಸೂಕ್ತದ **ಅಗವ್ಯೂತಿ** ಎಂಬ ೨೦ ನೇ ಋಕ್ಕಿನಲ್ಲಿ ಮೊದಲನೆಯ ಪಾದದಲ್ಲಿ ದೇವತೆಗಳನ್ನೂ, ಎರಡನೆಯ ಪಾದದಲ್ಲಿ ಭೂಮಿಯನ್ನೂ, ಮೂರನೆಯ ಪಾದದಲ್ಲಿ ಬೃಹಸ್ಪತಿಯನ್ನೂ ನಾಲ್ಕನೆಯ ಪಾದದಲ್ಲಿ ಇಂದ್ರನನ್ನೂ ಸ್ತುತಿಸಲಾಗಿದೆ.

112. ಅದೇ ಸೂಕ್ತದ **ವನಸ್ಪತೇ ವೀಡ್ವಂಗಃ** ಎಂಬ ೨೬ ನೇ ಋಕ್ಕಿನಲ್ಲಿ ಭಾವವೃತ್ತವು (ದೇವತೆಯೆಂದು) ಉಕ್ತವಾಗಿದೆಯೆಂದು ಕೆಲವು ಆಚಾರ್ಯರು ಹೇಳುವರು. ಆದರೆ **ವನಸ್ಪತೇ** ಎಂದು ಮೊದಲಾಗುವ ಮೂರು

---

109. And Samyu praises his father in the last verse (ಪಾದ) of the triplet. The five stanzas (beginning) 'Sweet, indeed, is this' (ಸ್ವಾದುಷ್ಕಿಲಾಯಂ: vi. 47. 1-5) which follow (the Indra hymns) are addressed to Soma.

110. Or else Indra is here predominantly praised, while Soma is incidental; for in the Aitareya (Brahman) they are stated to be ಅನುಪಾನೀಯ stanzas addressed to Indra.

111. (In) 'Destitute of pasture' (ಅಗವ್ಯೂತಿ : vi. 47. 20) one verse (ಪಾದ) praises the Gods, the next one (the second) the Earth, the third Brhaspati the last verse (ಪಾದ) Indra.

### 22. Deities of RV. vi. 47 (continued) and vi. 48.

112. The (verse) which follows, 'O Lord of Wood, be firm in body (ವನಸ್ಪತೇ ವೀಡ್ವಂಗಃ : vi. 47. 26), the teachers state to be evolutionary (ಭಾವವೃತ್ತ). But the (whole) three stanzas (26-28) relate to the stroking of the car, while

ಋಚಸ್ತು ತಿಸ್ರಸ್ತು ರಥಾಭಿಮರ್ಶನಾ ಉಪೇತಿ ತಿಸ್ರೋ ದುಂದುಭೇಃ ಸಂಸ್ತವೋಽತ್ರ ॥

ಸಮಶ್ವಪರ್ಣಾ ಇತಿ ಚಾರ್ಧಮೈಂದ್ರಂ ದಶಾದಿತೋಽಗ್ನೇಸ್ತೃಣಪಾಣಿಕಸ್ಯ ।
ತೃಚಃ ಪರೋ ಮಾರುತಃ ಪೃಶ್ನಿಸೂಕ್ತೇ ದ್ವೃಚಃ ಪರೋ ವೈಶ್ವದೇವಃ ಪುನಶ್ಚ ॥ ೧೧೩ ॥

ಆದಿತ್ಯೋ ವಾ ಮಾರುತ ಏವ ವಾ ಸ್ಯಾದಾ ಮಾ ಪೂಷನ್ನಿತಿ ಪೌಷ್ಣೀಶ್ಚತಸ್ರಃ ।
ದ್ವೃಚಂ ಪರಂ ಮಾರುತಂ ತತ್ರ ವಿದ್ಯಾದಂತ್ಯಾದ್ಯುಭ್ವೋಃ ಕೀರ್ತನಾ ಪೃಶ್ನಯೋ ವಾ ॥ ॥

ಋಕ್ಕುಗಳಲ್ಲಿಯೂ (೨೬–೨೮) ರಥಾಭಿಮರ್ಶನವನ್ನು ಸ್ತುತಿಸಲಾಗಿದೆ ಮತ್ತು **ಉಪ ಶ್ವಾಸಯ** ಎಂದು ವೊದಲಾಗುವ ಮುಂದಿನ ಮೂರು ಋಕ್ಕುಗಳಲ್ಲಿ (೨೯–೩೧) ದುಂದುಭಿಯನ್ನು (ನಗಾರಿ) ಸ್ತುತಿಸಲಾಗಿದೆ.

113. ೪೭ ನೇ ಸೂಕ್ತದ ೩೧ ನೇ ಋಕ್ಕಿನ **ಸಮಶ್ವಪರ್ಣಾಃ** ಎಂಬ ಉತ್ತರಾರ್ಧದಲ್ಲಿ ಇಂದ್ರನನ್ನು ಸ್ತುತಿಸಲಾಗಿದೆ. ಮುಂದಿನ ೪೮ ನೇ ಸೂಕ್ತದ ವೊದಲ ಹತ್ತು ಋಕ್ಕುಗಳಿಗೆ (೧–೧೦) ಅಗ್ನಿಯು ದೇವತೆಯು; (ಈ ೪೮ ನೇ ಸೂಕ್ತದ ಋಷಿಯಾದ **ಶಂಯುರ್ಬಾರ್ಹಸ್ಪತ್ಯಃ** ಎಂಬುವನಿಗೆ ತೃಣಪಾಣಿ ಎಂದೂ ಹೆಸರು. ಆದ್ದರಿಂದ ಆ ಋಷಿದೃಷ್ಟವಾದ ಈ ಸೂಕ್ತವನ್ನು ತೃಣಪಾಣಿಸೂಕ್ತವೆಂದು ಕರೆಯಲಾಗಿದೆ). ಮುಂದಿನ ಮೂರು ಋಕ್ಕುಗಳಿಗೆ (೧೧–೧೩) ಮರುದ್ದೇವತೆಗಳೂ ಅದರ ಮುಂದಿನ ಎರಡು ಋಕ್ಕುಗಳಿಗೆ (೧೪–೧೫) ವಿಶ್ವೇದೇವತೆಗಳೂ ದೇವತೆಯು (ಮರುತ್ತುಗಳನ್ನು ಸ್ತುತಿಸುವ ಮಂತ್ರಗಳನ್ನು ಪೃಶ್ನಿಸೂಕ್ತವೆಂದು ಕರೆಯುವ ರೂಢಿಯುಂಟು).

114. ಅಥವಾ ೪೮ ನೇ ಸೂಕ್ತದ ೧೩-೧೫ ನೇ ಋಕ್ಕುಗಳಿಗೆ ಆದಿತ್ಯರಾಗಲಿ, ಮರುತ್ತುಗಳಾಗಲಿ ದೇವತೆಗಳಾಗಬಹುದು (ಲಿಂಗೋಕ್ತದೇವತೆಗಳಾಗಬಹುದು). **ಆ ಮಾ ಪೂಷನ್** ಎಂದು ಪ್ರಾರಂಭವಾಗುವ ೪ ಋಕ್ಕುಗಳಿಗೆ (೧೬–೧೯) ಪೂಷನು ದೇವತೆಯು ; ಮುಂದಿನ ೨ ಋಕ್ಕುಗಳಿಗೆ (೨೦–೨೧) ಮರುತ್ತುಗಳು ದೇವತೆಯು. ಈ ಸೂಕ್ತದ ಕೊನೆಯ ಋಕ್ಕಿಗೆ (೨೨) ದ್ಯಾವಾಭೂಮಿಗಳಾಗಲಿ, ಪೃಶ್ನಿಯಾಗಲಿ ದೇವತೆಯಾಗಬಹುದು.

---

the three here (beginning) ‘Forth’ (ಉಪ: 29-31) are (in) praise of the Drum.

113. And the hemistich ‘together, winged with steeds’ ಸಮಶ್ವಪರ್ಣಾಃ : vi. 47. 31) is addressed to Indra. The ten (stanzas) at the beginning of the ತೃಣಪಾಣಿ hymn (vi. 48. 1-10) are to Agni ; the following triplet (11-13) in (this) hymn to Prsni is addressed to the Maruts, and, again, the following couplet (14, 15) is addressed to the All-gods.

114. Or it may be addressed to the Adityas or to the Maruts. The four (stanzas) ‘To me, O Pusan, (ಆ ಮಾ ಪೂಷನ್ : vi. 48. 16-19) one should know to be addressed to Pusan, (and) the following couplet there (20, 21) to be addressed to the Maruts ; the last (stanza) is a celebration of Heaven and Earth or is (meant) for Prsni (22).

ಸ್ತುಷೇ ಸೂಕ್ತಾನಿ ಚತ್ವಾರಿ ವೈಶ್ವದೇವಾನ್ಯತಃ ಪರಂ ।
ದ್ವಿತೀಯಾಗ್ನಿಂ ಚತುರ್ಥೀಂ ಚ ವಾಯುಂ ಪಂಚಮ್ಯಥಾಶ್ವಿನೌ ॥ ೧೧೫ ॥
ಸ್ತೌತ್ಯೃಕ್ ತು ಸಪ್ತಮೀ ವಾಚಮತ್ರ ಪೂಷಣಮಷ್ಟಮೀ ।
ತ್ವಷ್ಟಾರಂ ನವಮೀ ರುದ್ರಂ ಭುವನಸ್ಯೇತ್ಯಥೋತ್ತರೇ ॥ ೧೧೬ ॥
ಮಾರುತ್ಯೌ ಯೋ ರಜಾಂಸೀತಿ ವಿಷ್ಣುಮೇವ ಜಗಾವೃಷಿಃ ।
ಅಭ್ಯೈಂದ್ರ್ಯೇತಿ ಚ ಸಾವಿತ್ರೀ ರೌದಸ್ಯಾಗ್ನೇಯ್ಯುತಾಶ್ವಿನೀ ॥ ೧೧೭ ॥

**೪೯-೫೨ ನೇ ಸೂಕ್ತಗಳ ದೇವತೆಗಳು**

115. ಮುಂದಿನ **ಸ್ತುಷೇ ಜನಂ** ಎಂದು ಮೊದಲಾಗುವ ೪ ಸೂಕ್ತಗಳಲ್ಲಿ (೪೯-೫೨) ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ. ೪೯ ನೇ ಸೂಕ್ತದ ೨ ನೇ ಋಕ್ಕಿನಲ್ಲಿ ಅಗ್ನಿಯನ್ನೂ, ೪ ನೇ ಋಕ್ಕಿನಲ್ಲಿ ವಾಯುವನ್ನೂ, ೫ ನೇ ಋಕ್ಕಿನಲ್ಲಿ ಅಶ್ವಿನೀದೇವತೆಗಳನ್ನೂ,

116. ೭ ನೇ ಋಕ್ಕಿನಲ್ಲಿ ವಾಕ್ಕನ್ನೂ, ೮ ನೇ ಋಕ್ಕಿನಲ್ಲಿ ಪೂಷದೇವನನ್ನೂ, ೯ ನೇ ಋಕ್ಕಿನಲ್ಲಿ ತ್ವಷ್ಟೃವನ್ನೂ, ಮುಂದಿನ **ಭುವನಸ್ಯ ಪಿತರಂ** ಎಂಬ ೧೦ ನೇ ಋಕ್ಕಿನಲ್ಲಿ ರುದ್ರನನ್ನೂ, ಮುಂದಿನ ಎರಡು ಋಕ್ಕುಗಳಲ್ಲಿ (೧೧-೧೨)

117. ಮರುದ್ದೇವತೆಗಳನ್ನೂ ಸ್ತುತಿಸಲಾಗಿದೆ. **ಯೋ ರಜಾಂಸಿ** ಎಂಬ ೧೩ ನೇ ಋಕ್ಕಿನಲ್ಲಿ ಋಷಿಯು ವಿಷ್ಣುವಿನ ಗುಣಗಾನಮಾಡಿರುವನು. ೫೦ ನೇ ಸೂಕ್ತದ **ಅಭಿ ತ್ಯಂ** ಎಂಬ ೬ ಋಕ್ಕಿನಲ್ಲಿ ಇಂದ್ರನನ್ನೂ, **ಆ ನೋ ದೇವಃ** ಎಂಬ ೮ ನೇ ಋಕ್ಕಿನಲ್ಲಿ ಸವಿತೃದೇವನನ್ನೂ ಸ್ತುತಿಸಲಾಗಿದೆ. ಇದೇ ೫೦ ನೇ ಸೂಕ್ತದ ೫ ನೇ ಋಕ್ಕಿಗೆ ರೋದಸಿಯೂ, ೯ ನೇ ಋಕ್ಕಿಗೆ ಅಗ್ನಿ ಮತ್ತು ಅಶ್ವಿನೀದೇವತೆಗಳೂ **ಉತ ತ್ಯಾ ಮೇ** ಎಂದು ಪ್ರಾರಂಭವಾಗುವ ಮುಂದಿನ ೨ ಋಕ್ಕುಗಳಿಗೆ (೯-೧೦) ಅಶ್ವಿನೀದೇವತೆಗಳೂ ದೇವತೆಯು,

---

## 23. Deitief of RV. vi. 49.52.

115-116. After this the hymns 'I praise' (ಸ್ತುಷೇ : vi. 49.52) are addressed to the All-gods; the second stanza (vi. 49-2) (praises) Agni, and the fourth (49-4) Vayu; then the fifth (49-5) the Asvins, but the seventh here praises Vac (49.7), the eighth (49. 8) Pusan, the nineth (49. 9) Tvastr, 'Of the world' (ಭುವನಸ್ಯ : 49.-10) Rudra, then the two next (49-11, 12).

117. are addressed to the Maruts. (With) 'Who the spaces' (ಯೋ ರಜಾಂಸಿ : vi. 49-13) the seer sang of Visnu. 'To' (ಅಭಿ: vi. 50. 6) is addressed to Indra, and 'Hither' (ಆ : vi. 50. 8) is addressed to Savitr There is one to Rodasi (vi. 50. 5), one to Agni (9) as well as to the Asvins (10) (beginning) 'And' (ಉತ; vi. 50. 9, 10).

ಅಗ್ನೀಪರ್ಜನ್ಯಾವನಯೋಃ ಸೌರ್ಯೌ ಚೋದು ತ್ಯದಿತ್ಯೃಚೌ ।
ವಯಂ ಚತ್ವಾರಿ ಪೌಷ್ಣಾನಿ ತ್ವೈಂದ್ರಾಪೌಷ್ಣಸ್ಯ ಚೋತ್ತರಂ ॥ ೧೧೮ ॥
ರಥೀತಮಂ ಕಪರ್ದಿನಂ ರೌದ್ರಮೇಕೇ ಪ್ರಚಕ್ಷತೇ ।
ಐಂದ್ರಾಗ್ನೇ ಪ್ರ ನು ವೋಚೇತಿ ಇಯಂ ಸಾರಸ್ವತಂ ಸ್ತುಷೇ ॥ ೧೧೯ ॥
ಆಶ್ವಿನೇ ಚೌಷಸೇ ಚೈವ ಮಾರುತಂ ತು ವಪುರ್ನ್ವಿತಿ ।
ಉಪೇತಿ ಚ ದ್ವ್ಯೃಚೇಽಶ್ವಿಭ್ಯಾಮಾರಾಧನಂ ಚ ಶಂಸತಿ ॥ ೧೨೦ ॥

118. ೫೨ ನೇ ಸೂಕ್ತದ **ಅಗ್ನೀಪರ್ಜನ್ಯಾವವತಂ** ಎಂಬ ೧೬ ನೇ ಋಕ್ಕಿಗೆ ಅವರೇ (ಅಗ್ನೀಪರ್ಜನ್ಯರೇ) ದೇವತೆಯು; ೫೧ ನೇ ಸೂಕ್ತದ **ಉದು ತ್ಯತ್** ಎಂದು ಪ್ರಾರಂಭವಾಗುವ ಮೊದಲ ೨ ಋಕ್ಕುಗಳಿಗೆ ಸೂರ್ಯನು ದೇವತೆಯು; **ವಯಮು ತ್ವಾ** ಎಂದು ಪ್ರಾರಂಭವಾಗುವ ೪ ಸೂಕ್ತಗಳಿಗೂ (೫೩-೫೬) ಮುಂದಿನ ೫೮ ನೇ ಸೂಕ್ತಕ್ಕೂ ಪೂಷನು ದೇವತೆಯು; ೫೭ ನೇ ಸೂಕ್ತಕ್ಕೆ ಇಂದು ಮತ್ತು ಪೂಷಾ ಎಂಬಿಬ್ಬರೂ ದೇವತೆಗಳು.

119. ೫೫ ನೇ ಸೂಕ್ತದ **ರಥೀತಮಂ ಕಪರ್ದಿನಂ** ಎಂಬ ೨ ನೇ ಋಕ್ಕಿಗೆ ರುದ್ರನು ದೇವತೆಯೆಂದು ಕೆಲವರು ಹೇಳುವರು. **ಪ್ರ ನು ವೋಚಾ** ಎಂದು ಪ್ರಾರಂಭವಾಗುವ ಮುಂದಿನ ೨ ಸೂಕ್ತಗಳಿಗೆ (೫೯-೬೦) ಇಂದ್ರಾಗ್ನಿಗಳು ದೇವತೆಯು; **ಇಯಮದದಾತ್** ಎಂಬ ೬೧ ನೇ ಸೂಕ್ತಕ್ಕೆ ಸರಸ್ವತಿಯು ದೇವತೆಯು; **ಸ್ತುಷೇ ನರಾ** ಎಂದು ಮೊದಲಾಗುವ ಮುಂದಿನ ಎರಡು ಸೂಕ್ತಗಳಿಗೆ (೬೨-೬೩),

**೬೩-೭೪ ನೇ ಸೂಕ್ತಗಳ ದೇವತೆಯು; ಸಪ್ತನಿಧಿಗಳು**

120. ಅಶ್ವಿನೀದೇವತೆಗಳು ದೇವತೆಯು; ಮುಂದಿನ ಎರಡು ಸೂಕ್ತಗಳಿಗೆ (೬೪-೬೫) ಉಷೋದೇವತೆಯು ದೇವತೆಯು; **ವಪುರ್ನು** ಎಂಬ ೬೬ ನೇ ಸೂಕ್ತಕ್ಕೆ ಮರುತ್ತುಗಳು ದೇವತೆಯು. **ಉಪ** ಎಂದು ಮೊದಲಾಗುವ ೨ ಋಕ್ಕುಗಳಲ್ಲಿ (?) ಅಶ್ವಿನೀದೇವತೆಗಳ ಪ್ರಶಂಸೆ ಇದೆ.

---

118. 'O Agni and Parjanya' (ಅಗ್ನೀಪರ್ಜನ್ಯಾ: vi. 52-16) belongs to those two (deities), and the two stanzas 'Upward that' (ಉದು ತ್ಯತ್: vi, 51-1,2) are addressed to Surya. 'We' (ವಯಂ: vi. 53. 56)are four (hymns) addressed to Pusan, as well as that which comes next (58) to the one addressed to Indra-Pusan (57).

119. Some declare the stanza 'Him chief of charioteers, with braided heir' (ರಥೀತಮಂ ಕಪರ್ದಿನಂ: vi. 55. 2) to be addressed to Rudra.

'I will now proclaim' (ಪ್ರ ನು ವೋಚ: vi. 59, 60) is addressed to Indra-Agni. 'She' (ಇಯಂ: vi. 61) is addressed to Sarasvati; 'I praise' (ಸ್ತುಷೇ: vi. 62).

**24 Deities of RV. vi. 63-74. The seven treasures.**

120. are two (62, 63) addressed to the Asvins; and there are also two (64, 65) addressed to Dawn; but 'A wonder now' (ವಪುರ್ನು: vi. 66) is addressed to the Maruts,

And in the couplet 'Unto' (ಉಪ) he (the seer) proclaims adoration of the Asvins.

ಸ್ಯೈತ್ರಾವರುಣಮೇಕಂ ವಿಶ್ವೇಷಾಂ ವಃ ಸತಾಮಿತಿ |
ಶ್ರುಷ್ಟೀತಿ ಚೈಂದ್ರಾವರುಣಂ ಸಮ್ಯೈಂದ್ರಾವೈಷ್ಣವಂ ಪರಂ || ೧೨೧ ||
ದ್ಯಾವಾಪೃಥಿವ್ಯೌ ಸವಿತಾ ಇಂದ್ರಾಸೋಮೌ ಬೃಹಸ್ಪತಿಃ |
ಪೃಥಕ್ಪೃಥಕ್ ಪರೈಃ ಸೂಕ್ತೈಃ ಸೋಮಾರುದ್ರೇತಿ ತೌ ಸ್ತುತೌ || ೧೨೨ ||
ಚಕ್ರಂ ರಥೋ ಮಣಿರ್ಭಾರ್ಯಾ ಭೂಮಿರಶ್ವೋ ಗಜಸ್ತಥಾ |
ಏತಾನಿ ಸಪ್ತ ರತ್ನಾನಿ ಸರ್ವೇಷಾಂ ಚಕ್ರವರ್ತಿನಾಂ || ೧೨೩ ||
ಅಭ್ಯಾವರ್ತೀ ಚಾಯಮಾನಃ ಪ್ರಸ್ತೋಕಶ್ಚೈವ ಸಾಂಜಯಃ |
ಅಜಗ್ಮತುರ್ಭರದ್ವಾಜಂ ಜಿತೌ ವಾರಶಿಖೈರ್ಯುಧಿ || ೧೨೪ ||

121. **ವಿಶ್ವೇಷಾಂ ವಃ** ಎಂಬ ೬೭ ನೇ ಸೂಕ್ತಕ್ಕೆ ಮಿತ್ರಾವರುಣರೂ, **ಶ್ರುಷ್ಟೀ ವಾಂ** ಎಂಬ ೬೮ ನೇ ಸೂಕ್ತಕ್ಕೆ ಇಂದ್ರಾವರುಣರೂ ಅದರ ಮುಂದಿನ **ಸಂ ವಾಂ ಕರ್ಮಣಾ** ಎಂಬ ೬೯ ನೇ ಸೂಕ್ತಕ್ಕೆ ಇಂದ್ರಾವಿಷ್ಣುಗಳೂ ದೇವತೆಯು.

122. ಮುಂದಿನ ೭೦, ೭೧, ೭೨, ೭೩ ನೇ ಸೂಕ್ತಗಳಲ್ಲಿ ಕ್ರಮವಾಗಿ ದ್ಯಾವಾಪೃಥಿವಿಗಳು, ಸವಿತೃ, ಇಂದ್ರಾಸೋಮ, ಬೃಹಸ್ಪತಿ ಎಂಬ ದೇವತೆಗಳು ಸ್ತುತರಾಗಿರುವರು. ಸೋಮಾರುದ್ರಾ ಎಂಬ ೭೪ ನೇ ಸೂಕ್ತದಲ್ಲಿ ಆ ದೇವತೆಗಳೇ ಎಂದರೆ ಸೋಮರುದ್ರರೇ ಸ್ತುತರಾಗಿರುವರು.

123. ೭೪ ನೇ ಸೂಕ್ತದ ಮೊದಲನೆಯ ಋಕ್ಕಿನ ಉತ್ತರಾರ್ಧದಲ್ಲಿ **ಸಪ್ತ ರತ್ನಾ ದಧಾನಾ** ಎಂದು ಹೇಳಿದೆಯಷ್ಟೆ. ಅವು ಯಾವುವೆಂದರೆ—ಚಕ್ರ, ರಥ, ರತ್ನ, ಪತ್ನಿ, ಭೂಮಿ, ಅಶ್ವ, ಗಜ (ಆನೆ) ಎಂಬಿವೇ ಚಕ್ರವರ್ತಿಗಳಿಗೆ ಎಂದರೆ ಚಕ್ರವರ್ತಿಗಳಲ್ಲಿರಬೇಕಾದ ಸಪ್ತವಿಧ ರತ್ನಗಳೆಂದು ಹೇಳಲ್ಪಡುವವು.

**೭೫ ನೇ ಸೂಕ್ತ; ಅಭ್ಯಾವರ್ತೀ ಮತ್ತು ಪ್ರಸ್ತೋಕ ಸಾಂಜಯ ಎಂಬುವರ ವೃತ್ತಾಂತ**

124. ಒಂದು ಸಮಯದಲ್ಲಿ ಅಭ್ಯಾವರ್ತೀ ಚಾಯಮಾನ ಎಂಬ ರಾಜನೂ, ಸೃಂಜಯಪುತ್ರನಾದ ಪ್ರಸ್ತೋಕನೆಂಬ ರಾಜನೂ ವಾರಶಿಖ ಎಂಬ ರಾಜನಿಂದ ಯುದ್ಧದಲ್ಲಿ ಪರಾಜಿತರಾಗಿ ಭರದ್ವಾಜಋಷಿಯ ಬಳಿಗೆ ಬಂದರು.

---

121. There is one to Mitra-Varuna (viz). ‘ Among all beings your ’ (ವಿಶ್ವೇಷಾಂ ವಃ ಸತಾಂ ; vi 67) ‘ Obediently ’ (ಶ್ರುಷ್ಟೀ . vi. 68) is addressed to Indra Varuna : the following one, ‘ Together ’ (ಸಂ : vi. 69) is addressed to Irdra Visnu.

122. Heaven and Earth (70), Savitr (71), Indra-Soma (72), Brhaspati (73) are respectively praised in the following hymns ; (in) ‘ O Soma and Rudra ’ (ಸೋಮಾರುದ್ರಾ : vi. 74) those two (gods) are praised.

123. Discus, car, jewel, wife. territory, horse, and elephant, these are the seven treasures of all emperors (chakravartin).

**25. RV. vi. 75 : Story of Abhyavartin and Prastoka Sarnjaya.**

124. Abhyavartin Chayamana and Prastoka, son of Srnjaya, having been conqnered in fight by the Varasikhas, came to Bharadvaja.

ಅಭಿಗಮ್ಯೋಚತುಸ್ತೌ ತಂ ಪ್ರಸಾದ್ಯಾಖ್ಯಾಯ ನಾಮನೀ |
ಯುಧಿ ವಾರಶಿಖೈರ್ಬ್ರಹ್ಮನ್ನಾವಾಂ ವಿದ್ಧಿ ವಿನಿರ್ಜಿತೌ || ೧೨೫ ||
ಭವತ್ಪುರೋಹಿತಾವಾವಾಂ ಕ್ಷತ್ರಬಂಧೂಞ್ಜಯೇವಹಿ |
ಕ್ಷತ್ರಂ ತದಪಿ ವಿಜ್ಞೇಯಂ ಬ್ರಹ್ಮ ಯತ್ಪಾತಿ ಶಾಶ್ವತಂ || ೧೨೬ ||
ಋಷಿಸ್ತೌ ತು ತಥೇತ್ಯುಕ್ತ್ವಾ ಪಾಯುಂ ಪುತ್ರಮಭಾಷತ |
ಅಧರ್ಷಣೀಯೌ ಶತ್ರೂಣಾಂ ಕುರುಷ್ವೈತೌ ನೃಪಾವಿತಿ || ೧೨೭ ||
ಪಿತರಂ ಸ ತಥೇತ್ಯುಕ್ತ್ವಾ ಯುದ್ಧೋಪಕರಣಂ ತಯೋಃ |
ಜೀಮೂತಸ್ಯೇತಿ ಸೂಕ್ತೇನ ಪೃಥಕ್ತ್ವೇನಾನ್ವಮಂತ್ರಯತ್ || ೧೨೮ ||

125. ಋಷಿಯು ಬಳಿಗೆ ಬಂದು ತಮ್ಮ ಹೆಸರುಗಳನ್ನು ಹೇಳಿ ಆ ಋಷಿಗೆ ನಮಸ್ಕಾರಮಾಡಿ ಇಂತೆಂದರು— ಎಲೈ ಪೂಜ್ಯನೇ, ನಾವು ವಾರಶಿಖರೆಂಬ ರಾಜರೊಡನೆ ಯುದ್ಧಮಾಡಿ ಅವರಿಂದ ಪರಾಜಿತರಾಗಿದ್ದೇವೆ.

126. ನೀನು ನಮಗೆ ಪುರೋಹಿತನಾದಲ್ಲಿ ನಾವು ನಮ್ಮ ಕ್ಷತ್ರಿಯ ಕುಲದಲ್ಲಿ ಜನಿಸಿದ ರಾಜರನ್ನು ಜಯಿಸಲು ಸಮರ್ಥರಾಗುವೆವು. ಬ್ರಾಹ್ಮಣನಾದ ಪುರೋಹಿತನು ಯಾವನನ್ನು ಕಾಪಾಡುತ್ತಾನೆಯೋ ಅವನಿಗೆ ಕ್ಷಾತ್ರತೇಜಸ್ಸು ಎಂದರೆ ಶಕ್ತಿಸಾಮರ್ಥ್ಯಗಳು ಉಂಟಾಗುವವು. ಎಂದರೆ ನಿನ್ನ ಅನುಗ್ರಹವಿದ್ದರೆ ನಾವು ಆ ರಾಜರನ್ನು ಜಯಿಸಲು ಸಮರ್ಥರಾಗುವೆವು.

127. ಋಷಿಯು ಹಾಗೆಯೇ ಆಗಲೆಂದು ಹೇಳಿ ಅವರಿಗೆ ಅಭಯವಿತ್ತು ತನ್ನ ಪುತ್ರನಾದ ಪಾಯುವೆಂಬುವನನ್ನು ಕರೆದು —ಈ ರಾಜರಿಬ್ಬರೂ ಶತ್ರುಗಳಿಂದ ಪರಾಜಿತರಾಗದಂತೆ ಮಾಡು ಎಂದು ಹೇಳಿದನು.

128. ಹಾಗೆಯೇ ಮಾಡುವೆನೆಂದು ತಂದೆಗೆ ಉತ್ತರವಿತ್ತು ಆ ರಾಜರ ಯುದ್ಧೋಪಕರಣಗಳನ್ನು **ಜೀಮೂತಸ್ಯೇವ ಭವತಿ** ಎಂಬ ಸೂಕ್ತದ (೭೫) ಮಂತ್ರಗಳಿಂದ ಪ್ರತ್ಯೇಕವಾಗಿ ಅಭಿಮಂತ್ರಿಸಿ ಅವರ ಆಯುಧಗಳ ಸಾಮರ್ಥ್ಯಗಳನ್ನು ಹೆಚ್ಚಿಸಿದನು.

125. Having approached aud propitiated him and mentioning their names, the two said to him : ' O Brahman, know that we have been vanquished by the Varasikhas in fight.

126. With you as our domestic priest we could conquer the warriors (ಕ್ಷತ್ರಬಂಧೂನ್). That is to be recognised as ksatra (warrior caste) which protects the everlasting brahma (priestly caste).

127. The seer saying ' yes ' to them, addressed his son Payu : ' Make these two kings unassilable to their enemies. '

128. Saying 'yes' to his father, he consecrated their implements of war individually with the hymn ' Of a thuuder cloud ' (ಜೀಮೂತಸ್ಯ : vi. 75).

ಪ್ರಥಮಾ ತಸ್ಯ ಸೂಕ್ತಸ್ಯ ಯೋದ್ಧಾರಂ ಸ್ತೌತಿ ವರ್ಮಿಣಂ |
ಧನುಶ್ಚ ದ್ವಿತೀಯಾ ತು ತೃತೀಯಾ ಜ್ಯಾಭಿಮಂತ್ರಿಣೀ || ೧೨೯ ||
ಸ್ತೌತ್ಯಾರ್ತ್ನೀ ಚತುರ್ಥೀ ತು ಇಷುಧಿಂ ಸ್ತೌತಿ ಪಂಚಮೀ |
ಅರ್ಧೇನ ಸಾರಥಿಃ ಷಷ್ಠ್ಯಾ ರಶ್ಮಯೋಽರ್ಧೇನ ಸಂಸ್ತುತಾಃ || ೧೩೦ ||
ಅಶ್ವಾಂಸ್ತು ಸಪ್ತಮೀ ಸ್ತೌತಿ ಆಯುಧಾಗಾರಮಷ್ಟಮೀ |
ನವಮೀ ರಥಗೋಪಾಂಸ್ತು ದಶಮೀ ರಣದೇವತಾಃ || ೧೩೧ ||
ಇಷುಂ ಚೈಕಾದಶೀ ಸ್ತೌತಿ ದ್ವಾದಶೀ ಕವಚಸ್ತುತಿಃ |
ತ್ರಯೋದಶೀ ಕಶಾಂ ಸ್ತೌತಿ ಹಸ್ತತ್ರಾಣಂ ಚತುರ್ದಶೀ || ೧೩೨ ||

**೭೫ ನೇ ಸೂಕ್ತದ ದೇವತೆಗಳು**

129. ಈ ೭೫ ನೇ ಸೂಕ್ತದ ಮೊದಲನೆಯ ಮಂತ್ರದಲ್ಲಿ ಯುದ್ಧಾರ್ಥವಾಗಿ ಕವಚವನ್ನು (armour) ಧರಿಸಿರುವ ಯುದ್ಧಭಟನ ಪ್ರಶಂಸೆ ಇದೆ. ೨ ನೇ ಋಕ್ಕಿನಲ್ಲಿ ಧನುಸ್ಸನ್ನೂ, ಮೂರನೆಯ ಋಕ್ಕಿನಲ್ಲಿ ಧನುಸ್ಸಿನ ಹೆದೆಯನ್ನೂ (ಜ್ಯಾ-ಹಗ್ಗ) ಸ್ತುತಿಸಲಾಗಿದೆ.

130. ೪ ನೇ ಯಕ್ಕಿನಲ್ಲಿ **ಆರ್ತ್ನೀ** ಎಂಬ ಬಿಲ್ಲಿನ ಎರಡು ತುದಿಗಳನ್ನೂ, ೫ ನೇ ಋಕ್ಕಿನಲ್ಲಿ **ಇಷುಧಿ** ಎಂಬ ಬತ್ತಳಿಕೆಯನ್ನೂ ೬ ನೇ ಋಕ್ಕಿನ ಪೂರ್ವಾರ್ಧದಲ್ಲಿ ರಥವನ್ನು ನಡೆಸುವ ಸಾರಥಿಯನ್ನೂ ಉತ್ತರಾರ್ಧದಲ್ಲಿ ಕುದುರೆಗಳ ಲಗಾಮುಗಳನ್ನೂ ಸ್ತುತಿಸಲಾಗಿದೆ.

131. ೭ ನೇ ಋಕ್ಕಿನಲ್ಲಿ ರಥದ ಅಶ್ವಗಳನ್ನೂ, ೮ ನೇ ಋಕ್ಕಿನಲ್ಲಿ ಆಯುಧಾಗಾರವನ್ನೂ, ೯ ನೇ ಋಕ್ಕಿನಲ್ಲಿ ರಥಸಂರಕ್ಷಕರನ್ನೂ (ರಥಗೋಪಾಃ) ೧೦ ನೇ ಋಕ್ಕಿನಲ್ಲಿ ಯುದ್ಧಾಭಿಮಾನಿದೇವತೆಗಳನ್ನೂ (ರಣದೇವತಾಃ) ಸ್ತುತಿಸಲಾಗಿದೆ.

132. ೧೧ ನೇ ಋಕ್ಕಿನಲ್ಲಿ ಬಾಣವನ್ನೂ (arrow) ೧೨ ನೇ ಋಕ್ಕಿನಲ್ಲಿ ಕವಚವನ್ನೂ ೧೩ ನೇ ಋಕ್ಕಿನಲ್ಲಿ ಕುದುರೆಗಳನ್ನು ಹೊಡೆಯುವ ಚಾವಟಿಗಳನ್ನೂ ೧೪ ನೇ ಋಕ್ಕಿನಲ್ಲಿ ಬಿಲ್ಲಿನ ತುದಿ ತಾಕದಿರುವಂತೆ ಕೈಗಳಿಗೆ ಕಟ್ಟಿಕೊಳ್ಳುವ ಬಟ್ಟೆಯನ್ನೂ (ಹಸ್ತಘ್ನ) ಸ್ತುತಿಸಲಾಗಿದೆ.

## 25. Deitics of RV. vi. 75 in detail.

129, The frist (stanza) of this hymn praises the warrior in his coat of mail (1), the second is (in praise) of the bow (2), the third consecrates the bowstring (3).

130. The fourth stanzr praises the ends of the bow (4), the fifth praises the quiver (5). With half of the sixth the charioteer, with the (other) half the reins are praised. (6).

131. The seventh prisses the horses (7), the eighth the arsenal (8), the ninth the guards of the car (9), the tenth the deities of battle (10).

132. The eleventh praises the arrow (11), the twelfth is a praise of the cuirass (12), the thirteenth praises the goad (13), the fourteenth the handguard (14).

ಪ್ರಥಮೇ ಪಂಚದಶ್ಯಾಸ್ತು ಪಾದೇ ದಿಗ್ಧ ಇಷುಃ ಸ್ತುತಃ |
ಅಯೋಮುಖೀ ದ್ವಿತೀಯೇ ತು ಅರ್ಧೇಽಸ್ತ್ರಂ ವಾರುಣಂ ಪರೇ || ೧೩೩ ||
ಷೋಳಶ್ಯಾಂ ತ್ವಸ್ಯ ಸೂಕ್ತಸ್ಯ ಧನುರ್ಮುಕ್ತ ಇಷುಃ ಸ್ತುತಃ |
ಸಪ್ತದಶ್ಯಾಂ ತು ಯುದ್ಧಾದೇಃ ಕವಚಸ್ಯ ತು ಬಧ್ನತಃ || ೧೩೪ ||
ಸ್ತುತಿರಷ್ಟಾದಶೀ ಜ್ಞೇಯಾ ಯುಯುತ್ಸೋಃ ಸ್ತುತಿರುತ್ತಮಾ |
ಆಶಾಸ್ತೇ ಚೋತ್ತಮೇ ಪಾದೇ ಋಷಿರಾತ್ಮನ ಆಶಿಷಃ || ೧೩೫ ||
ಸೂಕ್ತೇನಾನೇನ ತು ಸ್ತುತ್ವಾ ಸಂಗ್ರಾಮಾಂಗಾನ್ಯೃಷಿಸ್ತಯೋಃ |
ತತಃ ಪ್ರಸ್ಥಾಪಯಾಮಾಸ ಪುನರ್ವಾರಶಿಖಾನ್ಪ್ರತಿ || ೧೩೬ ||

133. ೧೫ ನೇ ಋಕ್ಕಿನ ಮೊದಲನೆಯ ಪಾದದಲ್ಲಿ ವಿಷಪೂರಿತವಾದ (ವಿಷದಲ್ಲಿ ಅದ್ದಿರುವ) ಬಾಣವನ್ನೂ ಎರಡನೆಯ ಪಾದದಲ್ಲಿ ಉಕ್ಕಿನ ಮೊನೆಯಿಂದ ಕೂಡಿದ ಬಾಣದ ತುದಿಯನ್ನೂ ಉತ್ತರಾರ್ಧದ ಎರಡು ಪಾದಗಳಲ್ಲಿ ವಾರುಣಾಸ್ತ್ರವನ್ನೂ (ಪರ್ಜನ್ಯಾಸ್ತ್ರವನ್ನೂ) ಸ್ತುತಿಸಲಾಗಿದೆ.

134. ಈ ಸೂಕ್ತದ ೧೬ ನೇ ಋಕ್ಕಿನಲ್ಲಿ ಧನುಸ್ಸಿನಿಂದ ಹೊರಹೊರಟ ಬಾಣದ ಪ್ರಶಂಸೆ ಇದೆ. ೧೭ ನೇ ಋಕ್ಕಿನಲ್ಲಿ ಯುದ್ಧದ ಪ್ರಾರಂಭವನ್ನು ಸ್ತುತಿಸಲಾಗಿದೆ. ಯುದ್ಧಮಾಡುವ ಯೋಧನು ತನ್ನ ಶರೀರಕ್ಕೆ ಕವಚವನ್ನು ಕಟ್ಟಿಕೊಳ್ಳುವ ವಿಷಯವು,

135. ೧೮ ನೇ ಋಕ್ಕಿನಲ್ಲಿ ಹೇಳಲಾಗಿದೆ. ೧೯ ನೇ ಋಕ್ಕಿನಲ್ಲಿ ಯುದ್ಧಮಾಡುವ ಯೋಧನ ಪ್ರಶಂಸೆ ಇದೆ ಮತ್ತು ೧೯ ನೇ ಋಕ್ಕಿನ ಕೊನೆಯ ಪಾದದಲ್ಲಿ (ಅಥವಾ ಕೊನೆಯ ೨ ಪಾದಗಳಲ್ಲಿ) ಋಷಿಯು ಯುದ್ಧಮಾಡುವ ಯೋಧನ ವಿಷಯದಲ್ಲಿ ಜಯವನ್ನು ಬಯಸಿ ಆಶೀರ್ವಾದವನ್ನು ಪಠಿಸಿರುವನು.

136. ಮೇಲೆ ಹೇಳಿದಂತೆ ಪಾಯುಋಷಿಯು ಈ ಸೂಕ್ತದ ಋಕ್ಕುಗಳಿಂದ ಆಯುಧಾದಿಗಳನ್ನು ಅಭಿಮಂತ್ರಪೂರ್ವಕವಾಗಿ ಸ್ತುತಿಸಿ ಆ ಇಬ್ಬರು ರಾಜರನ್ನೂ ಹರಸಿ ವಾರಶಿಖರಾಜರಮೇಲೆ ಮತ್ತೆ ಯುದ್ಧಮಾಡುವುದಕ್ಕಾಗಿ ಕಳುಹಿಸಿಕೊಟ್ಟನು.

133. In the first verse of the fifteenth (stanza) the poisoned arrow is praised (15), in the second (15) the iron-tipped (arrow), but in the following half (of the stanza) the missile of Varuna (15).

**27. RV· vi· 75· (continued)·**

134, 135· In the sixteenth (stanza) of this hymn the arrow discharged from the bow is praised (16) ; in the seventeenth (there is praise) of the beginning of the fight (17), while the eighteenth is to be known as (in) praise of the mail of him who ties it on (ಬಧ್ನತಃ) ; the last (19) is (in) praise of him who is about to fight; and in the last verse (19) the seer utters prayers on his own behalf·

136· Now the seer having with this hymn praised the implements of battle of these two (kings), sent them forth again against the Varasikhas.

**ಏತತ್ತ್ಯತ್ತೇ ಚತಸೃಭೀ ರಾಜ್ಞೋಃ ಸಾಹಾಯ್ಯಕಾಮ್ಯಯಾ ।**
**ಭರದ್ವಾಜೋಽಭಿತುಷ್ಟಾವ ಪ್ರೀತಸ್ತೇನ ಪುರಂದರಃ ॥ ೧೩೭ ॥**

**ಅಭ್ಯಾವರ್ತಿನಮಭ್ಯೇತ್ಯ ಹರ್ಯೂಪೀಯಾನದೀತಟೇ ।**
**ಸಹಿತಶ್ಚಾಯಮಾನೇನ ಜಘಾನೈನಾಞ್ಛಚೀಪತಿಃ ॥ ೧೩೮ ॥**

**ತೌ ತು ವಾರಶಿಖಾಞ್ಜಿತ್ವಾ ತತೋಽಭ್ಯಾವರ್ತಿಸಾಂರ್ಜಯೌ ।**
**ಭರದ್ವಾಜಾಯ ಗುರವೇ ದದತುರ್ವಿವಿಧಂ ವಸು ॥ ೧೩೯ ॥**

**ಭರದ್ವಾಜಶ್ಚ ಗರ್ಗಶ್ಚ ದೃಷ್ಟ್ವಾವಿಂದ್ರೇಣ ವೈ ಪಥಿ ।**
**ದ್ವಯಾನ್ ಪ್ರಸ್ತೋಕ ಇತ್ಯಾಭ್ಯಾಂ ದಾನಂ ತದ್ವೈ ಶಶಂಸತುಃ ॥ ೧೪೦ ॥**

137. ಈ ಇಬ್ಬರು ರಾಜರಿಗೆ ಸಹಾಯಮಾಡುವುದಕ್ಕಾಗಿ ಭರದ್ವಾಜಋಷಿಯೂ ಸಹ **ಏತತ್ ತ್ಯತ್ತೇ** ಎಂದು ಮೊದಲಾಗುವ ನಾಲ್ಕು ಋಕ್ಕುಗಳಿಂದ (೨೭ ನೇ ಸೂಕ್ತದ ೪-೭ ಋಕ್ಕುಗಳಿಂದ) ಇಂದ್ರನನ್ನು ಸ್ತುತಿಸಿದನು. ಭರದ್ವಾಜಋಷಿಯ ಸ್ತುತಿಯಿಂದ ಪ್ರೀತನಾದ ಇಂದ್ರನು,

138. ಹರ್ಯೂಪೀಯಾ ಎಂಬ ನದಿಯ ದಡದಮೇಲೆ ಬೀಡುಬಿಟ್ಟಿದ್ದ ಅಭ್ಯಾವರ್ತೀ ಮತ್ತು ಚಾಯಮಾನ ಎಂಬ ಆ ರಾಜರ ಸಮೀಪಕ್ಕೆ ಬಂದು ಅವರ ಶತ್ರುಗಳಾದ ವಾರಶಿಖರನ್ನು ಸಂಹಾರಮಾಡಿದನು.

139. ಈರೀತಿಯಾಗಿ ಅಭ್ಯಾವರ್ತೀ ಮತ್ತು ಸಾಂಜರ್ಯರೆಂಬ ಆ ರಾಜರಿಬ್ಬರೂ (ಇಂದ್ರನ ಸಹಾಯದಿಂದ) ತಮ್ಮ ಶತ್ರುಗಳಾದ ವಾರಶಿಖರೆಂಬುವರನ್ನು ಯುದ್ಧದಲ್ಲಿ ಜಯಿಸಿ ತಮ್ಮ ಗುರುವಾದ ಭರದ್ವಾಜಋಷಿಯ ಸಮೀಪಕ್ಕೆ ಬಂದು ಅವರಿಗೆ ನಾನಾವಿಧವಾದ ಧನಾದಿವಸ್ತುಗಳನ್ನು ಕೊಟ್ಟರು.

140. ಭರದ್ವಾಜನೂ ಗರ್ಗಋಷಿಯೂ ದಾರಿಯಲ್ಲಿ ಬರುತ್ತಿರುವಾಗ ಇಂದ್ರನನ್ನು ಕಂಡರು. ಈ ಇಬ್ಬರು ರಾಜರೂ ತಮಗೆ ಕೊಟ್ಟ ಧನಾದಿಗಳ ದಾನಪ್ರಶಂಸೆಯನ್ನು ಅವರು ಇಂದ್ರನಿಗೆ **ದ್ವಯಾನ್ ಅಗ್ನೇ** ಎಂಬ ಋಕ್ಕಿನಿಂದಲೂ (೨೭ ನೇ ಸೂಕ್ತದ ೮ ನೇ ಋಕ್ಕು) **ಪ್ರಸ್ತೋಕ ಇನ್ನು** ಎಂಬ ಋಕ್ಕಿನಿಂದಲೂ (೪೭ ನೇ ಸೂಕ್ತದ ೨೨ ನೇ ಋಕ್ಕು) ತಿಳಿಸಿದರು.

---

137. With the four stanzas 'This here of you' (ಏತತ್ತ್ಯತ್ತೇ : vi. 27.4-7) Bharadvaja praised (Indra) from a desire of aiding the king (ಚಾಯಮಾನ). Pleased thereby the Fort-destroyer,

138. the Lord of Sachi, coming to Abhyavartin on the bank of the Haryupiya river, slew them in company with Chayamana.

### 28. Story of Chayamana and Prastoka (concluded).

139. Now these two, Abhyavartin and Sarnjaya, having conquered the Varasikhas, gave manifold wealth to their preceptor Bharadvaja.

140. Bharadvaja and Garga. being seen by Indra on the road, proclained that gift with the (stanzas) 'Two' (ದ್ವಯಾನ್ : vi. 27. 8) (and) 'Prastoka' (ಪ್ರಸ್ತೋಕಃ : vi. 47-22).

ಋಷಿರಪ್ಯಭಿತುಷ್ಟಾವ ದಾನಂ ತತ್ರ ಚ ತಸ್ಯ ತು ।
ಋಚೈಕಯಾ ದ್ವಯಾನ್ ಅಗ್ನೇ ದತ್ತಂ ಸಂಕೀರ್ತಯನ್ ಸ್ವಯಂ ॥ ೧೪೧ ॥
ಪ್ರಸಂಗಾಸ್ತ್ವಿಹ ಯಾಃ ಸೂಕ್ತೇ ದೇವತಾಃ ಪರಿಕೀರ್ತಿತಾಃ ।
ತಾ ಏವ ಸೂಕ್ತಭಾಜಸ್ತು ಮೇನೇ ರಾಥೀತರಃ ಸ್ತುತಾ ॥ ೧೪೨ ॥

ಇತಿ ಷಷ್ಠಂ ಮಂಡಲಂ

141. ಭರದ್ವಾಜಋಷಿಯೂ ಸಹ ಆ ಚಾಯಮಾನರಾಜನ ದಾನವನ್ನು **ದ್ವಯಾನ್ ಅಗ್ನೇ** ಎಂಬ ಋಕ್ಕಿನಿಂದ (೨೭ ನೇ ಸೂಕ್ತದ ೮ ನೇ ಋಕ್ಕು) ಚೆನ್ನಾಗಿ ಪ್ರಶಂಸೆಮಾಡಿದನು.

142. ಈ ಸೂಕ್ತದಲ್ಲಿ (೭೫ ನೇ ಸೂಕ್ತದಲ್ಲಿ) ಯಾವ ದೇವತೆಗಳು ಪ್ರಸಂಗವಶದಿಂದ ಸ್ತುತರಾಗಿರುವರೋ ಅವರೇ ಆಯಾ ಮಂತ್ರಗಳಿಗೆ ಮುಖ್ಯದೇವತೆಗಳೆಂದು (ಸೂಕ್ತಭಾಜಃ) **ರಾಥೀತರಃ** ಎಂಬುವರು ಅಭಿಪ್ರಾಯ ಪಡುವರು.

ಇಲ್ಲಿಗೆ ಆರನೆಯ ಮಂಡಲವು ಸಮಾಪ್ತವು.

---

141. The seer on his part praised the gift of that (ಚಾಯಮಾನ), himself proclaiming what had been given (by him) with the one stanza, 'Two, O Agni' (ದ್ವಯಾನ್ ಅಗ್ನೇ : vi. 27-8).

142. The deities who in this hymn are occasionally (ಪ್ರಸಂಗಾತ್) celebrated, Rathitara regarded as hymn-owning (ಸೂಕ್ತಭಾಜ) in praise (ಸ್ತುತ).

End of 6th Mandala.

### ಅಥ ಸಪ್ತಮಂ ಮಂಡಲಂ

ಪ್ರಾಜಾಪತ್ಯೋ ಮರೀಚಿರ್ಹಿ ಮಾರೀಚಃ ಕಶ್ಯಪೋ ಮುನಿಃ ।
ತಸ್ಯ ದೇವ್ಯೋಽಭವಞ್ಜಾಯಾ ದಾಕ್ಷಾಯಣ್ಯಸ್ತ್ರಯೋದಶ ॥ ೧೪೩ ॥
ಅದಿತಿರ್ದಿತಿರ್ದನುಃ ಕಾಲಾ ದನಾಯುಃ ಸಿಂಹಿಕಾ ಮುನಿಃ ।
ಕ್ರೋಧಾ ವಿಶ್ವಾ ವರಿಷ್ಠಾ ಚ ಸುರಭಿರ್ವಿನತಾ ತಥಾ ॥ ೧೪೪ ॥
ಕದ್ರೂಶ್ಚೈವೇತಿ ದುಹಿತ್ರ್ಯಾಃ ಕಶ್ಯಪಾಯ ದದೌ ಸ ಚ ।
ತಾಸು ದೇವಾಸುರಾಶ್ಚೈವ ಗಂಧರ್ವೋರಗರಾಕ್ಷಸಾಃ ॥ ೧೪೫ ॥



## ಏಳನೆಯ ಮಂಡಲವು

### ವಸಿಷ್ಠಋಷಿಯ ಮಹಿಮೆ; ಕಶ್ಯಪನ ಪತ್ನಿಯರು

143. ಪ್ರಜಾಪತಿಗೆ ಮರೀಚಿ ಎಂಬ ಪುತ್ರನಿದ್ದನು ಆ ಮರೀಚಿಗೆ ಕಶ್ಯಪಋಷಿಯು ಪುತ್ರನಾಗಿದ್ದನು. ಆ ಕಶ್ಯಪನಿಗೆ ದಕ್ಷಪ್ರಜಾಪತಿಯ ಹದಿಮೂರು ಮಂದಿ ಪುತ್ರಿಯರು ಪತ್ನಿಯರಾಗಿದ್ದರು. ಅವರುಗಳು ಯಾರೆಂದರೆ—

144. ಅದಿತಿ, ದಿತಿ, ದನು, ಕಾಲಾ, ದನಾಯು, ಸಿಂಹಿಕಾ, ಮುನಿ, ಕ್ರೋಧಾ, ವಿಶ್ವಾ, ವರಿಷ್ಠಾ, ಸುರಭಿ, ವಿನತಾ,

145. ಕದ್ರೂಃ ಎಂದು ಆ ಹದಿಮೂರುಮಂದಿ ಪತ್ನಿಯರ ಹೆಸರು. ಈ ಹದಿಮೂರುಮಂದಿ ಪುತ್ರಿಯರನ್ನು ದಕ್ಷನು ಕಶ್ಯಪಋಷಿಗೆ ವಿವಾಹಮಾಡಿಕೊಟ್ಟನು. ಈ ಪತ್ನಿಯರಲ್ಲಿ—ದೇವತೆಗಳು, ಅಸುರರು, ಗಂಧರ್ವರು, ಸರ್ಪಗಳು, ರಾಕ್ಷಸರು,

## Mandala VII.

### 29 Predigree of Vasistha. Kasyapa's wives.

143. The son of Prajapati was Marichi, Marichi's son was the sage Kasyapa. He had thirteen divine wives, the daughters of Dhksa :

144. Aditi, Diti, Danu, Kala, Danayu, Sinhika, Muni, Krodha, Visva and Varistha, Surabhi and Vinata.

145. and Kadru by name : (those) daughters he (Daksa) gave to Kasyapa.

From them the Gods aod Asuras, the Gandharvas, the Serpents, the Raksasas,

ವಯೊಾಂಸಿ ಚ ಪಿಶಾಚಾಶ್ಚ ಜಜ್ಞಿರೇऽನ್ಯಾಶ್ಚ ಜಾತಯಃ |
ತತ್ರೈಕಾ ತ್ವದಿತಿರ್ದೇವೀ ದ್ವಾದಶಾಜನಯತ್ಸುತಾನ್ || ೧೪೬ ||

ಭಗಶ್ಚೈವಾರ್ಯಮಾಂಶಶ್ಚ ಮಿತ್ರೋ ವರುಣ ಏವ ಚ |
ಧಾತಾ ಚೈವ ವಿಧಾತಾ ಚ ವಿವಸ್ವಾಂಶ್ಚ ಮಹಾದ್ಯುತಿಃ || ೧೪೭ ||

ತ್ವಷ್ಟಾ ಪೂಷಾ ತಥೈವೇಂದ್ರೋ ದ್ವಾದಶೋ ವಿಷ್ಣುರುಚ್ಯತೇ |
ದ್ವಂದ್ವಂ ತಸ್ಯಾಸ್ತು ತಜ್ಜಜ್ಞೇ ಮಿತ್ರಶ್ಚ ವರುಣಶ್ಚ ಹ || ೧೪೮ ||

ತಯೋರಾದಿತ್ಯಯೋಃ ಸತ್ರೇ ದೃಷ್ಟ್ವಾಪ್ಸರಸಮುರ್ವಶೀಂ |
ರೇತಶ್ಚಸ್ಕಂದ ತತ್ಕುಂಭೇ ನ್ಯಪತದ್ವಾಸತೀವರೇ || ೧೪೯ ||

146. ಪಕ್ಷಿಗಳು, ಪಿಶಾಚಿಗಳು, ಇನ್ನೂ ಇತರ ಅನೇಕವಿಧ ಜಾತಿಯ ಪ್ರಾಣಿಗಳೂ ಉತ್ಪನ್ನರಾದರು. ಆ ಪತ್ನಿಯರಲ್ಲಿ ಒಬ್ಬಳಾದ ಅದಿತಿದೇವಿಯು ಹನ್ನೆರಡುಮಂದಿ ಪುತ್ರರನ್ನು ಹಡೆದಳು.

147. ಭಗ, ಅರ್ಯಮಾ, ಅಂಶ, ಮಿತ್ರ, ವರುಣ, ಧಾತಾ, ವಿಧಾತಾ, ಮಹಾವರ್ಚಸ್ವಿಯಾದ ವಿವಸ್ವಾನ್ ಎಂಬುವರೂ,

148. ತ್ವಷ್ಟಾ, ಪೂಷಾ, ಇಂದ್ರ, ವಿಷ್ಣು ಎಂಬುವರೂ ಸೇರಿ ಒಟ್ಟು ಹನ್ನೆರಡು ಮಂದಿ ಪುತ್ರರು. ಈ ಹನ್ನೆರಡು ಮಂದಿಯಲ್ಲಿ ಒಂದಾವರ್ತಿಗೆ ಇಬ್ಬಿಬ್ಬರಂತೆ ಎಂದರೆ ಮಿತ್ರನೂ, ವರುಣನೂ ಎಂಬಿಬ್ಬರಂತೆ ಅವಳ ಮಕ್ಕಳಾಗಿ ಜನಿಸಿದರು.

**ಮಿತ್ರಾವರುಣರು ಮತ್ತು ಉರ್ವಶೀ ; ಅಗಸ್ತ್ಯ ಮತ್ತು ವಸಿಷ್ಠರ ಜನ್ಮವೃತ್ತಾಂತವು**

149. ಈ ಅವಳಮಕ್ಕಳಾದ ಮಿತ್ರಾವರುಣರು ಒಂದು ಯಜ್ಞಕ್ಕೆ ಹೋಗಿದ್ದಾಗ ಅಲ್ಲಿ ಉರ್ವಶೀ ಎಂಬ ಅಪ್ಸರಸ್ತ್ರೀಯನ್ನು ನೋಡಿದರು. ಅದರಿಂದ ಅವರ ವೀರ್ಯವು ಸ್ಖಲನವಾಗಿ ಆ ಯಜ್ಞವೇದಿಯಲ್ಲಿದ್ದ ವಸತೀವರಿ ಎಂಬ ನೀರಿನ ಕುಂಭದಲ್ಲಿ (ಪಾತ್ರೆಯಲ್ಲಿ) ಬಿದ್ದಿತು.

---

146. Birds, Pisachas, and other classes (of beings) were produced. Now among these (daughters) the one goddess Aditi produced twelve sons.

147. (These were) Bhaga, Aryaman, and Amsa, Mitra and Varuna Dhatr and Vidhatr, and Vivasvat of great brilliance,

### 30. Story of Mitra-Varuna and Urvasi.

148. Tvastr, Pusan, and also Indra; the twelfth is called Visnu. (Thus) that pair was born of her—Mitra and Varuna.

149. Of these two Adityas, when they saw the nymph Urvasi at a sacrificial session, the semen was effused. It fell into a jar containing water that stood overnight.

ತೇನೈವ ತು ಮುಹೂರ್ತೇನ ವೀರ್ಯವಂತೌ ತಪಸ್ವಿನೌ ।
ಅಗಸ್ತ್ಯಶ್ಚ ವಸಿಷ್ಠಶ್ಚ ತತ್ರರ್ಷೀ ಸಂಬಭೂವತುಃ ॥ ೧೫೦ ॥
ಬಹುಧಾ ಪತಿತೇ ಶುಕ್ರೇ ಕಲಶೇಽಥ ಜಲೇ ಸ್ಥಲೇ ।
ಸ್ಥಲೇ ವಸಿಷ್ಠಸ್ತು ಮುನಿಃ ಸಂಭೂತ ಋಷಿಸತ್ತಮಃ ॥ ೧೫೧ ॥
ಕುಂಭೇ ತ್ವಗಸ್ತ್ಯಃ ಸಂಭೂತೋ ಜಲೇ ಮತ್ಸ್ಯೋ ಮಹಾದ್ಯುತಿಃ ।
ಉದಿಯಾಯ ತತೋಽಗಸ್ತ್ಯಃ ಶಮ್ಯಾಮಾತ್ರೋ ಮಹಾಯಶಾಃ ॥ ೧೫೨ ॥
ಮಾನೇನ ಸಂಮಿತೋ ಯಸ್ಮಾತ್ತಸ್ಮಾನ್ಮಾನ್ಯ ಇಹೋಚ್ಯತೇ ।
ಯದ್ವಾ ಕುಂಭಾದೃಷಿರ್ಜಾತಃ ಕುಂಭೇನಾಪಿ ಹಿ ಮೀಯತೇ ॥ ೧೫೩ ॥

150. ಆ ಕ್ಷಣವೇ ವೀರ್ಯವಂತರೂ ಮಹಾತಪಸ್ವಿಗಳೂ ಆದ ಅಗಸ್ತ್ಯ ಮತ್ತು ವಸಿಷ್ಠ ಎಂಬ ಇಬ್ಬರು ಋಷಿಗಳು ಅಲ್ಲಿಯೇ ಪ್ರಾದುರ್ಭೂತರಾದರು.

151. ಮಿತ್ರಾವರುಣರ ವೀರ್ಯವು ಸ್ಖಲನವಾದಾಗ ಅದು ನೆಲದ ಮೇಲೆಯೂ (ವಸತೀವರೀ ಎಂಬ) ನೀರಿನ ಕಲಶವಲ್ಲಿಯೂ ಬಿದ್ದಿತಷ್ಟೆ. ನೆಲದ ಮೇಲೆ ಬಿದ್ದ ವೀರ್ಯದಿಂದ ಋಷಿಶ್ರೇಷ್ಠನಾದ ವಸಿಷ್ಠಋಷಿಯು ಉತ್ಪನ್ನನಾದನು.

152, ಜಲದಲ್ಲಿ ಮತ್ಸ್ಯವು ಉತ್ಪತ್ತಿಯಾಗುವಂತೆ ಮಹಾ ವರ್ಚಸ್ಸಿನಿಂದ ಬೆಳಗುವ ಅಗಸ್ತ್ಯಋಷಿಯು ಕುಂಭದಲ್ಲಿ ಬಿದ್ದ ಮಿತ್ರಾವರುಣರ ವೀರ್ಯದಿಂದ ಉತ್ಪನ್ನನಾದನು. ಅವನು ಉತ್ಪನ್ನನಾದಾಗ ಒಂದು ಗೇಣಿನಷ್ಟು ಮಾತ್ರ ಇದ್ದನು.

153. ಅಗಸ್ತ್ಯನು ಹುಟ್ಟಿದಾಗ ಒಂದು ಗೇಣಿನಷ್ಟು (ಮಾನ-ಅಳತೆ) ಇದ್ದನೆಂದು ಹೇಳಿರುವುದರಿಂದ ಅಗಸ್ತ್ಯನಿಗೆ ಮಾನ್ಯನೆಂಬ ಹೆಸರು ಪ್ರಸಿದ್ಧವಾಯಿತು. ಅಥವಾ ಕುಂಭದಿಂದ (ಕುಂಭದಲ್ಲಿ ಬಿದ್ದ ವೀರ್ಯದಿಂದ) ಈ ಅಗಸ್ತ್ಯಋಷಿಯು ಹುಟ್ಟಿದ್ದರಿಂದ ಈ ಋಷಿಗೆ ಕುಂಭಸಂಭವನೆಂದೂ ಹೆಸರಾಯಿತು.

---

150. Now at that same moment two vigorous ascetics, the seers Agastya and Vasistha, there came into being.

151. Now the semen having fallen in various ways—in a jar, in water, on the ground—the sage Vasistha, best of seers, was produced on the ground ;

152. While Agastya was produced in the jar, (and) Matsya, of great brilliance, in the water.

Then Agastya, of great glory, arose being the length of a peg (ಶಮ್ಯಾ)

### 31. Birth of Agastya and Vasistha.

153. Because he was meted with a measure, he is here called Manya; or else (because) the seer was born from a jar. For measurement is made with a jar also :

**ಕುಂಭ ಇತ್ಯಭಿಧಾನಂ ತು ಪರಿಮಾಣಸ್ಯ ಲಕ್ಷ್ಯತೇ ।**
**ತತೋಽಪ್ಸು ಗೃಹ್ಯಮಾಣಾಸು ವಸಿಷ್ಠಃ ಪುಷ್ಕರೇ ಸ್ಥಿತಃ ।** ॥ ೧೫೪ ॥
**ಸರ್ವತ್ರ ಪುಷ್ಕರಂ ತತ್ರ ವಿಶ್ವೇ ದೇವಾ ಅಧಾರಯನ್ ।**
**ಉತ್ಥಾಯ ಸಲಿಲಾತ್ತಸ್ಮಾದಥ ತೇಪೇ ಮಹತ್ತಪಃ** ॥ ೧೫೫ ॥
**ನಾಮಾಸ್ಯ ಗುಣತೋ ಜಜ್ಞೇ ವಸತೇಃ ಶ್ರೈಷ್ಠ್ಯಕರ್ಮಣಃ ।**
**ಅದೃಶ್ಯಮೃಷಿಭಿರ್ಹೀಂದ್ರಂ ಸೋಽಪಶ್ಯತ್ತಪಸಾ ಪುರಾ** ॥ ೧೫೬ ॥
**ಸೋಮಭಾಗಾನಥೋ ತಸ್ಮೈ ಪ್ರೋವಾಚ ಹರಿವಾಹನಃ ।**
**ಋಷಯೋ ವಾ ಇಂದ್ರಮಿತಿ ಬ್ರಾಹ್ಮಣಾತ್ತದ್ಧಿ ದೃಶ್ಯತೇ** ॥ ೧೫೭ ॥

154. ಕುಂಭ (ಪಾತ್ರೆ)ವೂ ಸಹ ಒಂದು ನಿರ್ದಿಷ್ಟವಾದ ಅಳತೆಯ ಪ್ರಮಾಣವನ್ನು ಸೂಚಿಸುವುದು. (ಧಾನ್ಯಾದಿಗಳನ್ನು ಅಳೆಯುವಾಗ ಕುಂಭವನ್ನು ಉಪಯೋಗಿಸುತ್ತಾರೆ) ಯಜ್ಞಾರ್ಥವಾಗಿ ನೀರನ್ನು ತರುವಾಗ ವಸಿಷ್ಠ ಋಷಿಯು ನೀರಿನ ಮಧ್ಯದಲ್ಲಿದ್ದ ಒಂದು ಕಮಲದ (ಪುಷ್ಕರ) ಮೇಲೆ ನಿಂತಿರುವುದು ಕಂಡುಬಂದಿತು.

155. ನೀರಿನಲ್ಲಿದ್ದ ಆ ಕಮಲವನ್ನು ಎಲ್ಲಾ ದೇವತೆಗಳೂ ಹಿಡಿದು ನಿಂತಿದ್ದರು. ಆ ನೀರಿನಿಂದ ಎದ್ದುಬಂದು ವಸಿಷ್ಠಋಷಿಯು ಮಹಾ ತಪಸ್ಸನ್ನು ಮಾಡಿದನು.

156. ಈ ವಸಿಷ್ಠಋಷಿಯ ಹೆಸರು ಅವನ ಗುಣಕ್ಕನುಸಾರವಾಗಿ ಬಂದಿರುವುದು. ವಸತಿಧಾತುವಿಗೆ ಶ್ರೇಷ್ಠವೆಂಬ ಅರ್ಥವಿರುವುದು. ಇತರ ಋಷಿಗಳು ನೋಡಲು ಸಾಧ್ಯವಿಲ್ಲದ ಈ ಇಂದ್ರನನ್ನು ವಸಿಷ್ಠಋಷಿಯು ತನ್ನ ತಪೋ ಮಹಿಮೆಯಿಂದ ನೋಡಿದನು. (ಆದ್ದರಿಂದ ಎಲ್ಲಾ ಋಷಿಗಳಿಗಿಂತಲೂ ವಸಿಷ್ಠನು ಶ್ರೇಷ್ಠನು. ಈ ಅರ್ಥ ಅರ್ಥವನ್ನೇ ವಸಿಷ್ಠಶಬ್ದವು ತಿಳಿಸುವುದು).

157. ಆಗ ಇಂದ್ರನು ಈ ವಸಿಷ್ಠಋಷಿಗೆ ಯಜ್ಞಾದಿಗಳಲ್ಲಿ ಸೋಮಭಾಗವನ್ನು ಕೊಡುವೆನೆಂದು ಹೇಳಿದನು. ಈ ವಿಷಯವು **ಋಷಯೋ ವಾ ಇಂದ್ರಂ ಪ್ರತ್ಯಕ್ಷಂ ನಾಪಶ್ಯನ್ತಂ ವಸಿಷ್ಠಃ ಪ್ರತ್ಯಕ್ಷಮಪಶ್ಯತ್** ಇತ್ಯಾದಿ ಬ್ರಾಹ್ಮಣವಾಕ್ಯಗಳಲ್ಲಿ (ತೈತ್ತಿರೀಯಸಂಹಿತೆಯಲ್ಲಿಯೂ ಸಹ) ಕಂಡುಬರುವುದು

154. by 'jar' (ಕುಂಭ) the designation of a measure of capacity (parimana) is indicatad,

Then, as the waters were being taken up (ಗೃಹ್ಯಮಾಣ), Vasistha was (found) standing on a lotus (ಪುಷ್ಕರ).

155. There on every side the All-gods supported the lotus. Arising out of that water he (ವಸಿಷ್ಠ) then performed great austerity.

156. His name arose, with reference to his virtue (ಗುಣತಃ), from the root expressive of pre-eminence: for he once upon a time, by means of austerity, saw Indra who was invisible to (others) seers.

157. The Lord of Bay Steeds 'Indra' then proclaimed to him (that he should receive) shares in Soma.

For this appears from the Brahmana (passage) 'The seers (saw not) Indra' (ಋಷಯೋ ವಾ ಇಂದ್ರಂ).

**ವಸಿಷ್ಠಶ್ಚ ವಸಿಷ್ಠಾಶ್ಚ ಬ್ರಾಹ್ಮಣಾ ಬ್ರಹ್ಮಕರ್ಮಣಿ ।**
**ಸರ್ವಕರ್ಮಸು ಯಜ್ಞೇಷು ದಕ್ಷಿಣೀಯತಮಾಸ್ತಥಾ** ॥ ೧೫೮ ॥
**ತಸ್ಮಾದ್ಯೇಽದ್ಯಾಪಿ ವಾಸಿಷ್ಠಾಃ ಸದಸ್ಯಾಃ ಸ್ಯುಸ್ತು ಕರ್ಹಿಚಿತ್ ।**
**ಅರ್ಹಯೇದ್ದಕ್ಷಿಣಾಭಿಸ್ತಾನ್ ಭಾಲ್ಲವೇಯಿಶ್ರುತಿಸ್ತ್ವಿಯಂ** ॥ ೧೫೯ ॥
**ಋಷಿಸ್ತು ಮೈತ್ರಾವರುಣಿಃ ಸೂಕ್ತೈಃ ಷೋಳಶಭಿಃ ಪರೈಃ ।**
**ತುಷ್ಟಾವಾಗ್ನಿಮಿತಿ ತ್ವಗ್ನಿಮಾಪ್ರ್ಯಸ್ತತ್ರ ಜುಷಸ್ವ ನಃ** ॥ ೧೬೦ ॥
**ಪ್ರಾಗ್ನಯೇಽಥ ಪ್ರ ಸಮ್ರಾಜೋ ದ್ವಿತೀಯಂ ಪ್ರಾಗ್ನಯೇ ತೃಚಂ ।**
**ವೈಶ್ವಾನರೀಯಾಣ್ಯೇತಾನಿ ತ್ವೇ ಹ್ಯೈಂದ್ರಾಣಿ ಪರಾಣ್ಯತಃ** ॥ ೧೬೧ ॥

**ವಸಿಷ್ಠ ಮತ್ತು ವಸಿಷ್ಠಕುಲದವರು ; ೭ ನೇ ಮಂಡಲದ ೧-೩೨ ಸೂಕ್ತಗಳ ದೇವತೆಗಳು**

158. ವಸಿಷ್ಠಋಷಿಯೂ ಅವನ ವಂಶಜರೂ ಯಜ್ಞಾದಿಕರ್ಮಗಳಲ್ಲಿ ಬ್ರಹ್ಮನೆಂಬ ಋತ್ವಿಜನ ಪದವಿಯನ್ನು (ಋತ್ವಿಕ್ಕುಗಳಲ್ಲೆಲ್ಲಾ ಬ್ರಹ್ಮನೆಂಬ ಋತ್ವಿಜನೇ ಶ್ರೇಷ್ಠನೆಂದು ಪ್ರಸಿದ್ಧವು) ಗಳಿಸಿರುವರು. ಯಜ್ಞಗಳಲ್ಲಿಯೂ ಇತರ ಸಮಸ್ತ ಕರ್ಮಗಳಲ್ಲಿಯೂ ದಕ್ಷಿಣೆಯನ್ನು ಪಡೆಯಲು ಇವರು ಅರ್ಹರಾಗಿರುವರು.

159. ಆದ್ದರಿಂದ ಯಜ್ಞಾದಿಸರ್ವಕರ್ಮಗಳಲ್ಲಿಯೂ ಅಲ್ಲಿಗೆ ಬಂದಿರಬಹುದಾದ ವಸಿಷ್ಠಕುಲದ ಬ್ರಾಹ್ಮಣರನ್ನೆಲ್ಲಾ ದಕ್ಷಿಣೆಯನ್ನು ಕೊಟ್ಟು ಗೌರವಿಸಬೇಕೆಂದು ಭಾಲ್ಲವೇಯಶ್ರುತಿವಾಕ್ಯವು ತಿಳಿಸುವುದು.

160. ಮಿತ್ರಾವರುಣರ ಪುತ್ರನಾದ ಈ ವಸಿಷ್ಠಋಷಿಯು ಈ ೭ ನೇ ಮಂಡಲದಲ್ಲಿ ಮೊದಲ ೧೬ ಸೂಕ್ತಗಳಲ್ಲಿ (ಎಂದರೆ ೧ ಮತ್ತು ೩-೧೭ ಸೂಕ್ತಗಳಲ್ಲಿ) ಅಗ್ನಿಯನ್ನು ಸ್ತುತಿಸಿರುವನು. ಈ ಸೂಕ್ತಗಳ ಮಧ್ಯದಲ್ಲಿ **ಜುಷಸ್ವ ನಃ** ಎಂಬ ೨ ನೇ ಸೂಕ್ತವು ಆಪ್ರೀಸೂಕ್ತವು.

161. **ಪ್ರಾಗ್ನಯೇ ತವಸೇ** ಎಂಬ ೫ ನೇ ಸೂಕ್ತದಲ್ಲಿಯೂ, **ಪ್ರ ಸಮ್ರಾಜಃ** ಎಂಬ ೬ ನೇ ಸೂಕ್ತದಲ್ಲಿಯೂ, **ಪ್ರಾಗ್ನಯೇ ವಿಶ್ವಶುಚೇ** ಎಂಬ ೩ ಋಕ್ಕುಗಳಿರುವ ೧೩ ನೇ ಸೂಕ್ತದಲ್ಲಿಯೂ ವೈಶ್ವಾನರಾಗ್ನಿಯನ್ನು ಸ್ತುತಿಸಲಾಗಿದೆ. **ತ್ವೇ ಹ ಯತ್** ಎಂಬ ೧೮ ನೇ ಸೂಕ್ತದಲ್ಲಿ ಇಂದ್ರನನ್ನು ಸ್ತುತಿಸಲಾಗಿದೆ.

**32. Vasistha and his descendants. Deities of RV. vii. 1-32.**

158, Vasistha and the Vasisthas thus (became) Brahmans in the office of Brahman priest, most worthy of fees in all rites at sacrifices.

159. Therefore one should honour with fees all such descendants of Vasistha who may at any time even to-day be present at a sacrificial assembly, so (says) a sacred text of the Bhallavins.

160. Now the seer, the son of Mitra-Varuna (ವಸಿಷ್ಠ), wfth the following sixteen hymns (beginning) 'Agni' (ಅಗ್ನಿಂ : vii. 1. 1) praised Agni; 'Enjoy our' (ಜುಷಸ್ವ ನಃ : vii. 2) here are Apri stanzas.

161. Then 'Forth to Agni' (ಪ್ರಾಗ್ನಯೇ : vii. 5), 'Forth of the sovereign lord' (ಪ್ರ ಸಮ್ರಾಜಃ : vii. 6), the second 'Forth to Agni' (ಪ್ರಾಗ್ನಯೆ : vii. 13) which consists of three stanzas—these are addressed to Visvanra. Then those which follow, (beginning) 'In these, indeed' (ತ್ವೇ ಹ : vii. 18), are addressed to Indra.

ದಶ ಪಂಚ ಚ ಸೂಕ್ತಾನಿ ನಿಪಾತೋ ಮರುತಾಂ ಸ್ತುತಿಃ |
ನಕಿಃ ಸುದಾಸ ಇತ್ಯಸ್ಯಾಂ ದಾನಂ ಪೈಜವನಸ್ಯ ತು || ೧೬೨ ||
ವಸಿಷ್ಠೇನ ಚತುರ್ಭಿಸ್ತು ದ್ವೇ ನಪ್ತುರಿತಿ ಕೀರ್ತಿತಂ |
ಸಂವಾದಂ ಸೂಕ್ತಮೈಂದ್ರಂ ವಾ ಶ್ವಿತ್ಯಂಚಸ್ತು ಪ್ರಚಕ್ಷತೇ || ೧೬೩ ||
ವಸಿಷ್ಠಾಗಸ್ತ್ಯಯೋರತ್ರ ಕೀರ್ತ್ಯತೇ ತನಯೈಃ ಸಹ |
ಇಂದ್ರೇಣ ಚೈವ ಸಂವಾದೋ ಮಹಿಮಾ ಜನ್ಮ ಕರ್ಮ ಚ | || ೧೬೪ ||
ಪರಾಣಿ ಪ್ರೇತಿ ಚತ್ವಾರಿ ವೈಶ್ವದೇವಾನಿ ತತ್ರ ತು |
ಸ್ತೌತ್ಯಗಬ್ಜಾಮಹಿಂ ತತ್ರ ಮಾ ನೋಽಹಿಂ ಬುಧ್ನ್ಯಮೇವ ಚ || ೧೬೫ ||

162. ೧೮-೩೨ ರ ವರೆಗಿನ ಹದಿನೈದು ಸೂಕ್ತಗಳಲ್ಲಿ ಮರುದ್ದೇವತೆಗಳನ್ನು ಸ್ತುತಿಸಲಾಗಿದೆ (ಈ ಸೂಕ್ತಗಳಿಗೆ ಇಂದ್ರನು ಮುಖ್ಯದೇವತೆಯು). ೩೨ ನೇ ಸೂಕ್ತದ **ನಕಿಃ ಸುದಾಸಃ** ಎಂಬ ೧೦ ನೇ ಋಕ್ಕಿನಲ್ಲಿ ಪಿಜವನ ಪುತ್ರನಾದ ಸುದಾಸನ ದಾನಪ್ರಶಂಸೆ ಇದೆ.

### ೩೩-೩೮ ನೇ ಸೂಕ್ತಗಳ ದೇವತೆಗಳು

163. ಮೇಲೆ ಹೇಳಿದ ಋಕ್ಕಿನಲ್ಲಲ್ಲದೆ ೧೮ ನೇ ಸೂಕ್ತದ **ದ್ವೇ ನಪ್ತುಃ** ಎಂದು ಮೊದಲಾಗುವ ೪ ಋಕ್ಕುಗಳಲ್ಲಿಯೂ (೨೨-೨೫) ಸುದಾಸನ (ಪಿಜವನನ ಪುತ್ರ) ಪ್ರಶಂಸೆ ಇದೆ. **ಶ್ವಿತ್ಯಂಚೋ ಮಾ** ಎಂಬ ೩೩ ನೇ ಸೂಕ್ತಕ್ಕೆ ಇಂದ್ರನು ದೇವತೆಯಾಗಿದ್ದರೂ ಈ ಸೂಕ್ತದಲ್ಲಿ ವಸಿಷ್ಠ, ವಸಿಷ್ಠಪುತ್ರರು ಮತ್ತು ಇಂದ್ರನಿಗೆ ನಡೆದ ಸಂಭಾಷಣೆ ಇರುವುದು.

164. ಈ ಸೂಕ್ತದಲ್ಲಿ ವಸಿಷ್ಠಾಗಸ್ತ್ಯರಿಗೂ ಅವರ ಪುತ್ರರಿಗೂ ಇಂದ್ರನಿಗೂ ನಡೆದ ಸಂಭಾಷಣೆ ಇದೆ-ಇಲ್ಲಿ ಅವರ ಮಹಿಮೆ, ಜನನ, ಕೆಲಸಕಾರ್ಯಗಳು ಇವೆಲ್ಲವೂ ಪ್ರಶಂಸಿಸಲ್ಪಟ್ಟಿವೆ.

165. **ಪ್ರ ಶುಕ್ರೈತು** ಎಂದು ಮೊದಲಾಗುವ ೪ ಸೂಕ್ತಗಳಿಗೆ (೩೪-೩೭) ವಿಶ್ವೇದೇವತೆಗಳು ದೇವತೆಯು; ಈ ಸೂಕ್ತದ **ಅಬ್ಜಾಮುಕ್ಥೈಃ** ಎಂಬ ೧೬ ನೇ ಋಕ್ಕಿನಲ್ಲಿ ಅಹಿಯೆಂಬ ಅಸುರನನ್ನೂ ಮುಂದಿನ **ಮಾನೋಽಹಿಃ** ಎಂಬ ೧೭ ನೇ ಋಕ್ಕಿನಲ್ಲಿ ಅಹಿರ್ಬುಧ್ನ್ಯನನ್ನೂ ಪ್ರಶಂಸಿಸಲಾಗಿದೆ.

---

162 being fifteen hymns (vii. 18-32): praise of the Maruts is incidental (in them). In the (stanza) 'No one Suda's (ನಕಿಃ ಸುದಾಸಃ : vii. 32-10) the gift of Paijavana (ಸುದಾಸ).

### 33. Deities of RV. vii. 33-38.

163. is proclaimed by Vasithha, as well as in the four (stanzas) 'Two from the grandson' (ದ್ವೇ ನಪ್ತುಃ : vii. 18. 22-25), ' White robed ' (ಶ್ವಿತ್ಯಂಚಃ ; vii. 33) they pronounce to be a dialogue or a hymn addressed to Indra.

164. Here is proclaimed a dialogue of Vasistha and Agastya with their sons and also with Indra, and (their) greatness, birth, and action (are celebrated).

165. Thc following four (hymns) ' Forth ' (ಪ್ರ : vii. 34-37) are addressed to the All-gods. There, however, the stanza ' Born in the waters ' (ಅಬ್ಜಾಂ: vii. 34-16) praises the Dragon (ಅಹಿ), and there ' May us not ' (ಮಾ ನಃ : vii. 34-17) praises the Dragon of the Deep (ಅಹಿರ್ಬುಧ್ನ್ಯ).

ಅಹಿರಾಹಂತಿ ಮೇಘಾನ್ಸ ಏತಿ ವಾ ತೇಷು ಮಧ್ಯಮಃ ।
ಬುಧ್ನ್ಯೋಽಹಿಃ ಸ ಬುಧ್ನ್ಯೋ ಬುಧ್ನೇ ಹಿ ಸೋಽನ್ತರಿಕ್ಷೇಽಭಿಜಾಯತೇ ॥ ೧೬೬ ॥

ಉದು ಷ್ಯ ಸವಿತುಃ ಸೂಕ್ತಂ ಶಂ ನೋ ವಾಜಿನದೈವತಃ ।
ದ್ವ್ಯೃಚೋಽರ್ಧರ್ಚಶ್ಚ ಭಾಗೋಽತ್ರ ಭಗಮುಗ್ರ ಇತಿ ಶ್ರುತಿಃ ॥ ೧೬೭ ॥

ಪಾದಶ್ಚೈವ ತೃತೀಯೋಽತ್ರ ಪಂಚಮ್ಯಾಮಹಿದೈವತಃ ।
ಯಥಾರ್ಧರ್ಚೋ ಭಗಮುಗ್ರಸ್ತಥಾ ನೂನಂ ಭಗೋಽಪಿ ಚ ॥ ೧೬೮ ॥

166. ಮೇಘಗಳನ್ನು ಪ್ರಹರಿಸುವುದರಿಂದ (**ಆಹಂತಿ**) ಇವನಿಗೆ ಅಹಿಯೆಂದು ಹೆಸರು ಅಥವಾ ಆ ಮೇಘಗಳ ಮಧ್ಯದಲ್ಲಿ ನುಗ್ಗಿಹೋಗುವುದರಿಂದ ಅಹಿ ಎಂಬ ಹೆಸರುಬಂದಿದೆ. ಆಳವಾದ ಅಥವಾ ವಿಸ್ತಾರವಾದ ಅಂತರಿಕ್ಷ ಪ್ರದೇಶದಲ್ಲಿ ಇವನ ಉತ್ಪತ್ತಿಯಾಗುವುದರಿಂದ ಅಹಿರ್ಬುಧ್ನ್ಯನಿಗೆ ಈ ಹೆಸರುಬಂದಿದೆ.

167. **ಉದು ಷ್ಯ ದೇವಃ** ಎಂಬ ೩೮ ನೇ ಸೂಕ್ತಕ್ಕೆ ಸವಿತೃವು ದೇವತೆಯು. ಆದರೆ ಈ ಸೂಕ್ತದ **ಶಂ ನೋ ಭವಂತು** ಎಂದು ಮೊದಲಾಗುವ ಎರಡು ಋಕ್ಕುಗಳಿಗೆ (೭-೮) ಅಶ್ವಗಳು ದೇವತೆಯು. ೬ ನೇ ಋಕ್ಕಿನ **ಭಗಮುಗ್ರಃ** ಎಂಬ ಉತ್ತರಾರ್ಧಕ್ಕೆ ಭಗನು ದೇವತೆಯೆಂದು ಶ್ರುತಿವಾಕ್ಯವು ಹೇಳುವುದು.

168. ಈ ೩೮ ನೇ ಸೂಕ್ತದ ೫ ನೇ ಋಕ್ಕಿನ ಮೂರನೆಯ ಪಾದಕ್ಕೆ ಅಹಿಯು ದೇವತೆಯು; ಹಿಂದೆ ೬ ನೇ ಋಕ್ಕಿನ ಉತ್ತರಾರ್ಧಕ್ಕೆ (ಭಗಮುಗ್ರಃ) ಭಗನು ದೇವತೆಯಾಗಿರುವಂತೆಯೇ ಈ ಸೂಕ್ತದ ಮೊದಲನೆಯ ಋಕ್ಕಿನ **ನೂನಂ ಭಗಃ** ಎಂಬ ಉತ್ತರಾರ್ಧಕ್ಕೂ ಭಗನೇ ದೇವತೆಯು.

---

166. The Dragon (ಅಹಿ) strikes (ಆಹಂತಿ) the clouds, or he goes in the midst among them. The Dragon is of the deep (ಬುಧ್ನ್ಯ), for he is born in the deep (ಬುಧ್ನ), the air.

167. 'On high that' (ಉದು ಷ್ಯ ಸವಿತುಃ: vii. 38) is a hymn of Savitr, Here the couplet 'Blessed for us' (ಶಂ ನಃ: vii. 38. 7-8) has steeds as its divinities, and the hemistich 'On Bhaga the mighty' (ಭಗಮುಗ್ರಃ: vii. 38. 6) is addressed to Bhaga, so a sacred text (states).

## 34. Deities of RV. vii. 38-43.

168. And the third verse in the fifth (stanza) here (vii. 38. 5) has the Dragon for its divinity.

As the hemisttch 'On Bhaga the mighty' (ಭಗಮುಗ್ರಃ: vii. 38. 6) so also is 'Now Bhaga' (ನೂನಂ ಭಗ: vii. 38. 1):

ಸ ಹಿ ರತ್ನಾನಿ ಸವಿತಾ ಸುವಾತೀತಿ ಭಗಃ ಸ ವಾ |
ವೈಶ್ವದೇವಾನಿ ಪಂಚೋರ್ಧ್ವಃ ಪಂಚರ್ಚೋ ಭಗದೈವತಃ || ೧೬೯ ||
ಪ್ರಾತರ್ಜಿತಮುಷಸ್ಯಾಂತ್ಯಾ ದ್ರಷ್ಟೃಭ್ಯೋಽತ್ರಾಶಿರೇವ ವಾ |
ಏಕೇ ತು ಪ್ರಾತರಿತ್ಯಸ್ಯಾಂ ಭಗಮೇವ ಪ್ರಚಕ್ಷತೇ || ೧೭೦ ||
ಆದಾವಂತೇ ತು ಋಷಯಃ ಕೀರ್ತಯಂತಿ ಪ್ರಸಂಗತಃ |
ಸೂಕ್ತೇಽಸ್ಮಿನ್ದೇವತಾಸ್ತ್ವನ್ಯಾ ಅನ್ಯಾಸ್ತತ್ರ ಭವಂತಿ ಚ || ೧೭೧ ||

**೩೯-೪೩ ಸೂಕ್ತದ ದೇವತೆಗಳು**

169-170. ೫ ನೇ ಮಂಡಲದ ೮೨ ನೇ ಸೂಕ್ತದ **ಸ ಹಿ ರತ್ನಾನಿ** ಎಂಬ ೩ ನೇ ಋಕ್ಕಿನಲ್ಲಿ ಹೇಳಿರುವಂತೆ ಭಗನನ್ನೇ ಸವಿತೃದೇವನೆಂದು ಹೇಳಬಹುದು. **ಊರ್ಧ್ವೋ ಅಗ್ನಿಃ** ಎಂದು ಪ್ರಾರಂಭವಾಗುವ ಮುಂದಿನ ೫ ಸೂಕ್ತಗಳಿಗೆ (೩೯-೪೩) ವಿಶ್ವೇದೇವತೆಗಳು ದೇವತೆಯು. ಅವುಗಳಲ್ಲಿ ಎಂದರೆ **ಪ್ರಾತರ್ಜಿತಂ** ಎಂದು ಮೊದಲಾಗುವ ೪೧ ನೇ ಸೂಕ್ತದ ೫ ಋಕ್ಕುಗಳಲ್ಲಿ (೨-೬) ಭಗನನ್ನು ಸ್ತುತಿಸಲಾಗಿದೆ ಈ ೪೧ ನೇ ಸೂಕ್ತದ ಕೊನೆಯ ಎಂದರೆ ೭ ನೆಯ ಋಕ್ಕಿಗೆ ಉಷಸ್ಸು ದೇವತೆಯು ಅಥವಾ ಈ ಕೊನೆಯ ಋಕ್ಕಿನಲ್ಲಿ ಸೂಕ್ತದ್ರಷ್ಟೃಗಳಾದ ಋಷಿಗಳಿಗೆ ಮಂಗಳವನ್ನು (**ಆಶೀಃ**) ಕೋರಲಾಗಿದೆ. ಕೆಲವರು **ಪ್ರಾತರಗ್ನಿಂ** ಎಂಬ ಈ ೪೧ ಸೂಕ್ತಕ್ಕೆ ಭಗನೊಬ್ಬನೇ ದೇವತೆಯೆಂದು ಹೇಳುವರು.

171. ಸೂಕ್ತದ್ರಷ್ಟೃಗಳಾದ ಋಷಿಗಳು ಸೂಕ್ತದ ಪ್ರಾರಂಭದಲ್ಲಿಯೂ, ಕೊನೆಯಲ್ಲಿಯೂ ಕೆಲವು ದೇವತೆಗಳನ್ನು ಪ್ರಾಸಂಗಿಕವಾಗಿ ಸ್ತುತಿಸುತ್ತಾರೆ. ಹೇಗೆಂದರೆ—ಭಗದೇವತಾಕವಾದ ಈ ೪೧ ನೇ ಸೂಕ್ತದ ಪ್ರಾರಂಭದ ಋಕ್ಕಿನಲ್ಲಿ ಅಗ್ನಿ, ಇಂದ್ರ, ಮಿತ್ರಾವರುಣಾ, ಅಶ್ವಿನಾ, ಪೂಷಾ, ಬ್ರಹ್ಮಣಸ್ಪತಿ, ಸೋಮ, ರುದ್ರ ಎಂಬ ಇತರ ದೇವತೆಗಳ ಪ್ರಶಂಸೆ ಇದೆ. ಹಾಗೆಯೇ ಕೊನೆಯ ಋಕ್ಕಿನಲ್ಲಿ ಉಷೋದೇವತೆಯ ಪ್ರಶಂಸೆ ಇದೆ. ಇವೆಲ್ಲರನ್ನೂ ಇಲ್ಲಿ ಪ್ರಾಸಂಗಿಕವಾಗಿ ಸ್ತುತಿಸಲಾಗಿರುವುದೆಂದು ತಿಳಿಯಬೇಕು.

169. According to (the stanza) 'May that Savitr produce treasures' (ಸ ಹಿ ರತ್ನಾನಿ RV. v. 82. 3), he (Savitr) may (ವಾ) be (regarded as) Bhag.

'Upright' (ಊರ್ಧ್ವಃ ; vii 39-1) is (the first of) five (hymns) addressed to the All-gods (vii. 39 43). Bhaga is the divinity of the five stanzas.

170. (beginning) 'Winning at morn' (ಪ್ರಾತರ್ಜಿತಂ : vii. 41. 2 6). The last (stanza) is addressed to Dawn (vii. 41 7), or else a prayer for the seers (ದ್ರಷ್ಟೃ) is here (expressed). Some, however, pronounce Bhaga only to be (the deity) in the (stanza) 'At morn' (ಪ್ರಾತಃ : vii. 41. 1)

171. Now the seers at the beginning and end (of hymns) proclaim (deities) in an occasional manner (ಪ್ರಸಂಗತಃ)::(thus) in the hymn there are some deities (here) and others (there) in that place (ತತ್ರ).

ಸಾಲೋಕ್ಯಾತ್ಸಾಹಚರ್ಯಾದ್ವಾ ಸಂಸ್ತವಾದಥವಾ ಪುನಃ ||
ಗಣಸ್ಥಾನಾದ್ಭಕ್ತಿತೋ ವಾ ಕೀರ್ತ್ಯಂತೇऽನ್ಯಾಸ್ತು ದೇವತಾಃ || ೧೭೨ ||

ದಾಧಿಕ್ರಮಥ ಸಾವಿತ್ರಂ ರೌದ್ರಮಿತ್ಯನುಪೂರ್ವಶಃ |
ದಾಧಿಕ್ರೇ ಪ್ರಥಮಾಯಾಸ್ತು ದೇವತಾಃ ಪರಿಕೀರ್ತಿತಾಃ || ೧೭೩ ||

ತಾ ಜ್ಞೇಯಾ ಆಪ ಆಪ್ಯಂ ಸ್ಯಾದಾರ್ಭವಃ ಪ್ರಥಮಸ್ತ್ರ್ಯಚಃ |

172. ಸೂಕ್ತದ ಮುಖ್ಯದೇವತೆಯನ್ನಲ್ಲದೆ ಇತರ ದೇವತೆಗಳನ್ನು ಸೂಕ್ತದಲ್ಲಿ ಸ್ತುತಿಸುವ ಸಂದರ್ಭಗಳು ಕೆಲವಿವೆ—ಸ್ತುತರಾಗುವ ಇತರ ದೇವತೆಗಳು ಮುಖ್ಯದೇವತೆಯ ಸ್ಥಾನಕ್ಕೆ (ಪೃಥಿವ್ಯಂತರಿಕ್ಷಸ್ವರ್ಗಗಳೆಂಬ ಮೂರು ಸ್ಥಾನಗಳಲ್ಲಿ ಮುಖ್ಯದೇವತೆಯ ಸ್ಥಾನಕ್ಕೆ) ಸೇರಿದ್ದರೂ, ಅಥವಾ ಮುಖ್ಯದೇವತೆಯೊಡನೆ ಆ ಇತರ ದೇವತೆಗಳಿಗೆ ಸಾಹಚರ್ಯವಿದ್ದರೂ, ಅಥವಾ ಮುಖ್ಯದೇವತೆಯೊಡನೆ ಸಂಸ್ತವಿಕವಾಗಿ (ಜತೆಯಲ್ಲಿ ಅಥವಾ ಒಟ್ಟಿಗೆ ಸೇರಿಸಿ—ಇಂದ್ರಾಗ್ನೀ, ಇಂದ್ರಾವಿಷ್ಣೂ ಇತ್ಯಾದಿ) ಸ್ತುತಿಸಿದ್ದರೂ, ಅಥವಾ ಮುಖ್ಯದೇವತೆಯ ಗಣಕ್ಕೆ ಅಥವಾ ಸಮೂಹಕ್ಕೆ ಸೇರಿದ್ದರೂ (ಗಣವೆಂದರೆ ಗುಂಪು—ಮರುದ್ಗಣಗಳು, ವಿಶ್ವೇದೇವತೆಗಳ ಗುಂಪು, ವಸುಗಳು, ರುದ್ರರು, ಆದಿತ್ಯರು ಇವರುಗಳ ಗುಂಪು ಇತ್ಯಾದಿ) ಅಥವಾ ಭಕ್ತಿಪರವಶತೆಯಿಂದಲೂ ಋಷಿಯು ಮೇಲೆ ಹೇಳಿದ ಸಂದರ್ಭಗಳಲ್ಲಿ ಇತರ ದೇವತೆಗಳನ್ನು (ಪ್ರಸಂಗವಶದಿಂದ) ಸ್ತುತಿಸಬಹುದು.

### ೪೪-೪೯ ನೇ ಸೂಕ್ತದ ದೇವತೆಗಳು

173. ಮುಂದಿನ **ದಧಿಕ್ರಾಂ ವಃ** ಎಂಬ ೪೪ ನೇ ಸೂಕ್ತಕ್ಕೆ ದಧಿಕ್ರನು ದೇವತೆಯು. ಅದರ ಮುಂದಿನ **ಆ ದೇವಃ** ಎಂಬ ೪೫ ನೇ ಸೂಕ್ತಕ್ಕೆ ಸವಿತೃವೂ ಅದರ ಮುಂದಿನ **ಇಮಾ ರುದ್ರಾಯ** ಎಂಬ ೪೬ ನೇ ಸೂಕ್ತಕ್ಕೆ ರುದ್ರನೂ ಕ್ರಮವಾಗಿ ದೇವತೆಗಳು. ಆದರೆ ೪೪ ನೇ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಇತರ ದೇವತೆಗಳ ಪ್ರಶಂಸೆಯೂ ಇರುವುದು. ಅವರು ಯಾರೆಂದರೆ—ಅಶ್ವಿನೀದೇವತೆಗಳು, ಉಷೋದೇವತೆ, ಅಗ್ನಿ, ಭಗ, ಇಂದ್ರ, ವಿಷ್ಣು, ಪೂಷಾ, ಬ್ರಹ್ಮಣಸ್ಪತಿ, ಆದಿತ್ಯ, ದ್ಯಾವಾಪೃಥಿವೀ, ಆಪಃ ಎಂಬ ದೇವತೆಗಳ ಪ್ರಶಂಸೆಯಿದೆಯೆಂದು ತಿಳಿಯಬೇಕು.

174. **ಆಪೋ ಯಂ ವಃ** ಎಂಬ ೪೭ ನೇ ಸೂಕ್ತಕ್ಕೆ **ಆಪಃ** (ಉದಕಗಳು) ಎಂಬುದು ದೇವತೆಯು.

---

172. Other deities are proclaimed because they belong to the same world or because they are associated, or else again because they share praise (ಸಂಸ್ತವಾತ್), because of the sphere of (their accompanying) troop (ಗಣ), or because of a (common) attribute (ಭಕ್ತಿತಃ).

### 35. Deities of RV. vii. 44-49.

173. Next (come) one (hymn) addressed to Dadhikra (vii. 44), one to Savitr (vii. 45), one to Rudra (vii, 46) in succession. But the deities proclaimed as belonging to the first (stanza) of (the hymn) addressed to Dadhikra (vii. 44. 1)

174. may be recognised. 'O Waters' (ಆಪಃ: vii. 47) should be (regarded as) addressed to the waters. The first triplet (of the next hymn)

**ಉತ್ತಮಾ ವೈಶ್ವದೇವೀ ವಾ ಆರ್ಭವೀ ವಾ ನಿಗದ್ಯತೇ** || ೧೭೪ ||

**ವೈಶ್ವದೇವೇ ತಥಾ ಶಸ್ತ್ರೇ ಆರ್ಭವಂ ಶಸ್ಯತೇ ಹಿ ತತ್ |**

**ದಶಮೇಽಹ್ನಿ ಸಮಸ್ತಂ ಸಮುದ್ರಜ್ಯೇಷ್ಠಾ ಅಪಾಂ ಸ್ತುತಿಃ** || ೧೭೫ ||

**ಸಮುದ್ರಜ್ಯೇಷ್ಠಾ ಅಪಾಂ ಸ್ತುತಿಃ ||**

**|| ಇತಿ ಬೃಹದ್ದೇವತಾಯಾಂ ಪಂಚಮೋಽಧ್ಯಾಯಃ ||**

ಮುಂದಿನ ಸೂಕ್ತದ (೪೮) ಮೊದಲ ಮೂರು ಋಕ್ಕುಗಳಿಗೆ (೧-೩) ಋಭುಗಳು ದೇವತೆಯು. ಕೊನೆಯ ೪ ನೇ ಋಕ್ಕಿಗೆ ವಿಶ್ವೇದೇವತೆಗಳಾಗಲಿ, ಋಭುಗಳಾಗಲಿ ದೇವತೆಯಾಗಬಹುದು.

175. ಅಥವಾ ಋಭುದೇವತಾಕವಾದ ಈ ೪೮ ನೇ ಸೂಕ್ತವು ಪೂರ್ತಿಯಾಗಿ ಯಜ್ಞದ ಹತ್ತನೇ ದಿವಸ ಪಠಿಸಲ್ಪಡುವ ವೈಶ್ವದೇವಶಸ್ತ್ರಮಂತ್ರಗಳಿಗಾಗಿ ಪಠಿಸಲ್ಪಡುವುದು ಪ್ರಸಿದ್ಧವಾಗಿಯೇ ಇದೆ. **ಸಮುದ್ರಜ್ಯೇಷ್ಠಾ** ಎಂಬ ೪೯ ನೇ ಸೂಕ್ತವು ಉದಕಗಳನ್ನು (**ಅಪಾಂ ಸ್ತುತಿಃ**) ಸ್ತುತಿಸುವುದು.

ಇಲ್ಲಿಗೆ ಐದನೆಯ ಅಧ್ಯಾಯವು ಸಮಾಪ್ತವಾದುದು.

is addressed to the Rbhus (vii. 48. 1-3). The last (stanza: vii. 48. 4) is pronounced to be addressed either to the All-gods or to the Rbhus.

175. For it is thus that this entire (hymn) addressed to the Rbhns is chanted on the tenth day in the litany to the All-gods. 'Whose chief the sea' (ಸಮುದ್ರಜ್ಯೇಷ್ಠಾಃ: vii. 49) is (in) praise of the Waters

Thus ends 5th Chapter.



# ಅಥ ಬೃಹದ್ದೇವತಾಯಾಂ ಷಷ್ಠೋಽಧ್ಯಾಯಃ

ಆ ಮಾಮಿತಿ ತು ಸೂಕ್ತೇನ ಪ್ರತ್ಯೃಚಂ ದೇವತಾಃ ಸ್ತುತಾಃ ।
ಮಿತ್ರಾವರುಣಾವಗ್ನಿಶ್ಚ ದೇವಾ ನದ್ಯಸ್ತಥೈವ ಚ ॥ ೧ ॥
ತೃಚಾವಾದಿತ್ಯದೇವತ್ಯೌ ರೋದಸ್ಯೋಃ ಪ್ರೇತಿ ಯಸ್ತ್ರ್ಯೃಚಃ ।
ವಾಸ್ತೋಷ್ಪತ್ಯಾಶ್ಚತಸ್ರಸ್ತು ಸಪ್ತ ಪ್ರಸ್ವಾಪಿನ್ಯಃ ಸ್ಮೃತಾಃ ॥ ೨ ॥

## ಆರನೆಯ ಅಧ್ಯಾಯವು.

### ೭ ನೇ ಮಂಡಲದಲ್ಲಿ ೫೦-೬೬ ಸೂಕ್ತಗಳ ದೇವತೆಗಳು



1. **ಆ ಮಾಂ** ಎಂಬ ೫೦ ನೇ ಸೂಕ್ತದಲ್ಲಿ ಒಂದೊಂದು ಋಕ್ಕಿನಲ್ಲಿ ಒಬ್ಬೊಬ್ಬ ದೇವತೆಯನ್ನು ಸ್ತುತಿಸಲಾಗಿದೆ. ಹೇಗೆಂದರೆ—೧ ನೇ ಋಕ್ಕಿನಲ್ಲಿ ಮಿತ್ರಾವರುಣರನ್ನೂ ೨ ನೇ ಋಕ್ಕಿನಲ್ಲಿ ಅಗ್ನಿಯನ್ನೂ, ೩ ನೇ ಋಕ್ಕಿನಲ್ಲಿ ವಿಶ್ವೇದೇವತೆಗಳನ್ನೂ ೪ ನೇ ಋಕ್ಕಿನಲ್ಲಿ ನದಿಗಳನ್ನೂ ಸ್ತುತಿಸಲಾಗಿದೆ.

2. ಮೂರು ಮೂರು ಋಕ್ಕುಗಳಿರುವ **ಆದಿತ್ಯಾನಾಂ** ಮತ್ತು **ಆದಿತ್ಯಾಸಃ** ಎಂಬ ೫೧, ೫೨ ನೇ ಸೂಕ್ತಗಳಿಗೆ ಆದಿತ್ಯರು ದೇವತೆಗಳು. ಅದರಂತೆ ಮೂರು ಋಕ್ಕುಗಳುಳ್ಳ **ಪ್ರ ದ್ಯಾವಾ** ಎಂಬ ೫೩ ನೇ ಸೂಕ್ತಕ್ಕೆ ದ್ಯಾವಾಪೃಥಿವಿಗಳೂ, **ವಾಸ್ತೋಷ್ಪತೇ** ಎಂಬ ೫೪ ನೇ ಸೂಕ್ತಕ್ಕೂ, ೫೫ ನೇ ಸೂಕ್ತದ ಮೊದಲನೆಯ ಋಕ್ಕಿಗೂ ಒಟ್ಟು ೪ ಋಕ್ಕುಗಳಿಗೆ **ವಾಸ್ತೋಷ್ಪತಿಯು** ದೇವತೆಯು. ಅದರ ಮುಂದಿನ ಎಂದರೆ ೫೫ ನೇ ಸೂಕ್ತದ ೨-೮ ರವರೆಗಿನ ೭ ಋಕ್ಕುಗಳು **ಪ್ರಸ್ವಾಪಿನೀ** ಮಂತ್ರಗಳೆಂದು ಪ್ರಸಿದ್ಧವಾಗಿವೆ. (ಈ ೭ ಋಕ್ಕುಗಳಿಗೆ ಇಂದ್ರನೇ ಮುಖ್ಯದೇವತೆಯೆಂದು ಅನುಕ್ರಮಣಿಕೆಯಲ್ಲಿದೆ).

### 1. Deities of RV· vii. 50-66.

1. Now with the hymn 'Gaurd me' (ಆ ಮಾಂ : vii· 50) the deities are praised in successive stanzas :

Mitra-Varuna (1), and Agni (2), the (All)-gods (3), as well as the Rivers (4).

2. Two triplets (vii· 51, 52) have the Adityas for their deities. The triplet which (begins) 'Forth' (ಪ್ರ : vii· 53· 1-3) is to the Two Worlds (ರೋದಸೀ) There are (then) four (stanzas : vii· 54. 1-3, 55, 1) addressed to Vastospati : the seven following : (vii· 55· 2-8) are traditionally held to be lullably stanzas.

ಪರಂ ಚತ್ವಾರಿ ಸೂಕ್ತಾನಿ ಮಾರುತಾನಿ ಕ ಈಮಿತಿ ।
ತೇಷಾಂ ತು ಪಿತರಂ ದೇವಂ ತ್ರ್ಯಂಬಕಂ ಸ್ತೌತ್ಯೃಗುತ್ತಮಾ ॥ ೩ ॥
ಸ್ತುತೌ ತು ಮಿತ್ರಾವರುಣೌ ಸೂಕ್ತೈರ್ಯದಿತಿ ಸಪ್ತಭಿಃ ।
ಅಶ್ವಿನೌ ತು ಪರೈರ್ದೇವಾವಷ್ಟಭಿಃ ಪ್ರತಿ ವಾಮಿತಿ ॥ ೪ ॥
ಯದದ್ಯೈಕೋತ್ಸೂರ್ಯಸ್ತಿಸ್ರ ಉದ್ವೇತೀತ್ಯರ್ಧಪಂಚಮಾಃ ।
ಸೌರ್ಯಸ್ತಚ್ಚಕ್ಷುರಿತಿ ತು ಗೀಯತೇ ಚಕ್ಷುರ್ದೇವತಾ । ೫ ॥
ಆದಿತ್ಯಾನಾಂ ತದ್ವೋ ಅದ್ಯ ದ್ವೇ ಋಚೌ ಶೌನಕೋಽಬ್ರವೀತ್ ।

3. ಮುಂದಿನ **ಕ ಈಂ ವ್ಯಕ್ತಾ** ಎಂದು ಪ್ರಾರಂಭವಾಗುವ ೪ ಸೂಕ್ತಗಳಲ್ಲಿ (೫೬–೫೯) ಮರುದ್ದೇವತೆಗಳನ್ನು ಸ್ತುತಿಸಲಾಗಿದೆ. ಈ ೪ ಸೂಕ್ತಗಳಲ್ಲಿ ಕೊನೆಯ ೫೯ ನೇ ಸೂಕ್ತದ ಕೊನೆಯ ೧೨ ನೆಯ ಋಕ್ಕಿನಲ್ಲಿ ದೇವತೆಗಳಿಗೆ ಪಿತೃವೆಂದು ಹೇಳಲ್ಪಡುವ ತ್ರ್ಯಂಬಕದೇವನನ್ನು ಸ್ತುತಿಸಲಾಗಿದೆ.

**೬೭–೭೪ ಸೂಕ್ತಗಳ ದೇವತೆಗಳು**

4. ಮುಂದಿನ **ಯದದ್ಯ** ಎಂದು ಪ್ರಾರಂಭವಾಗುವ ೭ ಸೂಕ್ತಗಳಲ್ಲಿ (೬೦–೬೬) ಮಿತ್ರಾವರುಣರನ್ನು ಸ್ತುತಿಸಲಾಗಿದೆ. ಆದರ ಮುಂದಿನ **ಪ್ರತಿ ವಾಂ** ಎಂದು ಪ್ರಾರಂಭವಾಗುವ ೮ ಸೂಕ್ತಗಳಲ್ಲಿ (೬೭–೭೪) ಅಶ್ವಿನೀದೇವತೆಗಳನ್ನು ಸ್ತುತಿಸಲಾಗಿದೆ.

5. ಆದರೆ **ಯದದ್ಯ** ಎಂಬ ೬೦ ನೇ ಸೂಕ್ತದ **ಯದದ್ಯ** ಎಂಬ ೧ ಋಕ್ಕಿನಲ್ಲಿಯೂ, **ಉತ್ಸೂರ್ಯಃ** ಎಂಬ ೬೨ ನೇ ಸೂಕ್ತದ ೧-೩ ಋಕ್ಕುಗಳಲ್ಲಿಯೂ, **ಉದ್ವೇತಿ** ಎಂಬ ೬೩ ನೇ ಸೂಕ್ತದ ಮೊದಲ ೪ ಋಕ್ಕುಗಳಲ್ಲಿಯೂ ಮತ್ತು ೫ ನೇ ಋಕ್ಕಿನ ಪೂರ್ವಾರ್ಧದಲ್ಲಿಯೂ ಸೂರ್ಯನನ್ನು ಸ್ತುತಿಸಲಾಗಿದೆ; ೬೬ ನೇ ಸೂಕ್ತದ **ತಚ್ಚಕ್ಷುಃ** ಎಂಬ ೧೬ ನೇ ಋಕ್ಕಿನಲ್ಲಿ ಸೂರ್ಯನ ಚಕ್ಷುಸ್ಸನ್ನೇ (**ತಚ್ಚಕ್ಷುಃ**) ದೇವತೆಯೆಂದು ಭಾವಿಸಿ ಸ್ತುತಿಸಲಾಗಿದೆ.

6. ೬೬ ನೇ ಸೂಕ್ತದಲ್ಲಿ **ತದ್ವೋ ಅದ್ಯ** ಎಂದು ಮೊದಲಾಗುವ ಎರಡು ಋಕ್ಕುಗಳಿಗೆ (೧೨–೧೩) ಆದಿತ್ಯರು

---

3. After this there are four hymns addressed to the Maruts (beginning) 'Who, pray ? ' (ಕ ಈಂ : vii. 56-59) ; the last stanza of these (vii. 59. 12) praises Trayambaka, the divine father.

4. With the seven hymns heginning ' When ' (ಯತ್ : vii. 60-66), Mitra-Varuna are praised ; but with the followsng eight (beginning) ' To meet your ' (ಪ್ರತಿ ವಾಂ : vii. 67-74) the divine Asvins.

5. (In) ' When to-day (ಯದದ್ಯ : vii. 60) one (1), Aloft the sun ' (ಉತ್ಸೂರ್ಯಃ : vii. 62) three (1–3), (in) Aloft he goes ' (ಉದ್ವೇತಿ : vii. 63) four and a half (1-5) are addressed to Surya, while (in) ' That eye ' (ತಚ್ಚಕ್ಷುಃ : vii. 66-16) the eye (of the sun) is sung as the deity.

**2. Deities of RV. vii. 66-85.**

6. Saunaka has stated that the two stanzas ' Thus of you to-day ತದ್ವೋ ಅದ್ಯ : vii. 66-12, 13) belong to the Adityas, while all the other stanzas,

ಅನ್ಯಾಃ ಸರ್ವಾ ಋಚಃ ಸೌರ್ಯಾ ಯದದ್ಯಾದ್ಯಾಃ ಪ್ರಕೀರ್ತಿತಾಃ ॥ ೬ ॥

ಇಮೇ ಚೇತಾರ ಇತ್ಯಾದ್ಯಾಃ ...... ...... ...... ...... .... .... ...... .... .... ।
ಅರ್ಯಮ್ಣೋ ವರುಣಸ್ಯಾಪಿ ಮಿತ್ರಸ್ಯೈತಾ ನವ ಸ್ಮೃತಾಃ ॥ ೭ ॥

ಯದದ್ಯ ಸೂರ ಇತ್ಯಾದ್ಯಾ ದಶಾದಿತ್ಯಾ ಋಚಃ ಸ್ಮೃತಾಃ ।
ಸವಿತಾ ವಾದಿತಿರ್ಮಿತ್ರೋ ವರುಣಶ್ಚಾರ್ಯಮಾ ಭಗಃ ॥ ೮ ॥

ಸ್ತುತಾ ಉದು ತ್ಯದಿತ್ಯೇತಾಸ್ತಿಸ್ರಃ ಸೌರ್ಯಸ್ತತಃ ಪರಾಃ ।
ಆಶೀಸ್ತಚ್ಚಕ್ಷುರಿತ್ಯೇತಾಮಾಚಾರ್ಯಃ ಶೌನಕೋಽಬ್ರವೀತ್ ॥ ೯ ॥

ದೇವತೆಯೆಂದೂ ಉಳಿದ ಋಕ್ಕುಗಳಿಗೆ ಎಂದರೆ **ಯದದ್ಯ** ಎಂದು ಪ್ರಾರಂಭವಾಗುವ ೪ ಋಕ್ಕುಗಳಿಗೂ (೪-೧೧) ಸೂಕ್ತದ ಇತರ ಋಕ್ಕುಗಳಿಗೂ ಸೂರ್ಯನು ದೇವತೆಯೆಂದೂ ಶೌನಕರ ಮತವು.

7. ೬೦ ನೇ ಸೂಕ್ತದಲ್ಲಿ **ಇಮೇ ಚೇತಾರಃ** ಎಂಬ ೫ ನೇ ಋಕ್ಕಿಗೂ ಅದರ ಮುಂದಿನ ಸೂಕ್ತದ ಕೊನೆಯವರೆಗಿನ ಋಕ್ಕುಗಳಿಗೂ ಒಟ್ಟು ೯ ಋಕ್ಕುಗಳಿಗೆ ಮಿತ್ರ, ವರುಣ, ಅರ್ಯಮಾ ಎಂಬುವರು ದೇವತೆಗಳೆಂದು ಹೇಳಲ್ಪಡುವರು.

8. ೬೬ ನೇ ಸೂಕ್ತದಲ್ಲಿ **ಯದದ್ಯ ಸೂರ್ಯ** ಎಂಬ ೪ ನೇ ಋಕ್ಕಿನಿಂದ ಮುಂದಿನ ೧೦ ಋಕ್ಕುಗಳಿಗೆ (೪-೧೩) ಆದಿತ್ಯರು ದೇವತೆಗಳೆಂದು ಹೇಳಲ್ಪಡುವುರು. ಅಥವಾ ಈ ೧೦ ಋಕ್ಕುಗಳಲ್ಲಿ ಸವಿತೃ, ಅದಿತಿ, ಮಿತ್ರ, ವರುಣ, ಅರ್ಯಮಾ, ಭಗ ಎಂಬ ದೇವತೆಗಳು,

9. ಸ್ತುತಿಸಲ್ಪಟ್ಟಿರುವರೆಂದು ಹೇಳಬಹುದು. ಅದರ ಮುಂದಿನ **ಉದು ತ್ಯತ್** ಎಂದು ಮೊದಲಾಗುವ ಮೂರು ಋಕ್ಕುಗಳಿಗೆ (೬೬ ನೇ ಸೂಕ್ತದ ೧೪-೧೬ ಋಕ್ಕುಗಳು) ಸೂರ್ಯನೇ ದೇವತೆಯು. **ತಚ್ಚಕ್ಷುಃ** ಎಂಬ ೧೬ ನೇ ಋಕ್ಕಿನಲ್ಲಿ ಪ್ರಾರ್ಥನೆಯು ಮಾತ್ರ ಉಕ್ತವಾಗಿದೆಯೆಂದು ಶೌನಕರು ಹೇಳುವರು.

---

When to-day ' ಯದದ್ಯ : vii. 66. 4-11) and the rest, are, proclaimed (by him) to be addressed to Surya.

7. ' These chastisers ' (ಇಮೇ ಚೇತಾರಃ : vii. 60-5) and the rest, these nine are traditinally held to belong to Aryaman, Mitra and Varuna.

8. The ten stanzas beginning 'When to-day the sun's (ಯದದ್ಯ ಸೂರಃ : vii. 66. 4-13) are traditionally held to be addressed to the Adityas : or else Savitr, Aditi, Mitra, Varuna, Aryamau, Bhaga

9. are praised. The three stanzas which then follow, ' Aloft that ' (ಉದು ತ್ಯತ್ : vii. 66. 14-16), are addressed to Surya. The teacher Saunaka has stated the stanza ' That eye ' (ತಚ್ಚಕ್ಷುಃ : vii. 66. 16) to be a prayer.

ಉಷಾಸ್ತು ಸಪ್ತಭಿರ್ವ್ಯುಷಾಃ ಸೂಕ್ತಾನ್ಯೇಭ್ಯಃ ಪರಾಣಿ ತು ।
ಚತ್ವಾರೀಂದ್ರಾವರುಣೇತಿ ಇಂದ್ರಾವರುಣಯೋಃ ಸ್ತುತಿಃ ॥ ೧೦ ॥
ಉದು ಜ್ಯೋತಿರಿತಿ ತ್ವಸ್ಮಿನ್ನರ್ಧರ್ಚೇ ಮಧ್ಯಮಃ ಸ್ತುತಃ ।
ವರುಣಸ್ಯ ಗೃಹಾನ್ರಾತ್ರೌ ವಸಿಷ್ಠಃ ಸ್ವಪ್ನ ಆಚರತ್ ॥ ೧೧ ॥
ಪ್ರಾವಿವೇಶಾಥ ತಂ ತತ್ರ ಶ್ವಾ ನದನ್ನಭ್ಯಧಾವತ ।
ಕ್ರಂದಂತಂ ಸಾರಮೇಯಂ ಸ ಧಾವಂತಂ ದಷ್ಟುಮುದ್ಯತಂ ॥ ೧೨ ॥
ಯದರ್ಜುನೇತಿ ಚ ದ್ವಾಭ್ಯಾಂ ಸಾಂತ್ವಯಿತ್ವಾ ವ್ಯಸುಷ್ವಪತ್ ।
ಸ ತಂ ಪ್ರಸ್ವಾಪಯಾಮಾಸ ಜನಮನ್ಯಂ ಚ ವಾರುಣಂ ॥ ೧೩ ॥

### ೭೫-೮೫ ಸೂಕ್ತಗಳ ದೇವತೆಗಳು

10. **ವ್ಯುಷಾ** ಎಂದು ಮೊದಲಾಗುವ ಮುಂದಿನ ೭ ಸೂಕ್ತಗಳಲ್ಲಿ (೭೫-೮೧) ಉಷೋದೇವತೆಯನ್ನು ಸ್ತುತಿಸಲಾಗಿದೆ ಮುಂದಿನ **ಇಂದ್ರಾವರುಣಾ** ಎಂದು ಪ್ರಾರಂಭವಾಗುವ ೪ ಸೂಕ್ತಗಳಲ್ಲಿ (೮೨-೮೫) ಇಂದ್ರಾವರುಣರನ್ನು ಸ್ತುತಿಸಲಾಗಿದೆ.

### ೮೬-೮೯ ಸೂಕ್ತಗಳ ದೇವತೆಗಳು ; ವಸಿಷ್ಠ ಮತ್ತು ವರುಣನ ನಾಯಿಯು

11. **ಉದು ಜ್ಯೋತಿಃ** ಎಂಬ ೭೬ನೇ ಸೂಕ್ತದ ಮೊದಲನೇ ಋಕ್ಕಿನ ಪೂರ್ವಾರ್ಧದಲ್ಲಿ ಮಧ್ಯಮಾಗ್ನಿಯು ಸ್ತುತನಾಗಿರುವನು. ಒಂದು ದಿನ ರಾತ್ರಿಕಾಲದಲ್ಲಿ ಸ್ವಪ್ನಾವಸ್ಥೆಯಲ್ಲಿರುವಾಗಲೇ ವಸಿಷ್ಠನು ವರುಣನ ಮನೆಗೆ ಹೋದನು.

12-13. ವರುಣನ ಮನೆಯನ್ನು ಪ್ರವೇಶಿಸುತ್ತಿರುವಾಗ ಬಾಗಿಲಿನಲ್ಲಿದ್ದ ನಾಯಿಯು ಘಟ್ಟಿಯಾಗಿ ಬೊಗಳುತ್ತಾ ವಸಿಷ್ಠನನ್ನು ಕಚ್ಚುವ ಉದ್ದಿಶ್ಯದಿಂದ ಅವನ ಮೇಲೆ ನುಗ್ಗಿ ಬಂದಿತು. ಘಟ್ಟಿಯಾಗಿ ಬೊಗಳುತ್ತಿರುವ ಮತ್ತು ಕಚ್ಚಬೇಕೆಂದು ಓಡಿಬರುತ್ತಿರುವ ಆ ನಾಯಿಯನ್ನು ವಸಿಷ್ಠನು ೫೫ ನೇ ಸೂಕ್ತದ **ಯದರ್ಜುನ** ಎಂದು ಮೊದಲಾಗುವ ಎರಡು ಋಕ್ಕುಗಳಿಂದ (೨-೩) ಸಮಾಧಾನಪಡಿಸಿ ಅದನ್ನು ನಿದ್ರಿಸುವಂತೆ ಮಾಡಿದನು. ಮತ್ತು ಮನೆಯ ಇತರ ಜನರಿಗೂ ನಿದ್ರೆಬರುವಂತೆ ಮಾಡಿದನು.

---

10. Now Dawn (is praised) with the seven (hymns) 'Forth the Dawn' (ವ್ಯುಷಾಃ : vii. 75-81) ; but the four hymns following these, 'O Indra and Varuna' (ಇಂದ್ರಾವರುಣಾ : vii. 82-85), are (in) praise of Indra-Varuna.

### 3. Vasistha and the dog of Varuna : RV. vii. 86 89.

11. In the hemistich 'Aloft the light' (ಉದು ಜ್ಯೋತಿಃ : vii. 76-1) the Middle (Agni) is praised.

During the night Vasistha in a dream approached the house of Varuna.

12-13. He then entered. A dog there ran at him, barking. Pacifying the hound which was making a din and runing (up) with intent to bite, he lulled him to sleep (ವ್ಯಸುಷ್ವಪತ್) with the two (stanzas) 'When, O bright one (ಯದರ್ಜುನ : vii. 55. 2, 3).

He sent him as well as the othar attnedants of Varuna to sleep.

ತತಸ್ತು ವರುಣೋ ರಾಜಾ ಸ್ವೈಃ ಪಾಶೈಃ ಪ್ರತ್ಯಬಧ್ಯತ ।
ಸ ಬದ್ಧಃ ಪಿತರಂ ಸೂಕ್ತೈಶ್ಚತುರ್ಭಿರಿತ ಉತ್ತರೈಃ ॥ ೧೪ ॥
ಅಭಿತುಷ್ಟಾವ ಧೀರೇತಿ ಮುಮೋಚೈನಂ ತತಃ ಪಿತಾ ।
ಧ್ರುವಾಸು ತ್ವೇತಿ ಚೋಕ್ತಾಯಾಂ ಪಾಶಾ ಅಸ್ಮಾತ್ಪ್ರಮೋಚಿರೇ ॥ ೧೫ ॥
ಪರಾಣಿ ತ್ರೀಣಿ ಸೂಕ್ತಾನಿ ವಾಯವ್ಯಾನಿ ಪ್ರ ವೀರಯಾ ।
ಐಂದ್ರವಾಯವ್ಯಾ ಸ್ತುತೌ ಯಾಸು ದ್ವಿವತ್ಸ್ತುತಿಃ ॥ ೧೬ ॥
ಪ್ರ ವೀರಯೋಕ್ತಾ ವಾಯವ್ಯಾ ಪ್ರಾಉಗೀತ್ಯೈತರೇಯಕೇ ।
ಪದಸ್ಯ ವ್ಯತ್ಯಯಂ ಕೃತ್ವಾ ವಾಯೋಃ ಪ್ರಾಧಾನ್ಯಮುಚ್ಯತೇ ॥ ೧೭ ॥

14-15. ಆಗ ವರುಣನು (ಈ ಗದ್ದಲವನ್ನು ನೋಡಿ) ಅಲ್ಲಿಗೆ ಬಂದಿದ್ದ ವಸಿಷ್ಠನನ್ನು ತನ್ನ ಪಾಶಗಳಿಂದ ಬಂಧಿಸಿದನು. ಬಂಧಿತನಾದ ವಸಿಷ್ಠನು ತನ್ನ ತಂದೆಯಾದ ವರುಣನನ್ನು **ಧೀರಾ ತ್ವಸ್ಯ** ಎಂದು ಮೊದಲಾಗುವ ನಾಲ್ಕು ಸೂಕ್ತಗಳಿಂದ (೮೬-೮೯) ಸ್ತುತಿಸಿದನು. ಅದರಿಂದ ಸಂತುಷ್ಟನಾದ ವರುಣನು ಅವನನ್ನು ತನ್ನ ಪಾಶದಿಂದ ಬಿಡಿಸಿದನು. **ಧ್ರುವಾಸು ತ್ವಾಸು** ಎಂಬ ಋಕ್ಕನ್ನು (೮೮ ನೇ ಸೂಕ್ತದ ೭ ನೇ ಋಕ್ಕನ್ನು) ವಸಿಷ್ಠನು ಪಠಿಸಿದಕೂಡಲೇ ಅವನನ್ನು ಬಂಧಿಸಿದ್ದ ಪಾಶಗಳು (ಹಗ್ಗಗಳು) ಕಳಚಿಬಿದ್ದವು.

### ೯೦-೯೬ ನೇ ಸೂಕ್ತದ ದೇವತೆಗಳು

16. **ಪ್ರ ವೀರಯಾ** ಎಂದು ಮೊದಲಾಗುವ ಮುಂದಿನ ಮೂರು ಸೂಕ್ತಗಳಲ್ಲಿ (೯೦-೯೨) ವಾಯುವನ್ನು ಸ್ತುತಿಸಲಾಗಿದೆ. ಈ ಸೂಕ್ತಗಳ ಕೆಲವು ಋಕ್ಕುಗಳಲ್ಲಿ ಇಂದ್ರವಾಯುಗಳನ್ನು ದ್ವಿವಚನಶಬ್ದಗಳಿಂದ (ಇಂದ್ರವಾಯೂ) ಸ್ತುತಿಸಲಾಗಿದೆ.

17. ಪ್ರಉಗಶಸ್ತ್ರಮಂತ್ರಗಳಲ್ಲಿ **ಪ್ರ ವೀರಯಾ** ಎಂಬ ವಾಯುದೇವತಾಕವಾದ ಋಕ್ಕನ್ನು (೯೦ ನೇ ಸೂಕ್ತದ ಮೊದಲನೆ ಋಕ್ಕು) ಪಠಿಸಬೇಕೆಂದು ಐತರೇಯಬ್ರಾಹ್ಮಣದಲ್ಲಿ ಹೇಳಿರುವುದರಿಂದ ವಾಯುವಿನ ಪ್ರಾಧಾನ್ಯತೆಯು ಈ ಋಕ್ಕಿನಲ್ಲಿ ಪ್ರತಿಪಾದಿತವಾಗಿರುವುದೆಂದು ತಿಳಿಯಬೇಕು. ಋಕ್ಕಿನಲ್ಲಿರುವ ಪದಗಳ ವ್ಯತ್ಯಯದಿಂದ ಸೂಚಿತವಾಗುವ ಭಾವವನ್ನು ಗಮನಿಸಬೇಕಾಗಿಲ್ಲ.

14-15. Then king Varuna bound him with his fetters. Bound (thus) he (Vasistha) praised his father (Varuna) with the next (ಇತಃ) following four (hymns) ‘ The wise ’ (ಧೀರಾ : vii. 86-89). Then his father released him.

As soon as the (stanza) ‘ you in the fixed ’ (ಧ್ರುವಾಸು ತ್ವಾ : vii. 88-7) had been uttered, the fetters dropped (ಪ್ರಮೋಚಿರೇ) from him.

### 4. Deities of RV. vii. 90-96.

16. The next three hyms, ‘ Forth longing for the heroes ’ (ಪ್ರ ವೀರಯಾ vii. 90-92), are addressed to Vayu. Now in this praise those (stanzas) are addressed to Indra-Vayu in which there is praise in the dual (ದ್ವಿವತ್).

17. ‘ Forth with longing fot the heroes ’ (ಪ್ರ ವೀರಯಾ : vii. 90-1) is spoken of in the (ಐತರೇಯ ಬ್ರಾಹ್ಮಣ) as a stanza addressed to Vayu belonging to the Prauga litany (ಪ್ರಉಗೀ) the predominance of Vayu is (thereby) expressed in contravention (ವ್ಯತ್ಯಯಂ ಕೃತ್ವಾ) of one of its verses (ಪಾದ).

ತೇ ಸತ್ಯೇನ ತೃಚೋ ಯಾವತ್ತರಶ್ಚತುರ್ಋಚಃ ಪುನಃ |
ಉಶನ್ತೈಕಾ ಪ್ರ ಸೋತಾ ಚರ್ಗ್ವ್ದಯೋರೇತಾ ನವ ಸ್ಮೃತಾಃ || ೧೮ ||
ಐಂದ್ರಾಗ್ನೇ ಶುಚಿಮಿತ್ಯೇತೇ ಪ್ರೇತಿ ಸಾರಸ್ವತೇ ಪರೇ |
ಋಚಾ ಸರಸ್ವಾನ್ ಸ ಇತಿ ಜನೀಯಂತಶ್ಚ ತಿಸೃಭಿಃ || ೧೯ ||
ರಾಜಾ ವರ್ಷಸಹಸ್ರಾಯ ದೀಕ್ಷಿಷ್ಯನ್ನಾಹುಷಃ ಪುರಾ |
ಚಚಾರೈಕರಥೇನೇಮಾಂ ಬ್ರುವನ್ಸರ್ವಾಃ ಸಮುದ್ರಗಾಃ ||೨೦ ||

18. ೯೦ ನೇ ಸೂಕ್ತದ **ತೇ ಸತ್ಯೇನ** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿಯೂ (೫–೭) ೯೧ನೇ ಸೂಕ್ತದ **ಯಾವತ್ತರಃ** ಎಂದು ಮೊದಲಾಗುವ ೪ ಋಕ್ಕುಗಳಲ್ಲಿಯೂ (೪–೭) ಅದೇ ೯೧ ನೇ ಸೂಕ್ತದ **ಉಶಂತಾ** ಎಂಬ ೨ ನೇ ಋಕ್ಕಿನಲ್ಲಿಯೂ, ೯೨ ನೇ ಸೂಕ್ತದ **ಪ್ರ ಸೋತಾ** ಎಂಬ ೨ ನೇ ಋಕ್ಕಿನಲ್ಲಿಯೂ ಇಂದ್ರವಾಯುಗಳಿಬ್ಬರ ಸ್ತುತಿಯೂ ಇರುವುದು.

19. **ಶುಚಿಂ ನು** ಎಂದು ಮೊದಲಾಗುವ ಎರಡು ಸೂಕ್ತಗಳಲ್ಲಿ (೯೩-೯೪) ಇಂದ್ರಾಗ್ನಿಗಳನ್ನೂ **ಪ್ರ ಕ್ಷೋದಸಾ** ಎಂದು ಮೊದಲಾಗುವ ಮುಂದಿನ ಎರಡು ಸೂಕ್ತಗಳಲ್ಲಿ (೯೫-೯೬) ಸರಸ್ವತಿಯನ್ನೂ ಸ್ತುತಿಸಲಾಗಿದೆ. ೯೫ ನೇ ಸೂಕ್ತದ **ಸ ವಾವೃಧೇ** ಎಂಬ ೩ ನೇ ಋಕ್ಕಿನಲ್ಲಿಯೂ ೯೬ ನೇ ಸೂಕ್ತದ **ಜನೀಯಂತಃ** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿಯೂ (೪-೬) **ಸರಸ್ವಾನ್** ಎಂಬ ದೇವತೆಯ ಸ್ತುತಿ ಇರುವುದು.

### ನಾಹುಷ ಮತ್ತು ಸರಸ್ವತಿ ಇವರ ವೃತ್ತಾಂತವು

20. ಪೂರ್ವದಲ್ಲಿ ನಾಹುಷನೆಂಬ ರಾಜನು ಸಾವಿರವರ್ಷಗಳವರೆಗೆ ಮಾಡಬೇಕಾದ ಸತ್ತ್ರಯಾಗದಲ್ಲಿ ದೀಕ್ಷೆಯನ್ನು ಕೈಕೊಂಡು ತನ್ನ ಒಂದು ರಥದಲ್ಲಿ ಕುಳಿತು ಈ ಭೂಮಿಯಲ್ಲೆಲ್ಲಾ (ವಿಜಯಾರ್ಥವಾಗಿ) ಸಂಚರಿಸಿದನು. ಆಗ ಆ ರಾಜನು ಸಮಸ್ತ ನದಿಗಳನ್ನೂ ಕುರಿತು,

---

18. 'these with true' (ತೇ ಸತ್ಯೇನ : vii. 90. 5–7) being a triplet, 'As long as strength' (ಯಾವತ್ತರಃ : vii- 91. 2) being a quartet, Eager (ಉಶಂತಾ vii. 91-2) and ಪ್ರಸೋತಾ (vii. 92-2)—these are traditionally held to be the nine (stanzas) belonging to the two (Indra-Vayu).

19. The two (hymns) 'The pure' (ಶುಚಿಂ : vii. 93. 94) are addressed to Indra-Agni; the two following, 'Forth' (ಪ್ರ : vii. 95, 96), are addressed to Sarasvati. Sarasvat (is praised) with the stanza 'He' (ಸಃ : vii. 95. 3) and with the three 'Longing for wives' (ಜನೀಯಂತಃ : vii. 86. 4-6.)

### 5. Story of Nahusha and Sarasvati : RV. vii. 95-96.

20. King Nahusa in former days wishing to consecrate himself for a thousand years, travelled over this (earth) with a single chariot, saying to all streams :

ಯಕ್ಷ್ಯೇ ವಹತ ಭಾಗಾನ್ಮೇ ದ್ವಂದ್ವಶೋ ವಾಥವೈಕಶಃ ।
ಪ್ರತ್ಯೂಚುಸ್ತಂ ನೃಪಂ ನದ್ಯಃ ಸ್ವಲ್ಪವೀರ್ಯಾಃ ಕಥಂ ವಯಂ ॥ ೨೦ ॥
ವಹೇಮ ಭಾಗಾಂಸ್ಸರ್ವಾಂಸ್ತೇ ಸತ್ರೇ ವಾರ್ಷಸಹಸ್ರಿಕೇ ।
ಸರಸ್ವತೀಂ ಪ್ರಪದ್ಯಸ್ವ ಸಾ ತೇ ವಕ್ಷ್ಯತಿ ನಾಹುಷ ॥ ೨೧ ॥
ತಥೇತ್ಯುಕ್ತ್ವಾ ಜಗಾಮಾಶು ಆಪಗಾಂ ಸ ಸರಸ್ವತೀಂ ।
ಸಾ ಚೈನಂ ಪ್ರತಿಜಗ್ರಾಹ ದುದುಹೇ ಚ ಪಯೋ ಘೃತಂ ॥ ೨೨ ॥
ಏತದತ್ಯದ್ಭುತಂ ಕರ್ಮ ಸರಸ್ವತ್ಯಾ ನೃಪಂ ಪ್ರತಿ ।
ವಾರುಣಿಃ ಕೀರ್ತಯಾಮಾಸ ಪ್ರಥಮಸ್ಯ ದ್ವಿತೀಯಯಾ ॥ ೨೪ ॥

21. ಎಲೈ ನದಿಗಳೇ, ನಾನು ಯಜ್ಞವನ್ನು ಮಾಡಬೇಕೆಂದು ಉದ್ದೇಶಿಸಿರುವೆನು. ಆದ್ದರಿಂದ ಆ ಯಜ್ಞ ಸಹಾಯಾರ್ಥವಾಗಿ ನೀವೆಲ್ಲರೂ ಒಬ್ಬೊಬ್ಬರಾಗಲಿ ಇಬ್ಬಿಬ್ಬರಾಗಲಿ ಬಂದು ನಿಮ್ಮ ಭಾಗದ ಸಹಾಯವನ್ನು ಒದಗಿಸಬೇಕು ಎಂದನು. ಅದನ್ನು ಕೇಳಿ ನದಿಗಳು ಆ ರಾಜನನ್ನು ಕುರಿತು—ಎಲೈ ರಾಜನೇ, ನೀನು ಕೇಳುವ ಸಹಾಯವನ್ನು ನಾವು ಹೇಗೆ ಮಾಡಲಾದೀತು ? ನಮಗಿರುವ ಸಾಮರ್ಥ್ಯವು ಅಲ್ಪವಾಗಿರುವುದು.

22. ಸಾವಿರವರ್ಷಗಳವರೆಗೆ ನಡೆಯುವ ಯಾಗಕ್ಕೆ ಬೇಕಾದ ಸಹಾಯಸಾಮಗ್ರಿಗಳನ್ನು ತಂದು ಪೂರೈಸಲು ನಮಗೆ ಶಕ್ತಿಯೆಲ್ಲಿದೆ? ಆದ್ದರಿಂದ ಎಲೈ ರಾಜನೇ, ನೀನು ಸರಸ್ವತೀನದಿಯ ಬಳಿಗೆ ಹೋಗಿ ನಿನ್ನ ಅಭೀಷ್ಟವನ್ನು ತಿಳಿಸು. ಆ ಸರಸ್ವತಿಯು ನಿನಗೆ ಬೇಕಾದ ಸಹಾಯವನ್ನು ಒದಗಿಸುವಳು ಎಂದು ಹೇಳಿದವು.

23. ಹಾಗೆಯೇ ಆಗಲೆಂದು ರಾಜನು ಹೇಳಿ ಬೇಗನೆ ಅಲ್ಲಿಂದ ಹೊರಟು ಸರಸ್ವತೀನದಿಯ ಬಳಿಗೆ ಬಂದನು. ಆ ಸರಸ್ವತಿಯು ಈ ರಾಜನನ್ನು ಆದರದಿಂದ ಸ್ವಾಗತಿಸಿ ಇವನ ಯಜ್ಞಕ್ಕೆ ಬೇಕಾದ ಹಾಲನ್ನೂ ಘೃತ (ತುಪ್ಪ)ವನ್ನೂ ಯಥೇಚ್ಛವಾಗಿ ಒದಗಿಸಿದಳು.

24. ಸರಸ್ವತಿಯು ರಾಜನ ವಿಷಯದಲ್ಲಿ ನಿರ್ವಹಿಸಿದ ಈ ಅದ್ಭುತಕಾರ್ಯವನ್ನು ವಸಿಷ್ಠಋಷಿಯು (ಈ ಎರಡು ಸೂಕ್ತಗಳಲ್ಲಿ ಮೊದಲನೆಯ) ೯೫ ನೇ ಸೂಕ್ತದ **ಏಕಾಚೇತತ್** ಎಂಬ ೨ ನೇ ಋಕ್ಕಿನಲ್ಲಿ ಪ್ರಶಂಸೆ ಮಾಡಿರುವನು.

21. 'I am about to offer sacrifice; bring me shares (for it), either in pairs or singly.' The rivers replied to the king: 'How can we, who have but very little power.

22. bring you all the shares for a sacrificial session lasting a thousand years? Resort to the Sarasvati: she will bring them for you, Nahusa.

23. Saying 'So be it,' he quickly went to the river Sarasvati; and she received him and yielded (ದುದುಹೇ) (him) milk (and) ghee.

24. This exceedingly marvellous act of the Sarasvati towards the king, the son of (Varuna) (ವಸಿಷ್ಠ) proclaimed with the second (stanza) of the first (of the two hymns, viz., vii. 95. 2)

ಯಜ್ಞೇ ಬಾರ್ಹಸ್ಪತ್ಯಮೈಂದ್ರಂ ವೈಷ್ಣವೇ ತು ಪರೇ ತತಃ
ಉರುಮೈಂದ್ರ್ಯಶ್ಚ ತಿಸ್ರಃ ಸ್ಯುಃ ಪಾರ್ಜನ್ಯೇ ತಿಸ್ರ ಉತ್ತರೇ || ೨೫ ||
ಸ್ತೌತೀಂದ್ರಂ ಪ್ರಥಮಾ ತ್ವತ್ರ ದ್ವಿತೀಯಾದ್ಯಾ ಬೃಹಸ್ಪತಿಂ |
ಯಜ್ಞ ಆದ್ಯೇಂದ್ರಮೇವಾಸ್ತೌದಂತ್ಯಾ ತ್ವಿಂದ್ರಾಬೃಹಸ್ಪತೀ || ೨೬ ||
ತೃತೀಯಾ ನವಮೀ ಚೈವ ಸ್ತೌತೀಂದ್ರಾಬ್ರಹ್ಮಣಸ್ಪತೀ |
ಸಂವತ್ಸರಂ ತು ಮಂಡೂಕಾನೈಂದ್ರಾಸೋಮಂ ಪರಂ ತು ಯತ್ || ೨೭ ||

೯೭-೧೦೪ ನೇ ಸೂಕ್ತದ ದೇವತೆಗಳು

25. **ಯಜ್ಞೇ ದಿವಃ** ಎಂಬ ೯೭ನೇ ಸೂಕ್ತದಲ್ಲಿ ಬೃಹಸ್ಪತಿಯನ್ನೂ ಅದರ ಮುಂದಿನ ೯೮ ನೇ ಸೂಕ್ತದಲ್ಲಿ ಇಂದ್ರನನ್ನೂ ಅದರ ಮುಂದಿನ ೨ ಸೂಕ್ತಗಳಲ್ಲಿ (೯೯-೧೦೦) ವಿಷ್ಣುವನ್ನೂ ಸ್ತುತಿಸಲಾಗಿದೆ. ಆದರೆ ೯೯ ನೇ ಸೂಕ್ತದ **ಉರುಂ ಯಜ್ಞಾಯ** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿ (೪-೬) ವಿಷ್ಣುವಿನ ಜತೆಯಲ್ಲಿ ಇಂದ್ರನೂ ಸ್ತುತನಾಗಿರುವನು. **ತಿಸ್ರೋ ವಾಚಃ** ಎಂದು ಮೊದಲಾಗುವ ಮುಂದಿನ ಎರಡು ಸೂಕ್ತಗಳಲ್ಲಿ (೧೦೧-೧೦೨)ಪರ್ಜನ್ಯನು ಸ್ತುತನಾಗಿರುವನು.

26. ಆದರೆ, ೯೭ ನೇ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಇಂದ್ರನನ್ನೂ ೨ ನೇ ಋಕ್ಕಿನಲ್ಲಿಯೂ ೪-೮ನೇ ಋಕ್ಕುಗಳಲ್ಲಿಯೂ ಬೃಹಸ್ಪತಿಯನ್ನೂ ಸ್ತುತಿಸಲಾಗಿದೆ. **ಯಜ್ಞೇ** ಎಂಬ ಈ ೯೭ ನೇ ಸೂಕ್ತದಲ್ಲಿ ಮೊದಲನೆಯ ಋಕ್ಕಿನಲ್ಲಿ ಇಂದ್ರನನ್ನು ಮಾತ್ರ ಸ್ತುತಿಸಲಾಗಿದೆ. ಕೊನೆಯ ಋಕ್ಕಿನಲ್ಲಿ (೧೦) ಇಂದ್ರ ಮತ್ತು ಬೃಹಸ್ಪತಿ ಇಬ್ಬರನ್ನೂ ಸ್ತುತಿಸಲಾಗಿದೆ.

27. ಇದೇ ೯೭ ನೇ ಸೂಕ್ತದಲ್ಲಿ ೩ ನೇ ಮತ್ತು ೯ ನೇ ಋಕ್ಕುಗಳಲ್ಲಿ ಬ್ರಹ್ಮಣಸ್ಪತಿಯ ಸ್ತುತಿ ಇದೆ. **ಸಂವತ್ಸರಂ** ಎಂಬ ೧೦೩ನೇ ಸೂಕ್ತದಲ್ಲಿ ಮಂಡೂಕಗಳನ್ನು (ಕಪ್ಪೆಗಳನ್ನು) ಸ್ತುತಿಸಲಾಗಿದೆ. ಅದರ ಮುಂದಿನ ೧೦೪ನೇ ಸೂಕ್ತದಲ್ಲಿ ಇಂದ್ರ ಮತ್ತು ಸೋಮ ದೇವತೆಗಳನ್ನು ಸ್ತುತಿಸಲಾಗಿದೆ.

---

## 6. Deities of RV. vii. 97-104.

25. 'In the sacrifice' (ಯಜ್ಞೇ: vii. 97) is addressed to Brhaspati; (then comes) a (hymn) addressed to Indra (vii. 98); but the two following (99, 100) after that are addressed to Visnu, and the three (stanzas) 'Wide' (ಉರುಂ: vii. 99. 4-6) should be (regarded as) addressed to Indra as well. The two next (hymns) 'Three' (ತಿಸ್ರಃ: 101, 102) are addressed to Parjanya.

26. Now the first (stanza) here (vii. 97. 1) praises Indra, the second and the rest (2, 4-8) (praise) Brhaspati.

In 'At the sacrifice' (ಯಜ್ಞೇ: vii. 97) the first (stanza) praised Indra alone, but the last both Indra and Brhaspati.

27. The third and the ninth (vii. 97, 3, 9) praise Indra and Brahmanaspati. (The hymn) 'For a year' (ಸಂವತ್ಸರಂ: vii. 103) (praises) the frogs; but that which follows (vii. 104) is addressed to Indra-Soma.

ಋಷಿರ್ದದರ್ಶ ರಾಕ್ಷೋಘ್ನಂ ಪುತ್ರಶೋಕಪರಿಪ್ಲುತಃ ।
ಹತೇ ಪುತ್ರಶತೇ ತಸ್ಮಿನ್ಸೌದಾಸ್ಯೈರ್ದುಃಖಿತಸ್ತದಾ ॥ ೨೮ ॥
ಯೋ ಪಾಕಶಂಸಮ್ಯೃಕ್ಸೌಮ್ಯಾ ಆಗ್ನೇಯೀ ತತ ಉತ್ತರಾ ।
ಏಕಾದಶೀ ವೈಶ್ವದೇವೀ ಸೌಮ್ಯಸ್ತಸ್ಯಾಃ ಪರೋ ದ್ವೃಚಃ ॥ ೨೯ ॥
ಯದಿ ವಾಹಮ್ಯೃಗಾಗ್ನೇಯೀ ಐಂದ್ರೀ ಯೋ ಮೇತಿ ತು ಸ್ಮೃತಾ ।
ಗ್ರಾವ್ಣೀ ಪ್ರ ಯಾ ಜಿಗಾತೀತಿ ವಿ ತಿಷ್ಠಧ್ವಂ ತು ಮಾರುತೀ ॥ ೩೦ ॥

28. ಒಂದು ಸಮಯದಲ್ಲಿ ವಸಿಷ್ಠಋಷಿಯ ನೂರುಮಂದಿ ಪುತ್ರರು ಸುದಾಸರಾಜನ ವಂಶದವರಿಂದ ಕೊಲ್ಲಲ್ಪಟ್ಟರು. ಆ ಪುತ್ರಶೋಕದಿಂದ ದುಃಖಿತನಾದ ವಸಿಷ್ಠಋಷಿಗೆ **ಇಂದ್ರಾಸೋಮಾ** (೧೦೪ ನೇ ಸೂಕ್ತ) ಎಂಬ ರಾಕ್ಷೋಘ್ನಸೂಕ್ತವು (ರಾಕ್ಷಸರನ್ನೂ, ಪಿಶಾಚಾದಿಗಳನ್ನೂ ನಾಶಮಾಡಲು ಸಮರ್ಥವಾದ ಸೂಕ್ತಕ್ಕೆ ರಾಕ್ಷೋಘ್ನ ಸೂಕ್ತವೆಂದು ಹೆಸರು) ಮನಸ್ಸಿಗೆ ಗೋಚರವಾಯಿತು.

### ೧೦೪ ನೇ ಸೂಕ್ತದ ಋಕ್ಕುಗಳ ಪ್ರತ್ಯೇಕ ವಿವರಣೆ

29. ಈ ೧೦೪ ನೇ ರಾಕ್ಷೋಘ್ನಸೂಕ್ತದಲ್ಲಿ **ಯೋ ಪಾಕಶಂಸಂ** ಎಂಬ ೯ ನೇ ಋಕ್ಕಿನಲ್ಲಿ ಸೋಮ ದೇವತೆಯನ್ನೂ, ಮುಂದಿನ ೧೦ ನೇ ಋಕ್ಕಿನಲ್ಲಿ ಅಗ್ನಿಯನ್ನೂ ೧೧ ನೇ ಋಕ್ಕಿನಲ್ಲಿ ವಿಶ್ವೇದೇವತೆಗಳನ್ನೂ, ಮುಂದಿನ ಎರಡು ಋಕ್ಕುಗಳಲ್ಲಿ (೧೨-೧೩) ಸೋಮದೇವತೆಯನ್ನೂ ಸ್ತುತಿಸಲಾಗಿದೆ.

30. ಈ ೧೦೪ ನೇ ಸೂಕ್ತದಲ್ಲಿ **ಯದಿ ವಾಹಂ** ಎಂಬ ೧೪ ನೇ ಋಕ್ಕಿನಲ್ಲಿ ಅಗ್ನಿಯನ್ನೂ **ಯೋ ಮಾಯಾತುಂ** ಎಂಬ ೧೬ ನೇ ಋಕ್ಕಿನಲ್ಲಿ ಇಂದ್ರನನ್ನೂ **ಪ್ರ ಯಾ ಜಿಗಾತಿ** ಎಂಬ ೧೭ ನೇ ಋಕ್ಕಿನಲ್ಲಿ ಸೋಮಲತೆ ಗಳನ್ನು ಜಜ್ಜುವ ಕಲ್ಲುಗಳನ್ನೂ **ವಿ ತಿಷ್ಠಧ್ವಂ** ಎಂಬ ೧೮ ನೇ ಋಕ್ಕಿನಲ್ಲಿ ಮರುದ್ದೇವತೆಗಳನ್ನು ಸ್ತುತಿಸಲಾಗಿದೆ.

28. The seer, when his hundred sons had been slain by the followers of Sudas, full of pain and overwhelmed with grief for his sons, saw (this hymn) for the destruction of demons.

### 7. Detailed account of RV. vii. 104.

29. The stanza 'Who the simple' (ಯೋ ಪಾಕಶಂಸಂ : vii. 104. 9) is addressed to Soma; the next (10) after that is addressed to Agni; the eleventh is addressed to the All-gods (11); the couplet which follows it (12, 13) is addressed to Soma.

30. The Stanza 'As if I' (ಯದಿ ವಾಹಂ : vii. 104) is addressed to Agni, while 'Who me' (ಯೋ ಮಾ : 16) is traditionally held to be addressed to Indra; 'She who strides forth' (ಪ್ರ ಯಾ ಜಿಗಾತಿ : 17) is addressed to the pressing stones, while 'Spread out' (ವಿ ತಿಷ್ಠಧ್ವಂ : 18) is addressed to the Maruts.

**ಪ್ರ ವರ್ತಯೇತಿ ಪಂಚ್ಯೈಂದ್ರ್ಯ ಐಂದ್ರಾಸೋಮೀ ತ್ವಗುತ್ತಮಾ ।**
**ಋಷಿಸ್ತ್ವಾಶಿಷಮಾಶಾಸ್ತೇ ಮಾ ನೋ ರಕ್ಷ ಇತಿ ತ್ವೃಚಿ** ॥ ೩೧ ॥
**ದಿವಿ ಚೈವ ಪೃಥಿವ್ಯಾಂ ಚ ತಥಾ ಪಾಲನಮಾತ್ಮನಃ ।**
**ಉಲೂಕಯಾತುಂ ಜಹ್ಯೇತಾನ್ನಾನಾರೂಪಾನ್ನಿಶಾಚರಾನ್** ॥ ೩೨ ॥
**ಪಂಚದಶ್ಯಾಂ ತು ಸೂಕ್ತಸ್ಯ ಅಷ್ಟಮ್ಯಾಂ ಚೈವ ವಾರುಣಿಃ ।**
**ದುಃಖಶೋಕಪರೀತಾತ್ಮಾ ಶಪತೇ ವಿಲಪನ್ನಿವ** ॥ ೩೩ ॥
**ಹತೇ ಪುತ್ರಶತೇ ತಸ್ಮಿನ್ವಸಿಷ್ಠೋ ದುಃಖಿತಸ್ತದಾ ।**
**ರಕ್ಷೋಭೂತೇನ ಶಾಪಾತ್ತು ಸುದಾಸಾನೇತಿ ವೈ ಶ್ರುತಿಃ** ॥ ೩೪ ॥

**ಇತಿ ಸಪ್ತಮಂ ಮಂಡಲಂ**

31. ಇದೇ ಸೂಕ್ತದ **ಪ್ರ ವರ್ತಯ** ಎಂದು ಮೊದಲಾಗುವ ಮುಂದಿನ ೫ ಋಕ್ಕುಗಳಲ್ಲಿ (೧೯-೨೨ ಮತ್ತು ೨೪) ಇಂದ್ರನ ಸ್ತುತಿ ಇರುವುದು. ಕೊನೆಯ ಋಕ್ಕಿನಲ್ಲಿ (೨೫) ಇಂದ್ರ ಮತ್ತು ಸೋಮ ಇಬ್ಬರೂ ಸ್ತುತರಾಗಿರುವರು. **ಮಾ ನೋ ರಕ್ಷಃ** ಎಂಬ ೨೩ನೇ ಋಕ್ಕಿನಲ್ಲಿ ಋಷಿಯು ರಕ್ಷಣೆಯನ್ನೂ ಆಶೀರ್ವಾದವನ್ನೂ ಬಯಸಿಪ್ರಾರ್ಥಿಸಿರುವನು.

32. **ಉಲೂಕಯಾತುಂ** ಎಂಬ ೨೨ ನೇ ಋಕ್ಕಿನಲ್ಲಿ ವಸಿಷ್ಠಋಷಿಯು ರಾತ್ರಿಕಾಲದಲ್ಲಿ ಸಂಚರಿಸುವ ಸ್ವಭಾವವುಳ್ಳ ಪಿಶಾಚಾದಿ ನಾನಾರೂಪಗಳಿಂದಿರುವ ದುಷ್ಟಜಂತುಗಳನ್ನೂ, ರಾಕ್ಷಸರನ್ನೂ ಸಂಹರಿಸಬೇಕೆಂದೂ, ಭೂಮಿಯಲ್ಲಿಯೂ, ಸ್ವರ್ಗದಲ್ಲಿಯೂ ತನಗೆ ರಕ್ಷಣೆಯನ್ನು ನೀಡಬೇಕೆಂದೂ ದೇವತೆಗಳನ್ನು ಪ್ರಾರ್ಥಿಸಿರುವನು.

33. ವರುಣಪುತ್ರನಾದ ವಸಿಷ್ಠನು ಪುತ್ರಶೋಕದಿಂದಲೂ, ದುಃಖದಿಂದಲೂ ಕಂಗೆಟ್ಟು ನಾನಾವಿಧವಾಗಿ ಪ್ರಲಾಪಿಸುತ್ತಾ ಈ ಸೂಕ್ತದ ೧೫ ನೇ ಋಕ್ಕಿನಲ್ಲಿಯೂ, ೮ ನೇ ಋಕ್ಕಿನಲ್ಲಿಯೂ ಹೇಳಿರುವಂತೆ ತನ್ನ ಶತ್ರುಗಳು ನಾಶವಾಗಲೆಂದು ಶಪಿಸಿರುವನು.

34. ತನ್ನ ನೂರುಮಂದಿ ಪುತ್ರರು ಕೊಲ್ಲಲ್ಪಟ್ಟಿದ್ದರಿಂದ ವಸಿಷ್ಠ ಋಷಿಯು ಅತ್ಯಂತ ದುಃಖಿತನಾಗಿ ತನ್ನ ಪುತ್ರರ ನಾಶಕ್ಕೆ ಕಾರಣಭೂತನಾದ ಸುದಾಸನಿಗೆ ರಾಕ್ಷಸನಾಗೆಂದು ಶಾಪವನ್ನು ಕೊಟ್ಟನು ಎಂದು ಶ್ರುತಿವಾಕ್ಯವು ಹೇಳುವುದು.

ಇಲ್ಲಿಗೆ ಏಳನೆಯ ಮಂಡಲವು ಸಮಾಪ್ತವು.

31. Five(stanzas, beginning)'Hurl forth' (ಪ್ರವರ್ತಯ: vii. 104. 19-22, 24) are addressed to Indra, while the last stanza is addressed to Indra-Soma. In the stanza 'May not the demon us'(ಮಾ ನೋ ರಕ್ಷಃ: 23)the seer invokes a blessing.

32 and protection in heaven and earth on his own behalf 'The owl-friend' (ಉಲೂಕಯಾತುಂ : vii. 104. 22) (Prays) 'Slay these night-walkers of various forms.'

33. Now in the fifteenth and in the eigth (stanza) of the hymn the son of Varuna (Vasistha), while as it where lamenting, his soul being over-whelmed with pain and grief, utters a curse.

34. Vasistha was at that time pained, as his hundred sons had been slain by Sudasa who, in consequence of a curse, had been transformed into a demon (ರಕ್ಷಃ); such is the sacred tradition:

End of 7th Mandala.

## ಅಥಾಷ್ಟಮಂ ಮಂಡಲಂ

ಕಣ್ವಶ್ಚೈವ ಪ್ರಗಾಥಶ್ಚ ಘೋರಪುತ್ರೌ ಬಭೂವತುಃ ।
ಗುರುಣಾ ತಾವನುಜ್ಞಾತಾವೂಷತುಃ ಸಹಿತೌ ವನೇ ॥ ೩೫ ॥
ವಸತೋಽಸ್ತು ತಯೋಸ್ತತ್ರ ಕಣ್ವಪತ್ನ್ಯಾಃ ಶಿರಃ ಸ್ವಪತ್ ।
ಕೃತ್ವಾ ಕನೀಯಾನ್ಕಣ್ವಸ್ಯ ಉತ್ಸಂಗೇ ನಾನ್ವಬುಧ್ಯತ ॥ ೩೬ ॥
ಶಪ್ತುಕಾಮಸ್ತು ತಂ ಕಣ್ವಃ ಕ್ರುದ್ಧಃ ಪಾಪಾಭಿಶಂಕಯಾ ।
ಬೋಧಯಾಮಾಸ ಪಾದೇನ ದಿಧಕ್ಷನ್ನಿವ ತೇಜಸಾ ॥ ೩೭ ॥



## ಎಂಟನೆಯ ಮಂಡಲವು

### ಕಣ್ವ ಮತ್ತು ಪ್ರಗಾಥ ಎಂಬುವರ ವೃತ್ತಾಂತ

35. ಕಣ್ವ ಮತ್ತು ಪ್ರಗಾಥ ಎಂಬುವರು ಘೋರ ಎಂಬ ಋಷಿಯ ಪುತ್ರರು. ಇವರು ಗುರುಕುಲದಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ ಗುರುವಿನ ಅನುಜ್ಞೆಯಿಂದ ಹಿಂತಿರುಗಿ ಬಂದು ವನದಲ್ಲಿ (ವನದಲ್ಲಿದ್ದ ತಮ್ಮ ಆಶ್ರಮದಲ್ಲಿ) ವಾಸಮಾಡುತ್ತಿದ್ದರು.

36. ಇವರಿಬ್ಬರೂ ವಾಸಮಾಡುತ್ತಿರುವಾಗ ಒಂದು ದಿವಸ ಕಣ್ವನ ತಮ್ಮನಾದ ಪ್ರಗಾಥನು ಕಣ್ವನ ಪತ್ನಿಯ ತೊಡೆಯ ಮೇಲೆ ತನ್ನ ತಲೆಯನ್ನಿಟ್ಟುಕೊಂಡು ನಿದ್ರೆಮಾಡುತ್ತಿದ್ದನು. ಅವನಿಗೆ ಎಚ್ಚರವಾಗಿರಲಿಲ್ಲ.

37. ಕಣ್ವನು ಬಂದು ತನ್ನ ತಮ್ಮನು ತನ್ನ ಪತ್ನಿಯ ತೊಡೆಯ ಮೇಲೆ ಶಿರಸ್ಸನ್ನಿಟ್ಟು ನಿದ್ರಿಸುತ್ತಿದ್ದುದನ್ನು ನೋಡಿ ಇವನು ಮಹಾಪಾಪಕಾರ್ಯವನ್ನು ಮಾಡುತ್ತಿರುವನೆಂದು ಶಂಕಿಸಿ ತನ್ನ ತೀಕ್ಷ್ಣವಾದ ತೇಜಸ್ಸಿನಿಂದ ಅವನನ್ನು ಸುಟ್ಟುಬಿಡುವಂತೆ ನೋಡುತ್ತಾ ಕಾಲಿನಿಂದ ಅವನನ್ನು ಒದ್ದು ಎಬ್ಬಿಸಿದನು.

## Mandala VIII.

### 8. Story of Kanva and Pragatha.

35. Kanva and Pragatha were two sons of Ghora. When they had been dismissed by their preceptor they dwelt together in the forest.

36. Now while these two dweltt here the younger (brother) of Kanva (i.e. ಪ್ರಗಾಥ), having placed his head while asleep (ಸ್ವಪತ್)on the lap of Kanva's wife, did not awake.

37. Now Kanva, enraged by suspicion of a sin (and) wishing to curse him, awakened him with his foot, as though about to consume him with his fiery energy.

ವಿದಿತ್ವಾ ತಸ್ಯ ತಂ ಭಾವಂ ಪ್ರಗಾಥಃ ಪ್ರಾಂಜಲಿಃ ಸ್ಥಿತಃ ।
ಮಾತೃತ್ವೇ ಚ ಪಿತೃತ್ವೇ ಚ ವರಯಾಮಾಸ ತಾವುಭೌ ॥ ೩೮ ॥

ಸ ಘೌರೋ ವಾಥ ಕಾಣ್ವೋ ವಾ ವಂಶಜೈರ್ಬಹುಭಿಃ ಸಹ ।
ದದರ್ಶಾನ್ಯೈಶ್ಚ ಸಹಿತ ಋಷಿರ್ಮಂಡಲಮಷ್ಟಮಂ ॥ ೩೯ ॥

ಮಾಚಿದ್ವೈಂದ್ರಾಣಿ ಚತ್ವಾರಿ ಅನ್ವಸ್ಯ ಸ್ಥೂರಮಿತ್ಯೃಚಿ ।
ತುಷ್ಟಾವಾಂಗಿರಸೀ ನಾರೀ ವಸಂತೀ ಶಾಶ್ವತೀ ಪತಿಂ ॥ ೪೦ ॥

ಸ್ತ್ರಿಯಂ ಸಂತಂ ಪುಮಾಂಸಂ ತಮಾಸಂಗಂ ಕೃತವಾನೃಷಿಃ ।

38. ಪ್ರಗಾಥನು ಎಚ್ಚರಗೊಂಡು ಎದುರಿಗೆ ನಿಂತಿದ್ದ ತನ್ನ ಅಣ್ಣನ ಭಾವವನ್ನು ತಿಳಿದು ಕೈಮುಗಿದುಕೊಂಡು ಕಣ್ವನ ಮತ್ತು ಆತನ ಪತ್ನಿಯ ಕ್ಷಮೆ ಬೇಡಿ ಅವರಿಬ್ಬರೂ ತನಗೆ ಮಾತಾಪಿತೃಗಳ ಸಮಾನವೆಂದೂ ತನ್ನ ವಿಷಯದಲ್ಲಿ ಅವರು ಆ ಭಾವನೆಯನ್ನೇ ಇಟ್ಟಿರಬೇಕೆಂದೂ ಪ್ರಾರ್ಥಿಸಿದನು.

39. ಆದ್ದರಿಂದ ಆ ಲಾಗಾಯಿತು ಆ ಪ್ರಗಾಥನು ಘೋರ ಅಥವಾ ಕಣ್ವನ ಪುತ್ರನೆಂದು ಪ್ರಸಿದ್ಧನಾಗಿ ತನ್ನ ವಂಶದ ಇತರ ಋಷಿಗಳೊಡನೆ ಎಂಟನೆಯ ಮಂಡಲದ ಸೂಕ್ತಗಳಿಗೆ ದ್ರಷ್ಟೃವಾದನು.

### ೮ ನೇ ಮಂಡಲದ ೧-೨೧ ಸೂಕ್ತಗಳ ದೇವತೆಗಳು

40. **ಮಾ ಚಿದನ್ಯತ್** ಎಂದು ಪ್ರಾರಂಭವಾಗುವ ಸೂಕ್ತದಿಂದ ನಾಲ್ಕು ಸೂಕ್ತಗಳಲ್ಲಿ (೧-೪) ಇಂದ್ರನನ್ನು ಸ್ತುತಿಸಲಾಗಿದೆ. **ಅನ್ವಸ್ಯ ಸ್ಥೂರಂ** ಎಂಬ ಮೊದಲನೆಯ ಸೂಕ್ತದ ೩೪ ನೇ ಋಕ್ಕಿನಲ್ಲಿ ಅಂಗಿರಾಋಷಿಯ ಪುತ್ರಿಯೂ (ಆಸಂಗರಾಜನ ಪತ್ನಿಯೂ) ಆದ **ಶಶ್ವತೀ** ಎಂಬ ಸ್ತ್ರೀಯು ತನ್ನ ಪತಿಯನ್ನು ಅಭಿನಂದಿಸಿ ಸ್ತುತಿಸಿದ್ದಾಳೆ.

41. ಈ ಸೂಕ್ತದ ಋಷಿಯಾದ ಮೇಧಾತಿಥಿಯು, ದೇವಶಾಪದಿಂದ ಪುರುಷತ್ವವನ್ನು ಕಳೆದುಕೊಂಡು ಸ್ತ್ರೀಯಾಗಿದ್ದ ಆಸಂಗನೆಂಬ ರಾಜನಿಗೆ ಮತ್ತೆ ಪುರುಷತ್ವವುಂಟಾಗುವಂತೆ ಮಾಡಿದನು. ಈ ವಿಧವಾದ ಋಷಿಯ

38. Pragatha, becoming aware of his intention, stood with folded hands and chose the couple for his mother and father.

39. The seer, being (thus) the son of either Ghora or Kanva, saw, in company with many other members of his family, the eighth Mandala.

### 9. Deities of RV. viii. 1-21.

40. There are four hymns addressed to Indra (beginning) 'Not at all' (ಮಾ ಚಿತ್ : viii. 1-4). in the stanza 'Downward his mighty' (ಅನ್ವಸ್ಯ ಸ್ಥೂರಂ : viii. 1-34). Sasvati, daughter of Angiras, living (ವಸಂತೀ) as his wife (ನಾರೀ), praised her husband.

41. The seer turned that Asanga, who had been a woman, into a

ಸ್ವಸ್ಯ ದಾನಂ ಸ್ತುಹೀತ್ಯೃಗ್ಭಿಶ್ಚತುರ್ಭಿಃ ಪರಿಕೀರ್ತಿತಂ ॥ ೪೧ ॥

ಶಿಕ್ಷೇತ್ಯೃಗ್ಭ್ಯಾಂ ತು ಕಾಶ್ಯಸ್ಯ ವಿಭಿನ್ದೋಃ ಪರಿಕೀರ್ತಿತಂ ।
ಪಾಕಸ್ಥಾಮ್ನಸ್ತು ಭೋಜಸ್ಯ ಚತುರ್ಭಿರ್ಯಮಿತಿ ಸ್ತುತಂ ॥ ೪೨ ॥

ಪೌಷ್ಣೌ ಪ್ರೇತಿ ಪ್ರಗಾಥೌ ದ್ವೌ ಮನ್ಯತೇ ಶಾಕಟಾಯನಃ ।
ಐಂದ್ರಮೇವಾಥ ಪೂರ್ವಂ ತು ಗಾಲವಃ ಪೌಷ್ಣಮುತ್ತರಂ ॥ ೪೩ ॥

ಅನುಗ್ರಹದಿಂದ ಸಂತೋಷಪಟ್ಟ ಆಸಂಗರಾಜನು ಮೇಧಾತಿಥಿಋಷಿಗೆ ಅನೇಕ ವಿಧವಾದ ದಾನಗಳನ್ನು ಕೊಟ್ಟನು. ತಾನು ಕೊಟ್ಟ ದಾನಗಳ ಪ್ರಶಂಸೆಯನ್ನು ಮಾಡಬೇಕೆಂದು ಆಸಂಗರಾಜನು ಮೇಧಾತಿಥಿಋಷಿಯನ್ನು **ಸ್ತುಹಿ** ಎಂದು ಮೊದಲಾಗುವ ನಾಲ್ಕು ಋಕ್ಕುಗಳಿಂದ (೧ ನೇ ಸೂಕ್ತದ ೩೦-೩೩ ಋಕ್ಕುಗಳಿಂದ) ಪ್ರೇರಿಸಿರುವನು ಎಂದು ಹೇಳಲಾಗಿದೆ.

42. ೨ ನೇ ಸೂಕ್ತದ **ಶಿಕ್ಷಾ ವಿಭಿಂದೋ** ಎಂದು ಮೊದಲಾಗುವ ೨ ಋಕ್ಕುಗಳಲ್ಲಿ (೪೧-೪೨) ಕಾಶಿಯ ರಾಜನಾದ **ವಿಭಿಂದು** ಎಂಬ ರಾಜನ ದಾನಸ್ತುತಿಯು ವರ್ಣನೆಯೂ ೩ ನೇ ಸೂಕ್ತದ **ಯಂ ಮೇ** ಎಂದು ಮೊದಲಾಗುವ ನಾಲ್ಕು ಋಕ್ಕುಗಳಲ್ಲಿ (೨೧-೨೪) ಉದಾರಹೃದಯನಾದ **ಪಾಕಸ್ಥಾಮಾ** ಎಂಬ ರಾಜನ ದಾನಪ್ರಶಂಸೆಯೂ ಇರುವುದು.

43. ೪ ನೇ ಸೂಕ್ತದ **ಪ್ರ ಪೂಷಣಂ** ಎಂದು ಪ್ರಾರಂಭವಾಗುವ ಎರಡು ಪ್ರಗಾಥಮಂತ್ರಗಳಲ್ಲಿ (ಪ್ರಗಾಥ ಛಂದಸ್ಸಿನ ಮಂತ್ರವೆಂದರೆ ವಿಷಮಾ ಬೃಹತೀಛಂದಸ್ಸಿನ ಮಂತ್ರವೊಂದು, ಸತೋಬೃಹತೀಛಂದಸ್ಸಿನ ಮಂತ್ರವೊಂದೂ ಸೇರಿ ಆ ಎರಡು ಮಂತ್ರಗಳಿಗೆ ಪ್ರಗಾಥಛಂದಸ್ಸೆಂದು ಹೇಳಲ್ಪಡುವುದು. ಈ ೮ ನೇ ಮಂಡಲದಲ್ಲಿ ಅನೇಕಕಡೆ ಈ ವಿಧವಾದ ಛಂದಸ್ಸಿನ ಋಕ್ಕುಗಳಿವೆ) ಅಥವಾ ನಾಲ್ಕು ಋಕ್ಕುಗಳಲ್ಲಿ (೧೧-೧೮) ಪೂಷದೇವತೆಯನ್ನು ಸ್ತುತಿಸಲಾಗಿದೆ. ಆದರೆ ಮೊದಲಿನ ಎರಡು ಋಕ್ಕುಗಳಲ್ಲಿ (೧೫-೧೬) ಪೂಷದೇವನೂ, ಮುಂದಿನ ಎರಡು ಋಕ್ಕುಗಳಲ್ಲಿ (೧೭-೧೮) ಇಂದ್ರನೂ ಸ್ತುತರಾಗಿರುವರೆಂದು ಗಾಲವ ಎಂಬುವರ ಅಭಿಪ್ರಾಯವು.

---

man (again), With the four stanzas ‘Praise’ (ಸ್ತುಹಿ : viii. 1, 30-33) his own gift (to the seer) is proclaimed (by Asaṅga).

42. But with the two stanzas ‘Bestow’ (ಶಿಕ್ಷಾ : viii. 2. 41-42) that of Vibhindu, king of Kasi (ಕಾಶ್ಯ), is proclaimed, while with the four (stanzas) ‘Which’ (ಯಂ : viii. 3. 21-24) the (gift) of the liberal ಪಾಕಸ್ಥಾಮಾ is praised.

43. The two pragatha couplets (beginning) ‘Forth’ (ಪ್ರ : viii. 4. 15-18) Sakatayana thinks are addressed to Pusan; Galava, however, (thinks) the former (15, 16) is addressed to Indra only, the latter (17, 18) to Pusan.

ಐಂದ್ರಾಣಾಮಿಹ ಸೂಕ್ತಾನಾಮುತ್ತಮಸ್ಯೋತ್ತಮೋ ತೃಚೇ ।
ದಾನಂ ರಾಜ್ಞಃ ಕುರುಂಗಸ್ಯ ಸ್ಥೂರಂ ರಾಧ ಇತಿ ಸ್ತುತಂ ॥ ೪೪ ॥
ದೂರಾದಿತ್ಯಾಶ್ವಿನೇ ಸೂಕ್ತೇ ಸಪ್ತತ್ರಿಂಶತ್ತಮಿಾ ಯಥಾ ।
ಇತ್ಯರ್ಧರ್ಚೋ ದ್ವ್ಯೃಚಶ್ಚಾಂತ್ಯಃ ಕಶೋರ್ದಾನಸ್ತುತಿಃ ಸ್ಮೃತಾ ॥ ೪೫ ॥
ಮಹಾನ್ಯೈಂದ್ರಂ ಪ್ರತ್ನವತ್ಯಾಮಗ್ನಿಂ ವೈಶ್ವಾನರಂ ಸ್ತುತಂ ।
ಮನ್ಯತೇ ಶಾಕಪೂಣಿಸ್ತು ಭಾರ್ಮ್ಯಶ್ವಶ್ಚೈವ ಮುದ್ಗಲಃ ॥ ೪೬ ॥
ತೃಚೇ ತು ಶತಮಿತ್ಯಸ್ಮಿನ್ದಾನಂ ತೈರಿಂದಿರಂ ಸ್ಮೃತಂ ।

44. ಇಂದ್ರದೇವತಾಕಸೂಕ್ತಗಳ ಕೊನೆಯ ಸೂಕ್ತದ (೪ನೇ) **ಸ್ಥೂರಂ ರಾಧಃ** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿ (೧೯-೨೧) **ಕುರುಂಗ** ಎಂಬ ರಾಜನ ದಾನಪ್ರಶಂಸೆಯು ಉಕ್ತವಾಗಿರುವುದು.

**೫-೧೮ ಸೂಕ್ತಗಳ ದೇವತೆಗಳು**

45. ೫ ನೇ ಸೂಕ್ತದಲ್ಲಿ ಅಶ್ವಿನೀದೇವತೆಗಳನ್ನು ಸ್ತುತಿಸಲಾಗಿರುವುದು. ಆದರೆ ಈ ಸೂಕ್ತದ ೩೭ ನೇ ಋಕ್ಕಿನ **ಯಥಾ ಚಿತ್** ಎಂಬ ಉತ್ತರಾರ್ಧದಲ್ಲಿಯೂ ಅದರ ಮುಂದಿನ ಎರಡು ಋಕ್ಕುಗಳಲ್ಲಿಯೂ (೩೮-೩೯) **ಕಶು** ಎಂಬ ರಾಜನ ದಾನಪ್ರಶಂಸೆಯು ಉಕ್ತವಾಗಿರುವುದೆಂದು ಹೇಳಲಾಗಿದೆ.

46. **ಮಹಾನ್ ಇಂದ್ರಃ** ಎಂಬ ಆರನೆಯ ಸೂಕ್ತದಲ್ಲಿ ಇಂದ್ರನನ್ನು ಸ್ತುತಿಸಲಾಗಿದೆ. ಆದರೆ ಈ ಸೂಕ್ತದಲ್ಲಿ **ಪ್ರತ್ನಸ್ಯ** ಎಂಬ ಶಬ್ದವಿರುವ ೩೦ ನೇ ಋಕ್ಕಿನಲ್ಲಿ ವೈಶ್ವಾನರಾಗ್ನಿಯು ಸ್ತುತನಾಗಿರುವನೆಂದು **ಶಾಕಪೂಣಿ** ಎಂಬ ಆಚಾರ್ಯರೂ **ಭರ್ಮ್ಯಶ್ವ** ಎಂಬುವರ ಪುತ್ರನಾದ **ಮುದ್ಗಲ** ಎಂಬುವರೂ ಅಭಿಪ್ರಾಯಪಡುವರು.

47. ಆದರೆ ೬ ನೇ ಸೂಕ್ತದ **ಶತಮಹಂ** ಎಂದು ಮೊದಲಾಗುವ ೩ ಋಕ್ಕುಗಳಲ್ಲಿ (೪೬-೪೮) **ಪರ್ಶು** ಎಂಬುವನ ಪುತ್ರನಾದ **ತಿರಿಂದಿರ** ಎಂಬ ರಾಜನ ದಾನಪ್ರಶಂಸೆ ಇದೆ. ಮುಂದಿನ **ಪ್ರ ಯದ್** ಎಂಬ ೭ ನೇ ಸೂಕ್ತದಲ್ಲಿ

44. In the last triplet of the last of Indra hymns herc (viii. 4. 19-21), the gift of king Kurunga is praised (with the words) 'Abundant wealth' (ಸ್ಥೂರಂ ರಾಧಃ : 19).

**10. Deities of RV. viii. 5-18.**

45. In the hymn addressed to the Asvins, 'From afar' ದೂರಾತ್ : viii. 5), the thrity-seventh stanza, (that is) the hemistich 'As' (ಯಥಾ : 37) and the final couplet (38, 39) are traditionally held to be (in) praise of the gifts of Kasu.

46. 'Great' (ಮಹಾನ್ : viii. 6) is addressed to Indra ; in (the stanza) containing (the word) 'ancient' (ಪ್ರತ್ನ : viii. 6-30), Sakapuni, as well as Mudgala, son of Bhrnyasva, thinks Agni Vaisvanara is praised.

47. But in the triplet 'A hundred' (ಶತಂ : viii. 6. 46-48) the gift of Tirindira is recorded. 'Forth' (ಪ್ರ : viii. 7), the following (hymn), is

**ಪರಂ ತು ಮಾರುತಂ ಪ್ರೇತಿ ಆ ನಸ್ತ್ರೀಣ್ಯಾಶ್ವಿನಾನಿ ಚ** || ೪೭ ||
**ತ್ವಮಾಗ್ನೇಯಂ ಯ ಇಂದ್ರೇತಿ ಷಳೈಂದ್ರಾಣ್ಯುತ್ತಮಸ್ಯ ತು |**
**ಉಪೋತ್ತಮಾಯಾಮರ್ಧರ್ಚೇ ದೇವೋ ವಾಸ್ತೋಷ್ಪತಿಃ ಸ್ತುತಃ** || ೪೮ ||
**ಇದಮಾದಿತ್ಯದೇವತ್ಯಂ ತಿಸೃಭಿಸ್ತ್ವದಿತಿಃ ಸ್ತುತಾ |**
**ಷಷ್ಠ್ಯಾ ಚತುರ್ಥ್ಯಾ ಸಪ್ತಮ್ಯಾ ಉತೇತ್ಯಾಶ್ವಿನ್ಯೃಗಷ್ಟಮೀ** || ೪೯ ||
**ಸ್ತುತಾಃ ಶಮಿತಿ ಪಚ್ಛಸ್ತು ಅಗ್ನಿಸೂರ್ಯಾನಿಲಾಸ್ತ್ರಯಃ |**
**ವರುಣಾರ್ಯಮಮಿತ್ರಾಣಾಂ ಪ್ರಗಾಥೋ ಯಮಿತಿ ಸ್ತುತಿಃ** || ೫೦ ||

ಮರುದ್ದೇವತೆಗಳನ್ನು ಸ್ತುತಿಸಲಾಗಿದೆ. ಅದರ ಮುಂದಿನ **ಆ ನಃ** ಎಂದು ಮೊದಲಾಗುವ ಮೂರು ಸೂಕ್ತಗಳಲ್ಲಿ (೮–೧೦) ಅಶ್ವಿನೀದೇವತೆಗಳನ್ನು ಸ್ತುತಿಸಲಾಗಿದೆ.

48. **ತ್ವಮಗ್ನೇ** ಎಂಬ ೧೧ ನೇ ಸೂಕ್ತಕ್ಕೆ ಅಗ್ನಿಯು ದೇವತೆಯು; **ಯ ಇಂದ್ರ** ಎಂಬ ಸೂಕ್ತದಿಂದ ಮುಂದಿನ ಆರು ಸೂಕ್ತಗಳಿಗೆ (೧೨–೧೭) ಇಂದ್ರನು ದೇವತೆಯು; ಆದರೆ ಕೊನೆಯ ಸೂಕ್ತದ (೧೭) ಕೊನೆಯ ಋಕ್ಕಿನ ಹಿಂದಿನ ಋಕ್ಕಿನ (೧೪) ಪೂರ್ವಾರ್ಧದಲ್ಲಿ **ವಾಸ್ತೋಷ್ಪತಿ** ಎಂಬ ದೇವತೆಯ ಸ್ತುತಿ ಇದೆ.

49. **ಇದಂ ಹ** ಎಂಬ ೧೮ ನೇ ಸೂಕ್ತಕ್ಕೆ ಆದಿತ್ಯರು ದೇವತೆಗಳು; ಆದರೆ ಈ ಸೂಕ್ತದ ೪, ೬, ೭ ನೇ ಋಕ್ಕುಗಳಲ್ಲಿ ಅದಿತಿಯನ್ನೂ ೮ ನೇ ಋಕ್ಕಿನಲ್ಲಿ ಅಶ್ವಿನೀದೇವತೆಗಳನ್ನೂ ಸ್ತುತಿಸಲಾಗಿದೆ.

**೧೯ ನೇ ಸೂಕ್ತದ ದೇವತೆ ಮತ್ತು ತ್ರಸದಸ್ಯುರಾಜನ ದಾನಪ್ರಶಂಸೆ**

50. ೧೮ ನೇ ಸೂಕ್ತದ **ಶಮಗ್ನಿರಗ್ನಿಭಿಃ** ಎಂಬ ೯ ನೇ ಋಕ್ಕಿನಲ್ಲಿ ಅಗ್ನಿ, ಸೂರ್ಯ, ವಾಯು ಎಂಬ ಮೂವರು ದೇವತೆಗಳು ಮೂರು ಪಾದಗಳಲ್ಲಿ ಒಬ್ಬೊಬ್ಬರಂತೆ ಕ್ರಮವಾಗಿ ಸ್ತುತಿಸಲ್ಪಟ್ಟಿರುವರು. ೧೯ ನೇ ಸೂಕ್ತದ **ಯಮಾದಿತ್ಯಾಸಃ** ಎಂಬ ಪ್ರಗಾಥ ಛಂದಸ್ಸಿನ ೨ ಋಕ್ಕುಗಳಲ್ಲಿ(೩೪–೩೫)ಮಿತ್ರಾವರುಣಾರ್ಯಮರ ಸ್ತುತಿ ಇರುವುದು.

---

addressed to the Maruts; and the three ‘Hither to us’ (ಆ ನಃ; viii. 8-10) are addressed to the Asvins.

48. ‘You’ (ತ್ವಂ: viii. 11) is addressed to Agni. ‘Which, O Indra’ (ಯ ಇಂದ್ರ: viii. 12-1) are six (12-17) addressed to Indra; but in a hemistich of the last (stanza) but one of the last (viii. 17·14) the god Vastospati is praised.

49. ‘This’ (ಇದಂ: viii. 18) has the Adityas as its deities: with three (of its stanzas), the sixth, the fourth, and the seventh, Aditi is praised; the eigth stanza, ‘And’ (ಉತ), is addressed to the Asvins.

**11. RV. viii. 19: praise of Trasadasyu's gifts.**

50. (In) ‘Blessing’ (ಶಂ: viii. 18-9) the three (gods) Fire (agni), Sun (surya), Wind (ಅನಿಲ) are (respectively) praised in successive verses (ಪಚ್ಛಃ). The pragatha couplet ‘Whom’ (ಯಂ: viii. 19-34, 35) is (in) praise of Varuna, Aryaman, and Mitra,

ಆಗ್ನೇಯೇ ಸ್ತುತೀ ರಾಜರ್ಷೇಸ್ತ್ರಸದಸ್ಯೋರದಾದಿತಿ |
ಪಂಚಾಶತಂ ವಧೂನಾಂ ಚ ಗವಾಂ ತಿಸ್ರಶ್ಚ ಸಪ್ತತೀಃ || ೫೦ ||

ಅಶ್ವೋಷ್ಟ್ರಾಣಾಂ ತಥೈವಾಸೌ ವಾಸಾಂಸಿ ವಿವಿಧಾನಿ ಚ |
ರತ್ನಾನಿ ವೃಷಭಂ ಶ್ಯಾವಂ ತಾಸಾಮಗ್ರೇಸರಂ ಪತಿಂ || ೫೧ ||

ಕೃತ್ವಾ ದಾರಾನೃಷಿರ್ಗಚ್ಛನ್ನಿಂದ್ರಾಯೈತಚ್ಛಶಂಸ ಚ |
ವಯಂ ಸೂಕ್ತೇನ ಶಕ್ರಂ ಚ ಪ್ರೀತಸ್ತೇನ ಶಚೀಪತಿಃ || ೫೨ ||

ಋಷೇ ವರಂ ವೃಣೀಷ್ವೇತಿ ಪ್ರಹ್ವಸ್ತನ್ಮೃಷಿರಬ್ರವೀತ್ |
ಕಾಕುತ್ಸ್ಥಕನ್ಯಾಃ ಪಂಚಾಶದ್ಯುಗಪದ್ರಮಯೇ ಪ್ರಭೋ || ೫೩ ||

51. ಅಗ್ನಿದೇವತಾಕವಾದ ಈ ೧೯ ನೇ ಸೂಕ್ತದ **ಅದಾನ್ಮೇ** ಎಂದು ಮೊದಲಾಗುವ ೨ ಋಕ್ಕುಗಳಲ್ಲಿ (೩೬–೩೭) **ತ್ರಸದಸ್ಯು** ಎಂಬ ರಾಜರ್ಷಿಯ ದಾನಪ್ರಶಂಸೆ ಇದೆ. ಅಲ್ಲಿ ಆ ರಾಜನು ೫೦ ವಧುಗಳನ್ನೂ (ಸ್ತ್ರೀಯರನ್ನೂ) ೨೧೦ ಗೋವುಗಳನ್ನೂ,

52. ಅನೇಕ ಕುದುರೆಗಳನ್ನೂ, ಒಂಟೆಗಳನ್ನೂ, ನಾನಾವಿಧವಸ್ತ್ರಗಳನ್ನೂ, ರತ್ನಗಳನ್ನೂ (ಒಡವೆಗಳನ್ನೂ) ತನ್ನ ಹಿಂಡಿಗೆ ನಾಯಕನಂತಿರುವ ಕಂದುಬಣ್ಣದ ಒಂದು ವೃಷಭ (ಹೋರಿ) ಯನ್ನೂ ದಾನವಾಗಿ ಕೊಟ್ಟನೆಂಬ ಪ್ರಶಂಸೆ ಇದೆ.

53. ರಾಜರ್ಷಿಯು ದಾನವಾಗಿ ಇತ್ತ ವಧುಗಳನ್ನು ವಿವಾಹವಾಗಿ ಆ ಋಷಿಯು ತನ್ನ ವಾಸಸ್ಥಾನಕ್ಕೆ ಹೋಗಿ ಸಕಲವನ್ನೂ ಇಂದ್ರನಿಗೆ ತಿಳಿಸಿದನು ಮತ್ತು **ವಯಮು ತ್ವಾ** ಎಂಬ ೨೧ ನೇ ಸೂಕ್ತದಿಂದ ಇಂದ್ರನನ್ನು ಸ್ತುತಿಸಿದನು. ಅದರಿಂದ ಪ್ರೀತನಾದ ಇಂದ್ರನು, ಋಷಿಯನ್ನು ಕುರಿತು,

54. ಎಲೈ ಋಷಿಯೇ, ನಿನ್ನ ಸ್ತುತಿಯಿಂದ ನಾನು ಸಂತುಷ್ಟನಾಗಿರುವೆನು. ಬೇಕಾದ ವರವನ್ನು ಕೇಳಿಕೋ ಎನ್ನಲು ಋಷಿಯು, ಎಲೈ ಇಂದ್ರನೇ ಕಾಕುತ್ಸ್ಥವಂಶದ ಈ ಐವತ್ತುಮಂದಿ ಕನ್ಯೆಯರನ್ನೂ ನಾನು ಏಕಕಾಲದಲ್ಲಿ ರಮಿಸಲು ಸಾಮರ್ಥ್ಯವನ್ನು ಕೊಡು ಎಂದು ಕೇಳಿದನು.

51. in the (hymn) addressed to Agni. 'He has given (ಅದಾತ್ : viii. 19.36, 7) are (two stanzas in) praise of the royal seer Trasadasyu.

He gave fifty maidens and three herds of seventy (ಸಪ್ತತೀಃ) cows.

52. horses and camels, and he also (gave) various garments, jewels, a brown bull, the lord that led those (herds).

53. Having wedded, the seer as he went on his way proclaimed (all) this to Indra, and with the hymn 'We' (ವಯಂ : viii. 21) (praised) Sakra. Pleased therby the Lord of Sachi.

54. (said), 'O seer, choose a boon'. Humbly the seer replied to him : 'I (will) enjoy O Lord, simultaneously the fifty maidens of the race of Kakutstha,

ಕಾಮತೋ ಬಹುರೂಪತ್ವಂ ಯೌವನಂ ಚಾಕ್ಷಯಂ ರತಿಂ ।
ಶಂಖನಿಧಿಂ ಪದ್ಮನಿಧಿಂ ಮದ್ಗೃಹೇಷ್ವನಪಾಯಿನಂ ॥ ೫೫ ॥
ಪ್ರಾಸಾದಾನ್ವಿಶ್ವಕರ್ಮಾಸೌ ಸೌವರ್ಣಾಂಸ್ತ್ವತ್ಪ್ರಸಾದತಃ ।
ಕುರ್ವೀತ ಪುಷ್ಪವಾಟೀಂ ಚ ಪೃಥಕ್ತಾಸಾಂ ಸುರದ್ರುಮೈಃ ॥ ೫೬ ॥
ಮಾ ಭೂತ್ಸಪತ್ನೀಸ್ಪರ್ಧಾಸ್ತಾಂ ಸರ್ವಮಸ್ತ್ವಿತಿ ಚಾಬ್ರವೀತ್ ।
ಆ ಗಂತ ಮಾರುತಂ ಸೂಕ್ತಂ ವಯಮಿತ್ಯೈಂದ್ರಮುತ್ತರಂ ॥ ೫೭ ॥

**ಋಷಿಯು ಇಂದ್ರನನ್ನು ಬೇಡಿದ ವರಗಳು, ಸೋಭರಿ ಮತ್ತು ಚಿತ್ರ ಎಂಬುವರ ವೃತ್ತಾಂತವು**

55. ಋಷಿಯು ಇಂದ್ರನಿಂದ ಇನ್ನೂ ಕೆಲವು ವರಗಳನ್ನೂ ಕೇಳಿಕೊಂಡನು—ನಾನು ಇಚ್ಛಿಸಿದ ರೂಪಗಳನ್ನು ಪಡೆಯುವಂತೆಯೂ, ಯೌವನ, ರತಿಕ್ರೀಡೆಯಲ್ಲಿ ಯಾವಾಗಲೂ ಕಮ್ಮಿಯಾಗದ ಸಾಮರ್ಥ್ಯವುಂಟಾಗಬೇಕು ಶಂಖನಿಧಿ, ಪದ್ಮನಿಧಿ ಎಂಬ ನಿಧಿನಿಕ್ಷೇಪಗಳು ಯಾವಾಗಲೂ ನನ್ನ ಮನೆಯಲ್ಲಿರಬೇಕು,

56. ವಿಶ್ವಕರ್ಮನೆಂಬ ದೇವಶಿಲ್ಪಿಯು ನಿನ್ನ ಅನುಗ್ರಹದಿಂದ ಸುವರ್ಣಮಯವಾದ ದೊಡ್ಡ ಅರಮನೆಯನ್ನು ನನಗೆ ನಿರ್ಮಿಸಿಕೊಡಬೇಕು, ನನ್ನ ಐವತ್ತುಮಂದಿ ಭಾರ್ಯೆಯರಿಗೆ ಪ್ರತ್ಯೇಕವಾಗಿ (ಒಬ್ಬೊಬ್ಬರಿಗೆ ಒಂದರಂತೆ) ಫಲಪುಷ್ಪಭರಿತವಾದ ದಿವ್ಯವೃಕ್ಷಗಳಿಂದ ಕೂಡಿದ ಉದ್ಯಾನವನಗಳು,

57. ನನ್ನ ಐವತ್ತುಮಂದಿ ಪತ್ನಿಯರಲ್ಲಿ ಪರಸ್ಪರ ವಿರೋಧವಿಲ್ಲದೆ ಎಲ್ಲರೂ ಐಕಮತ್ಯದಿಂದ ಸಹಕರಿಸಬೇಕು ಎಂಬ ಈ ವರಗಳನ್ನು ಕೇಳಿದನು. ಇಂದ್ರನು ಹಾಗೆಯೇ ಆಗಲೆಂದು ಅವನು ಕೇಳಿದ ವರಗಳನ್ನೆಲ್ಲಾ ಕೊಟ್ಟನು. **ಆ ಗಂತ** ಎಂಬ ೨೦ ನೇ ಸೂಕ್ತದಲ್ಲಿ ಮರುದ್ದೇವತೆಗಳನ್ನೂ **ವಯಮು ತ್ವಾಂ** ಎಂಬ ೨೧ ನೇ ಸೂಕ್ತದಲ್ಲಿ ಇಂದ್ರನನ್ನೂ ಸ್ತುತಿಸಲಾಗಿದೆ.

**12. The boons choosen by the seer ; Story of Sobhari and Chitra.**

55. (and choose) the assumptioa of many forms at will, youth, and everlasting enjoyment, the conch-trrasure, the lotus-treasure always remaining in my house.

56. May the famous (ಅಸೌ) Visvakarman fashion (for me) palaces of gold by your favour, and a flower garden with celestial trees for (each of) those (spouses) separately.

57. and let there be no co-wife rivarly among these (fifty spouses). And he (Indra) said, 'All this shall be (fullfilled).

'Come hither' (ಆ ಗಂತಾ : viii. 20) is a hymn addressed to the Maruts ; the next one, 'We (ವಯಂ : viii. 21), is addressed to Indra.

ಕಾಣ್ವಸ್ಯ ಸೋಭರೇಶ್ಚೈವ ಯಜತೋ ವಂಶಜೈಃ ಸಹ |
ಕುರುಕ್ಷೇತ್ರೇ ಯವಾಞ್ಜಕ್ಷುರ್ಹವೀಂಷಿ ವಿವಿಧಾನಿ ಚ || ೫೮ ||
ಆಖವಃ ಸೋಽಭಿತುಷ್ಟಾವ ಇಂದ್ರಂ ಚಿತ್ರಂ ಸರಸ್ವತೀಂ |
ಇಂದ್ರೋ ವೇತ್ಯೈನಯರ್ಚಾ ಸ ದಾನಶಕ್ತಿಂ ಪ್ರಕಾಶಯನ್ || ೫೯ ||
ಆಖುರಾಜೋಽಭಿಮಾನಾಚ್ಚ ಪ್ರಹರ್ಷಿತಮನಾಃ ಸ್ವಯಂ |
ಸಂಸ್ತುತೋ ದೇವವಚ್ಚಿತ್ರ ಋಷಯೇ ತು ಗವಾಂ ದದೌ || ೬೦ ||
ಅಯುತಾನಾಂ ಸಹಸ್ರಂ ವೈ ನಿಜಗ್ರಾಹ ಸ್ತುವನ್ನೃಷಿಃ |
ಋಷಿಂ ಚೋವಾಚ ಹೃಷ್ಟಾತ್ಮಾ ನಾಹಮರ್ಹಾಮ್ಯೃಷೇ ಸ್ತುತಿಂ || ೬೧ ||

58. ಕಣ್ವಋಷಿಯ ಪುತ್ರನಾದ ಸೋಭರಿ ಎಂಬ ಋಷಿಯು ತನ್ನ ವಂಶದ ಇತರ ಋಷಿಗಳೊಡನೆ ಸೇರಿ ಕುರುಕ್ಷೇತ್ರವೆಂಬ ಸ್ಥಳದಲ್ಲಿ ಯಜ್ಞಮಾಡುತ್ತಿರುವಾಗ ಯಜ್ಞಾಹುತಿಗಾಗಿ ಸಿದ್ಧಪಡಿಸಿದ್ದ ಯವಧಾನ್ಯವನ್ನೂ ನಾನಾ ವಿಧ ಹವಿಸ್ಸುಗಳನ್ನೂ,

59. ಇಲಿಗಳು ತಿಂದುಹಾಕಿದವು. ಆದ್ದರಿಂದ ಆ ಸೋಭರಿಋಷಿಯು ಇಂದ್ರನನ್ನೂ, ಚಿತ್ರನೆಂಬ ರಾಜನನ್ನೂ ಸರಸ್ವತಿಯನ್ನೂ ಸ್ತುತಿಸಿ **ಇಂದ್ರೋ ವಾ** ಎಂಬ ೨೧ ನೇ ಸೂಕ್ತದ ೧೭ ನೇ ಋಕ್ಕಿನಿಂದ ಚಿತ್ರರಾಜನ ದಾನ ಮಾಡುವ ಸಾಮರ್ಥ್ಯವನ್ನು ಪ್ರಶಂಸೆಮಾಡಿರುವನು.

**೨೨-೨೫ ನೇ ಸೂಕ್ತಗಳ ದೇವತೆಗಳು**

60. ಬಳಿಕ ಇಲಿಗಳ ರಾಜನು ಋಷಿಯ ಸ್ತುತಿಯಿಂದ ಬಹಳ ಸಂತೋಷಪಟ್ಟನು. ಋಷಿಯು ಚಿತ್ರರಾಜನನ್ನು ದೇವತೆಗಳನ್ನು ಸ್ತುತಿಸುವಂತೆ ಸ್ತುತಿಸಿದ್ದರಿಂದ ಸಂತುಷ್ಟನಾಗಿ ಆ ಸೋಭರಿಋಷಿಗೆ

61. ಹತ್ತುಸಾವಿರ ಗೋವುಗಳನ್ನು ಕೊಟ್ಟನು. ಆ ಗೋವುಗಳನ್ನು ಸ್ವೀಕರಿಸಿ ಋಷಿಯು ಪುನಃ ರಾಜನನ್ನು ಸ್ತುತಿಸಿದನು. ಆಗ ಸಂತುಷ್ಟನಾದ ಚಿತ್ರರಾಜನು ಸೋಭರಿಋಷಿಯನ್ನು ಕುರಿತು—ಎಲೈ ಋಷಿಯೇ, ನೀನು ಮಾಡುವ ಸ್ತುತಿಗೆ ನಾನು ಅರ್ಹನಲ್ಲ.

58-59. When Sobhari, son of Kanva, was sacrifcing with members of his family in Kuruksetra, rats, devoured (his) corn and various oblations (So) he (ಸೋಭರಿ) praised Indra, Chitra, (and) Saraswati,

with the stanza 'Or Indra' (ಇಂದ್ರೋ ವಾ : viii. 21-17), proclaiming (Chitra's) Power of giving,

**13. Story of Sobhari and Chitra (continued) RV. viii. 22-25.**

60. And the king of the rats, (ಚಿತ್ರ) rejoiced at heart, from self satisfaction himself.

Chitra, being praised like a god, gave, to the seer, of cows.

61. a thousand myriads. Praising (him) the seer accepted (the gift). And rejoicng in heart (ಚಿತ್ರ) addressed the seer, 'I do not deserve the praise

ತಿರ್ಯಗ್ಯೋನೌ ಸಮುತ್ಪನ್ನೋ ದೇವತಾ ಸ್ತೋತುಮರ್ಹಸಿ ।
ತಮಂತ್ಯಯಾ ಪುನಶ್ಚಾಸ್ತೌದೋ ತ್ಯಂ ಸೂಕ್ತೇನ ಚಾಶ್ವಿನೌ ॥ ೬೨ ॥
ಈಳಿಷ್ವೇತ್ಯೇತದಾಗ್ನೇಯಂ ಸಖಾಯಶ್ಚೈಂದ್ರಮುತ್ತರಂ ।
ಯಥಾ ವರೋ ಸುಷಾಮ್ಣ ಇತ್ಯುತ್ತಮಸ್ತ್ವೌಷಸಸ್ತೃಚಃ ॥ ೬೩ ॥
ಅಷ್ಟೌ ತು ಸಹಿತಾಸ್ತ್ವೇತಾ ದೇವತಾ ಬಿಭಿದುರ್ವಲಂ ।
ಉಷಾಶ್ಚೇಂದ್ರಶ್ಚ ಸೋಮಶ್ಚ ಅಗ್ನಿಃ ಸೂರ್ಯೋ ಬೃಹಸ್ಪತಿಃ ॥ ೬೪ ॥
ಅಂಗಿರಾಃ ಸರಮಾ ಚೈವ ತಾ ವಾಮಿತ್ಯುತ್ತರಸ್ಯ ತು ।
ಅದೌ ಮೈತ್ರಾವರುಣ್ಯಸ್ತು ನವ ದ್ವಾದಶ ತೂತ್ತರಾಃ ॥ ೬೫ ॥

62. ಏಕೆಂದರೆ, ನಾನು ತಿರ್ಯಗ್ಯೋನಿಯಲ್ಲಿ (ಪ್ರಾಣಿಗಳ ಉದರದಲ್ಲಿ) ಹುಟ್ಟಿದವನು, ನನ್ನನ್ನು ಸ್ತುತಿಸಬೇಡ. ಅದಕ್ಕೆ ಬದಲಾಗಿ ದೇವತೆಗಳನ್ನು ಸ್ತುತಿಸು ಎಂದನು. ಬಳಿಕ ಋಷಿಯು **ಓ ತ್ಯಮಹ್ವ** ಎಂಬ ೨೨ ನೇ ಸೂಕ್ತದಿಂದ ಅಶ್ವಿನೀದೇವತೆಗಳನ್ನು ಸ್ತುತಿಸಿದನು.

63. **ಈಳಿಷ್ವಾ ಹಿ** ಎಂಬ ೨೩ ನೇ ಸೂಕ್ತದಲ್ಲಿ ಅಗ್ನಿಯನ್ನೂ, ಅದರ ಮುಂದಿನ **ಸಖಾಯ** ಆ ಎಂಬ ೨೪ ನೇ ಸೂಕ್ತದಲ್ಲಿ ಇಂದ್ರನನ್ನೂ ಸ್ತುತಿಸಲಾಗಿದೆ. ಆದರೆ ೨೪ ನೇ ಸೂಕ್ತದ **ತ್ವಂ ವರಃ** ಎಂದು ಪ್ರಾರಂಭವಾದುವ ಕೊನೆಯ ಮೂರು ಋಕ್ಕುಗಳಲ್ಲಿ (೨೮-೩೦) ಉಷೋದೇವತೆಯ ಸ್ತುತಿ ಇದೆ.

64. ವಲನೆಂಬ ಅಸುರನನ್ನು ಸೀಳಿ ಕೊಂದವರು ಎಂಟುಮಂದಿ ದೇವತೆಗಳು_ಉಷೋದೇವತೆ, ಇಂದ್ರ, ಸೋಮ, ಅಗ್ನಿ, ಸೂರ್ಯ, ಬೃಹಸ್ಪತಿ,

65. ಅಂಗಿರಾಋಷಿ, ಸರಮಾ ಎಂಬ ದೇವಶುನಿ ಇವರೇಲ್ಲರೂ ಸೇರಿ ಪರಸ್ಪರ ಸಹಕಾರದಿಂದ ವಲನನ್ನು ಕೊಂದು ಅವನು ಪಣಿಗಳ ಸಹಾಯದಿಂದ ಅಪಹರಿಸಿದ್ದ ಗೋವುಗಳನ್ನು ಬಿಡಿಸಿತಂದರು. **ತಾ ವಾಂ** ಎಂಬ ೨೫ ನೇ ಸೂಕ್ತದ ಮೊದಲಿನ ೯ ಋಕ್ಕುಗಳಲ್ಲಿ (೧-೯) ಮಿತ್ರಾವರುಣರನ್ನು ಸ್ತುತಿಸಲಾಗಿದೆ. ಮುಂದಿನ ೧೨ ಋಕ್ಕುಗಳಲ್ಲಿ (೧೦-೨೧).

---

62. having been begotten in an animal womb. Do you (rather) praise the gods'. And (yet) with the last (stanza, viii. 21-18) he (the seer) praised him again. And with the hymn 'Hither that' (ಓ ತ್ಯಂ : viii. 22) (he praised) the Asvins.

63. The (hymn) 'Laud you' (ಈಳಿಷ್ವ : viii. 23) is addressed to Agni, and the next one 'O friends' (ಸಖಾಯಃ : viii. 24) is addressed to Indra, but the last triplet, 'As to Varo-susaman' (ಯಥಾ ವರೋ ಸುಷಾಮ್ಣೇ : viii. 24. 28-30), is addressed to Dawn.

64. Now it is these eight deities altogether who cleft Vala : Usas and Indra and Soma, Agni, Surya, Brahaspati.

65. Angiras and Sarama. Now at the beginning of the next hymn 'You two as such' (ತಾ ವಾಂ : viii. 25) there are nine (stanzas addressed to Mitra-Varuna, but the next twelve.

ವೈಶ್ವದೇವ್ಯೋ ವರೂ ರಾಜಾ ಯಚ್ಚಾದಾದೃಷಯೇ ವಸು ।
ಕೀರ್ತಿತಂ ತತ್ತ್ವೃಚೇ ತ್ವಸ್ಮಿನ್ನೃಜ್ರಮುಕ್ಷಣ್ಯಾಯನೇ ॥ ೬೬ ॥
ಅಶ್ವಿನೌ ದದತುಃ ಪ್ರೀತೌ ತದಿಹೋಕ್ತಂ ಸುಷಾಮಣೆ ।
ಆಶ್ವಿನಂ ತು ಯುವೋರ್ಯುಕ್ಷ್ವ ವಾಯವ್ಯಾ ಉತ್ತರಾಸ್ತು ಯಾಃ ॥ ೬೭ ॥
ಯಂ ಸವರ್ಣಾ ಮನುರ್ನಾಮ ಲೇಭೇ ಪುತ್ರಂ ವಿವಸ್ವತಃ ।
ವೈಶ್ವದೇವಾನಿ ಪಂಚೈತಾನ್ಯಗ್ನಿರುಕ್ಥೇ ಜಗಾದ ಸಃ ॥ ೬೮ ॥
ಬಭ್ರುರೇಕ ಇತಿ ತ್ವೇತಾ ಲಿಂಗತೋ ದ್ವಿಪದಾ ದಶ ।
ಸ್ತೂಯಂತೇ ದೇವತಾ ಹ್ಯಾಸು ಕರ್ಮಭಿಃ ಸ್ವೈಃ ಪೃಥಕ್ಪೃಥಕ್ ॥ ೬೯ ॥

66. ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ. ವರು ಎಂಬ ರಾಜನು ಋಷಿಗೆ ದಾನಮಾಡಿದ ವಿವರವನ್ನು ೨೫ನೇ ಸೂಕ್ತದ ಕೊನೆಯ **ಋಜ್ರ** ಎಂದು ಮೊದಲಾಗುವ ೩ ಋಕ್ಕುಗಳಲ್ಲಿ (೨೨-೨೪) ಪ್ರಶಂಸಿಸಲಾಗಿದೆ.

67. ಮೇಲಿನ ಮೂರು ಋಕ್ಕಗಳಗೆ (೨೫ನೇ ಸೂಕ್ತದ ೨೨-೨೪ನೇ ಋಕ್ಕುಗಳಲ್ಲಿ) ಅಶ್ವಿನೀದೇವತೆಗಳು ಪ್ರೀತಿಯಿಂದ ಸುಷಾಮನ್ ಎಂಬವನಿಗೆ ಕೊಟ್ಟ ವಿವರವು ಇಲ್ಲಿ ಉಕ್ತವಾಗಿದೆ. **ಯುವೋಃ** ಎಂಬ ೨೬ನೇ ಸೂಕ್ತದಲ್ಲಿ ಅಶ್ವಿನೀದೇವತೆಗಳನ್ನು ಸ್ತುತಿಸಲಾಗಿದೆ. ಈ ಸೂಕ್ತದ **ಯುಕ್ಷ್ವಾ ಹಿ** ಎಂದು ಮೊದಲಾಗುವ ೨೦-೨೫ ಋಕ್ಕುಗಳಲ್ಲಿ ವಾಯುವನ್ನು ಸ್ತುತಿಸಲಾಗಿದೆ.

68. ವಿವಸ್ವಂತನ ಪುತ್ರನಾದ ಮನುವು **ಅಗ್ನಿರುಕ್ಥೇ** ಎಂದು ಮೊದಲಾಗುವ ಐದು ಸೂಕ್ತಗಳಲ್ಲಿ (೨೭-೩೧) ವಿಶ್ವೇದೇವತೆಗಳನ್ನು ಸ್ತುತಿಸಿದಾನೆ.

69. ಆದರೆ **ಬಭ್ರುರೇಕಃ** ಎಂಬ ೨೯ನೇ ಸೂಕ್ತದಲ್ಲಿ ದ್ವಿಪದಾವಿರಾಟ್ ಎಂಬ ಛಂದಸ್ಸಿನ ೧೦ಋಕ್ಕುಗಳಿವೆ ಇವು ಆ ಋಕ್ಕುಗಳಿಗೆ ಹೇಳಿರುವ ಲಕ್ಷಣಗಳಂತೆ ಇವೆ. ಇವುಗಳಲ್ಲಿ ಪ್ರತಿಋಕ್ಕಿನಲ್ಲಿಯೂ ಒಬ್ಬೊಬ್ಬ ದೇವತೆಯು ತನ್ನ ಕರ್ಮಗಳಿಂದಲೂ ಗುಣಗಳಿಂದಲೂ ಸ್ತುತಿಸಲ್ಪಟ್ಟಿರುವುದು.

**14. Deities of RV viii. 26-31. viii. 29 is prthak-karma-stuti.**

66. are addressed to the All-gods ; and the wealth which king Varu gave to the seer is proclaimed in the triplet ' A bay from ' Uksanyayana ' (ಋಜ್ರಮುಕ್ಷಣ್ಯಾಯನೇ : viii. 25. 22-24).

67. (What) the Asvins, being plesed, bestowed on Susaman, is told here : (viz).

' of you two ' (ಯುವೋಃ : viii. 26) is addressed to the Asvins ' Do you yoke ' (ಯುಕ್ಷ್ವ : viii. 26. 20-25) (and) the (stanzas) which (come) next are andressed to Vayu.

68. Manu, as he was named, whom Savarna obtained as a son from Vivasvat, uttered the five hymns (27-31) addressed to the All-gods (and beginning) ' Agni at the laudation ' (ಅಗ್ನಿರುಕ್ಥೇ : viii. 27).

69. ' Brown is one ' (ಬಭ್ರುರೇಕಃ : viii. 29) these are ten dvipadas wlth characteristic marks (ಲಿಂಗತಃ) ; for in them the deities are 'praised, each seperately, by their activities.

ಸ್ತುತಾಃ ಕರ್ಮಗುಣೈಃ ಸ್ವೈಃ ಸ್ವೈರ್ದೇವತಾ ಯತ್ರ ತತ್ರ ತು ।
ಪೃಥಕ್ಕರ್ಮಸ್ತುತಿರ್ನಾಮ ವೈಶ್ವದೇವಂ ತದೇವ ತು ॥ ೭೦ ॥

ತಾಸಾಂ ಬಭ್ರುರಿತಿ ತ್ವಾದ್ಯಾ ಸೌಮ್ಯಾಗ್ನೇಯಿಾ ತ್ವಗುತ್ತರಾ ।
ತ್ವಾಷ್ಟ್ರೀ ಚೈಂದ್ರೀ ಚ ರೌದ್ರೀ ಚ ಪೌಷ್ಣೀ ವೈಷ್ಣವ್ಯಥಾಶ್ವಿನೀ ॥ ೭೧ ॥

ನವಮೀ ಮೈತ್ರಾವರುಣೀ ಋಗ್ದಶಮ್ಯತ್ರಿಸಂಸ್ತವಃ ।
ಯಜಮಾನಪ್ರಸಂಗಾಚ್ಚ ಪ್ರ ಇಜ್ಯಾತ್ರ ಪ್ರಕೀರ್ತಿತಾ ॥ ೭೨ ॥

70. ಯಾವ ಸೂಕ್ತದಲ್ಲಿ ದೇವತೆಗಳು ತಮ್ಮ ಕರ್ಮಗಳ ಮತ್ತು ಗುಣಗಳ ವರ್ಣನೆಯಿಂದ ಪ್ರತ್ಯೇಕವಾಗಿ ಸ್ತುತಿಸಲ್ಪಟ್ಟಿರುವರೋ ಆ ಸೂಕ್ತವು ಪೃಥಕ್ಕರ್ಮಸ್ತುತಿಯ ಸೂಕ್ತವೆನಿಸುವುದು. ಇಂತಹ ಸೂಕ್ತವನ್ನೇ ವೈಶ್ವದೇವ (ವಿಶ್ವೇದೇವತೆಗಳನ್ನುದ್ದೇಶಿಸಿ ಸ್ತುತಿಸುವ) ಸೂಕ್ತವೆಂದು ಹೇಳುವರು.

**೨೯ ಮತ್ತು ೩೧ ನೇ ಸೂಕ್ತಗಳ ಪ್ರತ್ಯೇಕ ವಿವರಣೆ ; ೩೨-೩೪ ನೇ ಸೂಕ್ತಗಳ ದೇವತೆಗಳು.**

71. ಅಂತಹ ದ್ವಿಪದಾವಿರಾಟ್ ಛಂದಸ್ಸಿನ ಸೂಕ್ತಗಳಲ್ಲಿ **ಬಭ್ರುರೇಕಃ** ಎಂಬ ೨೯ನೇ ಸೂಕ್ತವು ಮೊದಲನೆಯದು. ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಸೋಮನನ್ನೂ ೨ ನೇ ಋಕ್ಕಿನಲ್ಲಿ ಅಗ್ನಿಯನ್ನೂ, ೩ ನೇ ಋಕ್ಕಿನಲ್ಲಿ ತ್ವಷ್ಟೃವನ್ನೂ, ೪ನೇ ಋಕ್ಕಿನಲ್ಲಿ ಇಂದ್ರನನ್ನೂ, ೫ನೇ ಋಕ್ಕಿನಲ್ಲಿ ರುದ್ರನನ್ನೂ, ೬ನೇ ಋಕ್ಕಿನಲ್ಲಿ ಪೂಷನನ್ನೂ ೭ ನೇ ಋಕ್ಕಿನಲ್ಲಿ ವಿಷ್ಣುವನ್ನೂ ೮ ನೇ ಋಕ್ಕಿನಲ್ಲಿ ಅಶ್ವಿನೀದೇವತೆಗಳನ್ನೂ,

72. ೯ ನೇ ಋಕ್ಕಿನಲ್ಲಿ ಮಿತ್ರಾವರುಣರನ್ನೂ, ಸ್ತುತಿಸಲಾಗಿದೆ. ೧೦ ನೇ ಋಕ್ಕಿನಲ್ಲಿ ಅತ್ರಿಋಷಿಗಳ ಪ್ರಶಂಸೆ ಇದೆ. **ಯೋ ಯಜಾತಿ** ಎಂಬ ೩೧ ನೇ ಸೂಕ್ತದಲ್ಲಿ ಪ್ರಾಸಂಗಿಕವಾಗಿ ಯಜಮಾನನನ್ನೂ, ಮುಖ್ಯವಾಗಿ ಯಜ್ಞವನ್ನೂ ಸ್ತುತಿಸಲಾಗಿದೆ.

---

70. Now where the deities are praised by their respective actions and qualities, there is what is called separate praise of action (ಪೃಥಕ್‌ಕರ್ಮಸ್ತುತಿ). Such a (hymn) is addressed to the All-gods.

**15. Detailed accouut of RV. viii. 29-31. Deities of viii. 32-34**

71. Now of these (ದ್ವಿಪದಾಃ) the first 'Brown' (ಬಭ್ರುಃ : viii. 29-1) is addressed to Soma, but the next stanza (2) is addressed to Agni; (then comes) one addressed to Tvastr (3), and Indra (4) and Rudra (5), Pusan (6), Visnu (7) a stanza addressed to the Asvins (8);

72. the ninth is addressed to Mitra-Varuna (9), the tenth stanza is (in) praise of the Atris. And in connexion with the institutor of the sacrifice (in) 'Who' (ಯಃ : viii. 31) the sacrifice (ಇಜ್ಯಾ) is here praised.

ಯೋ ಯಜಾತಿ ದ್ವ್ಯೃಚೇ ಶಕ್ರೋ ಯಜತಾಂ ಪತಿರೀಳಿತಃ ।
ತಸ್ಯ ದ್ಯುಮಾನ್ ದ್ವ್ಯೃಚೇ ಯಜ್ವಾ ಚತಸೃಷ್ವಪಿ ಮಕ್ಷ್ವಿತಿ ॥ ೭೩ ॥
ಯಜ್ವನೋರೇವ ದಂಪತ್ಯೋಃ ಪಂಚ ಯಾ ದಂಪತೀ ಋಚಃ ।
ಆ ಶರ್ಮಾಶೀರೈತು ಪೌಷ್ಣ್ಯೌ ಪರೇ ಮಿತ್ರೋಽರ್ಯಮಾ ಯಥಾ ॥ ೭೪ ॥
ವರುಣಶ್ಚ ಸ್ತುತಾಸ್ತ್ವತ್ರ ಆದಿತ್ಯಾ ಅಗ್ನಿಮಗ್ನಯೇ ।
ಸೂಕ್ತಾನಿ ಪ್ರ ಕೃತಾನೀತಿ ತ್ರೀಣ್ಯೈಂದ್ರಾಣಿ ಪರಾಣ್ಯತಃ ॥ ೭೫ ॥

73. ೩೧ ನೇ ಸೂಕ್ತದ **ಯೋ ಯಜಾತಿ** ಎಂದು ಮೊದಲಾಗುವ ಎರಡು ಋಕ್ಕುಗಳಲ್ಲಿ (೧-೨) ಯಜ್ಞಾರ್ಹರಾದ ದೇವತೆಗಳಲ್ಲಿ ಶ್ರೇಷ್ಠನಾದ ಇಂದ್ರನು ಸ್ತುತನಾಗಿರುವನು. **ತಸ್ಯ ದ್ಯುಮಾನ್** ಎಂದು ಮೊದಲಾಗುವ ಮುಂದಿನ ಎರಡು ಋಕ್ಕುಗಳಲ್ಲಿ (೩-೪) ಯಜ್ಞಮಾಡುವ ಯಜಮಾನನ ಪ್ರಶಂಸೆ ಇದೆ. **ಮಕ್ಷೂ ದೇವವತಃ** ಎಂದು ಮೊದಲಾಗುವ ನಾಲ್ಕು ಋಕ್ಕುಗಳಲ್ಲಿ (೧೫-೧೮)ಯೂ,

74. **ಯಾ ದಂಪತೀ** ಎಂದು ಮೊದಲಾಗುವ ೫ ಋಕ್ಕುಗಳಲ್ಲಿಯೂ (೫-೯) ಯಜ್ಞಮಾಡುವ ಯಜಮಾನನ ಮತ್ತು ಅವನ ಪತ್ನಿಯ (ದಂಪತಿಗಳ) ಆಶೀರ್ವಾದವು ಉಕ್ತವಾಗಿದೆ. **ಆ ಶರ್ಮ** ಎಂಬ ೧೦ ನೇ ಋಕ್ಕು ಪ್ರಾರ್ಥನಾರೂಪದಲ್ಲಿದೆ. **ಐತು ಪೂಷಾ** ಎಂದು ಮೊದಲಾಗುವ ಮುಂದಿನ ಎರಡು ಋಕ್ಕುಗಳಲ್ಲಿ (೧೧-೧೨) ಪೂಷ ದೇವನನ್ನು ಸ್ತುತಿಸಲಾಗಿದೆ. ಮುಂದಿನ **ಯಥಾ ನಃ** ಎಂಬ ೧೩ ನೇ ಋಕ್ಕಿನಲ್ಲಿ ಮಿತ್ರನೂ, ಆರ್ಯಮನೂ,

75. ವರುಣನೂ, ಆದಿತ್ಯರೂ ಸ್ತುತರಾಗಿದಾರೆ. ಇದರ ಮುಂದಿನ **ಅಗ್ನಿಂ ಯಃ** ಎಂಬ ೧೪ ನೇ ಋಕ್ಕಿಗೆ ಅಗ್ನಿಯು ದೇವತೆಯು; ಇದರ ಮುಂದಿನ **ಪ್ರ ಕೃತಾನಿ** ಎಂದು ಮೊದಲಾಗುವ ೩ ಸೂಕ್ತಗಳಿಗೆ (೩೨-೩೪) ಇಂದ್ರನು ದೇವತೆಯು.

73. In the couplet 'Who sacrifices' (ಯೋ ಯಜಾತಿ : viii. 31. 1-2) Sakra, the Lord of sacrificers, is lauded. In the couplet 'Glorious his' (ತಸ್ಯ ದ್ಯುಮಾನ್ : 3-4) the sacrificer (is praised), also in the four (stanzas) 'Swiftly' (ಮಕ್ಷು : 15-18).

74. The five stanzas 'The couple who (ಯಾ ದಂಪತೀ : viii. 31. 5-9) are (in praise) of husband and wife sacrificers, 'Hither protection' (ಆ ಶರ್ಮ: 70) is a prayer. The two following 'May hither come' (ಐತು : 11-12) are addressed to Pusan ; while (in) 'Since' (ಯಥಾ : 13) Mitra, Aryaman,

75. and Varuna, the Adityas, are praised ; 'Agni' (ಅಗ್ನಿಂ : 14) is to Agni.

The three following hymns after this, 'Forth the deeds' (ಪ್ರ ಕೃತಾನಿ ; viii. 32-34), are addressed to Indra;

ಅಧ ಇತ್ಯತ್ರ ಕನ್ಯಾ ತಂ ಸ್ತ್ರೀಲಿಂಗೇನೇಂದ್ರಮಬ್ರವೀತ್ ।
ಸ ಹಿ ತಾಂ ಕಾಮಯಾಮಾಸ ದಾನವೀಂ ಪಾಕಶಾಸನಃ ॥ ೭೬ ॥

ಜ್ಯೇಷ್ಠಾಂ ಸ್ವಸಾರಂ ವ್ಯಂಸಸ್ಯ ತಸ್ಯೈವ ಯುವಕಾಮ್ಯಯಾ ।
ಅಗ್ನಿನೇತ್ಯಾಶ್ವಿನಂ ಸೂಕ್ತಮೈಂದ್ರಸೂಕ್ತೇ ಪರೇ ತತಃ ॥ ೭೭ ॥

ಐಂದ್ರಾಗ್ನಂ ಪರಮಾಗ್ನೇಯಮೈಂದ್ರಾಗ್ನಂ ವಾರುಣೇ ಪರೇ ।
ಉತ್ತರೇ ವಾರುಣೇ ತ್ವಂತ್ಯ ಆ ವಾಮಿತ್ಯಾಶ್ವಿನಸ್ತೃಚಃ ॥ ೭೮ ॥

**ಇಂದ್ರ ಮತ್ತು ವ್ಯಂಸನ ಜ್ಯೇಷ್ಠಸಹೋದರಿಯ ವಿಷಯ ೩೫-೪೬ ಸೂಕ್ತಗಳ ದೇವತೆಗಳು**

76. ೩೩ ನೇ ಸೂಕ್ತದ **ಅಧಃ ಪಶ್ಯಸ್ವ** ಎಂಬ ೧೯ ನೇ ಋಕ್ಕಿನಲ್ಲಿ ಓರ್ವ ಕನ್ಯೆಯು ಸ್ತ್ರೀಸಹಜವಾದ ಸ್ವಭಾವದಿಂದ ಇಂದ್ರನನ್ನು ಮಾತನಾಡಿಸಿದಳು. ಆ ಸ್ತ್ರೀಯು ದಾನವಕನ್ಯೆಯಾಗಿದ್ದರೂ ಇಂದ್ರನು ಅವಳನ್ನು ಮೋಹಿಸಿದನು.

77 ಆ ಕನ್ಯೆಯು **ವ್ಯಂಸ** ಎಂಬುವನ ಜ್ಯೇಷ್ಠ ಸಹೋದರಿಯಾಗಿದ್ದಳು- ಇಂದ್ರನು ಅವಳಲ್ಲಿ ಯುವಕನ ಸ್ವಭಾವಕ್ಕನುಗುಣವಾಗಿ ಅನುರಕ್ತನಾದನು. **ಅಗ್ನಿನೇಂದ್ರೇಣ** ಎಂಬ ೩೫ ನೇ ಸೂಕ್ತದಲ್ಲಿ ಅಶ್ವಿನೀದೇವತೆಗಳನ್ನೂ ಮುಂದಿನ ಎರಡು ಸೂಕ್ತಗಳಲ್ಲಿ (೩೬-೩೭) ಇಂದ್ರನನ್ನೂ ಸ್ತುತಿಸಲಾಗಿದೆ.

78. ಮುಂದಿನ ೩೮ ನೇ ಸೂಕ್ತದಲ್ಲಿ ಇಂದ್ರಾಗ್ನಿಗಳನ್ನೂ, ಅದರ ಮುಂದಿನ ೩೯ ನೇ ಸೂಕ್ತದಲ್ಲಿ ಅಗ್ನಿಯನ್ನೂ ಅದರ ಮುಂದಿನ ೪೦ ನೇ ಸೂಕ್ತದಲ್ಲಿ ಇಂದ್ರಾಗ್ನಿಗಳನ್ನೂ, ಮುಂದಿನ ಎರಡು ಸೂಕ್ತಗಳಲ್ಲಿ (೪೧-೪೨) ವರುಣನನ್ನೂ ಸ್ತುತಿಸಲಾಗಿದೆ. ಆದರೆ ವರುಣದೇವತಾಕವಾದ ೪೨ ನೇ ಸೂಕ್ತದ **ಆ ವಾಂ ಗ್ರಾವಾಣಃ** ಎಂದು ಮೊದಲಾಗುವ ಕೊನೆಯ ಮೂರು ಋಕ್ಕುಗಳಲ್ಲಿ (೪-೬) ಅಶ್ವಿನೀದೇವತೆಗಳನ್ನು ಸ್ತುತಿಸಲಾಗಿದೆ.

---

**16. Indra and Vyamsa's sister. Deities of RV. viii. 35-46**

76. In 'Downward' (ಅಧ; viii. 33-19) a girl addressed Indra (who appeared) with the characteristics of a woman; for the chastiser of Paka (Indra) made love to that Danava maiden,

77. the eldest sister of Vyamsa, by reason of his (Indra's) youthful desire (ಯುವಕಾಮ್ಯ). 'By Agni' (ಅಗ್ನಿನಾ : viii. 35) is a hymn addressed to the Asvins. Then follow two hymns (36-37) addressed to Indra.

78. The following (38) is addressed to Indra-Agni, (then) one to Agni (39), one to Indra-Agni (40); the following two (41-42) are addressed to Varuna ; but in the latter (42) Varuna hymn the last triplet 'Hither you two' (ಆ ವಾಂ : viii. 42, 4-6) is addressed to the Asvins.

**ಸೂಕ್ತೇ ಇಮೋ ಸಮಾಗ್ನೇಯೇ ತಾಭ್ಯಾಮೈಂದ್ರೇ ತತಃ ಪರೇ |**
**ವಶಾಯಾಶ್ವ್ಯಾಯ ಯತ್ಪ್ರಾದಾತ್ಕಾನೀತಸ್ತು ಪೃಥುಶ್ರವಾಃ** || ೭೯ ||
**ತದತ್ರ ಸಂಸ್ತುತಂ ದಾನ ಆ ಸ ಇತ್ಯೇವಮಾದಿಭಿಃ |**
**ಆ ನಃ ಪ್ರಗಾಥೌ ವಾಯವ್ಯೌ ಸೂಕ್ತಸ್ಯೋಪೋತ್ತಮಾ ಚ ಯಾ** || ೮೦ ||
**ಮಿತ್ರಾರ್ಯಮಾಣೌ ಮರುತಃ ಸುನೀಥೋ ಘ ದ್ವ್ಯೃಚೇ ಸ್ತುತಾಃ |**
**ದ್ವಿಚತ್ವಾರಿಂಶಕಾತ್ಪ್ರೀತಸ್ತ್ರಿಶೋಕಾಯ ಪುರಂದರಃ** || ೮೧ ||
**ಗಿರಿಂ ನಿಕೃತ್ಯ ವಜ್ರೇಣ ಗಾ ದದಾವಸುರೈರ್ಹೃತಾಃ |**

79. ಮುಂದಿನ **ಇಮೋ ವಿಪ್ರಸ್ಯ** ಎಂಬ ೪೩ ನೇ ಸೂಕ್ತಕ್ಕೂ **ಸಮಿಧಾಗ್ನಿಂ** ಎಂಬ ೪೪ ನೇ ಸೂಕ್ತಕ್ಕೂ ಅಗ್ನಿಯು ದೇವತೆಯು; ಅದರ ಮುಂದಿನ ಎರಡು ಸೂಕ್ತಗಳಿಗೆ (೪೫-೪೬) ಇಂದ್ರನು ದೇವತೆಯು. **ಕಾನೀತ ಪೃಥುಶ್ರವಾಃ** ಎಂಬುವನು ವಶ ಆಶ್ವ್ಯನೆಂಬುವನಿಗೆ ಕೊಟ್ಟ,

80. ದಾನದ ಪ್ರಶಂಸೆಯನ್ನು ೪೬ ನೇ ಸೂಕ್ತದ **ಆ ಸ ಏತು** ಎಂದು ಪ್ರಾರಂಭವಾಗುವ ಮೂರು ಋಕ್ಕುಗಳಲ್ಲಿ (೨೧-೨೪) ವರ್ಣಿಸಲಾಗಿದೆ. **ಆ ನೋ ವಾಯೋ** ಎಂದು ಪ್ರಾರಂಭವಾಗುವ ಎರಡು ಪ್ರಗಾಥಗಳಲ್ಲಿಯೂ (೨೫-೨೮ ಋಕ್ಕುಗಳಲ್ಲಿಯೂ) ಸೂಕ್ತದ ಕೊನೆಯ ಹಿಂದಿನ ಋಕ್ಕಿನಲ್ಲಿಯೂ (೩೨ ನೇ ಋಕ್ಕು) ವಾಯುವನ್ನು ಸ್ತುತಿಸಲಾಗಿದೆ.

**೪೭-೫೬ ನೇ ಸೂಕ್ತಗಳ ದೇವತೆಗಳು**

81-82. ೪೬ ನೇ ಸೂಕ್ತದಲ್ಲಿ **ಸುನೀತೋ ಘಾ** ಎಂದು ಪ್ರಾರಂಭವಾಗುವ ಎರಡು ಋಕ್ಕುಗಳಲ್ಲಿ (೪-೫) ಮಿತ್ರ, ಆರ್ಯಮಾ ಮತ್ತು ಮರುದ್ದೇವತೆಗಳನ್ನು ಸ್ತುತಿಸಲಾಗಿದೆ. ೪೫ ನೇ ಸೂಕ್ತದಲ್ಲಿರುವ ೪೨ ಋಕ್ಕುಗಳ ಸ್ತೋತ್ರದಿಂದ ಇಂದ್ರನು ಪ್ರೀತನಾಗಿ ತನ್ನ ವಜ್ರಾಯುಧದಿಂದ ಪರ್ವತವನ್ನು ಭೇದಿಸಿ, ಅಸುರರು ಅಪಹರಿಸಿ ಅಲ್ಲಿ

---

79. The two hymns, 'These' (ಇಮೇ; viii. 43), 'With fuel' (ಸಂ; viii. 4) are addressed to Agni; the two which then follow after these (45-46) are addressed to Indra.

Now what Kanita Prthusravas gave to Vasa Asvya,

80. as a gift is here praised in the (stanzas) beginning 'Hither he : (ಆ ಸ: viii. 46. 21-24) The two pragatha couplets 'Hither to our' (ಆ ನಃ 28-25) are aderessed to Vayu as well as the last (stanza) but one of the hymn (32).)

**17. Deities of RV. viii. 47-56.**

81-82. In the couplet 'Well led indeed' (ಸುನೀಥೋ ಘ: viii. 46. 4-5), Mitra-Aryaman (and) Maruts are praised.

Pleased by (the hymn) containning forty-two stanzas (viii. 45) the Fort-destroyer (Indra), after cutting through the mountain with his

ಯಃ ಕೃಂತದಿತಿ ಚೈತಸ್ಯಾಮೃಷಿಸ್ತು ಸ್ವಯಮಬ್ರವೀತ್ || ೮೨ ||
ಸ್ತುತಾ ನವಮ್ಯಾ ತ್ವದಿತಿರ್ಮಹೀತ್ಯಾದಿತ್ಯದೈವತೇ ।
ಅಂತ್ಯಾಃ ಪಂಚೋಷಸೇऽಪಿ ಸ್ಯುಃ ಸೌಮ್ಯಂ ಸ್ವಾದೋರಿತಿ ಸ್ಮೃತಂ || ೮೩ ||
ಪರಾಣ್ಯಷ್ಟೌ ತು ಸೂಕ್ತಾನಿ ಋಷೀಣಾಂ ತಿಗ್ಮತೇಜಸಾಂ ।
ಐಂದ್ರಾಣ್ಯತ್ರ ತು ಷಡ್ವಿಂಶಃ ಪ್ರಗಾಥೋ ಬಹುದೈವತಃ || ೮೪ ||
ಋಗಂತ್ಯಾಗ್ನೇರಚೇತ್ಯಗ್ನಿಃ ಸೂರ್ಯಮಂತ್ಯಂ ಪದಂ ಜಗೌ ।
ಪ್ರಸ್ಕಣ್ವಶ್ಚ ಪೃಷಧ್ರಸ್ಯ ಪಾದಾದ್ಯದ್ವಸು ಕಿಂಚನ || ೮೫ ||

ಬಚ್ಚಿಟ್ಟಿದ್ದ ಗೋವುಗಳನ್ನು ತ್ರಿಶೋಕನೆಂಬುವನಿಗೆ ಹಿಂದಕ್ಕೆ ಕೊಟ್ಟನು. ಋಷಿಯು ಈ ವಿಷಯವನ್ನು ಇದೇ ಸೂಕ್ತದ **ಯಃ ಕೃಂತದಿತ್** ಎಂಬ ೩೦ ನೇ ಋಕ್ಕಿನಲ್ಲಿ ತಾನೇ ವಿವರಿಸಿದಾನೆ.

83. ಆದಿತ್ಯದೇವತಾಕವಾದ **ಮಹಿ ವಃ** ಎಂಬ ೪೭ ನೇ ಋಕ್ಕಿನಲ್ಲಿ ಅದಿತಿಯನ್ನು ಸ್ತುತಿಸಲಾಗಿದೆ. ಈ ಸೂಕ್ತದ ಕೊನೆಯ ಐದು ಋಕ್ಕುಗಳಲ್ಲಿ (೧೪-೧೮) ಉಷೋದೇವತೆಯನ್ನೂ ಸ್ತುತಿಸಲಾಗಿದೆಯೆಂದು ಹೇಳಬಹುದು. **ಸ್ವಾದೋರಭಕ್ಷಿ** ಎಂಬ ೪೮ ನೇ ಸೂಕ್ತಕ್ಕೆ ಸೋಮನು ದೇವತೆಯು.

84. ೪೯-೫೬ ವರೆಗಿನ ಎಂಟು ಸೂಕ್ತಗಳಲ್ಲಿ ಮಹಾತೇಜಸ್ವಿಗಳಾದ ಋಷಿಗಳು ಇಂದ್ರನನ್ನು ಸ್ತುತಿಸಿರುವರು. ಆದರೆ ೨೬ ನೇ ಪ್ರಗಾಥದಲ್ಲಿ ಎಂದರೆ ೫೪ ನೇ **ಏತತ್ತೇ** ಎಂಬ ಸೂಕ್ತದ ೩-೪ ನೇ ಋಕ್ಕುಗಳಲ್ಲಿ ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ.

85. ೫೬ ನೇ ಸೂಕ್ತದ **ಅಚೇತ್ಯಗ್ನಿಃ** ಎಂಬ ಕೊನೆಯ ಋಕ್ಕಿಗೆ (೫) ಅಗ್ನಿಯು ದೇವತೆಯು. ಈ ಋಕ್ಕಿನ ಕೊನೆಯ ಪಾದದಲ್ಲಿ ಸೂರ್ಯನ ಪ್ರಶಂಸೆ ಇದೆ. ಪ್ರಸ್ಕಣ್ವನು ಪೃಷಧ್ರನೆಂಬುವನಿಗೆ ಕೊಟ್ಟ ಧನಾದಿಗಳ ವಿವರವೆಲ್ಲವೂ,

---

bolt, gave to Trisoka the cows which had been carried off by the Asuras. The seer has stated this himself in the (stanza), ' Who clave ' (ಯಃ ಕೃಂತತ್ : viii. 45-30).

83. In the (hymn) ' Great ' (ಮಹೀ : viii. 47), of which the Adityas are the deities, Aditi is praised with the ninth (stanza). The last five (stanzas : 14-12) should be (considered as addressed) to Dawn as well (ಅಪಿ). ' Of the sweet ' (ಸ್ವಾದೋಃ : viii. 48) is trrditionally held to be addressed to Soma.

84. Now the following eight hymns (viii. 49-56), by seers of ardent brilliance, are addressed to Indra ; but the twenty-sixth pragatha couplet here (viii. 54. 3-4) is addressed to many deities.

85. The last stanza, ' Agni has appeared ' (ಅಚೇತ್ಯಗ್ನಿಃ : viii. 56-5), is to Agni ; the last verse (ಪಾದ) sang of Surya (viii. 56-5) Whatever wealth Praskanva gave to Prsadhra, (ಪೃಷಧ್ರ )

ತದ್ಭೂರೀದಿತಿ ಸೂಕ್ತಾಭ್ಯಾಮಖಿಲಂ ತ್ವಿಹ ಸಂಸ್ತುತಂ ।
ಐಂದ್ರಾಣ್ಯುಭಯಮಿತ್ಯತ್ರ ಷಳಾಗ್ನೇಯಾತ್ಪರಾಣಿ ತು ।
ನಿಪಾತಮಾಹ ದೇವಾನಾಂ ದಾತಾ ಮ ಇತಿ ಭಾಗುರಿಃ ॥ ೮೬ ॥

ಋಚಂ ಯಾಸ್ಕಸ್ತ್ವೃಚಂ ತ್ವೇತಂ ಮನ್ಯತೇ ವೈಶ್ವದೇವತಂ ।
ಆದಿತ್ಯದೈವತಂ ಸೂಕ್ತಂ ತ್ಯಾನ್ನಿತ್ಯತ್ರ ಪರಂ ತು ಯತ್ ॥ ೮೭ ॥

ಧೀವರಾಃ ಸಹಸಾ ಮಿನಾನ್ದೃಷ್ಟ್ವಾ ಸಾರಸ್ವತೇ ಜಲೇ ।
ಜಾಲಂ ಪ್ರಕ್ಷಿಪ್ಯ ತಾನ್ಬದ್ಧ್ವೋದಕ್ಷಿಪನ್ಸಲಿಲಾತ್ಸ್ಥಲಂ ॥ ೮೮ ॥

86. **ಭೂರೀದಿಂದ್ರಸ್ಯ** ಎಂದು ಮೊದಲಾಗುವ ಎರಡು ಸೂಕ್ತಗಳಲ್ಲಿ (೫೫-೫೬) ಪ್ರಶಂಸಿತವಾಗಿದೆ. ಆದರೆ ಈ ಎರಡು ಸೂಕ್ತಗಳಿಗೂ ಇಂದ್ರನೇ ದೇವತೆಯೆಂದು ಪ್ರಸಿದ್ಧಿಯು. ೬೫ ನೇ ಸೂಕ್ತದ **ದಾತಾ ಮೇ** ಎಂಬ ೧೦ ನೇ ಋಕ್ಕಿನಲ್ಲಿ ದೇವತೆಗಳ (**ದೇವಾಃ**) ಹೆಸರನ್ನು ಪ್ರಾಸಂಗಿಕವಾಗಿ ಹೇಳಿದೆಯೆಂದು ಭಾಗುರಿ ಎಂಬುವರ ಅಭಿಪ್ರಾಯವು.

87. ಆದರೆ ಈ ಮೂರು ಋಕ್ಕುಗಳು (೬೫ ನೇ ಸೂಕ್ತದ ೧೦-೧೨ ಋಕ್ಕುಗಳು) ವಿಶ್ವೇದೇವತಾಕವೆಂದು ಯಾಸ್ಕರ ಅಭಿಪ್ರಾಯವಿರುವುದು. ಆದರೆ **ತ್ಯಾನ್ನು** ಎಂಬ ೬೭ ನೇ ಸೂಕ್ತಕ್ಕೆ ಆದಿತ್ಯರು ದೇವತೆಗಳು.

88. ಒಂದು ಸಮಯದಲ್ಲಿ ಬೆಸ್ತರು ಸಂಚರಿಸುತ್ತಿರುವಾಗ ಅಕಸ್ಮಾತ್ತಾಗಿ ಸರಸ್ವತೀನದಿಯಲ್ಲಿ ಮೀನುಗಳಿರುವುದನ್ನು ಕಂಡರು. ಆಗ ಅವರು ಬಲೆಯನ್ನು ಬೀಸಿ ಮೀನುಗಳನ್ನು ಹಿಡಿದು ಅವುಗಳನ್ನು ನೀರಿನಿಂದ ತೆಗೆದು ನೆಲದ ಮೇಲೆ ಇಟ್ಟರು.

## 18. Deities of RV. viii. 60-67.

86. all that is here praised with the two hymns 'Great indeed' (ಭೂರೀತ್ : viii. 55-56).

Bhaguri says that the stanza 'The giver to me' (ದಾತಾ ಮೇ : viii.65-10) (contains) incidental mention (ನಿಪಾತ) of the Gods ;

87. Yaksa, however, considers this triplet (viii. 65. 10-12) to be addressed to the All-gods. But the hymn which here follows, 'Now these' ತ್ಯಾನ್ನು : viii. 67), has the Adityas as its divinities.

88. Fishermen, having by chance seen fish in the water of the Sarasvati, cast a net, caught them, and threw them upon the dryland out of the water.

ಶರೀರಪಾತಭೀತಾಸ್ತೇ ತುಷ್ಟುವುಶ್ಚಾದಿತೇಃ ಸುತಾನ್ ।
ಮುಮುಚುಸ್ತಾಂಸ್ತತಸ್ತೇ ಚ ಪ್ರಸನ್ನಾಸ್ತಾನ್ ಸಮೂದಿರೇ ॥ ೮೯ ॥

ಧೀವರಾಃ ಕ್ಷುದ್ಭಯಂ ಮಾ ವೋ ಭೂತ್ಸ್ವರ್ಗಂ ಪ್ರಾಪ್ಸ್ಯಥೇತಿ ಚ ।
ಉತೇತಿ ಮಾತಾ ತತ್ರೈಷಾಂ ತೃಚೇನಾಭಿಷ್ಟುತಾದಿತಿಃ ॥ ೯೦ ॥

ಮಾತೃತ್ವಾದಭಿಸಂಬಂಧಾತ್ಸ್ತುಯೇತೈಷಾಂ ಸ್ತುತೌ ಸ್ತುತೌ ।
ಐಂದ್ರಾಣ್ಯಾ ತ್ವಾ ರಥಂ ತ್ರೀಣಿ ಸ್ತೌತ್ಯೃತೂನುಪ ಮೇತಿ ಷಟ್ ॥ ೯೧ ॥

89. ಆಗ ಆ ಮೀನುಗಳು ಪ್ರಾಣಭಯದಿಂದ ತಮ್ಮನ್ನು ಕಾಪಾಡುವುದಕ್ಕಾಗಿ ಅದಿತಿಯ ಪುತ್ರರನ್ನು (ಆದಿತ್ಯರನ್ನು) ಸ್ತುತಿಸಿದವು. ಆ ಆದಿತ್ಯರು ಕೂಡಲೆ ಅಲ್ಲಿಗೆ ಬಂದು ಆ ಮೀನುಗಳನ್ನು ಬಲೆಯಿಂದ ಬಿಡಿಸಿ ಬೆಸ್ತರೊಡನೆ ಮಾತನಾಡಿದರು—

90. ಎಲೈ ಬೆಸ್ತರೇ, ಹಸಿವಿನಿಂದ ಪೀಡಿತರಾಗುತ್ತೇವೆಂದು ಭಯಪಡಬೇಡಿರಿ. ನಿಮಗೆ ಕ್ಷುದ್ಬಾಧೆಯ ಭಯವಿಲ್ಲ. ನಿಮಗೆ ಸ್ವರ್ಗಲೋಕಪ್ರಾಪ್ತಿಯಾಗುವುದು ಎಂದು ಅವರನ್ನು ಸಮಾಧಾನಪಡಿಸಿದರು. ಈ ೬೭ ನೇ ಸೂಕ್ತದ **ಉತ ತ್ಯಾಂ** ಎಂದು ಮೊದಲಾಗುವ ೩ ಋಕ್ಕುಗಳಲ್ಲಿ (೧೦-೧೨) ಈ ಆದಿತ್ಯರ ತಾಯಿಯಾದ ಅದಿತಿ ದೇವಿಯನ್ನು ಸ್ತುತಿಸಲಾಗಿದೆ.

**೬೮-೭೫ ಸೂಕ್ತಗಳ ದೇವತೆಗಳು**

91. ಅದಿತಿಯು ಆದಿತ್ಯರ ಮಾತೆಯಾಗಿರುವುದರಿಂದ ಆದಿತ್ಯದೇವತಾಕವಾದ ಸೂಕ್ತಗಳಲ್ಲಿ ಅದಿತಿಯ ಸ್ತುತಿ ಇರುವುದು ಕಂಡುಬರುವುದು. **ಆ ತ್ವಾ ರಥಂ** ಎಂದು ಮೊದಲಾಗುವ ಮೂರು ಸೂಕ್ತಗಳಿಗೆ (೬೮-೭೦) ಇಂದ್ರನು ದೇವತೆಯು. ೬೮ ನೇ ಸೂಕ್ತದ **ಉಪ ಮಾ ಷಟ್** ಎಂಬ ೧೪ ನೇ ಋಕ್ಕಿನಲ್ಲಿ ಋತುಗಳ ಪ್ರಶಂಸೆ ಇದೆ.

---

89. And they, frightened by the fall of their bodies, praised the sons of Aditi. And they (the Adityas) then released them, and graciously conversed with them (the fishermen),

90. (saying) ‘O fishermen, be not afraid of hunger.’ and ‘you shall obtain heaven.’

In that hymn (ತತ್ರ : viii. 67), Aditi, the mother of these (Adityas), is praised with the triplet ‘And’ (ಉತ : viii. 67. 10-12).

## 19. Deities of RV. viii. 68-75.

91. Because she is their mother she may be praised in every praise of them owing to (this) connexion. ‘Hither you as a car’ (ಆ ತ್ವಾ ರಥಂ : viii. 68-70) are three hymns acdressed to Indra ; (the stanza) ‘Near to me six’ ಉಪ ಮಾ ಷಟ್ : viii. 68.14) praises the seasons.

ಋಕ್ಷಾಶ್ವಮೇಧಯೋರತ್ರ ಪಂಚ ದಾನಸ್ತುತಿಃ ಪರಾಃ |
ಅಪಾದಿಂದ್ರಸ್ಯ ಚಾಗ್ನೇಶ್ಚ ವಿಶ್ವೇಷಾಂ ಚೈವ ಸಂಸ್ತವಃ || ೯೨ ||
ದ್ವ್ಯೃಚಸ್ಯ ಪ್ರಥಮೋಽರ್ಧರ್ಚಃ ಶೇಷೋ ವರುಣದೈವತಃ |
ತ್ವಮಾಗ್ನೇಯೋಽಥವಾ ಸೂಕ್ತಮುತ್ತರಂ ಹವಿಷಾಂ ಸ್ತುತಿಃ || ೯೩ ||
ಪಯಃಪಶ್ವೋಷಧೀನಾಂ ಚ ತಥಾರೂಪಂ ಹಿ ದೃಶ್ಯತೇ |
ಉದಿತ್ಯಾಶ್ವಿನಮಾಗ್ನೇಯೇ ಪರೇ ಸೂಕ್ತೇ ವಿಶೋವಿಶಃ || ೯೪ ||
ಋಗ್ಭ್ಯಾಮಹಮಿತಿ ದ್ವಾಭ್ಯಾಂ ಸ್ತೌತ್ಯಾತ್ಮಾನಮೃಷಿಃ ಸ್ವಯಂ |
ಆತ್ಮಾನಮಾತ್ಮನಾ ಸ್ತುತ್ವಾ ಸ್ತೌತಿ ದಾನಂ ಶ್ರುತರ್ವಣಃ || ೯೫ ||

92-93. ಈ ೬೮ ನೇ ಸೂಕ್ತದ ಐದು ಋಕ್ಕುಗಳಲ್ಲಿ (೧೫-೧೯) ಋಕ್ಷ ಮತ್ತು ಅಶ್ವಮೇಧ ಎಂಬ ರಾಜರ ದಾನದ ಪ್ರಶಂಸೆಯು ಉಕ್ತವಾಗಿರುವುದು. ೬೯ ನೇ ಸೂಕ್ತದ **ಅಪಾದಿಂದ್ರಃ** ಎಂದು ಮೊದಲಾಗುವ ೨ ಋಕ್ಕುಗಳಲ್ಲಿ (೧೧-೧೨) ಮೊದಲನೆಯದಾದ ೧೧ ನೇ ಋಕ್ಕಿನ ಪೂರ್ವಾರ್ಧದಲ್ಲಿ ಇಂದ್ರ, ಅಗ್ನಿ ಮತ್ತು ವಿಶ್ವೇದೇವತೆಗಳ ಸ್ತುತಿ ಇರುವುದು. ಉತ್ತರಾರ್ಧದಲ್ಲಿ ವರುಣನ ಸ್ತುತಿ ಇರುವುದು. **ತ್ವಂ ನೋ ಅಗ್ನೇ** ಎಂದು ಮೊದಲಾಗುವ ಎರಡು ಸೂಕ್ತಗಳಿಗೆ (೭೧-೭೨) ಅಗ್ನಿಯು ದೇವತೆಯು.. ಅಥವಾ ಎರಡನೇ ೭೨ ನೇ ಸೂಕ್ತದಲ್ಲಿ ಹವಿಸ್ಸನ್ನೂ,

94. ಹಾಲನ್ನೂ, ಗೋವುಗಳನ್ನೂ, ಓಷಧಿಗಳನ್ನೂ (ಲತಾದಿಗಳನ್ನೂ) ಸ್ತುತಿಸಿರುವುದು ಆ ಸೂಕ್ತದ ಋಕ್ಕುಗಳಲ್ಲಿರುವ ಲಕ್ಷಣಾದಿಗಳಿಂದ ಕಂಡುಬರುತ್ತದೆ. **ಉದೀರಾಥಾಂ** ಎಂಬ ೭೩ ನೇ ಸೂಕ್ತದಲ್ಲಿ ಅಶ್ವಿನೀದೇವತೆಗಳನ್ನು ಸ್ತುತಿಸಲಾಗಿದೆ. **ವಿಶೋವಿಶೋ ವಃ** ಎಂದು ಪ್ರಾರಂಭವಾಗುವ ಮುಂದಿನ ಎರಡು ಸೂಕ್ತಗಳಲ್ಲಿ (೭೪-೭೫) ಅಗ್ನಿಯನ್ನು ಸ್ತುತಿಸಲಾಗಿದೆ.

95. ೭೪ ನೇ ಸೂಕ್ತದ **ಅಹಂ ಹುವಾನ** ಎಂದು ಮೊದಲಾಗುವ ೨ ಋಕ್ಕುಗಳಲ್ಲಿ (೧೩-೧೪) ಋಷಿಯು ತನ್ನನ್ನೇ ಪ್ರಶಂಸೆಮಾಡಿಕೊಂಡಿದ್ದಾನೆ. ತನ್ನನ್ನು ಪ್ರಶಂಸೆಮಾಡಿಕೊಂಡನಂತರ ಶ್ರುತರ್ವಾ ಎಂಬ ರಾಜನು ತನಗೆ ಕೊಟ್ಟ ದಾನವನ್ನು ಪ್ರಶಂಸೆಮಾಡಿದ್ದಾನೆ.

---

92-93. The five following (stanzas) in this hymn (ಅತ್ರ) are (in) praise of the gifts of Rksa and Asvamedha (viii. 68. 15-19). The first hemistich (11) of the couplet 'He has drunk' (ಅಪಾತ್ : viii. 69. 11-12) is (in) praise of Indra, Agni, and the (All-gods); the rest (11-12) has Varuna as its divinity. 'you' (ತ್ವಂ : viii. 71-72) are two (hymns) addressed to Agni; or the latter hymn (72) is (in) praise of oblations,

94. and of milk, cows, and plants; for it evidently (ದೃಶ್ಯತೇ) has this characser. 'Up' (ಉತ್ : viii. 73) is addressed to the Asvins. The two following hymns, 'Of every house' (ವಿಶೋವಿಶಃ : viii. 74-75), are addressed to Agni.

95. With the two strnzas 'I' (ಅಹಂ : viii. 74. 13-14) the seer praises himself.

Having praised himself, he praises the gift of Srutarvan,

ಆತ್ಮಾದಾನಾಭಿಸಂಬಂಧಾತ್ಪರುಷ್ಣೀಂ ಚ ಮಹಾನದೀಂ ।
ಪರಯಾ ಪರುಷ್ಣೀಮಿಂದ್ರಂ ತ್ರಿಭಿಃ ಸೂಕ್ತೈರಿಮಂ ನ್ವಿತಿ ॥ ೯೬ ॥
ಅಯಂ ಕೃತ್ನುರಿದಂ ಸೌಮ್ಯಂ ತ್ರೀಣ್ಯೈಂದ್ರಾಣಿ ಪರಾಣ್ಯತಃ ।
ನಹೀತಿ ತೇಷಾಂ ಪ್ರಥಮೇ ವೈಶ್ವದೇವ್ಯೃಗವೀವೃಧತ್ ॥ ೯೭ ॥
ದೇವಾನಾಮಿತಿ ದೇವಾನಾಂ ಪ್ರೇಷ್ಠಮಾಗ್ನೇಯಮುತ್ತರಂ ।
ತ್ರೀಣ್ಯಾಶ್ವಿನಾನ್ಯಾ ಮ ಇತಿ ಐಂದ್ರಾಣಿ ತಮಿತೀತಿ ಚ ॥ ೯೮ ॥

## ೭೬-೯೦ ನೇ ಸೂಕ್ತಗಳ ದೇವತೆಗಳು

96. ಶ್ರುತರ್ವಾ ಎಂಬ ರಾಜನು ತನಗೆ ಕೊಟ್ಟ ದಾನದ ಪ್ರಶಂಸೆಮಾಡುವ ಸಮಯದಲ್ಲಿಯೇ ಮಹಾನದಿಯಾದ ಪರುಷ್ಣೀ ಎಂಬ ನದಿಯನ್ನೂ ೧೫ ನೇ ಋಕ್ಕಿನಲ್ಲಿ ಋಷಿಯು ಸ್ತುತಿಸಿದಾನೆ. ಹಾಗೆಯೇ **ಇಮಂ ನು** ಎಂದು ಮೊದಲಾಗುವ ೩ ಸೂಕ್ತಗಳಲ್ಲಿ (೭೬-೭೮) ಇಂದ್ರನನ್ನು ಸ್ತುತಿಸಿದಾನೆ.

97. **ಅಯಂ ಕೃತ್ನುಃ** ಎಂಬ ೭೯ ನೇ ಸೂಕ್ತಕ್ಕೆ ಸೋಮನು ದೇವತೆಯು. **ನಹ್ಯಂಗನ್ಯಂ** ಎಂದು ಪ್ರಾರಂಭವಾಗುವ ಮುಂದಿನ ಮೂರು ಸೂಕ್ತಗಳಿಗೆ ಇಂದ್ರನು ದೇವತೆಯು. ಈ ಸೂಕ್ತಗಳಲ್ಲಿ ಮೊದಲನೆಯದಾದ ೮೦ ನೇ ಸೂಕ್ತದ **ಅವೀವೃಧತ್** ಎಂಬ ೧೦ ನೇ ಋಕ್ಕಿನಲ್ಲಿ ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ.

98. **ದೇವಾನಾಂ** ಎಂಬ ೮೩ ನೇ ಸೂಕ್ತಕ್ಕೆ ವಿಶ್ವೇದೇವತೆಗಳೂ, ಮುಂದಿನ **ಪ್ರೇಷ್ಠಂ** ಎಂಬ ೮೪ ನೇ ಸೂಕ್ತಕ್ಕೆ ಅಗ್ನಿಯೂ **ಆ ಮೇ** ಎಂದು ಮೊದಲಾಗುವ ಮುಂದಿನ ೩ ಸೂಕ್ತಗಳಿಗೆ (೮೫-೮೭) ಅಶ್ವಿನೀದೇವತೆಗಳೂ **ತಂ ವಃ** ಎಂದು ಮೊದಲಾಗುವ ಮುಂದಿನ ೩ ಸೂಕ್ತಗಳಿಗೆ (೮೮-೯೦) ಇಂದ್ರನೂ ದೇವತೆಗಳು.

## 20. Deities of RV. viii. 76-90

96. and the great river Parusni, in connexion with what he ha received (ಆದಾನ).

With the following (stanza) he praises the ಪರುಷ್ಣೀ (viii. 74-15); Indra with the three hymns, 'Now this' (ಇಮಂ ನು : viii. 76-78).

97. 'This active' (ಅಯಂ ಕೃತ್ನುಃ : viii. 79) is addressed to Soma. The three following this (beginning) 'Truly not' (ನಹಿ : viii. 80-82) are addressed to Indra. In the first of these (80) the stanza 'He has exalted' (ಅವೀವೃಧತ್ : 10) is addressed to the All-gods.

98. 'Of the gods' (ದೇವಾನಾಂ : viii. 83) is to the Gods; the next, 'The dearest' (ಪ್ರೇಷ್ಠಂ : viii. 84), is addressed to Agni. 'Hither to my' (ಆ ಮೇ : viii. 85-87) are three addressed to the Asvins, and 'Him' (ತಂ : viii. 88-90) are similarly (ಇತಿ) (three) addressed to Indra.

ಅಪಾಲಾತ್ರಿಸುತಾ ತ್ವಾಸೀತ್ಕನ್ಯಾ ತ್ವಗ್ದೋಷಿಣೀ ಪುರಾ ।
ತಾಮಿಂದ್ರಶ್ಚಕಮೇ ದೃಷ್ಟ್ವಾ ವಿಜನೇ ಪಿತುರಾಶ್ರಮೇ ॥ ೯೯ ॥
ತಪಸಾ ಬುಬುಧೇ ಸಾ ತು ಸರ್ವಮಿಂದ್ರಚಿಕೀರ್ಷಿತಂ ।
ಉದಕುಂಭಂ ಸಮಾದಾಯ ಅಪಾಮರ್ಥೇ ಜಗಾಮ ಸಾ ॥ ೧೦೦ ॥
ದೃಷ್ಟ್ವಾ ಸೋಮಮಪಾಮಂತೇ ತುಷ್ಟಾವರ್ಚಾ ವನೇ ತು ತಂ ।
ಕನ್ಯಾ ವಾರಿತಿ ಚೈತಸ್ಯಾಮೇಷೋಽರ್ಥಃ ಕಥಿತಸ್ತತಃ ॥ ೧೦೧ ॥
ಸಾ ಸುಷಾವ ಮುಖೇ ಸೋಮಂ [ಸುತ್ವೇಂದ್ರಂ ಚಾಜುಹಾವ ತಂ ।
ಅಸೌ ಯ ಏಷೀತ್ಯನಯಾ ] ಪಪಾವಿಂದ್ರಶ್ಚ ತನ್ಮುಖಾತ್ ॥ ೧೦೨ ॥

**ಅಪಾಲಾ ಎಂಬ ಸ್ತ್ರೀಯ ವೃತ್ತಾಂತ**

99. ಪೂರ್ವದಲ್ಲಿ ಅತ್ರಿಋಷಿಗೆ **ಅಪಾಲಾ** ಎಂಬ ಹೆಸರಿನ ಕನ್ಯೆ (ಪುತ್ರಿ) ಯೋರ್ವಳಿದ್ದಳು. ಅವಳು ಚರ್ಮರೋಗದಿಂದ (ತೊನ್ನು) ನರಳುತ್ತಿದ್ದಳು. ಆ ಕನ್ಯೆಯು ತನ್ನ ತಂದೆಯ ಜನರಹಿತವಾದ ಆಶ್ರಮದಲ್ಲಿ ಒಬ್ಬಳೇ ಇದ್ದಾಗ ಅವಳನ್ನು ನೋಡಿ ಇಂದ್ರನು ಮೋಹಿಸಿದನು.

100. ಈ ಕನ್ಯೆಯು ತನ್ನ ತಪಸ್ಸಾಮರ್ಥ್ಯದಿಂದ ಇಂದ್ರನ ಮನೋಗತವನ್ನೂ, ಉದ್ದೇಶವನ್ನೂ ತಿಳಿದು, ನೀರು ತರುವುದಕ್ಕಾಗಿ ಪಾತ್ರೆಯನ್ನು ತೆಗೆದುಕೊಂಡು ನದಿಯ ಸಮೀಪಕ್ಕೆ ಹೋದಳು.

101. ವನದಲ್ಲಿದ್ದ ನೀರಿನ ಅಂಚಿನಲ್ಲಿ ಸೋಮಲತೆಗಳು ಬೆಳೆದಿದ್ದವು. ಅದನ್ನು ನೋಡಿ ೯೧ ಸೂಕ್ತದ **ಕನ್ಯಾ** ಎಂಬ ಮೊದಲನೆಯ ಋಕ್ಕಿನಿಂದ ಇಂದ್ರನನ್ನು ಸ್ತೋತ್ರಮಾಡಿದಳು. ಈ ವಿಷಯವನ್ನೇ ಆ ಋಕ್ಕಿನಲ್ಲಿ ಹೇಳಲಾಗಿದೆ.

102. (ಆ ಸೋಮಲತೆಗಳನ್ನು ಜಜ್ಜಿ ರಸವನ್ನು ಹಿಂಡಲು ಅಲ್ಲಿ ಯಾವ ಸಾಧನವೂ ಇಲ್ಲದ್ದರಿಂದ) ಆ ಕನ್ಯೆಯು ಆ ಲತೆಗಳನ್ನು ತನ್ನ ಬಾಯಿಯಲ್ಲಿಯೇ ಇಟ್ಟುಕೊಂಡು ಹಲ್ಲುಗಳಿಂದ ಅಗಿಯುತ್ತಾ ಸೋಮರಸವನ್ನು ಸಿದ್ಧಮಾಡಿ **ಅಸೌ ಯ ಏಷಿ** ಎಂಬ ೨ ನೇ ಋಕ್ಕಿನಿಂದ ಇಂದ್ರನನ್ನು ಪ್ರಾರ್ಥಿಸಿ ಕರೆದಳು. ಇಂದ್ರನು ಅಲ್ಲಿಗೆ ಬಂದು ಅವಳ ಬಾಯಿಯಲ್ಲಿದ್ದ ಸೋಮರಸವನ್ನು ಹಾಗೆಯೇ ಪಾನಮಾಡಿದನು.

## 21. Story of Apala

99. There was once a girl Apala, daughter of Atri, who suffered from skin-disease. With her Indra fell in love, having seen her in the lonely hermitage of her father.

100. Now by penance she became aware of all Indra's intentions. Taking a water-pot she went to fetch water.

101. Seeing Soma at the edge of the water, she praised him with a a stanza in the forest. This matter is related in thc (stanza) 'A maiden to the water' (ಕನ್ಯಾ ವಾಃ : viii. 91-1).

102. She pressed Soma in her mouth;

and having pressed it she invoked Indra with the (stanza), 'You that goes' (ಅಸೌ ಯ ಏಷಿ : viii. 91-2);

and Indra drank it from her mouth.

ಅಪೂಪಾಂಶ್ಚೈವ ಸಕ್ತೂಂಶ್ಚ ಭಕ್ಷಯಿತ್ವಾ ಸ ತದ್ಗೃಹಾತ್ ।
ಋಗ್ಭಿಸ್ತುಷ್ಟಾವ ಸಾ ಚೈನಂ ಜಗಾದೈನಂ ತೃಚೇನ ತು ॥ ೧೦೩ ॥
ಸುಲೋಮಾಮನವದ್ಯಾಂಗೀಂ ಕುರು ಮಾಂ ಶಕ್ರ ಸುತ್ವಚಂ ।
ತಸ್ಯಾಸ್ತದ್ವಚನಂ ಶ್ರುತ್ವಾ ಪ್ರೀತಸ್ತೇನ ಪುರಂದರಃ ॥ ೧೦೪ ॥
ರಥಛಿದ್ರೇಣ ತಾಮಿಂದ್ರಃ ಶಕಟಸ್ಯ ಯುಗಸ್ಯ ಚ ।
ಪ್ರಕ್ಷಿಪ್ಯ ನಿಶ್ಚಕರ್ಷ ತ್ರಿಃ ಸುತ್ವಕ್ ಸಾ ತು ತತೋಽಭವತ್ ॥ ೧೦೫ ॥
ತಸ್ಯಾಸ್ತ್ವಗಪಹತಾ ಯಾ ಪೂರ್ವಾ ಸಾ ಶಲ್ಯಕೋಽಭವತ್ ।
ಉತ್ತರಾ ತ್ವಭವದ್ಗೋಧಾ ಕೃಕಲಾಸಸ್ತ್ವಗುತ್ತಮಾ ॥ ೧೦೬ ॥

103. ಅನಂತರ ಆ ಕನ್ಯೆಯು ಇಂದ್ರನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಅಪೂಪಗಳನ್ನೂ, ಭಕ್ಷ್ಯಗಳನ್ನೂ ಅವನಿಗೆ ಸಮರ್ಪಿಸಿದಳು. ಇಂದ್ರನು ಅವುಗಳನ್ನು ತಿಂದಮೇಲೆ ಆ ಕನ್ಯೆಯು **ಕುವಿಚ್ಛಕತ್** ಎಂದು ಮೊದಲಾಗುವ ೩ ಋಕ್ಕುಗಳಿಂದ (೪-೬) ಇಂದ್ರನನ್ನು ಸ್ತುತಿಸಿದಳು.

104. ಎಲೈ ಇಂದ್ರನೇ, ನನ್ನ ಶಿರಸ್ಸಿನಲ್ಲಿ ಸೊಂಪಾಗಿ ಕೂದಲು ಬೆಳೆಯುವಂತೆಯೂ, ನನ್ನ ಹಸ್ತಾದ್ಯವಯವಗಳು ಪುಷ್ಟವಾಗಿಯೂ, ಸುಂದರವಾಗಿಯೂ, ಆಗುವಂತೆಯೂ, ನನ್ನ ಚರ್ಮವು ರೋಗರಹಿತವಾಗಿ ಸುಂದರವಾಗುವಂತೆಯೂ ಮಾಡು ಎಂದು ಪ್ರಾರ್ಥಿಸಲು, ಇಂದ್ರನು ಅವಳ ಮಾತನ್ನು ಕೇಳಿ ಸಂತುಷ್ಟನಾಗಿ,

105. ಆ ಕನ್ಯೆಯನ್ನು ರಥಚಕ್ರದ ಸಂದಿಗಳಲ್ಲಿಯೂ ಗಾಡಿಯ ಕೆಳಗೂ ಮೂರಾವರ್ತಿ ತೂರುವಂತೆ ಮಾಡಿ ಈಚೆಗೆ ಎಳೆದನು. ಅದರಿಂದ ಅವಳ ಚರ್ಮವು ಚೆನ್ನಾಗಿಯೂ ಸುಂದರವಾಗಿ ಕಾಣುವಂತೆಯೂ ಆಯಿತು.

106. ಇಂದ್ರನು ಆ ಕನ್ಯೆಯ ಶರೀರವನ್ನು ರಥಚಕ್ರದಲ್ಲಿ ಮೂರಾವರ್ತಿ ತೂರಿಸಿ ಎಳೆದಾಗ ಮೊದಲಾವರ್ತಿ ಅವಳ ರೋಗಗ್ರಸ್ತವಾದ ಚರ್ಮವು ಕಳಚಿಬಿದ್ದು ಅದು ಮುಳ್ಳುಹಂದಿಯಾಗಿ ಪರಿವರ್ತಿತವಾಯಿತು. ಎರಡನೆಯಸಲ ಬಿದ್ದ ಚರ್ಮವು ಮೊಸಳೆಯಾಗಿಯೂ, ಮೂರನೆಯಸಲದ ಚರ್ಮವು ಕೃಕಲಾಸಃ ಎಂಬ ಒಂದುವಿಧ ಹಲ್ಲಿಯಾಗಿಯೂ ಆಯಿತು.

---

103. after he had eaten cakes and meal from her house. And she praised him with stanzas, but with a triplet (viii. 91-4-6) she addressed him (saying),

### 22. Story of Apala (concluded). Deities of RV. viii. 92-93

104. 'Make me, O Sakra, to have abundant hair, (and) to be faultless-limbed, (and) fair-skinned.'

Hearing this speech of hers, the Fort-destroyer (was) pleased with it.

105. Indra passing (ಪ್ರಕ್ಷಿಪ್ಯ) her through the carriage aperture (between the body) of the car and the yoke, drew her forth three times. Then she became fair-skinned.

106. Her first skin which was cast off became a porcupine (ಶಲ್ಯಕ), but the next became an alligator (ಗೋಧಾ), and the last a chamelon (ಕೃಕಲಾಸ)

ಇತಿಹಾಸಮಿದಂ ಸೂಕ್ತಮಾಹತುರ್ಯಾಸ್ಕಭಾಗುರೀ |
ಕನ್ಯೇತಿ ಶೌನಕಸ್ತ್ವೈಂದ್ರಂ ಪಾಂತಮಿತ್ಯುತ್ತರೇ ಚ ಯೇ || ೧೦೭ ||
ಉತ್ತಮಾ ತ್ವಾರ್ಭವೀ ಪ್ರೋಕ್ತಾ ಉತ್ತರಸ್ಯೈತರೇಯಕೇ |
ಛಾಂದೋಮಿಕೇ ತೃತೀಯೇ ತದಾರ್ಭವಂ ಶಸ್ಯತೇ ಯತಃ || ೧೦೮ ||
ಮಾರುತಂ ಗೌಃ ಪರಂ ಸೂಕ್ತಮಾ ತ್ವೈಂದ್ರಾಣಿ ಪರಾಣಿ ಷಟ್ |
ಸೂಕ್ತೇ ದ್ವಿತೀಯ ಏತೇಷಾಮಿತಿಹಾಸಂ ಪ್ರಚಕ್ಷತೇ |
ಅಪಕ್ರಮ್ಯ ತು ದೇವೇಭ್ಯಃ ಸೋಮೋ ವೃತ್ರಭಯಾರ್ದಿತಃ || ೧೦೯ ||

107. ಈ ಸೂಕ್ತದಲ್ಲಿ ಒಂದು ಇತಿಹಾಸವನ್ನು ಹೇಳಲಾಗಿದೆಯೆಂದು ಯಾಸ್ಕರೂ, ಭಾಗುರೀ ಎಂಬುವರೂ ಹೇಳುವರು. ಆದರೆ **ಕನ್ಯಾ** ಎಂಬ ಈ ಸೂಕ್ತದಲ್ಲಿಯೂ (೯೧ ನೇ ಸೂಕ್ತ) **ಪಾಂತಮಾ** ಎಂದು ಮೊದಲಾಗುವ ಮುಂದಿನ ಎರಡು ಸೂಕ್ತಗಳಲ್ಲಿಯೂ (೯೨-೯೩) ಇಂದ್ರನು ಸ್ತುತನಾಗಿರುವನು,ಎಂದು ಶೌನಕರು ಹೇಳುವರು.

108. ಆದರೆ ೯೩ ನೇ ಸೂಕ್ತದ ಕೊನೆಯ ಋಕ್ಕಿನಲ್ಲಿ (೩೪) ಋಭುಗಳು ಸ್ತುತರಾಗಿರುವರೆಂದು ಐತರೇಯಬ್ರಾಹ್ಮಣದಲ್ಲಿ ಹೇಳಿರುವುದು. ಏಕೆಂದರೆ, ತೃತೀಯಛಂದೋಮದಲ್ಲಿ ಈ ಋಕ್ಕನ್ನು ಋಭುಗಳ ಪರವಾಗಿ ಪಠಿಸುವ ಮಂತ್ರಗಳಲ್ಲಿ ಉಪಯೋಗಿಸಲಾಗಿದೆ.

**ಸೋಮನು ದೇವತೆಗಳನ್ನು ಬಿಟ್ಟು ಓಡಿಹೋದ ವಿಚಾರ**

109 **ಗೌರ್ಧಯತಿ**, ಎಂಬ ಮುಂದಿನ ಸೂಕ್ತಕ್ಕೆ (೯೪) ಮರುತ್ತುಗಳು ದೇವತೆಯು ; **ಆ ತ್ವಾ ಗಿರಃ** ಎಂದು ಪ್ರಾರಂಭವಾಗುವ ಮುಂದಿನ ಆರು ಸೂಕ್ತಗಳಿಗೆ (೯೫-೧೦೦) ಇಂದ್ರನು ದೇವತೆಯು.

ಇಂದ್ರದೇವತಾಕವಾದ ಈ ೬ ಸೂಕ್ತಗಳಲ್ಲಿ ಎರಡನೆಯದಾದ ೯೬ ನೇ ಸೂಕ್ತದಲ್ಲಿ ಒಂದು ಇತಿಹಾಸವು ಉಕ್ತವಾಗಿದೆ. ಒಂದಾನೊಂದು ಕಾಲದಲ್ಲಿ ಸೋಮದೇವತೆಯು ವೃತ್ರಾಸುರನ ಭಯದಿಂದ ದೇವತೆಗಳನ್ನು ತ್ಯಜಿಸಿ,

---

107. Yaska and Bhaguri call this hymn a story (ಇತಿಹಾಸ), while Saunaka calls 'A maiden' (ಕನ್ಯಾ : viii. 91) a (hymn) addressed to Indra, as well as the two which come next (beginning) 'As one who drinks' (ಪಾಂತಂ viii. 92-93).

108. But the last (stanza) of the latter (viii. 93-34) is pronounced in the (ಐತರೇಯಬ್ರಾಹ್ಮಣ) to be addressed to the Rbhus ; for on the third Chandoma (day)this hymn is chanted (ಶಸ್ಯತೇ) as one addressed to the Rbhus.

**23. Story of Soma's flight from the gods.**

109. The following hymn, 'The cow' (ಗೌಃ : viii. 94), is addressed to the Maruts ; the following six, 'Hither to you' (ಆ ತ್ವಾ : viii. 95-100), are addressed to Indra.

In the second hymn of these (96) they say there is a story (ಇತಿಹಾಸ).

Soma oppressed by fear of Vrtra, fled from the gods ;

ನದೀಮಂಶುಮತೀಂ ನಾಮ್ನಾ ಅಭ್ಯತಿಷ್ಠತ್ಕುರೂನ್ಪ್ರತಿ ।
ತಂ ಬೃಹಸ್ಪತಿನೈಕೇನ ಅಭ್ಯಯಾದ್ವೃತ್ರಹಾ ಸಹ ॥ ೧೧೦ ॥

ಯೋತ್ಸ್ಯಮಾನಃ ಸುಸಂಹೃಷ್ಟೈರ್ಮರುದ್ಭಿರ್ವಿವಿಧಾಯುಧೈಃ ।
ದೃಷ್ಟ್ವಾವ ತಾನಾಯತಃ ಸೋಮಃ ಸ್ವಬಲೇನ ವ್ಯವಸ್ಥಿತಃ ॥ ೧೧೧ ॥

ಮನ್ಯಾನೋ ವೃತ್ರಮಾಯಾಂತಂ ಜಿಘಾಂಸುಮರಿಸೇನಯಾ ।
ವ್ಯವಸ್ಥಿತಂ ಧನುಷ್ಮಂತಂ ತಮುವಾಚ ಬೃಹಸ್ಪತಿಃ ॥ ೧೧೨ ॥

ಮರುತ್ಪತಿರಯಂ ಸೋಮ ಏಹಿ ದೇವಾನ್ಪುನರ್ವಿಭೋ ।
ಶ್ರುತ್ವಾ ದೇವಗುರೋರ್ವಾಕ್ಯಮನರ್ಥಂ ವೃತ್ರಶಂಕಯಾ ॥ ೧೧೩ ॥

110. ಕುರುದೇಶದ **ಅಂಶುಮತೀ** ಎಂಬ ನದಿಯ ಬಳಿಗೆ ಓಡಿಹೋದನು. ಆಗ ವೃತ್ರಸಂಹಾರಕನಾದ ಬೃಹಸ್ಪತಿಯು ಮಾತ್ರ ಅವನನ್ನನುಸರಿಸಿ ಹಿಂದೆಯೇ ಹೋದನು.

111. ಮತ್ತು ಸಂತೋಷಚಿತ್ತರಾದ ಮರುದ್ದೇವತೆಗಳಿಂದ ಸಹಿತನಾದ ಬೃಹಸ್ಪತಿಯು ವೃತ್ರನೊಡನೆ ಯುದ್ಧಮಾಡಬೇಕೆಂಬ ಅಭಿಲಾಷೆಯಿಂದಲೇ ಅಲ್ಲಿಗೆ ಬರುತ್ತಿದ್ದನು. ಈರೀತಿ ಸೈನ್ಯಸಮೇತನಾಗಿ (ಮರುದ್ದೇವತೆಗಳೊಡನೆ ಕೂಡಿ) ತಾನಿರುವ ಸ್ಥಳಕ್ಕೇ,

112. ಬರುತ್ತಿರುವ ಬೃಹಸ್ಪತಿಯನ್ನು ಸೋಮನು ನೋಡಿ, ತನ್ನನ್ನೇ ಕೊಲ್ಲಲು ವೃತ್ರನೇ ಸೈನ್ಯಸಮೇತನಾಗಿ ಬರುತ್ತಿರುವನೆಂದು ತಿಳಿದು, ತನ್ನ ಧನುಸ್ಸನ್ನು ಸಜ್ಜುಗೊಳಿಸಿ ಯುದ್ಧಕ್ಕೆಸಿದ್ಧನಾದನು. ಆಗ ಆ ಬೃಹಸ್ಪತಿಯು ಯುದ್ಧಕೆ ಸಿದ್ಧನಾಗುತ್ತಿರುವ ಸೋಮನನ್ನು ಕುರಿತು ಇಂತೆಂದನು.

113. ಎಲೈ ಸೋಮನೇ, (ಹೆದರಬೇಡ) ಈಗ ನನ್ನೊಡನಿರುವ ಈತನು ಮರತ್ಪತಿಯಾದ ಇಂದ್ರನು ಇನ್ನು ಯಾರೂ ಅಲ್ಲ. ಆದ್ದರಿಂದ ಎಲೈ ಪ್ರಭುವೇ, ದೇವತೆಗಳ ಬಳಿಗೆ ಹೋಗೋಣ, ನಡೆ ಎಂದನು. ಸೋಮನು ಬೃಹಸ್ಪತಿಯು ಹೇಳಿದ ಮಾತನ್ನು ಕೇಳಿದರೂ ಅದನ್ನು ನಂಬಲಾರದೆ ಇವನೇ ವೃತ್ರನಿರಬಹುದೆಂದು ಶಂಕಿಸುತ್ತಾ,

110. and he betook himself to a river named Amsumasti in (the country of) the Kurus. Him approached, with Brhaspati only, the slayer of Vrtra.

111. being about to fight in company with the greatly rejoicing Maruts, armed with various weapons. Soma, seeing them approaching, stood in array with his forces,

112. thinking Vrtra was approaching with a hostile host, intent on slaying (him). To him arrayed and ready with his bow, Brhaspati spoke:

113. 'This is the Lord of the Maruts, O Soma; come back to the gods, O Lord.'

Hearing the speech of the preceptor of the gods, which was unavailing be cause he believed it was Vrtra,

ಸೋಽಬ್ರವೀನ್ನೇತಿ ತಂ ಶಕ್ರಃ ಸ್ವರ್ಗ ಏವ ಬಲಾದ್ಬಲೀ ।
ಇಯಾಯ ದೇವಾನಾದಾಯ ತಂ ಪಪುರ್ವಿಧಿವತ್ಸುರಾಃ ॥ ೧೧೪ ॥
ಜಘ್ನುಃ ಪೀತ್ವಾ ಚ ದೈತ್ಯಾನಾಂ ಸಮರೇ ನವತೀರ್ನವ ।
ತದೇತದಪ್ಯವೇತ್ಯಸ್ಮಿಂಸ್ತ್ರ್ಯೃಚೇ ಸರ್ವಂ ನಿಗದ್ಯತೇ ॥ ೧೧೫ ॥
ಇಂದ್ರಂ ಚ ಮರುತಶ್ಚೈವ ತಥೈವ ಚ ಬೃಹಸ್ಪತಿಂ ।
ತೃಚಸ್ಯ ದೇವತಾ ಹ್ಯೇತಾ ಇಂದ್ರಮೇವಾಹ ಶೌನಕಃ ॥ ೧೧೬ ॥
ಐಂದ್ರಾಬಾರ್ಹಸ್ಪತ್ಯ ಉಕ್ತೋ ಬ್ರಾಹ್ಮಣೇ ತ್ವೈತರೇಯಕೇ ।
ತೃಚೇನೇಂದ್ರಮಪಶ್ಯಂಸ್ತಂ ನೇಮೋಽಯಮಿತಿ ಭಾರ್ಗವಃ ॥ ೧೧೭ ॥

114. ತಾನು ಬರುವುದಿಲ್ಲವೆಂದು ಹೇಳಿದನು. ಆದ್ದರಿಂದ ಅತ್ಯಂತ ಬಲಶಾಲಿಯಾದ ಇಂದ್ರನು ಆ ಸೋಮನನ್ನು ಬಲಾತ್ಕಾರದಿಂದ ಸ್ವರ್ಗಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಇತರ ದೇವತೆಗಳನ್ನು ಕರೆದು ಅವರೊಡನೆ ವಿಧಿವತ್ತಾಗಿ ಸೋಮವನ್ನು ಪಾನಮಾಡಿದನು.

115. ಸೋಮಪಾನಮಾಡಿದನಂತರ ದೇವತೆಗಳು ದೈತ್ಯರೊಡನೆ ಯುದ್ಧಮಾಡಿ ೮೧೦ ಮಂದಿ ದೈತ್ಯರನ್ನು ಸಂಹಾರಮಾಡಿದರು. ಈ ವಿಷಯವನ್ನೆಲ್ಲಾ ೯೬ನೇ ಸೂಕ್ತದ **ಅವ ದ್ರಪ್ಸಃ** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿ (೧೩-೧೫) ಹೇಳಲಾಗಿದೆ.

116. ಋಷಿಯು ಈ ಮೂರು ಋಕ್ಕುಗಳಲ್ಲಿ (೧೩-೧೫) ಇಂದ್ರನನ್ನೂ, ಮರುದ್ದೇವತೆಗಳನ್ನೂ, ಬೃಹಸ್ಪತಿಯನ್ನೂ ಸ್ತುತಿಸಿರುವನು. ಆದರೆ ಈ ಮೂರು ಋಕ್ಕುಗಳಿಗೆ ಇಂದ್ರನೊಬ್ಬನೇ ದೇವತೆಯೆಂದು ಶೌನಕರು ಹೇಳುವರು.

117. ಆದರೆ ಐತರೇಯಬ್ರಾಹ್ಮಣದಲ್ಲಿ ಮೇಲಿನ ಮೂರು ಋಕ್ಕುಗಳಿಗೆ ಇಂದ್ರ ಮತ್ತು ಬೃಹಸ್ಪತಿಗಳು ದೇವತೆಯೆಂದು ಹೇಳಲಾಗಿದೆ. **ಅಯಂ ತ ಏಮಿ** ಎಂಬ ೧೦೦ನೇ ಸೂಕ್ತದಲ್ಲಿ ಮೊದಲ ಮೂರು ಋಕ್ಕುಗಳಲ್ಲಿ (೧-೩) ಭೃಗುಪುತ್ರನಾದ **ನೇಮಃ** ಎಂಬ ಋಷಿಯು (ಇಂದ್ರನೆಂಬುವನೇ ಇಲ್ಲ. ಹಾಗೆ ಒಂದುವೇಳೆ ಇದ್ದರೆ ಅವನೆಲ್ಲಿದ್ದಾನೆ ಎಂದು ಸಂಶಯಾವಿಷ್ಟನಾಗಿ) ಇಂದ್ರನನ್ನು ಪರೋಕ್ಷವಾಗಿ ಸ್ತುತಿಸಿರುವನು.

## 24. Story of Soma's flight (continued).

114. he replied 'No'. (So) the mighty Sakra, taking him by force, went to the gods in heaven. The celestials (then) drank him in due form.

115. And having drunk (him) they slew in battle nine times ninety demons. All this is related in the triplet 'Down' (ಅವ : viii. 96. 13-15).

116. (The seer praises) Indra, and the Máruts, and also Brhaspati: for these are the deities of the triplet; Saunaka says that Indra alone (is the deity).

117. But in the Aitareya (Brahmana) it (the triplet) is said to be addressed to Indra-Brhaspati.

With the triplet 'Here 'I'' (ಅಯಂ : viii. 100, 1-3) Nema, son of Bhrgu, praised Indra without seeing him.

ತುಷ್ಟಾವೇಂದ್ರೋ ದ್ವ್ಯೃಚೇನಾಯಮಹಂ ಪಶ್ಯ ಚ ಮಾಮೃಷೇ |
ಸ ಹಿ ಸ್ತುವನ್ನೇಮ ಏಕೋ ನೇಂದ್ರೋ ಅಸ್ತೀತಿ ಚಾಬ್ರವೀತ್ || ೧೧೮ ||
ತದಾಕರ್ಣ್ಯೇಂದ್ರ ಆತ್ಮಾನಮೃಗ್ಭ್ಯಾಂ ತುಷ್ಟಾವ ದರ್ಶಯನ್ |
ಋಷಿಸ್ತಂ ದೃಷ್ಟ್ವಾ ಸುಪ್ರೀತೋ ವಿಶ್ವೇತ್ತಾ ತ ಇತಿ ದ್ವ್ಯೃಚೇ || ೧೧೯ ||
ವಿವಿಧಾನಿ ಚ ಕರ್ಮಾಣಿ ದಾನಮೈಂದ್ರಂ ಚ ಶಂಸತಿ |
ಮನೋಜವಾಸ್ತು ಸೌಪರ್ಣೀ ಸಮುದ್ರೇ ವಜ್ರಸಂಸ್ತವಃ || ೧೨೦ ||

118. ಆಗ ಇಂದ್ರನು ಮುಂದಿನ ಎರಡು ಋಕ್ಕುಗಳಲ್ಲಿ (೪-೫) ಋಷಿಯನ್ನು ಕುರಿತು ಎಲೈ ಋಷಿಯೇ, ಇಗೋ, ಇಂದ್ರನಾದ ನಾನು ಇಲ್ಲಿಯೇ ಇರುವೆನು ನೋಡು ಎಂದು ಹೇಳಿದನು. ಏಕೆಂದರೆ ಋಷಿಯು ೩ ನೇ ಋಕ್ಕಿನ ಉತ್ತರಾರ್ಧದಲ್ಲಿ—**ನೇಂದ್ರೋ ಅಸ್ತಿ, ಕ ಈಂ ದದರ್ಶ, ಕಮಭಿಷ್ಟವಾಮ**—ಇಂದ್ರನೆಂಬುವನೇ ಇಲ್ಲ. ಅವನನ್ನು ನೋಡಿರುವವರು ಯಾರು? ನಾವು ಯಾರನ್ನು ಸ್ತುತಿಸೋಣ ಎಂದು ಹೇಳಿರುವುದಕ್ಕೆ ಪ್ರತ್ಯುತ್ತರರೂಪವಾಗಿ—**ಅಯಮಸ್ಮಿ ಜರಿತಃ ಪಶ್ಯ** (೪ ನೇ ಋಕ್ಕು)—ಎಲೈ ಸ್ತೋತೃವೇ, ಇಂದ್ರನೆಂಬುವನು ನಾನೇ, ಇಲ್ಲಿಯೇ ಇದೇನೆ. ನನ್ನನ್ನು ನೋಡು ಎಂದು ಹೇಳಿರುವನು ಎಂದಭಿಪ್ರಾಯವು.

**೧೦೦ ನೇ ಸೂಕ್ತದ ಪ್ರತ್ಯೇಕ ವಿವರಣೆ. ವಿಷ್ಣುವು ಇಂದ್ರನಿಗೆ ಸಹಾಯಮಾಡುವುದು**

119. ಇಂದ್ರನು ಋಷಿಯ ಸಂಶಯಾತ್ಮಕವಾದ ವಾಕ್ಯವನ್ನು ಕೇಳಿ, ತಾನೇ ಋಷಿಯ ಎದುರಿಗೆ ಪ್ರತ್ಯಕ್ಷವಾಗಿ ಬಂದು ಎರಡು ಋಕ್ಕುಗಳಿಂದ (೪-೫) ತನ್ನನ್ನೇ ಪ್ರಶಂಸೆಮಾಡಿಕೊಂಡಿರುವನು. ಋಷಿಯು ತನ್ನ ಎದುರಿಗೆ ಬಂದು ನಿಂತಿರುವ ಆ ಇಂದ್ರನನ್ನು ನೋಡಿ ಬಹಳ ಸಂತೋಷಗೊಂಡು **ವಿಶ್ವೇತ್ತಾ ತೇ** ಎಂದು ಮೊದಲಾಗುವ ಎರಡು ಋಕ್ಕುಗಳಲ್ಲಿ (೬-೭).

120. ಇಂದ್ರನ ನಾನಾವಿಧ ಸಾಹಸಕಾರ್ಯಗಳನ್ನೂ, ಅವನು ಅನುಗ್ರಹಪೂರ್ವಕವಾಗಿ ಕೊಟ್ಟ ದಾನಾದಿಗಳನ್ನೂ ಪ್ರಶಂಸೆಮಾಡಿದನು. **ಮನೋಜವಾ** ಎಂಬ ೮ ನೇ ಋಕ್ಕಿನಲ್ಲಿ **ಸುಪರ್ಣ** ಎಂಬ ಪಕ್ಷಿಯ ಸ್ತುತಿ ಇದೆ. **ಸಮುದ್ರೇ ಅಂತಃ** ಎಂಬ ೯ ನೇ ಋಕ್ಕಿನಲ್ಲಿ ವಜ್ರಾಯುಧದ ಪ್ರಶಂಸೆ ಇದೆ.

---

118. And Indra (then) with a couplet (4, 5) says 'Here I am, behold me, seer.'

For Nema, being alone (ಏಕಃ) while praising (Indra), had also said, 'There is no Indra.'

**25. Details regarding RV. viii. 100. Visnu helps Indra.**

119. Indra, on hearing, that, praised himself with two stanzas (4-5) as he showed himself.

The seer on seeing him was greatly rejoiced, and in the couplet 'All this of you' (ವಿಶ್ವೇತ್ತಾತೇ : viii. 100. 6-7)

120. lauds both the gift of Indra and his various deeds. But (the stanza) 'Swift as thought' (ಮನೋಜವಾಃ : viii. 100-8) is addressed to the Bird (ಸುಪರ್ಣ), while 'In the ocean' (ಸಮುದ್ರೇ : 9) is (in) praise of the Bolt.

ವಾಚಂ ಸರ್ವಗತಾಂ ದೇವೀಂ ಸ್ತೌತಿ ಯದ್ವಾಗಿತಿ ದ್ವ್ಯೃಚೇ ।
ತ್ರೀಂಲ್ಲೋಕಾನಭಿತಪ್ಯೇಮಾನ್ವೃತ್ರಸ್ತಸ್ಥೌ ಸ್ವಯಾ ತ್ವಿಷಾ || ೧೨೧ ||
ತಂ ನಾಶಕದ್ಧಂತುಮಿಂದ್ರೋ ವಿಷ್ಣುಮಭ್ಯೇತ್ಯ ಸೋಽಬ್ರವೀತ್ ।
ವೃತ್ರಂ ಹನಿಷ್ಯೇ ತಿಷ್ಠಸ್ವ ವಿಕ್ರಮ್ಯಾದ್ಯ ಮಮಾಂತಿಕೇ || ೧೨೨ ||
ಉದ್ಯತಸ್ಯೈವ ವಜ್ರಸ್ಯ ದ್ಯೌರ್ದದಾತು ಮಮಾಂತರಂ ।
ತಥೇತಿ ವಿಷ್ಣುಸ್ತಚ್ಚಕ್ರೇ ದ್ಯೌಶ್ಚಾಸ್ಯ ವಿವರಂ ದದೌ || ೧೨೩ ||
ತದೇತದಖಿಲಂ ಪ್ರೋಕ್ತಂ ಸಖೇ ವಿಷ್ಣವಿತಿ ತ್ವೃಚಿ ।
ಮೈತ್ರಾವರುಣ್ಯಃ ಸೂಕ್ತಾದ್ಯಾಶ್ಚತಸ್ರಸ್ತ್ವೃಧಗಿತ್ಯೃಚಃ || ೧೨೪ ||

121. **ಯದ್ವಾಗ್ವದಂತಿ** ಎಂದು ಮೊದಲಾಗುವ ಮುಂದಿನ ಎರಡು ಋಕ್ಕುಗಳಲ್ಲಿ (೧೦-೧೧) ಋಷಿಯು ಸರ್ವವ್ಯಾಪಕವಾದ ವಾಗ್ದೇವತೆಯನ್ನು ಸ್ತುತಿಸಿದ್ದಾನೆ. ಒಂದಾನೊಂದು ಸಮಯದಲ್ಲಿ ವೃತ್ರಾಸುರನು ತನ್ನ ಬಲ ಪರಾಕ್ರಮಗಳಿಂದ ಮದಿಸಿ ಮೆರೆಯುತ್ತಾ ಮೂರು ಲೋಕಗಳನ್ನೂ ಬಾಧಿಸುತ್ತಿದ್ದನು.

122. ಅಂತಹ ಬಲಪರಾಕ್ರಮಗಳಿಂದ ಮೆರೆಯುತ್ತಿರುವ ವೃತ್ರನನ್ನು ಕೊಲ್ಲಲು ಇಂದ್ರನ ಕೈಯಲ್ಲಾಗಲಿಲ್ಲ. ಆದ್ದರಿಂದ ಅವನು ವಿಷ್ಣುವಿನ ಸಮೀಪಕ್ಕೆ ಹೋಗಿ ಇತೆಂದನು—ಎಲೈ ವಿಷ್ಣುವೇ, ನಾನು ವೃತ್ರನನ್ನು ಸಂಹಾರಮಾಡಬೇಕೆಂದಿರುವೆನು. ಆದ್ದರಿಂದ ನೀನು ನನ್ನ ಸಮೀಪದಲ್ಲಿದ್ದುಕೊಂಡು ನನಗೆ ಸಹಾಯಮಾಡಬೇಕು ;

123. ನಾನು ವೃತ್ರನನ್ನು ಕೊಲ್ಲುವುದಕ್ಕಾಗಿ ನನ್ನ ವಜ್ರಾಯುಧವನ್ನು ಮೇಲಕ್ಕೆತ್ತುವಾಗ ಆ ಆಯುಧಕ್ಕೆ **ದ್ಯೌಃ** (ಎಂದರೆ ಅಂತರಿಕ್ಷ ಅಥವಾ ಸ್ವರ್ಗವು) ಸ್ಥಳಾವಕಾಶವನ್ನುಂಟುಮಾಡಿಕೊಡಬೇಕು ಎಂದು ಪ್ರಾರ್ಥಿಸಲು, ವಿಷ್ಣುವು ಹಾಗೆಯೇ ಆಗಲೆಂದನು ದ್ಯುಲೋಕವೂ ಸಹ ಸ್ಥಳಾವಕಾಶವನ್ನು ಮಾಡಿಕೊಟ್ಟಿತು.

124. ಈ ವಿವರವನ್ನೆಲ್ಲಾ ೧೦೦ನೇ ಸೂಕ್ತದ **ಸಖೇ ವಿಷ್ಣೋ** ಎಂಬ ೧೨ನೇ ಋಕ್ಕಿನಲ್ಲಿ ವರ್ಣಿಸಲಾಗಿದೆ. ಮುಂದಿನ ೧೦೧ ನೇ ಸೂಕ್ತದಲ್ಲಿ ಮೊದಲ **ಋಧಗಿತ್ಥಾ** ಎಂದು ಪ್ರಾರಂಭವಾಗುವ ನಾಲ್ಕು ಋಕ್ಕುಗಳಲ್ಲಿ (೧-೪) ಮಿತ್ರಾವರುಣರನ್ನು ಸ್ತುತಿಸಲಾಗಿದೆ.

121 In the couplet 'When Vac' (ಯದ್ವಾಕ್ : 10-11) he (the seer) praises the divine all-pervading Vac.

Having tormented these three worlds Vrtra remained (unassailable) by reason of his fury.

122. Him Indra could not slay: Going to Visnu he said, 'I wish to slay Vrtra ; stride forth to-day and stand at my side.

123. May Dyaus make room (ಅಂತರ) for my outstretched bolt. Saying 'Yes' Visnu did so, and Dyaus gave him an opening (ವಿವರಂ).

### 26. Details regarding the deities of RV. viii. 101.

124. All this is proclaimed in the stanza 'Friend Visnu' (ಸಖೇ ವಿಷ್ಣೋ : viii. 100-12). But the first four stanzas of the hymn (beginning) 'Specially' (ಋಧಕ್ : viii. 101. 1-4) are addressed to Mitra-Varuna.

ಪ್ರೇತಿ ಮಿತ್ರಾಯ ಪಾದಾಶ್ಚ ಅರ್ಯಮ್ಣೋ ವರುಣಸ್ಯ ಚ |
ತ್ರಯಶ್ಚತುರ್ಥಃ ಸರ್ವೇಷಾಮಾದಿತ್ಯಾನಾಮಿತಿ ಸ್ತುತಿಃ || ೧೨೫ ||

ಪರಾ ತ್ವಾದಿತ್ಯದೇವತ್ಯಾ ಆ ಮ ಇತ್ಯಾಶ್ವಿನೋ ದ್ವ್ಯೃಚಃ |
ವಾಯವ್ಯೇ ಸೌರ್ಯೇ ಉಷಸ್ಯಾ ಪ್ರಭಾಂ ವಾ ಚಂದ್ರಸೂರ್ಯಯೋಃ || ೧೨೬ ||

ಪಾವಮಾನೀ ಪ್ರಜಾ ಹೇತಿ ಮಾತೇತ್ಯೃಗ್ಭ್ಯಾಂ ತು ಗೌಃ ಸ್ತುತಾ |
ತ್ವಮಗ್ನೇ ಬೃಹದಾಗ್ನೇಯೇ ಪರೇಽಗ್ನಿಸ್ತ್ವೃಚಿ ಸಂಸ್ತುತಃ || ೧೨೭ ||

### ೧೦೧ ನೇ ಸೂಕ್ತದ ಪ್ರತ್ಯೇಕ ವಿವರಣೆ

125. ಈ ೧೦೧ ನೇ ಸೂಕ್ತದ **ಪ್ರ ಮಿತ್ರಾಯ** ಎಂಬ ೫ ನೇ ಋಕ್ಕಿನ ಮೊದಲ ಮೂರು ಪಾದಗಳಲ್ಲಿ ಮಿತ್ರ, ವರುಣ, ಅರ್ಯಮಾ ಎಂಬ ದೇವತೆಗಳನ್ನೂ, ನಾಲ್ಕನೆಯ ಪಾದದಲ್ಲಿ ಆದಿತ್ಯರೆಲ್ಲರನ್ನೂ ಸ್ತುತಿಸಲಾಗಿದೆ.

126. ಆದರೆ ೬ ನೇ ಋಕ್ಕಿಗೂ ಆದಿತ್ಯರೇ ದೇವತೆಯು ; **ಆ ಮೇ** ಎಂದು ಮೊದಲಾಗುವ ಮುಂದಿನ ಎರಡು ಋಕ್ಕುಗಳಲ್ಲಿ (೭-೮) ಅಶ್ವಿನೀದೇವತೆಗಳು ಸ್ತುತರಾಗಿದಾರೆ. ಮುಂದಿನ ಎರಡು ಋಕ್ಕುಗಳಿಗೆ (೯-೧೦) ವಾಯುವು ದೇವತೆಯು ; ಅದರ ಮುಂದಿನ ಎರಡು ಋಕ್ಕುಗಳಿಗೆ (೧೧-೧೨) ಸೂರ್ಯನೂ, ೧೩ ನೇ ಋಕ್ಕಿಗೆ ಉಷಸ್ಸೂ ದೇವತೆಗಳು. ಅಥವಾ ೧೩ ನೇ ಋಕ್ಕಿಗೆ ಸೂರ್ಯಚಂದ್ರರ ಪ್ರಭೆಯೂ ದೇವತೆಯಾಗಬಹುದು.

127. **ಪ್ರಜಾ ಹ** ಎಂಬ ಋಕ್ಕಿಗೆ (೧೪) ಪವಮಾನನು ದೇವತೆಯು ; ಮುಂದಿನ **ಮಾತಾ ರುದ್ರಾಣಾಂ** ಎಂದು ಮೊದಲಾಗುವ ಎರಡು ಋಕ್ಕುಗಳಲ್ಲಿ (೧೫-೧೬) ಗೋವನ್ನು ಸ್ತುತಿಸಲಾಗಿದೆ. **ತ್ವಮಗ್ನೇ ಬೃಹತ್** ಎಂದು ಮೊದಲಾಗುವ ಮುಂದಿನ ಎರಡು ಸೂಕ್ತಗಳಿಗೆ (೧೦೨-೧೦೩) ಅಗ್ನಿಯು ದೇವತೆಯು ; ಆದರೆ ಮುಂದಿನ ಸೂಕ್ತದ ಒಂದು ಋಕ್ಕಿನಲ್ಲಿ (ಕೊನೆಯ ಋಕ್ಕಿನಲ್ಲಿ ೧೪) ಮಧ್ಯಮಾಗ್ನಿಯು,

---

125. and the three verses of 'Forth' (ಪ್ರ : 5) are to Mitra, Aryaman, and Varuna, the fourth (5) is to all the Adityas: such is (here) the praise.

126. But the following stanza (6) has the Adityas as its deities. 'Hither to me' (ಆ ಮೇ : 7-8) is a couplet addressed to the Asvins; there are (then) two addressed to Vayu (9-10), two to Surya (11-12), one to Usas (13), or (the seer here praises) the light of the sun and moon.

127. 'Generations truly' (ಪ್ರಜಾ ಹ : 14) is addressed to Pavamana, while with the two stanzas 'The mother' (ಮಾತಾ ; 15-16) the cow is praised. 'You, O Agni, great' (ತ್ವಮಗ್ನೇ ಬೃಹತ್ : viii. 102-103) are two hymns addressed to Agni. But in a stanza of the latter (ಪರೇ) is praised Agni,

ಮರುದ್ಭಿಃ ಸಹ ರುದ್ರೈಶ್ಚ ಅಗ್ನೇ ಯಾಹೀತಿ ಮಧ್ಯಮಃ |
ಪ್ರಜಾ ಹೇತ್ಯಪಿ ವಾರ್ಧರ್ಚೇ ಪ್ರಥಮೋಽಗ್ನಿರಿಹೋಚ್ಯತೇ || ೧೨೮ ||
ಪಾದೇ ತೃತೀಯ ಆದಿತ್ಯಸ್ತುರೀಯೇ ಮಧ್ಯಮಃ ಸ್ತುತಃ |
ರಹಸ್ಯೇ ಬ್ರಾಹ್ಮಣೇಽಪ್ಯೇವಂ ವ್ಯಾಖ್ಯಾತಂ ಹ್ಯೈತರೇಯಕೇ || ೧೨೯ ||

ಇತಿ ಅಷ್ಟಮಂ ಮಂಡಲಂ

128. ಮರುದ್ದೇವತೆಗಳೊಡನೆಯೂ, ರುದ್ರರೊಡನೆಯೂ (೧೦೩ ನೇ ಸೂಕ್ತದ ೧೪ ನೇ ಋಕ್ಕಿನಲ್ಲಿ) ಸ್ತುತನಾಗಿದಾನೆ. ಅಥವಾ ೧೦೧ ನೇ ಸೂಕ್ತದ **ಪ್ರಜಾ ಹ** ಎಂಬ ೧೪ ನೇ ಋಕ್ಕಿನ ಪೂರ್ವಾರ್ಧದಲ್ಲಿ ಸ್ತುತನಾಗಿರುವ ಅಗ್ನಿಯೇ ಈ ಋಕ್ಕಿನಲ್ಲಿಯೂ ಎಂದರೆ ೧೦೩ ನೇ ಸೂಕ್ತದ ೧೪ ನೇ ಋಕ್ಕಿನಲ್ಲಿಯೂ ಸ್ತುತನಾಗಿರುವನೆಂದು ತಿಳಿಯಬೇಕು.

129. ೧೦೧ ನೇ ಸೂಕ್ತದ ೧೪ ನೇ ಋಕ್ಕಿನ ಮೂರನೆಯ (ಎರಡನೆಯ ?) ಪಾದದಲ್ಲಿ ಆದಿತ್ಯನನ್ನೂ ಕೊನೆಯ ಪಾದದಲ್ಲಿ ಮಧ್ಯಮಾಗ್ನಿಯನ್ನೂ ಸ್ತುತಿಸಲಾಗಿದೆಯೆಂದು ರಹಸ್ಯಾತ್ಮಕವಾದ ಐತರೇಯಬ್ರಾಹ್ಮಣದಲ್ಲಿ ವಿವರಿಸಲಾಗಿದೆ.

ಇಲ್ಲಿಗೆ ಎಂಟನೆಯ ಮಂಡಲವು ಸಮಾಪ್ತವು.

128. the Middle, together with the Maruts and Rudras, (viz. in) 'Come, O Agni,' ಅಗ್ನೇ (ಯಾಹಿ : viii. 103-14).

Or in the first hemistch, 'Generations truly' (ಪ್ರಜಾ ಹ : viii. 101-14), Agni is here named,

129. in the third verse (ಪಾದ), the Sun (ಆದಿತ್ಯ), and in the fourth the Middle (Agni) is praised : for so it has been explained in the esoteric (ರಹಸ್ಯ) Aitareya Brahmana also.

End of 8th Mandala.



## ಅಥ ನವಮಂ ಮಂಡಲಂ

ಪವಮಾನಃ ಸ್ತುತಃ ಸೋಮೋ ನವಮೇ ತ್ವಿಹ ಮಂಡಲೇ ।
ಪವಮಾನವದಾಪ್ರ್ಯಸ್ತು ಸಮಿದ್ಧ ಇತಿ ಸಂಸ್ತುತಾಃ ॥ ೧೩೦ ॥
ಅಗ್ನ ಆಯೂಂಷೀತಿ ಚಾಸು ತಿಸೃಷ್ವಗ್ನಿರ್ನಿಪಾತಭಾಕ್ ।
ಅವಿತಾ ನ ಇತಿ ತ್ವಸ್ಮಿಂಸ್ತೃಚೇ ಪೂಷ್ಣಾ ಸಹ ಸ್ತುತಃ ॥ ೧೩೧ ॥
ಆಗ್ನೇಯ್ಯೌ ದ್ವೇ ಋಚಾವತ್ರ ಯತ್ತ ಇತ್ಯುತ್ತರೇ ತತಃ ।
ಉಭಾಭ್ಯಾಮಿತಿ ಸಾವಿತ್ರೀ ಅಗ್ನಿಸಾವಿತ್ರ್ಯೃಗುತ್ತರಾ ॥ ೧೩೨ ॥



# ಒಂಭತ್ತನೆಯ ಮಂಡಲವು

### ೧-೮೬ ನೇ ಸೂಕ್ತಗಳ ದೇವತೆಗಳು

130. ಈ ಒಂಭತ್ತನೆಯ ಮಂಡಲದಲ್ಲಿ **ಪವಮಾನಃ ಸೋಮಃ** ಎಂಬ ದೇವತೆಯನ್ನು ಸ್ತುತಿಸಲಾಗಿದೆ. **ಸಮಿದ್ಧಃ** ಎಂಬ ೫ ನೇ ಸೂಕ್ತದಲ್ಲಿ ಆಪ್ರೀಸೂಕ್ತದ ದೇವತೆಗಳನ್ನು ಪವಮಾನದೇವತೆಯೆಂದು ಸ್ತುತಿಸಲಾಗಿದೆ.

131. ೬೬ ನೇ ಸೂಕ್ತದಲ್ಲಿ **ಅಗ್ನ ಆಯೂಂಷಿ** ಎಂದು ಪ್ರಾರಂಭವಾಗುವ ಮೂರು ಋಕ್ಕುಗಳಲ್ಲಿ (೧೯-೨೧) ಅಗ್ನಿಯನ್ನು ಪ್ರಾಸಂಗಿಕವಾಗಿ ಸ್ತುತಿಸಲಾಗಿದೆ. ಮತ್ತು ೬೭ ಸೂಕ್ತದ **ಅವಿತಾ ನಃ** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿ (೧೦-೧೨) ಪವಮಾನನು ಪೂಷದೇವನೊಡನೆ ಸ್ತುತನಾಗಿರುವನು.

132. ಇದೇ ೬೭ ನೇ ಸೂಕ್ತದ ಕೊನೆಯ ಭಾಗದಲ್ಲಿ **ಯತ್ತೇ ಪವಿತ್ರಂ** ಎಂದು ಮೊದಲಾಗುವ ಎರಡು ಋಕ್ಕುಗಳಲ್ಲಿ (೨೩-೨೪) ಅಗ್ನಿಯನ್ನು ಸ್ತುತಿಸಲಾಗಿದೆ. **ಉಭಾಭ್ಯಾಂ** ಎಂಬ ೨೫ ನೇ ಋಕ್ಕಿನಲ್ಲಿ ಸವಿತೃದೇವನನ್ನೂ, ಮುಂದಿನ **ತ್ರಿಭಿಷ್ಟ್ವಂ** ಎಂಬ ೨೬ ನೇ ಋಕ್ಕಿನಲ್ಲಿ ಅಗ್ನಿ ಮತ್ತು ಸವಿತೃದೇವರಿಬ್ಬರನ್ನೂ ಸ್ತುತಿಸಲಾಗಿದೆ.

## Mandala IX

### 27. Deities of RV. ix. 1-86:

130. Now Soma Pavamana is praised here in the ninth Mandala. (In the hymn) 'kindled' (ಸಮಿದ್ಧಃ ix. 5) the April deities (ಆಪ್ರ್ಯಃ :) are praised like Pavamana (ಪವಮಾನ).

131. And in the three stanzas 'O Agni, life' (ಅಗ್ನ ಆಯೂಂಷಿ : ix. 66, 19-21), Agni is incidental (ನಿಪಾತಭಾಜ), while in the triplet 'Our protector' (ಅವಿತಾ ನಃ ix. 67, 10-12) he (Pavamana) is praised together with Pusan.

132. Then two later stanzas in this hymn (ಅತ್ರ), 'which of you (ಯತ್ತೇ: ix. 67, 23-24), are addressed to Agni; 'By both of these' (ಉಭಾಭ್ಯಾಂ : 25) is addressed to Savitr; the next stanza (26) is addressed to Agni and Savitr,

ಪುನಂತು ಮಾಂ ವೈಶ್ವದೇವೀ ಆಗ್ನೇಯಿಪಾ ತ್ವೃಗುಪ ಪ್ರಿಯಂ |
ಉತ್ತರೇ ಚ ಯ ಇತ್ಯೇತೇ ಸ್ವಾಧ್ಯಾಯಾಧ್ಯೇತೃಸಂಸ್ತವಃ || ೧೩೩ ||
ಸೂಕ್ತೇ ನಿರುಕ್ತೇ ಸ್ರಕ್ವೇಽಗ್ನೀ ರಕ್ಷೋಹಾ ಘರ್ಮಸಂಸ್ತವಃ |
ಸೂರ್ಯವಚ್ಚಾತ್ಮವಚ್ಚಾಪಿ ಪವಿತ್ರಮಿತಿ ಚೋಚ್ಯತೇ || ೧೩೪ ||
ಆರ್ಭವಸ್ತು ಭವೇತ್ಪಾದ ಋಭುರ್ಧೀರೇ ಇತಿ ಸ್ಮೃತಃ |
ನಿಪಾತೈಸ್ತು ತ್ರಿಭಿಃ ಪಾದೈಸ್ತ್ರಯೋ ದೇವಾ ಇಹೋದಿತಾಃ || ೧೩೫ ||

133. ಇದೇ ೬೭ ನೇ ಸೂಕ್ತದ **ಪುನಂತು ಮಾಂ** ಎಂಬ ೨೭ ನೇ ಋಕ್ಕಿನಲ್ಲಿ ವಿಶ್ವೇದೇವತೆಗಳನ್ನೂ, **ಉಪ ಪ್ರಿಯಂ** ಎಂಬ ೨೯ ನೇ ಋಕ್ಕಿನಲ್ಲಿ ಅಗ್ನಿಯನ್ನೂ ಸ್ತುತಿಸಲಾಗಿದೆ. **ಯಃ ಪಾವಮಾನೀಃ** ಎಂದು ಮೊದಲಾಗುವ ಎರಡು ಋಕ್ಕುಗಳಲ್ಲಿ (೩೧-೩೨) ಸ್ವಾಧ್ಯಾಯ ಎಂದರೆ ವೇದವನ್ನು ಕಲಿಯುವ ವಿದ್ಯಾರ್ಥಿಯ ಪ್ರಶಂಸೆಯು ಉಕ್ತವಾಗಿದೆ.

**134.** **ಸ್ರಕ್ವೇ** ಎಂಬ ೭೩ ನೇ ಸೂಕ್ತವನ್ನು ನಿರುಕ್ತದಂತೆ ಅರ್ಥವಿವರಣೆ ಮಾಡುವುದಾದರೆ ಈ ಸೂಕ್ತದಲ್ಲಿ ರಕ್ಷೋಹಾಗ್ನಿಯು ಸೂರ್ಯನಂತೆಯೂ, ಆತ್ಮನಂತೆಯೂ ಸ್ತುತನಾಗಿದ್ದಾನೆ. ಘರ್ಮಪಾತ್ರೆಯು ಸೋಮರಸವನ್ನು ಸೋಸುವ ಪವಿತ್ರವೆಂಬ ಶೋಧನಪಾತ್ರೆಯೆಂದು ಸ್ತುತಿಸಲ್ಪಟ್ಟಿರುವುದು.

**೮೭, ೯೬, ೧೧೨ ನೇ ಸೂಕ್ತಗಳ ದೇವತೆಗಳು**

135-136. ೮೭ ನೇ ಸೂಕ್ತದ ೩ ನೇ ಋಕ್ಕಿನಲ್ಲಿ **ಋಭುರ್ಧೀರ ಉಶನಾ ಕಾವ್ಯೇನ** ಎಂಬ ಎರಡನೇ ಪಾದದಲ್ಲಿ ಋಭುಗಳ ಸ್ತುತಿ ಇರುವುದು. ೯೬ ನೇ ಸೂಕ್ತದ **ಬ್ರಹ್ಮಾ ದೇವಾನಾಂ** ಎಂಬ ೬ ನೇ ಋಕ್ಕಿನ ಮೂರು

---

133. 'May they purify me' (ಪುನಂತು ಮಾ : ix. 67-27) is addresed to the All-gods, while the stanza 'Near to the friend' (ಉಪ ಪ್ರಿಯಂ : 29) is addressed to Agni, and the two next, 'Who' (ಯಃ : 31-32) are (in) praise of the student of recitation (ಸ್ವಾಧ್ಯಾಯಾಧ್ಯೇತೃ).

**134.** In the hymn 'At the rim' (ಸ್ರಕ್ವೇ : ix. 73), when interpreted (ನಿರುಕ್ತೆ), **the** demon-slaying Agni (is spoken of) and 'The filter' (ಪವಿತ್ರಂ : ix. 83) is called a praise of the Kettle (ಘರ್ಮ) as (representing) the Sun (ಸೂರ್ಯ) and the Soul (ಆತ್ಮನ್).

**28. Deities of RV. ix. 87-96, 112.**

135. The verse of 'Deft' (ಋಭುರ್ಧೀರಾ : ix. 87-3) should be held to be addressed to Rbhu. Now three gods are here mentioned incidentally (ನಿಪಾತ) in three verses (ಪಾದ).

ಬ್ರಹ್ಮಾ ದೇವಾನಾಂ ತಿಸ್ರೋಕ್ತಾಸ್ತ್ರಿಭಿಸ್ತ್ವೇತೈರ್ದ್ವ್ಯೃಚೈರ್ದ್ವ್ಯೃಚೈಃ ।
ಸೂರ್ಯವಚ್ಚಾತ್ಮವಚ್ಚಾಪಿ ಸ್ತೂಯತೇ ಸೋಮ ಏವ ವಾ । ॥ ೧೩೬ ॥

ಅನಾವೃಷ್ಟ್ಯಾಂ ತು ವರ್ತಂತ್ಯಾಂ ಪಪ್ರಚ್ಛರ್ಷೀಞ್ಛಚೀಪತಿಃ ।
ಕಾಲೇ ದುರ್ಗೇ ಮಹತ್ಯಸ್ಮಿನ್ಕರ್ಮಣಾ ಕೇನ ಜೀವಥ ॥ ೧೩೭ ॥

ಶಕಟಂ ಶಾಕಿನೀ ಗಾವಃ ಕೃಷಿರಸ್ಯಂದನಂ ವನಂ ।
ಸಮುದ್ರಃ ಪರ್ವತೋ ರಾಜಾ ಏವಂ ಜೀವಾಮಹೇ ವಯಂ ॥ ೧೩೮ ॥

ಸ್ತುವನ್ನೇವ ಶಶಂಸ್ಯಾಸ್ಯ ಋಷಿರಾಂಗಿರಸಃ ಶಿಶುಃ ।
ನಾನಾನೀಯೇನ ಸೂಕ್ತೇನ ಋಷೀಣಾಮೇವ ಸಂನಿಧೌ ॥ ೧೩೯ ॥

ಪಾದಗಳಲ್ಲಿ ಮೂರುಮಂದಿ ದೇವತೆಗಳನ್ನು ಪ್ರಸಂಗವಶದಿಂದ ಸ್ತುತಿಸಲಾಗಿದೆ. ಆದರೆ ಈ ಋಕ್ಕಿನಲ್ಲಿ ಮುಖ್ಯದೇವತೆಯಾದ ಸೋಮನನ್ನೇ ಸೂರ್ಯ ಮತ್ತು ಆತ್ಮನೆಂದು ಸ್ತುತಿಸಲಾಗಿದೆ.

137. ಒಂದಾನೊಂದು ಸಮಯದಲ್ಲಿ ಇಂದ್ರನು ಋಷಿಗಳನ್ನು ಕುರಿತು—ಎಲೈ ಋಷಿಗಳೇ, ಮಳೆ ಬರದೆ ಅನಾವೃಷ್ಟಿಯಿಂದ ಬಹು ಕಠಿನವಾದ ಕಾಲಸ್ಥಿತಿಯು ಉಂಟಾಗಿರುವಾಗ ನೀವು ಹೇಗೆ ಜೀವಿಸುತ್ತೀರಿ ಎಂದು ಪ್ರಶ್ನೆಮಾಡಿದನು.

138. ಅದಕ್ಕೆ ಋಷಿಗಳು—ಎಲೈ ಇಂದ್ರನೇ, ಕೇಳು. ಗಾಡಿ, ಭೂಮಿ (ಹೊಲ) ಗೋವುಗಳು (ಎತ್ತುಗಳು), ವ್ಯವಸಾಯ (ಉಳುವುದು), ಕಮ್ಮಿಯಾಗದ ಅಥವಾ ಬತ್ತಿಹೋಗದ ನೀರಿನ ಆಸರೆ, ಅರಣ್ಯ, ಸಮುದ್ರ, ಪರ್ವತ, ರಾಜಾ ಇವುಗಳ ಸಹಾಯದಿಂದ ನಾವು ಜೀವನವನ್ನು ನಡೆಸುತ್ತಿರುವೆವು ಎಂದು ಪ್ರತ್ಯುತ್ತರವಿತ್ತರು.

139. ಅಂಗಿರಸಪುತ್ರನಾದ **ಶಿಶು** ಎಂಬ ಋಷಿಯು ಇಂದ್ರನನ್ನು ಸ್ತುತಿಸುವಾಗ **ನಾನಾನಂ ವಾ** ಎಂಬ ೧೧೨ ನೇ ಸೂಕ್ತದಲ್ಲಿ, ಇತರ ಋಷಿಗಳ ಎದುರಿಗೆ ಮೇಲೆ ಹೇಳಿದಂತೆ ವಿವರಿಸಿರುವನು.

---

136. three (deities) are mentioned with these three (verses), each containing a couplet, (beginning) 'The Brahman of the gods' (ಬ್ರಹ್ಮಾ ದೇವಾನಾಂ : iz. 96. 6) ; or rather it is Soma who is (here) praised as (represeting) the Sun and the Soul.

137. Now while a draught was prevailing, the Lord of Sachi asked (the) seers, 'In this great time of distress, by what activity do you live ?'

138. 'A cart, a field, cows, tillage, water that does not flow away (ಅಸ್ಯಂದನ), a forest, the sea, a mountain, a king, by these means (ಏವಂ) we live.'

139. In praising (Indra) the seer Sisu, son of Angiras, declared (this) to him with the hymn 'Variously s (ನಾನಾನಾಂ : ix. 112) in the presence of the (other) seers.

ತಾನಿಂದ್ರಸ್ತ್ವಾಹ ಸರ್ವಾಂಸ್ತು ತಪಧ್ವಂ ಸುಮಹತ್ತಪಃ ।
ನ ಹ್ಯೃತೇ ತಪಸಃ ಶಕ್ಯಮಿದಂ ಕೃಚ್ಛ್ರಂ ವ್ಯಪೋಹಿತುಂ ॥ ೧೪೦ ॥
ಅಥ ತೇ ವೈ ತಪಸ್ತೇಪುಃ ಸರ್ವೇ ಸ್ವರ್ಗಜಿಗೀಷವಃ ।
ತತಸ್ತೇ ತಪಸೋಽಗ್ರೇಣ ಪಾವಮಾನೀರ್ಋಚೋಽಬ್ರುವನ್ ॥ ೧೪೧ ॥
ಅನಸೂಯುರಧೀಯಾನಃ ಶುಶ್ರೂಷುಸ್ತಪಸಾನ್ವಿತಃ ।
ದಶ ಪೂರ್ವಾಪರಾನ್ವಂಶ್ಯಾನ್ ಪುನಾತ್ಯಾತ್ಮಾನಮೇವ ಚ ॥ ೧೪೨ ॥
ಪಾಪಂ ಯಚ್ಚಾಕರೋತ್ಕಿಂಚಿನ್ಮನೋವಾಗ್ದೇಹಭೋಜನೈಃ ।
ಪೂತಃ ಸ ತಸ್ಮಾತ್ಸರ್ವಾತ್ಸ್ವಾಧ್ಯಾಯಫಲಮಶ್ನುತೇ ॥ ೧೪೩ ॥

### ಇಂದ್ರ ಮತ್ತು ಋಷಿಗಳು ; ತಪಸ್ಸಾಮರ್ಥ್ಯ

140. ಆ ಋಷಿಗಳನ್ನೆಲ್ಲಾ ಉದ್ದೇಶಿಸಿ ಇಂದ್ರನು—ಎಲೈ ಋಷಿಗಳೇ, ನೀವೆಲ್ಲರೂ ಘೋರವಾದ ತಪಸ್ಸನ್ನಾಚರಿಸಿ, ತಪಸ್ಸಿನಿಂದಲ್ಲದೆ ಈ ಕಷ್ಟಪರಿಹಾರಕ್ಕೆ ಬೇರೆ ಮಾರ್ಗ (ಉಪಾಯ) ವಿಲ್ಲ ಎಂದನು.

141. ಅನಂತರ ಆ ಋಷಿಗಳೆಲ್ಲಾ ಸ್ವರ್ಗಪ್ರಾಪ್ತಿಯನ್ನು ಬಯಸಿ ಘೋರವಾದ ತಪಸ್ಸನ್ನು ಮಾಡಿದರು. ಆ ಮಹಾತಪಸ್ಸಿನ ಮಾಹಾತ್ಮ್ಯೆಯಿಂದ ಪಾವಮಾನೀ ಋಕ್ಕುಗಳು (**ಪವಮಾನಃ ಸೋಮಃ** ಎಂಬ ದೇವತೆಯನ್ನು ಸ್ತುತಿಸಿರುವ ಈ ಮಂಡಲದ ಋಕ್ಕುಗಳು) ಅವರಿಗೆ ಗೋಚರವಾದವು ಮತ್ತು ಅವುಗಳ ವಿಷಯವಾಗಿ ಋಷಿಗಳು ಈರೀತಿ ಹೇಳಿದರು—

142. ಯಾವ ಪುರುಷನು ಅಸೂಯಾದಿದುರ್ಗುಣರಹಿತನಾಗಿ ಗುರುಶುಶ್ರೂಷೆ ಮಾಡುತ್ತಾ ವೇದಾಧ್ಯಯನ ಮಾಡುವನೋ ಮತ್ತು ತಪಸ್ಸನ್ನಾಚರಿಸುವನೋ ಆ ಪುರುಷನು ತನ್ನ ವಂಶದಲ್ಲಿ ಹಿಂದಿನ ಮತ್ತು ಮುಂದಿನ ಹತ್ತು ತಲೆಮಾರಿನ ವಂಶಜರನ್ನೂ ತನ್ನನ್ನೂ ಪವಿತ್ರರನ್ನಾಗಿ (ಶುದ್ಧರನ್ನಾಗಿ) ಮಾಡುವನು.

143. ಮತ್ತು ಆ ಪುರುಷನು ಮನಸ್ಸು, ವಾಕ್ಕು, ದೇಹ, ಆಹಾರ ಇವುಗಳ ಮೂಲಕ ಎಷ್ಟೇ ಪಾಪವನ್ನು ಮಾಡಿದ್ದರೂ ಅವನು ಪಾವಮಾನಮಂತ್ರಗಳ ಅಧ್ಯಯನದಿಂದ ಪುನೀತನಾಗಿ ಸರ್ವಸೌಖ್ಯವನ್ನನುಭವಿಸುವನು.

### 29. Indra and the seers. Value of penance.

140. Now to all of them Indra said : ' Do you perform very severe penance ; for without penance this distress cannot be removed.'

141. Now all of them, desirous of obtaining heaven, performed penance. Then in cosequenee of fierce austerity they pronounced stanzas relating to Soma Pavamana (ಪಾವಮಾನಿ).

142. One who is not envious, is studious, obedient, and practises penance, purifies ten ascendants and descendants as well as himself.

143. And whatever sin has committed with mind, speech, body, and food purified from all that, he enjoys the fruit of Vedic study.

ಪಾವಮಾನ್ಯಃ ಪರಂ ಬ್ರಹ್ಮ ಶುಕ್ರಂ ಜ್ಯೋತಿಃ ಸನಾತನಂ |
ಗಾಯತ್ರ್ಯೋऽನ್ತೇऽತ್ರ ಯಶ್ಚಾಸಾಂ ಪ್ರಾಣಾನಾಯಮ್ಯ ತನ್ಮನಾಃ || ೧೪೪ ||
ಪಾವಮಾನಂ ಪಿತೄನ್ದೇವಾನ್ಧ್ಯಾಯೇದ್ಯಶ್ಚ ಸರಸ್ವತೀಂ |
ಪಿತೄಂಸ್ತಸ್ಯೋಪವರ್ತೇತ ಕ್ಷೀರಂ ಸರ್ಪಿರ್ಮಧೂದಕಂ || ೧೪೫ ||
ಏತತ್ಸೂಕ್ತಶತಂ ಸೌಮ್ಯಂ ಮಂಡಲಂ ಸಚತುರ್ದಶಂ |
ಪಾವಮಾನಮಿತಿ ಖ್ಯಾತಮನುವಾಕಾಸ್ತು ಸಪ್ತ ವೈ ೧೪೬ ||

ಇತಿ ನವಮಂ ಮಂಡಲಂ

144-145. ಪವಮಾನದೇವತಾಕವಾದ ಗಾಯತ್ರೀಛಂದಸ್ಸಿನ ಮಂತ್ರಗಳಲ್ಲಿ (೬೧೦ ಋಕ್ಕುಗಳಲ್ಲಿ) ಪ್ರತಿಪಾದಿತವಾದ ನಾಶರಹಿತವಾದುದೂ, ಶ್ರೇಷ್ಠವಾದುದೂ ಆದ ಬ್ರಹ್ಮಜ್ಯೋತಿಯನ್ನು (ಅಥವಾ ಜ್ಯೋತೀರೂಪನಾದ ಪರಬ್ರಹ್ಮನನ್ನೂ) ಪವಮಾನಸೋಮದೇವತೆಯನ್ನೂ, ಪಿತೃಗಳನ್ನೂ, ಇತರ ದೇವತೆಗಳನ್ನೂ, ಸರಸ್ವತಿಯನ್ನೂ ಯಾವ ಪುರುಷನು ಅನನ್ಯಭಕ್ತಿಯಿಂದ ಧ್ಯಾನಿಸಿ ಸ್ತುತಿಸುವನೋ ಆ ಪುರುಷನ ವಿಷಯದಲ್ಲಿ ಸರಸ್ವತೀದೇವಿಯು ಹಾಲು, ತುಪ್ಪ, ಮಧುರವಾದ ಉದಕ ಇವುಗಳನ್ನು ಯಥೇಚ್ಛವಾಗಿ ಒದಗಿಸುವಳು ಎಂದರೆ ಆ ಪುರುಷನಿಗೆ ಧನಧಾನ್ಯ ಸಮೃದ್ಧಿಯುಂಟಾಗುವುದು.

146. ಸೋಮದೇವತೆಯನ್ನು ಮಾತ್ರವೇ ಸ್ತುತಿಸಲಾಗಿರುವ ಈ (೯ ನೇ) ಮಂಡಲದಲ್ಲಿ ೧೧೪ ಸೂಕ್ತಗಳಿರುವವು. ಇವುಗಳಿಗೆ ಪಾವಮಾನಸೂಕ್ತಗಳೆಂಬ ಹೆಸರು ಪ್ರಸಿದ್ಧಿಯಾಗಿರುವುದು. ಈ ಮಂಡಲದಲ್ಲಿ ಏಳು ಅನುವಾಕಗಳಿರುವವು.

ಇಲ್ಲಿಗೆ ಒಂಭತ್ತನೆಯ ಮಂಡಲವು ಸಮಾಪ್ತವು.

144. The Pavamani Gayatris are the supreme Brahma, the bright, eternal light. He who here at his latter end (ಅಂತೇ), restraining his breath, intent on them,

145. and he who should meditate on Pavamana, the fathers, the Gods and Saraswathi-to his fathers milk, melted butter, honey, and water will flow (ಉಪವರ್ತೇತ).

146. This Mandala, addressed to Soma, containing one hundred aud fourteen hymns, is called 'Pavamana', and seven lessons (ಅನುವಾಕಾಃ) are (contained in it).

End of 9th Mandala.



### ಅಥ ದಶಮಂ ಮಂಡಲಂ

ಸಪ್ತಾಗ್ನೇಯಾನಿ ಸೂಕ್ತಾನಿ ದದರ್ಶಾಗ್ರ ಇತಿ ತ್ರಿತಃ ।
ಪ್ರ ಕೇತುನೇತಿ ತ್ವಾಷ್ಟ್ರಸ್ತು ತ್ರಿಶಿರಾಃ ಸೂಕ್ತಮುತ್ತರಂ ॥ ೧೪೭ ॥
ಋಚಸ್ತ್ವಸ್ಯ ಷಳಾಗ್ನೇಯ್ಯಸ್ತ್ವೃಚಸ್ತ್ವಸ್ಯೇತಿ ಯಃ ಪರಃ ।
ತೇನೇಂದ್ರಮಭಿತುಷ್ಟಾವ ಸ್ವಪ್ನಾಂತ ಇತಿ ನಃ ಶ್ರುತಿಃ ॥ ೧೪೮ ॥
ಅಭವತ್ಸ ಹಿ ದೇವಾನಾಂ ಪುರೋಧಾಃ ಪ್ರಿಯಕಾಮ್ಯಯಾ ।
ಅಸುರಾಣಾಂ ಸ್ವಸುಃ ಪುತ್ರಸ್ತ್ರಿಶಿರಾ ವಿಶ್ವರೂಪಧೃಕ್ ॥ ೧೪೯ ॥



## ಹತ್ತನೆಯ ಮಂಡಲವು.

### ಹತ್ತನೆಯ ಮಂಡಲದ ೧-೮ ನೇ ಸೂಕ್ತಗಳ ದೇವತೆಗಳು; ತ್ರಿಶಿರಾಃ ಮತ್ತು ಇಂದ್ರ

147. ಈ ೧೦ ನೇ ಮಂಡಲದ **ಅಗ್ರೇ ಬೃಹನ್** ಎಂದು ಮೊದಲಾಗುವ ಮೊದಲ ೭ ಸೂಕ್ತಗಳಿಗೆ (೧-೭) **ತ್ರಿತಃ** ಎಂಬುವನು ಋಷಿಯು; ಆದರೆ **ಪ್ರ ಕೇತುನಾ** ಎಂಬ ೮ ನೇ ಸೂಕ್ತಕ್ಕೆ ತ್ವಷ್ಟೃಪುತ್ರನಾದ ತ್ರಿಶಿರಾಃ ಎಂಬುವನು ಋಷಿಯು.

148. ಈ ೮ ನೇ ಸೂಕ್ತದ ಮೊದಲ ಆರು ಋಕ್ಕುಗಳಲ್ಲಿ (೧-೬) ಋಷಿಯು ಅಗ್ನಿಯನ್ನು ಸ್ತುತಿಸಿರುವನು. **ಅಸ್ಯ ತ್ರಿತಃ** ಎಂದು ಮೊದಲಾಗುವ ಮುಂದಿನ ಮೂರು ಋಕ್ಕುಗಳಲ್ಲಿ (೭-೯) ಋಷಿಯು ಸ್ವಪ್ನಾವಸ್ಥೆಯಲ್ಲಿದ್ದಾಗ ಇಂದ್ರನನ್ನು ಸ್ತುತಿಸಿರುವನು. ಈ ವಿಷಯವು ನಮಗೆ ಶ್ರುತಿವಾಕ್ಯಗಳಿಂದ ತಿಳಿದುಬಂದಿರುವುದು.

149. ಈ ತ್ರಿಶಿರಾಃ ಎಂಬುವನು ಅಸುರರ ಸಹೋದರಿಯ ಪುತ್ರನು. ಇವನಿಗೆ ಯಾವ ರೂಪವನ್ನು ಬೇಕಾದರೂ ಧರಿಸುವ ಶಕ್ತಿ ಇದ್ದಿತು. ಈ ತ್ರಿಶಿರನು ದೇವತೆಗಳಿಗೆ ಪುರೋಹಿತನಾಗಿದ್ದರೂ ಇವನಿಗೆ ಅಸುರರ ಸಂಬಂಧ ವಿದ್ದುದರಿಂದ ಅಸುರರ ವಿಷಯದಲ್ಲಿ ಹಿತವನ್ನೇ ಬಯಸುತ್ತಿದ್ದನು.

---

## Mandala X

### 30. Deities of RV. x. 1-8, Trisiras and Indra

147. Trita saw seven hymns addressed to Agni (beginning), 'Before' (ಅಗ್ರೇ : x. 1-7), but Trisiras, son of Tvastr, the next hymn (beginning) 'Forth with his banner' (ಪ್ರ ಕೇತುನಾ : x. 8).

148. Now six (stanzas) of his (hymn) are addressed to Agni (x. 8. 1-6), while with the triplet which follows, 'Of him' (ಅಸ್ಯ : 7-9), he praised Indra at the end of a dream : such is our sacred tradition.

149. Trisiras, who could assume all forms (ವಿಶ್ವರೂಪಧೃಕ್), being the son of a sister of of Asuras, became the domestic priest of the gods from a desire of (rendering) a service (to the former).

ತಮೃಷಿಂ ಪ್ರಹಿತಂ ತ್ವಿಂದ್ರೋ ದೇವೇಷು ಬುಬುಧೇಽಸುರೈಃ ।
ಸೋಽಸ್ಯ ವಜ್ರೇಣ ತಾನ್ಯಾಶು ಶಿರಾಂಸಿ ತ್ರೀಣ್ಯಥಾಚ್ಛಿದತ್ ॥ ೧೫೦ ॥

ತಸ್ಯ ಯೆತ್ಸೋಮಪಾನಂ ತು ಮುಖಂ ಸೋಽಭೂತ್ಕಪಿಂಜಲಃ ।
ಕಲವಿಂಕಃ ಸುರಾಪಾಣಮನ್ನಾದಂ ತಿತ್ತಿರಿಸ್ತ್ವಭೂತ್ ॥ ೧೫೧ ॥

ತಂ ವಾಗಭ್ಯವದದ್ಬ್ರಾಹ್ಮೀ ಬ್ರಹ್ಮಹಾಸಿ ಶತಕ್ರತೋ ।
ಪ್ರಪನ್ನಂ ಹತವಾನ್ಯಸ್ಮಾದ್ವಿಶ್ವರೂಪಂ ಪರಾಙ್ಮುಖಂ ॥ ೧೫೨ ॥

150. ಈ ತ್ರಿಶಿರನೆಂಬುವನನ್ನು ದೇವತೆಗಳ ರಹಸ್ಯವನ್ನು ತಿಳಿಯುವುದಕ್ಕಾಗಿ ಅಸುರರು ದೇವತೆಗಳ ಬಳಿ ಇರುವಂತೆ ಕಳುಹಿಸಿರುವರೆಂದು ಇಂದ್ರನಿಗೆ ತಿಳಿಯಿತು. ಆದ್ದರಿಂದ ಇಂದ್ರನು ಬೇಗನೆ ತನ್ನ ವಜ್ರಾಯುಧವನ್ನು ತೆಗೆದುಕೊಂಡು ಆ ತ್ರಿಶಿರಸ್ಸಿನ ಮೂರು ಶಿರಸ್ಸುಗಳನ್ನೂ ಕತ್ತರಿಸಿಹಾಕಿದನು.

151. ಇಂದ್ರನು ಕತ್ತರಿಸಿಹಾಕಿದ ತ್ರಿಶಿರನ ಮೂರು ಶಿರಸ್ಸುಗಳಲ್ಲಿ (ಅವನು ಬದುಕಿದ್ದಾಗ) ಸೋಮ ಪಾನಮಾಡುತ್ತಿದ್ದ ಶಿರಸ್ಸು (ಅಥವಾ ಮುಖವು) ಕಪಿಂಜಲಪಕ್ಷಿಯ ರೂಪವನ್ನು ತಾಳಿತು. ಸುರಾಪಾನ (ಮದ್ಯಪಾನ) ಮಾಡುತ್ತಿದ್ದ ಮುಖವಿರುವ ಶಿರಸ್ಸು **ಕಲವಿಂಕಃ** ಎಂಬ ಪಕ್ಷಿಯಾಯಿತು. ಅನ್ನವನ್ನು ತಿನ್ನುತ್ತಿದ್ದ ಮುಖವಿರುವ ಶಿರಸ್ಸು ತಿತ್ತಿರಿಯೆಂಬ ಪಕ್ಷಿಯಾಯಿತು.

**೯-೧೪ನೇ ಸೂಕ್ತಗಳ ದೇವತೆಗಳು ಮತ್ತು ೧೫.೧೬ನೇ ಸೂಕ್ತಗಳ ದೇವತೆಗಳು-ಮೂರು ವಿಧ ಅಗ್ನಿಗಳು.**

152. ಆಗ ಬ್ರಹ್ಮಸ್ವರೂಪದ ಅಶರೀರವಾಣಿಯು ಕೇಳಿಸಿತು-ಎಲೈ ಇಂದ್ರನೇ, ದೇವತೆಗಳಾದ ನಿಮ್ಮಲ್ಲಿಯೇ ಇದ್ದು ನಿಮ್ಮರಕ್ಷಣೆಯಲ್ಲಿದ್ದ ವಿಶ್ವರೂಪನೆಂಬ ಬ್ರಾಹ್ಮಣನನ್ನು ನೀನು ಹಿಂದಿನಿಂದ ಕೊಂದಿರುವೆ ಆದ್ದರಿಂದ ನಿನಗೆ ಬ್ರಹ್ಮಹತ್ಯಾದೋಷವು ಪ್ರಾಪ್ತವಾಗಿದೆ.

---

150. Now Indra became aware that the seer (ತ್ರಿಶಿರಾಃ) had been sent by the Asuras among the gods. He then with his bolt quickly struck off those three heads of his,

151. The mouth with which he drank Soma became a francoline patridge (ಕಪಿಂಜಲ); that with which he drank Sura (became) a sparrow (ಕಲವಿಂಕ); while that with which he ate food became a partridge (ತಿತ್ತಿರಿ).

### 31. Deities of RV. x. 9-14.

152. Him (Indra) divine (ಬ್ರಾಹ್ಮೀ) Speech (ವಾಕ್) addressed : 'You are a Brahman-slayer, Lord of hundred powers (ಶತಕ್ರತು), since you have slain Visvarupa who sought refuge (ಪ್ರಪನ್ನ) with averted face.

ತಮಭ್ಯಸಿಂಚತ್ಸೂಕ್ತೇನ ಋಷಿರಾಪ ಇತಿ ಸ್ವಯಂ ।
ಸಿಂಧುದ್ವೀಪೋಽಪನುತ್ತ್ಯರ್ಥಂ ತಸ್ಯಾಶ್ಲೀಲಸ್ಯ ಪಾಪ್ಮನಃ ॥ ೧೫೩ ॥
ಮೈಥುನಾರ್ಥಮಭೀಪ್ಸಂತೀಂ ಪ್ರತ್ಯಾಚಷ್ಟೇ ಯಮೀಂ ಯಮಃ ।
ತದೋ ಚಿದಿತಿ ಸಂವಾದೋ ವಿವಸ್ವತ್ಸುತಯೋಸ್ತಯೋಃ ॥ ೧೫೪ ॥
ವೃಷಾಗ್ನೇಯೇ ಹವಿರ್ಧಾನೇ ಯುಜೇ ವಾಮತ್ರ ಸಂಸ್ತುತೇ ।
ಪರೇಯಿವಾಂಸಮಿತ್ಯತ್ರ ಸ್ತೂಯತೇ ಮಧ್ಯಮೋ ಯಮಃ ॥ ೧೫೫ ॥
ಅಥರ್ವಾಣೋಽಥ ಭೃಗವೋಽಙ್ಗಿರಸಃ ಪಿತರಃ ಸಹ ।
ಷಷ್ಠ್ಯಾಂ ದೇವಗಣಾಸ್ತತ್ರ ಸಂಸ್ತೂಯಂತೇ ದ್ಯುಭಕ್ತಯಃ ॥ ೧೫೬ ॥

153. ಇಂದ್ರನ ಈ ಬ್ರಹ್ಮಹತ್ಯಾ ದೋಷಪರಿಹಾರಾರ್ಥವಾಗಿ ಸಿಂದುದ್ವೀಪನೆಂಬ ಋಷಿಯು **ಆಪೋ ಹಿ ಷ್ಠಾ** ಎಂಬ ೯ನೇ ಸೂಕ್ತದ ಮಂತ್ರಗಳಿಂದ ನೀರನ್ನು ತೆಗೆದುಕೊಂಡು ಪ್ರೋಕ್ಷಣೆಮಾಡಿದನು.

154. ವಿವಸ್ವಂತನ ಪುತ್ರಿಯಾದ ಯಮೀ ಎಂಬ ಸ್ತ್ರೀಯು ತನ್ನ ಅಣ್ಣನಾದ ಯಮನಲ್ಲಿಯೇ ಅನುರಕ್ತಳಾಗಿ ಅವನೊಡನೆ ರತಿಸುಖವನ್ನು ಅಪೇಕ್ಷಿಸಿದಾಗ ಆ ಯಮಯಮಿಯರ ಮಧ್ಯೆ ನಡೆದ ಸಂಭಾಷಣೆಯು **ಓ ಚಿತ್ಸಖಾಯಂ** ಎಂಬ ೧೦ ನೇ ಸೂಕ್ತದಲ್ಲಿ ಋಷಿಯು ವಿವರಿಸಿರುವನು.

155. **ವೃಷಾ ವೃಷ್ಣೇ** ಎಂದು ಪ್ರಾರಂಭವಾಗುವ ಮುಂದಿನ ಎರಡು ಸೂಕ್ತಗಳಲ್ಲಿ (೧೧-೧೨) ಅಗ್ನಿಯನ್ನು ಸ್ತುತಿಸಲಾಗಿದೆ. ಇದರ ಮುಂದಿನ **ಯುಜೇ ವಾಂ** ಎಂಬ ೧೩ನೇ ಸೂಕ್ತದಲ್ಲಿ **ಹವಿರ್ಧಾನೇ** ಎಂಬ ಸೋಮಲತೆಗಳನ್ನು ತುಂಬಿ ತರುವ ಎರಡು ಗಾಡಿಗಳನ್ನು ಸ್ತುತಿಸಲಾಗಿದೆ. **ಪರೇಯಿವಾಂಸಂ** ಎಂಬ ೧೪ನೇ ಸೂಕ್ತದಲ್ಲಿ ಮಧ್ಯಮಸ್ಥಾನದೇವತೆಯಾದ ಯಮನನ್ನು ಸ್ತುತಿಸಲಾಗಿದೆ.

156. ಈ ೧೪ನೇ ಸೂಕ್ತದ ಆರನೆಯ ಋಕ್ಕಿನಲ್ಲಿ, ಅಥರ್ವಾಣರು, ಭೃಗುಗಳು, ಅಂಗಿರಸರು, ಪಿತೃಗಳು (ಇವರೆಲ್ಲರೂ ಪಿತೃದೇವತೆಗಳಲ್ಲಿ ಬೇರೆ ಬೇರೆ ಪಂಗಡದವರು) ಸ್ವರ್ಗಲೋಕಕ್ಕೆ ಸಂಬಂಧಪಟ್ಟಿರುವ ಕೆಲವು ದೇವತೆಗಳ ಗುಂಪುಗಳು, ಇವರೆಲ್ಲರನ್ನೂ ಸ್ತುತಿಸಲಾಗಿದೆ.

153. Him (Indra) the Sindhudvipa himself besprinkled, to the accompaniment of the hymn (ಸೂಕ್ತೇನ) 'O waters' (ಆಪಃ : x. 9), for the removal of that unpropitious sin.

154. Yama rejects Yami who solicits him with a view to sexual intercourse: the dialogue, 'Hither, indeed' (ಓಚಿತ್ : x. 10) of those two children of Vivasvat is (descriptive of) that.

155. The two (hymns beginning) 'The bull' (ವೃಷಾ : x. 11-12) are addressed to Agni. In the hymn (ಅತ್ರ) 'I yoke for you' (ಯುಜೇ ವಾಂ x. 13) the two oblation carts are praised together. In 'Him who has passed away (ಪರೇಯಿವಾಂಸಂ : x. 14) the Middle Yama is praised.

156. Then the Atharvans, the Bhrgus, the Angirases, Fathers are praised together in the sixth (stanza) there (x. 14-6), as groups of gods (ದೇವಗಣ) connected with heaven (ದ್ಯುಭಕ್ತಿ).

ಪಿತೃಭಿಶ್ಚಾಂಗಿರೋಭಿಶ್ಚ ಸಂಸ್ತುತೋ ದೃಶ್ಯತೇ ಯಮಃ |
ಮಂತ್ರೇಷು ಬಹುಶಃ ಪಾದೇ ವಿವಸ್ವಂತಂ ಪಿತಾ ಹಿ ಸಃ || ೧೫೭ ||
ಸಂಸ್ಕಾರ್ಯಪ್ರೇತಸಂಯುಕ್ತೈಃ ಪಿತೃಭಿಃ ಸ್ತೂಯತೇ ಯಮಃ |
ಪ್ರೇಹಿ ಪ್ರೇಹೀತಿ ತಿಸೃಷು ಪ್ರೇತಾಶಿಷ ಉದಾಹೃತಾಃ || ೧೫೮ ||
ಪಿತೄಣಾಂ ಹಿ ಪತಿರ್ದೇವೋ ಯಮಸ್ತಸ್ಮಾತ್ಸ ಸೂಕ್ತಭಾಕ್ |
ಅತಿ ದ್ರವ ತೃಚೇ ಶ್ವಾನೌ ಪರಂ ಪಿತ್ರ್ಯಮುದೀರತಾಂ || ೧೫೯ ||

157. ಅನೇಕ ಮಂತ್ರಗಳಲ್ಲಿ ಯಮನು ಪಿತೃದೇವತೆಗಳೊಡನೆಯೂ ಅಂಗಿರಸರೊಡನೆಯೂ ಸ್ತುತಿಸಲ್ಪಟ್ಟಿರುವುದು ಕಂಡುಬರುವುದು. ೧೪ ನೇ ಸೂಕ್ತದ ೫ ನೇ ಋಕ್ಕಿನ **ವಿವಸ್ವಂತಂ ಹುವೇ** ಎಂಬ ಉತ್ತರಾರ್ಧದಲ್ಲಿ ಯಮನನ್ನೇ ಪಿತೃವೆಂದು ಕರೆದು ಸ್ತುತಿಸಲಾಗಿದೆ.

158. ಮೃತರಾದವರ ಪ್ರೇತ (ಅಂತ್ಯ) ಸಂಸ್ಕಾರಕರ್ಮಗಳಲ್ಲಿ ಯಮನು ಪಿತೃಗಣಗಳೊಡನೆ ಸ್ತುತನಾಗಿರುವನು. ೧೪ ನೇ ಸೂಕ್ತದ **ಪ್ರೇಹಿ ಪ್ರೇಹಿ** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿ (೭-೯) ಮೃತರಾದವರ ವಿಷಯದಲ್ಲಿ ಒಳ್ಳೆಯದನ್ನು ಹಾರೈಸಿ ಆಶೀರ್ವಚನವನ್ನು ಪಠಿಸಲಾಗಿದೆ.

159. ಯಮನು ಪಿತೃದೇವತೆಗಳಿಗೆ ಪ್ರಭು (ಪತಿ) ವಾಗಿರುವನು. ಆದ್ದರಿಂದ ಪಿತೃಗಳನ್ನು ಸ್ತುತಿಸಿರುವ ಈ ೧೪ ನೇ ಸೂಕ್ತಕ್ಕೆ ಅವನೇ ಪ್ರಧಾನದೇವತೆಯು. ೧೪ ನೇ ಸೂಕ್ತದ **ಅತಿ ದ್ರವ** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿ (೧೦-೧೨) ಯಮನ ಎರಡು ನಾಯಿಗಳನ್ನು ಸ್ತುತಿಸಲಾಗಿದೆ. **ಉದೀರತಾಂ** ಎಂಬ ಮುಂದಿನ ೧೫ ನೇ ಸೂಕ್ತದಲ್ಲಿ ಪಿತೃಗಳನ್ನು ಸ್ತುತಿಸಲಾಗಿದೆ.

---

### 32. Deities of RV. x. 14 (continued), 15-16. Three Agnis.

157. Yama is frequently seen praised with the Fathers and the Angirases in the formulas ; for in the verse 'vivasvat' (ವಿವಸ್ವಂತ : x. 14.5) he (himself appears as) a Father.

158. Yama is praised with the Fathers in conjunction with the deceased man who is to be hallowed (ಸಂಸ್ಕಾರ್ಯ). In the three (stanzas) 'Go forth, go forth' (ಪ್ರೇಹಿ ಪ್ರೇಹಿ : x. 14, 7-9) prayers for the deceased man are uttered.

159. The god Yama is Lord af the Fathers ; therefore he owns the hymn (ಸೂಕ್ತಭಾಜ).

In the triplet 'Run past' (ಅತಿ ದ್ರವ : x. 14. 10-12) the two dogs (are praised). The following (Hymn) 'Let them arise (ಉದೀರತಾಂ : x. 15) is addressed to the Fathers.

ಉತ್ತರೇಣ ತು ಸೂಕ್ತೇನ ಶ್ಮಶಾನೇ ಕರ್ಮ ಶಂಸತಿ ।
ಪಿತೃದೇವಾಸುರಾಣಾಂ ಚ ಅಭವನ್ನಗ್ನಯಸ್ತ್ರಯಃ
ಹವ್ಯಕವ್ಯವಹೌ ಚೋಭೌ ಸಹರಕ್ಷಾಶ್ಚ ನಾಮ ಯಃ ॥ ೧೬೦ ॥
ತತ್ರ ನ್ಯೈನಮಿತಿ ತ್ವೇತತ್ಕವ್ಯವಾಹನಸಂಸ್ತುತಿಃ ।
ಇತರಾಣಿ ತು ದೈವಸ್ಯ ಸ್ತುತಿರ್ನಾಸ್ಯಾ ಸುರಸ್ಯ ಚ ॥ ೧೬೧ ॥
ಅಭವನ್ಮಿಥುನಂ ತ್ವಷ್ಟುಃ ಸರಣ್ಯೂಸ್ತ್ರಿಶಿರಾಃ ಸಹ ।
ಸ ವೈ ಸರಣ್ಯೂಂ ಪ್ರಾಯಚ್ಛತ್ಸ್ವಯಮೇವ ವಿವಸ್ವತೇ ॥ ೧೬೨ ॥

160. ಮುಂದಿನ ಸೂಕ್ತದಲ್ಲಿ ಶ್ಮಶಾನದಲ್ಲಿ ನಡೆಯುವ ಅಂತ್ಯಕ್ರಿಯೆಗಳನ್ನು ವಿವಂಸಲಾಗಿದೆ. ಪಿತೃ, ದೇವತೆಗಳು, ಅಸುರರು, ಇವರಿಗೆ ಸಂಬಂಧಪಟ್ಟಂತೆ ಮೂರುವಿಧವಾದ ಅಗ್ನಿಗಳಿರುವವು. ಹೇಗೆಂದರೆ ದೇವತೆಗಳಿಗೆ ಹವ್ಯ (ಹವಿಸ್ಸು) ವನ್ನು ವಹಿಸುವ ಅಗ್ನಿಗೆ **ಹವ್ಯವಾಟ್** ಎಂತಲೂ ಪಿತೃಗಳಿಗೆ ಕವ್ಯ (ಅನ್ನ) ವನ್ನು ವಹಿಸುವ ಅಗ್ನಿಗೆ **ಕವ್ಯವಾಟ್** ಎಂತಲೂ ಹೆಸರು. ಯಜ್ಞಾದಿಕರ್ಮಗಳಲ್ಲಿ ಅಸುರರು ಬಂದು ವಿಘ್ನಮಾಡದಂತೆ ಅವರನ್ನು ತಡೆಗಟ್ಟುವ ಅಗ್ನಿಗೆ **ಸಹರಕ್ಷಃ** (ರಕ್ಷೋಹಾಗ್ನಿ) ಎಂದು ಹೆಸರು.

161. **ನ್ಯೈನಮಗ್ನೇ** ಎಂಬ ೧೬ ನೇ ಸೂಕ್ತದಲ್ಲಿ ಕವ್ಯವಾಹನನೆಂಬ ಅಗ್ನಿಯ ಸ್ತುತಿ ಇದೆ. ಇತರ ಸೂಕ್ತಗಳಲ್ಲಿ ಹವ್ಯವಾಹನನೆಂಬ ಅಗ್ನಿಯ ಸ್ತುತಿ ಇದೆ. ಆದರೆ ಇತರ ಸೂಕ್ತಗಳಲ್ಲಿ ಪಿತೃಗಳನ್ನಾಗಲೀ, ಅಸುರರನ್ನಾಗಲೀ ಸ್ತುತಿಸಿರುವುದು ಕಂಡುಬರುವುದಿಲ್ಲ.

### ಸರಣ್ಯೂದೇವಿಯ ವೃತ್ತಾಂತ

162. ತ್ವಷ್ಟೃವಿಗೆ ಸರಣ್ಯೂ ಮತ್ತು ತ್ರಿಶಿರಾಃ ಎಂಬ ಈರ್ವರು ಅವಳಿಮಕ್ಕಳಿದ್ದರು. ಅವರಲ್ಲಿ ಸರಣೂ ಎಂಬ ಕನ್ಯೆಯನ್ನು ವಿವಸ್ವಾನ್ ಎಂಬುವನಿಗೆ ತಾನೇ ನಿಂತು ವಿವಾಹಮಾಡಿಕೊಟ್ಟನು.

---

160. But with the following hymn (the seer) proclaims the rite in the burning ground.

There were three Agnis belonging (respectively) to the Fathers, the Gods, and the Asuras: the two who bear oblations (ಹವ್ಯ) and food offerings (ಕವ್ಯ) and he who is called Saharaksas. (ಸಹರಕ್ಷಃ)

161. Now with regard to these (ತತ್ರ) the (hymn) 'Not him' (ನ್ಯೈನಂ x. 16) is (in) praise of the bearer of food offerings (ಕವ್ಯ). Other (hymns) however are (in) praise of the divine (Agni), not of this one (connected with the Fathers), nor of the demoniac one (ಅಸುರ).

### 33. Story of Saranyu : RV. x. 17.

162. Tvastr had twin children, Saranyu as well as Trisiras. He himself gave Saranyu in marrige to Vivasvat.

**ತತಃ ಸರಣ್ಯ್ವಾಂ ಜಜ್ಞಾತೇ ಯಮಯಮ್ಯೌ ವಿವಸ್ವತಃ |**
**ತೌ ಚಾಪ್ಯುಭೌ ಯಮಾವೇವ ಜಾಯಾಂಸ್ತಾಭ್ಯಾಂ ತು ವೈ ಯಮಃ** || ೧೬೩ ||

**ಜ್ಯಾಯಾಂಸ್ತಾಭ್ಯಾಂ ತು ವೈ ಯಮಃ**

**ಇತಿ ಬೃಹದ್ದೇವತಾಯಾಂ ಷಷ್ಠೋಽಧ್ಯಾಯಃ**

163. ವಿವಸ್ವಂತನಿಗೆ ಸರಣ್ಯೂದೇವಿಯಲ್ಲಿ ಯಮ (ಪುತ್ರ) ಯಮೀ (ಪುತ್ರಿ) ಎಂಬ ಇಬ್ಬರು ಅವಳೀ ಮಕ್ಕಳು ಹುಟ್ಟಿದರು. ಅವರಲ್ಲಿ ಯಮನೇ ಹಿರಿಯವನು.

ಇಲ್ಲಿಗೆ ಆರನೆಯ ಅಧ್ಯಾಯವು ಸಮಾಪ್ತವು.

163. Then Yama and Yami were begotten on Saranyu by Vivasvat. And these two also were twins but the elder of the two was Yama.

Thus ends 6th Chapter.



# ಅಥ ಬೃಹದ್ದೇವತಾಯಾಂ ಸಪ್ತಮೋಽಧ್ಯಾಯಃ

ಸೃಷ್ಟ್ವಾ ಭರ್ತುಃ ಪರೋಕ್ಷಂ ತು ಸರಣ್ಯೂಃ ಸದೃಶೀಂ ಸ್ತ್ರಿಯಂ ।
ನಿಕ್ಷಿಪ್ಯ ಮಿಥುನಂ ತಸ್ಯಾಮಶ್ವಾ ಭೂತ್ವಾಪಚಕ್ರಮೇ ॥ ೧ ॥
ಅವಿಜ್ಞಾನಾದ್ವಿವಸ್ವಾಂಸ್ತು ತಸ್ಯಾಮಜನಯನ್ಮನುಂ ।
ರಾಜರ್ಷಿರಭವತ್ಸೋಽಪಿ ವಿವಸ್ವಾನಿವ ತೇಜಸಾ ॥ ೨ ॥
ಸ ವಿಜ್ಞಾಯ ತ್ವಪಕ್ರಾಂತಾಂ ಸರಣ್ಯೂಮಶ್ವರೂಪಿಣೀಂ ।
ತ್ವಾಷ್ಟ್ರೀಂ ಪ್ರತಿ ಜಗಾಮಾಶು ವಾಜೀ ಭೂತ್ವಾ ಸಲಕ್ಷಣಃ ॥ ೩ ॥

## ಏಳನೆಯ ಅಧ್ಯಾಯವು.

**ಸರಣ್ಯೂವಿನ ವೃತ್ತಾಂತ** (ಮುಂದುವರೆದುದು.)

1. ಒಂದಾನೊಂದು ಸಮಯದಲ್ಲಿ ತನ್ನ ಪತಿಯು ಮನೆಯಲ್ಲಿಲ್ಲದ ಸಮಯದಲ್ಲಿ ಸರಣ್ಯೂವು ತನ್ನಂತೆಯೇ ಇರುವ ಒಂದು ಪ್ರತಿಕೃತಿಯನ್ನು ಸ್ತ್ರೀರೂಪವನ್ನು ನಿರ್ಮಿಸಿ (ಸೃಷ್ಟಿಸಿ) ಆ ಸ್ತ್ರೀಯ ವಶಕ್ಕೆ ತನ್ನ ಇಬ್ಬರು ಮಕ್ಕಳನ್ನು (ಯಮ ಮತ್ತು ಯಮೀ) ಒಪ್ಪಿಸಿ ತಾನು ಅಶ್ವರೂಪಿಣಿಯಾಗಿ ಹೊರಟುಹೋದಳು.

2. ವಿವಸ್ವಂತನು ಮನೆಗೆ ಬಂದ ಮೇಲೆ ಅವನಿಗೆ ಈ ಕೃತ್ರಿಮವು ಗೊತ್ತಾಗಲಿಲ್ಲ. ಆ ಕೃತಕಸ್ತ್ರೀಯಲ್ಲಿ ವಿವಸ್ವಂತನು ಮನುವೆಂಬ ಪುತ್ರನನ್ನು ಉತ್ಪತ್ತಿಮಾಡಿದನು. ಆ ಮನುವೂ ಸಹ ತನ್ನ ತಂದೆಯಾದ ವಿವಸ್ವಂತನಂತೆ ಅತಿತೇಜಸ್ವಿಯಾದ ರಾಜರ್ಷಿಯಾದನು.

3. ಕೆಲವುಕಾಲದ ಮೇಲೆ ತನ್ನ ಪತ್ನಿಯಾದ ಸರಣ್ಯೂದೇವಿಯು ನಡೆಸಿದ ಕೃತ್ರಿಮವು ಎಂದರೆ ಅಶ್ವರೂಪಿಣಿಯಾಗಿ ಹೊರಟುಹೋಗಿರುವುದು ಗೊತ್ತಾಯಿತು. ಆದ್ದರಿಂದ ವಿವಸ್ವಂತನು ತಾನೂ ಉತ್ತಮ ಲಕ್ಷಣಗಳುಳ್ಳ ಅಶ್ವರೂಪವನ್ನು ತಾಳಿ ತ್ವಷ್ಟೃಪುತ್ರಿಯಾದ ಆ ಸರಣ್ಯೂವಿದ್ದ ಕಡೆಗೆ ಬೇಗನೆ ಹೋದನು.

1. **Story of Saranyu** (continued).

1. Now Saranyu having created, in the absence of her husband, a female similar(to herself)and having entrusted to her the pair (of children), turned herself into a mare and departed.

2. But Vivasvat, in ignorance (of this), begot Manu on that (substitute). He (ಮನು) became a royal seer, like Vivasvat in brilliance.

3. When, however, he (ವಿವಸ್ವತ್) had become aware that Saranyu had departed in the shape of a mare, quickly went after the daughter of Tvastr, having turned himself into a horse with similar characteristics (to hers).

ಸರಣ್ಯೂಶ್ಚ ವಿವಸ್ವಂತಂ ವಿದಿತ್ವಾ ಹಯರೂಪಿಣಂ ।
ಮೈಥುನಾಯೋಪಚಕ್ರಾಮ ತಾಂ ಚ ತತ್ರಾರುರೋಹ ಸಃ ॥ ೪ ॥

ತತಸ್ತಯೋಸ್ತು ವೇಗೇನ ಶುಕ್ರಂ ತದಪತದ್ಭುವಿ ।
ಉಪಾಜಿಘ್ರಚ್ಚ ಸಾ ತ್ವಶ್ವಾ ತಚ್ಛುಕ್ರಂ ಗರ್ಭಕಾಮ್ಯಯಾ ॥ ೫ ॥

ಆಘ್ರಾತಮಾತ್ರಾಚ್ಛುಕ್ರಾತ್ತು ಕುಮಾರೌ ಸಂಬಭೂವತುಃ ।
ನಾಸತ್ಯಶ್ಚೈವ ದಸ್ರಶ್ಚ ಯೌ ಸ್ತುತಾವಶ್ವಿನಾವಿತಿ ॥ ೬ ॥

ಇತಿಹಾಸಮಿಮಂ ಯಾಸ್ಕಃ ಸರಣ್ಯೂದೇವತೇ ದ್ವ್ಯೃಚೇ ।
ವಿವಸ್ವತಶ್ಚ ತ್ವಷ್ಟುಶ್ಚ ತ್ವಷ್ಟೇತಿ ಸಹ ಮನ್ಯತೇ ॥ ೭ ॥

4. ವಿವಸ್ವಂತನೇ ಅಶ್ವರೂಪದಿಂದ ತನ್ನ ಬಳಿಗೆ ಬಂದಿರುವನೆಂಬ ವಿಷಯವು ಅಶ್ವರೂಪದಿಂದಿದ್ದ ಸರಣ್ಯೂವೀಗೆ ತಿಳಿಯಿತು. ಆಗ ಅವಳು ಅವನೊಡನೆ ಸಂಭೋಗವನ್ನಿಚ್ಛಿಸಲು, ವಿವಸ್ವಂತನು ಅವಳ ಇಚ್ಛೆಯನ್ನು ಪೂರೈಸಿದನು.

5. ಅವರ ಸಂಭೋಗಕಾಲದಲ್ಲಿ ವಿವಸ್ವಂತನ ವೀರ್ಯವು ಭೂಮಿಯ ಮೇಲೆ ಬಿದ್ದಿತು. ಅಶ್ವರೂಪಿಣಿಯಾದ ಸರಣ್ಯೂವು ತನಗೆ ಗರ್ಭಧಾರಣೆಯಾಗಬೇಕೆಂಬ ಇಚ್ಛೆಯಿಂದ ನೆಲದ ಮೇಲೆ ಬಿದ್ದಿದ್ದ ಆ ವೀರ್ಯವನ್ನು ಮೂಸಿ ನೋಡಿದಳು.

6. ಮೂಸಿನೋಡಿದ ಮಾತ್ರಕ್ಕೆ ಗರ್ಭವುಂಟಾಗಿ ಅದರಿಂದ ಈರ್ವರು ಕುಮಾರರು ಜನಿಸಿದರು. ಅವರೇ ನಾಸತ್ಯ ಮತ್ತು ದಸ್ರ ಎಂಬ ಹೆಸರುಗಳಿಂದ ಪ್ರಸಿದ್ಧರಾಗಿ ಅಶ್ವಿನೀದೇವತೆಗಳೆಂದು ಸರ್ವರಿಂದಲೂ ಸ್ತುತಿಸಲ್ಪಡುವರು.

### ೧೭ ನೇ ಸೂಕ್ತದ ದೇವತೆಗಳು

7. ಈ ಇತಿಹಾಸವು ಸರಣ್ಯೂದೇವತಾಕವಾದ ೧೭ ನೇ ಸೂಕ್ತದ **ತ್ವಷ್ಟಾ ದುಹಿತ್ರೇ** ಎಂಬ ಎರಡು ಋಕ್ಕುಗಳಲ್ಲಿ (೧–೨) ಉಕ್ತವಾಗಿದೆಯೆಂದು ಯಾಸ್ಕರು ಹೇಳುವರು.

---

4. And Saranyu, recognising Vivasvat in the form of a steed, approached him for sexual intercourse, and he covered her there.

5. Then in their agitation the semen fell on the ground. And the mare, through desire of offspring, smelt the semen.

### 2. Story of Saranyu (concluded). Daities of RV. x. 17.

6. Now from the semen which had just been smelt there came into being two youths, Nasatya and Dasra, who are praised as 'Asvins'.

7. Yaska regards this as a story of Vivasvat and Tvastr togetner in the couplet 'Tvastr' (ತ್ವಷ್ಟಾ : x. 17. 1-2) which has Saranyu for its deity.

ಪೂಷೇತಿ ಪಾದೌ ಪೌಷ್ಣೌ ದ್ವಾವಾಗ್ನೇಯಾವುತ್ತರೌ ತು ಯೌ ।
ಸ್ಯಾತ್ತೃತೀಯೋಽಪಿ ವಾ ಪೌಷ್ಣಸ್ತಿಸ್ರಶ್ಚಾನ್ಯಾಃ ಪರಾಸ್ತು ಯಾಃ ॥ ೮ ॥

ಅಪಾಂ ಸ್ತುತಿಸ್ತ್ವೃಗತ್ರೈಕಾ ತೃಚಾತ್ಸಾರಸ್ವತಾತ್ಪರಾ ।
ಸ್ತುತಃ ಪರೋಕ್ಷಃ ಸೋಮಸ್ತು ದ್ರಪ್ಸ ಇತ್ಯುತ್ತರೇ ತೃಚೇ ॥ ೯ ॥

ಅಬ್ದೇವತಾಶೀರ್ವಾದೋ ವಾ ಪಯಸ್ವತ್ಯುತ್ತರಾ ತು ಯಾ ।
ಚತಸ್ರಸ್ತಾ ಸ್ತುತಿರ್ಮೃತ್ಯೋರಂತ್ಯೇ ಕ್ಲೃಪ್ತಾಶ್ಚ ಕರ್ಮಣಿ ॥ ೧೦ ॥

8. ಈ ೧೭ ನೇ ಸೂಕ್ತದ **ಪೂಷಾ ತ್ವೇತಃ** ಎಂಬ ೩ ನೇ ಋಕ್ಕಿನ ೧-೨ ಪಾದಗಳಲ್ಲಿ ಪೂಷದೇವನೂ ೩ ನೇ ಪಾದದಲ್ಲಿ ಅಗ್ನಿಯೂ ಸ್ತುತರಾಗಿರುವರು ಅಥವಾ ೩ ನೇ ಪಾದಕ್ಕೆ ಪೂಷನೇ ದೇವತೆಯೆಂದೂ ವಿಕಲ್ಪವಾಗಿ ಹೇಳಬಹುದು. ಮುಂದಿನ ಮೂರು ಋಕ್ಕುಗಳಲ್ಲಿ (೪-೬) ಪೂಷದೇವನನ್ನೇ ಸ್ತುತಿಸಲಾಗಿದೆ.

9. ಈ ಸೂಕ್ತದಲ್ಲಿರುವ ಒಂದು ಋಕ್ಕಿನಲ್ಲಿ ಎಂದರೆ ಸರಸ್ವತೀದೇವತಾಕವಾದ (೭-೯) ಋಕ್ಕುಗಳನಂತರ ಇರುವ ೧೦ ನೇ ಋಕ್ಕಿನಲ್ಲಿ **ಆಪಃ** ಎಂಬ ಅಬ್ದೇವತೆಯನ್ನು ಸ್ತುತಿಸಲಾಗಿದೆ. ಮತ್ತು **ದ್ರಪ್ಸಃ** ಎಂದು ಮೊದಲಾಗುವ ಮುಂದಿನ ಮೂರು ಋಕ್ಕುಗಳಲ್ಲಿ (೧೧-೧೩) ಅಬ್ದೇವತೆಯ ಜತೆಯಲ್ಲಿ ಸೋಮನನ್ನೂ ಪ್ರಸಂಗವಶದಿಂದ ಸ್ತುತಿಸಲಾಗಿದೆ.

10. (ಈ ೧೭ನೇ ಸೂಕ್ತದಲ್ಲಿ) **ಪಯಸ್ವತೀಃ** ಎಂಬ ಮುಂದಿನ ೧೪ನೇ ಋಕ್ಕಿನಲ್ಲಿ **ಆಪಃ** ಎಂಬ ಅಬ್ದೇವತೆಯನ್ನು ಸ್ತುತಿಸಲಾಗಿದೆ ಅಥವಾ ಅಬ್ದೇವತಾಶೀರ್ವಾದವು ಉಕ್ತವಾಗಿದೆ. ೧೮ ನೇ ಸೂಕ್ತದ ೧-೪ ನೇ ಋಕ್ಕುಗಳಲ್ಲಿ ಮೃತ್ಯುದೇವತೆಯನ್ನು ಸ್ತುತಿಸಲಾಗಿದೆ ಮತ್ತು ಈ ಮಂತ್ರಗಳು ಅಂತ್ಯಸಂಸ್ಕಾರಗಳಲ್ಲಿ ಉಪಯೋಗಿಸಲ್ಪಡುವವು.

---

8. The two verses (beginning) 'Pusan' (ಪೂಷಾ : x. 17-3) are addressed to Pusan, but the two next (3) to Agni; even the third (3) may optionally (ವಾ) be addressed to Pusan; and the other three (stanzas) which follow (4-6) are also (addressed to him).

9. But one (stanza) in this hymn (ಅತ್ರ), which follows the triplet addressed to Sarasvati (7-9), is (in) praise of the waters (10), while in the next triplet, 'The drop' (ದ್ರಪ್ಸಃ : 11-13), Soma is praised indirectly (ಪರೋಕ್ಷ).

10. But the next (stanza), 'Rich in milk' (ಪಯಸ್ವತೀಃ : 14), has the waters for its deities or is a benediction. The (next) four (stanzas : x 18. 1-4) are (in) praise of Death and are applicable (ಕ್ಲೃಪ್ತಾಃ) in the funeral (ಅಂತ್ಯ) ceremony.

**ಮೃತೇಭಿಷ್ಟೇಭ್ಯ ಆಶಾಸ್ತೇ ಇಮೇ ಜೀವಾ ಇತಿ ಜೀವನಂ ಪುನಃ ।**
**ಇಮಂ ಜೀವೇಭ್ಯ ಆಶಾಸ್ತೇ ತೇಭ್ಯಃ ಪರಿಧಿಕರ್ಮಣಿ** ॥ ೧೧ ॥

**ಯಥಾ ಧಾತ್ರ್ಯೃತ್ತರಾ ತ್ವಾಷ್ಟ್ರ್ಯೇ ತತೋ ಯಾನ್ಯಾ ಇಮಾಸ್ತ್ವಿತಿ ।**
**ಸ್ತ್ರೀಣಾಮಾಶಿಷಮಾಶಾಸ್ತೇ ತಯೈವಾಂಜನಕರ್ಮಣಿ** ॥ ೧೨ ॥

**ಉದೀರ್ಷ್ವೇ ನಾರೀತ್ಯೇನಯಾ ಮೃತಂ ಪತ್ನ್ಯನುರೋಹತಿ ।**
**ಭ್ರಾತಾ ಕನೀಯಾನ್ಪ್ರೇತಸ್ಯ ನಿಗದ್ಯ ಪ್ರತಿಷೇಧತಿ** ॥ ೧೩ ॥

**೧೮ ನೇ ಸೂಕ್ತದಲ್ಲಿ ಅಂತ್ಯಸಂಸ್ಕಾರಕ್ಕಾಗಿ ಉಪಯೋಗಿಸುವ ಕೆಲವು ಮಂತ್ರಗಳ ವಿವರಣೆ**

11. ೧೮ ನೇ ಸೂಕ್ತದ **ಇಮೇ ಜೀವಾಃ** ಎಂಬ ೩ ನೇ ಋಕ್ಕಿನಲ್ಲಿ ಮೃತ್ಯುವಶರಾಗದೆ ಜೀವಂತರಾಗಿರುವವರ ವಿಷಯದಲ್ಲಿ ದೀರ್ಘಾಯುಸ್ಸನ್ನು ತೋರಿ ಪ್ರಾರ್ಥಿಸಲಾಗಿದೆ. **ಇಮಂ ಜೀವೇಭ್ಯಃ** ಎಂಬ ೪ ನೇ ಋಕ್ಕಿನಲ್ಲಿಯೂ ಮೇಲೆ ಹೇಳಿದಂತೆ ಜೀವಂತರಾಗಿರುವವರ ವಿಷಯದಲ್ಲಿ **ಪರಿಧಿ** ಎಂಬ ಕರ್ಮದಲ್ಲಿ ಶ್ರೇಯಸ್ಸನ್ನು ಕೋರಲಾಗಿದೆ.

12. **ಯಥಾ** ಎಂಬ ೫ ನೇ ಋಕ್ಕಿನಲ್ಲಿ ಧಾತೃವನ್ನೂ ಮುಂದಿನ ೬ ನೇ ಋಕ್ಕಿನಲ್ಲಿ ತ್ವಷ್ಟೃವನ್ನೂ ಸ್ತುತಿಸಲಾಗಿದೆ. **ಇಮಾ ನಾರೀಃ** ಎಂಬ ೭ ನೇ ಋಕ್ಕಿನಲ್ಲಿ—ಈ ಸ್ತ್ರೀಯರು ಕಣ್ಣುಗಳಿಗೆ ಕಪ್ಪನ್ನು ಹಚ್ಚಿಕೊಂಡು ಶೋಭನಾಲಂಕಾರಯುಕ್ತರಾಗಿ ಸುಮಂಗಲಿಯರಾಗಿ (ತಮ್ಮ ಪತಿಯರೊಡನೆ ಬಾಳುವವರಾಗಿ) ಬಹುಕಾಲ ಜೀವಿಸಿರಲೆಂಬ ಆಶ್ವಾಸನೆಯು ಉಕ್ತವಾಗಿದೆ.

13. **ಉದೀರ್ಷ್ವ ನಾರಿ** ಎಂಬ ೮ ನೇ ಋಕ್ಕಿನಲ್ಲಿ—ಮೃತನಾದ ಪುರುಷನ ಪತ್ನಿಯು ತನ್ನ ಪತಿಯ ಮೃತಶರೀರವನ್ನನುಸರಿಸಿ ಚಿತಿಯನ್ನೇರುತ್ತಾಳೆ. ಮೃತನ ತಮ್ಮನು ಹಾಗೆ ಮಾಡಬೇಡವೆಂದು ಹೇಳಿ ಆ ಸ್ತ್ರೀಯನ್ನು ತಡೆಯುತ್ತಾನೆ—ಎಂಬ ವಿಷಯವು ಉಕ್ತವಾಗಿದೆ.

---

### 3. Detailed account of the funeral hymns RV. x. 18.

11. The (stanza) 'These' (ಇಮೇ : x. 18-3) prays for long life for those who have escaped death ; 'For the living this' (ಇಮಂ ಜೀವೇಭ್ಯಃ : 4) again prays (for it) for them in the ceremony with the barrier (ಪರಿಧಿ).

12. 'As' (ಯಥಾ: x. 18-5) is addressed to Dhatr; the next to Tvastr (6), then with another (7), 'These wives'(ಇಮಾಃ),he (the seer) utters a prayer for the women in the ceremony with collyrium (ಅಂಜನ).

13. With the (stanza) 'Rise up, O woman' (ಉದೀರ್ಷ್ವ ನಾರಿ : x. 18-8) the wife ascends (the funeral pyre) after her dead (husband). The younger brother of the departed, repeating (the stanza), prohibits (her).

ಕುರ್ಯಾದೇತತ್ಕರ್ಮ ಹೋತಾ ದೇವರೋ ನ ಭವೇದ್ಯದಿ ।
ಪ್ರೇತಾನುಗಮನಂ ನ ಸ್ಯಾದಿತಿ ಬ್ರಾಹ್ಮಣಶಾಸನಾತ್ ॥ ೧೪ ॥
ವರ್ಣಾನಾಮಿತರೇಷಾಂ ಚ ಸ್ತ್ರೀಧರ್ಮೋಽಯಂ ಭವೇನ್ನ ವಾ ।
ಶಾಂತ್ಯರ್ಥಂ ಧನುರಾದಾನೇ ಪ್ರೇತಸ್ಯರ್ಚಂ ಧನುರ್ಜಪೇತ್ ।
ಯಸ್ಮಾದೇತಾಃ ಪ್ರಯುಜ್ಯಂತೇ ಶ್ಮಶಾನೇ ಚಾಂತ್ಯಕರ್ಮಣಿ ॥ ೧೫ ॥
ತಸ್ಮಾದ್ವದೇತ್ತ್ರ್ಯಚಸ್ಯಾಸ್ಯ ದೇವತಾಂ ಮೃತ್ಯುಮೇವ ತು ।
ಮಂತ್ರೇಷು ಹ್ಯನಿರುಕ್ತೇಷು ದೇವತಾಂ ಕರ್ಮತೋ ವದೇತ್ ॥ ೧೬ ॥

14. ಮೃತನಿಗೆ ತಮ್ಮನಿಲ್ಲದಿದ್ದಲ್ಲಿ ಆ ಕಾರ್ಯವನ್ನು (ಸ್ತ್ರೀಯು ಪತಿಯೊಡನೆ ಸಹಗಮನಮಾಡುವುದನ್ನು ತಡೆಗಟ್ಟುವ ಕಾರ್ಯವನ್ನು) ಹೋತೃವು ಎಂದರೆ ಪುರೋಹಿತನು ಮಾಡಬೇಕು. ಏಕೆಂದರೆ ಮೃತನ ಪತ್ನಿಯು ತನ್ನ ಪತಿಯ ಶರೀರವನ್ನನುಸರಿಸಿ ಸಹಗಮನಮಾಡುವುದನ್ನು ಬ್ರಾಹ್ಮಣದ ವಾಕ್ಯವು ನಿಷೇಧಿಸುವುದು.

15 ಈ ಸಹಗಮನ ಪದ್ಧತಿಯು (ಸ್ತ್ರೀಧರ್ಮವು) ಇತರ ಜಾತಿಯವರಿಗೆ ಅನ್ವಯಿಸಬಹುದು ಅಥವಾ ಅನ್ವಯಿಸದಿರಬಹುದು. ಮೃತನಾದವನ ಕೈಯಲ್ಲಿದ್ದ ಧನುಸ್ಸನ್ನು ತೆಗೆಯುವಾಗ ಶಾಂತ್ಯರ್ಥವಾಗಿ **ಧನುರ್ಹಸ್ತಾತ್** ಎಂಬ ೯ನೇ ಋಕ್ಕನ್ನು ಪಠಿಸಬೇಕು. ಏಕೆಂದರೆ ಶ್ಮಶಾನದಲ್ಲಿ ಅಂತ್ಯಕ್ರಿಯೆಯು ನಡೆಯುತ್ತಿರುವಾಗ ಈ ಮಂತ್ರಗಳನ್ನು ಪಠಿಸುತ್ತಾ ಕಾರ್ಯಗಳನ್ನು ಮಾಡಬೇಕಾಗಿರುವುದು. ಎಂದರೆ ಅಂತ್ಯಕ್ರಿಯೆಗಳಲ್ಲಿ ಈ ಮಂತ್ರಗಳನ್ನು ಉಪಯೋಗಿಸುವುದು ರೂಢಿಯು.

### ಯಾವ ದೇವತೆಯ ಹೆಸರೂ ಇಲ್ಲದ ಕೆಲವು ಮಂತ್ರಗಳು

16. ಈ ೧೮ನೇ ಸೂಕ್ತದಲ್ಲಿರುವ ೭-೯ನೇ ಋಕ್ಕುಗಳಿಗೆ ಮೃತ್ಯುವೇ ದೇವತೆಯೆಂದು ಹೇಳಬೇಕು. ಮಂತ್ರಗಳಲ್ಲಿ ದೇವತೆಗಳ ಹೆಸರುಗಳಿಲ್ಲದಿರುವಾಗ, ಆ ಮಂತ್ರಗಳಲ್ಲಿ ಯಾವ ಕರ್ಮದ ವಿವರಣೆ ಇದೆಯೋ ಅದನ್ನನುಸರಿಸಿ ಸಂದರ್ಭಾನುಸಾರವಾಗಿ ಆ ಮಂತ್ರಗಳಿಗೆ ಇಂತಹ ದೇವತೆಯೆಂದು ಹೇಳಬೇಕು. [ಉದಾಹರಣೆಗೆ–ಈ ೭-೯ನೇ ಋಕ್ಕುಗಳಲ್ಲಿ ಅಂತ್ಯಕರ್ಮಗಳ ವಿವರಣೆ ಇರುವುದರಿಂದ ಈ ಮಂತ್ರಗಳಿಗೆ ಮೃತ್ಯುವೇ ದೇವತೆಯೆಂದು ಹೇಳಬಹುದು ಎಂದಭಿಪ್ರಾಯವು.]

14. The Hotr ought to perform this rite, should there be no brother-in-law, because a Brahmana enjoins that (the widow) should not follow the departed (husband).

15. This law regarding women may or may not apply to the other castes.

In taking the bow (from the hand) of the departed man, one should mutter (stanza) 'The bow' (ಧನುಃ : x. 18-9) for the sake of averting evil. And because these (stanzas) are employed on the burning ground at the funeral ceremony.

### 4. Formulas in which no deity is mentioned.

16. One should state the deity of this triplet (x. 18. 7-9) to be Death (ಮೃತ್ಯು). For in the formulas (in which it is) not expressly mentioned, one should state the deity from the ceremony.

ಮಂತ್ರತಃ ಕರ್ಮತಶ್ಚೈವ ಪ್ರಜಾಪತಿರಸಂಭವೇ ।
ಪರಾಶ್ಚತಸ್ರೋ ಯಾಸ್ತ್ವತ್ರ ಉಪ ಸರ್ಪೇತಿ ಪಾರ್ಥಿವೀ ॥ ೧೭ ॥
ತಾಸಾಂ ಪ್ರಯೋಗಃ ಪ್ರೇತಸ್ಯ ಅಸ್ಥಿಸಂಚಯಕರ್ಮಣಿ ।
ಪ್ರತೀಚೀನೇ ಯಥಾಹಾನಿ ಅಪಹೃತ್ಯೇತರಾಣಿ ತು ॥ ೧೮ ॥
ಅಹಃಸ್ವ ಪಿತರೋ ದಧುರಿತ್ಯಾಶಾಸ್ತೇಽನ್ತ್ಯಯಾಶಿಷಃ ।
ಅಹಃಸ್ವಾಗಾಮಿಷು ಚ ಮಾಂ ಪ್ರಯಂತಂ ಸಮಜೀವಯನ್ ॥ ೧೯ ॥
ನಿವರ್ತಧ್ವಮಿತೀದಂ ತು ಗವಾಂ ಕೇಚಿದಪಾಂ ವಿದುಃ ।
ಅರ್ಧರ್ಚಃ ಪ್ರಥಮಾಯಾಸ್ತು ಅಗ್ನೀಷೋಮೀಯ ಉತ್ತರಃ ॥ ೨೦ ॥

17. ಒಂದು ಮಂತ್ರದಲ್ಲಿ ಹೇಳಿರುವ ವಿಷಯವಾಗಲಿ, ಕರ್ಮದ ವಿವರಣೆಯಾಗಲಿ ಸ್ಪಷ್ಟವಾಗಿರದಿದ್ದರೆ, ಅಂತಹ ಸಂದರ್ಭದಲ್ಲಿ ಆ ಮಂತ್ರಕ್ಕೆ ಪ್ರಜಾಪತಿಯೇ ದೇವತೆಯೆಂದು ಹೇಳಬೇಕು. ಇನ್ನು ೧೮ನೇ ಸೂಕ್ತದ ೧೦-೧೩ನೇ ಋಕ್ಕುಗಳಲ್ಲಿ ಮೊದಲನೆಯದಾದ **ಉಪ ಸರ್ಪ** ಎಂಬ ೧೦ನೇ ಋಕ್ಕಿನಲ್ಲಿ ಭೂಮಿಯನ್ನು ಪ್ರಾರ್ಥಿಸಲಾಗಿದೆ.

18-19. ಈ ನಾಲ್ಕು ಋಕ್ಕುಗಳನ್ನು (೧೦-೧೩) ಮುಖ್ಯವಾಗಿ ಮೃತನಾದವನ ಶರೀರವು ದಹಿಸಲ್ಪಟ್ಟ ನಂತರ ಅಲ್ಲಿರುವ ಅಸ್ಥಿಗಳನ್ನು (ಎಲಬುಗಳನ್ನು) ಒಟ್ಟುಗೂಡಿಸುವ ಅಸ್ಥಿಸಂಚಯವೆಂಬ ಕರ್ಮದಲ್ಲಿ ಉಪಯೋಗಿಸಲಾಗುವುದು. ಈ ಸೂಕ್ತದ **ಪ್ರತೀಚೀನೆ** ಎಂಬ ಕೊನೆಯ ಋಕ್ಕಿನಲ್ಲಿ (೧೪) ಹಿಂದೆ ಕಳೆದುಹೋದ ದಿವಸಗಳಲ್ಲಿ ಪಿತೃಗಳು ನನ್ನನ್ನು ಹೇಗೆ ನೋಡಿಕೊಂಡರೋ ಅದರಂತೆ ಮುಂದೆ ಬರುವ ದಿವಸಗಳಲ್ಲಿಯೂ ನಾನು ಪೂರ್ಣಾಯುಸ್ಸಿನಿಂದ ಜೀವಿಸುವಂತೆ ಇಟ್ಟಿರಬೇಕೆಂಬ–ಆಶ್ವಾಸನೆಯನ್ನು ಆಶೀರ್ವಾದರೂಪದಲ್ಲಿ ಋಷಿಯು ವ್ಯಕ್ತಪಡಿಸಿದಾನೆ.

20. **ನಿವರ್ತಧ್ವಂ** ಎಂಬ ೧೯ ನೇ ಸೂಕ್ತದಲ್ಲಿ ಗೋವುಗಳನ್ನು ಸ್ತುತಿಸಲಾಗಿದೆ. ಕೆಲವರು ಈ ಸೂಕ್ತಕ್ಕೆ **ಆಪಃ** ಎಂಬ ಅಬ್ದೇವತೆಯೇ ದೇವತೆಯೆಂದು ಹೇಳುವರು. ಈ ಸೂಕ್ತದ ಮೊದಲನೆಯ ಋಕ್ಕಿನ ಉತ್ತರಾರ್ಧದಲ್ಲಿ ಅಗ್ನಿ ಮತ್ತು ಸೋಮದೇವತೆಗಳು ಸ್ತುತಿಸಲ್ಪಟ್ಟಿರುವರು.

---

17. When there is lack (of a deity) from the (evidence of the) formula and the ceremony as well, Prajapati is (the deity).

Now as to the following four (stanzas : x. 18. 10-13) here, 'Approach' (ಉಪ ಸರ್ಪ : 10) is addressed to the Earth.

18-19. Their application is in the ceremony of collecting the bones of the departed. Now with the last (stanza) 'In the future' (ಪ್ರತೀಚೀನೇ : x. 18,14) he (the seer) expresses a prayer (in saying), As having taken away (my) other days, the Fathers placed (me) in (past) days.

(So) they also restored me, about to die (ಪ್ರಯಂತಂ), to life in days to come.

20. Now the (hymn) 'Turn back' (ನಿವರ್ತಧ್ವಂ : x. 19) is (in praise) of Cows; some regard it as (in praise) of the Waters. The latter hemistich of the first (stanza : 1) is however, addressed to Agni-Soma.

ಐಂದ್ರೀ ಷಷ್ಠೀ ದ್ವಿತೀಯಾಯಾಮುಭೌ ದೇವೌ ನಿಪಾತಿತೌ ।
ದಶಾಕ್ಷರಂ ತು ಶಾಂತ್ಯರ್ಥಂ ಮಾನಸಂ ಸೂಕ್ತಮುಚ್ಯತೇ ॥ ೨೧ ॥
ತ್ರೀಣ್ಯೈಂದ್ರಾಣಿ ಕುಹೇತ್ಯತ್ರ ಆಗ್ನೇಯಾಭ್ಯಾಂ ಪರಾಣಿ ತು ।
ತೃಚೋಽತ್ರಾಸ್ತ್ಯಾಶ್ವಿನಸ್ತ್ವೇಕ ಐಂದ್ರಾಣಾಮುತ್ತಮೇ ಯುವಂ ॥ ೨೨ ॥
ಭದ್ರಂ ಸೌಮ್ಯಂ ಪ್ರ ಹಿ ಪೌಷ್ಣಂ ತ್ರೀಣ್ಯೈಂದ್ರಾಣಿ ಪರಾಣ್ಯಸತ್ ।
ತೇಷಾಮಾದ್ಯೇನ ಮತ್ತಃ ಸನ್ಸ್ವಾನಿ ಕರ್ಮಾಣಿ ಶಂಸತಿ ॥ ೨೩ ॥

### ೧೯–೨೭ ನೇ ಸೂಕ್ತಗಳ ದೇವತೆಗಳು

21. ೧೯ ನೇ ಸೂಕ್ತದ ೬ ನೇ ಋಕ್ಕಿನಲ್ಲಿ ಇಂದ್ರನು ಸ್ತುತನಾಗಿರುವನು. ೨ ನೇ ಋಕ್ಕಿನಲ್ಲಿ ಇಂದ್ರ ಮತ್ತು ಅಗ್ನಿಯೆಂಬ ಈರ್ವರು ದೇವತೆಗಳನ್ನು ಪ್ರಸಂಗವಶದಿಂದ ಸ್ತುತಿಸಲಾಗಿದೆ. ಮುಂದಿನ ೨೦ ನೇ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಹತ್ತು ಅಕ್ಷರಗಳ ಒಂದು ಪಾದಮಾತ್ರವಿರುವುದು (ಏಕಪದಾ ವಿರಾಟ್). ಈ ಸೂಕ್ತಪಠನವು ಮನಸ್ಸಿಗೆ ಶಾಂತಿಯನ್ನುಂಟುಮಾಡುವುದೆಂದು ಹೇಳಲ್ಪಡುವುದು.

22. ಈ ೨೦ ನೇ ಸೂಕ್ತಕ್ಕೂ ಇದರ ಮುಂದಿನ ೨೧ ನೇ ಸೂಕ್ತಕ್ಕೂ ಅಗ್ನಿಯು ದೇವತೆಯು. ಈ ಅಗ್ನಿ ದೇವತಾಕವಾದ ಸೂಕ್ತಗಳಾದನಂತರ **ಕುಹ ಶ್ರುತ** ಎಂದು ಮೊದಲಾಗುವ ಮುಂದಿನ ಮೂರು ಸೂಕ್ತಗಳಿಗೆ(೨೨–೨೪) ಇಂದ್ರನು ದೇವತೆಯು. ಆದರೆ ಕೊನೆಯ ೨೪ ನೇ ಸೂಕ್ತದ **ಯುವಂ ಶಕ್ರಾ** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿ (೪–೬) ಅಶ್ವಿನೀದೇವತೆಗಳನ್ನು ಸ್ತುತಿಸಲಾಗಿದೆ.

23. **ಭದ್ರಂ ನಃ** ಎಂಬ ೨೫ ನೇ ಸೂಕ್ತಕ್ಕೆ ಸೋಮನು ದೇವತೆಯು; **ಪ್ರ ಹ್ಯಚ್ಛಾ** ಎಂಬ ೨೬ ನೇ ಸೂಕ್ತಕ್ಕೆ ಪೂಷನು ದೇವತೆಯು; ಮತ್ತು **ಅಸತ್ಸು ಮೇ** ಎಂದು ಮೊದಲಾಗುವ ಮುಂದಿನ ಮೂರು ಸೂಕ್ತಗಳಿಗೆ (೨೭–೨೯) ಇಂದ್ರನು ದೇವತೆಯು; ಈ ಕೊನೆಯ ಮೂರು ಸೂಕ್ತಗಳಲ್ಲಿ ಮೊದಲನೆಯದಾದ ೨೭ ನೇ ಸೂಕ್ತದಲ್ಲಿ ಇಂದ್ರನು ಸೋಮಪಾನದಿಂದ ಮತ್ತನಾಗಿ ತಾನು ಮಾಡಿದ ಸಾಹಸಕೃತ್ಯಗಳನ್ನು ತಾನೇ ಹೇಳಿಕೊಂಡಿದ್ದಾನೆ.

---

### 5. Deities of RV. x. 19-27.

21. The sixth (stanza) is addressed to Indra (x. 19-6), while in the second both the gods are incidentally mentioned (2). Now the hymn which contains a line of ten syllables (x. 20-1) is described as intended to avert evil (and) as connected with mind (ಮಾನಸ).

22. Now here after two hymns addressed to Agni (x. 20-21) there follow three addressed to Indra (beginning) 'Where ?' (ಕುಹಾ: x. 22-24). Now in the last of the hymns to Indra there is one triplet 'Ye two' (ಯುವಂ: x. 24. 4-6) addressed to the Asvins.

23. 'Happy' (ಭದ್ರಂ: x. 25) is addressed to Soma; 'Forth indeed' (ಪ್ರ: x. 26) is addressed to Pusan. The three following (beginning) 'It shall be' (ಅಸತ್: x. 27-29) are addressed to Indra with the first (27) of these (Indra), being exhilarated, proclaims his deeds,

ಯಥಾ ಚರತಿ ಭೂತೇಷು ಯಥಾ ವರ್ಷತಿ ಪಾತಿ ಚ |
ಸೂಕ್ತೇ ತದಸ್ಮಿನ್ನಷ್ಟಾಭಿರ್ಋಗ್ಭಿರುಕ್ತಮಭೂರ್ವಿತಿ || ೨೪ ||

ಸಪ್ತೇತಿ ಮರುತಃ ಸ್ತೌತಿ ಸ್ತೌತಿ ವಜ್ರಮೃಗುತ್ತರಾ |
ಅಗ್ನಿಮಿಂದ್ರಂ ಚ ಸೋಮಂ ಚ ಪೀವಾನಂ ಮೇಷಮರ್ಚತಿ || ೨೫ ||

ಪೂರ್ವೋರ್ಧರ್ಚೋऽಪರಸ್ತ್ವಸ್ಯಾಃ ಪರ್ಜನ್ಯಂ ವಾಯುನಾ ಸಹ |
ವಿ ಕ್ರೋಶನಾಸ ಇತ್ಯಗ್ನಿಮುತ್ತರಾ ಸೂರ್ಯಮೇವ ತು || ೨೬ ||

24. ಈ ೨೭ ನೇ ಸೂಕ್ತದ **ಅಭೂರ್ವೌಕ್ಷೀಃ** ಎಂದು ಮೊದಲಾಗುವ ೮ ಋಕ್ಕುಗಳಲ್ಲಿ (೭–೧೪) ಆವನು (ಇಂದ್ರನು) ಸರ್ವಪ್ರಾಣಿಗಳಲ್ಲಿ ಅಂತರ್ಗತನಾಗಿದ್ದುಕೊಂಡು ಹೇಗೆ ಸಂಚರಿಸುತ್ತಿರುವನೆಂದೂ, ಹೇಗೆ ವೃಷ್ಟಿ (ಮಳೆ) ಯನ್ನು ಸುರಿಸುವನೆಂದೂ, ಸಕಲರನ್ನೂ ಹೇಗೆ ಸಂರಕ್ಷಣೆಮಾಡುವನೆಂದೂ ಹೇಳಲಾಗಿದೆ.

25. ಈ ೨೭ ನೇ ಸೂಕ್ತದ **ಸಪ್ತ ವೀರಾಸಃ** ಎಂಬ ೧೫ ನೇ ಋಕ್ಕಿನಲ್ಲಿ ಮರುದ್ದೇವತೆಗಳನ್ನೂ ಮುಂದಿನ ೧೬ ನೇ ಋಕ್ಕಿನಲ್ಲಿ ವಜ್ರಾಯುಧವನ್ನೂ ಋಷಿಯು ಸ್ತುತಿಸಿದಾನೆ. **ಪೀವಾನಂ ಮೇಷಂ** ಎಂಬ ೧೭ ನೇ ಋಕ್ಕಿನಲ್ಲಿ ಅಗ್ನಿಯನ್ನೂ, ಇಂದ್ರನನ್ನೂ, ಸೋಮನನ್ನೂ ಸ್ತುತಿಸಲಾಗಿದೆ.

26. ೧೭ ನೇ ಋಕ್ಕಿನ ಪೂರ್ವಾರ್ಧದಲ್ಲಿ ಮೇಲೆ ಹೇಳಿದಂತೆ ಅಗ್ನೀಂದ್ರಸೋಮದೇವತೆಗಳನ್ನೂ ಉತ್ತರಾರ್ಧದಲ್ಲಿ ಪರ್ಜನ್ಯವಾಯುಗಳನ್ನೂ ಸ್ತುತಿಸಲಾಗಿದೆ. **ವಿ ಕ್ರೋಶನಾಸಃ** ಎಂಬ ೧೮ ನೇ ಋಕ್ಕಿನಲ್ಲಿ ಅಗ್ನಿಯನ್ನೂ ಮುಂದಿನ ೧೯ ನೇ ಋಕ್ಕಿನಲ್ಲಿ ಸೂರ್ಯನನ್ನೂ ಸ್ತುತಿಸಲಾಗಿದೆ.

---

24. how he moves among beings, how he rains and protects is told in this hymn with the eight stanzas (beginning) 'You became' (ಅಭೂಃ: x. 27. 7–14).

25. (The stanza) 'Seven' (ಸಪ್ತ : x. 27-15) praises, the Maruts the next stanza (16) praises the Bolt; (the stanza) 'The fatted ram'(ಪೀವಾನಂ ಮೇಷಂ : 17) adores Agni, Indra and Soma.

### 17. RV. x. 27. (continued). RV. x. 28. Dialogues of Indra & Vasukra.

26. (that is) its first hemist ich (does so : 17), while its second one (adores) Parjanya with Vayu (17). 'Crying aloud' (ವಿ ಕ್ರೋಶನಾಸಃ : 18) (praises) Agni, but the next (stanza) Surya (19).

ಏತೌ ಮೇಽಯಂ ಯ ಇತ್ಯೇತೇ ಸ್ತುತಿಶ್ಚೈವೇಂದ್ರವಜ್ರಯೋಃ ।
ವೃಕ್ಷೇ ವೃಕ್ಷೇ ಧನುಶ್ಚೈಂದ್ರಂ ದೇವಾನಾಮಿತಿ ತು ತ್ರಯಃ ॥ ೨೭ ॥
ಶೀತೋಷ್ಣವರ್ಷದಾತಾರಃ ಪರ್ಜನ್ಯಾನಿಲಭಾಸ್ಕರಾಃ ।
ಅಂತ್ಯೇ ಸೂರ್ಯಾನಿಲೌ ಚೋಭೌ ಸ್ತೂಯೇತೇ ಚ ಪದೇ ಸಹ ॥ ೨೮ ॥
ಸಾ ತೇ ಜೀವಾತುರಿತ್ಯಸ್ಯಾಮಿಂದ್ರೋ ವಾ ಸೂರ್ಯ ಏವ ವಾ ।
ವಿಶ್ವೋ ಹ್ಯನ್ಯಸ್ತು ಸಂವಾದ ಋಷೇಃ ಶಕ್ರಸ್ಯ ಚೈವ ಹಿ ॥ ೨೯ ॥
ಯುಗ್ಮಾಃ ಶಕ್ರಸ್ಯ ವಿಜ್ಞೇಯಾ ವಸುಕ್ರಸ್ಯೇತರಾ ಋಚಃ ।

27. **ಏತೌ ಮೇ ಗಾವೌ** ಎಂಬ ೨೦ ನೇ ಋಕ್ಕಿನಲ್ಲಿಯೂ ಮುಂದಿನ **ಅಯಂ ಯೋ ವಜ್ರಃ** ಎಂಬ ೨೧ ನೇ ಋಕ್ಕಿನಲ್ಲಿಯೂ ಇಂದ್ರನ ಮತ್ತು ವಜ್ರಾಯುಧದ ಪ್ರಶಂಸೆ ಇದೆ. **ವೃಕ್ಷೇವೃಕ್ಷೇ** ಎಂಬ ೨೨ ನೇ ಋಕ್ಕಿನಲ್ಲಿ ಇಂದ್ರನ ಧನುಸ್ಸಿನ ವರ್ಣನೆ ಇದೆ. ಆದರೆ **ದೇವಾನಾಂ ಮಾನೇ** ಎಂಬ ೨೩ ನೇ ಋಕ್ಕಿನಲ್ಲಿ ಮೂರುಮಂದಿ ದೇವತೆಗಳು ಎಂದರೆ,

28. ಶೀತ, ಉಷ್ಣ, ಮತ್ತು ವೃಷ್ಟಿ ಇವುಗಳನ್ನು ಕೊಡುವ ವಾಯು, ಸೂರ್ಯ, ಪರ್ಜನ್ಯ ಎಂಬ ಮೂರು ಮಂದಿ ದೇವತೆಗಳನ್ನು ಸ್ತುತಿಸಲಾಗಿದೆ. ಈ ಋಕ್ಕಿನ (೨೩) ಕೊನೆಯ ಪಾದದಲ್ಲಿ ಸೂರ್ಯ ಮತ್ತು ವಾಯುಗಳನ್ನು ಒಟ್ಟಿಗೆ ಸ್ತುತಿಸಲಾಗಿದೆ.

29. ಈ ೨೭ ನೇ ಸೂಕ್ತದ **ಸಾ ತೇ ಜೀವಾತುಃ** ಎಂಬ ಕೊನೆಯ ಋಕ್ಕಿಗೆ (೨೪) ಇಂದ್ರನಾಗಲಿ, ಸೂರ್ಯನಾಗಲಿ ದೇವತೆಯಾಗಬಹುದು. **ವಿಶ್ವೋ ಹ್ಯನ್ಯಃ** ಎಂಬ ೨೮ ನೇ ಸೂಕ್ತದಲ್ಲಿ ಸೂಕ್ತದ್ರಷ್ಟೃವಾದ ವಸುಕ್ರಋಷಿಗೂ, ಇಂದ್ರನಿಗೂ ನಡೆದ ಸಂಭಾಷಣೆಯು ಉಕ್ತವಾಗಿದೆ.

30. ಈ ೨೮ ನೇ ಸೂಕ್ತದಲ್ಲಿ ಸಮಸಂಖ್ಯೆಯ (೨, ೪, ೬ ಇತ್ಯಾದಿ) ಋಕ್ಕುಗಳಲ್ಲಿ ಇಂದ್ರನ ವಾಕ್ಯವಿರುವುದೆಂದೂ ಉಳಿದ ಅಸಮಸಂಖ್ಯೆಯ (೩, ೫ ಇತ್ಯಾದಿ) ಋಕ್ಕುಗಳಲ್ಲಿ ವಸುಕ್ರಋಷಿಯ ವಾಕ್ಯವಿರುವುದೆಂದೂ ತಿಳಿಯ.

27. 'These two of mine' (ಏತೌ ಮೇ : x. 20) and 'This which' (ಅಯಂ ಯಃ : 21) these two (stanzas) are (in) praise of Indra and the Bolt; and 'To every tree' (ವೃಕ್ಷೇ ವೃಕ್ಷೇ : 22) (praises) the Bow of Indra. But (in) 'Of the Gods' (ದೇವಾನಾಂ : 23) the three

28. bestowers of cold, heat, and rain, Parjanya, Wind (ಅನಿಲ) and Sun (ಭಾಸ್ಕರ), and in the last verse (ಪಾದ: 27-23) both Sun and Wind are praised together.

29. In the (stanza), 'This is your life' (ಸಾ ತೇ ಜೀವಾತುಃ: 24) either Indra or Surya (is praised). But 'Every other' (ವಿಶ್ವೋ ಹ್ಯನ್ಯಃ : x. 28) is a dialogue of the seer and of Sakra (Indra).

30. The even (stanzas) are to be recognised as Sakra's the other stanzas as Vasukra's.

ಸ್ನುಷೇಂದ್ರಸ್ಯಾಗತಾನ್ದೇವಾನ್ದೃಷ್ಟ್ವಾ ಶಕ್ರಮನಾಗತಂ ॥ ೩೦ ॥
ಯಜ್ಞಂ ಪರೋಕ್ಷವತ್ಪ್ರಾಹ ಶ್ವಶುರೋ ನಾಗತೋ ಮಮ ।
ಯದ್ಯಾಗಚ್ಛೇದ್ಭಕ್ಷಯೇತ್ಸ ಧಾನಾಃ ಸೋಮಂ ಪಿಬೇದಪಿ ॥ ೩೧ ॥
ಇತಿ ತಸ್ಯಾ ವಚಃ ಶ್ರುತ್ವಾ ತತ್ಕ್ಷಣಾದೇತ್ಯ ವಜ್ರಭೃತ್ ।
ತಿಷ್ಠನ್ವೇದ್ಯಾಮುತ್ತರಸ್ಯಾಮುಚ್ಚೈರಾಹ ಸ ರೋರುವತ್ ॥ ೩೨ ॥
ತೃತೀಯಯಾ ಚತುರ್ಥ್ಯಾ ಚ ಪ್ರ ದೇವತ್ರೇತ್ಯಪಾಂ ಸ್ತುತೌ ।
ಅಪಾಂನಪಾದಿತ್ಯನೇನ ನಾಮಾಗ್ನಿರ್ಮಧ್ಯಮಃ ಸ್ತುತಃ ॥ ೩೩ ॥

ಬೇಕು. ಇಂದ್ರನ ಸೊಸೆಯು ಯಜ್ಞಾರ್ಥವಾಗಿ ದೇವತೆಗಳಲ್ಲಿ ಎಲ್ಲರೂ ಬಂದಿರುವುದನ್ನೂ ಇಂದ್ರನು ಮಾತ್ರ ಇನ್ನೂ ಬರದಿದ್ದುದನ್ನೂ ನೋಡಿ—

**೩೦-೩೩ನೇ ಸೂಕ್ತಗಳ ದೇವತೆಗಳು**

31. ಯಜ್ಞಾರ್ಥವಾಗಿ ಹೋಗಿದ್ದ ನನ್ನ ಮಾವನಾದ ಇಂದ್ರನು ಇಷ್ಟುಹೊತ್ತಾದರೂ ಇನ್ನೂ ಬರಲಿಲ್ಲ. ಅವನು ಬಂದಿದ್ದಲ್ಲಿ (ಸಿದ್ಧವಾಗಿರುವ) ಈ ಧಾನ್ಯವನ್ನು ಭಕ್ಷಿಸಿ ಸೋಮವನ್ನು ಪಾನಮಾಡುತ್ತಿದ್ದನು ಎಂದು ಹೇಳಿದಳು.

32. ಅವಳ ಮಾತನ್ನು ಕೇಳಿ ವಜ್ರಧಾರಿಯಾದ ಇಂದ್ರನು ತತ್ಕ್ಷಣವೇ ಅಲ್ಲಿಗೆ ಬಂದು ಉತ್ತರವೇದಿಯ (ಯಜ್ಞದ) ಉತ್ತರದಿಕ್ಕಿನಲ್ಲಿ ನಿಂತುಕೊಂಡು **ಸ ರೋರುವತ್** ಎಂಬ ೨೮ನೇ ಸೂಕ್ತದ ೨ನೇ ಋಕ್ಕಿನಿಂದ ಘಟ್ಟಿಯಾಗಿ ಹೇಳಿದನು.

33. ಅಬ್ದೇವತಾಕವಾದ **ಪ್ರ ದೇವತ್ರಾ ಬ್ರಹ್ಮಣೇ** ಎಂಬ ೩೦ನೇ ಸೂಕ್ತದ ೩ ಮತ್ತು ೪ನೇ ಋಕ್ಕುಗಳಲ್ಲಿ ಮಧ್ಯಮಾಗ್ನಿಯು **ಅಪಾಂನಪಾತ್** ಎಂಬ ಹೆಸರಿನಿಂದ ಸ್ತುತಿಸಲ್ಪಟ್ಟಿರುವನು.

---

The daughter-in-law of Indra, seeing the gods had come, but Sakra had not come,

### 7. Deities of RV. x. 30-33.

31. to the sacrifice, addressed (him) in the third person (ಪರೋಕ್ಷವತ್) (saying : 'My father-in-law has not come; should he come, he would eat grain and would drink Soma.'

32. The Bolt-bearer on hearing this speech of hers, came that very moment, and standing on the northern altar (ಉತ್ತರವೇದಿ), said aloud; He bellowing loud (ಸ ರೋರುವತ್ : x. 28-2).

33. In the praise of waters (beginning) 'Forth to the gods' (ಪ್ರ ದೇವತ್ರಾ: x, 30) the Middle Agni is praised by the name of 'Child of Waters' (ಅಪಾಂ ನಪಾತ್) with the third and the fourth (stanza).

ಏತಿ ಯದ್ವೈಶ್ವದೇವಂ ತು ತಸ್ಯ ಪ್ರೇತ್ಯೈಂದ್ರಮುತ್ತರಂ |
ವೈಶ್ವದೇವೀ ಪ್ರ ಮೇತ್ಯೇಕಾ ಸಂ ಮೇತ್ಯೈಂದ್ರೋ ದ್ವ್ಯೃಚಃ ಪರಃ || ೩೪ ||
ಕುರುಶ್ರವಣಮರ್ಚತಃ ಪರೇ ದ್ವೇ ತ್ರಾಸದಸ್ಯವಂ |
ಮೃತೇ ಮಿತ್ರಾತಿಥೌ ರಾಜ್ಞಿ ತನ್ನಪಾತಮೃಷಿಃ ಪರೈಃ || ೩೫ ||
ಉಪಮಶ್ರವಸಂ ಯಸ್ಯ ಚತುರ್ಭಿಃ ಸ ವ್ಯಶೋಕಯತ್ |
ಪ್ರಾವೇಪಾ ಇತಿ ಸೂಕ್ತಂ ಯತ್ತದಕ್ಷಸ್ತುತಿರುಚ್ಯತೇ || ೩೬ ||

34. **ಆ ನೋ ದೇವಾನಾಂ** ಎಂದು ಪ್ರಾರಂಭವಾಗುವ ೩೧ನೇ ಸೂಕ್ತದಲ್ಲಿ ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ. **ಪ್ರ ಸು ಗ್ಮಂತಾ** ಎಂಬ ೩೨ನೇ ಸೂಕ್ತಕ್ಕೆ ಇಂದ್ರನು ದೇವತೆಯು ; **ಪ್ರ ಮಾ ಯುಯುಜ್ರೇ** ಎಂಬ ೩೩ ನೇ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ವಿಶ್ವೇದೇವತೆಗಳನ್ನೂ ಮುಂದಿನ **ಸಂ ಮಾ** ಎಂದು ಮೊದಲಾಗುವ ಎರಡು ಋಕ್ಕುಗಳಲ್ಲಿ (೨-೩) ಇಂದ್ರನನ್ನೂ ಸ್ತುತಿಸಲಾಗಿದೆ.

35. ಈ ೩೩ ನೇ ಸೂಕ್ತದ ಮುಂದಿನ ಎರಡು ಋಕ್ಕುಗಳಲ್ಲಿ (೪-೫) ತ್ರಸದಸ್ಯುಪುತ್ರನಾದ (ಅಥವಾ ಅವನ ವಂಶಜನಾದ) **ಕುರುಶ್ರವಣ** ಎಂಬ ರಾಜನನ್ನು ಋಷಿಯು ಪ್ರಶಂಸೆಮಾಡಿರುವನು. **ಮಿತ್ರಾತಿಥಿ** ಎಂಬ ರಾಜನು ಮೃತನಾದಾಗ ಅವನ ಮಿತ್ರನಾದ ಈ ಸೂಕ್ತದ ಕವಷನೆಂಬ ಋಷಿಯು ರಾಜನ ಮೊಮ್ಮಗನನ್ನು ದುಃಖಿಸಬೇಡವೆಂದು ಸಮಾಧಾನಮಾಡುತ್ತಾ,

**ಪಗಡೆ ದಾಳಗಳ ಪ್ರಶಂಸೆ (೩೪) ೩೫-೪೪ ಸೂಕ್ತಗಳ ದೇವತೆಗಳು**

36. **ಯಸ್ಯ ಪ್ರಸ್ವಾದಸಃ** ಎಂದು ಮೊದಲಾಗುವ ೩೩ ನೇ ಸೂಕ್ತದ ನಾಲ್ಕು ಋಕ್ಕುಗಳಿಂದ (೬-೯) ಮಿತ್ರಾತಿಥಿರಾಜನ ಮೊಮ್ಮಗನಾದ ಉಪಮಶ್ರವನೆಂಬುವನನ್ನು ಸಮಾಧಾನಪಡಿಸುವನು. **ಪ್ರಾವೇಪಾ ಮಾ** ಎಂಬ ೩೪ ನೇ ಸೂಕ್ತದಲ್ಲಿ ಪಗಡೆಯಾಟದ ಮತ್ತು ದಾಳಗಳ ಪ್ರಶಂಸೆ ಇದೆ.

---

34. Now (the hymn) which (begins) 'Hither' (ಏತಿ : x.31) is addressed to the All-gods ; the one next to that 'Forth' (ಪ್ರ : x. 32) is addressed to Indra. One (stanza) 'Onward me' (ಪ್ರ ಮಾ : x. 33-1) is addressed to the All-gods ; the following couplet 'Together me' (ಸಂ ಮಾ : 2-3) is addressed to Indra.

35. The following two (stanzas) adore Kurusravana Trasadasyava (x. 33. 4-5). On the death of king Mitratithi, the seer with the following :

**8. The hymns of Dice : x. 34. Deities of RV. 35-44.**

36. four (stanzas beginning) 'Of whom' (ಯಸ್ಯ: x. 33. 6-9) consoled his (Mitratithi's) grandson ಉಪಮಶ್ರವಸಂ. The hymn which (begins) 'The lively (ಪ್ರಾವೇಪಾಃ : x. 34) is called the praise of Dice.

ಅತ್ರಾಕ್ಷಾನ್ದ್ವಾದಶೀ ಸ್ತೌತಿ ನವಮ್ಯಾದ್ಯಾ ಚ ಸಪ್ತಮೀ|
ತ್ರಯೋದಶೀ ಕೃಷಿಂ ಸ್ತೌತಿ ಕಿತವಂ ಚಾನುಶಾಸತಿ |
ಅಕ್ಷಾಂಸ್ತು ಶೇಷಾ ನಿಂದಂತಿ ಅಬುಧ್ರಂ ವೈಶ್ವದೇವತೇ || ೩೭ ||
ಸಾವಿತ್ರಮೇಕೇ ಮನ್ಯಂತೇ ಮಹೋ ಅಗ್ನೇ ಸ್ತವಂ ಪರಂ |
ಆಚಾರ್ಯಾಃ ಶೌನಕೋ ಯಾಸ್ಕೋ ಗಾಲವಶ್ಚೋತ್ತಮಾಮೃಚಂ || ೩೮ ||
ನಮಃ ಸೌರ್ಯಮೈಂದ್ರಮಸ್ಮಿನ್ ಸೌರ್ಯೇ ಷಷ್ಠ್ಯಾಂ ತು ಯಾಃ ಸ್ತುತಾಃ |
ನಿಪಾತಿನ್ಯಸ್ತಾಃ ಸೂಕ್ತಾಂತೇ ವೈಶ್ವದೇವೋಽತ್ರ ತು ದ್ವ್ಯೃಚಃ || ೩೯ ||

37. ಈ ಸೂಕ್ತದ (೩೪) ೧, ೭, ೯, ೧೨ ನೇ ಋಕ್ಕುಗಳಲ್ಲಿ ಪಗಡೆ ದಾಳಗಳ ಪ್ರಶಂಸೆ ಇದೆ. ೧೩ ನೇ ಋಕ್ಕಿನಲ್ಲಿ ವ್ಯವಸಾಯ(ಕೃಷಿ)ವನ್ನು ಪ್ರಶಂಸಿಸಿ ಜೂಜುಕೋರನಾದ(ಪಗಡೆ) ಆಟಗಾರನನ್ನು ನಿಂದಿಸಿ ಬಯ್ಯಲಾಗಿದೆ. ಸೂಕ್ತದ ಉಳಿದ ಋಕ್ಕುಗಳಲ್ಲಿ ಪಗಡೆ ಆಟವನ್ನೂ, ದಾಳವನ್ನೂ ನಿಂದಿಸಲಾಗಿದೆ. **ಅಬುಧ್ರಮು ತ್ರೈ** ಎಂದು ಮೊದಲಾಗುವ ಮುಂದಿನ ಎರಡು ಸೂಕ್ತಗಳಲ್ಲಿ (೩೫-೩೬) ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ.

38. ಆದರೆ ೩೬ ನೇ ಸೂಕ್ತದ ಕೊನೆಯಲ್ಲಿರುವ **ಮಹೋ ಅಗ್ನೇ** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿ (೧೨-೧೪) ಸವಿತೃದೇವತೆಯನ್ನು ಸ್ತುತಿಸಲಾಗಿದೆಯೆಂದು ಕೆಲವರು ಹೇಳುವರು. ಆದರೆ ಈ ಸೂಕ್ತದ ಕೊನೆಯ ೧೪ ನೇ ಋಕ್ಕು ಮಾತ್ರ ಸವಿತೃದೇವತಾಕವೆಂದು ಶೌನಕ, ಯಾಸ್ಕ, ಗಾಲವ ಎಂಬ ಆಚಾರ್ಯರು ಹೇಳುವರು.

39. **ನಮೋ ಮಿತ್ರಸ್ಯ** ಎಂಬ ೩೭ ನೇ ಸೂಕ್ತಕ್ಕೆ ಸೂರ್ಯನೂ, **ಅಸ್ಮಿನ್ನ ಇಂದ್ರ** ಎಂಬ ೩೮ ನೇ ಸೂಕ್ತಕ್ಕೆ ಇಂದ್ರನೂ ದೇವತೆಗಳು. ಆದರೆ ಸೂರ್ಯದೇವತಾಕವಾದ ೩೭ ನೇ ಸೂಕ್ತದ ೬ ನೇ ಋಕ್ಕಿನಲ್ಲಿ ಸ್ತುತರಾಗಿರುವ ಇತರ ದೇವತೆಗಳು (ದ್ಯಾವಾಪೃಥಿವೀ, ಆಪಃ, ಇಂದ್ರಃ, ಮರುತಃ) ಪ್ರಸಂಗವಶದಿಂದ ಸ್ತುತರಾಗಿರುವರೆಂದು ತಿಳಿಯಬೇಕು. ಈ ಸೂಕ್ತದ ಕೊನೆಯ ಎರಡು ಋಕ್ಕುಗಳಲ್ಲಿ (೧೧-೧೨) ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ.

---

37. Here the twelfth (stanza) praises the Dice, the ninth, the first and the seventh (x. 34. 1, 7, 9, 12),

The thirteenth praises tillage (13) and admonishes the gambler.

But the remaining (stanzas) blame the Dice. Two (hymns) beginning 'They are awake (ಅಬುಧ್ರಂ : x. 35-36) are addressed to the All-gods.

38. Some consider the praise at the end (ಪರಂ), 'Of the great Agni' (ಮಹೋ ಅಗ್ನೇಃ : x. 36. 12–14) to be addressed to Savitr ; the teachers Suanaka, Yaska, and Galava (consider) the last (14) stanza (to be such)

39. 'Obeisance' (ನಮಃ : x. 37) is addressed to Surya, 'In this' (ಅಸ್ಮಿನ್ : x. 38) to Indra. But (the deities) who are praised in the sixth (stanzas) of the hymn to Surya (x. 37-6) are incidental ; at the end of this (ಅತ್ರ) hymn there is a couplet addressed te the All-gods (x. 37. 11-12).

ಆಶ್ವಿನಾನಿ ತು ಯಸ್ತ್ರೀಣಿ ಐಂದ್ರಾಣ್ಯಸ್ತೇವ ಸು ಪ್ರ ಚ |
ಐಂದ್ರಾಣಾಮುತ್ತಮಾಯಾಸ್ತು ಸ್ತುತೋऽರ್ಧರ್ಚೇ ಬೃಹಸ್ಪತಿಃ ॥ ೪೦ ॥
ಪರೇ ದಿವಸ್ಪರ್ಯಾಗ್ನೇಯೇ ಪ್ರಥಮಸ್ಯೋತ್ತಮೇನ ತು |
ದ್ಯಾವಾಪೃಥಿವ್ಯೌ ವಿಶ್ವೇ ಚ ಪಚ್ಛೋऽರ್ಧರ್ಚೇನ ಸಂಸ್ತುತಾಃ ॥ ೪೧ ॥
ಆಸೀತ್ಕಾಕ್ಷೀವತೀ ಘೋಷಾ ಪಾಪರೋಗೇಣ ದುರ್ಭಗಾ |
ಉವಾಸ ಷಷ್ಟಿಂ ವರ್ಷಾಣಿ ಪಿತುರೇವ ಗೃಹೇ ಪುರಾ ॥ ೪೨ ॥

40. **ಯೋ ವಾಂ ಪರಿಜ್ಮಾ** ಎಂದು ಮೊದಲಾಗುವ ಮುಂದಿನ ಮೂರು ಸೂಕ್ತಗಳಲ್ಲಿ (೩೯-೪೧) ಅಶ್ವಿನೀ ದೇವತೆಗಳನ್ನು ಸ್ತುತಿಸಲಾಗಿದೆ. **ಅಸ್ತೇವ** ಎಂಬ ಮುಂದಿನ ಮೂರು ಸೂಕ್ತಗಳಲ್ಲಿ (೪೨-೪೪) ಇಂದ್ರನನ್ನು ಸ್ತುತಿಸಲಾಗಿದೆ. ಆದರೆ ಇಂದ್ರದೇವತಾಕವಾದ ಈ ೪೪ ನೇ ಸೂಕ್ತದ ೧೧ ನೇ ಋಕ್ಕಿನಲ್ಲಿ ಬೃಹಸ್ಪತಿಯನ್ನು ಸ್ತುತಿಸಲಾಗಿದೆ.

### ೪೫-೪೬ ನೇ ಸೂಕ್ತಗಳ ದೇವತೆಗಳು.

41. **ದಿವಸ್ಪರಿ** ಎಂಬ ೪೫ನೇ ಸೂಕ್ತದಲ್ಲಿಯೂ ಇದರ ಮುಂದಿನ ೪೬ನೇ ಸೂಕ್ತದಲ್ಲಿಯೂ ಅಗ್ನಿಯನ್ನು ಸ್ತುತಿಸಲಾಗಿದೆ. ಆದರೆ ೪೫ನೇ ಸೂಕ್ತದ ಕೊನೆಯ ಋಕ್ಕಿನ (೧೨) ಉತ್ತರಾರ್ಧದ ಮೊದಲನೆಯ ಪಾದದಲ್ಲಿ ದ್ಯಾವಾ ಪೃಥಿವಿಗಳನ್ನೂ, ಎರಡನೆಯ ಪಾದದಲ್ಲಿ ದೇವತೆಗಳನ್ನೂ ಸ್ತುತಿಸಲಾಗಿದೆ.

### ಘೋಷಾ ಎಂಬ ಸ್ತ್ರೀಯ ವೃತ್ತಾಂತ

42. ಪೂರ್ವದಲ್ಲಿ ಕಕ್ಷೀವಾನ್ ಎಂಬ ಋಷಿಗೆ ಘೋಷಾ ಎಂಬ ಪುತ್ರಿ ಇದ್ದಳು. ಅವಳು ಚರ್ಮರೋಗ (ತೊನ್ನು) ದಿಂದ ನರಳುತ್ತಿದ್ದಳು. ಅವಳು ತನಗೆ ಅರವತ್ತು ವರುಷವಾಗಿದ್ದರೂ ಮದುವೆಯಿಲ್ಲದ್ದರಿಂದ ತನ್ನ ತಂದೆಯ ಮನೆಯಲ್ಲಿಯೇ ವಾಸವಾಗಿದ್ದಳು.

---

40. Now there are three hymns addressed to the Asvins (beginning) 'Which' (ಯಃ : x. 39-41), and there are (three) addressed to Indra(beginning) 'As the archer far' (ಅಸ್ತೇವ ಸು ಪ್ರ : x. 42-44), but in a hemistich (11) of the last stanza of the Indra hymns (42-44) Brihaspati is praised.

### Deities of RV. x. 45-46. Story of Ghosa

41. The two following (hymns), 'From heaveu' (ದಿವಸ್ಪರಿ : x. 45, 46) are addressed to Agni, but with the last hemistich of the former (x. 45-12) Heaven and Earth (12) and the All-gods are praised in the respective verses (ಪಚ್ಛಃ).

42. Ghosa, daughter of Kaksivat, was disfigured by an evil disease. In the days of old she remained in her father's house for sixty yenrs,

ಆತಸ್ಥೇ ಮಹತೀಂ ಚಿಂತಾಂ ನ ಪುತ್ರೋ ನ ಪತಿರ್ಮಮ ।
ಜರಾಂ ಪ್ರಾಪ್ತಾ ಮುಧಾ ತಸ್ಮಾತ್ಪ್ರಪದ್ಯೇಽಹಂ ಶುಭಸ್ಪತೀ ॥ ೩೩ ॥
ಯಥೈತೌ ಮಾಮಕಸ್ತಾತ ಆರಾಧ್ಯಾವಾಪ ಯೌವನಂ ।
ಆಯುರಾರೋಗ್ಯಮೈಶ್ವರ್ಯಂ ಸರ್ವಭೂತಹನೇ ವಿಷಂ ॥ ೩೪ ॥
ರೂಪವತ್ತ್ವಾಂ ಚ ಸೌಭಾಗ್ಯಮಹಂ ತಸ್ಯ ಸುತಾ ಯದಿ ।
ಮಮಾಪಿ ಮಂತ್ರಾಃ ಪ್ರಾದುಃ ಸ್ಯುರ್ಯೈಃ ಸ್ತೋಷ್ಯೇತೇ ಮಯಾಶ್ವಿನೌ ॥ ೪೫ ॥
ಚಿಂತಯಂತೀತಿ ಸೂಕ್ತೇ ದ್ವೇ ಯೋ ವಾಂ ಪರಿ ದದರ್ಶ ಸಾ ।
ಸ್ತುತೌ ತಾವಶ್ವಿನೌ ದೇವೌ ಪ್ರೀತೌ ತಸ್ಯಾ ಭಗಾಂತರಂ ॥ ೪೬ ॥

43. ತನಗೆ ಮದುವೆಯಾಗಲಿಲ್ಲವಲ್ಲಾ, ಪತಿಪುತ್ರರಿಲ್ಲವಲ್ಲಾ, ವ್ಯರ್ಥವಾಗಿ ವಯಸ್ಸು ಕಳೆದುಹೋಗಿ ಮುದುಕಿಯಾದೆನಲ್ಲಾ ಎಂಬ ಚಿಂತೆಯಿಂದ ಕೊರಗುತ್ತಿದ್ದಳು. ಆದ್ದರಿಂದ ಅವಳು ಅಶ್ವಿನೀದೇವತೆಗಳನ್ನು ಮರೆ ಹೋಗುತ್ತೇನೆಂದು ನಿಶ್ಚಯಿಸಿದಳು.

44. ಈ ಅಶ್ವಿನೀತೇವತೆಗಳನ್ನು ಆರಾಧಿಸಿ ವೃದ್ಧನಾಗಿದ್ದ ನನ್ನ ತಂದೆಯು (ಅಥವಾ ತಾತನು) ಯೌವನ ವನ್ನು ಪಡೆದನು. ಹಾಗೆಯೇ ಅವರ ಅನುಗ್ರಹದಿಂದ ದೀರ್ಘಾಯುಸ್ಸನ್ನೂ. ಆರೋಗ್ಯವನ್ನೂ, ಐಶ್ವರ್ಯವನ್ನೂ ಸಮಸ್ತ ಪ್ರಾಣಿಗಳನ್ನು ಕೊಲ್ಲಲು ಸಮರ್ಥವಾದ ವಿಷವನ್ನು ಪಡೆದನು.

45. ಆದ್ದರಿಂದ ಆ ಅಶ್ವಿನೀದೇವತೆಗಳನ್ನು ಸಂತೋಷಪಡಿಸುವ ಮಂತ್ರಗಳು ನನಗೆ ಗೋಚರವಾದರೆ ಆ ಋಷಿಯಪುತ್ರಿಯಾದ ನಾನೂ ಸಹ ಆ ದೇವತೆಗಳ ಅನುಗ್ರಹದಿಂದ ಸುಂದರವಾದ ರೂಪವನ್ನೂ, ಸೌಭಾಗ್ಯವನ್ನೂ (ಒಳ್ಳೆಯ ಅದೃಷ್ಟವನ್ನು) ಪಡೆಯಬಹುದು ಎಂದು ಆಲೋಚಿಸಿದಳು.

46. ಈರೀತಿ ಆಲೋಚಿಸುತ್ತಿರುವಾಗ ಅವಳಿಗೆ **ಯೋ ವಾಂ ಪರಿಜ್ಮಾ** ಎಂಬ ೩೯ನೇ ಸೂಕ್ತವೂ ಅದರ ಮುಂದಿನ **ರಥಂ ಯಾಂತಂ** ಎಂಬ ೪೦ನೇ ಸೂಕ್ತವೂ ಗೋಚರವಾದವು. ಈ ಸೂಕ್ತಗಳಿಂದ ಸ್ತುತರಾದ ಅಶ್ವಿನೀ ದೇವತೆಗಳು ಪ್ರೀತರಾಗಿ, ಆ ಸ್ತ್ರೀಯ ಭಗಪ್ರದೇಶವನ್ನು (ಯೋನಿಪ್ರದೇಶವನ್ನು) ಪ್ರವೇಶಿಸಿ

43. She fell into great grief (thinking), 'Without son or husband I have reached old age in vain; I (will) therefore resort to the Lords of Light (ಶುಭಸ್ಪತೀ).

44. Since my father, by propitiating them, obtained youth, long life, health, power, poison for slaying all beings.

45. I, his daughter, (would obtain) beauty and good fortune, if to me also were revealed formulas in which the Asvins shall be praised by me.

### 10. Story of Ghosa (concluded)

46-47. As she reflected thus, she saw the two hymns 'Your cncircling' (ಯೋ ವಾಂ ಪರಿ : x. 39-40). The two divine Asvins being praised, were pleased.

ಪ್ರವಿಶ್ಯ ವಿಜರಾರೋಗಾಂ ಸುಭಗಾಂ ಚಕ್ರತುಶ್ಚ ತೌ ।
ಭರ್ತಾರಂ ದದತುಸ್ತಸ್ಯೈ ಸುಹಸ್ತ್ಯೇತಿ ಸುತಂ ಮುನಿಂ ॥ ೪೭ ॥
ದದತುಸ್ತತ್ಸುಪರ್ಣಾಭ್ಯಾಂ ಯನ್ನಾಸತ್ಯೇತಿ ಕೀರ್ತ್ಯತೇ ।
ಕಾಕ್ಷೀವತ್ಯೈ ಚ ಘೋಷಾಯೈ ನ ತಸ್ಯಾಮಾಜುರೋಽನಯೋ ॥ ೪೮ ॥
ಪ್ರಾಜಾಪತ್ಯಾಸುರೀ ತ್ವಾಸೀದ್ವಿಕುಂಠಾ ನಾಮ ನಾಮತಃ ।
ಸೇಚ್ಛಂತೀಂದ್ರಸಮಂ ಪುತ್ರಂ ತೇಪೇಽಥ ಸುಮಹತ್ತಪಃ ॥ ೪೯ ॥
ಸಾ ಪ್ರಜಾಪತಿತಃ ಕಾಮಾಂಲ್ಲೇಭೇಽಥ ವಿವಿಧಾನ್ ವರಾನ್ ।
ತಸ್ಯಾಂ ಚೇಂದ್ರಃ ಸ್ವಯಂ ಜಜ್ಞೇ ಜಿಘಾಂಸುರ್ದೈತ್ಯದಾನವಾನ್ ॥ ೫೦ ॥

47. ಅವಳ ವಯೋವಿಕಾರವನ್ನು ಎಂದರೆ ವೃದ್ಧಾಪ್ಯವನ್ನೂ ರೋಗರುಜಿನಾದಿಗಳನ್ನೂ ಪರಿಹಾರಮಾಡಿ ಸುಂದರವಾದ ಕನ್ಯೆಯನ್ನಾಗಿ ಪರಿವರ್ತಿಸಿದರು. ಮತ್ತು ಆ ಘೋಷೆಗೆ ಅನುರೂಪನಾದ ಪತಿಯನ್ನು ಒದಗಿಸಿಕೊಟ್ಟು **ಸುಹಸ್ತ್ಯ**ನೆಂಬ ಪುತ್ರನನ್ನೂ ಅನುಗ್ರಹಿಸಿದರು.

48. **ನಾಸತ್ಯಾ** ಎಂಬ ಹೆಸರಿನಿಂದ ಪ್ರಸಿದ್ಧರಾದ ಆ ಅಶ್ವಿನೀದೇವತೆಗಳು ರೆಕ್ಕೆಗಳುಳ್ಳ ತಮ್ಮ ಅಶ್ವಗಳ ಮೂಲಕ ಕಕ್ಷೀವಂತನ ಪುತ್ರಿಯಾದ **ಘೋಷಾ** ಎಂಬ ಸ್ತ್ರೀಗೆ ಅನುಗ್ರಹಮಾಡಿರುವುದನ್ನು ೪೦ ನೇ ಸೂಕ್ತದ **ನ ತಸ್ಯ ವಿದ್ಮ** ಎಂಬ ೧೧ ನೇ ಋಕ್ಕಿನಲ್ಲಿಯೂ ೩೯ ನೇ ಸೂಕ್ತದ **ಅಮಾಜುರಶ್ಚಿತ್** ಎಂಬ ೩ ನೇ ಋಕ್ಕಿನಲ್ಲಿಯೂ ವಿವರಿಸಲಾಗಿದೆ.

**ಇಂದ್ರವೈಕುಂಠನೆಂಬ ಋಷಿಯ ವೃತ್ತಾಂತ**

49. ಪೂರ್ವದಲ್ಲಿ ಪ್ರಜಾಪತಿಗೆ **ಆಸುರೀ** ಎಂಬ ಪುತ್ರಿ ಇದ್ದಳು. ಅವಳು ತನಗೆ ವೀರ್ಯಪರಾಕ್ರಮಾದಿಗಳಲ್ಲಿ ಇಂದ್ರನನ್ನು ಸರಿಗಟ್ಟುವ ಪುತ್ರನಾಗಬೇಕೆಂದು ಬಯಸಿ ಘೋರವಾದ ತಪಸ್ಸನ್ನು ಮಾಡಿದಳು.

50. ಆ ಆಸುರೀ ಎಂಬ ಸ್ತ್ರೀಯು ತನ್ನ ತಂದೆಯಾದ ಪ್ರಜಾಪತಿಯಿಂದ ತನಗೆ ಇಷ್ಟವಾದ ಅನೇಕ ವರಗಳನ್ನು ಪಡೆದಳು. ದೈತ್ಯರನ್ನೂ, ದಾನವರನ್ನೂ ಸಂಹಾರಮಾಡಬೇಕೆಂದು ಇಚ್ಛಿಸಿ ಇಂದ್ರನೇ ಆ ಸ್ತ್ರೀಯಲ್ಲಿ ಅವಳ ಪುತ್ರನಾಗಿ ಹುಟ್ಟಿದನು.

Entering her organ (ಭಗ) they made her ageless, free from disease, and beautiful (ಸುಭಗಾ). They gave her a husband and the sage Suhastya as a son.

48. What the 'Nasatyas' by means of their two winged steeds (ಸುಪರ್ಣಾಭ್ಯಾಂ) gave to Ghosa, daughter of Kaksivat, is proclaimed by the (stanzas) 'Not of that' (ನ ತಸ್ಯ : x. 40-11) (and) 'Of her that grows old at home' (ಅಮಾಜುರಃ : x. 39-3).

49. There was an Asuri, daughter os Prajapati, Vikuntha(ವಿಕುಂಠಾ)by name. She, desiring a son like Indra, performed very severe austerities.

**11. Story of Indra Vaikuntha.**

50. She then obtained from Prajapati her desires (in the form of) various boons. And Indra himself was born of her, as he wished to slay the Daityas and Danavas.

ಏಕದಾ ದಾನವೈಃ ಸಾರ್ಧಂ ಸಮರೇ ಸಮಸಜ್ಯತ |
ಜಘಾನ ತೇಷಾಂ ನವತೀರ್ನವ ಸಪ್ತ ಚ ಸಪ್ತಕಾನ್

ಭಿತ್ತ್ವಾ ಸ್ವಬಾಹುವೀರ್ಯೇಣ ಹೈಮರೌಪ್ಯಾಯಸೀಃ ಪುರೀಃ |
ಹತ್ವಾ ಸರ್ವಾನ್ಯಥಾಸ್ಥಾನಂ ಪೃಥಿವ್ಯಾದಿವ್ಯವಸ್ಥಿತಾನ್

ಪೃಥಿವ್ಯಾಂ ಕಾಲಕೇಯಾಂಶ್ಚ ಪೌಲೋಮಾಂಶ್ಚೈವ ಧನ್ವಿನಃ |
ತಾಂಶ್ಚ ವ್ಯುತ್ಸಾದಯಾಮಾಸ ಪ್ರಹ್ಲಾದತನಯಾನ್ದಿವಿ

ರಾಜ್ಯಂ ಪ್ರಾಪ್ಯ ಸ ದೈತ್ಯೇಷು ಸ್ವೇನ ವೀರ್ಯೇಣ ದರ್ಪಿತಃ |
ದೇವಾನ್ಬಾಧಿತುಮಾರೇಭೇ ಮೋಹಿತೋಽಸುರಮಾಯಯಾ

51. ಒಂದು ಸಮಯದಲ್ಲಿ ದೇವತೆಗಳಿಗೂ, ದಾನವರಿಗೂ (ಅಸುರರಿಗೂ) ಯುದ್ಧವಾಯಿತು. ಅ
ಈ ಇಂದ್ರವೈಕುಂಠನು 810 ಮಂದಿ (90×9) ದೈತ್ಯರನ್ನೂ 490 ಮಂದಿ (70×7) ದಾನವರನ್
ಮಾಡಿದನು.

52. (ಈ ದೈತ್ಯದಾನವರಿಗೆ ಪೃಥಿವಿ, ಅಂತರಿಕ್ಷ ಸ್ವರ್ಗಗಳಲ್ಲಿ ಚಿನ್ನ, ಬೆಳ್ಳಿ, ಉಕ್ಕುಗಳಿಂದ ನಿ
ಅಭೇದ್ಯವಾದ ಕೋಟೆಗಳಿದ್ದವು) ಇಂದ್ರವೈಕುಂಠನು ತನ್ನ ಬಾಹುಬಲದಿಂದಲೇ ಈ ದೈತ್ಯದಾನವರ ಪೃಥಿವ್ಯ
ಗಳಲ್ಲಿದ್ದ ಚಿನ್ನ, ಬೆಳ್ಳಿ, ಉಕ್ಕುಗಳಿಂದ ನಿರ್ಮಿತವಾಗಿದ್ದ ಮೂರು ಪಟ್ಟಣಗಳನ್ನು ಧ್ವಂಸಮಾಡಿದನು. ಮತ್ತು
ಸ್ಥಾನಗಳಲ್ಲಿದ್ದ ಆ ದೈತ್ಯದಾನವರೆಲ್ಲರನ್ನೂ ಸಂಹಾರಮಾಡಿದನು.

53. ಮತ್ತು ಭೂಮಿಯ ಮೇಲಿದ್ದ ಕಾಲಕೇಯರೆಂಬ ದೈತ್ಯರನ್ನೂ ಧನುರ್ಬಾಣಗಳಿಂದ ಅಜೆ
ಪುಲೋಮವಂಶದ ದೈತ್ಯರನ್ನೂ ಸ್ವರ್ಗದಲ್ಲಿದ್ದ ಪ್ರಹ್ಲಾದವಂಶದವರಾದ ಅನೇಕ ದೈತ್ಯರನ್ನೂ ನಾಶಮಾಡಿದ

54. ಈ ರೀತಿಯಾಗಿ ದೈತ್ಯರನ್ನು ಕೊಂದು ಅವರ ರಾಜ್ಯಕ್ಕೆ ತಾನೇ ಪ್ರಭುವಾಗಿ ತನ್ನ ಸ್ವಬಲ
ಗಳಿಂದ ಬೀಗಿ ಮೆರೆಯುತ್ತಾ ಮಾಯಾಪರವಶನಾಗಿ ದೇವತೆಗಳನ್ನು ಹಿಂಸಿಸುವುದಕ್ಕೆ ಪ್ರಾರಂಭಿಸಿದನು.

51. Once he was engaged in battle with the Danavas. Of t
slew nine nineties and seven groups of seven.

52. Having shattered with the might of his arm their cit
gold, silver, and iron, (and) having slain all (of them) in their re
spheres (ಯಥಾಸ್ಥಾನಂ), as arrayed on earth and in the other (two worl

53. On earth he exterminated both the Kalakeyas and the
Puloma, the archers, and in heaven the notorious offspring of Prahl

### 12. **Story of Indra Vaikuntha** (continued).

54. Having obtained sovereignty among the Daityas (and)
up with pride by reason of his might, he began to harass the god
iufatuated by the craft of the Asuras.

ಬಾಧ್ಯಮಾನಾಸ್ತು ತೇನಾಪಿ ಅಸುರೇಣಾಮಿತೌಜಸಾ ।
ಉಪಾಧಾವನ್ನೃಷಿಶ್ರೇಷ್ಠಂ ತತ್ಪ್ರಬೋಧಾಯ ಸಪ್ತಗುಂ ॥ ೫೫ ॥
ಋಷಿಸ್ತು ಸಪ್ತಗುರ್ನಾಮ ತಸ್ಯಾಸೀತ್ಸುಪ್ರಿಯಃ ಸಖಾ ।
ಸ ಚೈನಮಭಿತುಷ್ಟಾವ ಜಗೃಭ್ಮೇತಿ ಕರೇ ಸ್ಪೃಶನ್ ॥ ೫೬ ॥
ತತಃ ಸ ಬುಧ್ವಾ ಚಾತ್ಮಾನಂ ಸಪ್ತಗುಸ್ತುತಿಹರ್ಷಿತಃ ।
ಆತ್ಮಾನಮೇವ ತುಷ್ಟಾವ ಅಹಂ ಭುವಮಿತಿ ತ್ರಿಭಿಃ ॥ ೫೭ ॥
ಕೀರ್ತಯನ್ಸ್ವಾನಿ ಕರ್ಮಾಣಿ ಯಾನಿ ಸ್ಮ ಕೃತವಾನ್ಪುರಾ ।
ಯಥಾಕರೋಚ್ಚ ವೈದೇಹಂ ವ್ಯಂಸಂ ಸೋಮಪತಿಂ ನೃಪಂ ॥ ೫೮ ॥

55. ಅಪರಿಮಿತಶಕ್ತಿಸಾಮರ್ಥ್ಯದಿಂದ ಕೂಡಿದವನೂ, ಅಸುರನೂ ಆದ ಈ ಇಂದ್ರವೈಕುಂಠನಿಂದ ಪೀಡಿತರಾದ ದೇವತೆಗಳು ಇವನ ಬಾಧೆಯನ್ನು ತಾಳಲಾರದೆ ಓಡಿಹೋಗಿ ಋಷಿಶ್ರೇಷ್ಠನಾದ **ಸಪ್ತಗು** ಎಂಬ ಋಷಿಯ ಮರೆಹೊಕ್ಕರು.

56. ಈ ಸಪ್ತಗುಋಷಿಯು ಆ ಇಂದ್ರವೈಕುಂಠನ ಪ್ರಿಯಮಿತ್ರನಾಗಿದ್ದನು. ಆದ್ದರಿಂದ ದೇವತೆಗಳನ್ನು ರಕ್ಷಿಸುವುದಕ್ಕಾಗಿ ಇಂದ್ರವೈಕುಂಠನ ಕೈಯನ್ನು ಹಿಡಿದುಕೊಂಡು **ಜಗೃಭ್ಮಾ ತೇ ದಕ್ಷಿಣಮಿಂದ್ರ ಹಸ್ತಂ** ಎಂಬ ೪೭ ನೇ ಸೂಕ್ತದಿಂದ ಆ ಇಂದ್ರವೈಕುಂಠನನ್ನು ಸ್ತುತಿಸಿದನು:

57. ಸಪ್ತಗುಋಷಿಯಿಂದ ಪ್ರಶಂಸಿತನಾದ ಆ ಇಂದ್ರವೈಕುಂಠನಿಗೆ ತಾನು ಯಾರು (ಎಂದರೆ ಇಂದ್ರನೇ ತಾನು) ಎಂಬ ಅರಿವಾಯಿತು. ಅನಂತರ ಆ ಇಂದ್ರವೈಕುಂಠನು **ಅಹಂ ಭುವನಂ ವಸುನಃ** ಎಂದು ಮೊದಲಾಗುವ ಮುಂದಿನ ಮೂರು ಸೂಕ್ತಗಳಲ್ಲಿ (೪೮-೫೦) ತನ್ನ ಸ್ವಪ್ರಶಂಸೆಯನ್ನು ಮಾಡಿಕೊಂಡಿದ್ದಾನೆ.

58. ತನ್ನ ಆತ್ಮಪ್ರಶಂಸೆಯಲ್ಲಿ ಹಿಂದೆ ತಾನು ಯಾವ ಯಾವ ಸಾಹಸಕೃತ್ಯಗಳನ್ನು ಮಾಡಿದನೋ ಅವುಗಳೆಲ್ಲವನ್ನೂ ಹೇಳಿಕೊಂಡಿರುವನು. ಮತ್ತು ತಾನು ವಿದೇಹದೇಶದ ರಾಜನಾದ ವ್ಯಂಸನೆಂಬುವನನ್ನು ಹೇಗೆ ಸೋಮಪತಿಯನ್ನಾಗಿ ಮಾಡಿದೆನೆಂಬ ವಿಷಯವನ್ನೂ ಪ್ರಶಂಸೆಮಾಡಿರುವನು.

---

55. Now while they were being harassed by that same Asura of unlimited power, they fled for succour to Saptagu, most excellent of seers, in order that (the latter) should admonish him (Indra).

56. Now the seer called Saptagu was a dear friend of his, and (so) he praised him with the (hymn), "We have grasped (ಜಗೃಭ್ಮಾ : x. 47), as he took kim by the hand.

57. Then he coming to (ಬುಧ್ವಾ) himself (and) rejoiced at the praise of Saptagu, praised himself with the three (hymns) 'I was' (ಅಹಂ ಭುವಂ : x. 48-50);

58. Proclaiming his deeds, which he performed in days of yore, and how he made king Vyemsa of Videha lord of Soma.

ವಸಿಷ್ಠಶಾಪಾದಭವದ್ವೈದೇಹೋ ನೃಪತಿಃ ಪುರಾ ।
ಇಂದ್ರಪ್ರಾಸಾದಾದೇಜೇ ಚ ಸತ್ತ್ರೈಃ ಸಾರಸ್ವತಾದಿಭಿಃ ॥ ೫೯ ॥
ಪ್ರಭೂತಾಂ ಶಕ್ತಿಮುತ್ತ್ರಾಂ ಚ ಶತ್ರೂಣಾಮಪ್ಯಸಾಕ್ರಿಯಾಂ ।
ನೃಷು ಸರ್ವೇಷು ಚೈಶ್ವರ್ಯಂ ಪ್ರಭುತ್ವಂ ಭುವನೇಷು ಚ
ಪ್ರ ವೋ ಮಹ ಇತಿ ತ್ವಸ್ಯಾಮಾತ್ಮನೋ ವೀರ್ಯಮಕ್ಷಯಂ ॥ ೬೦ ॥
ವೈಶ್ವಾನರೇ ಗೃಹಪತೌ ಯವಿಷ್ಠೇಽಗ್ನೌ ಚ ಪಾವಕೇ ।
ವಷಟ್ಕಾರೇಣ ವೃಕ್ಣೇಷು ಭ್ರಾತೃಷ್ವಗ್ನೌ ಸಹಃಸುತೇ ॥ ೬೧ ॥

59. ಪೂರ್ವದಲ್ಲಿ ಈ ವಿದೇಹದೇಶದ ರಾಜನಿಗೆ ವಸಿಷ್ಠಋಷಿಯು ಶಾಪವನ್ನು ಕೊಟ್ಟನು. ಈ ರಾಜನು ಇಂದ್ರನ ಅನುಗ್ರಹದಿಂದ ಸರಸ್ವತೀ ಮೊದಲಾದ ನದಿಗಳ ದಡದಲ್ಲಿ ಸತ್ತ್ರಯಾಗಗಳನ್ನು ಮಾಡಿದನು.

60. ಇಂದ್ರನು ತನ್ನ ಸ್ವಪ್ರಶಂಸೆಯನ್ನು ಮಾಡುತ್ತಾ ತನ್ನ ಅತಿಶಯವಾದ ಸಾಮರ್ಥ್ಯವನ್ನೂ, ತನ್ನ ಶತ್ರುಗಳಿಗೆ ತಾನು ಮಾಡಿದ ಹಿಂಸೆಯನ್ನೂ, ಸಮಸ್ತ ಲೋಕಗಳಿಗೂ ತಾನು ಪ್ರಭುವಾಗಿರುವುದನ್ನು ಸಮಸ್ತ ಜನರಿಗೂ ತಾನು ಒಡೆಯನಾಗಿರುವುದನ್ನೂ **ಪ್ರ ವೋ ಮಹೇ** ಎಂಬ ೫೦ ನೇ ಸೂಕ್ತದಲ್ಲಿ ವರ್ಣಿಸಿರುವನು.

**ಸೌಚೀಕಾಗ್ನಿಯ ವಿಷಯ; ಅಗ್ನಿಯು ದೇವತೆಗಳನ್ನು ಬಿಟ್ಟು ಓಡಿಹೋಗಿ ನೀರಿನಲ್ಲಿ ಅವಿತುಕೊಂಡಿದ್ದ ವಿಷಯ.**

61. ಪೂರ್ವದಲ್ಲಿ ಅಗ್ನಿಯ ಜ್ಯೇಷ್ಠಸಹೋದರರಾದ ವೈಶ್ವಾನರ, ಅಗ್ನಿಗೃಹಪತಿ (ಗಾರ್ಹಪತ್ಯಾಗ್ನಿ), ಯವಿಷ್ಠಪಾವಕ (ಪಾವಕಾಗ್ನಿ) ಎಂಬ ಮೂರು ಮಂದಿಯೂ ಯಜಮಾನರು ಯಜ್ಞಗಳಲ್ಲಿ ವಷಟ್ಕಾರಪೂರ್ವಕರಾಗಿ ಅರ್ಪಿಸುವ ಹವಿಸ್ಸುಗಳನ್ನು ದೇವತೆಗಳ ಬಳಿಗೆ ಒಯ್ಯುತ್ತಿದ್ದರು. ವಜ್ರಾಯುಧಸದೃಶವಾದ ಈ ವಷಟ್ಕಾರಾಹುತಿಗಳಿಂದ (ಅವುಗಳ ತೀಕ್ಷ್ಣತೆಯನ್ನು ತಾಳಲಾರದೆ) ಈ ಮೂವರೂ ಹತರಾದರು. ತನ್ನ ಈ ಮೂರುಮಂದಿ ಸಹೋದರರು ಮೃತರಾದುದನ್ನು ನೋಡಿ ಅಗ್ನಿಯು ಹೆದರಿ,

## 13. Story of Indra Vaikuntha (concluded). Story of Agni and his brothers : RV. x. 51-53.

59. By the curse of Vasistha he in former days had become king of Videha, and by the favour of Indra he sacrificed with sessions (सत्त्र) on the Sarasvati and others,

60. and (praising) his great power and his injury to foes, and his sovereignty among all men and his lordship in the worlds: but in the (stanza) 'Forth to your great' (ಪ್ರ ವೋ ಮಹೇ : x. 50 I) his own imperishable might.

61. When the brothers Vaisvanara, Agni Grihapati and Yavistha, Pavaka, and Agni Sahasuta had been shattered by the Vasat call.

ಅಪಚಕ್ರಾಮ ದೇವೇಭ್ಯಃ ಸೌಚೀಕೋಽಗ್ನಿರಿತಿ ಶ್ರುತಿಃ ।
ಸ ಪ್ರಾವಿಶದಪಕ್ರಮ್ಯ ಋತೂನಪೋ ವನಸ್ಪತೀನ್ ॥ ೬೨ ॥

ತತೋಽಸುರಾಃ ಪ್ರಾದುರಾಸನ್ನಷ್ಟೇಽಗ್ನೌ ಹವ್ಯವಾಹನೇ ।
ತೇಽಗ್ನಿಮೇವಾನ್ವೈಕ್ಷಂತ ದೇವಾ ಹತ್ವಾಸುರಾನ್ಮೃಧೇ ॥ ೬೩ ॥

ತಂ ತು ದೂರಾದ್ಯಮಶ್ಚೈವ ವರುಣಶ್ಚಾನ್ವಪಶ್ಯತಾಂ ।
ಉಭಾವೇನಂ ಸಮಾದಾಯ ದೇವಾನೇವಾಭಿಜಗ್ಮತುಃ ॥ ೬೪ ॥

ದೃಷ್ಟ್ವಾ ದೇವಾಸ್ತ್ವೇನಮೂಚುರಗ್ನೇ ಹವ್ಯಾನಿ ನೋ ವಹ ।
ವರಾನ್ ಗೃಹಾಣ ಚಾಸ್ಮತ್ತಶ್ಚಿತ್ರಭಾನೋ ಭಜಸ್ವ ನಃ ।

62. ದೇವತೆಗಳ ಸಮೀಪವನ್ನು ಬಿಟ್ಟು ಓಡಿಹೋಗಿ ಈ ಸೌಚೀಕಾಗ್ನಿಯು ಋತುಗಳಲ್ಲಿಯೂ, ಉದಕಗಳಲ್ಲಿಯೂ, ವೃಕ್ಷಗಳಲ್ಲಿಯೂ ಹೋಗಿ ಸೇರಿಕೊಂಡನು (ಆಶ್ರಯ ಪಡೆದನು) ಈ ವಿಷಯವು ಶ್ರುತಿವಾಕ್ಯಗಳಲ್ಲಿ ಹೇಳಲ್ಪಟ್ಟಿರುವುದು.

63. ತಮಗೆ ಹವಿಸ್ಸನ್ನು ಒಯ್ಯುತ್ತಿದ್ದ ಅಗ್ನಿಯು ತಮ್ಮನ್ನು ಬಿಟ್ಟು ಹೊರಟುಹೋದ ಕೂಡಲೆ ಅಸುರರು ದೇವತೆಗಳ ಮೇಲೆ ನುಗ್ಗಿ ಬಂದರು. ಆಗ ದೇವತೆಗಳಿಗೂ ಅಸುರರಿಗೂ ನಡೆದ ಯುದ್ಧದಲ್ಲಿ ದೇವತೆಗಳು ಅಸುರರನ್ನು ಕೊಂದರು. ಆಗ ತಮ್ಮ ಬಳಿ ಅಗ್ನಿ ಇಲ್ಲದಿರುವುದನ್ನು ಕಂಡು ಅಗ್ನಿಯು ಎಲ್ಲಿಗೆ ಹೋಗಿರುವನೆಂದು ಅವನನ್ನು ಹುಡುಕಲಾರಂಭಿಸಿದರು.

64. ಆಗ ಯಮನೂ, ವರುಣನೂ ಅಗ್ನಿಯನ್ನು ದೂರದಿಂದಲೇ ನೋಡಿದರು. ಅವರು ಅಗ್ನಿಯ ಬಳಿಗೆ ಬಂದು ಅವನನ್ನು ತಮ್ಮ ಜತೆಯಲ್ಲಿಯೇ ಕರೆದುಕೊಂಡು ದೇವತೆಗಳ ಬಳಿಗೆ ಹೋದರು.

65. ತಮ್ಮ ಬಳಿಗೆ ಬಂದ ಅಗ್ನಿಯನ್ನು ದೇವತೆಗಳು ನೋಡಿ ಇಂತೆಂದರು—ಎಲೈ ಅಗ್ನಿಯೇ, ಯಜ್ಞಾದಿಗಳಲ್ಲಿ ನಮಗೆ ಅರ್ಪಿತವಾಗುವ ಹವಿಸ್ಸನ್ನು ನಮಗೆ ವಹಿಸು; ನಿನಗೆ ವರಗಳು ಬೇಕಾಗಿದ್ದಲ್ಲಿ ಕೇಳು, ಕೊಡುವೆವು.

---

62. Agni Sauchika departed from the gods, so a Vedic text(relates). He on departing entered the seasons, the waters, (and) the trees.

63. Then the Asuras appeared, when Agni the oblation-bearer had vanished. The gods, having slain the Asuras in fight, looked about in quest of Agni.

### 14. Story of Agni's flight (continued).

64. Now Yama and Varuna espied him from afar. Both of them, taking him with them, went to the gods.

65. On seeing him the gods said ; 'O Agni, bear our oblations, and accept boons from us ; do you, O brilliantly shining one, attend upon us ;

ದೇವಯಾನಾನ್ ಸುಗಾನ್ ಪಥಃ ಕುರುಷ್ವ ಸುಮನಾಃ ಸ್ವಯಂ || ೬೫ ||
ಪ್ರತ್ಯುವಾಚಾಥ ತಾನಗ್ನಿರ್ವಿಶ್ವೇದೇವಾ ಯದೂಚ ಮಾಂ |
ತತ್ಕರಿಷ್ಯೇ ಜುಷಂತಾಂ ತು ಹೋತ್ರಂ ಪಂಚ ಜನಾ ಮಮ || ೬೬ ||
ಶಾಲಾಮುಖ್ಯಃ ಪ್ರಣೀತಶ್ಚ ಪುತ್ರೋ ಗೃಹಪತೇಶ್ಚ ಯಃ |
ಉತ್ತರೋ ದಕ್ಷಿಣಶ್ಚಾಗ್ನಿರೇತೇ ಪಂಚ ಜನಾಃ ಸ್ಮೃತಾಃ || ೬೭ ||
ಮನುಷ್ಯಾಃ ಪಿತರೋ ದೇವಾ ಗಂಧರ್ವೋರಗರಾಕ್ಷಸಾಃ |
ಗಂಧರ್ವಾಃ ಪಿತರೋ ದೇವಾ ಅಸುರಾ ಯಕ್ಷರಾಕ್ಷಸಾಃ || ೬೮ ||

ನಾನಾಪ್ರಕಾಶಗಳಿಂದ ಬೆಳಗುವ ಎಲೈ ಅಗ್ನಿಯೇ, ನಮ್ಮ ಹವಿರ್ವಹನಕಾರ್ಯವನ್ನು ನೆರವೇರಿಸು. ನೀನು ನಮ್ಮವಿಚಾರದಲ್ಲಿ ಒಳ್ಳೆಯ ಬುದ್ಧಿಯನ್ನು ಪ್ರದರ್ಶಿಸಿ ದೇವತೆಗಳು ಸಂಚರಿಸುವ ಮಾರ್ಗಗಳನ್ನು ನಿರ್ಬಾಧಿತವಾಗುವಂತೆ ಮಾಡು.

66. ದೇವತೆಗಳ ಮಾತನ್ನು ಕೇಳಿ, ಅಗ್ನಿಯು ಈರೀತಿ ಪ್ರತ್ಯುತ್ತರವಿತ್ತನು—ದೇವತೆಗಳಾದ ನೀವೆಲ್ಲರೂ ಹೇಳಿದುದನ್ನು ನಾನು ಮಾಡುತ್ತೇನೆ. ಆದರೆ ಐದು ಪಂಗಡದ ಜನರೂ ನನ್ನ ಹವಿರ್ವಹನಕಾರ್ಯದಿಂದ ಪ್ರಯೋಜನವನ್ನು ಪಡೆಯಲಿ.

**ಪಂಚಜನರ ವಿವರಣೆ**

67. ಈ ಐದು (ವಿಧ) ಪಂಗಡದ ಜನರು ಯಾರು ಎಂಬುದನ್ನು ಇಲ್ಲಿ ವಿವರಿಸುತ್ತಾರೆ—(೧) ಯಜ್ಞಗೃಹದ ದ್ವಾರದಲ್ಲಿ ಪ್ರತಿಷ್ಠಿತವಾಗಿರುವ ಅಗ್ನಿಯು (ಶಾಲಾಮುಖ್ಯಃ); (೨) ಅರಣಿಗಳಲ್ಲಿ ಕಡೆದ ಸ್ಥಳದಿಂದ ಉತ್ತರವೇದಿಗೆ ತರಲ್ಪಡುವ (ಪ್ರಣೀತ) ಅಗ್ನಿ; (೩) ಯಜಮಾನನ ಗೃಹದಲ್ಲಿ ಸ್ಥಾಪಿತನಾದ ಅಗ್ನಿ (ಅಥವಾ ಗಾರ್ಹಪತ್ಯಾಗ್ನಿ); (೪) ಯಜ್ಞವೇದಿಯ ಉತ್ತರಭಾಗದಲ್ಲಿರುವ ಅಗ್ನಿ; (೫) ದಕ್ಷಿಣಾಗ್ನಿ; ಈ ಐದು ವಿಧ ಅಗ್ನಿಗಳನ್ನೇ ಪಂಚಜನರೆಂದು ಕೆಲವರು ಹೇಳುವರು.

68. (೧) ಮನುಷ್ಯರು (೨) ಪಿತೃಗಳು (೩) ದೇವತೆಗಳು (ಗಂಧರ್ವರು) (೫) ಸರ್ಪಗಳೇ ಮೊದಲಾದ ರಾಕ್ಷಸರು. ಅಥವಾ (೧) ಗಂಧರ್ವರು (೨) ಪಿತೃಗಳು (೩) ದೇವತೆಗಳು (೪) ಅಸುರರು (೫) ಯಕ್ಷರಾಕ್ಷಸರು.

---

do you yourself graciously make the paths trodden by the gods easy to traverse.'

66. Agni then answered them: 'What all ye gods have said to me I will do; but let the five races enjoy my priesthood'

67. now the fire at the entrance of the shed (ಶಾಲಾಮುಖ್ಯ), that which is brought forward (ಪ್ರಣೀತ), the son of the Lord of the House, the northern and the southern fire, these are held by tradition (ಸ್ಮೃತ) to be the five races.

**15. The meaning of pancha janah**

68. Men, Fathers, Gods, Gandharvas, Serpents, Demons; (or) Gandharvas, Fathers, Gods, Asuras, Yaksas (and) Demons:

ಯಾಸ್ಕೌಪಮನ್ಯವಾವೇತಾನಾಹತುಃ ಪಂಚ ವೈ ಜನಾನ್ ।
ನಿಷಾದಪಂಚಮಾನ್ವರ್ಣಾನ್ ಮನ್ಯತೇ ಶಾಕಟಾಯನಃ ॥ ೬೯ ॥
ಋತ್ವಿಜೋ ಯಜಮಾನಂ ಚ ಶಾಕಪೂಣಿಸ್ತು ಮನ್ಯತೇ ।
ಹೋತಾಧ್ವರ್ಯುಸ್ತಥೋದ್ಗಾತಾ ಬ್ರಹ್ಮಾ ಚೇತಿ ವದಂತಿ ತಾನ್ ॥ ೭೦ ॥
ಚಕ್ಷುಃ ಶ್ರೋತ್ರಂ ಮನೋ ವಾಕ್ಚ ಪ್ರಾಣಶ್ಚೇತ್ಯಾತ್ಮವಾದಿನಃ ।
ಗಂಧರ್ವಾಪ್ಸರಸೋ ದೇವಾ ಮನುಷ್ಯಾಃ ಪಿತರಸ್ತಥಾ ॥ ೭೧ ॥
ಸರ್ಪಾಶ್ಚ ಬ್ರಾಹ್ಮಣೇ ಚೈವ ಶ್ರೂಯಂತೇ ಹ್ಯೈತರೇಯಕೇ ।
ಯೇ ಚಾನ್ಯೇ ಪೃಥಿವೀಜಾತಾ ದೇವಾಶ್ಚಾನ್ಯೇಽಥ ಯಜ್ಞಿಯಾಃ ॥ ೭೨ ॥

69. ಇವರೇ ಪಂಚಜನರೆಂದು ಯಾಸ್ಕರೂ ಔಪಮನ್ಯವ ಎಂಬ ಆಚಾರ್ಯರೂ ಹೇಳುವರು. ಶಾಕಟಾಯನರೆಂಬ ಆಚಾರ್ಯರು—(೧) ನಿಷಾದರು (ಬೇಡರು) (೨) ಬ್ರಾಹ್ಮಣ (೩) ಕ್ಷತ್ರಿಯ (೪) ವೈಶ್ಯ (೫) ಶೂದ್ರ ಎಂಬುವರೇ ಪಂಚಜನರೆಂದು ಹೇಳುವರು.

70. (೧) ಋತ್ವಿಕ್ಕುಗಳು (೨) ಯಜ್ಞವನ್ನು ಮಾಡುವ ಯಜಮಾನ (೩) ಹೋತೃ ಅಧ್ವರ್ಯು, ಎಂಬ ಋತ್ವಿಕ್ಕುಗಳು (೪) ಉದ್ಗಾತೃ (೫) ಬ್ರಹ್ಮಾ ಈ ಐದು ಮಂದಿಯೇ ಪಂಚಜನರೆಂದು ಶಾಕಪೂಣಿಯವರ ಮತವು.

71. (೧) ಕಣ್ಣು (೨) ಕಿವಿ (೩) ಮನಸ್ಸು (೪) ವಾಕ್ (ಮಾತು) (೫) ಪ್ರಾಣ ಈ ಪಂಚೇಂದ್ರಿಯಗಳೇ ಪಂಚಜನರೆಂದು ಆತ್ಮವಾದಿಗಳು (ವೇದಾಂತಿಗಳು) ಹೇಳುವರು. (೧) ಗಂಧರ್ವರು ಮತ್ತು ಅಪ್ಸರೆಯರು (೨) ದೇವತೆಗಳು (೩) ಮನುಷ್ಯರು (೪) ಪಿತೃಗಳು.

72. (೫) ಸರ್ಪಗಳು. ಈ ಐದು ಪಂಗಡಗಳೇ ಪಂಚಜನರೆಂದು ಐತರೇಯಬ್ರಾಹ್ಮಣದಲ್ಲಿ ಹೇಳಲಾಗಿದೆ. ಎಲ್ಲೈ ದೇವತೆಗಳೇ, ಈ ಪಂಚಜನರೂ ಪೃಥಿವಿಯಲ್ಲಿ ಹುಟ್ಟಿರುವ ಇತರ ಪ್ರಾಣಿವರ್ಗಗಳೂ, ಯಜ್ಞಾರ್ಹರಾದ ಇತರ ದೇವತೆಗಳೂ,

---

69. Yaska and Aupamanyava state these to be the five races. Sakatayana thinks they are the (four) castes with the Nisadas as a fifth.

70 Sakapuni, however, thinks they are the (four) priests (ಋತ್ವಿಜಃ) and the institutor of the sacrifice (ಯಜಮಾನ),

Those (priests) they call 'Hotr', 'Adhvaryu', 'Udgatr', and 'Brahman,'

71-72. Eye, ear, mind, speech, and breath, say the theosphists (ಆತ್ಮವಾದಿನಃ). They are stated to be Gandharvas and Apsarases, Gods, Men, Fathers, and Serpents in the sacred text of the Aitareya Brahmana

and (continued Agni) whatever other terrestrial creatures(ಪೃಥಿವೀಜಾತಾಃ) and other divine beings (ದೇವಾಃ) there are that receive worship (ಯಜ್ಞಿಯಾಃ).

ಆಯುರಸ್ತು ಚ ಮೇ ದೀರ್ಘಂ ಹವೀಂಷಿ ವಿವಿಧಾನಿ ಚ ।
ಅರಿಷ್ಟಿಃ ಪೂರ್ವಜಾನಾಂ ಚ ಭ್ರಾತೄಣಾಮಧ್ವರೇಽಧ್ವರೇ ॥ ೭೩ ॥
ಪ್ರಯಾಜಾಶ್ಚಾನುಯಾಜಾಶ್ಚ ಘೃತಂ ಸೋಮೇ ಚ ಯಃ ಪಶುಃ ।
ಮದ್ದೈವತ್ಯಾನಿ ವೈ ಸಂತು ಯಜ್ಞೋ ಮದ್ದೇವತೋಽಸ್ತು ಚ ॥ ೭೪ ॥
ತವಾಗ್ನೇ ಯಜ್ಞ ಇತ್ಯೇತತ್ಪ್ರತ್ಯಾರ್ಥಿ ಸ್ವಿಷ್ಟಕೃಚ್ಚ ಸಃ ।
ಯಸ್ಯ ತ್ರೀಣಿ ಸಹಸ್ರಾಣಿ ನವ ತ್ರೀಣಿ ಶತಾನಿ ಚ ॥ ೭೫ ॥
ತ್ರಿಂಶಚ್ಚೈವ ತು ದೇವಾನಾಂ ಸರ್ವಾನೇವ ವರಾನ್ದದುಃ ।
ತತೋಽಗ್ನಿಃ ಸುಮನಾಃ ಪ್ರೀತೋ ವಿಶ್ವೈರ್ದೇವೈಃ ಪುರಸ್ಕೃತಃ ॥ ೭೬ ॥

73. ನನಗೆ ದೀರ್ಘಾಯುಸ್ಸನ್ನೂ (long life) ಅನುಗ್ರಹಿಸಲಿ. ಮತ್ತು ನನಗೆ ಅನೇಕ ವಿಧವಾದ ಇತರ ಹವಿರ್ಭಾಗಗಳನ್ನೂ, ನನ್ನ ಜ್ಯೇಷ್ಠ ಸಹೋದರರಿಗೆ ಪ್ರತಿಯಜ್ಞದಲ್ಲಿಯೂ ಯಾವ ವಿಧವಾದ ಬಾಧೆಯೂ ಉಂಟಾಗದಿರುವುದನ್ನೂ ಅನುಗ್ರಹಿಸಬೇಕು.

74. ಹಾಗೆಯೇ ಯಜ್ಞದ ಪ್ರಾರಂಭದಲ್ಲಿ ಅರ್ಪಿಸುವ **ಪ್ರಯಾಜಾಃ** ಎಂಬ ಆಹುತಿಗಳಿಗೂ ಯಜ್ಞಾಂತ್ಯದಲ್ಲಿ ಅರ್ಪಿಸುವ **ಅನುಯಾಜಾಃ** ಎಂಬ ಆಹುತಿಗಳಿಗೂ ಆಜ್ಯ,(ಘೃತ)ಸೋಮ, ಯಜ್ಞಪಶು ಇವುಗಳಿಗೆಲ್ಲಾ ನಾನೇ ದೇವತೆಯಾಗಿರುವಂತೆಯೂ, ಯಜ್ಞಕ್ಕೆ ನಾನೇ ಮುಖ್ಯದೇವತೆಯಾಗಿರುವಂತೆಯೂ (ಯಜ್ಞದಲ್ಲಿ ಮುಖ್ಯ ಪಾತ್ರವನ್ನು ವಹಿಸುವಂತೆಯೂ) ಅನುಗ್ರಹಿಸಬೇಕು ಎಂದು ಅಗ್ನಿಯು ದೇವತೆಗಳನ್ನು ಕೇಳಿಕೊಂಡನು.

75. ಹಾಗೆಯೇ ಆಗಲೆಂದೊಪ್ಪಿ ದೇವತೆಗಳು ವರವನ್ನು ಕೊಟ್ಟರು—ಎಲೈ ಅಗ್ನಿಯೇ, ಯಜ್ಞವು ನಿನ್ನದಾಗಿಯೇ ಇರಲಿ (ಎಂದರೆ ಯಜ್ಞದಲ್ಲಿ ಮುಖ್ಯಪಾತ್ರವು ನಿನಗೇ ಇರಲಿ) ಸ್ವಿಷ್ಟಕೃತ್ಸ್ವರೂಪನೂ ನೀನೇ ಆಗಿರು ಎಂದು ಹೇಳಿ, ಮೂರುಸಾವಿರದ ಮುನ್ನೂರ ಮೂವತ್ತೊಂಭತ್ತು ಮಂದಿ ದೇವತೆಗಳೆಲ್ಲರೂ ಸೇರಿ,

76. ಅಗ್ನಿಗೆ ವರವನ್ನು ಕೊಟ್ಟರು. ಅಗ್ನಿಯೂ ಸಹ ದೇವತೆಗಳು ತನಗೆ ಮಾಡಿದ ಗೌರವಾದರಗಳಿಂದ ಸಂತೋಷಗೊಂಡು,

---

## 16. Story of Agni's flight (continued).

73. And let me have long life, and various oblations, and let my elder brothers enjoy safety at every sacrifice ;

74. and let the preliminary (ಪ್ರಯಾಜಾಃ) and the final oblations (ಅನುಯಾಜಾಃ), the ghee, and the victim in the Soma (sacrifice) have me as their divinity, and let the sacrifice (in general) have me as its deity.'

75. This was accorded (ಪ್ರತ್ಯಾರ್ಥಿ) with (the words) 'Yours, O Agni, the sacrifice' (ತವಾಗ್ನೇ ಯಜ್ಞಃ x. 51·9); and he(became)Svistakrt (offering right sacrifice), to whom the three thousand, three hundred and nine

76. and thirty gods gave all (these) boons. Then Agni, well-disposed, pleased, honoured by all the gods,

ವಿಧೂಯಾಂಗಾನಿ ಯಜ್ಞೇಷು ಚಕ್ರೇ ಹೋತ್ರಮತಂದ್ರಿತಃ ।
ಭ್ರಾತೃಭಿಃ ಸಹಿತಃ ಪ್ರೀತೋ ದಿವ್ಯಾತ್ಮಾ ಹವ್ಯವಾಹನಃ ॥ ೭೭ ॥
ತಸ್ಯಾಸ್ಥಿ ದೇವದಾರ್ವಾಸೀನ್ಮೇದೋ ಮಾಂಸಂ ಚ ಗುಗ್ಗುಲುಃ ।
ಸುಗಂಧಿತೇಜನಂ ಸ್ನಾಯು ಶುಕ್ರಂ ರಜತಕಾಂಚನೇ ॥ ೭೮ ॥
ರೋಮಾಣಿ ಕಾಶಾಃ ಕೇಶಾಸ್ತು ಕುಶಾಃ ಕೂರ್ಮಾ ನಖಾನಿ ಚ ।
ಅಂತ್ರಾಣಿ ಚೈವಾಪ್ಯವಕಾ ಮಜ್ಜಾ ಸಿಕತಶರ್ಕರಾಃ ॥ ೭೯ ॥
ಅಸೃಕ್ ಪಿತ್ತಂ ಚ ವಿವಿಧಾ ಧಾತವೋ ಗೈರಿಕಾದಯಃ ।
ಏವಮಗ್ನಿಶ್ಚ ದೇವಾಶ್ಚ ಸೂಕ್ತೈರ್ಮಹದಿತಿ ತ್ರಿಭಿಃ ॥ ೮೦ ॥

77. ತನ್ನ ಕೈಕಾಲುಗಳನ್ನು ಕೊಡವಿ ಪ್ರೀತಿಕ್ಕೊಂಡು ತನ್ನ ಸಹೋದರರುಗಳಿಂದ ಸಹಿತನಾಗಿ ದೇವತೆಗಳಿಗೆ ಹವಿಸ್ಸನ್ನು ವಹಿಸುವ ಆ ಅಗ್ನಿಯು ಅತ್ಯಂತ ಸಂತೋಷದಿಂದ ಯಜ್ಞಗಳಲ್ಲಿ ಹೋತೃಕಾರ್ಯವನ್ನು ಎಂದರೆ ದೇವತೆಗಳನ್ನು ಯಜ್ಞಕ್ಕೆ ಆಹ್ವಾನಮಾಡಿ ಕರೆತರುವ ಕಾರ್ಯವನ್ನು ನಿರ್ಬಾಧಿತವಾಗಿ ಮಾಡಲು ತೊಡಗಿದನು. ಆಗ

78. ಅಗ್ನಿಯ ಅಸ್ಥಿಯು (ಎಲುಬು) ದೇವದಾರುವೃಕ್ಷವಾಯಿತು ; ಮೇದಸ್ಸೂ (ಕೊಬ್ಬು) ಮಾಂಸವೂ ಗುಗ್ಗುಲುವಾಗಿ ಪರಿವರ್ತಿತವಾಯಿತು. ಅವನ ಸ್ನಾಯುಗಳು ಎಂದರೆ ನರಗಳು ಸುಗಂಧಯುಕ್ತವಾದ (ಒಳ್ಳೆಯ ವಾಸನೆಯುಳ್ಳ) ತೇಜನ ಎಂಬ ದರ್ಭೆಯಹುಲ್ಲಾಯಿತು ; ಅವನ ವೀರ್ಯವು ಚಿನ್ನ ಮತ್ತು ಬೆಳ್ಳಿಯಾಯಿತು.

79. ಅವನ ಶರೀರದ ಕೂದಲುಗಳು ಕಾಶಾ ಎಂಬ ದರ್ಭೆಯಾಯಿತು ; ಶಿರಸ್ಸಿನ ಕೂದಲುಗಳು ಕುಶ ಎಂಬ ದರ್ಭೆಯಾಯಿತು. ಉಗುರುಗಳು ಆಮೆಗಳಾದವು ; ಕರಳುಗಳು ಅವಕ ಎಂಬ ಲತೆಯಾದವು; ಕೊಬ್ಬು ಮರಳು ಮತ್ತು ಮಣ್ಣುಗಳಾದವು.

80. ರಕ್ತವೂ ಪಿತ್ತವೂ ಗೈರಿಕಾದಿ ನಾನಾವಿಧ ಧಾತುಗಳಾದವು. ಈರೀತಿಯಾಗಿ **ಮಹತ್ತದುಲ್ಬಂ** ಎಂದು ಮೊದಲಾಗುವ ಮೂರು ಸೂಕ್ತಗಳಲ್ಲಿ (೫೧-೫೩) ದೇವತೆಗಳೂ ಅಗ್ನಿಯೂ,

---

77. shaking off his limbs, the divine-souled oblation.bearer, pleased in company with his brothers, unweariedly performed the office of Hotr (ಹೋತ್ರಂ) at sacrifices.

**17. Story of Agni's flight** (concluded). **RV. x. 54-57.**

78 His bone became the Devadaru tree ; his fat and flesh, bdellium his sinew, fragrant Tejana grass ; his semen, silver and gold,

79. the hair of his body (ರೋಮಾಣಿ) became Kasa grass ; the hair of his head (ಕೇಶಾಃ), Kusa grass ; and his nails, tortoises ; and his entrails also (became) the Avaka plant ; his marrow, sand and gravel ;

80. his blood and bile (became) various minerals, such as red chalk. Thus Agni and the gods with the three hymns (beginning) 'Great' (ಮಹತ x. 51-53),

**ಸಮೂದಿರೇ ಪರೇ ತ್ವಸ್ಮಾದೈಂದ್ರೇ ಸೂಕ್ತೇ ತು ತಾಂ ಸುತೇ ।**
**ವಿಧುಂ ದದ್ರಾಣಮಿತ್ಯಸ್ಯಾಂ ಸೂರ್ಯಾಚಂದ್ರಮಸೌ ಸ್ತುತೌ** || ೮೧ ||

**ಪ್ರಾಣವಚ್ಚಾತ್ಮವಚ್ಚಾಪಿ ಸ್ತುತಿರಪ್ಯತ್ರ ದೃಶ್ಯತೇ ।**
**ಇದಂ ದ್ವೇ ವೈಶ್ವದೇವೇ ಚ ದ್ವಿತೀಯೋ ಮನಸಸ್ತ್ರ್ಯೃಚಃ** || ೮೨ ||

**ಪ್ರಥಮೈಂದ್ರೀ ದ್ವಿತೀಯಾಗ್ನೇಯ್ಯಂತ್ಯಾ ತತ್ಸೋಮದೇವತಾ ।**
**ಅಪಿ ಸ್ತೌತಿ ಪಿತೄನೇತದಾರ್ತ್ವಿಜ್ಯಂ ಯತ್ತದುತ್ತರಂ** || ೮೩ ||

81. ಸಂಭಾಷಿಸಿರುವರು. **ತಾಂ ಸುತೇ** ಎಂದು ಮೊದಲಾಗುವ ಮುಂದಿನ ಎರಡು ಸೂಕ್ತಗಳಲ್ಲಿ (೫೪-೫೫) ಇಂದ್ರನನ್ನು ಸ್ತುತಿಸಲಾಗಿದೆ. ೫೫ನೇ ಸೂಕ್ತದ **ವಿಧುಂ ದದ್ರಾಣಂ** ಎಂಬ ೫ನೇ ಋಕ್ಕಿನಲ್ಲಿ ಸೂರ್ಯನನ್ನೂ ಚಂದ್ರನನ್ನು ಸ್ತುತಿಸಲಾಗಿದೆ.

82. ಈ ೫ನೇಋಕ್ಕಿನಲ್ಲಿ ಪ್ರಾಣವನ್ನೂ. ಆತ್ಮವನ್ನೂ ಸ್ತುತಿಸಿರಬಹುದೆಂಬ ಭಾವವೂ ಸೂಚಿತವಾಗುತ್ತದೆ. **ಇದಂ ತ ಏಕಂ** ಎಂದು ಮೊದಲಾಗುವ ಎರಡು ಸೂಕ್ತಗಳಲ್ಲಿ (೫೬-೫೭) ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ. ಆದರೆ ೫೭ನೇ ಸೂಕ್ತದ **ಮನೋನ್ವಾಹುವಾಮಹೇ** ಎಂಬ ಮೊದಲಾಗುವ ಮೂರು ಋಕ್ಕುಗಳಲ್ಲಿ (೩-೫) ಮನಸ್ಸನ್ನು ಸ್ತುತಿಸಲಾಗಿದೆ.

83. ಮತ್ತು ಈ ೫೭ನೇ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಇಂದ್ರನನ್ನೂ ಎರಡನೆಯ ಋಕ್ಕಿನಲ್ಲಿ ಅಗ್ನಿಯನ್ನೂ, ೬ನೇ ಋಕ್ಕಿನಲ್ಲಿ ಸೋಮನನ್ನು ಸ್ತುತಿಸಲಾಗಿದೆ. ಈ ಸೂಕ್ತದಲ್ಲಿ ಪಿತೃದೇವತೆಗಳನ್ನು ಉದ್ದೇಶಿಸಿ ಸ್ತುತಿಸಿರುವುದೂ ಕಂಡುಬರುವುದು. ಈ ದೃಷ್ಟಿಯಲ್ಲಿ ಈ ಸೂಕ್ತದ ಮಂತ್ರಗಳನ್ನು ಆಯಾಸಂದರ್ಭಗಳಲ್ಲಿ ಋತ್ವಿಕ್ಕುಗಳು ಪ್ರಯೋಗಮಾಡುವರು. ಇದರ ಮುಂದಿನ ಸೂಕ್ತವಾದ **ಯತ್ತೇ ಯಮಂ** ಎಂಬ ಸೂಕ್ತದ ವಿಷಯದಲ್ಲಿ,

---

81. conversed. Now the two following (hymns) ‘That of you’ (ತಾಂಸುತೇ x. 54-55) after this are addressed to Indra.

In the(stanza)‘ Who lonely runs ’ (ವಿಧುಂ ದದ್ರಾಣಂ x. 55-5) Sun and Moon are praised.

82. The praise here also appears as of Breath and of Soul. The two (hymns) ‘ This ’ (ಇದಂ x. 56-57) are addressed to the All-gods. In the second (57) there is a triplet (3-5) to Mind (ಮನಃ).

**18. Story of Subandhu : RV. x. 57-59.**

83. The first (stanza) is addressed to Indra (x. 57. I), the second to Agni (2), the last (6) has the Soma (mentioned) in it (ತತ್) for its deity.

This (hymn)praises the Fathers also (and) should be recited (in that sense) by priests (ಆರ್ತ್ವಿಜ್ಯಂ). The hymn (beginning) ‘ Which ’ (ಯತ್ x. 58), coming next after that,

ಸೂಕ್ತಮಾಖ್ಯಾನಸಂಯುಕ್ತಂ ವಕ್ತುಕಾಮಸ್ಯ ಮೇ ಶೃಣು ।
ಸಂಮೋಹಾನ್ನಷ್ಟಸಂಜ್ಞಸ್ಯ ಶತ್ರುಣಾಭಿಹತಸ್ಯ ತು ॥ ೮೪ ॥
ಜೀವಾವೃತ್ತಿಃ ಸುಬಂಧೋರ್ವಾ ಯದಿ ವಾ ಮನಸಃ ಸ್ತವಃ ।
ರಾಜಾಸಮಾತಿರೈಕ್ಷ್ವಾಕೂ ರಥಪ್ರೋಷ್ಠಃ ಪುರೋಹಿತಾನ್ ॥ ೮೫ ॥
ವ್ಯೃದಸ್ಯ ಬಂಧುಪ್ರಭೃತೀನ್ ದ್ವೈಪದಾ ಯೇಽತ್ರಿಮಂಡಲೇ ।
ದೃಷ್ಟ್ವಾ ಕಿರಾತಾಕುಲೀ ನಾಮ ತತೋ ಮಾಯಾವಿನೌ ದ್ವಿಜೌ ॥ ೮೬ ॥

**ಸುಬಂಧುವಿನ ವೃತ್ತಾಂತ , ೫೭-೬೯ ಸೂಕ್ತಗಳು**

84. ಒಂದು ಪೂರ್ವೇತಿಹಾಸವಿರುವುದು. ಅದನ್ನು ಹೇಳುವೆನು ಮನಸ್ಸಿಟ್ಟು ಕೇಳು. ಈ ಸುಬಂಧುವೆಂಬ ಋಷಿಯು ಶತ್ರುಗಳ ಮಾಯಾ ಮಾಟದ ಫಲವಾಗಿ ಮೂರ್ಛೆಹೋಗಿ ಜ್ಞಾನವಿಲ್ಲದೆ ನಿಶ್ಚೇಷ್ಟಿತನಾಗಿ ಬಿದ್ದಿದ್ದಾಗ,

85. ಆ ಸುಬಂಧುವಿನ ಪ್ರಾಣವು (ಆತ್ಮವನ್ನು ಅಥವಾ ಮನಸ್ಸನ್ನು) ಹಿಂತಿರುಗಿ ಬಂದು ಅವನ ಶರೀರದಲ್ಲಿ ಸೇರಿಕೊಳ್ಳಬೇಕೆಂದು ಪ್ರಾರ್ಥಿಸುವ ವಿಷಯವು ಈ ಸೂಕ್ತದಲ್ಲಿ (೫೮) ವಿವರಿಸಲಾಗಿದೆ. ಇದನ್ನು ಮನಸ್ಸನ್ನು (ಪ್ರಾಣ ಅಥವಾ ಆತ್ಮ) ಉದ್ದೇಶಿಸಿ ಮಾಡಿರುವ ಸ್ತುತಿಯೆಂದೂ ಹೇಳಬಹುದು. (ಈ ವಿಷಯದ ವರ್ಣನೆಯು ಈ ರೀತಿ ಇದೆ-)

86. ಐವನೇ ಮಂಡಲದ ದ್ರಷ್ಟೃವಾದ ಅತ್ರಿವಂಶದ ಬಂಧು ಮೊದಲಾದ ನಾಲ್ಕು ಮಂದಿ ಸಹೋದರರು (ಬಂಧು, ಸುಬಂಧು, ಶ್ರುತಬಂಧು, ವಿಪ್ರಬಂಧು ಎಂಬ ಋಷಿಗಳು) ಐವನೇ ಮಂಡಲದ ದ್ವಿಪದಾವಿರಾಟ್ ಛಂದಸ್ಸಿನ ೨೪ನೇ ಸೂಕ್ತಕ್ಕೆ ಋಷಿಗಳಾಗಿದಾರೆ. [ಈ ನಾಲ್ವರು ಸಹೋದರರೂ ಅಸಮಾತಿ ಎಂಬ ರಾಜನ ಬಳಿ ಪುರೋಹಿತ ರಾಗಿದ್ದರು. ಕಾರಣಾಂತರದಿಂದ ಆ ರಾಜನು ಇವರನ್ನು ಆ ಕೆಲಸದಿಂದ ತೆಗೆದು] ಮಾಯಾವಿಗಳೂ ಮಾಟ ಮೊದಲಾದ ಅಭಿಚಾರಕರ್ಮಗಳಲ್ಲಿ ಕುಶಲರೂ ಆದ ಕಿರಾತ ಮತ್ತು ಆಕುಲಿ ಎಂಬ ಇಬ್ಬರು ದ್ವಿಜರನ್ನು

---

84. is connected with a story: hear it from me desirous of telling it. When he had lost eonsciousness from stupefaction, having been struck down by an enemy,

85. Subandhu's life is (here) recalled (ಜೀವಾವೃತ್ತಿ) or (the hymn) is (in) praise of Mind (ಮನಃ).

King Asamati, of the race of Iksvaku, the Rathaprostha, cast off (ವ್ಯೃದಸ್ಯ) his domestic priests,

86. Bandhu and the rest who in the Mandala of the Atris (v. 24) are seers of Dvipadas (ದ್ವೈಪದಾಃ). The two crafty priests named Kirata and Akuli,

ಅಸಮಾತಿಃ ಪುರೋಽಧತ್ತ ವರಿಷ್ಠೌ ತೌ ಹಿ ಮನ್ಯತೇ ।
ತೌ ಕಪೋತೌ ದ್ವಿಜೌ ಭೂತ್ವಾ ಗತ್ವಾ ಗೌಪಾಯನಾನಭಿ ॥ ೮೭ ॥
ಮಾಯಾಬಲಾಚ್ಚ ಯೋಗಾಚ್ಚ ಸುಬಂಧುಮಭಿಪೇತತುಃ ।
ಸ ದುಃಖಾದಭಿಘಾತಾಚ್ಚ ಮುಮೋಹ ಚ ಪಪಾತ ಚ ॥ ೮೮ ॥
ತೌ ತತೋಽಸ್ಯಾಸುಮಾಲುಚ್ಯ ರಾಜಾನಮಭಿಜಗ್ಮತುಃ ।
ತತಃ ಸುಬಂಧೌ ಪತಿತೇ ಗತಾಸೌ ಭ್ರಾತರಸ್ತ್ರಯಃ ॥ ೮೯ ॥
ಜೇಪುಃ ಸ್ವಸ್ತ್ಯಯನಂ ಸರ್ವೇ ಮೇತಿ ಗೌಪಾಯನಾಃ ಸಹ ।
ಮನ ಆವರ್ತನಂ ತಸ್ಯ ಸೂಕ್ತಂ ಯದಿತಿ ತೇಽಭ್ಯಯುಃ ॥ ೯೦ ॥

87. ಸುಬಂಧು ಮೊದಲಾದವರಿಗಿಂತ ಶ್ರೇಷ್ಠರೆಂದು ತಿಳಿದು ಆ ಅಸಮತಿರಾಜನು ತನ್ನ ಪುರೋಹಿತರನ್ನಾಗಿ ನೇಮಿಸಿಕೊಂಡನು. ಮಾಯಾವಿದ್ಯೆಯಲ್ಲಿ ಕುಶಲರಾದ ಈ ದ್ವಿಜರಿಬ್ಬರೂ ಎರಡು ಪಾರಿವಾಳದ ಪಕ್ಷಿಗಳ ರೂಪವನ್ನು ಧರಿಸಿ ಗೋಪಾಯನಪುತ್ರರಾದ ಸುಬಂಧು ಮೊದಲಾದವರ,

88. ಬಳಿಗೆ ಹೋಗಿ ತಮ್ಮ ಮಾಯಾವಿದ್ಯೆಯ ಮತ್ತು ಯೋಗದ ಸಾಮರ್ಥ್ಯದಿಂದ ಸುಬಂಧುವಿನ ಮೇಲೆ ಬಿದ್ದು ಅವನನ್ನು ಹಿಂಸಿಸತೊಡಗಿದರು. ಆ ಸುಬಂಧುವು ಇವರ (ಈ ಪಾರಿವಾಳಗಳ) ಹೊಡೆತವನ್ನು ತಾಳಲಾರದೆ ಮೂರ್ಛೆಹೋಗಿ ನೆಲದಮೇಲೆ ಬಿದ್ದುಬಿಟ್ಟನು.

89. ಬಳಿಕ ಆ ಈರ್ವರು ದ್ವಿಜರು ಸುಬಂಧುವಿನ ಅಸುವನ್ನು (ಪ್ರಾಣವನ್ನು) ಅಪಹರಿಸಿ ಅದನ್ನು ತೆಗೆದು ಕೊಂಡು (ಅಸಮಾತಿ) ರಾಜನ ಬಳಿಗೆ ಬಂದರು ಇತ್ತ ಸುಬಂಧು ಅಸುವನ್ನು ನೀಗಿ ನಿಶ್ಚೇಷ್ಟಿತನಾಗಿ ಬಿದ್ದಿರಲು ಅವನ ಉಳಿದ ಮೂವರು ಸಹೋದರರು, (ಗೌಪಾಯನರು).

90. ಸುಬಂಧುವಿನ ಪ್ರಾಣವು ಹಿಂತಿರುಗಿ ಬರುವುದಕ್ಕಾಗಿಯೂ ಅವನಿಗೆ ಶ್ರೇಯಸ್ಸಾಗುವುದಕ್ಕಾಗಿಯೂ **ಮಾ ಪ್ರ ಗಾಮ** ಎಂಬ ಸೂಕ್ತದಿಂದ (೫೭) ಸ್ವಸ್ತಿಮಂತ್ರಗಳನ್ನು ಪಠಿಸುತ್ತಿದ್ದರು ಮತ್ತು ಅದೇ ಕಾರ್ಯಸಾಧನೆಗಾಗಿ ಎಂದರೆ ಸುಬಂಧುವಿನ ಅಸುವು (ಪ್ರಾಣವು) ಹಿಂತಿರುಗಿ ಬರುವುದಕ್ಕಾಗಿ **ಯತ್ತೇ ಯಮಂ** ಎಂಬ ೫೮ನೇ ಸೂಕ್ತವನ್ನು ಪಠಿಸುತ್ತಿದ್ದರು.

87. Asamati made his domestic priests; for he considered them the best. These two priests havsng become pigeons and having gone against the Gaupayanas,

### 19. Story of Subandhu (continued).

88. fell upon Subandhu with their crafty power and their magical art (ಯೋಗ). From the pain (caused) by their attack, he swooned and fell.

89, When they had plucked out (ಆಲುಚ್ಯ) his spirit (ಅಸು), they went to the king. Then, after Subandhu had fallen lifeless to the ground, the three brothers,

90 the Gaupayanas, all together muttered, as a spell for good luck, (the hymn) 'Not' (ಮಾ x. 57): for bringing back his soul (ಮನ ಆವರ್ತನಂ) they had recourse to (ಅಭ್ಯಯುಃ) the hymn 'Which' (ಯತ್ x. 58)

ಜೇಪುಶ್ಚ ಭೇಷಜಾರ್ಥಂ ಯಂ ಪ್ರ ತಾರೀತಿ ಪರಂ ತತಃ ।
ಸೂಕ್ತಸ್ಯಾದ್ಯಸ್ತೃಚಸ್ತತ್ರ ನಿರ್ಋತೇರಪನೋದನಃ ॥ ೯೦ ॥
ತ್ರಯಃ ಪಾದಾ ಮೋ ಷ್ವಿತಿ ತು ಸೌಮ್ಯಾ ನೈರ್ಋತ ಉತ್ತಮಃ ।
ಋಕ್ಸೌಮ್ಯಾ ನೈರ್ಋತೀ ಚೈಷಾ ಅಸುನೀತೇಃ ಸ್ತುತಿಃ ಪರೇ ॥ ೯೧ ॥
ದ್ವ್ಯೃಚೇ ತ್ವಾನುಮತಂ ಪಾದಮಂತ್ಯಂ ಯಾಸ್ಕಸ್ತು ಮನ್ಯತೇ ।
ಭೂರ್ದ್ಯೌಃ ಸೋಮಶ್ಚ ಪೂಷಾ ಚ ಖಂ ಪಥ್ಯಾ ಸ್ವಸ್ತಿರೇವ ಚ ॥ ೯೨ ॥
ಸುಬಂಧೋರೇವ ಶಾಂತ್ಯರ್ಥಂ ಪುನರ್ನ ಋಚಿ ತು ಸ್ಮೃತಾಃ ।

91. ಮತ್ತು ಈ ಕಾರ್ಯದಲ್ಲಿ ಉಂಟಾದ ಶರೀರಾಪಘಾತವು ವಾಸಿಯಾಗುವುದಕ್ಕಾಗಿ ೫೯ನೇ ಸೂಕ್ತದ **ಪ್ರ ತಾರ್ಯಾಯುಃ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು (೧-೩) ಪಠಿಸಿದರು. ಈ ಮೂರು ಋಕ್ಕುಗಳ ಪಠಣದಿಂದ ನಿರ್ಋತಿ ಎಂಬ ಪಾಪದೇವತೆಯ ಉಚ್ಚಾಟನೆಯಾಗುವುದು.

92. ಈ ಸೂಕ್ತದ **ಮೋ ಷು ಣಃ** ಎಂಬ ೪ನೇ ಋಕ್ಕಿನ ಮೊದಲು ಮೂರು ಪಾದಗಳಲ್ಲಿ ಸೋಮದೇವತೆಯನ್ನು ಸ್ತುತಿಸಲಾಗಿದೆ. ನಾಲ್ಕನೆಯ ಪಾದದಲ್ಲಿ ನಿರ್ಋತಿಯ ವಿಷಯವಿದೆ. ಆದ್ದರಿಂದ ಈ ಋಕ್ಕಿಗೆ ಸೋಮ ಮತ್ತು ನಿರ್ಋತಿಯು ದೇವತೆಗಳು. ಇದರ ಮುಂದಿನ ೫-೬ನೇ ಋಕ್ಕುಗಳಲ್ಲಿ **ಅಸುನೀತಿ** ಎಂಬ ದೇವತೆಯ ಪ್ರಶಂಸೆ ಇದೆ.

93. ಈ ಎರಡು ಋಕ್ಕುಗಳಲ್ಲಿ (೫-೬) ೬ನೇ ಋಕ್ಕಿನ ಕೊನೆಯ ಪಾದದಲ್ಲಿ ಅನುಮತಿಯೆಂಬ ದೇವತೆಯನ್ನು ಸ್ತುತಿಸಲಾಗಿದೆಯೆಂದು ಯಾಸ್ಕರ ಅಭಿಪ್ರಾಯವು ಮತ್ತು ಪೃಥಿವೀ, ದ್ಯೌಃ, ಸೋಮ, ಪೂಷಾ, ಅಂತರಿಕ್ಷ, ಪಥ್ಯಾಸ್ವಸ್ತಿ ಎಂಬ ದೇವತೆಗಳು,

94. ಸುಬಂಧುವಿನ ಶಾಂತ್ಯರ್ಥವಾಗಿ **ಪುನರ್ನಃ** ಎಂಬ ೭ನೇ ಋಕ್ಕಿನಲ್ಲಿ ಸ್ತುತಿಸಲ್ಪಟ್ಟಿರುವರು ಎಂದು

---

91. And the following (triplet) which, beginning 'Let be prolonged' (ಪ್ರ ತಾರಿ : x. 59), they muttered with a view to remedies is,

the first triplet of the hymn (1-3) : it is there meant to drive away (ಅಪನೋದನ) Dissolution (ನಿರ್ಋತಿ),

92. Now the three verses 'Not at all' (ಮೋ ಷು : x. 59-4) are addressed to Soma, the last (4) to Nirrti ; this whole stanza being addressed to Soma and Nirrti. The following two (stanzas : 5-6) are (in) praise of Asuniti.

93. Now in (this) couplet Yaska thinks the last verse (59-6) is addressed to Anumati,

## 20. Detailed account of RV. x. 59-60.

Earth, Heaven, Soma and Pusan, Air, Pathya and Svasti,

94. are traditionally held (to be the deities) in the stanza 'Again to us' (ಪುನರ್ನ : x. 59-7) for the alleviation (ಶಾಂತಿ) of Subandhu. The triplet

ತೃಚಃ ಶಮಿತಿ ರೋದಸ್ಯೋರೈಂದ್ರೋಽರ್ಧರ್ಚಃ ಸಮಿತ್ಯೃಚಿ || ೯೪ ||
ರಪಸೋ ನಾಶನಾರ್ಥಂ ವೈ ತುಷ್ಟುವುಸ್ತ್ವಥ ರೋದಸೀ |
ರಪ ಇತ್ಯಭಿಧಾನಂ ತು ಗದಿತಂ ಪಾಪಕೃಚ್ಛ್ರಯೋಃ || ೯೫ ||
ಋಗ್ಭಿರೇತಿ ಚತಸೃಭಿಸ್ತತ ಐಕ್ಷ್ವಾಕುಮಸ್ತುವನ್ |
ಇಂದ್ರ ಕ್ಷತ್ರೇತ್ಯೃಚಾ ಚಾಸ್ಯ ಸ್ತುತ್ವಾಶಂಸಿಷುರಾಶಿಷಃ || ೯೬ ||
ಅಗಸ್ತ್ಯಸ್ಯೇತಿ ಮಾತಾ ಚ ತೇಷಾಂ ತುಷ್ಟಾವ ತಂ ನೃಪಂ |
ಸ್ತುತಃ ಸ ರಾಜಾ ಸವ್ರೀಳಸ್ತಸ್ಥೌ ಗೌಪಾಯನಾನಭಿ || ೯೭ ||

ಹೇಳಲಾಗಿದೆ. **ಶಂ ರೋದಸೀ** ಎಂದು ಮೊದಲಾಗುವ ಮೂರು ಋಕ್ಕುಗಳಲ್ಲಿ (೮-೧೦) ದ್ಯಾವಾಪೃಥಿವಿಗಳನ್ನು ಸ್ತುತಿಸಲಾಗಿದೆ. ಈ ೧೦ನೇ ಋಕ್ಕಿನ ಪೂರ್ವಾರ್ಧದಲ್ಲಿ ಇಂದ್ರನ ಸ್ತುತಿ ಇದೆ.

95. ಶರೀರದ ನಿರ್ಬಲತ್ವವನ್ನು (ಅಶಕ್ತಿ) ನಾಶಮಾಡುವುದಕ್ಕಾಗಿ ಋಷಿಗಳು ದ್ಯಾವಾಪೃಥಿವಿಗಳನ್ನು ಸ್ತುತಿಸಿರುವರು. ಪಾಪಕರ್ಮಗಳಿಂದ ಉಂಟಾದ ಶರೀರದ ನಿಶ್ಶಕ್ತತೆಗೆ ರಪ ಎಂದು ಹೆಸರಿರುವುದು.

**೬೦ನೇ ಸೂಕ್ತದ ದೇವತೆಗಳು**

96. ೬೦ನೇ ಸೂಕ್ತದ **ಆ ಜನಂ** ಎಂದು ಮೊದಲಾಗುವ ನಾಲ್ಕು ಋಕ್ಕುಗಳಿಂದ (೧-೪) ಬಂಧ್ವಾದಿ ಋಷಿಗಳು ಇಕ್ಷ್ವಾಕುವಂಶದ ರಾಜನಾದ ಅಸಮಾತಿಯನ್ನು ಪ್ರಶಂಸೆ ಮಾಡಿದರು. ಅವನನ್ನು ಬಹುವಿಧವಾಗಿ ಪ್ರಶಂಸೆಮಾಡಿದನಂತರ **ಇಂದ್ರ ಕ್ಷತ್ರಾ** ಎಂಬ ೫ನೇ ಋಕ್ಕಿನಿಂದ ಆ ರಾಜನ ಶ್ರೇಯಸ್ಸನ್ನು ಕೋರಿ ಇಂದ್ರನನ್ನು ಸ್ತುತಿಸಿದರು.

97. ಆ ಬಂಧ್ವಾದಿಋಷಿಗಳ ತಾಯಿಯೂ ಸಹ ಆ ರಾಜನನ್ನು **ಅಗಸ್ತ್ಯಸ್ಯ** ಎಂಬ ೬ ನೇ ಋಕ್ಕಿನಿಂದ ಸ್ತುತಿಸಿದಳು. ಈರೀತಿ ಬಂಧ್ವಾದಿಋಷಿಗಳಿಂದಲೂ ಅವರ ತಾಯಿಯಿಂದಲೂ ಸ್ತುತಿಸಲ್ಪಟ್ಟ ಆ ಅಸಮಾತಿ ರಾಜನು ತಾನು ಮಾಡಿದ ಕಾರ್ಯಕ್ಕಾಗಿ ಲಜ್ಜೆಗೊಂಡು ಗೋಪಾಯನಪುತ್ರರಾದ ಬಂಧ್ವಾದಿಗಳ ಸಮೀಪದಲ್ಲಿ ತಲೆತಗ್ಗಿಸಿ ಸುಮ್ಮನೆ ನಿಂತುಕೊಂಡನು.

---

'Blessing' (ಶಂ: x. 58. 8-10) is to the Two Worlds (ರೋದಸೀ), while in the stanza 'Together' (ಸಂ: x. 59-10) the (first) hemistich is addressed to Indra.

95. Now they praised the Two Worlds for the distruction of infirmity (ರಪಃ): 'infirmity' is stated to be a designation of sin of (bodily) trouble.

96. Then with the four stanzas 'Hither' (ಆ : x. 60. 1-4) they praised the scion of Iksvaku, and after praising him they uttered prayers for him with the stanza 'O Indra, dominion' (ಇಂದ್ರ ಕ್ಷತ್ರ: x. 60-5).

97. And their mother praised the king, with (the stanza) 'Of Agastya' (ಅಗಸ್ತ್ಯಸ್ಯ : x. 60-6). The king, having been praised, went to the Gaupayanas full of shame.

ಸೂಕ್ತೇನಾಪ್ಯಸ್ತುವನ್ನಗ್ನಿಂ ದ್ವೈಪದೇನ ಯಥಾತ್ರಿಷು ।
ಅಗ್ನಿರಪ್ಯಬ್ರವೀದೇತಾನಯಮಂತಃ ಪರಿಧ್ಯಸುಃ ॥ ೯೮ ॥

ಸುಬಂಧೋರಸ್ಯ ಚೈಕ್ಷ್ವಾಕೋರ್ಮಯಾ ಗುಪ್ತೋ ಹಿತಾರ್ಥಿನಾ ।
ಸುಬಂಧವೇ ಪ್ರದಾಯಾಸುಂ ಜೀವೇತ್ಯುಕ್ತ್ವಾ ಚ ಪಾವಕಃ ॥ ೯೯ ॥

ಸ್ತುತೋ ಗೌಪಾಯನೈಃ ಪ್ರೀತೋ ಜಗಾಮ ತ್ರಿದಿವಂ ಪ್ರತಿ ।
ಅಯಂ ಮಾತೇತಿ ಹೃಷ್ಟಾಸ್ತೇ ಸುಬಂಧೋರಸುಮಾಹ್ವಯನ್ ॥ ೧೦೦ ॥

98. ಅನಂತರ ಅತ್ರಿಋಷಿವಂಶಜರಾದ ಈ ಬಂಧ್ವಾದಿಗೋಪಾಯನಪುತ್ರರು ದ್ವಿಪದಾವಿರಾಟ್‌ಛಂದಸ್ಸಿನ ಸೂಕ್ತದಿಂದ (೫ ನೇ ಮಂಡಲದ ೨೪ ನೇ ಸೂಕ್ತದಿಂದ) ಅಗ್ನಿಯನ್ನು ಸ್ತುತಿಸಿದರು. ಅಗ್ನಿಯು ಇವರ ಸ್ತೋತ್ರದಿಂದ ಸಂತುಷ್ಟನಾಗಿ ಅವರ ಬಳಿಗೆ ಬಂದು—ಎಲೈ ಋಷಿಗಳೇ, ಅಗ್ನಿಯ ಪರಿಧಿಯ ಒಳಭಾಗದಲ್ಲಿ ಸುಬಂಧುವಿನ ಪ್ರಾಣವು,

99. ಸುರಕ್ಷಿತವಾಗಿ ನೆಲೆಸಿರುವುದು. ಈ ಇಕ್ಷ್ವಾಕುವಂಶದ ಅಸಮಾತಿಯ ಪ್ರಾಣವೂ ಇಲ್ಲಿಯೇ ಇರುವುದು. ಇವರಿಬ್ಬರ ಪ್ರಾಣಗಳನ್ನು ಇವರ ಶ್ರೇಯಸ್ಸಿಗಾಗಿ ನಾನು ಇದುವರೆಗೂ ಕಾಪಾಡಿಟ್ಟಿದ್ದೆನು—ಎಂದು ಹೇಳಿ ಶುದ್ಧಿಕಾರಕನಾದ (ಪಾವಕ) ಅಗ್ನಿಯು ಸುಬಂಧುವನ್ನು ಉದ್ದೇಶಿಸಿ ಜೀವಿಸು (ಜೀವ) ಎಂದು ಸುಬಂಧುವಿನ ಪ್ರಾಣವನ್ನು ಹಿಂದಕ್ಕೆ ತಂದುಕೊಟ್ಟನು.

100. ಬಳಿಕ ಗೋಪಾಯನಪುತ್ರರಾದ ಬಂಧ್ವಾದಿಗಳು ಅಗ್ನಿಯನ್ನು ಸ್ತುತಿಸಿದರು. ಅಗ್ನಿಯು ಪ್ರೀತನಾಗಿ ತನ್ನ ಸ್ವಸ್ಥಾನವಾದ ಸ್ವರ್ಗಕ್ಕೆ ಹೊರಟುಹೋದನು. ಬಳಿಕ ಬಂಧ್ವಾದಿಋಷಿಗಳು ಸಂತೋಷಚಿತ್ತರಾಗಿ ೬೦ ನೇ ಸೂಕ್ತದ **ಅಯಂ ಮಾತಾ** ಎಂಬ ೭ ನೇ ಋಕ್ಕಿನಿಂದ ಸುಬಂಧುವಿನ ಅಸುವನ್ನು (ಪ್ರಾಣವನ್ನು) ಹಿಂತಿರುಗಿ ಬರುವಂತೆ ಪ್ರಾರ್ಥಿಸಿ ಕರೆದರು.

---

98. As among the Atris they had also praised Agni with a dvipada hymn (ದ್ವೈಪದ), Agni, on his part, said to them, 'Here within the sacrificial barrier' (ಅಂತಃಪರಿಧಿ) is the spirit,

### 21. Story of Subandhu (concluded) Deities of RV. x. 61-66

99. of Subandhu; that of this scion of Iksvaku also has been guarded by me desirous of the welfare (of both). Having given (back) his spirit to Subandhu and saying 'Live,' the Purifier (ಪಾವಕ),

100. having been praised by the Gaupayanas, went back pleased to heaven. They, rejoicing, summoned the spirit of Subandhu with (the stanza) 'He as a mother' (ಅಯಂ ಮಾತಾ : x. 60-7).

ಶರೀರಮಭಿನಿರ್ದಿಶ್ಯ ಸುಬಂಧೋಃ ಪತಿತಂ ಭುವಿ ।
ಸೂಕ್ತಶೇಷಂ ಜಗುಶ್ಚಾಸ್ಯ ಚೇತಸೋ ಧಾರಣಾಯ ತೇ ॥ ೧೦೧ ॥

ಲಬ್ಧಾಸುಂ ಚಾಯಮಿತ್ಯಸ್ಯಾಂ ಪೃಥಕ್ಪಾಣಿಭಿರಸ್ಪೃಶನ್ ।
ಷಳಿದಂ ವೈಶ್ವದೇವಾನಿ ದ್ವಿತೀಯೋಽಙ್ಗಿರಸಾಂ ಸ್ತುತಿಃ ॥ ೧೦೨ ॥

ಜನ್ಮ ಕರ್ಮ ಚ ಸಖ್ಯಂ ಚ ಇಂದ್ರೇಣ ಸಹ ಕೀರ್ತಯನ್ ।
ಸ್ತೌತಿ ಪ್ರ ನೂನಮಿತ್ಯಾದ್ಯಾಃ ಸಾವರ್ಣ್ಯಸ್ಯ ಮನೋಃ ಸ್ತುತಿಃ ॥ ೧೦೩ ॥

101. ಅನಂತರ ಅಲ್ಲಿ ನಿಶ್ಚೇಷ್ಟಿತವಾಗಿ ಬಿದ್ದಿದ್ದ ಸುಬಂಧುವಿನ ಶರೀರವನ್ನು ಆ ಆತ್ಮಕ್ಕೆ ತೋರಿಸಿ ಆ ಆತ್ಮವು ಆ ಶರೀರದಲ್ಲಿ ಪ್ರವೇಶಿಸಿ ಅವನಿಗೆ ಮುಂಚಿನಂತೆ ಜ್ಞಾನಬರುವುದಕ್ಕಾಗಿ ಈ ಸೂಕ್ತದ ಉಳಿದ ಮಂತ್ರಗಳನ್ನು (೮-೧೨) ಪಠಿಸಿದರು.

102. ಸೂಕ್ತದ ಉಳಿದ ಋಕ್ಕುಗಳನ್ನು ಪಠಿಸುವಾಗ ಕೊನೆಯ (೧೨) **ಅಯಂ ಮೇ ಹಸ್ತಃ** ಎಂಬ ಋಕ್ಕಿನಿಂದ ಆ ಸುಬಂಧುವಿನ ಶರೀರವನ್ನು ತಮ್ಮ ಹಸ್ತಗಳಿಂದ ಸ್ಪರ್ಶಿಸುತ್ತಾ ಪಠಿಸುತ್ತಿದ್ದರು. ಮತ್ತು ಆ ಸುಬಂಧುವಿಗೆ ಪುನಃ ಚೇತನ (ಪ್ರಜ್ಞೆ) ಉಂಟಾಯಿತು. **ಇದಮಿತ್ಥಾ** ಎಂದು ಮೊದಲಾಗುವ ಮುಂದಿನ ಆರು ಸೂಕ್ತಗಳಲ್ಲಿ (೬೧-೬೬) ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ. ಈ ಆರು ಸೂಕ್ತಗಳಲ್ಲಿ ಎರಡನೆಯದಾದ ೬೨ ನೇ ಸೂಕ್ತದಲ್ಲಿ ಅಂಗಿರಸರಸರೆಂಬ ಋಷಿಗಳನ್ನು ಸ್ತುತಿಸಲಾಗಿದೆ.

103. ಈ ಸೂಕ್ತದಲ್ಲಿ (೬೨) ಋಷಿಯು (ನಾಭಾನೇದಿಷ್ಠ ಋಷಿಯು) ಈ ಅಂಗಿರಾಋಷಿಗಳ ಜನ್ಮವೃತ್ತಾಂತವನ್ನೂ, ಅವರೆಸಗಿದ ಕಾರ್ಯಗಳನ್ನೂ, ಇಂದ್ರನೊಡನೆ ಅವರಿಗಿರುವ ಮಿತ್ರತ್ವವನ್ನು ವಿವರಿಸಿ ಪ್ರಶಂಸೆಮಾಡಿರುವನು. **ಪ್ರ ನೂನಂ ಜಾಯತಾಂ** ಎಂದು ಮೊದಲಾಗುವ ಮುಂದಿನ ಋಕ್ಕುಗಳಲ್ಲಿ (೮-೧೧) ಸವರ್ಣಪುತ್ರನಾದ ಮನುವಿನ ಪ್ರಶಂಸೆ ಇದೆ.

---

101. Pointng to the body of Subandhu prostrate on the ground, they sang the remainder of the hymn for the maintenance of his consciousness (ಚೇತಸಃ).

102. And in the (stanza) ' This ' (ಅಯಂ : x. 60-12) they individually (ಪೃಥಕ್) touched him with their hands when he had reeovered his spirit.

There are six (hymns) addressed to the All-gods (beginning) ' This' (ಇದಂ : x. 61-66). In the second (62) there is praise of the Angirases.

103. (The seer) praises (them), proclaiming (their) birth, and activity, and friendship with Indra. ' May he now prosper (ಪ್ರನೂನಂ : x. 62. 8-11) and the rest are a praise of Manu, son of Savarna (ಸಾವರ್ಣ್ಯ).

ತಸ್ಯೈವ ಚಾಯುಷೋಽರ್ಥಾಯ ದೇವಾನ್ಸ್ತೌತ್ಯಭ್ಯಯೋದೃಷಿಃ |
ಸುತ್ರಾಮಾಣಂ ಮಹೀಮೂ ಷು ದಕ್ಷಸ್ಯೇತ್ಯದಿತೇಃ ಸ್ತುತಿಃ || ೧೦೪ ||

ಪಥ್ಯಾಸ್ವಸ್ತೇಃ ಸ್ವಸ್ತಿರಿದ್ಧಿ ಸ್ವಸ್ತಿ ನೋ ಮರುತಾಂ ಸ್ತುತಿಃ |
ಮಾರುತೀಮೃಚಮನ್ವಾಹೇತ್ಯುಕ್ತಮಾಧ್ವರ್ಯವೇಷು ಹಿ || ೧೦೫ ||

ಯಾ ಗೌರಿತಿ ತಥೈವಾಸ್ಯಾಂ ಸ್ತೂಯತೇ ಮಧ್ಯಮಾ ತು ವಾಕ್ |
ಮಿತ್ರಾಯ ಮೈತ್ರಾವರುಣೀ ಭುಜ್ಯುಮಂಹಸ ಅಶ್ವಿನೀ || ೧೦೬ ||

104. ತನ್ನ ಆಯುರ್ವೃದ್ಧಿಗಾಗಿ ಋಷಿಯು ದೇವತೆಗಳನ್ನು ಸ್ತುತಿಸಿರುವನು. ೬೩ನೇ ಸೂಕ್ತದ **ಸುತ್ರಾಮಾಣಂ** ಎಂಬ ೧೦ ನೇ ಋಕ್ಕಿನಲ್ಲಿಯೂ, **ಮಹೀ ಮೂ ಷು** ಎಂಬ ಋಕ್ಕಿನಲ್ಲಿಯೂ (ಈ ಋಕ್ಕು ಋಗ್ವೇದದಲ್ಲಿರುವುದಿಲ್ಲ. ಯಜುರ್ವೇದದ ತೈತ್ತಿರೀಯಸಂಹಿತೆಯ ೫ ನೇ ಪ್ರಪಾಠಕದ ೧೧ ನೇ ಅನುವಾಕದಲ್ಲಿ ೫ ನೇ ಪಂಚಾಶತ್‌ನಲ್ಲಿ ಈ ಮಂತ್ರವು ಈರೀತಿ ಇರುವುದು—**ಮಹೀ ಮೂ ಷು ಮಾತರಗ್ಂ ಸುವ್ರತಾನಾಮೃತಸ್ಯ ಪತ್ನೀಮವಸೇ ಹುವೇಮ | ತುವಿಕ್ಷತ್ರಾಮಜರಂತೀಮುರೂಚೀಗ್ಂ ಸುಶರ್ಮಾಣಮದಿತಿಗ್ಂ ಸುಪ್ರಣೀತಿಂ ||** ) ಮತ್ತು ೬೪ ನೇ ಸೂಕ್ತದ **ದಕ್ಷಸ್ಯ ವಾದಿತೇ** ಎಂಬ ೫ ನೇ ಋಕ್ಕಿನಲ್ಲಿಯೂ ಅದಿತಿಯ ಸ್ತುತಿ ಇರುವುದು.

105. ೬೩ ನೇ ಸೂಕ್ತದ **ಸ್ವಸ್ತಿರಿದ್ಧಿ** ಎಂಬ ಋಕ್ಕಿನಲ್ಲಿ **ಪಥ್ಯಾಸ್ವಸ್ತಿ** ಎಂಬ ದೇವತೆಯ ಸ್ತುತಿ ಇದೆ. **ಸ್ವಸ್ತಿ ನಃ** ಎಂಬ ೧೫ ಋಕ್ಕಿನಲ್ಲಿ ಮರುದ್ದೇವತೆಗಳನ್ನು ಸ್ತುತಿಸಲಾಗಿದೆ. ಏಕೆಂದರೆ ಅಧ್ವರ್ಯುವೆಂಬ ಋತ್ವಿಜನು ಪಠಿಸಬೇಕಾದ ಅಥವಾ ನಿರ್ವಹಿಸಬೇಕಾದ ಕರ್ಮಗಳಲ್ಲಿ ಈ ಮಂತ್ರವನ್ನು ಮರುದ್ದೇವತಾಕವಾದ ಮಂತ್ರವೆಂದು ಸ್ಪಷ್ಟವಾಗಿ ತಿಳಿಸಿ **ಮಾರುತೀಮೃಚಮನ್ವಾಹ** ಎಂಬ ಶ್ರುತಿವಾಕ್ಯದಿಂದ ನಿರ್ದೇಶಿಸಲಾಗಿದೆ.

106. **ಯಾ ಗೌರ್ವರ್ತನಿಂ** ಎಂಬ ಋಕ್ಕಿನಲ್ಲಿ (೬೫ ನೇ ಸೂಕ್ತದ ೬ ನೇ ಋಕ್ಕು) ಮಧ್ಯಮಸ್ಥಾನದ ವಾಗ್ದೇವತೆಯನ್ನು ಸ್ತುತಿಸಲಾಗಿದೆ. ಇದೇ ಸೂಕ್ತದ **ಮಿತ್ರಾಯ ಶಿಕ್ಷ** ಎಂಬ ೫ ನೇ ಋಕ್ಕಿನಲ್ಲಿ ಮಿತ್ರಾವರುಣರನ್ನೂ **ಭುಜ್ಯುಮಂಹಸಃ** ಎಂಬ ೧೨ ನೇ ಋಕ್ಕಿನಲ್ಲಿ ಅಶ್ವಿನೀದೇವತೆಗಳನ್ನೂ ಸ್ತುತಿಸಲಾಗಿದೆ.

## 22. Details of RV. x. 63-66. Deities of RV. x. 67-72.

104. And for the sake of long life for him the seer praises the gods : (so) he came upon ' Her that well guards ' (ಸುತ್ರಾಮಾಣಂ : x. 63-10) (and) ' Her that is great ' (ಮಹೀಮೂ ಷು). ' Of Daksa ' (ದಕ್ಷಸ್ಯ : x. 64-5) is (in) praise of Aditi.

105. ' The goddess of welfare, indeed ' (ಸ್ವಸ್ತಿರಿದ್ಧಿ : x. 63-16) is (in praise) of the Pathya svasti ; ' Welfare to us ' (ಸ್ವಸ್ತಿ ನಃ : 15) is (in) praise of the Martuts ; for for it is stated in the texts of the Adhvaryus (with regard to it) ' He repeats the stanza addressed to the Maruts.'

106. So also in the (stanza) ' The Cow that ' (ಯಾ ಗೌಃ : x. 65-6) the Middle Vac is praised , ' To Mitra ' (ಮಿತ್ರಾಯ : 5) is addressed to Mitra-Varuna ; ' Bhujyu from distress ' (ಭುಜ್ಯುಮಂಹಸಃ : 12) is addressed to the Asvins.

ಸ್ತೌತ್ಯಪಿ ಚ ಮನುಂ ಸ್ವಸ್ತಿ ದ್ವ್ಯೃಚೇ ವಾಚಂ ಚ ಮಧ್ಯಮಾಂ ।
ಅಥೇಮಾಂ ದ್ವೇ ಬಾರ್ಹಸ್ಪತ್ಯೇ ಭದ್ರಾ ಆಗ್ನೇಯಮಾಪ್ರಿಯಃ ॥ ೧೦೭ ॥

ಪ್ರಥಮೇ ಬಾರ್ಹಸ್ಪತ್ಯೇ ತು ಅರ್ಧರ್ಚೇ ಬ್ರಹ್ಮಣಸ್ಪತಿಃ ।
ವೈಶ್ವದೇವೇಽಪಿ ಸೂಕ್ತೇಽತ್ರ ಸ್ತುತೋಽರ್ಧರ್ಚೇ ಬೃಹಸ್ಪತಿಃ
ಬ್ರಹ್ಮಣಸ್ಪತಿರಿತ್ಯಸ್ಮಿನ್ ಲಿಂಗವಾಕ್ಯವಿಕಾರತಃ ॥ ೧೦೮ ॥

ಯಜ್ಜ್ಯೋತಿರಮೃತಂ ಬ್ರಹ್ಮ ಯದ್ಯೋಗಾತ್ಸಮುಪಾಶ್ನುತೇ ।
ತಜ್ಜ್ಞಾನಮಭಿತುಷ್ಟಾವ ಸೂಕ್ತೇನಾಥ ಬೃಹಸ್ಪತಿಃ ॥ ೧೦೯ ॥

107. ೬೬ ನೇ ಸೂಕ್ತದ ಕೊನೆಯ ಎರಡು ಋಕ್ಕುಗಳಲ್ಲಿ ಮನುವನ್ನೂ ಮಾಧ್ಯಮಿಕಾ ವಾಗ್ದೇವತೆಯನ್ನು ಸ್ತುತಿಸಲಾಗಿದೆ.

**೬೭-೭೦ ನೇ ಸೂಕ್ತಗಳ ದೇವತೆಗಳು**

**ಇಮಾಂ ಧಿಯಂ** ಎಂದು ಮೊದಲಾಗುವ ಎರಡು ಸೂಕ್ತಗಳಲ್ಲಿ (೬೭-೬೮) ಬೃಹಸ್ಪತಿಯನ್ನು ಸ್ತುತಿಸಲಾಗಿದೆ. **ಭದ್ರಾ ಅಗ್ನೇ** ಎಂಬ ೬೯ ನೇ ಸೂಕ್ತದಲ್ಲಿ ಅಗ್ನಿಯನ್ನು ಸ್ತುತಿಸಲಾಗಿದೆ. ಮುಂದಿನ **ಇಮಾಂ ಮೇ ಅಗ್ನೇ** ಎಂಬ ೭೦ ನೇ ಸೂಕ್ತದಲ್ಲಿ ಆಪ್ರೀಸೂಕ್ತದ ದೇವತೆಗಳನ್ನು ಸ್ತುತಿಸಲಾಗಿದೆ.

108. ಬೃಹಸ್ಪತಿದೇವತಾಕವಾದ ೬೭ ನೇ ಸೂಕ್ತದ ೭ ನೇ ಋಕ್ಕಿನ ಉತ್ತರಾರ್ಧದಲ್ಲಿ ಬ್ರಹ್ಮಣಸ್ಪತಿಶಬ್ದದ ಪ್ರಯೋಗವಿದೆ. ವಿಶ್ವೇದೇವತಾಕವಾದ (ಅಥವಾ ಕೇವಲ ದೇವತೆಗಳನ್ನುದ್ದೇಶಿಸಿ ಸ್ತುತಿಸಲಾಗಿರುವ) ೭೨ ನೇ ಸೂಕ್ತದ ೨ ನೇ ಋಕ್ಕಿನ ಪೂರ್ವಾರ್ಧದಲ್ಲಿ ಬ್ರಹ್ಮಣಸ್ಪತಿ ಎಂಬ ಪದಪ್ರಯೋಗವಿದ್ದರೂ ವಾಕ್ಯದ ಲಕ್ಷಣಾದಿಗಳಿಂದ ವಿಮರ್ಶಿಸಿದರೆ ಬೃಹಸ್ಪತಿಯನ್ನೇ ನಿರ್ದೇಶಿಸಲಾಗಿದೆಯೆಂದು ಕಂಡುಬರುವುದು

**೭೧ ನೇ ಸೂಕ್ತದ ಪ್ರತ್ಯೇಕ ವಿವರಣೆ**

109. ನಿತ್ಯವೂ ನಾಶರಹಿತವಾದುದೂ ಆದ ಯಾವ ಪರಂಜ್ಯೋತಿಯ (ಪರಮಾತ್ಮನ) ಧ್ಯಾನದಿಂದ ಯೋಗಿಯು (ಅಥವಾ ತಪಸ್ವಿಯಾದ ಪುರುಷನು) ಪರಬ್ರಹ್ಮಪದವಿಯನ್ನು ಪಡೆಯುವನೋ ಅಂತಹ ಶ್ರೇಷ್ಠವಾದ ಜ್ಞಾನವನ್ನು ಬೃಹಸ್ಪತಿಯು ಈ ೭೧ ನೇ ಸೂಕ್ತದಲ್ಲಿ ವರ್ಣಿಸಿ ಸ್ತುತಿಸಿದಾನೆ.

---

107. He also praises Manu and the Middle Vac in the couplet containing Svasti (x. 66-14,15),

Then the two (hyms) 'this' (ಇಮಾಂ: x. 67-68) are addressed to Brhaspati; 'The auspicious' (ಭದ್ರಾಃ : x. 69) is addressed to Agni; (then comes) an Apri hymn (x. 70)

108. In the first (hymn) addressed to Brhaspati (67) Brahmanaspati (appears) in a hemistich ( 7 ). In the hymn to the All-gods here (72) Brahspati is alao praised in a hemistich (2) : (that is) in the one beginning 'Brahmanaspati' (72. 2) by changing (ವಿಕಾರತಃ) the characteristic term (ಲಿಂಗವಾಕ್ಯ).

**23. Detailed account of RV. x. 71**

109. That knowledge which is immortal light and by union with which one attains to Brahman, Brahaspati praised next(ಅಥ)with a hymn (71).

ಜೀವನಾರ್ಥಂ ಪ್ರಯೋಗಸ್ತು ಮಂತ್ರಾಣಾಂ ಪ್ರತಿಷಿಧ್ಯತೇ ।
ವೇದತತ್ತ್ವಾರ್ಥವಿಜ್ಞಾನಂ ಪ್ರಾಯೇಣಾತ್ರ ಹಿ ದೃಶ್ಯತೇ ॥ ೧೧೦ ॥

ಆಚಾರ್ಯಾಃ ಕೇಚಿದಿತ್ಯಾಹುರತ್ರ ವಾಗ್ವಿದುಷಾಂ ಸ್ತವಃ ।
ಯೆಥಾಭಿರ್ನಿಂದ್ಯತೇಽತ್ರರ್ಗ್ಭಿಃ ಸೂಕ್ತೇಽನ್ಯಾಭಿರನರ್ಥವಿತ್ ॥ ೧೧೧ ॥

ಯಥೈತಾಮನ್ವವಿಂದಂತ ವಿದ್ವಾಂಸಋಷಿಗತಾಂ ಸತೀಂ ।
ಯಥಾ ಚ ವ್ಯಭಜನ್ಯಜ್ಞೇ ತದತ್ರೋಕ್ತಂ ತೃತೀಯಯಾ ॥ ೧೧೨ ॥

ಪ್ರಶಸ್ಯತೇ ದಶಮ್ಯಾ ತು ವಿದ್ವಾನುತ್ತಮಯಾ ತ್ವೃಚಾ ।

110. ವೇದಮಂತ್ರಗಳನ್ನು ಪ್ರಯೋಗಮಾಡಿ ಎಂದರೆ ಉಪಯೋಗಿಸಿ (ಆಚರಿಸುವ ನಾನಾ ಕರ್ಮಗಳಿಂದ) ಜೀವನವನ್ನು ನಡೆಸುವುದು ನಿಷೇಧಿಸಲ್ಪಟ್ಟಿದೆ. ಎಂದರೆ ಜೀವನಾರ್ಥವಾಗಿ ವೇದಮಂತ್ರಗಳನ್ನು ಯಾರೂ ಬಳಸಬಾರದು. ಈ ಸೂಕ್ತದಲ್ಲಿ ವೇದಗಳಲ್ಲಿ ಹೇಳಿರುವ ಪರತತ್ತ್ವವನ್ನೂ ಅದಕ್ಕೆ ಸಾಧನೋಪಾಯವಾದ ವಿಜ್ಞಾನವನ್ನೂ ವರ್ಣಿಸಿರುವುದು ಕಂಡುಬರುತ್ತದೆ.

111. ಈ ಸೂಕ್ತದ ಕೆಲವು ಋಕ್ಕುಗಳಲ್ಲಿ ವಾಕ್ಯಗಳ (ಮಂತ್ರಗಳ) ಸ್ವರೂಪವನ್ನೂ, ಅರ್ಥವನ್ನೂ ತಿಳಿದವರ ಪ್ರಶಂಸೆಯೂ, ಮತ್ತೆ ಕೆಲವು ಋಕ್ಕುಗಳಲ್ಲಿ ವೇದಾರ್ಥವನ್ನು ತಿಳಿಯದವರ ನಿಂದೆಯೂ ಉಕ್ತವಾಗಿದೆಯೆಂದು ಕೆಲವು ಆಚಾರ್ಯರು ಹೇಳುವರು.

112. ಋಷಿಗಳು ತಮ್ಮ ಜ್ಞಾನದೃಷ್ಟಿಯಿಂದ ಸಾಕ್ಷಾತ್ಕರಿಸಿದ ಈ ವಾಗ್ದೇವತೆಯ ಸ್ವರೂಪವನ್ನೂ ಮತ್ತು ಯಜ್ಞಕರ್ಮಗಳಲ್ಲಿ ಆ ದೇವತಾಸ್ವರೂಪವಾದ ಮಂತ್ರಗಳನ್ನೂ ಯಾವ ರೀತಿ ಕರ್ಮಕ್ರಮಾನುಸಾರವಾಗಿ ವಿಭಾಗಮಾಡಿ ಉಪಯೋಗಿಸಿದೆ ಎಂಬುವುದನ್ನೂ ವಿದ್ವಾಂಸನಾದ ವಿವೇಕಿಯು ತಿಳಿಯುತ್ತಾನೆ ಎಂಬ ವಿಷಯವು ಈ ಸೂಕ್ತದ ೩ ನೇ ಋಕ್ಕಿನಲ್ಲಿ ಉಕ್ತವಾಗಿದೆ.

113. ಆದರೆ ೧೦ ನೇ ಋಕ್ಕಿನಲ್ಲಿ ವಿವೇಕಿಯಾದ ವಿದ್ವಾಂಸನನ್ನು ಸ್ತುತಿಸಲಾಗಿದೆ. ಕೊನೆಯ ಋಕ್ಕಿನಲ್ಲಿ

---

110. Now the employment of formulas for the sake of a liveli-hood is forbidden. There appears here for the most part correct knowledge of the essential meaning of the Veda (as the subjeet of the hymn).

111. Some teachers say that there is here praise of those who are wise in speech with some (ಆಭಿಃ) stanzas, but with others in this hymn the man who does not know the meaning (of the Veda) is blamed.

112. And how the wise found that (speech) when she was located among the seers, and how they divided her at the sacrifice all this is here told in the third (stanza : x. 71. 3).

113. Bat in the tenth the wise man is lauded (x. 71. 10), while in

**ಯಜ್ಞೇ ಮಹರ್ತ್ವಿಜಾಮಾಹ ವಿನಿಯೋಗಂ ಚ ಕರ್ಮಣಾಂ** ॥ ೧೧೩ ॥

**ಪರೇ ತು ಸ್ತೂಯತೇ ದಕ್ಷೋ ಅಷ್ಟೌ ಚೈವಾದಿತೇಃ ಸುತಾಃ ।**

**ಧಾತೇಂದ್ರೋ ವರುಣೋ ಮಿತ್ರೋ ಅಂಶಃ ಸೂರ್ಯೋಽರ್ಯಮಾ ಭಗಃ** ॥ ೧೧೪ ॥

**ಐಂದ್ರೇ ಜನಿಷ್ಠಾಃ ಸೂಕ್ತೇ ದ್ವೇ ಪ್ರ ಸ್ವಿತ್ಯತ್ರ ಪರಂ ತು ಯತ್ ।**

**ತತ್ರ ಪ್ರಾಚ್ಯಃ ಪ್ರತೀಚ್ಯಶ್ಚ ಸ್ರವಂತ್ಯೋ ದಕ್ಷಿಣಾಶ್ಚ ಯಾಃ** ॥ ೧೧೫ ॥

**ತಾಃ ಸಪ್ತ ಸಪ್ತಕೈರ್ವರ್ಗೈಃ ಸಂಸ್ತೂಯಂತೇ ಪ್ರಧಾನತಃ ।**

**ಗ್ರಾವ್ಣಾಮಾ ವೋ ಮಾರುತೇ ದ್ವೇ ಅಭ್ರಪ್ರುಷ ಇತಿ ಸ್ಮೃತೇ** ॥ ೧೧೬ ॥

ನಾಲ್ಕು ಮಂದಿ ಋತ್ವಿಕ್ಕುಗಳು (ಹೋತೃ, ಉದ್ಗಾತೃ, ಬ್ರಹ್ಮಾ, ಅಧ್ವರ್ಯು) ಯಜ್ಞದಲ್ಲಿ ಅವರವರು ನಿರ್ವಹಿಸಬೇಕಾದ ಕರ್ಮಗಳ ವಿವರಣೆಯನ್ನೂ, ಅವುಗಳ ವಿನಿಯೋಗವನ್ನೂ ಋಷಿಯು ವರ್ಣಿಸಿರುವನು.

**೭೨-೮೪ ಸೂಕ್ತದ ದೇವತೆಗಳು (ಖಿಲಮಂತ್ರಗಳು)**

114. ಈಗ ಮುಂದಿನ ೭೨ ನೇ ಸೂಕ್ತದಲ್ಲಿ ದಕ್ಷ, ಮತ್ತು ಅದಿತಿಯ ಎಂಟು ಮಂದಿ ಪುತ್ರರಾದ ಧಾತಾ, ಇಂದ್ರ, ವರುಣ, ಮಿತ್ರ, ಅಂಶ, ಸೂರ್ಯ, ಅರ್ಯಮಾ, ಭಗ ಎಂಬುವರನ್ನು ಸ್ತುತಿಸಲಾಗಿದೆ.

115. **ಜನಿಷ್ಠಾ ಉಗ್ರಃ** ಎಂದು ಮೊದಲಾಗುವ ಮುಂದಿನ ಎರಡು ಸೂಕ್ತಗಳಲ್ಲಿ (೭೩-೭೪) ಇಂದ್ರನನ್ನು ಸ್ತುತಿಸಲಾಗಿದೆ. **ಪ್ರ ಸು ವ ಆಪಃ** ಎಂಬ ಇದರ ಮುಂದಿನ ೭೫ ನೇ ಸೂಕ್ತದಲ್ಲಿ ಪೂರ್ವಾಭಿಮುಖವಾಗಿಯೂ, ಪಶ್ಚಿಮಾಭಿಮುಖವಾಗಿಯೂ, ದಕ್ಷಿಣಾಭಿಮುಖವಾಗಿಯೂ ಪ್ರವಹಿಸುವ,

116. ನದಿಗಳನ್ನೆಲ್ಲಾ ಅವುಗಳ ಪ್ರಾಮುಖ್ಯತೆಗನುಸಾರವಾಗಿ ಏಳು ಏಳು ನದಿಗಳ ಗುಂಪುಗಳನ್ನಾಗಿ ವಿಂಗಡಿಸಿ ಸ್ತುತಿಸಲಾಗಿದೆ. **ಆ ವ ಋಂಜಸ** ಎಂಬ ೭೬ ನೇ ಸೂಕ್ತದಲ್ಲಿ ಸೋಮಲತೆಗಳನ್ನು ಜಜ್ಜುವ ಕಲ್ಲುಗಳನ್ನೂ **ಅಭ್ರಪ್ರುಷಃ** ಎಂದು ಮೊದಲಾಗುವ ಮುಂದಿನ ಎರಡು ಸೂಕ್ತಗಳಲ್ಲಿ (೭೭-೭೮) ಮರುದ್ದೇವತೆಗಳನ್ನೂ ಸ್ತುತಿಸಲಾಗಿದೆ.

---

the last stanza he (the seer) states the distribution (ವಿನಿಯೋಗ) of the (four) chief priests and of their rites at the sacrifice.

**24. Deities of RV. x. 72-84. Khilas.**

114. Now in the following (hymn : x. 72) Daksa is praised and also the eight sons of Aditi: Dhatr, Indra, Varuna, Mitra, Amsa, Surya, Aryaman, Bhaga.

115. The two hymns (beginning) 'You have been born' (ಜನಿಷ್ಠಾಃ : x. 73-74) are addressed to Indra : but (in the hymn) which here follows (beginning) 'Let well proclaim' (ಪ್ರ ಸು : x. 75) the streams (ಸ್ರವಂತ್ಯಃ) which flow east, and west, and south,

116. are praised together according to pre-eminence (ಪ್ರಧಾನತಃ) in seven groups of seven. 'Hither you' (ಆ ವಃ : x. 76) is to the pressing stones ; the two 'Of the sprinkling of the cloud' (ಅಭ್ರಪ್ರುಷಃ : x.77-78) are traditionally held to be addressed to the Maruts.

**ಅಪಶ್ಯಮಿತಿ ಚಾಗ್ನೇಯೇ ಯ ಇಮಾ ವೈಶ್ವಕರ್ಮಣೇ ।**
**ಮಾನ್ಯವೇ ಯಸ್ತ ಇತ್ಯೇತೇ ಪರಂ ಯತ್ತು ಮಮ ವ್ರತೇ** ॥ ೧೧೭ ॥
**ತದಾಶೀರ್ವಾದಬಹುಲಂ ಸ್ತೌತಿ ವಿಶ್ವಾನ್ದಿವೌಕಸಃ ।**
**ಪರಾಕದಾಸ ಆಗ್ನೇಯಂ ಯದುದಿತ್ಯಷ್ಟಕಂ ಪರಂ** ॥ ೧೧೮ ॥
**ಮೈತ್ರಾವರುಣ್ಯೃಕ್ ತತ್ರಾಸ್ತಿ ಚತುರ್ಥ್ಯೈಂದ್ರಾಗ್ನ್ಯುಪೋತ್ತಮಾ ।**
**ಸಾವಿತ್ರೀ ಚೈವ ಸೂರ್ಯಾ ಚ ಸೈವ ಪತ್ನೀ ವಿವಸ್ವತಃ** ॥ ೧೧೯ ॥
**ಸ್ತುತಾ ವೃಷಾಕಪಾಯೀತಿ ಉಷಾ ಇತಿ ಚ ಯೋಚ್ಯತೇ ।**
**ಉಷಾ ಏಷಾ ತ್ರಿಧಾತ್ಮಾನಂ ವಿಭಜ್ಯ ಪ್ರೈತಿ ಚ ಗೋಪತಿಂ** ॥ ೧೨೦ ॥

117-118. **ಅಪಶ್ಯಾಮ** ಎಂದು ಮೊದಲಾಗುವ ಮುಂದಿನ ಎರಡು ಸೂಕ್ತಗಳಲ್ಲಿ (೭೯–೮೦) ಅಗ್ನಿಯನ್ನೂ, **ಯ ಇಮಾ** ಎಂದು ಮೊದಲಾಗುವ ಮುಂದಿನ ಎರಡು ಸೂಕ್ತಗಳಲ್ಲಿ (೮೧–೮೨) ವಿಶ್ವಕರ್ಮನೆಂಬ ದೇವತೆಯನ್ನೂ **ಯಸ್ತೇ ಮನ್ಯೋ** ಎಂದು ಮೊದಲಾಗುವ ಮುಂದಿನ ೨ ಸೂಕ್ತಗಳಲ್ಲಿ (೮೩–೮೪) ಮನ್ಯುದೇವತೆಯನ್ನೂ (ಕ್ರೋಧಾಭಿಮಾನಿದೇವತೆ) ಸ್ತುತಿಸಲಾಗಿದೆ. **ಮಮ ವ್ರತೇ** ಎಂಬ ಸೂಕ್ತದಲ್ಲಿ (ಖಿಲಸೂಕ್ತವಿರಬಹುದು. ಆದರೆ ಖಿಲಸೂಕ್ತಗಳಲ್ಲಿ ಈ ಸೂಕ್ತವೂ ಮುಂದಿನ ಸೂಕ್ತವೂ ಸೇರಿರುವುದಿಲ್ಲ) ವಿಶ್ವೇದೇವತಾಕವಾದ ಆಶೀರ್ವಾದಮಂತ್ರಗಳಿವೆ. ಮತ್ತು **ಉತ್** ಎಂಬ ಮುಂದಿನ ೮ ಋಕ್ಕುಗಳುಳ್ಳ ಪರಾಕದಾಸಋಷಿಯ ಸೂಕ್ತದಲ್ಲಿ ಅಗ್ನಿಯನ್ನು ಸ್ತುತಿಸಲಾಗಿದೆ.

119. ಮೇಲೆ ಹೇಳಿದ ೮ ಋಕ್ಕುಗಳಿರುವ ವಿಶ್ವೇದೇವತಾಕವಾದ ಖಿಲಸೂಕ್ತದಲ್ಲಿ ನಾಲ್ಕನೇ ಋಕ್ಕಿನಲ್ಲಿ ವಿಶ್ವೆದೇವತೆಗಳನ್ನೂ ಕೊನೆಯ ಹಿಂದಿನ ಎಂದರೆ ೭ ನೇ ಋಕ್ಕಿನಲ್ಲಿ ಇಂದ್ರಾಗ್ನಿಗಳನ್ನೂ ಸ್ತುತಿಸಲಾಗಿದೆ. ಸಾವಿತ್ರೀ ಮತ್ತು ಸೂರ್ಯಾ ಎಂಬ ಎರಡು ಹೆಸರುಗಳೂ ವಿವಸ್ವಂತನ ಒಬ್ಬಳೇ ಪತ್ನಿಯ ಹೆಸರನ್ನು ನಿರ್ದೇಶಿಸುವವು.

120. ಇವಳನ್ನೇ **ವೃಷಾಕಪಾಯೀ** ಮತ್ತು **ಉಷಾಃ** ಎಂಬ ಹೆಸರುಗಳಿಂದ ಸ್ತುತಿಸಲಾಗಿದೆ. ಈ ಉಷೋದೇವತೆಗೆ ಮೂರು ರೂಪಾಂತರಗಳಿರುವವು. ಹೇಗೆಂದರೆ—

117. The Two (beginning) 'I saw' (ಅಪಶ್ಯಂ : x. 79-80) are addressed to Agni; the two 'Who these' (ಯ ಇಮಾ : x. 81-82) are addressed to Visvakarman ; the two 'Who to you' (ಯಸ್ತೇ : 83-84) are addressed to Manyu, but that which follows, 'In my vow' (ಮಮ ವ್ರತೇ),

118 consisting for the most part of benedictions, praises the All-gods. That which follows (beginning) 'Out' (ಉತ್), consisting of eight stanzas, is (the hymn) of (ಪರಾಕದಾಸ) (and) is addressed to Agni.

### 25. The Surya hymn : RV. x. 85. Three forms of Usas.

119. The fourth stanza there is addressed to Mitra-Varuna, while the last but one (x. 85-7) is addressed to Indra and Agni.

Savitri and Surya are one and the same wife of Vivasvat,

120. who is praised as Vrsakapayi and is called Usas. This Usas having divided herself into three, goes to the Lord of rays (ಗೋಪತಿ-Surya).

ಉಷಾಃ ಪುರೋದಯೋದ್ಭೂತ್ವಾ ಸೂರ್ಯಾ ಮಧ್ಯಂದಿನೇ ಸ್ಥಿತೇ ।
ಭೂತ್ವಾ ವೃಷಾಕಪಾಯೀ ಚ ದಿನಾಂತೇಽಸ್ತವಗಚ್ಛತಿ ॥ ೧೨೧ ॥
ಸತ್ಯಸೂರ್ಯರ್ತಸೋಮಾನಾಂ ಸೌರ್ಯಾದ್ಯಾತ್ರ ಹ್ಯೃಗುಚ್ಯತೇ ।
ಪರಾಭಿಸ್ತಿಸೃಭಿಸ್ತ್ವೃಗ್ಭಿರುಚ್ಯತೇ ಸೋಮ ಓಷಧಿಃ ॥ ೧೨೨ ॥
ವಿಸ್ಪಷ್ಟಮುತ್ತರಾ ತ್ವಾಸಾಮೃಕ್ಚಂದ್ರಮಸಮರ್ಚತಿ ।
ಸೂರ್ಯಾಯೈ ಭಾವವೃತ್ತಂ ತು ರೈಭೀತ್ಯಷ್ಟಾಭಿರುಚ್ಯತೇ ॥ ೧೨೩ ॥
ಯದಶ್ವಿನೌ ದ್ವ್ಯೃಚಃ ಸ್ತೌತಿ ಸೂರ್ಯಾಮೇವೋತ್ತರಾರ್ಚತಿ ।
ಸಪ್ತದಶೀ ವೈಶ್ವದೇವೀ ಸೌರ್ಯಾಚಂದ್ರಮಸೀ ಪರಾ ॥ ೧೨೪ ॥

121. ಸೂರ್ಯೋದಯಕ್ಕೆ ಪೂರ್ವದಲ್ಲಿ ಉಷಸ್ಸೆಂದೂ, ಮಧ್ಯಾಹ್ನಕಾಲದಲ್ಲಿ ಸೂರ್ಯಾ ಎಂದೂ ಸೂರ್ಯಾಸ್ತಮಯಕಾಲದಲ್ಲಿ ವೃಷಾಕಪಾಯೀ ಎಂದೂ ಒಂದೇ ದೇವತೆಗೆ (ಉಷಸ್ಸಿಗೆ) ಮೂರುವಿಧ ಹೆಸರುಗಳಿರುವವು.

**ಸೂರ್ಯಾಸೂಕ್ತ (೮೫) ದ ವಿವರಣೆ**

122. ೮೫ ನೇ ಸೂಕ್ತದ ಮೊದಲನೆಯ ಋಕ್ಕು ಸೂರ್ಯಾದೇವಿಯ ಪರವಾಗಿದ್ದರೂ ಅದರಲ್ಲಿ ಸತ್ಯ, ಸೂರ್ಯ, ಋತ, ಸೋಮ ಎಂಬ ದೇವತೆಗಳ ಸಂಬಂಧವೂ ಈ ಋಕ್ಕಿಗಿದೆ. ಮುಂದಿನ ಮೂರು ಋಕ್ಕುಗಳಲ್ಲಿ (೨-೪) ಸೋಮಲತೆಯ ಪ್ರಶಂಸೆ ಇದೆ.

123. ಆದರೆ ಮುಂದಿನ ೫ ನೇ ಋಕ್ಕಿನಲ್ಲಿ ಚಂದ್ರನ ಸ್ತುತಿ ಇದೆ. **ರೈಭೀ** ಎಂದು ಮೊದಲಾಗುವ ಮುಂದಿನ ೮ ಋಕ್ಕುಗಳಲ್ಲಿ (೬-೧೩) ಭಾವವೃತ್ತಾತ್ಮಕವಾದ ಸೂರ್ಯಾದೇವಿಯ ವಿವಾಹದ ವರ್ಣನೆ ಇದೆ.

124. **ಯದಶ್ವಿನಾ** ಎಂದು ಮೊದಲಾಗುವ ಎರಡು ಋಕ್ಕುಗಳಲ್ಲಿ (೧೪-೧೫) ಅಶ್ವಿನೀದೇವತೆಗಳನ್ನೂ ಮುಂದಿನ ೧೬ ನೇ ಋಕ್ಕಿನಲ್ಲಿ ಸೂರ್ಯಾದೇವಿಯನ್ನೂ ಸ್ತುತಿಸಲಾಗಿದೆ. ೧೭ ನೇ ಋಕ್ಕಿನಲ್ಲಿ ವಿಶ್ವೇದೇವತೆಗಳನ್ನೂ ೧೮ ನೇ ಋಕ್ಕಿನಲ್ಲಿ ಸೋಮಸೂರ್ಯರನ್ನೂ ಸ್ತುತಿಸಲಾಗಿದೆ.

---

121. Becoming Usas before sunrise, Surya when midday reigns, and becoming Vrsakapayi at the end of days, she goes down.

122. The first stanza here (x. 85-1) addressed to Surya is stated to be connected with Satya, Surya, Rts and Soma; but with the following three stanzas (2-4) Soma as a plant is spoken of.

123. But the stanza which comes next to these (5) clearly adores the moon (ಚಂದ್ರಮಸಂ), while with the eignt (stanzas) 'The singer's' (ರೈಭೀ: x. 85. 6-13) the evolutional section (ಭಾವವೃತ್ತಂ) for Surya is expressed.

**26. Account of the Surya hymn** (continued).

124, The couplet 'When' (ಯತ್ x. 85. 14, 15) praises the Asvins; the following (stanza) adores Surya (16); the seventeenth is addressed to the All-gods (17); the following one is addressed to Sun and moon (18).

ಪರಸ್ಯಾಃ ಪ್ರಥಮೌ ಪಾದೌ ಸೌರ್ಯೌ ಚಾಂದ್ರಮಸೌ ಪರೌ ।
ಔರ್ಣವಾಭೋ ದ್ವ್ಯೃಚೇ ತ್ವಸ್ಮಿನ್ನಶ್ವಿನೌ ಮನ್ಯತೇ ಸ್ತುತೌ ॥ ೧೨೫ ॥
ಸೂರ್ಯಾಚಂದ್ರಮಸೌ ತೌ ಹಿ ಪ್ರಾಣಾಪಾನೌ ಚ ತೌ ಸ್ಮೃತೌ ।
ಅಹೋರಾತ್ರೌ ಚ ತಾವೇವ ಸ್ಯಾತಾಂ ತಾವೇವ ರೋದಸೀ ॥ ೧೨೬ ॥
ಅಶ್ನುವಾತೇ ಹಿ ತೌ ಲೋಕಾಞ್ಜ್ಯೋತಿಷಾ ಚ ರಸೇನ ಚ ।
ಪೃಥಕ್ಪೃಥಕ್ಚ ಚರತೋ ದಕ್ಷಿಣೇನೋತ್ತರೇಣ ಚ ॥ ೧೨೭ ॥
ಸೂರ್ಯಃ ಸರತಿ ಭೂತೇಷು ಸು ವೀರಯತಿ ತಾನಿ ವಾ ।
ಸು ಈರ್ಯತ್ವಾಯ ಯಾತ್ಯೇಷು ಸರ್ವಕಾರ್ಯಾಣಿ ಸಂದಧತ್ ॥ ೧೨೮ ॥

125. ಮುಂದಿನ ೧೯ ನೇ ಋಕ್ಕಿನ ಮೊದಲಿನ ಎರಡು ಪಾದಗಳಲ್ಲಿ ಸೂರ್ಯನನ್ನೂ ಕೊನೆಯ ಎರಡು ಪಾದಗಳಲ್ಲಿ ಚಂದ್ರನನ್ನೂ ಸ್ತುತಿಸಲಾಗಿದೆ. ಆದರೆ ಈ ಪಾದಗಳಲ್ಲಿ ಅಶ್ವಿನೀದೇವತೆಗಳು ಸ್ತುತರಾಗಿರುವರೆಂದು ಔರ್ಣವಾಭರೆಂಬುವರ ಮತವು.

126. ಮೇಲೆ ಹೇಳಿದ ಅಶ್ವಿನೀದೇವತೆಗಳೆಂದರೆ, ಸೂರ್ಯಚಂದ್ರರಾಗಬಹುದು, ಅಥವಾ ಪ್ರಾಣ ಮತ್ತು ಅಪಾನವಾಗಬಹುದು, ಅಥವಾ ಅಹೋರಾತ್ರಿಗಳಾಗಬಹು, ಅಥವಾ ದ್ಯಾವಾಪೃಥಿವಿಗಳಾಗಳಾದರೂ ಆಗಬಹುದು.

127. ಈ ಸೂರ್ಯಚಂದ್ರರು ಲೋಕಗಳನ್ನು ತಮ್ಮ ಪ್ರಕಾಶದಿಂದಲೂ, ರಸ ಅಥವಾ ದ್ರವತ್ವ (ಹಿಮ, ಶೀತ) ದಿಂದಲೂ ಕ್ರಮವಾಗಿ ವ್ಯಾಪಿಸುತ್ತಾರೆ. ಮತ್ತು ಇವರ ಸಂಚಾರಕ್ರಮುವು ಕ್ರಮವಾಗಿ ದಕ್ಷಿಣ ಮತ್ತು ಉತ್ತರ ದಿಕ್ಕುಗಳಿಗೆ ಅಭಿಮುಖವಾಗಿದೆ.

128. ಸೂರ್ಯಶಬ್ದ ವಿವರಣೆ—ಸೂರ್ಯನು ಪ್ರಾಣಿಗಳ ಮಧ್ಯದಲ್ಲಿ ಎಂದರೆ ಭೂಮಿಯ ಮೇಲೆ ಸರಿಯುತ್ತಾನೆ (ಪೂರ್ವದಿಂದ ಪಶ್ಚಿಮಕ್ಕೆ) ಆದ್ದರಿಂದ ಸೃ–ಸರಿ ಎಂಬ ಧಾತುವಿನಿಂದ ಸೂರ್ಯಶಬ್ದವು ನಿಷ್ಪನ್ನವಾಗಿದೆ. ಅಥವಾ ಈ ಸೂರ್ಯನು ಪ್ರಾಣಿಗಳಿಗೆ ಉತ್ಸಾಹವನ್ನುಂಟುಮಾಡುವುದರಿಂದ (ವೀರಯತಿ) ಸೂರ್ಯನೆಂದು ಹೆಸರು; ಅಥವಾ ಪ್ರಾಣಿಗಳ ಶರೀರಗಳಲ್ಲಿ ಚೈತನ್ಯ (ಶಾಖ) ರೂಪದಿಂದಿದ್ದು ಅವುಗಳ ಕಾರ್ಯಾದಿಗಳನ್ನು ಪ್ರೇರಿಸುವುದರಿಂದ ಸೂರ್ಯನೆಂದು ಹೆಸರು; ಅಥವಾ ಪ್ರಪಂಚದ ಮೇಲೆ ನಡೆಯುವ ಸಮಸ್ತಕಾರ್ಯಗಳಿಗೂ ಕಾರಣಕರ್ತನಾದ್ದರಿಂದ ಸೂರ್ಯನೆಂದು ಹೆಸರು.

125. of the following (stanza: x. 85. 19) the first two verses are addtessed to the Sun (19), while the following two (19) are to the moon. Aurnavabha, however, thinks that in this couplet the Asvins are praised.

126. For those two (Asvins) are traditionally held to be Sun and Moon, and Prana (outward breath) and Apana (downward breath): and these two may be Day and Night, (or) these two (may be) the two worlds (ರೋದಸೀ).

127. For these two permeate (ಅಶ್ನುವಾತೇ) the world with light and moisture; and they fare (ಚರತಃ), each saparately, to the south and the north.

128. Surya moves (ಸರತಿ) among beings, or he instigates (ವೀರಯತಿ) them well (ಸು) apportioning (ಸಂದಧತ್) all their functions (ಕಾರ್ಯಾಣಿ) he goes among them in order to instigate (ಈರ್ಯತ್ವಾಯ) them well.

ಚಾರು ದ್ರಮತಿ ವಾ ಚಾಯಂಶ್ಚಾಯನೀಯೋ ದ್ರಮತ್ಯುತ ।
ಚಮೇಃ ಪೂರ್ವಂ ಸಮೇತಾನಿ ನಿರ್ಮಿಮೀತೇಽಥ ಚಂದ್ರಮಾಃ ॥ ೧೨೯ ॥
ಸುಕಿಂಶುಕಮಿತಿ ತ್ವಸ್ಯಾಂ ಸೂರ್ಯಾಮಾರೋಹತೀಂ ಪತಿಂ ।
ಸ್ತೌತಿ ವಿಶ್ವಾವಸುಂ ಚೈವ ದ್ವ್ಯೃಚೇ ಗಂಧರ್ವಮುತ್ತರೇ ॥ ೧೩೦ ॥
ಅನೃಕ್ಷರಾ ಇತ್ಯನಯಾ ಯಾತೌ ಸ್ತೌತೀಹ ದಂಪತೀ ।
ಗೃಹಾನ್ಪ್ರಪದ್ಯಮಾನಾಂ ತು ಪರಾಭಿಃ ಪಂಚಭಿರ್ವಧೂಂ ॥ ೧೩೧ ॥
ವಾಸಸಶ್ಚ ವಧೂನಾಂ ಚ ವರದಾನಂ ಪ್ರಚಕ್ಷತೇ ।
ತತಸ್ತ್ರಿಯಾ ವಿರಾಗಸ್ಯ ವಿಭವೇ ಸತಿ ವಾಸಸಃ ॥ ೧೩೨ ॥

129. ಚಂದ್ರಮಾಃ ಶಬ್ದದ ರೂಪನಿಷ್ಪತ್ತಿ—ಚಂದ್ರನು ಮನೋಹರವಾಗಿ (ಚಾರು) ಬೆಳಗುತ್ತಾನೆ ಅಥವಾ ಸಂಚರಿಸುತ್ತಾನೆ ಅಥವಾ ನೋಡುವುದಕ್ಕೆ ಆಹ್ಲಾದಕರನಾಗಿರುತ್ತಾನೆ. ಅಥವಾ ಚಮ್ ಎಂಬಧಾತುವಿನೊಡನೆ ಮಿಮಾತೇ ಎಂಬ ಕ್ರಿಯಾಪದದ ಏತಾ ಶಬ್ದವು ಸೇರಿ **ಚಂದ್ರಮಾಃ** ಎಂಬ ಶಬ್ದವಾಗಿರುವುದು.

130. **ಸುಕಿಂಶುಕಂ** ಎಂಬ ೨೦ನೇ ಋಕ್ಕಿನಲ್ಲಿ ಸೂರ್ಯಾದೇವಿಯು ತನ್ನ ಪತಿಯ ರಥವನ್ನು ಹತ್ತುವುದನ್ನೂ ಮುಂದಿನ ಎರಡು ಋಕ್ಕುಗಳಲ್ಲಿ(೨೧–೨೨)ವಿಶ್ವಾವಸು ವೆಂಬ ಗಂಧರ್ವನ ವಿಷಯವನ್ನೂ ಋಷಿಯು ವರ್ಣಿಸಿರುವನು.

131. **ಅನೃಕ್ಷರಾ** ಎಂಬ ೨೩ ನೇ ಋಕ್ಕಿನಲ್ಲಿ ರಥಾರೋಹಣಮಾಡಿ ಹೋಗುತ್ತಿರುವ ದಂಪತಿಗಳನ್ನು ಋಷಿಯು ಸ್ತುತಿಸಿರುವನು. ಮುಂದಿನ ಐದು ಋಕ್ಕುಗಳಲ್ಲಿ (೨೪–೨೮) ಪತ್ನಿಯು ತನ್ನ ಪತಿಗೃಹಕ್ಕೆ ಹೋಗಿ ಸೇರುವ ವರ್ಣನೆ ಇದೆ.

132-133. ೨೯ನೇ ಯಕ್ಕಿನಲ್ಲಿ ಹೊಸದಾಗಿ ಆಗತಾನೆ ವಿವಾಹಿತರಾದ ವಧುಗಳನ್ನು ಅವರವರ ಪತಿಯ ಗೃಹಕ್ಕೆ ಕರೆದುಕೊಂಡು ಹೋಗಿ ಒಪ್ಪಿಸುವುದನ್ನು ಹೇಳಿದೆ. ವಧುವಿನ ವಸ್ತ್ರವನ್ನು ಉತ್ಸವಕಾಲದಲ್ಲಿ(ವಿವಾಹಕಾಲದಲ್ಲಿ)

### 27. Derivation of Chandramas. Contents of RV. x. 85. 20-30

129. The moon (ಚಂದ್ರಮಾಃ) runs (ದ್ರಮತಿ)beautifully (ಚಾರು) or observing (ಚಾಯನ್), or (ಉತ) runs as one worthy to be observed (ಚಾಯನೀಯ); (or) the prior (member of the compound comes) from (the verb) ಚಮ್ or (ಅಥ) he (ಚಂದ್ರ) fashions (ನಿರ್ಮಿಮೀತೇ) the aggregate of beings (ಸಮೇತಾನಿ).

130. Now in the (stanza) 'Bright, with kimsuka flowers' (ಸುಕಿಂಶುಕಂ x. 85. 20) (the seer) praises Surya mounting (the car of) her husband, and in the next two stanzas (21, 22) the Gandharva Visvavasu.

131. Vith the (stanza) 'Thornless; (ಅನೃಕ್ಷರಾಃ x. 85. 23) the seer here praises the wedded couple (ದಂಪತೀ) who have started (ಯಾತೌ), but with the following five (24-28) the wife as she reaches the house (of her husband).

132. And (in the next : 85. 29) they declare (that) the presentation by the bridegroon (ವರದಾನಂ) of (newly-married) wives (is expressed). Then (30) woman's garment, when indifference prevails (ವಿಭವೇ ಸತಿ),

ಅನ್ಯತ್ರ ಮೈಥುನಾದ್ಭರ್ತುರ್ಹರಣಂ ಪ್ರತಿಷಿಧ್ಯತೇ |
ಯೇ ಯಕ್ಷ್ಮನಾಶಿನೀ ಸ್ತೌತಿ ದ್ವ್ಯೃಚೇ ಮಾ ಪರಿಪಂಥಿನಃ || ೧೩೩ ||
ತೃಷ್ಟಮೇತದಿತಿ ತ್ವಾಹ ಯೋಽಧ್ಯಾಗ್ವಾಧೂಯಮರ್ಹತಿ |
ಆಶಾಸ್ತೇ ಚೈವ ವಿವಿಧಂ ಜ್ಞಾತಿಭ್ಯಶ್ಚಾನುಶಾಸನಂ || ೧೩೪ ||
ಬದ್ಧಾ ಸ್ತ್ರೀ ಭಾವವೃತ್ತಿಶ್ಚ ಪರಯಾ ತ್ವತ್ರ ಕಥ್ಯತೇ |
ಗೃಭ್ಣಾಮಿ ತ ಋಚಾ ಹಸ್ತಂ ಗೃಹ್ಣನ್ನಥ ಧನಾಶಿಷಃ || ೧೩೫ ||
ಆಶಾಸ್ತೇ ಪರಯಾ ತಸ್ಯಾಃ ಸಂಯೋಗಾರ್ಥಾಸ್ತಥಾಶಿಷಃ |

ಅಥವಾ ಸಂಭೋಗಕಾಲದಲ್ಲಿ ಹೊರತು ಇತರಕಾಲಗಳಲ್ಲಿ (ಪತಿಯು) ಸ್ಪರ್ಶಮಾಡುವುದು ನಿಷಿದ್ಧವೆಂದು ಹೇಳಲಾಗಿದೆ. **ಮಾ ವಿದನ್ ಪರಿಪಂಥಿನಃ** ಎಂಬ ಎರಡು ಋಕ್ಕುಗಳಲ್ಲಿ(೩೨-೩೩) ಯಕ್ಷ್ಮ (ಕ್ಷಯ) ರೋಗದಿಂದಲೂ ಮಾರ್ಗದಲ್ಲಿ ದಾರಿಕಾಯುವ ಕಳ್ಳರಿಂದಲೂ ಆ ದಂಪತಿಗಳನ್ನು ಕಾಪಾಡಬೇಕೆಂಬ ಆಶ್ವಾಸನೆಯು ಉಕ್ತವಾಗಿದೆ

134. **ತೃಷ್ಟಮೇತತ್** ಎಂಬ ೩೪ನೇ ಋಕ್ಕಿನಲ್ಲಿ ವಧುವಿನ ಮಲಿನ ವಸ್ತ್ರಕ್ಕೆ ಯಾರು ಅರ್ಹರೆಂಬುದನ್ನು ಹೇಳಿ ವಧುವಿನ ಜ್ಞಾತಿಗಳಿಗೆ ಆಶ್ವಾಸನೆಯನ್ನು ಕೋರಿದೆ.

135. ಮುಂದಿನ ೩೫ನೇ ಋಕ್ಕಿನಲ್ಲಿ ಬದ್ಧಳಾದ ಸ್ತ್ರೀಯು ಹೇಳಿರುವ ಸ್ವವಿಷಯವನ್ನು (ಭಾವವೃತ್ತಿಯನ್ನು) ಇಲ್ಲಿ ಹೇಳಲಾಗಿದೆ. **ಗೃಭ್ಣಾಮಿ ತೇ** ಎಂಬ ೩೬ನೇ ಋಕ್ಕಿನಲ್ಲಿ ವರನು ವಧುವಿನ ಪಾಣಿಗ್ರಹಣಮಾಡುವುದನ್ನೂ ಧನಾದಿಗಳಿಗಾಗಿ ಪ್ರಾರ್ಥಿಸುವುದನ್ನೂ ಹೇಳಲಾಗಿದೆ.

136. ಮುಂದಿನ ೩೭ನೇ ಋಕ್ಕಿನಲ್ಲಿ ವಧೂವರರ ಸಂಯೋಗವನ್ನು ಹರಸಬೇಕೆಂದು ಮೊದಲಾಗಿ ಬಯಸ

## 28. RV. x. 85. 31-43

133. (that is), except at the time of intercourse, is forbidden to be taken hold of (ಹರಣಂ) by the husband,

The stanza 'The diseases which' (ಯೇ : x. 85.31) is destructive of consumption (ಯಕ್ಷ್ಮ); in the couplet 'May not' (ಮಾ : 32-33) (the seer) praises the waylayers.

134. But (the stanza) 'Rough is this' (ತೃಷ್ಟಮೇತತ್: x. 85.34) states what sort of man deserves (to receive) the bridal dress. And various directions are given to her relations

135. by the woman, who is bound. And evolution (ಭಾವವೃತ್ತಿ) is here told, in the following (stanza : x. 85.35).

With the stanza 'I grasp you' (ಗೃಭ್ಣಾಮಿ ತೇ : 36) as he then takes her hand, prayers for wealth

136. are uttered (by the husband). In the following (stanza : x. 85.37) are also prayers for her with the object of union.

ಪರಾಭಿರಾಶೀಶ್ಚಾಶಾಸ್ತೇ ಪೃಥಕ್ತಾಭ್ಯಾಂ ಸಹೈವ ಚ ‖ ೧೩೬ ‖
ಅಘೋರೇತಿ ತೃಚೇ ತಸ್ಯಾಃ ಸಮಿಹೇತಿ ದ್ವಯೋರ್ದ್ವಯೋಃ ।
ಆ ನಃ ಪ್ರಜಾಪತೇರಿಮಾಮ್ಮೈಂದ್ರೀ ಚಾಂತ್ಯಾ ಬೃಹಸ್ಪತೇಃ ‖ ೧೩೭ ‖
ಮಂತ್ರಾ ವೈವಾಹಿಕಾ ಹ್ಯೇತೇ ನಿಗದ್ಯಂತೇ ನೃಣಾಮಪಿ ।
ಆರ್ತ್ವಿಜಾ ಯಾಜಮಾನಾಶ್ಚ ಯಥಾರೂಪಂ ವಿಶೇಷತಃ ‖ ೧೩೮ ‖
ಪ್ರತ್ಯೃಚಂ ಪ್ರತಿಕೀರ್ತ್ಯಂತೇ ದೇವತಾಶ್ಚೇಹ ಯಾಸು ಯಾಃ ।

ಲಾಗಿದೆ. ಮುಂದಿನ ಋಕ್ಕುಗಳಲ್ಲಿ ವಧೂವರರರಿಗೆ ಶ್ರೇಯಸ್ಸನ್ನು ಕೋರಿ ಅವರನ್ನು ಪ್ರತ್ಯೇಕವಾಗಿಯೂ, ಒಟ್ಟಾಗಿಯೂ, ಋಷಿಯು ಅವರ ಶ್ರೇಯಸ್ಸಿಗಾಗಿ ಪ್ರಾರ್ಥಿಸಿದಾನೆ.

137. **ಅಘೋರಚಕ್ಷುಃ** ಎಂದು ಮೊದಲಾಗುವ ಮುಂದಿನ ಮೂರು ಋಕ್ಕುಗಳಲ್ಲಿ (೪೪–೪೬) ವಧುವಿಗೆ ಮಾತ್ರವೂ **ಸಮಂಜಂತು** ಎಂಬ ೪೭ನೇ ಋಕ್ಕಿನಲ್ಲಿ ವಧೂವರರಿಬ್ಬರಿಗೂ **ಇಹೈವ ಸ್ತಂ** ಎಂಬ ಋಕ್ಕಿನಲ್ಲಿ ಇಬ್ಬರಿಗೂ ಶ್ರೇಯಸ್ಸನ್ನು ಕೋರಲಾಗಿದೆ. **ಆ ನಃ ಪ್ರಜಾಂ** ಎಂಬ ೪೩ನೇ ಋಕ್ಕಿನಲ್ಲಿ ಪ್ರಜಾಪತಿಯನ್ನು ಸ್ತುತಿಸಲಾಗಿದೆ.

138. ಸೂರ್ಯಾವಿವಾಹದ ವರ್ಣನೆ ಇರುವ ಈ ೮೫ನೇ ಸೂಕ್ತದ ಮಂತ್ರಗಳು ಮಾನವರ ವಿವಾಹ ಕಾರ್ಯಗಳಲ್ಲಿಯೂ ಉಪಯೋಗಿಸಲ್ಪಡುವವು. ಅವರಲ್ಲಿಯೂ ಋತ್ವಿಕ್ಕುಗಳೂ (ಪುರೋಹಿತರೂ) ಯಜಮಾನರೂ (ವಿವಾಹಕಾರ್ಯದಲ್ಲಿ ಭಾಗವಹಿಸುವ ವಧೂವರರು ಮುಂತಾದವರೂ)ಸಹ ಈ ಸೂಕ್ತದ ಮಂತ್ರಗಳನ್ನು ಸಂದರ್ಭಾನುಸಾರವಾಗಿ ಬಳಸುವರು.

139. ಪ್ರತಿಋಕ್ಕನ್ನೂ ಆ ಋಕ್ಕಿನಲ್ಲಿ ಹೇಳಿರುವ ದೇವತೆಗಳನ್ನೂ ಯಾವ ಯಾವ ಕರ್ಮಗಳಲ್ಲಿ ಉಪಯೋಗಿಸಬೇಕಾಗಿರುವುದೋ ಅಂತಹ ಸಂದರ್ಭಗಳಲ್ಲಿ ಆಯಾ ಮಂತ್ರಗಳನ್ನು ಪ್ರಯೋಗಿಸಬೇಕು. ಅಥವಾ ಈಸೂಕ್ತದ

With the following (stanzas, the seer) utters prayers for the two both seperately and together ;

137. in the triplet 'having no evil' (ಅಘೋರ; x. 85. 44-46) for her (alone), in 'Together' (ಸಂ : 47) and 'Here' (ಇಹ : 42) respectively for both. 'Here for us' (ಆ ನಃ : 43) is to Prajapati ; and 'Her here' (ಇಮಾಂ : 45) is addressed to Indra ; the last (47) is to Brahaspati.

**29. Remarks on the Surya hymn** (concluded).

138. Now these wedding formulas are recited for men also, being connected with the priests (ಆರ್ತ್ವಿಜಾಃ) and with the institutor of the rite (ಯಜಮಾನಾಃ) according to their respective form (and) their peculiarity (ವಿಶೇಷತಃ);

139. And in those stanzas here in which respectively (ಪ್ರತ್ಯೃಚಂ)

ವದೇತ್ತಾಂ ದೇವತಾಂ ತಾಸು ನಾರಾಶಂಸೀರ್ವದೇತ ವಾ ॥ ೧೩೯ ॥
ಔಷಸೀಃ ಸರ್ವಥಾ ಚೈತಾ ಭಾವವೃತ್ತಂ ಪ್ರಚಕ್ಷತೇ ।
ಸೂರ್ಯಯಾ ಸಹ ಸೂಕ್ತೇಽಸ್ಮಿನ್ಪಾದಶ್ಚೈವಾತ್ರ ಲಕ್ಷ್ಯತೇ ॥ ೧೪೦ ॥
ವಿ ಹಿ ವಾರ್ಷಾಕಪಂ ಸೂಕ್ತಮಸೌ ಹಿ ಕಪಿಲೋ ವೃಷಾ ।
ಇಂದ್ರಃ ಪ್ರಜಾಪತಿಶ್ಚೈವ ವಿಶ್ವಸ್ಮಾದಿಂದ್ರ ಉತ್ತರಃ ॥ ೧೪೧ ॥
ರಕ್ಷೋಹಣಾದಿ ಚಾಗ್ನೇಯಂ ತ್ರೀನ್ ಸ್ತೌತ್ಯಗ್ನೀನ್ಪರಂ ಹವಿಃ ।
ಇಮಂ ಚ ಮಧ್ಯಮಂ ಚೈವ ಅಸೌ ವೈಶ್ವಾನರಂ ಚ ಯಃ ॥ ೧೪೨ ॥

ಮಂತ್ರಗಳನ್ನು ನಾರಾಶಂಸೀಮಂತ್ರಗಳೆಂದು ಎಂದರೆ ನರರ, ಮನುಷ್ಯರ ಕರ್ಮಗಳನ್ನು ಪ್ರಶಂಸಿಸುವ ಮಂತ್ರಗಳೆಂದೂ ಹೇಳಬಹುದು.

140. **ಸೂರ್ಯಾ, ಉಷಾಃ** ಎಂಬ ಹೆಸರುಗಳು ಒಂದೇ ದೇವತೆಯ ರೂಪಾಂತರಗಳೆಂದು ಹಿಂದೆಯೇ ಹೇಳಿದೆಯಷ್ಟೆ. ಆದ್ದರಿಂದ ಸೂರ್ಯಾದೇವತೆಯ ವಿವಾಹವರ್ಣನೆ ಇರುವ ಈ ಸೂಕ್ತವನ್ನು ಉಷೋದೇವತಾಕವೆಂದೂ ಹೇಳಬಹುದು. ಮತ್ತು ಈ ಸೂಕ್ತದಲ್ಲಿ ಸೂರ್ಯಾದೇವಿಯೇ ತನ್ನ ವಿವಾಹವರ್ಣನೆಯನ್ನು ಮಾಡಿರುವುದರಿಂದ ಈ ಸೂಕ್ತವನ್ನು ಭಾವವೃತ್ತಸೂಕ್ತವೆಂದೂ ಹೇಳಬಹುದು. [ಒಂದು ಸೂಕ್ತಕ್ಕೆ ಋಷಿಯೂ, ದೇವತೆಯೂ ಒಂದೇ ವ್ಯಕ್ತಿಯಾಗಿದ್ದರೆ, ಎಂದರೆ ಋಷಿಯು ತನ್ನನ್ನೇ ಸೂಕ್ತದಲ್ಲಿ ಪ್ರಶಂಸೆಮಾಡಿಕೊಂಡಿದ್ದರೆ ಆ ಸೂಕ್ತವು ಭಾವ್ವತ್ತಸೂಕ್ತವೆನಿಸುವುದು] ಮತ್ತು ಈ ಸೂಕ್ತದ ಒಂದು ಪಾದದಲ್ಲಿ ಆರೀತಿ ಭಾವವೃತ್ತವಿರುವುದೆಂದು ಕಂಡುಬರುವುದು.

141. **ವಿ ಹಿ ಸೋತೋರಸೃಕ್ಷತ** ಎಂಬ ಸೂಕ್ತಕ್ಕೆ (೮೬) ವೃಷಾಕಪಿಸೂಕ್ತವೆಂದು ಹೆಸರು. ವೃಷಾಕಪಿಯೆಂದರೆ ಕಪಿಲವರ್ಣದ ವೃಷವೆಂದು ಅರ್ಥವು. ಈ ದೇವತೆಯು ಯಾರು ಎಂದರೆ ಇಂದ್ರ ಅಥವಾ ಪ್ರಜಾಪತಿಯೇ ಆಗಿರುವುದು. ಸಮಸ್ತ ವಿಶ್ವಕ್ಕೂ (ಪ್ರಪಂಚಕ್ಕಿಂತಲೂ) ಇಂದ್ರನೇ ಶ್ರೇಷ್ಠನು.

142. **ರಕ್ಷೋಹಣಂ** ಎಂಬ ಸೂಕ್ತಕ್ಕೆ (೮೭) ಅಗ್ನಿಯು ಅಥವಾ ರಕ್ಷೋಹಾಗ್ನಿಯು ದೇವತೆಯು. **ಹವಿಷ್ಪಾಂತಂ** ಎಂಬ ೮೮ ನೇ ಸೂಕ್ತದಲ್ಲಿ ಮೂರುವಿಧ ಅಗ್ನಿಗಳನ್ನೂ, ಎಂದರೆ ಪಾರ್ಥಿವಾಗ್ನಿ, ಮಧ್ಯಮಾಗ್ನಿ ಮತ್ತು ಸ್ವರ್ಗದಲ್ಲಿರುವ ವೈಶ್ವಾನರಾಗ್ನಿ (ಸೂರ್ಯ) ಎಂಬ ಅಗ್ನಿಗಳನ್ನು ಸ್ತುತಿಸಲಾಗಿದೆ.

deities are proclaimed, one should state the one mentioned (ತಾಂ) to be the deity or should state that (stanzas) are addresed to Narasamsa (ನಾರಾಶಂಸೀಃ).

140. And they declare that these stanzas addressed to Usas form as a whole (ಸರ್ವಥಾ) a (hymn) concerned with evolution (ಭಾವವೃತ್ತ); and in this hymn a verse (ಪಾದ) is also (thus) characterised with Surya.

141. 'Away, indeed' (ವಿಹಿ ; x. 86) is a hymn addressed to (ವೃಷಾಕಪಿ) for that brown (ಕಪಿಲ) bull (ವೃಷಾ) is Indra and Prajapati: Indra is superior to all.'

142. (The hymn) beginning 'The demon-slayer' (ರಕ್ಷೋಹಣಂ : x. 87) is addressed to Agni. The following one, 'The oblation' (ಹವಿಃ x. 88) praises the three Agnis, this (terrestrial) one, and the Middle one, and Vaisvanara who is that (celestial) one.

ಐಂದ್ರಾತ್ಪುರುಷಸೂಕ್ತಂ ಚ ಅಂತ್ಯಯಾ ಪೌರುಷಸ್ಯ ತು ।
ಯಥೈನಮಭಜನ್ಸಾಧ್ಯಾ ಯಜ್ಞಾರ್ಥಂ ಸೋಽರ್ಥ ಉಚ್ಯತೇ ॥ ೧೪೩ ॥

ಆಪಾಂತಮನ್ಯುರಿತ್ಯೈಂದ್ರ್ಯಾಂ ಸ್ತುತಃ ಸೋಮೋಽತ್ರ ದೃಶ್ಯತೇ ।
ಸಾಲೋಕ್ಯಾತ್ಸಾಹಚರ್ಯಾದ್ವಾ ಸ್ತೂಯತೇ ಸೋಮ ಏವ ವಾ ॥ ೧೪೪ ॥

ನಿಪಾತಭಾಜಂ ಸೋಮಂ ಚ ಅಸ್ಯಾಂ ರಥೀತರೋಽಬ್ರವೀತ್ ।
ಐಂದ್ರೇಷು ಹಿ ನಿಪಾತೋಽತ್ರ ಸ್ತುತೋಽಗ್ನಿರರುಣೇನ ಸಂ ॥ ೧೪೫ ॥

**೮೩-೯೩ ನೇ ಸೂಕ್ತಗಳ ದೇವತೆಗಳು**

143. ಮುಂದಿನ ೮೯ ನೇ ಸೂಕ್ತಕ್ಕೆ ಇಂದ್ರನು ದೇವತೆಯು ; ೯೦ ನೇ ಸೂಕ್ತಕ್ಕೆ ಪುರುಷನು ದೇವತೆಯು, ಪುರುಷದೇವತಾಕವಾದ ಈ ಸೂಕ್ತದ ಕೊನೆಯ ಋಕ್ಕಿನಲ್ಲಿ (೧೬) ಹೇಳಿರುವ ಸಾಧ್ಯರೆಂಬುವ ದೇವಗಣಗಳು ಯಜ್ಞಾರ್ಥವಾಗಿ ಪುರುಷನನ್ನು (ಪರಬ್ರಹ್ಮ ಅಥವಾ ಪರಮಾತ್ಮ) ವಿಭಾಗಿಸಿ ಯಜ್ಞವನ್ನು ನಿರ್ವಹಿಸಿದರು ಎಂಬ ವಿಷಯವು ಪ್ರತಿಪಾದಿತವಾಗಿದೆ.

144. ೮೯ ನೇ ಸೂಕ್ತದ **ಆಪಾಂತಮನ್ಯುಃ** ಎಂಬ ೫ ನೇ ಋಕ್ಕಿನಲ್ಲಿ ಸೋಮದೇವತೆಯನ್ನು ಸ್ಪಷ್ಟವಾಗಿ ಸ್ತುತಿಸಲಾಗಿದೆ. ಏಕೆಂದರೆ ಸೋಮನು ಇಂದ್ರನ ಸ್ವಸ್ಥಾನವಾದ ಲೋಕಕ್ಕೆ (ಸ್ವರ್ಗಕ್ಕೆ) ಸೇರಿದವನು ಅಥವಾ ಸೋಮನಿಗೂ, ಇಂದ್ರನಿಗೂ ಸಾಹಚರ್ಯವಿರುವುದು.

145. ಈ ಋಕ್ಕಿನಲ್ಲಿ ಸೋಮನನ್ನು ಪ್ರಸಂಗವಶದಿಂದ ಸ್ತುತಿಸಲಾಗಿದೆಯೆಂದು ರಥೀತರ ಎಂಬುವರು ಹೇಳುವರು. ಏಕೆಂದರೆ ಇಂದ್ರದೇವತಾಕವಾದ ಅನೇಕ ಸೂಕ್ತಗಳಲ್ಲಿ ಸೋಮನನ್ನು ಪ್ರಾಸಂಗಿಕವಾಗಿ ಸ್ತುತಿಸಿರುವುದು ಕಂಡುಬರುವುದು. **ಸಂಜಾಗೃವದ್ಭಿಃ** ಎಂಬ ೯೧ ನೇ ಸೂಕ್ತದಲ್ಲಿ ಅರುಣನೆಂಬ ಋಷಿಯು ಅಗ್ನಿಯನ್ನು ಸ್ತುತಿಸಿದಾನೆ.

## 30. Deities of RV. x. 89-93. Story of Pururavas & Urvasi

143. And after (a hymn : x. 89) addressed to Indra (comes) the Purusa hymn (x. 90). With the last (stanza 16) of (the hymn) addressed to Purusa the circumstances (ಅರ್ಥ) are told in which the Sadhyas divided him for the purpose of sacrifice.

144. In the stanza addressed to Indra, 'He who gives zeal when imbibed' (ಆಪಾಂತಮನ್ಯುಃ ; x. 89-5), Soma is clearly praised. Soma is praised either because he belongs to the same world or hecause he is (Indra's) companion.

145. Rathitara has said that in this (stanza) Soma is incidental (ನಿಪಾತಭಾಜ); for in (hymns) addressed to Indra there is here (such) incidental mention. In 'Together' (ಸಂ : x. 91) Agni is praised by Aruna.

ಯಜ್ಞಸ್ಯ ವೋ ವೈಶ್ವದೇವೇ ಪ್ರೈತ ಇತ್ಯುತ್ತರಂ ತು ಯತ್ ।
ತತ್ರಾರ್ಬುದಸ್ತು ಗ್ರಾವಾಣಂ ಮೂರ್ತಿಮಂತಮಿವಾರ್ಚತಿ ॥ ೧೪೬ ॥

ಪ್ರ ತದ್ದುಃಶೀಮ ಇತ್ಯೃಗ್ಭ್ಯಾಂ ರಾಜ್ಞಾಂ ದಾನಂ ಚ ಶಂಸತಿ ।
ಪುರೂರವಸಿ ರಾಜರ್ಷಾವಪ್ಸರಾಸ್ತೂರ್ವಶೀ ಪುರಾ ।
ನ್ಯವಸತ್ಸಂವಿದಂ ಕೃತ್ವಾ ತಸ್ಮಿನ್ಧರ್ಮಂ ಚಚಾರ ಚ ॥ ೧೪೭ ॥

ತಯಾ ತಸ್ಯ ಚ ಸಂವಾಸಮಸೂಯನ್ ಪಾಕಶಾಸನಃ ।
ಪೈತಾಮಹಂ ಚಾನುರಾಗಮಿಂದ್ರವಚ್ಚಾಪಿ ತಸ್ಯ ತು ॥ ೧೪೮ ॥

146. **ಯಜ್ಞಸ್ಯ ವೋ ರಥ್ಯಂ** ಎಂದು ಮೊದಲಾಗುವ ಮುಂದಿನ ಎರಡು ಸೂಕ್ತಗಳಲ್ಲಿ (೯೨-೯೩) ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ. **ಪ್ರೈತೇ ವದಂತು** ಎಂಬ ಅದರ ಮುಂದಿನ ೯೪ ನೇ ಸೂಕ್ತದಲ್ಲಿ ಸೂಕ್ತದ ಋಷಿಯಾದ ಅರ್ಬುದನು ಸೋಮಲತೆಗಳನ್ನು ಜಜ್ಜುವ **ಗ್ರಾವಾಣಃ** ಎಂಬ ಕಲ್ಲುಗಳನ್ನು ದೇವತೆಯ ರೂಪದಲ್ಲಿರುವಂತೆ ಭಾವಿಸಿ ಸ್ತುತಿಸಿರುವನು.

### ಪುರೂರವ ಮತ್ತು ಊರ್ವಶಿಯ ಕಥೆ; ೯೫ ನೇ ಸೂಕ್ತ

147. ೯೩ ನೇ ಸೂಕ್ತದ **ಪ್ರ ತದ್ದುಃಶೀಮೇ** ಎಂದು ಮೊದಲಾಗುವ ಎರಡು ಋಕ್ಕುಗಳಲ್ಲಿ (೧೪-೧೫) ಆ ಸೂಕ್ತದ ಋಷಿಯು ರಾಜರ ದಾನಪ್ರಶಂಸೆ ಮಾಡಿದಾನೆ. ಪೂರ್ವದಲ್ಲಿ ಊರ್ವಶೀ ಎಂಬ ಅಪ್ಸರಸ್ತ್ರೀಯು ರಾಜರ್ಷಿಯಾದ ಪುರೂರವಸ್ಸಿನೊಡನೆ ಒಂದು ಒಪ್ಪಂದವನ್ನು ಮಾಡಿಕೊಂಡು ವಿವಾಹವಾದ ಪತ್ನಿಯಂತೆ ಅವನೊಡನೆ ವಾಸಮಾಡುತ್ತಿದ್ದಳು.

148. ಬ್ರಹ್ಮನು ಇಂದ್ರನಲ್ಲಿಟ್ಟಿರುವ ಅನುರಾಗದಂತೆ ಆ ಪುರೂರವಸ್ಸು ಊರ್ವಶಿಯಲ್ಲಿ ಅತ್ಯಂತ ಅನುರಾಗದಿಂದ (ಪ್ರೀತಿಯಿಂದ) ಪತಿಪತ್ನಿಯರಂತೆ ವಾಸಿಸುತ್ತಿರುವುದನ್ನು ಕಂಡು ಅವರ ವಿಷಯದಲ್ಲಿ ಇಂದ್ರನಿಗೆ ಅಸೂಯೆಯುಂಟಾಯಿತು.

---

146. 'Of your sacrifice' (ಯಜ್ಞಸ್ಯ ವಃ : x. 93) are two addessed to the All-gods (92-93); but in that which (come) next, 'Forth these' (ಪ್ರೈತೇ : x. 94) Arbuda adores the Pressing-Stone as if incarnate

147. and with the two stanzas 'Forth this to Duhsima' (ಪ್ರ ತದ್ದುಃಶೀಮೇ: x. 93. 14-15) he (the seer) lauds the gift of kings.

Now in the days of yore the nymph Urvasi dwelt with the royal seer Pururavas ; and having made a compact (with him), she lived in wedlock with him.

### 31. Story of Pururavas and Urvasi (concluded).

148. And the Chastiser of Paka (Indra), being jealous of his cohabitation with her and of Brahma's (ಪೈತಾಮಹ) and his (ಪುರೂರವ) passion (for her) as if he (ಪುರೂರವ) were Indra,

ಸ ತಯೋಸ್ತು ವಿಯೋಗಾರ್ಥಂ ಪಾರ್ಶ್ವಸ್ಥಂ ವಜ್ರಮಬ್ರವೀತ್ ।
ಪ್ರೀತಿಂ ಭಿಂಧಿ ತಯೋರ್ವಜ್ರ ಮಮ ಚೇದಿಚ್ಛಸಿ ಪ್ರಿಯಂ ॥ ೧೪೯ ॥

ತಥೇತ್ಯುಕ್ತ್ವಾ ತಯೋಃ ಪ್ರೀತಿಂ ವಜ್ರೋಽಭಿನತ್ಸ್ವಮಾಯಯಾ ।
ತತಸ್ತಯಾ ವಿಹೀನಸ್ತು ಚಚಾರೋನ್ಮತ್ತವನ್ನೃಪಃ ॥ ೧೫೦ ॥

ಚರನ್ಸರಸಿ ಸೋಽಪಶ್ಯದಭಿರೂಪಾಮಿವೋರ್ವಶೀಂ ।
ಸಖೀಭಿರಭಿರೂಪಾಭಿಃ ಪಂಚಭಿಃ ಪಾರ್ಶ್ವತೋ ವೃತಾಂ ॥ ೧೫೧ ॥

ತಾಮಾಹ ಪುನರೇಹೀತಿ ದುಃಖಾತ್ಸಾ ತ್ವಬ್ರವೀನ್ನೃಪಂ ।
ಅಪ್ರಾಪ್ಯಾಹಂ ತ್ವಯಾದ್ಯೇಹ ಸ್ವರ್ಗೇ ಪ್ರಾಪ್ಸ್ಯಸಿ ಮಾಂ ಪುನಃ ॥ ೧೫೨ ॥

149. ಆಗ ಅವರಿಬ್ಬರಿಗೂ ವಿಯೋಗವನ್ನು (ಅಗಲಿರುವಿಕೆ) ಉಂಟುಮಾಡಬೇಕೆಂದು ಇಂದ್ರನು ಯೋಚಿಸಿ ತನ್ನ ಸಮೀಪದಲ್ಲಿದ್ದ ವಜ್ರಾಯುಧವನ್ನು ಕುರಿತು, ಎಲೈ ವಜ್ರಾಯುಧವೇ, ನನಗೆ ಪ್ರಿಯವನ್ನುಂಟುಮಾಡಬೇಕೆಂಬ ಅಪೇಕ್ಷೆಯು ನಿನಗಿದ್ದರೆ ಆ ಉರ್ವಶೀಪುರೂರವಸುಗಳ ಮಧ್ಯದಲ್ಲಿರುವ ಪರಸ್ಪರ ಪ್ರೀತಿಯನ್ನು ಕಡಿದುಹಾಕು, ಎಂದು ಹೇಳಿದನು.

150. ಹಾಗೆಯೇ ಆಗಲೆಂದು ಹೇಳಿ ವಜ್ರಾಯುಧವು ತನ್ನ ಮಾಯೆಯಿಂದ ಅವರಲ್ಲಿದ್ದ ಪರಸ್ಪರ ಅನುರಾಗವನ್ನು ನಾಶಮಾಡಿತು. ಎಂದರೆ ಅವರು ಪರಸ್ಪರ ಆಗಲುವಂತೆ ಮಾಡಿತು. ಆಗ ರಾಜನು ಆ ಉರ್ವಶಿಯ ವಿರಹ ವ್ಯಥೆಯನ್ನು ತಾಳಲಾರದೆ ಹುಚ್ಚನಂತಾಗಿ ಅಲ್ಲಲ್ಲಿ ಸಂಚರಿಸುತ್ತಿದ್ದನು.

151. ಹೀಗೆ ಸಂಚರಿಸುತ್ತಿರುವಾಗ ಒಂದು ದಿವಸ ರೂಪಸಂಪನ್ನಳಾದ ಆ ಉರ್ವಶಿಯು ತನ್ನ ಪಕ್ಕದಲ್ಲಿ ತನ್ನಂತೆಯೇ ಇರುವ ಐದುಮಂದಿ ಸಖಿಯರೊಡನೆ ಒಂದು ಸರೋವರದಲ್ಲಿ ವಿಹರಿಸುತ್ತಿರುವದನ್ನು ಕಂಡನು.

152. ಬಳಿಕ ರಾಜನು ಆ ಉರ್ವಶಿಯನ್ನು ಕುರಿತು ನನ್ನ ಬಳಿಗೆ ಬಾ ಎಂದು ಕರೆದನು. ಆದರೆ ಉರ್ವಶಿಯು ದುಃಖದಿಂದ ಆ ರಾಜನನ್ನುದ್ದೇಶಿಸಿ ಎಲೈ ರಾಜನೇ, ಈಗ ನಾನು ನಿನಗೆ ದೊರೆಯಲಾರೆನು. ಸ್ವರ್ಗದಲ್ಲಿ ನೀನು ಮತ್ತೆ ನನ್ನನ್ನು ಹೊಂದಬಹುದು ಎಂದಳು.

---

149, said to the bolt at his side wth a view to separating them; Destroy, O bolt, the alliance of these two, if you wish (to do\` me a favour·

150, 'Very well', said the bolt, and destroyed their alliance with its craft· Then bereft of her the king wandered about like one distracted.

151 As he wandered, he saw in a lake the beautiful (ಅಭಿರೂಪಾಂ) Urvasi, as it seemed (ಇವ), surrounded by five beautiful maiden friends at her side·

152 To her he said, ·Come back·' But she sorrowfully (ದುಃಖಾತ್) answered the king, 'You cannot now obtain me here; in heaven you will obtain me again·'

ಆಹ್ವಾನಂ ಪ್ರತಿ ಚಾಖ್ಯಾನಮಿತರೇತರಯೋರಿದಂ |
ಸಂವಾದಂ ಮನ್ಯತೇ ಯಾಸ್ಕ ಇತಿಹಾಸಂ ತು ಶೌನಕಃ || ೧೫೩ ||

ಹಯ ಇತಿ ಪರಮೈಂದ್ರಂ ಪ್ರ ತೇ ಯಾ ಓಷಧೀಸ್ತವಃ |
ಪ್ರಯೋಗೇ ಭಿಷಜಸ್ತ್ವೇತದ್ಯಕ್ಷ್ಮನಾಶಾಯ ಕಲ್ಪತೇ || ೧೫೪ ||

ಆರ್ಷ್ಟಿಷೇಣಸ್ತು ದೇವಾಪಿಃ ಕೌರವ್ಯಶ್ಚೈವ ಶಂತನುಃ |
ಭ್ರಾತರೌ ಕುರುಷು ತ್ವೇತೌ ರಾಜಪುತ್ರೌ ಬಭೂವತುಃ || ೧೫೫ ||

153. ರಾಜನು ಉರ್ವಶಿಯನ್ನು ತನ್ನ ಬಳಿಗೆ ಬಾ ಎಂದು ಕರೆದುದೂ ಮತ್ತು ಅವರಿಬ್ಬರಲ್ಲಿ ಪರಸ್ಪರ ನಡೆದ ಸಂಭಾಷಣೆಯನ್ನು ಯಾಸ್ಕರು ಸಂವಾದವೆಂದೂ ಶೌನಕರು ಇತಿಹಾಸವೆಂದೂ (ಕಥೆ) ಹೇಳುವರು.

### ೯೬-೯೭ನೇ ಸೂಕ್ತಗಳ ದೇವತೆ ; ದೇವಾಪಿ ಎಂಬುವನ ವೃತ್ತಾಂತ

154. **ಹಯೇ ಜಾಯೇ** ಎಂಬ ೯೫ನೇ ಸೂಕ್ತದಲ್ಲಿ ಉರ್ವಶೀ ಮತ್ತು ಪುರೂರವಸ್ಸಿಗೆ ನಡೆದ ಸಂಭಾಷಣೆ ಇದೆ. **ಪ್ರ ತೇ ಮಹೇ** ಎಂಬ ೯೬ನೇ ಸೂಕ್ತದಲ್ಲಿ ಇಂದ್ರನನ್ನೂ **ಯಾ ಓಷಧೀಃ** ಎಂಬ ೯೭ನೇ ಸೂಕ್ತದಲ್ಲಿ ಓಷಧಿ ಮತ್ತು ಲತೆಗಳನ್ನೂ ಸ್ತುತಿಸಲಾಗಿದೆ. ಯಕ್ಷ್ಮ (ಕ್ಷಯ) ರೋಗವೇ ಮೊದಲಾದ ರೋಗಗಳ ಪರಿಹಾರಾರ್ಥವಾಗಿ ಈ ಸೂಕ್ತದ ಪ್ರಯೋಗವಿರುವುದು.

### ಋಷ್ಟಿಷೇಣನ ಪುತ್ರರಾದ ದೇವಾಪಿ ಮತ್ತು ಶಂತನುವೆಂಬುವರ ವೃತ್ತಾಂತ

155. ಪೂರ್ವದಲ್ಲಿ ಕುರುವಂಶದ ಋಷ್ಟಿಷೇಣನೆಂಬುವನಿಗೆ ದೇವಾಪಿ ಎಂಬ ಪುತ್ರನಿದ್ದನು. ಕುರುವಂಶದ ರಾಜರಲ್ಲಿ ಶಂತನು ಎಂಬ ರಾಜಪುತ್ರನಿದ್ದನು. ಕುರುವಂಶದ ರಾಜಪುತ್ರರಾದ ಇವರಿಬ್ಬರೂ ಸಹೋದರರಾಗಿದ್ದರು. ಅವರಲ್ಲಿ,

---

### 32. Deities of RV. x. 96-97, Story of Devapi ; x. 98

153. This reciprocal narrative (ಆಖ್ಯಾನ) in connexion with a summons (ಆಹ್ವಾನಂ), Yaska considers a dialogne, but Saunaka a story,

154. (that is, the hymn beginning) 'Ho' (ಹಯೇ : x. 95). The following one, 'Forth you' (ಪ್ರ ತೇ : x. 96), is addressed to Indra. 'Whieh' (ಯಾಃ : x. 97) is (in) praise of plants.

In (its) employment this (hymn) of Bhisaj is applicable to the cure of consumption (ಯಕ್ಷ್ಮ).

155. Now Devapi, son of Rstisena, and samtanu of the race of Kuru were two brothers, princes among the Kurus.

ಜ್ಯೇಷ್ಠಸ್ತಯೋಸ್ತು ದೇವಾಪಿಃ ಕನೀಯಾಂಶ್ಚೈವ ಶಂತನುಃ ।
ತ್ವಗ್ದೋಷೀ ರಾಜಪುತ್ರಸ್ತು ಋಷ್ಟಿಷೇಣಸುತೋಽಭವತ್ ॥ ೧೫೬ ॥
ರಾಜ್ಯೇನ ಛಂದಯಾಮಾಸುಃ ಪ್ರಜಾಃ ಸ್ವರ್ಗಂ ಗತೇ ಗುರೌ ।
ಸ ಮುಹೂರ್ತಮಿವ ಧ್ಯಾತ್ವಾ ಪ್ರಜಾಸ್ತಾಃ ಪ್ರತ್ಯಭಾಷತ ॥ ೧೫೭ ॥

॥ ಇತಿ ಸಪ್ತಮೋಽಧ್ಯಾಯಃ ॥

156. ದೇವಾಪಿ ಎಂಬುವನು ಹಿರಿಯವನು, ಶಂತನು ಎಂಬುವನು ಕಿರಿಯವನು. ಋಷ್ಟಿಷೇಣನ ಪುತ್ರನಾದ ದೇವಾಪಿಗೆ ಚರ್ಮರೋಗಪಿದ್ದಿತು.

157. ತಂದೆಯು ಮೃತನಾದ ಮೇಲೆ ಆ ದೇಶದ ಪ್ರಜೆಗಳು ದೇವಾಪಿಗೆ ರಾಜ್ಯಭಾರವನ್ನು ವಹಿಸಿದರು. ಕ್ಷಣಕಾಲ ಯೋಚಿಸಿ ಆ ದೇವಾಪಿಯು ತನ್ನ ಪ್ರಜೆಗಳನ್ನು ಕುರಿತು ಇಂತೆಂದನು.

ಇಲ್ಲಿಗೆ ಏಳನೆಯ ಆಧ್ಯಾಯವು ಸಮಾಪ್ತವು.

156. Now the elder of these two was Devapi and the younger Samtanu, but the (former) prince the son of Rstisena, was afflicted with skin diseases

157. When his father had gone to heaven his subjects offered him the sovereignty. Reflecting for but a moment, he replied to his subjects.

Thus ends 7th Chapter.



## ಅಥ ಬೃಹದ್ದೇವತಾಯಾಂ ಅಷ್ಟಮೋಽಧ್ಯಾಯಃ

ನ ರಾಜ್ಯಮಹಮರ್ಹಾಮಿ ನೃಪತಿರ್ವೋಽಸ್ತು ಶಂತನುಃ ।
ತಥೇತ್ಯುಕ್ತ್ವಾಭ್ಯಷಿಂಚಂಸ್ತಾಃ ಪ್ರಜಾ ರಾಜ್ಯಾಯ ಶಂತನುಂ ॥ ೧
ತತೋಽಭಿಷಿಕ್ತೇ ಕೌರವ್ಯೇ ವನಂ ದೇವಾಪಿರಾವಿಶತ್ ।
ನ ವವರ್ಷಾಥ ಪರ್ಜನ್ಯೋ ರಾಜ್ಯೇ ದ್ವಾದಶ ವೈ ಸಮಾಃ ॥ ೨
ತತೋಽಭ್ಯಗಚ್ಛದ್ದೇವಾಪಿಂ ಪ್ರಜಾಭಿಃ ಸಹ ಶಂತನುಃ ।
ಪ್ರಸಾದಯಾಮಾಸ ಚೈನಂ ತಸ್ಮಿನ್ಧರ್ಮವ್ಯತಿಕ್ರಮೇ ॥ ೩

## ಎಂಟನೆಯ ಅಧ್ಯಾಯವು.

### ದೇವಾಪಿಯ ವೃತ್ತಾಂತ (ಮುಂದುವರಿದುದು)

1. ಎಲೈ ಪ್ರಜೆಗಳಿರಾ, ನಾನು (ತ್ವಗ್ದೋಷಯುತನಾಗಿರುವುದರಿಂದ) ರಾಜ್ಯವನ್ನಾಳಲು ಅರ್ಹನ್ನ ಆದ್ದರಿಂದ ನಿಮಗೆ ಶಂತನುವೇ ರಾಜನಾಗಲಿ ಎಂದನು. ಹಾಗೆಯೇ ಆಗಲೆಂದು ಹೇಳಿ ಪ್ರಜೆಗಳು ಶಂತನುವನ್ನ ರಾಜ್ಯಾಭಿಷಿಕ್ತನನ್ನಾಗಿ ಮಾಡಿದರು.

2. ಕುರುವಂಶದ ಶಂತನುವು ರಾಜ್ಯಾಭಿಷಿಕ್ತನಾದ ಮೇಲೆ ದೇವಾಪಿಯು ತಪಸ್ಸನ್ನು ಮಾಡಲು ವನ ಹೊರಟುಹೋದನು. ಆಗ ಶಂತನುವಿನ ರಾಜ್ಯದಲ್ಲಿ ಹನ್ನೆರಡು ವರ್ಷಗಳವರೆಗೆ ಪರ್ಜನ್ಯನು ಮಳೆಯನ್ನ ಸುರಿಸಲಿಲ್ಲ.

3. ಆದ್ದರಿಂದ ಶಂತನುರಾಜನು ತನ್ನ ಪ್ರಜೆಗಳೊಡನೆ ಹೊರಟು ದೇವಾಪಿಯು ತಪಸ್ಸುಮಾಡುತ್ತಿದ್ದ ವನ ಬಂದು ತಾನು ಧರ್ಮವನ್ನು ಅತಿಕ್ರಮಿಸಿ (ಎಂದರೆ ಅಣ್ಣನಿಗೆ ರಾಜ್ಯವನ್ನು ಕೊಡದೆ ತಾನೇ ರಾಜನಾಗಿ) ರಾ ನಾಗಿರುವುದಕ್ಕೆ ಪಶ್ಚಾತ್ತಾಪವನ್ನು ಪ್ರದರ್ಶಿಸಿ ಅವನನ್ನು ನಾನಾವಿಧವಾಗಿ ಸಮಾಧಾನಮಾಡಿದನು.

## Chapter viii.

### 1. Story of Devapi (continued)

1. 'I am not worthy of the sovereignty : let Samtanu be your ruler Assenting to this, his subjects anointed Samtanu king,

2. When the scion of Kuru had been anointed, Devapi retired t the forest. Thereupon Parjanya did not rain in (that) realm for twelv years.

3. Samtanu accordingly came with his subjects to Devapi ar propitiated him with regard to that dereliction of duty.

ಶಿಶಿಕ್ಷ ಚೈನಂ ರಾಜ್ಯೇನ ಪ್ರಜಾಭಿಃ ಸಹಿತಸ್ತದಾ ।
ತಮುವಾಚಾಥ ದೇವಾಪಿಃ ಪ್ರಹ್ವಂ ತು ಪ್ರಾಂಜಲಿಸ್ಥಿತಂ ॥ ೪ ॥
ನ ರಾಜ್ಯಮಹಮರ್ಹಾಮಿ ತ್ವಗ್ದೋಷೋಪಹತೇಂದ್ರಿಯಃ ।
ಯಾಜಯಿಷ್ಯಾಮಿ ತೇ ರಾಜನ್ ವೃಷ್ಟಿಕಾಮೇಜ್ಯಯಾ ಸ್ವಯಂ ॥ ೫ ॥
ತತಸ್ತಂ ತು ಪುರೋಽಧತ್ತ ಆರ್ತ್ವಿಜ್ಯಾಯ ಸ ಶಂತನುಃ ।
ಸ ಚಾಸ್ಯ ಚಕ್ರೇ ಕರ್ಮಾಣಿ ವಾರ್ಷಿಕಾಣಿ ಯಥಾವಿಧಿ ॥ ೬ ॥
ಬೃಹಸ್ಪತೇ ಪ್ರತೀತ್ಯೃಗ್ಭಿರೀಜೇ ಚೈವ ಬೃಹಸ್ಪತಿಂ ।
ದ್ವಿತೀಯಯಾಸ್ಯ ಸೂಕ್ತಸ್ಯ ಬೋಧಿತೇ ಜಾತವೇದಸಾ ॥ ೭ ॥

4. ಬಳಿಕ ಪ್ರಜೆಗಳಿಂದ ಸಹಿತನಾದ ಆ ಶಂತನುವು ತನ್ನ ಜ್ಯೇಷ್ಠಸಹೋದರನಾದ ದೇವಾಪಿಗೆ ರಾಜ್ಯವನ್ನು ಒಪ್ಪಿಸಿದನು. ಆಗ ತನ್ನ ಎದುರಿಗೆ ಕೈಮುಗಿದುಕೊಂಡು ವಿನಯಾನ್ವಿತನಾಗಿ ನಿಂತಿರುವ ಶಂತನುವನ್ನು ನೋಡಿ ದೇವಾಪಿಯು ಇಂತೆಂದನು.

5. ಎಲೈ ರಾಜನೇ, ನಾನು ಚರ್ಮರೋಗದಿಂದ ನರಳುತ್ತಿರುವುದರಿಂದ ನಾನು ರಾಜ್ಯಭಾರಮಾಡಲು ಅರ್ಹನಲ್ಲ. ಆದರೆ ನಿನ್ನ ರಾಜ್ಯದಲ್ಲಿ ವೃಷ್ಟಿವರ್ಷಣದಿಂದ ಸುಭಿಕ್ಷವಾಗುವುದಕ್ಕಾಗಿ ನಾನೇ ಸ್ವತಃ ನಿಂತುಕೊಂಡು (ಪೌರೋಹಿತ್ಯವನ್ನು ವಹಿಸಿ) ನಿನ್ನಿಂದ ಯಜ್ಞವನ್ನು ಮಾಡಿಸುವೆನು ಎಂದು ಹೇಳಿದನು,

6. ಬಳಿಕ ಶಂತನುರಾಜನು ಹಾಗೆಯೇ ಆಗಲೆಂದು ಸಂಮತಿಸಿ ತಾನು ಮಾಡುವ ಯಜ್ಞದಲ್ಲಿ ದೇವಾಪಿಯು ಪೌರೋಹಿತ್ಯವನ್ನು ವಹಿಸಿ ಋತ್ವಿಕ್ಪಾತ್ರವನ್ನು ಕೈಗೊಳ್ಳಬೇಕೆಂದು ಪ್ರಾರ್ಥಿಸಿ ಅವನನ್ನು ಮುಖ್ಯಪುರೋಹಿತನನ್ನಾಗಿ ಮಾಡಿದನು. ಪೌರೋಹಿತ್ಯವನ್ನು ವಹಿಸಿದ ದೇವಾಪಿಯು ವೃಷ್ಟಿವರ್ಷಣಕರ್ಮಕ್ಕಾಗಿ ಮಾಡಬೇಕಾದ ಕಾರ್ಯಕಲಾಪಗಳನ್ನು ವಿಧ್ಯುಕ್ತವಾಗಿ ನೆರವೇರಿಸಿದನು.

7. ಅನಂತರ ದೇವಾಪಿಯು **ಬೃಹಸ್ಪತೇ ಪ್ರತಿ ಮೇ** ಎಂಬ ೯೮ ನೇ ಸೂಕ್ತದ ಮೂರು ಋಕ್ಕುಗಳಿಂದ (೧-೩) ಬೃಹಸ್ಪತಿಯನ್ನು ಆರಾಧಿಸಿದನು. ಈ ಸೂಕ್ತದ ಎರಡನೇ ಋಕ್ಕಿನಲ್ಲಿ ಜಾತವೇದಾಗ್ನಿಯು ದೇವಾಪಿಯನ್ನುದ್ದೇಶಿಸಿ—

4. Then, in company with his subjects, he offered him the sovereignty. To him, as he stood humbly with folded hands, Devapi replied :

5. 'I am not worthy of the sovereignty, my energy being impaired by skin-disease ; I will myself officiate, O king, as yout priest in a sacrifice for rain.'

**2. Story of Devapi** (concluded). **Deities of RV. x. 99-101**

6. Then Samtanu appointed him to be his chaplain (ಪುರೋಽಧತ್ತ) and to act as priest (ಆರ್ತ್ವಿಜ್ಯಾಯ). So he (ದೇವಾಪಿ) duly performed the rites productive of rain.

7. And he sacrificed to Brhaspati with the stanzas, 'O Brhaspati, to' (ಬೃಹಸ್ಪತೇ ಪ್ರತಿ: x. 98-1-3),

When with the second (stanza) of this hymn Jatavedas had informed him (ಬೋಧಿತೇ).

ಆಸ್ಯೇ ತೇ ದ್ಯುಮತೀಂ ವಾಚಂ ದಧಾಮಿ ಸ್ತುಹಿ ದೇವತಾಃ ।
ತತಃ ಸೋಽಸ್ಮೈ ದದೌ ಪ್ರೀತೋ ವಾಚಂ ದೇವೀಂ ತಯಾ ಚ ಸಃ ॥ ೮ ॥

ಋಗ್ಭಿಶ್ಚತಸೃಭಿರ್ದೇವಾನ್ ಜಗೌ ವೃಷ್ಟ್ಯರ್ಥಮೇವ ತು ।
ಅಗ್ನಿಂ ಚ ಸೂಕ್ತಶೇಷೇಣ ಕಮ್ಮೆಂದ್ರಂ ಸೂಕ್ತಮುತ್ತರಂ ॥ ೯ ॥

ಇಂದ್ರ ದೃಹ್ಯೇತಿ ವಿಶ್ವೇಷಾಮುದಿತ್ಯೃತ್ವಿಕ್ಸ್ತುತಿಃ ಪರಂ ।
ಶಕ್ತಿಪ್ರಕಾಶನೇನೈಷಾಂ ವಿನಿಯೋಗೋಽತ್ರ ಕೀರ್ತ್ಯತೇ ॥ ೧೦ ॥

8. ಎಲೈ ದೇವಾಪಿಯೇ, ನಿನ್ನ ಮುಖದಲ್ಲಿ (ಬಾಯಿಯಲ್ಲಿ) ಬಹಳ ಪ್ರಕಾಶಮಾನವಾದ (ಅತಿಶಯವಾದ ಶಕ್ತಿಸಾಮರ್ಥ್ಯಗಳುಳ್ಳ) ವಾಕ್ಯವನ್ನು (ಮಂತ್ರವನ್ನು) ಇಡುವೆನು (ಎಂದರೆ ನಿನಗೆ ಉಪದೇಶಿಸುವೆನು) ಆದ್ದರಿಂದ ನೀನು ದೇವತೆಗಳನ್ನು ಸ್ತುತಿಸು ಎಂದನು. ಬೃಹಸ್ಪತಿಯು ಸಂತುಷ್ಟನಾಗಿ ದೇವಾಪಿಗೆ ವೃಷ್ಟಿವರ್ಷಣಕ್ಕೆ ಸಾಧಕವಾದ ಮಂತ್ರಗಳನ್ನು ಅನುಗ್ರಹಿಸಿದನು. ಆ ಮಂತ್ರಸಾಮರ್ಥ್ಯದಿಂದ,

9. ದೇವಾಪಿಯು ನಾಲ್ಕು ಋಕ್ಕುಗಳಲ್ಲಿ (೯೮ ನೇ ಸೂಕ್ತದ ೪-೭ ಋಕ್ಕುಗಳು) ದೇವತೆಗಳನ್ನು ವೃಷ್ಟಿ ವರ್ಷಣಕ್ಕಾಗಿ (ಮಳೆ ಬರುವುದಕ್ಕಾಗಿ) ಪ್ರಾರ್ಥಿಸಿದನು. ಮತ್ತು ಸೂಕ್ತದ ಉಳಿದ ಮುಂದಿನ ಋಕ್ಕುಗಳಲ್ಲಿ (೮-೧೨) ಅಗ್ನಿಯನ್ನು ಸ್ತುತಿಸಿದನು. **ಕಂ ನಶ್ಚಿತ್ರಂ** ಎಂಬ ಮುಂದಿನ ಸೂಕ್ತದಲ್ಲಿ (೯೯) ಇಂದ್ರನನ್ನು ಸ್ತುತಿಸಲಾಗಿದೆ.

10. **ಇಂದ್ರ ದೃಹ್ಯ ಮಘವನ್** ಎಂಬ ೧೦೦ ನೇ ಸೂಕ್ತದಲ್ಲಿ ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ. **ಉದ್ಬುಧ್ಯಧ್ವಂ** ಎಂಬ ೧೦೧ ನೇ ಸೂಕ್ತದಲ್ಲಿ ಋತ್ವಿಕ್ಕುಗಳನ್ನು ಪ್ರಶಂಸಿಸಲಾಗಿದೆ. ಈ ಋತ್ವಿಕ್ಕುಗಳ ಶಕ್ತಿಸಾಮರ್ಥ್ಯಗಳನ್ನು ಪ್ರಕಟಿಸುವುದಕ್ಕಾಗಿ ಕರ್ಮಗಳ ವಿಯೋಗವನ್ನೂ ಸ್ತುತಿಸಲಾಗಿದೆ (ಹೇಳಲಾಗಿದೆ).

8. 'I will place brilliant speech in your mouth : praise the Gods,'

then he (Brihaspati) being pleased bestowed on him (Devapi) divine Speech ; and therewith·

9. he in four stanzas (x. 98-4-7) sang (in praise of) the gods with a view to rain only, and Agni with the remainder of the hymn (8-12). The next hymn ' whom ?' (ಕಂ x. 99) is addressed to Indra.

10. ' O Indra, stand fast ' (ಇಂದ್ರ ದೃಹ್ಯ : x. 100) is to the all (gods) : the following one, ' Awake ' (ಉತ್ : x. 101), is (in) praise of the priests : the application of rites (ವಿನಿಯೋಗ) is here proclaimed by setting forth the powers of these (priests).

ಪ್ರೇತೀತಿಹಾಸಸೂಕ್ತಂ ತು ಮನ್ಯತೇ ಶಾಕಟಾಯನಃ ।
ಯಾಸ್ಕೋ ದ್ರೌಘಣಮೈಂದ್ರಂ ವಾ ವೈಶ್ವದೇವಂ ತು ಶೌನಕಃ ॥೧೧॥
ಅಜಾವನೇನ ಭಾರ್ಮ್ಯಶ್ವ ಇಂದ್ರಾಸೋಮೌ ತು ಮುದ್ಗಲಃ ।
ಅಜಯದ್ವೃಷಭಂ ಯುಕ್ತ್ವಾ ಐಂದ್ರಂ ಚ ದ್ರುಘಣಂ ರಥೇ ॥೧೨॥
ಯುಧ್ಯನ್ ಸಂಖ್ಯೇ ಜಯಂ ಪ್ರೇಪ್ಸುರೈಂದ್ರೋಽಪ್ರತಿರಥೋ ಜಗೌ ।
ಆಶುರೈಂದ್ರಮಪ್ವಾ ದೇವೀ ಅಮೀಷಾಮಿತ್ಯೃಚಿ ಸ್ತುತಾ ॥ ೧೩ ॥
ಚತುರ್ಥೀ ಬಾರ್ಹಸ್ಪತ್ಯಾ ಸ್ಯಾನ್ನಾಕುಲೇ ಚ ಮಹಾನಿತಿ ।

**೧೦೨-೧೦೩ ನೇ ಸೂಕ್ತಗಳು ; ನಕುಲಋಷಿಯ ಖಿಲಮಂತ್ರಗಳು**

11. **ಪ್ರ ತೇ ರಥಂ** ಎಂಬ ೧೦೨ ನೇ ಸೂಕ್ತದಲ್ಲಿ ಒಂದು ಇತಿಹಾಸವು ಉಕ್ತವಾಗಿದೆಯೆಂದು ಶಾಕಟಾಯನರು ಹೇಳುವರು. ಯಾಸ್ಕರು ದ್ರುಘಣ ಅಥವಾ ಇಂದ್ರನನ್ನು ಈ ಸೂಕ್ತದಲ್ಲಿ ಸ್ತುತಿಸಲಾಗಿದೆಯೆಂದೂ, ಶೌನಕರು ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆಯೆಂದೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು.

12. ಭರ್ಮ್ಯಶ್ವಪುತ್ರನಾದ ಮುದ್ಗಲನೆಂಬುವನು ಇಂದ್ರನಿಗೆ ಸೇರಿದ ವೃಷಭವನ್ನೂ, ದ್ರುಘಣವನ್ನೂ ತನ್ನ ರಥಕ್ಕೆ ಹೂಡಿ ಇಂದ್ರಾಸೋಮರನ್ನು ಸ್ಪರ್ಧೆಯಲ್ಲಿ ಗೆದ್ದನೆಂಬ ವಿಷಯವನ್ನು ಈ ಸೂಕ್ತದಲ್ಲಿ ಹೇಳಲಾಗಿದೆ.

13. ಅಪ್ರತಿರಥ ಐಂದ್ರನೆಂಬುವನನು ಯುದ್ಧಮಾಡುವಾಗ ಜಯಪ್ರಾಪ್ತಿಗಾಗಿ ಈ ಸೂಕ್ತವನ್ನು ಪಠಿಸಿರುವನು. **ಆಶುಃ ಶಿಶಾನಃ** ಎಂಬ ಸೂಕ್ತಕ್ಕೆ (೧೦೩) ಇಂದ್ರನು ದೇವತೆಯು ; ಆದರೆ **ಅಮೀಷಾಂ ಚಿತ್ತಂ** ಎಂಬ ಹನ್ನೆರಡನೆಯ ಋಕ್ಕಿನಲ್ಲಿ **ಅಪ್ವಾ** ಎಂಬ ದೇವತೆಯನ್ನು ಸ್ತುತಿಸಲಾಗಿದೆ.

14. ಈ ಸೂಕ್ತದ ನಾಲ್ಕನೆಯ ಋಕ್ಕಿಗೆ ಬೃಹಸ್ಪತಿಯು ದೇವತೆಯು. ಮತ್ತು ನಕುಲಋಷಿಯ ಖಿಲಮಂತ್ರಗಳಲ್ಲಿ **ಮಹಾನ್** ಎಂಬ ಮಂತ್ರಕ್ಕೂ ಬೃಹಸ್ಪತಿಯೇ ದೇವತೆಯು. ಮುಂದಿನ **ಪ್ರೇತಾ** ಎಂದು ಮೊದಲಾಗುವ

**3. Deities of RV. x. 102. 103. Khilas of Nakula.**

11. 'Forth' (ಪ್ರ : x. 102) Sakatayana considers a narrative hymn: Yaska (thinks) that is addressed to the Mallet (ದ್ರುಘಣ) or to Indra : but Saunaka, that it is addressed to the All-gods.

12. By this (hymn) Mudgala Bharmyasva in a contest overeame Indra and Soma, having yoked a bull and a Lallet belonging to Indra, to his chariot.

13. Aprathiratha Aindra (ಅಪ್ರತಿರಥ ಐಂದ್ರ) desiring victory when fighting in battle sang (the hymn).

'The swift' (ಆಶುಃ : x. 103) is addreesed to Indra : in the stanza 'of those' (ಅಮೀಷಾಂ : 12) the goddess Apva is praised.

14. The fourth (stanza) should be (regarded as) addressed to Brhaspati), as well as (the stanza) 'The great one' (ಮಹಾನ್) in the hymn of Nakula.

ದ್ವ್ಯೃಚೆಸ್ತು ಮಾರುತಃ ಪ್ರೇತೇತ್ಯೈಂದ್ರೀ ವಾ ಬ್ರಹ್ಮ ಯತ್ಪರಂ || ೧೪ ||
ತತ್ರಾನಿರುಕ್ತಸೂಕ್ತಾದಾವೃಗೇಕಾ ಸೂರ್ಯಮರ್ಚತಿ |
ಘರ್ಮಪರಾಶ್ಚತಸ್ರಸ್ತು ಸವಿತಾರಮಭೀತಿ ಯಾ || ೧೫ ||
ಸೂಕ್ತಶೇಷಸ್ಯ ಷಳೃಚಃ ಸೂರ್ಯಾಚಂದ್ರಮಸಾ ಸಹ |
ತುಷ್ಟಾವೇಂದ್ರಮಸಾವೀತಿ ಅಷ್ಟಕೋಽಸ್ಮಾತ್ಪರೇಣ ತು || ೧೬ ||
ಕೌತ್ಸಃ ಕದಾ ವಸೋ ಸೂಕ್ತಂ ದುರ್ಮಿತ್ರೋ ನಾಮ ನಾಮತಃ |
ಸುಮಿತ್ರಶ್ಚೈವ ನಾಮ ಸ್ಯಾದ್ಗುಣಾರ್ಥಮಿತರತ್ಪದಂ || ೧೭ ||

ಎರಡು ಋಕ್ಕುಗಳಲ್ಲಿ (೧೩ನೇ ಋಕ್ಕು ಮತ್ತು ಖಿಲಮಂತ್ರದ ಒಂದು ಋಕ್ಕು) ಮರುದ್ದೇವತೆಗಳನ್ನು ಸ್ತುತಿಸಲಾಗಿದ್ದರೂ ಮೊದಲನೇ **ಪ್ರೇತಾ** (೧೩) ಎಂಬ ಋಕ್ಕಿಗೆ ಇಂದ್ರನೂ ವಿಕಲ್ಪವಾಗಿ ದೇವತೆಯು. ಬ್ರಹ್ಮ ಎಂದು ಪ್ರಾರಂಭವಾಗುವ ಮುಂದಿನ ಸೂಕ್ತದಲ್ಲಿ (ಖಿಲಸೂಕ್ತ).

15. ಪ್ರಾರಂಭದಲ್ಲಿ ಸೂಕ್ತದ ದೇವತೆಗಳನ್ನು ಸ್ಪಷ್ಟವಾಗಿ ನಿರ್ದೇಶಿಸಿಲ್ಲವಾದರೂ ೧ನೇ ಋಕ್ಕಿಗೆಸೂರ್ಯನೂ, **ಅಭಿ**ಎಂಬ ೪ನೇ ಋಕ್ಕಿಗೆ ಸವಿತೃವೂ ದೇವತೆಗಳು; ಮತ್ತು೧-೪ಋಕ್ಕುಗಳಿಗೆ ಘರ್ಮಪಾತ್ರೆಗಳ ಸಂಬಂಧವೂ ಇರುವುದು. [ಈ ಖಿಲಸೂಕ್ತವು ಯಾವುದು ಎಂಬುದು ಸ್ಪಷ್ಟವಾಗಿಲ್ಲ. ಖಿಲಸೂಕ್ತಗಳ ಪಟ್ಟಿಯಲ್ಲಿ ಈ ಸೂಕ್ತವಿರುವುದಿಲ್ಲ].

### ೧೦೪ ೧೦೬ ಸೂಕ್ತಗಳು; ಭೂತಾಂಶಕಾಶ್ಯಪ

16. ಈ ಸೂಕ್ತದ (ಖಿಲಸೂಕ್ತದ) ಉಳಿದ ಆರು ಋಕ್ಕುಗಳಲ್ಲಿ ಸೂರ್ಯಚಂದ್ರರನ್ನು ಒಟ್ಟಿಗೆ ಸ್ತುತಿಸಲಾಗಿದೆ. **ಅಸಾವಿ ಸೋಮಃ** ಎಂಬ ೧೦೪ ನೇ ಸೂಕ್ತದಲ್ಲಿ ಅಷ್ಟಕನೆಂಬ ಋಷಿಯು ಇಂದ್ರನನ್ನು ಸ್ತುತಿಸಿದಾನೆ.

17. ಕುತ್ಸಋಷಿಯ ವಂಶದವನಾದ ದುರ್ಮಿತ್ರ ಅಥವಾ ಸುಮಿತ್ರನೆಂಬುವನು **ಕದಾ ವಸೋ** ಎಂಬ ೧೦೫ ನೇ ಸೂಕ್ತದಲ್ಲಿ ಇಂದ್ರನನ್ನು ಸ್ತುತಿಸಿದಾನೆ. ಈ ಋಷಿಯ ಹೆಸರು ಸುಮಿತ್ರನೆಂದಿರಬಹುದು. ದುರ್ಮಿತ್ರ ಎಂಬ ಶಬ್ದವು ಅವನ ಸ್ವಭಾವ (ಗುಣ) ವನ್ನು ತಿಳಿಸಬಹುದು.

Now there is a couplet addressed to the Maruts, ‘ Advance ’ (ಪ್ರೇತ :x. I03-13), the first staaza being optionally addressed to Indra. (The hymn) which follows (begins) ‘ Brahma ’.

15. In it, at the beginning of the hymn, where no deity is specified (ಅನಿರುಕ್ತ), one stanza (1) adores the Sun, that which (begins) ‘ Unto ’ (ಅಭಿ : 4), Savitr, while the (first) four are closely connected with the couldron (ಘರ್ಮಪರಾಃ :).

### 4. Deities of RV. x. 104-105. Bhutamsa Kasyapa : RV. 106.

16. The six stanzas of the rest of the hymn (adore) Sun and Moon together.

Now with the (hymn) which comes after this (beginning) ‘ It has been pressed ’ (ಅಸಾವಿ : x. 104) Astaka praised Indra.

17. The descendant of Kutsa, by name Durmitra, (saw) the hymn ‘ when, Glorious One ? ’ (ಕದಾ ವಸೋ : x. 105). Sumitra may also be his name, (while) the other word (Durmitra) would express an attribute (ಗುಣ).

ಭೂತಾಂಶಸ್ತು ಪ್ರಜಾಕಾಮಃ ಕರ್ಮಾಣಿ ಕೃತವಾನ್ಪುರಾ ।
ನ ಹಿ ಲೇಭೇ ಪ್ರಜಾಃ ಕಾಶ್ಚಿತ್ಕಾಶ್ಯಪೋ ಮುನಿಸತ್ತಮಃ ॥ ೧೮ ॥
ಉವಾಚ ಭಾರ್ಯಾ ಭೂತಾಂಶಂ ಸುತಾನಿಚ್ಛಸಿ ಯಾವತಃ ।
ತಾವತೋ ಜನಯಿಷ್ಯಾಮಿ ದೇವತಾ ದ್ವಂದ್ವಶಃ ಸ್ತುಹಿ ॥ ೧೯ ॥
ತಮಭ್ಯಯುಸ್ತು ಸರ್ವಾಣಿ ದ್ವಂದ್ವಾನಿ ಸ್ತುತಿಕಾಮ್ಯಯಾ ।
ತಾನ್ಯವೇಕ್ಷ್ಯಾಥ ತಚ್ಚಕ್ರೇ ನಾಸತ್ಯೌ ಸೂಕ್ತಭಾಗಿನೌ ॥ ೨೦ ॥
ತದೇತದಂತತೋ ಭಾವಾದಾಶ್ವಿನಂ ಸೂಕ್ತಮುಚ್ಯತೇ ।
ನ ಹ್ಯಸ್ಮಿನ್ದೇವತಾಲಿಂಗಂ ಪ್ರಾಗನ್ತ್ಯಾದ್ದೃಶ್ಯತೇ ಪದಾತ್ ॥ ೨೧ ॥

18. ಪೂರ್ವದಲ್ಲಿ ಕಶ್ಯಪವಂಶದ ಭೂತಾಂಶನೆಂಬ ಋಷಿಯು ತನಗೆ ಮಕ್ಕಳಾಗಬೇಕೆಂಬ ಅಪೇಕ್ಷೆಯಿಂದ ಅನೇಕ ಯಜ್ಞಾದಿಕರ್ಮಗಳನ್ನು ಮಾಡಿದನು. ಆದರೂ ಈ ಋಷಿಶ್ರೇಷ್ಠನಿಗೆ ಮಕ್ಕಳಾಗಲಿಲ್ಲ.

19. ಆಗ ಅವನ ಪತ್ನಿಯು ಭೂತಾಂಶಋಷಿಯನ್ನುದ್ದೇಶಿಸಿ—ಎಲೈ ಋಷಿಶ್ರೇಷ್ಠನೇ, ನಿನಗೆ ಎಷ್ಟು ಮಕ್ಕಳು ಬೇಕಾದರೂ ಅಷ್ಟು ಮಕ್ಕಳನ್ನು ನಾನು ಹೆರುವೆನು. ಆದ್ದರಿಂದ ನಿನಗೆ ಮಕ್ಕಳಾಗುವುದಕ್ಕಾಗಿ ಇಬ್ಬಿಬ್ಬರು ದೇವತೆಗಳನ್ನು ಒಟ್ಟಾಗಿ ಸ್ತುತಿಸು ಎಂದಳು.

20. ಈ ವಿಷಯವನ್ನು ತಿಳಿದು ದೇವತೆಗಳಲ್ಲಿ ಇಬ್ಬಬ್ಬರಾಗಿರುವವರೆಲ್ಲರೂ ತಮ್ಮನ್ನು ಸ್ತುತಿಸಬೇಕೆಂಬ ಇಚ್ಛೆಯಿಂದ ಇವನ ಬಳಿಗೆ ಬಂದರು. ಆ ದ್ವಂದ್ವದೇವತೆಗಳನ್ನು ನೋಡಿ ಋಷಿಯು ೧೦೬ ನೇ ಸೂಕ್ತದಲ್ಲಿ ಸ್ತುತಿಸಿರುವನು. ಆದರೆ ಈ ಸೂಕ್ತಕ್ಕೆ ಅಶ್ವಿನೀದೇವತೆಗಳೇ ಮುಖ್ಯದೇವತೆಯು.

21. ಈ ೧೦೬ ನೇ ಸೂಕ್ತದಲ್ಲಿ ಯಾವ ದೇವತೆಯನ್ನು ಸ್ತುತಿಸಲಾಗಿದೆಯೆಂಬ ವಿಷಯವು ಕಡೆಯತನಕ ವ್ಯಕ್ತವಾಗಿಲ್ಲ. ಸೂಕ್ತದಲ್ಲಿರುವ ಹೆಸರು ಮೊದಲಾದ ಲಕ್ಷಣಗಳಿಂದ ದೇವತೆಯನ್ನು ನಿರ್ಧರಿಸುವಂತಿಲ್ಲ. ಸೂಕ್ತದ ಕೊನೆಯ ಋಕ್ಕಿನ (೧೧) ಕೊನೆಯ ಪಾದದಲ್ಲಿ **ಅಶ್ವಿನೋಃ** ಎಂಬ ಶಬ್ದಪ್ರಯೋಗವಿರುವುದರಿಂದ ಈ ಸೂಕ್ತದಲ್ಲಿ ಅಶ್ವಿನೀದೇವತೆಗಳನ್ನೇ ಮುಖ್ಯವಾಗಿ ಸ್ತುತಿಸಲಾಗಿದೆಯೆಂದು ಹೇಳಬೇಕಾಗಿರುವುದು.

18. Now Bhutamsa Kasyapa, being desirous of offspsing, in dnys of old performed rites ; for this most excelledt of sages had not obtained any children,

19. His wife said to Bhutamsa : ‘ I will bear as many sons as you wish : (only) praise the gods in pairs.’ (ದ್ವಂದ್ವಶಃ)

29. Now all pairs came to him from desire of praise. Observing them he did so (praise them in x. 106) : the Asvins own the hymn (ಸೂಕ್ತಭಾಗಿನ್).

**5. RV. x. 107. Story of Sarama and the Panis. RV. x. 108.**

21. This same hymn (x. 106) is stated to be addressed to the Asvins because (their) occurrenee (ಭಾವ) at the end. For in this hymn the eharacteristic (name) of the deity does not appear till the last verse (ಪಾದ).

ಸೂಕ್ತೇನ ತು ಪರೇಣಾತ್ರ ಸ್ವಯಮಾವಿರಭೂದಿತಿ ।
ಆತ್ಮಾನಮೇವ ತುಷ್ಟಾವ ಪ್ರಾಜಾಪತ್ಯಾಥ ದಕ್ಷಿಣಾ ॥ ೨೨ ॥
ದಾತೄನತ್ರ ಸ್ತುತಾನೇಕೇ ದಕ್ಷಿಣಾನಾಂ ವದಂತಿ ತು ।
ದಾತೃತ್ವಾದ್ದಕ್ಷಿಣಾನಾಂ ಚ ಭೋಜ್ಯಾಶ್ಚ ತಸೃಭಿಃ ಸ್ತುತಾಃ ॥ ೨೩ ॥
ಅಸುರಾಃ ಪಣಯೋ ನಾಮ ರಸಾಪಾರನಿವಾಸಿನಃ ।
ಗಾಸ್ತೇಽಪಜಹ್ರುರಿಂದ್ರಸ್ಯ ನ್ಯಗೂಹಂಶ್ಚ ಪ್ರಯತ್ನತಃ ॥ ೨೪ ॥
ಬೃಹಸ್ಪತಿಸ್ತಥಾಪಶ್ಯದ್ದೃಷ್ಟ್ವೇಂದ್ರಾಯ ಶಶಂಸ ಚ ।
ಪ್ರಾಹಿಣೋತ್ತತ್ರ ದೂತ್ಯೇಽಥ ಸರಮಾಂ ಪಾಕಶಾಸನಃ ॥ ೨೫ ॥

22. **ಆವಿರಭೂತ್** ಎಂಬ ಮುಂದಿನ ೧೦೭ ನೇ ಸೂಕ್ತದಲ್ಲಿ **ದಕ್ಷಿಣಾ ಪ್ರಾಜಾಪತ್ಯಾ** ಎಂಬ ದೇವತೆಯನ್ನು ಸ್ತುತಿಸಲಾಗಿದೆ. ಈ ಸೂಕ್ತಕ್ಕೆ ಆಂಗಿರಸವಂಶದ ದಿವ್ಯನೆಂಬುವನು ಋಷಿಯಾಗಿದ್ದರೂ ಇವನ ಜತೆಗೆ **ದಕ್ಷಿಣಾ ಪ್ರಾಜಾಪತ್ಯಾ** ಎಂಬ ದೇವತೆಯೂ ಈ ಸೂಕ್ತಕ್ಕೆ ಋಷಿಯೆಂದು ಹೇಳಲ್ಪಡುವುದು. ಈ **ದಕ್ಷಿಣಾ ಪ್ರಾಜಾಪತ್ಯಾ** ಎಂಬ ದೇವತೆಯು ಈ ಸೂಕ್ತದಲ್ಲಿ ತನ್ನನ್ನೇ ಸ್ತುತಿಸಿರುವುದನ್ನು ಗಮನಿಸಬಹುದು.

23. ಈ ಸೂಕ್ತದಲ್ಲಿ ಯಜ್ಞಾದಿಕರ್ಮಗಳಲ್ಲಿ ದಕ್ಷಿಣೆಯನ್ನು ಕೊಡತಕ್ಕ ದಾತೃಗಳನ್ನು (ಯಜಮಾನರನ್ನು ?) ಸ್ತುತಿಸಲಾಗಿದೆಯೆಂದು ಕೆಲವರು ಹೇಳುವರು. ಈ ದಾನಕರ್ಮಗಳಲ್ಲಿ **ಭೋಜಾಃ** ಎಂಬ ಉದಾರವಾಗಿ ದಾನ ಮಾಡುವವರೂ ಸೇರಿರುವುದರಿಂದ **ಭೋಜಾಃ** ಎಂಬ ಈ ಉದಾರದಾತೃಗಳನ್ನು ಕೊನೆಯ ನಾಲ್ಕು ಋಕ್ಕುಗಳಲ್ಲಿ (೮-೧೧) ಸ್ತುತಿಸಲಾಗಿದೆ.

**ಪಣಿ ಎಂಬ ಅಸುರರ ಮತ್ತು ಸರಮಾ ಎಂಬ ದೇವಶುನಿಯ ಕಥೆ ; ೧೦೮ ನೇ ಸೂಕ್ತ**

24. ಪೂರ್ವದಲ್ಲಿ ಪಣಿಗಳೆಂಬ ಅಸುರರಿದ್ದರು. ಅವರು **ರಸಾ** ಎಂಬ ನದಿಯ ಆಚೆಯ ದಡದ ಪ್ರದೇಶಗಳಲ್ಲಿ ವಾಸವಾಗಿದ್ದರು. ಇವರು ಒಂದು ಸಮಯದಲ್ಲಿ ಇಂದ್ರನ ಗೋವುಗಳನ್ನು ಅಪಹರಿಸಿಕೊಂಡು ಹೋಗಿ ರಹಸ್ಯಸ್ಥಳದಲ್ಲಿ ಬಚ್ಚಿಟ್ಟರು.

25. ಈ ಪಣಿಗಳು ಗೋವುಗಳನ್ನು ಅಪಹರಿಸಿದ ವಿಷಯವು ಬೃಹಸ್ಪತಿಗೆ ತಿಳಿಯಿತು. ಅವನು ಅದನ್ನು ಇಂದ್ರನಿಗೆ ತಿಳಿಸಿದನು. ಆಗ ಇಂದ್ರನು ತನ್ನ ಬಳಿ ಇದ್ದ **ಸರಮಾ** ಎಂಬ ದೇವಶುನಿಯನ್ನು (ದೇವಲೋಕದ ಹೆಣ್ಣುನಾಯಿ) ದೂತಕಾರ್ಯಾರ್ಥವಾಗಿ ಆ ಪಣಿಗಳ ಬಳಿಗೆ ಕಳುಹಿಸಿದನು.

---

22. Now with the hymn here following, 'There has appeared' (ಆವಿರಭೂತ್ : x 107), Daksina Prajapatya praised hereself.

23. Some, however, say that the givers of sacrifieial fees are here praised ; and that, because they are the givers of sacrificial fees, liberal donors (ಭೋಜಾಃ) are praised with four (stanzas).

24, There were demons called Panis who dwelt on the farther bank of Rasa. These carried of the cows of Indra and hid them away carefully.

25. Brhaspati saw (it was) thus : and having seen it he reported it to Indra. Then the Chastiser of Paka (Indra) dispatched Sarama thither on a message.

ಕಿಮಿತ್ಯೈತ್ರಾಯುಜಾಭಿಸ್ತಾಂ ಪಪ್ರಚ್ಛುಃ ಪಣಯೋಽಸುರಾಃ |
ಕುತಃ ಕಸ್ಯಾಸಿ ಕಲ್ಯಾಣಿ ಕಿಂ ವಾ ಕಾರ್ಯಮಿಹಾಸ್ತಿ ತೇ || ೨೬ ||

ಅಥಾಬ್ರವೀತ್ತಾನ್ಸರಮಾ ದೂತ್ಯೈಂದ್ರೀ ವಿಚರಾಮ್ಯಹಂ |
ಯುಷ್ಮಾನ್ವ್ರಜಂ ಚಾನ್ವಿಷ್ಯಂತೀ ಗಾಶ್ಚೈವೇಂದ್ರಸ್ಯ ಪೃಚ್ಛತಃ || ೨೭ ||

ವಿದಿತ್ವೇಂದ್ರಸ್ಯ ದೂತೀಂ ತಾಮಸುರಾಃ ಪಾಪಚೇತಸಃ |
ಊಚುರ್ಮಾ ಸರಮೇ ಗಾಸ್ತ್ವಮಿಹಾಸ್ಮಾಕಂ ಸ್ವಸಾ ಭವ || ೨೮ ||

ವಿಭಜಾಮೋ ಗವಾಂ ಭಾಗಂ ಮಾಹಿತಾ ಹ ತತಃ ಪುನಃ |

26. ಆ **ಸರಮಾ** ಎಂಬ ದೇವಶುನಿಯು ಪಣಿಗಳ ಬಳಿಗೆ ಹೋದಮೇಲೆ ಆ ನಾಯಿಯನ್ನು ಪಣಿಗಳು **ಕಿಮಿಚ್ಛಂತೀ** ಎಂಬ ೧೦೮ ನೇ ಸೂಕ್ತದ ಮೊದಲನೆಯ ಋಕ್ಕಿನಿಂದ ಪ್ರಶ್ನೆಮಾಡಿದರು, ಮತ್ತು ಈ ಸೂಕ್ತದ ೧, ೩ ಮೊದಲಾದ ಅಸಮಸಂಖ್ಯೆಯ ಋಕ್ಕುಗಳಲ್ಲಿ ಪಣಿಗಳು ಸರಮೆಯನ್ನು ಉದ್ದೇಶಿಸಿ ಹೇಳಿದ ವಾಕ್ಯಗಳಿರುವವು. ಮತ್ತು ಆ ಪಣಿಗಳು ಸರಮೆಯನ್ನು ಕುರಿತು—ಎಲೈ ಶೋಭನಾಂಗಿಯೇ, ನೀನು ಎಲ್ಲಿಂದ ಬಂದಿರುವೆ? ನೀನು ಯಾರ ಬಳಿ ಇರುವೆ ಎಂದರೆ ನಿನ್ನ ಯಜಮಾನನಾರು? ನೀನು ಇಲ್ಲಿಗೆ ಯಾವ ಕೆಲಸಕ್ಕಾಗಿ ಬಂದಿರುವೆ? ಎಂದು ಪ್ರಶ್ನೆಮಾಡಿದರು.

27. ಆ ಸರಮೆಯು ಅವರನ್ನು ಕುರಿತು ಇಂತೆಂದಿತು–ನಾನು ಇಂದ್ರನ ದೂತಳು. ಅವನ ಕಾರ್ಯಾರ್ಥವಾಗಿ ನಾನು ಸಂಚರಿಸುತ್ತಿರುವೆನು. ಇಂದ್ರನ ಗೋವುಗಳು ಅಪಹರಿಸಲ್ಪಟ್ಟಿರುವುದರಿಂದ ಅವನ್ನು ಹುಡುಕಬೇಕೆಂದು ಇಂದ್ರನ ಆಜ್ಞೆಯ ಪ್ರಕಾರ ನಾನು ನಿಮ್ಮ ಕೊಟ್ಟಿಗೆ ಎಲ್ಲಿರುವುದೆಂದು ಹುಡುಕುತ್ತಾ ಇಲ್ಲಿಗೆ ಬಂದಿದ್ದೇನೆ ಎಂದಿತು.

28. ಸರಮೆಯು ಇಂದ್ರನ ದೂತಿಯಾಗಿ ತಮ್ಮಲ್ಲಿಗೆ ಬಂದಿರುವುದನ್ನು ತಿಳಿದು ಆ ಪಾಪಿಷ್ಠರಾದ ಪಣಿಗಳು ಆ ಸರಮೆಗೆ–ಎಲೈ ಸರಮೆಯೇ, ನೀನು ಹಿಂದಕ್ಕೆ ಹೋಗಬೇಡ. ನೀನು ನಮಗೆ ಸಹೋದರಿಯಂತೆ ಇಲ್ಲಿಯೇ ಇದ್ದುಬಿಡು

29. ನಾವು ತಂದಿರುವ ಗೋವುಗಳಲ್ಲಿ ನಿನಗೂ ಒಂದು ಪಾಲನ್ನು (ಭಾಗವನ್ನು) ಕೊಡುವೆವು. ಇನ್ನು ಮೇಲೆ ನೀನು ನಮ್ಮ ವಿಷಯದಲ್ಲಿ ಶತ್ರುಗಳಂತೆ ಇರಬೇಡ. ಎಂದು ಹೇಳಿದರು. ಈ ರೀತಿ ಇವರಿಗೆ ಸಂವಾದವು

### 6. Story of Sarama and the Panis (continued)

26. In the (hymn) 'What'?' (ಕಿಮಿಚ್ಛಂತೀ : x. 108) the Pani demons interrogated her with the uneven stanzas, (saying) 'Whence (do you come)? To whom do you belong, fair one? Or what is your business here?'

27. Then Saramana addressed them: 'I wander about as the messenger of Indra, seeking you and (Your) stall and the cows of Indra who is asking for them.'

28. On learning that she was the messenger of Indra, the wicked demons said: Do not depart, Sarama; be our sister here.

29. Let us divide our share of the cows: be not unfriendly (ahita) henceforth again.'

ಸೂಕ್ತಸ್ಯಾಸ್ಯಾನ್ತ್ಯಯಾ ಚರ್ಚಾಯುಗ್ಮಾಭಿಸ್ತ್ವೇವ ಸರ್ವಶಃ || ೨೯ ||

ಸಾಬ್ರವೀನ್ನಾಹಮಿಚ್ಛಾಮಿ ಸ್ವಸೃತ್ವಂ ವಾ ಧನಾನಿ ವಾ |
ಪಿಬೇಯಂ ತು ಪಯಸ್ತಾಸಾಂ ಗವಾಂ ಯಾಸ್ತಾ ನಿಗೂಹಥ || ೩೦ ||

ಅಸುರಾಸ್ತಾಂ ತಥೇತ್ಯುಕ್ತ್ವಾ ತದಾಜಹ್ರುಃ ಪಯಸ್ತತಃ |
ಸಾ ಸ್ವಭಾವಾಚ್ಚ ಲೌಲ್ಯಾಚ್ಚ ಪೀತ್ವಾ ತತ್ಪಯ ಆಸುರಂ || ೩೧ ||

ಪರಂ ಸಂವನನಂ ಹೃದ್ಯಂ ಬಲಪುಷ್ಟಿಕರಂ ತತಃ |
ಶತಯೋಜನವಿಸ್ತಾರಾಮುತರತ್ತಾಂ ರಸಾಂ ಪುನಃ || ೩೨ ||

ನಡೆಯಿತು. ಈ ಸೂಕ್ತದ ಕೊನೆಯ ಋಕ್ಕಿನಿಂದಲೂ, ಮತ್ತು ಈ ಸೂಕ್ತದ ಇತರ ಅಸಮಸಂಖ್ಯೆಯ ಋಕ್ಕುಗಳಿಂದಲೂ,

30. ಸರಮೆಯು ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸುತ್ತಾ-ಎಲೈ ಪಣಿಗಳೇ, ನನಗೆ ನಿಮ್ಮ ಸಹೋದರಿತ್ವವೂ ಬೇಡ, ನಿಮ್ಮ ಧನವೂ ಬೇಡ ಆದರೆ ನೀವು ಬಚ್ಚಿಟ್ಟಿರುವ ಗೋವುಗಳ ಹಾಲನ್ನು ಪಾನಮಾಡಬೇಕೆಂದು ಬಯಸುವೆನು ಎಂದಿತು.

31. ಅಸುರರು ಹಾಗೆಯೇ ಆಗಲೆಂದು ಹೇಳಿ ಆ ಗೋವುಗಳ ಹಾಲನ್ನು ಆ ಸರಮೆಗೆ ತಂದು ಕೊಟ್ಟರು. ಸರಮೆಯೂ ಸಹ ತನ್ನ ಸ್ವಭಾವಕ್ಕೂ ಆಶೆಗೂ ಅನುಗುಣವಾಗಿ ಅಸುರರು ತಂದುಕೊಟ್ಟ ಹಾಲನ್ನು ಪಾನಮಾಡಿ,

32. ಆಹಾ ! ಈ ಹಾಲು, ಎಷ್ಟುಚೆನ್ನಾಗಿದೆ, ರುಚಿಯಾಗಿದೆ, ಸಂತೋಷ ಮತ್ತು ಬಲ ಪುಷ್ಟಿಪ್ರದವಾಗಿದೆ ಎಂದು ಆ ಹಾಲನ್ನು ಪ್ರಶಂಸೆಮಾಡುತ್ತಾ ನೂರು ಯೋಜನದಷ್ಟು ಅಗಲವಾದ ಆ ರಸಾನದಿಯನ್ನು ಮತ್ತೆ ದಾಟಿ ತನ್ನ ಸ್ವಸ್ಥಾನವನ್ನು ಸೇರಿ ಇಂದ್ರನ ಬಳಿಗೆ ಹೋಯಿತು. ಏಕೆಂದರೆ,

---

And with the last stanza of this hymn (x. 108-11) as well as wit hthe even ones throughout,

30. she said, ' I do not desire either sisterhood (with you) or (your) wealth ; but I should like to drink the milk of those cows which are hiding there.'

**7. Story of Sarama and the Panis (concluded)**

31. The demons saying ' yes ' to her, then brought her the milk. She having, from natural taste and greed, drunk the demons' milk—

32. excellent, charming, delightful, stimulating strength—then again crossed the Rasa, which extend a hundred leagues,

ಯಸ್ಯಾಃ ಪಾರೇ ಪರೇ ತೇಷಾಂ ಪುರಮಾಸೀತ್ಸುದುರ್ಜಯಂ ।
ಪಪ್ರಚ್ಛೇಂದ್ರಶ್ಚ ಸರಮಾಂ ಕಚ್ಚಿದ್ಗಾ ದೃಷ್ಟವತ್ಯಸಿ ॥ ೩೩ ॥

ಸಾ ನೇತಿ ಪ್ರತ್ಯುವಾಚೇಂದ್ರಂ ಪ್ರಭಾವಾದಾಸುರಸ್ಯ ತು ।
ತಾಂ ಜಘಾನ ಪದಾ ಕ್ರುದ್ಧಃ ಉದ್ಗಿರಂತೀ ಪಯಸ್ತತಃ ॥ ೩೪ ॥

ಜಗಾಮ ಸಾ ಭಯೋದ್ವಿಗ್ನಾ ಪುನರೇವ ಪಣೀನ್ಪ್ರತಿ ।
ಪದಾನುಸಾರಿಪದ್ಧತ್ಯಾ ರಥೇನ ಹರಿವಾಹನಃ ॥ ೩೫ ॥

ಗತ್ವಾ ಜಘಾನ ಚ ಪಣೀನ್ ಗಾಶ್ಚ ತಾಃ ಪುನರಾಹರತ್ ।
ತೇಽವದನ್ವೈಶ್ವದೇವಂ ತು ಬ್ರಹ್ಮಜಾಯಾ ಜುಹೂರ್ಜಗೌ ॥ ೩೬ ॥

33. ಆ ರಸಾನದಿಯ ಆಚೆಯ ದಡದಲ್ಲಿ ಆ ಪಣಿಗಳ ಅಭೇದ್ಯವಾದ ಪಟ್ಟಣವಿದ್ದಿತು. ಆದ್ದರಿಂದ ರಸಾನದಿಯನ್ನು ಮತ್ತೆ ದಾಟಿ ಇಂದ್ರನ ಬಳಿಗೆ ಬಂದನಂತರ ಇಂದ್ರನು ಆ ಸರಮೆಯನ್ನು ಕುರಿತು–ಎಲೈ ಸರಮೆಯೇ, ನೀನು ಹೋದ ಕೆಲಸವೇನಾಯಿತು ? ಗೋವುಗಳನ್ನು ಕಂಡು ಬಂದೆಯಾ ? ಎಂದು ಕೇಳಿದನು.

34. ಸರಮೆಯು ಅಸುರರ ಹಾಲನ್ನು ಪಾನಮಾಡಿ ಅದರ ಮದವೇರಿದ್ದರಿಂದ ಉನ್ಮತ್ತಳಾಗಿ ಆ ಗೋವುಗಳನ್ನು ತಾನು ನೋಡಲಿಲ್ಲವೆಂದು ಇಂದ್ರನಿಗೆ ಪ್ರತ್ಯುತ್ತರವೀಯಲು (ಸುಳ್ಳನ್ನು ಹೇಳಲು) ಇಂದ್ರನಿಗೆ ಕೋಪಬಂದು ಆ ಸರಮೆಯನ್ನು ತನ್ನ ಕಾಲಿನಿಂದ ಒದ್ದನು. ಅದರಿಂದ (ಇಂದ್ರನ ಪದಾಘಾತದಿಂದ) ಸರಮೆಯು ತಾನು ಪಾನಮಾಡಿದ್ದ ಹಾಲನ್ನು ಕಕ್ಕುತ್ತಾ,

35. ಭಯದಿಂದ ನಡುಗುತ್ತಾ ಪುನಃ ಪಣಿಗಳ ಬಳಿಗೆ ಹೋಯಿತು. ಆಗ ಇಂದ್ರನು ಆ ಸರಮೆಯ ಕಾಲುಗಳ ಹೆಜ್ಜೆಯ ಗುರುತುಗಳನ್ನೇ ಅನುಸರಿಸಿ, ರಥದಲ್ಲಿ ಕುಳಿತು,

36. ಆ ಪಣಿಗಳಿದ್ದಲ್ಲಿಗೆ ಹೋಗಿ ಅವರನ್ನು ಕೊಂದು ಗೋವುಗಳನ್ನು ಹಿಂದಕ್ಕೆ ತಂದನು.

### ೧೦೦–೧೨೦ ಸೂಕ್ತಗಳ ದೇವತೆಗಳು

**ಬ್ರಹ್ಮಜಾಯಾ ಜುಹೂಃ** ಎಂಬ ಋಷಿದೃಷ್ಟವಾದ **ತೇಽವದನ್** ಎಂಬ ೧೦೯ನೇ ಸೂಕ್ತದಲ್ಲಿ ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ.

---

33. on the farther bank of which was their impregnable stronghold. And Indra asked sarama ‘ You have seen the cows, I hope ? ’

34. But she, under the influence of thc demons’ milk, replied ‘ no ’ to Indra. He, enraged, struck her with his foot. She then, vomitting the milk,

35. went, trembling with fear, back again to the Panis. The Lord of bay Steeds (Indra) on his car, by the track which followed her steps,

### 8. Deities of RV. x. 109-120.

36. went and smote the Pains and brought back the cows.

Now Brahmajaya Juhu sang (the hymn) ‘ They spoke ’ (ತೇಽವದನ್ : x. 109) addressed to the All-gods.

ಜಾಮದಗ್ನ್ಯಂ ಸಮಿದ್ಧೋಽದ್ಯ ಅಪ್ರೀಸೂಕ್ತಮತಃ ಪರಂ ।
ಯುಗಪದ್ವೈ ವ್ರಜಂತಂ ತಂ ವೈರೂಪಾ ಋಷಯಸ್ತ್ರಿಭಿಃ ॥ ೩೭ ॥
ಇಂದ್ರಂ ಪ್ರತಿಜಗುಃ ಸೂಕ್ತೈಃ ಪಣೀನ್ಪ್ರತಿ ಮನೀಷಿಣಃ ।
ವೈಶ್ವದೇವಂ ಪರಂ ಸೂಕ್ತಂ ಘರ್ಮೇತ್ಯೇಕೇಽತ್ರ ತು ಸ್ತುತಾನ್ ॥ ೩೮ ॥
ದೇವಾನಿಂದ್ರಂ ಚ ಮನ್ಯಂತೇ ಛಂದಾಂಸ್ಯಗ್ನಿಂ ಚ ಮಧ್ಯಮಂ ।
ಆಗ್ನೇಯಂ ಚಿತ್ರ ಇತ್ಯೇತಜ್ಜಗಾದರ್ಷಿರುಪಸ್ತುತಃ ॥ ೩೯ ॥
ಪಿಬೇಂದ್ರಂ ಸ್ತೌತಿ ನೇತ್ಯನ್ನಂ ರಾಕ್ಷೋಘ್ನಾಗ್ನೇಯಮುತ್ತರಂ ।

37-38. **ಸಮಿದ್ಧೋ ಅದ್ಯ** ಎಂಬ ಮುಂದಿನ ೧೧೦ನೇ ಸೂಕ್ತವು ಜಮದಗ್ನಿಋಷಿದೃಷ್ಟವಾದ ಆಪ್ರೀ ಸೂಕ್ತವು. ಇಂದ್ರನು ಪಣಿಗಳೆಂಬ ಅಸುರರ ಮೇಲೆ ಯುದ್ಧಕ್ಕೆ ಹೊರಡುತ್ತಿರುವಾಗ ವೈರೂಪಾ ಎಂಬ ಮೂರು ಮಂದಿ ಋಷಿಗಳು (**ವೈರೋಪೋಽಷ್ಟ್ರಾದಂಷ್ಟ್ರ ; ವೈರೂಪೋ ನಭಃಪ್ರಭೇದನಃ ; ವೈರೂಪೋ ಶತ-ಪ್ರಭೇದನಃ** ಎಂಬ ಮೂರು ಮಂದಿ ಋಷಿಗಳು) **ಮನೀಷಿಣಃ** ಎಂದು ಮೊದಲಾಗುವ ಮುಂದಿನ ಮೂರು ಸೂಕ್ತಗಳಲ್ಲಿ (೧೧೧-೧೧೩) ಇಂದ್ರನನ್ನು ಸ್ತುತಿಸಿದಾರೆ. ಮುಂದಿನ **ಘರ್ಮಾ ಸಮಂತಾ** ಎಂಬ ೧೧೪ನೇ ಸೂಕ್ತದಲ್ಲಿ ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ. ಆದರೆ ಈ ಸೂಕ್ತದಲ್ಲಿ,

39. ದೇವತೆಗಳನ್ನೂ, ಇಂದ್ರನನ್ನೂ, ಛಂದಸ್ಸುಗಳನ್ನೂ, ಮಧ್ಯಮಾಗ್ನಿಯನ್ನೂ ಸ್ತುತಿಸಲಾಗಿದೆಯೆಂದು ಕೆಲವರು ಹೇಳುವರು, ಉಪಸ್ತುತನೆಂಬ ಋಷಿಯು **ಚಿತ್ರ ಇತ್** ಎಂಬ ೧೧೫ನೇ ಸೂಕ್ತದಲ್ಲಿ ಅಗ್ನಿಯನ್ನು ಸ್ತುತಿಸಿರುವನು.

40. **ಪಿಬಾ ಸೋಮಂ** ಎಂಬ ೧೧೬ನೇ ಸೂಕ್ತದಲ್ಲಿ ಇಂದ್ರನನ್ನೂ, **ನ ವಾ ಉ ದೇವಾಃ** ಎಂಬ ೧೧೭ನೇ ಸೂಕ್ತದಲ್ಲಿ ಅನ್ನವನ್ನೂ, **ಅಗ್ನೇ ಹಂಸಿ** ಎಂಬ ೧೧೮ನೇ ಸೂಕ್ತದಲ್ಲಿ ರಕ್ಷೋಹಾಗ್ನಿಯನ್ನೂ ಸ್ತುತಿಸಲಾಗಿದೆ. **ಇತಿ ವಾ ಇತಿ** ಎಂಬ ೧೧೯ನೇ ಸೂಕ್ತದಲ್ಲಿ ಐಂದ್ರೋಲಬನೆಂಬ ಋಷಿಯು ಆತ್ಮನನ್ನು (ತನ್ನನ್ನು ಎಂದರೆ ಇಂದ್ರನನ್ನು)

---

37-38. After it follows the Apri hymn of Jamadagni, 'Kindled today' (ಸಮಿದ್ಧೋ ಅದ್ಯ : x. 110).

The Vairupa seers simultaneously with the three hymns (x. III-113) 'Ye Wise ones' (ಮನೀಷಿಣಃ : x. III. I) sang to Indra as he set out against she Panis. The following hymn 'Two caldrons' (ಘರ್ಮಾ; x. 114) is addressed to the All-gods. Some, however, think that here are praised

39. the Gods and Indra, the Metres, and the Middle Agni. The seer Upastuta uttered (the hymn) 'Wondrous' (ಚಿತ್ರ ಇತ್ : x. 115) which is addressed to Agni.

40. 'Drink' (ಪಿಬಾ : x. 116) praises Indra; 'Not' (ನ : x. 117), Food. The next (x. 118) is demon-slaying (and) addressed to Agni. 'So, indeed'

ಇತಿ ವೈ ಲಾಬಮೈಂದ್ರಂ ತದಾಪ್ತ್ಯಾಃ ಷಷ್ಠ್ಯಾಂ ನಿಪಾತಿತಾಃ ॥ ೪೦ ॥
ಪ್ರಾಜಾಪತ್ಯಮಥಾಗ್ನೇಯಂ ವೈನ್ಯಮಿತ್ಯನುಪೂರ್ವಶಃ ।
ವರುಣೇಂದ್ರಾಗ್ನಿಸೋಮಾನಾಮಿಮಂ ನ ಇತಿ ಸಂಸ್ತವಃ ॥ ೪೧ ॥
ಚತಸ್ರಸ್ತ್ವತ್ರ ಸೂಕ್ತಾದಾವಗ್ನಿರಾತ್ಮಸ್ತವಂ ಜಗೌ ।
ಸ್ತುತಃ ಸೋಮಸ್ತು ಷಷ್ಠ್ಯಾ ಚ ನವಮ್ಯಾ ಚ ಪದೈಸ್ತ್ರಿಭಿಃ ॥ ೪೨ ॥
ವಾರುಣ್ಯಸ್ತ್ವಿತರಾಸ್ತಿಸ್ರ ಐಂದ್ರಮೇವೋತ್ತಮಂ ಪದಂ ।
ಅಹಂ ವಾಕ್ಸೂಕ್ತಮರ್ಯಮ್ಣೋ ಮಿತ್ರಸ್ಯ ವರುಣಸ್ಯ ಚ ॥ ೪೩ ॥

ಸ್ತುತಿಸಿರುವನು. **ತದಿದಾಸ** ಎಂಬ ೧೨೦ನೇ ಸೂಕ್ತದಲ್ಲಿ ಇಂದ್ರನನ್ನು ಸ್ತುತಿಸಲಾಗಿದೆ. ಆದರೆ ಈ ೧೨೦ನೇ ಸೂಕ್ತದ ೬ನೇ ಋಕ್ಕಿನಲ್ಲಿ ಆಪ್ತ್ಯಾ ಎಂಬುವರ ಹೆಸರು ಪ್ರಸಂಗವಶದಿಂದ ಸೂಚಿತವಾಗಿದೆ.

**೧೨೧-೧೨೯ ನೇ ಸೂಕ್ತಗಳ ದೇವತೆಗಳು ; ಮೂರು ಖಿಲಸೂಕ್ತಗಳು**

41. ಅನಂತರ ಮುಂದಿನ ೧೨೧ನೇ ಸೂಕ್ತದಲ್ಲಿ ಪ್ರಜಾಪತಿಯನ್ನೂ ಆದರ ಮುಂದಿನ ೧೨೨ನೇ ಸೂಕ್ತದಲ್ಲಿ ಅಗ್ನಿಯನ್ನೂ ಆದರ ಮುಂದಿನ ೧೨೩ನೇ ಸೂಕ್ತದಲ್ಲಿ ವೇನನನ್ನೂ ಸ್ತುತಿಸಲಾಗಿದೆ. ಮುಂದಿನ **ಇಮಂ ನೋ ಅಗ್ನೇ** ಎಂಬ ೧೨೪ನೇ ಸೂಕ್ತದಲ್ಲಿ ವರುಣ, ಇಂದ್ರ, ಅಗ್ನಿ, ಸೋಮ ಎಂಬ ದೇವತೆಗಳನ್ನು ಸ್ತುತಿಸಲಾಗಿದೆ,

42. ಈ ೧೨೪ನೇ ಸೂಕ್ತದ ಪ್ರಾರಂಭದ ನಾಲ್ಕು ಋಕ್ಕುಗಳಲ್ಲಿ (೧-೪) ಅಗ್ನಿಯು ತನ್ನನ್ನೇ ಪ್ರಶಂಸೆ ಮಾಡಿಕೊಂಡಿರುವನು. ಆರನೇ ಋಕ್ಕಿನಲ್ಲಿಯೂ ೯ನೇ ಋಕ್ಕಿನ ಮೂರು ಪಾದಗಳಲ್ಲಿಯೂ ಸೋಮನನ್ನು ಸ್ತುತಿಸಲಾಗಿದೆ.

43. ಮತ್ತು ಈ ೧೨೪ನೇ ಸೂಕ್ತದ ಮೂರು ಋಕ್ಕುಗಳಲ್ಲಿ (೫, ೭, ೮) ವರುಣನನ್ನೂ ೯ನೇ ಋಕ್ಕಿನ ಕೊನೆಯ ಪಾದದಲ್ಲಿ ಇಂದ್ರನನ್ನೂ ಸ್ತುತಿಸಲಾಗಿದೆ. **ಅಹಂ ರುದ್ರೇಭಿಃ** ಎಂಬ ಸೂಕ್ತವು(೧೨೫)ವಾಗ್ದೇವತೆಯನ್ನು ಸ್ತುತಿಸುವ ಸೂಕ್ತವು. ಅರ್ಯಮಾ, ಮಿತ್ರ, ವರುಣ ಎಂಬುವರು.

---

(ಇತಿ ವಾ ಇತಿ : x. 119) is addressed to Laba. 'That' (ತತ್ : x. 120) is addressed to Indra : the Apatyas are incidentally mentioned in the sixth (stanza).

**9. Deities of RV. x. 121-129. Three Khilas.**

41. Then (comes a hymn) addressed to Prajapati (x. 121), one to Agni (x. 122), one to Vena (x. 123) in succession, 'To this our' (ಇಮಂ ನಃ ; x. 124) is (in) praise of Varuna, Indra, Agni, Soma.

42. Now the four stanzas here at the beginning of the hymn (x. 124. 1-4), Agni sang in praise of himself ; but Soma is praised with the sixth (6) and with the ninth in three verses (9).

43. But the remaining three (x. 124. 5, 7,8) are addressed to Varuna while the last verse (9) is addressed to Indra alone. 'I' (ಅಹಂ : x. 125) is a hymn to Vac. To Aryaman, Mitra, and Varuna belongs,

ನ ತಂ ರಾತ್ರ್ಯೈಃ ಪರಂ ಸೂಕ್ತಂ ವೈಶ್ವದೇವಂ ಮಮೇತಿ ಯತ್ ।
ನಮಸ್ತೇ ವೈದ್ಯುತಂ ಸೂಕ್ತಮಾಶೀರ್ವಾದಃ ಪರಂ ತು ಯತ್ || ೪೪ ||

ಯಾಂ ಕಲ್ಪಯಂತಿ ನೋಽರಯಃ ಕೃತ್ಯಾನಾಶನಮಾತ್ಮನಃ ।
ಹಿರಣ್ಯಸ್ತುತಿರಾಯುಷ್ಯಂ ನಾಸದ್ಯತ್ಪರಮೇಷ್ಠಿನಃ || ೪೫ ||

ವದಂತಿ ಭಾವವೃತ್ತಂ ತದ್ಯೋ ಯಜ್ಞ ಇತಿ ಚೋತ್ತರಂ ।
ಅಪೈಂದ್ರಮತ್ರ ತ್ವಾಶ್ವಿನ್ಯೌ ಚತುರ್ಥೀ ಪಂಚಮೀ ಸ್ಮೃತೇ || ೪೬ ||

44. **ನ ತಮಂಹೋ ನ** ಎಂಬ ೧೨೬ನೇ ಸೂಕ್ತಕ್ಕೆ ದೇವತೆಗಳು. ಮುಂದಿನ ೧೨೭ನೇ ಸೂಕ್ತಕ್ಕೆ ರಾತ್ರಿಯು ದೇವತೆಯು ; **ಮಮಾಗ್ನೇ ವರ್ಚಃ** ಎಂಬ ೧೨೮ನೇ ಸೂಕ್ತದಲ್ಲಿ ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ. **ನಮಸ್ತೇ ಅಸ್ತು** ಎಂಬ ಸೂಕ್ತವು (ಖಿಲಸೂಕ್ತ) ಆಶೀರ್ವಾದಾತ್ಮಕವಾಗಿದೆ. ಇದರ ಮುಂದಿನ

45. **ಯಾಂ ಕಲ್ಪಯಂತಿ** ಎಂಬ ಖಿಲಸೂಕ್ತವು (೨೯ನೇ ಖಿಲಸೂಕ್ತ) ಮಾಯಾ ಮಾಟ ಮೊದಲಾದ ಆಭಿಚಾರಿಕಕೃತ್ಯಗಳನ್ನು ನಾಶಮಾಡುವುದಾಗಿದೆ. **ಆಯುಷ್ಯಂ ವರ್ಚಸ್ಯಂ** ಎಂಬ ಖಿಲಸೂಕ್ತದಲ್ಲಿ (೩೭ನೇ ಖಿಲ ಸೂಕ್ತವು) ಹಿರಣ್ಯಾದಿಧನವು ತನಗೆ ಪ್ರಾಪ್ತಿಯಾಗಲೆಂಬುದನ್ನು ಆಶಿಸಲಾಗಿದೆ. **ನಾಸದಾಸೀತ್** ಎಂಬ ೧೨೯ನೇ ಸೂಕ್ತದಲ್ಲಿ ಪರಮೇಷ್ಠಿಯನ್ನು ಸ್ತುತಿಸಲಾಗಿದೆ.

46. ಈ ಸೂಕ್ತವನ್ನು (೧೨೯) ಭಾವವೃತ್ತಸೂಕ್ತವೆಂದು ಹೇಳಲಾಗಿದೆ. ಏಕೆಂದರೆ ಈ ಸೂಕ್ತಕ್ಕೆ ಋಷಿಯೂ ದೇವತೆಯೂ ಒಂದೇ ಆಗಿರುವುದು. ಮುಂದಿನ **ಯೋ ಯಜ್ಞಃ** ಎಂಬ ೧೩೦ನೇ ಸೂಕ್ತಕ್ಕೂ ಅದರ ಮುಂದಿನ **ಅಪ ಪ್ರಾಚಃ** ಎಂಬ ೧೩೧ನೇ ಸೂಕ್ತಕ್ಕೂ ಇಂದ್ರನು ದೇವತೆಯು, ಆದರೆ ಈ ಸೂಕ್ತದ ೪ ಮತ್ತು ೫ನೇ ಋಕ್ಕುಗಳಲ್ಲಿ ಅಶ್ವಿನೀದೇವತೆಗಳು ಸ್ತುತರಾಗಿರುವರೆಂದು ಹೇಳಲಾಗಿದೆ.

---

44. 'Not him' (ನ ತಮಂಹಃ : x. 126). The following hymn is to Ratri (x. 127). That which (begins) 'To me' (ಮಮಾಗ್ನೇ : x. 128) is addressed to the All-gods. The hymn addressed to Lightning 'Obeisance to you' (ನಮಸ್ತೇ) is a benediction. But that which follows,

45. '(The spell) which our foes prepare' (ಯಾಂ ಕಲ್ಪಯಂತಿ ನೋ), is destructive of sorcery. 'Bestowing length of life' (ಆಯುಷ್ಯಂ) is (in) praise of gold for oneself. 'Neither non-being' (ನಾಸದಾಸೀತ್ : x. 129) is to Paramesthin.

### 10. Deties of RV. x. 130-137.

46. They call this (hymn) evolutional (ಭಾವವೃತ್ತ); also the next, 'The sacrifice which' (ಯೋ ಯಜ್ಞಃ : x. 130). 'Away' (ಅಪ : x. 131) is addressed to Indra; here, however, the fourth and the fifth (stanzas 4-5) are traditionally held to be addressed to the Asvins.

**ಮೈತ್ರಾವರುಣಮೀಜಾನಂ ಪ್ರಥಮಾಯಾಮೃಚಿ ಸ್ತುತಾಃ |**
**ಅರ್ಧರ್ಚೇ ದ್ಯೌಶ್ಚ ಭೂಮಿಶ್ಚ ಅಶ್ವಿನೌ ಚೋತ್ತರೇ ತತಃ || ೪೭ ||**

**ಪ್ರೋ ಷ್ವೈಂದ್ರೇ ವೈಶ್ವದೇವ್ಯೃಕ್ ತು ನಕಿರ್ದೇವಾ ಮಿನೀಮಸಿ |**
**ಯಸ್ಮಿನ್ವೃಕ್ಷ ಇತಿ ತ್ವಸ್ಮಿನ್ದ್ಯುಸ್ಥಾನಃ ಸ್ತೂಯತೇ ಯಮಃ || ೪೮ ||**

**ಕೇಶ್ಯಗ್ನಿಂ ಕೈಶಿನಂ ಸೂಕ್ತಮುತ ದೇವಾಃ ಪರಂ ತು ಯತ್ |**
**ದೇವಾನಾಮತ್ರ ಚಾದ್ಯಾ ಸ್ಯಾದ್ವಾತದೇವಸ್ತ್ರೃಚಃ ಪರಃ || ೪೯ ||**

47. **ಈಜಾನಮಿತ್** ಎಂಬ ೧೩೨ ನೇ ಸೂಕ್ತಕ್ಕೆ ಮಿತ್ರಾವರುಣರು ದೇವತೆಗಳು. ಈ ಸೂಕ್ತದ ಮೊದಲನೆಯ ಋಕ್ಕಿನ ಪೂರ್ವಾರ್ಧದಲ್ಲಿ ದ್ಯಾವಾಪೃಥಿವಿಗಳನ್ನೂ ಉತ್ತರಾರ್ಧದಲ್ಲಿ ಅಶ್ವಿನೀದೇವತೆಗಳನ್ನೂ ಸ್ತುತಿಸಲಾಗಿದೆ.

48. **ಪ್ರೋಷ್ವಸ್ಮೈ** ಎಂಬ ೧೩೩ ನೇ ಸೂಕ್ತಕ್ಕೂ ಇದರ ಮುಂದಿನ ೧೩೪ ನೇ ಸೂಕ್ತಕ್ಕೂ ಇಂದ್ರನು ದೇವತೆಯು. ಆದರೆ ೧೩೪ ನೇ ಸೂಕ್ತದ **ನಕೀರ್ದೇವಾ ಮಿನೀಮಸಿ** ಎಂಬ ೭ ನೇ ಋಕ್ಕಿನಲ್ಲಿ ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ. **ಯಸ್ಮಿನ್ವೃಕ್ಷೇ** ಎಂಬ ೧೩೫ ನೇ ಸೂಕ್ತದಲ್ಲಿ ದ್ಯುಸ್ಥಾನದೇವತೆಯಾದ ಯಮನನ್ನು ಸ್ತುತಿಸಲಾಗಿದೆ.

49. **ಕೇಶ್ಯ೧ಗ್ನಿಂ** ಎಂಬ ೧೩೬ ನೇ ಸೂಕ್ತದಲ್ಲಿ **ಕೇಶಿನಃ** ಎಂದು ಹೇಳಲ್ಪಡುವ ಅಗ್ನಿ, ಸೂರ್ಯ, ವಾಯು ಎಂಬ ದೇವತೆಗಳನ್ನು ಸ್ತುತಿಸಲಾಗಿದೆ. **ಉತ ದೇವಾಃ** ಎಂಬ ಮುಂದಿನ ೧೩೭ ನೇ ಸೂಕ್ತದ ಮೊದಲನೇ ಋಕ್ಕಿನಲ್ಲಿ ದೇವತೆಗಳನ್ನು ಸ್ತುತಿಸಲಾಗಿದೆ. ಮುಂದಿನ ಮೂರು ಋಕ್ಕುಗಳಿಗೆ (೨-೪) ವಾತವೆಂಬ ದೇವತೆಯೇ (ವಾಯು) ದೇವತೆಯಾಗಿದೆ.

---

47. 'The sacrificer' (ಈಜಾನಂ : x. 132) is addressed to Mitra-Varuna : in the first stanza Heaven and Earsh are praised in the (first hemistieh (1) and the Asvins in the next.

48. 'Forth, well' (ಪ್ರೋಷ್ವಸ್ಮೈ : x. 133-1) are two (hymns) addressed to Indra (133-134); but the stanza 'Never, O Gods, do we transgress' (ನಕಿರ್ದೇವಾ ಮಿನೀಮಸಿ : x. 134-7) is addressed to the All-gods. In the (hymn) 'Under which tree (ಯಸ್ಮಿನ್ ವೃಕ್ಷೇ : x. 135) the celestial Yama is praised.

49. The hymn 'The Hairy one (bears) Agni' (ಕೇಶ್ಯ೧ಅಗ್ನಿಂ : x. 136) is addressed to the Hairy ones ; in that which follows, 'And, O Gods' (ಉತ ದೇವಾಃ : x. 137), the first stanza (1) should be (regarded as) addressed to the Gods ; the following triplet (2-4) has Vata as its god.

ತ್ರಾಯಂತಾಂ ವೈಶ್ವದೇವ್ಯೃಕ್ ತು ಶೇಷಸ್ತ್ವಬ್ದೈವತಃ ಪರಃ ।
ಸ್ಯಾದೇತದ್ವಿಶ್ವಭೈಷಜ್ಯಂ ರಪಸೋ ವಾ ವಿನಾಶನಂ ॥ ೫೦ ॥

ಭೂಮಿರ್ಲಾಕ್ಷಂ ಪರಂ ಸೂಕ್ತಂ ತವೈಂದ್ರಂ ಸೂಕ್ತಮುತ್ತರಂ ।
ಸೂರ್ಯರಶ್ಮಿರಿತಿ ತ್ವಸ್ಮಿನ್ಸಾವಿತ್ರಃ ಪ್ರಥಮಸ್ತೃಚಃ ॥ ೫೧ ॥

ಆತ್ಮಾ ಸ್ತುತಃ ಪರೋಕ್ಷಸ್ತು ಗಂಧರ್ವೇಣೋತ್ತರೇ ತೃಚೇ ।
ಇಂದ್ರೋ ವೈಷ ನಿಪಾತೇನ ಅಥವಾ ಸೂರ್ಯ ಉಚ್ಯತೇ ॥ ೫೨ ॥

ಸೂಕ್ತೇಽಸ್ಮಿನ್ದೇವತಾಸ್ತಿಸ್ರ ಏತಾ ಏವ ಪ್ರಕೀರ್ತಿತಾಃ ।
ಆಗ್ನೇಯಂ ತ್ವಗ್ನೇ ತವೇತಿ ಅಗ್ನೇ ಅಚ್ಛೇತಿ ಯತ್ಪರಂ ॥ ೫೩ ॥

50. ೧೩೭ ನೇ ಸೂಕ್ತದ **ತ್ರಾಯಂತಾಮಿಹ** ಎಂಬ ೫ ನೇ ಋಕ್ಕಿನಲ್ಲಿ ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ. ಸೂಕ್ತದ ಉಳಿದ ೬–೭ ಋಕ್ಕುಗಳಿಗೆ **ಆಪಃ** ಎಂಬುದು ದೇವತೆಯು (ಅಬ್ದೇವತೆಯು). ಈ ಸೂಕ್ತವು ಖಾಯಿಲೆಗಳನ್ನು ನಾಶಮಾಡುವುದಾಗಿಯೂ ಅಥವಾ ಅಶಕ್ತಿಯನ್ನು ಪರಿಹರಿಸುವ ಸಾಮರ್ಥ್ಯವುಳ್ಳದ್ದಾಗಿಯೂ ಇರುವುದು.

**ಭೂಮಿಃ ಎಂಬ ಖಿಲಸೂಕ್ತ ; ೧೩೮–೧೪೨ ಸೂಕ್ತಗಳ ದೇವತೆಗಳು**

51. **ಭೂಮಿಃ** ಎಂಬ ಖಿಲಸೂಕ್ತವು **ಲಾಕ್ಷ** ಎಂಬ ದೇವತೆಯನ್ನು ಸ್ತುತಿಸುವುದು. ಇದರ ಮುಂದಿನ **ತವ ತ್ಯ ಇಂದ್ರ** ಎಂಬ ೧೩೮ ನೇ ಸೂಕ್ತಕ್ಕೆ ಇಂದ್ರನು ದೇವತೆಯು ; **ಸೂರ್ಯರಶ್ಮಿಃ** ಎಂಬ ೧೩೯ ನೇ ಸೂಕ್ತದ ಮೊದಲ ಮೂರು ಋಕ್ಕುಗಳಿಗೆ (೧–೩) ಸವಿತೃವು ದೇವತೆಯು.

52. ಈ ಸೂಕ್ತದ (೧೩೯) ಮುಂದಿನ ಮೂರು ಋಕ್ಕುಗಳಲ್ಲಿ (೪–೬) ಗಂಧರ್ವನು ಪರೋಕ್ಷವಾಗಿ ತನ್ನನ್ನೇ ಸ್ತುತಿಸಿದ್ದಾನೆ. ಇವನನ್ನೇ ಇಂದ್ರ ಅಥವಾ ಸೂರ್ಯನೆಂದು ಪ್ರಸಂಗವಶದಿಂದ ಇಲ್ಲಿ ಪ್ರಶಂಸಿಸಲಾಗಿದೆ.

53. ಈ ಸೂಕ್ತದಲ್ಲಿ (೧೩೯) ಈ ಮೂರು ದೇವತೆಗಳನ್ನು ಮಾತ್ರವೇ ಸ್ತುತಿಸಲಾಗಿದೆ. **ಅಗ್ನೇ ತವ** ಎಂಬ ೧೪೦ನೇ ಸೂಕ್ತಕ್ಕೆ ಅಗ್ನಿಯು ದೇವತೆಯು. **ಅಗ್ನೇ ಅಚ್ಛ** ಎಂಬ ಮುಂದಿನ ೧೪೧ನೇ ಸೂಕ್ತದಲ್ಲಿ,

50. The stanza 'May they protect' (ತ್ರಾಯಂತಾಂ : x. 137·5) is addressed to the All-gods ; but the remainder (of the hymn) that follows (6-7) has the waters as its divinity. This (hymn) may be considered as containing universal remedies or as destructive of infirmity.

**11. The Khila 'Bhumih.' Deities of RV. x. 138-142**

51. The following hymn, 'The Earth' (ಭೂಮಿಃ), is addressed to Laksa. The next hymn, 'Of you' (ತವ : x. 138), is addressed to Indra. In the (hymn) 'Sun-rayed' (ಸೂರ್ಯರಶ್ಮಿಃ : x.139) the first triplet (1-3) is addressed to Savitr.

52. Now his own self is indirectly (ಪರೋಕ್ಷ) praised by Gandharva in the next triplet (x. 139. 4-6) ; he is spoken of incidentally either as Indra or Surya.

53. In this hymn (x. 139) these three deities only are celebrated. Now 'O Agni, yours' (ಅಗ್ನೇ ತವ : x. 140) is addressed to Agni ; that which follows, 'O Agni, to (us)' (ಅಗ್ನೇ ಅಚ್ಛಾ : x. 141),

**ಆಗ್ನೇಯಂ ವೈಶ್ವದೇವಂ ಚ ಅಯಮಿತ್ಯತ್ರ ತು ದ್ವ್ಯೃಚಾಃ ।**
**ಶಾರ್ಙ್ಗಾಶ್ಚತ್ವಾರ ಋಷಯೋ ಅಗ್ನಿಮಾರ್ಚನ್ಪೃಥಕ್ಪೃಥಕ್** ॥ ೫೪ ॥
**ಆಶ್ವಿನಂ ತ್ಯಂ ಚಿದಿತ್ಯೇತದಯಮೈಂದ್ರಂ ತತಃ ಪರಂ ।**
**ಇಮಾಂ ಖನಾಮೀತಿ ಸೂಕ್ತಮಿಂದ್ರಾಣೀ ಯತ್ಸ್ವಯಂ ಜಗೌ** ॥ ೫೫ ॥
**ತದೌಪನಿಷದಂ ಷಟ್ಕಂ ಭಾವವೃತ್ತಂ ಪ್ರಚಕ್ಷತೇ ।**
**ಉತ್ತಾನಪರ್ಣಾಂ ಪಾಠಾಂ ತು ಸ್ತೌತಿ ಸೂಕ್ತೇ ಮಹೌಷಧಿಂ** ॥ ೫೬ ॥
**ಪತಿಸಂವನನೀ ತ್ವಂತ್ಯಾನ್ಯಾಃ ಸಪತ್ನ್ಯಪನೋದಿಕಾಃ ।**

54. ಅಗ್ನಿಯನ್ನೂ ವಿಶ್ವೇದೇವತೆಗಳನ್ನೂ ಸ್ತುತಿಸಲಾಗಿದೆ. **ಅಯಮಗ್ನೇ** ಎಂಬ ೧೪೨ನೇ ಸೂಕ್ತದಲ್ಲಿ ಶಾರ್ಙ್ಗ ಎಂಬ ನಾಲ್ಕು ಮಂದಿ ಋಷಿಗಳು ಅಗ್ನಿಯನ್ನು ಒಬ್ಬೊಬ್ಬರು ಎರಡೆರಡು ಋಕ್ಕುಗಳಿಂದ ಸ್ತುತಿಸಿರುವರು. (ಜರಿತಾ ೧-೨ ; ದ್ರೋಣಃ ೩-೪ ; ಸಾರಿಸೃಕ್ವಃ ೫-೬ ; ಸ್ತಂಬಮಿತ್ರಃ ೭-೮)

**೧೪೩-೧೫೪ನೇ ಸೂಕ್ತಗಳ ದೇವತೆಗಳು ; ಖಿಲಸೂಕ್ತ; ಮೇಧಾಸೂಕ್ತ.**

55. **ತ್ಯಂ ಚಿತ್** ಎಂಬ ೧೪೩ನೇ ಸೂಕ್ತದಲ್ಲಿ ಅಶ್ವಿನೀದೇವತೆಗಳನ್ನು ಸ್ತುತಿಸಲಾಗಿದೆ. **ಅಯಂ ಹಿ ತೇ** ಎಂಬ ಅದರ ಮುಂದಿನ ೧೪೪ನೇ ಸೂಕ್ತಕ್ಕೆ ಇಂದ್ರನು ದೇವತೆಯು ; **ಇಮಾಂ ಖನಾಮಿ** ಎಂಬ ೧೪೫ನೇ ಸೂಕ್ತವನ್ನು ಇಂದ್ರಾಣಿಯೇ ಪಠಿಸಿ ಸ್ತುತಿಸಿದಾಳೆ.

56. ಈ ಸೂಕ್ತವು ಆರು ಋಕ್ಕುಗಳುಳ್ಳ ಉಪನಿಷತ್ ಭಾವವೃತ್ತ ಸೂಕ್ತವೆಂದು ಹೇಳಲ್ಪಡುವುದು. ಈ ಸೂಕ್ತದಲ್ಲಿ ಋಷಿಯು (ಇಂದ್ರಾಣಿಯು) ಮಹೌಷಧಿರೂಪವಾದ ಲತೆಗಳ ಉದ್ದವಾದ ಅಥವಾ ವಿಸ್ತೃತವಾದ ಎಲೆಗಳನ್ನೂ ಕಾಂಡವನ್ನೂ ಅವುಗಳ ಶಕ್ತಿಯನ್ನೂ ವರ್ಣಿಸಿ ಸ್ತುತಿಸಿರುವಳು.

57. ಈ ಸೂಕ್ತದ ಕೊನೆಯ ಋಕ್ಕಿನಲ್ಲಿ (೬) ಪತಿಯ ಪ್ರೇಮವನ್ನು ಪತ್ನಿಗೆ ದೊರಕಿಸಿಕೊಡುವುದಾಗಿ ಹೇಳಿದೆ. ಮತ್ತು ಉಳಿದ ಋಕ್ಕಗಳಲ್ಲಿ ಸಪತ್ನಿಯ (ಸವತಿ) ಬಾಧೆಯನ್ನು ತಡೆಗಟ್ಟುವ ವಿಷಯದ ವಿವರಣೆ ಇದೆ.

54. is addressed to Agni and to the All-gods. Now in the (hymn) 'This' (ಅಯಂ : x. 142), the four Sarngas, as seers of couplets (ದ್ವ್ಯೃಚಾಃ), adored Agni severally.

**12. Deities of RV. z. 143-154. Khila : Medhasukta**

55 The (hymn) 'Him indeed' (ತ್ಯಂ ಚಿತ್ : x. 143) is addressed to the Asvins. 'This' (ಅಯಂ : x. 144), following after that, is addressed to Indra. 'This (plant) I dig' (ಇಮಾಂ ಖನಾಮಿ : x. 145), the hymn which Indrani herself sang,

56, they declare to be an esoteric(ಔಪನಿಷದ)evolutional (ಭಾವವೃತ್ತ) hymn of six stanzas.

Now in (this) hymn she (the seer) praises the potent herb with its extended leaves.

57. Now the last stanza (x. 145-6) is intended to win the love of a husband, while the rest are meant to repel a rival wife.

ಅರಣ್ಯಾನೀತ್ಯರಣ್ಯಾನ್ಯಾ ಸ್ತುತಿರೈಂದ್ರೇ ಶ್ರಮುತ್ತರೇ || ೫೭ ||
ಸಾವಿತ್ರಂ ಸವಿತಾ ಯಂತ್ರೈಃ ಸಮಿದ್ಧಶ್ಚಿತ್ಸಮಿಧ್ಯಸೇ |
ಆಗ್ನೇಯಂ ಶ್ರದ್ಧಯಾ ಶ್ರಾದ್ಧಂ ಮೇಧಾಸೂಕ್ತಮತಃ ಪರಂ || ೫೮ ||
ಆಗ್ನೇಯಮಾ ಸೂರೇತ್ವೇತಚ್ಛಾಸ ಐಂದ್ರೇ ತತಃ ಪರೇ |
ಸೋಮ ಏಕೇಭ್ಯ ಇತ್ಯೇತದ್ಭಾವವೃತ್ತಂ ಪ್ರಚಕ್ಷತೇ || ೫೯ ||
ಯದರಾಯಿತ್ಯಲಕ್ಷ್ಮೀಘ್ನಂ ತತ್ರ ಚತ್ತೋ ಇತಿ ದ್ವ್ಯೃಚೇ |
ಪ್ರಾಧಾನ್ಯಾದ್ವಾ ನಿಪಾತಾದ್ವಾ ಸ್ತೂಯತೇ ಬ್ರಹ್ಮಣಸ್ಪತಿಃ || ೬೦ ||

**ಅರಣ್ಯಾನೀ** ಎಂಬ ೧೪೬ನೇ ಸೂಕ್ತದಲ್ಲಿ ಅರಣ್ಯಾನೀ ಎಂಬ ದೇವತೆಯನ್ನು ಸ್ತುತಿಸಲಾಗಿದೆ. **ಶ್ರತ್ತೇ ದಧಾಮಿ** ಎಂಬ ಮುಂದಿನ ೧೪೭ನೇ ಸೂಕ್ತಕ್ಕೂ ಅದರ ಮುಂದಿನ ೧೪೮ನೇ ಸೂಕ್ತಕ್ಕೂ ಇಂದ್ರನು ದೇವತೆಯು.

58. **ಸವಿತಾ ಯಂತ್ರೈಃ** ಎಂಬ ೧೪೯ ನೇ ಸೂಕ್ತಕ್ಕೆ ಸವಿತೃವು ದೇವತೆಯು; **ಸಮಿದ್ಧಶ್ಚಿತ್ ಸಮಿಧ್ಯಸೇ** ಎಂಬ ೧೫೦ ನೇ ಸೂಕ್ತಕ್ಕೆ ಅಗ್ನಿಯು ದೇವತೆಯು; **ಶ್ರದ್ಧಯಾಗ್ನಿಃ** ಎಂಬ ೧೫೧ ನೇ ಸೂಕ್ತದಲ್ಲಿ ಶ್ರದ್ಧಾ ಎಂಬ ಭಾವನಾದೇವತೆಯ ಸ್ತುತಿ ಇದೆ. ಅದಾದನಂತರ (**ಮೇಧಾಂ ಮಹ್ಯಂ** ಎಂಬ) ಮೇಧಾಸೂಕ್ತವಿರುವುದು (ಖಿಲಸೂಕ್ತ).

59. **ಆ ಸೂರೇತು** ಎಂಬ ಸೂಕ್ತಕ್ಕೆ (ಖಿಲ) ಅಗ್ನಿಯು ದೇವತೆಯು; **ಶಾಸ ಇತ್ಥಾ** ಎಂಬ ಮುಂದಿನ ೧೫೨ನೇ ಸೂಕ್ತಕ್ಕೂ ಅದರ ಮುಂದಿನ ೧೫೩ನೇ ಸೂಕ್ತಕ್ಕೂ ಇಂದ್ರನು ದೇವತೆಯು. **ಸೋಮ ಏಕೇಭ್ಯಃ ಪವತೇ** ಎಂಬ ೧೫೪ ನೇ ಸೂಕ್ತವು ಭಾವವೃತ್ತವೆಂದು ಹೇಳಲ್ಪಡುವುದು.

**೧೫೫-೧೫೯ ನೇ ಸೂಕ್ತದ ದೇವತೆಗಳು**

60. **ಅರಾಯಿ ಕಾಣೇ** ಎಂಬ ೧೫೫ ನೇ ಸೂಕ್ತವು ಅಲಕ್ಷ್ಮಿಯನ್ನು (ದಾರಿದ್ರ್ಯ, ಹೀನ ಅದೃಷ್ಟ) ನಾಶ ಮಾಡುವುದು. ಈ ಸೂಕ್ತದಲ್ಲಿ **ಚತ್ತೋ ಇತಃ** ಎಂದು ಮೊದಲಾಗುವ ಎರಡು ಋಕ್ಕುಗಳಲ್ಲಿ (೨-೩) ಬ್ರಹ್ಮಣಸ್ಪತಿಯನ್ನು ಪ್ರಧಾನದೇವತೆಯನ್ನಾಗಿ ಅಥವಾ ಪ್ರಸಂಗವಶದಿಂದ ಸ್ತುತಿಸಲಾಗಿರುವುದು.

'O Aranyani, (ಅರಣ್ಯಾನಿ : x. 146) is (in) praise of Aranyani. The nex. two (beginning) 'Faith' (ಶ್ರತ್ : x. 147–148)) are addressed to Indra.

58. 'Savitr with bonds' (ಸವಿತಾ ಯಂತ್ರೈಃ : x. 149) is addressed to Savitrt 'Enkindled even you are fanned' (ಸಮಿದ್ಧಶ್ಚಿತ್ಸಮಿಧ್ಯಸೇ : x. 150) is addressed to Agni. 'With faith' (ಶ್ರದ್ಧಯಾ : x. 151) is addressed to Sraddha. After that follows the hymn of wisdom (ಮೇಧಾಸೂಕ್ತ).

59. (The hymn) 'May the Father come' (ಆ ಸೂರೇತು) is addressed to Agni. Then follow two (152-153) addressed two Indra (beginning) 'A ruler' (ಶಾಸಃ ; x 152-1). The (hymn) 'Soma for some' (ಸೋಮ ಏಕೇಭ್ಯಃ ; x. 154) they declare to be evolutional.

**13. Deities of RV. x. 155-159**

60. 'O Arayi' (ಅರಾಯಿ :155) is destructive of bad luck : in the couplet there 'Driven away' (ಚತ್ತ: x 155. 2-3) Brahmanaspati is praised either as the chief deity or incidentally ;

ಇಂದ್ರಶ್ಚೈವ ಯದಿತ್ಯಸ್ಯಾಂ ವಿಶ್ವೇ ದೇವಾಃ ಪರೀತ್ಯೃಚಿ ।
ಆಗ್ನೇಯಂ ಚಾಗ್ನಿಮಿತ್ಯೇತದ್ವೈಶ್ವದೇವಮಿಮಾ ನು ಕಂ ॥ ೬೧ ॥

ಇಂದ್ರಃ ಪ್ರಾಧಾನ್ಯತಸ್ತತ್ರ ವಿಶ್ವೈರ್ದೇವೈಃ ಸಹ ಸ್ತುತಃ ।
ಆದಿತ್ಯೈಶ್ಚ ಮರುದ್ಭಿಶ್ಚ ತಥಾರೂಪಂ ಹಿ ದೃಶ್ಯತೇ ॥ ೬೨ ॥

ಸೂರ್ಯೋ ನ ಇತಿ ಸೌರ್ಯಂ ತು ಯತ್ತ್ವೇತದುದಸಾವಿತಿ ।
ಪೌಲೋಮೀ ಸ್ವಾನ್ಗುಣಾಂಸ್ತತ್ರ ಸಪತ್ನೀನಾಂ ಚ ಶಂಸತಿ ॥ ೬೩ ॥

ಐಂದ್ರಂ ತೀವ್ರಸ್ಯ ಮುಂಚಾಮಿ ಭೈಷಜ್ಯಂ ಯಕ್ಷ್ಮನಾಶನಂ ।

61. ಈ ಸೂಕ್ತದ **ಯದ್ಧ** ಎಂಬ ನಾಲ್ಕನೇ ಋಕ್ಕಿನಲ್ಲಿ ಇಂದ್ರನನ್ನೂ **ಪರೀಮೇ** ಎಂಬ ೫ ನೇ ಋಕ್ಕಿನಲ್ಲಿ ವಿಶ್ವೇದೇವತೆಗಳನ್ನೂ ಸ್ತುತಿಸಲಾಗಿದೆ. **ಅಗ್ನಿಂ ಹಿನ್ವಂತು** ಎಂಬ ೧೫೬ ನೇ ಸೂಕ್ತದಲ್ಲಿ ಅಗ್ನಿಯನ್ನೂ, **ಇಮಾ ನು ಕಂ** ಎಂಬ ೧೫೭ ನೇ ಸೂಕ್ತದಲ್ಲಿ ವಿಶ್ವೇದೇವತೆಗಳನ್ನೂ ಸ್ತುತಿಸಲಾಗಿದೆ.

62. ಈ ೧೫೭ ನೇ ಸೂಕ್ತದಲ್ಲಿ ವಿಶ್ವೇದೇವತೆಗಳ ಸ್ತುತಿ ಇದ್ದರೂ ಇವರ ಜತೆಯಲ್ಲಿ ಮುಖ್ಯವಾಗಿ ಇಂದ್ರನನ್ನೇ ಸ್ತುತಿಸಲಾಗಿದೆ. ಹಾಗೆಯೇ ಆದಿತ್ಯರನ್ನೂ, ಮರುದ್ದೇವತೆಗಳನ್ನೂ ಸ್ತುತಿಸಲಾಗಿದೆ. ಏಕೆಂದರೆ ಈ ಸೂಕ್ತದ ಲಕ್ಷಣವೇ ಹೀಗಿದೆ.

63. **ಸೂರ್ಯೋ ನೋ ದಿವಸ್ಪಾತು** ಎಂಬ ೧೫೮ ನೇ ಸೂಕ್ತಕ್ಕೆ ಸೂರ್ಯನು ದೇವತೆಯು. ಆದರೆ **ಉದಸೌ ಸೂರ್ಯಃ** ಎಂಬ ೧೫೯ ನೇ ಸೂಕ್ತದಲ್ಲಿ **ಪೌಲೋಮೀ** ಎಂಬುವಳು (ಪುಲೋಮನ ಪುತ್ರಿ) ತನ್ನ ಮತ್ತು ತನ್ನ ಸಪತ್ನಿಯರ (ಸವತಿಯರ) ಗುಣಗಳನ್ನು ಪ್ರಶಂಸೆಮಾಡಿರುವಳು.

**೧೬೦–೧೬೪ ನೇ ಸೂಕ್ತದ ದೇವತೆಗಳು ; ಕಪೋತನೈರ್ಋತನೆಂಬ ಋಷಿ**

64. **ತೀವ್ರಸ್ಯಾಭಿವಯಸಃ** ಎಂಬ ೧೬೦ ನೇ ಸೂಕ್ತಕ್ಕೆ ಇಂದ್ರನು ದೇವತೆಯು ; **ಮುಂಚಾಮಿ** ಎಂಬ

---

61. and Indra (is praised) in the (stanza) 'When' (ಯತ್; x. 155-4), the All-gods in the stanza 'Around' (ಪರಿ : 5). And the (hymn) 'Agni' (ಅಗ್ನಿಂ ; x. 156) is addressed to Agni. 'Now these indeed' (ಇಮಾ ನು ಕಂ : x. 157) is addressed to the All-gods.

62. Indra is, however, here predominantly praised along with the All-gods. and the Adityas and the Maruts. For (the hymn) evidently has this character.

63. Now 'May us the Sun (ಸೂರ್ಯೋ ನಃ : x. 158) is addressed to Surya; but as to the (hymn) 'Aloft that' (ಉದಸೌ : x. 159), Paulomi in it lauds her own virtues and (those) of her co-wives.

**14. Deities of RV. x. 160-164. The seer Kapota Nairrta.**

64. 'Of the potent' (ತೀವ್ರಸ್ಯ : x. 160) is addressed to Indra, 'I release' (ಮುಂಚಾಮಿ : x. 161) is a remedy destructive of consumption (ಯಕ್ಷ್ಮ).

ರಾಜಯಕ್ಷ್ಮಹಣಂ ಸೂಕ್ತಂ ಪ್ರಾಜಾಪತ್ಯಂ ತದುಚ್ಯತೇ || ೬೪ ||
ಐಂದ್ರಾಗ್ನಂ ಮನ್ಯತೇ ಯಾಸ್ಕ ಏಕೇ ಲಿಂಗೋಕ್ತದೈವತಂ |
ರಾಕ್ಷೋಘ್ನಾಗ್ನೇಯಮಿತ್ಯುಕ್ತಂ ಯತ್ತ್ವೇತದ್ಬ್ರಹ್ಮಣೇತಿ ತು || ೬೫ ||
ಸ್ರವತಾಮಪಿ ಗರ್ಭಾಣಾಂ ದೃಷ್ಟಂ ತದನುಮಂತ್ರಣಂ |
ವೈನ್ಯಂ ತು ವೇನಸ್ತತ್ಪಶ್ಯದಕ್ಷೀಭ್ಯಾಂ ಯಕ್ಷ್ಮನಾಶನಂ || ೬೬ ||
ದುಃಸ್ವಪ್ನಘ್ನಮಪೇಹೀತಿ ನಿಪಾತೀಂದ್ರೋಽಗ್ನಿರೇವ ಚ |
ಆಸಿದೃಷಿರ್ದೀರ್ಘತಪಾಃ ಕಪೋತೋ ನಾಮ ನೈರ್ಋತಃ || ೬೭ ||

೧೬೧ ನೇ ಸೂಕ್ತವು ಯಕ್ಷ್ಮ ರೋಗವನ್ನು (ಕ್ಷಯ) ನಾಶಮಾಡುವುದು. ಪ್ರಜಾಪತಿದೇವತಾಕವಾದ ಈ ಸೂಕ್ತಕ್ಕೆ ರಾಜಯಕ್ಷ್ಮವೆಂಬ ಮಹಾವ್ಯಾಧಿಯನ್ನು ನಿವಾರಿಸುವ ಶಕ್ತಿ ಇರುವುದು.

65. ಈ ಸೂಕ್ತದಲ್ಲಿ (೧೬೧) ಇಂದ್ರಾಗ್ನಿಗಳನ್ನು ಸ್ತುತಿಸಲಾಗಿದೆಯೆಂದು ಯಾಸ್ಕರು ಅಭಿಪ್ರಾಯಪಡುವರು. ಮತ್ತೆ ಕೆಲವರು ಈ ಸೂಕ್ತದಲ್ಲಿ ಸೂಚಿತರಾಗಿರುವ ಲಿಂಗೋಕ್ತದೇವತೆಗಳೇ ಈ ಸೂಕ್ತಕ್ಕೆ ದೇವತೆಗಳೆಂದು ಹೇಳುವರು. **ಬ್ರಹ್ಮಣಾಗ್ನಿಃ** ಎಂಬ ೧೬೨ ನೇ ಸೂಕ್ತಕ್ಕೆ ಅಗ್ನಿಯು ದೇವತೆಯು. ಇದು ರಕ್ಷೋಘ್ನ ಸೂಕ್ತವೆಂದು ಹೇಳಲ್ಪಟ್ಟಿರುವುದು.

66. ಈ ರಕ್ಷೋಘ್ನಸೂಕ್ತವು (೧೬೨) ಗರ್ಭದಿಂದ ಹುಟ್ಟುತ್ತಿರುವ ಮಕ್ಕಳುಗಳು ಸುರಕ್ಷಿತವಾಗಿ ಪ್ರಸವವಾಗಲೆಂದು ಹಾರೈಸಿ ಆಶಿಸುವುದಾಗಿರುವುದು. **ವೇನಸ್ತತ್ಪಶ್ಯತ್** ಎಂಬ ಮಂತ್ರದಲ್ಲಿ (ಈ ಮಂತ್ರವು ಋಗ್ವೇದದಲ್ಲಿಲ್ಲ ತೈತ್ತಿರೀಯ ಉಪನಿಷತ್ತಿನಲ್ಲಿ ತೈ. ಉ. ೪-೧-೩ ರಲ್ಲಿ ಉಕ್ತವಾಗಿದೆ) ವೇನನನ್ನು ಸ್ತುತಿಸಲಾಗಿದೆ. **ಅಕ್ಷೀಭ್ಯಾಂ ತೇ** ಎಂಬ ೧೬೩ ನೇ ಸೂಕ್ತವು ಯಕ್ಷ್ಮರೋಗವನ್ನು (ಕ್ಷಯರೋಗವನ್ನು) ಪರಿಹಾರಮಾಡುವುದಾಗಿರುವುದು.

67. **ಅಪೇಹಿ ಮನಸಸ್ಪತೇ** ಎಂಬ ೧೬೪ನೇ ಸೂಕ್ತವು ದುಃಸ್ವಪ್ನಗಳನ್ನು (ಅಥವಾ ಅವರ ಕೆಟ್ಟಫಲಗಳನ್ನು) ನಾಶಮಾಡುವುದು. ಈ ಸೂಕ್ತದಲ್ಲಿ ಕಂಡುಬರುವ ಇಂದ್ರ ಮತ್ತು ಅಗ್ನಿ ಎಂಬ ದೇವತೆಗಳು ಪ್ರಾಸಂಗಿಕವಾಗಿ ಉಕ್ತರಾಗಿದಾರೆ. ಪೂರ್ವದಲ್ಲಿ **ಕಪೋತ ನೈರ್ಋತ** ಎಂಬ ಹೆಸರಿನ ಒಬ್ಬ ಋಷಿಯಿದ್ದನು. ಅವನು ದೀರ್ಘಕಾಲ (ಬಹಳ ಕಾಲ) ತಪಸ್ಸುಮಾಡುತ್ತಿದ್ದನು.

---

This hymn of Prajapatya's is spoken of as destroying 'royal' consumption' (ರಾಜಯಕ್ಷ್ಮ).

65. Yaska considers that the hymn is addressed to Indra-Agni; some, that it is addressed to the divinities expressed by name. Now as to the (hymn) 'With the prayer' (ಬ್ರಹ್ಮಣಾ : x. 162), it is said to be demon-slaying and addressed to Agni.

66. This is also recognised (ದೃಷ್ಟಂ) as a consecrating prayer for childern issuing from the womb (ಸ್ರವತಾಂ). 'Vena saw that' (ವೇನಸ್ತತ್ಪಶ್ಯತ್) is addressed to Vena. 'From the eyes' ( ಅಕ್ಷೀಭ್ಯಾಂ : x. 163) is destuctive of consumption ( ಯಕ್ಷ್ಮ )

67. 'Depart' (ಅಪೇಹಿ : x. 164) is destructive of evil dreems : Indra and Agni are incidental.

There was a seer, Kapota Nairrta by name, who practised prolonged austerity.

ಅಕರೋತ್ಕಪೋತಸ್ತಸ್ಯಾಷ್ಟ್ಯುಮಗ್ನಿಧಾನೇ ಪದಂ ಕಿಲ ।
ಸ ತದಾತ್ಮಹಿತೈರ್ವಾಕ್ಯೈಃ ಕಪೋತಂ ಸ್ತುತವಾನೃಷಿಃ ॥ ೬೭ ॥
ದೇವಾ ಇತಿ ತು ಸೂಕ್ತೇನ ಪ್ರಾಯಶ್ಚಿತ್ತಾರ್ಥಮುಚ್ಯತೇ ।
ಋಷಭಂ ಮಾ ಸಪತ್ನಘ್ನಂ ಯೇನೇದಮಿತಿ ಮಾನಸಂ ॥ ೬೯ ॥
ತುಭ್ಯೇತ್ಯೃಷೀ ದದೃಶತುರೈಂದ್ರಂ ಗಾಥಿನಭಾರ್ಗವೌ ।
ವರುಣೋ ವಿಧಾತಾನುಮತಿರ್ಧಾತಾ ಸೋಮೋ ಬೃಹಸ್ಪತಿಃ ॥ ೭೦ ॥
ಷಳೇತಾ ದೇವತಾಸ್ತತ್ರ ತೃತೀಯಾಯಾಮೃಚಿ ಸ್ತುತಾಃ ।
ವಾತಸ್ಯೇತಿ ಪರೇಣಾಸ್ತೌದನಿಲಃ ಪಿತರಂ ಸ್ವಕಂ ॥ ೭೧ ॥

68. ಒಂದು ಸಮಯದಲ್ಲಿ ಒಂದು ಕಪೋತವು (ಪಾರಿವಾಳದ ಹಕ್ಕಿ) ಈ ಋಷಿಯು ವಾಸವಾಗಿದ್ದ ವನದಲ್ಲಿ ಈ ಋಷಿಯ ಅಗ್ನಿಕುಂಡದಲ್ಲಿ ತನ್ನ ಕಾಲನ್ನು ಇಟ್ಟಿತು. ಆಗ ಈ ಋಷಿಯು ತನಗೆ ಹಿತಕರವಾದ (ಪ್ರಿಯವಾದ) ವಾಕ್ಯಗಳಿಂದ ಈ ಕಪೋತವನ್ನು ಸ್ತುತಿಸಿದನು.

**೧೬೫-೧೭೪ ನೇ ಸೂಕ್ತಗಳ ದೇವತೆಗಳು**

69. **ದೇವಾಃ ಕಪೋತ** ಎಂಬ ೧೬೫ ನೇ ಸೂಕ್ತವನ್ನು ತಾನು ಮಾಡಿದ ತಪ್ಪುಗಳ (ದೋಷಗಳ) ಪರಿಹಾರಕ್ಕೆ ಪ್ರಾಯಶ್ಚಿತ್ತಾರ್ಥವಾಗಿ ಪಠಿಸಲ್ಪಡಬೇಕು. **ಋಷಭಂ ಮಾ ಸಮಾನಾನಾಂ** ಎಂಬ ಸೂಕ್ತವು (೧೬೬) ತನ್ನೊಡನೆ ಸ್ಪರ್ಧಿಸುವ (ಹೋರಾಡುವ) ಶತ್ರುಗಳನ್ನು ನಾಶಮಾಡುವುದು. **ಯೇನೇದಂ ಭೂತಂ** ಎಂಬ ೩೩ ನೇ ಖಿಲಸೂಕ್ತದಲ್ಲಿ ಮನಸ್ಸನ್ನು ಸ್ತುತಿಸಲಾಗಿದೆ.

70. **ತುಭ್ಯೇದಮಿಂದ್ರ** ಎಂಬ ೧೬೭ ನೇ ಸೂಕ್ತಕ್ಕೆ ಗಾಥಿಪುತ್ರನೂ (ವಿಶ್ವಾಮಿತ್ರನೂ) ಭೃಗುಪುತ್ರನೂ (ಜಮದಗ್ನಿಯೂ) ದ್ರಷ್ಟೃಗಳು. ಈ ಸೂಕ್ತಕ್ಕೆ ಇಂದ್ರನು ದೇವತೆಯು. ಆದರೆ, ವರುಣ, ವಿಧಾತಾ, ಅನುಮತಿ, ಧಾತಾ, ಸೋಮ, ಬೃಹಸ್ಪತಿ,

71. ಎಂಬ ಆರುಮಂದಿ ದೇವತೆಗಳೂ ಈಸೂಕ್ತದ ಮೂರನೆಯ ಋಕ್ಕಿನಲ್ಲಿ ಸ್ತುತರಾಗಿರುವರು. **ವಾತಸ್ಯ ನು** ಎಂಬ ಮುಂದಿನ ೧೬೮ ನೇ ಸೂಕ್ತದಲ್ಲಿ ಅನಿಲನೆಂಬ ಋಷಿಯು ತನ್ನ ತಂದೆಯಾದ ವಾಯುವನ್ನು ಸ್ತುತಿಸಿರುವನು.

68. A pigeon, we are told, placed its foot on his fire-receptacle in the forest : the seer praised the pigeon, in words propitious to himself,

**15. Deities of RV. x. 165-174.**

69. with the hymn 'O Gods' (ದೇವಾಃ : x. 165) : it is stated to have the object of expiation. '(Make) me a bull' (ಋಷಭಂ ಮಾ : x. 166) is destructive of rivals. 'By which this' (ಯೇನೇದಂ) is addressed to Mind (ಮಾನಸಂ).

70. The two seers 'Gathina (ವಿಶ್ವಾಮಿತ್ರ) and Bhargava (ಜಮದಗ್ನಿ) saw (the hymn) addressed to Indra (beginning) 'To you' (ತುಭ್ಯೇತ್ : x. 167). Varuna, Vidhatr, Anumati, Dhatr, Soma, Brhaspati—

71. these six deitiee are there praised in the third stanza (x. 167-3) with the following (hymn) 'Of Vata' (ವಾತಸ್ಯ : x. 168) Anila praised his father.

ಮಯೋಭೂರಿತಿ ಯತ್ಸೂಕ್ತಮಪಶ್ಯಚ್ಛಬರ ಋಷಿಃ ।
ನಾನಾರೂಪಾಃ ಪಯಸ್ವಿನ್ಯೋ ಗಾವಸ್ತತ್ರ ತು ಸಂಸ್ತುತಾಃ ॥ ೭೨ ॥

ವಿಭ್ರಾಟ್ ಸೌರ್ಯಂ ತ್ವಂ ತ್ಯಮೈಂದ್ರಮಾ ಯಾಹೀತ್ಯುಷಸಃ ಸ್ತುತಿಃ ।
ಆ ತ್ವಾ ರಾಜ್ಞೋಽಭಿಷಿಕ್ತಾಯ ದ್ವೇ ಸೂಕ್ತೇ ಚಾನುಮಂತ್ರಣೇ ॥ ೭೩ ॥

ಪ್ರ ವ ಇತ್ಯುತ್ತರಂ ಗ್ರಾವ್ಣಾಂ ದದರ್ಶ ಸ್ತುತಿಮಾರ್ಬುದಿಃ ।
ಯತ್ತ್ವತಃ ಪರಮಾಗ್ನೇಯಂ ತತ್ರಾರ್ಭವ್ಯೃಕ್ ಪ್ರ ಸೂನವಃ ॥ ೭೪ ॥

ಋಷಿರ್ಜಗೌ ಪತಂಗಸ್ತು ಪತಂಗಮಿತಿ ಯತ್ಪರಂ ।

72. **ಮಯೋಭೂರ್ವಾತಃ** ಎಂಬ ೧೬೯ ನೇ ಸೂಕ್ತದಲ್ಲಿ ಸೂಕ್ತದ್ರಷ್ಟೃವಾದ ಶಬರನೆಂಬ ಋಷಿಯು ನಾನಾವಿಧವಾದ ಹಾಲುಕರೆಯುವ ಗೋವುಗಳನ್ನು ಸ್ತುತಿಸಿರುವನು.

73. **ವಿಭ್ರಾಟ್ ಬೃಹತ್** ಎಂಬ ೧೭೦ನೇ ಸೂಕ್ತದಲ್ಲಿ ಸೂರ್ಯನನ್ನು ಸ್ತುತಿಸಲಾಗಿದೆ. **ತ್ವಂ ತ್ಯಮಿಟತಃ** ಎಂಬ ೧೭೧ ನೇ ಸೂಕ್ತಕ್ಕೆ ಇಂದ್ರನು ದೇವತೆಯು. **ಆ ಯಾಹಿ** ಎಂಬ ೧೭೨ ನೇ ಸೂಕ್ತಕ್ಕೆ ಉಷಸ್ಸು ದೇವತೆಯು ; **ಆ ತ್ವಾಹಾರ್ಷಂ** ಎಂಬ ೧೭೩ ನೇ ಸೂಕ್ತದಲ್ಲಿಯೂ, ಇದರ ಮುಂದಿನ ೧೭೪ ನೇ ಸೂಕ್ತದಲ್ಲಿಯೂ ರಾಜನ ಪಟ್ಟಾಭಿಷೇಕಕಾಲದಲ್ಲಿ ಆಶೀರ್ವಾದರೂಪವಾಗಿ ಪಠಿಸಬೇಕಾದ ಮಂತ್ರಗಳು ಉಕ್ತವಾಗಿವೆ.

**೧೭೫-೧೮೧ ನೇ ಸೂಕ್ತದ ದೇವತೆಗಳು**

74. ಅರ್ಬುದಿಪುತ್ರನಾಪ ಸರ್ಪನೆಂಬ ಋಷಿಯು **ಪ್ರ ವೋ ಗ್ರಾವಾಣಃ** ಎಂಬ ೧೭೫ ನೇ ಸೂಕ್ತದಲ್ಲಿ ಸೋಮಾಭಿಷವಕರ್ಮದಲ್ಲಿ ಉಪಯೋಗಿಸಲ್ಪಡುವ **ಗ್ರಾವಾಣಃ** ಎಂಬ ಕಲ್ಲುಗಳನ್ನು (ಸೋಮಲತೆಗಳನ್ನು ಜಜ್ಜುವ ಕಲ್ಲುಗಳಿಗೆ **ಗ್ರಾವಾಣಃ** ಎಂದು ಹೆಸರು) ಸ್ತುತಿಸಿರುವನು. ಇದರ ಮುಂದಿನ ೧೭೬ನೇ ಸೂಕ್ತದಲ್ಲಿ ಅಗ್ನಿಯನ್ನು ಸ್ತುತಿಸಲಾಗಿದೆ. ಈ ೧೭೬ನೇ ಸೂಕ್ತದ **ಪ್ರ ಸೂನವಃ** ಎಂಬ ಮೊದಲನೆಯ ಋಕ್ಕಿನಲ್ಲಿ ಋಭುಗಳ ಸ್ತುತಿ ಇದೆ.

75. ಪತಂಗನೆಂಬ ಋಷಿಯು **ಪತಂಗಮಕ್ತಂ** ಎಂಬ ಮುಂದಿನ ೧೭೭ನೇ ಸೂಕ್ತದ ದ್ರಷ್ಟೃವಾಗಿರುವನು.

---

72. The seer Sabara saw the hymn which (begins) 'Refreshing' (ಮಯೋಭೂಃ : x. 169). Now various kinds of milch cows are there praised,

73. 'Far-shining' (ವಿಭ್ರಾಟ್ : x. 170) is addresed to Surya ; 'you this' (ತ್ವಂ ತ್ಯಂ : x. 171) is addreesed to Indra ; 'Come hither' (ಆ ಯಾಹಿ : x. 172) is (in) praise of Dawn ; and 'Hither you' (ಆ ತ್ವಾ : x. 713-1) are two hymns (173-174) for consecrating a king who has been anointed.

**16. Deities of RV. x. 175-181.**

74. Arbudi saw the next (hymn) 'Forth you' (ಪ್ರ ವಃ : x. 175) as (in) praise of the Pressing Stones. Now that which follows this (x. 176) is addressed to Agni : there the stanza 'Forth the sons' (ಪ್ರ ಸೂನವಃ : x. 176-1) is addressed to the Rbhus.

75. Now, the seer Patamga sang the hymn which follows, 'The

ತತ್ಸೌರ್ಯಮೇಕೇ ಮನ್ಯಂತೇ ಮಾಯಾಭೇದಂ ತಥಾಪರೇ || ೭೫ ||
ಮಾಯಾಭೇದೇ ದ್ವಿತೀಯಾಯಾಂ ವಾಕ್ ಸ್ತುತೇತ್ಯಾಹ ಶೌನಕಃ |
ದೇವೀಂ ಬಿಭರ್ತಿ ಮನಸಾ ಯಾ ವಾಚಂ ವಿದಿತಾಂ ಸತೀಂ || ೭೬ ||
ತ್ಯಮೂಷು ತಾರ್ಕ್ಷ್ಯದೈವತ್ಯಂ ಸೂಕ್ತಂ ಸ್ವಸ್ತ್ಯಯನಂ ವಿದುಃ |
ಉದ್ವೈಂದ್ರೇ ವೈಶ್ವದೇವಂ ತು ಪ್ರಥಶ್ಚೇತಿ ಚ ಯತ್ಪರಂ || ೭೭ ||
ಆತ್ಮಪ್ರಭಾವಮಾಚಖ್ಯುಸ್ತತ್ರಾದ್ಯಾ ಋಷಯಸ್ತ್ರಯಃ |
ರಥಂತರಂ ಯಥಾ ಸ್ತೋತ್ರಂ ಸ್ತೋತ್ರಂ ಚೈವ ಯಥಾ ಬೃಹತ್ || ೭೮ ||

ಈ ಸೂಕ್ತದಲ್ಲಿ ಸೂರ್ಯನನ್ನು ಸ್ತುತಿಸಲಾಗಿದೆಯೆಂದು ಕೆಲವರು ಹೇಳುವರು. ಮತ್ತೆ ಕೆಲವರು ಮಾಯಾಭೇದವನ್ನು ಎಂದರೆ ಮಾಟ ಮುಂತಾದ ಆಭಿಚಾರಿಕಕರ್ಮಗಳಿಗೆ ಪ್ರತೀಕಾರವನ್ನು ಸ್ತುತಿಸಲಾಗಿದೆಯೆಂದು ಹೇಳುವರು.

76. ಈ ಸೂಕ್ತದಲ್ಲಿ ಹೇಳಿರುವ ಮಾಯಾಭೇದಸ್ತುತಿಯ ಸಂದರ್ಭದಲ್ಲಿ ೨ನೇ ಋಕ್ಕಿನಲ್ಲಿ ವಾಕ್ಕನ್ನು ಸ್ತುತಿಸಲಾಗಿದೆಯೆಂದು ಶೌನಕರು ಹೇಳುವರು. ಈ ವಾಗ್ದೇವತೆಯು ಸರ್ವರಿಗೂ ತಿಳಿದಿರುವ ಎಂದರೆ ಪ್ರಸಿದ್ಧವಾದ ವಾಕ್ಕನ್ನು (ಮಾತನ್ನು, ಭಾಷೆಯನ್ನು) ಮನಸ್ಸಿನಲ್ಲಿ ಧರಿಸಿರುವಳು. ಎಂದರೆ ಸರ್ವರ ಮನಸ್ಸಿನಲ್ಲಿಯೂ ಇದ್ದುಕೊಂಡು ಅವರವರು ಆಡುವ ಮಾತುಗಳನ್ನು ಪ್ರೇರಿಸುವ ವಾಗ್ದೇವತೆಯನ್ನು ಈ ಸೂಕ್ತದ ೨ನೇ ಋಕ್ಕಿನಲ್ಲಿ ಸ್ತುತಿಸಲಾಗಿದೆ ಎಂದಭಿಪ್ರಾಯವು.

77. **ತ್ಯಮೂ ಷು** ಎಂಬ ೧೭೮ನೇ ಸೂಕ್ತದಲಿ ತಾರ್ಕ್ಷ್ಯ ಎಂಬ ದೇವತೆಯನ್ನು ಸ್ತುತಿಸಲಾಗಿದೆ. ಈ ಸೂಕ್ತವು ಶ್ರೇಯಸ್ಸನ್ನು ಉಂಟುಮಾಡುವುದೆಂದು ತಿಳಿದವರು ಹೇಳುವರು. **ಉತ್ತಿಷ್ಠತ** ಎಂಬ ೧೭೯ನೇ ಸೂಕ್ತಕ್ಕೂ ಇದರ ಮುಂದಿನ ೧೮೦ನೇ ಸೂಕ್ತಕ್ಕೂ ಇಂದ್ರನು ದೇವತೆಯು ; **ಪ್ರಥಶ್ಚ** ಎಂಬ ಅದರ ಮುಂದಿನ ೧೮೧ನೇ ಸೂಕ್ತದಲ್ಲಿ ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ.

78. ಈ ೧೮೧ನೇ ಸೂಕ್ತದಲ್ಲಿ ಪ್ರಥ, ಸಪ್ರಥ, ಘರ್ಮ ಎಂಬ ಈ ಸೂಕ್ತದ್ರಷ್ಟ್ಯಗಳಾದ ಮೂವರು ಋಷಿಗಳು ತಮ್ಮ ಪ್ರಭಾವವನ್ನೂ ಶಕ್ತಿಸಾಮರ್ಥ್ಯಗಳನ್ನೂ ಪ್ರಶಂಸೆಮಾಡಿಕೊಂಡಿರುವುದಲ್ಲದೆ ರಥಂತರಸ್ತೋತ್ರ, ಬೃಹತ್ಸ್ತೋತ್ರ,

Bird ' (ಪತಂಗಂ : x. 177); some regard this as addressed to Surya, while others (think that is is) destructive of sorcery (ಮಾಯಾಭೇದ).

76. In (this hymn) destructive of sorcery, Saunaka says that in the second (stanza : x. 177-2) is praised Vac, the goddess who cherishes in her heart the speech which is well known (ವಿದಿತಾಂ).

77. The hymn ' Forthwith this ' (ತ್ಯಮೂಷು : x. 178), which has Tarksya for its deity, they regard as a charm for good luck (svastyayana) ' Up ' (ಉತ್ : x. 179) are two (hymns) addressed to Indra (179-180), while that which follows, 'Both extension ' (ಪ್ರಥಶ್ಚ : x. 181), is addressed to rhe All-gods.

78. In it the first three seers have declared their own power : how the Rathamtara chant (ಸ್ತೋತ್ರ) and how the Brhat chant.

ಯಥಾ ಚ ಸಂಭೂತೋ ಘರ್ಮಃ ಸವಿತುಶ್ಚೋಪಲಕ್ಷ್ಯತೇ ।
ಬೃಹಸ್ಪತಿರಿತಿ ತ್ವಸ್ಮಿನ್ ಸ್ತುತಃ ಸೂಕ್ತೇ ಬೃಹಸ್ಪತಿಃ ॥ ೭೯ ॥
ಆಶಿಷೋ ಯಜಮಾನಸ್ಯ ಕೇಚಿದೇತಾಂ ಸ್ತುತಿಂ ವಿದುಃ ।
ಪ್ರಾಜಾಪತ್ಯಸ್ಯ ಯತ್ಸೂಕ್ತಮಪಶ್ಯಂ ತ್ವಾ ಪ್ರಜಾವತಃ ॥ ೮೦ ॥
ಪ್ರತ್ಯೃಚಂ ದೇವತಾ ಸ್ತೌತಿ ಲಿಂಗೈರೇವಾತ್ರ ಲಕ್ಷಿತಾಃ ।
ಆಶಿಷಃ ಪುತ್ರಕಾಮಸ್ಯ ಪ್ರಥಮಾ ಹಿ ವದತ್ಯಥ ॥ ೮೧ ॥
ದ್ವಿತೀಯಾ ಪುತ್ರಕಾಮಾಯಾಸ್ತೃತೀಯಾತ್ಮಸ್ತವಂ ತ್ವೃಷೇಃ ।
ಯದ್ವಿಷ್ಣುರಿತಿ ಸೂಕ್ತಂ ತು ವೈಶ್ವದೇವಂ ಪ್ರಚಕ್ಷತೇ ॥ ೮೨ ॥

79. **ಘರ್ಮ,** ಇವು, ಸವಿತೃದೇವನಿಂದ ಹೇಗೆ ಉಂಟಾದವೆಂಬುವ ವಿಷಯವನ್ನು ತಿಳಿಸಲಾಗಿದೆ. **ಬೃಹಸ್ಪತಿರ್ನಯತು** ಎಂಬ ೧೮೨ನೇ ಸೂಕ್ತದಲ್ಲಿ ಬೃಹಸ್ಪತಿಯನ್ನು ಸ್ತುತಿಸಲಾಗಿದೆ.

**೧೮೩-೧೮೪ ಸೂಕ್ತಗಳ ದೇವತೆಗಳು**

80. ಕೆಲವರು ಈ ಬೃಹಸ್ಪತಿದೇವತಾಕವಾದ ಮೇಲಿನ ಸೂಕ್ತವು (೧೮೨) ಯಜಮಾನನಿಗೆ ಆಶೀರ್ವಾದ ರೂಪವಾಗಿದೆಯೆಂದು ಭಾವಿಸುವರು. **ಅಪಶ್ಯಂ ತ್ವಾ** ಎಂಬ **ಪ್ರಾಜಪತ್ಯಃ ಪ್ರಜಾವಾನ್** ಎಂಬ ಋಷಿದೃಷ್ಟವಾದ ೧೮೩ನೇ ಸೂಕ್ತದ

81. ಪ್ರತಿಋಕ್ಕಿನಲ್ಲಿಯೂ ಆ ಋಕ್ಕಿನಲ್ಲಿ ಹೇಳಿರುವ (ಲಿಂಗೋಕ್ತ) ದೇವತೆಗಳನ್ನು ಸ್ತುತಿಸಲಾಗಿದೆ. ಹೇಗೆಂದರೆ- ಮೊದಲನೆಯ ಋಕ್ಕಿನಲ್ಲಿ ಪುತ್ರನಾಗಬೇಕೆಂದು ಬಯಸುವ ಪುರುಷನಿಗೆ ಆಶೀರ್ವಾದವನ್ನು ಕೋರಲಾಗಿದೆ. ಬಳಿಕ,

82. ಎರಡನೇ ಋಕ್ಕಿನಲ್ಲಿ ಪುತ್ರನನ್ನು ಅಪೇಕ್ಷಿಸುವ ಸ್ತ್ರೀಯವಿಷಯದಲ್ಲಿ ಆಶೀರ್ವಚನವನ್ನು ಹೇಳಲಾಗಿದೆ. ಮೂರನೆಯ ಋಕ್ಕಿನಲ್ಲಿ ಸೂಕ್ತದ್ರಷ್ಟೃವಾದ ಋಷಿಯ ಆತ್ಮಸ್ತುತಿ ಇದೆ. **ವಿಷ್ಣುರ್ಯೋನಿಂ** ಎಂಬ ೧೮೪ನೇ ಸೂಕ್ತದಲ್ಲಿ ವಿಶ್ವೇದೇವತೆಗಳನ್ನು ಸ್ತುತಿಸಲಾಗಿದೆ ಎಂದು ಹೇಳುವರು.

**17. Deities of RV. x. 182-184.**

79. and how the Gharma came into being from Savitr is implied. Now in the hymn ' Brhaspati ' (ಬೃಹಸ್ಪತಿ : x. 182) Brhaspati is praised.

80. Some consider this praise (of Brhaspati) to be prayers for the institutor of the sacrifice (ಯಜಮಾನ).

The hymn of Prajavat Prajapatya which (begins) ' I saw you ' (ಅಪಶ್ಯಂ ತ್ವಾ : x. 183),

81. praises in each stanza the deities here indicated by their characteristics (ಲಿಂಗ) : that is, the first (stanza) utters prayers for the man desiring a son, then,

82. the second for the woman desiring a son, while the third (expresses) self praise of the seer. Now the hymn which (begins) ' Visnu " (ವಿಷ್ಣುಃ : x. 184) they declare to be addressed to the All-gods.

ತಸ್ಮಿನ್ಸ್ವದಾರಗರ್ಭಾರ್ಥಮೃಷಿರಾಶಾಸ್ತ ಆಶಿಷಃ ।
ಪರಂ ತು ನೇಜಮೇಷೇತಿ ಗರ್ಭಾರ್ಥಂ ವಾ ತದುಚ್ಯತೇ ॥ ೮೩ ॥

ಅಸ್ಯೈ ಮೇ ಪುತ್ರಕಾಮಾಯೈ ಗರ್ಭಮಾ ಧೇಹಿ ಯಃ ಪುಮಾನ್ ।
ಆಶಿಷೋ ಯೋಗಮೇತಂ ಹಿ ಸರ್ವಗರ್ಭೇನ ಮನ್ಯತೇ ॥ ೮೪ ॥

ಏಕಾರಮನುಕಂಪಾರ್ಥೇ ನಾಮ್ನಿ ಸ್ಮರತಿ ಮಾಠರಃ ।
ಆಖ್ಯಾತೇ ಭೂತಕರಣಂ ಬಾಷ್ಕಲಾ ಆವ್ಯಯೋರಿತಿ ॥ ೮೫ ॥

ಮಾಹಿತ್ರಂ ಯನ್ಮಹಿ ತ್ರೀಣಾಮಾದಿತ್ಯಾನಾಂ ಸ್ತುತಿ- ವಿದುಃ ।

83. ಈ ಸೂಕ್ತದಲ್ಲಿ (೧೮೪) ಋಷಿಯು ತನ್ನ ಪತ್ನಿಯ ಗರ್ಭಧಾರಣಾರ್ಥವಾಗಿ ಆಶೀರ್ವಚನಗಳನ್ನು ಪಠಿಸಿರುವನು. ಮತ್ತು **ನೇಜಮೇಷ** ಎಂಬ ೩೪ನೇ ಖಿಲಸೂಕ್ತದಲ್ಲಿಯೂ ಗರ್ಭಧಾರಣಾಥವಾಗಿ ಆಶೀರ್ವಾದ ಮಂತ್ರಗಳನ್ನು ಪಠಿಸಲಾಗಿದೆಯೆಂದೂ ಹೇಳುವರು.

**ನೇಜಮೇಷ ಎಂಬ ಖಿಲಸೂಕ್ತ (೩೪) ೧೮೫-೧೮೮ ಸೂಕ್ತಗಳು**

84. **ಅಸ್ಯೈ ಮೇ ಪುತ್ರಕಾಮಾಯೈ ಗರ್ಭಮಾಧೇಹಿ ಯಃ ಪುಮಾನ್** ಎಂಬುದು ಈ ಖಿಲ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಉತ್ತರಾರ್ಧವು. ಪುತ್ರನಾಗಬೇಕೆಂದು ಬಯಸುವ ಈ ಸ್ತ್ರೀಯು ಗರ್ಭವನ್ನು ಧರಿಸಲಿ ಎಂಬ ಆಶ್ವಾಸನೆಯನ್ನು ಋಷಿಯು ಇಲ್ಲಿ ವ್ಯಕ್ತಪಡಿಸಿರುವವನು.

85. **ಅಸ್ಯೈ ಮೇ** ಎಂಬ ಮೇಲಿನ ವಾಕ್ಯದಲ್ಲಿ ಏಕಾರವು (ಮೇ) ಅನುಕಂಪವನ್ನು (ದಯೆ) ಸೂಚಿಸುವುದೆಂದೂ ಮಾಠರ ಎಂಬ ಆಚಾರ್ಯರು ಹೇಳುವರು. **ಆ ಧೇಹಿ** ಎಂಬ ಕ್ರಿಯಾಪದದಲ್ಲಿ ಭೂತಕಾಲದ ಅರ್ಥವು ವ್ಯಕ್ತವಾಗುವುದೆಂದು ಬಾಷ್ಕಲರು ಅಭಿಪ್ರಾಯಪಡುವರು.

86. ಮಾಹಿತ್ರಸೂಕ್ತವೆಂದು ಪ್ರಸಿದ್ಧವಾದ **ಮಹಿ ತ್ರೀಣಾಂ** ಎಂಬ ೧೮೫ನೇ ಸೂಕ್ತದಲ್ಲಿ ಆದಿತ್ಯರ ಸ್ತುತಿ

---

83. In it the seer utters prayers with a view to his wife's (obtaining) offspring. Now the following (hymn) is 'O Nejamesa' (ನೇಜಮೇಷ). It is stated to be optionally (applicable : ವಾ) with a view to offspring.

**18. The khila 'Nejamesa.' Deities of RV. x. 185-188.**

84. 'To this (wife) of mine longing for a son do you grant offspring which (shall be) male'—with (this) half of the whole (first) stanza he means this whole combination (ಯೋಗ) of prayer ,

85. the traditional teaching of ಮಾಠರ is that in the name (ನೇಜಮೇಷ) the letter e is intended to (arouse) compassion ; while the Baskalas (say) that the verb (ಆದಧೆ) the two e's (ಆಯೋ) have the meaning of a past tense (bhutakarana) in (the sense of) au (av-i).

86 The Mahitra (hymn) which (begins) 'The grcat (aid) of the three' (ಮಹಿ ತ್ರೀಣಾಂ : x. 185) they regard as praise of the Adityas, Varuna,

ವರುಣಾರ್ಯಮಮಿತ್ರಾಣಾಮಾದಿತ್ಯೇಷ್ವಿತರೇಷು ತು || ೮೬ ||
ಏತ ಏವ ತ್ರಯೋ ದೇವಾಃ ಸ್ತುತಾಃ ಸ್ವಲ್ಪೇಷ್ವತೋಽನ್ಯಥಾ |
ಶಾಂತ್ಯರ್ಥಂ ಸೂಕ್ತಮೇತದ್ಧಿ ಪಾವನಂ ಚೈವ ವೈ ಶ್ರುತಂ |
ಯಾತಾಮಪಿ ಸ್ವಸ್ತ್ಯಯನೇ ದೃಷ್ಟಂ ತದನುಮಂತ್ರಣಂ || ೮೭ ||
ಉಲೋಽಸ್ತೌತ್ಪಿತರಂ ವಾತಂ ವಾತ ಆಗ್ನೇಯಮುತ್ತರಂ |
ವಿಸೃಷ್ಟಂ ಜಾತವೇದಸ್ಯಂ ಪ್ರೇತಿ ದಾಶತಯೀಷು ತು || ೮೮ ||
ಯತ್ಕಿಂಚಿದನ್ಯತ್ರಾಗ್ನೇಯಂ ಜಾತವೇದಸ್ಯಮುಚ್ಯತೇ |

ಇರುವುದು ಎಂದರೆ ಈಸೂಕ್ತದಲ್ಲಿ ಆದಿತ್ಯರನ್ನೂ ವರುಣನನ್ನೂ ಅರ್ಯಮನನ್ನೂ, ಮಿತ್ರನನ್ನೂ ಸ್ತುತಿಸಲಾಗಿದೆಯೆಂದು ಹೇಳುವರು. ಆದಿತ್ಯದೇವತಾಕವಾದ ಇತರ ಕೆಲವು ಸೂಕ್ತಗಳಲ್ಲಿ,

87. ಮಿತ್ರ, ವರುಣ, ಅರ್ಯಮಾ ಎಂಬ ಮೂರು ಮಂದಿ ದೇವತೆಗಳನ್ನು ಮಾತ್ರ ಸ್ತುತಿಸಲಾಗಿರುವುದು. ಈ ಸೂಕ್ತಪಠನವು ಶಾಂತಿಯನ್ನೂ ಶುದ್ಧಿಯನ್ನು ಉಂಟುಮಾಡುವುದೆಂದು ಪ್ರಸಿದ್ಧಿಯು. ಪ್ರಯಾಣಕಾಲದಲ್ಲಿ ಪ್ರಯಾಣೀಕರಿಗೆ ಈ ಸೂಕ್ತಪಠನವು ಶುಭವನ್ನುಂಟುಮಾಡುವುದೆಂದೂ ಪ್ರಸಿದ್ಧಿಯು.

88: ಉಲ ಎಂಬ ಋಷಿಯು ತನ್ನ ತಂದೆಯಾದ ವಾತ ಎಂಬ ದೇವತೆಯನ್ನು **ವಾತ ಆ ವಾತು** ಎಂಬ ೧೮೬ ನೇ ಸೂಕ್ತದಲ್ಲಿ ಸ್ತುತಿಸಿರುವನು ಮುಂದಿನ ೧೮೭ ನೇ ಸೂಕ್ತಕ್ಕೆ ಅಗ್ನಿಯು ದೇವತೆಯು ಆದರೆ ಋಗ್ವೇದದ ೧೦ ಮಂಡಲಗಳಲ್ಲೆಲ್ಲಾ **ಪ್ರ ನೂನಂ** ಎಂಬ ೧೮೮ನೇ ಸೂಕ್ತದಲ್ಲಿ ಮಾತ್ರ **ಜಾತವೇದಾಃ** ಎಂಬ ಅಗ್ನಿಯನ್ನು ಸ್ಪಷ್ಟವಾಗಿ ಸ್ತುತಿಸಲಾಗಿದೆ.

**೧೮೯-೧೯೦ ನೇ ಸೂಕ್ತಗಳು; ಸಂಜ್ಞಾನಂ ಎಂಬ ಖಿಲಸೂಕ್ತ**

89. ಇತರ ಕಡೆಗಳಲ್ಲಿ ಜಾತವೇದೋಗ್ನಿಯನ್ನು ಸ್ತುತಿಸಲಾಗಿದೆಯೆಂದು ಹೇಳಿದ್ದರೂ ಅಲ್ಲೆಲ್ಲಾ ನಿಜವಾಗಿ ಅಗ್ನಿಯನ್ನು ಮಾತ್ರ ಸ್ತುತಿಸಲಾಗಿದೆ.

---

Aryaman, Mitra. Now in very few other (hymns) addressed to the Adityas,

87. except in this are these three gods only praised. This hymn, according to sacred authority (ಶ್ರುತಂ), is intended for prosperity (ಶಾಂತ್ಯರ್ಥಂ) and is also purifying.

It is recognised (ದೃಷ್ಟ) as also benedictory in the valediction of travellers (ಯಾತಾಂ).

88. (Then) Ula (ಉಲ) praised his father Vata (in) ' May Vata ' (ವಾತ: x. 186). The next (hymn) is addressed to Agni (x. 107). But in the ten books (of the Rg-Veda) the (hymn which begins) 'Forth' (ಪ್ರ : x. 188) is the one (which is) clearly addressed to Jatavedas.

**19 RV. x. 189-190. The Khila ' Samjnaham '.**

89. Whatever elsewhere is spoken of as addressed to Jatavedas is

ಅಯಂ ಗೌರಿತಿ ಯತ್ಸೂಕ್ತಂ ಸಾರ್ಪರಾಜ್ಞೀ ಸ್ವಯಂ ಜಗೌ ॥ ೮೯ ॥

ತಸ್ಮಾತ್ಸಾ ದೇವತಾ ತತ್ರ ಸೂರ್ಯಮೇಕೇ ಪ್ರಚಕ್ಷತೇ ।
ಮುದ್ಗಲಃ ಶಾಕಪೂಣಿಶ್ಚ ಆಚಾರ್ಯಃ ಶಾಕಟಾಯನಃ ॥ ೯೦ ॥

ತ್ರಿಸ್ಥಾನಾಧಿಶಿಷ್ಠಿತಾಂ ವಾಚಂ ಮನ್ಯಂತೇ ಪ್ರತ್ಯೃಚಂ ಸ್ತುತಾಂ ।
ಭಾವವೃತ್ತಂ ಪರಂ ಸೂಕ್ತಂ ದದರ್ಶಾಘಾಘಮರ್ಷಣಃ ॥ ೯೧ ॥

ಪರಂ ನ ವಿದ್ಯತೇ ಯಸ್ಮಾಚ್ಛಾಂತ್ಯೈ ವಾ ಪಾವನಾಯ ವಾ ।
ಯಥಾಶ್ವಮೇಧಃ ಕ್ರತುರಾಟ್ ಸರ್ವರಿಪ್ರಪ್ರಣೋದನಃ ॥ ೯೨ ॥

(ಆದರೆ ಈ ೧೮೮ ನೇ ಸೂಕ್ತದಲ್ಲಿ ಮಾತ್ರ ಜಾತವೇದೋಗ್ನಿಯನ್ನು ಆ ಹೆಸರಿನಿಂದಲೇ ಸ್ಪಷ್ಟವಾಗಿ ಸ್ತುತಿಸಲಾಗಿದೆ) **ಅಯಂ ಗೌಃ** ಎಂಬ ೧೮೯ ನೇ ಸೂಕ್ತವನ್ನು **ಸಾರ್ಪರಾಜ್ಞೀ** ಎಂಬ ಋಷಿಯೇ (ಅಥವಾ ಋಷಿಕಾ) ಸ್ವಯಂ ಪಠಿಸಿರುವನು(ಳು).

90. ಆದ್ದರಿಂದ ಆ ಸಾರ್ಪರಾಜ್ಞಿಯೇ ಈ ಸೂಕ್ತಕ್ಕೆ ದೇವತೆಯು. ಕೆಲವರು ಈ ಸೂಕ್ತಕ್ಕೆ ಸೂರ್ಯನೇ ದೇವತೆಯೆಂದು ಹೇಳುವರು. ಮುದ್ಗಲ, ಶಾಕಪೂಣಿ, ಶಾಕಟಾಯನ ಎಂಬ ಆಚಾರ್ಯರು.

91. ಈ ಸೂಕ್ತದ (೧೮೯) ಪ್ರತಿ ಋಕ್ಕಿನಲ್ಲಿಯೂ ತ್ರಿಸ್ಥಾನಾಧಿಷ್ಠಿತ್ರಿಯಾದ ವಾಗ್ದೇವತೆಯು ಸ್ತುತಳಾಗಿರುವಳೆಂದು ಭಾವಿಸುವರು. **ಅಘಮರ್ಷಣ** ಎಂಬ ಋಷಿಯು ಭಾವವೃತ್ತದೇವತಾಕವಾದ ೧೯೦ ನೇ ಸೂಕ್ತಕ್ಕೆ ದ್ರಷ್ಟೃವಾಗಿರುವನು.

92-93. ಶಾಂತ್ಯರ್ಥವಾದುದೂ, ಶುದ್ಧಿಕಾರಕವಾದುದೂ ಆದ ಮತ್ತೊಂದು ಸೂಕ್ತವಿರುವುದಿಲ್ಲ. ಯಾಗಗಳಲ್ಲೆಲ್ಲಾ ಅಶ್ವಮೇಧಯಾಗವು ಯಾವ ರೀತಿ ಶ್ರೇಷ್ಠವಾಗಿರುವುದೋ ಮತ್ತು ಸಮಸ್ತ ಪಾಪಗಳನ್ನೂ ಪರಿಹಾರ ಮಾಡುವುದೋ ಅದರಂತೆ ಈ ಅಘಮರ್ಷಣಋಷಿದೃಷ್ಟವಾದ ಸೂಕ್ತವು ಸೂಕ್ತಗಳಲ್ಲೆಲ್ಲಾ ಶ್ರೇಷ್ಠವೆನಿಸಿರುವುದಲ್ಲದೆ

(really) addressed to Agni. as to the hymn 'Hither this bull' (ಅಯಂ ಗೌಃ : x 189), Sarparajni sang of herself (in it).

90. Therefore she is the deity in it : some declare Surya (to be the deity). Mudgala, Sakapuni, and the teacher Sakatayana,

91. consider that Vac, as occupying the three spheres, is (here) praised in every stanza. Next Aghamarsana (ಅಘಮರ್ಷಣ) saw the following evolutional (ಭಾವವೃತ್ತ) hymn (x. 190),

92. to which no superior hymn exists either for presperity orpurification. As the horse sacrifice is the chief of offerings, removing every infirmity,

ತಥಾಘಮರ್ಷಣಂ ಬ್ರಹ್ಮ ಸರ್ವರಿಪ್ರಪ್ರಣೋದನಂ ।
ಶದಾದೀನೀತಿ ಯಚ್ಚಾತಃ ಸಂಜ್ಞಾನಂ ಜ್ಞಾನಸಂಸ್ತವಃ || ೯೩ ||
ಚತುರ್ಥಂ ಯತ್ತು ನೈರ್ಹಸ್ತ್ಯಂ ತತ್ಸಪತ್ನನಿಬರ್ಹಣಂ ।
ಸಂಸಮಿತ್ಪ್ರಾಧ್ವರಾಣಾಂ ಚೇತ್ಯಾಗ್ನೇಯ್ಯಾವೇವ ತೇ ಸ್ಮೃತೇ || ೯೪ ||
ಉಶನಾ ವರುಣಶ್ಚೇಂದ್ರಶ್ಚಾಗ್ನಿಶ್ಚ ಸವಿತಾ ಸ್ತುತಾಃ ।
ಸಂಜ್ಞಾನೇ ಪ್ರಥಮಸ್ಯಾಂ ತು ದ್ವಿತೀಯಸ್ಯಾಮಥಾಶ್ವಿನೌ || ೯೫ ||
ತೃತೀಯಾ ಚೋತ್ತಮೇ ಚ ದ್ವೇ ಆಶಿಷೋಽಭಿವದಂತಿ ತಾಃ ।
ಇಂದ್ರಃ ಪೂಷಾ ಸಪತ್ನಘ್ನೇ ದ್ವಿತೀಯಸ್ಯಾನ್ಮೃಚಿ ಸ್ತುತೌ || ೯೬ ||

ಶಾಂತಿಯನ್ನೂ, ಶುದ್ಧಿಯನ್ನೂ ಉಂಟುಮಾಡುವುದು. ಈ ಸೂಕ್ತವನ್ನು ಅನುಸರಿಸಿರುವ ಇದರ ಮುಂದಿನ **ಸಂಜ್ಞಾನಂ** ಎಂಬ ಖಿಲಸೂಕ್ತದಲ್ಲಿ ಜ್ಞಾನವನ್ನು ಸ್ತುತಿಸಲಾಗಿದೆ.

**ಖಿಲಸೂಕ್ತ (ಸಂಜ್ಞಾನಮುಶನಾವದತ್); ೧೯೧ ನೇ ಸೂಕ್ತ; ಮಹಾನಾಮ್ನೀ ಋಕ್ಕುಗಳು**

94. ಈ ಸಂಜ್ಞಾನವೆಂಬ ಖಿಲಸೂಕ್ತದ **ನೈರ್ಹಸ್ತ್ಯಂ** ಎಂಬ ನಾಲ್ಕನೇ ಋಕ್ಕು (**ನೈರ್ಹಸ್ತ್ಯಂ** ಎಂಬುದು ಕೆಲವು ಪ್ರತಿಗಳಲ್ಲಿ ೩ನೇ ಋಕ್ಕಾಗಿ ಪಠಿತವಾಗಿದೆ) ಹೋರಾಡುವ ಶತ್ರುಗಳನ್ನು ನಾಶಪಡಿಸುವುದು. **ಸಂಸಮಿದ್ಯುವಸೇ** ಎಂಬ ೧೯೧ ನೇ ಸೂಕ್ತದ ಮೊದಲನೇ ಋಕ್ಕಿನಲ್ಲಿಯೂ, **ಸಂಜ್ಞಾನಂ** ಎಂಬ ಖಿಲಸೂಕ್ತದ **ಪ್ರಾಧ್ವರಾಣಾಂ** ಎಂಬ ೮ ನೇ ಋಕ್ಕಿನಲ್ಲಿಯೂ ಅಗ್ನಿಯನ್ನು ಸ್ತುತಿಸಲಾಗಿದೆ. [ಸಂಜ್ಞಾನವೆಂಬ ಖಿಲಸೂಕ್ತವು ಒಂದೊಂದು ಪುಸ್ತಕದಲ್ಲಿ ಒಂದೊಂದು ರೀತಿ ಇದೆ. ಕೆಲವಲ್ಲಿ ೫ ಋಕ್ಕುಗಳೂ ಕೆಲವಲ್ಲಿ ೧೫ ಋಕ್ಕುಗಳೂ ಇವೆ. ಋಕ್ಕುಗಳ ಸಂಖ್ಯಾಕ್ರಮದಲ್ಲಿಯೂ ವ್ಯತ್ಯಾಸವಿದೆ.]

95. ಸಂಜ್ಞಾನವೆಂಬ ಖಿಲಸೂಕ್ತದ ಮೊದಲನೇ ಋಕ್ಕಿನಲ್ಲಿ ಉಶನಾಃ, ವರುಣ, ಇಂದ್ರ, ಅಗ್ನಿ, ಸವಿತಾ ಎಂಬ ದೇವತೆಗಳನ್ನೂ ಎರಡನೆಯ ಋಕ್ಕಿನಲ್ಲಿ ಅಶ್ವಿನೀದೇವತೆಗಳನ್ನೂ ಸ್ತುತಿಸಲಾಗಿದೆ.

96. ಮೂರನೆಯ ಋಕ್ಕಿನಲ್ಲಿಯೂ, ಕೊನೆಯ ಎರಡು ಋಕ್ಕುಗಳಲ್ಲಿಯೂ ಪ್ರಾರ್ಥನೆಯು ಉಕ್ತವಾಗಿದೆ. ಎರಡನೆಯ ಋಕ್ಕಿನಲ್ಲಿ ಪೂಷಾ ಎಂಬ ದೇವತೆಯು ಶತ್ರುಗಳನ್ನು(ಸ್ಪರ್ಧಿಗಳನ್ನು)ನಾಶಮಾಡುವನೆಂದು ಸ್ತುತಿಸಲಾಗಿದೆ.

93. so the sin-effacing (ಅಘಮರ್ಷಣ) prayer (ಬ್ರಹ್ಮ) removes every infirmity. As to (ಇತಿ)the (hymns) which follow it (x.190), that which (comes) next (begining) ‘ Unanimity ’ (ಸಂಜ್ಞಾನಂ) is in praise of knowledge.

**.20. The Khilas. RV. x. 191. Mahanamni stanzas.**

94. Now as to the fourth (hymn) ‘ Of the handless friends’(ನೈರ್ಹಸ್ತ್ಯಂ), it is destructive of rivals. ‘ Together, together, indeed ’ (ಸಂಸಂ : x. 191-1) and ‘Forth, of sacrifices,(ಪ್ರಾಧ್ವರಾಣಾಂ) are traditionally held to be two (stanzas) addressed to Agni.

95. Now in tne first (stanza) of ‘ Unanimity,’ Usana, Varuna, Indra, Agni, and Savitr are praised, then in the second, the Asvins.

96. The third and the last two (3,4,5) express prayers. Indra (and) Pusan are praised in the second stanza of (the hymn) destructive of rivals.

ದೇವಾನಾಮಿತರಾಃ ಪ್ರೋಕ್ತಾ ಆಶೀರ್ವಾದಪರಾಶ್ಚ ಯಾಃ ।
ಸಂಸಂ ಸಂಜ್ಞಾನಮಿತ್ಯೇತೇ ಪರಂ ಸಂವನನಂ ವಿದುಃ ॥ ೯೭ ॥

ಮಹಾನಾಮ್ನ್ಯ ಋಚೋ ಗುಹ್ಯಾಸ್ತಾ ಐಂದ್ರ್ಯಶ್ಚೈವ ಯೋ ವದೇತ್ ।
ಸಹಸ್ರಯುಗಪರ್ಯಂತಮಹರ್ಬ್ರಾಹ್ಮಂ ಸ ರಾಧ್ಯತೇ ॥ ೯೮ ॥

ತೃಚಾಧಮಂ ಯಾಜ್ಞಿಕಾಃ ಸೂಕ್ತಮಾಹುಸ್ತಸ್ಮಿನ್ಸ್ತುತೌ ದೃಶ್ಯಂತೇ ಯಾಃ ಸೂಕ್ತಭಾಜಃ ।
ಪ್ರಧಾನಮುಕ್ತಂ ಕಿಲ ದೇವತಾ ಯಾಃ ಸೂಕ್ತಭಾಜಃ ಸರ್ವದಾ ಶೌನಕೇನ ॥ ೯೯ ॥

97. ಇತರ ಋಕ್ಕುಗಳಲ್ಲಿ ಸಾಮಾನ್ಯವಾಗಿ ದೇವತೆಗಳನ್ನು ಸ್ತುತಿಸಲಾಗಿದೆ. ಇವೆಲ್ಲವೂ ಆಶೀರ್ವಾದಪರವಾಗಿರುವವು. **ಸಂಸಮಿದ್ಯುವಸೇ** ಎಂಬ ೧೯೧ ನೇ ಸೂಕ್ತವೂ, **ಸಂಜ್ಞಾನಂ** ಎಂಬ ಖಿಲಸೂಕ್ತವೂ ಸಮಾಧಾನವನ್ನೂ, ಶಾಂತಿಯನ್ನೂ ಕಲ್ಪಿಸುವುದೆಂದು ಹೇಳಲಾಗಿದೆ.

### ಮಹಾನಾಮ್ನೀ ಋಕ್ಕುಗಳು

98. **ಮಹಾನಾಮ್ನೀ** ಋಕ್ಕುಗಳು ಬಹಳ ರಹಸ್ಯವಾದವುಗಳು ಮತ್ತು ಆ ಮಂತ್ರಗಳಿಗೆ ಇಂದ್ರನೇ ದೇವತೆಯು. ಆ ಮಂತ್ರಗಳನ್ನು ಪಠಿಸುವ ಪುರುಷನು ಬ್ರಹ್ಮನ ಒಂದು ದಿವಸದವರೆಗಿನ ಎಂದರೆ ಒಂದು ಸಹಸ್ರಯುಗ ಪರ್ಯಂತರ ಆಯುಷ್ಯವನ್ನು ಪಡೆಯುವನು.

99. **ಯಾಜ್ಞಿಕರು** ಎಂದರೆ ಯಜ್ಞಕರ್ಮಾನುಷ್ಠಾನದಲ್ಲಿ ಕುಶಲರಾದವರು ಒಂದು ಸೂಕ್ತದಲ್ಲಿ ಕನಿಷ್ಠ ಪಕ್ಷ ಮೂರು ಋಕ್ಕುಗಳಾದರೂ ಇರಲೇಬೇಕೆಂದು ಹೇಳುವರು. ಆ ಋಕ್ಕುಗಳಲ್ಲಿ ಮುಖ್ಯವಾಗಿ ಸ್ತುತಿಸಲ್ಪಟ್ಟಿರುವ ದೇವತೆಯೇ ಆ ಸೂಕ್ತಕ್ಕೆ ಪ್ರಧಾನದೇವತೆಯು (**ಸೂಕ್ತಭಾಜ**). ಶೌನಕರು ಹೇಳುವಂತೆ ಒಂದು ಸೂಕ್ತಕ್ಕೆ **ಸೂಕ್ತಭಾಜ** ಎಂದು ಹೇಳಲ್ಪಡುವ ಪ್ರಧಾನದೇವತೆಯನ್ನೇ ಆ ಸೂಕ್ತದಲ್ಲಿ ಮುಖ್ಯವಾಗಿ ಸ್ತುತಿಸಲಾಗಿರುವುದು.

---

97. And the other (stanzas) which are chiefly concerned with benedictions are to be (addressed) to the Gods. They regard ‘ Together ’ (ಸಂಸಂ : x. 191) and ‘ Unanimity ’ (ಸಂಜ್ಞಾನಂ) to be the best (charm for) conciliation.

98 The Mahanamni stanzas are mystical (ಗುಹ್ಯ) and they are addressed to Indra : whosoever repeats (them) obtains a day of Brahma which lasts for a thousand years.

### 21. Mahanamni stanzas : what constitutes a hymn.

99. The ritualists (ಯಾಜ್ಞಿಕಾಃ) say that a hymn (ಸೂಕ್ತ) has a minimum of three stanzas. The deities which appear in praise therein, own the hymn (ಸೂಕ್ತಭಾಜ). It has, as is well known, been stated by Saunaka that the deities which own the hymn are always the chicf object (of praise).

ಐಂದ್ರೀರ್ಋಚೋ ಮಹಾನಾಮ್ನ್ಯಸ್ತು ವಿದ್ಯಾತ್ತಥಾ ಹಿ ದೃಷ್ಟಂ ಬ್ರಾಹ್ಮಣೇ ಸೂಕ್ತಶಬ್ದಃ ।
ನ ದೃಶ್ಯತೇ ಸೂಕ್ತವಾದೋ ನಿವಿತ್ಸು ಯಥಾ ಪ್ರೈಷೇಷ್ವಾಹ ಸೂಕ್ತಾಭಿಧಾನಂ ॥ ೧೦೦ ॥

ಸೂಕ್ತೈಕದೇಶಾ ಇತಿ ತಾನ್ಪ್ರತೀಯಾದನ್ಯಾಶ್ಚ ಕುಂತ್ಯಾಃ ಪದಶೋ ನಿಶಾಸ್ತಾಃ ।
ಯಥೈತಶೋ ದೇವನೀಥಾದಿಸಂಜ್ಞಾ ಕುಂತಾಪೇ ತತ್ಸರ್ವಮೇಕಂ ಹಿ ಸೂಕ್ತಂ ॥ ೧೦೧ ॥

ಪುರೀಷಪದಮಾಸಾಂ ತು ಪ್ರಥಮಂ ಸ್ಯಾತ್ಪ್ರಜಾಪತೇಃ ।
ಆಗ್ನೇಯಮೈಂದ್ರಂ ವೈಷ್ಣವಂ ಪೌಷ್ಣಂ ಚೈವ ತು ಪಂಚಮಂ ॥ ೧೦೨ ॥

100. **ಮಹಾನಾಮ್ನೀ** ಋಕ್ಕುಗಳಿಗೆ ಇಂದ್ರನೇ ಪ್ರಧಾನದೇವತೆಯೆಂದು ತಿಳಿಯಬೇಕು. ಬ್ರಾಹ್ಮಣದಲ್ಲಿಯೂ ಇದೇ ಅಭಿಪ್ರಾಯವನ್ನೇ ಸಮರ್ಥಿಸಿರುವುದು. ಆ ಮಂತ್ರಗಳನ್ನು ಸೂಕ್ತವೆಂದು ಕರೆಯಲಾಗುವುದಿಲ್ಲ. ಪ್ರೈಷಮಂತ್ರಗಳನ್ನು ನಿರ್ದೇಶಿಸುವಾಗ **ಆಹ** ಎಂಬ ಶಬ್ದಪ್ರಯೋಗದಿಂದ ಸೂಕ್ತದ ಹೆಸರನ್ನು (**ಸೂಕ್ತಾಭಿಧಾನಂ**) ಹೇಳುವಂತೆ, ನಿವಿತ್ಸೂಕ್ತಗಳನ್ನು ನಿರ್ದೇಶಿಸುವಾಗ **ಸೂಕ್ತವಾದ** ಎಂಬ ಶಬ್ದವನ್ನು ಉಪಯೋಗಿಸಲಾಗುವುದು.

101. ಈ ಮಂತ್ರಗಳನ್ನೆಲ್ಲಾ ಒಟ್ಟಾಗಿಸೇರಿಸಿದರೆ ಒಂದು ಸೂಕ್ತವೆಂದು ಪರಿಗಣಿಸಲಾಗುವುದು, ಕುಂತಾಪ ಸೂಕ್ತಗಳಲ್ಲಿಯೂ ಪದವಿಭಾಗಕ್ರಮದಿಂದ ಐತಶ, ದೇವನೀಥ ಮೊದಲಾದ ಪಾದಗಳು (ಮಂತ್ರಗಳು) ಬೇರೆಯಾಗಿದ್ದರೂ ಅವೆಲ್ಲವೂ ಕುಂತಾಪಸೂಕ್ತದಲ್ಲಿ ಒಟ್ಟಾಗಿ ಸೇರಿ ಒಂದೇ ಸೂಕ್ತವೆನಿಸುವುದು.

102. ಮಹಾನಾಮ್ನೀ ಮಂತ್ರಗಳಲ್ಲಿ ಮೊದಲು ಸೇರಿಸಬೇಕಾದ ವಾಕ್ಯಗಳೆಲ್ಲವೂ ಪ್ರಜಾಪತಿಗೆ ಸಂಬಂಧಪಟ್ಟಿರುವುದೆಂದು ತಿಳಿಯಬೇಕು. ಅನಂತರ ಒಂದು ಮಂತ್ರದಲ್ಲಿ ಅಗ್ನಿಯನ್ನೂ, ಒಂದರಲ್ಲಿ ಇಂದ್ರನನ್ನೂ, ಇನ್ನೊಂದರಲ್ಲಿ ವಿಷ್ಣುವನ್ನೂ ಐದನೆಯ ಮಂತ್ರದಲ್ಲಿ ಪೂಷನನ್ನೂ ಸ್ತುತಿಸಲಾಗಿದೆ.

---

100. Now one should know that the Mahanamnis are stanzas addressed to Indra, for such is the statement that appears (ದೃಷ್ಟಂ) in a Brahmana. The term hymn does not appear (applied to them); the expression (ವಾದ) hymn (ಸೂಕ್ತ) is (used) in connextion with the Nivids, as one applies (ಆಹ) the designation of hymn to the Praisas.

101. One should understand that these constitute (in reality only) single parts of (what is technically called) a hymn, as well as other stanzas belong to the Kuntapa (ಕುಂತಾಪ) and are separared by (ಪದಶಃ) as the Aitasa (ಪ್ರಲಾಪ) and the verses technically called Devanitha (ದೇವನೀಥ) &c. ; for in the Kuntapa (section) all that constitutes one hymn.

102. Now the first supplementary passage (ಪುರೀಷಪದ) of the (Maha namni stanzas) should be (regarded as belonging) to Prajapati, (then) one is addressed to Agni, one to Indra, one to Visnu, and the fifth to Pusan.

ಅಗ್ನೇಃ ಪ್ರಯಾಜಾನುಯಾಜಾಃ ಪ್ರೈಷಾ ಯೇ ಚ ಹವೀಂಷಿ ಚ ।
ಯದ್ದೈವಂ ಹವಿಸ್ತು ಸ್ಯಾತ್ಪ್ರೈಷಾಸ್ತದ್ದೇವತಾಶ್ಚ ತೇ ॥ ೧೦೩ ॥

ನಿವಿದಾಂ ನಿಗದಾನಾಂ ಚ ಸ್ವೈಃ ಸ್ವೈರ್ಲಿಂಗೈಶ್ಚ ದೇವತಾಃ ।
ನಿಗದೇನ ನಿಗದ್ಯಂತೇ ಯಾಶ್ಚ ಕಲ್ಪಾನುಗಾ ಋಚಃ ॥ ೧೦೪ ॥

ಅಗ್ನೇರೇವ ತು ಗಾಯತ್ರ್ಯ ಉಷ್ಣಿಹಃ ಸವಿತುಃ ಸ್ಮೃತಾಃ ।
ಅನುಷ್ಟುಭಸ್ತು ಸೋಮಸ್ಯ ಬೃಹತ್ಯಸ್ತು ಬೃಹಸ್ಪತೇಃ ॥ ೧೦೫ ॥

ಪಂಕ್ತ್ಯಸ್ತ್ರಿಷ್ಟುಭಶ್ಚೈವ ವಿದ್ಯಾದೈಂದ್ರ್ಯಶ್ಚ ಸರ್ವಶಃ ।
ವಿಶ್ವೇಷಾಂ ಚೈವ ದೇವಾನಾಂ ಜಗತ್ಯೋ ಯಾಸ್ತು ಕಾಶ್ಚನ ॥ ೧೦೬ ॥

103. ಪ್ರಯಾಜಮಂತ್ರಗಳೂ, ಅನುಯಾಜಮಂತ್ರಗಳೂ, ಪ್ರೈಷಮಂತ್ರಗಳೂ, ಹವಿಸ್ಸುಗಳೂ ಅಗ್ನಿಗೆ ಸೇರಿವೆ. ಹವಿಸ್ಸುಗಳಿಗೆ ಯಾವ ದೇವತೆಯು ನಿರ್ದಿಷ್ಟವಾಗಿರುವುದೋ ಪ್ರೈಷಮಂತ್ರಗಳಿಗೂ ಅದೇ ದೇವತೆಗಳು ನಿರ್ದಿಷ್ಟವಾಗಿರುವವು.

### ನಿವಿತ್ಸೂಕ್ತಗಳು, ನಿಗದಗಳು, ಮತ್ತು ಛಂದಸ್ಸುಗಳ ದೇವತೆಗಳು

104. ನಿವಿತ್ಸೂಕ್ತಗಳಿಗೂ ನಿಗದಮಂತ್ರಗಳಿಗೂ ಆಯಾ ಮಂತ್ರಗಳಲ್ಲಿ ಹೇಳಿರುವ (ಸ್ತುತರಾಗಿರುವ) ದೇವತೆಗಳೇ ದೇವತೆಗಳು. ನಿಗದ ಮಂತ್ರಗಳಲ್ಲಿ ಕಲ್ಪಸೂತ್ರಕ್ಕನುಸಾರವಾಗಿ ಆಯಾ ಋಕ್ಕುಗಳಿಗೆ ದೇವತೆಗಳು ನಿರ್ದಿಷ್ಟವಾಗಿದೆ.

105. ಗಾಯತ್ರೀ ಛಂದಸ್ಸುಗಳು ಅಗ್ನಿಗೆ ಸೇರಿವೆ. ಹಾಗೆಯೇ ಸವಿತೃದೇವತೆಗೆ ಉಷ್ಣಿಕ್‌ಛಂದಸ್ಸೂ, ಸೋಮನಿಗೆ ಅನುಷ್ಟುಪ್‌ಛಂದಸ್ಸೂ, ಬೃಹಸ್ಪತಿಗೆ ಬೃಹತೀಛಂದಸ್ಸೂ ಸೇರಿವೆ.

106. ಪಂಕ್ತಿ ಮತ್ತು ತ್ರಿಷ್ಟುಪ್‌ಛಂದಸ್ಸುಗಳು ಇಂದ್ರನಿಗೆ ಸೇರಿರುವುದೆಂದು ತಿಳಿಯಬೇಕು. ಜಗತೀ ಛಂದಸ್ಸುಗಳು ವಿಶ್ವೇದೇವತೆಗಳಿಗೆ ಸೇರಿರುವುದು.

---

103. To Agni belong the Prayajas and the Anuyajas, the Praisas and the oblations. Now whatever may be the divinity of the oblations, must also be the divinity of the Praisas.

### 22. Deities of Nivids, Nigadas, and Metres

104. The deities of the Nivids (ನಿವಿದಃ) and of the Nigadas (ನಿಗದಾಃ) (can be ascertained) by their respective characteristic names; and those stanzas are recited with a Nigada which are (thus employed) in conformity with the ceremonial.

105. Now to Agni are traditionally held to belong the Gayatris, to Savitr the Usnis, to Soma the Anustubhs, to Brhaspati the Brhatis.

106. The Panktis and the Tristubhs, one should know, belong entirely to Indra; and all Jagatis whatsoever belong to the All-gods.

ವಿರಾಜಶ್ಚೈವ ಮಿತ್ರಸ್ಯ ಸ್ವರಾಜೋ ವರುಣಸ್ಯ ಚ ।
ಇಂದ್ರಸ್ಯ ನಿಚೃತಃ ಪ್ರೋಕ್ತಾ ವಾಯೋಶ್ಚ ಭುರಿಜಃ ಸ್ಮೃತಾಃ ॥ ೧೦೭ ॥
ವಿಷಯೇ ಯಸ್ಯ ವಾ ಸ್ಯಾತಾಂ ಸ್ಯಾತಾಂ ವಾ ವಾಯುದೇವತೇ ।
ಯಾಸ್ತ್ವತಿಛಂದಸಃ ಕಾಶ್ಚಿತ್ತಾಃ ಪ್ರಜಾಪತಿದೇವತಾಃ ॥ ೧೦೮ ॥
ವಿಛಂದಸಸ್ತು ವಾಯವ್ಯಾ ಮಂತ್ರಾಃ ಪಾದೈಶ್ಚ ಯೇ ಮಿತಾಃ ।
ಪೌರುಷ್ಯೋ ದ್ವಿಪದಾಃ ಸರ್ವಾ ಬ್ರಾಹ್ಮ್ಯ ಏಕಪದಾಃ ಸ್ಮೃತಾಃ ॥ ೧೦೯ ॥
ಸಮಸ್ತಾ ಋಚ ಆಗ್ನೇಯ್ಯೋ ವಾಯವ್ಯಾನಿ ಯಜೂಂಷಿ ಚ ।
ಸೌರ್ಯಾಣಿ ಚೈವ ಸಾಮಾನಿ ಸರ್ವಾಣಿ ಬ್ರಾಹ್ಮಣಾನಿ ಚ ॥ ೧೧೦ ॥

107. ವಿರಾಟ್‌ಛಂದಸ್ಸು ಮಿತ್ರನಿಗೂ ಸ್ವರಾಟ್ ವರುಣನಿಗೂ, ನಿಚೃತ್ (ಗಾಯತ್ರಿ) ಛಂದಸ್ಸು ಇಂದ್ರನಿಗೂ **ಭುರಿಜಃ** ಎಂಬ ಛಂದಸ್ಸು ವಾಯುವಿಗೂ ಸೇರಿರುವುದು.

108. ಅಥವಾ ಮೇಲೆ ಹೇಳಿದ ಎರಡು ಛಂದಸ್ಸುಗಳು (**ನಿಚೃತ್** ಮತ್ತು **ಭುರಿಜಃ**) ಆ ಛಂದಸ್ಸುಗಳಿಗೆ ಹೇಳಿರುವ ದೇವತೆಯ ಸ್ಥಾನ (ಲೋಕ)ದಲ್ಲಿರುವ ಬೇರೆ ದೇವತೆಗಾಗಲಿ ಅಥವಾ ವಾಯುವಿಗಾಗಲಿ ಸೇರಬಹುದು. ಅತಿಛಂದಸ್ಸುಗಳು (ಅತಿಧೃತಿ, ಅತಿಶಕ್ವರೀ, ಅತಿಜಗತೀ ಇತ್ಯಾದಿ) ಪ್ರಜಾಪತಿದೇವತೆಗೆ ಸೇರಿರುವವು.

**ಛಂದಸ್ಸುಗಳ ದೇವತೆಗಳು; ವೇದಗಳ, ವಷಟ್ಕಾರಗಳ, ಸ್ವಾಹಾಕಾರಗಳ ಸ್ವರಗಳ ದೇವತೆಗಳು.**

109. ನಾನಾವಿಧ ಛಂದಸ್ಸುಗಳ ಮಂತ್ರಗಳಿಗೆ ವಾಯುವು ದೇವತೆಯು. ಪಾದಸಂಖ್ಯೆಯಿಂದ ನಿರ್ದಿಷ್ಟವಾದ ಮಂತ್ರಗಳಿಗೂ ದ್ವಿಪದಾ (ಎರಡು ಪಾದಗಳ) ಛಂದಸ್ಸಿನ ಮಂತ್ರಗಳಿಗೂ ಪುರುಷನು ದೇವತೆಯು ; ಏಕಪದಾ ಛಂದಸ್ಸಿನ ಮಂತ್ರಕ್ಕೆ ಬ್ರಹ್ಮನು ದೇವತೆಯು.

110. ಒಟ್ಟಿನಲ್ಲಿ ಹೇಳುವುದಾದರೆ ಋಗ್ವೇದದ ಎಲ್ಲಾ ಋಕ್ಕುಗಳಿಗೂ (ಎಂದರೆ ಋಗ್ವೇದಕ್ಕೆ) ಅಗ್ನಿಯು ದೇವತೆಯು ; ಹಾಗೆಯೇ ಯಜುರ್ವೇದಕ್ಕೆ (ಎಂದರೆ ಯಜುರ್ವೇದ ಮಂತ್ರಗಳಿಗೆ ಒಟ್ಟಾಗಿ) ವಾಯುವು ದೇವತೆಯು. ಸಾಮವೇದ ಮಂತ್ರಗಳಿಗೂ ಎಂದರೆ ಸಾಮವೇದಕ್ಕೂ ಬ್ರಾಹ್ಮಣಮಂತ್ರಗಳಿಗೂ ಸೂರ್ಯನು ದೇವತೆಯು.

107. The Virajas belong to Mitra, the Svarajas to Varuna. The Nichrts (ನಿಚೃತಃ) are declared to be Indra's and the Bhurijas (ಭುರಿಜಃ) are traditionally held to be Vayu's;

108. or these two may belong (to the god) in whose sphere (they are) or they may (both) have Vayu for their deity.

**23. Deities of Metres, Vedas, Vasatkara, Svahakrtis, The Svaras.**

109. But formulas consisting of various metres (ವಿಛಂದಸಃ) belong to Vayu. As for those which are measured by padas,

all Dvipadas are sacred to Purusa. Ekapadas are traditionally held to be sacred to Brahma.

110. All stanzas of the Rg-veda (ಋಗ್ವೇದ) are sacred to Agni, sacrificial formulas (ಯಜುಃ) are sacred to Vayu, all chants (ಸಾಮನ್) and Brahmanas are sacred to Surya.

ವೈಶ್ವದೇವೋ ವಷಟ್ಕಾರೋ ಹಿಂಕಾರೋ ಯೇ ಯಜಾಮಹೇ ।
ರೂಪಂ ವಜ್ರಸ್ಯ ವಾಕ್ಪೂರ್ವಂ ಸ್ವಾಹಾಕಾರೋಽಗ್ನಿದೇವತಃ ॥ ೧೧೧ ॥
ದೇವಾನಾಂ ಚ ಪಿತೄಣಾಂ ಚ ನಮಸ್ಕಾರಃ ಸ್ವಧೈವ ಚ ।
ಕ್ರುಷ್ಟೋ ಮೂರ್ಧನಿ ವಿಜ್ಞೇಯಸ್ತಾಲವ್ಯಃ ಪ್ರಥಮಃ ಸ್ವರಃ ॥ ೧೧೨ ॥
ದ್ವಿತೀಯಸ್ತು ಭ್ರುವೋರ್ಮಧ್ಯೇ ತೃತೀಯಃ ಕರ್ಣಸಂಶ್ರಿತಃ ।
ಚತುರ್ಥೋ ನಾಸಿಕಾಗ್ರೇ ಸ್ಯಾದೌರಸೋ ಮಂದ್ರ ಉಚ್ಯತೇ ।
ಮಂದ್ರಕರ್ಷಣಸಂಯುಕ್ತಮತಿಸ್ವಾರಂ ಪ್ರಶಂಸತಿ ॥ ೧೧೩ ॥

111. ವಷಟ್ಕಾರಕ್ಕೆ (ಹೋಮಮಾಡುವಾಗ ಮಂತ್ರಾಂತ್ಯದಲ್ಲಿ ಸೇರಿಸಿ ಪಠಿಸುವ ವೌಷಟ್ ಎಂಬ ಶಬ್ದ) ವಿಶ್ವೇದೇವತೆಗಳು ದೇವತೆಯು ; ಈ ವಷಟ್ಕಾರವೂ ಹಿಂಕಾರವೂ (ಸಾಮವೇದ ಮಂತ್ರಗಳನ್ನು ಪಠಿಸುವಾಗ ಉಚ್ಚರಿಸುವ **ಹಿಂ** ಎಂಬ ಶಬ್ದವು) **ಯೇ ಯಜಾಮಹೇ** ಎಂಬ ಮಂತ್ರವೂ (ಆಹುತಿಯನ್ನರ್ಪಿಸುವಾಗ ಪಠಿಸುವ ಮಂತ್ರಗಳ ಪ್ರಾರಂಭದಲ್ಲಿ ಸೇರಿಸಿ ಪಠಿಸುವ ಶಬ್ದಗಳು) ಈ ಮೂರೂ ವಾಕ್ ಎಂದು ಹೇಳಲ್ಪಡುವ (ವಾಗ್ವಜ್ರ) ವಜ್ರಾಯುಧದ (ವಜ್ರಾಯುಧಸದೃಶವಾದ ವಾಕ್ಕಿನ ಅಥವಾ ಮಂತ್ರದ) ಮೂರು ರೂಪಗಳು. ಸ್ವಾಹಾಕಾರಕ್ಕೆ ಅಗ್ನಿಯು ದೇವತೆಯು.

112. ದೇವತೆಗಳಿಗೆ ನಮಸ್ಕಾರವೂ ಪಿತೃಗಳಿಗೆ ಸ್ವಧಾಕಾರವೂ ಉಕ್ತವಾಗಿರುವುದು, ಮುಖದ (ಬಾಯಿಯ) ಒಳಗಡೆ ತಾಲುವಿನಿಂದ ಉಚ್ಚರಿಸಬಹುದಾದ ಉಚ್ಚಧ್ವನಿಯು ಎಲ್ಲಾ ದೇವತೆಗಳಿಗೂ ಪ್ರಿಯವಾಗಿರುವುದು. ಈ ಸ್ವರದಲ್ಲಿ (ಧ್ವನಿ) ತಾಲುವಿನಿಂದ ಹೊರಡುವ ಸ್ವರವು ಮೊದಲನೆಯದು.

113. ಎರಡನೆಯದು ಹುಬ್ಬುಗಳ ಮಧ್ಯದಲ್ಲಿಯೂ, ಮೂರನೆಯದು, ಕಿವಿಗಳನ್ನು ಆಶ್ರಯಿಸಿಯೂ ಇರುವುದು. ನಾಲ್ಕನೆಯದು ನಾಸಿಕಾಗ್ರದಲ್ಲಿಯೂ, ಮೆಲ್ಲಗೆ ಉಚ್ಚರಿಸುವ ಸ್ವರವು (ಮಂದ್ರ)ಹೃದಯದಲ್ಲಿಯೂ ನೆಲೆಸಿರುವುದು. ಅತಿಸ್ವಾರ ಎಂಬ ಸ್ವರವನ್ನು ಮಂದ್ರಸ್ವರದಿಂದ ದೀರ್ಘವಾಗಿ ಎಳೆದು ಉಚ್ಚರಿಸಬೇಕು.

---

111. The call 'Vasat' (ವಷಟ್) is sacred to the All-gods, (and) the sound 'Him' (ಹಿಂಕಾರ), (The Yajur formula) 'We who sacrifice' (ಯೇ ಯಜಾಮಹೇ) is a form of the thunderbolt which is preceded by speech. The 'Svaha' (ಸ್ವಾಹಾ) has Agni as its deity.

112. To the Gods and the Fathers belong obeisance (ನಮಸ್ಕಾರ) and oblation (ಸ್ವಧಾ) respectively.

The shrill (ಕ್ರುಷ್ಟ) tone (ಸ್ವರ) is to be recognized as in the head ; the first tone belongs to the palate (ತಾಲವ್ಯ).

113. But the second belongs to the centre of the brows, the third has its place (ಸಂಶ್ರಿತ) in the ear, the fourth should be (regarded as) in the tip of the nose, the low (tone) is stated to belong to the chest ; one pronounces the Atisvara (ಅತಿಸ್ವಾರಂ) as formed by a protraction (ಕರ್ಷಣ) of the low (tone).

ವದಂತಿ ದೇವತಾಃ ಕ್ರುಷ್ಟಂ ಮನುಷ್ಯಾಃ ಪ್ರಥಮಂ ಸ್ವರಂ ।
ದ್ವಿತೀಯಂ ಪಶವಃ ಸರ್ವೇ ಗಂಧರ್ವಾಪ್ಸರಸಃ ಸ್ವರಂ ॥ ೧೧೪ ॥
ಅಂಡಜಾಃ ಪಕ್ಷಿಣಃ ಸರ್ಪಾಶ್ಚತುರ್ಥಮುಪಭುಂಜತೇ ।
ಮಂದ್ರಂ ಪಿಶಾಚಾ ರಕ್ಷಾಂಸಿ ಅಸುರಾಶ್ಚೋಪಭುಂಜತೇ ॥ ೧೧೫ ॥
ಅತಿಸ್ವಾರಸ್ತು ಸರ್ವಸ್ಯ ಜಂಗಮಸ್ಥಾವರಸ್ಯ ಚ ।
ವೈಶ್ವದೇವಃ ಸ್ವರೇ ಕ್ರುಷ್ಟೋಃ ನಿತ್ಯಂ ಯೋ ಮೂರ್ಧ್ನಿ ತಿಷ್ಠತಿ ॥ ೧೧೬ ॥
ತಾಲವ್ಯಃ ಪ್ರಥಮಃ ಸಾಮ್ನಾಂ ಸ್ವರ ಆದಿತ್ಯದೈವತಃ ।
ಸ್ವರೋ ದ್ವಿತೀಯಃ ಸಾಧ್ಯಾನಾಂ ಭ್ರುವೋರ್ದೇಶಂ ಸಮಾಶ್ರಿತಃ ॥ ೧೧೭ ॥

### ಸ್ವರಗಳ ದೇವತೆಗಳು

114. ದೇವತೆಗಳು ಕ್ರುಷ್ಟ (ಉಚ್ಚ) ಸ್ವರದಲ್ಲಿ ಮಾತನಾಡುವರು. ಮನುಷ್ಯರು ಪ್ರಥಮ ಸ್ವರ (ಧ್ವನಿ) ಯಲ್ಲಿಯೂ ಪಶುಗಳು ಎರಡನೆಯದರಲ್ಲಿಯೂ ಗಂಧರ್ವಾಪ್ಸರರು ಮೂರನೆಯದರಲ್ಲಿಯೂ,

115. ಮೊಟ್ಟೆಗಳಿಂದ ಹುಟ್ಟುವ ಪ್ರಾಣಿಗಳು, ಪಕ್ಷಿಗಳು, ಸರ್ಪಗಳು ನಾಲ್ಕನೆಯ ಸ್ವರದಲ್ಲಿಯೂ, ಪಿಶಾಚಗಳು, ರಾಕ್ಷಸರು, ಅಸುರರು ಮಂದ್ರವೆಂಬ ಐದನೆಯ ಸ್ವರದಲ್ಲಿಯೂ ವ್ಯವಹರಿಸುವರು.

116. ಅತಿಸ್ವಾರ ಎಂಬುವುದು ಚಲಿಸುವ ಅಥವಾ ಚಲಿಸದೆ ಸ್ಥಿರವಾಗಿರುವ ವಸ್ತುಗಳಿಗೆಲ್ಲಾ (ಅಥವಾ ಪ್ರಾಣಿವರ್ಗಕ್ಕೆ) ಸಂಬಂಧಪಟ್ಟಿರುವುದು. ಶಿರಸ್ಸಿನಲ್ಲಿ ಯಾವಾಗಲೂ ನೆಲೆಸಿರುವ ಕ್ರುಷ್ಟಸ್ವರವು ವಿಶ್ವೇದೇವತೆಗಳಿಗೆ ಸೇರಿರುವುದು.

117. ತಾಲುಪ್ರದೇಶದಲ್ಲಿ ಉತ್ಪನ್ನವಾಗುವ ಮತ್ತು ಸಾಮವೇದಮಂತ್ರಗಳನ್ನು ಉಚ್ಚರಿಸಬಹುದಾದ ಮೊದಲನೆಯ ಸ್ವರಕ್ಕೆ ಆದಿತ್ಯರು, ದೇವತೆಗಳು; ಭ್ರೂಮಧ್ಯದಲ್ಲಿ ನೆಲೆಸಿರುವ ಎರಡನೆಯ ಸ್ವರಕ್ಕೆ ಸಾಧ್ಯರು ದೇವತೆಗಳು.

### 24. Deities of the tones.

114. The Gods speak (in) (ವದಂತಿ) the shrill (ಕ್ರುಷ್ಟ) tone, men in the first, all beasts in the second, Gandharvas and Apsarases in the (next) tone.

115. Egg-born creatures, birds, serpents, employ the fourth; Pisachas, Raksasas, and Asuras employ the low tone (ಮಂದ್ರ).

116. But the Atisvara (ಅತಿಸ್ವಾರ) is peculiar to everything that moves or is stationary.

The shrill (ಕ್ರುಷ್ಟ) tone, which permanently resides in the head, is sacred to the All-gods.

117. The first tone, belonging to the palate (and) peculiar to the Samans, has the Adityas for its divinities. The second tone, which has its location in the region of the brows, is connected with the Sadhyas.

ಆಶ್ವಿನಸ್ತು ತೃತೀಯೋಽತ್ರ ಸ್ವರಃ ಕರ್ಣೌ ಸಮಾಶ್ರಿತಃ ।
ಚತುರ್ಥಸ್ತ್ವತ್ರ ವಾಯವ್ಯೋ ನಾಸಿಕ್ಯಃ ಸ್ವರ ಉಚ್ಯತೇ ॥ ೧೧೮ ॥

ಪಂಚಮಸ್ತು ಸ್ವರಃ ಪ್ರೋಕ್ತಶ್ಚಾಕ್ಷುಷಃ ಸೂರ್ಯದೈವತಃ ।
ಯಸ್ತು ಸಾಮಸ್ವರಃ ಷಷ್ಠಃ ಸ ಸೌಮ್ಯೋ ಮಂದ್ರ ಉಚ್ಯತೇ ॥ ೧೧೯ ॥

ವಿಕರ್ಷೇಣ ತು ಮಂದ್ರಸ್ಯ ಯುಕ್ತೋಽತಿಸ್ವಾರ್ಯ ಉಚ್ಯತೇ ।
ಸ ಮೈತ್ರಾವರುಣೋ ಜ್ಞೇಯೋ ಮಂದ್ರಸ್ಥಾನಸಮಾಹಿತಃ ॥ ೧೨೦ ॥

ಸಾಮಸ್ವರಾಣಾಂ ಸಪ್ತಾನಾಮೇತೇ ದೇವಾ ಇಹೋದಿತಾಃ ।
ತ್ರಯಾಣಾಮಿತರೇಷಾಂ ತು ಲೋಕಾಧಿಪತಯಸ್ತ್ರಯಃ ॥ ೧೨೧ ॥

118. ಕರ್ಣಗಳನ್ನು (ಕಿವಿಗಳನ್ನು) ಆಶ್ರಯಿಸಿರುವ ಮೂರನೆಯ ಸ್ವರಕ್ಕೆ ಅಶ್ವಿನೀದೇವತೆಗಳು ದೇವತೆಯು, ನಾಸಿಕಾಗ್ರದಲ್ಲಿ ನೆಲೆಸಿರುವ ನಾಲ್ಕನೆಯ ಸ್ವರಕ್ಕೆ ವಾಯುವು ದೇವತೆಯು.

119. ಚಕ್ಷುಸ್ಸನ್ನು (ಕಣ್ಣನ್ನು) ಆಶ್ರಯಿಸಿರುವುದೆಂದು ಹೇಳಲಾಗುವ ಐದನೆಯ ಸ್ವರಕ್ಕೆ ಸೂರ್ಯನು ದೇವತೆಯು. ಸಾಮಸ್ವರಕ್ಕೆ ಸೇರಿದ ಮಂದ್ರವೆಂಬ ಆರನೆಯ ಸ್ವರಕ್ಕೆ ಸೋಮನು ದೇವತೆಯು.

120. ಮಂದ್ರಸ್ವರವನ್ನು ಎಳೆದು ಉಚ್ಚರಿಸಿ ಹೇಳುವ ಸ್ವರಕ್ಕೆ ಅತಿಸ್ವಾರ್ಯವೆಂದು ಹೆಸರು. ಮಂದ್ರಸ್ಥಾನ ಸಂಬಂಧವಾದ ಈ ಸ್ವರಕ್ಕೆ ಮಿತ್ರಾವರುಣರು ದೇವತೆಗಳು.

121. ಸಾಮವೇದದ ಏಳು ಸ್ವರಗಳಿಗೂ ದೇವತೆಗಳನ್ನು ಈ ರೀತಿ ಹೇಳಿದ್ದಾಯಿತು. ಇತರ ಮೂರು ಸ್ವರಗಳಿಗೆ ಮೂರು ಲೋಕಗಳ ಅಧಿಪತಿಗಳೇ ದೇವತೆಗಳು.

---

118. But the third tone here, which has its location in the ears, is sacred to the Asvins; but the fourth tone here, which is nasal is stated to be sacred to Vayu.

**25. Deities of the tones** (concluded) **Deities of the Prastava, Udgitha, Upadrava, Pratihara, Nidhana.**

119. But the fifth tone, which is related to the eyes, is declared to have Surya as its divinity. But the sixth Saman tone the low (ಮಂದ್ರ) is stated to be sacred to Soma.

120. But that which is formed with the protraction of the low (tone) is called Atisvarya : it is to be known as sacred to Mitra-Varuna. It is located in the position of the low (tone).

121. These here have been stated to be the gods of the seven Saman tones. But (the gods) of the other three are the three Lords of the World.

